


ಮಹಮ್ಮದ ಇಬ್ರಾಹಿಮ ಜುಬೇರಿ

# ಬುಸಾತಿನೆ ಸಲಾತೀನ

## ವಿಜಾಪುರ ಆದಿಲಶಾಹಿಗಳ ಚರಿತ್ರೆ

ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಹಮ್ಮದ ಇಬ್ರಾಹಿಮ ಜುಬೇರಿ ವಿರಚಿತ

# ಬುಸಾತಿನೆ - ಸಲಾತೀನ

## ವಿಜಾಪುರ ಆದಿಲಶಾಹಿಗಳ ಚರಿತ್ರೆ

ಕನ್ನಡಕ್ಕೆ

ಡಾ. ಕೃಷ್ಣ ಕೊಲ್ಹಾರಕುಲಕರ್ಣಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೦

**BUSATINE-SALATIN** *(History of Adilshahis of Bijapur).*
Originally in Persian by *Mohamad Ibrahim Zuberi* (1824 AD).
Translated into Marathi By *Narasimha Vithal Parasanis.* (1850 AD).
From Marathi in to Kannada by ***Dr. Krishna Kolharkulkarni.***

*Published by* : Prof. A.V. NAVADA,
Director Prasaranga, Kannada University, Hampi,
Vidyaranya, Kamalapura - 58322.

Pages : XXXIV + 560 + 8 Photos

First Edition : 1999

Rs. : **300/-**

Cover Design : K.K. Makali

Printed by : ***Gayathri Book Company,***
Mahakavi Kuvempu Road, MariyappanaPalya,
Bangalore - 560 021. ✆ : 3327700.

ಬುಸಾತಿನೆ - ಸಲಾತೀನ *(ವಿಜಾಪುರ ಆದಿಲಶಾಹಿಗಳ ಚರಿತ್ರ)*
ಮೂಲ ಪರ್ಶಿಯನ್ ಲೇಖಕ - ಮಹಮ್ಮದ ಇಬ್ರಾಹೀಮ ಜುಬೇರಿ
ಮರಾಠಿ ಅನುವಾದಕ. ನರಸಿಂಹ ವಿಠಲ ಪಾರಸನೀಸ
ಮರಾಠಿಯಿಂದ ಕನ್ನಡಕ್ಕೆ - ಡಾ. ಕೃಷ್ಣ ಕೊಲ್ಹಾರಕುಲಕರ್ಣಿ

ಪ್ರಕಾಶಕರು : ಪ್ರೊ ಎ.ವಿ. ನಾವಡ
ನಿರ್ದೇಶಕರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩೨೨.

ಪುಟಗಳು : XXXIV + ೫೬೦ + ೮ ಚಿತ್ರಗಳು

ಬೆಲೆ : ೩೦೦/-

ರಕ್ಷಾ ಕವಚ : ಕೆ.ಕೆ. ಮಕಾಳಿ

ಮುದ್ರಕರು : *ಗಾಯತ್ರಿ ಬುಕ್ ಕಂಪನಿ,*
ಮಹಾಕವಿ ಕುವೆಂಪು ರಸ್ತೆ, ಮರಿಯಪ್ಪನಪಾಳ್ಯ,
ಬೆಂಗಳೂರು - ೫೬೦ ೦೨೧, ✆ : ೩೩೨೭೭೦೦

# ದೇಸಿಯೋಳ್ ಪುಗುವುದು

ಡಾ. ಎಂ.ಎಂ. ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ ಕನ್ನಡ ಸಂಸ್ಕೃತಿಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕ ಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೋಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮಾಜ ಸಮ್ಮತ ಜೀವನ ಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನ ಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲೀಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲೀಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧಿಜೀಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ, ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ-ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು. ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯ ಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ, ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ

ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರ ಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿ ವಹಿಸಿದೆ. ಆಂತರಿಕ ಸತ್ವ, ಬಾಹ್ಯಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕ ಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಈ ಪ್ರಸಾರಾಂಗದ ಇತ್ತೀಚಿನ ಪ್ರಕಟಣೆಯಾಗಿದೆ 'ಬುಸಾತಿನೆ-ಸಲಾತೀನ'.

ಉರ್ದು-ಅರೆಬಿಕ್-ಪರ್ಶಿಯನ್ ಆಕರಗಳನ್ನು ಬಳಸಿಕೊಳ್ಳದಿದ್ದರೆ ಮಧ್ಯಕಾಲೀನ ಕರ್ನಾಟಕದ ಇತಿಹಾಸ ವರ್ತುಲ ಪೂರ್ಣಗೊಳ್ಳುವುದಿಲ್ಲವೆಂಬ ಆದರ್ಶದಲ್ಲಿ 'ಬುಸಾತಿನೆ-ಸಲಾತೀನ' ಪ್ರಕಟಣವಾಗುತ್ತಲಿದೆ. ಪರ್ಶಿಯನ್ ಮೂಲದಿಂದ ಮರಾಠಿಗೆ ಅನುವಾದವಾಗಿದ್ದ ಆದಿಲಶಾಹಿ ಸಾಮ್ರಾಜ್ಯದ ಈ ಸಮಗ್ರ ಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸುವಲ್ಲಿ ಡಾ. ಕೃಷ್ಣ ಕೊಲ್ಹಾರಕುಲಕರ್ಣಿಯವರು ವಹಿಸಿದ ಶ್ರಮ, ತೋರಿದ ಶ್ರದ್ಧೆ, ಶಬ್ದಾತೀತ. ವಿದ್ವತ್ತಿನ ಮೇಲಿನ ಪ್ರೀತಿ, ಕೆಲಸದ ಬಗೆಗಿನ ಗೌರವ ಕಾರಣವಾಗಿ ಇದನ್ನು ಅನುವಾದಿಸಿದ ಶ್ರೀಯುತರಿಗೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ.

# ಪ್ರಸ್ತಾವನೆ

ಮಧ್ಯಯುಗೀನ ಭಾರತದ ಚರಿತ್ರೆಯಲ್ಲಿ ವಿಜಾಪುರದ ಆದಿಲಶಾಹಿಗಳ ಪಾತ್ರ ಬಹು ದೊಡ್ಡದಾಗಿದೆ. ದಕ್ಷಿಣ ಭಾರತದ ಬಹುಪಾಲು ಪ್ರದೇಶವನ್ನು ಅವರು ವಿಜಾಪುರದಲ್ಲಿ ಕುಳಿತು ಆಳಿದರು. ಕರ್ನಾಟಕದ ಮಟ್ಟಿಗೆ ಇಂದಿನ ಅಖಂಡ ಕರ್ನಾಟಕವನ್ನು ಅವರು ಸುಮಾರು ಒಂದು ಶತಮಾನದಷ್ಟು ಕಾಲ ತಮ್ಮ ಅಂಕಿತದಲ್ಲಿ ಇಟ್ಟುಕೊಂಡಿದ್ದರು. ಅದರಿಂದಾಗಿ ಆದಿಲಶಾಹಿಗಳ ಚರಿತ್ರೆಯನ್ನು ಅಭ್ಯಸಿಸದೆ ಕರ್ನಾಟಕದ ಚರಿತ್ರೆ ಪೂರ್ಣಗೊಳ್ಳುವುದಿಲ್ಲ.

ವಿಜಾಪುರದ ಆದಿಲಶಾಹಿಗಳ ರಾಜ್ಯವು ಕ್ರಿ.ಶ. ೧೪೮೯ ರಿಂದ ೧೬೮೬ರ ವರೆಗೆ ಅಸ್ತಿತ್ವದಲ್ಲಿದ್ದಿತು. ೯ ಜನ ಬಾದಶಹರು ಆಳಿದರು. ಇಲ್ಲಿ ಆಳಿದ ಬಾದಶಹರುಗಳ ವ್ಯಕ್ತಿತ್ವ ವರ್ಣಮಯದ್ದಾಗಿದೆ. ಸಾಹಿತ್ಯ ಸಂಗೀತ, ಕಲೆ, ವಾಸ್ತುಶಿಲ್ಪ, ಧರ್ಮ ಜೊತೆಗೆ ರಾಜಕಾರಣ ಇವುಗಳಲ್ಲೆಲ್ಲ ತಮ್ಮದೇ ಆದ ಛಾಪನ್ನು ಒತ್ತಿ ಹೋಗಿದ್ದಾರೆ.

ಇಂದು ವಿಶ್ವದಲ್ಲೆಲ್ಲ ಓದುತ್ತಿರುವ 'ಭಾರತೀಯ ಮುಸಲ್ಮಾನರ ಚರಿತ್ರೆ' ಅಥವಾ ಗುಲ್ಶನೆ-ಇಬ್ರಾಹಿಮಿ ಇತಿಹಾಸ ಪುಸ್ತಕವನ್ನು ಬರೆದ ಮಹಮ್ಮದ ಕಾಸಮ ಫಿರಿಸ್ತಾ, ಎರಡನೆಯ ಇಬ್ರಾಹಿಮ ಆದಿಲಶಹ (ಕ್ರಿ.ಶ. ೧೫೮೦-೧೬೨೭) ನ ಆಸ್ಥಾನದಲ್ಲಿದ್ದುಕೊಂಡು ಆ ಗ್ರಂಥವನ್ನು ಬರೆದನು. ಅದರಂತೆ ಇನ್ನು ಹಲವಾರು ಜನ ಇತಿಹಾಸಕಾರರು, ಕವಿಗಳು ಆದಿಲಶಾಹಿ ಆಸ್ಥಾನದಲ್ಲಿ ಇದ್ದುಕೊಂಡು ಕೃತಿಗಳನ್ನು ರಚಿಸಿದ್ದಾರೆ. ಅವುಗಳೆಲ್ಲ ಅಂದು ಪ್ರಚಲಿತದಲ್ಲಿದ್ದ ಪರ್ಶಿಯನ್ ಇಲ್ಲವೆ ದಖಣಿ ಹಿಂದಿ ಭಾಷೆಗಳಲ್ಲಿ ರಚಿತವಾಗಿವೆ. ಅವುಗಳಲ್ಲಿಯ ಬಹುತೇಕ ಕೃತಿಗಳನ್ನು ಆಧಾರವಾಗಿ ಇಟ್ಟುಕೊಂಡು ರಚಿಸಿದ ಕೃತಿ 'ಬುಸಾತಿನೆ-ಸಲಾತೀನ'

'ಬುಸಾತಿನೆ-ಸಲಾತೀನ' ಎಂಬುದು ಮೂಲದಲ್ಲಿ ಪರ್ಶಿಯನ್ ಗ್ರಂಥವಾಗಿದೆ. ಅದನ್ನು ಬರೆದ ಮಹಮ್ಮದ ಇಬ್ರಾಹಿಮ ಜುಬೇರಿಯು ವಿಜಾಪುರದವನು. ಕ್ರಿ.ಶ. ೧೮೨೪-೩೦ರ ಮಧ್ಯ ಆತ ಈ ಗ್ರಂಥವನ್ನು ರಚಿಸಿರಬಹುದೆಂದು ಹೇಳಲಾಗುತ್ತದೆ.

ಆತ ಪರ್ಶಿಯನ್ ಭಾಷೆಯಲ್ಲಿ ಗ್ರಂಥವನ್ನು ಬರೆಯುತ್ತಿದ್ದಂತೆಯೇ ಅದರ ಮರಾಠಿ ಅನುವಾದ ಸಿದ್ಧಗೊಂಡಿದ್ದು ಈ ಗ್ರಂಥದ ವಿಶೇಷವಾಗಿದೆ. ಅಂದಿನ ಬ್ರಿಟೀಶ್ ಅಧಿಕಾರಿಗಳ ಆದೇಶದಂತೆ, ಸಾತಾರೆಯ ನರಸಿಂಹ ವಿಠಲ ಪಾರಸನೀಸ ಎಂಬವನು ಈ ಗ್ರಂಥವನ್ನು ಮರಾಠಿಯಲ್ಲಿ ಅನುವಾದಿಸಿ ಕ್ರಿ.ಶ. ೧೮೫೦ರ ನವಂಬರ ೫ರಂದು ಪೂರ್ತಿಗೊಂಡ ಮರಾಠೀ ಭಾಷೆಯ ಅನುವಾದ ಪ್ರತಿಯನ್ನು ತನ್ನ ಸಾಹೇಬರಿಗೆ ಸಲ್ಲಿಸಿದ್ದಾಗಿ ನಮೂದಿಸಿದ್ದಾನೆ.

ಅನಂತರ ಈ ಗ್ರಂಥವನ್ನು ದಖಣಿ-ಹಿಂದಿಯಲ್ಲಿ ಅನುವಾದಿಸಿ, ಮಹಮ್ಮದ ಫಜಲುಲ್ ಹಕ್-ಊರ್ಫ ಅಹಮ್ಮದ ಮಿಯಾ ಎಂಬವರು ಕ್ರಿ.ಶ. ೧೮೮೫ ರಲ್ಲಿ 'ಗಾಯಕವಾಡ ಪುಸ್ತಕಮಾಲೆ'ಯಲ್ಲಿ, ದೇವನಾಗರಿ ಲಿಪಿಯಲ್ಲಿ ಪ್ರಕಟಿಸಿದ್ದಾಗಿಯೂ ತಿಳಿದು ಬರುತ್ತದೆ.

ಉರ್ದುವಿನಲ್ಲೂ ಈ ಗ್ರಂಥ ಅನುವಾದವಾಗಿದೆ ಎಂದು ಹೇಳಲಾಗುತ್ತದೆ.

'ಬುಸಾತಿನೆ-ಸಲಾತೀನ' ಪರ್ಶಿಯನ್ ಗ್ರಂಥವು ಆದಿಲಶಾಹಿಗಳ ಉತ್ತರಕಾಲದಲ್ಲಿ ಸುಮಾರು ೧೪೦ ವರುಷಗಳ ಅನಂತರ ರಚಿತವಾಗಿದ್ದರೂ ಕೂಡ ಗ್ರಂಥಕಾರನು ಅದನ್ನು ಬರೆಯುವಾಗ ಬಹಳಷ್ಟು ವಿಷಯಗಳನ್ನು ಸಮಕಾಲೀನ ಗ್ರಂಥಗಳಿಂದಲೇ ತೆಗೆದುಕೊಂಡಿದ್ದಾನೆ. ಆದ್ದರಿಂದ ಈ ಗ್ರಂಥದಲ್ಲಿಯ ವಿಷಯಗಳಿಗೆ ಐತಿಹಾಸಿಕ ಮಹತ್ವ ದೊರೆಯುತ್ತದೆ. ತಾನು ಈ ಗ್ರಂಥವನ್ನು ರಚಿಸುವಾಗ ಆಧರಿಸಿದ ಗ್ರಂಥಗಳ ಹೆಸರುಗಳನ್ನು ಆತನೇ ತನ್ನ ಗ್ರಂಥದ ಪ್ರಾರಂಭದಲ್ಲಿ ಹೇಳಿಕೊಂಡಿದ್ದಾನೆ. ಹಾಗೆ ಉಲ್ಲೇಖಿಸಿದ ಗ್ರಂಥಗಳು ಇಂತಿವೆ.

೧. *'ನವರಸನಾಮಾ-ಫರಿಶ್ತಾ'- ಗುಲ್ಶನೆ-ಇಬ್ರಾಹಿಮೀ*
ಲೇಖಕ : ಮಹಮ್ಮದ ಕಾಸಮ ಫಿರಿಸ್ತಾ
ಕಾಲ : ಕ್ರಿ.ಶ. ೧೬೦೬-೧೬೧೦

೨. *'ತಜಕರದುಲಮುಲುಕ'*
ಲೇಖಕ : ಮೀರ ರಫೀಉದ್ದೀನ ಶಿರಾಜೀ
ಕಾಲ : ಕ್ರಿ.ಶ. ೧೬೦೮-೧೬೦೯

೩. *ಮಹಮದ ನಾಮಾ*
ಲೇಖಕ : ಮುಲ್ಲಾ ಜಹೂರ ವಲದ ಮುಲ್ಲಾ ಜಹೂರೀ
ಕಾಲ : ಕ್ರಿ.ಶ. ೧೬೭೬ಕ್ಕಿಂತ ಮೊದಲು

೪. *ಇನಶಾಯ ಆಲೀ ಆದಿಲಶಾಹೀ*
ಲೇಖಕ : ಸಯ್ಯದ ನೂರುಲ್ಲಾಹ ವಲದ ಕಾಜೀ ಸಯ್ಯದ ಆಲೀ ಮಹಮ್ಮದ ನೂರುಲ್ಲಾ
ಕಾಲ : ಕ್ರಿ.ಶ. ೧೬೭೬ಕ್ಕಿಂತ ಮೊದಲು

೫. *ಅಲೀನಾಮಾ*
ಲೇಖಕ : ಮಲಿಕುಷಾಅರಾ ದಕ್ಷಣೀ ಮಿಯಾ ನಸರತೀ
ಕಾಲ : ಕ್ರಿ.ಶ. ೧೬೭೬ ಕ್ಕಿಂತ ಮೊದಲು

೬. *ಗುಲ್ಶನೆ ಇಷ್ಕ*
ಲೇಖಕ : ಮಿಯಾ ನಸರತೀ

೭. *ತಬಯೆಕ ಆದಿಲಶಾಹೀ*
ಲೇಖಕ : ಶೇಖ ಅಬದುಲ ಹಸನ ವಲದ ಕಾಜೀ ಅಬದುಲ ಅಜೀಜ
ಕಾಲ : ಕ್ರಿ.ಶ. ೧೭೦೦ ಕ್ಕಿಂತ ಮೊದಲು

೮. ಜಹ್ವೆರರೂಹ

೯. ಜಹ್ವೇರೆ ಕುನಿಯಾ ಈ ಎರಡೂ ಕೃತಿಗಳ
ಲೇಖಕ : ಶೇಖ ಮಹಮ್ಮದ ಬಹರೀ
ಕಾಲ : ಕ್ರಿ.ಶ. ಸು. ೧೭೦೦

ಹೀಗೆ ಗ್ರಂಥಕಾರನು ೯ ಗ್ರಂಥಗಳ ತಪಶೀಲನ್ನು ತಾನೆಯೇ ಕೊಟ್ಟಿದ್ದಾನೆ. ಇವುಗಳಲ್ಲದೆ ಇನ್ನು ಅನೇಕ ಜನ ಗ್ರಂಥಕಾರರ ಹೆಸರುಗಳನ್ನು ತನ್ನ ಗ್ರಂಥದ ವಿವಿಧ ಅಧ್ಯಾಯಗಲ್ಲಿ ಉಲ್ಲೇಖಿಸಿದ್ದಾನೆ. ಅವರುಗಳಲ್ಲಿ ಈ ಮುಂದಿನ ಹೆಸರುಗಳು ದೊರೆಯುತ್ತವೆ.

೧. ಶಮಸುದ್ದೀನ,
೨. ಮೀರ ಇಬ್ರಾಹೀಮ ಅಸದಖಾನೀ
೩. ಮಿಯಾ ಹಷಮೀ
೪. ಮಿರ್ಜಾ ಮರ್ಸಿಯಾ ಖಾನ
೫. ಶಾಹ ಅಬ್ದುಲ ಮಾನೀ
೬. ಮುಲ್ಲಾ ಅಬ್ದುಲ ರಿಜಾಹಿಯಾ
೭. ಆವೀಸ
೮. ಅಬ್ದುಲ ಕಾದರ ನವರಸೀ
೯. ಅಬ್ದುಲ ಲತೀಫ
೧೦. ಅಬ್ದುಲ ನಬೀ
೧೧. ಹಕೀಮ ಆತಶೀ
೧೨. ಮಿರ್ಜಾ ಹಕೀಮ
೧೩. ಮಿರ್ಜಾ ದೌಲತಶಾಹ

ಹೀಗೆ ಗ್ರಂಥಕಾರರ ಹೆಸರುಗಳನ್ನು ಉಲ್ಲೇಖಿಸುತ್ತ 'ಅವರು ಹೀಗೆ ಬರೆದಿದ್ದಾರೆ' 'ಹೀಗೆ ಹೇಳುತ್ತಾರೆ' ಎಂದಿತ್ಯಾದಿಯಾಗಿ ನಮೂದಿಸುತ್ತಾನೆ. ಅವರು ರಚಿಸಿದ ಕೃತಿಗಳ ಹೆಸರುಗಳನ್ನು ಹೇಳಿಲ್ಲ. ಅವುಗಳ ಶೋಧವಾಗಬೇಕಿದೆ.

ವಿಷಯ ಮುಸಲ್ಮಾನ ಬಾದಶಹನ ಚರಿತ್ರೆ, ಬರೆದವನು ಮುಸ್ಲಿಮ, ಭಾಷೆ ಪರ್ಶಿಯನ್, ಆಧರಿಸಿದ ಗ್ರಂಥಗಳೂ ಮುಸ್ಲಿಮರಿಂದಲೇ ರಚಿತವಾದವುಗಳು. ಹೀಗಾಗಿ ಕಥಾನಾಯಕರ ವೈಭವೀಕರಣಕ್ಕೆ ಅಧಿಕ ಒತ್ತು ಸ್ವಾಭಾವಿಕವಾದದ್ದು. ಕೆಲವು ಸಂದರ್ಭಗಳಲ್ಲಿ ಮೂಲ ಆಕರ ಗ್ರಂಥಗಳಲ್ಲಿಯ ವಿಷಯಗಳನ್ನು ಚರ್ಚಿಸಿದರೂ ತನ್ನ ಕಥಾನಾಯಕನ ತಪ್ಪುಗಳನ್ನು ಮುಚ್ಚಿಡುವುದು, ಆತನ ದುಷ್ಕೃತ್ಯ -ಪರಾಜಯಗಳ ಬಗ್ಗೆ ತೇಲಿಸುವುದು, ಎದುರಾಳಿ ಮುಸ್ಲಿಮನಾಗಿದ್ದರೂ ತನ್ನ ನಾಯಕನ ಗುಣಾತಿಶಯ ವರ್ಣನೆ, ಇವುಗಳು ಸಮಕಾಲೀನ ಇತಿಹಾಸಕಾರರ ವೈಶಿಷ್ಟಗಳಾಗಿವೆ. ಅವುಗಳಿಗೆ ಪ್ರಸ್ತುತ ಗ್ರಂಥಕಾರನೂ ಹೊರತಾಗಿಲ್ಲ. ಇಷ್ಟಾಗಿಯೂ ಇನ್ನೂರು ವರುಷಗಳ ಕಾಲ ಆಳಿದ - ಆದಿಲಶಾಹಿಗಳ ಚರಿತ್ರೆಯನ್ನು ಒಂದೆಡೆ ದಾಖಲಿಸಿದ ಪ್ರಥಮ ಶ್ರೇಯಸ್ಸು 'ಬುಸಾತಿನೆ-ಸಲಾತೀನ' ಕ್ಕೆ ಸೇರುತ್ತದೆ.

ಕರ್ನಾಟಕದ ಉತ್ತರ ಮಧ್ಯಭಾಗದ ಒಂದು ಸ್ಥಳ ವಿಜಾಪುರದಲ್ಲಿ ಕುಳಿತು ರಾಜ್ಯಕಾರಭಾರ ಮಾಡಿದ ಆದಿಲಶಾಹಿಗಳ ಕಾಲದಲ್ಲಿ ಕರ್ನಾಟಕದಲ್ಲಿ ವಿಜಯನಗರ ರಾಜ್ಯ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಅದು ಪತನವಾದ ಅನಂತರ ಶಾಹಜಿ, ಶಿವಾಜಿ, ಸಂಭಾಜಿಗಳು ಬಂದರು. ಕೆಳದಿ ನಾಯಕರು, ಸುರಪುರ ನಾಯಕರು, ಸೋದೆ ನಾಯಕರು, ಶ್ರೀರಂಗಪಟ್ಟಣದ ಒಡೆಯರು ಹೀಗೆ ಹಲವಾರು ಹಿಂದು

ಮನೆತನಗಳೊಂದಿಗೆ ಕರ್ನಾಟಕದಲ್ಲಿಯೆ ಮನೆ ಮಾಡಿಕೊಂಡಿದ್ದ ಇನ್ನು ಕೆಲ ನವಾಬರ ಉಲ್ಲೇಖಗಳೂ ಬರುತ್ತವೆ. ಜೊತೆಗೆ ಗೋವಳಕೊಂಡದ ಕುತುಬಶಾಹಿ, ಅಹ್ಮದನಗರದ ನಿಜಾಮಶಾಹಿ ಇತ್ಯಾದಿ ಶಾಹೀ ಮನೆತನಗಳೂ ಕರ್ನಾಟಕದ ಕೆಲವು ಭಾಗಗಳನ್ನು ಕೆಲವು ಕಾಲ ಆಳಿದ್ದಾರೆ. ಈ ಎಲ್ಲರ ಆಸ್ಥಾನಗಳಲ್ಲಿ ರಚಿತವಾದ ವಿವಿಧ ಚರಿತ್ರಗ್ರಂಥಗಳು, ಕಾವ್ಯ ಕಥನಗಳ ಜೊತೆಗೆ ಆದಿಲಶಾಹಿಗಳ ಚರಿತ್ರೆಯನ್ನು ತುಲನಾತ್ಮಕವಾಗಿ ಅಭ್ಯಸಿಸುವ ಕೆಲಸ ಆಗಬೇಕಿದೆ. ಅದಕ್ಕೆ ಮೊದಲ ಹೆಜ್ಜೆಯಾಗಿ ಈ 'ಬುಸಾತಿನ-ಸಲಾತೀನ' ದ ಕನ್ನಡ ಅವತರಣಿಕೆ.

ಒಂದು ಮನೆತನದ ಚರಿತ್ರೆಯನ್ನು ವಿವಿಧ ಆಕರಗಳ ಮೂಲಕ ಅದನ್ನು ಬಹುತೇಕವಾಗಿ ಒಂದೇ ದೃಷ್ಟಿಯಿಂದ ದಾಖಲಿಸಲಾಗಿದೆ. ಈಗ ಅದರ ಜೊತೆಗೆ ಸಮಕಾಲೀನ ಶತ್ರು ಪಕ್ಷದ ಗ್ರಂಥಗಳು, ಅವುಗಳು ಯಾವುದೇ ಭಾಷೆಯಲ್ಲಿರಲಿ, ಶತ್ರುಗಳು ಯಾವುದೇ ಧರ್ಮದವರಿರಲಿ, ಅವುಗಳೊಂದಿಗೆ ತೂಗಿ ಚರ್ಚಿಸುವ ಕೆಲಸ ಆಗಬೇಕಿದೆ. ಆಗ ಮಧ್ಯಯುಗೀನಕಾಲದ ಸುಮಾರು ೨೦೦ ವರುಷಗಳ ಕರ್ನಾಟಕದ ಕಿಂಚಿತ್ ದರ್ಶನ ಆಗುವ ಸಾಧ್ಯತೆ ಇದೆ.

ಪರ್ಶಿಯನ್ ಭಾಷೆಯಲ್ಲಿ ಬರೆದ ಫಕೀರ ಮಹಮ್ಮದ ಇಬ್ರಾಹಿಮ ಜುಬೇರಿಯ ಮನೆತನ ಪವಿತ್ರ ಪೈಗಂಬರರ ಕಾಲದ್ದು. ಪೈಗಂಬರರ ಮೂಲ ಶಿಷ್ಯರ ಶಿಷ್ಯ ಮನೆತನ ಅಲ್ ಜಬೇರಿಯದು. ಆದಿಲಶಾಹಿಗಳ ಕಾಲದಲ್ಲಿ, ಬಹುಶಃ ಸುಲ್ತಾನ ಮಹಮ್ಮದ ಆದಿಲಶಹನ (ಕ್ರಿ.ಶ. ೧೬೨೬-೧೬೫೬) ಕಾಲದಲ್ಲಿ ವಿಜಾಪುರಕ್ಕೆ ವಲಸೆ ಬಂದಿತು. ಬಾದಶಹನಿಂದ 'ಕಾಜಿ' ಪದವಿಯನ್ನು ಪಡೆದು ಅಲ್ಲಿಯೆ ಉಳಿಯಿತು. ಕಾಜಿ ಎಂದರೆ ನ್ಯಾಯದಾನ ನೀಡುವುದು, ಒಂದರ್ಥದಲ್ಲಿ ನ್ಯಾಯಾಧೀಶ ಪದವಿ. ಆದರೆ ಅದು ಸಂಪೂರ್ಣವಾಗಿ ಕುರಾನ ಶರೀಫದ ಶಾಸ್ತ್ರಗಳ ಆಧಾರದಿಂದಲೇ ನಡೆಯಬೇಕಾದ್ದರಿಂದ ಧರ್ಮಶಾಸ್ತ್ರಗಳ ಅಧ್ಯಯನವೂ ಅಗತ್ಯವಾಗಿತ್ತು. ಆದಿಲಶಾಹಿ ಕಾಲದಲ್ಲಿ ಜುಬೇರಿ ಮನೆತನ ನ್ಯಾಯ ನಿರ್ಣಯ ಮಾಡುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿತ್ತು. ಇಂದಿಗೂ ಅವರ ಮನೆತನ ವಿಜಾಪುರದಲ್ಲಿ ನಡೆದುಕೊಂಡು ಬಂದಿದೆ. ವಲಸೆ ಬಂದ ಮೂಲ ಪುರುಷನ ಸಮಾಧಿ ಇದೆ. ಅದಕ್ಕೆ 'ರಂಗೀನ-ದರ್ಗಾ' ಎಂದು ಹೆಸರು. ಮೂಲ ಪುರುಷನ ಉರುಸನ್ನು ಆಚರಿಸುತ್ತಾರೆ. ನ್ಯಾಯ ನೀಡುವುದರೊಂದಿಗೆ, ಮುಸ್ಲಿಮ ಧರ್ಮಶಾಸ್ತ್ರದಲ್ಲಿಯ ಅದ್ವಿತೀಯ ಪಾಂಡಿತ್ಯ ಮತ್ತು ಸಾಧನೆಗಳಿಂದ ಅವರದು ಗುರು ಮನೆತನ. ಹೀಗಾಗಿ ಆ ಪರಂಪರೆ ಇಂದಿಗೂ ಮುಂದುವರಿದುಕೊಂಡು ಬಂದಿದೆ. ಪವಿತ್ರ ಪೈಗಂಬರರ ಕಾಲದಿಂದ ಇಂದಿನವರೆಗೂ ನಡೆದುಕೊಂಡು ಬಂದ ಗುರುಪರಂಪರೆಯನ್ನು ಅವರು ಹೇಳಿಕೊಳ್ಳುತ್ತಾರೆ. ದಾಖಲಿಸಿಯೂ ಇಟ್ಟಿದ್ದಾರೆ. ವಲಸೆ ಬಂದ ಮೂಲಪುರುಷನ ೩೨೫ ಉರುಸುಗಳನ್ನು ಆಚರಿಸಿದ್ದಾಗಿಯೂ ಇನ್ನು ಮುಂದೆ ಬರುವ ಉರುಸು ೩೨೬ನೆಯದ್ದು ಎಂದು ಹೇಳುತ್ತಾರೆ. ಎಲ್ಲರಿಗೂ ಗೊತ್ತಿರುವಂತೆ 'ಉರುಸು' ಎಂದರೆ ಪುಣ್ಯಾರಾಧನೆ ಅಥವಾ ಸಮಾಧಿ ಹೊಂದಿದ ದಿನದ ನೆನಪು. ಅವರ ಹೇಳಿಕೆಯಂತೆ ೩೨೫ ವರುಷಗಳ ಹಿಂದೆ ಅವರ ಮೂಲ ಪುರುಷ, ಆತನ ಹೆಸರೂ ಇಬ್ರಾಹಿಮ ಜುಬೇರಿ ಸಮಾಧಿ ಹೊಂದಿದನು. ೧೧ ತಿಂಗಳಿನ ವರುಷದ ಲೆಕ್ಕದಲ್ಲಿ ಕ್ರಿ.ಶ. ಸು ೧೭೦೦ರ ಆಸುಪಾಸಿನಲ್ಲಿ ಸಮಾಧಿ ಹೊಂದಿರಬೇಕು. ಅದಕ್ಕೆ ಮೊದಲು ೪೦-೫೦ ವರುಷಗಳ ಹಿಂದೆ ವಿಜಾಪುರಕ್ಕೆ ಬಂದವನಾಗಿದ್ದರೆ, ಅದು ಸುಲ್ತಾನ ಮಹಮ್ಮದ ಆದಿಲಶಹನ ಕಾಲವಾಗುತ್ತದೆ. ಮುಂದಿನ ದಿನಗಳಲ್ಲಿ ಸುಮಾರು ಏಳನೆಯ ತಲೆಮಾರಿನಲ್ಲಿ ಹುಟ್ಟಿದವನೇ ಪ್ರಸ್ತುತ ಗ್ರಂಥಕರ್ತ ಫಕೀರ ಮಹಮ್ಮದ ಇಬ್ರಾಹಿಮ ಜುಬೇರಿ ಆಗಿರಲು ಸಾದ್ಯವಿದೆ. ತನ್ನಲ್ಲಿದ್ದ ಬಿಡಿ-ಬಿಡಿ

ಕಾಗದಗಳಲ್ಲಿ ಚದುರಿ ಹೋಗಿದ್ದ ಇತಿಹಾಸವನ್ನು ಒಂದೆಡೆ ಸೇರಿಸಿ ಚರಿತ್ರ ಗ್ರಂಥವನ್ನು ಬರೆಯಲು ಆತನ ಸ್ನೇಹಿತರು ಹೇಳಿದರೆಂದೂ, ಅದಕ್ಕಾಗಿ ಈ ಗ್ರಂಥ ಬರೆದೆನೆಂದೂ ಪ್ರಾರಂಭದಲ್ಲಿ ಹೇಳಿಕೊಂಡಿದ್ದಾನೆ. ಆದರೆ ಅದಕ್ಕೂ ಮೊದಲೆ, ಬ್ರಿಟಿಷರು ಬಂದು ದಕ್ಷಿಣದ ಸಾತಾರಾ, ಸುರಪುರ ಇತ್ಯಾದಿ ಸಂಸ್ಥಾನಗಳಲ್ಲಿ ಕಾಲು ಊರಿದ್ದರು. ಎಲ್ಲೆಡೆ ಅವರು ಪ್ರಾರಂಭಿಸಿದ್ದ ಚರಿತ್ರೆಯ ಅಭ್ಯಾಸಕ್ಕೆ ಇಲ್ಲಿಯ ನೆಲ-ಜಲಗಳ ಚರಿತ್ರೆಯೂ ಬೇಕಾಗಿತ್ತು. ಅದಕ್ಕಾಗಿ ಬಹುಶಃ ಜುಬೇರಿಯಲ್ಲಿದ್ದ ಆಕರ ಗ್ರಂಥಗಳನ್ನು ಕಂಡು ಆತನಿಗೆಯೇ ಒಂದು ಚರಿತ್ರಗ್ರಂಥವನ್ನು ಸಂಪಾದಿಸಿ ಕೊಡಲು ಹೇಳಿರುವ ಸಾಧ್ಯತೆ ಇದೆ.

ಯಾಕೆಂದರೆ ಜುಬೇರಿಯು ತನ್ನ ಗ್ರಂಥವನ್ನು ಬರೆದು ಮುಗಿಸುತ್ತಿದ್ದಂತೆಯೇ ಅದರ ಅನುವಾದವನ್ನು ಮರಾಠಿ ಭಾಷೆಯಲ್ಲಿ ಮಾಡಲು ನರಸಿಂಹ ವಿಠಲ ಪಾರಸನೀಸ ಎಂಬ ಮುನಶಿಗೆ ಬ್ರಿಟಿಶ್ ಅಧಿಕಾರಿಗಳು ಆಜ್ಞೆ ಮಾಡಿದ್ದಾರೆ. ಜುಬೇರಿಯು ತನ್ನ ಗ್ರಂಥದಲ್ಲಿ ಆದಿಲಶಾಹಿಗಳ ಚರಿತ್ರೆಯೊಂದಿಗೆ ಉತ್ತರ ಕಾಲೀನ ವಿಜಾಪುರದ ಚರಿತ್ರೆಯನ್ನು ಬರೆದು ತನ್ನ ಕಾಲದ ವರೆಗಿನ ಚಿತ್ರವನ್ನು ಕೊಡಲು ಪ್ರಯತ್ನಿಸಿದ್ದಾನೆ. ಕೊನೆಯ ಭಾಗದಲ್ಲಿ, ಒಂದೆಡೆ, ಕ್ರಿ.ಶ. ೧೮೧೮ರಲ್ಲಿ ವಿಜಾಪುರದಲ್ಲಿ ಹರಡಿದ್ದ ಭೀಕರ ಕಾಲರಾ ರೋಗವನ್ನು ಪ್ರಸ್ತಾಪಿಸುತ್ತ ಅದು ಎಂಟು ವರುಷಗಳವರೆಗೆ ನಗರವನ್ನು ಕಾಡಿತೆಂದು ದಾಖಲಿಸಿದ್ದಾನೆ. ಹಾಗಿದ್ದಲ್ಲಿ ಆತ ಗ್ರಂಥವನ್ನು ಕ್ರಿ.ಶ. ೧೮೩೦ ಮತ್ತು ೪೦ರ ಮಧ್ಯ ಬರೆದಿರುವ ಸಾಧ್ಯತೆ ಇದೆ. ಅದರ ಪ್ರಥಮ ಅನುವಾದದ ಮರಾಠೀ ನಕಲು ಪ್ರತಿಯನ್ನು 'ಹಿಜರಿ ಸನ್ ೧೨೬೬ ಜಿಲ್ಹೇಜ ತಿಂಗಳ ೨೯ರಂದು, ದಿನಾಂಕ ೫ ನವಂಬರ ೧೮೫೦ ರಂದು, ಶಾಲಿವಾಹನ ಶಕೆ ೧೭೭೨ರ ಕಾರ್ತೀಕ ಶುದ್ಧ ಪ್ರತಿಪದೆಯಂದು' ಸಾತಾರಾ ನಗರದಲ್ಲಿ ನರಸಿಂಹ ವಿಠಲ ಪಾರಸನೀಸನು ಸಮಾಪ್ತಿಗೊಳಿಸಿ, ಮೆಹರಬಾನ ಫ್ರಿಯರಸಾಹೇಬ ಬಹಾದ್ದೂರ ಕಮೀಶನರ ಸಾಹೇಬ ಸಾತಾರಾ ಇವರಿಗೆ ಕೊಟ್ಟಿದ್ದಾಗಿ ದಾಖಲಿಸುತ್ತಾನೆ. ಅದನ್ನು ಅವರಿಗೆ ಕೊಟ್ಟನಂತರ ಸಾತಾರೆಯ ಛತ್ರಪತಿ ಶಾಹು ಮಹಾರಾಜರು ತಮಗೂ ಒಂದು ಪ್ರತಿ ಬೇಕೆಂದು ಆಜ್ಞೆ ಮಾಡಿದ್ದರಿಂದ, ಅವರಿಗೂ ಒಂದು ಪ್ರತಿಯನ್ನು ಸಿದ್ಧಪಡಿಸಿ ದಿನಾಂಕ ೨೫ ನವಂಬರ ೧೮೫೧ ರಂದು ಸಲ್ಲಿಸಿದ್ದಾಗಿಯೂ ದಾಖಲಿಸಿದ್ದಾನೆ. ಆದ್ದರಿಂದ ಪರ್ಶಿಯನ್ ಹಾಗು ಅದರ ಮರಾಠಿ ಅನುವಾದ ಎರಡೂ ಗ್ರಂಥಗಳು ಸರಿಸುಮಾರು ಒಂದೇಕಾಲದಲ್ಲಿ ರಚಿತವಾಗಿದ್ದರಿಂದ ಈ ಗ್ರಂಥಗಳಿಗೆ ಬ್ರಿಟಿಶರೆ ಕಾರಣರಾಗಿದ್ದಾರೆ ಎನ್ನಬಹುದು.

ಇಷ್ಟಾಗಿಯೂ ಜುಬೇರಿ ಅದನ್ನು ತನ್ನ ಗ್ರಂಥದಲ್ಲಿ ಹೇಳಿಕೊಂಡಿಲ್ಲ. ಗೆಳೆಯರ ಒತ್ತಾಸೆಯಿಂದ ಬರೆದೆನೆಂದು ಹೇಳಿಕೊಳ್ಳುತ್ತಾನೆ. ಅದಕ್ಕೆ ಬಹುಶಃ ಆತನ ಸ್ವಾಭಿಮಾನವೆ ಕಾರಣವಿರಬೇಕು. ಯಾಕೆಂದರೆ ಗ್ರಂಥದುದ್ದಕ್ಕೂ ಅವಲೋಕಿಸಿದಾಗ ಆದಿಲಶಾಹಿಗಳ ಬಗ್ಗೆ, ವಿಶೇಷವಾಗಿ ತಾನು ವಾಸಿಸುತ್ತಿದ್ದ ವಿಜಾಪುರ ನಗರದ ಬಗ್ಗೆ ಇದ್ದ ಅಭಿಮಾನ ಎದ್ದು ಕಾಣುತ್ತದೆ. ಮೊಗಲರಾದಿಯಾಗಿ ಉಳಿದೆಲ್ಲ ಮುಸ್ಲಿಮ ಬಾದಶಹರುಗಳಿಗಿಂತ ಆದಿಲಶಾಹಿಗಳು ಶ್ರೇಷ್ಠರು ಎಂಬುದಂತೂ ಆತನಿಗೆ ಸರ್ವಮಾನ್ಯ ಸಂಗತಿ. ಜೊತೆಗೆ ವಿಜಾಪುರವೆಂದರೆ ದಕ್ಷಿಣದ ಕಾಶ್ಮೀರ ಎಂದೂ ಒಂದೆಡೆ ಉಲ್ಲೇಖಿಸುತ್ತಾನೆ. ಆದಿಲಶಾಹಿಗಳ ಅನಂತರ ಆ ನಗರಕ್ಕೆ ಬಂದು ಒದಗಿದ ದುರ್ದೆಸೆಯ ಬಗ್ಗೆ ಉಲ್ಲೇಖಿಸುತ್ತ ಒಂದು ಹಂತದಲ್ಲಿ ಮೊಗಲರನ್ನು ಮರಾಠರನ್ನು ದೂರುತ್ತ ಬ್ರಿಟಿಷರನ್ನೂ ಬಿಟ್ಟಿಲ್ಲ! ಆತನಿಗೆ ತನ್ನ ಧರ್ಮವೂ ಪ್ರಧಾನವಾಗುವುದಿಲ್ಲ. ವಿಜಾಪುರದ ಮತ್ತು ಆದಿಲಶಾಹಿಗಳ ದುರ್ದೆಸೆಗೆ ಕಾರಣನಾದ ತನ್ನ ಧರ್ಮದವನೇ ಆದ ಔರಂಗಜೇಬನನ್ನೂ ಒಂದು ಹಂತದಲ್ಲಿ ತೀಕ್ಷ್ಣವಾಗಿ ದೂಷಿಸುತ್ತಾನೆ!.

ಅನೇಕ ಆಕರ ಗ್ರಂಥಗಳ ಮೂಲಕ ಸಮಕಾಲೀನ ಸಂಗತಿಗಳನ್ನು ದಾಖಲಿಸುವುದರೊಂದಿಗೆ ಹಲವಾರು ಫರ್ಮಾನುಗಳನ್ನು, ಪತ್ರಗಳನ್ನು, ಸನದುಗಳನ್ನು ಆತ ದಾಖಲಿಸಿದ್ದಾನೆ. ಕೆಲವು ಸಂದರ್ಭಗಳಲ್ಲಿ ಪತ್ರದ ನಕಲುಗಳನ್ನೇ ಕೊಟ್ಟಿದ್ದಾನೆ. ಆದ್ದರಿಂದಲೇ ವಿಜಾಪುರದ ಆದಿಲಶಾಹಿಗಳ ಬಗ್ಗೆ ಮಹಾಪ್ರಬಂಧ ಬರೆದು ಸಲ್ಲಿಸಿದ ಖ್ಯಾತ ಇತಿಹಾಸಕಾರ ಡಾ.ಡಿ.ಸಿ ವರ್ಮಾ ಅವರು 'ಜುಬೇರಿಯು ಆ ಎಲ್ಲ ದಾಖಲೆಗಳನ್ನು ಸಂಗ್ರಹಿಸಿದ್ದನು' ಎನ್ನುತ್ತಾರೆ.

ಪ್ರಸ್ತುತ 'ಬುಸಾತಿನೆ-ಸಲಾತೀನ' ಗ್ರಂಥದ ಕನ್ನಡ ಅನುವಾದವನ್ನು ಮರಾಠಿ ಪ್ರತಿಯಿಂದ ಮಾಡಲಾಗಿದೆ. ಮರಾಠಿ ಅನುವಾದವನ್ನು ಕ್ರಿ.ಶ. ೧೯೪೯ ರಷ್ಟು ಹಿಂದೆಯೇ 'ಭಾರತ ವರ್ಷ' ಎಂಬ ಮರಾಠಿ ಮಾಸ ಪತ್ರಿಕೆಯಲ್ಲಿ ಪ್ರಕಟಿಸುವ ಪ್ರಯತ್ನ ಮಾಡಲಾಗಿತ್ತು. ಎಪ್ರಿಲ್ -ಮೆ ೧೯೪೯ರ ಎರಡು ಸಂಚಿಕೆಗಳಲ್ಲಿ ಮೊದಲಿನ ೨೪ ಪುಟಗಳಷ್ಟು ಮಾತ್ರ ಪ್ರಕಟವಾಯಿತು.

ಅನಂತರ ೧೯೬೮ರಲ್ಲಿ ಮರಾಠಿಯ ಖ್ಯಾತ ಇತಿಹಾಸಕಾರ ವಾ.ಸೀ ಬೇಂದ್ರೆ ಅವರು ಇಡೀ ಗ್ರಂಥವನ್ನು ಸಂಪಾದಿಸಿ ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯದ ಮುಖಾಂತರ ಪ್ರಕಟಿಸಿದರು. ಈ ಕನ್ನಡ ಅನುವಾದವು ಅದನ್ನೇ ಅವಲಂಬಿಸಿದೆ. ಅಡಿ ಟಿಪ್ಪಣಿಗಳಲ್ಲಿ ಅಲ್ಲಲ್ಲಿ ಕನ್ನಡ ಅನುವಾದಕನೂ ಕೆಲವನ್ನು ಕೊಟ್ಟಿರುವನಾದರೂ ಬಹುತೇಕ ಅಡಿ ಟಿಪ್ಪಣಿಗಳು ವಾ.ಸೀ. ಬೇಂದ್ರೆ ಅವರ ಅಭ್ಯಾಸದ ಫಲದಿಂದ ಬಂದವುಗಳಾಗಿವೆ. ಮೂಲತಃ ಮೋಡೀ ಲಿಪಿಯಲ್ಲಿದ್ದ ಮರಾಠಿ ಗ್ರಂಥವನ್ನು ಸಂಪಾದಿಸಿ ವಾ.ಸೀ. ಬೇಂದ್ರೆ ಅವರು ಬಹುದೊಡ್ಡ ಉಪಕಾರವನ್ನು ಮಾಡಿದ್ದಾರೆ. ಅದರ ಫಲವಾಗಿ ಕರ್ನಾಟಕದ ಒಂದು ಬಹುದೊಡ್ಡ ರಾಜಸತ್ತೆಯ ಚರಿತ್ರೆಯು ಬೆಳಕಿಗೆ ಬಂದು ಕರ್ನಾಟಕದ ಜನರನ್ನೂ ಋಣಿಗಳನ್ನಾಗಿ ಮಾಡಿದ್ದಾರೆ. ಅವರಿಗೆ ಪ್ರಥಮ ಕೃತಜ್ಞತೆಗಳು ಸಲ್ಲಬೇಕು. ಮೂರು ದಶಕಗಳಷ್ಟು ಹಿಂದೆಯೆ ಅದನ್ನು . ಮಂಬಯಿ ಮರಾಠಿ ಗ್ರಂಥ ಸಂಗ್ರಹಾಲಯವು ಪ್ರಕಟಿಸಿ ಚರಿತ್ರೆಯ ಓದುಗರಿಗೆ ಒದಗಿಸಿದ್ದಾರೆ. ಅವರನ್ನೂ ನೆನೆಯಬೇಕು.

ಹಂಪಿ ಕನ್ನಡ ವಿಶ್ವವಿದ್ಯಾಲಯವು ಕನ್ನಡದ ಕೆಲಸಕ್ಕಾಗಿ ಹುಟ್ಟಿದುದು. ಇಂದಿನ ಅದರ ಕುಲಪತಿಗಳಾದ ಡಾ.ಎಂ.ಎಂ. ಕಲಬುರ್ಗಿ ಅವರು ಕನ್ನಡ -ಕರ್ನಾಟಕದ ಗುರುತು ಎಲ್ಲೆಲ್ಲಿ ಇದೆಯೋ, ಅದು ಎಷ್ಟೇ ಸಣ್ಣದಾಗಿರಲಿ-ದೊಡ್ಡದಾಗಿರಲಿ ಕನ್ನಡದಲ್ಲಿ ಬರಬೇಕು ಎನ್ನುವವರು. 'ಎಲ್ಲ ಮಾರ್ಗಗಳೂ ಹಂಪಿಯತ್ತ' ಎಂಬುದು ಅವರ ಘೋಷಣೆಯೇ ಆಗಿದೆ. ಅವರ ಒತ್ತಾಸೆ ಇರದಿದ್ದರೆ ಇಂಥದೊಂದು ಬೃಹತ್ ಗ್ರಂಥ ಕನ್ನಡದಲ್ಲಿ ಬರುವುದು ತುಂಬ ಕಠಿಣವಾಗಿತ್ತು. ಅವರು ಕುಲಪತಿಗಳೆಂದು ಅಧಿಕಾರ ವಹಿಸಿಕೊಂಡ ತಕ್ಷಣ 'ಆದಿಲಶಾಹಿ ಆಸ್ಥಾನ ಸಾಹಿತ್ಯ'ದ ಬಗ್ಗೆ ನನ್ನಿಂದ ಉಪನ್ಯಾಸಗಳನ್ನು ಮಾಡಿಸಿ ಕಿರು ಹೊತ್ತಿಗೆಯನ್ನು ಪ್ರಕಟಸಿದರು. ಬೆನ್ನ ಹಿಂದೆಯೇ ಈ ಅನುವಾದಕ್ಕೆ ಪ್ರಚೋದನೆ ನೀಡಿದರು. ಬರೀ ಪ್ರಚೋದನೆ ಅಂದರೆ ತಪ್ಪಾದೀತು. ಒಂದೆಡೆ ಕುಳ್ಳಿರಿಸಿ ಅನುವಾದಕ್ಕೆ ಹಚ್ಚಿಸಿದರು. ಪ್ರತಿವಾರ ತಪ್ಪದೆ ಫೋನಿಸಿ 'ಎಲ್ಲಿಗೆ ಬಂತು', 'ಇಷ್ಟ ಸಾವಕಾಶ ಯಾಕ' 'ಆದಷ್ಟು ತುಗೊಂಡು ಬರ್ರಿ' ಎಂದು ತಮ್ಮ ಕುಲಪತಿಗಳ ನಿವಾಸದಲ್ಲಿಯೆ ಇಟ್ಟುಕೊಂಡು ರುಚಿಯಾದ ಊಟ ಹಾಕಿ, ಅನುವಾದವನ್ನು ಅವಲೋಕಿಸಿ ಬೀಳ್ಕೊಡುತ್ತಿದ್ದರು. ಅನುವಾದ ಮುಗಿಯುತ್ತಿದ್ದಂತೆಯೆ ಅದನ್ನು ಪ್ರಕಟಿಸುತ್ತಿದ್ದಾರೆ. ಅವರ ಈ ತೆರನಾದ ಕೆಲಸಕ್ಕೆ ಏನನ್ನಬೇಕು? ಕೃತಜ್ಞ ಎಂದರೆ ಬರೀ ಉಪಚಾರದ ಮಾತು ಆಗುತ್ತದೆ. ಇಂಥದೊಂದು ಕೃತಿಯನ್ನು ಕನ್ನಡಿಗರಿಗೆ ಒದಗಿಸುತ್ತಿರುವುದಕ್ಕಾಗಿ ಕನ್ನಡಿಗರೆಲ್ಲರೂ ಋಣಿ ಎಂದರೆ ತಪ್ಪಲ್ಲ.

‘ಬುಸಾತಿನೆ-ಸಲಾತೀನ’ ಗ್ರಂಥ ರಚಿಸಿದ ಜುಬೇರಿ ಯಾರು? ಎಲ್ಲಿಯವನು? ಎಂಬುದು ಗೊತ್ತಿರಲಿಲ್ಲ. ಅದನ್ನು ತಿಳಿಯಬೇಕೆಂದು ಪ್ರಯತ್ನಿಸುತ್ತಿದ್ದಾಗ ವಿಜಾಪುರದಲ್ಲಿಯ ಸಿಕ್ಯಾಬ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷರು, ನನ್ನ ಆತ್ಮೀಯರೂ ಆದ ಶ್ರೀ ಶಮಸುದ್ದೀನ ಪುಣೇಕರ ಅವರು ತಮ್ಮೆಲ್ಲ ಕಾರ್ಯಗಳನ್ನು ಬದಿಗೊತ್ತಿ ನನ್ನೊಂದಿಗೆ ತಿರುಗಿದರು. ಜುಬೇರಿ ಅವರ ಮನೆ, ದರ್ಗಾ, ಮಸೀದೆಗಳಿಗೆ ಕರೆದುಕೊಂಡು ಹೋಗಿ ಪರಿಚಯಿಸಿದರು. ಜುಬೇರಿ ಮನೆತನದವರೂ ಅಷ್ಟೇ ಆಸ್ಥೆಯಿಂದ ಉಪಲಬ್ಧವಿದ್ದ ಮಾಹಿತಿಗಳನ್ನು ಒದಗಿಸಿದರು. ಜೊತೆಗೆ ‘ಬುಸಾತಿನೆ-ಸಲಾತೀನ’ ಪರ್ಶಿಯನ್ ಹಸ್ತಪ್ರತಿಯನ್ನು ಒದಗಿಸಿದರು. ಅದರ ಮೊದಲ ಪುಟವನ್ನು ಇಲ್ಲಿ ಕೊಡಲಾಗಿದೆ. ಶ್ರೀ ಪುಣೇಕರ ಅವರಿಗೂ, ಜುಬೇರಿ ಮನೆತನದ ಎಲ್ಲ ಹಿರಿ-ಕಿರಿಯರಿಗೂ ಕೃತಜ್ಞತೆಗಳು.

ಕೃತಿ, ಕನ್ನಡದಲ್ಲಿ ಅನುವಾದಗೊಳ್ಳುತ್ತಿದ್ದಂತೆ ಅದನ್ನು ಪರಾಮರ್ಶಿಸಿ ಅಲ್ಲಲ್ಲಿ ಸೂಕ್ತ ತಿದ್ದುಪಡಿಗಳನ್ನು, ಇಸ್ಲಾಂ ಧರ್ಮದ ಆಚಾರ-ವಿಚಾರಗಳನ್ನು ಕನ್ನಡದಲ್ಲಿ ಸರಿಯಾಗಿ ಬರುವಂತೆ ನೋಡಿಕೊಂಡವರು ಸ್ನೇಹಿತರಾದ ಡಾ. ರಹಮತ ತರೀಕೆರೆ ಅವರು . ತಮ್ಮ ಬಿಡುವಿಲ್ಲದ ಕಾರ್ಯಗಳಲ್ಲಿ, ಇಡೀ ಗ್ರಂಥವನ್ನು ಓದಿ ಸಲಹೆ ನೀಡಿದ್ದಾರೆ. ಸ್ನೇಹಿತರಾದ ಶ್ರೀ ರಾಜೇಂದ್ರಪ್ಪ ಅವರು ಶಬ್ದ ಸೂಚಿಯನ್ನು ಸಿದ್ಧಪಡಿಸಿ ಕೊಟ್ಟಿದ್ದಾರೆ. ವಿಜಾಪುರದ ಸಿಂಹಾಸನದಲ್ಲಿ ಕುಳಿತು ರಾಜ್ಯವಾಳಿದ ಎಂಟು ಬಾದಶಹರ ಚಿತ್ರಗಳನ್ನು ಈ ಗ್ರಂಥಕ್ಕಾಗಿಯೇ ಎಂದು ಬಿಡಿಸಿ ಕೊಟ್ಟವರು ನಾಡಿನ ಖ್ಯಾತ ಕಲಾವಿದ, ಶ್ರೀ ನಾನಾ ದೇಸಾಯಿ ಅವರು. ಸುಂದರವಾದ ರಕ್ಷಾ ಕವಚವನ್ನು ಬಿಡಿಸಿದವರು ನಮ್ಮ ಊರಿನವರೇ ಆದ ಶ್ರೀ ಕೆ.ಕೆ. ಮಕಾಳಿ ಮತ್ತು ಅಷ್ಟೇ ಆಸ್ಥೆಯಿಂದ ಮುತುವರ್ಜಿ ವಹಿಸಿ ಪ್ರಕಟನೆಯ ಎಲ್ಲ ಹಂತಗಳಲ್ಲಿ ಸ್ವತಃ ನಿಂತು, ಸುಂದರವಾಗಿ ಹೊರಬರುವಂತೆ ನೋಡಿಕೊಂಡವರು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಿರ್ದೇಶಕರು, ನನ್ನ ಆತ್ಮೀಯ ಸ್ನೇಹಿತರೂ ಆದ ಪ್ರೊ. ಎ.ವಿ. ನಾವಡ ಅವರು. ೨೦ ದಿನಗಳಲ್ಲಿ ಗ್ರಂಥವು ಮುದ್ರಣವಾಗಿ ಹೊರಬರಬೇಕೆಂದು ಕುಲಪತಿಗಳು ಆದೇಶಿಸಿದಾಗ ಅದನ್ನೊಂದು ‘ಚಾಲೆಂಜ’ ಎಂದು ಸ್ವೀಕರಿಸಿ ಅಷ್ಟೇ ಶಿಸ್ತಿನಿಂದ ಮುದ್ರಿಸಿದವರು ಬೆಂಗಳೂರಿನ ಗಾಯತ್ರಿ ಬುಕ್ ಕಂಪನಿಯ ಶ್ರೀ. ಸತ್ಯನಾರಾಯಣ ಜೋಶಿ ಅವರು. ಇವರುಗಳಿಗೆಲ್ಲ ನನ್ನ ಅನಂತ ನಮನಗಳು.

ಕೊನೆಯದಾಗಿ ಅನುವಾದ ಕಾರ್ಯ ಸುಗಮವಾಗುವಂತೆ ನೋಡಿಕೊಂಡ ಹೆಂಡತಿ ಸೌ. ವಿಜಯ ಹಾಗೂ ಗದ್ದಲ ಹಾಕುತ್ತಲೇ ‘ಅಜ್ಜ ಎ.ಬಿ.ಸಿ.ಡಿ ಬರೆಯುತ್ತಿದ್ದಾನೆ’ ಎಂದು ಸಹಕರಿಸಿದ ಪುಟ್ಟ ಮೊಮ್ಮಕ್ಕಳು, ಮೇಧಾ, ಶ್ವೇತಾ ಮತ್ತು ನಿಧಿ ಇವರುಗಳನ್ನು ನೆನೆಯಬೇಕು.

ವಿಜಾಪುರ　　　　　　　　　　　　　　　　　　ಕೃಷ್ಣ ಕೊಲ್ಹಾರಕುಲಕರ್ಣಿ.

೧-೧೨-೯೬

# ಪರಿವಿಡಿ

ಪುಟ ಸಂಖ್ಯೆ

ಪ್ರಸ್ತಾವನೆ (ಮರಾಠಿ ಅನುವಾದಕ) ೧

ಪ್ರಾಸ್ತಾವಿಕ (ಮೂಲ ಗ್ರಂಥಕಾರನಿಂದ) ೩

ಬುಸ್ತಾನ : ಒಂದು ೭-೨೫

ಯೂಸುಫ ಆದಿಲಶಾಹ

೧. ಮಜಲಸ್ ರಫೀಯಾ ಯೂಸುಫನಿಂದ ಆದಿಲಶಾಹೀ ರಾಜ್ಯದ ಆರಂಭ : ೭

೨. ಯುಸೂಫ ಆದಿಲಶಹನ ಉತ್ಪತ್ತಿಯ ಎರಡನೆಯ ವರ್ಣನೆ ೧೦

೩. ಯೂಸುಫನ ಕಾರ್ಯಾರಂಭ : ೧೪

೪. ಗೊತ್ತಿರಬೇಕಾದದ್ದು : ೧೭

೫. ಕಾಸಿಮ ಬರೀದನ ದ್ವೇಷ ಮತ್ತು ವಿಜಯನಗರದ ಅಧಿಕಾರಿ ತಿಮ್ಮರಾಜನನ್ನು ಹೊರಗೆ ಹಾಕಿದ್ದು. ೨೦

೬. ಆದಿಲಶಹನು ಷಿಯಾ ಧರ್ಮವನ್ನು ಪ್ರಾರಂಭಿಸಿ ಖಲೀಫರ ಹೆಸರನ್ನು ಬಿಟ್ಟು ಶ್ರೇಷ್ಠ ಇಮಾಮರ ಹೆಸರಿನಲ್ಲಿ ಖುತಬಾ ಓದಿಸಿದ್ದು. ೨೧

೭. ಯೂಸುಫ ಆದಿಲಶಹನು ತೀರಿಕೊಂಡದ್ದು : ೨೪

೮. ಯೂಸುಫ ಆದಿಲಶಹನ ಸೈನ್ಯದ ಪರಿಮಿತಿ ಮತ್ತು ಕ್ರಮವಾಗಿ ಅದರ ವಿಸ್ತಾರ : ೨೫

ಬುಸ್ತಾನ : ಎರಡು ೨೬ - ೪೨

ಇಸ್ಮಾಯಿಲ ಆದಿಲಶಾಹ

೧. ಇಸ್ಮಾಯಿಲ ಆದಿಲಶಾಹ ಬಿನ್ ಯೂಸುಫ ಆದಿಲಶಹನ ವರ್ಣನೆಯು : ೨೬

೨. ಕಮಾಲಖಾನನು, ಮತ್ತು ಆತನ ಮಗ ಸಫದರಖಾನ ಸಹಿತ ಸೇಡು ತೀರಿಸಲು ಹೋಗಿ ಸತ್ತದ್ದು. ೨೭

೩. ಅಮೀರ ಬರೀದನು, ಅಹ್ಮದನಗರ ಮತ್ತು ಗೋವಳಕೊಂಡದ ಅಧಿಕಾರಿಗಳ ಸೈನ್ಯವನ್ನು ತೆಗೆದುಕೊಂಡು ಇಸ್ಮಾಯಿಲ ಆದಿಲಶಹನ ಮೇಲೆ ದಾಳಿ ಮಾಡುವುದು. ಅಮೀರ ಬರೀದನ ಸೋಲು ಮತ್ತು ಬೀಬಿ ಸತಿಯ ಮದುವೆ. ೩೧

೪. ಆದಿಲಶಾಹ ಹಾಗೂ ಬುರ್ಹಾನ ನಿಜಾಮಶಾಹರ ಮಧ್ಯ ಸಖ್ಯ ನಿಜಾಮಶಾಹ ನೊಂದಿಗೆ ಮರಿಯಮ್ ಸುಲ್ತಾನಳ ಮದುವೆ ಮತ್ತು ಕೆಲವೆ ದಿನಗಳಲ್ಲಿ ಉಭಯ ಬಾದಶಹರ ಮಧ್ಯ ದ್ವೇಷ. ೩೨

೫. ಅಸದಖಾನನ ಯತ್ನದಿಂದ ಆದಿಲಶಾಹ ಮತ್ತು ಇಮಾದುಲ್ಮುಲ್ಕರ ಮಧ್ಯ ಸಖ್ಯ ಇಮಾದುಲ್ಮುಲ್ಕನಿಗೆ ಖದೀಜಾ ಸುಲ್ತಾನಳನ್ನು ಕೊಟ್ಟು ಮದುವೆ. ೩೪

೬. ಆದಿಲಶಹನು ಅಮೀರ ಬರೀದನನ್ನು ಶಿಕ್ಷಿಸಲು ಹೋಗಿ ಬೀದರವನ್ನು ಹಸ್ತಗತ ಮಾಡಿಕೊಂಡಿದ್ದು. ಅಸದಖಾನನು ನಿದ್ರೆಯಲ್ಲಿದ್ದ ಅಮೀರ ಬರೀದನ ಮಂಚವನ್ನು ಎತ್ತಿ ತಂದದ್ದು, ಕೆಲವು ದಿನಗಳ ನಂತರ ತಿರುಗಿ ಕೊಟ್ಟದ್ದು. ೩೫

೭. ಮುದಗಲ್ಲ ಮತ್ತು ರಾಯಚೂರು ವಿಜಯ ಹಾಗೂ ಅಮೀರ ಬರೀದನಿಗೆ ಆತನ ಪ್ರದೇಶಕ್ಕೆ ಹೋಗಲು ಅನುಮತಿ. ೩೯

೮. ಆದಿಲಶಾಹ ಹಾಗೂ ನಿಜಾಮಶಾಹರ ಸಮ್ಮುಖದಲ್ಲಿ ಆದಿಲಶಾಹನು ಯಶಸ್ವಿಯಾದುದು. ೪೦

೯. ಇಸ್ಮಾಯಿಲ ಆದಿಲಶಹನ ಮರಣ : ೪೧

೧೦. ಮಲ್ಲುಖಾನನನ್ನು ಸಿಂಹಾಸನದ ಮೇಲೆ ಕೂಡಿಸಬೇಕೆಂದು ಆದಿಲಶಹನು ಅಸದಖಾನನಿಗೆ ಹೇಳಿದ್ದು. ಮಲ್ಲುಖಾನನು ಏಳುತಿಂಗಳ ರಾಜ್ಯವಾಳಿದ್ದು : ೪೨

ಬುಸ್ತಾನ : ಮೂರು ೪೩ - ೫೮

## *ಇಬ್ರಾಹಿಮ ಆದಿಲಶಾಹ -I*

೧. ಇಬ್ರಾಹಿಮ ಆದಿಲಶಾಹ ವಲ್ಲದ(ತಂದೆ) ಇಸ್ಮಾಯಿಲ್ ಆದಿಲಶಾಹ. ೪೩

೨. ಇಬ್ರಾಹಿಮ ಆದಿಲಶಹನು ವಿಜಯನಗರದ ಮೇಲೆ ಏರಿ ಹೋಗುವುದು ಮತ್ತು ಅಲ್ಲಿಂದ ವಿಜಯಿಯಾಗಿ ಹಿಂತಿರುಗುವುದು. ೪೪

೩. ವಿಜಯನಗರದಿಂದ ಹಿಂತಿರುಗಿದ ಅನಂತರ ಇಬ್ರಾಹಿಮ ಆದಿಲಶಹನು ವಿಜಾಪುರದ ಕೋಟೆಯನ್ನು ಕಟ್ಟಿದನು. ೪೭

೪. ಆದಿಲಶಹನು ಆದೋನಿಯ ಕೋಟೆಯನ್ನು ಹಸ್ತಗತ ಮಾಡಿಕೊಳ್ಳಲು ಅಸದಖಾನನ್ನು ಕಳಿಸಿದ್ದು ಮತ್ತು ಯಶಸ್ವಿಯಾದದ್ದು. ೪೭

೫. ಆದಿಲಶಾಹನ ಜೊತೆಗೆ ಐನುಲ್‌ಮುಲ್ಕನ ವಿರೋಧ ಅದರ ಪರಿಣಾಮ ಅವನಿಗೆ ಕೆಟ್ಟದಾಗಿದ್ದುದು : ೪೮

೬. ಆಸ್ಥಾನದ ಜನರು ಅಸದಖಾನನ ವಿರುದ್ಧ ಎದ್ದುನಿಲ್ಲುವುದು. ಅಸದಖಾನನು ಇಲ್ಲದಿದ್ದಾಗ ಆತನ ಬೆನ್ನು ಹಿಂದೆ ಆತನ ಘಾತುಕ ಕತೆಗಳನ್ನು ಹೇಳಿ ಇಬ್ರಾಹಿಮನ ಮನಸ್ಸನ್ನು ಕೆಡಿಸುವುದು, ಇಮಾದುಲ್ಮುಲ್ಕ ಬಾದಶಹನ ಮಧ್ಯಸ್ಥಿಕೆಯಿಂದ ಉಭಯತರ ಸಖ್ಯ : ೪೯

೭. ನಿಜಾಮಶಾಹ, ರಾಮರಾಜ, ಕುತುಬಶಾಹ ಮತ್ತು ಬರೀದರು ಕೂಡಿಕೊಂಡು ಇಬ್ರಾಹಿಮ ಆದಿಲಶಹ ರಾಜ್ಯದಲ್ಲಿ ಪ್ರವೇಶಿಸುವುದು. ಅಸದಖಾನನಿಂದ ಸಂಕಟ ಮುಕ್ತಿ. ೫೧

೮. ರಾಮರಾಜನ ಮಾತು ಕೇಳಿ ನಿಜಾಮಶಹನು ಆದಿಲಶಹನ ಮೇಲೆ ಸೈನ್ಯ ತೆಗೆದುಕೊಂಡು ಬರುವುದು ಮತ್ತು ನಿಜಾಮಶಹನು ಪರಾಜಿತನಾಗುವುದು: ೫೨

೯. ಇಬ್ರಾಹಿಮ ಆದಿಲಶಹನ ವ್ಯಕ್ತಿತ್ವದಲ್ಲಿ ಕಠೋರತನ ಹಾಗೂ ಜನರಮೇಲೆ ಅತ್ಯಾಚಾರ ೫೩

೧೦. ಇದನ್ನು ತಿಳಿದಿರಬೇಕು : ೫೫

೧೧. ಇಬ್ರಾಹಿಮ ಆದಿಲಶಹನ ಮರಣ : ೫೭

೧೨. ಇಬ್ರಾಹಿಮ ಆದಿಲಶಹನ ದ್ರವ್ಯ ಭಂಡಾರ, ಸ್ವಾರರು, ಸಿಬ್ಬಂದಿ ಹಾಗೂ ಕಟ್ಟಡಗಳ ವಿವರ. ೫೮

ಬುಸ್ತಾನ : ನಾಲ್ಕು ೫೯ - ೧೩೩

*ಅಲಿ ಆದಿಲಶಾಹ -I*

೧. ಅಲಿ ಆದಿಲಶಾಹ ಬಿನ್ ಇಬ್ರಾಹಿಮ ಆದಿಲಶಾಹ : ೫೯

೨. ಅಲಿಯ ಬಗ್ಗೆ ಇನ್ನೊಂದು ವಿವರ : ೬೧

೩. ರಾಮರಾಜನ ಭೆಟ್ಟಿಗಾಗಿ ಅಲಿ ಆದಿಲಶಹನು ವಿಜಯನಗರಕ್ಕೆ ಹೋಗಿದ್ದು : ೬೯

೪. ಅಲಿ ಆದಿಲಶಹ ಹಾಗು ರಾಮರಾಜರು ಸೈನ್ಯ ಸಮೇತ ನಿಜಾಮಶಹನ ಸರಹದ್ದಿನ ಪ್ರದೇಶದಲ್ಲಿ ದಾಳಿ : ೭೨

೫. ಆದಿಲಶಹ ಹಾಗು ರಾಮರಾಜನು ಎರಡನೆಯ ಬಾರಿ ಮತ್ತೆ ಸೈನ್ಯದೊಂದಿಗೆ ನಿಜಾಮಶಹನ ಮೇಲೆ ದಾಳಿ, ಶಹದುರ್ಗ ಕೋಟೆಯನ್ನು ಕಟ್ಟಿದ್ದು : ೭೩

೬. ರಾಮರಾಜನ ಗದ್ದಲ, ಮುಸಲ್ಮಾನ ಬಾದಶಹರು ಆತನ ಕೆಟ್ಟ ನಡತೆಯ ನಿವಾರಣೆ ಮಾಡಿದ್ದು : ೭೫

೭. ಅಲಿ ಆದಿಲಶಹನೊಂದಿಗೆ ಚಾಂದಬೀಬಿ ಮತ್ತು ಬೀಬಿ ಹದಿಯಾ ಸುಲ್ತಾನಳ ಮದುವೆ ರಾಜಕುಮಾರ ಮುರ್ತಜಾ ನಿಜಾಮಶಾಹನೊಂದಿಗೆ ಆದದ್ದು: ೭೯

೮. ರಾಮರಾಜನೊಂದಿಗೆ ಯುದ್ಧ ; ಆತನ ಸೋಲು: ೮೦

೯. ಹಿಂದು ಸೈನ್ಯದ ಸೋಲು, ಆ ಸೈನ್ಯವನ್ನು ಮುಸಲ್ಮಾನ ಸೈನ್ಯ ಬೆನ್ನು ಹತ್ತಿದ್ದು. ಮುಸಲ್ಮಾನರ ಕೈಗೆ ಅಗಣಿತ ಸುಲಿಗೆ ವಸ್ತು ದೊರಕಿತು. ೮೭

೧೦. ಮುಸಲ್ಮಾನ ಬಾದಶಹರು ವಿಜಯನಗರಕ್ಕೆ ಬಂದು ಸುಲಿಗೆ ಮಾಡಿದರು : ೮೮

೧೧. ವಿಜಯನಗರದ ಸುತ್ತ ಮುತ್ತಲಿನ ಬೆಟ್ಟಗಳಲ್ಲಿಯ ಗುಹೆಗಳು ಮತ್ತು ಬಿಲಗಳ ಸವಿವರ ವರ್ಣನೆ : ೯೦

೧೨. ನಿಜಾಮಶಹ ಮತ್ತು ಕುತುಬಶಹರು ವಿಜಯನಗರದಿಂದ ತಿರುಗಿ ಹೋದರು : ೯೨

೧೩. ಆದಿಲಶಹನು ಸಾವಕಾಶವಾಗಿ ಮತ್ತು ಸುಲಭವಾಗಿ ನಾಲ್ಕು ಕೋಟೆಗಳನ್ನು ಸ್ವಾಧೀನ ಪಡಿಸಿಕೊಂಡು ವಿಜಾಪುರಕ್ಕೆ ಬಂದದ್ದು : ೯೩

೧೪. ಅಲೀ ಆದಿಲಶಹನು, ಕಿಶ್ವರಖಾನನಿಂದ ವಿಜಾಪುರದ ಕೋಟೆಯನ್ನು ಕಟ್ಟಿದ್ದು. ಮತ್ತು ಅವನಿಂದಲೇ ಜುಮ್ಮಮಸೀದಿಯನ್ನು ಕಟ್ಟಿಸಿ, ನಗರದಲ್ಲಿ ನಲ್ಲಿ ನೀರನ್ನು ತಂದುದು : ೯೩

೧೫. ಆದಿಲಶಹನು ಕರ್ನಾಟಕದ ಮೇಲೆ ಸೈನ್ಯವನ್ನು ಕಳಿಸುವುದು ಮತ್ತು ನಿಜಾಮಶಹ ಇತ್ಯಾದಿಗಳು ವೈರತ್ವದಿಂದ ಎದ್ದು ನಿಲ್ಲುವುದು : ೯೫

೧೬. ಆದಿಲಶಾಹನ ಪ್ರದೇಶದಲ್ಲಿ ಮೂವರು ಬಾದಶಹರು ಸೈನ್ಯ ತೆಗೆದುಕೊಂಡು ಏರಿ ಬರುವುದು, ಕಿಶ್ವರಖಾನನು ಕರ್ನಾಟಕದಿಂದ ತಿರುಗಿ ಬರುವುದು ಮತ್ತು ಮೂವರೂ ಬಾದಶಹರು ಸೋತದ್ದು : ೯೭

೧೭ ಮತ್ತೆ ನಿಜಾಮಶಹ ಮೊದಲಾದವರು ಸೈನ್ಯ ಸೇರಿಸಿ ಆದಿಲಶಾಹಿ ಇಲಾಖೆಯಲ್ಲಿ ಬರುವುದು : ೧೦೦

೧೮. ಕಿಶ್ವರಖಾನನು ಮಹಾದುರ್ಗದ ಕೋಟೆಯನ್ನು ಕಟ್ಟಿದ್ದು. ಅದು ಧಾರೂರ ಹತ್ತಿರ ಪ್ರಸಿದ್ಧವಾಗಿದೆ. ಕಿಶ್ವರಖಾನನನ್ನು ಕೊಲ್ಲಿಸಿದ್ದು, ಆದಿಲಶಾಹನು ಪಶ್ಚಾತ್ತಾಪ ಪಟ್ಟದ್ದು : ೧೦೦

೧೯. ಅಂಕುಶಖಾನನು ಸರದಾರರೊಂದಿಗೆ ತನ್ನ ಯಶಸ್ವಿ ಸೈನ್ಯದೊಂದಿಗೆ ಉದೋನಿ (ಆದೋನಿ) ಕೋಟೆಯನ್ನು ತೆಗೆದುಕೊಳ್ಳಲು ಹೋಗುವುದು ಮತ್ತು ಆದೋನಿ ಕೋಟೆಯನ್ನು ಪಡೆದದ್ದು : ೧೦೫

೨೦. ಅಬದುಲ ಹಸನ ಹಾಗೂ ಚುಂಗೀರಖಾನ ಇವರ ಯತ್ನದಿಂದ ಸರಹದ್ದಿನಲ್ಲಿ ಆದಿಲಶಹ ಹಾಗೂ ನಿಜಾಮಶಹರ ಭೆಟ್ಟಿಯಾಗುವುದು ಮತ್ತು ಉಭಯತರ ಸಖ್ಯದ ಒಪ್ಪಂದದ ಕರಾರುಗಳು : ೧೦೭

೨೧. ಮತ್ತೆ ಹಿಂದುಗಳ ಪ್ರದೇಶದ ಮೇಲೆ ಸೈನ್ಯವನ್ನು ತೆಗೆದುಕೊಂಡು ಹೋಗುವುದು. ಮತ್ತು ಅಬದುಲ ಹಸನ ಈತನನ್ನು ವಕೀಲ ಕೆಲಸದಿಂದ ಕಿತ್ತಿಹಾಕಿ ಮುಸ್ತಫಾಖಾನ ಇರದಸ್ತಾನೀ ಎಂಬವನಿಗೆ ವಕೀಲ ಪದವಿಯನ್ನು ನೀಡಿದ್ದು : ೧೦೭

೨೨. ಬಂಕಾಪುರದ ಕೋಟೆಯ ಗೆಲುವು : ೧೦೮

೨೩. ಅಫಜಲಖಾನ ಶಿರಾಜಿಯ ತುಸು ವರ್ಣನೆ : ೧೧೧

೨೪. ಮುಸ್ತಫಾಖಾನ ಅರಬ ಸ್ಥಾನೀಯ ತುಸು ವರ್ಣನೆ : ೧೧೪

೨೫. ದೊಡ್ಡ ವಜ್ರದ ವರ್ಣನೆ : ೧೧೭

೨೬. ಅಲಿ ಆದಿಲಶಹನ ಮರಣ : ೧೨೦

೨೭. ಸತ್ತ ಅಲಿ ಆದಿಲಶಹನ ಉತ್ತಮ ಲಕ್ಷಣಗಳು, ಶ್ರೇಷ್ಠ ಸ್ವಭಾವ ಹಾಗು ಆತನ ಮರಣದ ಸೂಚನೆ : ೧೨೪

೨೮. ಕಾಲಾನುಕ್ರಮಣಿಕೆ ಮತ್ತು ಸೈನ್ಯದ ವಿವರಗಳು : ೧೩೨

ಬುಸ್ತಾನ : ಐದು ೧೩೪ - ೨೪೬

## ಎರಡನೆಯ ಇಬ್ರಾಹಿಮ ಆದಿಲಶಾಹ

೧. ಇಬ್ರಾಹಿಮ ಆದಿಲಶಾಹ ಬಿನ್ ತಹಮಾಸಿಪ್ ಬಿನ್ ಇಬ್ರಾಹಿಮ ಆದಿಲಶಹನ ವರ್ಣನೆ : ೧೩೪

೨. ಕಾಮಿಲಖಾನನ ಸರ್ವಾಧಿಕಾರ, ರಾಜ್ಯವನ್ನು ಹಸ್ತಗತ ಮಾಡಿಕೊಂಡುದರ ವರ್ಣನೆ : ೧೩೫

೩. ಕಿಶ್ವರಖಾನನು ಪರರಾಜ್ಯ ಪ್ರದೇಶಗಳನ್ನು ವಶಪಡಿಸಿಕೊಂಡದ್ದು ಮತ್ತು ಆಡಳಿತ ನಡೆಸಿದ ವರ್ಣನೆ : ೧೩೮

೪. ಶತ್ರುಗಳನ್ನು ಎದುರಿಸಲು ಕಿಶ್ವರಖಾನನು ಅಫಜಲಖಾನನೊಂದಿಗೆ ಸೈನ್ಯವನ್ನು ನಿಯಮಿಸುವುದು : ೧೪೧

೫. ಮುಸ್ತಫಾಖಾನ ಆರದಸ್ತಾನಿಯ ಮೇಲೆ ಕಿಶ್ವರಖಾನನು - ಸೈನ್ಯವನ್ನು ಕಳಿಸಿದ್ದು : ೧೪೨

೬. ಚಾಂದಬೀಬಿ ಸುಲ್ತಾನಾಳನ್ನು ಅರಮನೆಯಿಂದ ಜಗ್ಗಿ ಕಿಶ್ವರಖಾನನು ಸಾತಾರಾ ಕೋಟೆಗೆ ಕಳಿಸಿ ಸೆರೆಮನೆಯಲ್ಲಿಟ್ಟನು : ೧೪೩

೭. ಕಿಶ್ವರಖಾನನು ವಿಜಾಪುರದಿಂದ ಹೊರಟು ಅಹ್ಮದನಗರಕ್ಕೆ ಹೋಗಿ ಇರುವುದು ಮತ್ತು ಅಲ್ಲಿಂದ ಕುತುಬಶಾಹನ ರಾಜ್ಯಕ್ಕೆ ಹೋಗುವುದು. ಅಲ್ಲಿ ಆತನ ಮರಣ. ೧೪೬

೮. ಆದಿಲಶಾಹಿ ರಾಜ್ಯದ ಕಾರಭಾರವು ಯೆಖಲಾಸಖಾನನ ಕೈವಶ ಹಾಗೂ ಆತನು ಪ್ರಬಲನಾದುದು. ೧೪೭

೯. ನಿಜಾಮಶಹನ ಸೋತ ಸೈನ್ಯವು ಮತ್ತೆ ಸೇರಿ ಅಫಜಲಖಾನನ ಮೇಲೆ ಏರಿ ಬಂದದ್ದು ಮತ್ತು ಅಫಜಲಖಾನನು ವಿಜಾಪುರಕ್ಕೆ ಹೋಗಲು ಹಿಂತಿರುಗಿದ್ದು. ೧೫೧

೧೦. ಐನುಲ್ ಮುಲ್ಕನು ಹಬಶೀ ಜನರನ್ನು ಬಂಧಿಸಿ ಬೇಡಿಗಳನ್ನು ಹಾಕಿದ ಸಂಗತಿ. ೧೫೧

೧೧. ಮಕಸುದಖಾನನು ಐನುಲ್ ಮುಲ್ಕನ ಬಂಧನದಿಂದ ಹಬಶೀ ಜನರನ್ನು ಬಿಡಿಸಿ ಮತ್ತೆ ಕೆಲಸದ ಮೇಲೆ ಹಾಜರಾದದ್ದು. ೧೫೨

೧೨. ಚಿಲ್ಲರೆ ಮನುಷ್ಯನ ಹೇಳಿಕೆಯನ್ನು ಕೇಳಿ ಅಫಜಲಖಾನನ ಬಂಧನ : ೧೫೩

೧೩. ಚಾಂದಬೀಬಿಯು ಹಬಶೀ ಜನರನ್ನು ಕೆಲಸದಿಂದ ಕಡಿಮೆ ಮಾಡಿದ್ದು ಮತ್ತು ಶಾಹ ಅಬದುಲ್ ಹಸನನಿಗೆ ಪ್ರಧಾನಿ ಪದವಿ ಕೊಟ್ಟದ್ದು : ೧೫೩

೧೪. ಅಫಜಲಖಾನನ ಕೊಲೆ ಮತ್ತು ರಫೀಯುದ್ದೀನ ಶಿರಾಜಿಯ ಬಂಧನ : ೧೫೪

೧೫. ಹಬಶೀ ಅಮೀರ ಜನರಾದ ಯಖಲಾಸಖಾನ, ಹಮೀದಖಾನ ಮತ್ತು ದಿಲಾವರಖಾನ ಈ ಮೂವರೂ ಶಾಹ ಅಬ್ದುಲ್ ಹಸನನೊಂದಿಗೆ ಒಂದುಗೂಡಿ ರಾಜ್ಯ ಕಾರಭಾರ ಮಾಡಿದ್ದು, ಕೊನೆಗೆ ಶಾಹ ಅಬ್ದುಲ್ ಹಸನನ್ನು ಹಿಡಿದು ಬಂಧಿಸಿಟ್ಟಿದ್ದು : ೧೫೬

೧೬. ಕುತುಬಶಾಹನ ಸೇನಾಪತಿ ಮೀರ ಜುಮಲಾನು ಸೈನ್ಯ ತೆಗೆದುಕೊಂಡು ಆದಿಲಶಹನ ಸರಹದ್ದಿನಲ್ಲಿ ಏರಿ ಬಂದುದು. ಆದಿಲಶಹನು ದಿಲಾವರಖಾನನ ಸೇನಾಪತ್ಯದಲ್ಲಿ ಅವರನ್ನು ಶಿಕ್ಷಿಸಿದ್ದು : ೧೫೭

೧೭. ದಿಲಾವರಖಾನ ಮತ್ತು ಹಮೀದಖಾನರು ಒಂದಾಗಿ ಯಖಲಾಸಖಾನನನ್ನು ಕೆಲಸದಿಂದ ತೆಗೆಯಲು ಯುಕ್ತಿ, ಜಗಳ, ಯುದ್ಧಗಳಾದ ನಂತರ ಯಖಲಾಸಖಾನನನ್ನು ಎರಡು ತಿಂಗಳು ಬಂಧಿಸಿಟ್ಟದ್ದು : ೧೬೦

೧೮. ಕೆಲವು ದಿನಗಳ ಅನಂತರ ಹಮೀದಖಾನನ್ನು ಕೂಡ ಬಂಧಿಸಿದ್ದು. ೧೬೨

೧೯. ದಿಲಾವರಖಾನನು ವಿಜಾಪುರದ ಪ್ರಧಾನನಾಗಿ ಎಂಟು ವರುಷಗಳ ಕಾಲ ಕೆಲಸ ಮಾಡಿದ್ದರ ವರ್ಣನೆ : ೧೬೩

೨೦. ದಿಲಾವರಖಾನನ ಪ್ರಯತ್ನದಿಂದ ಇಬ್ರಾಹಿಮ ಆದಿಲಶಹ ಹಾಗೂ ಮಹ್ಮದಕುಲಿ ಕುತುಬಶಾಹನ ತಂಗಿಯೊಂದಿಗೆ ಮದುವೆ ಮತ್ತು ಮುರ್ತಜಾ ನಿಜಾಮಶಾಹನ ಮಗನೊಂದಿಗೆ ಇಬ್ರಾಹಿಮ ಆದಿಲಶಹನ ತಂಗಿಯ ಮದುವೆ. ೧೬೫

೨೧. ಬಾದಶಹನ ವರ್ಚಸ್ಸಿನಿಂದಾಗಿ ರೆಪ್ಪೆ ಬಡಿಯುವಷ್ಟರಲ್ಲಿ ಪ್ರಬಲ ದಿಲಾವರಖಾನನ ಪ್ರಭಾವ ಇಳಿದದ್ದು : ೧೬೬

೨೨. ಈ ಸಂಗತಿಯ ಅನಂತರ ದಿಲಾವರಖಾನನು ಬೆದರಿದ್ದು ಮತ್ತು ಆತನು ತನ್ನ ರಕ್ಷಣೆಗೆ ಯತ್ನಿಸಿದ್ದು : ೧೭೦
೨೩. ದಿಲಾವರಖಾನನು ತಾನು ಪ್ರಬಲನಾಗಲೂ ಬುರ್ಹಾಣ ನಿಜಾಮಶಾಹನಿಗೆ ಸಹಾಯ ಮಾಡಿದ್ದು : ೧೭೧
೨೪. ಆದಿಲಶಹ ಹಾಗೂ ನಿಜಾಮಶಹರ ಯುದ್ಧದಲ್ಲಿ ಆದಿಲಶಹನ ಸೋಲು ಮತ್ತು ಆದಿಲಶಹನ ಚಿಂತೆ : ೧೭೪
೨೫. ಜಮಾಲಖಾನನು ಇಸ್ಮಾಯಿಲ್‌ಶಾಹನ ಜೊತೆಗೆ ಸೈನ್ಯ ತೆಗೆದುಕೊಂಡು ಬುರ್ಹಾಣ ನಿಜಾಮಶಹನನ್ನು ಎದುರಿಸಿದ್ದು ಮತ್ತು ಜಮಾಲಖಾನ ಹಾಗೂ ಖುದಾವಂತಖಾನರು ಕೊಲೆಯಾದದ್ದು. ೧೭೫
೨೬. ಇಬ್ರಾಹಿಮ ಆದಿಲಶಾಹನು ದಿಲಾವರಖಾನನನ್ನು ಶಿಕ್ಷಿಸಿದ್ದು : ೧೭೭
೨೭. ನಿರ್ಧರಿಸಿದಂತೆ ಅಂದು ರಾತ್ರಿ ಬಾದಶಹನು ಮೂವರು ಅಮೀರರ ಕಡೆಗೆ ಬರುವುದು ಮತ್ತು ದಿಲಾವರಖಾನನು ತನ್ನ ಮಗನೊಂದಿಗೆ ಓಡಿ ಹೋದದ್ದು : ೧೭೮
೨೮. ಆದಿಲಶಹನು ಸಂತೋಷದಿಂದ ತನ್ನ ಡೇರೆಗೆ ಬಂದದ್ದು ಮತ್ತು ಸಿಂಹಾಸನವನ್ನೇರಿ ರಾಜ್ಯ ಸೂತ್ರಗಳನ್ನು ತನ್ನ ಕೈಯಲ್ಲೆ ತೆಗೆದುಕೊಂಡದ್ದು : ೧೮೦
೨೯. ಆ ದಿನದ ಇನ್ನೊಂದು ವಿಚಿತ್ರ ಪ್ರಸಂಗದ ವರ್ಣನೆ : ೧೮೧
೩೦. ವಿಜಾಪುರಕ್ಕೆ ತಿರುಗಿ ಬಂದ ನಂತರ ಆದಿಲಶಹನು ತಾನೆ ರಾಜ್ಯದ ಸೂತ್ರಗಳನ್ನು ವಹಿಸಿದ ಪ್ರಕರಣ : ೧೮೨
೩೧. ಬುರ್ಹಾಣಶಾಹನನ್ನು ಶಿಕ್ಷಿಸಲು ಆದಿಲಶಹನು ಸೈನ್ಯವನ್ನು ಕಳಿಸಿದ್ದು : ೧೮೨
೩೨. ಇಬ್ರಾಹಿಮ ಆದಿಲಶಹನ ದರಬಾರದಲ್ಲಿ ದಿಲಾವರಖಾನನು ಬರುವುದು ಮತ್ತು ಶಿಕ್ಷೆ ಅನುಭವಿಸಿ ಖೇಲಣೆ ಕೋಟೆಯಲ್ಲಿ ಬಂದಿಯಾಗಿರುವುದು. ೧೮೪
೩೩. ಬುರ್ಹಾಣಶಾಹನ ಮೇಲೆ ದಾಳಿ ಮಾಡಿ ಆದಿಲಶಾಹಿ ಸೈನ್ಯ ಜಯ ಪಡೆದದ್ದು ಹಾಗೂ ಬುರ್ಹಾಣಶಾಹನು ಆದಿಲಶಹನೊಂದಿಗೆ ಸಖ್ಯ ಬೆಳೆಸುವ ನಿರೋಪ ಕಳಿಸಿ ತಾನು ಹೊಸದಾಗಿ ಕಟ್ಟಿದ ಕೋಟೆಯನ್ನು ಆಮೂಲಾಗ್ರ ಕೆಡವಿದ್ದು. ೧೮೫
೩೪. ಬುರ್ಹಾಣ ನಿಜಾಮಶಾಹನು ಒಪ್ಪಂದ ಮುರಿದು, ಆದಿಲಶಹನ ಬಂಧು ಇಸ್ಮಾಯಿಲನನ್ನು ಪುಸಲಾಯಿಸಿದ್ದು. ೧೮೬
೩೫. ಹಮೀದಖಾನನು ಪ್ರಬಲನಾಗಿ ಐನುಲಮುಲ್ಕನನ್ನು ಕೊಲೆ ಮಾಡಿದ್ದು ಮತ್ತು ಇಸ್ಮಾಯಿಲ್ ಆದಿಲಶಹನ ಕಣ್ಣಲ್ಲಿ ಸಲಾಕೆ ತಿವಿದುದರ ಪರಿಣಾಮ ಆತ ಸತ್ತದ್ದು. ೧೮೯

೩೬. ಬುರ್ಹಾಣಶಾಹನು ಸತ್ತನಂತರ ಅವನ ಮಗ ಇಬ್ರಾಹಿಮ ನಿಜಾಮಶಾಹನು, ಆದಿಲಶಾಹಿ ರಾಜ್ಯದ ಮೇಲೆ ದಾಳಿ ಮಾಡಿದ್ದು. ಆತನನ್ನು ಶಿಕ್ಷಿಸಲು ಬಂದ ಇಬ್ರಾಹಿಮ ಆದಿಲಶಾಹನು ವಿಜಯಿಯಾದದ್ದು : ೧೯೧

೩೭. ಇಬ್ರಾಹಿಮ ಆದಿಲಶಹನು ಸಂತೋಷದಿಂದ ವಿಜಾಪುರಕ್ಕೆ ತಿರುಗಿ ಬಂದು ಯಾರ ಸಹಾಯ ಪಡೆಯದೆ ಸ್ವತಃ ರಾಜ್ಯ ಸೂತ್ರಗಳನ್ನು ಕೈಯಲ್ಲಿ ಹಿಡಿದದ್ದು. ೧೯೨

೩೮. ನಿಜಾಮಶಾಹನು ಚಾಂದಬೀಬಿಯೊಂದಿಗೆ ದ್ವೇಷ ಸಾಧಿಸಿದ್ದ. ಬಹಾದ್ದೂರಶಹನು ಕೋಟೆಯ ಮೇಲೆ ಹಲ್ಲೆ ಮಾಡಿದ್ದು ಮತ್ತು ಆದಿಲಶಹನು ರಫೀಉದ್ದೀನ ಶಿರಾಜಿಯನ್ನು ಉಭಯತರನ್ನು ಒಂದುಗೂಡಿಸಲು ಪ್ರಯತ್ನ ಮಾಡಲು ಕಳಿಸಿದ್ದು. ೧೯೪

೩೯. ರಫೀಉದ್ದೀನನ ಪ್ರಯತ್ನದಿಂದ ಬಹಾದೂರಶಾಹ ಹಾಗೂ ಅಮೀರ ಜನರ ಮಧ್ಯ ಸ್ನೇಹ ಏರ್ಪಟಿದ್ದು. ೧೯೭

೪೦. ಮತ್ತೆ ದಗಾಬಾಜಗಳಿಂದ ಸ್ನೇಹದ ಒಪ್ಪಂದ ಮುರಿದು ನಾನಾವಿಧವಾದ ಸಂಕಟಗಳನ್ನು ಸೃಷ್ಟಿಸಿದ್ದು : ೧೯೮

೪೧. ಮತ್ತೆ ಒಪ್ಪಂದ ಪುನಃ ಕೆಟ್ಟದ್ದು. ೧೯೯

೪೨. ಒಪ್ಪಂದ ಮಾಡಿಸಲು ಸಾಧ್ಯವಾಗದ್ದಕ್ಕೆ ನಿರಾಶನಾಗಿ ರಫೀಉದ್ದೀನನು ತಿರುಗಿ ವಿಜಾಪುರಕ್ಕೆ ಬಂದು. ೨೦೧

೪೩. ಸೈಯದ ಮಹ್ಮದ ಮುಸ್ತಾಫಾ ಸಲ್ಲೀಲ್ಲಾಹ ಓಲೆಹ ವಸ್ಸಲಮ್ ಅವರ ಕೇಶ ಕಸ್ತೂರಿ ಸುವಾಸನೆಯು ವಿಜಾಪುರ ನಗರದಲ್ಲಿ ಬಂದು ಮುಟ್ಟಿದುದರ ಪ್ರಾರಂಭದಿಂದ ವರ್ಣನೆ. ೨೦೪

೪೪. ಇಬ್ರಾಹಿಮ ಆದಿಲಶಹನು ನವರಸಪುರ ಎಂಬ ಹೊಸನಗರವನ್ನು ಕಟ್ಟಿದ ವರ್ಣನೆ: ೨೦೬

೪೫. ಹೊಸ ನಗರಕ್ಕೆ ನವರಸಪುರ ಎಂದು ಹೆಸರಿಡುವ ಕಾರಣ : ೨೦೯

೪೬. ಇಬ್ರಾಹಿಮ ಆದಿಲಶಹನು 'ಈದೆ ನವರಸ' ಎಂಬ ಹೊಸ ಹಬ್ಬವನ್ನು ಪ್ರಾರಂಭಿಸಿದನು : ೨೧೦

೪೭. ಇಬ್ರಾಹಿಮ ಆದಿಲಶಹನ ಶಿಷ್ಯರಲ್ಲಿ ಮೂರು ವರ್ಗದ ಹಾಡುಗಾರರು : ೨೧೧

೪೮. ಅಕಬರ ಬಾದಶಹನು ಖಂಡಣೆಯನ್ನು ಕೇಳಿ, ಇಬ್ರಾಹಿಮ ಆದಿಲಶಹನ ಹತ್ತಿರ ರಾಯಭಾರಿಯನ್ನು ಕಳಿಸಿದ್ದು : ೨೧೨

೪೯. ಆದಿಲಶಹನ ಮಗಳು ಸುಲ್ತಾನ ಬೇಗಂಳನ್ನು ಅಕಬರ ಬಾದಶನ ಮಗ ದಾನಿಯಲನಿಗೆ ಕೊಟ್ಟು ಮದುವೆ ಮಾಡಿದ್ದು, ಮತ್ತು ದೈವೇಚ್ಛೆಯಂತೆ ಅದೇ ವರುಷ ದಾನಿಯಲನ ಮರಣ : ೨೧೩

೫೦. ಇಬ್ರಾಹಿಮ ಆದಿಲ್ ಶಹನ ಮಗಳನ್ನು ಶಾಹ ಹಬೀಬುಲ್ಲಾ ಹುಸೇನನಿಗೆ ಕೊಟ್ಟು ಮದುವೆ ಮಾಡಿದ್ದು. ೨೧೫

೫೧. ನಿಜಾಮಶಾಹನ ರಾಜಧಾನಿಯಲ್ಲಿ ಬಂಡು, ಆ ರಾಜ್ಯವನ್ನು ಉಳಿಸಲು ಮಲಿಕ ಅಂಬರನ ನೇಮಕ ಮತ್ತು ಮೊಗಲರೊಂದಿಗೆ ಯುದ್ಧ: ೨೧೭

೫೨. ಜಹಾಂಗೀರ ಬಾದಶಹನು, ತಾಯಿಯ ಮಾತಿನಮೇಲೆ ದಕ್ಷಿಣ ದೇಶವನ್ನು ಗೆದ್ದದ್ದು ಮತ್ತು ಖಾನಖಾನನ್ನು ದಕ್ಷಿಣ ದೇಶಗಳ ಮೇಲೆ ಕಳಿಸಿದ್ದು. ೨೧೮

೫೩. ಮಲಿಕ ಅಂಬರನು ಆದಿಲಶಹನ ಸಹಾಯದಿಂದ ಕಂಧಾರ ಕೋಟೆಯನ್ನು ಕೇಳಿದ್ದು. ಅವನ ಖಾನಜಾದೆ ಜನರಲ್ಲಿಯ ಒಬ್ಬನ ಮಗಳನ್ನು ತನ್ನ ಮಗನಿಗೆ ಬೇಡಿದ್ದು ಮತ್ತು ಆದಿಲಶಹನು ಒಪ್ಪಿದ್ದು. ೨೨೦

೫೪. ಯಾಕೂತಖಾನನ ಮಗಳೊಂದಿಗೆ ಮಲಿಕ್ ಅಂಬರನ ಮಗ ಅಜೀನುಲ್‌ಮುಲ್ಕನ ವಿವಾಹ ಪ್ರಸಂಗ : ೨೨೨

೫೫. ಖಾನಖಾನನನ್ನು ದಕ್ಷಿಣ ದೇಶಗಳ ಮೇಲೆ ಕಳಿಸಿದ ನಂತರ ಜಹಾಂಗೀರ ಬಾದಶಹನು ಮತ್ತೆ ರಾಜಕುಮಾರ ಪರವೀಜನನ್ನು ರಾಜಾ ಮಾನಸಿಂಗ ಮೊದಲಾದ ಅಮೀರ ಜನರೊಂದಿಗೆ ದಕ್ಷಿಣಕ್ಕೆ ಕಳಿಸಿದ್ದು : ೨೨೨

೫೬. ಸುಲ್ತಾನ ಪರವೀಜ ಹಾಗೂ ರಾಜಾ ಮಾನಸಿಂಗನು ಖಾನಖಾನನ ವಿಚಾರವನ್ನು ಕೇಳದೆ ಮುಂದೆ ಹೋಗಿ ಸೋತದ್ದು, ಮತ್ತೆ ಖಾನಖಾನನ ಉಪದೇಶದಿಂದ ಪ್ರಾಣಘಾತುಕ ಸಂಕಟದಿಂದ ಪಾರಾದದ್ದು. ಮತ್ತು ಅಹಮದನಗರ ಕೋಟೆಯು ಪುನಃ ನಿಜಾಮಶಹನ ಜನರ ಕೈಗೆ ಬಂದದ್ದು : ೨೨೪

೫೭. ನಿಜಾಮಶಹ ಹಾಗು ಮಲಿಕ ಅಂಬರರ ಮಧ್ಯ ವಿರಸ, ಆದಿಲಶಹನ ಸಲಹೆಯಿಂದ ಉಭಯತರು ಕೂಡಿದ್ದು. ೨೨೭

೫೮. ಜಹಾಂಗೀರ ಬಾದಶಹನು ವಿಚಾರಮಾಡಿ ಶ್ರೇಷ್ಠ ಪರವೀಜಖಾನನನ್ನು ದಕ್ಷಿಣ ದೇಶದ ಮೇಲೆ ಕಳಿಸಿದ್ದು. ಕೆಲವು ದಿನಗಳ ಅನಂತರ ಅಬ್ದುಲ್‌ಖಾನನನ್ನು ಗುಜರಾತಕ್ಕೆ ನೇಮಿಸಿ. ಬಹುದೊಡ್ಡ ಸೈನ್ಯದೊಂದಿಗೆ ಕಳಿಸಿದ್ದು ಮತ್ತು ಮಲಿಕ ಅಂಬರನಿಂದ ಅಬ್ದುಲ್‌ಖಾನನ ಸೋಲು. ೨೨೮

೫೯. ಕೆಲವು ದಿನಗಳ ಅನಂತರ ಜಹಾಂಗೀರ ಬಾದಶಹನು ಸುಲ್ತಾನ ಖುರ್ರಮನನ್ನು ದಕ್ಷಿಣ ದೇಶಕ್ಕೆ ಕಳಿಸಿದ್ದು ಮತ್ತು ಸುಲ್ತಾನ ಖುರ್ರಮನು ನಿಜಾಮಶಹನ ಮೇಲೆ ವಿಜಯ ಸಾಧಿಸಿದ್ದು. ೨೨೯

೬೦. ಆದಿಲಶಹನು ಬೀದರದ ಮೇಲೆ ಸೈನ್ಯ ಕಳಿಸಿದ್ದು, ಬೀದರ ಹಸ್ತಗತವಾದದ್ದು. ಮೊಗಲರ ಪ್ರದೇಶವನ್ನು ಬಿಡಿಸಿದ್ದು ಮತ್ತು ಕರ್ನಾಟಕದ ಕೋಟೆ ಆದಿಲಶಹನ ಕೈಗೆ ಬಂದದ್ದು. ೨೨೯

೬೧. ಆದಿಲಶಾಹನೊಂದಿಗೆ ಮಲಿಕ ಅಂಬರನ ದ್ವೇಷ. ಭಾತೋಡಿ ಯುದ್ಧದ ವರ್ಣನೆ ಮತ್ತು ಆದಿಲಶಾಹಿಯ ಹಾಗೂ ಮೊಗಲರ ಸೋಲು. ೨೩೧

೬೨. ಒಂದು ಕಥೆಯ ವರ್ಣನೆ : ೨೩೩

೬೩. ಮಲಿಕ ಅಂಬರನು ನವರಸಪುರದ ಮೇಲೆ ಏರಿ ಬಂದದ್ದು ಮತ್ತು ವಿಜಾಪುರದ ಮೇಲೆ ಹಲ್ಲೆ ಮಾಡಿದ್ದು : ೨೩೪

೬೪. ಇಬ್ರಾಹಿಮ ಆದಿಲಶಹನ ಉತ್ತಮ ಲಕ್ಷಣಗಳ ಒಂದಿಷ್ಟು ವರ್ಣನೆ : ೨೩೫

೬೫. ಆದಿಲಶಹನು ತನ್ನ ಮೂಲಧರ್ಮವನ್ನು ಬಿಟ್ಟು ಪರಧರ್ಮದ ನಡತೆಯನ್ನು ಹಿಡಿದಿದ್ದಾನೆಂದು ಎಲ್ಲರಲ್ಲಿ ಪ್ರಸಿದ್ಧವಾದ ವಿಷಯ : ೨೩೭

೬೬. ಹಜರತಶಾಹ ಸಬಗದುಲ್ಲಾಹರು ಮದೀನಾ ಮಿನೋರಾದಿಂದ ವಿಜಾಪುರಕ್ಕೆ ಬಂದ ವಿಷಯ ವರ್ಣನೆ : ೨೩೭

೬೭. ಹಜರತಶಾಹಾ ಸಬಗದುಲ್ಲಾಹರು ಮದೀನಾ-ಮೀನೋರಾಗೆ ತಿರುಗಿ ಹೋದದ್ದು: ೨೩೯

೬೮. ಹಜರತ ರಸೂಲಿಲ್ಲಾಹರ ರಾಯಭಾರಿ ಹಜರತ ಸಬಗದುಲ್ಲಾಹರು ಹಜರತ ಪೈಗಂಬರರ ದರ್ಶನ ಪಡೆದ ಪ್ರಸಂಗ : ೨೪೧

೬೯. ಇಬ್ರಾಹಿಮ ಆದಿಲಶಹನು ಜಗದ್ಗುರು ಎಂಬ ಹೆಸರಿನಿಂದ ಪ್ರಸಿದ್ಧನಾದದ್ದು : ೨೪೨

೭೦. ಇಬ್ರಾಹಿಮ ಆದಿಲಶಹನು ಮರಣ ಹೊಂದಿದ ವಿಷಯ : ೨೪೨

೭೧. ಇಬ್ರಾಹಿಮ ಆದಿಲಶಹನು ಸತ್ತನಂತರ ತನ್ನ ಹಿಂದೆ ಆತನ ಮಗ ಸುಲ್ತಾನ ಮಹಮ್ಮದನನ್ನು ಸಿಂಹಾಸನದ ಮೇಲೆ ಕೂಡಿಸಬೇಕೆಂದು ಅಂತ್ಯಕಾಲದಲ್ಲಿ ಬೋಧಿಸಿದ ಪ್ರಕರಣ : ೨೪೩

೭೨. ದೌಲತಖಾನನ ವಿಷಯದಲ್ಲಿ ಬಾದಶಹನು ಬುದ್ಧಿಮಾರ್ಗ ಹೇಳಿದ ಪ್ರಕರಣ : ೨೪೫

೭೩. ಕಾಲಾನುಕ್ರಮಣಿಕೆ : ೨೪೬

೭೪. ಸೈನ್ಯದ ಸಂಖ್ಯೆ : ೨೪೬

ಬುಸ್ತಾನ : ಆರು ೨೪೭ - ೩೨೯

## ಮಹಮ್ಮದ ಆದಿಲಶಾಹ

೧. ಸುಲ್ತಾನ ಮಹಮ್ಮದ ಬಿನ್ ಇಬ್ರಾಹಿಮ ಆದಿಲಶಾಹ : ೨೪೭

೨. ಸುಲ್ತಾನ ಮಹಮ್ಮದನು ಸಿಂಹಾಸನದ ಮೇಲೆ ಕುಳಿತದ್ದು : ೨೪೮

೩. ಬುರ್ಹಾಣ ನಿಜಾಮಶಾಹನು ಸೈನ್ಯದೊಂದಿಗೆ ಆದಿಲಶಾಹಿ ರಾಜ್ಯದ ಮೇಲೆ ಏರಿ ಬಂದದ್ದು ಮತ್ತು ಸೋತು ತಿರುಗಿ ಹೋದದ್ದು : ೨೪೮

೪. ಎರಡನೆಯ ಸಲ ನಿಜಾಮಶಹನ ಸೈನ್ಯವು ವಿಜಾಪುರದ ಮೇಲೆ ಏರಿ ಬಂದದ್ದು ಮತ್ತು ಪುನಃ ಸೋತು ತಿರುಗಿ ಹೋದದ್ದು : ೨೪೯

೫. ನಿಜಾಮಶಾಹಿ ರಾಜ್ಯದಲ್ಲಿ ಪುನಃ ಹೊಸ ದಂಗೆ, ಗದ್ದಲ, ಮೋಸಕಪಟಗಳು ಮತ್ತು ಆ ರಾಜ್ಯದ ನಾಶ : ೨೫೦

೬. ಬುರ್ಹಾನ ನಿಜಾಮಶಹನ ರಾಜ್ಯ ಮುಳುಗಿದ ಕೆಲವು ದೊಡ್ಡ ಕಾರಣಗಳು : ೨೫೪

೭. ಶಾಹಜಹಾನ ಬಾದಶಹನ ಆಜ್ಞೆಯಂತೆ ಆಸಫಖಾನನು ಬಹಳ ಸೈನ್ಯದೊಂದಿಗೆ ಬಂದು ಆದಿಲಶಹನ ರಾಜ್ಯದಮೇಲೆ ದಾಳಿ ಮಾಡಿದ್ದು : ೨೫೬

೮. ಮುರಾರಿ ಪಂಡಿತನು, ಸುಲ್ತಾನ ಮಹಮ್ಮದ ಆದಿಲಶಹನ ಅಣತಿಯಂತೆ, ಪರಾಂಡಾ ಕೋಟೆಯ ಮೇಲಿನ ಮಲಿಕ ಮೈದಾನ ತೋಫನ್ನು ವಿಜಾಪುರಕ್ಕೆ ತಂದದ್ದು : ೨೫೮

೯. ಬುರ್ಹಾನ ನಿಜಾಮಶಹನ ಮಗನನ್ನು ಫತೇಖಾನನು ಸಿಂಹಾಸನದ ಮೇಲೆ ಕುಳ್ಳಿರಿಸುತ್ತಾನೆ. ಮತ್ತು ಮೊಹಬ್ಬತಖಾನನು ದೌಲತಾಬಾದನ್ನು ಕೈವಶಮಾಡಿಕೊಳ್ಳಲು ಬಂದು ಮುಟ್ಟಿದ್ದು, ಸುಲ್ತಾನ ಮಹಮ್ಮದ ಆದಿಲಶಹನು ದೌಲತಾಬಾದಿನ ಸಂರಕ್ಷಣಾರ್ಥ ಸಹಾಯ ಕಳಿಸಿದ್ದು : ೨೫೯

೧೦. ಆದಿಲಶಹನು ಮುರಾರಿಯೊಂದಿಗೆ ಆಹಾರ ಸಾಮಗ್ರಿಯನ್ನು ದೌಲತಾಬಾದಿಗೆ ಕಳಿಸುವುದು ಮತ್ತು ಮುರಾರಿಯು ಆ ಸಾಮಗ್ರಿಗಳನ್ನು ಕೋಟೆಯಲ್ಲಿ ಕಳಿಸಲು ಅನುಮಾನಿಸಿದ್ದು : ೨೬೧

೧೧. ದೌಲತಾಬಾದ ಕೋಟೆ ನಿಜಾಮಶಾಹನ ಕೈಯಿಂದ ಮೊಗಲರ ಕೈಗೆ : ೨೬೨

೧೨. ಶಾಹಜಹಾನ ಬಾದಶಹನ ಹಾಗೂ ಸುಲ್ತಾನ ಮಹಮ್ಮದ ಆದಿಲಶಾಹರ ಮಧ್ಯ ವಿರಸ ಆದಿಲಶಹನು ಖಂಡಣಿಯನ್ನು ಕೊಡದಿದ್ದುದು. ೨೬೫

೧೩. ಶಾಹಜಹಾನ ಬಾದಶಹನ ಪತ್ರದ ನಕಲು : ೨೬೬

೧೪. ಸುಲ್ತಾನ ಮಹಮ್ಮದ ಆದಿಲಶಹನು ಶಾಹಜಹಾನ ಬಾದಶಹನಿಗೆ ಬರೆದ ಉತ್ತರ-ಪತ್ರದ ನಕಲು. ೨೬೬

೧೫. ನಿಜಾಮಶಹನ ರಾಜ್ಯ ಮುಳುಗಿದ ನಂತರದ ಘಟನೆಗಳು : ೨೬೭

೧೬. ನಿಜಾಮಶಾಹನ ಬಹಳಷ್ಟು ಪ್ರದೇಶಗಳನ್ನು ಶಾಹಾಜೀರಾಜೆ ಭೋಸಲೆಯು ಕೈವಶ ಮಾಡಿಕೊಂಡದ್ದು : ೨೬೮

೧೭. ಶಾಹಾಜಿರಾಜೆ ಭೋಸಲೆಯು ನಿಜಾಮಶಹನ ವಂಶದ ಮುರ್ತಜಾ ಎಂಬ ರಾಜಕುಮಾರನನ್ನು ಸಿಂಹಾಸನದ ಮೇಲೆ ಕೂಡಿಸಿದ್ದು : ೨೬೯

೧೮. ಖವಾಸಖಾನನು ಮುಸ್ತಫಾಖಾನನನ್ನು ಬೆಳಗಾವಿ ಕೋಟೆಯಲ್ಲಿ ಬಂಧಿಸಿದ್ದು ಮತ್ತು ಕೃತಘ್ನ ನಡತೆ ಸ್ವೀಕರಿಸಿದ್ದು : ೨೭೧

೧೯. ಅಮೀರ ಜನರು ಖವಾಸಖಾನನನ್ನು ಕಾರಭಾರದಿಂದ ತೆಗೆದು ಹಾಕಲು ಎಲ್ಲರೂ ಒಮ್ಮತವಾದದ್ದು : ೨೭೩

೨೦. ಬಾದಶಹನು ಸಿದ್ದೀ ರೇಹಾನ ರುಕೇಸಾನನಿಗೆ ಖವಾಸಖಾನನ ನಿರ್ಮೂಲ ಮಾಡಲು ಸೂಚನೆ : ೨೭೪

೨೧. ಸಿದ್ದಿ ರೇಹಾನನ ಕಾರ್ಯಾರಂಭದ ವರ್ಣನೆ : ೨೭೬

೨೨. ಮುಸ್ತಫಾಖಾನನನ್ನು ಬೆಳಗಾವಿ ಕೋಟೆಯಿಂದ ಕರೆತಂದದ್ದು : ೨೭೭

೨೩. ಮುರಾರಿಯ ಕೆಲಸದ ಅಂತ್ಯ : ೨೭೭

೨೪. ಶಾಹಜಹಾನ ಬಾದಶಹನು ಆಗ್ರಾದಿಂದ ದೌಲತಾಬಾದಿಗೆ ಬಂದದ್ದು ಮತ್ತು ಆದಿಲಶಾಹನೊಂದಿಗೆ ನಿಜಾಮಶಹನ ರಾಜ್ಯವನ್ನು ಅರ್ಧರ್ಧ ಹಂಚಿ ಕೊಳ್ಳುವ ವಿಷಯದಲ್ಲಿ ಸ್ನೇಹಿತರಾದದ್ದು : ೨೭೭

೨೫. ರಣದುಲ್ಲಾಖಾನನ ಸೇನಾಪತ್ಯದಲ್ಲಿ ಹಿಂದು ನಗರಗಳು / ಕರ್ನಾಟಕದ ಮೇಲೆ ಮಹಮ್ಮದ ಆದಿಲಶಹನ ದಾಳಿ : ೨೮೦

೨೬. ಅನೇಕ ದಿನಗಳ ನಂತರ ನವಾಬ ಮುಸ್ತಫಾಖಾನನ್ನು ಕರ್ನಾಟಕದ ಕಡೆಗೆ ಕಳಿಸಿದ್ದು : ೨೮೨

೨೭. ಒಳಸಂಚಿನಿಂದಾಗಿ ನವಾಬ ಮುಸ್ತಫಾಖಾನ ಹಾಗೂ ಮಲಿಕ ರೇಹಾನರ ಮಧ್ಯ ವಿರಸ : ೨೮೬

೨೮. ನವಾಬ ಮುಸ್ತಫಾಖಾನನು ಶಾಹಾಜೀರಾಜೇ ಭೋಸಲೆಯನ್ನು ಹಿಡಿದು ಬಂಧಿಸಿದ್ದು, ಆದರಿಂದಾಗಿ ನವಾಬನ ಬಗ್ಗೆ ಮಲಿಕ ರೇಹಾನನು ಸಂಶಯ ಪಟ್ಟು ಗಾಬರಿಯಾದದ್ದು : ೨೮೭

೨೯. ಚಂದಿಯ ಮೇಲೆ ಹಲ್ಲೆ ಮಾಡುವಾಗ ಮುಸ್ತಫಾಖಾನನು ಮರಣ ಹೊಂದಿದ್ದು : ೨೮೯

೩೦. ಚಂದೀ ಕೋಟೆಯ ಕೈವಶ ಮತ್ತು ಕರ್ನಾಟಕದ ಎಲ್ಲ ಪ್ರದೇಶಗಳು ಸುಲ್ತಾನ ಮಹಮ್ಮದನ ವಶಕ್ಕೆ : ೨೯೧

೩೧. ಹಜರತ ಶಾಹ ಹಷಮ ಆಲವೀಯವರು ಸುಲ್ತಾನ ಮಹಮ್ಮದ ಆದಿಲಶಾಹ ಬಾದಶಹ ಗಾಜಿಗೆ ಹತ್ತು ವರುಷ ಆಯುಷ್ಯ ಕಾಣಿಕೆ ನೀಡಿದ್ದು : ೨೯೨

೩೨. ಹಜರತ ಶಾಹ ಹಾಶಿಮ್ ಅವರು ಫಿರಂಗಿಗಳ ಸೆರೆಯಲ್ಲಿ ಬಿದ್ದದ್ದು ಮತ್ತು ಇಬ್ರಾಹಿಮ ಆದಿಲಶಹನು ಹಜರಶಾಹರನ್ನು ಪೈಗಂಬರರ ರಾಯಭಾರಿಯಾಗಿ ಸ್ವಪ್ನದಲ್ಲಿ ಕಂಡದ್ದು : ೨೯೪

೩೩. ಸುಲ್ತಾನ ಮಹಮ್ಮದ ಆದಿಲಶಾಹ ಬಾದಶಹನು ಮುಲ್ಲಾ ಜಹೂರ ಬಿನ್ ಮುಲ್ಲಾ ಜಹೂರಿಗೆ ತನ್ನ ಕಾಲಕಿರ್ದಿಯಲ್ಲಿಯ ಇತಿಹಾಸ ಗ್ರಂಥವನ್ನು ಬರೆಯಲು ಆಜ್ಞೆ ಮಾಡಿದನು : ೨೯೬

೩೪. ಇನ್ನೊಬ್ಬ ಸಯ್ಯದ ನೂರುಲ್ಲಾಹ : ೨೯೭

೩೫. ಮೂರನೆಯವ ಹಕೀಮ ಆತಶಿ. ೨೯೮

೩೬. ನಾಲ್ಕನೆಯವನು ಮಿರಜಾ ಹಕೀಮ : ೨೯೮

೩೭. ಐದನೆಯವ ಮಿರಜಾ ದೌಲತಶಾಹ : ೨೯೯

೩೮. ಸುಲ್ತಾನ ಮಹಮ್ಮದ ಆದಿಲಶಹನ ಉತ್ತಮ ಲಕ್ಷಣಗಳು : ೨೯೯

೩೯. ಒಂದು ಕಥಾ ಭಾಗದ ವರ್ಣನೆ : ೩೦೧

೪೦. ಸುಲ್ತಾನ ಮಹಮ್ಮದ ಬಾದಶಹನ ಪ್ರಜಾ ಪಾಲನೆ : ೩೦೨

೪೧. ಇನ್ನೊಂದು ಕಥಾಭಾಗದ ವರ್ಣನೆ : ೩೦೩

೪೨. ಸುಲ್ತಾನ ಮಹಮ್ಮದ ಬಾದಶಹನ ಕಾಲಕಿರ್ದಿಯಲ್ಲಿ ರಾಜ್ಯ ವ್ಯವಸ್ಥೆ : ೩೦೪

೪೩. ಇನ್ನೊಂದು ಕಥಾಭಾಗದ ವರ್ಣನೆ : ೩೦೫

೪೪. ಸುಲ್ತಾನ ಮಹಮ್ಮದ ಬಾದಶಹನು ಅಫಜಲಖಾನನಿಗೆ ಈ ವಿಷಯದಲ್ಲಿ ವಿಚಾರಿಸಿದ ಕಾರಣ ಮತ್ತು ಅಫಜಲಖಾನನ ಉತ್ತರ : ೩೦೫

೪೫. ಸಾರಾಂಶ : ೩೦೮

೪೬. ದೂರದೃಷ್ಟಿಯ ಜನರಿಗೆ ಗೊತ್ತಿದ್ದಂತೆ : ೩೦೮

೪೭. ಸುಲ್ತಾನ ಮಹಮ್ಮದ ಆದಿಲಶಹನ ಮರಣ : ೩೦೯

೪೮. ಸುಲ್ತಾನ ಮಹಮ್ಮದ ಆದಿಲಶಹ ಬಾದಶಹನು ಜೀವಂತವಿರುವಾಗಲೇ ಗುಮ್ಮಟ ಕಟ್ಟಿಸಿದ್ದನು. ೩೦೯

೪೯. ಸುಲ್ತಾನ ಮಹಮ್ಮದ ಆದಿಲಶಹನ ಮರಣದ ನಿಶ್ಚಿತ ದಿನ : ೩೦೯

೫೦. ಒಪ್ಪಂದದ ಕಾಲಾನುಕ್ರಮಣಿಕೆ : ೩೧೦

೫೧. ಸೈನ್ಯ ವಿವರ : ೩೧೧

೫೨. ವಿಜಾಪುರದಲ್ಲಿಯ ಕೈಫಿಯತ್ತುಗಳ ಕಿಂಚಿತ್ ವರ್ಣನೆ : ೩೧೧

೫೩. ೧೮ ಸರಕಾರಗಳು ಮತ್ತು ಅನೇಕ ಬಂದರುಗಳು : ೩೧೨

೫೪. ಕರ್ನಾಟಕದಿಂದ ಬರುತ್ತಿದ್ದ ನಜರ (ಕಾಣಿಕೆ) ವಿವರ : ೩೧೨

೫೫. ಸುಲ್ತಾನ ಮಹಮದ ಆದಿಲಶಾಹನು ತನ್ನ ರಾಜ್ಯದ ಆಡಳಿತಕ್ಕಾಗಿ 'ದಸ್ತುರುಲ ಅಮಲ' ಎಂಬ ಅನೇಕ ಶಾಸನಗಳನ್ನು ಮಾಡಿದ್ದನು. ಅವುಗಳ ವಿವರ ಹೀಗಿದೆ : ೩೧೩

## ಬುಸ್ತಾನ : ಏಳು ೩೩೦ - ೩೯೮

# ಎರಡನೆಯ ಅಲಿ ಆದಿಲಶಾಹ

೧. ಎರಡನೆಯ ಅಲೀ ಆದಿಲಶಹ ಬಿನ್ ಸುಲ್ತಾನ ಮಹಮ್ಮದ ಆದಿಲಶಹ : ೩೩೦

೨. ಅಲೀ ಆದಿಲಶಹನ ಜನನ : ೩೩೦

೩. ಮಗನ ಪಾಲನೆಯನ್ನು ಹಾಜೀ ಬಡೀಸಾಹೇಬಾ (ಕುತುಬಶಾಹನ ಮಗಳು) ವಹಿಸಿದ್ದು : ೩೩೧

೪. ರಾಜಕುಮಾರನ ವಿದ್ಯಾಭ್ಯಾಸದ ಮುಹೂರ್ತ ಮತ್ತು ಬಿಸ್ಮಿಲ್ಲಾಖಾನೀ ಸಮಾರಂಭ : ೩೩೧

೫. ರಾಜಕುಮಾರನ 'ಸುಂತಿ' ಸಮಾರಂಭ : ೩೩೧

೬. ಅಲೀ ಆದಿಲಶಹನು ಸಿಂಹಾಸನ ಏರಿದ್ದು : ೩೩೨

೭. ಅಲೀ ಆದಿಲಶಹನು ಪಟ್ಟಕ್ಕೆ ಕುಳಿತ ಮೊದಲ ವರುಷವೇ ಮೊಗಲರ ಪ್ರಾಬಲ್ಯದಿಂದ ಬೀದರ, ಕಲ್ಯಾಣ ಕೋಟೆಗಳು ಕೈ-ಬಿಟ್ಟದ್ದು : ೩೩೩

೮. ಖಾನಖಾನಾ ಖಾನ ಮಹಮ್ಮದನ ಕೊಲೆಯ ಕಾರಣ : ೩೩೪

೯. ಒಂದು ಕಥಾನಕದ ವರ್ಣನೆ : ೩೩೬

೧೦. ಶಿವಾಜೀ ವಲ್ಲದ ಶಾಹಜೀ ಭೋಸಲೆಯು ತನ್ನ ಧಣಿಯ ವಿರುದ್ಧ ಬಂಡು ಮತ್ತು ಬಲಾತ್ಕಾರ ಮಾಡಲು ಪ್ರಾರಂಭಿಸಿದ್ದು : ೩೩೭

೧೧. ಅಲೀ ಆದಿಲಶಹ ಬಾದಶಹನು ಶಿವಾನನ್ನು ಶಿಕ್ಷಿಸಲು ಅಫಜಲಖಾನನನ್ನು ಕಳಿಸಿದ್ದು ಮತ್ತು ಶಿವಾನು ಅಫಜಲಖಾನನನ್ನು ಮೋಸದಿಂದ ಕೊಂದದ್ದು : ೩೩೮

೧೨. ಅಲೀ ಆದಿಲಶಹನು ಶಿವಾನನ್ನು ಶಿಕ್ಷಿಸಲು ಮತ್ತೆ ಸಿದ್ದೀ ಜವಾಹರ (ಜೋಹಾರ)ನನ್ನು ಕಳಿಸಿದ್ದು : ೩೩೯

೧೩. ಸಲಾಬತಖಾನನ ಪನ್ಹಾಳಕೋಟೆಯ ಹಲ್ಲೆ ಮತ್ತು ಪುನಃ ಶಿವಾನು ತನ್ನ ಠಕ್ಕ ವಿದ್ಯೆಯಿಂದ ಸಲಾಬತಖಾನನನ್ನು ತನ್ನ ಕಡೆ ಬರಮಾಡಿಕೊಂಡದ್ದು : ೩೪೧

೧೪. ಪನ್ಹಾಳ ಕೋಟೆಯನ್ನು ತೆಗೆದುಕೊಳ್ಳಲು ಮಿರಜದ ವರೆಗೆ ಅಲಿ ಆದಿಲಶಹನ ಆಗಮನ ಮತ್ತು ಪನ್ಹಾಳ ವಿಜಯ : ೩೪೩

೧೫. ಸಿದ್ದಿ ಜೋಹಾರ ಸಲಾಬತಖಾನನು ತನ್ನ ಧಣಿಯ ವಿರುದ್ಧ ಕೃತಘ್ನತೆ ತೋರಿಸಿದ್ದು : ೩೪೪

೧೬. ಅಲೀ ಆದಿಲಶಹನು, ಇಬ್ರಾಹಿಮಖಾನ, ಮುಲ್ಲಾ ಅಹಮದ ಮತ್ತು ಶಾಹ ಅಬದುಲ್ ಹಸನರನ್ನು ಸಲಾಬತಖಾನನಿಗೆ ಉಪದೇಶಿಸಲು ಕಳಿಸಿದ್ದು : ೩೪೫

೧೭. ಸಲಾಬತಖಾನನ ಕಡೆಯಿಂದ ಶಾರ್ಜಾಖಾನ ಮತ್ತು ಸಿದ್ದಿ ಮಸೂದರು ಅಭಯ ಕೇಳಲು ಬಾದಶಹನ ಕಡೆಗೆ ಬಂದದ್ದು : ೩೪೬

೧೮. ಸಿದ್ದಿ ಜೋಹಾರ ಸಲಾಬತಖಾನನು 'ಮುಚಲಕೆ' ಗ್ರಾಮದಲ್ಲಿ ಬಾದಶಹನನ್ನು ಭೆಟ್ಟಿಯಾದದ್ದು : ೩೪೬

೧೯. ಅಲೀ ಆದಿಲಶಹನು ತೊರಗಲ್ಲ ಕೋಟೆಯ ಕಡೆಗೆ ನಡೆದದ್ದು ಮತ್ತು ಅಲ್ಲಿಯ ಅಧಿಕಾರಿಯು ಧಣಿಯ ವಿರುದ್ಧ ನಿಂತದ್ದು : ೩೪೭

೨೦. ಸಿದ್ದಿ ಜೋಹಾರ ಸಲಾಬತಖಾನನಿಂದ ಸಿದ್ದಿ ಯಾಕೂತನಿಗೆ ಗುಪ್ತವಾಗಿ ಯುದ್ಧ ಸಾಮಗ್ರಿಗಳ ಸರಬರಾಜು : ೩೪೮

೨೧. ಸಲಾಬತಖಾನನನ್ನು ನಾಶಮಾಡುವ ಇರಾದೆಯಿಂದ ಅಲೀ ಆದಿಲಶಹನು ಕರ್ನೂಲ ಕಡೆಗೆ ಪ್ರಯಾಣ ಬೆಳಿಸಿದ್ದು : ೩೪೯

೨೨. ಭಂಜೋರ ಕೋಟೆಯ ಸಮೀಪ ಅಲೀ ಆದಿಲಶಹನಿಗೂ ಸಲಾಬತಖಾನನಿಗೂ ಯುದ್ಧ, ಸಲಾಬತಖಾನನ ಸೋಲು : ೩೫೦

೨೩. ಅಲೀ ಆದಿಲಶಹನು ರಾಯಚೂರು ಕೋಟೆಯನ್ನು ಗೆದ್ದದ್ದು ಮತ್ತು ಖುಸ್ರೋನನ್ನು ಕಿಲ್ಲೇದಾರ ಕೆಲಸದ ಮೇಲೆ ನೇಮಿಸಿದ್ದು : ೩೫೧

೨೪. ಮೂಸಾಖಾನ ಮತ್ತು ಜವಾಹರರಾವ ಉಭಯತರ ಮೇಲೆ ಸಿದ್ದಿ ಮಾಸೂದನು, ರಾತ್ರಿ ಹೊತ್ತು ಮುತ್ತಿಗೆ ಹಾಕಿದ್ದು ಮತ್ತು ಸಿದ್ದಿ ಮಾಸೂದನ ಸೋಲು. ಈ ಘಟನೆ ನಡೆಯುತ್ತಿದ್ದಂತೆ ಸಿದ್ದಿ ಜೋಹಾರ ಸಲಾಬತಖಾನನ ಮರಣ : ೩೫೨

೨೫. ಅಬ್ದುಲ ಮಹಮ್ಮದ ಬಹಲೋಲಖಾನನ ಮಧ್ಯಸ್ಥಿಕೆಯಿಂದ ಅಬ್ದುಲ ಅಜೀಜ ಮತ್ತು ಸಿದ್ದಿ ಮಸೂದರನ್ನು ಅಲೀ ಆದಿಲಶಾಹನು, ಕ್ಷಮಿಸಿದ್ದು : ೩೫೩

೨೬. ಒಂದು ವಿಷಯ : ೩೫೪

೨೭. ಅಲೀ ಆದಿಲಶಹ ಬಾದಶಹನು ಮಲೆನಾಡು, ಸೋಂದಾ ಮತ್ತು ಬೆದನೂರುವರೆಗೆ ಸೈನ್ಯ ತೆಗದುಕೊಂಡು ಹೋಗಿ ಹಿಂದುಗಳ ಪಾರುಪತ್ಯ ಮಾಡಿದ್ದು : ೩೫೪

೨೮. ಷರ್ಜಾಖಾನನು ಮುಂದೆ ಹೋಗಿ ಹಿಂದುಗಳ ಕೋಟೆಗಳನ್ನು ಮತ್ತು ಅನೇಕ ಸ್ಥಳಗಳನ್ನು ತೆಗೆದುಕೊಂಡು ಸೋಂದಾದವರೆಗೆ ಮುಟ್ಟಿದ್ದು : ೩೫೬

೨೯. ಸೋಂದಾ ವಿಜಯ : ೩೫೬
೩೦. ಆದಿಲಶಹನ ಸೈನ್ಯವು ಬಿದನೂರನ್ನು ಗೆದ್ದದ್ದು : ೩೫೭
೩೧. ದಕ್ಷಿಣದ ರಾಜ್ಯಗಳು ಮುಳುಗಲು ಮತ್ತು ಮೊಗಲರ ಕೈಗೆ ಹೋದ ಕಾರಣಗಳು : ೩೫೮
೩೨. ಶಿವಾನ ಬಂಡುಖೋರತನದಿಂದಾಗಿ ದಿಲ್ಲಿ ಬಾದಶಹನು ಆದಿಲಶಹನ ರಾಜ್ಯದ ಮೇಲೆ ಆಕ್ರಮಣ ಮಾಡಿದ್ದು : ೩೬೦
೩೩. ಶಿವಾನನ್ನು ಶಿಕ್ಷಿಸಲು ದಿಲ್ಲಿ ಬಾದಶಹನು ಆದಿಲಶಹನಿಂದ ಸಹಾಯ ಯಾಚನೆ : ೩೬೧
೩೪. ಶಿವಾನ ಪಾರುಪತ್ಯಕ್ಕಾಗಿ ಅಲೀ ಆದಿಲಶಹನು ಖವಾಸಖಾನನನ್ನು ದಿಲ್ಲಿಯ ಬಾದಶಹನಿಗೆ ಸಹಾಯಮಾಡಲು ಕಳಿಸಿದ್ದು : ೩೬೨
೩೫. ಖವಾಸಖಾನನು ತನ್ನ ಸೈನ್ಯವನ್ನು ಹುರಿದುಂಬಿಸಿ, ಶಿವಾನನ್ನು ಸೋಲಿಸಿ ಆದಿಲಶಹನಿಗೆ ವಿಜಯ ತಂದದ್ದು : ೩೬೩
೩೬. ಖವಾಸಖಾನನು ಶಿವಾನನ್ನು ಸೋಲಿಸಿದ ಬಳಿಕ ದಿಲ್ಲಿಯಿಂದ ರಾಜಾ ಜಯಸಿಂಗನು ಬಂದದ್ದು : ೩೬೪
೩೭. ಶಿವಾ ಮತ್ತು ರಾಜಾ ಜಯಸಿಂಗ ಒಂದಾಗಿ ತನ್ನ ರಾಜ್ಯವನ್ನು ಲೂಟಿ ಮಾಡಲು ಬರುತ್ತಿರುವ ವಿಷಯ ಅಲಿ ಆದಿಲಶಹನಿಗೆ ತಿಳಿದದ್ದು : ೩೬೬
೩೮. ಅಲೀ ಆದಿಲಶಹನು ರಾಜಾ ಜಯಸಿಂಗನೊಂದಿಗೆ ಯುದ್ಧಮಾಡುವುದೆಂದು ನಿರ್ಧರಿಸಿ ತನ್ನ ಕೋಟೆಯನ್ನು ಗಟ್ಟಿಮಾಡಿಕೊಂಡದ್ದು : ೩೬೭
೩೯. ಅಲೀ ಆದಿಲಶಹನು ರಾಜಾ ಜಯಸಿಂಗನ ಮೇಲೆ ಸೈನ್ಯ ಕಳಿಸಿದ್ದು ಮತ್ತು ಷರ್ಜಾಖಾನನು ಸರಫರಾಜಖಾನನ್ನು ಕೊಂದದ್ದು : ೩೬೮
೪೦. ಆದಿಲಶಹನ ಶೂರ ಮಂಡಳಿಯು ಜಯಸಿಂಗನೊಂದಿಗೆ ಯುದ್ಧ ಮಾಡಿದ್ದು ಮತ್ತು ಜಯಸಿಂಗನು ಒಂದು ಸಲ ಹಿಂದೆ ಸರಿದದ್ದು : ೩೬೯
೪೧. ಅಲೀ ಆದಿಲಶಹನ ಕಡೆಯ ಶೂರ ಮಂಡಳಿಯು ರಾಜಾ ಜಯಸಿಂಗನೊಂದಿಗೆ ಎರಡನೆಯ ಯುದ್ಧವನ್ನು ಮಾಡಿದ್ದು. ಮತ್ತು ಮಹಮ್ಮದ ಯಖಲಾಸಖಾನನ ಪರಾಕ್ರಮದಿಂದ ರಾಜಾ ಜಯಸಿಂಗನು ಸೋತದ್ದು : ೩೭೦
೪೨. ಸಯ್ಯದ ಅಲೀ ಯಾರಖಾನ ಊರ್ಫ ಷರ್ಜಾಖಾನನು ದಿಲ್ಲಿ ಕಡೆಯ ಸಲಾಬತಖಾನನ ಮೇಲೆ ಹಲ್ಲೆ ಮಾಡಿದ್ದು : ೩೭೧
೪೩. ಸುಲ್ತಾನ ಅಬ್ದುಲ್ಲಾ ಕುತುಬಶಾಹನು ಆದಿಲಶಹನ ಸಹಾಯಕ್ಕಾಗಿ, ನೇಕನಾಮಖಾನ ಸರದಾರನೊಂದಿಗೆ ಭಾರೀ ಸೈನ್ಯವನ್ನು ಕೊಟ್ಟು ಕಳಿಸಿದ್ದು : ೩೭೩

೪೪. ಅಲೀ ಆದಿಲಶಹನು ತನ್ನ ಸೈನ್ಯ ಮತ್ತು ಕುತುಬಶಾಹನ ಸೈನ್ಯವನ್ನು ಮಿರಜಾರಾಜನನ್ನು ಅಂದರೆ ಜಯಸಿಂಗನನ್ನು ಶಿಕ್ಷಿಸಲು ನಿಯಮಿಸಿದ್ದು : ೩೭೪

೪೫. ಷರ್ಜಾಖಾನ ಮತ್ತು ಖವಾಸಖಾನರು ಜಯಸಿಂಗನ ಕಡೆಯ ಮರಾಠಾ ಮತ್ತು ರಜಪೂತರೊಂದಿಗೆ ಯುದ್ಧ ಮಾಡಿದ್ದು : ೩೭೫

೪೬. ಬಹಲೋಲಖಾನ ಮತ್ತು ಬೇರೆ ಅನೇಕ ಅಮೀರಜನರು ಜಯಸಿಂಗನ ಸೈನ್ಯದೊಂದಿಗೆ ಯುದ್ಧ ಮಾಡಿದ್ದು : ೩೭೯

೪೭. ದೈವೇಚ್ಛೆಯಂತೆ ಷರ್ಜಾಖಾನನು ಮರಣ ಹೊಂದಿದ್ದು : ೩೮೧

೪೮. ಆದಿಲಶಹನ ಅಮೀರಜನರು ಜಯಸಿಂಗನೊಂದಿಗೆ ಯುದ್ಧ ಮಾಡಿದ್ದು. ಬಹಲೋಲಖಾನ ಮತ್ತು ಖವಾಸಖಾನರು ಜಯಸಿಂಗನ ಮೇಲೆ ಗದ್ದಲ ಮಾಡಿದ್ದು. ರಾಜಾ ಜಯಸಿಂಗನ ಸೋಲು, ಮತ್ತೆ ಯುದ್ಧಕ್ಕೆ ನಿಲ್ಲದೆ ತನ್ನ ರಾಜ್ಯಕ್ಕೆ ತಿರುಗಿದ್ದು : ೩೮೨

೪೯. ಈ ಮುನ್ನ ರಾಜಾ ಜಯಸಿಂಗನು, ಶಿವಾಜಿ ಭೋಸಲೆಯನ್ನು ಆಲಮಗೀರ ಬಾದಶಹನ ಕಡೆಗೆ ದಿಲ್ಲಿಗೆ ಕಳಿಸಿದ್ದು, ಶಿವಾಜಿ ತನ್ನ ಮಗ ಸಂಭಾಜಿಯೊಂದಿಗೆ ಹೋದ ಸಂದರ್ಭದಲ್ಲಿ ಬಾದಶಹನ ಕೃಪೆಯಿಂದ ಆತನಿಗೆ 'ಪಾಂಚಹಜಾರಿ' (ಐದು ಸಾವಿರ) ಎಂಬ ಪದವಿ ಪ್ರಾಪ್ತಿ. ಶಿವಾಜಿ ತನ್ನ ಮಗನೊಂದಿಗೆ ದಿಲ್ಲಿಯಿಂದ ತಿರುಗಿ ತನ್ನ ರಾಜ್ಯಕ್ಕೆ ಬಂದದ್ದು : ೩೮೫

೫೦. ಅಲೀ ಆದಿಲಶಾಹ ಬಾದಶಹನ ಉತ್ತಮ ಲಕ್ಷಣಗಳ ಸಂಕ್ಷಿಪ್ತ ವರ್ಣನೆ : ೩೮೭

೫೧. ಮಿಯಾ ನುಸ್ರತಿಯ ಕೆಲವು ಉರ್ದು ಕವಿತೆಗಳು : ೩೮೮

೫೨. ಮಿಯಾ ನುಸ್ರತಿಯ ಮತ್ತಿತರ ದೈವಸ್ತುತಿ ಕವಿತೆಗಳು : ೩೯೦

೫೩. ಮಿಯಾ ನುಸ್ರತಿಯ ಪೈಗಂಬರರ ಸ್ತವನ ೩೯೦

೫೪. ಮಿಯಾ ನುಸ್ರತಿ ಹಾಗೂ ಬಾದಶಹರ ಕವಿತಾ ಬಂಧ ೩೯೦

೫೫. ಮಿಯಾ ನುಸ್ರತಿ ಅದಕ್ಕೆ ಇನ್ನೊಂದು ಸಾಲನ್ನು ಜೋಡಿಸಿದ : ೩೯೧

೫೬. ಮಿಯಾ ನುಸ್ರತಿ ವರ್ಣಿಸಿದ ಆದಿಲಶಹನ ಕುದುರೆ ೩೯೧

೫೭. ಅಲೀ ಆದಿಲಶಹನ ತಲವಾರ ಮತ್ತು ಕುದುರೆಯ ವರ್ಣನೆ : ೩೯೧

೫೮. ಇಲ್ಲಿಗೆ ಉರ್ದು ಭಾಷೆಯ ಕವಿತೆಗಳ ರಚನೆ ಸಮಾನವಾಯಿತು. ೩೯೧

೫೯. ಅಲೀ ಆದಿಲಶಹ ಮರಣ ಹೊಂದಿದ ಕಾರಣ : ೩೯೩

೬೦. ಕಾಲಾನುಕ್ರಮಣಿಕೆ : ೩೯೮

೧೬. ವಿಜಾಪುರ ಕೋಟೆಯಲ್ಲಿ ಮಾಸೂದಖಾನನ ದಾಖಲು : ೪೧೯

೧೭. ಕುತುಬಶಾಹನು ಕರಾರಿನಂತೆ ಹಣವನ್ನು ಕಳಿಸಲಿಲ್ಲವಾದ್ದರಿಂದ, ಮಸೂದಖಾನನ ಕಾಲದಲ್ಲಿ ರಾಜ್ಯ ಹಿನ್ನಡೆಯಲು ಕಾರಣ, ಅದರಿಂದಾಗಿ ಪಠಾಣರ ದಂಗೆ : ೪೧೯

೧೮. ನವಾಬ ಅಬ್ದುಲ ಕರೀಮ ಬಹಲೋಲಖಾನನ ಮಗನಿಗೆ ಪಠಾಣರು ಹಿಂಸಿಸಿದ್ದು ಮತ್ತು ಅವರನ್ನು ಶಿಕ್ಷಿಸಲು ಮಾಸೂದಖಾನನು ಸೈನ್ಯ ಕಳಿಸಿದ್ದು: ೪೨೦

೧೯. ಚಿಂತೋ ಚಿಮಣಾಜಿ ಎಂಬ ಬಹುದೊಡ್ಡ ಕುತಂತ್ರ ಬ್ರಾಹ್ಮಣನಿಂದ ನಗರದ ಜನತೆಯ ಮೇಲೆ ಬಲಾತ್ಕಾರ ಅವ್ಯವಸ್ಥೆ : ೪೨೨

೨೦. ಮಾಸೂದಖಾನ ಮತ್ತು ಷರ್ಜಾಖಾನನ ಮಧ್ಯ ವಿರಸ : ೪೨೪

೨೧. ಆಕಾ ಖುಸ್ರೋನ ಬಂಧನದಿಂದ ತನ್ನ ಹೆಂಡಿರು ಮಕ್ಕಳನ್ನು ಬಿಡಿಸಿಕೊಳ್ಳಲು ಮಾಸೂದಖಾನನು ಬಾದಶಾಹ ಬೀಬಿಗೆ ಫಿರ್ಯಾದಿ ಕೊಟ್ಟದ್ದು. ಮತ್ತು ಅವಳು ತಾವೂಸಮಾಳನ್ನು ರಾಯಚೂರಿಗೆ ಕಳಿಸಿದ್ದು : ೪೨೫

೨೨. ಮಾಸೂದಖಾನನು ಶಿವಾಜಿಯೊಂದಿಗೆ ಒಪ್ಪಂದ ಮಾಡಿಕೊಂಡಿದ್ದರಿಂದ ಮಾಸೂದಖಾನ ಮತ್ತು ಮೊಗಲರ ಮಧ್ಯ ವೈರತ್ವ : ೪೨೭

೨೩. ಮೊಗಲರು ಮೋಸದಿಂದ ವಿಜಾಪುರ ಸೈನ್ಯವನ್ನು ಸೋಲಿಸಿದ್ದು ಮತ್ತು ಅಲ್ಲಿಯ ಕಾರಭಾರಿಮಂಡಳಿಯನ್ನು ಮರುಳುಮಾಡಿ ತಮ್ಮತ್ತ ಸೆಳೆದದ್ದು : ೪೨೮

೨೪. ಶಿವಾಜಿಯ ಮಗ ಸಂಭಾಜಿಯು ದಿಲೇರಖಾನನ ಹತ್ತಿರ ಬಂದದ್ದು : ೪೨೯

೨೫. ಮಾಸೂದಖಾನನ ಸಹಾಯಕ್ಕೆ ಶಿವಾಜಿಯು ತನ್ನ ಸೈನ್ಯ ಕಳಿಸಿದ್ದು : ೪೩೦

೨೬. ಶಿವಾಜಿಯ ಜನ ದಂಗೆ ಮಾಡಿದ್ದು ಮತ್ತೆ ಮಾಸೂದಖಾನ ಹಾಗೂ ಶಿವಾಜಿ ಮಧ್ಯ ವಿರಸ : ೪೩೧

೨೭. ಮಾಸೂದಖಾನನು ಮತ್ತೆ ಮೊಗಲರೊಂದಿಗೆ ಸಖ್ಯ ದಿಲೇರಖಾನನು ತನ್ನ ಸೈನ್ಯವನ್ನು ಆತನ ಸಹಾಯಕ್ಕೆ ಕಳಿಸಿದ್ದು : ೪೩೨

೨೮. ಶಿವಾಜಿಯನ್ನು ಶಿಕ್ಷಿಸಲು ಮಾಸೂದಖಾನನ ಜೊತೆಗೆ ಹೋಗಲು ಷರ್ಜಾಖಾನನ ನಿರಾಕರಣೆ ಉಭಯತರಲ್ಲಿ ವಿರಸ : ೪೩೪

೨೯. ದಿಲೇರಖಾನನು ಭೂಪಾಳಗಡ ಕೋಟೆಯನ್ನು ಕೆಡವಿ ನಾಶಮಾಡಿದ್ದು : ೪೩೫

೩೦. ಕರಾರಿನಂತೆ ನಡೆಯದ್ದರಿಂದ ಮಾಸೂದಖಾನನಿಗೆ ದಿಲೇರಖಾನನ ಬೆದರಿಕೆ : ೪೩೬

೩೧. ಮಾಸೂದಖಾನ ಮತ್ತು ಷರ್ಜಾಖಾನರ ಮಧ್ಯ ತೀವ್ರ ವಿರಸ : ೪೩೭

೩೨. ಮಾಸೂದಖಾನನ ಬಗ್ಗೆ ಚಾಡಿ ಹೇಳಲು ಷರ್ಜಾಖಾನನು ದಿರಲೇಖಾನನ ಹತ್ತಿರ ಹೋದದ್ದು: ೪೩೮

೩೩. ಮಾಸೂದಖಾನನು ತನ್ನ ಸೈನ್ಯವನ್ನು ದಿಲೇರಖಾನನ ಮೇಲೆ ಕಳಿಸಿದ್ದು, ದಿಲೇರಖಾನನು ಆ ಸೈನ್ಯವನ್ನು ಸೋಲಿಸಿದ್ದು : ೪೩೯

೩೪. ದಿಲೇರಖಾನನು ಭೋಳೆತನದ ಮಾರ್ಗ ಹಿಡಿದದ್ದು, ಅದರಿಂದ ವಿಜಾಪುರದ ಜನರನ್ನು ವಂಚಿಸಿದ್ದು : ೪೪೧

೩೫. ಮಾಸೂದಖಾನನು ಬಾದಶಾಹ ಬೀಬಿಯನ್ನು ದಿಲ್ಲಿಗೆ ಕಳಿಸಿದ್ದು ಮತ್ತು ಮಾಸೂದಖಾನ ಹಾಗೂ ರಾಜಕುಮಾರ ಮಹಮ್ಮದ ಅಜಮಶಾಹರ ಮಧ್ಯ ಸಖ್ಯವಾದದ್ದು : ೪೪೩

೩೬. ಬಾದಶಾಹಾ ಬೀಬಿ ಹೋದ ನಂತರ ಮತ್ತೆ ಮಾಸೂದಖಾನನ ಮತ್ತು ದಿಲೇರಖಾನರ ಮಧ್ಯ ವಿರಸ. ಮಾಸೂದಖಾನನು ವೆಂಕಟಾದ್ರಿಯನ್ನು ಬಂಧಿಸಿದ್ದು. ೪೪೬

೩೭. ವಿಜಾಪುರವನ್ನು ತೆಗೆದುಕೊಳ್ಳಲು ದಿಲೇರಖಾನನ ಖಾಸ ನಿಶ್ಚಯ, ಕೋಟೆಯ ಮೇಲೆ ಹಲ್ಲೆ, ಖಜೀನೇ ಖಾಲಿ, ಕೆಲಸ ಮಂದಗತಿ : ೪೪೭

೩೮. ವಿಜಾಪುರ ಕೋಟೆಯ ಯುದ್ಧಕ್ಕಾಗಿ ಮಾಸೂದಖಾನನ ವ್ಯವಸ್ಥೆ, ಶಿವಾಜಿ ಕಡೆಯಿಂದ ಸೈನ್ಯ ಸಹಾಯ ಯಾಚನೆ, ಆತನ ಸೈನ್ಯ ಬಂದದ್ದು : ೪೫೦

೩೯. ಮೊಗಲರ ಸೈನ್ಯ ವಿಜಾಪುರದ ಹತ್ತಿರ ಬಂದು ಮುಟ್ಟಿದ್ದು. ಶಿವಾಜಿಯು ಸೈನ್ಯದೊಂದಿಗೆ ಮೊಗಲರ ಪ್ರದೇಶದಲ್ಲಿ ಬಂದು ಲೂಟಿ ಮಾಡಿದ್ದು : ೪೫೩

೪೦. ಮೊಗಲರು ವಿಜಾಪುರವನ್ನು ತೆಗೆದುಕೊಳ್ಳುವ ವಿಚಾರಗಳೆಲ್ಲ ವ್ಯರ್ಥವಾದದ್ದು, ದಿಲೇರಖಾನನು ಬಾದಶಹನ ಕಣ್ಣಲ್ಲಿ ಇಳಿದದ್ದು : ೪೫೫

೪೧. ಮಾಸೂದಖಾನನಿಂದ ಉತ್ತರ ಬರದ್ದಕ್ಕೆ ಆದಿಲಶಾಹಿ ಪ್ರದೇಶಗಳ ಸುಲಿಗೆಗೆ ಪ್ರಯಾಣ : ೪೫೬

೪೨. ದಿಲೇರಖಾನನ ದಂಡಿನಿಂದ ಸಂಭಾಜಿಯು ಓಡಿ ಹೋದದ್ದು : ೪೫೭

೪೩. ದಿಲೇರಖಾನನು ವಿಜಾಪುರ ನಗರದ ಹತ್ತಿರವೆ ಬಂದು ಯುದ್ಧ ಮಾಡಿದ್ದು ಮತ್ತು ದಕ್ಷಿಣದ ಜನರು ಅದರ ನಿವಾರಣೆ ಮಾಡಿದ್ದು : ೪೫೮

೪೪. ದಿಲೇರಖಾನನ ಯುದ್ಧ ಗದ್ದಲ ಸಮಯದಲ್ಲಿ ವಿಜಾಪುರದಲ್ಲಿದ್ದ ಸಣ್ಣ ಗುಂಪಿನ ವಿವರಗಳು : ೪೫೯

೪೫. ದಿಲೇರಖಾನನ ಕೈಯಿಂದ ಏನೊಂದು ಆಗದಿದ್ದುದು, ಆತನ ಮನೋರಥ ಪೂರ್ಣವಾಗದೆ ಚಿಂತಾಗ್ರಸ್ತನಾದದ್ದು. ಮಾಸೂದಖಾನನೊಂದಿಗೆ ಒಪ್ಪಂದಕ್ಕೆ ಪ್ರಯತ್ನ ಅದನ್ನು ಮಾಸೂದಖಾನನು ತಿರಸ್ಕರಿಸಿದ್ದು : ೪೬೦

೪೬. ಶಿವಾಜಿಯು ಭೀಮಾ ನದಿಯಿಂದ ನರ್ಮದಾನದಿಯವರೆಗೆ ಮೊಗಲರ ಪ್ರದೇಶಗಳನ್ನು ಲೂಟಿ ಮಾಡಿ ನಾಶಮಾಡಿದ್ದು ಈ ವಿಷಯ ಔರಂಗಜೇಬ ಬಾದಶಹನ ವರೆಗೂ ಮುಟ್ಟಿದ್ದು : ೪೬೧

೪೭. ದಿಲೇರಖಾನನು ಬಾದಶಹನ ಅಪ್ರಸನ್ನತೆಗೆ ಪಾತ್ರನಾದದ್ದು : ೪೬೨

೪೮. ದಿಲೇರಖಾನನು ವಿಜಾಪುರದ ಯುದ್ಧ ಮಾಡಿಯೂ ಯಶಸ್ವಿಯಾಗದೆ, ಹೊರಟು ಹೋದದ್ದು. ಮತ್ತು ತರಫ-ತರಫಗಳಲ್ಲಿಯ ಪ್ರದೇಶಗಳನ್ನು ಹಾಳು ಮಾಡಲು ಪ್ರಯತ್ನ ಮಾಡಿದ್ದು : ೪೬೨

೪೯. ದಿಲೇರಖಾನನು ಬೇಡರ ಇಲಾಖೆಯಲ್ಲಿ ಬಂದು ದಾಖಲಾದದ್ದು. ಅಲ್ಲಿ ಲೂಟಿ ಮಾಡುವಾಗ ಬೇಡರ ಸೈನ್ಯವನ್ನು ಎದುರಿಸಿದ್ದು : ೪೬೪

೫೦. ಬೇಡರಲ್ಲಿಯ ಕಜಾಕ ಜನರಕೈಯಲ್ಲಿ ದಿಲೇರಖಾನನು ಹೊಡೆತ ತಿಂದು ಪಶ್ಚಾತ್ತಾಪಪಟ್ಟು ಗಾಯಗೊಂಡದ್ದು : ೪೬೭

೫೧. ದಿಲೇರಖಾನನು ಮತ್ತೆ ಆಶೆಮಾಡಿ ಬೇಡ ಜನರೊಂದಿಗೆ ಸೇಡು ತೀರಿಸಿಕೊಳ್ಳಲು ತನ್ನ ಸರದಾರರಿಗೆ ಪ್ರಾರ್ಥಿಸಿದ್ದುದು : ೪೬೭

೫೨. ದಿಲೇರಖಾನನ ಸೈನ್ಯದಲ್ಲಿಯ ಬಕ್ಷಿ ಮತ್ತು ಸರದಾರ ಜನರು ದಿಲೇರಖಾನನ ಮಾತುಗಳನ್ನು ಕೇಳದಿದ್ದುದು : ೪೬೮

೫೩. ಶಿವಾಜಿಯ ಒಂದಿಷ್ಟು ವಿವರಗಳು : ೪೬೯

೫೪. ಔರಂಗಜೇಬ ಬಾದಶಹ ಮತ್ತು ರಾಜಕುಮಾರ ಉಭಯತರು ಸಿಕಂದರ ಆದಿಲಶಹನ ಸಂರಕ್ಷಣೆ ಮಾಡುವ ನಡತೆಯನ್ನು ಪ್ರಸಿದ್ಧ ಮಾಡಿದ್ದು : ೪೭೧

೫೫. ದಕ್ಷಿಣದ ರಾಜ್ಯಗಳನ್ನು ಕೈವಶ ಮಾಡಿಕೊಳ್ಳುವುದು ಮೊಗಲರ ಮನದಲ್ಲಿ ಮೊದಲಿನಿಂದಲೇ ಇತ್ತು. ಆದರೆ ಈಗ ಔರಂಗಜೇಬ ಬಾದಶಹನು ಬೇರೆ ಕಾರಣಕ್ಕಾಗಿ ದಕ್ಷಿಣ ದೇಶಕ್ಕೆ ಬಂದದ್ದು ಮತ್ತು ರಾಜಕುಮಾರ ಅಕಬರ ಬಾದಶಹನು ಸಂಭಾಜಿಯೊಂದಿಗೆ ಕೂಡಿಕೊಂಡದ್ದು. ೪೭೨

೫೬. ಸಾರಾಂಶ : ೪೭೪

೫೭. ರಾಣಾನ ಪ್ರಸಂಗದಿಂದ ಮುಕ್ತನಾಗಿ ದಕ್ಷಿಣ ದೇಶದ ಇರಾದೆ ಮಾಡಿದ್ದು : ೪೭೫

೫೮. ಆಲಮಗೀರ ಬಾದಶಾಹನು ಷರ್ಜಾಖಾನ ಊರ್ಫ ರುಸ್ತುಮಖಾನನಿಗೆ ಕಳಿಸಿದ ಆಜ್ಞಾಪತ್ರದ ನಕಲು: ೪೭೬

೫೯. ಶಹರಬಾನೂ ಬೇಗಮ್ ಊರ್ಫ ಬಾದಶಾಹಾ ಬೀಬಿಯು ಸಯ್ಯದ ಮಖದೂಮ ರುಸ್ತುಮಖಾನನಿಗೆ ಬರೆದ ಆಜ್ಞಾಪತ್ರದ ನಕಲು : ೪೭೭

೬೦. ಸಿಕಂದರ ಬಾದಶಹನ ರಾಜ್ಯದ ವ್ಯವಸ್ಥೆ ಹದಗೆಟ್ಟದ್ದು. ಆ ಕಾರಣದಿಂದ ಮಾಸೂದಖಾನನು ನೊಂದು ಆದೋನಿಗೆ ಓಡಿಹೋದದ್ದು : ೪೭೮

೬೧. ಸಾರಾಂಶ : ೪೭೯

೬೨. ಸಿದ್ದೀ ಮಾಸೂದಖಾನನ ಬಗ್ಗೆ ಒಂದಿಷ್ಟು ವಿವರಗಳು : ೪೮೦

೬೩. ಔರಂಗಜೇಬ ಬಾದಶಹನ ಸ್ವಾರಿ ದಕ್ಷಿಣ ದೇಶದಲ್ಲಿ ಬಂದದ್ದು : ೪೮೧

೬೪. ಮಾಸೂದಖಾನನು ಆದೋನಿಗೆ ಹೋದ ಅನಂತರದ ವಿಜಾಪುರದ ಸ್ಥಿತಿಗತಿ : ೪೮೪

೬೫. ಔರಂಗಜೇಬ ಬಾದಶಹನಿಂದ ಸಿಕಂದರ ಬಾದಶಹನಿಗೆ ಬಂದ ಆಜ್ಞಾಪತ್ರದ ನಕಲು : ೪೮೫

೬೬. ಸಿಕಂದರ ಬಾದಶಹನಕಡೆಯಿಂದ ಔರಂಗಜೇಬ ಬಾದಶಹನಿಗೆ ಕಳಿಸಿದ ಉತ್ತರದ ನಕಲು : ೪೮೬

೬೭. ಸಿಕಂದರ ಬಾದಶಹನು ಸಿದ್ದಿ ಮಾಸೂದಖಾನನಿಗೆ ಬರೆದು ಕಳಿಸಿದ ಆಜ್ಞಾ ಪತ್ರದ ನಕಲು : ೪೯೧

೬೮. (ವಿಜಾಪುರದರ ಮೇಲಿನ ಔರಂಗಜೇಬನ ಸವಾರಿ) : ೪೯೨

೬೯. ಸಿಕಂದರ ಬಾದಶಹನು, ಮಾಸೂದಖಾನನಿಗೆ ಬರೆದ ಪತ್ರದ ನಕಲು : ೪೯೬

೭೦. ವಿಜಾಪುರ ಕೈವಶಕ್ಕೆ ಅಲಮಗೀರ ಬಾದಶಹನ ಪೂರ್ಣ ಯತ್ನ : ೪೯೬

೭೧. ವಿಜಾಪುರವು ಅಲಮಗೀರ ಬಾದಶಹನ ಕೈ ಸೇರಿದ್ದು : ೪೯೭

೭೨. ಪರಿಸ್ಥಿತಿ ಬಗ್ಗೆ ಸಿಕಂದರ ಬಾದಶಹನ ಪಶ್ಚಾತ್ತಾಪ : ೪೯೮

೭೩. ಮುಸಲ್ಮಾನ ಜನರ ನಗರದ ಮೇಲೆ ಹಲ್ಲೆ ಮಾಡಿದ್ದುದರ ಕಾರಣ ಕೇಳಲು ಸಿಕಂದರ ಬಾದಶಹನು, ವಿದ್ವಾಂಸರನ್ನು ಔರಂಗಜೇಬ ಬಾದಶಹನ ಹತ್ತಿರ ಕಳಿಸಿದ್ದು ಅದಕ್ಕೆ ಆತನ ಉತ್ತರ : ೪೯೯

೭೪. ಸಿಕಂದರನು ಮರಣ ಹೊಂದಿದ ಕಾರಣ : ೫೦೨

೭೫. ಆದಿಲಶಾಹಿ ಕಾಲಕಿರ್ದಿಯ ಕೊನೆಯ ವ್ಯಕ್ತಿ ಸಿಕಂದರ ಬಾದಶಹನು. ಆತನ ಪರಿಣಾಮದ ಒಂದಿಷ್ಟು ವರ್ಣನೆ : ೫೦೩

೭೬. ಹೀಗೊಂದು ವಿಷಯ : ೫೦೪

೭೭. ವಿಜಾಪುರ ಕೋಟೆಯ ವಿಜಯದ ಅನಂತರ ಅಲಮಗೀರ ಬಾದಶಹನು ವಿಜಾಪುರ ವಶದಲ್ಲಿದ್ದ ಪ್ರದೇಶವನ್ನು ಮತ್ತು ನಗರಗಳನ್ನು ಕೈವಶಮಾಡಿಕೊಳ್ಳಲು ಬಹಳ ದಿನ ಖರ್ಚು ಮಾಡಿದ್ದು : ೫೦೬

೭೮. ಒಂದು ಕಥಾಭಾಗ : ೫೧೭

೭೯. ಆಲಮಗೀರ ಬಾದಶಹನು ತನ್ನ ಅಂತ್ಯಕಾಲದಲ್ಲಿ ಬರೆದಿಟ್ಟಿದ್ದು : ೫೨೪

೮೦. ಬೋಧ ವರ್ಣನೆ : ೫೨೫

೮೧. ಒಂದು ಕಥಾಭಾಗದ ವರ್ಣನೆ : ೫೨೭

೮೨. ವಿಜಾಪುರದ ದುಸ್ಥಿತಿ : ೫೨೮

೮೩. ವಿಜಾಪುರ ದುಸ್ಥಿತಿಯ ಕಾರಣಗಳು : ೫೨೮

೮೪. ಹಿಜರಿಸನ್ ೧೧೧೩ರ (ಕ್ರಿ.ಶ ೧೭೦೧-೨) ನಾಶ : ೫೨೯

೮೫. ವಿವಿಧ ಭಾಗಗಳಲ್ಲಿಯ ಜನರಿಗೆ ತಿನ್ನುಣ್ಣಲು ಸಿಗದೆ, ಎಲ್ಲರ ಮೇಲೂ ಬಹುದೊಡ್ಡ ಕಠಿಣ ಪ್ರಸಂಗ ಬಂದುದರ ವಿವರಗಳು : ೫೩೦

೮೬. ಒಂದು ಕಥಾಭಾಗದ ವರ್ಣನೆ : ೫೩೨

೮೭. ಪುಣೆಯ ಸರದಾರನ ವರ್ಣನೆ : ೫೩೨

೮೮. ಇಂಗ್ಲೀಷ್ ಜನರ ಒಡೆತನ, ವರ್ತನೆ : ೫೩೪

೮೯. ಈ ರೀತಿ ಆದೇಶ ಬಂದನಂತರ ಇಂಗ್ರೇಜಿ ಸರಕಾರದ ದುರ್ಗುಣಗಳನ್ನು ಮತ್ತು ನಿಂದೆಯ ವರ್ಣನೆಯ ಅನುವಾದ ಮಾಡಿದ್ದು : ೫೩೭

೯೦. (ಮರಾಠಿ) ಅನುವಾದಕನ ಕೊನೆಯಮಾತು : ೫೪೧

ಸಂದರ್ಭ ಗ್ರಂಥ ಸೂಚಿ ೫೪೫

ಶಬ್ದ ಸೂಚಿ ೫೪೭

# ಪ್ರಸ್ತಾವನೆ

## (ಮರಾಠಿ ಅನುವಾದಕ)

'ಬುಸಾತಿನೆ ಸಲಾತೀನ' ಈ ಪರ್ಶಿಯನ್ ಗ್ರಂಥದಲ್ಲಿ, ವಿಜಾಪುರ ರಾಜಧಾನಿಯ ಬಾದಶಹರ ಕಾಲದ ಮೂಲ ಪುರುಷ ಯುಸುಫಬೇಗ ಸಾವಿ ಎಂಬ ಬಾದಶಹನಿಂದ ಕೊನೆಯ ಬಾದಶಹ ಸಿಕಂದರನ ಬಾದಶಹನ ವರೆಗೆ ಮತ್ತು ದಿಲ್ಲೀ ಸಂಸ್ಥಾನದ ಆಲಂಗೀರ ಬಾದಶಹ (ಔರಂಗಜೇಬ), ಮತ್ತು ಶ್ರೀಮನ್ಮಹಾರಾಜ ಶಾಹಾಜಿ ಛತ್ರಪತಿ ಮತ್ತು ಶ್ರೀಮಂತ ಶಿವಾಜೀ ಮಹಾರಾಜ, ಮತ್ತು ಶ್ರೀಮಂತ ಸಂಭಾಜಿ ಮಹಾರಾಜರವರೆಗೆ,[1] ಅನಂತರದ ಹೈದರಾಬಾದದ ನವಾಬರು ಮತ್ತು ಅನಂತರ ಬಂದ ಪೇಶವಾಯಿಗಳ ಕಾಲ ಹಾಗೂ ಅನಂತರ ಇಂಗ್ಲೀಷ್ ಸರಕಾರದ ಆಳಿಕೆಯ ಸವಿಸ್ತಾರ ತಾರೀಖವಾರ ವರ್ಣನೆಯು ಪರ್ಶಿಯನ್ ಭಾಷೆಯಲ್ಲಿ ಇದೆ. ಆ ಗ್ರಂಥದ ಅನುವಾದವನ್ನು ಮರಾಠಿಯಲ್ಲಿ ಮಾಡಿದರೆ, ಎಲ್ಲರಿಗೂ ತಿಳಿಯುವಂತಾಗುತ್ತದೆ. ಆದ್ದರಿಂದ ಮೆಹರಬಾನ, ಕದರದಾನ ಬಾರಟಲ್ ಫ್ರಿಯರ್‌ಸಾಹೇಬ ಇಸ್ಕ್ವಾಯರ್, ಕಮೀಶನರ ಬಹಾದೂರ ಸಾತಾರಾ ಇಲಾಖೆ. ಇವರು ನಾನು ನರಸಿಂಗರಾವ ವಿಠಲ ಪಾರಸನೀಸ ಸರಕಾರಿ ಕಾರಕೂನ, ಈತನನ್ನು ಕಚೇರಿಗೆ ಕರೆಸಿ ಸಮಕ್ಷಮ ಆಜ್ಞೆಯನ್ನು ಹೀಗೆ ನೀಡಿದರು. ನೀನು ಈ ಪರ್ಶಿಯನ್ ಗ್ರಂಥವನ್ನು ಮಹಾರಾಷ್ಟ್ರ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಅನುವಾದ ಮಾಡಿರಿ. ಅವರು ಹೇಳಿದಂತೆ, 'ಫನುಲ್ಲುಗಾತ', 'ಕಪಫುಲ್ಲುಗಾತ', 'ಮುರ್ವದ ಬುಲಲುಗಾತ', 'ಶಾಹಾಜಹಾನೀ', 'ಬುರಹಾನಕಾತೆ', 'ಜಹಾನಗಿರೀ' ಇತ್ಯಾದಿ, ಪರ್ಶಿಯನ್ ಅರ್ಥಕೋಶಗಳ ಆಧಾರಗಳಿಂದ ಭಾಷಾಂತರ ಮಾಡಿ ಎಲ್ಲರಿಗೂ ತಿಳಿಯುವ ಹಾಗೆ ಅನುವಾದ ಮಾಡಿರುವೆ. ಈ ಗ್ರಂಥದಲ್ಲಿ ಬಾದಶಹರ, ಮುಸಲ್ಮಾನ ಜನರ, ಕೋಟೆ ಮತ್ತು ಪಟ್ಟಣಗಳ ಪರ್ಶಿಯನ್ ಹೆಸರುಗಳನ್ನು ಮತ್ತು ಹಲವು ಕಾರಣಗಳಿಂದ ಪರ್ಶಿಯನ್ ಶಬ್ದಗಳನ್ನು ಬರೆಯಲೇ ಬೇಕಾದ ಸಂದರ್ಭದಲ್ಲಿ ಅವುಗಳನ್ನು ಕೆಂಪು ಅಕ್ಷರಗಳಲ್ಲಿ (ಕೆಂಪು ಮಸಿಯಿಂದ) ಬರೆದಿರುವೆ. ಯಾಕೆಂದರೆ ಎಲ್ಲ ಮರಾಠಿಗರಿಗೆ ಪರ್ಶಿಯನ್ ಭಾಷೆಯ ಅಭ್ಯಾಸ ಇರುವುದಿಲ್ಲ. ಆದರಿಂದಾಗಿ ಸರಿಯಾಗಿ ಉಚ್ಚರಿಸಲು ಬರುವುದಿಲ್ಲ. ಅವರಿಗೆ ಓದುವಾಗ ತಡೆಯಾಗುತ್ತದೆ. ಆದ್ದರಿಂದ ಆ ಶಬ್ದಗಳ ಪರ್ಶಿಯನ್ ಭಾಷೆಯವುಗಳೆಂದು ತಿಳಿಯಲು ಕೆಂಪು ಮಸಿಯಿಂದ ಬರೆಯಲಾಗಿದೆ. ಒಂದು ಪರಿಚ್ಛೇದದಿಂದ ಇನ್ನೊಂದು ಪರಿಚ್ಛೇದ ಪ್ರಾರಂಭಿಸುವಾಗಲೂ ಕೆಂಪು ಮಸಿಯನ್ನು ಬಳಸಿದೆ. ಮತ್ತು ಕೆಂಪು ಮಸಿಯಿಂದ ಬರೆಯಬೇಕಾದುದನ್ನು ತಪ್ಪಿ ಕರಿ ಮಸಿಯಿಂದ ಬರೆದಿದ್ದರೆ, ಆ ಶಬ್ದ ಕೆಂಪು ಮಸಿಯದು ಎನ್ನಲು ಶಬ್ದದ ಕೆಳಗೆ ಕೆಂಪು ಗೆರೆಯನ್ನು ಎಳೆಯಲಾಗಿದೆ. ಈ ಗ್ರಂಥದಲ್ಲಿ ಅನೇಕ ಸಂದರ್ಭಗಳ ವರ್ಣನೆ ಬಂದಿದೆ. ಬೇಕಾದ ಸಂದರ್ಭವನ್ನು ತಕ್ಷಣ ನೋಡಲು ತೊಂದರೆಯಾಗುತ್ತದೆ. ಆದ್ದರಿಂದ ಪ್ರಾರಂಭದಿಂದ ಬರುವ ಸಂದರ್ಭಗಳ ಹೆಸರನ್ನು ಬರೆದು ಅವುಗಳನ್ನು ಗ್ರಂಥದಲ್ಲಿ ಬರೆದ ಪುಟಗಳನ್ನು ಕಾಣಿಸುತ್ತ 'ಅನುಕ್ರಮಣಿಕೆ' ಯನ್ನು ಕೊಡಲಾಗಿದೆ. ಈ ಅನುಕ್ರಮಣಿಕೆಯನ್ನು ನೋಡಿದರೆ ಓದಲು ಸುಲಭವಾಗುತ್ತದೆ. ಮರಾಠಿ ಹಾಗು ಸಂಸ್ಕೃತ ಭಾಷೆಗಳ ಗ್ರಂಥಗಳಲ್ಲಿ ಅಧ್ಯಾಯಗಳಿರುತ್ತವೆ. ಅದರಂತೆ ಈ ಗ್ರಂಥದಲ್ಲಿ ಎಂಟು 'ಬುಸ್ತಾನ'ಗಳನ್ನು ಮಾಡಲಾಗಿದೆ. 'ಬುಸ್ತಾನ' ಎಂದರೆ ಉದ್ಯಾನವನ, ತೋಟ ಎಂದು ಅರ್ಥ. ಆದರರ್ಥ ಎಂಟು ಉದ್ಯಾನವನಗಳಲ್ಲಿ (ವಿಜಾಪುರದ) ಎಲ್ಲ ವರ್ಣನೆ ಬಂದಿದೆ.

---

೧. ಇನ್ನೊಂದು ಪ್ರತಿಯಲ್ಲಿ 'ಸಂಭಾಜಿ ಮಹಾರಾಜ ಹಾಗು ಶಾಹು ಮಹಾರಾಜ ವರೆಗೆ' ಎಂದು ಇದೆ.

# ಪ್ರಾಸ್ತಾವಿಕ

## (ಮೂಲ ಗ್ರಂಥಕಾರನಿಂದ)

ಹೇ ಅಲ್ಲಾ ಒಳಿತು ಮಾಡು, ಉತ್ತಮವಾಗಿ ಈ ಗ್ರಂಥವನ್ನು ಪೂರ್ಣಗೊಳಿಸು. ಪ್ರತಿಯೊಂದು ವೇಳೆಯಲ್ಲಿಯೂ ನಾವು ನಿನ್ನಿಂದಲೇ ಸಹಾಯವನ್ನು ಇಚ್ಛಿಸುತ್ತೇವೆ. ನಾನಾ ಪ್ರಕಾರದ ಸ್ತವನಗಳನ್ನು ಮತ್ತು ಅಗಣಿತ ಸ್ತುತಿಗಳನ್ನು 'ಸಾನಅ' ಎಂದರೆ. ಎಲ್ಲವೂ ನಿನ್ನ ಕೌಶಲ್ಯದಿಂದಲೇ ನಿರ್ಮಾಣಗೊಳ್ಳುವಂಥ ಒಬ್ಬನೇ ಒಬ್ಬನಾದ ಅಲ್ಲಾ, ಅದು ಅವನಿಗೊಬ್ಬನಿಗೇ ಶೋಭಿಸುತ್ತದೆ. ಆತ ತನ್ನ ಪೂರ್ಣ ಸಾಮರ್ಥ್ಯದಿಂದ ಮನುಷ್ಯನ ಶರೀರವನ್ನು ಶ್ರೇಷ್ಠತ್ವದ ವಸ್ತ್ರದಿಂದ ಶೋಭಿಸಿದ್ದಾನೆ. ಇದು ಸತ್ಯವೆಂದು ಅಲ್ಲಾನು ಹೇಳುತ್ತಾನಲ್ಲದೆ ಮನುಷ್ಯನನ್ನು ಈ ಪೃಥ್ವಿಯಲ್ಲಿ 'ಖಲೀಫಾ' ಎಂದರೆ ಪ್ರತಿನಿಧಿ ಎಂದು ಪ್ರೀತಿಯಿಂದ ಕರೆದು, ಆತನ ಮೇಲೆ ಶ್ರೇಷ್ಠತ್ವದ ಮುಕುಟವನ್ನು ಇಟ್ಟಿದ್ದೇನೆಂದು ಅಲ್ಲಾನು ಹೇಳುತ್ತಾನೆ. ಮುಕುಟ ಎಂದರೆ ಆಶೀರ್ವಾದ, ಅತ್ಯಂತ ಸ್ತುತಿಸಲ್ಪಡುವವನು ಮತ್ತು ಈ ಅಗಣಿತ ಪೃಥ್ವಿಯ ಒಡೆಯನು, ಯಾವನ ಜೀವ ಪವಿತ್ರವೂ, ಹಾಗು ಯಾರ ಪ್ರಾಣವು ನಿರ್ಮಳವೂ ಜಗತ್ತಿನಕ್ಕಿಂತ ಶ್ರೇಷ್ಠವೂ ಆದ 'ಸಯ್ಯದುಲ್-ಮುರಸಲೀನ' ಎಂದರೆ ಪೈಗಂಬರರು, ಅವರ ಸರದಾರರು ಈ ಪೃಥ್ವಿಯ ಮೇಲೆ ಕೃಪೆ ಮಾಡುವ ಮಹ್ಮದ ಮುಸ್ತಾಫಾ ರಸುಲಿಲ್ಲಾಹ ಸಲ್ಲೀಲಾಹ ಅಲೆಹೆ ವಸಲ್ಲಮ, ಅಲ್ಲಾನ ಕೃಪೆಯನ್ನು ಎಲ್ಲರಿಗೂ ಮುಟ್ಟಿಸುವದಕ್ಕೋಸ್ಕರವೇ ಯಾರನ್ನು ನಿರ್ಮಿಸಿದ್ದಾನೆಯೋ ಆತನ ಜಾತಿ ಉತ್ತಮವಾದುವು. ಹಾಗೂ ನಾಲ್ಕು ತತ್ವಗಳು ಪವಿತ್ರವಾದವುಗಳು. ಆತನ ಪವಿತ್ರ ವಂಶ ಹಾಗು ಆತನ ಕಲ್ಯಾಣರೂಪ 'ಆಸಹಾಬ' ಎಂದರೆ ಸನ್ನಿಧಿಯಲ್ಲಿರಲಿ. ಧರ್ಮ (ಮಹಲಿನಾ) ಕಟ್ಟಡದ ಕಂಬವಾಗಿರಲಿ.

### ಅಲ್ಲಾ ಮತ್ತು ಪೈಗಂಬರರನ್ನು ಸ್ತುತಿಸಿ,

ಆಕಾಶದ ಧ್ವನಿಯನ್ನು ತಿಳಿದಿರುವವರು, ಸತ್ಯವನ್ನು ಗುರುತಿಸುವವರು ಮತ್ತು ವರ್ತಮಾನವನ್ನು ಅರಿತಿರುವವರ ಚಿತ್ತದಲ್ಲಿ ಚರಿತ್ರೆಯ ಪುಟಗಳು ಗೊತ್ತಿಲ್ಲವೆಂದೇನೂ ಅಲ್ಲ. ಅಭ್ಯಾಸಪೂರ್ಣವಾಗಿಯೇ ಓದಿರುತ್ತಾರೆ. ಆದ್ದರಿಂದಲೇ ಅದರ ಬಹು ದೊಡ್ಡ ಲಾಭ ಹಾನಿಗಳು ವಿಶೇಷವಾಗಿ ಭ್ರಾಂತ ಜನರ ಮಾಹಿತಿಗಾಗಿಯೇ ರೂಪಿತವಾಗಿರುತ್ತವೆ. ಬುದ್ಧಿವಂತ ಜನರ ಗೌರವವನ್ನು ವೃದ್ಧಿಗೊಳಿಸುತ್ತವೆ. ಗೌರವ ಮತ್ತು ವಿಶ್ವಾಸಗಳನ್ನು ಸ್ವತಃ ಅಲ್ಲಾನೇ ನಿರ್ಧರಿಸಿರುತ್ತಾನೆ. ಅಂತಲೇ ಅಲ್ಲಾನು ಗೌರವದಿಂದ ಇರಿ ಎಂದು ಆಜ್ಞೆ ಮಾಡುತ್ತಾನೆ. ನೀವು ಇನ್ನೊಬ್ಬರನ್ನು ಕಂಡು ತ್ಯಾಗ ಮಾಡುವುದನ್ನು ಕಲಿಯಿರಿ. ನೀವು ಈ ಜ್ಞಾನದೃಷ್ಟಿಯ ಧಣಿಯಾಗಿರಿ. ಇಷ್ಟೆಲ್ಲ ಹೇಳುವ ತಾತ್ಪರ್ಯವೆಂದರೆ, ಒಂದು ವೇಳೆ ಯಾರಿಗಾದರೂ ಸತ್ಯಮಾರ್ಗದಲ್ಲಿ ನಡೆಯಬೇಕು ಎದು ಅನಿಸಿದರೆ, ಅವರು ಒಂದು ಗಳಿಗೆ ತಮ್ಮ ಅಂತರಾಳದಲ್ಲಿ ಕಳೆದು ಹೋದ ಜನರ ವರ್ತಮಾನದಲ್ಲಿ ಮತ್ತು ಗತಿಸಿದ ಜನರ ಚರಿತ್ರೆಯಲ್ಲಿ ಇಣುಕಿನೋಡಿ ಅವಲೋಕಿಸಬೇಕು. ಆಗ ಯಾರ ಅಂಕಿತದಲ್ಲಿಯೂ ಇಲ್ಲದ ಅಲ್ಲಾನು, ಹೇಗೆ ತನ್ನ ಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಿ, ತಾನು ಬಯಸಿದ್ದನ್ನು ಮಾತ್ರ ಮಾಡುತ್ತಾನೆ ಎಂಬ ಆ ಅಲ್ಲಾನು ಕುಶಲತೆಯ ಅರಿವಾಗುತ್ತದೆ. ಜಗದಲ್ಲಿಯ ಅಣು-ರೇಣುಗಳಲ್ಲಿ ಉತ್ಪನ್ನವಾದ ಒಂದೊಂದು ಪದಾರ್ಥಗಳಲ್ಲೂ ಆತನ ಅಸ್ತಿತ್ವದ ಗುರುತು ಮತ್ತು ಪರಿಚಯವಾಗುತ್ತದೆ. ಈ ಪ್ರಪಂಚದಲ್ಲಿಯ ನಾಶ, ಹ್ರಾಸ ಮತ್ತು ಮೂಲರಹಿತ ವಿಶ್ವದಲ್ಲಿಯ ವಿರಸ

ಸಂಗತಿಗಳು ಅಲ್ಲದೆ ಅಶಾಶ್ವತ ಎಂಬ ಸತ್ಯದ ಪ್ರತ್ಯಯವೂ ಆತನಿಗಾಗುತ್ತದೆ. ಈ ಗುಹ್ಯಾರ್ಥದಿಂದ ಬಹುತೇಕವಾಗಿ ಆತನು ಅಲ್ಲಾನನ್ನು ತಿಳಿದುಕೊಳ್ಳಲು ಪಾತ್ರನಾಗುತ್ತನೆ. ಬೇವಫಾ ಅಂದರೆ ಯಾರನ್ನೂ ಅವಲಂಬಿಸದೆ ಈ ಪೃಥ್ವಿಯೊಂದಿಗೆ ಆತನ ಸಖ್ಯತೆ ಹಾಗೂ ಬಯಕೆಗಳ ಆಕುಂಚಿತತನವು ಕಾರಣವಾಗುತ್ತದೆ. ಇನ್ನೂ ಮುಂದು ವರೆದು, ಹೇಳಬೇಕೆಂದರೆ, ಒಬ್ಬ ಒಳ್ಳೆಯ ಮನುಷ್ಯನ ಸತ್ಕಾರ್ಯಗಳ ಪರಿಣಾಮ ಮತ್ತು ಒಬ್ಬ ದುರ್ಗುಣ ಸಂಪನ್ನ ಅಯೋಗ್ಯ ವ್ಯಕ್ತಿಯ ನಡತೆಗಳನ್ನು ಗಮನಿಸಿದರೆ ಈ ಪೃಥ್ವಿ ಇರುವವರೆಗೆ, ಮೊದಲ ವ್ಯಕ್ತಿಯ ಸ್ತುತಿ ಹಾಗು ಕೀರ್ತಿಗಳು, ಮತ್ತು ಎರಡನೆಯ ವ್ಯಕ್ತಿಯ ಕೆಟ್ಟತನದ ಅಪಕೀರ್ತಿಗಳು ಆತನ ಅವಶೇಷಗಳಾಗಿ ಕಾಲಚಕ್ರದ ಸೆಜ್ಜೆಯ ಮೇಲೆ ನಿರಂತರವಾಗಿ ಉಳಿದು ಬಿಡುತ್ತವೆ. ಮತ್ತು ಇದರಿಂದ ಜನಸಾಮಾನ್ಯರು ಕೆಟ್ಟ ಮಾರ್ಗದಿಂದ ಸಿಡಿದು ಒಳ್ಳೆಯ ಮಾರ್ಗಕ್ಕೆ ಪ್ರಚೋದಿತ ರಾಗುತ್ತಾರೆಂಬುದೂ ಸತ್ಯವಾಗಿದೆ.

ಇಲ್ಲಿಂದ ಬರೆಯಲಾಗುತ್ತಿರುವುದು ಏನೆಂದರೆ, ಪ್ರತಿಯೊಂದು ನಗರದ ಶ್ರೇಷ್ಠ ಜನರ ಬಗ್ಗೆ ಆ ಕಾಲದಲ್ಲಿ ನಡೆದ ಘಟನೆಗಳ ಕುರಿತು ಸಾಕಷ್ಟು ಗ್ರಂಥಗಳನ್ನು ಬರೆಯಲಾಗಿದೆ. ಮತ್ತು ಬಹಳ ವರುಷಗಳಿಂದ ಅವು ಆ ಗ್ರಂಥಗಳಲ್ಲಿಯೇ ಉಳಿದುಕೊಂಡಿವೆ. ತೀರಿಹೋದ ಜನರ ಸುದ್ದಿಗಳು ಮತ್ತು ಗತಿಸಿದ ವ್ಯಕ್ತಿಗಳ ಯುದ್ಧಗಳ ವಿಷಯಗಳನ್ನು ವಿಸ್ತಾರವಾಗಿ ವರ್ಣಿಸಿ, ಭವಿಷ್ಯದ ಜನರ ಬೋಧಕ್ಕಾಗಿ ಮತ್ತು ಮೂರ್ಖ ಭ್ರಾಂತರಿಗೆ ಉಪದೇಶಮಾಡಿದಂತಿವೆ.

ಇನ್ನೂ ಮುಂದೆ ಬರೆಯಬೇಕೆಂದರೆ, ವಿಜಾಪುರ ನಗರದಲ್ಲಿ ಮೊಟ್ಟಮೊದಲ ಮಹಮ್ಮದ ಕಾಸಮ ಫಿರಿಸ್ತಾ ಎಂಬುವನು ನ್ಯಾಯಮೂರ್ತಿ ಸುಲ್ತಾನ ಇಬ್ರಾಹೀಮ ಬಾದಶಹನ ಕಾಲಕಿರ್ದಿಯಲ್ಲಿ ಸನ್ ೧೦೧೫ (ಕ್ರಿ.ಶ. ೧೬೦೬-೭)ರಲ್ಲಿ ಗ್ರಂಥವನು ಬರೆದು, ಆ ಗ್ರಂಥಕೆ ನವರಸನಾಮಾ -ಇ-ಫಿರಿಸ್ತಾ ಎಂಬ ಹೆಸರನ್ನಿಟ್ಟನು. ಆ ಗ್ರಂಥಕ್ಕೆ ಗುಲ್ಶನೆ ಇಬ್ರಾಹಿಮೀ ಎಂಬ ಹೆಸರೂ ಇದೆ. ಆ ಗ್ರಂಥವು ಜಗತ್ತಿನಲ್ಲಿಯೇ ಶ್ರೇಷ್ಠವೆಂದು ಪ್ರಸಿದ್ಧವಾಗಿದೆ. ಆ ಗ್ರಂಥದಲ್ಲಿ ಘಟನೆಗಳು ಸತ್ಯವನ್ನು ಅವಲಂಬಿಸಿವೆ. ಶ್ರೇಷ್ಠ ಭಾಷೆಯಲ್ಲಿ ನಿರ್ಬಾಧಕವಾಗಿ ಬರೆಯಲು ಪ್ರಾರಂಭಿಸಿ ಯವನ ರಾಜ್ಯದ ಕಾಲಕಿರ್ದಿಯ ಪರ್ಯಂತ, ಧರ್ಮದೂಷಕ ಜನರವರೆಗೆ ಮುಟ್ಟಿ, ಯಾವನೀ ಜ್ಞಾತಿಯ ಶ್ರೇಷ್ಠ ಬಾದಶಹರ ವಿಷಯಗಳನ್ನು ಯಾರು ಇಡೀ ಹಿಂದುಸ್ತಾನವನ್ನು ಆಳಿದರೋ ಅವರೆಲ್ಲರ ವಿವರಗಳನ್ನು ಬರೆದಿದ್ದಾನೆ. ಗ್ರಂಥದ ಮೂರನೆಯ ಅಧ್ಯಾಯದಲ್ಲಿ ದಕ್ಷಿಣದ ಬಾದಶಹರ ಮತ್ತು ಸರದಾರರ ನಡತೆಗಳನ್ನು ಮತ್ತು ವಿಷಯಗಳನ್ನು ಸವಿಸ್ತಾರವಾಗಿ ಬರೆದಿದ್ದಾನೆ. ವಿಜಾಪುರದ ಬಾದಶಹರ ವಿಷಯದಲ್ಲಿ, ಆ ಗ್ರಂಥದಲ್ಲಿ ಯೂಸುಫ-ಆದಿಲಶಹನ ರಾಜಧಾನಿ ಮತ್ತು ರಾಜ್ಯ ತೆಗೆದುಕೊಂಡದ್ದರಿಂದ ಪ್ರಾರಂಭಿಸಿ ಎರಡನೆಯ ಇಬ್ರಾಹಿಮ ಆದಿಲಶಾಹ 'ಮವಸೂಫ'ನ ಕಾಲಕಿರ್ದಿಯವರೆಗೆ ವಿಸ್ತಾರವಾಗಿ ಬರೆದಿದ್ದಾನೆ.

ಇದೇ ಇಬ್ರಾಹಿಮ ಆದಿಲಶಹನ ಕಾಲಕಿರ್ದಿಯಲ್ಲಿ ಮೀರ ರಫೀಉದ್ದೀನ ಷಿರಾಜಿ ಎಂಬವನು ಇದೇ ನಗರದಲ್ಲಿ ಈ ವಿಷಯದಲ್ಲಿ ಸನ್ ೧೦೧೭ (ಕ್ರಿ.ಶ ೧೬೦೮-೯) ರಲ್ಲಿ ಗ್ರಂಥವನ್ನು ರಚಿಸಿ ಅದಕ್ಕೆ ತಜಕರದುಲಮಲುಕ ಎಂಬ ಹೆಸರನ್ನಿಟ್ಟಿದ್ದಾನೆ. ಆ ಗ್ರಂಥದಲ್ಲಿ ಕೆಲವು ಆಯ್ದ ವಿಷಯಗಳನ್ನು ಬರೆಯಲಾಗಿದೆ.

ಅನಂತರ ಮುಲ್ಲಾ ಜುಹೂರ ವಲದ ಮುಲ್ಲಾ ಜಹೂರೀ ಕಾಯನಿ ಎಂಬವನು ಬರೆದನು. ಈ ಗ್ರಂಥವೂ ಪ್ರಸಿದ್ಧವಾಗಿದ್ದು ಪ್ರಪಂಚದ ಜನರಿಂದ ಸರ್ವಮಾನ್ಯವಾಗಿದೆ. ಶ್ರೇಷ್ಠತೆಯಿಂದ ಕೂಡಿದ

ಆ ಗ್ರಂಥ ಕಾವ್ಯವು ಜಗದ ಎಲ್ಲರಿಗೂ ಪ್ರಿಯವಾಗಿದೆ. ಆತ ಅದನ್ನು ಸುಲ್ತಾನ ಮಹಮ್ಮದ ಆದಿಲಶಾಹನ ಕಾಲದಲ್ಲಿ ರಚಿಸಿದನು. ಇಬ್ರಾಹಿಮನ ಕಾಲದಲ್ಲಿ ಸುಲ್ತಾನ ಮಹಮ್ಮದನ ನಡತೆ, ಆತನ ವಿಷಯಗಳು ಮತ್ತು ಸಮಾಯಾನುಸಾರ ಮಾಡಿದ ಯುದ್ಧಗಳ ವಿಷಯಗಳನ್ನು ಬರೆದು ಆ ಗ್ರಂಥಕ್ಕೆ 'ಮಹಮ್ಮದನಾಮಾ' ಎಂಬ ಹೆಸರನ್ನಿಟ್ಟನು.

ಅನಂತರ ಎರಡನೆಯ ಅಲೀ ಆದಿಲಶಹನ ಕಾಲದಲ್ಲಿ ಸಯ್ಯದ ನಸುತುಲ್ಲಾಹ ವಲದ ಕಾಜೀ ಸಯ್ಯದ ಆಲೀ ಮಹಮ್ಮದ ನಸತುಲ್ಲಾ ಎಂಬವನು ಪ್ರಮುಖವಾಗಿ ಬಾದಶಹರ ಕುರಿತು ಸಂಗ್ರಹ ಪೂರ್ಣವಾಗಿ ಬರೆದು ಆ ಕಾಲದ ವಿಷಯಗಳನ್ನು ಮತ್ತು ಘಟನೆಗಳನ್ನು ಅತಿ ಸುಂದರವಾಗಿ ಅಷ್ಟೇ. ರಸಿಕ-ಪ್ರೌಢ ಶಬ್ದ ಗಾರುಡಿಗನಂತೆ ಬರೆದು ಅದಕ್ಕೆ 'ಇನ್ ಷಾಯ ಅಲೀ ಆದಿಲಶಾಹೀ' ಎಂದು ಹೆಸರನ್ನಿಟ್ಟನು. ಆ ಗ್ರಂಥವೂ ಪ್ರಸಿದ್ಧವಾಗಿದೆ. ಅದೇ ಕಾಲದಲ್ಲಿ, ಮಲೀಕುಷಾರಾ ದಕ್ಷಿಣೀ ಮಿಯಾ ನಸರತೀಯು ಆಲಿ ಆದಿಲಶಹನ ಯಶಸ್ವೀ ಕಥಾ ಭಾಗವನ್ನು ಸ್ವಾದಿಷ್ಟವಾದ ಕಸೀದೆ ರೂಪದಲ್ಲಿ ಆ ಕಾಲದಲ್ಲಿ ಪ್ರಚಲಿತದಲ್ಲಿದ್ದ ಪದ್ಯರೂಪದಲ್ಲಿ ಬರೆದನು. ಆ ಗ್ರಂಥವು 'ಆಲೀನಾಮಾ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಅನಂತರ ವಿದ್ಯೆಯ ಆಗರವೇ ಆಗಿದ್ದ ಶೇಖ ಅಬದುಲ ಹಸನ ವಲದ ಕಾಜೀ ಅಬದುಲ ಅಜೀಜ ಎಂಬವನು ಅಲೀ ಆದಿಲಶಹನ ಚರಿತ್ರೆಯನ್ನು ವಿಸ್ತಾರವಾಗಿ ಮತ್ತು ಸಿಕಂದರ ಜ್ಯಾನ್ ನ ಕಾಲದಲ್ಲಿಯ ವಿಷಯಗಳನ್ನೊಳಗೊಂಡ ಗ್ರಂಥವನ್ನು ಬಹಳ ವಿಚಾರಮಾಡಿ ಬರೆದಿದ್ದಾನೆ. ಆ ಗ್ರಂಥದ ಹೆಸರು ತಬಕ್ಯೆಯ ಆದಿಲಶಾಹೀ ಎಂಬುದಾಗಿದೆ.

ಆ ಗ್ರಂಥವನ್ನು ರಚಿಸುವಲ್ಲಿ ಆತನಿಗೆ ಬಹಳ ದಿನಗಳು ಹಿಡಿದುವು. ಕೊನೆಗೆ ಹಾದೀ ಆಷರ ಎಂಬವನು ಆದಿಲಶಾಹಿಗಳ ಯಶಸ್ವೀ ಚರಿತ್ರೆಯನ್ನು ಸಂಪೂರ್ಣವಾಗಿ ಸವಿಸ್ತಾರವಾಗಿ ಬರೆಬೇಕಾಯಿತು. ಅದರಲ್ಲಿ ಆತ ಬರೆಯುತ್ತ, ಮುಲ್ಲಾ ಜಹೂರ ವಲದ ಮುಲ್ಲಾ ಜಹೂರೀ ಕಾಯನಿಯು ಸುಲ್ತಾನ ಮಹಮ್ಮದ ಆದಿಲಶಹನ ಕಾಲದ ಚರಿತ್ರೆಯನ್ನು ಬಹಳ ವಿಸ್ತಾರವಾಗಿ ಸುಂದರ ಭಾಷೆಯಲ್ಲಿ ಬರೆದಿದ್ದು ಅದಕೆ ಮಹಮ್ಮದಾನಾಮಾ ಎಂಬ ಹೆಸರನ್ನಿಟ್ಟಿದ್ದಾನೆ. ಅದರಲ್ಲಿ ಕೆಲವು ಸಂದರ್ಭಗಳಲ್ಲಿ ವಿಸ್ತಾರವಾಗಿ ಬರೆಯಬೇಕಾದ್ದನ್ನು ಕೆಲವೇ ಶಬ್ದಗಳಲ್ಲಿ ಬರೆದಿದ್ದಾನೆ. ಆ ವಿಷಯಗಳನ್ನು ಪ್ರಸ್ತುತ ಲೇಖಕನು ಬಡಫಕೀರನು ಅಂದರೆ ಶೇಖ ಅಬದುಲ ಹಸನನು ಅವುಗಳನ್ನು ವಿಸ್ತರಿಸಿ ಕಾಲಾನುಕ್ರಮವಾಗಿ ವಿಂಗಡಿಸಿ, ಇದರಲ್ಲಿ ಬರೆದಿದ್ದಾನೆ ಎಂದು ಹೇಳಿದ್ದಾನೆ. ಆದರೆ ಈ ಎರಡೂ ಗ್ರಂಥಗಳು ಅಂದರೆ, ಮುಲ್ಲಾ ಜಹೂರನ ಮಹಮ್ಮದನಾಮಾ ಮತ್ತು ಶೇಖ ಅಬದುಲ ಹಸನನ ಗ್ರಂಥಗಳು ದುರ್ಮಿಳವಾಗಿದ್ದು ಸಿಗುತ್ತಲೇ ಇಲ್ಲ. ಇಂದಿಗೂ ಶೋಧ ಮಾಡುತ್ತಿದ್ದರೂ ಕಣ್ಣಿಗೆ ಬೀಳುತ್ತಿಲ್ಲ. ಆದರೆ ಕೆಲವು ಕಾಗದದ ತುಂಡುಗಳಲ್ಲಿ (ಪುಟಗಳು) ಗತಿಸಿದ ಕಥಾಭಾಗದ ವರ್ಣನೆಗಳನ್ನು ಮಾಡಿದವುಗಳಲ್ಲಿ ಕೆಲವು ಶೇಖ ಅಬದುಲ ಹಸನ ಬರೆದವುಗಳು ಇನ್ನು ಕೆಲವು ಇಬ್ರಾಹಿಮ ಅಸದಖಾನಿ ಮುಂತಾದವರು ಬರೆದವುಗಳು ಬಿಡಿ ಬಿಡಿಯಾಗಿ ನನ್ನ ಸಂಗ್ರಹದಲ್ಲಿ ದೊರೆತವು. ಅವುಗಳನ್ನು ಕಂಡ ಕೆಲವು ಸ್ನೇಹಿತರು ಈ ಬಿಡಿ-ಬಿಡಿಯಾದ ಪುಟಗಳನ್ನು ಒಂದೆಡೆ ಸೇರಿಸಿ ಒಂದು ಒಳ್ಳೆಯ ಗ್ರಂಥವನ್ನು ರಚಿಸಿದರೆ ಉತ್ತಮವಾಗುತ್ತದೆ. ಎಂದರು ಅದಕ್ಕೆ ಈ ಫಕೀರನು. (ಅಂದರೆ ನಾನು) ಇದೊಂದು ನಿರರ್ಥಕ ವಿಚಾರವೆಂದು ತಿಳಿದು ಆ ಕೆಲಸವನ್ನು ಒಪ್ಪಿಕೊಳ್ಳಲಿಲ್ಲ.

ಆದರೆ ಹಾಗೆ ಹೇಳುತ್ತಿದ್ದಂತೆ ಅರಬ್ಬೀ ವಾಕ್ಯದ ಅರ್ಥವೊಂದು ನೆನಪಾಯಿತು. ಅದು ಹೀಗಿದೆ 'ಯಾವುದೇ ಬೇಡಿಕೆಯನ್ನು ಧಿಕ್ಕರಿಸಬಾರದು' ಈ ವಾಕ್ಯವನ್ನು ಮನದಲ್ಲಿ ತಂದುಕೊಂಡು ಅನೇಕ ದಿನಗಳವರೆಗೆ ಮನದಲ್ಲಿಯೇ ವಿಚಾರಿಸುತ್ತ ವಿಷಯಗಳನ್ನು ಜೋಡಿಸಿ ಗ್ರಂಥ ಬರೆದೆನು. ಮತ್ತೆ ಅದನ್ನು ಓದಿ ನೋಡಲಿಲ್ಲ. ಹಾಗೆಯೇ ಎರಡು-ಮೂರು ನಕಲುಗಳನ್ನು ಮಾಡಿ ಇಟ್ಟೆನು. ಅನಂತರ ಕೆಲವು ದಿನಗಳಾದ ಮೇಲೆ ಓದಿ ನೋಡಿದೆನು. ಅದರಲ್ಲಿ ಕೆಲವು ಸ್ಥಳಗಳಲ್ಲಿ ಕಂಡ ತಪ್ಪುಗಳ ಮೇಲೆ-ಗುರುತು ಹಾಕಿದೆನು. ಇನ್ನು ಕೆಲವು ಸಂದರ್ಭಗಳಲ್ಲಿ ವಿಸ್ತಾರಕ್ಕೆ ಯೋಗ್ಯವಾದುವುಗಳನ್ನು ಫಿರಿಶ್ತಾನ ಇತಿಹಾಸದಿಂದ ಮತ್ತು ಕಾಫೀಖಾನ ಮೊದಲಾದವರ ವರ್ಣನೆಗಳಿಂದ ಪಡೆದು ಅಲ್ಪವಿಸ್ತಾರ ಮತ್ತು ಸಂಕ್ಷೇಪ ಮಾರ್ಗಗಳಿಂದ ಅವುಗಳನ್ನು ತಿದ್ದಿದೆನು. ಗ್ರಂಥ ಸಮಾಪ್ತಿಯಾದ ನಂತರ ಇದು ಬಾದಶಹರ ಚರಿತ್ರೆಯಾದ್ದರಿಂದ, ಎಂಟು ಸ್ವರ್ಗಗಳಂತೆ, ಎಂಟು ಬುಸ್ತಾನಗಳನ್ನು (ಉದ್ಯಾನವನ) ಮಾಡಿ ಈ ಗ್ರಂಥದ ಹೆಸರನ್ನು 'ಬುಸಾತಿನೆ-ಸಲಾತೀನ' ಎಂದು ಇಟ್ಟೆನು.

ಈ ಗ್ರಂಥವನ್ನು ಅವಲೋಕಿಸುವ ಶಾಸ್ತ್ರಜ್ಞರು ಹಾಗೂ ಓದುಗರಿಂದ ಈ ಬಡ ಫಕೀರನಾದ ಮಹಮ್ಮದ ಇಬ್ರಾಹಿಮ ಅಲಜುಬೈರಿಯು ಆಶೀರ್ವಾದವನ್ನು ಬಯಸುತ್ತಾನೆ. ಅವರು ಗ್ರಂಥದಲ್ಲಿಯ ತಪ್ಪುಗಳ ಕುರಿತು ದ್ವೇಷಿಸಬಾರದು. ಒಳ್ಳೆಯ ಜನರ ನಡತೆಯಂತೆ ಅವುಗಳನ್ನು ತಿದ್ದಬೇಕು. ಯಾಕೆಂದರೆ ಗ್ರಂಥ ರಚಿಸುವಲ್ಲಿ ನನ್ನ ಯೋಗ್ಯತೆ ಏನಿದೆ?

ಬುಸ್ತಾನ : ಒಂದು

# ಯೂಸುಫ ಆದಿಲಶಾಹ

## ೧. *ಮಜಲಸ್ ರಫೀಯಾ ಯೂಸುಫನಿಂದ ಆದಿಲಶಾಹೀ ರಾಜ್ಯದ ಆರಂಭ:*

ಕನ್ನಡ ದೇಶದಲ್ಲಿ ಮೊಟ್ಟ ಮೊದಲಿಗೆ ತನ್ನ ಹೆಸರಿನಿಂದ ರಾಜ್ಯ ನಡೆಸಿದವನು ಹಾಗೂ ತನ್ನ ಹೆಸರಿನ ಸಿಕ್ಕಾ, ಹಾಗೂ ಖುತಬಾ ಪ್ರಾರಂಭಿಸಿದವನು. ಯೂಸುಫ ಬೇಗ್ ಸಾವಿ ಎಂದು ಇತಿಹಾಸದಲ್ಲಿ ಬರೆಯಲಾಗಿದೆ. ಅವನಿಗೆ ಯೂಸುಫ ಆದಿಲಶಾಹ ಎಂದು ಹೆಸರು ಬಿತ್ತು. ಅವನ ವಿಷಯದಲ್ಲಿ ವಿವಿಧ ಗ್ರಂಥಕಾರರು ಬೇರೆಬೇರೆಯಾಗಿ ಬರೆದಿದ್ದಾರೆ. ಸತ್ಯವನ್ನು ನೋಡಲಾಗಿ ಕೆಲವು ಇತಿಹಾಸ (ಬಖರ)ಗಳಲ್ಲಿ ಹೀಗೂ ಬರೆದಿದ್ದಾರೆ. ಆತನು ರೋಮ ದೇಶದ ಮಲೀಕ ಜೈದನ ಕಡೆಯವನೆಂದು ಹೇಳಲಾಗಿದೆ. ಸನ್ ೮೪೫ (ಕ್ರಿ.ಶ. ೧೪೫೦-೫೧)ರಲ್ಲಿ ರೋಮದ ಸಮರ್ಥ ಸುಲ್ತಾನನಾದ ಮುರಾದನು ತೀರಿಕೊಂಡನು.[೧] ಆಗ ಆತನ ಜ್ಯೇಷ್ಠ ಪುತ್ರ, ಸುಲ್ತಾನ ಮಹ್ಮದನು ತಂದೆಯ ಕೊನೆ ಕಾಲದ ಆಜ್ಞೆಯಂತೆ ಸಿಂಹಾಸನ ಏರಿದನು. ಆತನಿಗೆ ಯೂಸುಫ ಎಂಬ ಹೆಸರಿನ ಕಿರಿಯ ತಮ್ಮನಿದ್ದನು. ಆತ ರೂಪದಿಂದ ಲಾವಣ್ಯದಿಂದ ಪ್ರತಿ ಯೂಸೂಫನೇ ಆಗಿದ್ದನು.*

ಆತನ ಮೇಲೆ ಸುಲ್ತಾನ ಮಹ್ಮದನಿಗೂ ತುಂಬ ಪ್ರೀತಿ ಇತ್ತು. ತಂದೆಯ ಮಮತೆಯಿಂದ ಆತನನ್ನು ಪಾಲಿಸುತ್ತಿದ್ದನು. ಆತನನ್ನು ತನ್ನ ಜೊತೆಗೆಯೇ ಇಟ್ಟುಕೊಂಡಿದ್ದ. ಆತನನ್ನು ಬಿಟ್ಟು ಇರುತ್ತಿರಲಿಲ್ಲ. ಹೀಗಿರಲಾಗಿ ರಾಜ್ಯದ ಕಾರ್ಯಭಾರದ ಜನರು, ರಾಜ್ಯದ ಕಲ್ಯಾಣವನ್ನು ಬಯಸುವವರು, ಸುಲ್ತಾನ ಮಹ್ಮದನನ್ನು ಏಕಾಂತದಲ್ಲಿ ಕರೆದು ತಮ್ಮನ ಮೇಲಿನ ಮೋಹವನ್ನು ತ್ಯಜಿಸಲು ಹೇಳುತ್ತಿದ್ದರು. ಬಂಧುಗಳು ಈ ರಾಜ್ಯದ ಹಕ್ಕುದಾರರಾದುದರಿಂದ ಅವರಮೇಲೆ ಈ ರೀತಿಯ ಮೋಹ ಲೋಕರೂಢಿಗೆ ವಿರುದ್ಧವಾಗಿದೆ. ಭವಿಷ್ಯವನ್ನು ಚಿಂತಿಸಿದರೆ ಜೇಬಿನಲ್ಲಿ ಹಾವನ್ನು ಇಟ್ಟುಕೊಂಡಂತೆ. ಎಂಬುದಾಗಿ ರಾಜ್ಯದ ಹಿತಚಿಂತಕರು ಮೇಲಿಂದ ಮೇಲೆ ಹೇಳಲಾಗಿ, ಸುಲ್ತಾನ ಮಹ್ಮದನಿಗೆ ಅವರ ಉಪದೇಶವನ್ನು ತಿರಸ್ಕರಿಸುವುದು ಕಠಿಣವಾಯಿತು. ವಿನಾಕಾರಣ, ಅನ್ಯಾಯವಾಗಿ ತಮ್ಮನನ್ನು ಕೊಲೆ ಮಾಡಬೇಕು. ಇಲ್ಲವೆ, ತಾಯಿಯ ಕರುಳನ್ನು ಪುತ್ರವಿಯೋಗದಿಂದ ಹಿಂಡಬೇಕು. ಆದ್ದರಿಂದ ಈ ವಿಷಯದಲ್ಲಿ ಯೂಸುಫನ

---

೧. ಆಗಾ ಮುರಾದ ಕ್ರಿ.ಶ. ೧೪೫೦-೫೧ರಲ್ಲಿ ಸತ್ತನು. ಬ್ರಿಗ್ಸ-ಫಿರಿಶ್ತಾ, ಭಾಗ ೩ ಪು. ೪. (೨ ಫೆಬ್ರವರಿ) ೧೪೫೫. ಗಿಬನ್. ವ್ಹಾ ೧೨ ಪು. ೧೫೦.

* ತನ್ನ ಸ್ವುರದ್ರೂಪಕ್ಕೆ ಖ್ಯಾತನಾಗಿದ್ದ ಒಬ್ಬ ಪ್ರವಾದಿ. ಕ್ರೈಸ್ತ ಪುರಾಣಗಳಲ್ಲಿ ಈತನ ಹೆಸರು ಜೋಸೆಫ್ (ಅನು).

ತಾಯಿಯೇ ವಿಚಾರಿಸಬೇಕು ಎಂದು ನಿರ್ಧರಿಸಿದನು. ಮಂತ್ರಿಜನರು ನಿರುಪಾಯರಾಗಿ ಬಾದಶಹನ ಆಜ್ಞೆಯಂತೆ ಯೂಸೂಫನ ತಾಯಿಯ ಹತ್ತಿರ ಹೋದರು. ಪರ್ಯಾಯ ಮಾತುಗಳಿಂದ ಅವಳಿಗೆ ವಿಷಯವನ್ನು ತಿಳಿಸಿದರು. ಯೂಸುಫನ ತಾಯಿ ವೃದ್ಧ ಸ್ತ್ರೀಯಾಗಿದ್ದು ಬುದ್ಧಿವಂತಳಾಗಿದ್ದಳು. ಪ್ರಸಂಗದ ಅಂತಿಮ ಪರಿಣಾದ ಅರಿವು ಅವಳಿಗಾಗಿತ್ತು. ತನ್ನ ಒಪ್ಪಿಗೆ ಕೊಡಲಿ, ಬಿಡಲಿ, ಆಗಬೇಕಾದದ್ದು ಆಗುತ್ತದೆಂಬುದನ್ನು ಗಮನಿಸಿ ಒಂದು ಒಳ್ಳೆಯ ಯುಕ್ತಿಯಿಂದ "ನಿಮ್ಮ ವಿಚಾರವೇ ತನ್ನ ವಿಚಾರವೆಂದು ಹೇಳಿ" ಬಂದ ಕಾರಭಾರಿಗಳಿಗೆ ಉತ್ತರ ಕೊಟ್ಟು ಕಳಿಸಿದಳು. "ಆದರೆ ಇಂದು ಒಂದು ರಾತ್ರಿ ಅವಕಾಶ ಮಾಡಿಕೊಟ್ಟರೆ ಮಗನನ್ನು ಕಣ್ತುಂಬ ನೋಡಿ ಬೆಳಿಗ್ಗೆ ನಿಮ್ಮ ಸುಪರ್ದಿಗೆ ಕೊಡುವೆ ಅಥವಾ ನಾನೆ ನನ್ನ ಕೈಯಾರೆ ಅವನು ಇಲ್ಲದಂತೆ ಮಾಡುವೆ". ಎಂದೂ ಹೇಳಿದಳು. ಬಂದವರು ಸರಿಯೆಂದು ತಂತಮ್ಮ ಮನೆಗಳಿಗೆ ಹೋದರು.

ಕರ್ಮಧರ್ಮ ಸಂಯೋಗದಿಂದ ಆ ದಿನಗಳಲ್ಲಿ ಖ್ವಾಜಾ ಇಮಾನುದ್ದೀನ (ಖ್ವಾಜ್ಯಾ ಇಮಾದುದ್ದೀನ) ಎಂಬ ಹೆಸರಿನ ಗುರ್ಜರಸ್ಥಾನದ ವ್ಯಾಪಾರಿಯೊಬ್ಬ ಸಾವಾ ನಗರಕ್ಕೆ ಬಂದಿದ್ದನು. ಅವನು ತುರ್ಕಸ್ಥಾನದ ಹಲವಾರು ಉತ್ತಮ ಗುಲಾಮರನ್ನು ಮಾರಾಟ ಮಾಡಲು ತಂದಿದ್ದನು. ಅವರಲ್ಲಿಯ ಒಬ್ಬನ ರೂಪ ಲಾವಣ್ಯ ಹಾಗೂ ವಯಸ್ಸಿನಿಂದ ರಾಜಕುಮಾರ ಯೂಸಫನಂತೆ ಇದ್ದುದು ರಾಜಮಾತೆಗೆ ತಿಳಿಯಿತು. ಆ ರಾತ್ರಿ ವ್ಯಾಪಾರಸ್ಥನನ್ನು ಗುಪ್ತವಾಗಿ ಕರೆಸಿ, ಆತನಿಗೆ ಸಾಕಷ್ಟು ಮುತ್ತುರತ್ನಗಳನ್ನು ನೀಡಿ ಯೂಸುಫನಂತಿದ್ದ ಗುಲಾಮನನ್ನು ಕ್ರಯಕ್ಕೆ ತೆಗೆದುಕೊಂಡಳು. ಹಾಗೆಯೇ ಇನ್ನಷ್ಟು ದ್ರವ್ಯವನ್ನು ಕೊಟ್ಟು ಯೂಸುಫನನ್ನು ಆ ವ್ಯಾಪಾರಸ್ಥನಿಗೆ ಕೊಟ್ಟು, ಅಂದೇ ಊರು ಬಿಟ್ಟು ಹೋಗಲು ತಿಳಿಸಿದಳು. ಇತ್ತ ಕ್ರಯಕ್ಕೆ ಪಡೆದ ಗುಲಾಮನಿಗೆ ವಿಶಪ್ರಾಶನ ಮಾಡಿಸಿದಳು. ಆತನ ಮುಖ ಕಪ್ಪಿಟ್ಟು ಸತ್ತಾಗ, ಶವವನ್ನು ಎದುರಿಟ್ಟುಕೊಂಡು ರಾಜಕುಮಾರ ಯೂಸುಫ ಸತ್ತನೆಂದು ಹೊರಳಾಡಿ ಅಳಹತ್ತಿದಳು. ಇದನ್ನು ಕೇಳಿ ಮಂತ್ರಿಜನ ಅರಮನೆಗೆ ಬಂದು ಘಟನೆಯನ್ನು ನೋಡಿ ರಾಜಮಾತೆಗೆ ಸಾಂತ್ವನ ಹೇಳಿ ರಾಜಕುಮಾರನಿಗೆ ಯೋಗ್ಯವಾದ ಅಂತ್ಯಕ್ರಿಯೆಗಳನ್ನು ಮಾಡುವ ವ್ಯವಸ್ಥೆ ಮಾಡಿದರು.

ಇತ್ತ ಖ್ವಾಜಾ ಇಮಾನುದ್ದೀನ ವ್ಯಾಪಾರಿಗೆ ತನ್ನ ಅಪೇಕ್ಷೆಗೆ ಮೀರಿ ದೊರೆತ ಧನ ಹಾಗೂ ದ್ರವ್ಯಗಳಿಂದ ಖುಶಿಯಾಗಿ, ಅಂದೇ ರಾತ್ರಿ ಆತ ಊರು ಬಿಟ್ಟು ಹೊರಟು, ಅಲ್ಲಿಂದ ಸಾವಾ ನಗರಕ್ಕೆ ಬಂದು ವಾಸಿಸಹತ್ತಿದನು. ರಾಜಕುಮಾರ ಯೂಸುಫನನ್ನು ಕಾಪಾಡುವಲ್ಲಿ, ಅವನ ಪಾಲಿನ ಪೋಷಣದಲ್ಲಿ ಆತ ತನ್ನ ಕರ್ತವ್ಯದಲ್ಲಿ ಕಿಂಚಿತ್ತು ಕದಲಲಿಲ್ಲ. ಆಗ ಯೂಸುಫನಿಗೆ ಏಳುವರುಷಗಳಾಗಿದ್ದುವು. ಆತ ಶಿಸ್ತಿನಿಂದ ಬೆಳೆಯುವಂತೆ ಒಬ್ಬ ಶಿಕ್ಷಕನನ್ನು ನಿಯಮಿಸಿದನು. ಬಾದಶಹರ ನಡವಳಿಕೆ, ಮನುಷ್ಯರೊಂದಿಗಿನ ನಡವಳಿಕೆ, ಅವರೊಂದಿಗೆ ಯಾವ ನಡವಳಿಕೆಯಲ್ಲಿ ಮಾನ ಮರ್ಯಾದೆಗಳನ್ನು ಹೊಂದಬೇಕು, ಸದ್ಗುಣಗಳನ್ನು ಕಲಿಯಲು ಅವನನ್ನು ಶಿಕ್ಷಕನ ಹತ್ತಿರ ಕಳಿಸಿದನು. ಒಂದು ವರುಷದ ಅನಂತರ ಅವನ ತಾಯಿಯ ಸಂಪರ್ಕದಲ್ಲಿದ್ದ ಒಬ್ಬ ದಾಸಿಯು, ಅನೇಕ ಜನ ಸೇವಕರನ್ನು ಹಾಗು ಮುತ್ತುರತ್ನಗಳೊಂದಿಗೆ ರಾಜಕುಮಾರ ಯೂಸುಫನ ಹತ್ತಿರ ಬಂದಳು. ದಾಸಿಯು ಅವನ ಸೇವೆಯಲ್ಲಿಯೇ ಉಳಿದಳು. ಉಳಿದವರು ಅವನು ಸುಖದಿಂದ ಇದ್ದ ಸುದ್ದಿಯನ್ನು ಹೊತ್ತು ತಿರುಗಿ ಬಂದರು. ಮತ್ತೆ ಕೆಲವು ದಿನಗಳ ನಂತರ ಪುನಃ ಕೆಲವು ಜನರು ತಾಯಿಯಿಂದ ಉತ್ತಮ ಪ್ರಕಾರದ ಮುತ್ತುರತ್ನಗಳನ್ನು ತಂದು ಕೊಟ್ಟು ಆತ ಸುಖದಿಂದ ಇದ್ದ ಸುದ್ದಿಯನ್ನು ತೆಗೆದುಕೊಂಡು ಮರಳಿದರು. ಹೀಗೆ ಪ್ರತಿವರುಷ ಸೇವಕರು ಬರುವುದು

ಮುತ್ತು ರತ್ನಗಳನ್ನು ತಂದು ಕೊಡುವುದು, ರಾಜಕುಮಾರನ ಸುಖ ಸಮಾಚಾರವನ್ನು ಮರಳಿ ತೆಗೆದುಕೊಂಡು ಹೋಗುವುದು ನಡೆಯುತ್ತಿತ್ತು. ರಾಜಕುಮಾರನ ಉತ್ತಮ ಸ್ವಭಾವ ಹಾಗೂ ವಿದ್ಯೆಯನ್ನು ಕಲಿಯುವ ಆಸಕ್ತಿ, ದಿವಸದಿಂದ ದಿವಸಕ್ಕೆ ಸುಖರೂಪವಾಗಿ ಬೆಳೆಯುತ್ತಿರುವ ವಿಷಯವನ್ನಿ ರಾಜಮಾತೆಗೆ ತಿಳಿಸಲಾಗುತ್ತಿತ್ತು. ಈತ ರಾಜನ ಮಗ ಎಂಬ ವರ್ತಮಾನ ಸಾವಕಾಶವಾಗಿ ಸಾವಾ ಶಹರದ ತುಂಬೆಲ್ಲ ಹರಡಿತು. ಎಲ್ಲರಿಗೂ ಈ ವಿಷಯ ತಿಳಿಯುತ್ತಿದ್ದಂತೆ ಸಾವಾ ನಗರದ ಒಡೆಯನಿಗೂ ಈ ಸುದ್ದಿ ತಿಳಿದು ಆಶೆ ಹುಟ್ಟಿತು. ಸೌದಾಗರನ ಹತ್ತಿರ ಹೋಗಿ. ಆಗೀಗ ಹಣವನ್ನು ಪಡೆಯಹತ್ತಿದನು. ಇಮಾನುದ್ದೀನನು ನಗರದ ಒಡೆಯನ ಈ ಉಪದ್ರವವನ್ನು ತಾಳಲಾರದೆ ರಾಜಕುಮಾರನನ್ನು 'ಕುನಾ' ಎಂಬ ನಗರಕ್ಕೆ ಕಳಿಸಿದನು. ಆತ ಅಲ್ಲಿ ಹೋಗಿ ಇರಹತ್ತಿದನು. ಕೆಲವು ದಿವಸಗಳ ನಂತರ ಸಾವಾ ನಗರದ ಒಡೆಯನು ತೀರಿಕೊಂಡನು. ಆಗ ಖ್ವಾಜಾ ಇಮಾನುದ್ದೀನನು ಯೂಸುಫನನ್ನು ಸಾವಾ ನಗರಕ್ಕೆ ಹಿಂತಿರುಗಿ ಕರೆಯಿಸಲು ಸಂಕಲ್ಪ ಮಾಡಿದನು. ಈ ಸಮಯದಲ್ಲಿ ಯೂಸುಫನಿಗೆ ಒಂದು ಸ್ವಪ್ನ ದೃಷ್ಟಾಂತವಾಯಿತು. ಸ್ವಪ್ನದಲ್ಲಿ ಖ್ವಾಜಾ ಖಂಜರ ಎಂಬವನು ಬಂದು "ಹೇ ಯೂಸುಫನೆ, ನೀನು ಸಾವಾ ನಗರಕ್ಕೆ ಹೋಗದೆ ಹಿಂದುಸ್ಥಾನದ ಕಡೆಗೆ ಹೋಗು. ನಿನ್ನ ಮನೋರಥವು ಅಲ್ಲಿ ಈಡೇರುತ್ತದೆ. ಪ್ರವಾಸದ ಶ್ರಮದ ಅನಂತರ ಅಲ್ಲಿ ನಿನ್ನ ಬಯಕೆ ಫಲಪ್ರದವಾಗುತ್ತದೆ. ಶ್ರೇಷ್ಠ ರಾಜ್ಯಾಧಿಕಾರ ಹಾಗೂ ಐಶ್ವರ್ಯವು ನಿನಗೆ ಲಭಿಸುತ್ತದೆ" ಎಂದು ಹೇಳಿದಂತಾಯಿತು. ಯೂಸುಫನು ಈ ಸ್ವಪ್ನ ವಿಷಯವನ್ನು ತಿಳಿಸದೆ ಖ್ವಾಜಾ ಇಮಾನುದ್ದೀನನಿಗೆ ಹಿಂದುಸ್ಥಾನದತ್ತ ಹೋಗುವಂತೆ ಹಟ ಹಿಡಿದನು. ಆಗ ಖ್ವಾಜಾ ಇಮಾನುದ್ದೀನನು ಸಾವಾ ನಗರಕ್ಕೆ ಹೋಗುವುದನ್ನು ಬಿಟ್ಟು ಹಿಂದುಸ್ತಾನಕ್ಕೆ ಹೋಗಲು ಯೂಸುಫನೊಂದಿಗೆ ಹಡಗನ್ನು ಏರಿದನು.

ಸನ್ ೮೬೪ (ಕ್ರಿ.ಶ. ೧೪೫೯-೬೦)ರಲ್ಲಿ ಅವರು ಧಾಬೋಳ ಬಂದರದಲ್ಲಿ ಬಂದು ಇಳಿದರು. ಅಲ್ಲಿ ಅವರು ಕೆಲವು ದಿವಸ ಇದ್ದರು. ಅಲ್ಲಿರುವಾಗ ಒಂದು ದಿನ ಯೂಸುಫನು ಬೇಟೆಯಾಡಲು ಹೊರಟು ಸಮುದ್ರದ ದಂಡೆಗೆ ಬಂದನು, ಆಗ ಅವನಿಗೆ ತುಂಬ ನೀರಡಿಕೆಯಾಗಿತ್ತು. ಅದೇ ಹೊತ್ತಿಗೆ ಒಬ್ಬ ಸುಂದರ ತೇಜಸ್ವಿ ವ್ಯಕ್ತಿ - ಯಾವನನ್ನು ಮೊದಲು ಕನಸಿನಲ್ಲಿ ಕಂಡಿದ್ದನೋ ಆತನೇ ಪ್ರಕಟನಾಗಿ ಯೂಸುಫನ ಮುಂದೆ ನಿಂತನು. ಅವನ ಕೈಯಲ್ಲಿ ಸಿಹಿಯಾದ ನೀರು ತುಂಬಿದ ಪಾತ್ರೆ ಇತ್ತು. ಅವನು ಯೂಸುಫನ ಕೈಯಲ್ಲಿ ಪಾತ್ರೆಯನ್ನು ಕೊಟ್ಟು ಹೀಗೆ ನುಡಿದನು. "ನೀರು ಕುಡಿ" ಎನ್ನುತ್ತ ಮತ್ತೆ 'ಮೊದಲು ನೀನು ಕಂಡಿದ್ದ ಕನಸು ಸತ್ಯವಾಗಿದೆ. ಅದರ ಕುರಿತು ಸಂಶಯ ಬೇಡ, ಆ ದಿಶೆಯಲ್ಲಿ ಇಚ್ಛೆ ಮಾಡು' ಎಂದನು. ಆಗ ಯೂಸುಫನು ನೀರು ಕುಡಿಯುತ್ತಿದ್ದಂತೆ ಆ ಸುಂದರ ಖಂಜರ ಪೈಗಂಬರನು ಅದೃಶ್ಯನಾದನು. ಯೂಸುಫನು ಈ ಹೊಸ ಕಲ್ಯಾಣದಾಯಕ, ಕನಸನ್ನು ಕಂಡು ಆಶ್ಚರ್ಯಚಕಿತನಾದನು. ಆನಂದದಿಂದ ಎದೆಯುಬ್ಬಿ ತೊಟ್ಟಿದ್ದ ಬಟ್ಟೆ ತಿಟಿಮಿಟಿಕೊಂಡು ಹರಿಯಹತ್ತಿತ್ತು.

ಖ್ವಾಜಾ ಇಮಾನುದ್ದೀನ ಮತ್ತು ಯೂಸುಫ ಇಬ್ಬರೂ ಅಲ್ಲಿಂದ ಹೊರಟು ಬೀದರ ರಾಜಧಾನಿಗೆ ಬಂದರು. ಅದೇ ದಿನ (ಬೀದರಿನಲ್ಲಿ) ಖ್ವಾಜಾ ಅಲ್ಲಾಉದ್ದೀನ ಮಹಮ್ಮದ ಕೈಕನಿಯ ಅಧಿಕಾರದ ಸಮಾರಂಭ ನಡೆದಿತ್ತು. ಅಲ್ಲಾಉದ್ದೀನನಿಗೆ 'ಮಲಿಕ ಉತ್ತುಜಾರ' ಎಂಬ ಬಿರುದನ್ನು ನೀಡಲಾಗಿತ್ತು. ಆತನೇ ಅನಂತರ 'ಖ್ವಾಜಾ ಜಹಾನ' ಎಂದು ಮತ್ತು 'ಖಾನ-ಇ-ಕಾವಾನ' ಎಂಬ ಹೆಸರಿನಿಂದಲೂ ಪ್ರಸಿದ್ಧನಾದನು. ಅವನ ಹತ್ತಿರ ಬಹಮನಿ ಬಾದಶಹನ ಕಡೆಯಿಂದ ನಾಲ್ವರು ಬಂದಿದ್ದರು. ಖ್ವಾಜಾ ಇಮಾನುದ್ದೀನನು ಖ್ವಾಜಾ ಅಲ್ಲಾಉದ್ದೀನನ್ನು ಭೆಟ್ಟಿಯಾದನು. ಉಭಯತರು ಒಂದೇ ದೇಶದಿಂದ ಬಂದವರಾದ್ದರಿಂದ ಅತಿ ಬೇಗ ಸಖ್ಯವಾಯಿತು. ರೂಪ-ಲಾವಣ್ಯಗಳಿಂದ ಪ್ರತಿ ಯೂಸುಫನಾಗಿದ್ದ

ಯೂಸುಫನು ಒಂದು ದಿನ ಖ್ವಾಜಾ ಜಹಾನನ ಕಣ್ಣಿಗೆ ಬಿದ್ದನು. ಅವನ ಸ್ವಭಾವ, ನಡಾವಳಿಯನ್ನು ಕಂಡ ಖ್ವಾಜಾ ಜಹಾನನು, 'ಇವನನ್ನು ಬಾದಶಹರ ಶಿಷ್ಯ ಮಂಡಳಿಯಲ್ಲಿ ಸೇರಿಸೋಣ' ಎಂದು ಖ್ವಾಜಾ ಇಮಾನುದ್ದೀನನಿಗೆ ಹೇಳಿದನು. ಆ ದಿನಗಳಲ್ಲಿ ದಕ್ಷಿಣದೇಶದಲ್ಲಿ ನಗರದ ದೊಡ್ಡ ಮನುಷ್ಯರ ಮಕ್ಕಳನ್ನು ಬಾದಶಹರ ಶಿಷ್ಯ ಮಂಡಳಿಯಲ್ಲಿ ಸೇರಿಸುವುದು ಸಾಮಾನ್ಯವಾಗಿತ್ತು. ಅನಂತರ ಅವರವರ ದೈವ ಬಲ, ಬುದ್ಧಿಗಳ ಬಲದಂತೆ ಉನ್ನತ ಸ್ಥಾನ ಪಡೆಯಲು ಸಾಧ್ಯವಾಗುತ್ತಿತ್ತು. ಕೆಲವೇ ದಿನಗಳಲ್ಲಿ ದೈವಬಲದಿಂದ ಮತ್ತು ಪ್ರಾರಬ್ಧ ಬಲದಿಂದ ಅವರ ಮನೋರಥವು ಪೂರ್ಣವಾಗಿ, ಸಚಿವರಾಗಿಯೋ, ಇಲ್ಲವೆ ಸರದಾರ ಪದವಿಯನ್ನೊ ಪಡೆಯುತ್ತಿದ್ದರು. ಖ್ವಾಜಾ ಇಮಾನುದ್ದೀನನು ಈ ಮಾತುಗಳನ್ನು ಕೇಳಿ, ಮೊದಲು ಇದು ಅಸಂಭವವೆಂದು ತಿಳಿದು ಬೇಡವೆಂದನು. ಕೊನೆಗೆ ಅಲ್ಲಾನ ಇಚ್ಛೆ ಇದ್ದರೆ, ಯೂಸುಫನ ದೈವಬಲವೇ ಅಧಿಕವಾಗಿದ್ದರೆ, ಪ್ರಾರಬ್ಧದ ಶ್ರೇಷ್ಠತ್ವವನ್ನು ವಿಚಾರಿಸಿ ಒಪ್ಪಿಕೊಂಡನು. ಯೂಸುಫನನ್ನು ಬಾದಶಹನ ಖಾಸಾಶಿಷ್ಯ ಮಂಡಳಿಯಲ್ಲಿ ಸೇರಿಸಿದನು. ಆದರೆ ಎಲ್ಲ ಚರಿತ್ರಕಾರರು ಮೂಲ ವಿಷಯವನ್ನು ತಿಳಿಯದೆ, ವಿಚಾರಮಾಡದೆ ಯೂಸುಫ ಆದಿಲಖಾನನ ವಿಷಯದಲ್ಲಿ ಆತನೊಬ್ಬ ತುರ್ಕಿ ಮೂಲದ ಗುಲಾಮನೆಂದೂ, ಅವನನ್ನು ಮಾರಲು ಇಲ್ಲಿಗೆ ತಂದರೆಂದೂ ಬರೆದಿದ್ದಾರೆ.

ಸುಲ್ತಾನ ಮಹ್ಮದ ಬಹಮನಿಯ ಖಾಸಾ ಶಿಷ್ಯರ ಬಳಗದಲ್ಲಿ ಸೇರಿದಮೇಲೆ ಯೂಸುಫನು ಅಲ್ಲಿಯ ಉತ್ತಮ ಜನರ ಸೇವೆ ಮಾಡಿದನು. ತನ್ನ ದೈವಬಲದಿಂದ ಮತ್ತು ಹುಟ್ಟಿನಿಂದಲೇ ಜಾಣನಾದುರಿಂದ ತನ್ನ ಸ್ಥಾನದಲ್ಲಿ ದಿನದಿಂದ ದಿನಕ್ಕೆ ಪ್ರವರ್ಧಮಾನನಾದನು. ಕಾಲ-ಕಾಲಕ್ಕೆ ಶ್ರೇಷ್ಠ ಸ್ಥಾನಗಳನ್ನು ಪಡೆಯುತ್ತ ಹೋದನು. ಖ್ವಾಜಾ ಜಹಾನನು ಆತನನ್ನು ತನ್ನ ಮಗನ ಸಮಾನವಾಗಿ ಕಾಣುತ್ತಿದ್ದನು. ಮನಃ ಪೂರ್ವಕವಾಗಿ ಆತನ ಸಂರಕ್ಷಣೆಯನ್ನು ಮಾಡುತ್ತಿದ್ದನು. ಕೆಲವೇ ದಿನಗಳಲ್ಲಿ ಸುಲ್ತಾನ ಮಹ್ಮದನ ಸೈನ್ಯದಲ್ಲಿ ಪ್ರಮುಖ ಹುದ್ದೆಯನ್ನು ಪಡೆದನು. ಮೊದಲು ಯೂಸುಫ ಆದಿಲಖಾನನೆಂದು, ಅನಂತರ 'ಮೇಜಾರಫಿಯಾ' ಎಂದು, ಮೂರನೆಯದಾಗಿ 'ಮಲೆ-ಕುಜರ್ಕ' ಎಂಬ ಬಿರುದುಗಳನ್ನು ಪಡೆದನು. ಸನ್ ೮೬೭ರಲ್ಲಿ (ಕ್ರಿ.ಶ. ೧೪೬೧-೬೨) ವಿಜಾಪುರದಲ್ಲಿ ಬಾದಶಾಹಿಯ ಧ್ವಜವನ್ನು ನೆಟ್ಟನು.[೧] ವಿಜಾಪುರದ ವಶದಲ್ಲಿದ್ದ ಎಲ್ಲ ಹಳ್ಳಿಗಳಿಗೂ, ವಿಜಾಪುರಕ್ಕೂ ಬಾದಶಹನಾದನು.

## ೨. ಯುಸೂಫ ಆದಿಲಶಹನ ಉತ್ಪತ್ತಿಯ ಎರಡನೆಯ ವರ್ಣನೆ

ರಫೀಯುದ್ದೀನ ಶಿರಾಜಿಯ ಹೇಳಿಕೆ ಹೀಗಿದೆ. 'ನಾನು ಸನ್ ಸಮಾನ ವ ಸಿತ್ತೈನ ವ ತಿಸಾಮಯಾ (ಕ್ರಿ.ಶ ೧೫೬೭-೬೮) ವರುಷ ವ್ಯಾಪಾರಕ್ಕಾಗಿ ನಾನಾ ತರಹ ಪದಾರ್ಥಗಳೊಂದಿಗೆ ದಕ್ಷಿಣ ದೇಶಕ್ಕೆ ಬಂದೆನು.[೨] ಸಾಗರ ಕಸಬಾದಲ್ಲಿ ಸಾಗರ ಎಂಬ ಪಟ್ಟಣ ಪ್ರಸಿದ್ಧವಿದೆ. ಅಲ್ಲಿಗೆ ಬಂದು ಮುಟ್ಟಿದೆನು. ಖರೀದಿ ವಿಕ್ರಿಯಲ್ಲಿ ಮಗ್ನನಾದೆನು. ಆ ಊರಿನಿಂದ ಎರಡೂವರೆ ಕೋಸು ಅಂತರದಲ್ಲಿ 'ಕೌಲಾ' ಎಂಬ ಕಸಬಾ ಇದೆ. ಆ ಊರಿನಲ್ಲಿ ಯೂಸುಫ ಆದಿಲಶಾಹನ ಹಾಗು ಅವನ ವಂಶಸ್ಥರ ಸಮಾಧಿಗಳಿವೆ.[೩]

---

೧. ಫಿರಿಸ್ತಾ ಹಿಜರಿಸನ್ ೮೯೫ (ಕ್ರಿ.ಶ. ೧೪೮೯-೯೦)ಎಂದಿದ್ದಾನೆ. ಬ್ರಿಗ್ಸ ಸಂ. ೩ ಪು.೯

೨. ಕ್ರಿ.ಶ. ೧೫೬೫ ರ ರಕ್ಕಸಗಿ ತಂಗಡಗಿ ಕಾಳಗದಲ್ಲಿ ರಫೀಯುದ್ದೀನನು ಭಾಗವಹಿಸಿದ್ದಾನೆ. ಆ ಮೊದಲೆ ಅವನು ಬಂದಿರಲು ಸಾಧ್ಯವಿದೆ (ಅನುವಾದಕ)

೩. ಸಮಾಧಿಗಳಿದ್ದ ಊರಿನ ಇಂದಿನ ಹೆಸರು 'ಗೋಗಿ' (ಕಲಬುರ್ಗಿ ಜಿಲ್ಲೆ) - ಅನುವಾದಕ.

ಅಲ್ಲಿಯ ಉಸ್ತುವಾರಿಗಾಗಿ ನೌಕಾಸೇನೆಯ (ಲಂಗರ) ಖರ್ಚಿನಲ್ಲಿಯ ಸೇವಕ ಜನರನ್ನು ನಿಯಮಿಸಿದ್ದರು. ನೂರು ಜನ ಸೇವಕರನ್ನು ಸಂರಕ್ಷಣೆಗಾಗಿ, ಅದರಂತೆ ಸರ್ವ ಸೇವೆಗಳಿಗೆ, ಮತ್ತು ಹುದ್ದೇದಾರರನ್ನು, ಮತ್ತೆ ಕೆಲವರು ಫಾತೆ ಕೊಡಲು, ದಾನ ಮಾಡಲು, ಮತ್ತು ಪಾರುಪತ್ಯಮಾಡಲು ನಿಯಮಿಸಲಾಗಿತ್ತು. ಎಲ್ಲ ಸೇವಕ ಜನರಲ್ಲಿ ಶಮಸುದ್ದೀನ ಖಂಜರೀ ಎಂಬವನು ಧಾರ್ಮಿಕನೂ ಹಾಗು ಒಳ್ಳೆಯ ನಡತೆಯವನೂ ಆಗಿದ್ದನು. ಆತನ ವಯಸ್ಸು ಸುಮಾರು ತೊಂಭತ್ತರ ಮೇಲೆ ಇದ್ದಿತು. ಸಾಕಷ್ಟು ಪ್ರವಾಸ ಮಾಡಿದವನಾಗಿದ್ದನು. ಆತ ಯೂಸುಫ ಆದಿಲ್‌ಖಾನನ ಕಾಲದ ಹಳೆಯ ಪ್ರಾಮಾಣಿಕ ನೌಕರರಲ್ಲೊಬ್ಬನಾಗಿದ್ದನು. ಅವನು ಅನಂತರ ಯೂಸುಫನ ಸಮಾಧಿಯ ಉಸ್ತುವಾರಿಯನ್ನು ಮಾಡಿದನು. ಆತನನ್ನು ಭೆಟ್ಟಿಯಾದೆ ಮತ್ತು ಸ್ನೇಹ ಸಂಪಾದಿಸಿದೆ. ಆಗ ಒಮ್ಮೆ ಶಮಸುದ್ದೀನನು ಯೂಸುಫ ಆದಿಲಶಹನ ಕಾರ್ಯಾರಂಭವನ್ನು ಹಾಗು ಆತನ ಮೂಲ ವಂಶಾವಳಿಯನ್ನು ಸವಿಸ್ತಾರವಾಗಿ ಹೀಗೆ ಹೇಳಿದ್ದನು.

ಹಸನಬೇಗ ರಾಜ್ಯವಾಳುತ್ತಿದ್ದ ಕಾಲದಲ್ಲಿ ನಾನು ಹಿತ್ರ ಎಂಬ ಪಟ್ಟಣದಲ್ಲಿ ವಾಸಿಸುತ್ತಿದ್ದೆನು. ಆಗ ಉಮರಾ ಜ್ಯಾಹನ್‌ಶಾಹ ಎಂಬುವನು ದ್ವೇಷ ಸಾಧಿಸುತ್ತಿದ್ದಾನೆಂಬ ಸುದ್ದಿ ಪ್ರಕಟವಾಯಿತು. ಒಬ್ಬರೊಬ್ಬರು ಮುಖತಿರುವಿ ಉಭಯತರು ಪರಸ್ಪರ ಒಳಸಂಚಿನಲ್ಲಿ ಮಗ್ನರಾದರು. ಹಸನ ಬೇಗನು ಸಮಯ ಸಾಧಿಸಿ ಜ್ಯಾಹನ್ ಶಾಹನ ಪ್ರದೇಶವನ್ನು ತೆಗೆದುಕೊಳ್ಳುವ ಸಂಕಲ್ಪ ಮಾಡಿದನು. ಆಗ ತಬರೀನ ಎಂಬಲ್ಲಿಗೆ ಮುಟ್ಟುವ ಹೊತ್ತಿಗೆ ಜಹಾನ್‌ಶಾಹನು ತೀರಿಕೊಂಡನು.

ಅಜುರ್ಬಾನ್, ಖುರಾಸೀನ, ಆರಾಕೀನ, ಪಾರಸ ಮತ್ತು ಕರಮಾನಗಳನ್ನು ಸಹಿತವಾಗಿ ಆತನ ಸಂಪೂರ್ಣ ಪ್ರದೇಶಗಳನ್ನು ಹಸನ್‌ಬೇಗನು ತನ್ನ ಕೈವಶಮಾಡಿಕೊಂಡನು. ಪ್ರತಿಯೊಂದು ಪಟ್ಟಣ, ಪ್ರದೇಶಗಳಿಗೆ ತನ್ನ ಪರವಾಗಿ ಮುಖ್ಯಸ್ಥರನ್ನು, ಮಾಮಲೇದಾರರನ್ನು ನಿಯಮಿಸಿದನು. ಅದೇ ಪ್ರಕಾರ ಅಹ್ಮದ ಬೇಗ ಎಂಬ ಹೆಸರಿನ ತನ್ನ ಸೋದರಳಿಯನನ್ನು ಸಾವಾ ಪ್ರದೇಶಕ್ಕು ಹಾಗು ಸಾವಾ ನಗರಕ್ಕೂ ಒಡೆಯನನ್ನಾಗಿ ನಿಯಮಿಸಿದನು. ಸಂಪೂರ್ಣ ಸಿದ್ಧತೆಗಳೊಂದಿಗೆಯೇ ಅಹ್ಮದ ಬೇಗನು ಆ ಪ್ರದೇಶಕ್ಕೆ ಬಂದು ಮುಟ್ಟಿದನು. ಸಂರಕ್ಷಣೆ, ನ್ಯಾಯಪಾಲನೆ ಹಾಗೂ ರೈತರ ಪಾಲನೆಯನ್ನು ಮಾಡುತ್ತ ಪ್ರದೇಶವನ್ನು ಅಭಿವೃದ್ಧಿ ಪಡಿಸಿದನು. 'ಸಾವಾ' ದಲ್ಲಿಯ ಶ್ರೇಷ್ಠ ಜನರ ಕುಲೀನ ಹೆಣ್ಣುಮಗಳೊಂದಿಗೆ ಆತನ ಮದುವೆಯಾಯಿತು. ಅವಳಿಗೆ ಮಕ್ಕಳು ಹುಟ್ಟಿದುವು. ಅನಂತರ ಒಂದು ದಿನ ಅಹ್ಮದಬೇಗನು ಸತ್ತನು. ಅವನ ಮಕ್ಕಳಲ್ಲಿಯ ಮಹಮೂದಬೇಗ ಎಂಬುವನು ಸಾವಾ ನಗರದಲ್ಲಿ ತಂದೆಯ ಸಿಂಹಾಸನವನ್ನು ಏರಿದನು. ಆತನೂ ಕೂಡ ತಂದೆಯಂತೆ ನ್ಯಾಯ ನಿಷ್ಠುರನಾಗಿ ಪ್ರಜೆಗಳ ಪಾಲನೆ ಮಾಡಿ ಕೀರ್ತಿಯನ್ನು ಸಂಪಾದಿಸಿದನು. ಇಪ್ಪತ್ತು ವರುಷಗಳ ವರೆಗೆ ಸಂಸಾರ ಮಾಡಿ ಜಗತ್ತಿನಲ್ಲಿ ಕೀರ್ತಿವಂತನಾಗಿ ಬಾಳಿದನು. ಕೊನೆಗೆ ಅವನ ರಾಜ್ಯದಲ್ಲಿ ಗದ್ದಲವಾಯಿತು. ಆಗ ಅಧಿಕಾರವರ್ಗ ಬದಲಾಯಿತು. ಕೆಟ್ಟದಾಗಿ ನಡೆದುಕೊಳ್ಳಹತ್ತಿದರು. ಈ ಕಾರಣದಿಂದಾಗಿ ಈಸ್ತೆಫರ್ ಮಿರ್ಜಾನ ಜೊತೆಗೆ ವೈರತ್ವವನ್ನು ಕಟ್ಟಿಕೊಳ್ಳಬೇಕಾಯಿತು. ಅದರಿಂದಾಗಿ ಸಾವಾ ನಗರದಲ್ಲಿ ನಡೆದ ಯುದ್ಧದಲ್ಲಿ ಮಹಮೂದ ಬೇಗನನ್ನು ಕೊಲ್ಲಲಾಯಿತು. ಮಹಮೂದ ಬೇಗನ ವಂಶಸ್ಥರಲ್ಲಿಯ ಪ್ರತಿಯೊಬ್ಬರೂ ಶತ್ರುವಿನ ಭಯದಿಂದ ದೇಶಾಂತರ ಓಡಿಹೋದರು. ಯೂಸುಫ ಬೇಗನು ಮಹಮೂದ ಬೇಗನ ಜ್ಯೇಷ್ಠ ಪುತ್ರನಾಗಿದ್ದನು. ಬಾಲ್ಯದಲ್ಲಿಯೇ ಆತನು ಆಸ್ಥಾಯಿನ್ ನಗರದಲ್ಲಿ ಇರುತ್ತಿದ್ದನು. ಅಲ್ಲಿಯೂ ಶತ್ರುವಿನ ಭಯದಿಂದ ಇರಲಾಗದೆ ಶಿರಾಜ ನಗರಕ್ಕೆ ಬಂದನು. ಅಲ್ಲಿ ಐದು ವರುಷ ಕಳೆದನು. ಅಲ್ಲಿಯೂ ಶತ್ರುವಿನ ಭಯದಿಂದಾಗಿ ಮತ್ತು ಆತನ

ದುರ್ದೈವದಿಂದಾಗಿ ನಿರುಪಾಯನಾಗಿ ಹಿಂದುಸ್ಥಾನಕ್ಕೆ ಹೋಗುವ ಸಂಕಲ್ಪ ಆತನ ಮನಸ್ಸಿನಲ್ಲಿ ಬಂದಿತು. ಲಾರ ನಗರಕ್ಕೆ ಬಂದನು. ಅಲ್ಲಿಯ ಮಸೀದಿಯೊಂದರಲ್ಲಿ ಉಳಿದುಕೊಂಡಿದ್ದಾಗ ಆತನಿಗೆ ಒಂದು ಕನಸು ಬಿದ್ದಿತು. ಕನಸಿನಲ್ಲಿ ತೇಜಸ್ವಿಯಾದ, ಪ್ರೌಢ ಸ್ವಭಾವದ ಒಬ್ಬ ವೃದ್ಧನು ಬಂದು ಎಷ್ಟೋ ಒಣಗಿದ ರೊಟ್ಟಿಗಳನ್ನು ಯೂಸುಫನ ಕೈಯಲ್ಲಿ ಕೊಡುತ್ತ ಹೇಳಿದನು. 'ನೀನು ದಕ್ಷಿಣ ದೇಶಕ್ಕೆ ಹೋಗಬೇಕು. ಯಾಕೆಂದರೆ ನಿನ್ನ ರೊಟ್ಟಿ ಅಲ್ಲಿ ಬೆಂದಿದೆ' ಎಚ್ಚರವಾದಂತೆ ಕನಸನ್ನು ನೆನೆದು ಆನಂದಪಟ್ಟನು. ಅಲ್ಲಾನ ಸೂಚನೆಯಂತೆ ಹಾರೂನ ಬಂದರಕ್ಕೆ ಬಂದನು. ಅಲ್ಲಿಗೆ ಮುಟ್ಟುತ್ತಿದ್ದಂತೆ, ಅಷ್ಟರಲ್ಲಿ ಖ್ವಾಜಾ ಜೈನುಲ್ ಅಬಿದೀನಖಾನ ಎಂಬ ಹೆಸರಿನ ವ್ಯಾಪಾರಿಯೊಬ್ಬನು ಸುಲ್ತಾನ ಮಹಮೂದ ಬಹಮನಿಯಿಂದ ಅನೇಕ ತರದ ಪದಾರ್ಥಗಳನ್ನು ತಂದು ಅವುಗಳಲ್ಲಿಯ ಹಲವಾರು ಪದಾರ್ಥಗಳನ್ನು ಮಾರಿದ್ದನು. ಇಲ್ಲಿಯ ಅನೇಕ ಉತ್ತಮ ಪದಾರ್ಥಗಳನ್ನು ಖರೀದಿಸಿದ್ದನು. ಅವುಗಳಲ್ಲಿ ವಾಯುವೇಗದ ಕುದುರೆಗಳು, ತುರ್ಕಿ ಮೂಲದ ಸೇವಕರು, ಪ್ರತಿಯೊಂದು ಪ್ರಕಾರದ ಚಿಲ್ಲರೆ ಪದಾರ್ಥಗಳು, ಭಾರೀ ಕಿಮ್ಮತ್ತಿನ ಆಭರಣಗಳನ್ನು ಖರೀದಿಸಿ, ಅವುಗಳೊಂದಿಗೆ ಹಡಗಿನ ಮೂಲಕ ತಿರುಗಿ ಹೋಗುವ ಪ್ರಯತ್ನದಲ್ಲಿದ್ದನು. ಆ ಸಮಯದಲ್ಲಿಯೇ ಖ್ವಾಜಾ ಜೈನುಲ್ ಆಬಿದೀನ ಹಾಗು ಯೂಸುಫನ ಸಮಾಗಮವಾಯಿತು. ಕಟ್ಟುಮಸ್ತಾದ, ರೂಪವಂತ ಯೂಸುಫನನ್ನು ಕಂಡು ಮಮತೆಯಿಂದ ತನ್ನೊಂದಿಗೆ ಹಡಗಿನಲ್ಲಿ ಕರೆದುಕೊಂಡು ಬಂದನು. ಹಡಗಿನಲ್ಲಿ ಬೀದರದ 'ಖಾನ ಸಾಕರ'ನ ಸ್ನೇಹವಾಗಿ ಅವನೊಂದಿಗೆ ಬೀದರಿಗೆ ಬಂದು ಕೆಲವು ದಿನ ಕಳೆದನು. ಈಗಲೂ ಕೂಡ ಯೂಸುಫನಿಗೆ ಶತೃಗಳ ಪ್ರಾಣ ಘಾತುಕದ ಭಯ ಆವರಿಸಿತ್ತು. ಅವರನ್ನು ಸದೆಬಡಿಯುವ ಪ್ರಾತಃಕಾಲದ ಪ್ರಕಾಶದ ಪ್ರಸಿದ್ಧಿಗೆ ಇನ್ನೂ ಅವಕಾಶವಿತ್ತು. ಆದ್ದರಿಂದ ಬಂದದ್ದು ತಪ್ಪಾಯಿತೆಂದು ತಿಳಿದು ಪುನಃ ಸ್ವದೇಶಕ್ಕೆ ಹೊರಟನು. ಮತ್ತೆ 'ಲಾರ' ಪಟ್ಟಣಕ್ಕೆ ಬಂದು ಮುಟ್ಟಿದನು. ಮತ್ತೆ ಮೊದಲಿನ ಮಸೀದೆಯಲ್ಲಿಯೇ ಉಳಿದುಕೊಂಡನು. ಆಗ ಪುನಃ ಮೊದಲಿನಂತೆ ಸ್ವಪ್ನ ಬಿದ್ದಿತು. 'ನಿನ್ನನ್ನು ದಕ್ಷಿಣ ದೇಶಕ್ಕೆ ಕಳುಹಿಸಿದಾಗಲೂ ನೀನು ತಿರುಗಿ ಬರುವ ಅವಸರದ ಕಾರಣವಾದರೂ ಏನು? ಮತ್ತೆ ನೀನು ಅಲ್ಲಿಗೇ ಹೋಗು, ಯಾಕೆಂದರೆ ನಿನ್ನ ದೀಪ ಉಜ್ವಲವಾಗಿ ಬೆಳಗುವುದು ಅಲ್ಲಿಯೆ' ಎಂದು ಆ ಪುರುಷನು ಹೇಳಿದಂತಾಯಿತು. ಹೀಗೆ ದೈವವು ಮತ್ತೆ ಅವನನ್ನು ದಕ್ಷಿಣಕ್ಕೆ ಕಳಿಸಿತು. ಆತನು ಅದೇ ಮೊದಲಿನ ಸ್ಥಳಕ್ಕೆಯೇ ಬಂದು, ಸ್ನೇಹಿತನಾಗಿದ್ದ ಖಾನ ಸಾಕರನ ಮನೆಯಲ್ಲಿಯೇ ಉಳಿದುಕೊಂಡನು. ಸಿಪಾಯಿಯಾಗಿ ಕೆಲಸಕ್ಕೆ ಸೇರಿದನು. ಬಿಲ್ಲು ವಿದ್ಯೆ, ಈಟಿ, ಕತ್ತಿವರಸೆಗಳ ಅಭ್ಯಾಸದೊಂದಿಗೆ ಕುಸ್ತಿ ವಿದ್ಯೆಯನ್ನು ಕಲಿಯ ಹತ್ತಿದನು, ಅಭ್ಯಾಸದ ವಿಷಯದಲ್ಲಿ ಅವನೆಂದಿಗೂ ಆಲಸಿಯಾಗಿರಲಿಲ್ಲ. ಅಲ್ಲಿಯ ಗರಡೀ ಮನೆಯೊಂದರಲ್ಲಿ ಪೈಲವಾನನಿಂದ ಕುಸ್ತಿಯ ಆಟದ ಕಲೆಯನ್ನು ಕರಗತ ಮಾಡಿಕೊಂಡನು. ಕೆಲವೆ ದಿನಗಳಲ್ಲಿ ಕುಸ್ತಿ ಕಲೆಯಲ್ಲಿ ಮಾನ್ಯತೆ ಪಡೆದನು.

ಕರ್ಮಧರ್ಮ ಸಂಯೋಗದಿಂದ ಆ ದಿನ ದಿಲ್ಲಿ ನಗರದಿಂದ ಒಬ್ಬ ಪೈಲವಾನನು ಬಂದಿದ್ದನು. ಆತ ಪ್ರಪಂಚದಲ್ಲಿಯೆ ಪ್ರಸಿದ್ಧನಾದ ಕುಸ್ತಿಪಟುವಾಗಿದ್ದನು. ಆ ಕಾಲದಲ್ಲಿಯ ಪೈಲವಾನ-ಸರದಾರರನ್ನು ಮತ್ತು ತನ್ನ ಸರಿ ಸಮಾನರಾದ ಬಹುತೇಕ ಪೈಲವಾನರನ್ನು ಕುಸ್ತಿಯಲ್ಲಿ ಕೆಡವಿದ್ದನು. ಎಲ್ಲ ಸ್ಥಳಗಳ ಸಭೆಯಲ್ಲಿಯೂ ಅವನಿಗೆ ಯಶ ಮತ್ತು ಬಹುಮಾನಗಳು ದೊರೆತಿದ್ದುವು 'ಸರಪೈಲವಾನ' ಎಂಬ ಜಯಪತ್ರವನ್ನು ಪಡೆದು ಬೀದರ ರಾಜಧಾನಿಗೆ ಬಂದು ಮುಟ್ಟಿದ್ದನು. ಬೀದರದಲ್ಲಿ ನಿತ್ಯವೂ ರಾಜನ ಸಮ್ಮುಖದಲ್ಲಿ ಪೈಲವಾನರು ಬಂದು ತಂತಮ್ಮ ವಿದ್ಯೆಯನ್ನು ತೋರಿಸುತ್ತಿದ್ದರು. ಬಾದಶಹನು ಅವರವರ

ಯೋಗ್ಯತೆಗೆ ತಕ್ಕಂತೆ ಬಹುಮಾನಗಳನ್ನು ವಸ್ತ್ರಗಳನ್ನು ನೀಡುತ್ತಿದ್ದನು. ಆ ದಿಲ್ಲಿ ಪೈಲವಾನನೂ ತನ್ನ ಶಿಷ್ಯಕುಲದೊಂದಿಗೆ ದರಬಾರಕ್ಕೆ ಬಂದನು. ನಗರದ ಪ್ರತಿಯೊಬ್ಬ ಪೈಲವಾನನೊಂದಿಗೆ, ತಾನು ಕಲಿಸಿದ ಶಿಷ್ಯರನ್ನು ಕುಸ್ತಿಯಾಡಲು ಬಿಟ್ಟು, ಅವರನ್ನು ಕೆಡವಿ, ಈ ವಿದ್ಯೆಯ ಸೂಕ್ಷ್ಮ ಕಲೆಯನ್ನು ಬಾದಶಹರ ಹಾಗೂ ಅವನ ದರಬಾರದ ಜನರೆದುರಿಗೆ ತೋರಿಸುತ್ತಿದ್ದನು. ಕಾರಭಾರಿ ಜನರು ದರಬಾರದ ಜನರು ಹಾಗೂ ಈ ಮನೋರಂಜನೆಯನ್ನು ನೋಡಲು ಬಂದ ಜನರೆಲ್ಲರೂ ಈ ವಿದ್ಯೆಯನ್ನು, ಆ ಪೈಲವಾನನು ತೋರಿಸುವ ವಸ್ತಾದಗಿರಿಯನ್ನು ಕಂಡು ಸಂತೋಷ ಪಡುತ್ತಿದ್ದರು. ಆದರೆ ಬಾದಶಹ ಮಾತ್ರ ಈ ಗೊಡ್ಡು ಸಂತೋಷದಿಂದ ಮನದಲ್ಲಿಯೇ ಖಿನ್ನನಾಗುತ್ತಿದ್ದನು. ಬಾದಶಹನ ಸೂಕ್ಷ್ಮ ಅಂತಃಕರಣವು ಪೈಲವಾನನ ಗರ್ವದ ದೊಡ್ಡ ಭಾರವನ್ನು ಹೊರಲಾಗುತ್ತಿರಲಿಲ್ಲ. ಆದ್ದರಿಂದ ಅವನಿಗೆ ಈ ವಿಷಯದಲ್ಲಿ ಚಿಂತೆಯಾಯಿತು. "ಹೇ ಅಲ್ಲಾ, ನಗರದ ಜನರಲ್ಲಿ ಯಾರನ್ನಾದರೂ ಹುಟ್ಟಿಸು. ಈ ಗೊಡ್ಡು ಹರಟೆ ಹೊಡೆಯುವ ಕುಸ್ತೀ ಪಟುವಿನೊಂದಿಗೆ ಆಡಿ ಸೋಲಿಸಲಿ. ಆಗಲಾದರೂ ಈತ ತನ್ನ ಗೊಡ್ಡು ಆತ್ಮಸ್ತುತಿ ಮಾಡುವುದನ್ನು ಬಿಟ್ಟಾನು".

ಯೂಸುಫನು ಕೂಡ ಬಹಳ ದಿನಗಳಿಂದ ಇಂಥದೊಂದು ಸಂದರ್ಭಕ್ಕಾಗಿ ಕಾಯುತ್ತಿದ್ದನು. ಈ ಯೋಗದಿಂದಲಾದರೂ ದೊಡ್ಡಸ್ತಿಕೆಯನ್ನು ಪಡೆಯಬಹುದು ಎಂಬುದಾಗಿ ಚಿಂತಿಸುತ್ತಿದ್ದನು. ಆತ ಬಾದಶಹನ ಮನದಲ್ಲಿಯ ಭಾವವನ್ನು ಕಿಂಚಿತ್ ತಿಳಿದುಕೊಂಡನು. ಬಾದಶಹನ ಆಸ್ಥಾನದಲ್ಲಿಯೇ ಖಾನ ಸಾಕರನು ಬಹು ಮುಖ್ಯ ಅಧಿಕಾರದಲ್ಲಿದ್ದನು. ಅವನ ಮುಖಾಂತರ ಬಾದಶಹನಿಗೆ ತನ್ನ ವಿನಂತಿಯನ್ನು ಸಲ್ಲಿಸಿದನು. ಬಾದಶಹರು ಅಪ್ಪಣೆಕೊಟ್ಟರೆ ಈ ಪೈಲವಾನನನ್ನು ಕೆಡುವುತ್ತೇನೆ ಎಂದನು. ಬಾದಶಹನು ಈ ವಿನಂತಿಯಿಂದ ಪರಮ ಸಂತೋಷಪಟ್ಟು ಆಜ್ಞೆ ಮಾಡಿದನು. ಅದರಂತೆ ಮತ್ತೊಂದು ಶುಕ್ರವಾರದಿನ ಸಂಪ್ರದಾಯದಂತೆ ಎಲ್ಲ ಗುಣವಂತರೂ ಸೇರಿದರು. ಆ ದಿಲ್ಲೀ ಪೈಲವಾನನೂ ತನ್ನ ಶಿಷ್ಯಗಣದೊಂದಿಗೆ ಬಂದನು. ಯೂಸುಫನು ಕೂಡ ತನ್ನ ಮಂಡಳಿಯೊಂದಿಗೆ ಕುಸ್ತಿಯಾಡುವ ಸ್ಥಳಕ್ಕೆ ಬಂದು ಕುಳಿತನು. ದಿಲ್ಲಿಯ ಪೈಲವಾನನು ಎಷ್ಟೋ ಬಹುದೊಡ್ಡ ಕುಸ್ತಿಪಟುಗಳೊಂದಿಗೆ ಆಡಿ ತನ್ನ ಬಲವನ್ನು ತೋರಿಸಿದ್ದನು. ಯೂಸುಫನು ಪೈಲವಾನನ ವೇಷದಲ್ಲಿ ಸಿದ್ಧನಾಗಿ ತನ್ನ ಬದಿಯ ಮೈದಾನದಲ್ಲಿ ಬಂದು ನಿಂತನು. ದಿಲ್ಲಿ ಪೈಲವಾನನು ಯೂಸುಫನ ಕಣ್ಣು ಹಾಗು ಶರೀರವನ್ನು ನೋಡಿ ಚಿಂತೆಯಲ್ಲಿ ಬಿದ್ದನು. ಬಾದಶಹನ ಆಜ್ಞೆಯಾದರೋ ಮೈದಾನದಲ್ಲಿ ಬಂದು ನಿಂತಿದ್ದ ಕುಸ್ತಿ ಪಟುವಿನೊಂದಿಗೆ ಕುಸ್ತಿಯಾಡಬೇಕು. ಪೈಲವಾನನು ತುಸು ಅನುಮಾನದಿಂದ ಮಾತನಾಡಹತ್ತಿದನು. 'ನಾನು ಎಷ್ಟೋ ಪೈಲವಾನರೊಂದಿಗೆ ಕುಸ್ತಿಯಾಡಿರುವೆನು ನಿಜ. ಆದರೆ ಈ ವ್ಯಕ್ತಿಯೊಂದಿಗೆ ಇನ್ನೊಂದು ಶುಕ್ರವಾರದ ದಿನ ಆಡುವೆ. ಆಜ್ಞೆಯಾದರೆ ನನ್ನ ಶಿಷ್ಯನೊಂದಿಗೆ ಆಡಿಸುವೆ' ಎಂದು ಹೇಳಿದ್ದನ್ನು ಕೇಳಿದ ಯೂಸುಫನು ದೊಡ್ಡ ದನಿಯಲ್ಲಿ ಆಹ್ವಾನವನ್ನು ಕೊಡುತ್ತ 'ನಿನಗೆ ಬೇಕಾದವರನ್ನು ಕಳಿಸು' ಎಂದನು. ಅನಂತರ ಅವನ ಶಿಷ್ಯರಲ್ಲಿ ಒಬ್ಬೊಬ್ಬರಾಗಿ ಆಖಾಡಾದಲ್ಲಿ ಬಂದು ಯೂಸುಫನೊಂದಿಗೆ ಕುಸ್ತಿ ಆಡಹತ್ತಿದರು. ಎರಡೋ-ಮೂರು ಪೇಚುಗಳಲ್ಲಿ ಬೀಳುತ್ತಿದ್ದರು. ಆಗ ಎಲ್ಲ ಪೈಲವಾನರ ಸರದಿ ಮುಗಿದಾದಮೇಲೆ ಮುಖ್ಯ ಪೈಲವಾನನಿಗೆ ಆಜ್ಞಾಪಿಸಲಾಯಿತು. 'ಎಷ್ಟೋ ಪೈಲವಾನರೊಂದಿಗೆ ಕುಸ್ತಿಯಾಡಿ ಈತನು ಅರ್ಧ ದಣಿದಿದ್ದಾನೆ. ಈಗ ಅವನೊಂದಿಗೆ ಆಡು' ಎಂದರು. ನಿರುಪಾಯನಾಗಿ ಆ ಪೈಲವಾನನು ಮೈದಾನದಲ್ಲಿ ಬಂದನು. ಯೂಸುಫನೊಂದಿಗೆ ಸೆಣಸಾಟ ನಡೆಯಿತು. ಆಟದ ಒಳ್ಳೆಯ ಪೇಚುಗಳನ್ನು ಉಭಯತರೂ ಹಾಕಿದರು.

ಅಷ್ಟರಲ್ಲಿ ಯೂಸುಫನು ಒಮ್ಮೆಲೆ ಅತಿ ಶೀಘ್ರದಲ್ಲಿ ಒಂದು ಕೈಯನ್ನು ಎರಡು ತೊಡೆಗಳ ಮಧ್ಯ ಇನ್ನೊಂದನ್ನು ಕುತ್ತಿಗೆಯಮೇಲೆ ಹೊಡೆಯುತ್ತ ತಲೆಯಮೇಲೆ ಎತ್ತಿ ಹಿಡಿದು ಕೆಲವು ಹೆಜ್ಜೆಗಳಷ್ಟು ಮುಂದೆ ಬಂದನು. ಬಾದಶಹರ ಸಿಂಹಾಸನದ ಎದುರಿಗೆ ಬಂದು ಭೂಮಿಗೆ ಅಪ್ಪಳಿಸಿದನು. ಆಗ ಒಮ್ಮೆಲೆ ದರಬಾರದ ಜನರು ಕೂಗಿದರು. ಬಾದಶಹನು ಅತ್ಯಂತ ಆನಂದ ತುಂದಿಲನಾಗಿ ತನ್ನ ಮೈಮೇಲಿನ ವಸ್ತ್ರವನ್ನು, ಆಭರಣಗಳನ್ನು ಹಾಗು ಬಹಳಷ್ಟು ಹಣವನ್ನು ಯೂಸುಫನಿಗೆ ಕೊಟ್ಟು ಆತನನ್ನು ಶ್ರೀಮಂತನನ್ನಾಗಿಸಿದನು. ದರಬಾರದ ಕಾರಭಾರಿ ಜನರು ಕೂಡ ಬಾದಶಹನ ರೀತಿಯನ್ನೆ ಅನುಸರಿಸಿ ಪ್ರತಿಯೊಬ್ಬರು ವಸ್ತ್ರ, ಸುವರ್ಣ, ಮುತ್ತುರತ್ನಗಳನ್ನು, ತಲವಾರ, ಮತ್ತು 'ತೀರಕಮಾನಿ' (ಬಿಲ್ಲು) ಮುಂತಾದವುಗಳನ್ನು ಬಹುಮಾನವಾಗಿ ಕೊಟ್ಟರು. ಆ ಕ್ಷಣ ಯೂಸುಫನು ಅಧಿಕಾರಿ ವರ್ಗದಲ್ಲಿ ಬರುವಷ್ಟು ಶ್ರೀಮಂತನಾದನು. ಕೆಲವು ದಿವಸಗಳ ಅನಂತರ ಯೂಸುಫನ ಜಾಣತನವನ್ನು ಪರೀಕ್ಷಿಸಿ ಆತನಿಗೆ 'ಕೊತವಾಲ'ನ ಅಧಿಕಾರವನ್ನು ನೀಡಲಾಯಿತು. ನಗರದ ಕಟ್ಟಡಗಳನ್ನು ನೋಡುವ, ಬಾಜಾರದ ಬಂದೋಬಸ್ತ ಮಾಡುವ ಮತ್ತು ರೌಡಿಗಳನ್ನು, ತುಂಟರನ್ನು, ಕಳ್ಳರನ್ನು ನಿಯಂತ್ರಿಸುವ ಹಾಗೂ ಅವರಿಗೆ ಶಿಕ್ಷೆ ಕೊಡುವ ಅಧಿಕಾರವನ್ನು ನೀಡಲಾಯಿತು. ಅದೇ ರೀತಿಯಾಗಿ ದಿನದಿಂದ ದಿನಕ್ಕೆ ಆತನ ದೈವವು ಪ್ರಕಾಶಮಾನವಾಗಹತ್ತಿತು. ಮುಂದೆ ಕೆಲವು ದಿನಗಳಲ್ಲಿಯೇ ಆತನು ತನ್ನ ಅಧಿಕಾರದಲ್ಲಿ ಪ್ರವರ್ಧಮಾನನಾಗುತ್ತ ವಿಜಾಪುರದಲ್ಲಿ ತನ್ನದೇ ಆದ ರಾಜ್ಯದ ಧ್ವಜವನ್ನು ನೆಟ್ಟನು. ಅದರರ್ಥ ಯೂಸುಫನು ವಿಜಾಪುರದ ಬಾದಶಹನಾದನು.

### ೭. *ಯೂಸುಫನ ಕಾರ್ಯಾರಂಭ :*

ಮೀರ ಇಬ್ರಾಹಿಮ ಅಸದಖಾನಿ ಎಂಬವನು ಯೂಸುಫ ಆದಿಲಶಹನ ಕಾರ್ಯಾರಂಭದ ಅಧ್ಯಾಯವನ್ನು ಬರೆದಿದ್ದಾನೆ. ಈ ಇಬ್ರಾಹಿಮ ಅಸದಖಾನನು ಆದಿಲಶಾಹಿ ರಾಜ್ಯದಲ್ಲಿ ಪ್ರಾಮಾಣಿಕ ಸೇವಕಜನರಲ್ಲೊಬ್ಬನಾಗಿದ್ದನು. ಮತ್ತು ಆ ರಾಜ್ಯದಲ್ಲಿಯ ವಿಶ್ವಾಸಿಕ ನೌಕರ ಜನರಲ್ಲೊಬ್ಬನಾಗಿದ್ದನು. ಅಲಿ ಆದಿಲಶಹನ ಕಾಲದಲ್ಲಿ ಆತನು ತುಂಬ ಹಳೆಯ ಹಾಗು ವಿಶ್ವಾಸಿಕ ಸೇವಕನೆಂದು ಪ್ರಸಿದ್ಧನಾಗಿದ್ದನು. ಆತ ಹೇಳಿದ ಕಥೆಯನ್ನು ಇಲ್ಲಿ ಹೇಳುವುದು ಉಚಿತವೆನಿಸುತ್ತದೆ. ಆದ್ದರಿಂದ ನನ್ನ ಬರವಣಿಗೆಯನ್ನು ಆತನ ಹೇಳಿಕೆಯತ್ತ ತಿರುಗಿಸಬೇಕಾಗಿದೆ. ಆತನು ಹೇಳುತ್ತಾನೆ. ಬಾಹಮನ ಹಾಗು ಅಸಫಂದಯಾರ ದಂಥ ಶ್ರೇಷ್ಠವಂಶದಲ್ಲಿ ಹುಟ್ಟಿದ ಸುಲ್ತಾನ ಮಹಮ್ಮದ ಬಹಮನಿ ಎಂದರೆ ಬಾದಶಹರ ಬಾದಶಹ ಹಾಗು ರಾಜಾಧಿರಾಜನಾಗಿದ್ದನು. ಜಮ್ ಬಾದಶಹನಂತೆ ಪ್ರಸಿದ್ಧಿ, ಫರೀದುನ್ ಬಾದಶಹನ ಯೋಗ್ಯತೆ, ಜಮಶೀದಶಾಹನಂತೆ ವಿಶ್ವಾಸವು ಆತನ ಶ್ರೇಷ್ಠಗುಣಗಳಾಗಿದ್ದುವು. ದಕ್ಷಿಣದಲ್ಲಿಯ ಬಾದಶಾಹೀ ಸತ್ತೆ ಅಲ್ಲಾಉದ್ದೀನ ಬಹಾಮನಿಯಿಂದ ಪ್ರಾರಂಭವಾದದ್ದು ವಂಶಪರಂಪರೆಯಾಗಿ ಆತನವರೆಗೂ ನಡೆದುಕೊಂಡು ಬಂದಿತ್ತು.

ಅಹಮದಾಬಾದ, ಬೀದರಗಳಂಥ ರಾಜಧಾನಿ ಸ್ಥಳಗಳಲ್ಲಿ ಇರಾಣದ ಪೈಲವಾನನೊಬ್ಬ ಇರಾಣದಿಂದ ಹಿಂದುಸ್ಥಾನಕ್ಕೆ ಬಂದಿದ್ದನು. ಆತ, ಆ ಕಾಲದಲ್ಲಿಯ ಅದ್ವಿತೀಯ ಹಾಗು ಕುಸ್ತಿ ವಿದ್ಯೆಯಲ್ಲಿ ಶ್ರೇಷ್ಠ ಕ್ರೀಡಾ ಪಟು ಹಾಗು ಪ್ರಬಲನಾಗಿದ್ದನು. ಆತನಿಗೆ ಏಳುನೂರು ಜನ ಶಿಷ್ಯರಿದ್ದರು. ಪ್ರತಿಯೊಂದು ಪ್ರದೇಶಕ್ಕೂ ಆತ ಬಂದು ಅಲ್ಲಿಯ ನಗರಗಳಲ್ಲಿಯ ಪೈಲವಾನರೊಂದಿಗೆ ಕುಸ್ತಿ ಆಡಿ, ಅವರನ್ನು ಸೋಲಿಸಿ

ಅಧಿಕ ಪ್ರಮಾಣದ ಬಹುಮಾನಗಳನ್ನು, ಕಾಣಿಕೆಗಳನ್ನು ಪಡೆದು ಜಯಪತ್ರಗಳನ್ನು ತೆಗೆದುಕೊಂಡಿದ್ದನು. ಆತ ಬೀದರ ನಗರಕ್ಕೆ ಬಂದನು. ಅಲ್ಲಿಯೂ ಕೂಡ ತನ್ನ ಸರಿಸಮಾನರಾದ ಪೈಲವಾನರೊಂದಿಗೆ ಕುಸ್ತಿ ಆಡಲು ಆಹ್ವಾನವಿತ್ತನು. ಆಸ್ಥಾನದ ಮಂಡಳಿಗೆ ಹಾಗೂ ಅಂದಿನ ಬಾದಶಹನಿಗೆ ವಿನಂತಿಯನ್ನು ಸಲ್ಲಿಸಿದನು. ಆಗ ಬಾದಶಹನು 'ತನ್ನ ರಾಜ್ಯದಲ್ಲಿ -ರಾಜಧಾನಿಯಲ್ಲಿ ಈತನಿಗೆ ಸರಿಸಮನಾಗಿ ಸೆಣೆಸಬಲ್ಲ ಕುಸ್ತಿ ಪಟು ಯಾರಾದರೂ ಇದ್ದರೆ ಬನ್ನಿ' ಎಂದು ಆದೇಶ ಹೊರಡಿಸಿದನು. ಅದನ್ನರಿತ ಆಸ್ಥಾನದ ಅಧಿಕಾರಿಗಳು ಬಾದಶಹನಿಗೆ ಮುಜುರೆ ಸಲ್ಲಿಸಿ 'ಈತನೊಂದಿಗೆ ಸರಿಸಮನಾಗಿ ಸೆಣೆಸಾಡಬಲ್ಲ ಕುಸ್ತಿ ಪಟುವೆಂದರೆ. ಹುಸೇನ ಆಕಾ ರೂಮವಾಲಾ ಒಬ್ಬನೇ' ಎಂದು ಮನವಿಯನ್ನು ಸಲ್ಲಿಸಿದರು. ಆತ ಸರ ಸರನೊಬತನಾಗಿ ಬಲವಂತನೆಂಬ ಪ್ರಸಿದ್ಧಿಯಿದೆ. ಬಹು ದೊಡ್ಡ ಪೈಲವಾನನೂ ಅಹುದು. ಆತ ಬಹಳಷ್ಟು ಜನ ಕುಸ್ತಿಪಟುಗಳೊಂದಿಗೆ ಆಡಿ ಅವರನ್ನು ಕೆಡವಿದ್ದಾನೆ. ಮದವೇರಿದ ಆನೆಯನ್ನೂ ಕೆಡವಿದ್ದಾನೆ. ಆತ ಮಾತ್ರ ಇವನಿಗೆ ಸರಿಸಮನಾದ ಕುಸ್ತಿ ಪಟು' ಎಂದು ಹೇಳಿದರು. ಆಗ ಬಾದಶಹನು ವ್ಯಾಪ್ರದಂಡ ಸಾಮರ್ಥ್ಯ, ವೀರ ವಸ್ತ್ರ ಚಿಹ್ನೆಗಳಿದ್ದ ರುಸ್ತುಮಇಕದಾರನಾದ ಹುಸೇನ ಆಕಾನನ್ನು ಕರೆಸಲು ಆಜ್ಞೆ ಮಾಡಿದನು. ಆತನಿಗೆ ಇರಾಣದ ಪೈಲವಾನನೊಂದಿಗೆ ಕುಸ್ತಿಯಾಡಲು ಆದೇಶಿಸಿದನು. ಹುಸೇನ ಆಕಾ ಬಂದು, ಹೀಗೆ ವಿನಂತಿಸಿಕೊಂಡನು. 'ನಾನು ತುಂಬ ವೃದ್ಧನಾಗಿರುವೆ. ನನ್ನ ಬಲ ಸಾಮರ್ಥ್ಯಗಳು ವಾರ್ಧಕ್ಯವನ್ನು ಮುಟ್ಟಿವೆ. ಆದರೆ ನನ್ನ ಗರಡಿಯಲ್ಲಿ ಸಿದ್ಧರಾದ ಅನೇಕ ಪೈಲವಾನರು ಕುಸ್ತಿ ವಿದ್ಯೆಯಲ್ಲಿ ನಿಪುಣರಾಗಿದ್ದಾರೆ. ಅಪ್ಪಣೆಯಾದರೆ, ಅವರಲ್ಲಿಯ ಒಬ್ಬ ಪೈಲವಾನನು ಈ ಪೈಲವಾನನೊಂದಿಗೆ ಕುಸ್ತಿ ಆಡಲು ಸಾಧ್ಯವಿದೆ' ಎಂದನು. ಅನಂತರ ಹುಸೇನ ಆಕಾನು ತನ್ನ ಶಿಷ್ಯರಲ್ಲಿಯೇ ಅತ್ಯಂತ ಶ್ರೇಷ್ಠನಾದ, ಯೋಗ್ಯ ಪುರುಷನಾದ, ಬಲವಂತನಾದ, ಶೂರನೂ ಶರೀರ ಸಂಪತ್ತಿ ಉಳ್ಳವನು, ಗುಣವಂತನೂ ಆದ, ಮತ್ತು 'ಶಾಹಮತ್ ಪಹ್ನಾ' ಎಂದರೆ ಶೂರತ್ವಕ್ಕೆ ಆಧಾರಭೂತನಾದ, 'ಷುಜ್ಯಾ ಆತ ದಸ್ತಗಾಹ' ಎಂದರೆ, ವೀರತ್ವಕ್ಕೆಯೇ ಆಧಾರಭೂತನಾದ, ಯೂಸುಫ ಬೇಗ ಸಾವಿ ಎಂಬ ಪಟ್ಟದ ಶಿಷ್ಯನನ್ನು ಕರೆತಂದನು. ಆಗ ಬಾದಶಹನು ಇರಾಣದ ಪೈಲವಾನನೊಂದಿಗೆ ಕುಸ್ತಿ ಆಡಲು ಆದೇಶಿಸಿದನು.

ಕುಸ್ತಿಗಾಗಿ ಒಂದು ದಿನವನ್ನು ನಿರ್ಧರಿಸಲಾಯಿತು. ಅನಂತರ ನಿರ್ಧರಿಸಿದ ದಿನದಂದು ಆಸ್ಥಾನದ ಎಲ್ಲ ಜನರೂ ಬಂದು ಸೇರಿದರು. ಬಾದಶಹನು ಸಿಂಹಾಸನದ ಮೇಲೆ ಕುಳಿತಿದ್ದನು. ಸಂಪೂರ್ಣ ಅಧಿಕಾರಿ ವರ್ಗ, ಕಾಮದಾರರು, ಪ್ರಧಾನರು, ಮತ್ತು ಮಾನಕರಿಗಳು ಬಂದಿದ್ದರು. ಅಲ್ಲದೆ ಸುತ್ತಮುತ್ತಲಿನ ಎಲ್ಲ ಪೈಲವಾನರು ಹಾಗು ಮತ್ತೆಲ್ಲ ಅಮಂತ್ರಿತರು ಬಂದು ಸೇರಿದ್ದರು. ಯೂಸುಫ ಬೇಗನು ತಮ್ಮ ಪೈಲವಾನರ ರೀತಿಯಂತೆ ಪೈಲವಾನೀ ಚಡ್ಡಿಯನ್ನು ಧರಿಸಿದ್ದನು. ಟೊಂಕಪಟ್ಟಿಯನ್ನು ಗಟ್ಟಿಮುಟ್ಟಾಗಿ ಕಟ್ಟಿದ್ದನು. ಕಸ್ತೂರಿ, ಚಂದನ, ಬುಕ್ಕೆಗಳನ್ನು ಮೈಗೆಲ್ಲ ತೊಡೆದುಕೊಂಡಿದ್ದನು. 'ಶಾಲಜೋಡಿ' ಹಾರದಂಥಾದ್ದನ್ನು ಕೊರಳಲ್ಲಿ ಹಾಕಿಕೊಂಡಿದ್ದನು. ಮದವೇರಿದ ಆನೆಯಂತೆ ಬಂದು ಮರ್ಯಾದೆಯಿಂದ ಬಾದಶಹರಿಗೂ, ಆಸ್ಥಾನದ ಕಾರಭಾರಿಮಂಡಳಿಗೂ, ಗುರುವರ್ಗಕ್ಕೂ, ತನ್ನ ಸಮಬಲರಾದ ಪೈಲವಾನರಿಗೂ ನಮಸ್ಕರಿಸಿ ಆಖಾಡಾದಲ್ಲಿ ತಿರುಗಹತ್ತಿದನು. ಇರಾಣದ ಪೈಲವಾನನೂ ಕೂಡ ಇರಾಣೀ ಪೈಲವಾನರ ರೀತಿಯಂತೆ ನೂಲಿನ ಚಡ್ಡಿಯನ್ನು ಧರಿಸಿದ್ದನು. ಗಂಧ ಹಾಗು ಸುಗಂಧ ದ್ರವ್ಯಗಳನ್ನು ಶರೀರಕ್ಕೆ ಹಚ್ಚಿಕೊಂಡು ಪೈಲವಾನನ ಧಿಮಾಕಿನಲ್ಲಿಯೇ ಬಂದನು. ಎಲ್ಲರಿಗೂ ನಮಸ್ಕರಿಸಿ ಅಖಾಡಾದಲ್ಲಿ ನಿಂತನು. ಆತನ ಏಳುನೂರು ಶಿಷ್ಯರು ಆತನ ಬದಿಗೆ ಸುತ್ತುವರಿದು ಆಖಾಡದ ಎದುರಿಗೆ ನಿಂತಿದ್ದರು. ಅನಂತರ

ಇರಾಣದ ಪೈಲವಾನನು ಎದುರಿಗೆ ನಿಂತ ಪೈಲವಾನನನ್ನು ಅಂದರೆ ಯೂಸುಫನನ್ನು ಒಬ್ಬ ಯಃಕಶ್ಚಿತ್ ಪೈಲವಾನನೆಂದು ಗಣಿಸಿ ಸಿಂಹಾಸನದ ಎದುರಿಗೆ ಬಂದು ಮುಜುರೆ ಸಲ್ಲಿಸಿ ಹೀಗೆ ವಿನಂತಿಸಿಕೊಂಡನು. "ಬಾದಶಹರ ಆಯುಷ್ಯ ಹಾಗು ಐಶ್ವರ್ಯಗಳು ಚಿರಕಾಲ ವಿರಲಿ. ನಾನು ನನ್ನ ಜೀವಿತ ಅವಧಿಯಲ್ಲಿ ಇಂದಿನವರೆಗೂ ನನ್ನೊಂದಿಗೆ ಕುಸ್ತಿ ಆಡಿದ ಪೈಲವಾನರೆಲ್ಲ ಈತನಿಗಿಂತ ಎರಡು-ಮೂರು ಪಟ್ಟು ಬಲಿಷ್ಟರಾಗಿದ್ದರು. ಅಂಥವರನ್ನು ನಾನು ಕೆಡವಿರುವೆ. ಈ ಹುಡುಗನೊಂದಿಗೆ ಆಡುವುದೆಂದರೆ ಆತನೊಂದಿಗೆ ನನ್ನನ್ನು ಸರಿಜೋಡಿಸುವುದೆಂದರೆ ನನಗೆ ಬೇಸರ ಬಂದಿದೆ. ಅದರಲ್ಲಿ ತುಂಬ ಚಿಲ್ಲರತನವಿದೆ. ಅದು ನನಗೆ ಅವಮಾನವೂ ಹೌದು. ಆದ್ದರಿಂದ ಇನ್ನೊಬ್ಬ ನನ್ನ ಸರಿಜೋಡಿಯಾದ ಪೈಲವಾನನ್ನು ಕರೆಸುವ ವಿಷಯದಲ್ಲಿ ತಮ್ಮ ಅಪ್ಪಣೆಯಾಗಬೇಕು" ಎಂದನು. ಅದನ್ನು ಕೇಳಿದ ಹುಸೇನ ಆಕಾನು ಹುಂಬನಂತೆ ಒಮ್ಮೆಲೆ 'ಇಲ್ನೋಡು ಮೊದಲು ಈ ಹುಡುಗ ನಿನ್ನ ಜೊತೆ ಕುಸ್ತಿ ಆಡಲು ಸಿದ್ಧನಾಗಿ ಆಖಾಡಾದಲ್ಲಿ ಬಂದು ನಿಂತಿದ್ದಾನೆ. ಇವನೊಂದಿಗೆ ಕುಸ್ತಿ ಆಡು. ಒಂದು ವೇಳೆ ಈ ಹುಡುಗನನ್ನು ಅಂದರೆ ಯೂಸುಫ ಬೇಗನನ್ನು ಕೆಡವಿದೆಯಾದರೆ. ಇನ್ನೊಬ್ಬ ಆಖಾಡದಲ್ಲಿ ಬಂದು ನಿಲ್ಲುತ್ತಾನೆ' ಎಂದು ಉತ್ತರ ಕೊಟ್ಟನು. ಆಗ ಉಭಯ ಪೈಲವಾನರು ಎದುರು ಬದುರಾಗಿ ನಿಂತರು. ಯೂಸುಫನು ಮೊದಲು ಅಲ್ಲಾನನ್ನು ಸ್ಮರಿಸಿ. ಕಿಬಲಾದ ಕಡೆಗೆ ಅಂದರೆ ಮಕ್ಕಾ ನಗರದ ದಿಕ್ಕಿಗೆ ನಮಸ್ಕರಿಸಿ. ಇರಾಣದ ಪೈಲವಾನನೊಂದಿಗೆ ಕುಸ್ತಿ ಆಡಲು ಆತನ ಹತ್ತಿರ ಹೋದನು. ಉಭಯ ಪೈಲವಾನರು ಮನಕ್ಕೆ ಮುದನೀಡುವ ಅನೇಕ 'ಡಾವ-ಪೇಚ'ಗಳನ್ನು ಆಟದ ಯುಕ್ತಿಗಳನ್ನು ಪ್ರದರ್ಶಿಸಿದರು. ಯೂಸುಫ ಹಾಕಿದ ಡಾವಪೇಚನ್ನು ಇರಾಣದ ಪೈಲವಾನನು ನಿವಾರಿಸಲು ಪ್ರಯತ್ನಿಸಿದರೆ, ಇರಾಣದ ಪೈಲವಾನನ ಯುಕ್ತಿಗಳನ್ನು ಯೂಸೂಫನು ನಿವಾರಿಸುತ್ತಿದ್ದನು. ಅವರಿಬ್ಬರ ಮಧ್ಯದ ಅದ್ಭುತವಾದ ಆಟದಿಂದಾಗಿ ಅವರಲ್ಲಿ ಯಾರು ಬಲವಂತರು ಯಾರು ಬಲಹೀನರು ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ. ಅವರ ಆಟವನ್ನು ನೋಡುತ್ತ ಕುಳಿತಿದ್ದ ಬಾದಶಹ, ಆಸ್ಥಾನ ಜನ, ಅಧಿಕಾರಿ ವರ್ಗದ ಜನರು ಉಭಯತರ ಕುಸ್ತಿ ಆಟದ ಕುಶಲತೆಯನ್ನು ಕಂಡು ಸಂತೋಷ ಪಡುತ್ತ ಮಧ್ಯ-ಮಧ್ಯ, 'ಶಾಭಾಸ' 'ವಾಹ್-ವಾಹ್' ಎಂದು ಸಂತೋಷ ವ್ಯಕ್ತ ಪಡಿಸುತ್ತಿದ್ದರು. ಅಷ್ಟರಲ್ಲಿ ಒಮ್ಮಿಂದೊಮ್ಮೆಲೆ ಯೂಸುಫನು ತನ್ನ ತಾರುಣ್ಯ ಬಲದಿಂದ ಹಾಗು ಆಟದ ಯುಕ್ತಿಯ ಸಾಮರ್ಥ್ಯದಿಂದ ಒಂದು ಕೈಯನ್ನು ಆತನ ಟೊಂಕದ ಪಟ್ಟಿಯ ಮೇಲೆ ಗಟ್ಟಿಯಾಗಿ ಗುದ್ದಿ ಹಿಡಿದು, ಇನ್ನೊಂದು ಕೈಯನ್ನು ಕೊರಳಮೇಲೆ. ತಂದು ಅಲ್ಲಾನ ಹೆಸರಿನಿಂದ 'ರಸೂಲಿಲ್ಲಾಹ ಮಹಮ್ಮದ ಮುಸ್ತ ಫಾ ಸಲ್ಲಲ್ಲಾಹ ಅಲೈಹಿ ವ ವಸ್ಸಲಮ್' ಎಂದು ಆತನಿಗೇ ತನ್ನ ಶಕ್ತಿಯನ್ನು ಸಮರ್ಪಿಸಿ. ಒಮ್ಮೆಲೇ ಆ ಪೈಲವಾನನ್ನು ತಲೆಯ ಮೇಲೆ ಎತ್ತಿ ಭೂಮಿಯಮೇಲೆ ಒಗೆದದ್ದಕ್ಕೆ, ಆತನ ಪಕ್ಕೆಲಬುಗಳು ಚೂರುಚೂರಾದುವು. ಆಗ ಆಸ್ಥಾನದ ಜನರು, ಅಧಿಕಾರ ವರ್ಗ ಹಾಗು ಸುತ್ತಲಿನ ಎಲ್ಲ ಜನರು ದೊಡ್ಡದಾಗಿ ಕೂಗಿದರು. ನಾಲ್ಕು ದಿಕ್ಕುಗಳಿಂದಲೂ ಶಹಬಾಸಗಿರಿಯ ಕೂಗುಗಳು ಎದ್ದುವು. ಸುಲ್ತಾನ ಮಹ್ಮದ ಬಾದಶಹನು ಯೂಸುಫ ಬೇಗನನ್ನು ಮುಂದೆ ಕರೆದು ತನ್ನ ಮೈಮೇಲಿದ್ದ ಅಂಗವಸ್ತ್ರವನ್ನೆ ಬಹುಮಾನವಾಗಿ ಕೊಟ್ಟು ಆತನಿಗೆ ಅನೇಕ ಕಾಣಿಕೆಗಳನ್ನು, ಬಹುಮಾನಗಳನ್ನು ಕೊಟ್ಟು ಶ್ರೀಮಂತನನ್ನಾಗಿಸಿದನು. ಸುತ್ತಲಿದ್ದ ಅಧಿಕಾರಿ-ವರ್ಗದವರು, ಖಾಸಗಿ ಜನರು, ಪ್ರತಿಯೊಬ್ಬರೂ ತಂತಮ್ಮ ಯೋಗ್ಯತೆಗನುಸಾರವಾಗಿ ವಸ್ತ್ರಗಳನ್ನು, ಬಹುಮಾನಗಳನ್ನು, ಹಣವನ್ನು, ಅನೇಕ ಉತ್ತಮ ಪದಾರ್ಥಗಳನ್ನು ಯೂಸುಫನಿಗೆ ನೀಡಿದರು. ಯೂಸುಫನ ಎದುರಿಗೆ ಆಕಾಶದೆತ್ತರದ ರಾಶಿಯೇ ಬಿದ್ದಿತು. ಅದೇ ದಿನ

ಬಾದಶಹನು ಗೋಗಿ ಮೊದಲಾದ ಐದು ಊರುಗಳನ್ನು ಯೂಸುಫ ಬೇಗನಿಗೆ ಜಹಗೀರಿಯನ್ನು ಹಾಕಿಕೊಟ್ಟನು. ಮತ್ತು ಯೂಸುಫನಿಗೆ ಯಾವಾಗಲೂ ಆತ ಬಾದಶಹನ ಸನ್ನಿಧಿಯಲ್ಲೇ ಇರುವ ಆಜ್ಞೆಯಾಯಿತು. ಈ ಘಟನೆಯು ಹಿಜರಿ ಸನ್ ೮೮೫ (ಕ್ರಿ.ಶ. ೧೪೮೯-೧೪೯೦) ರಲ್ಲಿ ನಡೆಯಿತು.[೧] ಅನಂತರ ಯೂಸುಫ ಬೇಗನು ಬಾದಶಹನ ನೌಕರಿಯಲ್ಲಿದ್ದು ತನ್ನ ಯೋಗ್ಯತೆಯಿಂದ ಬಾದಶಹನ ಹಾಗು ಆಸ್ಥಾನದ ಜನರ ದೃಷ್ಟಿಯಲ್ಲಿ ಶೋಭಿತನಾದನು. ಆಗ ಮೊದಲು 'ಹುಜೂರದಾರೂಗಿ' ಯ ಪದವಿ ದೊರೆಯಿತು, ಅನಂತರ ಎಷ್ಟೋ ದಿವಸಗಳಾದ ಮೇಲೆ 'ಕೊತವಾಲಿ' ಪದವಿ ದೊರೆಯಿತು. ಅನಂತರ 'ಹವಾಲದಾರ' ನಾದನು.

### ೪. *ಗೊತ್ತಿರಬೇಕಾದದ್ದು :*

ಈ ವಿಷಯದಲ್ಲಿ ವಿವಿಧ ರೀತಿಯ ವರ್ಣನೆಗಳಿವೆ. ಬಹುಶಃ ಕಾಲಚಕ್ರದ ಗತಿಯಲ್ಲಿ ಹಾಗೂ ದೈವರೇಖೆಯ ಗತಿಯಂತೆ ಯೂಸುಫನು ರೂಮ ದೇಶದ ರಾಜಕುಮಾರನೂ ಆಗಿರಬಹುದು. ಅದನ್ನು ಎರಡನೆಯ ಪ್ರಕರಣದಲ್ಲಿ ಬರೆಯಲಾಗಿದೆ. ದೈವಯೋಗದಿಂದ ಮತ್ತು ಅನ್ನೋದಕಗಳ ಋಣಾನುಬಂಧದಿಂದ ಆತನನ್ನು ಸಂಕಟದಿಂದ ಪಾರುಮಾಡಿ ದಕ್ಷಿಣ ಹಿಂದುಸ್ಥಾನಕ್ಕೆ ಕರೆತಂದಿರಲೂ ಬಹುದು. ದಕ್ಷಿಣದ ರೀತಿ ಮತ್ತು ಕಾನೂನಿನಂತೆ ಶ್ರೇಷ್ಠ ಹಾಗು ಅಧಿಕಾರ ವರ್ಗದ ಜನರು ಸಾವಕಾಶವಾಗಿ ಬಡತಿಯನ್ನು ಪಡೆಯುವುದು ರೂಢಿಯಲ್ಲಿತ್ತು. ಯೂಸುಫನನ್ನು ಬಾದಶಾಹಿ ಅಧಿಕಾರ ವರ್ಗದಲ್ಲಿ ಸೇರಿಸಿರಬೇಕು. ಅನಂತರ ತುಸುದಿನಗಳಲ್ಲಿ ಸರ್-ಸರನೋಬತ ಪದವಿ ಪ್ರಾಪ್ತವಾಗಿರಬೇಕು. ಅದನ್ನು ದಕ್ಷಿಣ ಪ್ರದೇಶದಲ್ಲಿ ಕೊಡಲಾಗುತ್ತಿತ್ತು. ಈ ಕುರಿತು ಮೂರನೆಯ ಪ್ರಕರಣದಲ್ಲಿ ವಿವರಿಸಲಾಗಿದೆ. ಆ ಕಾಲದಲ್ಲಿ ಧನುರ್ವಿದ್ಯೆಯ ಅಭ್ಯಾಸವನ್ನು ಎಲ್ಲೆಡೆ ಮಾಡಲಾಗುತ್ತಿತ್ತು. ಅದರಲ್ಲಿ ತನ್ನ ಸರಿಜೋಡಿಯ ಮಂಡಲದಲ್ಲಿ ಸರದಾರನಾಗಿ ಎಲ್ಲರಮೇಲೂ ಬಡತಿಯನ್ನು ಪಡೆದಿರಬೇಕು. ಅದರಿಂದಾಗಿ ಪೈಲವಾನನಾಗಿ ಕುಸ್ತಿ ಆಡಿ ಪ್ರಬಲನಾಗಿರಬೇಕು. ಅದರಲ್ಲಿ ಅಸಾಧ್ಯವಾದುದೇನೂ ಇಲ್ಲ. ಅರಬೀ ಭಾಷೆಯ ಒಂದು ವಾಕ್ಯದ ಅರ್ಥದಂತೆ, 'ಅಲ್ಲಾ ಮಹಾ ಸಾಮರ್ಥ್ಯ ಉಳ್ಳವನು. ಆತನೇ ಇದನ್ನು ನಿರ್ಧರಿಸಿರಬೇಕು ಅದು ಆತನ ಆಶ್ಚರ್ಯ!' ಮಹಮ್ಮದ ಕಾಸೀಮ ಫಿರಿಸ್ತಾ ಹೇಳಿದ ವಿವರಗಳನ್ನು ಅದೆಷ್ಟೋ ಇತಿಹಾಸ ಗ್ರಂಥಗಳಲ್ಲಿ ಹೇಳಲಾಗಿದೆ. ಆತನ ಹೇಳಿಕೆಯಂತೆ, ಯೂಸುಫನು ತುರ್ಕೀ ಮೂಲದವನು ಹಾಗು ಗುಲಾಮನೆಂದು ಮಾರಾಟ ಮಾಡಲು ತಂದವನಾಗಿದ್ದನು. ಇದು ಪ್ರಸಿದ್ಧವೇ ಆಗಿದೆ. ಆದರೂ ಎರಡನೆಯ ಪ್ರಕರಣದಲ್ಲಿಯ ವಿವರಗಳು ಎರಡನೆಯ ಪ್ರಕರಣದವೇ ಆಗಿವೆ, ಆದರೂ ಚಿಂತೆ ಇಲ್ಲ. ಒಟ್ಟಾರೆಯ ಅರ್ಥದಲ್ಲಿ ಆತನ ದೈವ ನಕ್ಷತ್ರವು ವೃದ್ಧಿಯ ಉಚ್ಚ ಸ್ಥಾನದಲ್ಲಿದ್ದು ವೃದ್ಧಿಯನ್ನೆ ಪಡೆಯಿತು. ದಿನದಿಂದ ದಿನಕ್ಕೆ ಆತನ ವರ್ಚಸ್ಸು ಬೆಳೆಯುತ್ತ ಹೋಯಿತು. ಆತನ ಹುಟ್ಟಾ ಜಾಣತನವೂ ಪ್ರಸಿದ್ಧವಾಗಿದೆ. ಅಂಥ ಸಮಯದಲ್ಲಿ ತೆಲುಗು ಪ್ರದೇಶದ ಸರಹದ್ದಿನಲ್ಲಿಯ ಕೂಲಿ ಜನರು ಬಂಡು ಹೂಡಿ, ಗರ್ವಿಷ್ಠರಾಗಿ ಸೊಕ್ಕಿನಲ್ಲಿದ್ದಾರೆಂಬ ಸುದ್ದಿ ಬಂದಿತು. ಅವರು ದಾರಿಹೋಕರನ್ನು ದರೋಡೆ-ಲೂಟಿ ಮಾಡುವುದನ್ನು ಪ್ರಾರಂಭಿಸಿದ್ದರು. ಅಲ್ಲಿಯ ಪ್ರತಿ ಹಳ್ಳಿಯ ರೈತ ಜನರು ಇವರ ಉಪದ್ರವದಿಂದಾಗಿ ಪ್ರಾಣತ್ಯಾಗ ಮಾಡುವವರೆಗೂ ಬಂದಿತ್ತು.

---

೧. ಕ್ರಿ.ಶ ೧೪೮೯-೯೦ ರಲ್ಲಿ ಆದಿಲಶಾಹಿ ಪ್ರಾರಂಭವಾಗಿದೆ. ಆದ್ದರಿಂದ ಈ ಘಟನೆ ಅದಕ್ಕಿಂತ ಕೆಲವು ವರುಷ ಮೊದಲು ಘಟಿಸಿರಬೇಕು. - ಅನುವಾದಕ.

ಈ ಕುರಿತು ವಿಚಾರಮಾಡುವ ಅಧಿಕಾರ ವರ್ಗವು ಆ ಬಂಡುಖೋರರ ಬಂಡುತನದ ಪಾರುಪತ್ಯ ಮಾಡುವ ವಿಚಾರ ಮಾಡಿ, ಅವರ ಮೇಲೆ ಬಹಳಷ್ಟು ಸೈನ್ಯವನ್ನು ಕಳಿಸುವ ವ್ಯವಸ್ಥೆ ಮಾಡಿದರು.

ಅಧಿಕಾರ ವರ್ಗದಲ್ಲಿ ಎಷ್ಟೋ ಜನ ಕಪಟಿಗಳಾಗಿಯೂ ಇರುತ್ತಾರೆ. ಅಸಾಧ್ಯವಾದುದನ್ನು ನೋಡಲು ಅಡಗಿ ಕುಳಿತಿರುತ್ತಾರೆ. ದಿನದಿಂದ ದಿನಕ್ಕೆ ಯೂಸುಫನ ಅಧಿಕಾರ ಮತ್ತು ಶ್ರೀಮಂತಿಕೆ ಬೆಳೆಯುತ್ತಲೇ ನಡೆದಿತ್ತು. ಅದನ್ನು ಅಧಿಕಾರ ವರ್ಗದಲ್ಲಿಯ ಕೆಲವು ಜನರು ಮತ್ಸರ ಹಾಗು ಕೆಟ್ಟಬುದ್ಧಿಯಿಂದಾಗಿ ನೋಡುವುದು ಶಕ್ಯವಾಗುತ್ತಿರಲಿಲ್ಲ. ಅವರಿಗೆ ಯೂಸುಫನು ಆಸ್ಥಾನದ ಆಡಳಿತಲ್ಲಿ ಇರಬಾರದು. ಏನಾದರೂ ಮಾಡಿ ಹೊರಗೆ ಕಳಿಸಿದರೆ ಆತನಿಗೆ ದೊಡ್ಡ ಪದವಿ ಮತ್ತು ದೊಡ್ಡ ಪದಾಧಿಕಾರ ದೊರೆಯುದಂತಾಗುತ್ತದೆ ಎಂದು ತಿಳಿದು ಸರಕಾರಕ್ಕೆ ಅರ್ಜಿ ಕಳಿಸಿದರು. 'ಯೂಸುಫ ಬೇಗನು ತರುಣನಾಗಿದ್ದು ಶೂರನೂ ಧೈರ್ಯವಂತನೂ ಆಗಿದ್ದಾನೆ. ಈ ಕೆಲಸಕ್ಕೆ ಯೋಗ್ಯನಾಗಿದ್ದಾನೆ. ಆತನನ್ನು ಈ ಕೆಲಸಕ್ಕೆ ಪ್ರಮುಖನನ್ನಾಗಿ ಮಾಡುವುದು ಯೋಗ್ಯವೆಂದು ಕಂಡು ಬರುತ್ತದೆ' ಎಂದು ಬರೆದರು. ಬಾದಶಹನು ಅವರ ವಿನಂತಿಯನ್ನು ಮನ್ನಿಸಿ ಯೂಸುಫನಿಗೆ ಬಾದಶಾಹಿ ವಸ್ತ್ರಗಳನ್ನು ತೊಡಿಸಿ 'ಮಜಲಸರಫಿಯಾ' ಹಾಗೂ 'ಮಲಕುಷರ್ಕ' ಎಂಬ ಬಿರುದುಗಳನ್ನು ಕೊಟ್ಟು ಸಿದ್ಧವಾಗಿದ್ದ ಸೈನ್ಯದೊಡನೆ ಆತನನ್ನು ತೆಲುಗು ದೇಶದ ಬಂಡನ್ನು ಅಡಗಿಸಲು ಕಳಿಸಿದನು. ಮಜಲಸರಫಿಯಾನು ಆ ಸರಹದ್ದನ್ನು ಮುಟ್ಟಿದ ಅನಂತರ ಯುಕ್ತಿಯಿಂದ ಹಾಗೂ ಬಾಹುಬಲದಿಂದ ಕೆಲವೆ ದಿನಗಳಲ್ಲಿ ಆ ಜಿಲ್ಲೆಯಲ್ಲಿಯ ಬಂಡುಕೋರರರನ್ನು ನಿಯಂತ್ರಿಸಿ ಅವರಿಗೆ ಯೋಗ್ಯ ಶಿಕ್ಷೆಯನ್ನು ಕೊಟ್ಟನು. ಅಲ್ಲಿಯ ಸಂಪೂರ್ಣ ಪ್ರದೇಶ ಹಾಗೂ ಮಾರ್ಗವು ಉಪದ್ರವಕಾರರ ಸಂಕಟದಿಂದ ಮುಕ್ತವಾಯಿತು. ಯೂಸುಫನು ಸರಕಾರಕ್ಕೆ ಉತ್ತಮೋತ್ತಮ ಪದಾರ್ಥಗಳನ್ನು ಕಳಿಸಿ ತಾನು ವಿಜಾಪುರದ ಕಡೆಗೆ ತಿರುಗಿ ಹೋಗುವ ಸಂಕಲ್ಪದಲ್ಲಿದ್ದನು.

ಇಷ್ಟರಲ್ಲಿ ಒಂದು ದಿನ ಬಾದಶಹನಿಗೆ ನೆನಪಾಗಿ, ಯೂಸುಫನು 'ಹೋಗಿ ಬಹಳ ದಿನಗಳಾದುವು. ಆತನಿಂದ ಯಾವ ಸುದ್ದಿಯೂ ಬರಲಿಲ್ಲ' ಎಂದು ವಿಚಾರಿಸಿದನು. ವಾಸ್ತವದಲ್ಲಿ ಕಾಲಕಾಲಕ್ಕೆ ಅಲ್ಲಿಯ ವರ್ತಮಾನವನ್ನು ಸರಕಾರಕ್ಕೆ ಕಳಿಸುತ್ತಲೇ ಇದ್ದನು. ಆದರೆ ಎಲ್ಲ ಕಪಟ ಹಾಗೂ ಸ್ವಾರ್ಥ ಅಧಿಕಾರ ವರ್ಗವು ಈ ಪತ್ರಗಳು ತಮ್ಮ ಇಚ್ಛೆಗೆ ಬಾಧಕವೆಂದು ತಿಳಿದು ಆ ಪತ್ರಗಳನ್ನು ಮುಚ್ಚಿ ಇಡುತ್ತಿದ್ದರು. ಮತ್ತು ಬಾದಶಹನಿಗೆ ಹೇಳುತ್ತಲೇ ಇರಲಿಲ್ಲ. ಈಗ ಬಾದಶಹನೆ ಕೇಳಿದಾಗ ಅಧಿಕಾರಿಗಳು ಬೇರೊಂದೇ ಕಥೆಯನ್ನು ಕಟ್ಟಿ 'ಯೂಸುಫನು ತಾನು ಗೆದ್ದ ಪ್ರದೇಶಕ್ಕೆ ತಾನೇ ಒಡೆಯನೆಂಬುದಾಗಿ ಹೇಳಿ ಕಳಿಸಿದ್ದಾನೆ' ಎಂದರು. ಅದಕ್ಕೆ (ಯುಸೂಫನ ಗುರು) ಹುಸೇನ ಆಕಾ ಅವರಿಗೆಲ್ಲ ಉತ್ತರಿಸುತ್ತ 'ಯೂಸುಫನು ಉಪ್ಪು ತಿಂದವನಿಗೆ ಎರಡು ಬಗೆಯುವವನಲ್ಲ ಬಾದಶಹರ ಕೆಲಸದಲ್ಲಿ ಆಶೆಯನ್ನು ಮಾಡುವವನಲ್ಲ. ಆದಾಗ್ಯೂ ಇದರಲ್ಲಿ ಏನಾದರೂ ಒಂದು ಕಾರಣವಿರಬೇಕು. ಆದ್ದರಿಂದಲೇ ಅವನು ಅಲ್ಲಿ ಇಷ್ಟು ದಿನ ಇರಲು ಕಾರಣವಾಗಿರಬೇಕು, ಎಂದು ಹೇಳಿದನು. ಅನಂತರ ಹುಸೇನ ಆಕಾನು ಈ ವಿಷಯವನ್ನು ವಿಚಾರಿಸಿ, ಯೂಸುಫನನ್ನು ಕರೆತರಲು ಬಾರಿ-ಅಕಾನನ್ನು ಕಳಿಸಿದನು. ಬಾರಿ-ಅಕಾ ಹೋಗಿ ಬಹಳ ದಿನಗಳವರೆಗೆ ತಿರುಗಿ ಬರಲಿಲ್ಲ ಆಗ ಮತ್ತೆ ಕಪಟ ಜನರು ದರಬಾರದಲ್ಲಿ ಕೂಗಾಡುತ್ತ 'ಇಬ್ಬರೂ ವಿಶ್ವಾಸ ಘಾತುಕರಾಗಿದ್ದಾರೆ ಉಭಯುತರೂ ಒಡೆತನದ ಸಂಕಲ್ಪ ಮಾಡಿದ್ದಾರೆ. ಯಾಕೆಂದರೆ ಇಬ್ಬರಲ್ಲಿ ಒಬ್ಬನೂ ತಿರುಗಿ ಬರಲೊಲ್ಲ' ಎಂದರು. ಆಗ ಬಾದಶಹನು ಹುಸೇನ ಆಕಾನಿಗೆ ಆದೇಶ ನೀಡಿ 'ತಕ್ಷಣ ಯೂಸುಫನನ್ನು ತಂದು ನನ್ನ

ಮುಂದೆ ಹಾಜರು ಮಾಡಿರಿ' ಎಂದನು. ಅದರಂತೆ ಹುಸೇನ ಆಕಾನು ಸ್ವತಃ ತಾನೇ ಅಲ್ಲಿಗೆ ಹೋದನು. ಬಾರೀ-ಆಕಾನನ್ನು ಅಲ್ಲಿಯ ಬಂದೋಬಸ್ತಿಗಾಗಿ ನಿಲ್ಲಿಸಿ 'ಮಜಲಸರಫಿಯಾ' ಯೂಸುಫನೊಂದಿಗೆ ಅನೇಕ ತರದ ಉತ್ತಮ ಪದಾರ್ಥಗಳನ್ನು ರಾಜನ ಖುಷಿಗಾಗಿ ಕಾಣಿಕೆಯೆಂದು ತೆಗೆದುಕೊಂಡು ತಿರುಗಿ ಬಂದನು. ಮಜಲಸರಫಿಯಾನು ಯಶಸ್ವಿಯಾಗಿ ಗೆದ್ದು ತಿರುಗಿ ಬಂದ ವರ್ತಮಾನವನ್ನು ಕೇಳಿ ಬಾದಶಹನು ಬಹಳ ಸಂತೋಷ ಪಟ್ಟು ಬಹಳ ಕೃಪೆಯಿಂದ 'ಶಾಹಿ ಖಲಿಲ್ಲುಲ್ಲಾಹ' ಕೆಲಸವೆಂದು ತಿಳಿದು 'ಕುದಸ ಸೀರಹು' ಬಾಗಿಲಿನ ಎದುರಿಗೆ ತಾನೇ ಹೋಗಿ ನಗರದಲ್ಲಿ ಆತನನ್ನು ಕರೆತಂದನು. ಹುಸೇನ ಆಕಾ ಮತ್ತು ಮಜಲಸರಫಿಯಾ ಉಭಯತರೂ ಬಾದಶಹನ ಕಾಣಿಕೆಗಾಗಿ ಪದಾರ್ಥಗಳನ್ನು ಜೊತೆಗೆ ತಂದಿದ್ದರು. ಅವುಗಳನ್ನು ಬಾದಶಹರ ಸೇವೆಗೆ ಸಮರ್ಪಿಸಿದರು. ಮತ್ತು ತಾವು ಜಯ ಪಡೆದುದನ್ನು, ಅಲ್ಲಿ ವ್ಯವಸ್ಥೆ ಮಾಡಿ ಬಂದುದನ್ನು ಹಾಗು ಬಂಡುಕೋರರಿಗೆ ಕೊಟ್ಟ ಶಿಕ್ಷೆಯನ್ನು, ಅವರಿಗೆ ಮಾಡಿದ ಪಾರುಪತ್ಯವನ್ನೆಲ್ಲ ಸಾದ್ಯಂತ ಅಲ್ಲಿ ಏನೇನು ಆಯಿತೋ ಅದೆಲ್ಲವನ್ನು ಬಾದಶಹನಿಗೆ ನಿವೇದಿಸಿದರು. ಬಾದಶಹನು ಆ ಎಲ್ಲ ಕಾಣಿಕೆಗಳನ್ನು ಅತ್ಯಂತ ಪ್ರೀತಿಯಿಂದ ಸ್ವೀಕರಿಸಿದನು.

ಯೂಸುಫ -ಮಜಲಸರಫಿಯಾನ ಉತ್ತಮ ಸೇವೆಗಾಗಿ ಆತನ ಶ್ರೇಷ್ಠ ಗುಣಗಳಿಗಾಗಿ ತುಂಬ ಸಂತೋಷ ಪಟ್ಟನು. ಆನಂದ ತುದಿಲನಾದ ಬಾದಶಹನು ಯೂಸುಫನಿಗೆ ಬಾದಶಾಹಿ ಅಧಿಕಾರದ ಹೊಸ ಹುದ್ದೆಯನ್ನು ನೀಡುತ್ತ ಬಾದಶಾಹಿ ರೀತಿಯಂತೆ ಅನೇಕ ಬಕ್ಷೀಸುಗಳನ್ನು -ಇನಾಮುಗಳನ್ನು ನೀಡಿ ಗೌರವಿಸಿದನು. ಕಾನಕುಡತಿಯ ಹದ್ದಿಯಿಂದ ಕಲ್ಯಾಣ ಮಜ್ಯಾನದ ಹದ್ದಿಯ ವರೆಗಿನ, ಕೋವಾ, ಕಚೀ ಮತ್ತು ಕಾಲಸ್ತರಿ ಸ್ವಾಮ್ಯದಲ್ಲಿದ್ದ ಮತ್ತು ಅವರ ಕಡೆಗಿನ ಊರುಗಳನ್ನು ಕೂಡ ಯೂಸುಫನಿಗೆ ಕೊಟ್ಟನು. ಮಂಗಳವೇಢೆಯೂ ಪೂರ್ವಕಾಲದ ರಾಜರ ಹಳೆಯ ರಾಜಧಾನಿಯಾಗಿತ್ತು. ಆ ಮಂಗಳವೇಢೆ ಕೂಡ ಯುಸೂಫನ ಆಧಿನದಲ್ಲಿ ಬಂದಿತು. ಬಾರಿ-ಆಕಾನಿಗೆ 'ಸುಭಾ ಹೊನಕುಲಿ' ಎಂಬ ಬಿರುದನ್ನು ಕೊಟ್ಟು ಅವನಿಗೆ ತೆಲಂಗ ದೇಶದ ಜಿಲ್ಲೆಯಲ್ಲಿ ಇರಲು ಆಜ್ಞೆ ಮಾಡಿದನು. ಅನಂತರದ ದಿನಗಳಲ್ಲಿ ಕೂಡ ಯೂಸುಫನ ದೈವ ಉಚ್ಚ ತರಗತಿಯಲ್ಲೇ ಇದ್ದು ಬಡತಿಯನ್ನೇ ಕಂಡನು. ಅದರಿಂದಾಗಿ ಎಲ್ಲ ಅಧಿಕಾರಿವರ್ಗದಲ್ಲಿ ಯೂಸುಫನು ಜ್ಯೇಷ್ಠನಾಗಿ ಶ್ರೇಷ್ಠನಾದನು.

ಸುಲ್ತಾನ ಮಹಮ್ಮದನು ಸತ್ತ ಅನಂತರ ಬಹಮನೀ ರಾಜಧಾನಿಯಲ್ಲಿ ಗದ್ದಲ ಪ್ರಾರಂಭವಾಯಿತು. ಅನಂತರ ಸುಲ್ತಾನ ಮಹಮ್ಮದ ಬಾದಶಹನ ಶ್ರೀಮಂತಿಕೆ ಹಾಗೂ ಅಧಿಕಾರಕ್ಕೆ ಮುಪ್ಪು ಬಂದಾಗ ಯೂಸುಫನು ಸಾಕಷ್ಟು ಸೈನಿಕರ ಒಡೆಯನಾಗಿದ್ದನು. ಸೈನಿಕರನ್ನು ಬಹು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದನು. ತುರ್ಕೀ ಜನರು, ಇರಾಣ ಹಾಗು ತುರಾನದ ಮೊಗಲ ಜನರು ಬಹಮನಿ ಬಾದಶಹರ ಹತ್ತಿರ ಇದ್ದವರನ್ನು ಅಧಿಕಾರದ ಆಸೆ ತೋರಿಸಿ, ತನ್ನ ಹತ್ತಿರ ಕರೆದುಕೊಂಡನು. ಅವರಿಗೆ ಶ್ರೇಷ್ಠ ಪದವಿಗಳನ್ನು, ಬಿರುದುಗಳನ್ನು ಕೊಟ್ಟು ಬೆಳೆಸಿದನು. ಅದರಿಂದಾಗಿ ಆತನ ಸಾಮರ್ಥ್ಯ ಅಧಿಕವಾಗಿ ಸಂಪತ್ತನ್ನೂ ದೊರಕಿಸಿದನು. ಅದರಂತೆ ವಿಜಾಪುರದಲ್ಲಿ ತನ್ನ ಹೆಸರಿನಲ್ಲಿ 'ಖುತಬಾ' ಓದಿಸಿದನು. ತನ್ನ ಹೆಸರಿನಲ್ಲಿ ಮುಂದಿದ್ದ ಖಾನ ಎಂಬ ಶಬ್ದವನ್ನು ಬದಲಿಸಿ ತನ್ನ ಹೆಸರನ್ನು ಯೂಸುಫ ಆದಿಲಶಾಹ ಎಂದು ಇಟ್ಟುಕೊಂಡನು. ಆತನಿಗೆ 'ಯೂಸುಫ ಸಾವೀ' ಎಂಬ ಹೆಸರೂ ಇತ್ತು. 'ಸಾವಾ' ನಗರದಲ್ಲಿ ಬಹಳ ದಿನಗಳಿಂದ ಅಲ್ಲಿ ಇದ್ದನಾಗಿ ಆ ಹೆಸರು ಬಂದುದನ್ನು ಈ ಮೊದಲಿನ ಪ್ರಕರಣಗಳಲ್ಲಿ ಬರೆಯಲಾಗಿದೆ. ದಕ್ಷಿಣದ ಜನರ ಮಾತುಗಳಲ್ಲಿ 'ಯೂಸುಫ ಸವಾಈ' ಎಂಬ ಹೆಸರೂ ರೂಢಿಯಲ್ಲಿದೆ. ಅದಕ್ಕೆ

ಕಾರಣವೆಂದರೆ, ದಕ್ಷಿಣದ ಜನರ ಲೆಕ್ಕದಲ್ಲಿ ಒಂದು ಮತ್ತು ಅದಕ್ಕೆ ಕಾಲು ಭಾಗ ಅಧಿಕವಾಗಿದ್ದರೆ ಅದನ್ನು 'ಸವ್ವಾ' (ಒಂದೂಕಾಲು) ಎಂದು ಕರೆಯುತ್ತಾರೆ. ಆದ್ದರಿಂದ ಯೂಸುಫನು ಮಹ್ಮದಶಾಹನ ಅಧಿಕಾರ ವರ್ಗದಲ್ಲಿ ಶ್ರೀಮಂತಿಕೆ- ಐಶ್ವರ್ಯಗಳಲ್ಲಿ ಎಲ್ಲರಿಗಿಂತ ಶ್ರೇಷ್ಠ ಮತ್ತು ಅಧಿಕವಾಗಿದ್ದನು. ಪ್ರದೇಶಗಳನ್ನು ಪಡೆಯುವಲ್ಲಿ ಕೂಡ ಇನ್ನಿತರ ಜನರ ಪ್ರದೇಶಗಳಿಗಿಂತ ಯೂಸುಫನು ಒಂದುಕಾಲು ಭಾಗ ಅಧಿಕವಾಗಿಯೇ ಹಸ್ತಗತ ಮಾಡಿಕೊಂಡಿದ್ದನು. ಆದ್ದರಿಂದ ಅವನಿಗೆ ಯೂಸುಫ ಸವಾಯಿ ಎನ್ನುತ್ತಿದ್ದರು.

### ೫. ಕಾಸಿಮ ಬರೀದನ ದ್ವೇಷ ಮತ್ತು ವಿಜಯನಗರದ ಅಧಿಕಾರಿ ತಿಮ್ಮರಾಜನನ್ನು ಹೊರಗೆ ಹಾಕಿದ್ದು.

ಯೂಸುಫ ಆದಿಲಶಹನು ಬಾದಶಹನಾದ ಮೇಲೆ ಆತನ ದೈವ ವೃದ್ಧಿಯಾಗಿ ದಿನದಿಂದ ದಿನಕ್ಕೆ ಐಶ್ವರ್ಯ ಸಂಪತ್ತುಗಳು ಬೆಳೆಯುತ್ತಲೇ ಹೋದುವು. (ಆ ದಿನಗಳಲ್ಲಿ) ಕಾಸಿಮ ಬರೀದನು, ಸುಲ್ತಾನ ಮಹ್ಮದನ ಆಜ್ಞೆಯನ್ನು ಮನ್ನಿಸದೆ, ಬಹಮನಿ ರಾಜ್ಯದ ಅಧಿಕಾರದಲ್ಲಿ ತಾನೆ ಪ್ರಬಲನಾಗುತ್ತಿದ್ದನು. ವಿಜಾಪುರದ ಪ್ರದೇಶವನ್ನು ಕಬಳಿಸಬೇಕೆಂಬುದು ಬಹು ದಿನಗಳ ಆಶೆಯಾಗಿತ್ತು. ಈಗ ಆತನ ಅಡ್ಡದಾರಿಯ ವಿಚಾರಕ್ಕೆ ಚಾಲನೆ ದೊರೆಯಿತು. ಹಳೆಯ ಹೊಟ್ಟೆಕಿಚ್ಚು ಮನದಲ್ಲಿ ಇದ್ದೇ ಇತ್ತು. ಅದು ಈಗ ಪ್ರಕಟವಾಗತೊಡಗಿತು. ದುರ್ಬುದ್ಧಿಯ ಉಪಯೋಗವನ್ನು ಮಾಡಹತ್ತಿದನು. ವಿಜಯನಗರದಲ್ಲಿ ಅಧಿಕಾರಿಯಾಗಿದ್ದ ತಿಮ್ಮರಾಜನೂ, ತನ್ನ ರಾಜ್ಯದ ರಾಜವಂಶವನ್ನು ಮನ್ನಿಸದೆ ತಾನೇ ಪ್ರಬಲನಾಗಿ ಆ ರಾಜ್ಯದ ಒಡೆಯನಾಗಿದ್ದನು. ಈ ಉಭಯತರೂ ದುರಾಶೆಯಿಂದ ಯೂಸುಫ ಆದಿಲ ಶಾಹನನ್ನು ಹೊರದಬ್ಬಬೇಕೆಂದು ಎದ್ದರು. ಅದರಂತೆ ಉಳಿದ ಕಡೆಯ ತರಫದಾರರಿಗೂ ಆಶೆ ತೋರಿಸಿ ಅವನ ವಿರುದ್ಧ ಎಬ್ಬಿಸಿದರು. ಹೀಗೆ ಪ್ರತಿಯೊಂದು ದಿಕ್ಕಿನಿಂದಲೂ ತರಫದಾರರ ಶತ್ರು ಸಮುದಾಯವನ್ನು ಯೂಸುಫ ಆದಿಲಶಾಹನ ಮೇಲೆ ಎಬ್ಬಿಸಿ ಅವನನ್ನು ಸಂಕಟದಲ್ಲಿ ತಳ್ಳಿದರು. ಆದರೆ ಅಲ್ಲಾನ ಕೃಪೆ ಯೂಸುಫ ಆದಿಲಶಾಹನ ಮೇಲಿತ್ತು. ಆದ್ದರಿಂದ ತನ್ನ ಮೇಲಿನ ಸಂಕಟಗಳನ್ನೆಲ್ಲ ತನ್ನ ಯುಕ್ತಿಗಳಿಂದ, ಪರಾಕ್ರಮದಿಂದ ಪ್ರತಿಯೊಬ್ಬ ಶತ್ರುವನ್ನು ಎದುರಿಸಿ, ನಾಲ್ಕೂ ದಿಕ್ಕಿನ ಸಂಕಟಗಳನ್ನು ನಿವಾರಣೆ ಮಾಡಿದನು. ನಾಲ್ಕು ಬದಿಗಳಲ್ಲೂ ಉರಿಯುತ್ತಿದ್ದ ಸಂಕಟದ ಅಗ್ನಿಯನ್ನು ಯೂಸುಫನು ಪರಾಕ್ರಮದ ನೀರಿನಿಂದ ಶಾಂತ ಮಾಡಿದನು. ಈ ಸಮಯದಲ್ಲಿ ಯೂಸುಫ ಆದಿಲಶಹನು ತನ್ನ ಆರೋಗ್ಯದ ಕಡೆಗೆ ಲಕ್ಷ್ಯ ಕೊಡಲಿಲ್ಲ. ಆತನ ಆರೋಗ್ಯ ಕೆಟ್ಟಿತು. ಆ ಎರಡು ತಿಂಗಳ ಒಂದು ಹಂತದಲ್ಲಿ ಯೂಸುಫನು ಸತ್ತನೆಂದೇ ಸುದ್ದಿ ಎಲ್ಲರಲ್ಲೂ ಹಬ್ಬಿತ್ತು. ಆದರೆ ಅಲ್ಲಾನ ಕೃಪೆ ಅವನ ಮೇಲೆ ಇತ್ತಾದ್ದರಿಂದ ಗುಣಮುಖನಾಗಿ ತಿರುಗಿ ಎದ್ದನು. ಪೂರ್ತಿ ಗುಣವಾದ ಮೇಲೆ ಯೂಸುಫನು ಸ್ನಾನ ಮಾಡಿ, ಅಲ್ಲಾನ ಸ್ತುತಿ ಮಾಡಿ, ವಂದಿಸಿ ತನ್ನ ದ್ರವ್ಯ ಭಂಡಾರದ ಬಾಗಿಲನ್ನೆ ತೆರೆದಿಟ್ಟನು. ಧರ್ಮಕಾರ್ಯದ ಕೈಯನ್ನು ಮೇಲೆ ಎತ್ತಿದನು. ಹತ್ತಿರದ ಹಾಗೂ ದೂರದ ಸಾಧು ಸಂತರಿಗೆ, ಬಡ ಬಗ್ಗರಿಗೆ, ಭಿಕಾರಿಗಳಿಗೆ ಕೈ ತುಂಬ ದಾನ ಮಾಡಿದನು. ಇಪ್ಪತ್ತು ಸಾವಿರ ಹೊನ್ನುಗಳನ್ನು ಮಕ್ಕಾ ಮತ್ತು ಮದೀನಾಗಳಲ್ಲಿ ವಿದ್ವಾಂಸರಿಗೆ ಹಾಗು ಸಂತರಿಗೆ ಕಾಣಿಕೆಯಾಗಿ ಕಳಿಸಿದನು. ಇಪ್ಪತ್ತು ಸಾವಿರ ಹೊನ್ನುಗಳನ್ನು ತನ್ನ ದೇಶದಿಂದ ಬರುವಾಗ ಜೊತೆಗಿದ್ದ ಖ್ವಾಜ ಅಬ್ದುಲ್ಲಾ ಹರವಿ (ಹಿರಿವಿ) ಮೀರ್ಜಾ ನಿಗೆ ಕೊಟ್ಟು, ಆತನನ್ನು ಸ್ವದೇಶಕ್ಕೆ ಕಳಿಸಿದನು. ಅಲ್ಲಿಯ ಸಾವಾ ಪಟ್ಟಣದಲ್ಲಿ ಮಶೀದಿಯನ್ನು, ಮೀನಾರುಗಳನ್ನು ಕಟ್ಟಿ ಪಟ್ಟಣಕ್ಕೆ ನೀರಿನ ವ್ಯವಸ್ಥೆ ಮಾಡಲು ಹೇಳಿದನು. ಅದರಂತೆ ಮಶೀದಿ ಮತ್ತು ಮೀನಾರುಗಳನ್ನು ಕಟ್ಟಲಾಯಿತು.

ಕೆಲವು ದಿವಸಗಳ ಅನಂತರ ಮತ್ತೆ ತಿಮ್ಮರಾಜನು ತನ್ನ ದುರ್ಬುದ್ಧಿಯಿಂದ ವಿಜಾಪುರ ಹಾಗು ಅದರ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಯತ್ನದಿಂದ ಬಹುದೊಡ್ಡ ಸೈನ್ಯದೊಂದಿಗೆ ವಿಜಾಪುರದತ್ತ ಹೊರಟನು. ಯೂಸುಫ ಆದಿಲಶಹನು, ಈ ಸುದ್ದಿಯನ್ನು ಕೇಳುತ್ತಲೇ ಎಂಟುಸಾವಿರಕ್ಕೆ ಅಧಿಕವಾಗಿರದ ಸೈನ್ಯದೊಂದಿಗೆ ಶತ್ರುವನ್ನು ಪರಾಭವಗೊಳಿಸುವ ಉದ್ದೇಶದಿಂದ, ದೇವರ ಮೇಲೆ ಭಾರಹಾಕಿ ರಣರಂಗದಲ್ಲಿ ಕಾಲಿಟ್ಟನು. ಉಭಯ ಸೈನ್ಯಗಳೂ ಎದುರಾಗಿ ಘೋರಯುದ್ಧ ನಡೆಯಿತು. ಇಬ್ಬರ ಪಾಳೆಯಗಳಲ್ಲೂ ಸಹಸ್ರಾರು ಜನರು ಹತರಾದರು ಹಾಗೂ ಗಾಯಗೊಂಡರು. ಹಿಂದುಗಳ ಸೈನ್ಯವು ಯೂಸುಫನ ಸೈನ್ಯವನ್ನು ನುಚ್ಚುನೂರು ಮಾಡಿದುವು. ಅದರಿಂದಾಗಿ ಯೂಸುಫನ ಪಾಳೆಯದ ಖಾಸ ಜನರು ಕೂಡ ಮನೋರಂಜನ ಸಿಬ್ಬಂದಿಯೊಂದಿಗೆ ಬೇರೆ ಕಡೆಗೆ ಹೋದರು. ಯೂಸುಫ ಒಬ್ಬಂಟಿಯಾಗಿ ಒಂದೆಡೆ ಹೋಗಿ ನಿಂತನು. ತನ್ನ ಸೈನ್ಯದ ಸ್ಥಿತಿಯನ್ನು ಕಂಡು ಮನದಲ್ಲಿ ಖಿನ್ನನಾದನು. ಆದರೆ ಮನದಲ್ಲಿ ನಿರಾಶೆಯನ್ನು ತರದೆ ಅಲ್ಲಾನ ಗಟ್ಟಿ ಸೂತ್ರವನ್ನು ಕೈಯಲ್ಲಿ ಹಿಡಿದುಕೊಂಡು ಆತನ ಆಶ್ರಯದ ಕೃಪೆಯನ್ನು ಬಲವಾಗಿ ನಂಬಿದನು. ಆಗ ಶತ್ರುಗಳು ತಮಗಾದ ಜಯದಿಂದ ಉಬ್ಬಿದ್ದಾರೆ. ಲೂಟಿಯಲ್ಲೂ-ಕಳವಿನಲ್ಲೂ ಮಗ್ನರಾಗಿದ್ದಾರೆಂಬುದನ್ನು ತಿಳಿದುಕೊಂಡನು. ಹಾಗೆಂದು ಖಾತ್ರಿಯಾದಾಗ ಮನದಲ್ಲಿ ಧೈರ್ಯ ತಂದುಕೊಂಡು ಅಲ್ಲಾನ ಮೇಲೆ ಸಂಪೂರ್ಣವಾಗಿ ಭಾರ ಹಾಕಿ, ತನ್ನ ಉಳಿದಿದ್ದ ಎರಡುಸಾವಿರ ಸೈನ್ಯದೊಂದಿಗೆ ಒಮ್ಮೆಲೆ ಶತ್ರುಗಳ ಮೇಲೆ ಬಿದ್ದನು.[೧] ಆಕಸ್ಮಿಕ ದಾಳಿಯಿಂದ ತತ್ತರಿಸಿದ ಶತ್ರು ಸೈನ್ಯದಲ್ಲಿಯ ಬಹುತೇಕ ಶೂರರು ಯೂಸುಫನಿಗೆ ಶರಣಾಗತರಾದರು. ತಮ್ಮ ಶಸ್ತ್ರಗಳನ್ನು ಯೂಸುಫನಿಗೆ ಒಪ್ಪಿಸಿದರು. ತಿಮ್ಮರಾಜನ ಹತ್ತಿರವಿದ್ದ ಸೈನ್ಯದಲ್ಲಿ ಮಾತ್ರ ಯುದ್ಧ ನಡೆಯಿತು. ಆದರೆ ಅಯೋಗ್ಯನಾದ ತಿಮ್ಮರಾಜನು ತನ್ನ ಜೀವ ರಕ್ಷಣೆಗಾಗಿ ಯುದ್ಧಭೂಮಿಯಿಂದ ಓಡಿ ಹೋದನು. ಆಗ ಯವನ ಸೇನೆಗೆ ಬಹು ಬೆಲೆಯುಳ್ಳ ಲೂಟಿಯಾದ ದ್ರವ್ಯ ಕೈಗೆ ಸಿಕ್ಕಿತು. ಯೂಸುಫನು ಅಲ್ಲಾನನ್ನು ಸ್ಮರಿಸುತ್ತ ವಿಜಯಿಯಾಗಿ ತನ್ನ ರಾಜಧಾನಿಗೆ ಬಂದನು.

### ೬. *ಆದಿಲಶಹನು ಷಿಯಾ ಧರ್ಮವನ್ನು ಪ್ರಾರಂಭಿಸಿ ಖಲೀಫರ ಹೆಸರನ್ನು ಬಿಟ್ಟು ಶ್ರೇಷ್ಠ ಇಮಾಮರ ಹೆಸರಿನಲ್ಲಿ ಖುತಬಾ ಓದಿಸಿದ್ದು.*

ಯೂಸುಫ ಆದಿಲಶಹನು ತನ್ನ ದೈವ ಬಲ ಹಾಗೂ ಬುದ್ಧಿ ಬಲ ಸಾಮರ್ಥ್ಯಗಳಿಂದ ಶತ್ರುಗಳ ದಮನ ಮಾಡಿ ರಾಜ್ಯವನ್ನು ವಿಸ್ತರಿಸಿದನು. ಒಂದು ದಿನ[೨] ಸಭೆಯನ್ನು ಸೇರಿಸಿ ತನ್ನ ಆಸ್ಥಾನದ ಅಧಿಕಾರಿ ವರ್ಗವನ್ನು, ಸರದಾರರನ್ನು ನಗರದಲ್ಲಿಯ ದೊಡ್ಡ ದೊಡ್ಡ ವಿದ್ವಾಂಸರನ್ನು ಕರೆಸಿ ಅವರನ್ನು ಉಪಚರಿಸುತ್ತ ಹೀಗೆ ಹೇಳಿದನು. "ನಾನು ಒಂದು ವೇಳೆ ಐಶ್ವರ್ಯವಂತನಾಗಿ, ಪ್ರಬಲನಾಗಿ ಬಾದಶಹನಾದರೆ ದೇವರಲ್ಲಿ ಒಂದು ಹರಕೆಯನ್ನು ಹೊತ್ತಿದ್ದೆನು. ಇಮಾಮರ ಧರ್ಮವನ್ನು ಪಾಲಿಸುವೆನೆಂದು ಬೇಡಿಕೊಂಡಿದ್ದೆನು. ಶಿಯಾ ಧರ್ಮವನ್ನು ಪಾಲಿಸುವೆನೆಂದೂ, ಪವಿತ್ರ ಇಮಾಮರ ಹೆಸರಿನಲ್ಲಿ ಖುತಬಾವನ್ನು

---

೧. ಫರಿಸ್ತಾ ರಜಬ ಹಿಜರಿಶಕ ೮೮೯ (ಎಪ್ರಿಲ್ ೧೪೮೪) ಶನಿವಾರ ಎಂದಿದ್ದಾನೆ. ಬ್ರಿಗ್ಸ ಫೆ. III ಪುಟ ೧೨-೧೩. ಬಹುಶಃ ಫರಿಸ್ತಾನ ಆಧಾರದಿಂದಲೇ ಮುಧೋಳ ಮನೆತನದ ಬಖರಿನಲ್ಲಿ ೧೧ ರಜಬ ೮೮೯ ಹಿ. ಶನಿವಾರ (೨೮ ಎಪ್ರಿಲ್ ೧೪೮೪) ಈ ದಿನಾಂಕವನ್ನು ಕೊಡಲಾಗಿದೆ. ಮುಧೋ ಬ. ಪುಟ ೧೪೨.

೨. ಫರಿಸ್ತಾ (ಬ್ರಿಗ್ಸ) III ಪುಟ -೨೨, ಕ್ರಿ.ಶ. ೧೫೦೨ರಲ್ಲಿ ಪ್ರಸಂಗ.

ಪಠಿಸುವೆನೆಂದು ಬೇಡಿಕೊಂಡಿದ್ದೆನು. ಪೈಗಂಬರರ ಸನ್ನಿಧಿಯಲ್ಲಿ ಇರುವ ಇವರ ಕುರಿತು ನನಗೆ ಬೇಸರವೇನೂ ಇಲ್ಲ. ಅಲ್ಲದೆ ಹನಫಿ ಧರ್ಮದ ಬಗ್ಗೆಯೂ ನನಗೆ ಬೇಸರ ಇಲ್ಲ. ಅಲ್ಲದೆ ಹನಫಿ ಧರ್ಮದ ಬಗ್ಗೆ ನನಗೆ ಚಿಂತೆಯಾಗಲೀ ಖೇದವಾಗಲೀ ಎಳ್ಳಷ್ಟೂ ಇಲ್ಲ. ಯಾರಿಗೆ ಯಾವ ಧರ್ಮದ ನಡತೆ ಹಿಡಿಸುತ್ತದೆಯೋ ಅದನ್ನೇ ಸ್ವೀಕರಿಸಬೇಕು. ಇನ್ನೊಬ್ಬರಿಗೆ ಜುಲುಮೆ ಮಾಡುವ ಕಾರಣವಿಲ್ಲ. ನನ್ನ ವಿಚಾರ ಹೀಗಿದೆ. ಈಗ ನಿಮ್ಮೆಲ್ಲರ ವಿಚಾರ ಹೇಗಿದೆ? ಈ ವಿಷಯದಲ್ಲಿ ಯಾವ ಸಲಹೆ ಇದೆ?" ಎಂದು ಕೇಳಿದನು. ಆಗ ಶಿಯಾ ಧರ್ಮವನ್ನು ಪಾಲಿಸುವ ಜನರಿಗೆ ಬಾದಶಹನ ವಿಚಾರ ಸೂಕ್ತವೆಂದು ಕಂಡು. 'ಬಿಸ್ಮಿಲ್ಲಾಹ, ಇದು ಯೋಗ್ಯ ಹಾಗು ಉತ್ತಮ ವಿಚಾರ, ಕಲ್ಯಾಣ ಕಾರಕ ಕೆಲಸದಲ್ಲಿ ಯಾರಿಂದಲೂ ಸಲಹೆ ಕೇಳುವ ಕಾರಣವಿಲ್ಲ' ಎಂದರು. ಸಭೆಯಲ್ಲಿ ಎಷ್ಟೋ ಜನ ಹನಫೀ ಹಾಗು ಸುನ್ನೀ ಧರ್ಮವನ್ನು ಪಾಲಿಸುವವರಿದ್ದರು. ಅವರಾರೂ ತುಟಿ ಬಿಚ್ಚಲಿಲ್ಲ. ಕೆಲವು ನಿಷ್ಠುರ ವ್ಯಕ್ತಿಗಳಿಗೆ ಇದು ಒಪ್ಪಿಗೆಯಾಗದೆ ಅವರು ಉತ್ತರಿಸಿದರು. 'ಈ ದುರ್ವಿಚಾರ ಬೋಧಿಸುವ ವಿಚಾರದಲ್ಲಿ ಇದು ಉತ್ತಮ ಆಚಾರದ ಕೆಲಸವಲ್ಲ. ಯಾಕೆಂದರೆ ಇದೀಗ ರಾಜ್ಯ ಪ್ರಾರಂಭವಾಗಿದೆ. ಹಾಗೂ ವೈರಿಗಳು ಕಾದು ಕುಳಿತಿದ್ದಾರೆ. ಸುಲ್ತಾನ ಮಹ್ಮದ ಬಹಮನಿಯು ವಾಸ್ತವದಲ್ಲಿ ಈ ಪ್ರದೇಶದ ವಾರಸುದಾರನಾದವನು ಮಧ್ಯವರ್ತಿ ಸ್ಥಳದಲ್ಲಿದ್ದಾನೆ. ಅದರಂತೆ ಇನ್ನೂ ಕೆಲವು ಜನ ಇದಕ್ಕಾಗಿ ಹೊಂಚು ಹಾಕಿ ಕುಳಿತಿದ್ದಾರೆ. ಅವರಲ್ಲಿ ಅಮೀರ ಬರೀದ, ಅಹ್ಮದ ನಿಜಾಮುಲ್ ಮುಲ್ಕ ಮತ್ತು ಇಮಾದುಲ್ಮುಲ್ಕ ಇವರೆಲ್ಲ ಕೇವಲ ಸುನ್ನೀ ಧರ್ಮದವರಾಗಿದ್ದಾರೆ. ಸರಕಾರದ ಎಲ್ಲ ಜನರಲ್ಲಿ, ಅಮೀರರು, ಸಿಪಾಯಿಗಳು, ಸುತ್ತಮುತ್ತಲಿನ ಪ್ರದೇಶಗಳಲ್ಲಿಯ ಹಾಗೂ ನಗರದಲ್ಲಿ ಇರುವ ಜನ ಹನಫಿ ಹಾಗು ಸುನ್ನೀ ಧರ್ಮವನ್ನು ಪಾಲಿಸುವವರೇ ಆಗಿದ್ದಾರೆ. ಈ ಕೆಲಸದಿಂದ ದೊಡ್ಡ ಸಂಕಟವನ್ನೇ ಸೃಷ್ಟಿ ಮಾಡಿದಂತಾದೀತು. ಅದರ ಫಲ ಕೆಟ್ಟದ್ದೇ ಆದೀತು. ಸಂಕಟದ ಅಗ್ನಿ ತಲೆಗೆ ತಾಗಿ ಆ ಅಗ್ನಿಯನ್ನು ಉಪಶಮನ ಮಾಡುವ ಶಕ್ತಿ ಉಳಿಯಲಾರದು. ಆದ್ದರಿಂದ ಮನದಲ್ಲಿಯ ಈ ಸಂಕಲ್ಪದಿಂದ ದೂರವಿರುವುದರಲ್ಲಿಯೇ ತಮ್ಮ ಕಲ್ಯಾಣವಿದೆ' ಎಂದು ಹೇಳಿದರು. ಈ ಉತ್ತರವನ್ನು ಕೇಳಿದ ಬಾದಶಹನು ತಲೆ ಕೆಳಗೆ ಹಾಕಿಕೊಂಡು ವಿಚಾರದಲ್ಲಿ ಬಿದ್ದನು. ಎಲ್ಲ ಅಧಿಕಾರಿಗಳು, ಸಚಿವ ವರ್ಗದವರು ಪ್ರತಿಕೂಲರಾದ್ದುದರಿಂದ ಚಿಂತಾಮಗ್ನನಾಗಿ ನಿರುಪಾಯನಾಗಿ ಸ್ತಬ್ಧನಾದನು.

ಮುಂದೆ ಕೆಲವು ದಿನಗಳಲ್ಲಿ ಇರಾಣದ ಶಾಹ ಇಸ್ಮಾಯಿಲ್ ಸೂಫವಿ ಈತನು ಇರಾಣದ ಪ್ರದೇಶದಲ್ಲಿ ಶಿಯಾ ಧರ್ಮವನ್ನು ಪ್ರಾರಂಭಿಸಿದ್ದಾನೆಂದು, ಖಲೀಫರ ಹೆಸರನ್ನು ಬಿಟ್ಟು ಪವಿತ್ರ ಇಮಾಮರ ಹೆಸರಿನಲ್ಲಿ ಖುತಬಾವನ್ನು ಓದಿಸಿದ್ದಾನೆಂಬ ಸುದ್ದಿ ಬಂದಿತು. ಯೂಸುಫನು ತುಂಬ ಸಂತೋಷ ಪಟ್ಟು, ಕಮರುತ್ತಿದ್ದ ತನ್ನ ಮನೋರಥದ ವೃಕ್ಷವು ಮತ್ತೆ ಪಲ್ಲವಿಸಿದಂತೆ, ಒಮ್ಮೆಲೆ ಭಯ-ದಾಕ್ಷಿಣ್ಯಗಳನ್ನು ಕಿತ್ತೊಗೆದನು. ಶುಕ್ರವಾರದಂದು ಅರ್ಕ ಕಿಲ್ಲೆಯ ಮಶೀದಿಯಲ್ಲಿ ಎಲ್ಲ ಅಮೀರ ಜನರನ್ನು, ಖಾಸಾ ಅಧಿಕಾರಿ ಜನರನ್ನು ಕರೆಸಿದನು. ಕಲಮುಗಳನ್ನು ಓದುವುದರಲ್ಲಿ ನಿಷ್ಣಾತನೂ ಪ್ರಸಿದ್ಧನೂ ಆದ ನಬೀಯನ್ನು ಕರೆಯಲು ಆದೇಶವಿತ್ತನು. ಆತನು ಮೀನಾರದ ಮೇಲೆ ನಿಂತು 'ಅಜಾನ'ವನ್ನು ಓದಿದನು. ಮತ್ತು ಆಷಹಾದದ ಕಲಮಾದ 'ಅನಾಇಲ್ಲಿಯಾ ಮತ್ತು ಇಲ್ಲಾಹ' ಇಷ್ಟನ್ನು ಅಜಾನದ ಕಲಮಿನಲ್ಲಿ ಬೆಳೆಸಿದನು. ಖತೀಬನು ಮಿಂಬರದ ಮೇಲೆ ನಿಂತು ಪೈಗಂಬರರ ಸನ್ನಿದಿಯಲ್ಲಿ ಇರುವವರ ಹೆಸರುಗಳನ್ನು ಬಿಟ್ಟು, ಹನ್ನೆರಡು ಇಮಾಮರ ಹೆಸರಿನಲ್ಲಿ ಖುತಬಾವನ್ನು ಕೊನೆಗೆ ಸೇರಿಸಿದನು. ಅಲ್ಲಿ ನೆರೆದ ಅಮೀರ ಜನರಲ್ಲಿ ಬಹುತೇಕರು ಸುನ್ನೀ ಧರ್ಮದವರಾಗಿದ್ದರು. ಅವರುಗಳಲ್ಲಿ ಮಹಮ್ಮದ ಐನುಲ್‌ಮುಲ್ಕನು ಎಲ್ಲ ಅಮೀರ

ಜನರಲ್ಲಿ ಶ್ರೇಷ್ಠನೂ ಸೈನ್ಯದ ಸರದಾರನೂ ಆಗಿದ್ದನು. ದಿಲಾವರಖಾನ ಬಕ್ಷೀ ಮತ್ತು ಮಹಮ್ಮದ ಸಿಸ್ತಾನಿ. ಮೊದಲಾದ ಎಷ್ಟೋ ಜನರಿಗೆ ಇದು ಸರಿಬರಲಿಲ್ಲವಾಗಿ, ಓದುವುದು ಮುಗಿದ ತಕ್ಷಣ ಎದ್ದು ಮನೆಯ ಕಡೆಗೆ ತೆರಳಿದರು. ಇಷ್ಟಾಗುತ್ತಿದ್ದಂತೆಯೇ ಆದಿಲಶಾಹನು ನಮ್ರತೆಯಿಂದ ಮುಂದೆ ಬಂದು ಪ್ರತಿಯೊಬ್ಬರನ್ನು ಸಾಂತ್ವನಗೊಳಿಸಲು ಪ್ರಯತ್ನಿಸಿದನು. ಅವನ ಸಾಂತ್ವನದ ತಾತ್ಪರ್ಯವನ್ನು ಗ್ರಹಿಸಿ, ಲಕುಮುದ್ದೀನ ಬಿನ್ ವಲಿದೀನನು ಭರವಸೆಯನ್ನಿತ್ತನು. ಆದರೆ ಬಹಳಷ್ಟು ಜನ ವಿದ್ವಾಂಸರು, ನಗರದ ಕಾರಭಾರಿ ಜನರು ಸುನ್ನಿಧರ್ಮವನ್ನು ಪಾಲಿಸುತ್ತಿರುವವರು, ಸುಲ್ತಾನ ಮಹಮ್ಮದನಿಗೆ ಹಾಗೂ ಆತನ ಎಲ್ಲ ಅಧಿಕಾರಿ ವರ್ಗಕ್ಕೆ ಪತ್ರ ಬರೆದು ಧರ್ಮರಕ್ಷಣೆಯ ಸಹಾಯವನ್ನು ಕೋರಿದರು. ಸುಲ್ತಾನ ಮಹಮ್ಮದನು ಶಸ್ತ್ರಸಹಿತ ಸನ್ನದ್ಧನಾಗಿ, ಅಮೀರ ಬರೀದ, ಅಹಮ್ಮದ ನಿಜಾಮುಲ್‌ಮುಲ್ಕ ಹಾಗೂ ಕುತುಬ ಶಾಹ ಕೂಡ ಬಹಳಷ್ಟು ಸೇನೆಯೊಂದಿಗೆ ವಿಜಾಪುರದತ್ತ ಹೊರಟರು. ಆದಿಲಶಹನಿಗೆ ನಗರದಲ್ಲಿ ಇರಲು ಕೂಡ ಧೈರ್ಯವಾಗಲಿಲ್ಲ. ಆದ್ದರಿಂದ, ಅವನು ಹೊರಬಿದ್ದು ಖಾನದೇಶದ ದಾರಿಯನ್ನು ಹಿಡಿದನು. ಅಲ್ಲಿಯ ಇಮಾದುಲ್‌ಮುಲ್ಕನೊಂದಿಗೆ ಆತನಿಗೆ ಅತ್ಯಂತ ಸಖ್ಯವಿತ್ತು. ಆದ್ದರಿಂದ ಈ ಭಯಗ್ರಸ್ತ ವಾತಾವರಣದಲ್ಲಿ ಆತನ ಆಶ್ರಯವನ್ನು ಇಚ್ಛಿಸಿದನು. ಆತನು ವೃದ್ಧನೂ ಜಗತ್ತಿನ ಅನುಭವವುಳ್ಳವನೂ ಆಗಿದ್ದನು. ಆದ್ದರಿಂದ ಆತನು ಆದಿಲಶಹನಿಗೆ ಬೋಧಿಸುತ್ತ ಆಚಾರದ ಭಿನ್ನತ್ವದಿಂದಾಗಿ ಮತ್ತು ಖುತಬಾ ಬದಲಿಸಿದ್ದಕ್ಕೆ ಸಿಟ್ಟಿಗೆ ಬಂದು ಮತ್ತೆ ಮೊದಲಿನಂತೆ ಖುತಬಾವನ್ನು ಕಾಯಮ್ ಆಗಿ ಇಡಲು ತಿಳಿಸಿ ಹೇಳಿದನು. ಆದಿಲಶಹನು ಇಮಾದುಲ್‌ಮುಲ್ಕನ ಸಲಹೆಯಂತೆ, ಕೆಲಸ ಮಾಡಲು ಒಪ್ಪಿ ತನ್ನ ದಿವಾನರಿಗೆ ಗುಪ್ತವಾಗಿ ವಿಜಾಪುರಕ್ಕೆ ಪತ್ರಗಳನ್ನು ಕಳಿಸಿದನು. ಅದರಲ್ಲಿ ಹೊಸ ಖುತಬಾವನ್ನು ನಿಲ್ಲಿಸಿ ಮೊದಲಿನ ಖುತಬಾವನ್ನೇ ಓದಲು ಹೇಳಿ ಸದ್ಯದ ಸಮಯವನ್ನು ನಿಸ್ತರಿಸಿರಿ ಎಂದು ಬರೆದಿದ್ದನು. ಅನಂತರ ಇಮಾದುಲ್ ಮುಲ್ಕನು ಸೈನ್ಯದೊಂದಿಗೆ ಹೋದ ಸುಲ್ತಾನ ಮಹ್ಮದನಿಗೆ ವಿಷಯ ತಿಳಿಸಿ ತಿರುಗಿ ಬೀದರಕ್ಕೆ ಹೋಗುವಂತೆ ಕೇಳಿಕೊಂಡನು ಮತ್ತು ಅದರಂತೆ ಅಹ್ಮದ ನಿಜಾಮುಲ್‌ಮುಲ್ಕ ಹಾಗೂ ಕುತುಬಶಾಹಿಗಳನ್ನೂ ಅವರವರ ಸ್ಥಳಗಳಿಗೆ ಹೋಗಲು ವಿನಂತಿಸಿಕೊಂಡಾಗ, ಅವರೆಲ್ಲ ತಿರುಗಿ ಹೋದರು. ಕೆಲವು ದಿನಗಳ ಅನಂತರ ಸಂಕಟ ಪರಿಹಾರವಾಯಿತು. ಆದಿಲಶಾಹನು ತಿರುಗಿ ಅಲ್ಲಿಂದ ವಿಜಾಪುರಕ್ಕೆ ಬಂದನು. ಖುತಬಾವನ್ನು ಖಲೀಫರ ಹೆಸರಿನಲ್ಲೇ ಓದುವುದು ಮುಂದುವರೆಯಿತು. ಎಷ್ಟೋ ದಿನಗಳು ಹೀಗೆಯೇ ಗತಿಸಿದುವು. ಆತನ ಐಶ್ವರ್ಯವೂ ವೃದ್ಧಿಸಿತು. ತನ್ನ ರಾಜಧಾನಿಯಲ್ಲಿಯ ಸುನ್ನೀ ಪಂಥದ ಜನರನ್ನು ನಾನಾ ಪ್ರಕಾರದ ಮನೋರಂಜನೆ ಮಾಡಿ, ಅವರಲ್ಲಿ ಭರವಸೆಯನ್ನು ಹುಟ್ಟಿಸಿ, ತನ್ನ ಕೈಗೆ ತೆಗೆದುಕೊಂಡನು. ಆಗ ಮತ್ತೆ ಮೊದಲಿನಂತೆ ಆದೇಶ ಹೊರಡಿಸಿ. ಪವಿತ್ರ ಇಮಾಮರ ಹೆಸರಿನಲ್ಲಿ ಖುತಬಾ ಓದಿಸಿದನು.

ಅನೇಕ ದಿನಗಳ ಅನಂತರ ಫಿರಂಗಿಗಳು ಗೋವೆಯ ಕೋಟೆಯನ್ನು ಸ್ವಾಧೀನ ಪಡಿಸಿಕೊಂಡಿದ್ದಾರೆಂಬ ಸುದ್ದಿ ಬಂದಿತು.[೧] ಅದನ್ನು ಕೇಳಿದ ತಕ್ಷಣ ಆದಿಲಶಾಹನು ತನ್ನ ಖಾಸಗಿ ಧ್ವಜದ ಹತ್ತು ಸಾವಿರ ಮೊಗಲ ಹಾಗು ದಖಣಿ ಸವಾರರನ್ನು ತೆಗೆದುಕೊಂಡು ಐದನೆಯ ದಿನ ಅಲ್ಲಿಗೆ ಬಂದು ಮುಟ್ಟಿದನು. ಸಾಮಾನ್ಯ ಜನರು ಬಂದು ಹೋಗುವಂತೆ ಕೋಟೆಯನ್ನು ಪ್ರವೇಶಿಸಿದನು. ಅಲ್ಲಿ ಯುದ್ಧ ಪ್ರಾರಂಭಿಸಿ ಬಹಳ

---

೧. ೨೦-ಫೆಬ್ರವರಿ ೧೫೧೦ ರಂದು ಮೀರ ಆಲಿಯು ಗೋವೆಯನ್ನು ಪೋರ್ತುಗೀಜರಿಗೆ ಕೊಟ್ಟನು. ಆದರೆ ಅನಂತರ ಯೂಸುಫ ಆದಿಲಶಹನು ಅಲ್ಲಿಗೆ ಹೋಗಿ ಮೇ ತಿಂಗಳಲ್ಲಿ ತಿರುಗಿ ಪಡೆದನು. – ಬ್ರಿಗ್ಸ್ ಫೆ III ಪುಟ ೨೯-೩೦ ಮತ್ತು ಕ್ರಾನಾಲಾಜಿಕಲ್ ಪೋರ್ತುಗೀಜ ಎಪಿಟೋಮ್ ಪುಟ ೫೦೮-೫೦೯.

ಪ್ರಯತ್ನಗಳಿಂದ ಕಿಲ್ಲೆಯನ್ನು ವಶ ಪಡಿಸಿಕೊಂಡನು, ಕಿಲ್ಲೆಯಲ್ಲಿರುವ ಬಹಳಷ್ಟು ಜನರನ್ನು ಕೊಲ್ಲಲಾಯಿತು. ನಂತರ ಯೂಸುಫನು ಕೋಟೆಯ ವ್ಯವಸ್ಥೆ ಮಾಡಿ ವಿಜಾಪುರಕ್ಕೆ ಬಂದನು.

## ೭. *ಯೂಸುಫ ಆದಿಲಶಹನು ತೀರಿಕೊಂಡದ್ದು:*

ಯೂಸುಫ ಆದಿಲಶಹನು ಇಪ್ಪತ್ತೆರಡು ವರುಷ ರಾಜ್ಯವಾಳಿದ ಅನಂತರ, ಸಂಗ್ರಾಣಿಯ ರೋಗದ ಉಪದ್ರವವಾಗಿ ದಿನದಿಂದ ದಿನಕ್ಕೆ ಅವನ ಪ್ರಕೃತಿ ಕೆಡುತ್ತಲೇ ಹೋಯಿತು. ಅದು ಗುಣವಾಗುವ ಲಕ್ಷಣಗಳೇ ಕಾಣಲಿಲ್ಲ. ಅನಂತರ ಆತನ ಮಗ ಇಸ್ಮಾಯಿಲನನ್ನು ಸಿಂಹಾಸನದ ಮೇಲೆ ಕೂಡ್ರಿಸಿ ಆಡಳಿತದ ಸೂತ್ರಗಳನ್ನು ಕಮಾಲ ಹುಸೇನ ದಖಣಿಯ ಕೊರಳಿಗೆ ಹಾಕಿದನು. ಅಂತ್ಯಕಾಲದಲ್ಲಿ "ತನ್ನ ಶವವನ್ನು ಸಯ್ಯದ ಜಮಾನ್ ಊರ್ಫ ಶಾಹ ಚಂದಾಹುಸೇನಿ ಆತನ ಸಮಾಧಿಯ ಹತ್ತಿರ, ಗೋಗಿಯಲ್ಲಿಯೇ ದಫನ ಮಾಡಬೇಕು. ಯಾಕೆಂದರೆ ಆತನ ಸೇವೆಯನ್ನು ನಾನು ತುಂಬ ಮಾಡಿದ್ದೇನೆ" ಎಂದು ಹೇಳಿದನು.[೧] ಆಗ್ರಾದ ಗ್ರಂಥಕಾರನು ತನ್ನ ಬರವಣಿಗೆಯಲ್ಲಿ ಯೂಸುಫನ ಮರಣದ ದಿನವನ್ನು ೯೧೩ ಹಿ (ಕ್ರಿ.ಶ. ೧೫೦೭-೮), ಮಹ್ಮದ ಕಾಶೀಮ ಫಿರಿಸ್ತಾನ ಬರವಣಿಗೆಯಲ್ಲಿ ೯೧೬ ಹಿ (ಕ್ರಿ.ಶ. ೧೫೧೦-೧೧), ರಫೀಉದ್ದೀನ ಶಿರಾಜಿ ಮತ್ತು ಇಬ್ರಾಹಿನ ಅಸದಖಾನಿ ಅವರ ಬರವಣಿಗೆಗಳಲ್ಲಿ ೯೨೫ ಹಿಂದ (ಕ್ರಿ.ಶ. ೧೫೧೬) ಎಂದು ಬರೆಯಲಾಗಿದೆ.

ಯೂಸುಫ ಆದಿಲಶಹನಿಗೆ ಇಸ್ಮಾಯಿಲ್ ಎಂಬ ಹೆಸರಿನ ಒಬ್ಬ ಮಗ ಹಾಗೂ ಮೂವರು ಹೆಣ್ಣುಮಕ್ಕಳಿದ್ದರು. ಸುನ್ನಿ ಧರ್ಮವಿರೋಧಿಯಾಗಿದ್ದರೂ ತನ್ನ ಮೂವರು ಹೆಣ್ಣುಮಕ್ಕಳನ್ನು ಸುನ್ನೀ ಧರ್ಮದವರಿಗೇ ಕೊಟ್ಟಿದ್ದನು. ಮರ್ಯಮ್ ಸುಲ್ತಾನಳನ್ನು ಬುರ್ಹಾನ ನಿಜಾಮ ಶಾಹನಿಗೆ ಕೊಟ್ಟಿದ್ದನು. ಖದೀಜಾ ಸುಲ್ತಾನಳನ್ನು ಅಲ್ಲಾಉದ್ದೀನ ಇಮಾದುಲ್‌ಮುಲ್ಕನಿಗೆ ಕೊಟ್ಟಿದ್ದನು. ಬೀಬಿ ಸತಿಯನ್ನು ಅಹಮ್ಮದಶಾಹ ಬಿನ್ ಸುಲ್ತಾನ ಮಹಮ್ಮದ್ ಬಹಮನಿಗೆ ಕೊಟ್ಟಿದ್ದನು. ಯೂಸುಫನ ಆಸಾರ ಅಂದರೆ ಗುರುತು ವಿಜಾಪುರದ ಆರ್ಕ ಕಿಲ್ಲೆಯಲ್ಲಿ ಇದೆ. ಪ್ರಾಚೀನ ಪ್ರಾರ್ಥನಾ ಮಂದಿರವು ಆಲಿ ಆದಿಲಶಹನ ಕಾಲದಲ್ಲಿ ಕೋಟೆಯ ಒಳಗಡೆಗೆಯೇ ಬಂದಿತು. ಆಹಸಾನಾಬಾದ ಕಲಬುರ್ಗಿಯಲ್ಲಿ ಶೇಖ್ ಮಹಮ್ಮದ ಸಿರಾಜನಿಂದೀಯ ಮೂಲ ಪುರುಷನ ಮಸೀದಿ ಹಾಗು ಮೀನಾರುಗಳಿವೆ.

ವಿಜಾಪುರವು ಪುರಾತನ ಕಾಲದ ನಗರವಾಗಿದೆ. ಎರಡನೆಯ ಇಬ್ರಾಹಿಮ ಆದಿಲಶಹನ ಕಾಲದಲ್ಲಿ ಇದಕ್ಕೆ ಮಹಮ್ಮದಪುರ ಎಂಬ ಹೆಸರು ಬಿತ್ತು.[೨] ಪೂರ್ವಕಾಲದಲ್ಲಿ ವಿಜಾಪುರವು ಒಂದು ಕಸಬಾ ಆಗಿತ್ತು ಮತ್ತು ಪ್ರಸಿದ್ಧ ಪಟ್ಟಣ ಎಂದೂ ಹೇಳಲಾಗುತ್ತಿತ್ತು. ದೊಡ್ಡ ದೊಡ್ಡ ವಿದ್ವಾಂಸರು, ಗೌರವಾನ್ವಿತರು ಇರುತ್ತಿರುವ ಸ್ಥಳವಾಗಿತ್ತು. ಶೇಖರ ಶೇಖ ಐನುದ್ದೀನ ಗಂಜುಲ್ ಇಲ್ಮ ಎಂಬವರು 'ಆತ್ವಾರುಲ್ ಇಬ್ರಾರ್' ಎಂಬ ಪುಸ್ತಕದಲ್ಲಿ ಹೀಗೆ ಬರೆದಿದ್ದಾರೆ. ಅದರ ತರ್ಜುಮೆ ಹೀಗಿದೆ. 'ಶೇಖುಲ್ ಶಾಮೀಲುಲ್ ಮುಲಾಮಿನ್ ವಜಿಹಬೇತುಲ ಮಕಾಮೊದುಲ ಇಲ್ಲಿಯಾ ಶೇಖ ಇಬ್ರಾಹಿಂ ಸಂಗಾನಿ ರಹಮತುಲ್ಲಾ

---

೧. ಯುಸುಫ ಆದಿಲಶಾಹನು ಮೆ ೧೫೧೦ ರವರೆಗಂತೂ ಜೀವಂತವಾಗಿದ್ದನು. ಅನಂತರ ತುಸು ದಿನಗಳಲ್ಲಿ ಸತ್ತಿರಬೇಕು. ಬ್ರಿಗ್ಸ್ -ಫೆ III ಪು. ೫೦೯ (ಪೋರ್ತುಗೀಜ ಕ್ರಾನಿಕಲ್ ಎಪಿಟೋಮ ಕೂಡ)

೨. ಎರಡನೆ ಇಬ್ರಾಹಿಮನ ಕಾಲದಲ್ಲಿ 'ವಿದ್ಯಾಪುರ' ಎಂದು ಕರೆಯುತ್ತಿದ್ದರು.

ಅಲೈಹಿ' ಅವರು ಎಷ್ಟೋದಿನ ದೌಲತಾಬಾದಿನಲ್ಲಿ ಫಕೀರರೊಂದಿಗೆ ಇರುತ್ತಿದ್ದರು. ಅನಂತರ ಹರುಲ್ಕೈ ಹೋಗಿ ಅಲ್ಲಿಂದ ಕಸಬಾ ವಿಜಾಪುರಕ್ಕೆ ಬಂದು ಇರಹತ್ತಿದರು. ಅಲ್ಲಿಯೇ ತೀರಿಕೊಂಡರು. ಅವರ ಸಮಾಧಿ 'ಶಮಾಲಿ' ಕಬರಸ್ಥಾನದಲ್ಲಿ ಪ್ರಸಿದ್ಧವಾಗಿದೆ.' ಹಜರತ್ ಶೇಖ ಮಶಾರನಿಲ್ಧೆ ಇವರು ಕೂಡ 'ತವಾರಿಖ' ದಲ್ಲಿ ಸಾಕಷ್ಟು ವಿಚಾರಮಾಡಿಯೇ ಹೀಗೆ ಬರೆದಿದ್ದಾರೆ. ಐನುದ್ದೀನ ಅಬು ರಜಾ ನ ಆಧಿಪತ್ಯವು ಪೂರ್ವಕಾಲದಿಂದ ಅಲ್ಲಾಉದ್ದೀನ ಖಿಲಜೀ ವೇಳೆಯಿಂದಲೂ ಇತ್ತು. ಅನಂತರ ಅಲ್ಲೀಶಾಹನ ಆಧಿಪತ್ಯ, ಆತನ ಅಂತ್ಯ ಕಾಲದಲ್ಲಿ ಹಿ ಸನ್ ೭೦೧ (ಕ್ರಿ.ಶ. ೧೩೦೧-೨)ರಲ್ಲಿ ನಗರದ ಆಧಿಪತ್ಯವು ಎರಡನೆಯವರ ಅಧೀನವಾಯಿತು. ಅದು ಆರು ವರುಷ ಅವನ ಹತ್ತಿರ ಇತ್ತು. ಅನಂತರ ಹಿ. ಸನ್ ೭೦೬ (ಕ್ರಿ.ಶ. ೧೩೦೬-೭)ರಲ್ಲಿ ವಿಜಾಪುರದ ಆಧಿಪತ್ಯವು ಕನ್ನಡದವರಿಗೆ ಸೇರಿತ್ತು. ರಾಯ ರಾಮದೇವನ ವಿನಂತಿಯಂತೆ ಕಟ್ಟಿಗೆಯ ಜುಮ್ಮಾ ಮಶೀದಿಯನ್ನು ಕಟ್ಟಲಾಯಿತು. ಎಷ್ಟೋ ದಿನಗಳ ಅನಂತರ ಐನುದ್ದೀನನ ಅಧಿಕಾರ ಹೋಗಿ ಆತನ ಮಗ ಕರೀಮುದ್ದೀನ ಅಬು ರಜ್ಯಾ ಈತನು ವಿಜಾಪುರದ ಒಡೆಯನಾದನು. ಹಿ. ಸನ್ ೭೧೬ (ಕ್ರಿ.ಶ. ೧೩೧೬-೧೭) ರಲ್ಲಿ ಜುಮ್ಮಾ ಮಶೀದಿಯನ್ನು ಕಲ್ಲಿನಿಂದ ಕಟ್ಟಿದರು. ಈಗಲೂ ಕೂಡ ಆರ್ಕ ಕಿಲ್ಲಾದಲ್ಲಿಯ ಕಲ್ಲಿನ ಮಸೀದಿಯ ಸಂಗೀನ ತಕ್ತೆಯ ಮೇಲೆ 'ಪುರಾತನ ಕಿಲ್ಕಮರೀ ಮುದ್ದವಲಾ ಎಂದು ಹೆಸರನ್ನು ಬರೆದದ್ದು ಸ್ಪಷ್ಟವಾಗಿದೆ.

*೮. ಯೂಸುಫ ಆದಿಲಶಹನ ಸೈನ್ಯದ ಪರಿಮಿತಿ ಮತ್ತು ಕ್ರಮವಾಗಿ ಅದರ ವಿಸ್ತಾರ:*

ಯೂಸುಫ ಆದಿಲಶಹನ ಕಾಲದಲ್ಲಿ ಸೈನ್ಯದ ಗಣತಿ ಹೀಗಿದೆ. ಸವಾರರು ಹನ್ನೆರಡು ಸಾವಿರ, ಸಿಬ್ಬಂದಿ ಜನ ಹದಿನಾಲ್ಕು ಸಾವಿರ, ಆನೆಗಳು ಮೂವತ್ತೇಳು. ಪರಂಡಾ ಕೋಟೆಯನ್ನು ಖ್ವಾಜಾ ಜಾಹಾನನು ಹಿ. ಸನ್ ೮೯೨ (ಕ್ರಿ.ಶ. ೧೪೮೬-೮೭) ರಲ್ಲಿ ಕಟ್ಟಿಸಿದನು. ಬೆಳಗಾವಿಯ ಕೋಟೆಯನ್ನು ಅಸದಖಾನನು ಹಿ. ಸ ೮೯೧ (ಕ್ರಿ.ಶ. ೧೪೮೬)ರಲ್ಲಿ ಕಟ್ಟಿಸಿದನು. ಮೀರಜದ ಕೋಟೆಯನ್ನೂ ಅಸದ ಖಾನನು ಹಿ.ಸ ೮೯೩ (ಕ್ರಿ.ಶ. ೧೪೮೭-೮೮)ರಲ್ಲಿ ಕಟ್ಟಿಸಿದನು. ಸೋಲಾಪುರ ಕೋಟೆಯನ್ನು ಕಮಾಲಸಾಹೇಬನ ಆಜ್ಞೆಯಂತೆ ಖ್ವಾಜಾ ಜಹಾನನು ಹಿ.ಸ ೮೮೮ (ಕ್ರಿ.ಶ. ೧೪೮೩)ರಲ್ಲಿ ಕಟ್ಟಿಸಿದನು. ಬೀದರದ ಕೋಟೆಯನ್ನು ಅಹಮದಶಾಹ ಬಹಮನಿಯ ಆಜ್ಞೆಯ ಪ್ರಕಾರ ಹಿ.ಸ ೮೦೩ (ಕ್ರಿ.ಶ. ೧೪೦೦-೧೪೦೧)ರಲ್ಲಿ ಕಟ್ಟಲಾಯಿತು. ಅಹಮದನಗರದ ಕೋಟೆಯನ್ನು ಅಹ್ಮದ ನಿಜಾಮಶಾಹ ಬಹಮನಿಯು ಹಿ.ಸ. ೮೭೮ (ಕ್ರಿ.ಶ. ೧೪೭೩-೭೪)ರಲ್ಲಿ ಕಟ್ಟಿಸಿದನು. ವಿಜಾಪುರದ ಕೋಟೆಯನ್ನು ಯೂಸುಫ ಆದಿಲಶಹನು ಹಿ. ಸ ೯೧೧ (ಕ್ರಿ.ಶ. ೧೫೧೩-೧೪)ರಲ್ಲಿ ಕಟ್ಟಿದನು. ಕೋಟೆಯಲ್ಲಿ ಮಸೀದಿ ಇದೆ. ಅದನ್ನೂ ಯೂಸುಫ ಆದಿಲಶಹನು ಹಿ.ಸ. ೯೧೮ (ಕ್ರಿ.ಶ. ೧೫೧೨-೧೩)ರಲ್ಲಿ ಕಟ್ಟಿಸಿದನು. ಫತ್ತೇಪುರ ವಸಾಹತನ್ನು ಹಿ.ಸ. ೯೧೯ (ಕ್ರಿ.ಶ. ೧೫೧೩-೧೪)ರಲ್ಲಿ ಯೂಸುಫನು ಪ್ರಾರಂಭಿಸಿದನು. ಫರೂಕ ಮಹಲನ್ನು ಯೂಸುಫನು ಹಿ.ಸ. ೯೨೧ (ಕ್ರಿ.ಶ. ೧೫೧೫-೧೬)ರಲ್ಲಿ ಕಟ್ಟಿದನು. ಆ ಮಹಲಿನ ಸನ್ನಿಧಿಯಲ್ಲಿ ಪ್ರಸಿದ್ಧವಾಗಿರುವ ಮಸೀದಿಯನ್ನು ಖ್ವಾಜಾ ಜಹಾನನು ಹಿ.ಸ. ೮೯೪ (ಕ್ರಿ. ಶ. ೧೪೮೮-೮೯) ರಲ್ಲಿ ಕಟ್ಟಿದನು.[೧]

---

೧. ಈ ದಿನಾಂಕಗಳು ಖಚಿತವಾಗಿಲ್ಲ - ಅನುವಾದಕ.

## ಬುಸ್ತಾನ : ಎರಡು

# ಇಸ್ಮಾಯಿಲ ಆದಿಲಶಾಹ

### ೧. *ಇಸ್ಮಾಯಿಲ ಆದಿಲಶಾಹ ಬಿನ್ ಯೂಸುಫ ಆದಿಲಶಹನ ವರ್ಣನೆಯು :*

ಈ ಮೊದಲೆ ವರ್ಣಿಸಿದಂತೆ ಯೂಸುಫನು ಜೀವಂತನಾಗಿದ್ದಾಗ ಆತನ ಮಗ ಇಸ್ಮಾಯಿಲನು ಹನ್ನೆರಡು-ಹದಿಮೂರು ವರುಷದವನಿದ್ದನು. ಜನರ ಬಾಯಲ್ಲಿ ಇಪ್ಪತ್ತೂರು ವರುಷದವನಾಗಿದ್ದನು. ಯೂಸುಫನು ಇಸ್ಮಾಯಿಲನನ್ನು ಸಿಂಹಾಸನದ ಮೇಲೆ ಕುಳ್ಳರಿಸಿ ರಾಜ್ಯದ ಒಡೆಯನನ್ನಾಗಿ ಮಾಡುವುದನ್ನು ಪ್ರಧಾನಮಂತ್ರಿ ಕಮಾಲಖಾನ ದಖಣಿಗೆ ವಹಿಸಿದ್ದನು. ಕಮಾಲಖಾನನು ಹಳೇ ಸೇವಕ ಜನರಲ್ಲೊಬ್ಬನಾಗಿದ್ದನು. ವಿಶ್ವಾಸಿ ಸೇವಕ ಮಂಡಳಿಯ ಸೇವಕನೂ ಜಾಣನೂ ಆಗಿದ್ದನು. ಯೂಸುಫನು ಆತನಿಗೆ ಸಂಪೂರ್ಣ ಅಧಿಕಾರವನ್ನು ಕೊಟ್ಟು ದರಬಾರದ ಕಾರಭಾರಿ ಮಂಡಳಿಗೆ ಕಮಾಲಖಾನನ ಆದೇಶದಂತೆ ನಡೆಯಬೇಕೆಂದೂ ಬೋಧಿಸಿದ್ದನು. ಇಸ್ಮಾಯಿಲ್ ಆದಿಲಶಹನಿಗೂ ಆತನ ಆಜ್ಞೆಯಂತೆ ಅನುಸರಿಸಿ ನಡೆಯಬೇಕೆಂದು ತಾಕೀತು ಮಾಡಿದ್ದನು. ಯೂಸುಫ ಆದಿಲಶಹನು ಸತ್ತ ಅನಂತರ ಕಮಾಲಖಾನನು ಯೂಸುಫನ ಕಳೇಬರಕ್ಕೆ ಸ್ನಾನ ಮಾಡಿಸಿ- ಕಫನ ಸಿದ್ಧಪಡಿಸಿ, ಯೂಸುಫನು ಅಂತ್ಯಕಾಲದಲ್ಲಿ ಹೇಳಿದಂತೆ ಆತನ ದೇಹವನ್ನು ಸಕಲ ಬಾದಶಾಹಿ ಮರ್ಯಾದೆಯೊಂದಿಗೆ 'ಗೋಗಿ'ಗೆ ಕಳಿಸಿದನು. ವಿದ್ವಾಂಸರು ನಿರ್ಧರಿಸಿದ ಸುಮುಹೂರ್ತದಂದು ಇಸ್ಮಾಯಿಲನನ್ನು ವಿಜಾಪುರ ರಾಜಧಾನಿಯಲ್ಲಿ ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಬಾದಶಾಹಿ ಮುಕುಟವನ್ನು ಆತನ ಮಸ್ತಕದ ಮೇಲೆ ಇಟ್ಟರು ಹಾಗೂ ಬಾದಶಾಹಿ ಛತ್ರವನ್ನು ಆತನ ತಲೆಯ ಮೇಲೆ ಹಿಡಿದರು. ಕಮಾಲಖಾನನು ನಂಬಿಗಸ್ಥ ಸೇವಕನಂತೆ ಟೊಂಕ ಕಟ್ಟಿ ಇಡೀ ರಾಜ್ಯದ ಹಾಗೂ ರಾಜಧಾನಿಯ ವ್ಯವಸ್ಥೆಯನ್ನು ಮಾಡಿದನು. ಬಾದಶಹನ ಅಮೀರ ಜನರು, ಕಾರಭಾರಿಗಳು ಹಾಗೂ ಸೇವಕ ಜನರನ್ನೆಲ್ಲ ಸಮಾಧಾನ ಪಡಿಸಿ ಅವರಲ್ಲಿ ಭರವಸೆಯನ್ನು ಹುಟ್ಟಿಸಿದನು. ಪ್ರತಿಯೊಬ್ಬರು ತಮ್ಮ ಕಾರ್ಯದಲ್ಲಿ ತತ್ಪರರಾಗಿರುವಂತೆ ನೋಡಿಕೊಂಡನು. ಪ್ರತಿಯೊಂದು ಭಾಗದ ಸರದಾರರು, ಅಮೀರ ಬರೀದ, ನಿಜಾಮಶಾಹ, ಕುತುಬಶಾಹ ಹಾಗೂ ಇಮಾದಶಾಹ ಮೊದಲಾದವರೊಂದಿಗೂ ಸ್ನೇಹದಿಂದ ಇದ್ದನು. ವೈರತ್ವದ ಮುಳ್ಳನ್ನು ತೆಗೆದು ಒಗೆದನು. ತುಸುವೆ ದಿನಗಳಲ್ಲಿ ಕಮಾಲಖಾನನ ಆಡಳಿತದಲ್ಲಿ ಆದಿಲಶಾಹಿ ರಾಜಧಾನಿಯ ಶೋಭೆಯು ವೃದ್ಧಿ ಪಡೆದು ಪ್ರಜ್ವಲಿಸಿತು. ನಾಗರಿಕರು ಹಾಗೂ ರೈತಾಪಿ ಜನರು ಸಂಪೂರ್ಣ ಸುಖದಿಂದ ಇದ್ದರು. ಕಮಾಲಖಾನನು ಸುನ್ನಿ ಪಂಥದವನಾಗಿದ್ದನು. ಯೂಸುಫ ಆದಿಲಶಹನ ಅವಧಿಯಲ್ಲಿಯ ಅಧಿಕಾರದಲ್ಲಿ ನಿರುಪಾಯನಾಗಿ ಸುಮ್ಮನಿದ್ದನು. ಈಗ ತಾನೆ ಸರ್ವಾಧಿಕಾರಿಯಾಗಿದ್ದಾನೆ. ಹನಫಿ ಧರ್ಮಕ್ಕೆ ಸಾಮರ್ಥ್ಯವನ್ನು

ಕೊಡುವ ಸಂದರ್ಭ ಬಂದಿದೆ. ಸುನ್ನಿ ಧರ್ಮವನ್ನು ಪ್ರಚಲಿತದಲ್ಲಿ ತಂದು ಖುತಬಾ ಓದಿಸಿದನು. ಗೋವೆಯ ಬಂದರವು ಯಾವಾಗಲೂ ಇಂಗ್ರೇಜಿ* ಜನರಿಂದಾಗಿ ಉಪದ್ರವಕಾರಿಯಾಗಿತ್ತು. ಸಮಯ ಸಾಧಿಸಿ ಇಂಗ್ರೇಜಿ ಜನರು ಕೋಟೆಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಈ ಉಪದ್ರವವನ್ನು ಕೊನೆಗೊಳಿಸಬೇಕೆಂದು ಕಮಾಲಖಾನನು ನಿರ್ಧರಿಸಿದನು. ಗೋವೆಯೊಂದನ್ನು ಇಂಗ್ರೇಜಿಗಳ ಖರ್ಚಿಗಾಗಿ ಕೊಟ್ಟು ಉಳಿದ ಹಳ್ಳಿ ಪ್ರದೇಶಗಳತ್ತ ಕೈಹಾಕಬಾರದೆಂದು ಕರಾರು ಹಾಕಿ ಗೋವೆಯನ್ನು ಅವರಿಗೆ ಒಪ್ಪಿಸಿದನು. ಅಂದಿನಿಂದ ಮುಸಲ್ಮಾನ ಜನರಿಗೆ ಗೋವೆ ಮಾತ್ರ ಮತ್ತೆ ದೊರೆಯಲಿಲ್ಲ.[೧]

## ೨. *ಕಮಾಲಖಾನನು, ಮತ್ತು ಆತನ ಮಗ ಸಫದರಖಾನ ಸಹಿತ ಸೇಡು ತೀರಿಸಲು ಹೋಗಿ ಸತ್ತದ್ದು.*

ಕಮಾಲಖಾನನು ಸರ್ವಾಧಿಕಾರಿಯಾದ ಮೇಲೆ ಆತನು ತನ್ನ ಆಪ್ತ ಜನರಿಗೆ ಮೇಲಿನ ಹುದ್ದೆಗಳನ್ನು ಕೊಡಹತ್ತಿದನು. ಇನ್ನೊಬ್ಬರ ಜಹಗೀರುಗಳನ್ನು ಉತ್ಪನ್ನಗಳನ್ನು ಹರಣ ಮಾಡಿ ತನ್ನವರಿಗೆ ಕೊಟ್ಟನು. ಮೊದಲಿನಿಂದಲೂ ನಡೆದು ಬಂದ ಮತ್ತು ಕೆಲವು ಶ್ರೇಷ್ಠ ವ್ಯಕ್ತಿಗಳ ಅಧಿಕಾರವನ್ನು ಕಿತ್ತುಕೊಂಡು ತನ್ನ ಮಂಡಳಿಯ ಜನರಿಗೆ ಕೊಟ್ಟನು. ಆಗ ಆತನಿಗೆ ಅನ್ಯ ಜನರ ಭೀತಿ ಉಳಿಯಲಿಲ್ಲ ಅನಂತರ ಸಾವಕಾಶವಾಗಿ ದುರ್ಭಾವನೆ ಬೆಳೆಯುತ್ತ ಉಪ್ಪು ತಿಂದ ಮನೆಗೆ ಎರಡು ಬಗೆಯುವ ವಿಚಾರ ಮೊಳಕೆ ಒಡೆಯ ಹತ್ತಿತು. ಬಾದಶಹನಾದ ಇಸ್ಮಾಯಿಲ ಆದಿಲಶಹನನ್ನು ಸೆರೆಮನೆಯಲ್ಲಿಟ್ಟು ಅಥವಾ ಆತನ ಕಣ್ಣು ಕಿತ್ತು ತಾನೆ ಬಾದಶಹನಾಗಬೇಕೆಂದು ಕಮಾಲಖಾನನು ಯೋಚಿಸಹತ್ತಿದನು. ತನ್ನಂತೆಯೇ ಕಾರ್ಯದಲ್ಲಿದ್ದ ಅಮೀರ ಬರೀದನಿಗೆ ಈ ವಿಷಯವನ್ನು ತಿಳಿಸಿ ಆತನ ಅನುಮತಿಯನ್ನು ಬೇಡಿದನು. ಬರೀದನು ತನ್ನ ದುಷ್ಟ ಸಂಕಲ್ಪಕ್ಕೆ ಅನುಕೂಲವೆಂದು ಆತನ ಯೋಜನೆಗೆ ಅಸ್ತು ಎಂದನು. ಪರಸ್ಪರ ಒಂದು ಒಪ್ಪಂದಕ್ಕೆ ಬಂದು ಆದರಂತೆ ತಾವು ತಂತಮ್ಮ ಪ್ರದೇಶಗಳ ಬಾದಶಹರನ್ನು ಕಿತ್ತು, ಪರಸ್ಪರರ ಸಹಾಯದಿಂದ ಕೋಟೆಗಳನ್ನು ವಶಪಡಿಸಿಕೊಂಡು ರಾಜ್ಯ ವಿಸ್ತಾರಕ್ಕೆ ಪ್ರಾರಂಭಿಸುವುದೆಂದು ಒಪ್ಪಿಕೊಂಡರು. ಅದರಂತೆ ಕಮಾಲಖಾನನು ಇಸ್ಮಾಯಿಲ್ ಆದಿಲಶಹ ಹಾಗೂ ಆತನ ಪರಿವಾರ, ಹೆಂಗಳೆಯರ ಸಹಿತವಾಗಿ ಸೆರೆಹಿಡಿದು ಬಂಧನದಲ್ಲಿಟ್ಟನು. ಪೂರ್ಣ ವಿಶ್ವಾಸಿಕ ಸರದಾರನನ್ನು ಅವರ ಮೇಲೆ ನಿಯಮಿಸಿ ವಿಜಾಪುರ ಪರಿಸರವನ್ನು ಹಿಡಿತದಲ್ಲಿಟ್ಟುಕೊಂಡನು. ಮೊದಲು ಸೋಲಾಪುರ ಕೋಟೆಯ ಮೇಲೆ ದಾಳಿ ಮಾಡಿ ಮೂರು ತಿಂಗಳ ಅವಿರತ ಯುದ್ಧದಿಂದ ಕೋಟೆಯನ್ನು ಕೈವಶ ಮಾಡಿಕೊಂಡನು. ಇದೇ ರೀತಿಯಾಗಿ ಅಮೀರ ಬರೀದನು ಕೂಡ ತನ್ನ ಪ್ರದೇಶದ ರಾಜನನ್ನು ಸೆರೆಮನೆಯಲ್ಲಿಟ್ಟು ಬೀದರದಿಂದ ಹೊರಟು ಕಲಬುರ್ಗಿ ಇತ್ಯಾದಿ ಕೋಟೆಗಳನ್ನು ಗೆಲ್ಲುತ್ತ ಹೊರಟನು.

ಕಮಾಲಖಾನನು ಸೋಲಾಪುರವನ್ನು ವಶಪಡಿಸಿಕೊಂಡು ವಿಜಾಪುರಕ್ಕೆ ಮರಳಿದನು. ಹಾಗೂ ಈಗ ತಾನು ಯೋಚಿಸಿದಂತೆ ತನ್ನ ಮನೋರಥವನ್ನು ಈಡೇರಿಸಲು ಸಿಂಹಾಸನವನ್ನೇರಲು ಸಿದ್ಧನಾದನು. ಅದರಂತೆ ಸಿಂಹಾಸನಾರೂಢನಾಗಲು ಒಂದು ಸುಮುಹೂರ್ತವನ್ನು ನಿರ್ಧರಿಸಲು ಜ್ಯೋತಿಷಿಗಳನ್ನು ಕರೆಸಿದನು. ಜ್ಯೋತಿಷಿಗಳು ನಿರುಪಾಯರಾಗಿ ಲೆಕ್ಕ ಹಾಕಿದರು. ಅವರ ಗಣಿತದಂತೆ ಮುಂದಿನ ೧೫

---

❖ ಇಂಗ್ರಜಿ ಬದಲಾಗಿ ಪೋರ್ತುಗೀಜರು ಎಂಬುದಾಗಿ ಇರಬೇಕು.

೧. ಪೋರ್ತುಗೀಜರಿಗೆ ಗೋವೆಯನ್ನು ೨೨-೧೧-೧೫೧೦ ರಂದು ಕೊಡಲಾಯಿತು. ಬ್ರ, ಫೆ III ಪು ೫೦೯.

ದಿನಗಳು ತುಂಬ ಕಷ್ಟದ್ದಾಗಿವೆಯೆಂದೂ ಈ ದಿನಗಳಲ್ಲಿ ಆತ್ಮ ಸಂರಕ್ಷಣೆಯನ್ನು ಬಹು ಎಚ್ಚರದಿಂದ ಮಾಡಿ ಹದಿನಾರನೆಯದಿನ ಸಿಂಹಾಸನವ್ನೇರಿದರೆ ಎಲ್ಲ ರೀತಿಯಿಂದಲೂ ಕಲ್ಯಾಣಪ್ರದವಾಗುವುದೆಂದು[೨] ಹೇಳಿದರು. ಜ್ಯೋತಿಷಿಗಳ ಹೇಳಿಕೆಯನ್ನು ಕೇಳಿದ ಕಮಾಲಖಾನನು ೧೫ ದಿನಗಳು ಕಷ್ಟದ್ದಾಗಿದ್ದರೆ ಅವುಗಳನ್ನು ಕಳೆಯುವುದು ಲೇಸೆಂದು ಸಹಜವಾಗಿ ಭಾವಿಸಿ ತನ್ನ ಸಂರಕ್ಷಣೆಯತ್ತ ಗಮನವಿತ್ತನು. ಒಂದು ಸುರಕ್ಷಿತ ಸ್ಥಾನದಲ್ಲಿ ಕುಳಿತುಕೊಂಡನು. ನಗರದ ಹಾಗು ಪ್ರದೇಶದ ಕಾರ್ಯಭಾರವನ್ನು ತನ್ನ ಮಗ ಸಫದರಖಾನನ ಮೇಲೂ ಹಾಗೂ ಇನ್ನೊಬ್ಬ ಸರದಾರನ ಮೇಲೆ ವಹಿಸಿಕೊಟ್ಟನು. ಅಷ್ಟರಲ್ಲಿ ಆತನ ಈ ದುಷ್ಟ ಸಂಕಲ್ಪದ ಸುದ್ದಿಯು ಎಲ್ಲರಿಗೂ ಗೊತ್ತಾಗಿತ್ತು. ರಾಣೀವಾಸದ ಖಾಸಾ ಸ್ತ್ರೀಯರಿಗೂ ಈ ವಿಷಯ ತಿಳಿದು ಚಿಂತಾಗ್ರಸ್ತರಾಗಿದ್ದರು. ಅಲ್ಲಾನ ಮೇಲೆ ಭಾರ ಹಾಕಿ ಕುಳಿತಿದ್ದರು. ೧೫ ದಿನಗಳಲ್ಲಿ ಇನ್ನೆರಡು ದಿನ ಉಳಿದಾಗ ಬುನಾನಿ ಖಾತೂನ (ಬುಬೂಜೀ ಖಾನೂನು-ಫೆ, ಪುಂಜೀಖಾತೂನ-ಫೋ.ಬ) ಎಂಬ ಹೆಸರಿನ ಇಸ್ಮಾಯಿಲನ ತಾಯಿ ಹಾಗೂ ದಿಲಶಾದ ಆಗಾ ಎಂಬ ಹೆಸರಿನ ಆತನ ಕಕ್ಕಿ, ಉಭಯತರೂ ಜಾಣರಾಗಿದ್ದರು. ಅವರಿಬ್ಬರೂ ಕಮಾಲಖಾನನನ್ನು ಮುಗಿಸುವ ಯೋಜನೆಯಿಂದ ಒಬ್ಬ ಪುರಾತನ ಸೇವಕನನ್ನು ಕರೆದರು. ಆತ ತುಂಬ ವಿಶ್ವಾಸಿಕನಾಗಿದ್ದನು. ಆತನು ಇಸ್ಮಾಯಿಲನ ಕಕ್ಕನಾಗಿದ್ದನೆಂದೂ ಹೇಳಲಾಗುತ್ತದೆ. ಅವನನ್ನು ತಮ್ಮ ಹತ್ತಿರ ಕರೆದು ಹೇಳಿದರು. 'ರಾಜ್ಯಕ್ಕೆ ನಿಷ್ಠನಾದ ನೀನು ಈಗ ಬಂದಿರುವ ಸಂಕಟ ಪ್ರಸಂಗದಲ್ಲಿ ಸಿಂಹಾಸನಕ್ಕೆ ನಿಷ್ಠನಾಗಿ ಕೆಲಸ ಮಾಡು. ಈ ಪ್ರಸಂಗದಲ್ಲಿ ಸಿಂಹಾಸನವು ಸುರಕ್ಷಿತವಾಗಿ ಉಳಿದರೆ ನಿನಗೆ ಅತ್ಯುನ್ನತ ಅಧಿಕಾರ ಲಭಿಸುವುದು. ರಾಜ್ಯಕ್ಕಾಗಿ, ಸ್ವಾಮಿ ಕಾರ್ಯದಲ್ಲಿ ಹೋರಾಡಿ ವೀರ ಮರಣವನ್ನು ಪಡೆದರೆ ಸ್ವರ್ಗ ಲಭಿಸುವುದು. ವಿಶ್ವದಲ್ಲಿ ನಿನ್ನ ಕೀರ್ತಿಯು ಬೆಳಗುವುದು' ಎಂದು ಹೇಳಿದರು. ಅವರ ಮಾತುಗಳನ್ನು ಕೇಳಿದ 'ಕಾಕಾ' "ಇಸ್ಮಾಯಿಲ್ ಬಾದಶಹರ ಸಲುವಾಗಿ ನನ್ನ ಜೀವ ಏಕೆ? ನನ್ನಂಥ ನೂರು ಜನರು ಅವರ ಸಲುವಾಗಿ ತಮ್ಮ ಜೀವವನ್ನು ನಿವಾಳಿಸಿ ಒಗೆಯಲು ಸಿದ್ಧರಾಗಿದ್ದಾರೆ" ಎಂದು ಟೊಂಕಕ್ಕೆ ಪಟ್ಟಿಯನ್ನು ಬಿಗಿಯುತ್ತ ಹೇಳಿದನು. ಅದಕ್ಕೆ ಪ್ರತಿಯಾಗಿ ರಾಣಿಯು "ಕಮಾಲಖಾನನು ಒಂದು ಏಕಾಂತ ಸ್ಥಳದಲ್ಲಿ ಕುಳಿತಿದ್ದಾನೆ. ಅಲ್ಲಿಗೆ ದರಬಾರದ ಕಾರಭಾರಿಗಳಾಗಲಿ, ಆಸ್ಥಾನದ ಜನರಾಗಲಿ ಯಾರನ್ನೂ ಬಿಡುತ್ತಿಲ್ಲ. ಆದರೆ ನಾನು ಏನಾದರೂ ಒಂದು ನೆಪಮಾಡಿ, ಶತಪ್ರಯತ್ನಗಳಿಂದ ನಿನ್ನನ್ನು ಆ ಏಕಾಂತ ಸ್ಥಳದವರೆಗೆ ಮುಟ್ಟಿಸುವ ವ್ಯವಸ್ಥೆಯನ್ನು ಮಾಡುವೆನು. ಅನಂತರ ಅವನ ಜೀವ ತೆಗೆಯುವ ಕೆಲಸ ನಿನ್ನದು" ಎಂದು ಹೇಳಿ ಇಸ್ಮಾಯಿಲನ ತಾಯಿಯು, ತಮ್ಮ ಮೇಲೆ ಕಮಾಲಖಾನನು ನಿಗರಾಣಿಗೆ ಇಟ್ಟ ದಾಯಿಯನ್ನು ಕರೆಕಳಿಸಿದಳು. ಅವಳನ್ನು ಅತ್ಯಂತ ಕಕ್ಕುಲತೆಯಿಂದ ಮಾತನಾಡಿಸಿ. 'ಕಾಕಾ- ಮಕ್ಕಾ ಯಾತ್ರೆಗೆ ಹೊರಟಿದ್ದಾನೆ, ನನ್ನ ಇಚ್ಛೆಯಂತೆ ಅವನಿಗೆ ಪ್ರೀತಿಯಿಂದ ನಿರೋಪ ಕೊಟ್ಟು ಕಳಿಸಲು ಕಮಾಲಖಾನನಿಗೆ ಹೇಳು. ಮತ್ತು ಅವನನ್ನು ಅವನ ಹತ್ತಿರ ಕರೆದುಕೊಂಡು ಹೋಗು' ಎಂದಳು.

ಮುಗ್ಧಳಾದ ದಾಯಿಯು ಅದನ್ನು ನಂಬಿ ಅವನನ್ನು ಕಮಾಲಖಾನನಿದ್ದ ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋದಳು. ನಿರೋಪದ ತಾಂಬೂಲವನ್ನು ಸ್ವೀಕರಿಸಲು ಕಮಾಲಖಾನನ ಹತ್ತಿರ ಹೋಗಿ

---

೨. ಸಫರ್ ಹಿ.ಸ ೯೧೭ ಅಂದರೆ ೨೯. ಎಪ್ರಿಲ್ ೧೫೧೧ ರಂದು ರಾಜನಾಗುವ ಯೋಜನೆ ಇತ್ತು ಮತ್ತು ೧ ರಬಲಾವಲ್ ಅಂದರೆ ೨೯ ಮೇ ೧೫೧೧ ರಂದು ಸಿಂಹಾಸನವನ್ನೇರಬೇಕೆಂದಿದ್ದನು. - ಬ್ರಿ.ಫೆ III ಪುಟ ೩೭.

ಸಫದರಖಾನನ ಸೈನ್ಯವು ಜಮಾಯಿಸಿದ ನಂತರ ಬಾದಶಹನ ಮಹಲಿನತ್ತ ಹೊರಟರು. ಮೊದಲು ಪ್ರಥಮ ಮಹಾದ್ವಾರದತ್ತ ಬಂದರು. ಅದು ಮುಚ್ಚಿತ್ತು. ಬಾಗಿಲನ್ನು ಮುರಿಯಲು ಆಜ್ಞಾಪಿಸಲಾಯಿತು. ಆಗ ಬಾಗಿಲನ್ನು ಮುರಿದು ಸಫದರಖಾನನ ಎಲ್ಲ ಜನರೂ ಅರಮನೆಯ ಒಳಗೆ ನುಗ್ಗಿದರು. ಅನಂತರ ಗಟ್ಟಿಯಾಗಿ ಮುಚ್ಚಿದ ಎರಡನೆಯ ದ್ವಾರವನ್ನು ಮುರಿಯಲು ಆದೇಶ ನೀಡಿದನು. ಅಷ್ಟರಲ್ಲಿ ಬಾದಶಹನ ಮಹಲಿನಿಂದ ಬಾಣಗಳ ಹಾಗೂ ಬಂದೂಕಿನ ಗುಂಡುಗಳ ಸುರಿಮಳೆ ಆಗಹತ್ತಿತು. ಇಸ್ಮಾಯಿಲನ ತಾಯಿ ಬುನಾನೀ ಖಾತೂನ ಹಾಗೂ ಆತನ ಕಕ್ಕಿ ದಿಲಶಾದ ಆಗಾ ಇಬ್ಬರೂ ಪುರುಷರ ವಸ್ತ್ರವನ್ನು ಧರಿಸಿ, ಢಾಲು-ತಲವಾರಗಳನ್ನು ತೆಗೆದುಕೊಂಡು ಹೊರಬಿದ್ದರು. ಪ್ರಾಣಾರ್ಪಣೆಗೆ ಸಿದ್ಧರಾಗಿ ಬಂದು ಯುದ್ಧ ಮಾಡುತ್ತಿದ್ದ ಸ್ವಾಮಿನಿಷ್ಠ ಸೇವಕರನ್ನು ಉತ್ತೇಜಿಸುತ್ತಿದ್ದರು. ವಿಶ್ವಾಸ ತುಂಬುತ್ತಿದ್ದರು. ಇಸ್ಮಾಯಿಲ ಆದಿಲಶಾಹನೂ ಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದನು. ಅಷ್ಟರಲ್ಲಿ ಒಮ್ಮಿಂದೊಮ್ಮೆಲೆ ಅರಮನೆಯ ಸೈನಿಕನೊಬ್ಬನ ಕೈಯಿಂದ ಹೊರಟ ಬಾಣವೊಂದು ಸಫದರಖಾನನ ಹಣೆಗೆ ಬಡಿಯಿತು. ಅಷ್ಟೇನು ದೊಡ್ಡ ಗಾಯವಾಗಿರದಿದ್ದರೂ ಬಾಣ ಬಡಿದ ತಕ್ಷಣ ಅದನ್ನು ಕಂಡು ಅರಮನೆಯ ಗೋಡೆಯ ನೆರಳಿಗೆ ಬಂದು ನಿಂತನು. ಅದನ್ನು ಕಂಡ ಅರಮನೆಯ ಮೇಲಿಂದ ಸೇವಕನು ತಕ್ಷಣ ಒಂದು ದೊಡ್ಡ ಕಲ್ಲನ್ನು ಎತ್ತಿ ಆತನ ತಲೆಯಮೇಲೆ ಒಗೆದನು. ಆ ಕಲ್ಲಿನ ಹೊಡೆತಕ್ಕೆ ಆತನ ತಲೆ ಹಾಗೂ ಶರೀರವು ಚೂರು-ಚೂರಾಯಿತು. ಸಫದರಖಾನನ ಮಂಡಳಿಯು ತಮ್ಮ ಸರದಾರನ ಅವಸ್ಥೆಯನ್ನು ಕಂಡು ಹಿಂತಿರುಗಿ ಓಡ ಹತ್ತಿದರು. ಇಸ್ಮಾಯಿಲ ಬಾದಶಹನ ಸೈನಿಕರು ಮಹಲಿನಿಂದ ಇಳಿದು ಓಡುತ್ತಿದ್ದ ಸೈನಿಕರ ಬೆನ್ನು ಹತ್ತಿದರು.

ಮನೆ-ಮನೆಗಳಲ್ಲೂ ಹೊಡೆದಾಟ ನಡೆದಿತ್ತು. ಕಮಾಲಖಾನನ ಮನೆಯವರೆಗೂ ಬೆನ್ನು ಹತ್ತಿ ಬಂದ ಬಾದಶಹನ ಸೈನಿಕರಿಗೆ ಕಮಾಲಖಾನನೂ ಕೊಲೆಯಾಗಿ ಬಿದ್ದಿದ್ದಾನೆಂದು ತಿಳಿಯಿತು. ಕಮಾಲಖಾನನ ಎಲ್ಲ ಜನರೂ ಜೀವದ ಬೆದರಿಕೆಯಿಂದ ಓಡಿದರು. ಇಸ್ಮಾಯಿಲ ಆದಿಲಶಹನು ಅಲ್ಲಾನ ಕೃಪೆಯಿಂದ ಬಂದ ವಿಘ್ನಗಳಿಂದ ದೂರವಾಗಿ ಸಂತೋಷ ದಿಂದ ಮತ್ತೆ ಸಿಂಹಾಸನಾರೂಢನಾದನು.[೪] ಎಲ್ಲ ಕಡೆಯಿಂದಲೂ ಸತ್ಕಾರ ಹಾಗೂ ಕಾಣಿಕೆಗಳು ಬರಹತ್ತಿದುವು. ಆ ದಿನ ಪ್ರಾಣದ ಹಂಗು ತೊರೆದು ಕಾದಾಡಿದವರಿಗೆ, ಅನೇಕ ಪ್ರಕಾರದ ಇನಾಮುಗಳನ್ನೂ, ಬಕ್ಷೀಸುಗಳನ್ನೂ ಕೊಟ್ಟು, ಉನ್ನತ ಅಧಿಕಾರದ ಪದವಿಗಳನ್ನು ನೀಡಲಾಯಿತು. ಅವರುಗಳಲ್ಲಿಯ 'ಖುಸರವ ಆಖಾ ಲ್ಯಾರಿ' ಎಂಬುವವನಿಗೆ 'ಅಸದಖಾನ' ಎಂಬ ಬಿರುದನ್ನಿತ್ತು ಉನ್ನತ ಪದಾಧಿಕಾರದೊಂದಿಗೆ ದೊಡ್ಡ ಜಹಗೀರನ್ನೂ ಹಾಕಿ ಕೊಡಲಾಯಿತು. ದಖನಿ ಹಾಗು ಹಬಶೀ ಜನರನ್ನು ಕೆಲಸದಿಂದ ಸಂಪೂರ್ಣವಾಗಿ ತೆಗೆದು ಹಾಕಲಾಯಿತು. ದಖನಿ ಜನರೊಂದಿಗೆ ಸಂಬಂಧ ಬೆಳೆಸಿದ ಬಹುತೇಕ ಮೊಗಲರನ್ನೂ ಕೆಲಸದಿಂದ ವಜಾ ಮಾಡಲಾಯಿತು. ಅನಂತರ ಇಸ್ಮಾಯಿಲ ಆದಿಲಶಹನು 'ಮೊಗಲ'ರನ್ನೇ ಅಧಿಕಾರದಲ್ಲಿ ಸೈನ್ಯದಲ್ಲಿ ಸೇರಿಸಿಕೊಳ್ಳುವುದೆಂದು ಯೋಜಿಸಿದನು. ಕೆಲವೆ ದಿನಗಳಲ್ಲಿ ಬಿಲ್ಲುಬಾಣ ಹಾಗೂ ಭಲ್ಲೆಗಳನ್ನು ಉಪಯೋಗಿಸುವ ಅನೇಕ ಮೊಗಲ ಶಿಪಾಯಿಗಳನ್ನು ಸೇರಿಸಲಾಯಿತು. ಅವರ ಬಲದಿಂದ ಆದಿಲಶಹನ ಶಕ್ತಿ ಹಾಗೂ ಸಂಪತ್ತು ಗಳೆರಡೂ ವೃದ್ಧಿಯಾದುವು. ಆದರೆ ಹಬಶಿ ಮತ್ತು ದಖನಿ ಜನರನ್ನು ತಪ್ಪಿಯೂ ತೆಗೆದುಕೊಳ್ಳಲಿಲ್ಲ. ಇಸ್ಮಾಯಿಲನು ಇರುವವರೆಗೂ ಈ ಸ್ಥಿತಿ ಇತ್ತು.

---

೪. ಕ್ರಿ.ಶ. ೧೫೧೧ರ ಮೇ ಅಂತ್ಯದಲ್ಲಿ? ಬ್ರಿಗ್ಸ ಫೆ III ಪುಟ ೩೭.

ಇಸ್ಮಾಯಿಲನು ತಾನು, ತನ್ನ ರಾಜ್ಯ ಸ್ಥಿತಿ ಸುಧಾರಿಸಿ ತನ್ನ ನಿಯಂತ್ರಣದಲ್ಲಿದೆ ಎಂದು ಗೊತ್ತಾದ ಮೇಲೆ ಕಾರ್ಯದಲ್ಲಿ ಮಗ್ನನಾದನು. ತಂದೆಗಿಂತಲೂ ಅಧಿಕವಾಗಿ ಶಿಯಾ ಧರ್ಮ ತುರ್ಕಿಯ ಕೆಂಪು ಬಣ್ಣದ ಟೊಪ್ಪಿಗೆಗಳನ್ನು ಒಂದರಮೇಲೊಂದರಂತೆ ಹನ್ನೆರಡು ಟೊಪ್ಪಿಗೆಗಳ ಒಂದು ಟೊಪ್ಪಿಗೆಯನ್ನು ಮಾಡಿ ಧರಿಸಬೇಕೆಂದು ಶಿಪಾಯಿಗಳೆಲ್ಲರಿಗೂ ಆಜ್ಞೆ ಮಾಡಿದನು. ಹಾಗೆ ಧರಿಸದವರಿಗೆ 'ಸಲಾಮ' ಮಾಡಬಾರದೆಂದು ಹೇಳಿದನು. ಹಾಗೆ ಟೊಪ್ಪಿಗೆ ಧರಿಸದವರು ನಗರದಲ್ಲಿ ಬರಬಾರದೆಂದೂ ಮತ್ತು ಒಂದು ವೇಳೆ ಟೊಪ್ಪಿಗೆ ಇರದೆ ಬಂದವರ ಪಾರುಪತ್ಯವನ್ನು ಬಾದಶಹನೆ ಮಾಡುವನೆಂದು ಸಾರಿದನು. ಈ ತರಹದ ನಡಾವಳಿಕೆಯು ಇಸ್ಮಾಯಿಲ ಆದಿಲಶಹನ ರಾಜ್ಯಭಾರದ ಅಂತ್ಯದವರೆಗೂ ಪ್ರಚಲಿತದಲ್ಲಿದ್ದಿತು

### ೩. *ಅಮೀರ ಬರೀದನು, ಅಹ್ಮದನಗರ ಮತ್ತು ಗೋವಳಕೊಂಡದ ಅಧಿಕಾರಿಗಳ ಸೈನ್ಯವನ್ನು ತೆಗೆದುಕೊಂಡು ಇಸ್ಮಾಯಿಲ ಆದಿಲಶಹನ ಮೇಲೆ ದಾಳಿ ಮಾಡುವುದು. ಅಮೀರ ಬರೀದನ ಸೋಲು ಮತ್ತು ಬೀಬಿ ಸತಿಯ ಮದುವೆ.*

ಇಸ್ಮಾಯಿಲ್ ಆದಿಲಶಹನು ರಾಜಧಾನಿಯಲ್ಲಿ ನಡೆದ ದಂಗೆಯನ್ನು ನಿಯಂತ್ರಿಸುವ ಸಮಯದಲ್ಲಿ ರಾಜ್ಯದ ಕೆಲವು ಪ್ರದೇಶಗಳು ಇನ್ನೊಬ್ಬರ ಹಸ್ತಗತವಾಗಿದ್ದುವು. ಈಗ ರಾಜಧಾನಿಯಲ್ಲಿ ಶಾಂತಿ ನೆಲೆಸಿದಾಗ ಆತನು ಕಳೆದುಕೊಂಡ ಪ್ರದೇಶಗಳನ್ನು ಮರಳಿ ಪಡೆಯುವ ಸಂಕಲ್ಪ ಮಾಡಿದನು. ಮೊದಲು ಅಮೀರ ಬರೀದನ ಪ್ರದೇಶದ ಮೇಲೆ ಏರಿ ಹೋಗಿ ಆತನು ಆಕ್ರಮಿಸಿದ ಸ್ಥಳಗಳನ್ನೆಲ್ಲ ತನ್ನ ಕೈವಶ ಮಾಡಿಕೊಂಡನು. ಅದರಿಂದಾಗಿ ಸಂತಪ್ತನಾದ ಅಮೀರ ಬರೀದನು ಒಂದು ಯೋಜನೆಯನ್ನು ಹಾಕಿದನು. ತನ್ನ ಹಾಗೂ ಸುಲ್ತಾನ ಮಹಮ್ಮದನ ಹೆಸರಿನಲ್ಲಿ ದಕ್ಷಿಣದ ಅಧಿಕಾರಿಗಳಿಗೆ ಪತ್ರಗಳನ್ನು ಬರೆದು ಅವರನ್ನು ಎಬ್ಬಿಸಿದನು. ಈ ವಿಷಯದಲ್ಲಿ ಬಹಳ ಆಗ್ರಹಪೂರ್ವಕವಾಗಿ ಬರೆದದ್ದರಿಂದ ಬುರ್ಹಾನ ನಿಜಾಮಶಾಹನು, ಸುಲ್ತಾನ ಕುಲೀ ಕುತುಬಶಾಹ ಮತ್ತು ಅಲ್ಲಾಉದ್ದೀನ ಇಮಾದುಲ್ಮುಲ್ಕರು ತಮ್ಮ ಸೇನೆಯೊಂದಿಗೆ ಬೀದರಕ್ಕೆ ಬಂದು ಮುಟ್ಟಿದರು. ಅಮೀರ ಬರೀದನು ಸುಲ್ತಾನ ಮಹಮ್ಮದನನ್ನೂ ಉತ್ತೇಜಿಸಿ ಆತನ ಸೈನ್ಯವನ್ನು ಹಾಗೂ ದಕ್ಷಿಣದ ಸರದಾರರ ಸೈನ್ಯದೊಂದಿಗೆ ಆದಿಲಶಹನ ಮೇಲೆ ಏರಿ ಹೋದನು. ಸೈನ್ಯವು ದಾರಿಯಲ್ಲಿಯ ಹಳ್ಳಿ ಪ್ರದೇಶಗಳನ್ನು ಲೂಟಿ ಮಾಡುತ್ತ-ಮಾಡುತ್ತ ವಿಜಾಪುರದ ಸನ್ನಿಧಿಗೇ ಬಂದು ಮುಟ್ಟಿತು. ಆಗ ಯಾವ ಪ್ರತಿರೋಧವೂ ಕಂಡು ಬರದ್ದರಿಂದ ವಿಜಾಪುರದಿಂದ ಮೂರು ಕೋಸಿನ ಅಂತರದಲ್ಲಿ ಡೇರೆಗಳನ್ನು ಮತ್ತು ತಂಬೂಗಳನ್ನು ಹಾಕಿದರು.

ಆದಿಲಶಹನು ಸುಲ್ತಾನ ಮಹಮ್ಮದನಿಂದಾಗಲೀ ಅಥವಾ ಬೇರೆ ಯಾರಿಂದಾಗಲೀ ಸಹಾಯ ಯಾಚಿಸಬಾರದೆಂದು ನಿರ್ಧರಿಸಿದ್ದನು. ಸ್ವತಃ ತಾನೆ ನಿರ್ಭಯವಾಗಿ ಎದುರಿಸಬೇಕೆಂದು ನಿಶ್ಚಯಿಸಿದ್ದನು. ಇಸ್ಮಾಯಿಲ ಆದಿಲಶಹನು ಒಮ್ಮೆಲೆ ತನ್ನ ಹನ್ನೆರಡು ಸಾವಿರ ಮೊಗಲ-ಟೊಪ್ಪಿಗೆಯ ಸೈನ್ಯವನ್ನು ತೆಗೆದುಕೊಂಡು ಅಮೀರ ಬರೀದನ ಸೈನ್ಯದ ಮೇಲೆ ಹೋಗಿ ಬಿದ್ದನು. ಬಹಳಷ್ಟು ಸೈನಿಕರು ಹತರಾದರು.[೫] ಆಘಾತದಿಂದ ಸೋತ ಅಮೀರ ಬರೀದನು ಬೀದರಕ್ಕೆ ಓಡಿಹೋದನು. ಈ ಸೈನ್ಯಾಚರಣೆಯಲ್ಲಿ ಸುಲ್ತಾನ ಮಹಮ್ಮದನು ಕುದುರೆಯ ಮೇಲಿನಿಂದ ಕೆಳಗೆ ಬಿದ್ದನು. ಗಾಯಾಳುವಾಗಿ ತನ್ನ ಮಗ ಸುಲ್ತಾನ ಅಹಮ್ಮದ ಶಾಹ

---

೫. ಈ ಘಟನೆಯು ಹಿ.ಸ ೯೨೦ (ಕ್ರಿ.ಶ. ೧೫೧೪)ರಲ್ಲಿ ನಡೆಯಿತು. ಬ್ರಿಗ್ಸ ಫೆ III ಪು ೪೬

ಸಹಿತವಾಗಿ ಆದಿಲಶಾಹನ ಸೆರೆ ಸಿಕ್ಕನು. ಅವರ ಸಹಾಯಕ್ಕೇ ಬಂದ ಉಳಿದ ಸೈನ್ಯವು ಆದಿಲಶಾಹನ ಆಟಾಟೋಪವನ್ನು ಕಂಡು ಯುದ್ಧಮಾಡದೆ ತಂತಮ್ಮ ಪ್ರದೇಶಗಳಿಗೆ ಮರಳಿದರು. ಆದಿಲಶಹನು ಸುಲ್ತಾನ ಮಹಮ್ಮದ ಹಾಗು ಅವನ ಪುತ್ರನನ್ನು ಅತ್ಯಂತ ಗೌರವದಿಂದ ಕಂಡು ಅವರ ಗಾಯಗಳ ಆರೈಕೆ ಮಾಡಿಸಿ ರಾಜಧಾನಿ ವಿಜಾಪುರದಲ್ಲಿ ಇಟ್ಟುಕೊಂಡನು. ಅವರು ಖುಶಿಯಿಂದ ಇರುವಂತೆ ಅನೇಕ ರೀತಿಯ ಆಭರಣಗಳನ್ನು, ಜಡ-ಜವಾಹಿರಗಳನ್ನು ಸುಗಂಧ ದ್ರವ್ಯಗಳನ್ನು ಪೂರೈಸಿದನು. ಅವರಿಬ್ಬರೂ ಪೂರ್ಣ ಗುಣಮುಖರಾದ ಮೇಲೆ, ರಾಜಕುಮಾರ ಸುಲ್ತಾನ ಅಹ್ಮದಶಾಹನಿಗೆ ಈ ಮೊದಲೆ ನಿರ್ಧರಿಸಿದಂತೆ ಇಸ್ಮಾಯಿಲನ ತಂಗಿ ಬೀಬಿ ಸತಿಯನ್ನು ಕೊಟ್ಟು ಮದುವೆ ಮಾಡಿಕೊಡಲು ಸುಲ್ತಾನ ಮಹಮ್ಮದನು ನಿರೋಪವನ್ನು ಕಳಿಸಿದನು. ಈ ನಿರೋಪವನ್ನು ಆದಿಲಶಹನು ತಕ್ಷಣ ಮಾನ್ಯ ಮಾಡಿ ಮದುವೆಯ ಸಿದ್ಧತೆ ನಡೆಸಿದನು. ಅಖಂಡ ಎರಡು ತಿಂಗಳು ಮದುವೆಯ ಸಮಾರಂಭ ನಡೆಯಿತು. ಮದುವೆಯಾದ ಅನಂತರ ಸುಲ್ತಾನ ಮಹಮ್ಮದನಿಗೆ ಅನೇಕ ರೀತಿಯ ಕಾಣಿಕೆಗಳನ್ನು ನೀಡಿ, ಐದು ಸಾವಿರ ಮೊಗಲ ಸವಾರರೊಂದಿಗೆ ಬೀದರಿಗೆ ಕಳಿಸಿದನು.

### *೪. ಆದಿಲಶಾಹ ಹಾಗೂ ಬುರ್ಹಾನ ನಿಜಾಮಶಾಹರ ಮಧ್ಯ ಸಖ್ಯ ನಿಜಾಮಶಾಹ ನೊಂದಿಗೆ ಮರಿಯಮ್ ಸುಲ್ತಾನಳ ಮದುವೆ ಮತ್ತು ಕೆಲವೆ ದಿನಗಳಲ್ಲಿ ಉಭಯ ಬಾದಶಹರ ಮಧ್ಯ ದ್ವೇಷ.*

ಅಸದಖಾನನ ನೇತೃತ್ವದಲ್ಲಿ ರಾಜ್ಯವು ದಿನದಿಂದ ದಿನಕ್ಕೆ ಅಭಿವೃದ್ಧಿ ಪಡೆಯಿತು. ದಕ್ಷಿಣ ದೇಶದ ಅತ್ಯುನ್ನತ ಪದವಿ 'ಸಿಪಾಹಸಾಲಾರ' ಪದವಿಯನ್ನು ಆದಿಲಶಹನು ಅಸದಖಾನಿಗೆ ನೀಡಿ ಗೌರವಿಸಿದನು. ಆತನ ಅಧಿಕಾರವನ್ನು ಅಧಿಕಗೊಳಿಸಿದನು. ಆತನ ಯೋಜನೆಯಂತೆ ಬುರ್ಹಾನ ನಿಜಾಮಶಾಹನೊಂದಿಗೆ ಸಖ್ಯ ಬೆಳೆಸಿ, ಶರೀರ ಸಂಬಂಧವನ್ನು ಹೊಂದಬೇಕು, ಒಬ್ಬರೊಬ್ಬರ ಸಹಾಯದಿಂದ ವಿಜಯನಗರದ ಗರ್ವಿಷ್ಟ ತಿಮ್ಮರಾಜನನ್ನು ಹತ್ತಿಕ್ಕಬೇಕು. ಅವನೊಂದಿಗೆ ಯುದ್ಧಮಾಡಿ ಗೆಲ್ಲಬೇಕು. ಮುಸಲ್ಮಾನ ಧರ್ಮವನ್ನು ಸಂರಕ್ಷಿಸಬೇಕು ಎಂಬೆಲ್ಲ ಯೋಜನೆಗಳನ್ನು ಹಾಕಿದನು. ಅದರಂತೆ ಅಸದಖಾನನು ಅಂದಿನ ಮುತ್ಸದ್ದಿಗಳಲ್ಲೊಬ್ಬನಾದ ಸಯ್ಯದ ಅಹ್ಮದ ಹಿರವಿ ಎಂಬವನನ್ನು ರಾಯಭಾರಿಯಾಗಿ ಅಹ್ಮದನಗರಕ್ಕೆ ಕಳಿಸಿದನು. ಆತನು ಅಹ್ಮದನಗರಕ್ಕೆ ಬಂದು ಶಾಹ ತಾಹೀರನ ಸಹಾಯದಿಂದ ಬುರ್ಹಾನ ನಿಜಾಮಶಾಹನ ಭೆಟ್ಟಿಯಾದನು.

ತಾನು ಬಂದ ಉದ್ದೇಶವನ್ನು ಹೇಳಿದಾಗ ನಿಜಾಮಶಾಹನು ಸಂತೋಷದಿಂದ ಒಪ್ಪಿಕೊಂಡನು. ಅವರಿಬ್ಬರ ಮಾತಿನ ತಾತ್ಪರ್ಯದಿಂದ ಉಭಯ ಬಾದಶಹರೂ ತಂತಮ್ಮ ರಾಜಧಾನಿಗಳಿಂದ ಹೊರಟು, ಮಧ್ಯದ ಸೊಲ್ಲಾಪುರ ಕೋಟೆಯಲ್ಲಿ ಭೆಟ್ಟಿಯಾಗಬೇಕು. ಅದು ಅವರಿಬ್ಬರ ಪ್ರೀತಿಯ ಕೋಟೆಯಾದ್ದರಿಂದ ಅಲ್ಲಿಯೇ ಕುಳಿತು ಮುಂದಿನ ಯೋಜನೆಗಳನ್ನು ನಿರ್ಧರಿಸಬೇಕು. ಆದಿಲಶಾಹನ ತಂಗಿ ಮರಿಯಮ್ ಸುಲ್ತಾನಳನ್ನು ಬುರ್ಹಾನ ನಿಜಾಮಶಾಹನಿಗೆ ಕೊಟ್ಟು ಮದುವೆ ಮಾಡಬೇಕು. ಬಾದಶಾಹಿ ವೈಭವದಿಂದ ರಾಜ ಸಮಾರಂಭದೊಂದಿಗೆ ಮದುವೆಯನ್ನು ಮಾಡಿಕೊಡಬೇಕೆಂದು ಠರಾವಿಸಲಾಯಿತು. ಅದರಂತೆ ಆದಿಲಶಹನು ತನ್ನ ಸಕಲ ಪರಿವಾರದೊಂದಿಗೆ ತನ್ನ ರಾಜಧಾನಿ ವಿಜಾಪುರದಿಂದ ಹೊರಟು ಸೊಲ್ಲಾಪುರಕ್ಕೆ ಬಂದು ಮುಟ್ಟಿದನು. ಕುರಾನ ಶರೀಫದಲ್ಲಿ ಹೇಳಿದಂತೆ ಒಂದು ಉತ್ತಮ ಮುಹೂರ್ತದಲ್ಲಿ ಉಭಯ

ಬಾದಶಹರು ಭೆಟ್ಟಿಯಾಗಿ ಪರಸ್ಪರ ಹರ್ಷವನ್ನು ವ್ಯಕ್ತಪಡಿಸಿದರು. ಉಭಯತರ ಮಧ್ಯ ಮೇಜವಾನಿಗಳು, ನಡೆದು ಸಖ್ಯವೃದ್ಧಿಯಾಯಿತು. ಕೆಲವೆ ದಿನಗಳಲ್ಲಿ ಉಭಯತರ ಕಡೆಗಳಲ್ಲೂ ಮದುವೆಯ ಸಿದ್ಧತೆಗಳು ಭರದಿಂದ ನಡೆದುವು. ಒಂದು ತಿಂಗಳವರೆಗೆ ನಡೆದ ಭವ್ಯ ಮದುವೆಯ ಸಮಾರಂಭದಲ್ಲಿ ಮರಿಯಮ್ ಸುಲ್ತಾನಳೆಂಬ ವಧುವನ್ನು ಬುರ್ಹಾನ ನಿಜಾಮಶಾಹನೆಂಬ ವರನಿಗೆ ಕೊಟ್ಟು ಮದುವೆ ಮಾಡಲಾಯಿತು.[೬] ಮರಿಯಮ್ ಸುಲ್ತಾನಳ 'ಕಾಬಿನ್' ಎಂದರೆ, ಮುಸಲ್ಮಾನ ಜನರಲ್ಲಿ ಮದುವೆಯ ಸಮಯದಲ್ಲಿ ವಧುವಿನ ತಾಯಿಯು ಮಗಳಿಗೆ ಹಾಲು ಕುಡಿಸಿ ಪಾಲನ ಪೋಷಣೆ ಮಾಡಿದ ಬೆಲೆಯ ರೂಪದಲ್ಲಿ ಏನಾದರೂ ಕೊಡುವುದೆಂದು ನಿರ್ಧರಿಸಿರುತ್ತಾರೆ. ಅದಕ್ಕೆ 'ಕಾಬಿನ್' ಎಂದು ಹೆಸರು. ಅದರಂತೆ ಐದು ಪೆಟ್ಟಿಗೆ ಜಡಜವಾಹಿರಗಳನ್ನು ಮತ್ತು ಸೋಲಾಪುರ ಕೋಟೆಯನ್ನು ನಿಜಾಮಶಹನು ಆದಿಲಶಹನಿಗೆ ಕೊಡುವುದೆಂದು ನಿರ್ಧರಿಸಲಾಗಿತ್ತು. ಮದುವೆಯ ಸಮಾರಂಭದ ಅನಂತರ ಉಭಯತರು ಅತಿ ಸಂತೋಷದಿಂದ ಸೋಲಾಪುರದಿಂದ ಹೊರಟು ತಂತಮ್ಮ ರಾಜಧಾನಿಗಳಿಗೆ ಬಂದರು.

ಹಲವು ದಿವಸಗಳ ಅನಂತರ ಆದಿಲಶಹನು ಸೊಲ್ಲಾಪುರ ಕೋಟೆಯನ್ನು ನಿರ್ಧರಿಸಿದಂತೆ ಕೊಡಲು ಕೇಳಿದನು. ಅದರಿಂದಾಗಿ ಮತ್ತೆ ಉಭಯತರ ಸ್ನೇಹದಲ್ಲಿ ಬಿರುಕು ಉಂಟಾಯಿತು. ಗೆಳೆತನದ ಪರದೆ ಉಭಯತರ ಮುಖದಿಂದಲೂ ಸರಿಯಿತು. ಮರು ವರುಷವೇ ಬರ್ಹಾನ ನಿಜಾಮಶಾಹನು, ಸೊಲ್ಲಾಪುರ ಕೋಟೆಯನ್ನು ಕೊಡಬಾರದೆಂಬ ಅರ್ಥದಲ್ಲಿ ಇಮಾದುಲ್ಮುಲ್ಕನ ಸಹಾಯದಿಂದ ಸೇನೆಯನ್ನು ಸಂಘಟಿಸಿದನು. ಈ ವಿಷಯ ಆದಿಲಶಾಹನಿಗೆ ತಿಳಿದಾಗ ಹನ್ನೆರಡು ಸಾವಿರ ಸೈನ್ಯದೊಂದಿಗೆ, ನಿಜಾಮಶಾಹ ಹಾಗೂ ಇಮಾದುಲ್ಮುಲ್ಕನ ೪೨ ಸಾವಿರ ಸೈನ್ಯವನ್ನು ಎದುರಿಸಲು ಹೊರಟನು. ದಾರುಣವಾದ ಯುದ್ಧ ನಡೆಯಿತು. ಆದಿಲಶಹನ ಕಡೆಯ ವೀರರು ಯುದ್ಧಭೂಮಿಯಲ್ಲಿ ತಮ್ಮ ಶೂರತ್ವವನ್ನು ವಿಜೃಂಭಿಸಿದರು. ಅಹ್ಮದನಗರದ ಸೈನ್ಯವು ಬಹಳಷ್ಟು ಹೋರಾಡಿತು. ಆದರೆ ಯಶದ ಗಾಳಿ ಆದಿಲಶಹನ ಧ್ವಜದ ಕಡೆಗೆಯೇ ಬೀಸಹತ್ತಿತ್ತು. ವರ್ಹಾಡದೇಶದ ಸೈನ್ಯ ಎಂದರೆ, ಇಮಾದುಲ್ಮುಲ್ಕನ ಸೈನಿಕರು ಯುದ್ಧದಿಂದ ಸೋತು ಬೆನ್ನು ತಿರುವಿ ಓಡಿ ಹೋದರು. ನಿಜಾಮಶಾಹನು ಎಷ್ಟೇ ಧೈರ್ಯದಿಂದ ಹೋರಾಡಿದರೂ ಅಸದಖಾನನ ಸಿಂಹದಂಥ ಪರಾಕ್ರಮದ ಮುಂದೆ ಆಟ ಸಾಗದಾಯಿತು. ಆಗ ರಣಭೂಮಿಯನ್ನು ಪರಿತ್ಯಜಿಸಿ ಓಡಿ ಹೋದರು. ಅಸದ ಖಾನನು ಅವರನ್ನು ಪರಾಂಡೆ ಕೋಟೆಯವರೆಗೂ ಬೆನ್ನು ಹತ್ತಿದನು. ಈ ಯುದ್ಧದಲ್ಲಿ ಆನೆಗಳು ಹಾಗು ಇತರ ಸಾಮಾನು ಸರಂಜಾಮುಗಳು ಆದಿಲಶಾಹನ ಕೈಗೆ ಸಿಕ್ಕವು. ಆದಿಲಶಹನು ಯಶಸ್ವಿಯಾಗಿ ವಿಜಯದ ಸಂತೋಷದಿಂದ ತಿರುಗಿ ರಾಜಧಾನಿಗೆ ಬಂದನು.[೭] ಕೈಗೆ ಬಂದವುಗಳಲ್ಲಿ ಹತ್ತು-ಹನ್ನೊಂದು ಆನೆಗಳನ್ನು ಸಿಪಾಹಸಲಾರ ಅಸದಖಾನನಿಗೆ ಕಾಣಿಕೆಯಾಗಿ ನೀಡಲಾಯಿತು. ಅದರಂತೆ ದರಬಾರದ ಎಲ್ಲ ಕಾರಭಾರಿ ಮತ್ತು ಅಮೀರ ಜನರಿಗೆ ಅವರವರ ಯೋಗ್ಯತೆಗೆ ಅನುಸಾರವಾಗಿ ಪ್ರತಿಯೊಬ್ಬರಿಗೂ ಇನಾಮುಗಳನ್ನು ಕೊಟ್ಟು. ಸಂತೋಷಪಡಿಸಿದನು.

ಈ ಯುದ್ಧದ ಸೋಲಿನಿಂದ ಅವಮಾನಿತನಾದ ಬುರಹಾನ ನಿಜಾಮಶಾಹನು ಮತ್ತೆ ಮರುವರುಷ ಅಮೀರ ಬರೀದನ ಸಹಾಯದೊಂದಿಗೆ ಆದಿಲಶಹಾನ ಮೇಲೆ ಏರಿ ಬಂದನು. ಆದಿಲಶಾಹನು ತನ್ನ

೬. ಮರಿಯಮ್‌ಳ ಮದುವೆ ರಜಬ್ ೯೩೦ ಹಿ.ಸ (ಮೆ. ೧೫೨೪)ದಲ್ಲಿ ಆಯಿತು. ಬ್ರಿಗ್ಸ ಫೆ. III ಪು. ೫೧-೫೨.

೭. ಈ ಯುದ್ಧವು ಹಿ.ಸ ೯೩೧ (ಕ್ರಿ.ಶ. ೧೫೨೪-೨೫)ರಲ್ಲಿ ಸಂಭವಿಸಿತು.

ಯಶಸ್ವೀ ಸೈನ್ಯದೊಂದಿಗೆ ಹೊರಟು ಮುಂದೆ ಬಂದು ಎದುರಿಸಿದನು. ಉಭಯ ಸೇನೆಗಳ ಘನ ಘೋರ ಸಂಗ್ರಾಮದಲ್ಲಿ ಯುದ್ಧದ ಅಗ್ನಿಯು ಉಭಯ ಬಣಗಳಲ್ಲೂ ಪ್ರಜ್ವಲಿಸಿತು. ಉಭಯ ಸೈನ್ಯಗಳ ಯೋಧರೂ ಅತಿ ಶೂರತ್ವದಿಂದ ಕಾದಾಡಿದರು. ಆದರೂ ಮತ್ತೆ ಆದಿಲಶಹನ ಕಡೆಯ ಸಿಂಹಸದೃಶ ಪರಾಕ್ರಮ ಸೈನ್ಯದ ಹೋರಾಟದಿಂದ ನಿಜಾಮಶಾಹನಿಗೆ ಭಾರೀ ಸೋಲಾಯಿತು. ಅದರಿಂದಾಗಿ ಖಾಜಾ ಜಹಾನ ದಖನಿಯು ಇಪ್ಪತ್ತು ಆನೆಗಳು ಮತ್ತು ಇತರ ಅಸಂಖ್ಯ ಸಾಮಾನುಗಳೊಂದಿಗೆ ಅಸದಖಾನನಿಗೆ ಸೆರೆ ಸಿಕ್ಕನು. ಆದಿಲಶಹನು ಈ ಸಲವೂ ವಿಜಯಿಯಾಗಿ ತನ್ನ ರಾಜಧಾನಿ ವಿಜಾಪುರಕ್ಕೆ ಬಂದನು.[೮] ಅಲ್ಲಾನನ್ನು ಸ್ಮರಿಸಿ, ಆತನ ಸ್ತುತಿ ಮಾಡುತ್ತ ಬಹಳ ಜನರಿಗೆ ಕಾಣಿಕೆಗಳನ್ನು ಇನಾಮುಗಳನ್ನು ನೀಡಲಾಯಿತು. ಸೆರೆ ಸಿಕ್ಕ ಎಲ್ಲ ಆನೆಗಳನ್ನು ಸಿಪಹಸಾಲಾರ ಅಸದಖಾನನಿಗೆ ಕಾಣಿಕೆಯಾಗಿ ನೀಡಲಾಯಿತು. ಆದರೆ ಅದರಲ್ಲಿಯ ಒಂದು ಆನೆಯನ್ನು ಮಾತ್ರ, ಅದರ ಹೆಸರು 'ಅಲ್ಲಾಭಕ್ಷ' ಎಂಬುದಾಗಿತ್ತು. ಅದು ನಿಜಾಮಶಾಹನ ಸಿಂಹಾಸನವನ್ನು ಹೊರುವ ಆನೆ ಅದನ್ನು ಮಾತ್ರ ಆದಿಲಶಾಹನು ತನ್ನ ಹತ್ತಿರ ಸ್ವಂತದ ಸವಾರಿಗಾಗಿ ಇಟ್ಟುಕೊಂಡನು.

### *೫. ಅಸದಖಾನನ ಯತ್ನದಿಂದ ಆದಿಲಶಾಹ ಮತ್ತು ಇಮಾದುಲ್ಮುಲ್ಕರ ಮಧ್ಯ ಸಖ್ಯ ಇಮಾದುಲ್ಮುಲ್ಕನಿಗೆ ಖದೀಜಾ ಸುಲ್ತಾನಳನ್ನು ಕೊಟ್ಟು ಮದುವೆ.*

ಆದಿಲಶಾಹ ಹಾಗೂ ವರ್‍ಹಾಡದ ಇಮಾದುಲ್ಮುಲ್ಕರ ಮಧ್ಯ ನಿರಂತರ ದ್ವೇಷ ಇರುವಂತೆ ನಿಜಾಮಶಾಹನು ನೋಡಿಕೊಳ್ಳುತ್ತಿದ್ದನು. ಇದನ್ನರಿತ ಬುದ್ಧಿವಂತ ಪ್ರಧಾನಿ ಅಸದಖಾನನು ಈ ನಿರಂತರ ದ್ವೇಷದಿಂದ, ಉಭಯತರ ಮಧ್ಯದ ಯುದ್ಧಗಳಿಂದ ವಿಜಾಪುರ ರಾಜ್ಯದ ಪ್ರದೇಶವು ತುಂಬಹಾನಿಗೊಳಗಾದದ್ದನ್ನು ಕಂಡು ಈ ಇಬ್ಬರ ಮಧ್ಯ ಮಿತ್ರತ್ವವನ್ನು ಸಾಧಿಸಿ ಸ್ನೇಹದ ವಾತಾವರಣವನ್ನು ನಿರ್ಮಿಸಬೇಕೆಂದನು. ಈ ವಿಷಯದಲ್ಲಿ ಒಂದು ಸಂಧಿಯನ್ನು ಸಾಧಿಸಿ ಯುಕ್ತಿಯಿಂದ ಇಬ್ಬರೂ ಬಾದಶಹರು ಒಂದೆಡೆ ಸೇರುವಂತೆ ಮಾಡಿದನು. ಅವರಿಬ್ಬರ ಮಧ್ಯದ ವೈರತ್ವವನ್ನು ಪರಕೀಯತೆಯನ್ನು ಕಿತ್ತಿ ಒಗೆದನು. ಮಿತ್ರತೆಯ ಸಲುಗೆಯು ಪ್ರಬಲವಾಗಿ ಇಮಾದುಲ್ಮುಲ್ಕನು ಅಂತಃಕರುಣ ಪೂರ್ವಕವಾಗಿ, ಆಜನ್ಮ ಪರ್ಯಂತ ಆದಿಲಶಹನೊಂದಿಗೆ ಸ್ನೇಹದಿಂದ ಇರುವಂತೆ ಪರಸ್ಪರ ಶರೀರ ಸಂಬಂಧವನ್ನು ಬೆಳೆಸುವ ಯೋಜನೆಯನ್ನು ಹಾಕಿದನು. ಆದಿಲಶಹನ ಸಹೋದರಿ ಖದೀಜಾ ಸುಲ್ತಾನಳನ್ನು ಅಲ್ಲಾಉದ್ದೀನ ಇಮಾದುಲ್ಮುಲ್ಕನಿಗೆ ಕೊಟ್ಟು ಮದುವೆ ಮಾಡಿದನು.[೯] ಜೊತೆಗೆ ಉಭಯತರೂ ಬೀದರದ ಅಮೀರ ಬರೀದನೊಂದಿಗೆ ಸ್ನೇಹ ಸಂಪಾದಿಸಬೇಕೆಂಬುದು ಮಾತ್ರ ಫಲಿಸಲಿಲ್ಲ.

ಮೇಲಿಂದ ಮೇಲೆ ಸಖ್ಯತೆಯನ್ನು ಸಾಧಿಸುವ ಪ್ರಬಲ ಯುಕ್ತಿಗಳನ್ನು ಸಂಯೋಜಿಸುತ್ತಿದ್ದರಾದರೂ ಮತ್ತೆ-ಮತ್ತೆ ಯುದ್ಧಗಳಾಗಿ ಜನರ ಹತ್ಯೆಯಾಗಿ ಸಖ್ಯತೆಗೆ ವಿಘ್ನ ಬರುತ್ತಿತ್ತು. ಈ ಸಂದರ್ಭಗಳಲ್ಲೆಲ್ಲ ಅಮೀರ ಬರೀದನು ವಿಜಾಪುರ ರಾಜ್ಯದ ಪ್ರದೇಶಗಳನ್ನು ಹೊಕ್ಕು ತುಂಬ ಹಾನಿಯನ್ನು ಮಾಡುತ್ತಿದ್ದನು. ಆದಿಲಶಾಹನೂ ತನ್ನ ಸೈನ್ಯದೊಂದಿಗೆ ಅವನನ್ನು ಎದುರಿಸುತ್ತಿದ್ದನು. ಉಭಯತರ ಶಸ್ತ್ರ ಪೈಪೋಟಿ

---

೮. ಈ ಯುದ್ಧವು ಹಿ.ಸ ೯೩೪(ಕ್ರಿ.ಶ ೧೫೨೭-೨೮)ರಲ್ಲಿ ಸಂಭವಿಸಿತು.

೯. ಹಿ.ಸ. ೯೩೫ (ಕ್ರಿ.ಶ. ೧೫೨೮-೨೯) ರಲ್ಲಿಯ ಘಟನೆ. ಬ್ರಿಗ್ಸ ಫೆ III ಪು ೫೫-೫೭.

ನಡೆಯುತ್ತಲೇ ಇತ್ತು. ಅಮೀರ ಬರೀದನ ಸ್ತ್ರೀಯರ ಬಂಧುಗಳಲ್ಲೊಬ್ಬನಾದ ಅಮೀರ ಎಂಬ ಒಬ್ಬ ವೀರ ಗೃಹಸ್ಥನು ಸೈನ್ಯದಿಂದ ಹೊರಬಂದು ರಣರಂಗದ ಮಧ್ಯದಲ್ಲಿ ನಿಂತು ಆದಿಲಶಹನನ್ನು ಆಹ್ವಾನಿಸಿದನು. ಒಬ್ಬ ಸಾಮಾನ್ಯ ಮನುಷ್ಯನೊಂದಿಗೆ ಹೇಗೆ ಯುದ್ಧ ಮಾಡುವುದೆಂದು ಕ್ಷಣ ಹೊತ್ತು ಆದಿಲಶಾಹನು ನಾಚಿದನಾದರೂ, ಆತನ ಆಹ್ವಾನದಿಂದ ಉತ್ತೇಜಿತನಾಗಿ ಯುದ್ಧ ಸನ್ನದ್ಧನಾದನು. ಅಸದಖಾನ ಹಾಗು ಇತರ ಅಧಿಕಾರಿಗಳು ಅವನನ್ನು ತಡೆದರಾದರೂ ಅವರನ್ನು ಕೇಳದೆ ತನ್ನ ಕುದುರೆಯ್ನು ರಣರಂಗದಲ್ಲಿ ತಂದನು. ಅವನಿಗೆ ಎದುರಾಗಿ ಇಬ್ಬರು ವೀರರು ಓಡಿಬಂದು ತಮ್ಮ ಶೂರತ್ವವನ್ನು ಪ್ರದರ್ಶಿಸ ಹತ್ತಿದರು. ಮಧ್ಯಭಾಗದಲ್ಲಿ ಬಂದಅನಂತರ ದಕ್ಷಿಣದ ಶೂರ ಜನರಲ್ಲಿ ಯುದ್ಧ ವಿದ್ಯೆಯ ಕೀಳುತನ ಇದ್ದೇ ಇರುತ್ತದೆ. ಅದನ್ನರಿತ ಹೆಸರಾಂತ ಯೋಧನಾದ ಇಸ್ಮಾಯಿಲನು ಅವರಿಬ್ಬರನ್ನು ಕೊಂದನು. ಅಸದಖಾನನು ಆದಿಲಶಾಹನ ಚರಣಗಳನ್ನು ಚುಂಬಿಸಿ ತನ್ನ ಶುಭಾಶಯಗಳನ್ನು ಸಲ್ಲಿಸಿದನು. ಮನೋರಂಜನೆ ಮಾಡುವ ಸೇವಕರು ಮುಂದೆ ಬಂದು ಜಯಕಾರ ಹಾಕಿದರು.

## ೬. *ಆದಿಲಶಹನು ಅಮೀರ ಬರೀದನನ್ನು ಶಿಕ್ಷಿಸಲು ಹೋಗಿ ಬೀದರವನ್ನು ಹಸ್ತಗತ ಮಾಡಿಕೊಂಡಿದ್ದು. ಅಸದಖಾನನು ನಿದ್ರೆಯಲ್ಲಿದ್ದ ಅಮೀರ ಬರೀದನ ಮಂಚವನ್ನು ಎತ್ತಿ ತಂದದ್ದು, ಕೆಲವು ದಿನಗಳ ನಂತರ ತಿರುಗಿ ಕೊಟ್ಟದ್ದು.*

ಅಮೀರ ಬರೀದನ ಕಪಟತನ ಅತಿಯಾಯಿತು. ಕುತುಬಶಾಹ ಹಾಗೂ ವಿಜಯನಗರದ ಕಾಲ್ಬಲದ ಸಹಾಯದಿಂದ ಅಮೀರ ಬರೀದನು ಮೇಲಿಂದ ಮೇಲೆ ವಿಜಾಪುರದ ಪ್ರದೇಶಗಳಲ್ಲಿ ಅನೇಕ ರೀತಿಯ ಸಂಕಟಗಳನ್ನು ತರುತ್ತಿದ್ದನು. ಆತನನ್ನು ಎದುರಿಸಿ ಶಿಕ್ಷೆ ಮಾಡಲು ಆದಿಲಶಹನು ಟೊಂಕ ಕಟ್ಟಿ ಸಿದ್ಧನಾದನು. ಹತ್ತು ಸಾವಿರ ಸವಾರರನ್ನು ತೆಗೆದುಕೊಂಡು ಬೀದರದತ್ತ ದಾಳಿ ಮಾಡಿದನು. ಈ ಸುದ್ದಿಯನ್ನು ಕೇಳಿದ ಅಮೀರ ಬರೀದನು ಕೋಟೆಯ ಬಾಗಿಲನ್ನು ಮುಚ್ಚಿ ಯುದ್ಧ ಸಿದ್ಧತೆಯಲ್ಲಿ ತೊಡಗಿದನು. ಕುತುಬಶಾಹನು ಬೀದರಕ್ಕೆ ಬಂದು ಯುದ್ಧಕ್ಕೆ ಪ್ರಾರಂಭಿಸಿದನು. ಆದಿಲಶಹ ಹಾಗೂ ಅಮೀರ ಬರೀದರ ಸೇನೆಗಳ ಮಧ್ಯ ನಿತ್ಯ ಯುದ್ಧ ನಡೆದಿತ್ತು. ಇಂಥ ಸಂದರ್ಭದಲ್ಲಿ ಅಮೀರ ಬರೀದನ ಕುಮ್ಮಕ್ಕಿನಿಂದ ಕುತುಬಶಾಹನು ಬಂದು ಯುದ್ಧಕ್ಕೆ ನಿಂತನು. ಆದಿಲಶಹನು ತನ್ನ ಸೈನ್ಯದಲ್ಲಿಯ ಅರ್ಧಸೈನ್ಯವನ್ನು ಬೀದರದ ಯುದ್ಧ ಭೂಮಿಯಲ್ಲಿಟ್ಟು ಇನ್ನರ್ಧ ಸೇನೆಯನ್ನು ಅಸದಖಾನನ ನೇತೃತ್ವದಲ್ಲಿ ಕುತುಬ ಶಾಹನನ್ನು ಎದರುಸಲು ಕಳಿಸಿದನು. ಆತನು ಕುತುಬಶಾಹನ ಸೈನ್ಯವನ್ನು ಸೋಲಿಸಿ ವಿಜಯಿಯಾಗಿ ತಿರುಗಿ ಬಂದು ಆದಿಲಶಹನ ಸೈನ್ಯದೊಂದಿಗೆ ಸೇರಿದನು.

ವಿಜಯಿಯಾಗಿ ಬಂದ ಅಸದಖಾನನನ್ನು ಸಂತೋಷದಿಂದ ಸ್ವಾಗತಿಸಿದ ಆದಿಲಶಹನು ಆತನಿಗೆ ಅನೇಕ ಬಗೆಯ ಕಾಣಿಕೆಗಳನ್ನು ನೀಡಿ ಸತ್ಕರಿಸಿದನು. ಅನಂತರ ಆದಿಲಶಹನು ಬೀದರದ ಯುದ್ಧ ಸ್ಥಳದಿಂದ ಬೀದರದ ಒಳಗೆ ಏನೂ ಹೋಗದಂತೆ, ಅಲ್ಲಿಂದ ಹೊರಬರದಂತೆ ಬಾಗಿಲುಗಳಿಗೆ ಪಹರೆಯನ್ನಿಟ್ಟು ಅಲ್ಲಿಯ ಚಲನವಲನವನ್ನು ನಿಯಂತ್ರಿಸಿದನು. ಇದರಿಂದ ಗಾಬರಿಯಾದ ಅಮೀರ ಬರೀದನು ಪರಸ್ಪರದಲ್ಲಿ ಅಂದರೆ ತನ್ನ ಹಾಗೂ ಆದಿಲಶಹನ ಮಧ್ಯ ಸಖ್ಯ ಬೆಳೆಯುವಂತೆ ಇಮಾದುಲ್ಮುಲ್ಕನಿಗೆ ವಿನಂತಿಸಿ ಹೇಳಿ ಕಳಿಸಿದನು. ಇಮಾದುಲ್ಮುಲ್ಕನು ಇವರಿಬ್ಬರ ಮಧ್ಯದ ಒಪ್ಪಂದಕ್ಕಾಗಿ ಸ್ವತಃ ಬಂದು ಆದಿಲಶಹನ ಸೈನ್ಯದಿಂದ ಎರಡೂವರೆ ಕೋಸು ಅಂತರದಲ್ಲಿ ಬೀಡು ಬಿಟ್ಟನು. ಆದಿಲಶಹನನ್ನು ಭೆಟ್ಟಿಯಾಗಿ. ಅಮೀರ ಬರೀದನ

ಅಪರಾಧಗಳನ್ನು ಕ್ಷಮಿಸಿ ಉಭಯತರು ಸ್ನೇಹದಿಂದ ಇರಬೇಕೆಂದು ವಿನಂತಿಸಿಕೊಂಡನು. ಪ್ರತಿಯಾಗಿ ಆದಿಲಶಹನು ಅಮೀರ ಬರೀದನ ಕೆಟ್ಟ ನಡವಳಿಕೆಯನ್ನು ಪ್ರಸ್ತಾಪಿಸಿ, ಆತನ ವಿರುದ್ಧ ಸೇಡು ತೀರಿಸಿಕೊಳ್ಳಬಾರದೆ! ಎಂದು ಕೇಳುತ್ತ 'ನೀವು ಮಧ್ಯಬಂದು ನಮ್ಮನ್ನು ಕೂಡಿಸುವ ಪ್ರಯತ್ನ ಮಾಡಬೇಡಿರಿ' ಎಂದನು. ತನ್ನ ಮಾತನ್ನು ಆದಿಲಶಹನು ಮನ್ನಿಸುವುದಿಲ್ಲವೆಂದು ತಿಳಿದ ಇಮಾದುಲ್ಮುಲ್ಕನು ತನ್ನ ಡೇರೆಗೆ ಹಿಂತಿರುಗಿದನು.

ಈ ಸುದ್ದಿಯನ್ನು ತಿಳಿದ ಅಮೀರ ಬರೀದನು ಭಯಭೀತನಾಗಿ. ಇಮಾದುಲ್ಮುಲ್ಕನ ಡೇರೆಯನ್ನು ಪ್ರವೇಶಿಸಿ. ಅತ್ಯಂತ ದೀನನಾಗಿ ಹೇಳಿದನು. "ನಾನು ನಿಮ್ಮ ಆಶ್ರಯದಲ್ಲಿ ಬಂದಿರುವೆನು. ನಮ್ಮಿಬ್ಬರಲ್ಲಿ ಒಪ್ಪಂದ ಮಾಡಿಸಬೇಕು. ನನ್ನ ರಾಜ್ಯದಲ್ಲಿರುವ ಯುದ್ಧ ಭೀತಿಯನ್ನು ಹೋಲಾಡಿಸಬೇಕು" ಎಂದು ಅಂಗಲಾಚಿದನು. ಅದಕ್ಕೆ ಇಮಾದುಲ್ಮುಲ್ಕನು "ಈ ನಿನ್ನ ಮನೋರಥವು ಕೋಟೆಯನ್ನು ಕೊಡದ ಹೊರತು ಸಾಧಿಸುವುದಿಲ್ಲ" ಎಂದು ಹೇಳಿದನು. ಅದನ್ನು ಕೇಳಿದ ಅಮೀರ ಬರೀದನು ಖಿನ್ನನಾಗಿ ಅಲ್ಲಿಂದ ಎದ್ದು ಹೊರಬಂದನು. ಎರಡೂವರೆ ಕೋಸುಗಳ ಅಂತರದಲ್ಲಿ ಪ್ರಬಲ ಶತ್ರುವಿನ ವಾಸಸ್ಥಾನವನ್ನು ಲೆಕ್ಕಿಸದೆ ನಿರ್ಭಯನಾಗಿ ತನ್ನ ದೈನಂದಿನ ಕಾರ್ಯಗಳಲ್ಲಿ ಮಗ್ನನಾದನು. ಇಮಾದುಲ್ಮುಲ್ಕನು ರಾಯಭಾರಿಯಾಗಿ ಬಂದಿದ್ದಾನೆ. ಅವನ ಮಧ್ಯಸ್ಥಿಕೆಯಿಂದ ಒಪ್ಪಂದವಾಗಿ ಶಾಂತಿ ನೆಲೆಸುವುದೆಂದು ತಿಳಿದ ಉಭಯ ಬಣಗಳ ಸೈನಿಕರು ತಮ್ಮ ಶಸ್ತ್ರಗಳನ್ನು ಚೆಲ್ಲಿ ಸ್ವಸ್ಥರಾಗಿ ಕುಳಿತಿದ್ದರು. ಆದರೆ ಅಸದಖಾನನು ಚತುರನಾಗಿದ್ದನು. ರಾತ್ರಿ ಹೊತ್ತು ತನ್ನ ಸೈನ್ಯದಲ್ಲಿ ಅಡ್ಡಾಡಿ ಪಹರೆಯನ್ನು ಮಾಡುತ್ತಿದ್ದನು. ಅಮೀರ ಬರೀದನಿಗೆ ಎಂಭತ್ತು ವರುಷಗಳಾಗಿದ್ದರೂ ಒಂದು ದಿನವೂ ಆತ ರಾತ್ರಿ ಮದ್ಯ ಸೇವಿಸದೆ ಇರುತ್ತಿರಲಿಲ್ಲ. ನಿತ್ಯ ಮದ್ಯ ಇರಲೇಬೇಕು. ಇಮಾದುಲ್ಮುಲ್ಕನ ರಾಯಭಾರತ್ವದ ಭರವಸೆಯಿಂದ ತನ್ನ ಸೈನ್ಯದೊಂದಿಗೆ ಮದ್ಯಪಾನ ಸಮಾರಂಭವನ್ನು ಏರ್ಪಡಿಸಿ, ತಾನು ಕೂಡ ಮಿತ್ರರೊಂದಿಗೆ ಕಂಠ ಪೂರ್ತಿ ಕುಡಿದು ಎಚ್ಚರವಿಲ್ಲದೆ ಬಿದ್ದಿದ್ದನು. ಅವನ ಡೇರೆಯ ಮುಂದೆ ಹಿಲಾಲು ಹಿಡಿದ ಇಬ್ಬರು ಮಾತ್ರ ಎಚ್ಚರದಲ್ಲಿದ್ದು ಉಳಿದವರೆಲ್ಲ ಮೈಮರೆತು ಬಿದ್ದಿದ್ದರು. ಇಡೀ ಕಚೇರಿಯೇ ಮರಣಹೊಂದಿದಂತೆ ಕಾಣುತ್ತಿತ್ತು. ಈ ಸುದ್ದಿಯನ್ನು ಬೇಹುಗಾರರು ಅಸದಖಾನನಿಗೆ ತಲುಪಿಸಿದರು. ಅತ್ಯಂತ ಚತುರನಾದ ಅಸದಖಾನನು ತಕ್ಷಣ ಕಾರ್ಯಪ್ರವೃತ್ತನಾದನು. ಸ್ವಾಮಿನಿಷ್ಠ ಕೆಲವು ಸೈನಿಕರನ್ನು ಕರೆದುಕೊಂಡು ಅಮೀರ ಬರೀದನ ಸೈನ್ಯದತ್ತ ಹೊರಟನು. ಆತನ ಸೈನ್ಯ ಪಾಳೆಯದ ಹತ್ತಿರದಲ್ಲಿ ಬರುತ್ತಿದ್ದಂತೆ ಕುದುರೆಯಿಂದ ಇಳಿದು ಸಾಮಾನ್ಯ ಜನರಂತೆ ಅವರ ಪಾಳಯವನ್ನು ಹೊಕ್ಕರು. ಎಲ್ಲರ ಎದುರಿಗೆಯೇ ರಸ್ತೆ-ಬಾಜಾರುಗಳನ್ನು ದಾಟಿ ಈ ನಾಲ್ಕೈದು ಜನರು ಅಮೀರ ಬರೀದನು ನಿದ್ರಿಸುತ್ತಿರುವ ಸ್ಥಾನಕ್ಕೆ ಬಂದು ಮುಟ್ಟಿದರು. ಅಲ್ಲಿ ನೋಡಿದರೆ ಎಲ್ಲರೂ ಚಿತ್ತ ನಿಶೆಯಲ್ಲಿ ತಮ್ಮ ದೇಹದ ಶುದ್ಧಿ ಇಲ್ಲದೆ ಬಿದ್ದಿದ್ದರು.

ಅಸದಖಾನನು ತನ್ನ ಜೊತೆಗಾರರಿಗೆ ಸನ್ನೆ ಮಾಡುತ್ತಿದ್ದಂತೆ ಅವರು ಹಿಲಾಲು ಹಿಡಿದ ಇಬ್ಬರನ್ನು ಒಂದೇ ಹೊಡೆತಕ್ಕೆ ಬೀಳಿಸಿ ಅವರು ಬಾಯಿತೆರೆಯಲೂ ಆಸ್ಪದ ಕೊಡದೆ ಕೊಂದರು. ಅಸದಖಾನನು ತನ್ನ ಹೆಗಲಮೇಲಿದ್ದ ಅಂಗವಸ್ತ್ರವನ್ನು ತೆಗೆದು ಅಮೀರ ಬರೀದನನ್ನು ಪಲ್ಲಂಗಕ್ಕೆ ಕಟ್ಟಿದನು. ಆತನು ಮದ್ಯದ ನಿಶೆಯಲ್ಲಿ ಶವಸದೃಶವಾಗಿ ಬಿದ್ದಿದ್ದನು. ತನ್ನ ಸೇವಕರಿಗೆ ಸನ್ನೆಯಿಂದ ಸೂಚಿಸಿದಾಗ, ಅಲ್ಲಿಯ ಯಾವ ಇತರ ಸಾಮಾನುಗಳನ್ನು ಮುಟ್ಟದೆ, ಅವರು ಪಲ್ಲಂಗ ಸಹಿತನಾಗಿ ಅಮೀರ ಬರೀದನನ್ನು ಹೊತ್ತುಕೊಂಡು ಸಾವಕಾಶವಾಗಿ ಡೇರೆಯಿಂದ ನಾಲ್ಕು ಜನ ಹೊರಗೆ ಬಂದರು. ಅನಂತರ ಮಾರ್ಗ

ಮಧ್ಯ-ಬಾಜಾರ ಮಧ್ಯದಲ್ಲಿ ಶವಯಾತ್ರೆಗೆ ಹೊರಟಾಗ, ಕೂಗುವಂತೆ ಶಬ್ದ ಮಾಡುತ್ತ, 'ಅಲ್ವಿದಾ' ಪಠಣ ಮಾಡುತ್ತ ಅಮೀರ ಬರೀದನ ಸೈನ್ಯ ಪಾಳಯದಿಂದ ಹೊರಬಂದರು. ತಮ್ಮ ಸೈನ್ಯವನ್ನು ಸೇರಿಕೊಂಡರು. ಆಗ ಅಸದಖಾನನು 'ತಷಹೀದ ಕಲಮ'ನ್ನು ಪಠಿಸಲು ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಅಂದರೆ ಮನುಷ್ಯ ಸತ್ತಮೇಲೆ ಆತನ ಶವವನ್ನು ಹೊತ್ತುಕೊಂಡು ಒಯ್ಯುವಾಗ ಪಠಿಸುವ ಮಂತ್ರಗಳು. ಅವುಗಳನ್ನು ಉಚ್ಚಕಂಠದಿಂದ ಪಠಿಸುವಾಗ, ಆ ಶಬ್ದಕ್ಕೆ ಹಾಗು ಮಂಚದ ಅಲುಗಾಡುವಿಕೆಯಿಂದ ಅರ್ಧಂಬರ್ಧ ಎಚ್ಚರಾದ ಮೂರ್ಖ ವೃದ್ಧ ಅಮೀರ ಬರೀದನಿಗೆ ತಾನೆಲ್ಲಿ ಹೊರಟಿರುವೆನೆಂಬುದೇ ಅರ್ಥವಾಗಲಿಲ್ಲ. 'ಪಿಶಾಚಿಗಳು ತನ್ನ ಪಲ್ಲಂಗವನ್ನು ಹೊತ್ತೊಯ್ಯುತ್ತಿವೆ?' ಎಂದು ಯೋಚಿಸಿದನು. ನಿಶಾನಿದ್ರೆಯಿಂದ ಎಚ್ಚರಾಗುತ್ತ ಪಿಶಾಚಿ ನಿವಾರಣ ಮಂತ್ರಗಳನ್ನು ಪಠಿಸಹತ್ತಿದನು. ಅದನ್ನು ತಿಳಿದ ಮಗ್ಗುಲಲ್ಲಿದ್ದ ಅಸದಖಾನನು 'ಜಗತ್ತನ್ನೇ ಅವಲೋಕಿಸಿದ ಮುದುಕಾ, ನಿನ್ನ ಆಯುಷ್ಯವನ್ನೆಲ್ಲ ಮೂರ್ಖತನದಲ್ಲಿ ಕಳೆದೆ, ನಾವು ಪಿಶಾಚಿಗಳಲ್ಲ. ನಿನ್ನ ಪಠಣದಿಂದ ನಾವು ಓಡಿಹೋಗುವುದಿಲ್ಲ. ನಾನು ಅಸದಖಾನ, ನಿನ್ನ ಜಾಗರೂಕತೆಗೆ ಆಶ್ಚರ್ಯವಾಗುತ್ತಿದೆ. ಇಷ್ಟೊಂದು ವೃದ್ಧನಾಗಿರುವಿ, ಆದರೂ ಇಂಥ ಸಮಯದಲ್ಲಿ, ನಿನ್ನ ಸುತ್ತ ನಮ್ಮ ಸೈನ್ಯವು ಯುದ್ಧಕ್ಕಾಗಿ ಸಿದ್ಧವಾಗಿ ನಿಂತಿದೆ. ನೀನು ಮಾತ್ರ ನಿನ್ನ ಮೂರ್ಖತನದಿಂದ ಬುದ್ಧಿಯನ್ನು ಕಳೆದುಕೊಂಡಿರುವಿ. ಇಷ್ಟೊಂದು ದೊಡ್ಡ ಸಂಕಟ ಹಾಗು ಆಘಾತವು ನಿನ್ನ ಮೇಲೆ ಬಿದ್ದಿದ್ದರೂ ಅದರ ಅರಿವು ನಿನಗಿಲ್ಲ' ಎಂದು ಹೇಳಿದನು.

ಆಗ ಅಮೀರ ಬರೀದನಿಗೆ ತಾನಿದ್ದ ಸ್ಥಳದ ಅರಿವಾಗಿ ಭಯದಿಂದ ಮತ್ತೆ ಪ್ರಜ್ಞೆಯನ್ನು ಕಳೆದುಕೊಂಡನು. ಅಂಥ ಅವಸ್ಥೆಯಲ್ಲಿಯೇ ಅತ್ಯಂತ ದೀನನಾಗಿ ಅಳಹತ್ತಿದನು. ಸಾವಕಾಶವಾಗಿ ದೀನವಾಣಿಯಿಂದ ಮಾತನಾಡಹತ್ತಿದನು. 'ನನಗೆ ಜೀವದಾನ ಕೊಡು' ಎಂದನು. ಅದನ್ನು ಕೇಳಿದ ಅಸದಖಾನನು ಅವನನ್ನು ಶಾಂತಪಡಿಸುತ್ತ 'ನನ್ನಲ್ಲಿ ಶಕ್ತಿ ಇರುವವರೆಗೆ ನಿನ್ನ ಪ್ರಾಣವನ್ನು ರಕ್ಷಿಸುತ್ತೇನೆ. ಹಾಗು ನಿನ್ನ ಮರ್ಯಾದೆಯನ್ನು ಕಾಪಾಡುವ ಪ್ರಯತ್ನ ಮಾಡುತ್ತೇನೆ' ಎಂದು ಭರವಸೆಯನ್ನಿತ್ತು ಆತನ ಪಲ್ಲಂಗವನ್ನು ಇಸ್ಮಾಯಿಲ ಆದಿಲಶಹನ ಹತ್ತಿರ ತಂದು ಸಾದ್ಯಂತ ವೃತ್ತಾಂತವನ್ನು ಬಾದಶಹನಿಗೆ ತಿಳಿಸಿದನು. ಬಾದಶಹನು ಅವನೊಂದಿಗೆ ಎರಡು ಮಾತುಗಳನ್ನಾಡಿ "ಈಗ ಇವನನ್ನು ತೆಗೆದುಕೊಂಡು ಹೋಗಿರಿ. ನಾಳೆ ಬೆಳಿಗ್ಗೆ ನ್ಯಾಯಸ್ಥಾನದಲ್ಲಿ ಆತನನ್ನು ತಂದು ಹಾಜರು ಮಾಡಿರಿ" ಎಂದು ಅಸದಖಾನನಿಗೆ ಆಜ್ಞಾಪಿಸಿದನು.

ಮರುದಿನ ಸೂರ್ಯೋದಯದ ಅನಂತರ ಆದಿಲಶಾಹನು ದರಬಾರವನ್ನು ಏರ್ಪಡಿಸಿ ಅಮೀರ ಬರೀದನನ್ನು ಕರೆದು ಹಾಜರು ಪಡಿಸಲು ಹೇಳಿದನು. ಆಗ ಅಸದಖಾನನು ಬಾದಶಹನ ಅಣತಿಯಂತೆ ಅಮೀರ ಬರೀದನ ಎರಡೂ ಕೈಗಳನ್ನು ಕಟ್ಟಿ ಸಿಂಹಾಸನದ ಎದುರಿಗೆ ತಂದು ನಿಲ್ಲಿಸಿದನು. ಆತನ ಅಮಾರ್ಗ ನಡವಳಿಕೆಯಿಂದ ಬಾದಶಹನು ಅವನು ಕುರಿತು ಮನದಲ್ಲಿ ತುಂಬ ಆಗ್ರಹ ಹೊಂದಿದ್ದನು. ಶಿವನ ಗೌರವಕ್ಕೆ ಚ್ಯುತಿಯಾಗಲೆಂಬಂತೆ ಬುದ್ಧಿಪೂರ್ವಕವಾಗಿ ಆತನನ್ನು ನೋಡದೆ ಬೇರೆ ಕೆಲಸದಲ್ಲಿ ನಿರತನಾದನು. ಅಮೀರ ಬರೀದನು ಬಯಲಲ್ಲಿ, ಬಿಸಿಲಲ್ಲಿ ಕೈಕಟ್ಟಿಕೊಂಡು ನಿಂತಿದ್ದನು. ಅದೊಂದು ಆಶ್ಚರ್ಯಕರ ಘಟನೆಯಾಗಿತ್ತು. ಒಂದು ಪ್ರದೇಶದ ರಾಜನಿಗೆ, ಎಷ್ಟೋ ಸಾವಿರ ಆಜ್ಞಾ ಪಾಲಕ ಸೇವಕರು -ಸೈನಿಕರು ಸಂರಕ್ಷಣೆಗೆ ಸನ್ನದ್ಧರಾಗಿರುವ ವ್ಯಕ್ತಿಗೆ ಆತನ ದುರ್ಮಾರ್ಗದಿಂದಾಗಿ ಎಂಥ ಪರಿಸ್ಥಿತಿ ಒದಗಿತ್ತು! ಇಷ್ಟು ದೊಡ್ಡ ಮನುಷ್ಯನನ್ನು, ಮೊಹರಿನ ಮಾಲಕನನ್ನು, ಮಲಗಿದವನನ್ನು ಎತ್ತಿಕೊಂಡು

ಬಂದ ಕಥೆ ಯಾವ ಬಾದಶಹರ ಚರಿತ್ರೆಯಲ್ಲೂ ದೊರೆಯಲಿಕ್ಕಿಲ್ಲ. ಅದು ಅವನ ದುರ್ಮಾರ್ಗದ ಪ್ರತಿಫಲವಾಗಿತ್ತು. ಆದ್ದರಿಂದಲೇ ಇಸ್ಮಾಯಿಲ್ ಆದಿಲಶಹನು ಆತನ ವರ್ತನೆಯ ಸೇಡು ತೀರಿಸಿಕೊಳ್ಳಲು ಆತನನ್ನು ತುಂಡು-ತುಂಡು ಮಾಡಿ ಚಿಲ್ಲಿರಿ ಎಂದು ಆದೇಶವನ್ನಿತ್ತನು. ತಕ್ಷಣ 'ಜಲ್ಲಾದ' ಎಂದರೆ ತಲವಾರಿನಿಂದ ಜೀವ ತೆಗೆಯುವ ಪುರುಷರು ನಾಗ ಮುಖದ ತಲವಾರಿನೊಂದಿಗೆ ಒಮ್ಮಿಂದೊಮ್ಮೆಲೆ ಮೃತ್ಯು ಸ್ವರೂಪವಾಗಿ ಆತನ ಎದುರಿಗೆ ಬಂದು ನಿಂತರು. ಅಸದಖಾನನು ತಾನು ವಚನ ಕೊಟ್ಟಂತೆ ಅವನನ್ನು ಕ್ಷಮಿಸಲು ಅತ್ಯಂತ ಕಕ್ಕುಲತೆಯಿಂದ ಬಾದಶಹನನ್ನು ವಿನಂತಿಸಿಕೊಂಡನು. ಅಮೀರ ಬರೀದನೂ ಕೂಡ ಅಳುತ್ತ ಅತ್ಯಂತ ದೀನನಾಗಿ "ನಾನು ನನ್ನ ಅಪರಾಧದ ಫಲವನ್ನು ಭೋಗಿಸುತ್ತಿರುವೆ. ನನ್ನ ಜೀವ ಹೊಡೆಯಲು ಯೋಗ್ಯವಾಗಿದೆ ಎಂದು ನಾನೇ ಹೇಳುತ್ತೇನೆ. ಒಂದು ವೇಳೆ ಕ್ಷಮಾದಾನ ಮಾಡುವುದಾದರೆ ಅಹಮದಾಬಾದ ಬಾಕರದ ಕೋಟೆಯನ್ನು, ಅಲ್ಲಿಯ ನಿಧಿ ನಿಕ್ಷೇಪಗಳ ಭಂಡಾರದೊಂದಿಗೆ ಸ್ವಾಮಿಗೆ ಸೇವಕನ ಹಾಗೆ ಅರ್ಪಿಸುವೆ" ಎಂದನು. ಅಸದಖಾನನು ಕೂಡ ಮತ್ತೆ ಮತ್ತೆ ವಿನಂತಿಸಿಕೊಂಡನು ಕುರಾನದಲ್ಲಿ ಒಂದು ವಾಕ್ಯ ಇದೆ. "ಕ್ಷಮೆಯನ್ನು ಯಾಚಿಸಿದವನ ವಿನಂತಿಯನ್ನು ಕೇಳಿದರೆ ಯಶ ಪ್ರಾಪ್ತಿಯಾಗುತ್ತದೆ". ಅದಕ್ಕನುಸಾರವಾಗಿ ಅಮೀರ ಬರೀದನ ವಿನಂತಿಯನ್ನು ಮಾನ್ಯ ಮಾಡಲಾಯಿತು. ಆಗ ಅಮೀರ ಬರೀದನ ಕೋಟೆಯ ಮಧ್ಯದಲ್ಲಿದ್ದ ತನ್ನ ಮಗನಿಗೆ ನಿರೋಪ ಕಳಿಸುತ್ತ ಕೋಟೆಯಿಂದ ಹೊರಬಂದು ಕೋಟೆಯನ್ನು ಅವರ ಸ್ವಾಧೀನ ಪಡಿಸಲು ಹೇಳಿ ಕಳಿಸಿದನು. ಆತನ ಮಗನು 'ಈ ಮುದುಕ ನಿರ್ದೈವಿಯಾಗಿದ್ದು ತನ್ನ ಹುಚ್ಚುತನದಿಂದ ಇಂಥ ಸಮಯದಲ್ಲಿ ಶತೃವಿನ ಕೈಯಲ್ಲಿ ಸಿಕ್ಕು ಸೆರೆಮನೆಯಲ್ಲಿ ಬಿದ್ದಿದ್ದಾನೆ. ಈಗ ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಮಗನ ಮರ್ಯಾದೆಯನ್ನೂ ಕಳೆಯುತ್ತಿದ್ದಾನೆ' ಎಂದು ಯೋಚಿಸಿ, ಆತನ ಹಿರಿಯ ಮಗ ಅಲಿ ಬರೀದನು ಮುಲ್ಲಾ ಎಂಬವನ ಕೈಯಲ್ಲಿ ಉತ್ತರ ಬರೆದು ಗೌಪ್ಯವಾಗಿ ತಂದೆಗೆ ನಿರೋಪ ಕಳಿಸಿದನು. ಅದರಲ್ಲಿ ಹೀಗೆ ಬರೆದಿದ್ದನು. 'ನಿನ್ನ ಆಯುಷ್ಯ ಕೊನೆಯ ಹಂತಕ್ಕೆ ಬಂದಿದೆ. ಹೇಗಿದ್ದರೂ ಒಂದು ದಿನ ಸಾಯುವವನು. ಆದ್ದರಿಂದ ಅಲ್ಲಿಯವರೆಗೂ ಬಂದ ಕಷ್ಟಗಳನ್ನು ಅನುಭೋಗಿಸುತ್ತ ಧೈರ್ಯದಿಂದ ಇರಬೇಕು. ಕಾಲಚಕ್ರ ಹೇಗೆ ತಿರುಗುತ್ತದೆ ಎಂಬುದನ್ನು ನೋಡಬೇಕು" ಎಂದು ಬರೆದು ಒಬ್ಬ ವಿಶ್ವಾಸಿಕನನ್ನು ಜೊತೆಮಾಡಿ ಗುಪ್ತವಾಗಿ ಕಳಿಸಿದನು. ಆತನಿಗೆ ತಾಕೀತನ್ನು ಮಾಡಿ 'ಒಂದು ವೇಳೆ ಈ ವಿಷಯ ಬಹಿರಂಗವಾದರೆ ಕೋಟೆಯನ್ನು ಅವರ ಸ್ವಾಧೀನ ಮಾಡದ ಹೊರತು ತಂದೆಯ ಬಿಡುಗಡೆಯಾಗುವುದಿಲ್ಲ. ಅವರು ನಿನ್ನನ್ನು ಸೆರೆ ಹಿಡಿಯುವರಲ್ಲದೆ ತಂದೆಯನ್ನು ಸಂಕಟದಲ್ಲಿ ಹಾಕುತ್ತೀಯ. ಆದ್ದರಿಂದ ಹಾಗೆ ಮಾಡಬೇಡ' ಎಂದು ಹೇಳಿ, ನಿರೋಪವನ್ನು ಕಳಿಸಿದನು.

ಅಮೀರ ಬರೀದನ ಮಗ ಇನ್ನುವರೆಗೂ ಕೋಟೆಯ ಬಗ್ಗೆ ನಿರ್ಧರಿಸಲಿಲ್ಲ. ಕೋಟೆ ಗೆಲುವು ತಕ್ಷಣ ಆಗುವ ಲಕ್ಷಣಗಳಿಲ್ಲವೆಂದು ಆದಿಲಶಹನು ಯೋಚಿಸಿ 'ಅಮೀರ ಬರೀದನ ಕೈ-ಕಾಲುಗಳನ್ನು ಕಟ್ಟಿ ಕೋಟೆಯ ಬಾಗಿಲ ಮುಂದೆ ಆನೆಯ ಕಾಲಿಗೆ ಕಟ್ಟಿ ಕೊಲ್ಲಿರಿ' ಎಂದು ಆಜ್ಞೆ ಹೊರಡಿಸಿದನು. ಅದನ್ನು ತಿಳಿದ ಮಗನು ದುರ್ದೈವಿ ತಂದೆಯ ಅವಸ್ಥೆ ಈ ಮಟ್ಟಕ್ಕೆ ಬಂದಿತೆಂದು ಯೋಚಿಸಿ, ನಿರೋಪ ತೆಗೆದುಕೊಂಡು ಹೋದ ಗೃಹಸ್ಥನಿಗೆ ಮತ್ತೆ ಹೇಳಿ ಕಳಿಸಿದನು. ಆತನು ಅಸದಖಾನನನ್ನು ಭೆಟ್ಟಿಯಾಗಿ 'ತಂದೆಯ ಜೀವಕ್ಕೆ ಅಭಯವಿರಲಿ, ಅಮೀರ ಬರೀದನ ಮಗನ ಹಾಗೂ ಆತನ ಪ್ರದೇಶದಲ್ಲಿ ವಾಸಿಸುತ್ತಿರುವವರ ಮರ್ಯಾದೆಯನ್ನು ಕಾಪಾಡಿರಿ. ಹಾಗೆಂದು ಒಪ್ಪಿದರೆ ಕೋಟೆಯನ್ನು ಸ್ವಾಧೀನ ಪಡಿಸಲು ನಿರ್ಧರಿಸಿದ್ದಾರೆ', ಎಂದು ಹೇಳಲು ತಿಳಿಸಿದನು. ಸ್ತ್ರೀಯರು ತಮ್ಮ ವಸ್ತ್ರ ಹಾಗೂ

ಆಭರಣಗಳೊಂದಿಗೆ ಕೋಟೆಯಿಂದ ಹೊರಬಿದ್ದಿದ್ದಾರೆ. ಅವರಿಗೆ ಯಾರೂ ತೊಂದರೆ ಕೊಡಬಾರದು ಎಂದನು. ಕೋಟೆಯನ್ನು ಆದಿಲಶಹನಿಗೆ ಒಪ್ಪಿಸಿದ ಅನಂತರ ಆತನು ಕೋಟೆಯ ಒಳಗಡೆಗೆ ಬಂದು ಅಲ್ಲಾನನ್ನು ಸ್ಮರಿಸಿ ಬಹಮನಿಗಳ ಸಿಂಹಾಸನದ ಮೇಲೆ ಕುಳಿತನು.

ಇಮಾದುಲ್ಮುಲ್ಕನನ್ನು ಒಳಗಡೆ ಕರೆದು, ಆತನ ಎದುರಿಗೆ ಕೋಟೆಯ ಖಜಾನೆಯನ್ನು ತೆರೆದು ಅದರಲ್ಲಿರುವ ಜಡವಾಹಿರಗಳನ್ನು ಬಂಗಾರವನ್ನು, ಬೆಳ್ಳಿಯ ಪಾತ್ರೆಗಳನ್ನು, ಅದೆಷ್ಟೋ ಸುಗಂಧಗಳನ್ನೂ ಹಾಗೂ ತಿನ್ನುಣ್ಣುವ ಪದಾರ್ಥಗಳನ್ನು ಸ್ನೇಹಿತನಾದ ಇಮಾದುಲ್ಮುಲ್ಕನ ಸಮ್ಮುಖದಲ್ಲಿ ತೆರೆದನು. ಆತನಿಗೆ ಇಷ್ಟವಿದ್ದ ಪದಾರ್ಥಗಳನ್ನು ತೆಗೆದುಕೊಳ್ಳಲು ಹೇಳಿದನು. ಆತನ ಮಾತನ್ನು ಕೇಳಿದ ಇಮಾದುಲ್ಮುಲ್ಕನು ಕೈಮುಂದೆ ಮಾಡಿ ಒಂದು ರತ್ನ ಖಚಿತವಾದ ಅತ್ತರದಾನಿಯನ್ನು ಎತ್ತಿ ತೆಗೆದುಕೊಂಡನು. ಆದಿಲಶಹನು ಅಸದಖಾನನ್ನು ಕರೆದು ನಗದಿ ಹಾಗು ಕಿರುಕುಳ ಪದಾರ್ಥಗಳನ್ನು ಸೇರಿಸಿ ಒಟ್ಟು ಮೂರುಲಕ್ಷ ಹೊನ್ನುಗಳ ಪದಾರ್ಥಗಳನ್ನು ಇಮಾದುಲ್ಮುಲ್ಕನ ಸೇವಕನ ಸ್ವಾಧೀನಕ್ಕೆ ಕೊಡು ಎಂದು ಆದೇಶಿಸಿದನು. ರಾಜಕುಮಾರರಾದ ಮಲ್ಲುಖಾನ, ಆಲುಖಾನ, ಇಬ್ರಾಹಿಮ ಹಾಗೂ ಅಬ್ದುಲ್ಲಾರಿಗೆ ಒಂದು ಲಕ್ಷ ಹೊನ್ನನ್ನು ಕೊಡಬೇಕು. ಅಷ್ಟೇ ನೀವು ತೆಗೆದುಕೊಳ್ಳಿರಿ ಮತ್ತು ಅಷ್ಟು ಮೊತ್ತವನ್ನು ಮಕ್ಕಾ, ಮದೀನಾ, ಮನೋರೆ ಪವಿತ್ರ ಸ್ಥಳಗಳಿಗೆ ಖರ್ಚಿಗಾಗಿ ಮತ್ತು ಪವಿತ್ರ ಜನರ ಸಮಾಧಿಗಳಿಗೆ ಕಳಿಸಿಕೊಡಲು ಹೇಳಿದನು. ಅದರಂತೆ ಆಯಾ ಸ್ಥಳಗಳಿಗೆ ಕಳಿಸಲಾಯಿತು. ಉಳಿದದ್ದನ್ನು ವಿದ್ವಜ್ಜನರಿಗೆ, ಗುಣೀಜನರಿಗೆ ಬಡಬಗ್ಗರಿಗೆ, ಆಸ್ಥಾನದ ಕವಿಗಳಿಗೆ ಹಾಗೂ ವಿಜಾಪುರದ ಜನರಲ್ಲಿ ವಿತರಿಸಲು ಹೇಳಿದನು. ತಾನು ಒಂದು ರತ್ನದ ಅತ್ತರದಾನಿಯ ಹೊರತು ಏನನ್ನೂ ತೆಗೆದುಕೊಳ್ಳಲಿಲ್ಲ. ಆದಿಲಶಹನು ಮಹಲಿನಿಂದ ಎದ್ದನು. ಇಮಾದುಲ್ಮುಲ್ಕನು ಅಮೀರಬರೀದನ ಅನ್ಯಾಯವನ್ನು ಕ್ಷಮಿಸಬೇಕೆಂದು ಕೃಪೆತೋರಬೇಕೆಂದನು. ಬೀದರದ ಕೋಟೆಯನ್ನು ಅಸದಖಾನನ ಸಲಹೆಯಂತೆ ಮುಸ್ತಫಾಖಾನ ಶಿರಾಜಿಗೆ ವಹಿಸಿ ತಾನು ಕೆಲವು ದಿನ ಅಲ್ಲಿದ್ದು ಎಲ್ಲರಿಗೂ ಸುಖಸಂತೋಷಗಳನ್ನು ತಂದುಕೊಟ್ಟನು.[೧೦]

## ೭. *ಮುದಗಲ್ಲ ಮತ್ತು ರಾಯಚೂರು ವಿಜಯ ಹಾಗೂ ಅಮೀರ ಬರೀದನಿಗೆ ಆತನ ಪ್ರದೇಶಕ್ಕೆ ಹೋಗಲು ಅನುಮತಿ*

ಆ ದಿನಗಳಲ್ಲಿ ತಿಮ್ಮರಾಜನು ತೀರಿಕೊಂಡಿದ್ದನು. ವಿಜಯನಗರದ ರಾಯರ ಜನರಲ್ಲಿ ವಿರೋಧ ಉಂಟಾಗಿತ್ತು. ಈ ಸುಸಂಧಿಯನ್ನು ಸಾಧಿಸಿ. ವಿಜಯನಗರದ ಸ್ವಾಧೀನದಲ್ಲಿದ್ದ ರಾಯಚೂರು ಮತ್ತು ಮುದಗಲ್ಲ ಕೋಟೆಗಳನ್ನು ವಶಪಡಿಸಿ ಕೊಳ್ಳಲು ಆದಿಲಶಹನು, ಇಮಾದುಲ್ಮುಲ್ಕನ ಸಹಿತವಾಗಿ ಅತ್ತ ಹೊರಟನು. ಕೃಷ್ಣಾ ನದಿಯನ್ನು ದಾಟಿ ಮುದಗಲ್ಲ ಕೋಟೆಯ ಮೇಲೆ ದಾಳಿ ಮಾಡಿದನು. ಕೋಟೆಯನ್ನು ತೆರವು ಮಾಡಲು ಆದೇಶಿಸಿದನು. ಕೋಟೆಯಲ್ಲಿ ವಾಸಿಸುತ್ತಿರುವವರಿಂದ ಯಾವ ಪ್ರತಿರೋಧವೂ ಇಲ್ಲದೆ ಮುದಗಲ್ಲ ಕೋಟೆಯು ಸುಲಭವಾಗಿ ಕೈವಶವಾಯಿತು. ಅನಂತರ ರಾಯಚೂರಿಗೆ ಬಂದನು. ಕೋಟೆಯ ಜನ ಸಹಾಯವಿಲ್ಲದೆ ನಿರಾಶರಾಗಿದ್ದರು. ಆದ್ದರಿಂದ ಯುದ್ಧವನ್ನು ಮಾಡದೆ ಕೋಟೆಯ ಕೀಲಿಕೈಯನ್ನು ತಂದು ಕೊಟ್ಟರು.

---

೧೦. ಈ ಘಟನೆಯು ಹಿ. ಸ. ೯೩೬ (ಕ್ರಿ.ಶ. ೧೫೨೯-೩೦)ರಲ್ಲಿ ಸಂಭವಿಸಿತು. ಬ್ರಿಗ್ಸ -ಫೆ III ಪುಟ ೫೬ ರಿಂದ ೬೩.

ಅನಂತರ ಆದಿಲಶಾಹನು ಅಲ್ಲಿ ತನ್ನ ದರಬಾರವನ್ನು ನಡೆಸಿ, ಕೆಂಪು ಬಣ್ಣದ ಮದ್ಯವನ್ನು ಸೇವಿಸುವಲ್ಲಿ ಮಗ್ನನಾದನು. ಇಮಾದುಲ್ಮುಲ್ಕನೂ ಆ ಸಂತೋಷಕೂಟದಲ್ಲಿ ಭಾಗವಹಿಸಿದ್ದನು. ಆ ದಿನ ಅಸದಖಾನನಿಗೂ ಅಲ್ಲಿ ಕುಳಿತುಕೊಳ್ಳಲು ಆಜ್ಞೆ ಮಾಡಿದ್ದನು. ತನ್ನ ಕೈಯಾರೆ ಮೂರು ಮದ್ಯ ಪಾತ್ರೆಗಳನ್ನು ಆತನಿಗೆ ಕೊಟ್ಟನು. ಇಮಾದುಲ್ಮುಲ್ಕ ಹಾಗೂ ಅಸದಖಾನ ಉಭಯತರೂ ಕೂಡಿಕೊಂಡು ಅಮೀರ ಬರೀದನಿಗೂ ಈ ಸಂತೋಷಕೂಟದಲ್ಲಿ ಭಾಗವಹಿಸಲು ಅನುಮತಿ ನೀಡಬೇಕೆಂದು ವಿನಂತಿಸಿಕೊಂಡರು. ಅದಕ್ಕೆ ಆದಿಲಶಹನು ಒಪ್ಪಿಕೊಂಡನು. ಆಗ ಅಮೀರ ಬರೀದನೂ ಬಂದು ಕುಳಿತುಕೊಂಡನು. ಆದಿಲಶಹನು 'ರಾಬಾ ಅಹಮುಕುಲ್ಲಬಾಮ' ಎಂದು, ಅರಬ್ಬೀ ಭಾಷೆಯಲ್ಲಿ ಹೇಳಿದ ಈ ವಾಕ್ಯದ ಅರ್ಥ "ಮೂರು ವ್ಯಕ್ತಿಗಳ ನಡುವೆ ನಾಲ್ಕನೆಯದು ನಾಯಿಯಾಗಿತ್ತು" ಎಂದಾಗಿದೆ. 'ನಾವು ಮೂವರೂ ಕುಳಿತಾಗ ನಮ್ಮ ಮಧ್ಯ ಈ ನಾಲ್ಕನೆಯದು ನಾಯಿಯಂತೆ ಬಂದಿದೆ' ಎಂದು ಹೇಳಿದನು. ಇಮಾದುಲ್ಮುಲ್ಕ ಹಾಗೂ ಅಸದಖಾನರು ವಿದ್ವಾಂಸರಾಗಿದ್ದರು ಅವರಿಗೆ ಬಾದಶಹನ ಮಾತಿನ ಅರ್ಥವಾಗಿ ನಗಹತ್ತಿದ್ದರು. ಅಮೀರ ಬರೀದನಿಗೆ ಅರ್ಥ ಗೊತ್ತಾಗಲಿಲ್ಲವಾದರೂ ಉಭಯ ಮಿತ್ರರೂ ನಗುವುದನ್ನು ಕಂಡು ಲಜ್ಜಿತನಾಗಿ ತಲೆ ಕೆಳಗೆ ಹಾಕಿದನು. ಕಣ್ಣಿನಿಂದ ನೀರು ಹರಿದುವು. ಅದನ್ನು ಅರಿತ ಆದಿಲಶಹನು ಆತನ ಲಜ್ಜೆಯನ್ನು ನಿವಾರಿಸುವಂತೆ ಅವನೊಂದಿಗೆ ಮಾತನಾಡುತ್ತ 'ಇನ್‌ಶಾ ಅಲ್ಲಾ ನೀವು ಬಂದಿರಿ, ವಿಜಾಪುರ ನಗರಕ್ಕೆ ಹೋದ ಅನಂತರ ನಿಮ್ಮನ್ನು ಬೀದರಕ್ಕೆ ಕಳಿಸಲಾಗುವುದು.' ಎಂದ ಮಾತಿಗೆ ಅಮೀರ ಬರೀದನು ಸಂತೋಷಗೊಂಡನು. ಒಂದು ತಿಂಗಳ ಅನಂತರ ವಿಜಾಪುರಕ್ಕೆ ಬಂದರು. ಇಮಾದುಲ್ಮುಲ್ಕನು ವರ್‍ಹಾಡಕ್ಕೆ ಹೋದನು. ಅಮೀರ ಬರೀದನಿಗೂ ಅಂಗವಸ್ತ್ರ, ಆನೆ ಜಡವವಾಹಿರಗಳನ್ನು ಕೊಟ್ಟು, ಮಾತು ಕೊಟ್ಟಂತೆ ಬೀದರಕ್ಕೆ ಹೋಗಲು ನಿರೋಪ ಕೊಟ್ಟನು.[೧೧] ಮತ್ತು ಕಾಣಿಕೆಯಾಗಿ ಕಂಧಾರ ಹಾಗು ಕಲ್ಯಾಣ ಸರಕಾರದಲ್ಲಿದ್ದ ಬೀದರ ಹಾಗೂ ಬೀದರದ ಪ್ರದೇಶಗಳನ್ನು ಅವನಿಗೆ ನೀಡಿದನು.

### ೮. *ಆದಿಲಶಾಹ ಹಾಗೂ ನಿಜಾಮಶಾಹರ ಸಮ್ಮುಖದಲ್ಲಿ ಆದಿಲಶಾಹನು ಯಶಸ್ವಿಯಾದುದು*

ಅನಂತರ ಆದಿಲಶಹ ಹಾಗೂ ನಿಜಾಮಶಾಹರ ಮಧ್ಯ ನಡೆದ ಅನೇಕ ಯುದ್ಧಗಳಲ್ಲಿ ನಿಜಾಮಶಾಹನು ಸೋಲನ್ನು ಅನುಭವಿಸಿದ್ದನು. ಆದ್ದರಿಂದ ಬಹಳ ದಿನಗಳ ವರೆಗೆ ನಿಜಾಮಶಹ ಹಾಗೂ ಆದಿಲಶಾಹನ ಸಂಬಂಧ ಸರಿಯಾಗಿರಲಿಲ್ಲ. ಆ ಕಾರಣಗಳಿಂದಾಗಿ ೨೬ ಸಾವಿರ ಸೈನಿಕರು ಹಾಗೂ ತೋಪುಗಳೊಂದಿಗೆ, ಅಮೀರ ಬರೀದನನ್ನು ಕರೆದುಕೊಂಡು ನಿಜಾಮಶಾಹನು, ಆದಿಲಶಾಹಿ ಸರಹದ್ದಿನಲ್ಲಿ ಬಂದು ಮುಟ್ಟಿದನು. ಆದಿಲಶಹನು ಎರಡು ಸಾವಿರ 'ಟೋಪೀವಾಲೆ' ಸವಾರರೊಂದಿಗೆ ಅವರನ್ನು ಎದುರಿಸಿದನು. ಉಭಯತರ ಸಮಾಗಮವಾಯಿತು. ಅಸದಖಾನನ ವ್ಯೂಹ ರಚನೆಯೊಂದಿಗೆ ಪರಸ್ಪರರು ಹೋರಾಡಿದರು, ಘನ ಘೋರ ಕಾಳಗವಾಯಿತು. ಈ ಯುದ್ಧದ ಮುಂದೆ ಹಿಂದಿನ ಯುದ್ಧಗಳು ಮಕ್ಕಳ ಆಟದಂತೆ ಕಂಡುವು. ಅಂತ್ಯದಲ್ಲಿ ಆದಿಲಶಹನಿಗೆ ಜಯವಾಗಿ ನಿಜಾಮಶಾಹನ ಶ್ರೇಷ್ಠ ಅಮೀರರಲ್ಲೊಬ್ಬನಾದ ಖುರಶೀದಖಾನ ನೆಂಬುವನು ಯುದ್ಧದಲ್ಲಿ ಸತ್ತನು. ನಿಜಾಮಶಾಹನು ಗಾಬರಿಯಾಗಿ ಅಹಮದನಗರಕ್ಕೆ ಓಡಿ ಹೋದನು. ಆತನ ಯುದ್ಧ ಸಾಮಗ್ರಿಗಳು, ತೋಪಖಾನೆಗಳು,

---

೧೧. ಇದು ಹಿಸ ೯೩೭ (ಕ್ರಿ.ಶ. ೧೫೩೦-೩೧)ರಲ್ಲಿ ಸಂಭವಿಸಿದ ಘಟನೆಯೆಂದು ಕಾಣುತ್ತದೆ. ಬ್ರಿಗ್ಸ. ಫೆ. - III ಪುಟ ೬೪-೬೮

ಆನೆಗಳು ಮೊದಲಾಗಿ ಆದಿಲಶಹನ ಕೈವಶವಾದುವು. ಇಸ್ಮಾಯಿಲನಿಗೂ-ನಿಜಾಮಶಾಹನಿಗೂ ಮುಖಾಮುಖೀ ಯುದ್ಧವಾಗಿರಲೇ ಇಲ್ಲ. ಆದ್ದರಿಂದ ಉಭಯ ಪಂಗಡಗಳಲ್ಲಿಯ ಕಾರಭಾರಿಗಳು ಪ್ರಯತ್ನಮಾಡಿ ಇಬ್ಬರನ್ನೂ ಸರಹದ್ದಿನಲ್ಲಿ ಕರೆತಂದು ಭೆಟ್ಟಿ ಮಾಡಿಸುವಲ್ಲಿ ಯಶಸ್ವಿಯಾದರು. ಒಪ್ಪಂದದಂತೆ ಆದಿಲಶಹನು ಕುತುಬಶಹನ ಸರಹದ್ದಿನಲ್ಲಿ ಹಾಗೂ ನಿಜಾಮಶಹನು ಆದಿಲಶಹನ ಸರಹದ್ದಿನಲ್ಲಿ ಪ್ರವೇಶಿಸದೆ ತಂತಮ್ಮಲ್ಲಿ ಸಖ್ಯದಿಂದ ಇರಬೇಕೆಂದೂ ಉಭಯಪಕ್ಷಗಳೂ ಯುದ್ಧವನ್ನು ತ್ಯಾಗಮಾಡಬೇಕೆಂದೂ ನಿರ್ಧರಿಸಲಾಯಿತು.[೧೨]

## ೯. ಇಸ್ಮಾಯಿಲ ಆದಿಲಶಹನ ಮರಣ :

ಆನಂತರ ಇಸ್ಮಾಯಿಲನು ಕೆಲವು ದಿನ ಸುಖವಾಗಿ ಇದ್ದನು. ಯುದ್ಧ ಸಂಕಲ್ಪ ಹಾಗೂ ಯವನ ಸೈನ್ಯದ ಸಾಮರ್ಥ್ಯದಿಂದ ಅನೇಕ ಕೋಟೆಗಳನ್ನು ಹಾಗೂ ಹಿಂದೂಗಳ ಶ್ರೇಷ್ಠ ಸ್ಥಾನಗಳನ್ನು ಕೈವಶ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದನು. ಮತ್ತೊಮ್ಮೆ ತನ್ನ ಯಶೋವಂತ ಸೈನ್ಯ ಹಾಗು ಅಮೀರ ಬರೀದನನ್ನು ಜೊತೆಮಾಡಿಕೊಂಡು ತೆಲಂಗ ದೇಶದ ಪ್ರದೇಶಗಳ ಮೇಲೆ ದಾಳಿ ಮಾಡಿದನು. ಮೊದಲು ಗೋವಳಕುಂಡದ ಕೋಟೆಯಮೇಲೆ, ಅದು ತೆಲಂಗ ದೇಶದವರ ಅಧೀನಗಳಲ್ಲಿದ್ದ ಕೋಟೆಗಳಲ್ಲೊಂದಾಗಿತ್ತು. ಅದರ ಮೇಲೆ ದಾಳಿ ಮಾಡಿ ಅನೇಕ ದಿನಗಳವರೆಗೆ ಕೋಟೆಯ ಕೆಳಗಡೆಯೇ ತನ್ನ ಬೀಡಾರವನ್ನು ಬಿಟ್ಟಿದ್ದನು. ಯವನ ಸೈನ್ಯ ಹಾಗೂ ಅಕಲ್ಯಾಣಪ್ರದ ಪರಿಣಾಮದ ಹಿಂದೂ ಸೈನ್ಯದ ಮಧ್ಯ ಮತ್ತೆ-ಮತ್ತೆ ಯುದ್ಧ ನಡೆಯುತ್ತಲೇ ಇತ್ತು.[೧೩] ಉಭಯ ಪಂಗಡಗಳಲ್ಲಿಯ ಅನೇಕ ಜನರು ಸತ್ತರು. ಪ್ರತಿಸಲವೂ ಸಿಂಹದಂತೆ ಪರಾಕ್ರಮಶಾಲಿಯಾದ ಅಸದಖಾನ ಹಾಗೂ ಇತರ ಯವನ ಸೇನೆಗಳಿಗೆ ಗೆಲುವು ದೊರೆಯುತ್ತಿತ್ತು. ಹಿಂದು ಸೈನ್ಯವು ಇದರಿಂದಾಗಿ ದಣಿದಿತ್ತು. ಕೋಟೆಯ ಒಳಗಿನ ಜನರು ನಿರಾಶವಾಗಿ ಕೋಟೆಯನ್ನು ಬಿಟ್ಟುಕೊಡಬೇಕೆಂದೂ ಯೋಚಿಸುತ್ತಿದ್ದರು.[೧೪] ಅಷ್ಟರಲ್ಲಿ ಆದಿಲಶಹನ ಆರೋಗ್ಯ ಕೆಟ್ಟಿತು. ಅನೇಕ ವೈದ್ಯರು ಬಂದು ಅವನನ್ನು ವಿಧವಿಧವಾಗಿ ಉಪಚರಿಸಿದರು. ಆದರೆ ಆತನ ಆಯುಷ್ಯದ ಕೊಡ ತುಂಬಿ ಬಂದಿತ್ತು. ಆದ್ದರಿಂದ ಔಷಧಗಳು ಅವನಮೇಲೆ ನಾಟಲಿಲ್ಲ. ಆಗ 'ಮತ್ತೊಮ್ಮೆ ನಾವೆಲ್ಲ ಬರೋಣವೆಂದು' ಹೇಳಿ, ಹಿಂತಿರುಗಿದರು. ದಾರಿಯಲ್ಲಿ ಆತನ ಆರೋಗ್ಯ ಮತ್ತಷ್ಟು ಕೆಟ್ಟಿತು. ಸಾಗರ ಪಟ್ಟಣದ ಹತ್ತಿರ ಬಂದು ಮುಟ್ಟಿದರು. ಅದು ಬುಧವಾರದ ಪ್ರಾತಃಕಾಲ ದಿನಾಂಕ ೧೬ ತಿಂಗಳು ಸಫರ ಹಿಜರಿ ಸನ್ ೯೪೧ (೨೭ ಅಗಸ್ಟ್ ೧೫೩೪ ಹಳೆಯ ಪದ್ಧತಿಯಿಂದ, ೬ ಸಪ್ಟಂಬರ್ ೧೫೩೪ ಹೊಸ ಪದ್ಧತಿಯಿಂದ) ರಂದು ಪರಲೋಕವಾಸಿಯಾದನು. ಬಾದಶಹನ ಮರಣದ ವಾರ್ತೆಯನ್ನು ಅಸದಖಾನನು ಗೌಪ್ಯವಾಗಿಟ್ಟು ಆತನ ಶವವನ್ನು ಪಲ್ಲಕ್ಕಿಯಲ್ಲಿಟ್ಟು, ಪರದೆಯನ್ನು ಇಳಿಬಿಟ್ಟು ರಾತ್ರಿ ಸಮಯದಲ್ಲಿ 'ಗೋಗಿ'ಗೆ ಕಳಿಸಿದನು. ಆತನ ತಂದೆಯ ಹತ್ತಿರವೇ ಆತನನ್ನೂ ದಫನ ಮಾಡಲಾಯಿತು. ಚಂದಾಪುರ ಎಂಬ ಹಳ್ಳಿಯನ್ನು ಇಸ್ಮಾಯಿಲ ಆದಿಲಶಹನು ಕಟ್ಟಿದ್ದನು. ಆ ಹಳ್ಳಿ ಹಿ.ಸನ್ ೯೨೬ (ಕ್ರಿ.ಶ. ೧೫೧೯-೨೦) ರಲ್ಲಿ

---

೧೨. ಹಿ.ಸ ೯೩೮ (ಕ್ರಿ.ಶ. ೧೫೩೧-೩೨) ರಲ್ಲಿಯ ಘಟನೆಗಳು. ಬ್ರಿ. ಫೆ III ಪು ೭೮-೭೦

೧೩. ಕುಲಿಕುತುಬಶಾಹನ 'ಕೋವಿಲಕೊಂಡ' ಕೋಟೆಯ ದಾಳಿ ಇದಾಗಿತ್ತು. ಅದು ಹಿಂದೂಗಳದ್ದಲ್ಲ. - Histroy of Med. Deccan ಪು. ೩೧೪.

೧೪. ಹಿ.ಸ. ೯೪೦ (ಕ್ರಿ.ಶ. ೧೫೩೩-೩೪) ರಲ್ಲಿಯ ಯುದ್ಧ ಬ್ರಿಗ್ಸ ಫೆ-III ಪುಟ ೭೦-೭೧.

ನಿರ್ಮಾಣವಾಯಿತು. ಚಂಪಾ ಮಹಲನ್ನು ಹಿ. ಸನ್ ೬೨೭ (ಕ್ರಿ.ಶ ೧೫೨೦-೨೧)ರಲ್ಲಿ ಕಟ್ಟಿದನು. ಆದಿಲಶಹನ ಸೈನ್ಯದ ಗಣತಿ, ಸವಾರರು ಸಿಬ್ಬಂದಿ ಎಲ್ಲ ಕೂಡಿ ಒಟ್ಟು ೧,೪೦,೦೦೦ ಹಾಗೂ ೧೧೬ ಆನೆಗಳಿದ್ದುವು.

## ೧೦. *ಮಲ್ಲುಖಾನನನ್ನು ಸಿಂಹಾಸನದ ಮೇಲೆ ಕೂಡಿಸಬೇಕೆಂದು ಆದಿಲಶಹನು ಅಸದಖಾನನಿಗೆ ಹೇಳಿದ್ದು. ಮಲ್ಲುಖಾನನು ಏಳುತಿಂಗಳ ರಾಜ್ಯವಾಳಿದ್ದು :*

ಮಲ್ಲುಖಾನನನ್ನು ಸಿಂಹಾಸನದಮೇಲೆ ಕೂಡಿಸಬೇಕೆಂದು ಇಸ್ಮಾಯಿಲ ಆದಿಲಶಹನು ತನ್ನ ಅಂತ್ಯಕಾಲದಲ್ಲಿ ಅಸದಖಾನನಿಗೆ ಹೇಳಿದ್ದನು. ಅದರಂತೆ ಅಸದಖಾನನು ಮಲ್ಲೂಖಾನನನ್ನು ಸಿಂಹಾಸನದ ಮೇಲೆ ಕೂಡಿಸಿದನು. ಆತನ ನಡತೆ ಹಾಗೂ ಚಲನವಲನಗಳು ಅಸದಖಾನನಿಗೆ ಸರಿಬಂದಿರಲಿಲ್ಲ. ಆದ್ದರಿಂದ ಅಸದಖಾನನು ಮನೋವ್ಯಥೆಯಿಂದ ಇಸ್ಮಾಯಿಲನ ತಾಯಿ ಬುನಾನೀ ಖಾತೂನಳಿಗೆ ಆತನ ಕುರಿತು ಸಾವಧಾನರಾಗಿರಿ ಎಂದು ಎಚ್ಚರಿಕೆ ಕೊಟ್ಟು ತಾನು ಬೆಳಗಾವಿಗೆ ಹೋದನು. ಮಲ್ಲೂಖಾನನು ಏಳು ತಿಂಗಳು ರಾಜ್ಯವಾಳಿದನು.[೧೫] ಆದರೆ ಆತ ತುಂಬ ಕ್ಷುದ್ರ ಮನುಷ್ಯನಾಗಿದ್ದನು. ಅದರಿಂದಾಗಿ ಅಯೋಗ್ಯ ಕೆಲಸಗಳ ಹಿಂದೆ ಆತ ಇರುತ್ತಿದ್ದ. ಅವನ ಈ ನಡಾವಳಿಕೆಯಿಂದ ಅಸ್ಥಾನದ ಸಣ್ಣ, ದೊಡ್ಡ ಜನರೆಲ್ಲರೂ ತೊಂದರೆಗೊಳಗಾದರು. ಬುನಾನೀ ಖಾತೂನಳೂ, ಬೇಸತ್ತು ಆತನನ್ನು ಸಿಂಹಾಸನದಿಂದ ಕೆಳಗಿಳಿಸಿ ಇಬ್ರಾಹಿಮನನ್ನು ಕೂಡಿಸಬೇಕೆಂದು ನಿರ್ಧರಿಸಿದಳು. ಅದಕ್ಕಾಗಿ ಒಬ್ಬ ವಿಶ್ವಾಸಿ ಸೇವಕನನ್ನು ಬೆಳಗಾವಿಗೆ ಕಳಿಸಿ ತನ್ನ ನಿರ್ಧಾರದ ಕುರಿತು ಅಸದಖಾನನ ಸಲಹೆಯನ್ನು ಕೇಳಿದಳು. ಪ್ರತಿಯಾಗಿ ಅಸದಖಾನನು 'ಆತನ ನಡವಳಿಕೆಗೆ ಬೇಸತ್ತೇ ವಿಜಾಪುರ ಬಿಟ್ಟು ಇಲ್ಲಿಗೆ ಬಂದು ಕುಳಿತಿರುವೆ. ಇಬ್ರಾಹಿಮನನ್ನು ಸಿಂಹಾಸನದ ಮೇಲೆ ಕೂಡಿಸುವ ತಮ್ಮ ಸಲಹೆ ಉತ್ತಮವಾಗಿದೆ.' ಎಂದು ಬರೆದು ಕಳಿಸಿದನು. ಜೊತೆಗೆ ವಿಜಾಪುರದಲ್ಲಿಯ ಯೂಸುಫ ತುರ್ಕಿ ಎಂಬ ಗೃಹಸ್ಥನಿಗೂ ಇಸ್ಮಾಯಿಲನ ತಾಯಿಯ ನಿರ್ಧಾರವನ್ನು ತಿಳಿಸಿ ಅವಳ ಸೂಚನೆಯಂತೆ ಕಾರ್ಯಪ್ರವೃತ್ತನಾಗಲು ತಿಳಿಸಿದನು. ಯೂಸುಫ ತುರ್ಕಿಯು ತೋಪಿವಾಲೆ ಅಮೀರರಲ್ಲಿಯ ಒಬ್ಬ ಹಿರಿಯ ಪ್ರಭಾವೀ ವ್ಯಕ್ತಿಯಾಗಿದ್ದನು. ಆತನು ಮಲ್ಲೂಖಾನನ್ನು ಹಿಡಿದು ಕಬ್ಬಿಣದ ಸಲಾಕೆಗಳಿಂದ ಆತನ ಕಣ್ಣು ಕಿತ್ತಿ, ರಾಜಕುಮಾರ ಇಬ್ರಾಹಿಮನನ್ನು ಸಿಂಹಾಸನದ ಮೇಲೆ ಕೂಡಿಸಿದನು.

---

೧೫. ಫೆರಿಸ್ತಾನ ಪ್ರಕಾರ ೬ ತಿಂಗಳು ಮಾತ್ರ. ಸೆಪ್ಟೆಂಬರ್ ೧೫೩೪ ರಿಂದ ಫೆಬ್ರುವರಿ ೧೫೩೫ರ ವರೆಗೆ ರಾಜ್ಯವಾಳಿದನು. ಬ್ರಿಗ್ಸ್ ಫೆ-III ಪುಟ ೭೭.

# ಬುಸ್ತಾನ : ಮೂರು

# ಇಬ್ರಾಹಿಮ ಆದಿಲಶಾಹ - I

## ೧. ಇಬ್ರಾಹಿಮ ಆದಿಲಶಾಹ ವಲ್ಲದ(ತಂದೆ) ಇಸ್ಮಾಯಿಲ್ ಆದಿಲಶಾಹ.

ವಿಜಾಪುರದ ಪಾದಶಾಹಿ ಸಿಂಹಾಸನದ ಮೇಲೆ ಇಬ್ರಾಹಿಮ ಆದಿಲಶಹನನ್ನು ಕೂಡಿಸಿದಾಗ ಆಸನ ಹಾಗೂ ಛತ್ರಗಳು ಶೋಭಿಸಿದುವು. ತನ್ನ ಉತ್ತಮ ನಡವಳಿಕೆಯಿಂದ ಮತ್ತು ಯೋಗ್ಯ ಸ್ವಭಾವದಿಂದಾಗಿ ಎಲ್ಲರನ್ನೂ ಆತ ಸಂತೋಷ ಪಡಿಸಿದನು. ಮಲ್ಲುಖಾನನ ನೀಚ ಹಾಗೂ ಕಪಟ ಬುದ್ಧಿಗಳಿಂದ ಆಸ್ಥಾನದ ಎಲ್ಲ ಜನರ ಮನಸ್ಸು ಕೆಟ್ಟಿತ್ತು. ಇಬ್ರಾಹಿಮನು ತನ್ನ ಉತ್ತಮ ನಡಾವಳಿಕೆಯಿಂದ ಅವರೆಲ್ಲರನ್ನೂ ಸಮಾಧಾನ ಪಡಿಸಿದನು. ಎಲ್ಲ ಚರಿತ್ರಕಾರರು ಇಬ್ರಾಹಿಮ ಆದಿಲಶಹನು ಒಬ್ಬ ಶೂರ ಹಾಗೂ ಪರಾಕ್ರಮಿ ಬಾದಶಹನಾಗಿದ್ದನು ಎಂದು ಹೇಳಿದ್ದಾರೆ. ಆತನು ಅತಿ ಶೂರತ್ವದಿಂದ ನಿರ್ಭಯವಾಗಿ ಎದೆಯಮೇಲೆ ಚಿಲಖತ್ತನ್ನು ಧರಿಸಿಕೊಂಡು, ಜೀವಂತ ಇರುವವರೆಗೂ ಯುದ್ಧ ಸಂಗ್ರಾಮಗಳಲ್ಲಿ ಭಾಗವಹಿಸಿದನು. ದಕ್ಷಿಣದ ಎಲ್ಲ ಬಾದಶಹರು ಆತನ ಭಯದಿಂದ ರಾತ್ರಿ ನಿದ್ದೆ ಮಾಡುತ್ತಿರಲಿಲ್ಲ. ಇಬ್ರಾಹಿಮ ಆದಿಲಶಹನು ಯಾವಾಗಲೂ ಶತೃಗಳ ಮೇಲೆ ದಾಳಿ ಮಾಡಿ ಅವರ ಪ್ರದೇಶಗಳನ್ನು ಲೂಟಿ ಮಾಡುತ್ತಿದ್ದನು. ಹಾಳು ಮಾಡುತ್ತಿದ್ದನು. ಸ್ವಸಾಮರ್ಥ್ಯದಿಂದ ಆತ ತನ್ನ ವೈರಿಗಳನ್ನು ಎದುರಿಸುತ್ತಿದ್ದನು. ಅವರೆಲ್ಲರಿಗಿಂತ ಪ್ರಬಲನಾಗಿದ್ದನು. ಆದ್ದರಿಂದ ದಕ್ಷಿಣದ ಎಲ್ಲ ರಾಜರು ತಂತಮ್ಮಲ್ಲಿ ಸೇರಿ ಇಬ್ರಾಹಿಮನನ್ನು ಸೋಲಿಸುವ ತಂತ್ರವನ್ನು ರೂಪಿಸುತ್ತಿದ್ದರು. ಆದರೆ ಅವರ ತಂತ್ರಗಳು ಫಲಿಸುತ್ತಿರಲಿಲ್ಲ. ಒಮ್ಮೊಮ್ಮೆ ಇಬ್ರಾಹಿಮನ ಸೇನೆ ಹಿಂಜರಿಯುತ್ತಿತ್ತಾದರೂ ತುಸುವೆ ಅವಕಾಶದಲ್ಲಿ ಮತ್ತೆ ಸೈನ್ಯವನ್ನು ಸೇರಿಸಿ ಶತೃಗಳ ಮೇಲೆ ಏರಿ ಹೋಗುತ್ತಿದ್ದನು. ಸೇಡು ತೀರಿಸಿಕೊಳ್ಳುತ್ತಿದ್ದನು. ಇರಾಣದ ಬಾದಶಾಹ ತಹಮಾಸೀಪನು ಆಗಾಗ್ಗೆ ಹೀಗೆ ಹೇಳುತ್ತಿದ್ದನೆಂದು ಹೇಳುತ್ತಾರೆ. "ಶೂರ, ಧೀರ, ನಿರುಪಮ ಹಾಗೂ ಪ್ರಖ್ಯಾತ ರಾಜರುಗಳಲ್ಲಿ ಒಬ್ಬ ತುರ್ಕದೇಶದ ಆಫರಾಸಿಯಾಬ; ಇನ್ನೊಬ್ಬ ದಕ್ಷಿಣದ ಇಬ್ರಾಹಿಮ ಆದಿಲಶಹ ಮಾತ್ರ" ಆತ ಸ್ವತಃ ರಣಭೂಮಿಯಲ್ಲಿ ಬಂದು ತಲವಾರ ತಿರುವುತ್ತಿದ್ದನು. ಆತನ ಸಮ್ಮುಖದಲ್ಲಿ ವೈರಿಗಳ ಸೈನ್ಯ ಚಿಕ್ಕದಿದೆಯೋ-ದೊಡ್ಡದಿದಿಯೋ ಎಂಬುದನ್ನು ಗಣಿಸದೆ ತನ್ನ ಅಲ್ಪ ಸೈನ್ಯದೊಂದಿಗೆ ಅವರನ್ನು ಎದುರಿಸಿ ಪ್ರಬಲನಾಗಿದ್ದನು. ಆದಿಲಶಾಹಿ ಮನೆತನದಲ್ಲಿ ತನ್ನ ತಂದೆ-ಅಜ್ಜಂದಿರು ಪಾಲಿಸುತ್ತ ಬಂದ, ಬಾರಾ ಇಮಾಮರ ಹೆಸರಿನಲ್ಲಿ ಓದುವ ಖುತಬಾವನ್ನು ಕೈಬಿಟ್ಟು ಇಮಾಮಿ ಧರ್ಮದ ಜನರನ್ನು ತೆಗೆದುಹಾಕಿ ಸುನ್ನಿ ಧರ್ಮವನ್ನು ಚಾಲತಿಯಲ್ಲಿ ತಂದ ಪ್ರಥಮ ವ್ಯಕ್ತಿಯಾದನು. ಮೊಗಲ ಸಿಪಾಯಿಗಳು ಹನ್ನೆರಡು ತುರ್ಕಿ ಟೊಪ್ಪಿಗೆಗಳನ್ನು ಹಾಕುವುದನ್ನು ನಿಲ್ಲಿಸಿದನು. ಅವನ ತಂದೆ ತುಂಬ ಶ್ರಮವಹಿಸಿ ಸೇರಿಸಿದ

ತನ್ನ ಪ್ರದೇಶದಲ್ಲಿಯ ಎಲ್ಲ ಅಧಿಕಾರಿ ಜನರನ್ನು ನೌಕರಿಯಿಂದ ತೆಗೆದು, ನಾಲ್ಕುನೂರು ಜನ ಮೊಗಲರನ್ನು ಅವರ ಸ್ಥಳದಲ್ಲಿ ನಿಯಮಿಸಿದನು. ಸುನ್ನಿಗಳನ್ನು ಮತ್ತು ದಕ್ಷಿಣದವರನ್ನು ನೌಕರಿಗೆ ತೆಗೆದುಕೊಂಡನು. ತಾಜ ಧರಿಸುತ್ತಿದ್ದ ಅಮೀರರಲ್ಲಿ ಅಸದಖಾನ ಹಾಗೂ ಹುಶಲಾಕ ಆಖಾ ಇಬ್ಬರನ್ನು ಬಿಟ್ಟು ಉಳಿದೆಲ್ಲರನ್ನೂ ಅಮೀರ ಪದವಿಯಿಂದ ತೆಗೆದನು. ಅಜ್ಜನ ಹಾಗೂ ತಂದೆಯ ಕಾಲದಿಂದ ಫಾರ್ಶಿ ಭಾಷೆಯಲ್ಲಿ ಇರುತ್ತಿದ್ದ ಕಾಗದ ಪತ್ರಗಳನ್ನು ಬದಲಿಸಿ ಹಿಂದೂ ಭಾಷೆಯನ್ನು ಬಳಸಿದನು. ಮಹಾಲಿ ಹಾಗೂ ಮುಲಕೀ ಕೆಲಸಗಳಿಗೆ ಬ್ರಾಹ್ಮಣರನ್ನು ನಿಯಮಿಸಿದನು.

### *೨. ಇಬ್ರಾಹಿಮ ಆದಿಲಶಹನು ವಿಜಯನಗರದ ಮೇಲೆ ಏರಿ ಹೋಗುವುದು ಮತ್ತು ಅಲ್ಲಿಂದ ವಿಜಯಿಯಾಗಿ ಹಿಂತಿರುಗುವುದು.*

ಸಿಂಹಾಸನದ ಮೇಲೆ ಕುಳಿತ ಅನಂತರ ಮರುವರುಷವೇ ಸೈನ್ಯವನ್ನು ಜಮಾಯಿಸಿ ವಿಜಯನಗರದ ಮೇಲೆ ದಾಳಿ ಮಾಡಿದನು. ಕೆಲವೆ ದಿನಗಳಲ್ಲಿ ಕಾರ್ಯಸಿದ್ಧಿಯಾಗಿ ಆನಂದದಿಂದ ರಾಜಧಾನಿಗೆ ಹಿಂತಿರುಗಿದನು. ಈ ಘಟನೆಯ ವಿಸ್ತಾರವಾದ ವೃತ್ತಾಂತ ಹೀಗಿದೆ :

ವಿಜಯನಗರವು ಬಹು ಪುರಾತನವಾದ ರಾಜ್ಯದ ರಾಜಧಾನಿ. ವಿಜಯನಗರ ಪಟ್ಟಣವು ಏಳೆಂಟು ನೂರುವರುಷಗಳಷ್ಟು ಹಳೆಯದ್ದು. ದೊಡ್ಡ ದೊಡ್ಡ ರಾಯ ಜನರು ವಿಜಯನಗರದಲ್ಲಿ ಆಧಿಪತ್ಯ ವಹಿಸಿ ರಾಜ್ಯವಾಳಿದ್ದಾರೆ. ರಾಜ್ಯದ ಜನಸಂಪತ್ತು, ಬಹು ದೊಡ್ಡ ಸಿಬ್ಬಂದಿ, ಸೇನೆ, ಅಗಣಿತ ಸಂಪತ್ತು ಇತ್ಯಾದಿಗಳಿಂದ ದಕ್ಷಿಣದಲ್ಲಿ ಹಾಗೂ ಹಿಂದುಸ್ಥಾನದ ಇತರ ಹಿಂದು ರಾಜರಲ್ಲಿ ಆ ನಗರದ ಐಶ್ವರ್ಯವು ಅಧಿಕವಾಗಿತ್ತು. ಆದ್ದರಿಂದಲೇ ಅದು ಪ್ರಬಲವಾಗಿತ್ತು. ವಾಸ್ತವದಲ್ಲಿ ಬಹಮನಿ ಯವನರ ಸಂಪತ್ತು ಪ್ರಾರಂಭಕಾಲದಲ್ಲಿ ದಕ್ಷಿಣದೇಶದಲ್ಲಿ ಪ್ರಸಿದ್ಧವಾಗಿತ್ತು. ಅಲ್ಲಾನ ಕೃಪೆಯು ಯವನ ಬಾದಶಹರ ಕಡೆಗಿದ್ದು ಯುದ್ಧಗಳಾಗಹತ್ತಿದುವು. ಪ್ರತಿವರ್ಷವೂ ಶತ್ರುಗಳ ಪ್ರದೇಶಗಳಲ್ಲಿ ದಾಳಿ ಮಾಡಿ ದೇವತಾರ್ಚನೆ ಮಾಡುವ ಹಿಂದು ಜನರ ನಿರ್ಮೂಲನ ಮಾಡುವ ವಿಚಾರ ಮಾಡಹತ್ತಿದರು. ಅಂದಿನಿಂದ ವಿಜಯನಗರದ ರಾಯ ಜನರಿಗೆ ಬಹಳ ಧಕ್ಕೆಯಾಯಿತು. ಆಗ ಹಿಂದು ಜನರು ಕೂಡ ಪ್ರತಿಯಾಗಿ ಜಪ್ಪಿಸಿ ಕುಳಿತು, ಸಮಯ ದೊರೆತಾಗ ಯವನ ಜನರ ಪಟ್ಟಣಗಳ ಮೇಲೆ ದಾಳಿ ಮಾಡಿ, ಪ್ರದೇಶಗಳನ್ನು ಹಾಳು ಮಾಡುತ್ತ ಯವನರ ಅನೇಕ ತಾಲ್ಲೂಕು ಪ್ರದೇಶಗಳನ್ನು ಹಸ್ತಗತಮಾಡಿಕೊಳ್ಳುತ್ತಿದ್ದರು. ಸುಲ್ತಾನ ಅಹಮ್ಮದ ಸಲಿಲ್ಲಾಹ ಬಹಮನಿ ಬೀದರದ ರಾಜ್ಯಕಾಲದಲ್ಲಿ, ಶಿವರಾಯನ ಮೃತ್ಯುವಿನ ಅನಂತರ, ಹಿ.ಸ. ८४० (ಕ್ರಿ.ಶ. ೧೪೩೬-೩೭)ರಲ್ಲಿ ರಾಮರಾಜನು ವಿಜಯನಗರದ ಸಿಂಹಾಸನವನ್ನೇರಿದ್ದನು. ನ್ಯಾಯ ನ್ಯಾಯದಾನದಲ್ಲಿ ನಿಷ್ಣಾತನಾದ ಆತನು ಶೂರನಾಗಿದ್ದು ಪರಾಕ್ರಮದಿಂದ ಇಪ್ಪತ್ತೆಂಟು ವರುಷ ರಾಜ್ಯವಾಳಿ ತೀರಿಕೊಂಡನು. ಅನಂತರ ಅವನ ವಾರಸುದಾರನಾಗಿ ರಾಜಾ ಅಜಿತರಾಯ ಎಂಬವನು ಸಿಂಹಾಸನವನ್ನೇರಿ, ನ್ಯಾಯಯುತವಾಗಿ ರೈತರ ಪರಿಪಾಲನೆ ಮಾಡುತ್ತ, ಸತ್ಕೀರ್ತಿಯಲ್ಲಿ ಕಾಲಕಳೆದು ಆತನೂ ತೀರಿಕೊಂಡನು. ಅನಂತರ, ಕಿಸನರಾವ ಎಂಬ ಹೆಸರಿನ ರಾಜನು ಸಿಂಹಾಸನವನ್ನೇರಿದನು. ಆತನು ತುಂಬ ಬುದ್ಧಿವಂತ. ನ್ಯಾಯದಿಂದ ನಡೆಯುವ ರಾಜನಾಗಿದ್ದನು. ತನ್ನ ನ್ಯಾಯ ಮತ್ತು ನ್ಯಾಯದಾನಗಳಿಂದ ತನ್ನ ಪ್ರದೇಶಗಳನ್ನು ಅಭಿವೃದ್ಧಿ ಪಡಿಸಿದ್ದನು. ಯವನರ ಅನೇಕ ಅಮೀರ ಜನರು ತಮ್ಮ ಬಾದಶಹರಿಂದ ತೊಂದರೆಗೊಳಪಟ್ಟು ಆತನ ಹತ್ತಿರ ಆಶ್ರಯಕ್ಕಾಗಿ ಹೋಗಿದ್ದರು. ಆತ ಅವರಿಗೆ ಆಶ್ರಯ ನೀಡಿ ಸಂರಕ್ಷಿಸಿದ್ದನು. ಪ್ರತಿಯೊಬ್ಬರನ್ನು

ಸಮಾಧಾನ ಪಡಿಸಿ, ಪ್ರತಿಯೊಬ್ಬರನ್ನೂ ಸಂತೋಷದಲ್ಲಿರಿಸುತ್ತಿದ್ದನು. ಅವರಿಗೆ ವಾಸಿಸಲು ಸ್ಥಳಕೊಟ್ಟು ಅಲ್ಲಿ ತಮ್ಮ ಮನೆಗಳನ್ನು ವಾಡೆಗಳನ್ನು ಕಟ್ಟಿ ಆನಂದದಿಂದ ಇರಲು ಆಸ್ಪದ ಮಾಡಿಕೊಟ್ಟಿದ್ದನು. ತಮ್ಮ ಯವನ ಮಾರ್ಗ ಮತ್ತು ಆಚಾರಧರ್ಮಗಳನ್ನು ನಿರ್ಭಯವಾಗಿ ಮತ್ತು ನಿಸ್ಸಂಶಯವಾಗಿ ಆಚರಿಸುತ್ತ ಹೋಗಿರಿ, ನಿಮ್ಮಲ್ಲಿಯ ಯಾರೊಬ್ಬರಿಗೂ ಹಿಂದು ಜನರಿಂದ ಯಾವುದೇ ಕಾರಣದಿಂದ ಉಪದ್ರವವಾಗಬಾರದು ಎಂದು ಹೇಳುತ್ತಿದ್ದನು. ಅವರಿಗೆ ತುರ್ಕರು ಎಂದು ಹೆಸರಿಟ್ಟಿದ್ದನು. ಹೀಗೆ ಸತ್ಕೀರ್ತಿವಂತನಾಗಿ ವೈಭವದಿಂದ ರಾಜ್ಯವಾಳಿ ತಮ್ಮ ಪೂರ್ವಜರ ಹಿಂದೆ ಹೋದನು. ಅನಂತರ ಒಂದು ವರುಷದ ಚಿಕ್ಕ ಮಗುವನ್ನು ಸಿಂಹಾಸನದ ಮೇಲೆ ಕುಳ್ಳಿರಿಸಲಾಯಿತು. ಆ ಸಮಯದಲ್ಲಿ ವಿಜಯನಗರದಲ್ಲಿಯ ಶ್ರೇಷ್ಠ ಸಚಿವರುಗಳಲ್ಲಿ ಒಬ್ಬನಾದ ತಿಮ್ಮರಾಜನ ಕಡೆಗೆ ಅಧಿಕಾರವಿತ್ತು. ಆತನು ತನ್ನ ರಾಜ್ಯದ ಕಾರೋಬಾರವನ್ನು ಮುಖ್ತಾರರ ಮುಖಾಂತರ ಬಹಳ ಸಾಮರ್ಥ್ಯದಿಂದ, ಸಮಾಧಾನದಿಂದ ಮಾಡುತ್ತಿದ್ದನು. ಸಿಂಹಾಸನದ ಮೇಲೆ ಕುಳಿತ ಮಗು ದೊಡ್ಡವನಾಗಿ ತಿಳುವಳಿಕೆ ಬಂದಾಗ ತಿಮ್ಮರಾಜನು ಆ ಮಗುವನ್ನು ತೆಗೆದು ರಾಯ ಜನರಲ್ಲೊಂದಾದ (ಮತ್ತೊಂದು ಹುಡುಗನನ್ನು) ಸಿಂಹಾಸನದ ಮೇಲೆ ಕುಳ್ಳಿರಿಸಿದನು. ತನ್ನ ಅಧಿಕಾರವನ್ನು ಮುಂದುವರಿಸಿದನು. ಆತನೂ ದೊಡ್ಡವನಾದಂತೆ ಆತನನ್ನೂ ಪದಚ್ಯುತಗೊಳಿಸಿ ಮತ್ತೊಂದು ಹುಡುಗನನ್ನು ಹಿಡಿದು ತಂದು ಕುಳ್ಳಿರಿಸುತ್ತಿದ್ದನು. ತಿಮ್ಮರಾಜ ಇರುವವರೆಗೆ ಹೀಗೆಯೇ ನಡೆಯಿತು. ಆತ ಸತ್ತಮೇಲೆ ರಾಮರಾಜನೆಂಬವನು ಆ ಸ್ಥಾನದಲ್ಲಿ ಕಾಯಂ ಆಗಿ ಉಳಿದನು. ಆತನ ನಡೆ-ನುಡಿಯೂ ಹಾಗೆಯೇ ಇತ್ತು. ಆದರೆ ದಬ್ಬಾಳಿಕೆ ಮಾಡುತ್ತಿದ್ದನು. ಉಪ್ಪು ತಿಂದ ಮನೆಗೆ ಎರಡು ಬಗೆಯುತ್ತ, ಅಪ್ರಾಮಾಣಿಕ ಮಾರ್ಗದಲ್ಲಿ ಬಹಳ ಮುಂದೆ ಬಂದು ಸಿಂಹಾಸನದ ಮೇಲೆಯೇ ಕಣ್ಣಿಟ್ಟನು. ರಾಜವಂಶದ ಕನ್ಯೆಯೊಂದಿಗೆ ಮದುವೆಯಾಗಿ, ರಾಜ್ಯದ ವಾರಸದಾರರಲ್ಲೊಬ್ಬನೆಂದು ಅತಿ ಗರ್ವದಿಂದ ಎದೆ ಸೆಟೆಸಿ ನಡೆಯಹತ್ತಿದನು. ತಾನೇ ಶ್ರೇಷ್ಠನೆಂದು ತಿಳಿದುಕೊಂಡಿದ್ದನು. ಈ ಮೊದಲು ಸಿಂಹಾಸನದ ಮೇಲೆ ಕೂಡ್ರಿಸಿ ಪದಚ್ಯುತಿಗೊಳಿಸಿದ ರಾಜಾಭೋಜ ತಿರುಮಲನು ದೊಡ್ಡವನಾದಂತೆ ರಾಮರಾಜನ ಅಧಿಕಾರವನ್ನು ಕಿತ್ತೊಗೆಯುವ ಸಮಯಕ್ಕಾಗಿ ಕಾದು ಕುಳಿತಿದ್ದನು.

ಒಂದು ಸಲ ರಾಮರಾಜನು ಗಡಿಯಲ್ಲಿಯ ದಂಗೆಯನ್ನು ನಿಯಂತ್ರಿಸಲು ರಾಜಧಾನಿಯಿಂದ ಹೊರಗೆ ಹೋಗಿದ್ದನು. ಅಲ್ಲಿಯೇ ಕೆಲವು ದಿನ ಇದ್ದನು. ತಿರುಮಲನು ಈ ಸಮಯವನ್ನು ಸಾಧಿಸಿ ಒಬ್ಬ ಮೃದು ಭಾಷೆಯ ರಾಯಭಾರಿಯನ್ನು ಇಬ್ರಾಹಿಮ ಆದಿಲಶಹನ ಹತ್ತಿರ ಕಳಿಸಿದನು. ಅವನೊಂದಿಗೆ ಆರುಲಕ್ಷ ಹೊನ್ನು ಹಾಗು ಕೆಲವು ಉತ್ತಮೋತ್ತಮ ಪದಾರ್ಥಗಳನ್ನು ಕಾಣಿಕೆಯಾಗಿ ಕಳಿಸಿ. ಹೀಗೆ ವಿನಂತಿಸಿಕೊಂಡಿದ್ದನು. "ತಮ್ಮ ಚರಣಾರಾರವಿಂದಗಳು ಈ ಭೂಮಿಯನ್ನು ಸ್ಪರ್ಶಿಸಿ ಈ ಪ್ರದೇಶವನ್ನು ಸ್ವರ್ಗದಂತೆ ಮಾಡಿದರೆ ಉತ್ತಮವಾಗುವುದು. ಕೃತಘ್ನನಾಗಿ ದಬ್ಬಾಳಿಕೆಯಿಂದ ನನ್ನ ಹಾಗೂ ನನ್ನ ಪ್ರದೇಶದಲ್ಲಿಯ ಅಧಿಕಾರವನ್ನು ಕಿತ್ತುಕೊಂಡಿದ್ದಾನೆ. ನಾನು ಈ ಪ್ರದೇಶದ ವಾರಸದಾರನು. ಆದ್ದರಿಂದ ಆ ಕೃತಘ್ನನ ಪಾರುಪತ್ಯಮಾಡಿ ನನ್ನನ್ನು ತಿರುಗಿ ಸಿಂಹಾಸನದ ಮೇಲೆ ಕೂಡ್ರಿಸಿದರೆ ನಾನು ಮತ್ತಷ್ಟು ಭಾರೀ ದ್ರವ್ಯವನ್ನು ಕೊಡುವೆನು, ಈ ದ್ರವ್ಯವನ್ನು ತಮ್ಮ ಸಿಂಹಾಸನದ ಮುಂದೆ ತಮಗೆ ಕಾಣಿಕೆಯಾಗಿ ನೀಡುವೆನು ಹಾಗು ಜೀವಮಾನವಿಡೀ ತಮ್ಮ ಸೇವೆಯಲ್ಲಿದ್ದು ತಮ್ಮ ಆದೇಶಕ್ಕನುಗುಣವಾಗಿ ನಡೆಯುತ್ತ ಸಖ್ಯದಿಂದ ಇರುವೆನು. ಸರಕಾರದ ಅಮೀರರಲ್ಲಿ ನಾನೊಬ್ಬನೆಂದು ತಿಳಿದು ಕೊಳ್ಳುತ್ತೇನೆ". ಎಂದು ಬರೆದು ಕಳಿಸಿದ್ದನು. ಇಬ್ರಾಹಿಮ ಆದಿಲಶಹನು ಅಸದಖಾನನೊಂದಿಗೆ ಚರ್ಚಿಸಿ ಆತನ ಸಲಹೆಯಂತೆ

ವಿನಂತಿ ಪತ್ರವನ್ನು ಮಾನ್ಯ ಮಾಡಿ ಅವನ ಸಹಾಯಕ್ಕಾಗಿ ಕಟಿ ಬದ್ಧನಾದನು. ಕೆಲವೆ ದಿನಗಳಲ್ಲಿ ಶತ್ರುವನ್ನು ವಧಿಸಲು ಹಾಗು ಪ್ರದೇಶವನ್ನು ಗೆಲ್ಲಲು ಯುದ್ಧ ಸಿದ್ಧತೆಯನ್ನು ಮಾಡಿಕೊಂಡು ಸೈನ್ಯದೊಂದಿಗೆ ತನ್ನ ರಾಜಧಾನಿ ವಿಜಾಪುರದಿಂದ ಪ್ರಯಾಣಮಾಡಿದನು.[೧] ಮಾರ್ಗ ಕ್ರಮಣ ಮಾಡುತ್ತ ವಿಜಯನಗರಕ್ಕೆ ಬಂದು ಮುಟ್ಟಿದಾಗ ಮುಸಲ್ಮಾನ ಸೈನ್ಯದ ದಾಳಿಯ ವಿಷಯವು ರಾಮರಾಜನಿಗೆ ತಿಳಿಯಿತು. ಇಬ್ರಾಹಿಮ ಆದಿಲಶಹ ಬರುತ್ತಿರುವ ಕಾರಣವೂ ಗೊತ್ತಾಯಿತು. ಗಾಬರಿಯಾಗಿ, ಕಪಟ ಮಾರ್ಗದಿಂದ ವಿಚಾರಿಸಿ ತಕ್ಷಣ ಒಂದು ವಿನಂತಿ ಪತ್ರವನ್ನು ಬರೆದು 'ನನ್ನ ಮೇಲೆ ಕೃಪಾದೃಷ್ಟಿ ಇರಲಿ', ಎಂದು ನಮ್ರ ಭಾವದಿಂದ ಬರೆದ ಪತ್ರವನ್ನು ರಾಯಭಾರಿಯ ಮೂಲಕ ತಿರುಮಲನಿಗೆ ಕಳಿಸಿದನು. ಅದರಲ್ಲಿ ವಿವರವಾಗಿ ಬರೆದು "ಇಬ್ರಾಹಿಮ ಆದಿಲಶಹನನ್ನು ನಮ್ಮ ರಾಜಧಾನಿಗೆ ಕರೆ-ಕಳಿಸಿದುದರ ಹಿಂದೆ ತಮ್ಮ ಮನಸ್ಸಿನಲ್ಲಿ ಏನಿದೆ? ಒಂದು ವೇಳೆ ನನ್ನನ್ನು ನಿಯಂತ್ರಿಸಿ ನನಗೆ ಶಿಕ್ಷೆ ಮತ್ತು ದಂಡವನ್ನು ವಿಧಿಸುವುದೇ ಆಗಿದ್ದರೆ. ನನ್ನಿಂದ ಅಗೌರವ ಘಟನೆಗಳು ನಡೆದುದರ ಫಲವಾಗಿ ಆದಿಲಶಹನನ್ನು ಇತ್ತ ಕರೆಸಿದ್ದರೆ, ನಾನು ಅಪರಾಧಿಯಾಗಿರುವೆನು, ನಾನು ಶರಣು ಬರುತ್ತೇನೆ ಮತ್ತು ಪುನಃ ಅಗೌರವದಿಂದ ನಡೆದುಕೊಳ್ಳುವುದಿಲ್ಲ, ಗರ್ವದಿಂದ ಯಾವತ್ತೂ ವರ್ತಿಸುವುದಿಲ್ಲ ಮತ್ತು ತಮ್ಮ ಆಜ್ಞೆಯನ್ನು ಪರಿಪಾಲನೆ ಮಾಡುತ್ತೇನೆ ತಮ್ಮ ಸೇವೆಯ ವ್ಯತಿರಿಕ್ತ ಇನ್ನೊಂದು ಮಾರ್ಗವನ್ನು ಹಿಡಿಯುವುದಿಲ್ಲವೆಂದು ಪ್ರಮಾಣ ಮಾಡಿ ಹೇಳುತ್ತೇನೆ. ಆದರೆ ಯಾವುದೇ ಕಾರಣದಿಂದ ಮುಸಲ್ಮಾನರ ಸೈನ್ಯವು ಈ ಪ್ರದೇಶದಲ್ಲಿ ಬರುವುದು ಯೋಗ್ಯವೆನಿಸುವುದಿಲ್ಲ. ಅವರ ಕುದುರೆಗಳ ಖುರಪುಟದಿಂದ ನಮ್ಮ ಭೂಮಿಯು ನಾಶವಾಗುತ್ತದೆ. ಬಹಮನಿ ಸೈನ್ಯವು ದಾಳಿ ಮಾಡಿ ನಮ್ಮನ್ನೆಲ್ಲ ಸುಲಿದು ಸರ್ವನಾಶ ಮಾಡುತ್ತದೆ. ದೇವಾಲಯಗಳನ್ನು ಹಾಗೂ ಕ್ಷೇತ್ರಗಳನ್ನು ಕೆಡವಿ ಅಲ್ಲಿ ಮಸೀದಿಗಳನ್ನು ಕಟ್ಟುತ್ತಾರೆ. ಬ್ರಾಹ್ಮಣರ ಹಾಗೂ ಅದೆಷ್ಟು ರೈತರ ಸಾವಿರಾರು ಸ್ತ್ರೀಯರನ್ನು-ಮಕ್ಕಳನ್ನು ಬಂಧಿಸುತ್ತಾರೆ. ಆಗ ಪ್ರದೇಶವು ಹಾಗೂ ಇಲ್ಲಿಯ ಜನರು ನಷ್ಟವನ್ನು ಅನುಭವಿಸುತ್ತಾರೆ. ಮತ್ತೆ ಮತ್ತೆ ಜನವಸತಿಯನ್ನು ಸೃಷ್ಟಿಸುವುದು ಕನಸಿನಲ್ಲಿಯೂ ಸಾಧ್ಯವಾಗದ ಮಾತು. ತಮಗೆ ಯಾವುದು ಯೋಗ್ಯವೆನಿಸುತ್ತದೆಯೋ, ದುಷ್ಟ ಸಂಕಲ್ಪವನ್ನು ತ್ಯಾಗ ಮಾಡಿ ನಮ್ಮ ಪ್ರದೇಶವನ್ನು ಸಂರಕ್ಷಿಸಿರಿ. ಪ್ರತಿ ಹೆಜ್ಜೆಯನ್ನು ಯೋಗ್ಯರೀತಿಯಿಂದ ಇಡುತ್ತ, ನಮ್ಮ ಸಿಂಹಾಸನದ ಬದ್ಧ ವೈರಿಯಾದ ಇಬ್ರಾಹಿಮ ಆದಿಲಶಹನನ್ನು ತಿರುಗಿ ಕಳಿಸಿರಿ" ಎಂದು ಬರೆದಿದ್ದನು.

ಮೂರ್ಖ-ಭ್ರಾಂತ ತಿರುಮಲನು ಆತನ ಕಪಟ ಪಾಶದಲ್ಲಿ ಬಿದ್ದನು. ರಾಮರಾಜನ ರಾಯಭಾರಿಯ ಕಪಟ ಮಾತುಗಳನ್ನೆಲ್ಲ ನಿಜವೆಂದು ತಿಳಿದನು. ರಾಮರಾಜನ ವಿನಂತಿ ಪತ್ರಕ್ಕೆ ಮಾನ್ಯತೆಯನ್ನು ನೀಡಿ ೪೪ ಲಕ್ಷ ಹೊನ್ನು ಹಾಗು ೮೦ ಲಕ್ಷ ಬೆಲೆಯ ಪದಾರ್ಥಗಳನ್ನು ಕಾಣಿಕೆಯಾಗಿ ನೀಡಿ ಇಬ್ರಾಹಿಮ ಆದಿಲಶಹನನ್ನು ತಿರುಗಿ ಹೋಗಲು ವಿನಂತಿ ಪತ್ರವನ್ನು ಬರೆದು ಕಳಿಸಿದನು. ಯಾವ ಕಾರಣದಿಂದ ತನಗೆ ಧನಪ್ರಾಪ್ತಿಯಾಗಬೇಕಿತ್ತೋ ಅದಕ್ಕಿಂತ ಅಧಿಕವಾಗಿ ತಿರುಮಲನಿಂದ ದ್ರವ್ಯಪ್ರಾಪ್ತಿಯಾದಾಗ ಆದಿಲಶಹನು ಕುದುರೆಗಳನ್ನು ಹಿಂತಿರುಗಿಸಿ ತನ್ನ ರಾಜಧಾನಿ ವಿಜಾಪುರದತ್ತ ಹೊರಟನು. ಮುಸಲ್ಮಾನರ ಸೈನ್ಯ ಹಿಂತಿರುಗಿದ್ದನ್ನು ಕೇಳಿದ ರಾಮರಾಜನು ತಕ್ಷಣ ವಿಜಯನಗರಕ್ಕೆ ಬಂದು ಕೆಲವೆ ದಿನಗಳಲ್ಲಿ ರಾಜಾ ತಿರುಮಲನನ್ನು ಹಿಡಿದು ಕೊಂದು ನಿರ್ಭಯವಾಗಿ ತಾನೆ ಸಿಂಹಾಸನಾರೂಢನಾದನು.

---

೧. ಹಿಜರಿ ೯೪೨ (ಕ್ರಿ.ಶ. ೧೫೩೫-೩೬) ಬ್ರಿ.ಫೆ.III ಪುಟ ೮೩-೪.

### ೩. ವಿಜಯನಗರದಿಂದ ಹಿಂತಿರುಗಿದ ಆನಂತರ ಇಬ್ರಾಹಿಮ ಆದಿಲಶಹನು ವಿಜಾಪುರದ ಕೋಟೆಯನ್ನು ಕಟ್ಟಿದನು.

ಇಬ್ರಾಹಿಮ ಆದಿಲಶಹನು ತನ್ನ ಮನೋರಥ ಪೂರ್ತಿಯೊಂದಿಗೆ ವಿಜಾಪುರಕ್ಕೆ ಸುರಕ್ಷಿತವಾಗಿ ಬಂದು ಮುಟ್ಟಿದ ಮೇಲೆ ಅವನಿಗೊಂದು ವಿಚಾರ ಬಂದಿತು. ವಿಜಾಪುರದ ಕೋಟೆಯನ್ನು ಯೂಸುಫ ಆದಿಲಶಹನು ಕಟ್ಟಿದ್ದು ಅದು ಗಟ್ಟಿಯಾಗಿಲ್ಲ. ಬಹಳ ಕಾಲದವರೆಗೆ ಉಳಿಯುವುದೆಂಬ ಭರವಸೆಯೂ ಇಲ್ಲ. ಆದ್ದರಿಂದ ಬಂಡೆಗಲ್ಲು ಹಾಗು ಗಾರೆ-ಗಚ್ಚುಗಳಿಂದ ಮತ್ತೆ ಮಜಬೂತಾಗಿ ಕೋಟೆಯನ್ನು ಕಟ್ಟಬೇಕೆಂದನು. ಅದಕ್ಕಾಗಿ ಬಲ್ಲ ಗೌಂಡಿಗಳನ್ನು ಕುಶಲ ಕಲ್ಲುಕುಟಿಗರನ್ನು ಕರೆಸಿ ಕೋಟೆಯನ್ನು ಕಟ್ಟಲು ಪ್ರಾರಂಭಿಸಿದನು. ಕೋಟೆಗೆ ಎರಡು ದಂಡೆಗಳು, ಎರಡು ಖಂದಕಗಳು ಇರಬೇಕು. ತ್ವರಿತವಾಗಿ ಮಾಡುವ ಕೆಲಸಗಾರರನ್ನು ಕರೆಸಿದನು. ಅಖಂಡ ಕಪ್ಪು ಶಿಲೆಯನ್ನು ಕಟೆಯುವ ಕಲ್ಲುಕುಟಿಗರು ದೊಡ್ಡ ದೊಡ್ಡ ಬಂಡೆಗಳನ್ನು ಕಟೆದರು. ಕುಶಲರಾದ ಗೌಂಡಿಗಳು ನೀರು ಹತ್ತುವವರೆಗೂ ಅಗೆದು ಥರದಲ್ಲಿ ಸುಣ್ಣದ ಗಚ್ಚನ್ನು ಹಾಕಿ ಅದರಮೇಲೆ ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನು ಹಾಕಿ ಥರವನ್ನು ಗಟ್ಟಿಯಾಗಿ ಹಾಕಿ ತೆಗೆದರು. ಕೆಲವೇ ದಿನಗಳಲ್ಲಿ ಸಂಪೂರ್ಣ ಸುರಕ್ಷಿತೆಯ, ಮಜಬೂತಾದ ಕೋಟೆಯನ್ನು ಕಟ್ಟಿದರು. ಎರಡೂ ದಂಡೆಗಳ ಅಂತರ ಇಪ್ಪತ್ತು ಗಜ, ಹೊರ ದಂಡೆಯ ಎತ್ತರ ಇಪ್ಪತ್ತು ಗಜ, ಒಳದಂಡೆಯ ಎತ್ತರ ಮೂವತ್ತು ಗಜ ಹಾಗೂ ಎರಡೂ ದಂಡೆಗಳ ಮತ್ತು ಖಂದಕಗಳ ಮಧ್ಯಭಾಗದಲ್ಲಿ ಹೂದೋಟವನ್ನು ಮಾಡಲಾಗಿದೆ. ಆ ತೋಟದ ಅಗಲ ಅರವತ್ತು ಗಜ ಹಾಗು ಉದ್ದ ಕಿಲ್ಲೆಯ ಸುತ್ತಳತೆಯ ಎಂಟು ಮೈಲಿನದಾಗಿತ್ತು.

ತೋಟದಲ್ಲಿ ಕಟ್ಟಡವನ್ನು ಕಟ್ಟಿ ಅದರಲ್ಲಿ ಬಾದಶಹನು ಕೂಡಲು ಕಿಂಡಿಯ ಆಸನವನ್ನೂ ಮಾಡಲಾಗಿತ್ತು. ಒಂದು ಮಸೀದಿಯನ್ನು ಕಟ್ಟಲಾಗಿತ್ತು. ಆ ಮಸೀದಿಗೆ ೧೦೩೩ (ಒಂದು ಸಾವಿರದ ಮೂವತ್ಮೂರು) ಕಮಾನುಗಳಿದ್ದುವು. ಅವುಗಳ ಲೆಕ್ಕವೇ ಹತ್ತುತ್ತಿರಲಿಲ್ಲ. ಆದ್ದರಿಂದ ಆ ಮಸೀದಿಗೆ 'ಮಸನದೇಗಾಲಬ' ಎಂಬ ಹೆಸರನ್ನು ಇಟ್ಟಿದ್ದಾರೆ. ಅಲಿ ಆದಿಲಶಹನ ಕಾಲದಲ್ಲಿ ಆ ತೋಟವು ಇನ್ನೂ ಶೋಭಾಯಮಾನವಾಗಿತ್ತು. ನೋಡುವವರಿಗೆ ಆನಂದದಾಯಕವೂ ತೋಟದಲ್ಲಿ ಬಂದವರಿಗೆ ಯಶಪ್ರದವೂ ಆಗಿತ್ತು. ಅನೇಕ ಪ್ರಕಾರದ ವೃಕ್ಷಗಳು, ನಿಂಬೆ, ನಾರಂಗ, ಖಜ್ಜೂರ, ದ್ರಾಕ್ಷಿ, ದಾಳಿಂಬೆ, ಅಂಜೂರ, ಸೇಬು, ಟೆಂಗು ಇತ್ಯಾದಿ ವೃಕ್ಷಗಳು ಶೀತಗಾಳಿಯನ್ನು ನೀಡುತ್ತ ಅತಿ ಠವಠವಿಸುತ್ತ ಫಲಭರಿತವಾಗಿದ್ದುವು. ಅದರಂತೆ ನಾನಾ ಪ್ರಕಾರದ ಬಣ್ಣ-ಬಣ್ಣಗಳ ಪ್ರತಿಯೊಂದು ಜಾತಿಯ ಹೂವುಗಳು ಅರಳಿ, ನಿರಂತರ ತೋಟಕ್ಕೆ ಶೋಭೆಯನ್ನು ತಂದಿದ್ದುವು. ಕಂದಕದ ಹಾಗೂ ಕಾಲುವೆಗಳ ನೀರು ಬಹಳ ಸ್ವಚ್ಛ ಹಾಗು ನಿರ್ಮಲವಾಗಿದ್ದುವು. ನೋಡುವವರ ಮನಸ್ಸು ಹೂವುಗಳಂತೆ ಅರಳುತ್ತಿತ್ತು. ಕಣ್ಣಿಗೆ ಹಬ್ಬವಾಗುವಂತೆ ಆ ತೋಟವಿತ್ತು.

### ೪. ಆದಿಲಶಹನು ಆದೋನಿಯ ಕೋಟೆಯನ್ನು ಹಸ್ತಗತ ಮಾಡಿಕೊಳ್ಳಲು ಅಸದಖಾನನ್ನು ಕಳಿಸಿದ್ದು ಮತ್ತು ಯಶಸ್ವಿಯಾದದ್ದು.

ರಾಜಾ ಭೋಜ ತಿರುಮಲನು ಸತ್ತದ್ದು; ರಾಮರಾಜನು ಕೃತಘ್ನತೆಯಿಂದ ತನ್ನ ಧಣಿಯನ್ನು ವಧೆಮಾಡಿದ ವಿಷಯ ಇಬ್ರಾಹಿಮ ಆದಿಲಶಹನಿಗೆ ತಿಳಿಯಿತು. ತನ್ನ ಸಿಪಹಸಾಲಾರ ಅಸದಖಾನನೊಂದಿಗೆ ಬಹುದೊಡ್ಡ ಸೈನ್ಯವನ್ನು ಕೊಟ್ಟು ಉದೋನಿ (ಆದೋನಿ) ಕೋಟೆಯನ್ನು ಕೈವಶಮಾಡಿಕೊಳ್ಳಲು ಕಳಿಸಿದನು.

ಅಸದಖಾನನು ಕೋಟೆಯನ್ನು ಮುತ್ತಿ ದಾಳಿ ಮಾಡಲು ನಿರ್ಧರಿಸಿದನು. ಈ ಸುದ್ದಿಯನ್ನು ತಿಳಿದ ರಾಮರಾಜನು, ಅಸದಖಾನನನ್ನು ಎದುರಿಸಿ ಅವನನ್ನು ಹೊರದಬ್ಬಲು ತನ್ನ ಸಹೋದರ ವೆಂಕಟಾದ್ರಿಯನ್ನು ಕಳಿಸಿದನು. ಆತನೊಂದಿಗೆ ಉತ್ತಮ ಶೂರ ಸವಾರರನ್ನು ಅಗಣಿತ ಕಾಲ್ದಳವನ್ನು ಕೊಟ್ಟು ಕಳುಹಿದನು. ಆತನೂ ಆದೋನಿಯ ಸಮ್ಮುಖದಲ್ಲಿ ಬಂದು ನಿಂತನು. ಕೋಟೆಯ ಮೇಲೆ ದಾಳಿ ಮಾಡುತ್ತಿದ್ದ ಅಸದಖಾನನು ಅದನ್ನು ನಿಲ್ಲಿಸಿ ಸೈನ್ಯದೊಂದಿಗೆ ಬಂದ ರಾಮರಾಜನ ಸಹೋದರನೊಂದಿಗೆ ಯುದ್ಧ ಪ್ರಾರಂಭಿಸಿದನು. ದಾರಣವಾದ ಯುದ್ಧವಾಯಿತು. ಕೊನೆಯಲ್ಲಿ ಹಿಂದೂಗಳ ಸೈನ್ಯದ ದಾಳಿ ಪ್ರಬಲವಾಯಿತು. ಆಗ ಅಸದಖಾನನು ಯುದ್ಧಕ್ಕೆ ಬೆನ್ನು ಮಾಡಿ ತಾನೊಬ್ಬನೇ ಒಂದು ಕಡೆಗೆ ಹೋದನು. ಹಿಂದೂಗಳ ಸೈನ್ಯ ಧೈರ್ಯದಿಂದ ಎಷ್ಟೋ ಕೋಸುಗಳವರೆಗೆ ಆತನ ಬೆನ್ನು ಹತ್ತಿತು. ರಾತ್ರಿ ಅಸದಖಾನನು ಉಳಿದುಕೊಳ್ಳಲು ಒಂದು ಕಡೆಗೆ ನಿಂತನು. ವೆಂಕಟಾದ್ರಿಯು ಅವನಿಂದ ಐದು ಕೋಸುಗಳ ಅಂತರದಲ್ಲಿ ನಿಂತನು. ಹಿಂದುಗಳ ಸೈನ್ಯದಲ್ಲಿಯ ಜನರು ಗರ್ವದಿಂದ, ಅಭಿಮಾನದಿಂದ ತಾವು ಯಶಸ್ವಿಯಾಗಿದ್ದರಿಂದ ನಿರ್ಭಯರಾಗಿ ವಿಶ್ರಾಂತಿ ಪಡೆಯುತ್ತಿದ್ದರು. ಸಿಂಹದ ಹಾಗೆ ಪರಾಕ್ರಮದಿಂದ ಯುದ್ಧ ಮಾಡುವ ಅಸದಖಾನ ಲ್ಯಾರಿಯು ಅರುಣೋದಯದ ಕಾಲದಲ್ಲಿ, ನಾಲ್ಕುಸಾವಿರ ನಿಸ್ಸೀಮ ಚಿಲಖತ್‌ದಾರ ಸವಾರರೊಂದಿಗೆ ಒಮ್ಮೆಲೆ ವೆಂಕಟಾದ್ರಿಯ ಸೈನ್ಯದ ಮೇಲೆ ದಾಳಿ ಮಾಡಿದರು. ವೆಂಕಟಾದ್ರಿಯು ಘನಘೋರವಾಗಿ ಎದುರಿಸಿದನಾದರೂ ಅನಿರೀಕ್ಷಿತ ದಾಳಿಯಿಂದ ತಲ್ಲಣಗೊಂಡು ಪರಾಜಿತನಾದನು. ಜೀವದಾಸೆಯಿಂದ ತನ್ನ ಸೈನ್ಯವನ್ನು ಬಿಟ್ಟು ಓಡಿಹೋದನು. ಅನಂತರ ವೆಂಕಟಾದ್ರಿಯೊಂದಿಗಿದ್ದ ಸ್ತ್ರೀಯರ ಸಹಿತವಾಗಿ, ಸಂಪೂರ್ಣ ಸಾಮಾನು ಸರಂಜಾಮುಗಳು ಅನೇಕ ಕುದುರೆಗಳು, ಆನೆಗಳು, ಅಗಣಿತ ಸಂಪತ್ತು ಅಸದಖಾನನ ಕೈವಶವಾಯಿತು. ಲೂಟಿ ಮಾಡಿದ ಸಂಪತ್ತಿನೊಂದಿಗೆ ಅಸದಖಾನನು ವಿಜಯಿಯಾಗಿ ರಾಜಧಾನಿಗೆ ಬಂದನು.

ಆದಿಲಶಾಹನು ಆತನಿಗೆ ಎಂಭತ್ತು ಆನೆಗಳನ್ನು ಜೊತೆಗೆ ಸುಲಿಗೆ ಮಾಡಿ ತಂದ ಸಂಪತ್ತಿನಲ್ಲಿ ಉತ್ತಮೋತ್ತಮವಾದ ಪದಾರ್ಥಗಳನ್ನು ಕೊಟ್ಟು. ಬೆನ್ನು ಚಪ್ಪರಿಸಿದನು. ಆತನ ಅಧಿಕಾರವನ್ನು ಇನ್ನಷ್ಟು ಅಧಿಕಗೊಳಿಸಿದನು. ಹಲವಾರು ಬಾರಿ ಆತನು ತೋರಿದ ಸ್ವಾಮಿನಿಷ್ಠೆಯನ್ನು ಗಮನಿಸಿದ ಆದಿಲಶಾಹನು ಅಸದಖಾನನೊಂದಿಗೆ ಶರೀರಸಂಬಂಧವನ್ನು ಬೆಳೆಸಿಕೊಳ್ಳಲು ಇಚ್ಛಿಸಿದನು. ಸೇವಕತನದ ಸಂಬಂಧವನ್ನು ಮಾವನ ಸಂಬಂಧವನ್ನಾಗಿ ಮಾರ್ಪಡಿಸಿ ಆತನ ಮಗಳೊಂದಿಗೆ ಮದುವೆಯಾದನು. ಒಂದು ದಿನ ತುಂಬಿದ ಸಭೆಯಲ್ಲಿ ಇಬ್ರಾಹಿಮನು ಮಾತನಾಡುತ್ತ "ನಮ್ಮ ತಂದೆ, ಅಜ್ಜನ ಕಾಲದಿಂದಲೂ ಅಸದಖಾನರು ಈ ರಾಜ್ಯಕ್ಕೆ ಮಾಡಿದ ಸೇವೆಮಾಡಿದ್ದನ್ನು ನೋಡಿದರೆ, ಅವರಷ್ಟು ಸ್ವಾಮಿನಿಷ್ಠೆಯ ಕೆಲಸ ಬೇರೆ ಯಾವ ಸೇವಕರಿಂದಲೂ ಆಗಿರಲಾರದು. ಆದ್ದರಿಂದ ನಾವು ಹೀಗೆ ನಿರ್ಧರಿಸಿದ್ದೇವೆ. ಅವರ ಸೇವೆಯ ಪ್ರತಿಫಲವಾಗಿ ಈ ರಾಜ್ಯದ ಒಡೆಯನಾದ ನಾನು ಅವರ ಮಗಳ ಉದರದಲ್ಲಿ ನನಗೆ ಹುಟ್ಟಿದ ಮಗನೇ ನನ್ನ ಅನಂತರ ಈ ರಾಜ್ಯದ ಉತ್ತರಾಧಿಕಾರಿಯಾಗುತ್ತಾನೆ" ಎಂದು ಸಾರಿದನು.

***೫. ಆದಿಲಶಾಹನ ಜೊತೆಗೆ ಐನುಲ್‌ಮುಲ್ಕನ ವಿರೋಧ ಆದರ ಪರಿಣಾಮ ಅವನಿಗೆ ಕೆಟ್ಟದಾಗಿದ್ದುದು :***

ಆದಿಲಶಾಹಿಯ ಹಳೆಯ ತಲೆಮಾರಿನ ಅಮೀರರಲ್ಲಿ ಐನುಲ್‌ಮುಲ್ಕ ಕನಾನಿ ಎಂಬುವನೊಬ್ಬನಿದ್ದನು. ಆತನು ಶೂರತ್ವದಲ್ಲಿ, ಗಾಂಭೀರ್ಯದಲ್ಲಿ ಅನುಪಮನಾಗಿದ್ದನು, ಆತ ಸಮುದ್ರದ

ದಂಡೆಯ ಪ್ರದೇಶದ ಒಂದು ಹಳ್ಳಿಯಲ್ಲಿ ಇರುತ್ತಿದ್ದನು. ಆ ದಿನಗಳಲ್ಲಿ ಆತನು ಕಲ್ಹೇರ ಕೋಟೆಯ ತಪ್ಪಲಿನಲ್ಲಿ ಇರಲು ಒಂದು ಮನೆಯನ್ನು ಕಟ್ಟಿಸುತ್ತಿದ್ದನು. ಬರ-ಬರುತ್ತ ತನ್ನ ಶೂರತ್ವದ ಗರ್ವದಿಂದ ಮತ್ತು ಮೂರ್ಖ ಮಿತ್ರರ ಸಂಗತಿಯಿಂದ ರಾಜ್ಯದೊಂದಿಗೆ ವೈರತ್ವವನ್ನು ಸಾಧಿಸತೊಡಗಿದನು. ಸಮುದ್ರದ ಕರಾವಳಿ ಪ್ರದೇಶದ ತನ್ನ ಸ್ಥಳದಲ್ಲಿಯ ಸಂಪದ್ಭರಿತ ಖಣಿಗಳನ್ನು, ದೊಡ್ಡ ದೊಡ್ಡ ಪರ್ವತಗಳನ್ನು ವಿಶಾಲವಾದ ಆ ಸ್ಥಳವನ್ನು ಸಂಪೂರ್ಣವಾಗಿ ತನ್ನ ಸ್ವಾಮಿತ್ವದಲ್ಲಿ ಇಟ್ಟುಕೊಳ್ಳಬೇಕೆಂದು ಸಂಕಲ್ಪ ಮಾಡಿದನು. ಅವನ ಈ ಸಂಕಲ್ಪದ ನಡವಳಿಕೆ ಇಬ್ರಾಹಿಮನ ದೃಷ್ಟಿಗೆ ಬಂದಾಗ, ಅವನ ಪಾರುಪತ್ಯವನ್ನು ಮಾಡುವುದು ಯೋಗ್ಯವೆನಿಸಿತು. ತಾನೆ ಸ್ವತಃ ಆತನ ಮೇಲೆ ಏರಿ ಹೋದನು. ಆತನು ಕೂಡ ತನ್ನ ಶೂರತ್ವದ ಮೇಲೆ ಮತ್ತು ತನ್ನ ಸೈನ್ಯದ ಬಲದಮೇಲೆ ವಿಶ್ವಾಸವನ್ನಿಟ್ಟು ಯುದ್ಧಕ್ಕೆ ಸಿದ್ಧನಾದನು. ದಾರುಣವಾದ ಯುದ್ಧ ಸಂಭವಿಸಿತು. ಧೈರ್ಯ-ಪರಾಕ್ರಮಗಳಲ್ಲಿ ಅಂತರವಿರಲಿಲ್ಲವಾದರೂ ಅನ್ಯಾಯದ ದೀಪ ತೇಜೋಹೀನವಾಗಿರುತ್ತದೆ. ಅರ್ಥಾತ್ ಅನ್ಯಾಯದಿಂದ ನಡೆಯುವವನಿಗೆ ಎಂದಿಗೂ ಕಲ್ಯಾಣವಾಗುವುದಿಲ್ಲ. ಕೃತಘ್ನತೆಯ ವೃಕ್ಷಕ್ಕೆ ಎಂದಿಗೂ ನಳನಳಿಕೆ ಹಾಗು ಬೆಳವಣಿಗೆ ಇರುವುದಿಲ್ಲ. ಬಹಳಷ್ಟು ಜಗ್ಗಾಟ, ಹೊಡೆದಾಟವಾದ ಅನಂತರ ಐನುಲ್‌ಮುಲ್ಕನಿಗೆ ಸೋಲಾಯಿತು. ಆತ ಯುದ್ಧದಿಂದ ಓಡಿಹೋದನು, ಮತ್ತೊಬ್ಬರಿಂದ ಸಹಾಯವೂ ಬರಲಿಲ್ಲ. ಆದ್ದರಿಂದ ನಿಜಾಮಶಾಹನ ನಗರಕ್ಕೆ ಹೊರಟು ಹೋದನು. ಅಲ್ಲಿ ನಿಜಾಮಶಾಹನ ಭೆಟ್ಟಿಗೆ ಹೋದನು. ನಿಜಾಮಶಾಹನಿಗು ಐನುಲ್‌ಮುಲ್ಕನ ಮೇಲೆ ಎರಡು ಕಾರಣಗಳಿಂದ ಅಸಹನೆಯಿತ್ತು. ಮೊದಲ ಕಾರಣವೆಂದರೆ, ಸರಕಾರೀ ಕೆಲಸದ ಸಮಯದಲ್ಲಿ ಬಾದಶಹನ ಜೊತೆಗೆ ಜಗಳಾಡುತ್ತಿದ್ದನು ಹಾಗೂ ನಿರಂತರ ದಂಗೆಯಲ್ಲಿ ತೊಡಗುತ್ತಿದ್ದನು. ಇನ್ನೊಂದು ಕಾರಣವೆಂದರೆ ತನ್ನ ಯಜಮಾನನ ವಿರುದ್ಧ ಸಖ್ಯ ಬೆಳೆಸಲು ಬಂದಿದ್ದನು. ಆದ್ದರಿಂದ ಆ ಸಮಯದಲ್ಲಿ ನಿಜಾಮಶಾಹನು ಅವನನ್ನು ಕೊಲ್ಲಲು ಆದೇಶಿಸಿದನು. "ತನ್ನ ಧಣಿಯ ವಿರುದ್ಧ ಕೃತಘ್ನತೆಯನ್ನು ತೋರಿದರೆ, ಆಕಾಶವಿದ್ದರೂ ಕೂಡ ಕೆಳಗೆ ಮುಖ ಹಾಕಲೇಬೇಕಾಗುತ್ತದೆ", ಎಂಬ ವಾಕ್ಯ ಸುಳ್ಳಲ್ಲ.

೬. ***ಆಸ್ಥಾನದ ಜನರು ಅಸದಖಾನನ ವಿರುದ್ಧ ಎದ್ದುನಿಲ್ಲುವುದು. ಅಸದಖಾನನು ಇಲ್ಲದಿದ್ದಾಗ ಆತನ ಬೆನ್ನು ಹಿಂದೆ ಆತನ ಘಾತುಕ ಕತೆಗಳನ್ನು ಹೇಳಿ ಇಬ್ರಾಹಿಮನ ಮನಸ್ಸನ್ನು ಕೆಡಿಸುವುದು, ಇಮಾದುಲ್ಮುಲ್ಕ ಬಾದಶಹನ ಮಧ್ಯಸ್ಥಿಕೆಯಿಂದ ಉಭಯತರ ಸಖ್ಯ :***

ಅಸದಖಾನನ ಯೋಗ್ಯತೆ ಹಾಗೂ ಪದವಿಗಳು ಉನ್ನತವಾಗುತ್ತಿದ್ದಂತೆ, ಅಸದಖಾನನ ಮೇಲೆ ಇಬ್ರಾಹಿಮ ಆದಿಲಶಹನ ಕೃಪೆ ದಿನದಿಂದ ದಿನಕ್ಕೆ ಅಧಿಕವಾದಂತೆ, ಆಸ್ಥಾನದ ಜನರಲ್ಲಿ ಅವನ ಕುರಿತು ವಿರೋಧ ಉಂಟಾಯಿತು. ಆತನ ವಿರುದ್ಧ ಇಬ್ರಾಹಿಮನಿಗೆ ಹೇಳಲು ಉದ್ಯುಕ್ತರಾದರು. 'ಅಸದಖಾನನು ನಿಜಾಮಶಾಹನೊಂದಿಗೆ ಸಖ್ಯ ಬೆಳೆಸಿ ಗೌಪ್ಯವಾಗಿ ಆತ ಹೇಳಿದಂತೆ ವರ್ತಿಸುತ್ತಿದ್ದಾನೆ. ಬೆಳಗಾವಿಯ ಕೋಟೆಯನ್ನು ಆತನಿಗೆ ಕೊಟ್ಟು ನಿಜಾಮಶಾಹನ ಸೇವೆಯಲ್ಲಿರಬೇಕೆಂದೂ ಇಚ್ಛಿಸುತ್ತಿದ್ದಾನೆ' ಎಂದೆಲ್ಲ ಹೇಳಿ. ಆದಿಲಶಹನ ಮನಸ್ಸನ್ನು ಕೆಡಿಸಿದರು. ಅವರು ಹೇಳಿದ್ದು ಸತ್ಯವೆಂದೇ ಭಾವಿಸಿ, ಈ ವಿಷಯದಲ್ಲಿ ವಿಚಾರಣೆಮಾಡದೆ, ಸತ್ಯಾಸತ್ಯತೆಯನ್ನು ಗುರುತಿಸದೆ, ಆದಿಲಶಹನು ಸಿಪಹಸಾಲರ ಅಸದಖಾನನ ಬಗ್ಗೆ ಕೋಪಗೊಂಡನು. ಆತನನ್ನು ಬಂಧಿಸಬೇಕೆಂದು ಯೋಚಿಸಿದನು. ಅಸದಖಾನನನಿಗೂ ಈ ವಿಷಯದಲ್ಲಿ ತುಸು ಸುದ್ದಿ ತಿಳಿಯಿತು. ಆಗ ಚಿಂತಾಗ್ರಸ್ತನಾಗಿ ತನ್ನ ಜಾಗೆಯಲ್ಲಿ ಸ್ಥಬ್ದನಾಗಿ ಕುಳಿತನು. ಬಾದಶಹನು ಕೆರಳಿದ ಸುದ್ದಿ ಎಲ್ಲರಿಗೂ ಗೊತ್ತಾಯಿತು.

ನಿಜಾಮಶಾಹನಾದರೋ ಪೂರ್ಣ ಪ್ರಮಾಣದ ವೈರಿಯೇ ಆಗಿದ್ದನು. ಅವಕಾಶಕ್ಕಾಗಿ ಕಾಯುತ್ತಿದ್ದನು. ಆತನಿಗೆ ಈ ಸುದ್ದಿ ತಿಳಿಯುತ್ತಲೇ, ಸಂಧಿಯನ್ನು ಸಾಧಿಸಿ ಖಾಜಾ ಜಹಾನ ದಖನಿ ಹಾಗೂ ಅಲೀ ಬರೀದರನ್ನು ಕೂಡಿಕೊಂಡು ಇಬ್ರಾಹಿಮ ಆದಿಲಶಹನ ಪ್ರದೇಶದ ಮೇಲೆ ಏರಿಬಂದನು.[೧] ಮೊದಲು ಸೋಲಾಪುರದ ಮೇಲೆ ಬಂದು ಸೋಲಾಪುರ ವಶದಲ್ಲಿದ್ದ ಪ್ರದೇಶವನ್ನೆಲ್ಲ ಹಸ್ತಗತ ಮಾಡಿಕೊಂಡನು. ಹಾಗೆಯೇ ಲೂಟಿ ಮಾಡುತ್ತಾ-ಮಾಡುತ್ತ ಬೆಳಗಾವಿಯ ಸರಹದ್ದಿಗೆ ಬಂದು ಮುಟ್ಟಿದನು. ತನ್ನ ಯಜಮಾನನಾದ ಆದಿಲಶಹನಿಂದ ಅವಕೃಪೆಗೆ ಪಾತ್ರನಾದ ಅಸದಖಾನನೊಂದಿಗೆ ಈ ಯೋಗದಿಂದ ಸಖ್ಯವಾದರೂ ಆದೀತೆಂಬ ಎಣಿಕೆಯಿಂದ ಸೈನ್ಯವನ್ನು ತೆಗೆದುಕೊಂಡು ಬಂದಿದ್ದನು. ಅಸದಖಾನನು, ಬಾದಶಹನ ಅವಕೃಪೆಯಿಂದ ನಿರಾಶನಾಗಿ ಚಿಂತಾಮಗ್ನನಾಗಿ ವೇಳೆ ಕಳೆಯುತ್ತ ಕುಳಿತಿದ್ದನು. ಆತನು ಒಂದು ಯೋಜನೆಯನ್ನು ಹಾಕಿ ತನ್ನ ಆರು ಸಾವಿರ ನಿಸ್ಸೀಮ ಶಕ್ತಿಯ ಸೈನ್ಯವನ್ನು ನಿಜಾಮಶಾಹನೊಂದಿಗೆ ಸೇರಿಸಿದನು. ಅಸದಖಾನನ ಕೂಡುವಿಕೆಯಿಂದ ನಿಜಾಮಶಾಹನು ಅಧಿಕ ಬಲವಂತನಾಗಿ ಪ್ರಬಲನಾದನು. ಇನ್ನಷ್ಟು ದಬ್ಬಾಳಿಕೆ ಮಾಡುತ್ತ-ದಾರಿಯಲ್ಲಿ ಸುಲಿಗೆ ಮಾಡುತ್ತ-ಮಾಡುತ್ತ ವಿಜಾಪುರಕ್ಕೆಯೇ ಬಂದು ಬಿಟ್ಟನು. ಆಗ ಈ ಸೈನ್ಯ ಬಲದ ಮುಂದೆ ತನ್ನ ಸಾಮರ್ಥ್ಯ ಸಾಲದೆಂದು ತಿಳಿದು ಇಬ್ರಾಹಿಮ ಆದಿಲಶಹನು ವಿಜಾಪುರವನ್ನು ಬಿಟ್ಟು ಕಲಬುರ್ಗಿಗೆ ಹೋದನು. ಆಗ ನಿಜಾಮಶಾಹನು ನಿರ್ಭಯವಾಗಿ ವಿಜಾಪುರದ ಕೋಟೆಯನ್ನು ಸುತ್ತುವರಿದನು.

ಅಸದಖಾನನು ವಾಸ್ತವದಲ್ಲಿ ಪ್ರಾಮಾಣಿಕನಾಗಿದ್ದವನು ಅವನ ಮುಖಕ್ಕೆ ಕೃತಘ್ನತೆಯ ಕೆಸರು ಬಡಿದಿತ್ತು. ಈಗಲೂ ಕೂಡ ವಿಜಾಪುರದ ಕುರಿತು ಪ್ರಾಮಾಣಿಕನಾಗಿಯೇ ಇದ್ದನು. ತನ್ನ ಯಜಮಾನನ ಕ್ಷೇಮದ ಕುರಿತು ವಿಚಾರಿಸುತ್ತ ಒಬ್ಬ ಸಂಭಾವಿತ ಸದ್ಗೃಹಸ್ಥನನ್ನು ಕರೆದು ಇಮಾದುಲ್ಮುಲ್ಕನ ಹತ್ತಿರ ಕಳಿಸಿದನು. ಆತನಿಗೆ ವಿನಂತಿಸಿ ಕೊಂಡನು. ಅದರಲ್ಲಿ ಹೀಗೆ ಬರೆದಿದ್ದನು "ಅಯೋಗ್ಯ ಕೆಲಸಮಾಡಿ ಸಂಕಟವನ್ನು ಸೃಷ್ಟಿಸಿ, ಬೆನ್ನಹಿಂದೆ ನಿಂದೆ ಮಾಡಿದವರ ಯತ್ನದಿಂದ ಒಡೆಯನ ಕೃಪೆಯು ನನ್ನ ಮೇಲಿಲ್ಲ. ಅದು ಕೆಟ್ಟಿದೆ. ಅಪರಾಧ ಮಾಡಿರದಿದ್ದರೂ ಅಪರಾಧದ ಕಲೆಯು ನನ್ನ ಹಣೆಯಮೇಲೆ ಹತ್ತಿದೆ. ಇದರಿಂದಾಗಿ ಈ ಸಮಯದಲ್ಲಿ ಅವಕಾಶ ಕಾಯುತ್ತಿದ್ದ ವೈರಿ ಜನರು ಏರಿ ಬಂದು ಪ್ರದೇಶವನ್ನು ಹಾಳು ಮಾಡುತ್ತಿದ್ದಾರೆ. ತಾವು ಈ ಸಮಯದಲ್ಲಿ ಬಂದು ಆದಿಲಶಾಹನಿಗೆ ಸಹಾಯ ಮಾಡಬೇಕು. ಅವರ ಹಾಗೂ ನಮ್ಮ ಮಧ್ಯ ಮೊದಲಿನಂತೆ ಸಖ್ಯತ್ವವನ್ನು ಬೆಳೆಸಬೇಕು".

ಇಮಾದುಲ್ಮುಲ್ಕನು ವಿನಂತಿ ಪತ್ರವನ್ನು ಕಂಡ ತಕ್ಷಣ ತನ್ನ ಸೈನ್ಯದೊಂದಿಗೆ ಪಯಣ ಬೆಳೆಸಿದನು. ಇಮಾದುಲ್ಮುಲ್ಕನು ಸೇನೆ ಸಹಿತ ಕಲಬುರ್ಗಿಗೆ ಬಂದ ವರ್ತಮಾನ ತಿಳಿಯುತ್ತಲೇ ಅಸದಖಾನನು, ನಿಜಾಮಶಾಹನ ಸಂಗತಿಯನ್ನು ಬಿಟ್ಟು ತನ್ನ ಸೈನ್ಯದೊಂದಿಗೆ ಹೊರಟು ಇಮಾದುಲ್ಮುಲ್ಕನ ಕಡೆಗೆ ಬಂದು ಸೇರಿಕೊಂಡನು. ಇಮಾದುಲ್ಮುಲ್ಕನು ಸಾದ್ಯಂತ ಸಂಗತಿಯನ್ನು ಇಬ್ರಾಹಿಮ ಆದಿಲಶಹನಿಗೆ ತಿಳಿಸಿ, ಅಸದಖಾನನ ಪ್ರಾಮಾಣಿಕತೆ ಸ್ವಾಮಿನಿಷ್ಠೆಯ ಕುರಿತು ತಿಳಿಸಿ ಹೇಳಿದನು. ಆಗ ಆದಿಲಶಹನು ಅತ್ಯಂತ ಪ್ರೀತಿಯಿಂದ ಅಸದಖಾನನನ್ನು ಹತ್ತಿರ ಕರೆದು ಆಲಂಗಿಸಿದನು. ಬಾದಶಹನ ರೀತಿಯಲ್ಲಿ ಆತನ ಸನ್ಮಾನ ಮಾಡಿದನು. ಅಸದಖಾನನು ಬಂದಿದ್ದರಿಂದ ಇಬ್ರಾಹಿಮ ಆದಿಲಶಹನಿಗೆ ಎರಡುಪಟ್ಟು ಬಲ ಬಂದಂತಾಯಿತು. ಇಮಾದುಲ್ಮುಲ್ಕನನ್ನೂ ಜೊತೆಮಾಡಿಕೊಂಡು ನಿಜಾಮಶಾಹನನ್ನು ಎದುರಿಸಿ ಆತನ್ನು

---

೧. ಹಿಜರಿ ೯೪೯ (ಕ್ರಿ.ಶ ೧೫೪೨-೩) ಬ್ರಿಗ್ಸ ಫೆ III ಪುಟ. ೮೯-೯೦.

ಹೊರದಬ್ಬಿದರು. ಆತನ ರಾಜಧಾನಿ ಅಹ್ಮದನಗರದವರೆಗೂ ಬೆನ್ನಟ್ಟಿ ಹೋದಾಗ ನಿಜಾಮಶಾಹನು ಬೆದರಿ ದೌಲತಾಬಾದಕ್ಕೆ ಓಡಿ ಹೋದನು. ಆಗ ಇಬ್ರಾಹಿಮನು ಹಿಂತಿರುಗಿ ಬರುತ್ತ ದಾರಿಯಲ್ಲಿ ನಿಜಾಮಶಾಹನ ವಶವಾಗಿದ್ದ ಪ್ರದೇಶಗಳನ್ನೆಲ್ಲ ಹಸ್ತಗತಮಾಡಿಕೊಂಡು ತನ್ನ ರಾಜಧಾನಿಗೆ ಬಂದನು.

### ೭. *ನಿಜಾಮಶಾಹ, ರಾಮರಾಜ, ಕುತುಬಶಾಹ ಮತ್ತು ಬರೀದರು ಕೂಡಿಕೊಂಡು ಇಬ್ರಾಹಿಮ ಆದಿಲಶಹ ರಾಜ್ಯದಲ್ಲಿ ಪ್ರವೇಶಿಸುವುದು. ಅಸದಖಾನನಿಂದ ಸಂಕಟ ಮುಕ್ತಿ :*

ಸೊಲ್ಲಾಪುರದ ಪ್ರದೇಶವನ್ನು ಕಳೆದುಕೊಂಡು ಲಜ್ಜಿತನಾದ, ಮತ್ತು ಆ ಕಾರಣಗಳಿಂದ ಆಹಾರ-ನಿದ್ರೆಗಳನ್ನು ವರ್ಜಿಸಿದ ನಿಜಾಮಶಾಹನು ಹಲವು ದಿನಗಳ ಅನಂತರ, ನಾನಾ ಯತ್ನಗಳಿಂದ ರಾಮರಾಜನನ್ನು ಇಬ್ರಾಹಿಮ ಆದಿಲಶಾಹನಿಂದ ಮುಖ ತಿರುವಿಸುವಲ್ಲಿ ಸಫಲನಾದನು. ಜಮಶಿದ್ ಕುತುಬುಲ್‌ಮುಲ್ಕನನ್ನೂ ತನ್ನ ಹತ್ತಿರ ತೆಗೆದುಕೊಂಡನು. ಖ್ವಾಜಾ ಜಹಾನ ದಖಣಿ ಮತ್ತು ಅಲೀ ಬರೀದರನ್ನು ಕೂಡಿಕೊಂಡು ಇಬ್ರಾಹಿಮ ಆದಿಲಶಹನ ಪ್ರದೇಶಗಳ ಮೇಲೆ ಏರಿ ಬಂದನು. ಸೊಲ್ಲಾಪುರ ಕೋಟೆಯನ್ನು ಹಿಡಿದುಕೊಂಡು ಆ ಭಾಗದ ಪ್ರದೇಶಗಳನ್ನು ಕೈವಶಮಾಡಿಕೊಂಡನು. ಇಬ್ರಾಹಿಮ ಆದಿಲಶಹನ ಎಲ್ಲ ಪ್ರದೇಶಗಳಲ್ಲಿ ಲೂಟಾಲೂಟಿಯನ್ನು ಮಾಡುತ್ತ ಹಾಳು ಮಾಡುವಲ್ಲಿ, ತನ್ನ ವೈರತ್ವದ ಕೈಯನ್ನು ಮುಂದೆ ಮಾಡಿದನು.

ಆದಿಲಶಹನು ತನ್ನ ಸೈನ್ಯವನ್ನು ಸಿದ್ಧ ಮಾಡಿಕೊಂಡು ನಿಜಾಮಶಾಹನನ್ನು ಹೊರಗೆ ಹಾಕಲು ಆತನ ಮೇಲೆ ಏರಿ ಹೋದನು. ಪ್ರತಿ ಯುದ್ಧಗಳಲ್ಲೂ ನಿಜಾಮಶಹನ ಸೋಲಾಗುತ್ತಿತ್ತು. ಈ ಸಮಯದಲ್ಲಿ ಜಮಶಿದ ಕುತುಬಶಾಹನ ದೊಡ್ಡ ಸೈನ್ಯವನ್ನು ತೆಗೆದುಕೊಂಡು ವಿಜಾಪುರ ಸರಹದ್ದನ್ನು ಮುಟ್ಟಿ ಸುಲಿಗೆಯನ್ನು ಮಾಡಲು ಪ್ರಾರಂಭಿಸಿದನು. ರಾಮರಾಜನು ಆ ಕಡೆಯಿಂದ ತನ್ನ ಸಹೋದರ ವೆಂಕಟಾದ್ರಿಯೊಂದಿಗೆ ಅಗಣಿತ ಸವಾರರನ್ನು ಸಿಬ್ಬಂದಿಯನ್ನು ಕೊಟ್ಟು ರಾಯಚೂರು ಮುದಗಲ್ಲಗಳ ಕಡೆಗೆ ಕಳಿಸಿದನು.[೧] ಪ್ರತಿಯೊಂದು ದಿಕ್ಕಿನಿಂದಲೂ ಶತ್ರುಜನ ಸಮುದಾಯವು ದಂಗೆಯೆದ್ದಿದೆ ಮತ್ತು ನಾಲ್ಕು ಕಡೆಗಳಿಂದಲೂ ಶತ್ರುಗಳು ಎದ್ದು ಯುದ್ಧ ಮಾಡುತ್ತಿದ್ದಾರೆಂದು ತಿಳಿದು, ಜಾಣನಾದ ಸಿಪಹಸಾಲಾರ ಅಸದಖಾನನೊಂದಿಗೆ ಆಪ್ತಾಲೋಚನೆ ಮಾಡಿದನು. ಇಬ್ಬರೂ ಈ ವಿಷಯದಲ್ಲಿ ಉಪಾಯಗಳನ್ನು ಯೋಚಿಸಿದರು. ಅಸದಖಾನನು ಬಹಳಷ್ಟು ವಿಚಾರ ಮಾಡಿ ವಿನಂತಿಸಿಕೊಂಡನು. "ಈ ಸಂದರ್ಭದಲ್ಲಿ ನನ್ನ ಬುದ್ಧಿಗೆ ಹೀಗೆ ತೋಚುತ್ತಿದೆ ಮತ್ತು ಅದು ಸರಿ ಎಂದೂ ಕಾಣಿಸುತ್ತಿದೆ. ಏನೆಂದರೆ ಕೋಟೆಯನ್ನು (ಸೊಲ್ಲಾಪುರ) ನಿಜಾಮಶಹನ ವಶಕ್ಕೆ ಕೊಟ್ಟು ಬಿಡುವುದು. ಯಾಕೆಂದರೆ ಆತನು ಮೊದಲಿನಿಂದಲೂ ವೈರಿಯಾಗಿದ್ದಾನೆ, ಉಳಿದ ಶತ್ರುಗಳು ಆತನಿಂದಾಗಿ ಹುಟ್ಟಿಕೊಂಡಿದ್ದಾರೆ. ಆಗ ನಿಜಾಮಶಾಹನಿಗೆ ಕೋಟೆಯನ್ನು ಕೊಟ್ಟೆವಾದರೆ, ಎಲ್ಲರ ಹಲ್ಲುಗಳೂ ಬಿದ್ದಂತಾಗುತ್ತದೆ. ಶಾಶ್ವತ ವೈರಿಯು ತನ್ನ ಯುದ್ಧಸಂಕಲ್ಪವನ್ನು ಬಿಟ್ಟು ಸುಮ್ಮನಾಗುತ್ತಾನೆ. ಅನಂತರ ಉಳಿದವರ ವಿಷಯದಲ್ಲಿ ಸಾವಕಾಶವಾಗಿ ವಿಚಾರ ಮಾಡಬಹುದು". ಅಸದಖಾನನ ಈ ಸ್ಪಷ್ಟ ವಿಚಾರಗಳನ್ನು ಆದಿಲಶಹನು ಮಾನ್ಯಮಾಡಿ ನಿಜಾಮಶಹನಿಗೆ ಕೋಟೆಯನ್ನು ಕೊಟ್ಟು ಮಿತ್ರತ್ವವನ್ನು ಸಂಪಾದಿಸಿದನು.

---

೧. ಹಿಜರಿ ೯೫೫ (ಕ್ರಿ.ಶ. ೧೫೪೧-೪೨) ಬ್ರಿಗ್ಸ ಫೆ III ಪುಟ ೧೦೪-೫.

ಅನಂತರ ಒಬ್ಬ ಮೃದು ಭಾಷಣದ-ಸವಿಮಾತುಗಳ ರಾಯಭಾರಿಯೊಂದಿಗೆ, ಉತ್ತಮ ಪದಾರ್ಥಗಳನ್ನು ಅಧಿಕ ಬೆಲೆಯ ಜಡಜವಾಹಿರಗಳನ್ನು ಕೊಟ್ಟು, ಗೆಳೆತನ ಆಗುವಂತೆ ಪತ್ರವನ್ನು ಬರೆದು, ಆ ಪತ್ರದ ಮೂಲಕ ಸ್ನೇಹವನ್ನು ಯಾಚಿಸಿ, ವಿಜಯನಗರದ ರಾಮರಾಜನ ಕಡೆಗೆ ಕಳಿಸಿದನು. ಆ ಉತ್ತಮ ಪದಾರ್ಥಗಳನ್ನು ಜಡಜವಾಹಿರಗಳನ್ನು ಕಂಡು ರಾಮರಾಜನು ಸಂತೋಷಪಟ್ಟನು, ಮನದಲ್ಲಿಯ ವೈರಭಾವವನ್ನು ಬಿಟ್ಟನು ಮತ್ತು ತನ್ನ ಸೈನ್ಯ ಹಾಗೂ ಸಹೋದರನನ್ನು ಹಿಂದಕ್ಕೆ ಕರೆಯಿಸಿಕೊಂಡನು.

ಅನಂತರ ಸಿಂಹಸದೃಶ ಪರಾಕ್ರಮವನ್ನು ತೋರುವ ಅಸದಖಾನನನ್ನು ಕುತುಬಶಾಹನಿಗೆ ಬುದ್ಧಿ ಕಲಿಸಲು ನಿಯಮಿಸಿದನು. ಅಸದಖಾನನಿಗೆ ಬಾದಶಹನ ಆಜ್ಞೆ ದೊರೆಯುತ್ತಲೆ, ಹಸಿದ ಹುಲಿಯು ಬೇಟೆಯನ್ನು ಹಿಡಿಯಲು ಗುಹೆಯಿಂದ ಓಡಿ ಬರುವಂತೆ, ಪರಾಕ್ರಮನಾಗಿ ಶೂರ-ನಿಸ್ಸೀಮ ಧೈರ್ಯದ ಸೈನ್ಯದೊಂದಿಗೆ ಗಡಿ ಪ್ರದೇಶದಲ್ಲಿ ಬಂದು ಹಾಳು ಮಾಡುತ್ತಿದ್ದ ಕುತುಬಶಹನ ಮೇಲೆ ದಾಳಿ ಮಾಡಿದನು. ಒಂದೆರಡೇ ದಾಳಿಗಳಲ್ಲಿ ಆತನಿಗೆ ಭಾರೀ ಸೋಲಾಯಿತು. ಕುತುಬಶಾಹನು ಅಸಮರ್ಥನಾಗಿ ತೆಲಂಗ ದೇಶದ ಕಡೆಗೆ ಓಡಿ ಹೋದನು. ಅಸದಖಾನನು ಗೋವಳಕುಂಡದವರೆಗೆ ಅವನ ಬೆನ್ನು ಬಿಡದೆ ಹತ್ತಿರವೇ ಹೋದನು. ಕುತುಬಶಾಹನಿಗೆ ತನ್ನ ಸೈನ್ಯದ ಸಹಾಯದೊರೆಯಿತು. ಎದುರಿಸುವ ಧೈರ್ಯ ಬಂದು ಯುದ್ಧ ರಚನೆಯನ್ನು ಮಾಡಿ ಯುದ್ಧ ಪ್ರಾರಂಭಿಸಿದನು. ಶತ್ರುವಧೆ ಮಾಡುವಲ್ಲಿ ಪ್ರಸಿದ್ಧನಾದ ಅಸದಖಾನನು, ಆ ಯುದ್ಧದಲ್ಲಿ ತನ್ನ ಶೂರತ್ವದ ಪರಾಕಾಷ್ಠೆಯನ್ನೆ ಮೆರೆದನು. ಈ ಭೂಮಿಯ ಮೇಲೆ ಅಂಥ ಯುದ್ಧವೇ ಆಗಿರಲಿಲ್ಲ ಎಂಬ ಹಾಗೆ ಯುದ್ಧ ಮಾಡಿದನು. ಕೊನೆಯಲ್ಲಿ ತಂತಮ್ಮ ಸೈನ್ಯದೊಂದಿಗೆ. ಒಬ್ಬರೊಬ್ಬರಲ್ಲಿ ಪರಿಚಯವೇ ಇಲ್ಲದಹಾಗೆ ಪರಸ್ಪರ ಎದುರಾಗಿ ಒಬ್ಬರೊಬ್ಬರು ಕಾದಾಡಿದರು. ಕುತುಬಶಾಹನಿಗೆ ಅಸದಖಾನನ ತಲವಾರಿನಿಂದ ಮಸ್ತಕದ ಮೇಲೆ ದಾರುಣವಾದ ಗಾಯವಾಯಿತು. ಜೀವಂತ ಇರುವವರೆಗೂ ಅದನ್ನು ಕಂಡಾಗ ತಿನ್ನಲು-ಕುಡಿಯಲು ಕುತುಬಶಾಹನಿಗೆ ಮನಸ್ಸಾಗುತ್ತಿರಲಿಲ್ಲ. ಸಾರಾಂಶವೆಂದರೆ ಅಸದಖಾನನು ಅಲ್ಲಿಯೂ ಯಶಸ್ವಿಯಾಗಿ ವಿಜಯಿಯಾಗಿ ತನ್ನ ಯಜಮಾನನ ರಾಜಧಾನಿಯ ಕಡೆಗೆ ಬಂದನು.

***೮. ರಾಮರಾಜನ ಮಾತು ಕೇಳಿ ನಿಜಾಮಶಹನು ಆದಿಲಶಹನ ಮೇಲೆ ಸೈನ್ಯ ತೆಗೆದುಕೊಂಡು ಬರುವುದು ಮತ್ತು ನಿಜಾಮಶಹನು ಪರಾಜಿತನಾಗುವುದು :***

ಕೆಲವು ದಿವಸಗಳ ಅನಂತರ ಮತ್ತೆ ನಿಜಾಮಶಹನು ರಾಮರಾಜನ ಚಿತಾವಣೆಯಿಂದ ಭಾರೀ ಸೈನ್ಯವನ್ನು ತೆಗೆದುಕೊಂಡು ಆದಿಲಶಾಹಿಯ ಸರಹದ್ದನ್ನು ಪ್ರವೇಶಿಸಿ ಸುಲಿಗೆಯನ್ನು ಪ್ರಾರಂಭಿಸಿದನು. ಭೀಮಾ ನದಿಯ ನೀರನ್ನು ಕೆಡಿಸಿ ದಂಡೆಗೆ ಬಂದು ನಿಂತನು. ಇಬ್ರಾಹಿಮ ಆದಿಲಶಹನು ನಿಜಾಮಶಹನನ್ನು ಹೊರದಬ್ಬುವ ಸಂಕಲ್ಪದಿಂದ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೊರಟನು. ನಿಜಾಮಶಾಹನ ಸೈನ್ಯವು ನೀರನ್ನು ದಾಟಿ ಹೋಗುವ ದಾರಿಯನ್ನು ಹಿಡಿದುಕೊಂಡು, ಅಲ್ಲಿಯೇ ಉಳಿದು ಹೋಗುವ ದಾರಿಯನ್ನು ಅಡ್ಡಿ ಮಾಡಿದ್ದರು. ಆದಿಲಶಾಹನು ಬಹಳ ದಿನಗಳವರೆಗೆ ನದಿಯ ದಂಡೆಯಲ್ಲಿಯೇ ಉಳಿದನು. ದಾಟಿ ಹೋಗುವ ಯೋಗ ಅವನಿಗೆ ಬರಲಿಲ್ಲ. ಆಗ ಆದಿಲಶಹನು ಬೇಸತ್ತು ನದಿಯಲ್ಲಿ ಇಳಿದು ಈಜುತ್ತ ಹೋಗಿ ಇನ್ನೊಂದು ದಡವನ್ನು ಸೇರಿ ಯುದ್ಧಮಾಡಿದನು. ಎರಡು ಮೂರು ಯುದ್ಧಗಳು ಉಭಯತರಲ್ಲಿ ಸಮಾನವಾಗಿ ನಡೆದುವು. ನಾಲ್ಕನೆಯ ಯುದ್ಧ ಮಾತ್ರ ನಿಜಾಮಶಹನೊಂದಿಗಾದ ಈ ಮೊದಲಿನ ಎಲ್ಲ

ಯುದ್ಧಗಳು ಹುಡುಗರ ಆಟದಂತೆ ಕಾಣಿಸಿದುವು. ಹಾಗೆ ನಾಲ್ಕನೆಯ ಯುದ್ಧವು ದಾರುಣವಾಗಿತ್ತು. ಅಂದಿನ ದಿನದ ಯುದ್ಧ ಪ್ರಾತಃಕಾಲದ ಪ್ರಥಮ ಪ್ರಹರದಿಂದ ಅಸ್ತಮಾನದವರೆಗೂ ನಡೆಯಿತು. ಆಗ ಆದಿಲಶಹನ ಶೂರರು, ಶೂರತ್ವದ ಅಧಿಕಾರ ಹೇಗಿರಬೇಕೆಂಬುದನ್ನು ಸಿದ್ಧಿಸಿ ತೋರಿಸಿದನು. ಅಗಣಿತ ಸವಾರ ಸೈನಿಕರು ಉಭಯತರ ಸರದಾರರೊಂದಿಗೆ ಬಿಚ್ಚುಕತ್ತಿಯಿಂದ, ಬಿಲ್ಲು ಬಾಣಗಳಿಂದ, ಭಲ್ಲೆಗಳಿಂದ ಯುದ್ಧ ಮಾಡಿದರು. ಯುದ್ಧದಲ್ಲಿ ಆದಿಲಶಹನು ಮೂರು ಸಲ ಅತ್ಯಂತ ದಾರುಣವಾಗಿ ಹಲ್ಲೆ ಮಾಡಿದನು. ಬಹಳ ಯತ್ನ ಮತ್ತು ಸಂಹಾರದಿಂದಾಗಿ ಇಬ್ರಾಹಿಮ ಆದಿಲಶಹನು ವಿಜಯಿಯಾದನು. ನಿಜಾಮಶಾಹನ ಸೈನ್ಯವು ಸೋತು ಓಡಿ ಹೋಯಿತು. ಆದಿಲಶಾಹಿಯ ಸೈನ್ಯಕ್ಕೆ ಬಹಳಷ್ಟು ಸುಲಿಗೆ ಕೈಗೆ ಸಿಕ್ಕಿತು. ಛತ್ರಗಳು, ವಾದ್ಯಗಳು, ಧ್ವಜಗಳು, ಇತ್ಯಾದಿಗಳೊಂದಿಗೆ ೧೩೫ ಆನೆಗಳು, ದ್ರವ್ಯ ತುಂಬಿದ ಪಟ್ಟಿಗೆಗಳು. ೧೨೦ ತೋಫುಗಳು ಚಕ್ಕಡಿಗಳ ಸಹಿತವಾಗಿ ಆದಿಲಶಾಹನ ಹಸ್ತಗತವಾದುವು. ಇಬ್ರಾಹಿಮ ಆದಿಲಶಹನ ಕಾಲಕಿರ್ದಿಯಲ್ಲಿ ಇಂಥ ಸುದೈವ ವಿಜಯ ಎಂದೂ ಆಗಿರಲಿಲ್ಲ, ಯಶಸ್ವಿ ಹಾಗೂ ವಿಜಯಿಯಾಗಿ ತನ್ನ ರಾಜಧಾನಿ ವಿಜಾಪುರಕ್ಕೆ ಬಂದನು.

### *೯. ಇಬ್ರಾಹಿಮ ಆದಿಲಶಹನ ವ್ಯಕ್ತಿತ್ವದಲ್ಲಿ ಕಠೋರತನ ಹಾಗೂ ಜನರಮೇಲೆ ಅತ್ಯಾಚಾರ*

ಇಬ್ರಾಹಿಮ ಆದಿಲಶಹನ ವ್ಯಕ್ತಿತ್ವದಲ್ಲಿ ಮೊದಲಿನಿಂದಲೂ ಶೌರ್ಯ, ಧೈರ್ಯ, ಕ್ರೋಧಗಳು, ಮಿಳಿತವಾಗಿದ್ದುವು. ಅದರಿಂದಾಗಿ ಸಾಮರ್ಥ್ಯ, ಶೀಘ್ರತೆ, ವರ್ಚಸ್ಸು, ಪ್ರಭಾವಗಳು ಪ್ರಬಲವಾಗಿದ್ದುವು. ಈ ಕಾರಣಗಳಿಂದಾಗಿ ಯಾವಾಗಲೂ ಯುದ್ಧ ಪ್ರಸಂಗಗಳಲ್ಲಿ ಮತ್ತು ಘನಘೋರ ಸಂಗ್ರಾಮಗಳಲ್ಲಿ ನಿರ್ಭಯವಾಗಿ ತಾನೆ ಸ್ವತಃ ಎಲ್ಲರಿಗಿಂತ ಮುಂದೆ ಹೋಗುತ್ತಿದ್ದನು. ಶತ್ರುಗಳ ಸಮುದಾಯ ದೊಡ್ಡದಿದೆ ಎಂಬುದನ್ನೂ ಗಣಿಸದೆ ಸ್ವತಃ ಯುದ್ಧದಲ್ಲಿ ಸೇರಿ ಬಿಡುತ್ತಿದ್ದನು. ಒಬ್ಬನೇ ಮುಂದೆ ಹೋಗಿ ಯುದ್ಧ ಮಾಡುತ್ತಿದ್ದನು. ವಿಜಯಿಯಾಗುತ್ತಿದ್ದಂತೆ ಇಬ್ರಾಹಿಮ ಆದಿಲಶಹನ ಪ್ರಬಲತೆ ಮತ್ತು ಉಗ್ರ ಸ್ವಭಾವಗಳು ವೃದ್ಧಿಯಾದುವು. ಆತನಲ್ಲಿ ಕಠೋರತನ ಹಾಗು ನಿರ್ದಯತ್ವಗಳು ಬೆಳೆದುವು. ಆ ಕಠೋರತನದಲ್ಲಿ ವಿಚಾರದ ಮತ್ತು ಸಹನಶೀಲತೆಯ ಕಿಂಚಿತ್ ಪ್ರವೇಶವೂ ಆಗುತ್ತಿರಲಿಲ್ಲ. ಮನುಷ್ಯರ ವಿಷಯದಲ್ಲಿ ಆತನ ಅಂತಃಕರುಣವಾಗಲೀ. ಕೃಪೆಯಾಗಲೀ ಶಾಶ್ವತವಾಗಿ ಬತ್ತಿ ಹೋಗಿದ್ದುವು. ಆದಾಗ್ಯೂ ರೈತರ ಪಾಲನೆಯಲ್ಲಿ, ಸಿಪಾಯಿ ಜನರನ್ನು ಬೆಳೆಸುವಲ್ಲಿ, ರಾಜ್ಯವನ್ನು ಸಂರಕ್ಷಿಸುವಲ್ಲಿ ಶ್ರೇಷ್ಠ ರಾಜನ ಚಿಹ್ನೆಗಳು ಅದ್ವಿತೀಯ ಹಾಗು ಅಪ್ರತಿಮ ಆಗಿದ್ದುವು. ಆದರೆ ತನ್ನ ಸಣ್ಣತನದಿಂದಾಗಿ ಯಾರ ಅಪರಾಧವನ್ನೂ ಕ್ಷಮಿಸುತ್ತಿರಲಿಲ್ಲ. ಕ್ಷಮೆಯನ್ನಾಗಲೀ ಸ್ನೇಹವನ್ನಾಗಲೀ ಎಂದೂ ಒಪ್ಪುತ್ತಿರಲಿಲ್ಲ. ಬಂಧಿಸುವುದು ಹಾಗು ಜೀವ ತೆಗೆಯುವುದು ಇವುಗಳೇ ಆತನ ಆಜ್ಞೆಯ ವಿಷಯಗಳಾಗಿರುತ್ತಿದ್ದುವು. ಶಿಕ್ಷೆಯನ್ನು ಕೊಡುವ ಆಜ್ಞೆಯಲ್ಲಿ ಸಣ್ಣ ಮನುಷ್ಯರಿಗೂ ದೊಡ್ಡ-ಶ್ರೇಷ್ಠ ಜನರಿಗೂ ಒಂದೇ ಅಳತೆಯಿತ್ತು. ಆದ್ದರಿಂದ ಆಸ್ಥಾನದ ಕಾರಭಾರಿ ಜನರು ಮತ್ತು ರಾಜಧಾನಿಯಲ್ಲಿಯ ಕೆಲಸದ ಜನರು, ಇಬ್ರಾಹಿಮ ಆದಿಲಶಹನ ಅತಿ ಭಯದ ಧಕ್ಕೆಯಿಂದಾಗಿ ಓಡಿಹೋಗುವ ವಿಚಾರದಲ್ಲಿದ್ದರು.

ಇಬ್ರಾಹಿಮ ಆದಿಲಶಹನ ಅತ್ಯಾಚಾರದಿಂದ ಬೇಸತ್ತ ಜನ ಆತನನ್ನು ಸಿಂಹಾಸನದಿಂದ ಕಿತ್ತು ಹಾಕಿ, ಆತನ ಬಂಧು ಶಾಹಜಾದಾ ಅಬ್ದುಲ್ಲಾನನ್ನು ಸಿಂಹಾಸನದಮೇಲೆ ಕುಳ್ಳಿರಿಸಬೇಕೆಂದೂ ಯೋಚಿಸಿದ್ದರು. ಆ ವಿಚಾರವು ಇನ್ನೂ ಗಟ್ಟಿಯೂ ಆಗಿರಲಿಲ್ಲ; ಆ ಬಗ್ಗೆ ನಿರ್ಧಾರವೂ ಆಗಿರಲಿಲ್ಲ. ಆದರೆ ಸುದ್ದಿ ಇಬ್ರಾಹಿಮ ಆದಿಲಶಹನ ಕಿವಿಗೆ ಬಿತ್ತು. ಆಗ ಆತನ ಅವಿಚಾರದ ಕೈ ಮತ್ತು ಶಿಕ್ಷೆಯ ಬುದ್ಧಿ ಪ್ರಳಯ

ರೂಪ ತಾಳಿದವು. ಆತ ಶಿಕ್ಷಿಸುವಲ್ಲಿ ಉದ್ಯುಕ್ತನಾದನು. ದಿನನಿತ್ಯದ ಕಾರಭಾರಿ ಜನರು, ಅಮೀರ ಜನರಲ್ಲಿ ಯಾರ ಬಗ್ಗೆ ಸಂಶಯ ಬರುವುದೋ ಅವರಿಗೆಲ್ಲ ಶಿಕ್ಷೆ ಕೊಡಲಾಯಿತು. ತುಸುವೆ ದಿನಗಳಲ್ಲಿ ಹಿಂದು-ಮುಸಲ್ಮಾನ ಕಾರಭಾರಿಗಳಲ್ಲಿಯ ೧೧೦ ಜನರನ್ನು ಕೊಲ್ಲಲಾಯಿತು. ಇದರಿಂದಾಗಿ ನಗರದಲ್ಲಿ ದೊಡ್ಡ ಭಯದ ವಾತಾವರಣ ನಿರ್ಮಾಣವಾಯಿತು. ದೊಡ್ಡ ಧಕ್ಕೆಯಾಗಿ ಎಲ್ಲೆಡೆ ಓಡಿ ಹೋದರು. ಮನೆ ಮನೆಗಳಲ್ಲಿ ಭಯದ ವಾತಾವರಣ ಉಂಟಾಗಿ ಶಾಹಜಾದಾ ಅಬ್ದುಲ್ಲಾ ಕೂಡ ಗೋವೆಗೆ ಓಡಿ ಹೋದನು.[೧] ಆತನಿಗೆ ಇಂಗ್ರಜಗಳು (ಪೋರ್ತುಗೀಜರು) ಆಶ್ರಯವನ್ನು ಕೊಟ್ಟರು.

ಇದೇ ಸಮಯದಲ್ಲಿ ಯಾವ ಅಪರಾಧಗಳಿಲ್ಲದೆಯೂ ಸಿಪಹಸಾಲಾರ ಅಸದಖಾನನ ಬಗ್ಗೆಯೂ ದುರ್ಬುದ್ಧಿಯ ಸಂಶಯ ಪೀಡಿತನಾಗಿ ಅವನ ಮೇಲಿನ ಕೃಪೆ ಹಾರಿಹೋಯಿತು. ಅಸದಖಾನನು ಚಿಂತಿತನಾಗಿ ತನ್ನ ಮನೆಯಲ್ಲೆ ಕುಳಿತನು ಶಹರದಲ್ಲಿದ್ದ ಅಸದಖಾನನ ಬೆಂಬಲಿಗರನ್ನೆಲ್ಲ ಬಂಧಿಸಲು ಆಜ್ಞೆ ಹೊರಡಿಸಿದನು. ಹಲವು ದಿನಗಳ ಅನಂತರ ಪ್ರಾಮಾಣಿಕನಾದ ಮತ್ತು ರಾಜ್ಯದ ಕಲ್ಯಾಣವನ್ನು ಬಯಸುತ್ತಿದ್ದ ಅಸದಖಾನನು, ತನ್ನ ಸ್ವಾಮಿನಿಷ್ಠೆಯನ್ನು ತೋರಿಸಿ. ಇಬ್ರಾಹಿಮನ ಕಣ್ಣಲ್ಲಿಯ ಕಸವನ್ನು ತೆಗೆಯುವ ಸಂಕಲ್ಪ ಮಾಡಿದನು. ಒಂದು ವಿನಂತಿ ಪತ್ರವನ್ನು ಬರೆದು ಒಬ್ಬ ಒಳ್ಳೆಯ ಮನುಷ್ಯನೊಡನೆ ೯ ಕುದುರೆಗಳನ್ನು, ೯ ಆನೆಗಳನ್ನು ಜೊತೆಗೆ ಕೆಲವು ಉತ್ತಮ ಪದಾರ್ಥಗಳನ್ನು, ಆಭರಣಗಳನ್ನು ಕಾಣಿಕೆಯಾಗಿ ಕಳಿಸಿದನು. ಪತ್ರದಲ್ಲಿ ಹೀಗೆ ಬರೆದಿತ್ತು. ಹೇ ಸುಲೇಮಾನ ಪೈಗಂಬರ ಹಾಗೂ ಸಿಕಂದರ ಶಾಹನ ಸಮಾನರಾಗಿ ಸಿಂಹಾಸನಾಧೀಶ್ವರರು, ಫರೀದೂನ ಬಾದಶಹರ ಸಮಾನರಂತೆ ಐಶ್ವರ್ಯವಂತರು, ಏನಾಗಿದೆ? ಏನಾಗಿದೆ? ನನ್ನ ಕುರಿತು ಹೀಗೆ ಮುಖತಿರುವಿದಿರಾದರೂ ಹೇಗೆ? ನಾನೇನು ಮಾಡಿರುವೆ, ನನ್ನ ಕುರಿತು ನೀನು ಏನನ್ನು ಕೇಳಿರುವಿ, ಏನನ್ನು ನೋಡಿರುವಿ, ಅಪರಾಧ ಮಾಡಿದ್ದೇ ನಿಜವಾಗಿದ್ದರೆ ನನ್ನ ತಲೆ ಸಿದ್ಧವಾಗಿದೆ. ಶಸ್ತ್ರವನ್ನು ಹಿಡಿದು ವಧೆ ಮಾಡಿರಿ. ಮತ್ತು ಉತ್ತರ ಕ್ರಿಯೆಗಳನ್ನೂ ಮಾಡಿರಿ. ಇಲ್ಲದಿದ್ದಲ್ಲಿ ವಿನಾಕಾರಣ ನನ್ನ ಮಿತ್ರನಿಂದ ನನಗೆ ಚಿಂತೆ ಬೇಡ. ಆಸ್ಥಾನದ ಹಿರಿಯ ಜನರು ನನ್ನ ಮೇಲೆ ಬಿರುಗಾಳಿ ಬೀಸಿ ನನಗೆ ಅರಮನೆಯ ಬಾಗಿಲನ್ನು ಮುಚ್ಚಿದ್ದಾರೆ. ನನಗೇನೂ ತಿಳಿಯುತ್ತಿಲ್ಲ. ಯೂಸುಫನ ಕಡಾಯದ ಹಾಗೆ ನಾನು ನಿರಪರಾಧಿಯಾಗಿರುವೆ ಸರ್ವಕಾಲದಲ್ಲಿ- ಸರ್ವ ಅವಸ್ಥೆಯಲ್ಲೂ ಚಿಂತಿತನಾಗಿ ಕುಳಿತಿದ್ದೇನೆ" ಎಂದೆಲ್ಲ ಬರೆದು ಕೊನೆಗೆ ಈ ಎರಡು ಪಂಕ್ತಿಗಳನ್ನು ತನ್ನ ಮನೋಗತವಾಗಿ ಬರೆದನು. 'ಒಂದು ತಿಂಗಳಲ್ಲಿ ಕಪ್ಪ ಕಾಣಿಕೆಗಳನ್ನು ತೆಗೆದುಕೊಂಡು, ಸಂತೋಷದಿಂದ ಆಸ್ಥಾನಕ್ಕೆ ಬರುತ್ತೇನೆ, ನಾನು ಬರುವೆ ಮತ್ತು ತಮ್ಮ ಸೇವೆಗೆ ಕಟಿ ಬದ್ಧನಾಗುವೆ. ಬರೆದಂತೆ ತಮ್ಮ ಶಾಶ್ವತ ಸಿಂಹಾಸನದೆದುರೆ ತಲೆಯನ್ನಿಡುವೆ'.

ಅದನ್ನು ಕಂಡ ಆದಿಲಶಹನು ಮತ್ತೆ ಕೃಪೆದೋರಿ ಅಸದಖಾನನ ಬೆಂಬಲಿಗರನ್ನೆಲ್ಲ ಸೆರೆಮನೆಯಿಂದ ಮುಕ್ತರನ್ನಾಗಿಸಿ ಅವರಿಗೆಲ್ಲ ವಸ್ತ್ರಾಭರಣಗಳನ್ನಿತ್ತು ಬೆಳಗಾವಿಗೆ ಕಳಿಸಿದನು. ಈ ಸಮಯದಲ್ಲಿಯೇ ಅಸದಖಾನನ ಆರೋಗ್ಯ ಕೆಟ್ಟಿತು. ಆತನು ಬದುಕಿ ಉಳಿಯುವ ಲಕ್ಷಣಗಳು ಕಾಣದಾದುವು. ಬೇನೆ ಬಿದ್ದನು. ದಿನದಿಂದ ದಿನಕ್ಕೆ ಬೇನೆ ಅಧಿಕವಾಗುತ್ತ ಹೋಯಿತು. ಔಷದೋಪಚಾರಗಳ ಉಪಾಯ ನಡೆಯಲಿಲ್ಲ. ಅಂತ್ಯ ಸಮೀಪವಾಗುತ್ತಿದ್ದಂತೆ ಮತ್ತೆ ಒಂದು ವಿನಂತಿ ಪತ್ರವನ್ನು ಬರೆದು ಇಬ್ರಾಹಿಮ ಆದಿಲಶಹನಿಗೆ ಕಳಿಸಿದನು. ಆ ಪತ್ರದಲ್ಲಿ ದ್ವಿಪದಿಯನ್ನು ಬರೆಯಲಾಗಿತ್ತು.

---

೧. ಹಿಜರಿಸನ್ ೯೫೨ (ಕ್ರಿ.ಶ. ೧೫೪೫-೬) ಮುಥೋಬಖರ ಪು ೧೯೨

*"ಶೋಭಾಯಮಾನವಾದ 'ಸುರು' ವೃಕ್ಷದಂತೆ ಬಾ*
*ಪ್ರಾತಃಕಾಲದ ವಾಯುವಂತೆ ತೋಟದಲ್ಲಿ ಬಾ"*

ಆ ಪತ್ರದಿಂದ ಅಸದಖಾನನ ಸ್ಥಿತಿ ಚಿಂತಾಜನಕವಾಗಿದೆಯೆಂದು ತಿಳಿದು ಇಬ್ರಾಹಿಮ ಆದಿಲಶಹನು ಆತನ ಪೂರ್ವಾಪರ ಸೇವೆಯನ್ನು, ಸ್ವಾಮಿ ಕಾರ್ಯದಲ್ಲಿಯ ಪ್ರಾಣಾರ್ಪಣದ ಸಂದರ್ಭಗಳನ್ನು ನೆನೆದು, ಮನದಲ್ಲಿ ತುಂಬ ನೊಂದುಕೊಂಡು ಕಣ್ಣಲ್ಲಿ ಅಶ್ರುಗಳನ್ನು ತಂದನು. ಇಬ್ರಾಹಿಮ ಆದಿಲಶಹನ ಮನಸ್ಸು ಅಸದಖಾನನ ಕಡೆಗೆಯೇ ಇತ್ತು. ಪುರಾತನ ಸೇವಕ, ಆತನನ್ನು ಕಂಡು ಬರಬೇಕೆಂಬ ಬಯಕೆಯಾಯಿತು. ಹೊರಟನು. ಎರಡು ದಿನಗಳ ಯಾತ್ರೆಯನ್ನು ಒಂದು ದಿನದಲ್ಲಿ ಮಾಡುತ್ತ ಅತಿ ಶೀಘ್ರವಾಗಿ ಬೆಳಗಾವಿಯ ಹತ್ತಿರ ಬಂದು ಮುಟ್ಟಿದನು. ಆಗ ಅಸದಖಾನನು ತೀರಿಕೊಂಡ ಸುದ್ದಿ ತಿಳಿಯಿತು. ತನ್ನ ಮಾವ ಸತ್ತ ಸುದ್ದಿಯನ್ನು ಕೇಳಿದ ಇಬ್ರಾಹಿಮನು ಅದೇ ರಾತ್ರಿ ಕಾಲ್ನಡಿಗೆಯಿಂದ ಬೆಳಗಾವಿಗೆ ಬಂದು ಮುಟ್ಟಿದನು. ಆತನ ಮಕ್ಕಳು ಮರಿಗಳಿಗೆ ಜನರಿಗೆ ಸಾಂತ್ವನ ಹೇಳಿ, ಎಲ್ಲರಿಗೂ ವಿಧವಿಧವಾದ ಕಾಣಿಕೆಗಳನ್ನು ಕೊಟ್ಟನು. ಅಸದಖಾನನ ಹಿಂದೆ ಉಳಿದ ಎಲ್ಲ ವಸ್ತುಗಳಲ್ಲಿ ೩೨೦ ಆನೆಗಳು, ೪೦೦ ಕುದುರೆಗಳನ್ನು ಮಾತ್ರ ಸರಕಾರಕ್ಕೆ ತೆಗೆದುಕೊಂಡು ಉಳಿದೆಲ್ಲ ವಸ್ತುಗಳನ್ನು ಆತನ ಮಕ್ಕಳಿಗೆ ಕೊಟ್ಟು ತಿರುಗಿ ಬಂದನು.

ಅಸದಖಾನನಿಗೆ ನೂರಕ್ಕಿಂತ ಅಧಿಕ ವರುಷಗಳಾಗಿದ್ದುವು. ೪೦-೫೦ ವರುಷ ಉಭಯ ಬಾದಶಹರ ಸೇವೆಯಲ್ಲಿ ಕಳೆದಿದ್ದನು. ಅಸದಖಾನನು ಹಿಜರಿ ಸನ್ ೬೫೬ ಮೊಹರಮ್‌ದಲ್ಲಿ (ಕ್ರಿ.ಶ.೧೫೪೯ ಫೆಬ್ರವರಿ) ಮರಣ ಹೊಂದಿದನು. ಬೆಳಗಾವಿಯ ಕೋಟೆಯನ್ನು ಅಸದಖಾನನೇ ಕಟ್ಟಿಸಿದ್ದನು. ಆ ಕೋಟೆಯ ಹತ್ತಿರವೆ ಆತನ ಸಮಾಧಿಯನ್ನು ಮಾಡಲಾಗಿದೆ. ಆತನ ಸಮಾಧಿಗೆ ಸಣ್ಣ ದೊಡ್ಡವರೆಲ್ಲರೂ ನಡೆದುಕೊಳ್ಳುತ್ತಾರೆ. ಅಸದಖಾನನ ಪರಿವಾರದಲ್ಲಿ ಪ್ರತಿನಿತ್ಯ ೧೦೦ ಆಡುಗಳು, ೨೦೦ ಕೋಳಿಗಳನ್ನು ಅದಕ್ಕೆ ಸರಿಯಾಗಿ ಮಸಾಲೆ ಸಾಮಾನುಗಳು, ಅಕ್ಕಿ ತುಪ್ಪ ಗೋಧಿ ಇತ್ಯಾದಿಗಳು ನಿತ್ಯದ ಅಡುಗೆಗೆ ಸರಬರಾಜು ಆಗುತ್ತಿದ್ದವು. ಅದು ಅವನ ಸ್ವಂತದ ಪರಿವಾರದ ಅನ್ನದ ಖರ್ಚಾಗಿತ್ತು.

### *೧೦. ಇದನ್ನು ತಿಳಿದಿರಬೇಕು :*

ಚರಿತ್ರೆಯ ಗ್ರಂಥಗಳಲ್ಲಿ ಅಸದಖಾನನ ವಿಷಯದಲ್ಲಿ ಏನೆಲ್ಲ ಹೇಳಿದ್ದಾರೋ ಅದನ್ನೇ ಬರೆಯಲಾಗಿದೆ. ಅಸದಖಾನನು ಶ್ರೇಷ್ಠ ಅಮೀರ ಜನರಲ್ಲೊಬ್ಬನಾಗಿದ್ದನು. ಮಂತ್ರಿಗಳಲ್ಲಿ ಒಬ್ಬ ಉತ್ತಮ ಸಚಿವನಾಗಿದ್ದನು. ಉತ್ತಮ ಸ್ವಭಾವ, ಸುಲಕ್ಷಣನಾಗಿದ್ದನು. ಆತನ ಗುಣಗಳು ಸ್ತುತಿಸಲು ಯೋಗ್ಯವಾಗಿವೆ. ಆತನ ಕ್ರಿಯೆಗಳು ಸರ್ವರಿಗೂ ಮಾನ್ಯವಾಗುತ್ತಿದ್ದುವು. ಶೂರತ್ವ ಮತ್ತು ದಾನ ಈ ಎರಡು ಲಕ್ಷಣಗಳು ಮನುಷ್ಯನಲ್ಲಿ ಉತ್ತಮ. ವಿದ್ವತ್ತು ಕೂಡ ಉತ್ತಮ. ಈ ಎಲ್ಲ ಗುಣಗಳು ಅಸದಖಾನನಲ್ಲಿ ಅದ್ವಿತೀಯವಾಗಿದ್ದುವು. ವಿಚಾರಗಳಲ್ಲಿ ಯೋಜನೆಗಳಲ್ಲಿ ಆತ ನಿರುಪಮನಾಗಿದ್ದನು. ಸಂಕಟ ನಿವಾರಣೆಯಲ್ಲಿ ಅನುಪಮನು, ದೈವವಾನ, ಸುದೈವಿಗಳಲ್ಲೂ ಅದ್ವಿತೀಯ. ಇವುಗಳನ್ನೆಲ್ಲ ನೋಡಿದರೆ, ಅಲ್ಲಾ ಹಾಗೂ ಗ್ರಹಗಣಗಳು ಪ್ರತಿನಿತ್ಯವೂ ಆತನಕಡೆಗೆಯೇ ಸಹಾಯ ಮಾಡುತ್ತಿರಬೇಕು ಎಂದೆನಿಸುತ್ತದೆ. ಯಶಸ್ಸು ಹಾಗು ವಿಜಯಗಳು ಆತನ ಕಾಲದಲ್ಲಿ ಆತನ ಆಜ್ಞಾಧಾರಕವಾಗಿದ್ದಿರಬೇಕು. ಎಂದೂ ಆತನಿಗೆ ಸಂಕಟಗಳು ಬರುತ್ತಿರಲಿಲ್ಲ. ಯಾವ ಸಂಕಟದಲ್ಲಿ ಆತನು ಹೆಜ್ಜೆ ಇಡುತ್ತಿದ್ದನೋ, ಅಲ್ಲಿ ಸಂಕಟವು ಸಹಜವಾಗಿ ನಿವಾರಣೆಯಾಗುತ್ತಿತ್ತು. ಉತ್ತಮತನದ ವೃದ್ಧಿಯಿಂದ ಆತನ ನಿಜವಾದ ನಡತೆ ರೂಪುಗೊಂಡಿತ್ತು.

ಆದ್ದರಿಂದ ಮನೋಗತಾನುರೂಪ ಮನೋರಥಗಳು ಪೂರ್ಣಗೊಳ್ಳುತ್ತಿದ್ದುವು. ಆದರೆ ಈ ದಿನಗಳಲ್ಲಿ ಅಲ್ಲಿ ಆತನ ಸಮಾಧಿಯು ಒಬ್ಬ ಶ್ರೇಷ್ಠ ಸಂತನ ಸಮಾಧಿಯಂತೆ, ಗೋರಿಯು ಅಲ್ಲಾನು ಮಾನ್ಯ ಮಾಡಿದ ಒಬ್ಬ ಶ್ರೇಷ್ಠ ಮನುಷ್ಯನ ಗೋರಿಯಂತೆ; ಎಲ್ಲ ಸಣ್ಣ ದೊಡ್ಡವರೆಲ್ಲರೂ ಅದಕ್ಕೆ ನಡೆದುಕೊಳ್ಳುವುದು, ನೈವೇದ್ಯ ಅರ್ಪಿಸುವುದು ಮತ್ತು ಆತನ ಗೋರಿಯನ್ನು ಮಹಾನ್ ಸಂತನ ಗೋರಿಯಂತೆ ಮನ್ನಿಸುತ್ತಾರೆ. ಅಲ್ಲಿಯ ಪ್ರಸಾದವನ್ನು ತೆಗೆದುಕೊಳ್ಳುತ್ತಾರೆ. ಪವಾಡಗಳೂ ಘಟಿಸುತ್ತವೆ.

ಮುಜಾವರನೊಬ್ಬ ಹಗಲು ರಾತ್ರಿ ಅಲ್ಲಿ ಸೇವೆಯಲ್ಲಿ ಹಾಜರಿದ್ದು ನೈವೇದ್ಯ ಅರ್ಪಿಸುವುದು, ಲೋಬಾನ ಹಾಗು ಹೂವುಗಳನ್ನು ಸಮರ್ಪಿಸಿ ವ್ರತಗಳನ್ನಾಚರಿಸುವುದು, ಒಬ್ಬ ಮಹಾನ್ ಸಿದ್ಧಿಪುರುಷನ ಸ್ಥಾನದಂತೆ ನಡೆಸಲಾಗುತ್ತದೆ. ಇಡೀ ನಗರದ ಜನತೆ ಅಲ್ಲಿಯ ಪವಾಡವನ್ನು ಕಂಡು ಆಶ್ಚರ್ಯಪಡುತ್ತಾರೆ. ಹಿಂದು ಹಾಗೂ ಮುಸಲ್ಮಾನ ಜನರು ಪ್ರೀತಿಯಿಂದ, ವಿಶ್ವಾಸಪೂರ್ವಕವಾಗಿ ಮತ್ತು ಭರವಸೆಯಿಂದ ಅಲ್ಲಿಗೆ ಬಂದು ಹೋಗುತ್ತಾರೆ. ಇದರ ಕಾರಣಗಳು ಮಾತ್ರ ಗೊತ್ತಾಗುತ್ತಿಲ್ಲ. ಇಂಥ ವಿಷಯಗಳ ಅಭ್ಯಾಸವು, ಜ್ಞಾನಿಗಳ ಆಶ್ರಯದಲ್ಲಿ ಮತ್ತು ಜ್ಞಾನಮಾರ್ಗದಲ್ಲಿ ವೃದ್ಧ ಪುರುಷರ ಆಶ್ರಯದಲ್ಲಿ ಉಪದೇಶವನ್ನು ತೆಗೆದುಕೊಂಡ ಅನಂತರ ಮತ್ತು ಅವರು ಪ್ರತಿಪಾಲಿಸುವ ಮನಶಮದಮಾದಿಗಳು ಅಂದರೆ ಅಂತರ್, ಬಾಹಿರ ಇಂದ್ರಿಯಗಳ ನಿಗ್ರಹವನ್ನು ಮಾಡುವ ಲಕ್ಷಣಗಳ ಮಾರ್ಗವನ್ನು ತೋರಿಸುವುದರ ಮೇಲೆ ಅವಲಂಬಿಸಿದೆ. ಜ್ಞಾನಮಾರ್ಗದ ಮೂಲ, ಸಾಧನೆಯ ಮೇಲಿದೆ. ಈ ವಿಷಯಗಳನ್ನು ಗಮನಿಸಿದಾಗ ಅಸದಖಾನನು ಈ ಮಾರ್ಗದ ಅಭ್ಯಾಸವನ್ನು ಮಾಡಿದ್ದನೆಂಬ ಉಲ್ಲೇಖ ಎಲ್ಲಿಯೂ ಕಂಡು ಬರುವುದಿಲ್ಲ. ಇದಕ್ಕೆ ಕಾರಣ ಬಹುಶಃ ಅಲ್ಲಾನ ಕೃಪೆಗೆ ಕಾರಣಗಳ ಅವಶ್ಯಕತೆ ಇಲ್ಲ. ಎಂದರೆ ಅಲ್ಲಾನ ಕೃಪೆಯಾಗಲು ಇಂಥದೊಂದು ಕಾರಣ ಬೇಕಿಲ್ಲ ಎಂಬುದೇ ಆಗಿರಬೇಕು. ಅಲ್ಲಾನು ಇಚ್ಛಿಸಿದರೆ ಆತನಮೇಲೆ ಕೃಪೆ ಆಗುತ್ತದೆ. ಬಾದಶಹನ ಔದಾರ್ಯದ ಕಾರಣಗಳೂ ಉಪಯೋಗವಿಲ್ಲ. ಬಹುಶಃ ಹೀಗಿರಬೇಕು. ಸಾಧನೆಯನ್ನು ಮಾಡದೆ, ಸ್ವ-ಸಾಮರ್ಥ್ಯದಿಂದ ಸಾಧನೆಯ ವ್ಯತಿರಿಕ್ತದ ಕೆಲಸಗಳನ್ನು ಮಾಡುತ್ತಾರೆ. ಅರಬ್ಬೀ ಭಾಷೆಯ ಒಂದು ಪದ್ಯದ ಅರ್ಥ ಹೀಗಿದೆ.

*"ಇದು ಅಲ್ಲಾನ ಕೃಪೆ,*
*ಅಲ್ಲಾ ಇಂಥ ಕೃಪೆ ತೋರಲು ಸಮರ್ಥನಾಗಿದ್ದಾನೆ".*

ಅಸದಖಾನನಿಂದ ಯಾವ ಉತ್ತಮ ಕರ್ಮಗಳು ಘಟಿಸಿರಬೇಕು? ಆತನ ಆಯುಷ್ಯದಲ್ಲಿ ಯಾವ ಪಶ್ಚಾತ್ತಾಪದ ಘಟನೆಗಳು ಘಟಿಸಿರಬೇಕು ಎಂಬುದು ಅಲ್ಲಾನಿಗೆ ಗೊತ್ತಿದೆ. ಆ ನಿಮಿತ್ತವಾಗಿಯೇ ಅಸದಖಾನನ ಮೇಲೆ ಅಲ್ಲಾನ ಹಾಗೂ ಬಾದಶಹನ ಕೃಪೆಯಾಗಿರಬೇಕು. ಅಲ್ಲಾನ ಕೃಪೆಯಿಂದ ಮತ್ತು ಬಾದಶಹನ ಮೆಹರಬಾನಗಿಯಿಂದ ಫಲಗಳು ಕಂಡು ಬಂದುವು. ಮತ್ತು ಕಾಣುತ್ತಿವೆ. ಒಂದು ಪದ್ಯದ ಅರ್ಥವೆಂದರೆ "ಅಲ್ಲಾನ ತಿಲಮಾತ್ರ ಕೃಪೆಯು, ಸಹಸ್ರಾವಧಿ ಬಾದಶಹರಿಗಿಂತ ಅಧಿಕವಾಗಿವೆ. ಅಲ್ಲಾನ ತಿಲಮಾತ್ರ ಕೃಪೆಯು ಸಹಸ್ರಾವಧಿ ವರುಷಗಳ ಕಾಲ ತಪಶ್ಚರ್ಯ ಹಾಗೂ ಜಪತಪ ಮತ್ತು ನಮಾಜಗಳನ್ನು (ಪ್ರಾರ್ಥನೆ) ಮಾಡಿದ್ದುದಕ್ಕಿಂತಲೂ ಅಧಿಕವಾಗಿವೆ".

ಇರಲಿ, ತಾತ್ಪರ್ಯವೆಂದರೆ, ಇಬ್ರಾಹಿಮ ಆದಿಲಶಹನು ಕ್ರೂರ ಹಾಗೂ ದುರ್ಗುಣಗಳ ಬಾದಶಹನಾಗಿದ್ದನು. ಅತಿ ಚಿಕ್ಕ ಅಪರಾಧಕ್ಕೆ ಬಹು ದೊಡ್ಡ ಶಿಕ್ಷೆಯನ್ನು ವಿಧಿಸುತ್ತಿದ್ದನು. ಸಣ್ಣ ತಪ್ಪಾದರೂ

ದೊಡ್ಡ ಸೆರೆವಾಸ ದೊರಕುತ್ತಿತ್ತು. ಕ್ಷಮೆ ಹಾಗೂ ದಯೆಯನ್ನು ಎಂದೂ ತೋರಿಸುತ್ತಿರಲಿಲ್ಲ. ಆದರೆ ವಿದ್ವಾಂಸರ ಹಾಗು ಗುಣೀಜನರ ಗುಣಗಳನ್ನು ಅರಿಯುವಲ್ಲಿ ಅದ್ವಿತೀಯನಾಗಿದ್ದನು. ಪ್ರಜೆಗಳ ಪಾಲನೆಯಲ್ಲಿ ಸೈನಿಕರ ಪ್ರತಿಪಾಲನೆಯಲ್ಲಿ ನಿರುಪಮನಾಗಿದ್ದನು. ರಸಿಕನಾಗಿದ್ದನು, ಶೃಂಗಾರ ವಿಷಯದಲ್ಲಿ ಭೋಗಿಯಾಗಿದ್ದನು. ಯಾವಾಗಲೂ ಏಕಾಂತದಲ್ಲಿ ಅಂತಃಪುರದಲ್ಲಿ ತನ್ನ ಹಾಗೆ ಗೌರವರ್ಣದ, ಕಸ್ತೂರಿಯ ಹಾಗೆ ಸುವಾಸಿಕ ಕೇಶಗಳ ಸ್ತ್ರೀಯರೊಂದಿಗೆ ಸಂತೋಷದಿಂದ, ಆನಂದದಿಂದ ವೇಳೆಯನ್ನು ಕಳೆಯುತ್ತಿದ್ದನು. ಸಂತೋಷ ಪ್ರದ ಮಾತುಗಳನ್ನು ಕೇಳುತ್ತಿದ್ದನು. ಅವನಿಗೆ ಬಹಳ ಸಂತತಿಯಾಗಿತ್ತು. ಆ ಸಂತತಿಯಲ್ಲಿ ನಾಲ್ಕು ಗಂಡು ಮಕ್ಕಳಾದ ಇಸ್ಮಾಯಿಲ್, ಅಲಿ, ತಹಮಾಸ್ಪ, ಮತ್ತು ಅಹಮ್ಮದ ಎಂಬ ನಾಲ್ವರಿದ್ದರು. ಅವರೆಲ್ಲ ಆತನ ಆಜ್ಞೆಯಂತೆ ನಡೆಯುತ್ತ ಸೇವಾಸನ್ನಿಧಿಯಲ್ಲಿ ಇರುತ್ತಿದ್ದರು. ಇಬ್ರಾಹಿಮನಿಗೆ ಹಿರಿಯಮಗ ಇಸ್ಮಾಯಿಲನ ಮೇಲೆ ಲೋಭವಿತ್ತು. ಆತನನ್ನೆ ತನ್ನ ಅನಂತರದ ಸಿಂಹಾಸನದ ಉತ್ತರಾಧಿಕಾರಿ ಎಂದು ನಿರ್ಧರಿಸಿದ್ದನು. ಮಕ್ಕಳ ದೈವ ಪರೀಕ್ಷೆಯನ್ನು ತೆಗೆದುಕೊಳ್ಳುತ್ತಿದ್ದನು. ಅವರು ಹೇಗೆ ಕೆಲಸ ಮಾಡುತ್ತಾರೆ ಎಂದು ನೋಡುತ್ತಿದ್ದ. ಆದಕ್ಕಾಗಿ ತನ್ನ ರಾಜ್ಯದ ನಗರಗಳಲ್ಲಿ ಕೆಲಸ ಮಾಡಲು ಒಬ್ಬೊಬ್ಬರಿಗೆ ಒಂದೊಂದು ನಗರಗಳನ್ನು ಸೂಚಿಸಿದನು. ಎಲ್ಲರೂ ಸಾವಧಾನದಿಂದ, ಉತ್ತಮ ವಿಚಾರಗಳಿಂದ ಕೆಲಸ ಮಾಡಬೇಕು ಎಂಬುದಾಗಿಯೂ ಹೇಳಿದ್ದನು. ಆದರೂ ಇಸ್ಮಾಯಿಲನು ತನ್ನ ಕೆಲಸದಲ್ಲಿ ತೊಂದರೆಯನ್ನು ಅನುಭವಿಸುತ್ತಿದ್ದನು. ಆದರೆ ಅಲಿಯು, ತನಗೆ ಹೇಳಿದ ಕೆಲಸವನ್ನು ಅತಿ ಶೀಘ್ರವಾಗಿ ಮತ್ತು ಅಷ್ಟೇ ಚೆನ್ನಾಗಿ ಮಾಡಿ ಯಶಸ್ವಿಯಾಗುತ್ತಿದ್ದನು. ಅದು ಇಬ್ರಾಹಿಮ ಆದಿಲಶಹನಿಗೆ ಸರಿ ಕಾಣುತ್ತಿರಲಿಲ್ಲ. ಚಿಂತಾಗ್ರಸ್ತನಾಗುತ್ತಿದ್ದನು. ಕೊನೆಗೆ ಬೇಸತ್ತು ಅಲಿಯನ್ನು ಕರೆದು "ನನ್ನ ಅನಂತರ ನೀನೇ ಮಾಲಿಕನಾಗಿ ಸಿಂಹಾಸನದ ಮೇಲೆ ಕೂಡುತ್ತೀ" ಎಂದು ಹೇಳಿ ಆತನನ್ನು ಬಂಧಿಸಿ ಏಳುವರುಷದ ವಯದಲ್ಲಿ ಆತನನ್ನು ಮುಬಾರಕಬಾದದ ಕೋಟೆಯಲ್ಲಿ ಇಟ್ಟನು. ಆಕೋಟೆಗೆ ಮುರ್ತಜಾಬಾದ ಎಂಬ ಹೆಸರೂ ಇತ್ತು. ಆದೇ ಕೋಟೆಯು ಈಗ ಮಿರಜ ಎಂದು ಪ್ರಸಿದ್ಧವಾಗಿದೆ. ಅಲ್ಲಿ ಆತನನ್ನು ಒಂಭತ್ತು ವರುಷ ಬಂಧನದಲ್ಲಿ ಇಟ್ಟಿದ್ದನು.

### ೧೧. ಇಬ್ರಾಹಿಮ ಆದಿಲಶಹನ ಮರಣ :

ಇಬ್ರಾಹಿಮ ಆದಿಲಶಹನಿಗೆ ವೃದ್ಧಾಪ್ಯದಲ್ಲಿ ರೋಗವು ಪ್ರಬಲವಾಗಿತ್ತು. ಅತಿಜ್ವರ, ಭೋಂಡ, ಶ್ವಾಸ ಹಾಗೂ ಧಾತುಕ್ಷಯದ ರೋಗಗಳಿದ್ದುವು. ಪ್ರತಿ ತಿಂಗಳೂ ಹತ್ತಿರದ ಹಾಗೂ ಆಸುಪಾಸಿನಲ್ಲಿಯ ಅನೇಕ ವೈದ್ಯರು ಬಂದು ಉಪಚಾರಮಾಡಿದರು. ಆದರೆ ಯಾವ ಉಪಚಾರಗಳೂ ನಡೆಯದಾದುವು. ರೋಗ ವೃದ್ಧಿಯಾಗುತ್ತಲೇ ಹೋಯಿತು. ಬೇನೆ ಬಲಿಯಿತು. ವೈದ್ಯ ಜನರು ಉಪಚರಿಸುವಲ್ಲಿ ಭೇದ ಮಾಡುತ್ತಿದ್ದಾರೆಂಬ ಸಂಶಯದಿಂದ ಅನೇಕ ವೈದ್ಯರನ್ನು ಆನೆಯ ಕಾಲಿಗೆ ತುಳಿಸಿ ಜೀವ ತೆಗೆದನು. ಉಳಿದ ವೈದ್ಯರು ತಮ್ಮ ತಮ್ಮ ಪ್ರದೇಶಗಳಿಗೆ ಹೊರಟು ಹೋದರು. ಔಷಧ ಮಾರುವ 'ಆತಾರ' ಜನರು ಔಷಧ ಮಾರುವುದನ್ನು ಬಿಟ್ಟು ಅಂಗಡಿಗಳನ್ನು ಮುಚ್ಚಿದರು. ಎರಡು ವರುಷಗಳವರೆಗೆ ಇಬ್ರಾಹಿಮ ಆದಿಲಶಹನು ರೋಗವನ್ನು ಅನುಭವಿಸಿ ಹಿಜರಿ ಸನ್ ೯೬೫ (ಕ್ರಿ.ಶ ೧೫೫೭-೫೮)ರಲ್ಲಿ ಮರಣ ಹೊಂದಿದನು. ಗೋಗಿಯಲ್ಲಿ ತನ್ನ ತಂದೆ ಹಾಗೂ ಅಜ್ಜನ ಗೋರಿಗಳ ಹತ್ತಿರ ಆತನನ್ನೂ ದಫನ ಮಾಡಲಾಯಿತು. ಇಬ್ರಾಹಿಮ ಆದಿಲಶಹನು ಇಪ್ಪತ್ನಾಲ್ಕು ವರುಷ ಹಾಗೂ ಕೆಲವು ತಿಂಗಳುಗಳವರೆಗೆ

ರಾಜ್ಯವಾಳಿದನು. ಆತನಿಗೆ ಇಬ್ಬರು ಹೆಣ್ಣು ಮಕ್ಕಳಿದ್ದರು. ಒಬ್ಬಳ ಹೆಸರು ತಾನೀಬೀಬಿ. ಅವಳನ್ನು ಅಲೀ ಬರೀದನಿಗೆ ಕೊಟ್ಟು ಮದುವೆ ಮಾಡಿದ್ದರೆ ಇನ್ನೊಬ್ಬಳ ಹೆಸರು ಬಾದಯ ಸುಲ್ತಾನಾ ಎಂಬುದಾಗಿತ್ತು. ಅವಳನ್ನು ನಿಜಾಮಶಾಹನಿಗೆ ಕೊಟ್ಟಿತ್ತು.

### ೧೨. *ಇಬ್ರಾಹಿಮ ಆದಿಲಶಹನ ದ್ರವ್ಯ ಭಂಡಾರ, ಸ್ವಾರರು, ಸಿಬ್ಬಂದಿ ಹಾಗೂ ಕಟ್ಟಡಗಳ ವಿವರ.*

ಹಿ.ಸನ್ ೯೩೩ (ಕ್ರಿ.ಶ ೧೫೨೬-೨೭)ರಲ್ಲಿ ಇಬ್ರಾಹಿಮಪುರ ಎಂಬ ಊರನ್ನು ಕಟ್ಟಿದನು. ಹಿ.ಸ ೯೩೫ (೧೫೨೮-೨೯)ರಲ್ಲಿ ಹದಿನಾರು ಕಂಬಗಳ ಬಂಗಲೆಯನ್ನು ಕಟ್ಟಿದನು. ಹಿ.ಸ ೯೫೮ (ಕ್ರಿ.ಶ. ೧೫೫೧) ರಲ್ಲಿ ಜುಮ್ಮಾ ಮಸೀದಿಯನ್ನು ಕಟ್ಟಿದನು. ಸೈನ್ಯದ ಸಂಖ್ಯೆ ಕುದುರೆ ಸವಾರರು ೩೦೦೦ (ಮೂರುಸಾವಿರ) ಕಾಲ್ದಳ ೨,೩೦,೦೦೦ (ಎರಡು ಲಕ್ಷ ಮೂವತ್ತು ಸಾವಿರ) ಆನೆಗಳು ೪೫೦ (ನಾಲ್ಕುನೂರು ಐವತ್ತು) ಅಲ್ಲಾನ ಕೃಪೆಯಿಂದ ಮತ್ತು ಆತನ ದೈವ ಬಲದಿಂದ ಈ ಪ್ರಕಾರವಾಗಿ ಆತನ ರಾಜ್ಯವು ವಿಸ್ತಾರವಾಗಿತ್ತು. ತುಸುವೆ ದಿನಗಳಲ್ಲಿ, ದ್ರವ್ಯ ಭಂಡಾರ, ಜಡ ಜವಾಹಿರಗಳು, ಬಂಗಾರ, ಬೆಳ್ಳಿ ಹಾಗು ಕಲಾಬುತಿಯ ವಸ್ತುಗಳು, ಆಯುಧಗಳನ್ನು ಇಡಲು ಸ್ಥಳವಿಲ್ಲವೆಂಬಂತೆ ಸಂಗ್ರಹವಾದುವು. ಶಿಪಾಯಿಗಳು ಹಾಗು ಸೈನ್ಯದ ಸಂಪೂರ್ಣ ಸಮುದಾಯವಿತ್ತು. ಪ್ರದೇಶದ ರೈತರು ಸುಖವಾಗಿದ್ದರು. ಸುತ್ತಮುತ್ತಲಿನ ಊರಿನ ಜನರು ಇಬ್ರಾಹಿಮ ಆದಿಲಶಹನ ಅರಮನೆಗೆ ಬಂದು ಮನೋರಥವನ್ನು ಪೂರೈಸಿಕೊಳ್ಳುತ್ತಿದ್ದರು, ಒಂದು ಕೇಳಿಕೆಯಂತೆ ಇಬ್ರಾಹಿಮ ಆದಿಲಶಹನ ಅಂತ್ಯ ಕಾಲದಲ್ಲಿ ಭಂಡಾರದಲ್ಲಿ ೧,೫೦,೦೦,೦೦೦ (ಒಂದು ಕೋಟಿ ಐವತ್ತು ಲಕ್ಷ) ಹೊನ್ನು ಇತ್ತೆಂದು ಹೇಳುತ್ತಾರೆ. ಆದರೆ ರಾಜಕುಮಾರ ಅಲಿಯು, ತಂದೆ ಸತ್ತ ಅನಂತರ ಸಿಂಹಾಸನಾರೂಢನಾಗಿ ತುಸುವೆ ದಿನಗಳಲ್ಲಿ ಆ ಭಾರಿ ಭಂಡಾರಗಳನ್ನು ಖಾಲಿ ಮಾಡಿದನು. ಶಿಪಾಯಿ ಜನರಿಗೆ, ಫಕೀರರಿಗೆ, ವಿದ್ವಾಂಸರಿಗೆ, ಗುಣಿ ಜನರಿಗೆ ಮತ್ತು ಬಯಸಿ ಬಂದವರಿಗೆ ಮೋಡಗಳು ಸುರಿಸುವ ಮಳೆಯಂತೆ ಎಲ್ಲ ಜನರಿಗೂ ಹಂಚಿಬಿಟ್ಟನು. ಒಂದು ಪದ್ಯದಲ್ಲಿ ಹೇಳಿದಂತೆ ಇಬ್ಬರೂ ಬಾದಶಹರಿಗೆ ಸರಿಯಾಗಿ ಒಪ್ಪುತ್ತದೆ. ಅದರ ಅರ್ಥ "ತಂದೆ ಕೂಡಿಸುತ್ತಾನೆ. ಮಗ ಮೀತಿಮೀರಿ ಖರ್ಚು ಮಾಡುತ್ತಾನೆ".

## ಬುಸ್ತಾನ : ನಾಲ್ಕು

# ಅಲಿ ಆದಿಲಶಾಹ - I

### ೧. ಅಲಿ ಆದಿಲಶಾಹ ಬಿನ್ ಇಬ್ರಾಹಿಮ ಆದಿಲಶಾಹ:

ಇಬ್ರಾಹಿಮ ಆದಿಲಶಹನ ಮರಣದ ಸಮಯದಲ್ಲಿ ಅಲಿಯು ಮಿರಜದ ಕೋಟೆಯಲ್ಲಿ ಕಾರಾಗೃಹದಲ್ಲಿದ್ದನು. ಆತನನ್ನು ಬಂಧಿಸಿದ ಕಾರಣವು ನೋಡಲು ವಿಪರೀತವಾಗಿ ಕಾಣುತ್ತದೆ. ಆದರೆ ಗ್ರಂಥಕಾರನಿಗೆ ವಿಷಯ ಏನಿದೆಯೋ ಅದರ ಅನುವಾದವನ್ನು ಬರೆಯುವುದನ್ನು ಬಿಟ್ಟು ಎರಡನೆಯ ಅಧಿಕಾರವೇ ಇಲ್ಲ. ಕಥಾ ಭಾಗವನ್ನು ಬರೆಯುವವನಿಗೆ ಕಥಾಭಾಗವನ್ನು ಬಿಟ್ಟು ಬೇರೆ ಉಪಾಯವಿಲ್ಲ. ಹೇಗೆ ಇದೆಯೋ ಹಾಗೆ ಬರೆಯುವುದು ಪ್ರಾಪ್ತವಾದುದು. ಒಂದು ವೇಳೆ ಈ ಗ್ರಂಥದಲ್ಲಿ ಕಥಾಭಾಗದ ವರ್ಣನೆಯು ಆಗಾಗ ವಿಪರ್ಯಾಸವಾಗಿ ಕಂಡು ಬಂದರೆ, ಗ್ರಂಥಾವಲೋಕನ ಮಾಡುವವರು ಕ್ಷಮಾಶೀಲ ಪುರುಷರೆಂದೇ ಹೇಳಬೇಕಾಗುತ್ತದೆ. ಕಥಾಭಾಗವನ್ನು ವರ್ಣಿಸುತ್ತಿರುವವನ ಮೇಲೆ ಕ್ಷಮೆಯನ್ನು ತೋರಿ, ಗ್ರಂಥಕಾರನ ತಪ್ಪುಗಳ ಮೇಲೆ ದೃಷ್ಟಿಯನ್ನಿಡಬಾರದು. ಈ ವಿಷಯದಲ್ಲಿ ಮೀರ ಇಬ್ರಾಹಿಮ ಅಸದಖಾನಿಯು ಏನೆಲ್ಲ ಬರೆದಿದ್ದಾನೆಯೋ ಅದು ಹೀಗಿದೆ.

ರಾಜಕುಮಾರ ಅಲಿಯು ವಯಸ್ಸಿನಿಂದ ಪ್ರೌಢನಾಗಿ, ಮತ್ತು ಬುದ್ಧಿಯಲ್ಲೂ ತಹಮಾಸೀಪನಿಗಿಂತ ಅಧಿಕ ಜಾಣನಾಗಿದ್ದನು. ತಹಮಾಸೀಪನ ತಂದೆಯೂ ಇಬ್ರಾಹಿಮ ಆದಿಲಶಹನಾಗಿದ್ದು, ತಹಮಾಸೀಪನು ಅಲಿಯ ಬಂಧು, ಇಬ್ಬರೂ ಸಿಕಂದರ ಅಸದಖಾನನ ಕನ್ಯೆಯ ಪುತ್ರರಾಗಿದ್ದರು. ಈ ಮೊದಲೆ ವಿವರಿಸಿದಂತೆ ಇಬ್ರಾಹಿಮ ಆದಿಲಶಹನು ಅಸದಖಾನನ ಉತ್ತಮ ಸೇವೆಗಾಗಿ ಮತ್ತು ಆತನ ಸ್ವಾಮಿನಿಷ್ಠೆಗೆ ಮೆಚ್ಚಿ (ಅವನ ಮಗಳನ್ನು ಮದುವೆಯಾಗಿ) ತನ್ನ ನಂತರ ತನ್ನ ರಾಜ್ಯದ ಉತ್ತರಾಧಿಕಾರಿಯು ಅಸದಖಾನನ ಕನ್ಯೆಯ ಉದರದಲ್ಲಿ ಹುಟ್ಟಿದ ಮಗನಿಗೆ ಎಂದು ನಿರ್ಧರಿಸಿದ್ದನು. ಅಂತ್ಯ ಕಾಲದಲ್ಲಿ ಹಾಗೆಂದು ಬೋಧಿಸಿದ್ದನು. ಅನಂತರ ಇಬ್ರಾಹಿಮ ಆದಿಲಶಹನ ಒಲವು ಅಲಿಯ ಮೇಲಿಂದ ಸರಿದು, ಆತನ ಕುರಿತು ಕ್ರೋಧನಾಗಿ ಸಿಟ್ಟಿನಿಂದ ಅಲಿಯನ್ನು ಮುಗಿಸಿ ಬಿಡಬೇಕೆಂಬ ಯೋಜನೆಯನ್ನು ಹಾಕಿಕೊಂಡಿದ್ದನು. ಬಾದಶಹನ ಸಂಕಲ್ಪವು ಆಸ್ಥಾನದ ಕಾರಭಾರಿ ಹಾಗು ಕೆಲಸದ ಜನರಿಗೆ ತಿಳಿಯಿತು. ಆಗ ಕಾರಭಾರಿ ಜನರು ಹಾಗೆ ಆಗದಂತೆ ಇಬ್ರಾಹಿಮನಿಗೆ ವಿನಂತಿಸಿಕೊಂಡರು. ಈ ವಿಷಯದಲ್ಲಿ ಸೇವಕ ಜನರು ವಿನಂತಿ ಮಾಡುತ್ತಿರುವುದು ಅಮರ್ಯಾದೆಯೆಂದು ಭಾವಿಸಬೇಡಿ. ಒಂದು ವೇಳೆ ಅಲಿಯನ್ನು ತೊಲಗಿಸುವುದೆಂದೇ ಪ್ರಭುಗಳಿಗೆ ಯೋಗ್ಯ ವೆನಿಸಿದ್ದರೆ ಹಾಗೆಯೇ ಮಾಡಿರಿ, ರಾಜಕುಮಾರ ಅಲಿಯನ್ನು ಅಸದಖಾನನ ಹತ್ತಿರ ಕೊಟ್ಟು ಬಿಡಿರಿ. ಅಂದರೆ ಅಸದಖಾನನಿಗೆ ತನ್ನ ಕನ್ನೆಯ ಪುತ್ರನನ್ನು ಸಂರಕ್ಷಿಸುವುದು ಸಾಧ್ಯವಾಗುತ್ತದೆ. ಅಸದಖಾನನಿಗೆ ಸರಿಕಂಡದ್ದನ್ನು ಆತನ ಮನಸ್ಸಿಗೆ ಒಪ್ಪಿದ್ದನ್ನು ಮಾಡುತ್ತಾನೆ.

ಈ ಕಾರಣದಿಂದ ಕಠೋರ ಮನಸ್ಸು ಹಾಗು ನಿರ್ದಯತನದ ಕಲಂಕವು ಪ್ರಭುಗಳಿಗೂ ಅವರ ಸೇವಕರಿಗೂ ಬರುವುದಿಲ್ಲ. ಕಾರಭಾರಿಗಳ ವಿಚಾರಕ್ಕೆ ಬಾದಶಹನು ಒಪ್ಪಿ, ರಾಜಕುಮಾರ ಅಲಿಯನ್ನು ಕಾಲಲ್ಲಿ ಮತ್ತು ಕಂಠದಲ್ಲಿ ಬಂಗಾರದ ಬೇಡಿಗಳನ್ನು ಹಾಕಿ ಮಿರಜ ಕೋಟೆಯಲ್ಲಿದ್ದ ಅಸದಖಾನನ ಹತ್ತಿರ ಕಳಿಸಿದನು. ಜೊತೆಗೆ 'ಸಿಂಹಾಸನದ ಉತ್ತಾರಾಧಿಕಾರವನ್ನು ತಹಮಾಸೀಪನಿಗೆಂದು ನಾನು ನಿರ್ಧರಿಸಿದ್ದೇನೆಂದು' ಪತ್ರ ಬರೆದನು. 'ಈ ಕೆಲಸಕ್ಕೆ ಅಲಿಯು ಪ್ರತಿಬಂಧಕನಾಗಿದ್ದಾನೆ. ಆದ್ದರಿಂದ ಅವನನ್ನು ಅಲ್ಲಿಗೆ ಕಳಿಸಲಾಗಿದೆ. ನಿಮ್ಮ ಮನಸ್ಸಿಗೆ ಹೇಗೆ ಬರುತ್ತದೆಯೋ ಹಾಗೆ, ಅವನ ಜೀವವನ್ನಾದರೂ ತೆಗೆಯಿರಿ ಇಲ್ಲವೆ ಕಣ್ಣುಗಳನ್ನು ಕೀಳಿರಿ' ಎಂದು ಬರೆದಿದ್ದನು.

ಅಸದಖಾನನ ಮಕ್ಕಳಲ್ಲೊಬ್ಬನಾದ ಕಮಾಲಗೀ ಶಹರಖಾನನೆಂಬವನು ಆಸ್ಥಾನದಲ್ಲಿ ಪ್ರಭುಗಳ ಸೇವೆಯಲ್ಲಿದ್ದನು. ಆತ ಸಂಭಾವಿತ, ಬಹಳ ಜಾಣನಾಗಿದ್ದನು. ಆತನು ಗುಪ್ತರೀತಿಯಲ್ಲಿ ತನ್ನ ತಂದೆಗೆ ಒಂದು ಪತ್ರವನ್ನು ಬರೆದನು. 'ಬಾದಶಹರು ಸಿಟ್ಟಿನಲ್ಲಿ ಹಿರಿಯಮಗನಾದ ರಾಜಕುಮಾರ ಅಲಿಯನ್ನು, ತರುಣ ಮತ್ತು ರಾಜ್ಯಾಧಿಕಾರಕ್ಕೆ ಯೋಗ್ಯನಾದವನನ್ನು, ಕೈ-ಕಾಲು-ಕಂಠಗಳಲ್ಲಿ ಬೇಡಿಯನ್ನು ಹಾಕಿ ತಮ್ಮ ಕಡೆಗೆ ಕಳಿಸಿದ್ದಾರೆ. ಜೀವ ತೆಗೆಯಲು ಆದೇಶವನ್ನು ಇತ್ತಿದ್ದಾರೆ ಮತ್ತು ಆಜ್ಞಾಪತ್ರವನ್ನೂ ಕಳಿಸಿದ್ದಾರೆ. ಅಲ್ಲಾನ ಕೃಪೆಯಿಂದ ತಾವು ಕಾರ್ಯಭಾರವನ್ನು ತಿಳಿದವರು ಮತ್ತು ಧರ್ಮವಿಷಯದಲ್ಲಿ ವಿಚಾರವಂತರೂ ಆಗಿದ್ದೀರಿ. ಆದ್ದರಿಂದ ಯಾವುದನ್ನು ಮಾಡಬೇಕೆಂದು ಅನಿಸುತ್ತದೆಯೋ ಅದರ ಬಗ್ಗೆ ತುಂಬ ವಿಚಾರಿಸಿ ಮಾಡಿರಿ. ಯಾವ ಆಜ್ಞೆಯು ಕ್ರೋಧದಲ್ಲಿ ಆಗಿದೆಯೋ ಅದನ್ನು ಅದರಂತೆ ಮಾಡುವುದು ದೂರದರ್ಶಿಗಳ ಬುದ್ಧಿಯಿಂದ ಅತಿ ದೂರವಾಗಿರುತ್ತದೆ' ಎಂದು ಬರೆದಿದ್ದನು.

ಅಸದಖಾನನು ಬಾದಶಹರ ಆಜ್ಞಾಪತ್ರ ಹಾಗೂ ತನ್ನ ಮಗನ ವಿನಂತಿ ಪತ್ರ ಎರಡನ್ನೂ ನೋಡಿದನು. ಅನಂತರ ರಾಜಕುಮಾರ ಅಲಿಯನ್ನು ಪ್ರತಿಬಂಧನದಲ್ಲಿಟ್ಟನು. ಅಸದಖಾನನು ಸ್ವತಃ ವಿದ್ವಾಂಸ, ಬುದ್ಧಿವಂತ, ವಾಗ್ಮಿ, ಜ್ಞಾನವಂತ ಹೀಗೆ ಅನೇಕ ಗುಣಗಳಿಂದ ವಿಲಕ್ಷಣ ಗುಣವಂತನಾಗಿದ್ದನು. ತಕ್ಷಣ ತಹಮಾಸೀಪನ ಜಾತಕವನ್ನು ತರಿಸಿ ನೋಡಿದನು. ಆತನ ಜಾತಕದಲ್ಲಿ ತಹಮಾಸೀಪನು ದುರ್ದೈವಿ ಎಂದು ನಮೂದಾಗಿತ್ತು. ಆದರೆ ಆತನಿಗೆ ಒಬ್ಬ ದೈವವಂತ, ಪ್ರಾರಬ್ಧದಿಂದ ಉತ್ತಮ ಪುರುಷನು ಹುಟ್ಟುತ್ತಾನೆಂದು ಹೇಳಲಾಗಿತ್ತು. ಅಲಿಯ ಜಾತಕವನ್ನು ನೋಡಿದಾಗ ಅವನಿಗೆ ಗ್ರಹಗಣಗಳ ಅನುಕೂಲತೆ, ಮತ್ತು ನಕ್ಷತ್ರಗಳ ಉತ್ತಮ ದೃಷ್ಟಿ, ಉತ್ತಮ ದೈವವಿದೆಯೆಂದು, ಯಶಸ್ವಿಯಾಗುತ್ತಾನೆಂದು ಕಂಡು ಬಂದಿತು. ದೂರದ ವಿಚಾರವನ್ನು ಮಾಡುವ ಬುದ್ಧಿವಂತ ಅಸದಖಾನನ ಕಲ್ಯಾಣ ಪ್ರದ ಆಜ್ಞೆಯಲ್ಲಿ ಸಡಿಲಾಯಿತು. ಅಸದಖಾನನು ರಾಜಕುಮಾರ ಅಲಿಯ ಗ್ರಹಗತಿಗಳನ್ನು ಕಂಡು, ಆತನನ್ನು ಒಂದು ಗುಪ್ತ ಸ್ಥಳದಲ್ಲಿ ಇರಿಸಿದನು. ಅತಿ ಸೂಕ್ಷ್ಮವಿಷಯದಲ್ಲಿ ಆತನಿಗೆ ಏನೊಂದೂ ಕಡಿಮೆಯಾಗದಂತೆ ನೋಡಿಕೊಂಡನು. ಅಲಿಗೆ ಯಾವ ಪದಾರ್ಥದ ಬಯಕೆಯಾಗುತ್ತದೆಯೋ ಅದರಲ್ಲಿ ಶತಪ್ರಯತ್ನ ಮಾಡಿ ಪೂರೈಸುವಲ್ಲಿ ತಿಲಮಾತ್ರವೂ ತನ್ನಿಂದ ಅಂತರವಾಗದಂತೆ ನೋಡಿಕೊಂಡನು. ಬಾದಶಹನ ಸಮಾಧಾನಕ್ಕಾಗಿ ಹರಿಣದ ಎರಡು ಕಣ್ಣುಗಳನ್ನು ಮತ್ತು ಮಗುವಿನ ಒಂದು ಬೆರಳನ್ನು ಕಡಿದು, ಒಂದು ವಿನಂತಿ ಪತ್ರವನ್ನು ಬರೆದು ಅದರೊಂದಿಗೆ ಕಣ್ಣುಗಳನ್ನು, ಬೆರಳನ್ನು ಕಳಿಸಿಕೊಟ್ಟನು. ವಿನಂತಿ ಪತ್ರದಲ್ಲಿ ಹೀಗೆ ಬರೆದಿದ್ದನು. 'ತಮ್ಮ ಆಜ್ಞೆಯಂತೆ, ರಾಜಕುಮಾರ ಅಲಿಯ ಎರಡೂ ಕಣ್ಣುಗಳನ್ನು ಮತ್ತು ಒಂದು ಬೆರಳನ್ನು ತೆಗೆದು ಅಲಿಯನ್ನು ನಿಷ್ಪ್ರಯೋಜಕನನ್ನಾಗಿ ಮಾಡಲಾಗಿದೆ'.

ಆ ನಂತರ ಇಬ್ರಾಹಿಮ ಆದಿಲಶಹನು (ಹಲವು ವರುಷಗಳ ಅನಂತರ) ಮರಣ ಹೊಂದಿದನು. ಆಗ ಜೈದಖಾನ ಹವಾಲದಾರ ವಿಜಾಪುರಕರನು ಬಾದಶಹರ ಹೆಣವನ್ನು ಬಾದಶಾಹಿ ಮರ್ಯಾದೆಯೊಂದಿಗೆ ಶೋಭೆಯಿಂದ ಗೋಗಿಗೆ ಕಳಿಸಿದನು. ರಾಜಕುಮಾರ ತಹಮಾಸೀಪ ಮತ್ತು ಆತನ ಬಂಧುವರ್ಗವನ್ನೆಲ್ಲ ಬಂಧಿಸಿ ಸೆರೆಮನೆಯಲ್ಲಿಟ್ಟನು. ಕೆಲವು ಕಾರಭಾರಿ ಜನರು ಬಹುಯತ್ನದಿಂದ ಜೈದಖಾನನಿಗೆ ತಿಳಿ ಹೇಳಿದರು. 'ತಕ್ಷಣ ಆದಿಲಶಾಹಿ ರಾಜಕುಮಾರರಲ್ಲೊಬ್ಬನನ್ನು ಬಂಧನದಿಂದ ಮುಕ್ತಗೊಳಿಸಿ ಸಿಂಹಾಸನದ ಮೇಲೆ ಕೂಡಿಸಬೇಕು. ಸಮಯಕ್ಕಾಗಿ ಕಾದು ಕುಳಿತ ಶತ್ರುಗಳು ಇದರಿಂದ ನಿರಾಶರಾಗುತ್ತಾರೆ' ಎಂದು ಹೇಳಿದವರಿಗೆ ಜೈದಖಾನ ಹವಾಲದಾರನು ಉತ್ತರ ಕೊಡುತ್ತ, 'ಇದು ನಮ್ಮ ಕೆಲಸವಲ್ಲ, ದೊಡ್ಡವರ ಕೆಲಸವಾಗಿದೆ. ಈ ಕೆಲಸದ ಸಂಬಂಧವು ಮಗರುಲ್ ಮಹಮ್ಮದ ಅಸದಖಾನರ ಕಡೆಗೆ ಇದೆ'. ಎಂದು ಹೇಳಿದನು. ಈ ವಿಷಯದಲ್ಲಿ ಸವಿವರವಾದ ಪತ್ರವನ್ನು ಬರೆದು ಅಸದಖಾನನ ಹತ್ತಿರ ಕಳಿಸಿದನು. ಈ ಸುದ್ದಿಯನ್ನು ಕೇಳಿದ ದಿನವೇ ಅಸದಖಾನನು ಅತಿ ಶೀಘ್ರವಾಗಿ ರಾಜಕುಮಾರ ಅಲಿಯನ್ನು ಬಂಧಮುಕ್ತರನ್ನಾಗಿ ಮಾಡಿ ಅಲಿಯ ಮಸ್ತಕದ ಮೇಲೆ ಬಾದಶಾಹಿ ಛತ್ರ-ಚಾಮರಗಳನ್ನು ಹಿಡಿದನು. ರಾಜ್ಯಾಧಿಕಾರದ ಸ್ಥಾಪನೆಯನ್ನು ಮಾಡಲು ಹೊರಗೆ ಕರೆದು ಶುಭಾಶಯಗಳನ್ನು ಸಲ್ಲಿಸುತ್ತ ಕಾಣಿಕೆಗಳನ್ನು ನೀಡಿದನು. ಮರು ದಿನವೇ ರಾಜಕುಮಾರ ಅಲಿಯು ಬಾದಶಾಹಿ ಸರಂಜಾಮಿನೊಂದಿಗೆ, ಮಿರಜದಿಂದ ಹೊರಟು ವಿಜಾಪುರ ರಾಜಧಾನಿಯ ಕಡೆಗೆ ನಡೆದನು. ಈ ಸುದ್ದಿ ತಿಳಿಯುತ್ತಲೇ ಪ್ರತಿಯೊಂದು ದಿಕ್ಕಿನ ಜನರು ಮತ್ತು ನಗರದ ಜನರು ಶುಭಾಶಯಗಳನ್ನು ಸಲ್ಲಿಸಲು ಧಾವಿಸಿದರು. ಎಲ್ಲರೂ ಶುಭಾಶಯಗಳೊಂದಿಗೆ ಕಾಣಿಕೆಯನ್ನು ಕೊಡುತ್ತಿದ್ದರು. ಅಷ್ಟು ಹೊತ್ತಿಗೆ ತೊರವೆಯ ಹತ್ತಿರ ಬಂದಿದ್ದರು. ಆಗ ರಾಜಕುಮಾರ ಅಲಿಯು ಜೈದಖಾನನಿಗೆ ಆಜ್ಞೆಯನ್ನು ನೀಡಿ. "ರಾಜಧಾನಿಯಲ್ಲಿರುವ ರಾಜಕುಮಾರರೆಲ್ಲರ ಕಣ್ಣು ಕಿತ್ತಿ ಕಳಿಸಿರಿ. ಅಂದರೆ ಸ್ವಸ್ಥವಾಗಿ ಹಾಗು ನಿರ್ಭಯದಿಂದ ಶ್ರೇಷ್ಠತ್ವವನ್ನು ಪಡೆದು ಛತ್ರ ಹಾಗೂ ಸಿಂಹಾಸನದ ಉಪಭೋಗವನ್ನು ಮಾಡುವೆನು, ರಾಜ್ಯ ಆಳುವೆನು" ಎಂದು ಹೇಳಿ ಕಳಿಸಿದ್ದನು. ಅದಕ್ಕೆ ಪ್ರತಿಯಾಗಿ ಜೈದಖಾನನು ಉತ್ತರಿಸುತ್ತ. 'ನಾನೊಬ್ಬ ಸೇವಕ, ತಮ್ಮ ದಾಯಾದಿ ಮಂಡಳಿ, ಬಂಧುವರ್ಗದವನು ಅಲ್ಲ. ಯಜಮಾನರ ಕಣ್ಣು ಕಳೆಯುವುದು ನನ್ನ ಕೈಯಿಂದ ಆಗದ ವಿಷಯ' ಎಂದು ಹೇಳಿ, ತಹಮಾಸೀಪ ಮತ್ತು ಉಳಿದ ಬಂಧುಗಳ ಸಹಿತ ಎಲ್ಲರನ್ನು ಸುರಕ್ಷಿತವಾಗಿ ಅಲಿ ಆದಿಲಶಹನ ಹತ್ತಿರ ಕಳಿಸಿದನು. ಅನಂತರ ಬಾದಶಹರ ಆಜ್ಞೆಯಂತೆ ಮೂವರಿಗೂ ಒಂದೊಂದು ಅಂಗವಿಕಲತೆಯನ್ನು ಮಾಡಲಾಯಿತು. ಒಬ್ಬರ ಕಣ್ಣನ್ನು ಇನ್ನೊಬ್ಬರ ಕಿವಿಯನ್ನು ಮತ್ತೊಬ್ಬರ ಬೆರಳುಗಳನ್ನು ತೆಗೆಯಲಾಯಿತು. ಅನಂತರ ಒಂದು ಸುಮುಹೂರ್ತದಲ್ಲಿ ವಿಜಾಪುರ ನಗರವನ್ನು ಪ್ರವೇಶಿಸಿ ರಾಜಾಧಿರಾಜರ ಐಶ್ವರ್ಯದಿಂದ ಆದಿಲಶಾಹಿ ಗದ್ದುಗೆಯ ಮೇಲೆ ಅಲಿ ಆದಿಲಶಹನು ಕುಳಿತನು.

### *೨. ಅಲಿಯ ಬಗ್ಗೆ ಇನ್ನೊಂದು ವಿವರ :*

ಮಹಮ್ಮದ ಕಾಸಿಮ ಫಿರಸ್ತಾ ಮತ್ತು ರಫೀಉದ್ದೀನ ಶಿರಾಜಿ ಯಂಥ ಬೇರೆ ಗ್ರಂಥಕಾರರು ಹೀಗೆ ಬರೆದಿದ್ದಾರೆ. 'ರಾಜಕುಮಾರ ಅಲಿಯು ಚಿಕ್ಕವನಿದ್ದಾಗಿನಿಂದಲೇ ತುಂಬ ಬುದ್ಧಿವಂತನೂ ಸೂಜ್ಞನೂ ಆಗಿದ್ದನು. ಪ್ರೌಢನಾಗುತ್ತಿದ್ದಂತೆ ಆತನಲ್ಲಿಯ ಶ್ರೇಷ್ಠ ಸ್ವಭಾವಗಳು ಉತ್ತಮ ಲಕ್ಷಣಗಳು ಗೋಚರಿಸ ತೊಡಗಿದುವು. ಆದರೆ ಅಲಿಗೆ ತಾಲೀಮು ಕೊಡಲು ಹಾಗು ವಿದ್ಯೆಯನ್ನು ಹೇಳಿಕೊಡಲು ಖಾಜಾ ಇನಾಯತ್ ಉಲ್ಲಾನನ್ನು ನಿಯಮಿಸಲಾಗಿತ್ತು. ಆತನ ಸಂಗತಿಯಿಂದ ಶಿಯಾ ಧರ್ಮವನ್ನು ಆಚರಿಸುವಲ್ಲಿ

ಪೂರ್ಣ ಪ್ರೀತಿ ಉತ್ಪನ್ನವಾಯಿತು. ಒಂದು ದಿನ ಇಬ್ರಾಹಿಮ ಆದಿಲಶಹನು ಏಕಾಂತದಲ್ಲಿ ತನ್ನ ಮಂಡಳಿಯೊಂದಿಗೆ ಕುಳಿತಿದ್ದನು. ಮಾತು ಮಾತಿನಲ್ಲಿ ತಂದೆಯ ಹಾಗು ಅಜ್ಜನ ಧರ್ಮಾಚರಣೆಯ ಮಾತು ಬಂದಿತು. ಆಗ ಇಬ್ರಾಹಿಮ ಆದಿಲಶಹನು ಮಾತನಾಡುತ್ತ, "ಸತ್ಯ ಸ್ವರೂಪನಾದ ಆ ಅಲ್ಲಾನನ್ನು ಸ್ತುತಿಸುತ್ತ, ಯಾವ ಅಲ್ಲಾನು ನನಗೆ ಆಶ್ರಯವನ್ನಿತ್ತನೊ ಆ ಯೋಗದಿಂದಾಗಿ ನಾನು ನನ್ನ ತಂದೆ ಮತ್ತು ಅಜ್ಜನ ಧರ್ಮ ಮತ್ತು ಮಾರ್ಗವನ್ನು ಬಿಟ್ಟು, ಪ್ರಬಲವಾದ ಧರ್ಮವನ್ನು ಮತ್ತು ಸನ್ಮಾರ್ಗವನ್ನು ಧಾರಣ ಮಾಡಿದೆನು. ಯಾವ ಮಾರ್ಗದಲ್ಲಿ ಶ್ರೇಷ್ಠ ಫಲಗಳಿವೆಯೋ ಆ ಸುನ್ನಿ ಧರ್ಮವನ್ನು ವರ್ಣಿಸಲಾಗಿದೆಯೋ ಅಂಥ ಧರ್ಮವನ್ನು ನಾನು ಸ್ವೀಕರಿಸಿರುವೆನು. ಶಿಯಾ ಧರ್ಮದ ಜನರನ್ನು ಕಡಿಮೆ ಮಾಡಿ, ಅವರಲ್ಲಿ ಯಾರ ಒಬ್ಬರನ್ನೂ ಕೆಲಸದಲ್ಲಿ ಇಡಲಿಲ್ಲ" ಎಂದು ನುಡಿದನು. ಆ ಸಮಯದಲ್ಲಿ ರಾಜಕುಮಾರ ಅಲಿಯು ತನ್ನ ತಂದೆಯ ಜೊತೆಯಲ್ಲಿಯೆ ಇದ್ದನು. ಆತನೂ ಬಾದಶಹರ ಮಾತುಗಳನ್ನು ಕೇಳುತ್ತಿದ್ದನು. ಹುಂಬತನದಿಂದ ಏನನ್ನೂ ವಿಚಾರಿಸದೆ ಬಾದಶಹನಿಗೆ ಉತ್ತರ ಕೊಡುತ್ತ 'ಒಂದು ವೇಳೆ ಅಪ್ಪ, ಅಜ್ಜಂದಿರ ಮಾರ್ಗವನ್ನು ಬಿಡುವುದೇ ಉತ್ತಮ ನಡೆತೆ ಮತ್ತು ಉತ್ತಮ ಮಾರ್ಗವೆಂದಾದರೆ ತಮ್ಮ ಮಕ್ಕಳೂ ಹೀಗೆ ಮಾಡುವುದೇ ಯೋಗ್ಯವೆನಿಸುತ್ತದೆ. ಅಂದರೆ ತಾವು ಹಿರಿಯರ ಮಾರ್ಗವನ್ನು ಬಿಟ್ಟರಿ ಹಾಗೆ ನಾವೂ ತಮ್ಮ ಮಾರ್ಗವನ್ನು ಬಿಟ್ಟೇ ನಡೆಯುತ್ತೇವೆ' ಎಂದುಬಿಟ್ಟನು. ಅಲಿಯ ಸೊಕ್ಕಿನ ಇಂಥ ಮಾತುಗಳನ್ನು ಕೇಳಿ. ಇಬ್ರಾಹಿಮ ಆದಿಲಶಹನಿಗೆ ಸಿಟ್ಟು ನೆತ್ತಿಗೇರಿತು. ಅವನಿಗೆ ಕೇಳಿದನು. "ಈಗ ನಿನ್ನ ಧರ್ಮ ಯಾವುದಿದೆ"? ಅದಕ್ಕೆ ಅಲಿಯು "ಸದ್ಯ ತಮ್ಮ ಧರ್ಮದಂತೆಯೇ ನಡೆಯುತ್ತಿರುವೆ. ಆದರೆ ಮುಂದಿನದು ಅಲ್ಲಾನ ಕೈಯಲ್ಲಿದೆ. ಏನು ಘಟಿಸುತ್ತದೆಯೋ ಅದುವೆ ಸತ್ಯ" ಎಂದು ಉತ್ತರ ಕೊಟ್ಟನು. ಆತನ ಉತ್ತರದಿಂದ ಅಲಿಯು ಶಿಯಾ ಧರ್ಮದವನಾಗಿದ್ದಾನೆಂದು ಇಬ್ರಾಹಿಮನಿಗೆ ತಿಳಿಯಿತು. ಅಲಿಗೆ ಆತನ ಗುರುಗಳ (ವಸ್ತಾದರ) ಸಂಗತಿಯಿಂದ ಅವರ ಗುಣಗಳು ಬಂದಿವೆ, ಎಂದು ತಿಳಿದು, ಸಿಟ್ಟಿನಿಂದ ಎಷ್ಟೋ ದಿನ ಅಲಿಯನ್ನು ತನ್ನ ಮುಂದೆ 'ಸಲಾಮಿ'ಗೆ ಬರುವುದನ್ನು ಸ್ಥಗಿತಗೊಳಿಸಿದನು. ಆತನ ಗುರುಗಳನ್ನು ಸೆರೆಮನೆಗೆ ಅಟ್ಟಿದನು. ಅನಂತರ ಅಲಿಗೆ ತಾಲೀಮು ಕೊಡಲು ಮೀರ ಫತಹಲಾಹ ಶಿರಾಜಿಯನ್ನು ನಿಯಮಿಸಿದನು.

ಧರ್ಮಕರ್ಮ ಸಂಯೋಗದಿಂದ ಆ ವಸ್ತಾದನೂ ಶಿಯಾ ಧರ್ಮದವನೇ ಆಗಿದ್ದನು. ಆತನು ಆ ಕಾಲದಲ್ಲಿಯ ಶಿಯಾ ಜನರಂತೆ ಆಚಾರಗಳನ್ನು ಆಚರಿಸಿ ಹನಫೀ ಧರ್ಮದ ಮಂಡಳಿಯಲ್ಲಿ ಹಿರಿತನವನ್ನು ಪಡೆದಿದ್ದನು. ಆತನ ಸಂಗತಿಯೂ ರಾಜಕುಮಾರ ಅಲಿಗೆ ಬಂದಿತು. ರಾಜಕುಮಾರನು ಶಿಯಾ ಧರ್ಮವನ್ನು ಆಚರಿಸುವ ವಿಷಯದಲ್ಲಿ ಅತಿ ಶ್ರೇಷ್ಠತ್ವದಿಂದ ಮತ್ತು ಪೂರ್ಣ ಪ್ರಮಾಣದ ಪ್ರೀತಿಯಿಂದ ಯತ್ನ ಮಾಡುತ್ತಿದ್ದನು. ಅಂಥ ದಿನಗಳಲ್ಲಿ ಆಸುಪಾಸಿನಲ್ಲಿ ವಾಸಿಸುತ್ತಿದ್ದ ಜನರು ಇಬ್ರಾಹಿಮ ಆದಿಲಶಹನ ಕೋಪಿಷ್ಠ ಹಾಗೂ ಭಯಂಕರ ಸ್ವಭಾವವನ್ನು ತಿಳಿದು, ಬುರ್ಹಾನನಿಜಾಮಶಾಹನ ಚಿತಾವಣೆಯಿಂದ ಇಬ್ರಾಹಿಮ ಆದಿಲಶಹನನ್ನು ಪದಚ್ಯುತಗೊಳಿಸಿ, ಆತನ ಬಂಧು ಅಬದುಲ್ಲಾ ಎಂಬುವನನ್ನು ಸಿಂಹಾಸನದ ಮೇಲೆ ಕುಳ್ಳರಿಸಲು ಯೋಚಿಸುತ್ತಿದ್ದರು. ಈ ಯೋಜನೆಯು ಇನ್ನೂ ನಿರ್ಧರಿಸಿರಲಿಲ್ಲವಾದರೂ ಒಮ್ಮೆಲೆ ಅದು ಹೊರಬಿದ್ದಿತು. ಬಾದಶಹನ ಕಿವಿಗೂ ಬಿದ್ದಿತು. ಅದರಿಂದ ಬಾದಶಹನು ವಸ್ತಾದರ ಪಾರುಪತ್ಯವನ್ನು ಮಾಡಲು, ಅತಿ ಕ್ರೋಧದಿಂದ ಅಲಿಯ ವಸ್ತಾದನನ್ನು ಮತ್ತು ಈ ಮಸಲತ್ತಿನಲ್ಲಿ ಇದ್ದ ಉಳಿದವರನ್ನು ಹಿಡಿದನು. ಆಗ ಅಲಿಯ ಮತ್ತೊಬ್ಬ ವಸ್ತಾದ ಮುಲ್ಲಾ

ಫತಹಲಾಹನೂ ಶಿಯಾ ಧರ್ಮದವನೇ ಆಗಿದ್ದಾನೆಂದು ಇಬ್ರಾಹಿಮನಿಗೆ ತಿಳಿಯಿತು. ಆತನ ಸಂಗತಿಯೂ ಅಲಿಗೆ ದೊರೆಯಿತು. ಅಲ್ಲದೆ ರಾಜಕುಮಾರ ಅಲಿ ಹಾಗೂ ಆತನ ಕಕ್ಕ ಅಬ್ದುಲ್ಲಾ ಈ ವಿಷಯದಲ್ಲಿ ಒಂದೇ ಮತದವರಾಗಿದ್ದಾರೆಂದೂ ತಿಳಿದು ಬಂದಿತು. ಆದ್ದರಿಂದ ಅತ್ಯಂತ ಸಿಟ್ಟಿಗೆದ್ದು ಪಂತೋಜಿಯೊಂದಿಗೆಯೇ ರಾಜಕುಮಾರ ಅಲಿಯನ್ನು ಮಿರಜಕ್ಕೆ ಕಳಿಸಿಕೊಟ್ಟನು. ಸಿಕಂದರಖಾನ ಕಿಲ್ಲೇದಾರ ಮತ್ತು ಶಾಮೀಲಖಾನ ಠಾಣೇದಾರ ಇವರಿಬ್ಬರೂ ಇಸ್ಮಾಯಿಲ ಆದಿಲಶಹನ ಸೋದರಳಿಯಂದಿರಾಗಿದ್ದರು. ಅವರಿಗೆ ಸುಲ್ತಾನನು ಹೀಗೆ ಬರೆದನು. 'ರಾಜಕುಮಾರ ಅಲಿಯ ಬಗ್ಗೆ ಬಹಳ ಎಚ್ಚರಿಕೆಯಿಂದಿದ್ದು, ಪಹರೆ ವಗೈರೆ ಬಂದೋಬಸ್ತಿನಲ್ಲಿ ಇಡಬೇಕು. ರಾಫನಿ ಧರ್ಮದ ಜನರನ್ನು ರಾಜಕುಮಾರ ಅಲಿಯ ಕಡಗೆ ತಪ್ಪಿಯೂ ಕಳಿಸಬಾರದು, ಹೀಗೆ ಬರೆದನಾದರೂ ಆಶ್ಚರ್ಯದ ಸಂಗತಿಯೆಂದರೆ, ಸಿಕಂದರಖಾನ ಮತ್ತು ಶಾಮಿಲ್‌ಖಾನ ಈ ಉಭಯತರ ವಿಚಾರಗಳನ್ನು ನೋಡಲಾಗಿ, ಶಿಯಾ ಧರ್ಮದವರೇ ಆಗಿದ್ದರು. ರಾಜಕುಮಾರ ಅಲಿಯು ಇಬ್ರಾಹಿಮ ಆದಿಲಶಾಹನ ಮನೋಗತದಂತೆ ನಡೆಯುತ್ತಿರಲಿಲ್ಲ. ಇಬ್ರಾಹಿಮ ಆದಿಲಶಹನು ರುಗ್ಣಾವಸ್ಥೆಯಲ್ಲಿದ್ದಾಗ ಆತನ ಸನ್ನಿಧಿಯಲ್ಲಿದ್ದ ಜನರಿಗೆ 'ಬಾದಶಹನು ಇದರಲ್ಲಿ ಉಳಿಯುವುದಿಲ್ಲ ಹಾಗು ಆತನಿಂದ ನಾವೂ ಉಳಿಯುವುದು ಕಷ್ಟ. ಊರಲ್ಲಿ ಇದ್ದರೆ ನಮ್ಮ ಪ್ರಾಣಗಳನ್ನು ತೆಗೆದುಕೊಳ್ಳುತ್ತಾನೆ. ಅದರ ಪರಿಣಾಮವೆಂದರೆ ಆತನ ರೋಗವೇ ಆಗಿದೆ' ಎಂದು ತಿಳಿದರು.

ರಾಜಕುಮಾರ ಅಲಿಯು ಅಲ್ಲಿ 'ಅಜಾನ್' ಎಂದರೆ, ಎತ್ತರವಾದ ಸ್ಥಳದಲ್ಲಿ ನಿಂತು ಯವನ ಜನರು ಉಚ್ಚ ಸ್ವರದಲ್ಲಿ ಕೂಗುತ್ತಾರೆ ಅದಕ್ಕೆ ಅಜಾನವೆಂದು ಹೆಸರು ಮತ್ತು ನಮಾಜವನ್ನು ಶಿಯಾ ಧರ್ಮದಂತೆ ಮಾಡಿ, ರಾಫನಿ ಧರ್ಮದ ಜನರ ಧರ್ಮವನ್ನು ಪ್ರಯತ್ನ ಪೂರ್ವಕವಾಗಿ ಆಚರಿಸುತ್ತಿದ್ದನು. ಈ ಭಯಂಕರ ಸುದ್ದಿಯು ಇಬ್ರಾಹಿಮ ಆದಿಲಶಹನಿಗೆ ತನ್ನ ಪ್ರಕೃತಿ ತುಂಬ ಕೆಟ್ಟು ಅಂತ್ಯಾವಸ್ಥೆಯಲ್ಲಿದ್ದಾಗ ತಿಳಿಯಿತು. ಆಗ ಇಬ್ರಾಹಿಮ ಆದಿಲಶಹನು ಸರ್ಪದಂತೆ ಭುಸಗುಟ್ಟುತ್ತ ಕ್ರೋಧಾಯಮಾನನಾದನು. ತಾನು ಜೀವಂತ ಇರುವಾಗಲೇ ತಹಮಾಸೀಪನನ್ನು ಸಿಂಹಾಸನದ ಮೇಲೆ ಕೂಡಿಸಬೇಕು ಮತ್ತು ರಾಜಧಾನಿಯ ಆಡಳಿತದ ಸೂತ್ರಗಳನ್ನು ಆತನ ಕೈಯಲ್ಲಿಕೊಡಬೇಕು ಎಂದು ಆಶಿಸಿದನು. ಅಲಿಯನ್ನು ಕೊಲ್ಲಬೇಕು ಇಲ್ಲವೆ ಆತನ ಕಿವಿ, ಬೆರಳು ಇತ್ಯಾದಿ ಕತ್ತರಿಸಿ ಇಡಬೇಕು ಎಂದು ನಿರ್ಧರಿಸಿದನು. ಆಗ ಕೆಲವು ದುಷ್ಟ ಜನರು ಇಬ್ರಾಹಿಮ ಆದಿಲಶಹನಿಗೆ 'ರಾಜಕುಮಾರ ತಹಮಾಸೀಪನಿಗೂ ಹಿರಿಯಣ್ಣನ ವರ್ತನೆಯ ರುಚಿ ಹತ್ತಿದೆ. ರಾಜಕುಮಾರ ಅಲಿಯಗಿಂತಲೂ ಅಧಿಕವಾಗಿ ರಾಫನಿ ಧರ್ಮವನ್ನು ಆಚರಿಸುತ್ತಾನೆ' ಎಂದು ಹೇಳಿದರು. ಅದನ್ನು ಕೇಳಿದ ಇಬ್ರಾಹಿಮ ಆದಿಲಶಹನು ಅತ್ಯಂತ ಚಿಂತಾಗ್ರಸ್ತನಾದನು. ಪೃಥ್ವಿಯಲ್ಲಿಯ ಎಲ್ಲ ಜನರೂ ಅಲ್ಲಾನ ಜನರಾಗಿದ್ದಾರೆ. ಅವರ ಪಾಲನೆಯ ಸೂತ್ರಗಳನ್ನು ನಾನು ರಾಫನಿ ಧರ್ಮದ ಜನರ ಕೈಯಲ್ಲಿ ಹೇಗೆ ಕೊಡಲಿ'? ಎಂದು ಹೇಳುತ್ತ ತಹಮಾಸೀಪನನ್ನೂ ಬಂಧಿಸಿಟ್ಟನು. ರಾಜಧಾನಿಯ ಕೆಲಸಗಳನ್ನು ಅಲ್ಲಾನ ಇಚ್ಛೆಗೆ ಬಿಟ್ಟನು.

ಇಬ್ರಾಹಿಮ ಆದಿಲಶಹನ ರೋಗವು ಮುಂದುವರಿದು ಆತ ತಿರುಗಿ ಗುಣಮುಖವಾಗುವ ತಿಲಮಾತ್ರ ಲಕ್ಷಣಗಳೂ ಇಲ್ಲವೆಂದಾಗ, ಕಾರಭಾರಿ ಜನರು ಬೇರೆ ಯಾರನ್ನಾದರೂ ಸಿಂಹಾಸನದ ಮೇಲೆ ಕೂಡಿಸಬೇಕೆಂದು ಯೋಚಿಸಿದರು. ನಗರದಲ್ಲಿದ್ದ ಕಾರಭಾರಿ ಜನರು ತಹಮಾಸೀಪನನ್ನೆ ಗದ್ದುಗೆಯ ಮೇಲೆ ಕೂಡಿಸಬೇಕೆಂದು ವಿಚಾರಿಸಿದರು.

ಖಾಜಾ ಕಮಾಲ ಲ್ಯಾರಿ, ಆತನೇ ಅನಂತರ ಕಿಶ್ವರ ಖಾನೆಂದು ಹೆಸರಾಗಿದ್ದಾನೆ. ಆತ ಆ ಕಾಲದಲ್ಲಿ ಹೊಗರಿ ಮತ್ತು ಆ ತರಫದ ಬೇರೆ ಪರಗಣೆಗಳಲ್ಲಿ ಮಾಮಲೆದಾರನ ಕೆಲಸದ ಮೇಲಿದ್ದನು. ಆತನು ಆ ಪ್ರದೇಶದ ಕಂದಾಯವನ್ನು ವಸೂಲಿ ಮಾಡಿ ತನ್ನ ಹತ್ತಿರವೇ ಇಟ್ಟುಕೊಂಡನು. ಇಬ್ರಾಹಿಮ ಆದಿಲಶಹನು ಬೇನೆ ಬಿದ್ದಾಗ ಈತ ಊರೂರುಗಳಿಂದ ಕಂದಾಯವನ್ನು ವಸೂಲಿ ಮಾಡುತ್ತಿದ್ದನು. ವಸೂಲಿಯಾದ ಹಣವನ್ನು ರಾಜ್ಯ ಭಂಡಾರಕ್ಕೆ ಕಳಿಸುವ ಬದಲು, ಅಲಿ ಆದಿಲಶಹನ ರಾಜಧಾನಿಯ ಸಿದ್ಧತೆಯಲ್ಲಿ ಉಪಯೋಗ ಮಾಡಲು ತನ್ನಲ್ಲಿಯೇ ಇಟ್ಟುಕೊಳ್ಳುತ್ತಿದ್ದನು. ತನ್ನ ಬಳಕೆಯಲ್ಲಿದ್ದ ಕಾರಭಾರಿ ಜನರಿಗೂ, ಸ್ನೇಹಿತರಿಗೂ ಅಲಿ ಆದಿಲಶಹನನ್ನು ಗದ್ದುಗೆಯ ಮೇಲೆ ಕೂಡಿಸುವ ಕುರಿತು ಮಾತನಾಡುತ್ತಿದ್ದನು. ನೀವೂ ಈ ಕೆಲಸದಲ್ಲಿ ಅನುಕೂಲವಾದರೆ ನಿಮಗೂ ಉಪಯೋಗವಾಗುತ್ತದೆ' ಎಂದು ಅವರಲ್ಲೂ ಆಶೆಯನ್ನು ಬಿತ್ತಿದನು. ಅದರಂತೆ ಮಿರಜದಲ್ಲಿಯ ಕಿಲ್ಲೇದಾರ ಸಿಕಂದರಖಾನನಿಗೂ ನಿರೋಪವನ್ನು ಕಳಿಸಿದನು. 'ಇಂದು ಇಬ್ರಾಹಿಮ ಆದಿಲಶಹನು ಸತ್ತನು. ಇಲ್ಲಿಯ ಪ್ರತಿಯೊಬ್ಬರೂ ಬೇರೆ ಬೇರೆ ರೀತಿಯಲ್ಲಿ ವಿಚಾರ ಮಾಡುತ್ತಿದ್ದಾರೆ. ಆದ್ದರಿಂದ ಉತ್ತಮ ಮಾರ್ಗವೆಂದರೆ, ನೀವು ಅತಿ ಶೀಘ್ರವಾಗಿ ರಾಜಕುಮಾರ ಅಲಿಯನ್ನು ಸಿಂಹಾಸನದ ಮೇಲೆ ಕೂಡ್ರಿಸಿರಿ ಮತ್ತು ಬಾದಶಾಹಿ ಗೌರವದ ಛತ್ರ ಚಾಮರಗಳನ್ನು ಆತನ ಮಸ್ತಕದಮೇಲೆ ಧಾರಣ ಮಾಡಿಸಿರಿ' ಎಂದು ಹೇಳಿ ಕಳಿಸಿದನು. ಅದನ್ನು ಕಂಡ ಸಿಕಂದರಖಾನನಿಗೆ ಆತನ ಯೋಚನೆಯ ರೀತಿ ಸರಿ ಕಂಡಿತು. ಆಗ ಬಹಳಷ್ಟು ಜನ ಕಾರಭಾರಿ ಜನರನ್ನು ಕಾಮದಾರರನ್ನು ದೂರ-ದೂರದಿಂದ ಕರೆಸಿದನು. ಅವರನ್ನೆಲ್ಲ ಹಜರತ ಶಮಸುದ್ದೀನ ಮಿರಾನಸಾಹೇಬರ ದರ್ಗಾದಲ್ಲಿ ಸೇರಿಸಿದನು.

ಮೀರಾನ ಸಾಹೇಬರು ದಕ್ಷಿಣ ದೇಶದಲ್ಲಿ ದೊಡ್ಡ 'ಔಲಿಯಾ' ಎಂದರೆ ಸಿದ್ಧ ಪುರುಷರು ಎಂದು ಹೆಸರಾಗಿದ್ದಾರೆ. ಅವರ ರೋಜಾದಲ್ಲಿ ಸಭೆ ಸೇರಿಸಿ, ಕಾರ್ಯ ವಿಷಯವನ್ನು ಚರ್ಚಿಸಿ, ನಿರ್ಣಯವನ್ನು ಠರಾವಿಸಿದರು. ಮರುದಿನ ಅದು ಸುಮುಹೂರ್ತವು ಮತ್ತು ಉತ್ತಮ ದಿನವೂ ಆದದ್ದರಿಂದ, ಆ ದಿನ ಶಾಹಜಾದಾ ಅಲಿಯನ್ನು ಸದರೀ ದರ್ಗಾದಲ್ಲಿ ಕರೆಸಿ ಶ್ರೇಷ್ಠ ಸಮಾಧಿಯ ಎದುರು ರಾಜ್ಯಾಧಿಕಾರದ ತಲವಾರವನ್ನು ಆತನ ಟೊಂಕಕ್ಕೆ ಕಟ್ಟಿ ಬಾದಶಾಹಿ ಛತ್ರ ಚಾಮರಗಳನ್ನು ಆತನ ಮಸ್ತಕದ ಮೇಲೆ ಧಾರಣ ಮಾಡಿದರು. ನೆರೆದಿದ್ದ ಎಲ್ಲ ಜನರೂ ಕಪ್ಪ-ಕಾಣಿಕೆಗಳನ್ನು ಕೊಡಹತ್ತಿದರು. ಅದರ ಮರುದಿನ ಮಿರಜದಿಂದ ಹೊರಟು ಕೋಟೆಯ ಹೊರಗಡೆಗೆ ಬಂದು ಇಳಿದರು. ಆಗ ಕಿಶ್ವರಖಾನನು ತಾನು ಸಂಗ್ರಹಿಸಿದ ವಸೂಲಿ ಹಣವನ್ನು ಆ ದಿನದ ಖರ್ಚಿಗಾಗಿಯೇ ಸಂಗ್ರಹಿಸಿದ್ದನ್ನು, ಏನನ್ನೂ ವಿಚಾರಿಸದೆ ಅಲಿ ಆದಿಲಶಹನ ಹತ್ತಿರ ತಂದು ಕೊಟ್ಟನು. ಬಾದಶಹನು ಆ ಎಲ್ಲ ದ್ರವ್ಯವನ್ನು ಧರ್ಮಕಾರ್ಯಕ್ಕಾಗಿ ವಿನಿಯೋಗಿಸುತ್ತ, ತನ್ನ ನ್ಯಾಯ ಮತ್ತು ನೀತಿಯನ್ನು ಅಲ್ಲಿಯೇ ಪ್ರಕಟಿಸಿ ಎಲ್ಲರಲ್ಲಿ ಪ್ರಸಿದ್ಧನಾದನು. ಆ ವಿಷಯವನ್ನು ಕೇಳಿದ ಹತ್ತಿರದ ಹಾಗು ದೂರದ ಜನರು ಬಂದು ಬಾದಶಹನ ಭೆಟ್ಟಿಗಾಗಿ ಸುತ್ತುವರಿದರು.

ಬಾದಶಹನ ದಾತೃತ್ವದಿಂದಾಗಿ ಎಲ್ಲೆಡೆ ಸಣ್ಣ-ದೊಡ್ಡ ಜನರು ಸಂಪೂರ್ಣ ತೃಪ್ತರಾಗುತ್ತಿದ್ದರು. ಅಂಥ ಸಮಯದಲ್ಲಿಯೇ ಇಬ್ರಾಹಿಮ ಆದಿಲಶಹನು ತೀರಿಕೊಂಡನು. ಆಗ ಅಲಿ ಆದಿಲಶಹನು ಶೀಘ್ರವಾಗಿ ವಿಜಾಪುರದ ಕಡೆಗೆ ಹೊರಟನು. (ವಿಜಾಪುರ) ನಗರದಿಂದ ಒಂದು ಕೋಸು ಅಂತರದಲ್ಲಿ ಕಿಶ್ವರಖಾನನ ತೋಟವಿದೆ. ಅಲ್ಲಿ ಉಳಿದುಕೊಂಡನು. ಒಬ್ಬ ಸಂಭಾವಿತ ಬುದ್ಧಿವಂತ ಮನುಷ್ಯನನ್ನು ವಿಜಾಪುರಕ್ಕೆ ಕಳಿಸಿ ಅಲ್ಲಿಯ ಹವಾಲದಾರ ಜೈದಖಾನನ್ನು ಹಾಗು ಇತರ ದೊಡ್ಡ ಜನರನ್ನು ಬೆಟ್ಟಿಯಾಗಿ

ಇಬ್ರಾಹಿಮ ಆದಿಲಶಹನ ಪ್ರಕೃತಿ ಹೇಗಿದೆ? ಎಂದು ತಿಳಿದುಕೊಂಡು ಬರಲು ತಿಳಿಸಿದನು. ಕಾರಭಾರಿ ಜನರ ಮುಖದ ಮೇಲಿನ ಲಕ್ಷಣಗಳು ಅವರ ಮನೋಭಾವಗಳು ನಮ್ಮೊಂದಿಗೆ ಸಖ್ಯತ್ವವೆಂದು ಅನಿಸಿದರೆ, ಅವರಿಗೆಲ್ಲ ಅಭಯವನ್ನು ಕೊಟ್ಟು ಬರಲು ತಿಳಿಸಿದನು.

ವಿಜಾಪುರ ನಗರಕ್ಕೆ ಹಕೀಮ ಎಂದರೆ ಕಾಮದಾರ ಹಿಂದೂ ನೌಕರ ಜೈದಖಾನ ಎಂಬವನನ್ನು ನಗರದ ಬಂದೋಬಸ್ತಿಗಾಗಿ ಒಬ್ಬನನ್ನೇ ನಿಯಮಿಸಲಾಗಿತ್ತು. ಆತ ವಿಶ್ವಾಸಿಕ ಹಾಗೂ ಅದ್ವಿತೀಯನಾಗಿದ್ದ. ಅಂಥ ಸಮಯದಲ್ಲಿ ಪೃಥ್ವೀಪತಿ ಬಾದಶಹನು ಮರಣ ಹೊಂದಿದ್ದನು. ಆಗ ಜೈದಖಾನನು ನಗರದ ಬಾಗಿಲುಗಳನ್ನೆಲ್ಲ ಗಟ್ಟಿಯಾಗಿ ಮುಚ್ಚಿ ಜನರ ಹೋಗು-ಬರುವುದನ್ನು ನಿಲ್ಲಿಸಿದ್ದನು. ರಾಜಕುಮಾರರು ಬಂದು ಗದ್ದಲ ಹಾಕಬಹುದೆಂದು ಬಂದೋಬಸ್ತಿನಲ್ಲಿ ಅಧಿಕ ಎಚ್ಚರಿಕೆ ವಹಿಸಿದ್ದನು. ಕಾಮದಾರ ಜನರು ಕಾರಭಾರಿ ಜನರು ಜೈದಖಾನನಿಗೆ ಅದೆಷ್ಟೊ ತಿಳಿ ಹೇಳಿ. 'ಒಬ್ಬ ರಾಜಕುಮಾರರನ್ನಾದರೂ ಕರೆಸು. ಅಂದರೆ ಗದ್ದುಗೆಯಮೇಲೆ ಕೂಡಿಸೋಣ, ಬಾದಶಾಹಿ ಛತ್ರ ಚಾಮರಗಳನ್ನು ಆತನ ಮಸ್ತಕದ ಮೇಲೆ ಹಿಡಿಯೋಣ' ಎಂದು ಹೇಳಿದರು. ಜೈದಖಾನನು ಅವರಿಗೆ ಉತ್ತರ ಕೊಡುತ್ತ' ಅನೇಕ ಅಮೀರ ಜನರು ರಾಜಕುಮಾರ ಅಲಿಯನ್ನು ಸಿಂಹಾಸನದ ಮೇಲೆ ಕೂಡಿಸುವ ಯೋಜನೆಯನ್ನು ಹಾಕಿಕೊಂಡಿದ್ದಾರೆ, ಎಂದು ನನ್ನ ಕಿವಿಗೆ ಬಿದ್ದಿದೆ. 'ಒಂದು ವೇಳೆ ನಾವು ಇಲ್ಲಿ ಬೇರೊಬ್ಬ ರಾಜಕುಮಾರನನ್ನು ಕೂಡಿಸಿದರೆ ಸಂಕಟವನ್ನು ಆಹ್ವಾನಿಸಿ ಪ್ರಳಯಕ್ಕೆ ಕಾರಣವಾಗುತ್ತೇವೆ. ಅಮೀರ ಜನರಲ್ಲಿ ಮತ್ತು ಸರದಾರರಲ್ಲಿ ದ್ವೇಷಕ್ಕೆ ಕಾರಣವಾಗುತ್ತದೆ. ರಾಜ್ಯದ ಹಾಗು ಸೈನ್ಯದ ಕೆಡುಕಾಗಿ ದೊಡ್ಡ ನಾಶವಾಗುತ್ತದೆ. ಆದ್ದರಿಂದ ಸಮಾಧಾನ ಮಾಡಿಕೊಳ್ಳಿ, ಇಷ್ಟರಲ್ಲೆ ಎಲ್ಲೆಡೆ ಜನ ಅಲಿಯನ್ನು ಕರೆದುಕೊಂಡು ನಗರದ ಹೊರವಲಯದಲ್ಲಿ ಬಂದು ಇದೀಗ ಮುಟ್ಟುತ್ತಿದ್ದಾರೆ. ನಿಮ್ಮೆಲ್ಲರ ಅಭೀಪ್ಸೆ ಹಾಗೂ ಅವರೆಲ್ಲರ ಉದ್ದೇಶಗಳು ತಿಳಿದು ಬರುತ್ತವೆ. ನಿಮ್ಮ ಹಾಗೂ ಅವರ ಚರ್ಚೆಯಲ್ಲಿ ಏನೆಂದು ನಿರ್ಧರಿಸುತ್ತೀರೋ ಮತ್ತು ಯಾರನ್ನು ಸಿಂಹಾಸನದ ಮೇಲೆ ಕೂಡಿಸುವ ನಿಶ್ಚಯವನ್ನು ಮಾಡುವಿರೋ, ಆ ಸಮಯದಲ್ಲಿ ನಿಮ್ಮೆಲ್ಲರ ಜೊತೆಗೆ ನಾನೂ ಒಬ್ಬ ಸೇವಕನಾಗಿರುವೆ' ಎಂದು ಹೇಳುತ್ತ ಕಾರಭಾರಿ ಮಂಡಳಿಯನ್ನು ಸಮಾಧಾನ ಪಡಿಸುತ್ತ ಕಾಲಹರಣ ಮಾಡಿದನು.

ಅಷ್ಟರಲ್ಲಿ ಅಲಿಯ ಕಡೆಯಿಂದ ರಾಯಭಾರಿ ಬಂದು ಮುಟ್ಟಿದನು. ಆಗ ಎಲ್ಲೆಡೆಯ ಕಾರಭಾರಿ ಮಂಡಳಿ ಹಾಗು ಅಮೀರ ಉಮರಾವ್‌ರೂ ಸೇರಿ ಸಭೆ ನಡೆಸಿದರು. ಈ ವಿಷಯದಲ್ಲಿ ಒಬ್ಬರೊಬ್ಬರು ವಿಚಾರಿಸ ಹತ್ತಿದರು. ಸಭೆಯಲ್ಲಿ ಮುಖ್ಯ-ಮುಖ್ಯ ಜನರು ಬುದ್ಧಿವಂತಿಕೆಯಿಂದ ಮಾತನಾಡಿದರು. ಯಾರಿಗೆ ಏನು ಅನಿಸುತ್ತಿದೆಯೋ ಹಾಗೆ ಅವರು ಮಾತನಾಡುತ್ತಿದ್ದರು. ಆಗ ಜೈದಖಾನನು ಒಮ್ಮೆಲೇ ಸಭೆಯಲ್ಲಿ ಎದ್ದು ನಿಂತು, ಏರಿದ ಧ್ವನಿಯಲ್ಲಿ ಮಾತನಾಡಿದನು. " ಈಗ ಎಲ್ಲೆಡೆ ಸಿಪಾಯಿ ಮಂಡಳಿ, ಸಣ್ಣ ದೊಡ್ಡವರು ಕೂಡಿ ಶಾಹ ಅಲಿಯನ್ನು ಸಿಂಹಾಸನದ ಮೇಲೆ ಕೂಡಿಸುವ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಅಲಿಯು ಸರ್ವರಿಗೂ ಮಾನ್ಯನಾಗಿದ್ದಾನೆ. ಈಗ 'ಅಲಹಮದುಲ್ಲಿಲ್ಲಾಹ' ಎಂದರೆ 'ಅಲ್ಲಾನನ್ನು ಸ್ತುತಿಸೋಣ' ಎಂದು ಹೇಳಿ 'ಅದು ಉತ್ತಮ ವಿಚಾರ, ನಾನು ಕೂಡ ಎಲ್ಲ ಸೇವಕರಲ್ಲಿಯ ಒಬ್ಬ ಸೇವಕ, ಪುರಾತನ ಚಾಕರನಿದ್ದೇನೆ' ಎಂದು ಹೇಳಿ, ಅಲ್ಲಾನ ದಿಕ್ಕಿಗೆ ಮುಖ ಮಾಡಿ ಸೇವಕತನದಿಂದ ನಮನ ಮಾಡಿದನು. ಅನಂತರ ಸಭೆಯಲ್ಲಿಯ ಎಲ್ಲರ ವಿಚಾರವು ಒಂದೇ ಆಯಿತು. ಶಾಹ ಅಲಿಗೆ ಒಂದು ವಿನಂತಿ ಪತ್ರವನ್ನು ಬರೆದರು. ಅದರಲ್ಲಿ ಪರ್ಶಿಯನ್ ಭಾಷೆಯ ಒಂದು ದ್ವಿಪದಿಯನ್ನು ಬರೆಯಲಾಯಿತು. ಅದರ ಅರ್ಥ:

*"ನನ್ನ ಕಣ್ಣಬಿಲ್ಲಿನಲ್ಲಿ ನಿನಗೆ ಉಳಿದುಕೊಳ್ಳಲು ಸ್ಥಾನವಿದೆ.*
*ಕೃಪೆ ಮಾಡಿ ಹೊರಟು ಬಾ, ಇದು ನಿನ್ನ ಮನೆಗಳಲ್ಲೊಂದಾದ ಮನೆಯೇ ಆಗಿದೆ"*

ಹೀಗೆ ವಿನಂತಿ ಪತ್ರವನ್ನು ಬರೆದು ಅಲಿಯ ಕಡೆಯಿಂದ ಬಂದ ರಾಯಭಾರಿಯ ಜೊತೆಗೆ ಕಳಿಸಿಕೊಟ್ಟರು. ಜನರು, ನಗರದಲ್ಲಿಯ ಕಾರಭಾರಿಗಳು, ಕಾಮಗಾರರು, ಸರದಾರರು, ಕಾಜಿಗಳೇ ಇತ್ಯಾದಿಯಾಗಿ ಸಣ್ಣ ದೊಡ್ಡವರೆಲ್ಲ ಎದುರಿಗೆ ಹೋಗಿ ಶುಭಾಶಯಗಳನ್ನು ಹೇಳುತ್ತ, ಎಲ್ಲರೂ ಅಲಿಯನ್ನು ಸತ್ಕರಿಸಿ ನಜರನ್ನು ಒಪ್ಪಿಸಿದರು. ಅಲಿಯು ಅವರಿಗೆಲ್ಲ ಬಹುಮಾನಗಳನ್ನು ಕೊಡುತ್ತ ಅವರೆಲ್ಲರ ಮನೋರಥಗಳನ್ನು ಪೂರ್ತಿಗೊಳಿಸಿದನು.

ಶಾಹ ಅಲಿಯು ಜೈದ ಖಾನನಿಗೆ ನಿರೋಪ ಕಳಿಸಿದನು. ಇದು ಗೊತ್ತಿದ್ದ ಪ್ರಸಿದ್ಧ ವಿಷಯವೇ ಆಗಿದೆ. ಅದೇನೆಂದರೆ "ಇಬ್ಬರು ಬಾದಶಹರು ಒಂದೇ ರಾಜ್ಯವನ್ನು ಆಳುವಂತಿಲ್ಲ. ಮೂವರು ರಾಜಕುಮಾರರು ಕೋಟೆಯೊಳಗಡೆ ಇರುತ್ತಿದ್ದಾರೆ. ಆಗ ನಾನು ಬರುವುದು ಹೇಗೆ? ರಾಜಕುಮಾರರು ಅಲ್ಲಿದ್ದರೆ ಅವರಿಂದಾಗಿ ಸಾವಿರಾರು ವಿಘ್ನಗಳು ಉತ್ಪನ್ನವಾಗುವುವು. ಒಂದುವೇಳೆ ನೀವು ಕಳಿಸಿದ ವಿನಂತಿ ಪತ್ರವು ಸ್ನೇಹದ ಮಾರ್ಗದಲ್ಲಿದ್ದರೆ, ಮೂವರೂ ರಾಜಕುಮಾರರನ್ನು ನನ್ನಲ್ಲಿಗೆ ಕಳಿಸಿಕೊಡಬೇಕು ಇಲ್ಲವೆ ಅವರ ಕಣ್ಣುಗಳನ್ನು ಕೀಳಬೇಕು" ಎಂದು ಹೇಳಿ ಕಳಿಸಿದನು. ಅದಕ್ಕೆ ಪ್ರತಿಯಾಗಿ ಜೈದ ಖಾನನು 'ಪ್ರಭುಗಳು ಒಬ್ಬ ವಿಶ್ವಾಸಿಕ ನೌಕರರನ್ನು ಈ ಕೆಲಸಕ್ಕಾಗಿ ಕಳಿಸಿದರೆ ತಮ್ಮ ಆಜ್ಞೆಯಂತೆ ಕೆಲಸವನ್ನು ಪೂರೈಸಲಾಗುವುದು" ಎಂದು ಹೇಳಿ ಕಳಿಸಿದನು. ಆಗ ಶಾಹ ಅಲಿಯು 'ಇಆತೇಮದಖಾನ' ಎಂಬ ಸೇವಕನನ್ನು ಈ ಕೆಲಸಕ್ಕಾಗಿ ಕಳಿಸಿದನು. ಆತನು ಬಂದು ಬಾದಶಹರ ಆದೇಶದಂತೆ ಮೂವರ ಕಣ್ಣುಗಳನ್ನು ಕಿತ್ತಿದನು. ಅನಂತರ ಅಲಿ ಆದಿಲಶಹನು ಜೋಯಿಸರು ಹೇಳಿದ ಒಂದು ಸುಮುಹೂರ್ತದಲ್ಲಿ ನಗರವನ್ನು ಪ್ರವೇಶಿಸಿದನು; ತನ್ನ ತಂದೆಯ ಸಿಂಹಾಸನದ ಮೇಲೆ ಕುಳಿತು ಸಿಂಹಾಸನಕ್ಕೆ ಮತ್ತೆ ಶೋಭೆಯನ್ನು ತಂದನು.

ಎಲ್ಲ ಜನರಿಗೂ ನ್ಯಾಯದಿಂದ ನಡೆಯುತ್ತ ಬಹುಮಾನಗಳನ್ನು ನೀಡುತ್ತ, ಸುಖದಿಂದ ಇರುವಂತೆ ನೋಡಿಕೊಂಡನು. ದರಬಾರದಲ್ಲಿಯ ಕೆಲಸಗಾರರಿಗೆ, ಕಾರಭಾರಿಗಳಿಗೆ ಅವರ ಯೋಗ್ಯತೆಯನ್ನು ಅಧಿಕಗೊಳಿಸುತ್ತ, ಉಂಬಳಿಗಳನ್ನು ಹಾಕಿ ಕೊಡುತ್ತ, ಪದವಿ ಮತ್ತು ಬಿರುದುಗಳನ್ನು ನೀಡಿ ಸಂತೋಷಪಡಿಸಿದನು. ಗದ್ದುಗೆಯ ಮೇಲೆ ಕುಳಿತ ಮೊದಲ ದಿನವೇ ಅಲಿಯ ಆದೇಶದಂತೆ 'ಅಲಿಯಾವಲಿಲ್ಲಾಹ' ಎಂಬ ಶಬ್ದವು ಅಜಾನದ ಕಲಮಿನಲ್ಲಿ ಬೆಳೆಸಿದನು ಮತ್ತು 'ಖುತಬಾ'ವನ್ನು ಖಲೀಫರ ಹೆಸರಿನಲ್ಲಿದ್ದುದನ್ನು ನಿಲ್ಲಿಸಿ, ಹನ್ನೆರಡು ಇಮಾಮರ ಹೆಸರಿನಲ್ಲಿ ಓದಿಸಿದನು. ತಂದೆಯ ಕಾಲದಲ್ಲಿದ್ದ ಎಲ್ಲ ನಡವಳಿಕೆಗಳನ್ನು ಕಾನೂನುಗಳನ್ನು ಬದಲಿಸಿ, ಅಜ್ಜನ ಹಾಗೂ ಮುತ್ತಜ್ಜನ ಕಾಲದ ಧರ್ಮವನ್ನು ಆಚರಣೆಯಲ್ಲಿ ತಂದನು. ಶಿಯಾ ಧರ್ಮವನ್ನು ಆಚರಿಸುವ ವಿಷಯದಲ್ಲಿ ಮತ್ತು ಶಿಯಾ ಧರ್ಮದ ಜನರ ಪಾಲನೆಗಾಗಿ ಅತ್ಯಂತ ಯತ್ನ ಮಾಡಿದನು. ಆ ಸಮಯದಲ್ಲಿ ವಿಜಾಪುರ ರಾಜಧಾನಿಯಲ್ಲಿ ಇರಾನ, ತುರಾನ, ಕಿರ್ಮಾನ ಮತ್ತು ಖುರಾಸಾನದ ಜನರು ಬಂದು ಸೇರಿದರು. ಮೂರುಸಾವಿರ ಜನರನ್ನು ಅವರಿಗೆ 'ತಬರಾಯಿ' ಎಂಬ ಹೆಸರು. ಅವರ ಕೆಲಸವೇ ಸುನ್ನಿ ಜನರನ್ನು ದೂಷಿಸುವುದು. ಅವರನ್ನು ಆ ಬಡಬಡಿಸುವ ಕೆಲಸಕ್ಕಾಗಿಯೇ ನಿಯಮಿಸಿಕೊಂಡನು. 'ಅಸ್ತಗಫರುಲ್ಲಾಹ ಅಲ್‌ಅಜೀಬ' ಎಂದು ಜನರು ಸೇರಿದಲ್ಲೆಲ್ಲ, ದರಬಾರದಲ್ಲಿ, ಗಲ್ಲಿಗಳಲ್ಲಿ ಮತ್ತು ಬಜಾರುಗಳಲ್ಲಿ ಎಲ್ಲೆಡೆ ಅವರು ಬಡಬಡಿಸಹತ್ತಿದರು.

ಆಕಾಲದಲ್ಲಿ ಇಡೀ ನಗರದಲ್ಲಿ ಎಲ್ಲ ಜನರು ಒಂದೇ ಒಂದು ಜುಮ್ಮಾ ಮಸೀದಿಯಲ್ಲಿ ನಮಾಜನ್ನು ಪಠಿಸುತ್ತಿದ್ದರು. ಅದನ್ನು ಕೂಡ ಶತಾವಧಿ ಸಂಕಟಗಳಿಂದ ಇಫ್ತೀಯಾರಖಾನ ಎಂಬ ಒಬ್ಬ ಅಮೀರನು ಕಟ್ಟಿಸಿದ್ದನು. ಸುನ್ನೀ ಧರ್ಮದ ಆಚರಣೆಯಲ್ಲಿ ಆತನು ನಿಸ್ಸೀಮನು. ಕಟ್ಟರ್ ಸುನ್ನಿಯಾಗಿದ್ದನು. ಆತನು ಶುಕ್ರವಾರ ದಿನ ತನ್ನ ಅಧಿಕಾರದಲ್ಲಿದ್ದ ಜನ ಸಹಿತವಾಗಿ, ತಲವಾರ ಇತ್ಯಾದಿ ಶಸ್ತ್ರಗಳಿಂದ ಸಿದ್ಧನಾಗಿಯೇ ಈ ಹಳೆಯ ಜುಮ್ಮಾ ಮಸೀದಿಗೆ ಬರುತ್ತಿದ್ದನು. ಮಸೀದಿಯ ಬಾಗಿಲನ್ನು ಗಟ್ಟಿಯಾಗಿ ಮುಚ್ಚಿ, ತೋಫು ಬಂದೂಕು ಮತ್ತನೇಕ ಹತ್ಯಾರಗಳನ್ನು ಹಿಡಿದ ಜನರನ್ನು ಪಹರೆಗಾಗಿ ಮಸೀದಿಯ ಮಂಟಪದಲ್ಲಿ ಇಟ್ಟು, ಅವರನ್ನು ಕಾಯಲು ಶೂರರು-ಧೈರ್ಯವಂತರನ್ನು ನಿಯಮಿಸಿ, ತನ್ನ ಸಹಚರರೊಂದಿಗೆ ಖುತಬಾ ಹಾಗು ನಮಾಜನ್ನು ಪಠಿಸುತ್ತಿದ್ದನು. ಒಂದು ವೇಳೆ ಈ ರೀತಿಯ ಬಂದೋಬಸ್ತನ್ನು ಇಟ್ಟಿರದಿದ್ದರೆ ಮಿಂಬರ (ಪ್ರಾರ್ಥನಾ) ಕಟ್ಟೆಯ ಮೇಲೆ ನಿಂತು 'ಖುಲಫಾಯರಾಶದ್ದೀನ' ಅವರ ಹೆಸರನ್ನು ಉಚ್ಚರಿಸುವ ಸಾಮರ್ಥ್ಯವಿರುತ್ತಿರಲಿಲ್ಲ. ಹನಫಿ ಧರ್ಮದ ಧರ್ಮಾಚರಣೆಯನ್ನು ಮಾಡುವ ಜನರು ಈ ಹೊಸದಾಗಿ ಉತ್ಪನ್ನವಾದ ಸಂಕಟದಿಂದ ಖಿನ್ನರಾಗಿ, ತಂತಮ್ಮಲ್ಲಿ ಯೋಜನೆಗಳನ್ನು ಹಾಕಿಕೊಳ್ಳುತ್ತ ದಂಗೆ ಏಳುವ, ಯುದ್ಧ ಮಾಡುವ ವಿಚಾರದಲ್ಲೂ ಇದ್ದರು. ಅಷ್ಟರಲ್ಲಿ ಸಂಕಟ ಎದ್ದು ನಿಲ್ಲುವುದಿತ್ತು.

ಆದರೆ ಅಲಿ ಆದಿಲಶಹನು ತನ್ನ ಉತ್ತಮ ನಡತೆ, ದಾನಗುಣ ಧಾರ್ಮಿಕತೆ, ಉತ್ತಮ ಸ್ವಭಾವಗಳಿಂದಾಗಿ ನ್ಯಾಯದಿಂದ ನಡೆದುಕೊಂಡನು. ರೈತರು ಮತ್ತು ಬಡವರ ಮೇಲೆ ದಯೆಯನ್ನು ತೋರಿಸುತ್ತ ಉಪಕಾರ ಮಾಡುತ್ತಿದ್ದನು. ವಿದ್ವಾಂಸರ ಹಾಗೂ ಗುಣಿಜನರ ಗೌರವ ಹೇಗೆ ಆಗಬೇಕೋ ಹಾಗೆ ಮಾಡುತ್ತಿದ್ದನು. ನಿರಾಶ್ರಿತ ಜನರು ಹಾಗೂ ಅತ್ಯಾಚಾರಕ್ಕೊಳಗಾದ ಜನರ ನ್ಯಾಯವನ್ನು ಶೀಘ್ರವಾಗಿ ತೆಗೆದುಕೊಳ್ಳುತ್ತಿದ್ದನು. ಯಾಚಕರಿಗೆ ಮತ್ತು ಫಕೀರರಿಗೆ ಬಹಳಷ್ಟು ಧನವನ್ನು ನೀಡುತ್ತಿದ್ದನು. ಇಬ್ರಾಹಿಮ ಆದಿಲಶಹನ ಕಾಲದಲ್ಲಿ ತಮ್ಮ ಶಿಯಾ ಧರ್ಮದ ಆಚರಣೆಯನ್ನು ಮುಚ್ಚಿ ಬಹಿರಂಗದಲ್ಲಿ ಕಪಟ ಮನದಿಂದ ನಾವೂ ಸುನ್ನಿ ಧರ್ಮದವರು ಎಂದು ತೋರಿಸಿ ಕೊಳ್ಳುತ್ತಿದ್ದರೋ ಅಂಥ ಇನ್ನಷ್ಟು ಜನರು ಈಗ ಶಿಯಾ ಧರ್ಮದ ಮುಚ್ಚಳಿಕೆಯ ಪರದೆಯನ್ನು ಮುಖದಿಂದ ತೆಗೆದೊಗೆದು, ಬಹಿರಂಗದಲ್ಲಿಯೆ ಶಿಯಾ ಧರ್ಮವನ್ನು ಆಚರಿಸಹತ್ತಿದರು. ಸುನ್ನಿ ಧರ್ಮದ ಜನರ ತಕ್ಕಡಿಯೂ ಸಾಕಷ್ಟು ಭಾರವಾಗಿತ್ತು. ಅದರಿಂದಾಗಿ ಸಂಕಟ ಉತ್ಪನ್ನವಾಗಿದ್ದರೂ ಅದು ನಂದಿತು. ಶಿಯಾ ಧರ್ಮ ಹಾಗು ಸುನ್ನಿ ಧರ್ಮದ ಜನರ ಮಧ್ಯದ ಕಲಹ ನಿಂತಿತು. ಬಾದಶಹನು ನ್ಯಾಯದಿಂದ ಮತ್ತು ಇತರರು ತಮ್ಮ ಧರ್ಮದಿಂದ ನಡೆದುಕೊಳ್ಳಲು ಅವಕಾಶಮಾಡಿಕೊಟ್ಟರೆ, ಈ ಎರಡು ಕಾರಣಗಳಿಂದ ಅಪರಾಧಗಳು ಕಡಿಮೆಯಾಗಿ ನಷ್ಟ ಸಂಭವಿಸುವುದು ಸಾಧ್ಯವಾಗುವುದಿಲ್ಲ ಎಂಬುದು ಸತ್ಯವಾಗಿದೆ. ಯಾವ ಸಮಯದಲ್ಲಿ ರಾಜಧಾನಿಯಲ್ಲಿ ನ್ಯಾಯ ಹಾಗೂ ಧರ್ಮಗಳು ಈ ಎರಡರ ನಡಾವಳಿಕೆಗಳು ಒಂದೆಡೆ ಸೇರಿದರೆ, ಅಲ್ಲಿ ಮಿತ್ರತೆಯಿಂದ ಅಥವಾ ಶತ್ರು ಬಾಧೆಯನ್ನು ಸೃಷ್ಟಿಸುವ ಸ್ಥಳವೇ ಉಳಿಯುವುದಿಲ್ಲ.

ಅಲಿ ಆದಿಲಶಾಹನು ಬುದ್ಧಿವಂತ ಧರ್ಮನಿಷ್ಠ, ಸುಲಕ್ಷಣಿಕ ಪ್ರಕೃತಿಯವನೂ ದಯಾವಂತನೂ ಆಗಿದ್ದನು. ಜ್ಞಾನ ಸಂಪಾದನೆಗಾಗಿ ಮೊದಲು ಕಲಿಯ ಬೇಕಾದದ್ದನ್ನು ಕಲಿತು, ಅನಂತರ ಮತೀಕ, ಹಿಕಮತ, ನುಹುಸರ್ಪ ಮತ್ತು ಸರ್ಫ ಇತ್ಯಾದಿ ಗ್ರಂಥಗಳನ್ನು ಗುರುಮುಖದಿಂದಲೇ ಕಲಿತಿದ್ದನು. ವಿವಿಧ ವಿದ್ಯೆಗಳ ವಿವಿಧ ಪಾಠಗಳು ಅವನಿಗೆ ಬಾಯಿಪಾಠವಾಗಿದ್ದುವು. ಆತನ ಬರವಣಿಗೆಯೂ ಸುಂದರವಾಗಿತ್ತು. ಸುಲಸ, ನಕ್ಷ್, ಹಾಗೂ ರುಕಾಅ ಈ ಮೂರು ಪ್ರಕಾರದ ಲಿಪಿಯಲ್ಲಿ ಅಕ್ಷರಗಳನ್ನು ಬಹಳ ಸುಂದರವಾಗಿ ಬರೆಯುತ್ತಿದ್ದನು. ಫಕೀರನಂತೆ, ವಿರಕ್ತನಂತೆ ಉದಾಸೀನ ವ್ಯಕ್ತಿಯಂತೆ ಇರುತ್ತಿದ್ದನು. ಯಾವುದೇ ವಸ್ತುವನ್ನು

ಕುರಿತು ತನ್ನ ಸುಖಕ್ಕಾಗಿ ಆಗ್ರಹ ಮಾಡುತ್ತಿರಲಿಲ್ಲ. ತಪ್ಪಿಯೂ ಕೂಡ ತನ್ನ ಮೈಮೇಲೆ ಅಲಂಕಾರದ ಆಭರಣಗಳನ್ನು ಧರಿಸಿ ನಟಿಸುತ್ತಿರಲಿಲ್ಲ. ಬಾದಶಾಹಿ ಗುದ್ದುಗೆಯ ಮೇಲೆ ಕುಳಿತನೆಂದರೆ ನ್ಯಾಯ, ತೀರ್ಪು, ದಯೆ, ಕೃಪೆ, ಹಾಗೂ ಬಹುಮಾನ ಕೊಡುವುದು ಧರ್ಮದಿಂದ ನಡೆಯುವುದು ಇವುಗಳೇ ಆತನ ಮಾರ್ಗಗಳಾಗಿದ್ದುವು. ಒಂದರ್ಥದಲ್ಲಿ ವಿಶ್ವದಲ್ಲಿ ಈ ಲಕ್ಷಣಗಳ ಧ್ವಜವನ್ನು ನೆಟ್ಟಿದ್ದನು.

ಸಿಪಾಯಿ ಜನರು, ಸೈನಿಕರು, ಸರದಾರರು ವಿದ್ವಾಂಸರು, ಗೌರವಾನ್ವಿತರು, ಕವಿಗಳು, ಬಡವರು, ಫಕೀರರು ಮೊದಲಾದ ಜನರ ಬಗ್ಗೆ ತುಂಬ ಪ್ರೀತಿ. ಇಬ್ರಾಹಿಮ ಆದಿಲಶಹನು ಬಹಳ ಕಷ್ಟಪಟ್ಟು, ಬಹುಶ್ರಮದಿಂದ ಒಂದು ಕೋಟಿ ಐವತ್ತು ಲಕ್ಷ ಹೊನ್ನನ್ನು ಸಂಗ್ರಿಹಿಸಿದ್ದನ್ನು ಈ ಜನರಿಗೆ ಉದಾರವಾಗಿ ಕೊಡುತ್ತಿದ್ದನು. ಒಂದು ವೇಳೆ ಹಿಂದೂ ಜನರ ಜಾತಿಯ ಸಾಧು ಇದ್ದರೂ ಅವನ ಪರೀಕ್ಷೆ ಮಾಡುತ್ತಿದ್ದನು. ಆ ಸಾಧುವಿನಲ್ಲಿ ಒಳ್ಳೆಯ ಲಕ್ಷಣಗಳಿದ್ದರೆ ಅವನ ಸಂರಕ್ಷಣೆಗಾಗಿ ವ್ಯವಸ್ಥೆ ಮಾಡಿ ಪಾಲನೆ ಮಾಡುತ್ತಿದ್ದನು. ಇಲ್ಲದಿದ್ದರೆ ಏನಾದರೂ ಕೊಟ್ಟು ಕಳಿಸುತ್ತಿದ್ದನು. ರಾಜ್ಯದ ಮೇಲೆ, ರಾಣಿಯರ ಮೇಲೆ (ಸ್ತ್ರೀಯರು) ಎಂದೂ ಮರುಳಾಗುತ್ತಿದ್ದಿಲ್ಲ. ವಿಶ್ವದಲ್ಲಿಯ ವಿಷಯೋಪಭೋಗವು ಆತನ ಎದುರಿಗೆ ಎಂದಿಗೂ ಯೋಗ್ಯತೆಯನ್ನು ಪಡೆಯುತ್ತಿರಲಿಲ್ಲ. ರಾಜ್ಯದ ಎಲ್ಲ ಕಾರ್ಯಗಳನ್ನು ಅಧಿಕಾರಿಗಳಿಗೆ ಒಪ್ಪಿಸಿ. ತಾನು ಮುಕ್ತನಾಗಿರುತ್ತಿದ್ದನು. ಯಾವಾಗಲಾದರೂ ಆಸ್ಥಾನದ ಜನರೊಂದಿಗೆ ಬೆರೆತು ಕೂಡುತ್ತಿದ್ದನು. ಆಗ ಐದಾರು ಗಳಿಗೆಗಳ ಕಾಲ ನಾಲ್ಕೂ ಕಡೆಯ ವಿಷಯಗಳನ್ನು ಮಾತನಾಡುತ್ತಿದ್ದನು. ಮಾತು-ಕಥೆಗಳನ್ನು ಕೇಳಿ ತನ್ನ ಚಿತ್ತವನ್ನು ಸಮಾಧಾನ ಪಡಿಸುತ್ತಿದ್ದನು. ಸಭೆಯಿಂದ ಎದ್ದು ಹೊರಡುವಾಗ,

*"ನೋಡಿದಿರಲ್ಲ, ವ್ಯರ್ಥವಾಗಿ ನಾನು ಎಷ್ಟು ಬಡಬಡಿಸಿದೆನಲ್ಲ. ಈ ವೃಥಾ*
*ಹರಟೆಯ ಬದಲು ರಾಜ್ಯದಲ್ಲಿ ವಾಸಿಸುತ್ತಿರುವ ಜನರ*
*ಪ್ರದೇಶ ಹಾಗೂ ವಸೂಲಿಯ ವಿಚಾರದಲ್ಲಿ ನಾವಿರಬೇಕು, ಈಗ*
*ಹೋಗಿ ಒಂದಿಷ್ಟು ಮಲಗುವೆ. ಒಂದು ವೇಳೆ ಆಯುಷ್ಯದ*
*ಅವಶೇಷವಿದ್ದರೆ ಮತ್ತೆ ಪುನಃ ಮಾತನಾಡುವೆ ಮತ್ತು ಕೇಳುವೆ"*

ಎಂದೆಲ್ಲ ಹೇಳುತ್ತಿದ್ದನು. ಬಾದಶಹನ ನಡತೆ ಹಾಗೂ ಇರುವಿಕೆಯು ಫಕೀರನಂತೆ ಇರುವ ವಿಷಯವು ನೆರೆಯ ರಾಜ್ಯದ ಜನರ ಕಿವಿಗೆ ಬಿದ್ದು, ಫಕೀರನ ನಡತೆಯ ಬಾದಶಹನ ಭ್ರಾಂತಿ, ನಿಷ್ಕಾಳಜಿ ಮತ್ತು ಮೂರ್ಖತನದ ಅವಕಾಶ ಮಾಡಿಕೊಂಡು ಆಶೆಯ ಹಲ್ಲನ್ನು ಮುಂದೆ ಮಾಡಿದರು. ಈ ರಾಜ್ಯವನ್ನು ಕಬಳಿಸುವ ಆಶೆ ಅವರಲ್ಲಿ ಹುಟ್ಟಿತು. ಅವರ ನೀಚ ಉತ್ಪತ್ತಿಯ ಸ್ವಭಾವವು ಆಚರಣೆಯಲ್ಲೂ ಬಂದಿತು. ಸೈನ್ಯ ತೆಗೆದುಕೊಂಡು ಆದಿಲಶಾಹನ ಪ್ರದೇಶದ ಮೇಲೆ ಬಂದರು. ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿ ಹಸ್ತಗತ ಮಾಡಿಕೊಳ್ಳ ಬಯಸಿದರು. ಬಾದಶಹನು ಮೊದಲು ಅವರೊಂದಿಗೆ ಸ್ನೇಹ ಬೆಳೆಸಿ ಈ ವಿಘ್ನವನ್ನು ಕಳೆಯಬೇಕೆಂದು ಯತ್ನ ಮಾಡಿದನು. ಆದರೆ ಉಪಯೋಗವಾಗಲಿಲ್ಲ. ಆದ್ದರಿಂದ ವಿಜಯನಗರದ ಬಾದಶಹ ರಾಮರಾಜನೊಂದಿಗೆ ಮಿತ್ರತೆಯನ್ನು ಬೆಳೆಸುವುದೆಂದು ನಿರ್ಧರಿಸಿದನು. ಕಿಶ್ವರಖಾನ, ಅಬುದರಾವ ಮತ್ತು ಸಿರಾಜಿ ಉಭಯತರೊಂದಿಗೆ ಜಡಜವಾಹಿರಗಳನ್ನು, ಭಾರೀ ಕಿಮ್ಮತ್ತಿನ ವಸ್ತ್ರಗಳನ್ನು ಕೊಟ್ಟು ಕಳಿಸಿದನು. ಅಲಿ ಆದಿಲಶಹನು ಸ್ವಖುಶಿಯಿಂದ ವಿಜಯ ನಗರಕ್ಕೆ ಬಂದು ರಾಮರಾಜನನ್ನು ಭೆಟ್ಟಿಯಾಗಿ ಸಮಕ್ಷಮದಲ್ಲಿ ಮಾತನಾಡಿ ಸ್ನೇಹವನ್ನು ಬೆಸೆಯುವುದು ಹಾಗು ಇಬ್ಬರೂ ಕೂಡಿ ಒಬ್ಬರೊಬ್ಬರ ಸಹಾಯದಿಂದ ಶತ್ರುಗಳನ್ನು ಸಂಹರಿಸುವುದು ಎಂಬ ಪ್ರತಿಜ್ಞೆ ಹಾಗು ಕರಾರು ಅವರ ಮಾತುಕತೆಗಳಲ್ಲಿ ನಿರ್ಧಾರವಾಯಿತು.

### ೩. ರಾಮರಾಜನ ಭೆಟ್ಟಿಗಾಗಿ ಅಲಿ ಆದಿಲಶಹನು ವಿಜಯನಗರಕ್ಕೆ ಹೋಗಿದ್ದು :

ಅಲಿ ಆದಿಲಶಹನು ಕರಾರಿನಂತೆ ವಿಜಯ ನಗರಕ್ಕೆ ಹೋಗಲು ನಿಶ್ಚಯಿಸಿದನು. ಅದೇ ಸಮಯದಲ್ಲಿ ಒಂದು ಹೊಸ ಸುದ್ದಿ ಬಂದಿತು. ರಾಮರಾಜನ ಮಕ್ಕಳಲ್ಲಿಯ ಒಂದು ಚಿಕ್ಕ ಮಗು, ರಾಮರಾಜನ ಅಧಿಕ ಪ್ರೀತಿಯ ಮಗು ತೀರಿಕೊಂಡಿತ್ತು. ಆತನಿಗೆ ಸಾಂತ್ವನ ಹೇಳಲು ವಿಜಯನಗರಕ್ಕೆ ಹೋಗಲು ಇದೂ ಒಂದು ಕಾರಣವಾಯಿತು. ಆದಿಲಶಾಹನು ಸಾವಿರಾರು ಸಂಶಯಗಳು ಹಾಗು ಭಯ ಮನದಲ್ಲಿದ್ದರೂ ಅಲ್ಲಾನ ಕೃಪೆಯ ಮೇಲೆ ಭರವಸೆಯನ್ನು ಇಟ್ಟು, ವಿಜಯನಗರಕ್ಕೆ ಹೋಗಲು ವಿಜಾಪುರದಿಂದ ಹೊರಟನು.[೧]

ಅಲಿ ಆದಿಲಶಹನು ಇತ್ತ ಬರುತ್ತಾನೆಂಬ ಸುದ್ದಿಯನ್ನು ಕೇಳಿ ರಾಮರಾಜನು ಅವನನ್ನು ಎದುರುಗೊಳ್ಳಲು ಒಬ್ಬ ಶ್ರೇಷ್ಠ ಸರದಾರನನ್ನು ನಿಯಮಿಸಿದನು. ಆತನು ಕೃಷ್ಣಾನದಿಯ ತೀರದ ಸರಹದ್ದಿನಿಂದಲೇ ಅವನನ್ನು ಆದರಿಸಿ, ಪ್ರತಿ ಮುಕ್ಕಾಮಿನಲ್ಲೂ ಆದರ, ತಾರತಮ್ಯ ಮತ್ತು ಸರಬರಾಜಿನ ಬಂದೋಬಸ್ತನ್ನು ಇಟ್ಟು, ನಿತ್ಯ ಮೇಜವಾನಿಯನ್ನು ಮಾಡಿಸುತ್ತ, ಬಾದಶಹನ ಪ್ರೀತಿಯ ವಸ್ತುಗಳನ್ನು ಪೂರೈಸುತ್ತ ಪ್ರಾಣಪ್ರಿಯ ಅತಿಥಿಯ ಆದರವನ್ನು ಮಾಡುವಂತೆ ಕಾಣಿಕೆಗಳನ್ನು ಕೊಡುತ್ತ, ಅತ್ಯಂತ ಆದರದಿಂದ ಬಾದಶಹನನ್ನು ಕರೆದುಕೊಂಡು ಬರಲು ಹೇಳಿದನು. ಆದಿಲಶಹನ ಮಂಡಳಿಯು ಕೃಷ್ಣಾನದಿಯನ್ನು ದಾಟಿ. ಇನ್ನೊಂದು ದಡಕ್ಕೆ ಬಂದಾಗ ವಿಜಯನಗರದ ಸರದಾರ ಪರಿವಾರದವರು ಅತಿ ಆದರವನ್ನು ತೋರಿಸುತ್ತ, ಉತ್ತಮ ಪ್ರಕಾರದ ಮೇಜವಾನಿಯನ್ನು ಮಾಡಿಸಿದರು. ಪ್ರತಿ ಮುಕ್ಕಾಮಿನಲ್ಲೂ 'ಚೌಕಿ ಪಹರೆಯ' ವ್ಯವಸ್ಥೆಯನ್ನು ಅತ್ಯಂತ ಎಚ್ಚರಿಕೆಯಿಂದ ಮಾಡುತ್ತ ಬಾದಶಹನನ್ನು ವಿಜಯನಗರದ ಕಡೆಗೆ ಕರೆದುಕೊಂಡು ಬರುತ್ತಿದ್ದರು. ವಿಜಯನಗರದಿಂದ ಒಂದು ಮಜಲಿನ ಅಂತರದಲ್ಲಿ ಸವಾರಿಯು ಬಂದು ಮುಟ್ಟಿತು.

ರಾಮರಾಜನು ನಗರವನ್ನು ಶೃಂಗರಿಸಲು ಆಜ್ಞೆ ಮಾಡಿದನು. ಪ್ರತಿ ಗಲ್ಲಿ, ಬಾಜಾರಗಳಲ್ಲಿಯ ಬಾಗಿಲುಗಳನ್ನು ಮತ್ತು ಗೋಡೆಗಳನ್ನು ಬಹು ಬೆಲೆಯ ಬಣ್ಣಗಳಿಂದ ಅಲಂಕರಿಸಿ, ಅಲ್ಲಲ್ಲಿ ಬೆಲೆಬಾಳುವ ಬಟ್ಟೆಯಿಂದ ಅಲಂಕರಿಸಿದ ಕಂಭಗಳನ್ನು ನಿಲ್ಲಿಸಿದನು. ಇಂದ್ರಭುವನದಂತೆ ಶೋಭಿಸುತ್ತಿದ್ದ ತುಂಗಭದ್ರೆಯ ದಡದ ವಿಸ್ತಾರವಾದ ಸ್ಥಾನದಲ್ಲಿ ನೀರಿನ ಸ್ಥಳವಿತ್ತು. ಅಲ್ಲಿ ಅತ್ಯಂತ ಆಹ್ಲಾದಕರ ವಾತವರಣವಿತ್ತು. ಆ ಸ್ಥಳವನ್ನು ರಾಮರಾಜನ ಆಜ್ಞೆಯಂತೆ ಬಾದಶಹನ ಪರಿವಾರವು ಉಳಿದುಕೊಳ್ಳಲು ನಿರ್ಧರಿಸಲಾಯಿತು, ದೊಡ್ಡ ದೊಡ್ಡ ಡೇರೆಗಳನ್ನು ಕೊಟ್ಟು, ಅದರಲ್ಲಿ ಅತಿ ಎತ್ತರದ ಡೇರೆಗೆ ಮುಖಮಲ್ಲಿನ ಕಲಾಬುತಿಯ ಪಡದೆ, ಛತ್ರ ಇತ್ಯಾದಿಗಳನ್ನು ನಿರ್ಮಿಸಿ ಶೋಭೆಯನ್ನು ತಂದರು. ವಿವಿಧ ಪ್ರಕಾರದ ಬಣ್ಣಗಳ ಹಾಸಿಗೆಗಳನ್ನು ಹಾಸಿ ಸಿದ್ಧಪಡಿಸಿದರು. ಅನಂತರ ರಾಮರಾಜನು ಸ್ವತಃ ತನ್ನ ಬಂಧುಸಹಿತನಾಗಿ, ಸರದಾರರನ್ನು ಹಾಗು ಸಶಸ್ತ್ರ ಸೈನ್ಯವನ್ನು ತೆಗೆದುಕೊಂಡು, ಐದಾರು ಕೋಸುಗಳಷ್ಟು ಮುಂದೆ ಬಂದು, ಪೂರ್ಣ ಸಂತೋಷದಿಂದ ಬಾದಶಹನನ್ನು ಭೆಟ್ಟಿಯಾದನು. ಆದಿಲಶಹನನ್ನು ಆತನ ಪರಿವಾವನ್ನು ನಗರಕ್ಕೆ ಕರೆದುಕೊಂಡು ಬಂದನು.

ಭೆಟ್ಟಿಯ ಮೊದಲ ದಿನ ರಾಮರಾಜನು ತನ್ನ ಅರಮನೆಯಲ್ಲಿ ಬಾದಶಾಹಿ ವೈಭವದ ಅಲಂಕಾರವನ್ನು ಮಾಡಿದ್ದನು. ಅಲ್ಲಿಯೆ ಸಭೆಯನ್ನು ಸೇರಿಸಿದನು. ಆದಿಲಶಾಹನು ಮೊದಲು ತನ್ನ ಕಡೆಯಿಂದ ರಾಮರಾಜನಿಗಾಗಿ ತಂದ ವಸ್ತ್ರಗಳನ್ನು ರಾಮರಾಜನ ಮೈಮೇಲೆ ಹೊದಿಸಿ, ಆತನ ಮೈಮೇಲಿದ್ದ ದುಃಖದ

---

೧. ಹಿ.ಸ. ೯೭೫ (ಕ್ರಿ.ಶ. ೧೫೫೭-೫೮) ರಲ್ಲಿಯ ಘಟನೆ. ಬ್ರಿಗ್ಸ್-ಫೆ III ಪುಟ ೧೧೭

ವಸ್ತ್ರಗಳನ್ನು ತೆಗೆದು ಸಾಂತ್ವನ ಹೇಳಿದನು. ಅನಂತರ ತನ್ನ ಮನದ ಮಾತುಗಳನ್ನಾಡಲು ಪ್ರಾರಂಭಿಸಿದನು. ರಂಗು ರಂಗಿನ ಹಾಗೂ ಸಿಹಿಯಾದ ಮಾತುಗಳು; ಆ ಮಾತುಗಳಿಂದ ಮಿತ್ರತೆಯ ಹಾಗು ಸಖ್ಯತೆಯ ಬೇರು ಪ್ರಬಲವಾಗುವಂಥ ವಾಣಿ. ಆತನು ವಿಸ್ತಾರವಾಗಿ ಮಾತನಾಡಿದನು. ರಾಮರಾಜನು ಕೂಡ ಪೂರ್ಣ ಆನಂದದಿಂದ ಬಾದಶಹನ ಉತ್ತಮ ಮಾತುಗಳನ್ನು ಆಸ್ಥೆಯಿಂದ ಅಂತಃಕರಣ ಪೂರ್ವಕವಾಗಿ ಕೇಳಿಸಿಕೊಂಡನು. ಅನಂತರ ಅಲಿ ಆದಿಲಶಹನು ರಾಮರಾಜನಿಗೆ ಕೊಡಲು ತಂದಿದ್ದ ಬಹು ಬೆಲೆಯ ಉತ್ತಮೋತ್ತಮ ವಸ್ತುಗಳನ್ನು ಕೊಟ್ಟನು. ಆ ಕಾಣಿಕೆಯ ವಸ್ತುಗಳ ವಿವರ ಹದಿನೆಂಟು ಲಕ್ಷ ಹೊನ್ನು ನಗದು ಹಾಗೂ ಎಷ್ಟೋ ಭಾರೀ ಕಿಮ್ಮತ್ತಿನ ಮುತ್ತು-ರತ್ನಗಳು ತುಂಬಿದ ಪೆಟ್ಟಿಗೆಗಳು; ಪರ್ವತಾಕಾರದ ದೊಡ್ಡ ದೊಡ್ಡ ಅನೇಕ ಆನೆಗಳು, ಅತ್ಯಂತ ವೇಗದ ಎಷ್ಟೋ ಕುದುರೆಗಳು ಮತ್ತು ಸಾಧಾರಣ ಕುದುರೆಗಳು (ಆ ಕುದುರೆಗಳ ಲಗಾಮಿಗೆ ಮತ್ತು ತೋಬರಿಗೆ ಮುತ್ತುಗಳನ್ನು ಪವಣಿಸಲಾಗಿತ್ತು) ವಸ್ತ್ರಗಳನ್ನು ತುಂಬಿದ ಅದೆಷ್ಟೊ ಚೀಲಗಳು ಆ ಚೀಲಗಳಲ್ಲಿ ಮಿಸ್ರ ದೇಶದ 'ಕಸಬ' ಎಂಬ ಅತ್ಯಂತ ಬೆಲೆಬಾಳುವ ಬಟ್ಟೆ, ರೂಮ ದೇಶದ 'ಖುಜ್' ಎಂಬ ಉನ್ನತ ಬಟ್ಟೆ, ಚೀನ ದೇಶದ 'ದಿವಾ' ಎಂಬ ಉನ್ನತ ಬೆಲೆಬಾಳುವ ಬಟ್ಟೆ ಹಾಗೂ ಆ ಬಟ್ಟೆಗಳ ಪೋಷಾಖುಗಳು ಇದ್ದವು. ಇನ್ನು ಹಲವು ಪ್ರಕಾರದ ವಸ್ತುಗಳನ್ನು ಕೊಟ್ಟು ನೋಡುವವರ ಕಣ್ಣುಗಳು ಮತ್ತು ತಮಾಷಿ ಮಾಡುವ ಕಣ್ಣುಗಳು ಹೊಳೆಯುವಂತೆ ಮಾಡಿದನು. ಎಲ್ಲ ವಜ್ರಗಳಲ್ಲಿ ಒಂದು ವಜ್ರ ದೊಡ್ಡದಿತ್ತು. ಅದರ ಭಾರ ಏಳುಮುಕ್ಕಾಲು ತೊಲೆ ಇತ್ತು. ರತ್ನ ಪರೀಕ್ಷಕರಿಗೆ ಆ ವಜ್ರದ ಬೆಲೆಯನ್ನು ಕಟ್ಟಲಾಗುತ್ತಿರಲಿಲ್ಲ. ರಾಮರಾಜನು ಆ ಎಲ್ಲ, ತಂದ ಪದಾರ್ಥಗಳನ್ನು ಅತಿ ಆದರದಿಂದ ಸ್ವೀಕರಿಸಿದನು. ರಾಮರಾಜನು ಕೂಡ ಬಾದಶಹನ ಚಿತ್ತವನ್ನು ಸಮಾಧಾನ ಪಡಿಸುವಲ್ಲಿ ಯಾವ ಅಂತರವನ್ನೂ ಮಾಡದೆ, ಬಾದಶಾಹಿ ಯೋಗ್ಯತೆಗೆ ಅನುಗುಣವಾದ ಪೋಷಾಖುಗಳನ್ನು, ವಸ್ತ್ರಗಳನ್ನು ಕೊಟ್ಟು ಸಂತೋಷ ಪಡಿಸಿದನು. ವಿಜಯನಗರದ ರಾಮರಾಜನು ಬ್ರಾಹ್ಮಣನಾಗಿದ್ದನು. ವಿಜಾಪುರ ಬಾದಶಹ ಮುಸಲ್ಮಾನನಾಗಿದ್ದನು. ಆದರೆ ರಾಮರಾಜನ ತಾಯಿಯನ್ನು ಅಲಿ ಆದಿಲಶಹನು ತನ್ನ ತಾಯಿಯಂತೆ ಮನ್ನಿಸುತ್ತಿದ್ದನು. ಅವಳು ಕೂಡ ಅಲಿಯನ್ನು ತನ್ನ ಮಗನಂತೆ ಕಾಣುತ್ತಿದ್ದಳು. ಈ ಸಂಬಂಧದಿಂದಾಗಿ ರಾಮರಾಜ ಹಾಗು ಅಲಿಯ ಮಧ್ಯ ಸಹೋದರ ಸಂಬಂಧ ಉಂಟಾಗಿತ್ತು. ಆದ್ದರಿಂದ ರಾಮರಾಜನು, 'ನಾವು ತಾಯಿಯನ್ನು ಭೆಟ್ಟಿಯಾಗೋಣ. ಅವರ ಮನದಲ್ಲಿ ತಮ್ಮ ಭೆಟ್ಟಿಯ ತೀವ್ರ ಇಚ್ಛೆ ಇದೆ' ಎಂದು ಹೇಳಿದನು. ರಾಣೀಸಾಹೇಬರ ಕಡೆಯಿಂದ ಒಬ್ಬ ವಿಶ್ವಾಸಿಕ ಹಾಗೂ ಉತ್ತಮ ನಡತೆಯ ಹೆಣ್ಣುಮಗಳು ಕೂಡ ಬಂದು ಇದನ್ನೆಲ್ಲ ಬಿನ್ನವಿಸಿದಳು.

ಏಕಾಂತದಲ್ಲಿ ಇರುವ ಮಹಾನ್ ಪತಿವ್ರತೆ, ಐಶ್ವರ್ಯವಂತಳು ವೈಭವದಿಂದ ಅರಮನೆಯಲ್ಲಿದ್ದ ರಾಣೀಸಾಹೇಬಳು ರಾಜಾ ಅಜಿತರಾಯನ ಮಗಳಾಗಿದ್ದಳು. ಅವಳು ಅಲಿ ಆದಿಲಶಹನನ್ನು ಸೋದರನೆಂದು ಮನ್ನಿಸುತ್ತಿದ್ದಳು. ಅವಳ ಮಗಳು ಅವನನ್ನು ಭೆಟ್ಟಿಯಾಗಲು ಬಹುವಾಗಿ ಇಚ್ಛಿಸುತ್ತಿದ್ದಳು. ಆದ್ದರಿಂದ ಅಂತಃಪುರದಲ್ಲಿ ಅಂದರೆ ರಾಣೀವಾಸದಲ್ಲಿ ಅವರು ಬಂದು ರಾಣೀಸಾಹೇಬ ಮೊದಲಾದವರನ್ನು ಭೆಟ್ಟಿಯಾಗಿ ಸಂತೋಷಪಡಿಸಬೇಕು ಎಂದರು. ವಿನಂತಿಯನ್ನು ಮಾನ್ಯ ಮಾಡಿದ ಅಲಿ ಆದಿಲಶಹನು ನಿರ್ಭಯವಾಗಿ, ನಿಸ್ಸಂಶಯದಿಂದ ಅರಮನೆಯಲ್ಲಿ ಹೋದನು. ಆಗ ರಾಣೀಸಾಹೇಬರು ತಮ್ಮ ಮಗಳೊಂದಿಗೆ ಮತ್ತು ಅನೇಕ ಸಂಬಂಧಿತ ಸ್ತ್ರೀಯರ ಸಹಿತವಾಗಿ ಬಾದಶಹನ ಎದುರಿಗೆ ಬಂದು, ಆತನನ್ನು ಎದುರುಗೊಂಡರು. ಎದುರುಗೊಳ್ಳಲು ತಟ್ಟೆ ತುಂಬಿದ ಮುತ್ತುರತ್ನಗಳನ್ನು ಬಾದಶಹನ ಮೇಲೆ ನಿವಾಳಿಸಿ ಒಗೆದರು. ಅನಂತರ ಮಾತೃಶ್ರೀಯವರ ಸಂಬಂಧಿಕರು ಸಪ್ರೇಮ ಭೆಟ್ಟಿಗಾಗಿ ಆತನು ಕುಳಿತುಕೊಳ್ಳಲು ಸಹಸ್ರಾವಧಿ ಶೋಭೆಯಿಂದ

ಆಸನವನ್ನು ಶೃಂಗರಿಸಿದ್ದರು. ಆ ಆಸನದ ಮೇಲೆ ಬಾದಶಹನನ್ನು ಕುಳ್ಳಿರಿಸಿದರು. ಚಿತ್ತ ಸಮಾಧಾನ ಪೂರ್ವಕವಾಗಿ ಉಭಯಕುಶಲೋಪರಿಯೊಂದಿಗೆ ಬಾದಶಹನೊಂದಿಗೆ ಮಾತನಾಡಲು ಪ್ರಾರಂಭಿಸಿದರು. ಸಧ್ಯದ ಪರಿಸ್ಥಿತಿಯನ್ನು ವಿಚಾರಿಸಿದರು. ಮನಃ ಪೂರ್ವಕವಾಗಿ ಸಂಪೂರ್ಣ ಭರವಸೆಯನ್ನು ಕೊಡುತ್ತ, ಜರೂರು ಬಿದ್ದರೆ ಇತ್ತ ಕಡೆಯಿಂದ ಸಹಾಯ ನೀಡುವುದಾಗಿ ಬಾದಶಹನಿಗೆ ಖಾತರಿಯಾಗಿ ಹೇಳಿ ಮತ್ತು ಜರೂರಿನ ಸಮಯದಲ್ಲಿ ನಮ್ಮಿಂದ ತಮಗೆ ಸಹಾಯ ದೊರೆಯುವುದೆಂದು ಹೇಳಿ ಭಾರೀ ಕಿಮ್ಮತ್ತಿನ ಪೋಷಾಖುಗಳನ್ನು ಮುತ್ತುರತ್ನಗಳ ಸಿದ್ಧಪಡಿಸಿದ ಆಭರಣಗಳನ್ನು ಬಂಗಾರದ ತಟ್ಟೆಯಲ್ಲಿ, ಮುತ್ತು, ಕೆಂಪು ಮಾಣಿಕಗಳು, ತುಂಬಿದ ತಟ್ಟೆಯನ್ನು ಸಹಿತವಾಗಿ ಬಾದಶಹನಿಗೆ ನಜರಾಣೆಯಾಗಿ ಕೊಡಲಾಯಿತು. ನಿರೋಪವನ್ನು ಕೊಡಲಾಯಿತು. ಬಾದಶಹನು ಅಲ್ಲಿ ಪೂರ್ಣ ಸಂತೋಷನಾಗಿ ಮತ್ತು ಅತಿ ಆನಂದದಿಂದ ಹೊರಟು ತನ್ನ ಬಿಡಾರಕ್ಕೆ ಬಂದು ಮುಟ್ಟಿದನು. ಆ ಸಮಯದಲ್ಲಿ ಅಲಿ ಆದಿಲಶಹನ ಕಡೆಯ ಎಲ್ಲ ಸರದಾರರು, ಸೇವಕ ಜನರು ಅಲ್ಲಾನ ಸ್ತವನವನ್ನು ಮಾಡಿದರು.

"ಹೇ ಅಲ್ಲಾ, ಈ ಭಯಂಕರ ಸ್ಥಳದಿಂದ ಸುರಕ್ಷಿತವಾಗಿ ಪಾರಾಗಿ ಬರುವಲ್ಲಿ ಸಾವಿರ ಸಂಶಯಗಳಿದ್ದುವು, ಹಾಗಿದ್ದರೂ ನೀನು ಕೃಪೆ ಮಾಡಿ ಸಂತೋಷದಿಂದ ಸುರಕ್ಷಿತವಾಗಿ ಬಿಡಾರದ ಸ್ಥಳಕ್ಕೆ ತಂದು ಮಟ್ಟುಸಿದ್ದಿ," ಎಂದು ಪ್ರಾರ್ಥಿಸಿ ಬಾದಶಹನನ್ನು ಎದುರುಗೊಂಡರು. ಯಾಚಕರಿಗೂ, ಬಡಬಗ್ಗರಿಗೂ ಧಾರಾಳವಾಗಿ ದಾನವನ್ನು ಮಾಡಲಾಯಿತು. ಭೂಮಿಗೆ ತಲೆ ಇಟ್ಟು ಅತ್ಯಂತ ನಮ್ರತೆಯಿಂದ ಅಲ್ಲಾನಿಗೆ ನಮಸ್ಕಾರ ಮಾಡಿದರು. ಅನಂತರ ರಾಮರಾಜನ ಕಡೆಯಿಂದ ಬಂದ ಸರದಾರರು, ಕಾರಭಾರಿಗಳು ಅಮೀರ ಜನರು ಮತ್ತು ವಿಜಯನಗರದಲ್ಲಿಯ ಯಾವುದೇ ವ್ಯಕ್ತಿ ಬಾದಶಹನಿಗೆ ಮುಜುರೆ ಸಲ್ಲಿಸಲು ಬರುತ್ತಿದ್ದರೋ ಆ ಪ್ರತಿಯೊಬ್ಬ ವ್ಯಕ್ತಿಗೂ ಆದಿಲಶಹನು ಜವಾಹಿರಗಳನ್ನು, ನಗದು ಹಣ ಅಲ್ಲದೆ ಪೋಷಾಖುಗಳನ್ನು ಕೊಡುತ್ತ, ಅವರು ತಮ್ಮ ಸಾಮರ್ಥ್ಯವಿದ್ದಷ್ಟು ಭಾರದ ಬಹುಮಾನಗಳನ್ನು ಎತ್ತಿಕೊಂಡು ಹೋಗುತ್ತಿದ್ದರು. ವಿಜಯನಗರದಲ್ಲಿ ಬಾದಶಹನ ಮುಕ್ಕಾಮು ಇರುವವರೆಗೆ ಪ್ರತಿನಿತ್ಯ ಈ ರೀತಿಯಾಗಿ ನಡೆಯಿತು. ಬಾದಶಹನ ಬಹುಮಾನಗಳಿಂದ ಶ್ರೀಮಂತನಾಗದ ಒಬ್ಬ ವ್ಯಕ್ತಿಯೂ ವಿಜಯನಗರದಲ್ಲಿ ಉಳಿಯಲಿಲ್ಲ. ಆದಿಲಶಹನ ದೊಡ್ಡ ಭಂಡಾರವೇ ವಿಜಯನಗರದಲ್ಲಿ ಭಕ್ಷೀಸು ಕೊಡಲು ಖರ್ಚಾಯಿತು. ವಿಜಯನಗರದಲ್ಲಿ ಪ್ರತಿಯೊಂದು ಓಣಿಯಲ್ಲಿ, ರಸ್ತೆಯಲ್ಲಿ, ನಾಲ್ಕು ಕಡೆಗೂ ಬಾದಶಹನ ಬಕ್ಷೀಸು ಕೊಡುವ ಔದಾರ್ಯದ ವರ್ಣನೆಯಾಗುತ್ತಿತ್ತು. ಅನಂತರ ಪ್ರತಿಯೊಂದು ಕೆಲಸದಲ್ಲೂ, ಬಾದಶಹನ ಕೆಲಸದಲ್ಲೂ ನಾವು ಸಹಾಯ ಮಾಡುತ್ತೇವೆಂದು ರಾಮರಾಜನೊಂದಿಗೆ ಒಪ್ಪಿಗೆ ಕೊಟ್ಟರು. ಆ ಸಮಯದಲ್ಲಿ 'ತಮಗೆ ಜರೂರು ಬಿದ್ದರೆ, ಮತ್ತು ಯಾರಾದರೂ ಕುಮ್ಮಕ್ಕು ಕೊಟ್ಟರೆ, ಆಗ ತಮ್ಮ ಒಂದು ಸೂಚನೆ ಬಂದರೂ ಸಾಕು, ಕಿಂಚಿತ್ತೂ ಅವಕಾಶ ಕೊಡದೆ, ಸೈನ್ಯ ತೆಗೆದುಕೊಂಡು ಬಂದು ಮುಟ್ಟುತ್ತೇವೆ ಮತ್ತು ಶತ್ರುವಿನ ಪಾರುಪತ್ಯವನ್ನು ಮಾಡುತ್ತೇವೆ, ಎಂದು ರಾಮರಾಜನೂ ಕರಾರು ಮಾಡಿದನು. ಅಲಿ ಆದಿಲಶಹನು ನಿರೋಪ ಪಡೆದು, ವಿಜಾಪುರಕ್ಕೆ ಬಂದನು. ವಿಜಾಪುರಕ್ಕೆ ಬಂದು ಮುಟ್ಟಿದ ಅನಂತರ, ವೈರಿಗಳ ಪಾರುಪತ್ಯವನ್ನು ಮಾಡಲು ಯುದ್ಧದ ಸಾಮಾನುಗಳ ಸಿದ್ಧತೆ, ಪ್ರದೇಶಗಳನ್ನು ತೆಗೆದುಕೊಳ್ಳುವುದು ಮತ್ತು ವೈರಿಯೊಂದಿಗೆ ಸೇಡು ತೀರಿಸಿಕೊಳ್ಳುವ ಸಿದ್ಧತೆ ನಡೆಯಿತು. ತುಸುವೆ ದಿನಗಳಲ್ಲಿ ಯುದ್ಧ ಸಾಮಗ್ರಿಗಳ ಸಿದ್ಧತೆಯನ್ನು ಮಾಡಿಕೊಂಡು ಅಹಮದನಗರದ ಬಾದಶಹನ ಆಸುಪಾಸಿನ ಸ್ಥಳಗಳಲ್ಲಿ ಬಂಡು ಹೂಡಿದರು. ಆ ದಂಗೆಯಲ್ಲಿ ಹೋಗಿ ಯುದ್ಧ ಮಾಡುವ ಸಂಕಲ್ಪವನ್ನು ನಿಶ್ಚಯದಲ್ಲಿ ತಂದರು. ಯಾಕೆಂದರೆ ಅಲಿ ಆದಿಲಶಹನು ಪ್ರಥಮದಲ್ಲಿ ಸಿಂಹಾಸನವನ್ನೇರಿದಾಗ, ಹುಸೇನ ನಿಜಾಮಶಾಹನು

ಎಲ್ಲರಂತೆ ಮಿತ್ರತೆ ಮತ್ತು ಸಖ್ಯತೆಯ ರೀತಿಯಂತೆ ಶುಭಾಶಯಗಳನ್ನು ಕಳಿಸುವ ಪದ್ಧತಿಯಂತೆ, ದ್ವೇಷದಿಂದಾಗಿ ನಿರೋಪವನ್ನಾಗಲೀ ಪತ್ರವನ್ನಾಗಲಿ ಕಳಿಸಿರಲಿಲ್ಲ. ಅದಲ್ಲದೆ ಎರಡನೆಯ ಕಾರಣವೆಂದರೆ, ಇಮಾದಶಾಹನ ಮುಖ್ಯ ಕಾರಭಾರಿ ತಫಾವಲಖಾನನೊಂದಿಗೆ ಹುಸೇನ ನಿಜಾಮಶಾಹನು ಆದಿಲಶಾಹಿ ಪ್ರದೇಶಗಳಲ್ಲಿ ಬಂದು ಬಹಳಷ್ಟು ನಾಶ ಮಾಡಿದ್ದನು. ಆದಿಲಶಹನ ರಾಜ್ಯವನ್ನೆ ಕಬಳಿಸುವ ಇರಾದೆಯೂ ಆತನದಾಗಿತ್ತು.

### ೪. *ಅಲಿ ಆದಿಲಶಹ ಹಾಗು ರಾಮರಾಜರು ಸೈನ್ಯ ಸಮೇತ ನಿಜಾಮಶಹನ ಸರಹದ್ದಿನ ಪ್ರದೇಶದಲ್ಲಿ ದಾಳಿ :*

ಅಲಿ ಆದಿಲಶಹನು ಯುದ್ಧ ಸಿದ್ಧತೆಯನ್ನು ಮಾಡಿಕೊಂಡ ಅನಂತರ, ಒಬ್ಬ ರಾಯಭಾರಿಯ ಮೂಲಕ ನಿಜಾಮಶಾಹನ ಹತ್ತಿರ ನಿರೋಪ ಕಳಿಸಿದನು. ಅದರಲ್ಲಿ "ಒಂದು ವೇಳೆ ಹಳೆಯ ಮಿತ್ರತೆ, ಪೂರ್ವಾಪರ ಗೆಳೆತನವು ಹಾಗೆಯೇ ಇರಲಿ ಎಂದಾದರೆ ಸೊಲ್ಲಾಪುರದ ಕೋಟೆಯನ್ನು ಮತ್ತು ಕೋಟೆಯಲ್ಲಿರುವ ಎಲ್ಲ ವಸ್ತುಗಳನ್ನು ನಮ್ಮ ವಶಕ್ಕೆ ಕೊಡಬೇಕು ಮತ್ತು ನಮ್ಮ ಸ್ನೇಹವನ್ನು ಉಳಿಸಿಕೊಳ್ಳಬೇಕು. ಇಲ್ಲವೆ ನೀವು ನಿಮ್ಮ ರಾಜ್ಯವನ್ನು ಮುಳುಗಿಸಿಕೊಳ್ಳಲು ಮತ್ತು ದುಃಖ ಭೋಗಿಸುವ ಮಾರ್ಗ ಪ್ರತೀಕ್ಷೆಯಲ್ಲಿರಬೇಕು" ಎಂದು ಬರೆದಿದ್ದನು. ಹುಸೇನ ನಿಜಾಮ ಶಾಹನು ಈ ಭಯಂಕರ ನಿರೋಪವನ್ನು ಕೇಳಿ ಗಾಬರಿಯಾಗಿ ಗೆಳೆತನವನ್ನು ಕೆಡಿಸಿಕೊಳ್ಳುವ ಮಾತುಗಳನ್ನೆ ಆಡಿದನು. ಅಲಿ ಆದಿಲಶಹನ ರಾಯಭಾರಿಯನ್ನು ಅವಮಾನಿತಗೊಳಿಸಿ ಹಿಂತಿರುಗಿ ಕಳಿಸಿದನು. ಆದಿಲಶಹನು ಏನಾದರೊಂದು ನಿಮಿತ್ತಕ್ಕಾಗಿ ಕಾದು ಕುಳಿತಿದ್ದನು. ನಿಜಾಮಶಾಹನ ಕಠೋರ ಉತ್ತರವನ್ನು ಕೇಳುತ್ತಲೇ ಸೈನ್ಯದ ಢಾಲುಗಳನ್ನು ಎತ್ತರಿಸಿ ಮುಕ್ಕಾಮಿನ ಸ್ಥಳದಿಂದ ಹೊರಟು ಬಿಟ್ಟನು.[೧] ಸುದ್ದಿಯನ್ನು ತಿಳಿಸಲು ಒಬ್ಬನನ್ನು ವಿಜಯನಗರಕ್ಕೆ ಕಳಿಸಿಕೊಟ್ಟನು. ಅದನ್ನು ಕೇಳಿದ ರಾಮರಾಜನು ಒಪ್ಪಂದದಂತೆ ತಿಲಮಾತ್ರ ಅವಕಾಶವನ್ನೀಯದೆ, ಸೈನ್ಯವನ್ನು ತೆಗೆದುಕೊಂಡು ವಿಜಾಪುರದ ಕಡೆಗೆ ಹೊರಟನು. ವಿಜಾಪುರದಿಂದ ಎರಡೂವರೆ ಕೋಸುಗಳ ಅಂತರದಲ್ಲಿ ರಾಮರಾಜನು ಮುಕ್ಕಾಮು ಹೂಡಿ ಅಲ್ಲಿಯೆ ಬಾದಶಹ ಹಾಗು ರಾಮರಾಜನು ಭೆಟ್ಟಿಯಾದರು. ಇಬ್ಬರೂ ಜೊತೆಯಾಗಿಯೆ ಶತ್ರುವಿನ ಮೇಲೆ ಏರಿ ಹೊರಟರು. ಆದಿಲಶಹ ಮತ್ತು ರಾಮರಾಜನು ಜೊತೆಯಾಗಿ ಬರುತ್ತಿದ್ದಾರೆಂಬ ಸುದ್ಧಿಯನ್ನು ತಿಳಿಯುತ್ತಲೇ ನಿಜಾಮಶಾಹ ಮತ್ತು ತಫಾವಲಖಾನರು ಎಚ್ಚರಗೊಂಡು ಓಡಿ ಹೋಗುವ ವಿಚಾರದಲ್ಲಿ ಬಿದ್ದರು. ತಫಾವಲಖಾನನು ನಿಜಾಮಶಾಹನೊಂದಿಗೆ ಆದಿಲಶಹನ ಇಲಾಖೆಯಲ್ಲಿ ಬಂದು ಪ್ರದೇಶವನ್ನು ಹಾಳು ಮಾಡಿದ್ದನು. ಆದ್ದರಿಂದ ತಫಾವಲಖಾನನು ಭಯಭೀತನಾಗಿ ಮೊದಲೇ ಓಡಿ ಹೋದನು. ನಿಜಾಮಶಾಹನಿಗೆ ಇರಲು ಧೈರ್ಯ ಸಾಲಲೊಲ್ಲದು. ಮುಖ ಮುಚ್ಚಿಕೊಂಡು ಓಡಿ ಹೋದನು. ಆಗ ಆದಿಲಶಹನು ಆತನ ಬೆನ್ನುಹತ್ತಿ, ಹಿಂದಿನಿಂದ ಓಡಹತ್ತಿದನು. ರಾಮರಾಜನೂ ಆದಿಲಶಹನ ಸೈನ್ಯದ ಬೆನ್ನುಹಿಂದೆ ಬರುತ್ತಿದ್ದನು. ರಾಮರಾಜನ ಹಾಗೂ ಆದಿಲಶಹನ ಸೈನ್ಯದ ಸವಾರರು ಸಿಬ್ಬಂದಿ ಜನರು, ಇಂಥದೊಂದು ದಿನ ಬರಬೇಕೆಂದು ಒಡೆಯರ ಸೇವೆಯಲ್ಲಿ ಆಯುಷ್ಯವನ್ನು ಕಳೆಯಬೇಕೆಂದಿದ್ದ ಆ ದಿನ ಇಂದು ಬಂದಿತು. ಉಭಯ ಸೈನ್ಯಗಳೂ ಶತ್ರುಗಳ ಸೈನ್ಯದ ಮೇಲೆ ದಾಳಿ ಮಾಡಿದುವು. ನಿಜಾಮಶಾಹನ ಸರಹದ್ದಿಯನ್ನು ಪ್ರವೇಶಿಸಿದರು. ಸುಲಿಗೆ ಮಾಡುವುದರಲ್ಲಿ ಎಳ್ಳುಕಾಳಿನಷ್ಟು ಅಂತರವನ್ನು ಮಾಡಲಿಲ್ಲ.

---

೧. ಹಿ.ಸ. ೯೬೬ (ಕ್ರಿ.ಶ. ೧೫೫೮-೫೯)ರಲ್ಲಿ ಘಟನೆ -ಬ್ರಿಗ್ಸ್ ಫೆ III ಪು ೧೧೦೦

ರಾಮರಾಜನಿಗೆ ಎಷ್ಟೊಂದು ಗರ್ವ ಹಾಗೂ ಅಭಿಮಾನಗಳು ತುಂಬಿದ್ದುವೆಂದರೆ, ಆದಿಲಶಾಹನ ಸೈನ್ಯ ಮುಂದೆ-ಮುಂದೆ ನಡೆಯುತ್ತಿತ್ತು. ನೀರು-ಹವಾಗುಣಗಳನ್ನು ನೋಡಿ ಆತನ ಸೈನ್ಯ ಮುಕ್ಕಾಮಿಗಾಗಿ ಉಳಿದು ಬೀಡಾರಗಳನ್ನು ಕಟ್ಟುತ್ತಿತ್ತು. ಅಷ್ಟು ಹೊತ್ತಿಗೆ ರಾಮರಾಜನ ಕೆಲಸಗಾರರು ಬೆನ್ನಹಿಂದೆ ಬಂದು ಅದೇ ಸ್ಥಳ ರಾಮರಾಜನಿಗೆ ಬೇಕೆಂದು ಆಗ್ರಹಿಸಿ ಆದಿಲಶಾಹಿ ಡೇರೆಯನ್ನು ಅಲ್ಲಿಂದ ಕಿತ್ತಿಸಿ ಅಲ್ಲಿ ರಾಮರಾಜನ ಸೈನ್ಯದ ಡೇರೆಗಳನ್ನು ಹಾಕಿ ವಸತಿ ಮಾಡುತ್ತಿದ್ದರು. ಹೀಗೆ ಒಂದು ದಿನ ಆದಿಲಶಾಹನ ಡೇರೆಗಳನ್ನು ಮೂರು ಸಲ ಕಿತ್ತಿಸಿ ರಾಮರಾಜನ ಬಿಡಾರವನ್ನು ಹೂಡಿದರು. ಆದಿಲಶಹನು ಪ್ರಸಂಗವನ್ನರಿತು ನಿರುಪಾಯನಾಗಿ ಸಹಿಸಿಕೊಂಡನು. ಇದಿಷ್ಟಕ್ಕೆ ರಾಮರಾಜನ ಸಂಕಲ್ಪ ಮುಗಿದಿರಲಿಲ್ಲ. ಸಾಧ್ಯವಾದರೆ ಆದಿಲಶಹನ ಎಲ್ಲ ಪ್ರದೇಶಗಳನ್ನು, ರಾಜ್ಯವನ್ನು ಕೂಡ ಕೈವಶ ಮಾಡಿಕೊಳ್ಳಬೇಕೆಂಬುದಾಗಿತ್ತು.

ತನ್ನ ವಿಷಯದಲ್ಲಿ ಯವನ ಜನರ ಮನದಲ್ಲಿ ಎಷ್ಟರಮಟ್ಟಿಗೆ ಭಯವು ತುಂಬಿದೆ ಎಂಬುದನ್ನು ಅವನಿಗೆ ನೋಡಬೇಕಾಗಿತ್ತು. ಆ ಕಾರಣದಿಂದಲೇ ನಿಜಾಮಶಹನ ಪ್ರದೇಶದಲ್ಲಿ ಪ್ರತಿಯೊಂದು ರೀತಿಯ ಸುಲಿಗೆಯನ್ನು ಮಾಡುತ್ತ ಮುಂದೆ-ಮುಂದೆ ನಡೆಯುತ್ತಿದ್ದನು. ನಿಜಾಮಶಹನಿಗೆ ಅಹಮದನಗರದಲ್ಲೂ ಇರುವ ಧೈರ್ಯ ಸಾಲದಾಯಿತು. ದೌಲತಾಬಾದಿಗೆ ಹೋಗುವ ಮಾರ್ಗವನ್ನು ಹಿಡಿದನು. ಒಂದು ಕೋಟೆಯನ್ನು ಹತ್ತಿ ಅಲ್ಲಿ ವ್ಯವಸ್ಥೆ ಮಾಡಿ ಇರಹತ್ತಿದನು. ರಾಮರಾಜನು ದೌಲತಾಬಾದದವರೆಗೆ ಸುಲಿಗೆ ಮಾಡುತ್ತ, ನಾನ ಪ್ರಕಾರದ ನಾಶವನ್ನು ಮಾಡಿದನು. ಆ ರಾಜಧಾನಿಯ ಅಕ್ಕ-ಪಕ್ಕದ ಯಾವ ನಗರ-ಹಳ್ಳಿ-ಪಳ್ಳಿಗಳನ್ನೂ ಬಾಗಾಯತಗಳನ್ನು ಸಂಪೂರ್ಣವಾಗಿ ನಾಶಮಾಡಿ ಧೂಳಿಪಟ ಮಾಡಿದನು. ದೊಡ್ಡ-ದೊಡ್ಡ ಕಟ್ಟಡಗಳ ಮನೆಗಳನ್ನು ಪೂರ್ತಿ ಕೆಡವಿದನು. ಎಲ್ಲ ಚಿಕ್ಕ ಮನೆಗಳಿಗೆ ಬೆಂಕಿ ಇಟ್ಟನು. ಅಲ್ಲಿಯ ಅಧಿಕಾರಿಗಳ ದೊಡ್ಡ ದೊಡ್ಡ ವಾಡೆಗಳನ್ನು ಕೆಡವಿ ಅವುಗಳ ಎಲ್ಲ ಕಟ್ಟಡ ಸಾಮಾನು ಸರಂಜಾಮುಗಳನ್ನು ವಿಜಾಪುರಕ್ಕೆ ತರಲಾಯಿತು. ಕೊನೆಗೆ ನಿಜಾಮಶಾಹನು ಆದಿಲಶಾಹನೊಂದಿಗೆ ಸ್ನೇಹ ಬೆಳೆಸಿದನು. ಕಲ್ಯಾಣದ ಕೋಟೆಯನ್ನು ಆದಿಲಶಹನಿಗೆ ಒಪ್ಪಿಸಿ ಯುದ್ಧವನ್ನು ನಿಲ್ಲಿಸಿದನು.[೨] ಆದಿಲಶಹನು ರಾಮರಾಜನಿಗೆ ತಿರುಗಿ ಹೋಗಲು ಹೇಳಿ ತನ್ನ ಮಂಡಳಿಯೊಂದಿಗೆ ವಿಜಾಪುರಕ್ಕೆ ಬಂದನು.

### *೫. ಆದಿಲಶಹ ಹಾಗು ರಾಮರಾಜನು ಎರಡನೆಯ ಬಾರಿ ಮತ್ತೆ ಸೈನ್ಯದೊಂದಿಗೆ ನಿಜಾಮಶಹನ ಮೇಲೆ ದಾಳಿ, ಶಹದುರ್ಗ ಕೋಟೆಯನ್ನು ಕಟ್ಟಿದ್ದು :*

ಈ ದೊಡ್ಡ ಘಟನೆಯು ಆದ ನಂತರ ನಿಜಾಮಶಾಹನ ಮನಸ್ಸಿನಲ್ಲಿ ಪಶ್ಚಾತ್ತಾಪ ಹುಟ್ಟಿತು. ಬುದ್ಧಿ ಬಂದಿತು. ಆತ ಎರಡನೆಯ ವರುಷ ಕುತುಬ ಶಾಹನೊಂದಿಗೆ ಸ್ನೇಹವನ್ನು ಬೆಳೆಸಿದನು. ತಮ್ಮ ಸ್ನೇಹವು ಗಟ್ಟಿಯಾಗಿರಲು ವಿವಾಹ ಸಂಬಂಧವನ್ನೂ ಬೆಳೆಸಿದನು. ತನ್ನ ಮಗಳು ಜಮಾಲ ಬೀಬಿಯನ್ನು ಇಬ್ರಾಹಿಮ ಕುತುಬಶಾಹನಿಗೆ ಕೊಟ್ಟು ಮದುವೆ ಮಾಡಿ ಸಂಬಂಧವನ್ನು ತಂದೆ ಮಕ್ಕಳ ಪ್ರೀತಿಯಲ್ಲಿ ಬಂಧಿಸಿದನು. ಅದರ ಮರುವರುಷ ಕುತುಬಶಾಹ ಮತ್ತು ಇಮಾದುಲ್ಮುಲ್ಕರನ್ನು ಜೊತೆ ಮಾಡಿಕೊಂಡು ಅಲಿ ಆದಿಲಶಹನ ರಾಜ್ಯದತ್ತ ನಡೆದು ಕಲ್ಯಾಣನಗರವನ್ನು ಮುತ್ತಿ ಹಲ್ಲೆ ಮಾಡಿದನು. ಉಭಯ ಶತ್ರುಗಳು ದಂಗೆಯನ್ನು ಪ್ರಾರಂಭಿಸಿದ ಸುದ್ದಿ ಆದಿಲಶಹನಿಗೆ ತಿಳಿಯಿತು. ಆಗ ರಾಮರಾಜನಿಂದ ಸಹಾಯವನ್ನು ಬಯಸಿದನು. ಒಬ್ಬ ಸಂಭಾವಿತ ಮನುಷ್ಯನನ್ನು ರಾಮರಾಜನ ಹತ್ತಿರ ಕಳಿಸಿ 'ಈ ಸಮಯದಲ್ಲಿ ತಾವು ಸಹಾಯ ಮಾಡಿರಿ' ಎಂದು ಹೇಳಿ ಕಳಿಸಿದನು. ರಾಮರಾಜನಿಗೆ ಜನರನ್ನು

---

೨. ಹಿ.ಸ.೯೭೧ (ಕ್ರಿ.ಶ. ೧೫೬೩-೬೪)ರ ಘಟನೆ.

ಸುಲಿಯುವುದು, ಜಬರದಸ್ತಿಯಿಂದ ಜನರ ಪ್ರದೇಶಗಳನ್ನು ಕಬಳಿಸುವುದು ಸ್ವಭಾವ ಜನ್ಯವಾಗಿತ್ತು. ಮುಸಲ್ಮಾನ ಜನರನ್ನು ಕಾಡಲು ನಿಮಿತ್ತಗಳಿಗಾಗಿ ಕಾದು ಕುಳಿತಿರುತ್ತಿದ್ದ. ಆದ್ದರಿಂದ ಆ ಸಮಯದಲ್ಲಿ ಸುದ್ದಿ ತಿಳಿದು ಒಪ್ಪಿ ಎರಡುಲಕ್ಷ ಕಾಲ್ದಳವನ್ನು ಐವತ್ತು ಸಾವಿರ ಸವಾರರನ್ನು ತೆಗೆದುಕೊಂಡು ಹೊರಟು ಆದಿಲಶಾಹಿ ಸೈನ್ಯದೊಂದಿಗೆ ಬಂದು ಸೇರಿದನು. ಎರಡೂ ಸೈನ್ಯಗಳು ಸೇರಿ ಮುಂದೆ ನಡೆದುವು. ಶತ್ರುಗಳ ಸೈನ್ಯದಿಂದ ಒಂದೆರಡು ಕೋಸುಗಳ ಅಂತರದಲ್ಲಿ ಬೀಡು ಬಿಟ್ಟುವು. ಉಭಯತರಲ್ಲಿ ಪರಸ್ಪರ ಯುದ್ಧಗಳು ನಡೆಯುತ್ತಿದ್ದುವಾದರೂ, ರಾಮರಾಜನು ಒಳಗಿನಿಂದ ನಿಜಾಮಶಾಹಿಯೊಂದಿಗೆ ಸ್ನೇಹ ಬೆಳೆಸಿ, ಮಿತ್ರತೆಯನಿಟ್ಟು ಯುದ್ಧದ ಕೆಲಸದಲ್ಲಿ ಸಡಿಲು ಬಿಟ್ಟಿದ್ದನು. ಆತನ ಉದ್ದೇಶ, ನಿಜಾಮಶಾಹನೊಂದಿಗೆ ಗೆಳೆತನವಾಗಬೇಕು, ಮತ್ತು ಅದರಿಂದ ತಾನು ಉಪಯೋಗ ಪಡೆಯಬೇಕೆಂಬುದಾಗಿತ್ತು.

ಆದಿಲಶಹನು ರಾಮರಾಜನ ಈ ನಡತೆಯಿಂದ ಮತ್ತು ಯುದ್ಧದಲ್ಲಿಯ ಸಡಿಲತೆಯನ್ನು ಕಂಡು ಚಿಂತಾಗ್ರಸ್ತನಾದನು. ರಾಮರಾಜನು ಒಂದು ವೇಳೆ ಶತ್ರುವಿಗೆ ಸಹಾಯ ಮಾಡುತ್ತಿರುವನಾದರೆ, ಶತ್ರುವಿನ ಪರಾಭವ ಆಗುವುದಾದರೂ ಹೇಗೆ? ಇದರಲ್ಲಿ ನನ್ನ ಕೆಲಸ ಕೆಡುತ್ತದೆ. ಆದ್ದರಿಂದ ರಾಮರಾಜನ ಸಹಾಯದ ಆಶೆಯನ್ನು ಬಿಟ್ಟು, ಅಲ್ಲಾನ ಕೃಪೆಯ ಮೇಲೆ ಭರವಸೆಯನ್ನಿಟ್ಟು, ತನ್ನ ಶಸ್ತ್ರಾಸ್ತ್ರಗಳೊಂದಿಗೆ ಸೈನ್ಯವನ್ನು ಸಿದ್ಧ ಪಡಿಸಿಕೊಂಡು ಸ್ವತಃ ನಿಜಾಮಶಾಹನ ಸೈನ್ಯದ ಮೇಲೆ ಏರಿ ಹೋದನು. ಧೈರ್ಯದಿಂದ - ಶಸ್ತ್ರಾಗ್ನಿಯನ್ನು ಪ್ರದೀಪ್ತಿಸಿದನು. ಅತಿ ಶೌರ್ಯ ಹಾಗು ಪರಾಕ್ರಮದಿಂದ ಕಾದಿದನು. ನಿಜಾಮಶಾಹನ ಸೈನ್ಯವು ಕೂಡ ಆದಿಲಶಾಹನ ಸೈನ್ಯವನ್ನು ಅಷ್ಟೇ ಧೈರ್ಯದಿಂದ ಎದುರಿಸಿ ಯುದ್ಧ ಮಾಡಿತು. ಕೊನೆಗೆ ರಾಮರಾಯನು ಈ ಸಮಯದಲ್ಲಿ ಸಹಾಯ ಮಾಡಲಾರನೆಂದು ನಿಜಾಮಶಾಹನು ತಿಳಿದು ಆತನು ಧೈರ್ಯಗುಂದಿದನು. ಯುದ್ಧದಿಂದ ಒಬ್ಬನೇ ಓಡಿದನು. ಆದಿಲಶಹನು ಅತ್ಯಂತ ಪರಾಕ್ರಮದಿಂದ ಕಾದಿ, ನಿಜಾಮ ಶಾಹನ ಮೇಲೆ ಕಠಿಣ ಸಮಯವನ್ನು ತಂದಿದ್ದನು. ಅದರಿಂದಾಗಿ ನಿಜಾಮಶಾಹನು ತನ್ನ ಪ್ರಾಣ ಉಳಿದರೆ ಸಾಕೆಂದು ತಿಳಿದನು. ತನ್ನ ಸೈನ್ಯದಲ್ಲಿಯ ಸಾಮಾನು ಸರಂಜಾಮುಗಳ ಆಶೆಯನ್ನು ಬಿಟ್ಟು ಹೊರಗೆ ಓಡಿ ಹೋದನು. ಆಗ ಆನೆಗಳು, ಕುದುರೆಗಳು ಮೊದಲಾಗಿ ಬಹಳಷ್ಟು ಧನ-ದೌಲತ್ತುಗಳು, ಸಾಮಾನು-ಸರಂಜಾಮುಗಳು, ಬಾದಶಾಹಿಯ ಜರೀ-ಪಟಕಾ, ಮತ್ತು ನಿಶಾನೆಗಳು, ಚೌಘಡಗಳು, ಹಸಿರು ಬಣ್ಣದ ಖಾಸಾ ನಿಶಾನೆ. ಅದನ್ನು ಗುಜರಾತ ಬಾದಶಹನು ಕೊಟ್ಟಿದ್ದನು. ಅಲ್ಲದೆ ನಿಜಾಮಶಾಹನ ರಾಜ್ಯಾಧಿಕಾರದ ಸಾಮಾನು ಸರಂಜಾಮುಗಳೆಲ್ಲ ಆದಿಲಶಹನ ಕೈಗೆ ಸಿಕ್ಕಿತು. ಆಲಿ ಆದಿಲಶಹನು ಯಶಸ್ವಿ ಹಾಗೂ ವಿಜಯಿಯಾದನು. ಆ ದಿನದಿಂದ ಆದಿಲಶಹನು ತನ್ನ ಧ್ವಜವನ್ನು ಹಸಿರು ಬಣ್ಣದ್ದಾಗಿ ಬದಲಿಸಿದನು. ಅದಕ್ಕೆ ಮೊದಲು ಆದಿಲಶಹನ ಧ್ವಜವು ಹಳದಿ ಬಣ್ಣದ್ದಿತ್ತು.

ಅನಂತರ ಆದಿಲಶಹನು ರಾಮರಾಜನಿಗೆ ತಿರುಗಿ ಹೋಗಲು ಹೇಳಿ ತಾನು ಸೊಲ್ಲಾಪುರ ಸರಹದ್ದಿನಲ್ಲಿ ಬಂದು ಮುಟ್ಟಿದನು. ಈ ಮೊದಲಿನ ಯೋಜನೆಗಳ ಕಾರಣಗಳಿಂದ (ನಿಜಾಮಶಾಹ ಹಾಗು ರಾಮರಾಜನ) ಸೊಲ್ಲಾಪುರ ಕೋಟೆಯನ್ನು ಕೈವಶಮಾಡಿಕೊಳ್ಳುವುದನ್ನು ಹಿಂದೆ ಸರಿಸಿ, ಮತ್ತೆಂದಾದರೂ ಕೋಟೆಯನ್ನು ತೆಗೆದುಕೊಳ್ಳಲು ಬರುತ್ತದೆಂದು ನಿರ್ಧರಿಸಿ ಕೋಟೆಯ ಮೇಲೆ ಧಾಳಿ ಮಾಡಲಿಲ್ಲ. ಅದಕ್ಕೆ ಇನ್ನೊಂದು ಕಾರಣವೆಂದರೆ ಈ ಸಮಯದಲ್ಲಿ ಕೋಟೆಯನ್ನು ಗೆದ್ದು ವಿಜಯಿಯಾದರೆ, ಒಂದು ವೇಳೆ ರಾಮರಾಜನ ಗರ್ವ ಹಾಗು ಅಭಿಮಾನಗಳು ಬಲಿತು, ಆತನೆ ಕೋಟೆಯನ್ನು ತನಗೆ ಬೇಕೆಂದು ಕೈವಶ ಮಾಡಿಕೊಳ್ಳಲೂಬಹುದು, ಎಂಬುದನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಆ

ಕೋಟೆಯನ್ನು ತೆಗೆದುಕೊಳ್ಳುವುದಕ್ಕೆ ಹಿಂದೇಟು ಹಾಕಿದನು. ಆದರೆ ಆ ಸಮಯದಲ್ಲಿ ರಾಮರಾಜನಿಗೆ ಹೇಳಿ ಆ ಪ್ರದೇಶದ ನಳದುರ್ಗ ಎಂಬ ಹಳೆಯ ಕೋಟೆಯನ್ನು ಪೂರ್ವದಲ್ಲಿಯ ರಾಜರಲ್ಲಿಯ ಒಬ್ಬ ರಾಜನು ಕಟ್ಟಿದ್ದನು. ಆ ಕೋಟೆಯು ತುಂಬ ಹಳೆಯದಾಗಿ ಬಹಳಷ್ಟು ಹಾಳು ಬಿದ್ದಿತ್ತು. ಆ ಕೋಟೆಯನ್ನು ಮತ್ತೆ ಬಂಡೆಗಲ್ಲು-ಸುಣ್ಣಗಳಿಂದ ಥರವನ್ನು ತುಂಬಿ, ಗಟ್ಟಿಯಾಗಿ ಕಟ್ಟಿ ಆ ಕೋಟೆಗೆ 'ಶಾಹದುರ್ಗ' ಎಂಬ ಹೆಸರನ್ನಿಟ್ಟನು. ಆ ಕೋಟೆಯ ಮೇಲೆ ಯುದ್ಧ ಸೈನಿಕರನ್ನು, ಯುದ್ಧ ಸಾಮಗ್ರಿಗಳನ್ನು, ಮದ್ದುಗುಂಡುಗಳ ಭಾರೀ ಪ್ರಮಾಣದ ಸಂಗ್ರಹವನ್ನು ಮಾಡಿಟ್ಟು ತಾನು ವಿಜಾಪುರಕ್ಕೆ ಬಂದನು.

ರಾಮರಾಜನೂ ತನ್ನ ಸೈನ್ಯದೊಂದಿಗೆ ತಿರುಗಿ ಹೋಗುವಾಗ ಮುಸಲ್ಮಾನ ಬಾದಶಹರ ಇಲಾಖೆಗಳಲ್ಲಿಯ ಹಿಂದು-ಮುಸ್ಲೀಮರ ಸ್ಥಳಗಳನ್ನು ಜಬರದಸ್ತಿನಿಂದ ಹಸ್ತಗತ ಮಾಡಿಕೊಂಡು, ಕೆಲವು ಸ್ಥಳಗಳನ್ನು ತನ್ನ ಕಡೆಯ ಜನರಿಗೆ ಕೊಟ್ಟನು. ತನ್ನ ಸಹೋದರ ವೆಂಕಟಾದ್ರಿಯ ಜೊತೆಗೆ ತುಸು ಸೈನ್ಯವನ್ನು ಕೊಟ್ಟು ಮುಸಲ್ಮಾನ ಜನರ ಊರುಗಳನ್ನು ಸುಲಿಗೆ ಮಾಡಲು ಕೃಷ್ಣಾತೀರದಲ್ಲಿ ಇಟ್ಟು ತಾನು ವಿಜನನಗರಕ್ಕೆ ಬಂದನು.

ಆದಿಲಶಾಹನು ಅದೇ ವರುಷ ಕಿಶ್ವರಖಾನನ ತೋಟದಲ್ಲಿ, ಯಾವ ತೋಟದಲ್ಲಿ ಪ್ರಥಮ ಸಲ ಉಳಿದುಕೊಂಡಿದ್ದನೋ ಅದೇ ಸ್ಥಳದಲ್ಲಿ ವಸತಿಯನ್ನು ಮಾಡಿ, ನಗರದ ಮತ್ತು ಸುತ್ತಮುತ್ತಲಿನ ಜನರಿಂದ ಕಾಣಿಕೆ ಮತ್ತು ಸತ್ಕಾರಗಳನ್ನು ಪಡೆದನು. ಆ ಸ್ಥಳದಲ್ಲಿ ಊರನ್ನು ಕಟ್ಟಿದನು. ಆ ಊರಿನ ಹೆಸರನ್ನು ಶಾಹಪುರ ಎಂದು ಇಟ್ಟನು. ತುಸುವೆ ದಿನಗಳಲ್ಲಿ ಆದಿಲಶಾಹನ ಪ್ರಯತ್ನದಿಂದ ಆ ಊರು ಒಂದು ನಗರವಾಗಿ ಬೆಳೆಯಿತು. ಎರಡನೆಯ ಇಬ್ರಾಹಿಮ ಆದಿಲಶಾಹನ ಕಾಲದಲ್ಲಿ ಶಾಹಪುರದ ಜನಗಣತಿಯನ್ನು ಮಾಡಿದಾಗ ಅಲ್ಲಿ ಒಂಭತ್ತು ಲಕ್ಷ ಜನವಸತಿ ಇತ್ತೆಂದೂ ಹೇಳಲಾಗುತ್ತದೆ.

### ೬. *ರಾಮರಾಜನ ಗದ್ದಲ, ಮುಸಲ್ಮಾನ ಬಾದಶಹರು ಆತನ ಕೆಟ್ಟ ನಡತೆಯ ನಿವಾರಣೆ ಮಾಡಿದ್ದು :*

ರಾಮರಾಜನು ಬಾದಶಹರ ಜೊತೆಗಿನ ಸ್ನೇಹವನ್ನು ಬದಲಿಸುತ್ತ, ಒಬ್ಬರನ್ನೊಬ್ಬರ ಮೇಲೆ ಎತ್ತಿ ಕಟ್ಟುತ್ತ ತಾನು ಗರ್ವದಿಂದ ಬೀಗುತ್ತಿದ್ದನು, ಅವನಿಗೆ ಅಭಿಮಾನದ ಸೊಕ್ಕು ತಲೆಗೇರಿತ್ತು. ನಾನೊಬ್ಬನೇ ಶೂರ, ನನ್ನನ್ನು ಬಿಟ್ಟು ಇನ್ನು ಯಾರೂ ಇಲ್ಲ ಎಂದೆಲ್ಲ ತಿಳಿದಿದ್ದನು. ಸಾಯುವವರೆಗೂ ಆತನು ಸೊಕ್ಕಿನಲ್ಲಿಯೆ ಕಾಲ ಕಳೆದನು. ಮುಳುಗುವಾಗ ಮಾತ್ರ ಭಗವಂತನಿಂದ ಕರುಣೆಯ ಭಿಕ್ಷೆಯನ್ನು ಬೇಡಿದನು. ಆದರೆ ಭಗವಂತನು ತನ್ನ ಕ್ರೋಧದ ಚಾಬೂಕಿನಿಂದ ಅವನ ಪಾರುಪತ್ಯವನ್ನು ಮಾಡಿ, ಒಂದು ಕಣ್ಣಿನ ರೆಪ್ಪೆ ಬಡಿಯಿತೋ ಇಲ್ಲವೋ ಎಂಬಷ್ಟರ ಅವಕಾಶದಲ್ಲಿ ಆತನ ಗರ್ವದ ಪರ್ವತವನ್ನು ಹಿಂಜಿದ ಹತ್ತಿಯಂತೆ ಮಾಡಿ, ಮುಸಲ್ಮಾನ ಜನರ ಧರ್ಮದ ಪ್ರಬಲತೆಯನ್ನು ಪ್ರಸಿದ್ಧ ಮಾಡಿದನು.

ರಾಮರಾಜನು ಮೂಲತಃ ವಿಜಯನಗರದಲ್ಲಿ ರಾಜರ ಜನರಲ್ಲಿ ನೌಕರಿ ಮಾಡುವವರ -ಲ್ಲೊಬ್ಬನಾಗಿದ್ದನು. ಕಾಲಚಕ್ರದಲ್ಲಿ ಮತ್ತು ದೈವಯೋಗದಿಂದ ತುಸುವೆ ದಿನಗಳಲ್ಲಿ ಯಾರ ವಶೀಲಿಯೂ ಇಲ್ಲದೆ, ಯಾರೂ ಮನಸ್ಸು ಮಾಡದೆ, ನಿರ್ಭಯದಿಂದ ವಿಜಯನಗರದ ಸಿಂಹಾಸನದ ಮೇಲೆ ಕುಳಿತನು. ವಿಜಯನಗರ ಸಾಮ್ರಾಜ್ಯದ ಪ್ರಬಲ ರಾಜನಾದನು. ವಿಜಯನಗರವು ಒಂದು ದೊಡ್ಡ ನಗರವಾಗಿತ್ತು. ಜನವಸತಿಯೂ ತುಂಬ ನಿಬಿಡವಾಗಿತ್ತು. ವಿಜಯನಗರ ರಾಜ್ಯದಲ್ಲಿ ಒಂದು ಸಾವಿರ ಕೋಸುಪರ್ಯಂತ

ನಗರಗಳು, ಪಟ್ಟಣಗಳು, ಎಲ್ಲ ದಿಕ್ಕುಗಳಲ್ಲಿ ಹಳ್ಳಿಗಳು ಇದ್ದು ಜನರು ವಾಸಿಸುತ್ತಿದ್ದರು. ಅದೆಷ್ಟೋ ಬೆಟ್ಟಗಳು, ಸಮುದ್ರದ ಕೊಲ್ಲಿ ಕೂಡ ಜನವಸತಿಯನ್ನು ಹೊಂದಿದ್ದುವು. ವಿಜಯನಗರದ ವಶದಲ್ಲಿಯೇ ಅದೆಷ್ಟೋ ವಿಸ್ತೀರ್ಣದ ಪ್ರದೇಶವಿತ್ತು. ಅರವತ್ತು ಬಂದರುಗಳು, ಅದೆಷ್ಟೋ ಕೋಟೆಗಳು, ಚಿನ್ನದ, ರತ್ನದ, ವಜ್ರದ ಖಣಿಗಳು ವಿಜಯನಗರದ ಪ್ರದೇಶದಲ್ಲಿ ಇದ್ದುವು. ಬಹು ಬೆಲೆಬಾಳುವ ಬಹಳಷ್ಟು ಪದಾರ್ಥಗಳೂ ಈ ಪ್ರದೇಶದಲ್ಲಿ ಉತ್ಪನ್ನವಾಗುತ್ತಿದ್ದುವು. ವಿಜಯನಗರ ರಾಜ್ಯದ ಒಟ್ಟು ಕಂದಾಯ ವಸೂಲಿ. ಇಪ್ಪತ್ತು ಕೋಟಿ ಹೊನ್ನು ಇತ್ತೆಂದೂ ಹೇಳಲಾಗುತ್ತದೆ. ಯಾವಾಗಲೂ ಪ್ರತಿನಿತ್ಯ ನಾಲ್ಕು ಲಕ್ಷ ಸವಾರರು, ಒಂಭತ್ತು ಲಕ್ಷ ಕಾಲ್ದಳ ಸಿಬ್ಬಂದಿಯ ಅರಮನೆಯ ಮುಂದೆ ಸಿದ್ಧರಾಗಿ ನಿಂತಿರುತ್ತಿದ್ದರು.

ಆ ಸಮಯದಲ್ಲಿ ದಕ್ಷಿಣದ ಎಲ್ಲಾದರೂ ಒಂದು ಸ್ಥಳದಲ್ಲಿ ಒಬ್ಬ ಮುಸಲ್ಮಾನನು ದೀಪ ಹಚ್ಚಿ ಪ್ರಜ್ವಲಿಸುತ್ತಿದ್ದರೆ ಅದು ಬಹಮನಿ ಬಾದಶಹರ ರಾಜಧಾನಿ ಮಾತ್ರ ಆಗಿತ್ತು. ಯಾವಾಗಲೂ ಬಹಮನಿ ಜನರು ಅಲ್ಲಾನ ಕೃಪೆಯಿಂದ ಹಿಂದು ಬಾದಶಹರೊಂದಿಗೆ ಯುದ್ಧ ಮಾಡುತ್ತಿದ್ದರು. ಬಹುತೇಕ ಮುಸಲ್ಮಾನರು ಯಶಗಳಿಸುತ್ತಿದ್ದರು. ಯಾವಾಗಾದರೊಮ್ಮೆ ಸೋಲುತ್ತಿದ್ದರು. ಆದರೆ ಸ್ಥಿರತೆ ಇರಲಿಲ್ಲ. ಅನಂತರ ಬಹಮನಿಗಳ ವೈಭವ ಕ್ಷೀಣವಾಗಹತ್ತಿತು. ಬಹಳಷ್ಟು ಬಾದಶಹರಾದರು. ಒಂದೇ ಅಧಿಕಾರದ ರಾಜ್ಯದಲ್ಲಿ ಐದಾರು ಬಾದಶಹರು ದಕ್ಷಿಣ ದೇಶದಲ್ಲಿ ಎದ್ದರು. ಯಾವಾಗಲೂ ತಂತಮ್ಮಲ್ಲಿ ಕಲಹ ಮತ್ತು ಯುದ್ಧಗಳನ್ನು ಮಾಡುತ್ತ ಪರಸ್ಪರ ಒಬ್ಬರೊಬ್ಬರನ್ನು ಹಾಳು ಮಾಡುವುದರಲ್ಲೆ ನಿರತರಾಗಿರುತ್ತಿದ್ದರು. ತಮ್ಮ ಲಾಭ ಹಾಗೂ ಹಿತಗಳನ್ನು ಇನ್ನೊಬ್ಬರ ಆಘಾತದಲ್ಲಿ ಕಾಣುತ್ತಿದ್ದರು. ಹೀಗೆ ಕಲಹ ಮಾಡುತ್ತಿದ್ದ ಮುಸಲ್ಮಾನ ರಾಜರು ಶತ್ರುಗಳನ್ನು ಸೋಲಿಸಲು ರಾಮರಾಜನೊಂದಿಗೆ ಸಖ್ಯ ಬೆಳಸಿ ಆತನಿಂದ ಸಹಾಯ ಇಚ್ಛಿಸುತ್ತಿದ್ದರು.

ಈ ಪ್ರಕಾರ ರಾಮರಾಜನ ಗರ್ವ, ಸೊಕ್ಕು, ಅಭಿಮಾನಗಳು ಬೆಳೆಯಲು ಕಾರಣವಾದುವು. ಅದು ಎಲ್ಲಿಯವರೆಗೆ ಬಂತೆಂದರೆ ಆದಿಲಶಾಹನಿಗೆ ಸಹಾಯ ಮಾಡುತ್ತೇನೆಂದು ತೆಗೆದುಕೊಂಡು ಹೋಗುತ್ತಿದ್ದನು. ಮುಸಲ್ಮಾನರಿಗೆ ಉಪದ್ರವ ಕೊಡುವುದಿಲ್ಲ ಮಸೀದಿಗಳನ್ನು ಕೆಡುವುದಿಲ್ಲ ಎಂದು ಅಲಿ ಆದಿಲಶಹನೊಂದಿಗೆ ಒಪ್ಪಂದ ಮಾಡಿಕೊಂಡಿದ್ದರೂ ಮತ್ತು ಮಸೀದಿಯನ್ನು ಕೆಡವಬಾರದು, ಮುಸಲ್ಮಾನರಿಗೆ ಉಪದ್ರವ ಕೊಡಬಾರದು, ಕುರಾನ ಶರೀಫದ ಅವಮರ್ಯಾದೆಯಾಗಬಾರದು ಎಂದು ಬಾದಶಹರ ಮನಾಯಿ ಇದ್ದರೂ, ಆತ ಮಸೀದಿಯನ್ನು ಕೆಡವುತ್ತಿದ್ದ. ಮುಸಲ್ಮಾನ ಜನರನ್ನು ಹೊರ ಪ್ರದೇಶಗಳಲ್ಲಿ ಬಂಧಿಸಿ ತೆಗೆದುಕೊಂಡು ಹೋಗುತ್ತಿದ್ದ. ಅಲಿ ಆದಿಲಶಹನ ಇಲಾಖೆಯಲ್ಲಿಯ ಗ್ರಾಮಗಳನ್ನು ದಬ್ಬಾಳಿಕೆ ಮಾಡಿ ಬಲಾತ್ಕಾರದಿಂದ ತೆಗೆದುಕೊಂಡು ತನ್ನ ಆಪ್ತ ಜನರಿಗೆ ಕೊಡುತ್ತಿದ್ದನು.

ವಿಶೇಷವಾಗಿ ಈ ಎರಡನೆಯ ಸಲದ ಪ್ರವಾಸದಲ್ಲಿ ಆದಿಲಶಾಹನಿಗೆ ಸಹಾಯ ಮಾಡುತ್ತೇನೆಂದು ಬಂದು, ಅಹಮದನಗರದ ವರೆಗೆ ಪ್ರವೇಶಮಾಡಿ, ದೌಲತಾಬಾದ ಹಾಗೂ ಜುನ್ನರಗಳವರೆಗೆ ಮುಸಲ್ಮಾನರ ಆಸ್ತಿ ಪಾಸ್ತಿಯನ್ನು ನಾಶಮಾಡಿದನು. ರಾಮರಾಜನಿಗೆ ಬಹಳಷ್ಟು ಗರ್ವ ಹಾಗೂ ಸೊಕ್ಕು ಬಂದಿತ್ತು. ಅವನ ದೊಡ್ಡಸ್ತಿಕೆ ಹಾಗೂ ಪ್ರಾಮಾಣಿಕತೆಗಳಲ್ಲಿ ಬದಲಾಗಿತ್ತು. ಮೊದಲಿನ ಪ್ರಾಮಾಣಿಕತೆಯನ್ನು ಆತ ಬಿಟ್ಟಿದ್ದನು. ಐದು ಬಾದಶಹರ ಐವರು ರಾಯಭಾರಿಗಳು ರಾಮರಾಜನ ಆಸ್ಥಾನದಲ್ಲಿ ಯಾವಾಗಲೂ ಇರುತ್ತಿದ್ದರು. ಮೊದಲು ರಾಮರಾಜನು ಅವರೊಂದಿಗೆ ಸಖ್ಯವನ್ನಿಟ್ಟು ಕೊಂಡಿದ್ದನು. ಗೌರವದಿಂದ ಕಾಣುತ್ತಿದ್ದನು. ಏಕಾಂತದಲ್ಲಿ ಮಾತನಾಡುತ್ತಿದ್ದನು. ಮತ್ತು ಅವರೊಂದಿಗೆ ಸಂತೋಷದಿಂದ ಸಂಭಾಷಿಸುತ್ತಿದ್ದನು. ಆ ನಡತೆಯನ್ನು ಒಟ್ಟಾರೆಯಾಗಿ ಬಿಟ್ಟು, ಯಾವಾಗಾದರೊಮ್ಮೆ ರಾಯಭಾರಿಗಳಿಗೆ

ಆಸ್ಥಾನದಲ್ಲಿ ಬರಲು ಅವಕಾಶ ಮಾಡಿಕೊಡುತ್ತಿದ್ದನು. ಅವರೊಂದಿಗೆ ಸಿಟ್ಟಿನಿಂದ ಮತ್ತು ದ್ವೇಷದಿಂದ ಮಾತನಾಡುತ್ತಿದ್ದನು. ನಿತ್ಯದ ಪರಿಪಾಠವನ್ನು ಬಿಟ್ಟು ಸಾಕಷ್ಟು ಸಮಯ ಅವರು ನಿಲ್ಲುವಂತೆ ಮಾಡಿ ಅನಂತರ ಕುಳಿತುಕೊಳ್ಳಲು ಅನುಮತಿಯನ್ನು ನೀಡುತ್ತಿದ್ದನು. ನಿಯೋಗ ಹೊರಟರೆ ನಿಯೋಗದ ಮುಂದೆ ನಡೆಯಲು ರಾಯಭಾರಿಗಳು ಬಂದರೆ, ಅವರಿಗೆ ಮುಂದಿರಲು ಬೇಗ ಅನುಮತಿಯನ್ನು ಕೊಡುತ್ತಿರಲಿಲ್ಲ.

ರಾಮರಾಜನ ದೃಷ್ಟಿಯಲ್ಲಿ ಮುಸಲ್ಮಾನ ಜನರು ಕೇವಲ ಅಸಮರ್ಥರು ಮತ್ತು ನೀಚರು ಎಂದು ಕಂಡು ಬರುತ್ತಿತ್ತು. 'ಈ ಮುಸಲ್ಮಾನರಿಂದ ನಿರ್ಭಯನಾಗಿ, ನಿಸ್ಸಂಶಯವಾಗಿ ಎದೆ ಎತ್ತಿ ನಡೆಯುವ ವ್ಯಕ್ತಿ ನಾನೊಬ್ಬನೇ ನನ್ನಂಥ ದೊಡ್ಡ ವ್ಯಕ್ತಿ ಇನ್ನಾರೂ ಇಲ್ಲ' ಎಂದು ಮದೋನ್ಮತ್ತನಾಗಿ ಈ ಎಲ್ಲ ಅವಗುಣಗಳ ಅಯೋಗ್ಯ ನಡತೆಯ, ಅವಮರ್ಯಾದೆಯ ಉತ್ಪತ್ತಿ ಸ್ಥಾನವಾಗಿದ್ದನು, ಆದಾಗ್ಯೂ ಇನ್ನೊಬ್ಬ ಮುಸಲ್ಮಾನ ಬಾದಶಹನ ಕೈಯಿಂದ ಆಗದಂಥ ಸ್ನೇಹದ ನಡತೆಯನ್ನು ಆದಿಲಶಾಹನೊಬ್ಬನೇ ರಾಮರಾಜನೊಂದಿಗೆ ಬೆಳಸಿಕೊಂಡಿದ್ದನು. ಆದರೆ ರಾಮರಾಜನ ಇತ್ತೀಚಿನ ಸೊಕ್ಕು ಹಾಗೂ ಕೆಟ್ಟ ನಡತೆಯಿಂದಾಗಿ ಅಲಿ ಆದಿಲಶಹನೂ ಬೇಸತ್ತು ಸಿಟ್ಟಾಗುತ್ತಿದ್ದನು. ಮುಸಲ್ಮಾನ ಅಭಿಮಾನದಿಂದ ತೃಪ್ತನಾಗುತ್ತಿದ್ದನು. ಇದರಿಂದ ರಾಜ್ಯದ ಹಾಗೂ ಧರ್ಮದ ಕಲ್ಯಾಣವಾಗದೆಂದು ತಿಳಿದುಕೊಂಡನು.

ಆದ್ದರಿಂದ ರಾಮರಾಜನನ್ನು ಮುಗಿಸದೆ ಬೇರೆ ದಾರಿಯೇ ಇಲ್ಲ, ಆತನ ನಾಶವಾಗದ ಹೊರತು ಧರ್ಮಸ್ಥಾಪನೆಯಾಗಲಿ, ರಾಜ್ಯದ ಸಂರಕ್ಷಣೆಯಾಗಲಿ ಸಾಧ್ಯವಿಲ್ಲವೆಂದು ತಿಳಿದನು. ಮೊದಲು ಈ ದುರ್ಬುದ್ಧಿಯ ಅಧರ್ಮಿ ಹಿಂದು ಜನರೊಂದಿಗೆ ಯುದ್ಧ ಮಾಡುವುದೇ ಮುಸಲ್ಮಾನರಿಗೆ ಯೋಗ್ಯವೆಂದು ತನ್ನ ಆಪ್ತ ಜನರಲ್ಲಿ ಹೇಳಿಕೊಳ್ಳುತ್ತಿದ್ದನು. ಆದ್ದರಿಂದ ಧರ್ಮಸ್ಥಾಪಕ ಮುಸಲ್ಮಾನ ಬಾದಶಹನಿಗೆ ಹಿಂದು ಜನರ ಪಾರುಪತ್ಯ ಮಾಡುವುದು ವಿಹಿತವೇ ಆಗಿದೆ. ವ್ಯವಹಾರ ದೃಷ್ಟಿಯಿಂದ ನೋಡಿದರೂ ಈ ಅಧರ್ಮಿ ವ್ಯಕ್ತಿಯು ಗರ್ವದಿಂದ-ಸೊಕ್ಕಿನಿಂದ ಮೆರೆಯುತ್ತಿದ್ದು ಆತನ ಸೊಕ್ಕನ್ನು ಇಳಿಸಬೇಕೆಂದರೆ ಆತನನ್ನು ಕೊಲ್ಲಬೇಕು. ಇಲ್ಲವಾದಲ್ಲಿ ಮುಸಲ್ಮಾನ ಜನರು ಬದುಕಿ ಉಳಿಯುವುದು ಮತ್ತು ರಾಜ್ಯದಲ್ಲಿಯ ವ್ಯವಸ್ಥೆ ಸುಧಾರಿಸುವುದು ಸಾಧ್ಯವೇ ಇಲ್ಲ. ಆದ್ದರಿಂದ ಅವನೊಂದಿಗೆ ಯುದ್ಧ ಮಾಡಬೇಕು. ರಣಭೂಮಿಯಲ್ಲೆ ಯುದ್ಧಫಲವನ್ನು ಪಡೆಯಬೇಕು. ಅಲ್ಲಾನ ಕೃಪೆಯಿಂದ ಒಂದು ವೇಳೆ ನಮಗೆ ಯಶ ದೊರೆತರೆ ಮುಸಲ್ಮಾನರ ಧರ್ಮದ ತೇಜವು ವಿಸ್ತಾರವಾಗುತ್ತದೆ. ಎಲ್ಲ ಮುಸಲ್ಮಾನ ಜನರನ್ನು ಈ ಕಪಟ ವ್ಯಕ್ತಿಯ ದುಷ್ಕೃತ್ಯಗಳಿಂದ ಬಿಡುಗಡೆ ಮಾಡಬೇಕು. ಒಂದು ವೇಳೆ ಕಾರ್ಯಭಾವವು ವಿಪರೀತವಾದರೆ, ಸ್ವತಃ ರಣಭೂಮಿಯಲ್ಲಿ ಯುದ್ಧ ಪರಾಕ್ರಮವನ್ನು ಮೆರೆದು, ಮರಣಹೊಂದಿ ಸ್ವರ್ಗದಲ್ಲಿಯ ಯಶಸ್ವೀ ಜನರಲ್ಲೊಬ್ಬನಾಗಿ ನಾನೂ ಸೇರುವೆ. ಎರಡೂ ಸಾಧ್ಯತೆಗಳು ಉತ್ತಮವೇ ಆಗಿವೆ. ಅದರಲ್ಲಿ ಯಾವುದೊಂದು ಪ್ರಾಪ್ತವಾಗಲೇಬೇಕು. ನೀವು ರಾಜ್ಯದ ಹಿತವನ್ನೆ ಬಯಸುತ್ತೀರಿ, ಈ ವಿಷಯದಲ್ಲಿ ನಿಮಗೆ ಹೇಗೆ ಅನಿಸುತ್ತದೆ? ಎಂದು ಕೇಳಿದನು. ಆಗ ಕಿಶ್ವರಖಾನ ಲ್ಯಾರಿ ಮತ್ತು ಅಬುತುರಾಬ ಸಿರಾಜಿ ಇಬ್ಬರೂ ರಾಜ್ಯದ ನಿಷ್ಠಾವಂತ ನೌಕರರು ರಾಜ್ಯ ಕಲ್ಯಾಣವನ್ನೆ ಬಯಸುವವರು, ಹೀಗೆ ವಿನಂತಿಸಿಕೊಂಡರು.

"ರಾಮರಾಜನು ಶ್ರೀಮಂತನು. ಆತನ ಹತ್ತಿರ ದೊಡ್ಡ ಸೈನ್ಯವಿದೆ. ದುಡ್ಡು ಸಾಕಷ್ಟಿದೆ. ವಿಶ್ವದಲ್ಲೆಲ್ಲ ಆತನ ಅಂಜಿಕೆ ಇದೆ. ಆದ್ದರಿಂದ ಸಂಪೂರ್ಣ ಸರದಾರರ ಸಹಾಯವಿಲ್ಲದೆ ಅವನೊಂದಿಗೆ ಯುದ್ಧ ಮಾಡುವುದರಲ್ಲಿ ಯಾವ ಉಪಯೋಗವೂ ಇಲ್ಲ. ಅಲ್ಲದೆ ನಾವಾಗಿಯೇ ಹೋಗಿ ಅವನೊಂದಿಗೆ ಯುದ್ಧ ಮಾಡುವುದೆಂದರೆ ಮರಣಕ್ಕೆ ಮೂಲವಾಗುತ್ತದೆ. ಆದ್ದರಿಂದ ಮೊದಲು ನಾವು ನಮ್ಮ ನಮ್ಮಲ್ಲಿಯ ಎಲ್ಲ

ಸರದಾರರೂ ಸೇರಬೇಕು. ಅನಂತರ ಯುದ್ಧದ ಸಂಕಲ್ಪ ಮಾಡಬೇಕು". ಆದಿಲಶಹನಿಗೆ ಅವರ ಬುದ್ಧಿವಾದವು ಸರಿ ಕಂಡಿತು. ಅವರ ಮಾತುಗಳಿಗೆ ಒಪ್ಪಿದನು.

ಆದರೆ ನಿಜಾಮಶಾಹನ ಅಂತಃಕರಣವು ಆದಿಲಶಹನಿಂದ ದುಃಖ ಹೊಂದಿತ್ತು. ಅದರಿಂದಾಗಿ ಅವರವರಲ್ಲಿ ಸರಿ ಇರಲಿಲ್ಲ. ಕುತುಬಶಾಹನು ರಾಮರಾಜನ ಉಪದ್ರವದಿಂದ ತುಂಬ ಬೇಸತ್ತಿದ್ದನು. ಯಾವಾಗಲೂ ಮನದಲ್ಲಿ ಕುದಿಯುತ್ತಿದ್ದನು. ರಾಮರಾಜನ ಸಾವಿಗಾಗಿ ಅಲ್ಲಾನಲ್ಲಿ ಸದಾಕಾಲವೂ ಪ್ರಾರ್ಥಿಸುತ್ತಿದ್ದನು. ನಿಜಾಮಶಾಹಿ ಯುದ್ಧ ಪ್ರಸಂಗದಲ್ಲಿ ಮೇಲಿಂದ ಮೇಲೆ ಅಪಜಯವನ್ನು ಅನುಭವಿಸಿ, ಸೋತು ಚಕ್ಕಡಿಗಳು, ರಾಜಧಾನಿಯ ಸಾಮಾನುಗಳು ಆನೆಗಳು ಕುದುರೆಗಳು ಧ್ವಜಗಳು, ಪ್ರದೇಶಗಳ ಸಹಿತವಾಗಿ ಶತ್ರುವಿನ ಕೈಗೆ ಸಿಕ್ಕಿದ್ದವು. ನಿಜಾಮಶಹನೂ ಸಂತಾಪದಿಂದ ಉಗುರು ಕಚ್ಚುತ್ತಿದ್ದನು. ಸೇಡಿಗಾಗಿ ಹಾತೊರೆಯುತ್ತಿದ್ದನು. ಏನು ಮಾಡಬೇಕೆಂಬ ಯೋಚನೆಯಲ್ಲಿದ್ದನು. ಆದಿಲಶಹನ ಪ್ರಾಬಲ್ಯವು ರಾಮರಾಜನ ಬೆಂಬಲ ಮತ್ತು ಆಶ್ರಯದಿಂದಲೇ ಇದೆ. ರಾಮರಾಜನು ಮಧ್ಯದಲ್ಲಿರುವವರೆಗೆ ತಮ್ಮ ಮನೋರಥಗಳು ಪೂರ್ಣಗೊಳ್ಳುವುದು ಸರ್ವೋಪರಿ ಕಠಿಣ. ಮೊದಲು ರಾಮರಾಜನನ್ನು ಮುಗಿಸಬೇಕು ಎಂಬ ವಿಚಾರವನ್ನು ಮಾಡಬೇಕು. ಅನಂತರ ಆದಿಲಶಾಹನ ಬೆನ್ನೆಲುಬನ್ನು ಮುರಿದು ಅವನೊಂದಿಗೆ ಸೇಡು ತೀರಿಸಿಕೊಳ್ಳಬಹುದು.

ಆದರೆ ರಾಮರಾಜನ ನಾಶವು ಆದಿಲಶಹನ ಆಶ್ರಯವಿಲ್ಲದೆ ಸಾಧ್ಯವಿಲ್ಲವೆಂಬುದೂ ಅವನಿಗೆ ತಿಳಿದಿತ್ತು. ಇದನ್ನು ತಿಳಿದೇ ಆದಿಲಶಹನೊಂದಿಗೆ ಸಖ್ಯ ಬೆಳೆಸಲು ಎಲ್ಲರೂ ಮುಂದಾದರು. ಆತನೊಂದಿಗೆ ಅತ್ಯಂತ ಸ್ನೇಹ ಭಾವವನ್ನು ಪ್ರದರ್ಶಿಸಿ ಮೊದಲು ಕುತಾಬಶಾಹವನ್ನು ಅವನೊಂದಿಗೆ ಕೂಡಿಸಿದರು. ಒಬ್ಬ ಬುದ್ಧಿವಂತ ವಕೀಲನನ್ನು ಆದಿಲಶಾಹನ ಹತ್ತಿರ ಕಳಿಸಿ ಸಖ್ಯ ಬೆಳೆಸಿದರು. ಸೋಲ್ಲಾಪುರದ ಕೋಟೆಯ ಬಗ್ಗೆ ಉಭಯತರಲ್ಲಿ ಜಗಳ ಹಾಗು ಯುದ್ಧಗಳಾಗುತ್ತಿದ್ದುವು. ಆ ಕೋಟೆಯ ಬೀಗದಕೈಯನ್ನು ಕಳಿಸಿ ನಿರೋಪ ಕಳಿಸಿದರು. "ಅಲ್ಲಾನ, ಪೈಗಂಬರರ ಆಶ್ರಯದಲ್ಲಿ ಹನ್ನೆರಡು ಇಮಾಮರ ಆಧಾರದಿಂದ ಮುಸಲ್ಮಾನರು ತಂತಮ್ಮಲ್ಲಿಯ ವೈರಭಾವವನ್ನು ಬಿಟ್ಟು ಗೆಳೆಯರಾಗಿ, ಸ್ವಚ್ಛಮನಸ್ಸಿನವರಾಗಿ, ಒಬ್ಬರೊಬ್ಬರು ಕೂಡಿಕೊಂಡು ವೈರಿಗಳಾದ ಶಸ್ತ್ರಧಾರಿ ಹಿಂದುಗಳನ್ನು, ಯಾರು ಪ್ರಪಂಚದ ಮತ್ತು ಪಾರಮಾರ್ಥದ ಶತ್ರುಗಳಿದ್ದಾರೆಯೋ ಅವರ ನಾಶವನ್ನು ಮಾಡಬೇಕಾಗಿದೆ. ಅವರೆ ಅಂತ್ಯಕಾಲದಲ್ಲಿ ಪರಲೋಕದ ಯೋಗ್ಯತೆಯನ್ನು ಪಡೆಯುತ್ತಾರೆ. ಎಲ್ಲ ಮುಸಲ್ಮಾನರನ್ನು ಹಿಂದು ಜನರ ಉಪದ್ರವದಿಂದ ನಿರ್ಭಯರನ್ನಾಗಿ ಮಾಡಬೇಕು. ಅಂದರೆ ಮಾತ್ರ ಪ್ರಪಂಚದಲ್ಲಿ ಈ ಕೀರ್ತಿ ಮತ್ತು ಪರಲೋಕದಲ್ಲಿ ಉತ್ತಮ ಫಲವು ದೊರೆಯುತ್ತದೆ. ಈ ಉತ್ತಮ ಕಾರ್ಯದ ಫಲವು ಬಹಳ ದಿನಗಳವರೆಗೆ ಈ ಲೋಕದಲ್ಲಿ ಸ್ಥಿರವಾಗಿ ಉಳಿಯುವುದು. ಅಲ್ಲಾನ ಆಶ್ರಯವನ್ನು ಬೇಡಿಕೊಳ್ಳೋಣ. ಯಾಕೆಂದರೆ ಪ್ರಪಂಚ ಹಾಗೂ ಪಾರಮಾರ್ಥದ ಸಲಹೆಯನ್ನು ಕೇಳದಿದ್ದರೆ, ನಮಗೆಯೇ ಅಪಕೀರ್ತಿ ಹಾಗೂ ಕೆಟ್ಟ ಹೆಸರು ಬರುತ್ತದೆ. ಆ ದುಷ್ಟ ಹಾಗು ಅಯೋಗ್ಯ ವ್ಯಕ್ತಿಯಿಂದ ನಾವು ಹಿಂಸೆಯನ್ನು ಮತ್ತು ನಾಶವನ್ನು ಅನುಭವಿಸಬೇಕಾಗುತ್ತದೆ. ಪ್ರತ್ಯಕ್ಷದಲ್ಲಿ ಧರ್ಮದ ಹಾನಿಯನ್ನು ಮತ್ತು ಪರಲೋಕದಲ್ಲಿ ಅಕಲ್ಯಾಣಕರಕವಾದ ಕರ್ಮವಾದ್ದರಿಂದ ತುಸುವೆ ದಿನಗಳಲ್ಲಿ ಆ ಅಧರ್ಮಿ ಮತ್ತು ಕಪಟ ಮನುಷ್ಯನು ಎಂದರೆ ರಾಮರಾಜನು ಸಾವಕಾಶವಾಗಿ ನಿಮ್ಮನ್ನು ಮತ್ತು ನಮ್ಮಲ್ಲಿಯ ಎಲ್ಲರನ್ನೂ ತನ್ನ ಕೈಕೆಳಗೆ ತಂದುಕೊಂಡು, ಕೈವಶಮಾಡಿಕೊಂಡು, ಆಕಾಶದಲ್ಲಿ ಹಿಂಸೆಯ ಹಾಗೂ ಅಧರ್ಮದ ಧ್ವಜವನ್ನು ಹಾರಿಸುತ್ತಾನೆ".

'ಇದು ಸತ್ಯ ಒಬ್ಬನೇ ಒಬ್ಬ ಮುಸಲ್ಮಾನನ್ನು ದಕ್ಷಿಣದಲ್ಲಿ ಯಾವ ಸಾಹಿತ್ಯವನ್ನೂ ಉಳಿಸಿಕೊಂಡು ಇರಲು ಬಿಡುವುದಿಲ್ಲ. ಆದಿಲಶಾಹನು ಈ ಪತ್ರವನ್ನು ಮನಸ್ಸಿನಲ್ಲಿಯೇ ಓದಿದನು. ಹಾಗೆ ಮಾಡುವುದರಿಂದ ನಮ್ಮ ಮನೋರಥಗಳು ಈಡೇರುವುವೆಂದು ತಿಳಿದನು ಮತ್ತು ಒಪ್ಪಿಕೊಂಡನು. ಗಟ್ಟಿಯಾದ ಪ್ರತಿಜ್ಞೆಯನ್ನು ಮಾಡಿದನು. ಪ್ರತಿಜ್ಞೆ ಸಿದ್ಧಿಗಾಗಿ ಮತ್ತು ಅದು ಗಟ್ಟಿಯಾಗಿರಲು ಸ್ನೇಹದೊಂದಿಗೆ ಶರೀರಸಂಬಂಧದ ಸಂಬಂಧವನ್ನೂ ಉಭಯತರದಲ್ಲಿ ಪ್ರಸ್ತಾಪಿಸಿದನು. ಉಭಯತರ ಒಪ್ಪಿಗೆಯೊಂದಿಗೆ, ಸ್ವಸಂತೋಷದಿಂದ ನಿಜಾಮಶಾಹನ ಮಗಳು ಚಾಂದಬೀಬಿ ಸುಲ್ತಾನಳನ್ನು ಅಲಿ ಆದಿಲಶಹನಿಗೂ, ಅಲಿ ಆದಿಲಶಹನ ತಂಗಿ ಬೀಬಿ ಹದಿಯಾ ಸುಲ್ತಾನಳನ್ನು ನಿಜಾಮಶಾಹನ ಮಗ ರಾಜಕುಮಾರ ಮುರ್ತುಜಾನಿಗೂ ಕೊಡಬೇಕೆಂದು ಕರಾರು ಸಿದ್ಧವಾಯಿತು. ಮದುವೆಯ ಸಮಾರಂಭದ ಕಾರ್ಯದ ಅನಂತರ ಅವಕಾಶ ಮಾಡಿಕೊಂಡು ರಾಮರಾಜನ ನಾಶ ಮಾಡುವ ಕೆಲಸವನ್ನು ವಿಚಾರಿಸಬೇಕೆಂದೂ, ಮದುವೆಯ ಸಮಾರಂಭ ಮುಗಿದ ಅನಂತರ ಒಬ್ಬರೊಬ್ಬರ ಸಹಾಯದಿಂದ ಯುದ್ಧ ಸಾಮಗ್ರಿಗಳನ್ನು ತೆಗೆದುಕೊಂಡು ವಿಜಯನಗರದ ಮೇಲೆ ವೈಭವದ ಧ್ವಜವನ್ನು ನಿಲ್ಲಿಸಬೇಕೆಂದು ನಿರ್ಧರಿಸಲಾಯಿತು.

## ೭. *ಅಲಿ ಆದಿಲಶಹನೊಂದಿಗೆ ಚಾಂದಬೀಬಿ ಮತ್ತು ಬೀಬಿ ಹದಿಯಾ ಸುಲ್ತಾನಳ ಮದುವೆ ರಾಜಕುಮಾರ ಮುರ್ತಜಾ ನಿಜಾಮಶಾಹನೊಂದಿಗೆ ಆದದ್ದು:*

ಉಭಯ ಕಡೆಗಳಲ್ಲೂ ಸಂತೋಷದಿಂದ ಆನಂದದಿಂದ ಮದುವೆಯ ಸಿದ್ಧತೆಯನ್ನು ನಿರಂತರವಾಗಿ ಮಾಡತೊಡಗಿದರು. ಒಂದೇ ದಿನದಂದು ವಿಜಾಪುರ ಮತ್ತು ಅಹಮದನಗರ ರಾಜಧಾನಿ ನಗರಗಳನ್ನು ಶೃಂಗರಿಸಿ ಸಿದ್ಧಮಾಡಿದರು. ಎರಡೂ ನಗರಗಳ ಬಾಗಿಲು, ಗೋಡೆಗಳು, ರಸ್ತೆಗಳು, ಬಾಜಾರುಗಳು ಇಂದ್ರಭುವನದ ಹಾಗೆ ಮಾರ್ಪಟ್ಟುವು. ಪ್ರತಿಯೊಬ್ಬ ಸಣ್ಣ, ದೊಡ್ಡ ವ್ಯಕ್ತಿಯು, ತರುಣರು ವೃದ್ಧರು, ಅಲ್ಲಿಯವರು, ಇಲ್ಲಿಯವರು ಸಂತೋಷ ಪಟ್ಟು ಮದುವೆಯ ಸಮಾರಂಭವಾದ್ದರಿಂದ ತಂತಮ್ಮ ಭಾಂಡಾರದ ಮತ್ತು ಬಟ್ಟೆಬರೆಗಳ ಉಗ್ರಾಣದ ಬೀಗವನ್ನು ತೆರೆದರು. ಆಭರಣಗಳನ್ನು, ಪೋಷಾಖುಗಳನ್ನು ಎಲ್ಲರಲ್ಲೂ ಎದ್ದುಕಾಣುವಂತೆ ಮೈಮೇಲೆ ಹಾಕಿಕೊಂಡರು. ಪ್ರತಿಯೊಂದು ಗಲ್ಲಿಯಲ್ಲೂ, ರಸ್ತೆಯಲ್ಲೂ ಮದುವೆಯ ಗಲಿಬಿಲಿ ಮತ್ತು ಸಂತೋಷದ ಧ್ವನಿಯು ಆಕಾಶವನ್ನು ಮುಟ್ಟಿತು. ನೃತ್ಯಾಂಗನೆಯರು, ಕಲಾವಂತಿಣೆಯರು, ಸುಸ್ವರ ವಾದ್ಯದವರು ಅಲ್ಲಲ್ಲಿ ಮತ್ತು ಮನೆಮನೆಗಳಲ್ಲಿ ನಿಂತು ನೃತ್ಯ ಮಾಡಿದರು. ಸುಸ್ವರ ಹಾಡುಗಳನ್ನು ಹಾಡುವವರು, ಗಾಯಕರು ಪ್ರತಿಯೊಂದು ವಾಡೆಗಳಲ್ಲಿ ಮಹಡಿಯಮೇಲೆ ಕುಳಿತು ಗಾಯನ ಮಾಡುತ್ತ ಮನೋರಂಜನೆ ಮಾಡಿದರು. ಅವರ ಗಾಯನ ಎಷ್ಟೊಂದು ಪರಿಣಾಮಕಾರಿಯಾಗಿತ್ತೆಂದರೆ, ಅವರು ಹಾಡುವ ಸಮಯದಲ್ಲಿ ಹರಿಯುವ ನೀರು, ಹಾರುವ ಹಕ್ಕಿಗಳ ಗತಿ ಸ್ತಬ್ಧವಾಗಿರುತ್ತಿತ್ತು. ಖಾಸಾ ಸಮಾರಂಭಗಳಲ್ಲಿ ಮತ್ತು ಶ್ರೇಷ್ಠ ಸಭೆಗಳಲ್ಲಿ ಹಾಸಿಗೆಯ ಮೇಲೆ ಮುತ್ತು ರತ್ನಗಳನ್ನು ಚೆಲ್ಲುತ್ತಿದ್ದರು. ಪ್ರತಿಯೊಬ್ಬ ಖಾಸಾ ಜನರು ಮತ್ತು ಉಳಿದವರು ಇಂಥ ಸಭೆಗಳಲ್ಲಿ ಮುತ್ತು ರತ್ನಗಳನ್ನು ಚೆಲ್ಲುತ್ತಿದ್ದರು. ಅದರ ವಿವರ ವರ್ಣನೆಯನ್ನು ಎಷ್ಟೆಂದು ಬರೆಯಬೇಕು? ಯಾಕೆಂದರೆ ಸಭೆಯ ಅಲಂಕಾರದ ಶೋಭೆಯ ಸವಿಸ್ತಾರವನ್ನು ವರ್ಣಿಸಲು ಲೇಖನಿಗೆ ದಣಿವಾಗುತ್ತಿದೆ. ಅದು ನಿಲ್ಲುತ್ತಿದೆ. ಅತ್ಯಂತ ವೈಭವದ ಭಾರೀ ಮದುವೆಯ ಸಮಾರಂಭ ನಡೆಯಿತು.

ಮದುವೆಯ ಸಮಾರಂಭಗಳು. ಸಭೆ-ಸಂತೋಷ ಕೂಟಗಳು ಮೂರು ತಿಂಗಳು ಪರ್ಯಂತ ನಿರಂತರವಾಗಿ ವೈಭವೋಪೇತವಾಗಿ ನಡೆದುವು. ಮದುವೆಯ ಸಮಾರಂಭವಾದ ಅನಂತರ ಉಭಯ

ವಧುವರರನ್ನು ಅಲ್ಲಿಂದಿಲ್ಲಿಗೆ-ಇಲ್ಲಿಂದಲ್ಲಿಗೆ ಕಳಸಿಕೊಟ್ಟರು. ಚಾಂದಬೀಬಿ ಸುಲ್ತಾನ ವಧುವು ಸುದೈವಿಯಾಗಿ ಬಾದಶಹನ ಹೆಂಡತಿಯಾಗಿ ರಾಣಿಯಾಗಿ ವಿಜಾಪುರ ನಗರದ ಅಧಿಕಾರಿಣಿಯಾದಳು.

ಮದುವೆಯ ಸಮಾರಂಭದಲ್ಲಿ ಅವಕಾಶ ಮಾಡಿಕೊಂಡು ಶತ್ರುವಿನ ಮೇಲೆ ಏರಿ ಹೋಗಿ ಯುದ್ಧ ಮಾಡುವುದೆಂದು ಕರಾರು ನಿರ್ಧರಿತವಾಗಿತ್ತು. ಆದರಂತೆ, ಯುದ್ಧ ಸಾಮಗ್ರಿಗಳನ್ನು ತುಸುವೆ ದಿನಗಳಲ್ಲಿ ತಯಾರಿಸಲಾಯಿತು. ಸಿದ್ಧತೆಯಾಗುತ್ತಿದ್ದಂತೆ ಸಾಮಾನು ಸರಂಜಾಮುಗಳನ್ನು ಪಡೆದು ಯುದ್ಧಕ್ಕೆ ಸಿದ್ಧರಾದರು. ಯುದ್ಧದ ದಾವೆಯನ್ನು ಮತ್ತು ರಾಜ್ಯವನ್ನು ಹಸ್ತ ಗತ ಮಾಡಿಕೊಳ್ಳಲು ಪ್ರಾರಂಭದಲ್ಲಿ ಯಾರು ಮಾತನಾಡಬೇಕೆಂಬುದನ್ನು ಚರ್ಚಿಸಿದರು. ಮೊದಲು ಪ್ರಾರಂಭ ಮಾಡುವವನು ಮತ್ತು ಈ ಕೆಲಸದ ಸರಪಳಿಯನ್ನು ಜಗ್ಗುವವನು ರಣಭೂಮಿಯಲ್ಲಿ ಪಂಚಾನನನಂತೆ, ಯುದ್ಧಾರಣ್ಯದ ವ್ಯಾಘ್ರನಂತೆ, ನವಗ್ರಹಗಳಲ್ಲಿಯ ಮಂಗಳನ ಸ್ವಭಾವದ ಯೋಧನು ಪ್ರಾರಂಭಿಸಬೇಕು. ಈ ಎಲ್ಲ ಲಕ್ಷಣಗಳನ್ನೊಳಗೊಂಡ ಅಲಿ ಆದಿಲಶಹನು ಶೂರನೂ ಪರಾಕ್ರಮನೂ ಬಹಾದ್ದೂರನೂ ಆದದ್ದರಿಂದ ಆತನೆ ಮುಂದೆ ಬಂದು ಮೊದಲು ಯುದ್ಧವನ್ನು ಪ್ರಾರಂಭಿಸಬೇಕೆಂದು ನಿರ್ಧರಿಸಲಾಯಿತು.

ಆಗ ಆಗಿಲಶಹನು ಒಬ್ಬ ಮೃದು ಭಾಷಣ ಮಾಡುವ ಮಾತುಗಾರನನ್ನು ಕರೆದು ರಾಮರಾಜನಿಗೆ ನಿರೋಪವನ್ನು ಕಳಿಸಿಕೊಟ್ಟನು. ಅದರಲ್ಲಿ 'ಮುದಗಲ್ಲು ಮತ್ತು ರಾಯಚೂರು ಕೋಟೆಗಳನ್ನು ಜಬರದಸ್ತಿಯಿಂದ ತೆಗೆದುಕೊಂಡಿದ್ದು ರಾಮರಾಜನ ಕೈವಶವಾಗಿವೆ. ಅವುಗಳನ್ನು ತಿರುಗಿ ಕೊಡಬೇಕು. ಆ ಎರಡು ಕೋಟೆಗಳ ಇರಾದೆಯನ್ನು ಬಿಟ್ಟು ಸ್ನೇಹದಿಂದ ಇರಬೇಕು. ಇಲ್ಲವಾದಲ್ಲಿ ಯುದ್ಧಕ್ಕೆ ಸಿದ್ಧರಾಗಿರಬೇಕು' ಎಂದು ಬರೆಯಲಾಗಿತ್ತು. ಈ ಕಠಿಣ ನಿರೋಪವನ್ನು ಕಂಡ ಮದೋನ್ಮತ್ತ ರಾಮರಾಜನು, ಅತ್ಯಂತ ಸಿಟ್ಟಿಗೆದ್ದು, ವ್ಯಂಗ್ಯ ಮಾಡಿದನು. ಅವನು ಪ್ರತಿಯಾಗಿ ಬರೆದು ಕಳಿಸಿದುದರ ಅರ್ಥ ಹೀಗಿತ್ತು; 'ನನ್ನನ್ನು ಅಲುಗಾಡಿಸಬೇಡ, ಅಲ್ಲಿಯವರೆಗೂ ಪ್ರಪಂಚವೇ ಅಲುಗಾಡುವುದಿಲ್ಲ, ಅದರ ಭಾವಾರ್ಥವೆಂದರೆ, 'ನನ್ನನ್ನು ಅಲುಗಾಡಿಸಿದೆಯಾದರೆ ಇಡೀ ವಿಶ್ವವೇ ಅಲುಗಾಡುತ್ತದೆ' 'ನಿನಗೆ ಮತ್ತೆ ಮತ್ತೆ ಇದನ್ನೇ ಹೇಳುವೆ - ಇದನ್ನೇ ಹೇಳುವೆ' ಎಂದು ಹೇಳಿ ರಾಯಭಾರಿಗೆ ಪ್ರಾಣದಾನದ ಉಪಕಾರವನ್ನು ಮಾಡಿ, ತಕ್ಷಣ ಹಿಂತಿರುಗಿ ಕಳಿಸಿದನು. ಅವನ ಜೀವವನ್ನು ತೆಗೆಯಲಿಲ್ಲ ಆದರೆ ಹೊರಗೆ ಹಾಕಿದನು. ಆಗ ಯಾವಾಗಲೂ ಅಲ್ಲಿಯೇ ಇರುತ್ತಿದ್ದ ಇತರ ಮುಸಲ್ಮಾನ ರಾಯಭಾರಿಗಳನ್ನೆಲ್ಲ ಹೊರಗೆ ಹಾಕಲು ಆಜ್ಞೆ ಮಾಡಿದನು.

### ೮. ರಾಮರಾಜನೊಂದಿಗೆ ಯುದ್ಧ ; ಆತನ ಸೋಲು:

ಹೊಸದಾಗಿ ಹೋದ ವಕೀಲ ಮತ್ತು ಅಲ್ಲಿ ಇದ್ದ ಎಲ್ಲ ವಕೀಲರು ವಿಜಯನಗರದಿಂದ ಹೊರಟು ಬಂದ ಅನಂತರ ಹುಸೇನ ನಿಜಾಮಶಾಹ, ಇಬ್ರಾಹಿಮ ಕುತುಬಶಾಹ ಮತ್ತು ಅಲೀ ಬರೀದರು ದೊಡ್ಡ ಸೈನ್ಯ ಹಾಗೂ ಯುದ್ಧ ಸಾಮಗ್ರಿಗಳನ್ನು ತೆಗೆದುಕೊಂಡು ತಂತಮ್ಮ ರಾಜಧಾನಿಗಳಿಂದ ಹೊರಟು ವಿಜಾಪುರದತ್ತ ಬಂದರು. ಈ ವಿಷಯದಲ್ಲಿ ಬುರ್ಹಾನ ಇಮಾದುಲ್ಮುಲ್ಕ ಮತ್ತು ನಿಜಾಮಶಾಹರ ಮಧ್ಯ ವಿರಸವಿತ್ತು. ಆದ್ದರಿಂದ ಇವರ ಸಂಗಡ ಆತನು ಸೇರಿರಲಿಲ್ಲ. ಯುದ್ಧ ಮಾಡುವ ಫಲದಿಂದ ಆದ ದೈವಹೀನನಾಗಿದ್ದನು, ಮೂವರೂ ಬಾದಶಹರ ಸೈನ್ಯಗಳು ಆದಿಲಶಾಹನ ಪ್ರದೇಶದಲ್ಲಿ ಕಾಲಿಟ್ಟು ತಾಳಿಕೋಟೆಯ ಆಸುಪಾಸಿನಲ್ಲಿ ಬೀಡು ಬಿಟ್ಟರು. ಆದಿಲಶಾಹನಿಂದ ಬಾದಶಹಾಹೀ ಯೋಗ್ಯತೆಯ ಆದರಾತಿಥ್ಯ ನಡೆಯಿತು. ವೈಭವದ ಆದರಾತಿಥ್ಯದಲ್ಲಿ ಎಲ್ಲರೂ ಪಾಲುಗೊಂಡರು. ನಾಲ್ವರೂ ಬಾದಶಹರು ಸೇರಿ ಮತ್ತೊಮ್ಮೆ ಕರಾರಿನಂತೆ ನಡೆದುಕೊಳ್ಳಲು ಪ್ರತಿಜ್ಞೆ ಮಾಡಿದರು. ಪ್ರತಿಯೊಬ್ಬ ಮುಸಲ್ಮಾನ ಬಾದಶಹರು

ತಂತಮ್ಮ ಸರಹದ್ದಿನಲ್ಲಿ ಆಜ್ಞಾಪತ್ರಗಳನ್ನು ಸೇನಾಪತಿಯ ರುಜುವಿನೊಂದಿಗೆ ಪ್ರತಿಯೊಬ್ಬ ಬಾದಶಹರ ಸೈನ್ಯದ ದಳಕ್ಕ ಪೂರೈಸಬೇಕೆಂದು ಹೇಳಿಕಳಿಸಿದರು. ಹೀಗೆ ಆದೇಶ ಕಳಿಸಿ ಅಲ್ಲಿಂದ ವಿಜಯನಗರದ ಕಡೆಗೆ ಹೊರಟರು.[೪]

ಹೀಗೆ ನಾಲ್ವರೂ ಬಾದಶಹರು ಸೇರಿ ಸೈನ್ಯದೊಂದಿಗೆ ಯುದ್ಧ ಸಾರಿ ಇತ್ತ ಬರುತ್ತಿರುವರೆಂಬುದು ರಾಮರಾಜನಿಗೆ ತಿಳಿದಾಗ ಒಂದಿಷ್ಟೂ ವಿಚಲಿತನಾಗದೆ ವಿನಮ್ರನಾಗದೆ, ಮನದಲ್ಲಿ ಕಿಂಚಿತ್ತೂ ಭಯ ತರದೆ ತನ್ನ ಗರ್ವದಲ್ಲಿ ಸೊಕ್ಕಿನಿಂದ ಹಟಮಾರಿಯಂತೆ ಇದ್ದನು. ಯುದ್ಧದ ಸಿದ್ಧತೆಯನ್ನು ಮಾಡುತ್ತ ಸೈನ್ಯವನ್ನು ಸೇರಿಸಿದನು. ಮೊದಲಿಗೆ ತನ್ನ ಬಂಧುವಿನೊಂದಿಗೆ ಇಪ್ಪತ್ತು ಸಾವಿರ ಕುದುರೆ ಸವಾರರನ್ನು, ಒಂದು ಲಕ್ಷ ಕಾಲ್ದಳವನ್ನು ಹಾಗು ಪರ್ವತಾಕಾರದ ಐದು ನೂರು ಆನೆಗಳನ್ನು ಕೊಟ್ಟು ಯುದ್ಧಕ್ಕೆ ಕಳಿಸಿದನು. ಆತನ ಹಿಂದಿನಿಂದ ತನ್ನ ಇನ್ನೊಬ್ಬ ಸಹೋದರನನ್ನು ನಲ್ವತ್ತು ಸಾವಿರ ಸವಾರರು ಹಾಗು ಎರಡು ಲಕ್ಷ ಕಾಲ್ಬಲದೊಂದಿಗೆ ಒಂದು ಸಾವಿರ ಆನೆಗಳನ್ನು ಕೊಟ್ಟು ಕಳಿಸಿದನು. ಮುಸಲ್ಮಾನ ಜನರ ಸೈನ್ಯ ಬಂದು ಮುಟ್ಟುವ ಮೊದಲೆ ಕೃಷ್ಣಾ ನದಿಯ ತೀರವನ್ನು ಮುಟ್ಟಿ ಅವರ ನದಿಯ ಮಾರ್ಗವನ್ನು ತಡೆಯಬೇಕೆಂದು ಆಜ್ಞೆ ಮಾಡಿದ್ದನು. ಮುಸಲ್ಮಾನರ ಸೈನ್ಯಕ್ಕೆ ನದಿಯನ್ನು ಇಳಿದು ಬರುವ ಶಕ್ತಿ ಬರದಂತೆ ಅವರನ್ನು ತಡೆಯಬೇಕು. ಹೀಗೆ ಆದೇಶ ಕಳಿಸಿ ಅನಂತರ ಹಿಂದಿನಿಂದಲೇ ರಾಮರಾಜನು ತಾನೂ ಭಾರೀ ಸೈನ್ಯ, ಒಂದು ಲಕ್ಷ ಸವಾರರು ಐದು ಲಕ್ಷ ಕಾಲ್ಬಳದಲ್ಲಿ, ಬಂದೂಕುಧಾರಿ ಜನರು, ಬಿಲ್ಲುಬಾಣದವರನ್ನು ಸೇರಿಸಿ ಯುದ್ಧಕ್ಕೆ ಹೊರಟನು. ಸೈನ್ಯದಲ್ಲಿ ಮೂರು ತುಕಡಿಗಳನ್ನು ಮಾಡಿ ಎರಡನ್ನು ಮಕ್ಕಳಿಗೆ ಕೊಟ್ಟು ಒಂದನ್ನು ತಾನು ಇಟ್ಟುಕೊಂಡನು. ಮುಂದೆ ಹೋದ ಸೈನ್ಯವು ಆಜ್ಞೆಯಂತೆ ನದಿಯಲ್ಲಿ ಇಳಿದು ಬರುವ ಮಾರ್ಗವನ್ನು ಕೋಟೆಯಂತೆ ಸುತ್ತುವರಿದು ಮುಚ್ಚಿತು. ಭದ್ರವಾದ ಸೈನ್ಯವನ್ನು ಭೇದಿಸಿ ನದಿಯಲ್ಲಿ ಇಳಿದು ಬರಲು ಮಾರ್ಗವೆ ಇರಲಿಲ್ಲ.

ಮುಸಲ್ಮಾನರ ಸೈನ್ಯ ಕೃಷ್ಣಾತೀರಕ್ಕೆ ಬಂದು ನದಿಯನ್ನು ದಾಟಿ ಹೋಗುವ ಮಾರ್ಗವು ಮುಚ್ಚಿದೆ ಎಂದು ಗೊತ್ತಾದಾಗ ಈಜು ಬರುವ, ಜಲಮಾರ್ಗದಲ್ಲಿ ಅಭ್ಯಾಸವಿರುವ ಬೇಹುಗಾರರನ್ನು ಕರೆದು ಬೇರೆಡೆ ಇಳಿದು ನದಿಯನ್ನು ದಾಟಲು ಮಾರ್ಗವನ್ನು ಹುಡುಕಲು ಕಳಿಸಲಾಯಿತು. ಅವರು ಮೂವತ್ತು ನಾಲ್ವತ್ತು ಕೋಸುಗಳವರೆಗೆ ನಾಲ್ಕು ಕಡೆಗೆ ಹೋಗಿ, ನೀರಿನ ಆಳವನ್ನು ವಿಚಾರಿಸಿ ಬಂದರು. ಎರಡು-ಮೂರು ಸ್ಥಳಗಳಲ್ಲಿ ಸೈನ್ಯ, ಕುದುರೆ, ಆನೆಗಳು, ಯುದ್ಧ ಸಾಮಗ್ರಿಗಳನ್ನು ಕೂಡ ಸಾಗಿಸಲು ಬರುವ ಮಾರ್ಗವಿದೆಯೆಂದು ಗೊತ್ತಾದರೂ, ಅಲ್ಲಿಯೂ ರಾಮರಾಜನ ಸೈನ್ಯವು ನಿಂತಿದೆ ಎಂದು ತಿಳಿಯಿತು. ಸುದ್ದಿಯನ್ನು ತಿಳಿದ ಧರ್ಮವಂತ ಬಾದಶಹರು ತುಂಬ ಚಿಂತಿತರಾದರು. ಬುದ್ಧಿವಂತರನ್ನು ಹಾಗೂ ಇಂಥ ವಿಷಯಗಳಲ್ಲಿ ಸಾಕಷ್ಟು ಅನುಭವ ಪಡೆದ ಜನರನ್ನು ಸೇರಿಸಿ ಪರಸ್ಪರ ಚರ್ಚಿಸಿದರು. ಸಂಕಟದ ಗಂಟನ್ನು ಬಿಡಿಸಲು ಠಕ್ಕ ವಿದ್ಯೆಯೇ ಸರಿಯಾದ ಮಾರ್ಗವೆಂದು ನಿರ್ಧರಿಸಲಾಯಿತು. ಸ್ವತಃ ಮಹಮ್ಮದ ಪೈಗಂಬರರು ಸಾತ್ವಿಕ ವಿದ್ಯೆಯಿಂತಲೇ ಸಂಕಟದಿಂದ ಪಾರಾಗುವುದು ಸಾಧ್ಯವಿಲ್ಲ ಎಂದು 'ಹದೀಸ'ದಲ್ಲಿ ಹೇಳಿದ್ದಾರೆ. ಅದರಂತೆ ಮಾರ್ಗ ಬದಲಿಸಿ ಬೇರೊಂದು ಮಾರ್ಗದಿಂದ ನದಿಯನ್ನು ಇಳಿದು ಶತ್ರುಗಳು ಇತ್ತ ಬರುತ್ತಿದ್ದಾರೆಂಬ ವದಂತಿಯನ್ನು ರಾಮರಾಜನ ಸೈನ್ಯದಲ್ಲಿ ಪಸರಿಸಿದರು. ಅದರಂತೆ ಸೈನ್ಯದ ಚಲನೆಯನ್ನು

---

೪. ೨೦ ಜಮಾದಿಲಾವಲ ೯೭೨ ಹಿಜರಿ (೨೬ ದಿಶಂಬರ ೧೫೬೪)ರಂದು ಹೊರಟರು. ಬ್ರಿಗ್ಸ - ಫೆ III ಪು. ೧೨೬.

ಮಾಡಿದರು. ಅದರಿಂದಾಗಿ ರಾಮರಾಜನ ಸೈನ್ಯವು ನಿಜವೆಂದು ತಿಳಿದು ಶತ್ರುಗಳ ಸೈನ್ಯವನ್ನು ಎದುರಿಸಲು ಅಲ್ಲಿಂದ ಕಾಲ್ತೆಗೆದು ಬೇರೆಡೆ ಹೊರಟಿತು.

ಈ ಸಂಧಿಯನ್ನು ಸಾಧಿಸಿ ಮುಸಲ್ಮಾನರ ಸೈನ್ಯವು ಕೃಷ್ಣಾನದಿಯನ್ನು ಸುರಕ್ಷಿತವಾಗಿ ದಾಟಿತು. ಅನಂತರವೆ ರಾಮರಾಜನ ಸೈನ್ಯಕ್ಕೆ ತಾವು ಮೋಸ ಹೋದದ್ದು ತಿಳಿಯಿತು. ತಮ್ಮ ಪ್ರಯತ್ನವು ಮುಷ್ಠಿಯಲ್ಲಿ ಗಾಳಿಯನ್ನು ಹಿಡಿದಂತೆ ವ್ಯರ್ಥವಾಯಿತೆಂದು ತಿಳಿದರು. ತಾವು ತಪ್ಪಿದೆವು ಎಂದು ಪಶ್ಚಾತ್ತಾಪ ಪಟ್ಟರು. ಮುಸಲ್ಮಾನರ ಸೈನ್ಯವು ರಾತ್ರಿಯಲ್ಲಿ ಹೊಳೆಯನ್ನು ದಾಟಿ ತಮ್ಮ ಕಾರ್ಯವನ್ನು ಪೂರೈಸಿತು. ಇದನ್ನು ತಿಳಿದ ವಿಜಯನಗರ ಸೈನ್ಯವು ಅತ್ಯಂತ ಭಯಭೀತವಾಗಿ ರಾತ್ರಿಯನ್ನೆಲ್ಲ ಗಾಬರಿಯಲ್ಲಿ ಕಳೆಯಿತು. ಕುದುರೆಯ ಮೇಲೆ ಕುಳಿತವರು ಇಳಿಯಲಿಲ್ಲ ಕೂಡ.

ಪೂರ್ವದಿಶೆಯ ತೇಜರೂಪಿ ಸಿಂಹಾಸನದ ಮೇಲೆ ಮುಕುಟ ಧರಿಸಿದ ಸೂರ್ಯನು ಆರೂಢನಾಗಿ ಬಿಸಿಲಿನ ನ್ಯಾಯಾಲಯವನ್ನು ಪ್ರಾರಂಭಿಸಿದನು. ಬೆಳಗಾಯಿತು. ಮುಸಲ್ಮಾನ ಬಾದಶಹರು ತಮ್ಮ ಮುಂದಿನ ಯುದ್ಧಕ್ಕೆ ಸಿದ್ಧರಾದರು. ನಾಲ್ಕು ಜನ ಬಾದಶಹರ ಪ್ರತಿಯೊಂದು ಸೈನ್ಯಕ್ಕೆ ಹನ್ನೆರಡು ಧ್ವಜಗಳನ್ನು ನೀಡಲಾಯಿತು. ಪ್ರತಿಯೊಂದು ಧ್ವಜದ ಮೇಲೆ 'ನಸರಮೀನಲ್ಲಾಹ ಫತಹ ಕರೀಬ ಅನೀಯತೆ' ಎಂದು ದೊಡ್ಡ ಅಕ್ಷರಗಳಲ್ಲಿ ಬರೆದು, ಹನ್ನೆರಡು ಇಮಾಮರ ಹೆಸರುಗಳನ್ನು ಒಂದೊಂದು ಧ್ವಜಕ್ಕೆ ಇಡಲಾಯಿತು. ಆ ಹೆಸರನ್ನೂ ಧ್ವಜದ ಮೇಲೆ ಬರೆದರು. ಬಲ ಭಾಗದಲ್ಲಿ ಅಲಿ ಆದಿಲಶಹನು ತನ್ನ ಸೈನ್ಯದ ವ್ಯವಸ್ಥೆಯನ್ನು ಪೂರ್ತಿಯಾಗಿ ಪರ್ವತದಂತೆ ಮಾಡಿದ್ದನು. ಎಡಬದಿಯಲ್ಲಿ ಕುತುಬಶಾಹನು ಮತ್ತು ಅಲಿ ಬರೀದರು ನಿಂತರು. ಮಧ್ಯ ಭಾಗದಲ್ಲಿ ಹುಸೇನ ನಿಜಾಮಶಾಹನ ಸೈನ್ಯವು ವ್ಯವಸ್ಥಿತವಾಗಿ ನಿಂತಿತು. ಅಲ್ಲದೆ ನಿರ್ಧರಿಸಿದಂತೆ ಆಯಾ ಸ್ಥಾನಗಳಲ್ಲಿ ಆನೆಗಳನ್ನು ನಿಲ್ಲಿಸಿದರು. ತೋಪುಗಳಿಗೆ ಸರಪಳಿಗಳನ್ನು ಬಿಗಿದು ಮದ್ದುಗುಂಡುಗಳನ್ನು ತುಂಬಿ ಎದುರಿಗೆ ತಂದರು. ಅಲ್ಲಾನ ಮೇಲೆ ಭರವಸೆಯನ್ನಿಟ್ಟು ಶತ್ರುವಿನ ಮೇಲೆ ಏರಿ ಹೊರಟರು.

ಸೈನ್ಯ ಚಾಲನೆಯ ಶಬ್ದದಿಂದಲೇ ದೊಡ್ಡ-ದೊಡ್ಡ ಪರ್ವತಗಳ ಎದೆಯೊಡೆಯುವಂತಿತ್ತು. ರಣವಾದ್ಯದ ಭಯಂಕರ ಧ್ವನಿಯು ಮಹಮ್ಮದನ (ಗೋಲ) ಗುಮ್ಮಟದಂತೆ ಆಕಾಶದಲ್ಲಿ ಪ್ರತಿಧ್ವನಿಯಾಗುತ್ತಿತ್ತು. ಶೂರರ ಭಯಂಕರ ಕೂಗು, ವೀರರ ಹೊಡೆತಗಳು 'ಹಿಡಿ-ಹಿಡಿಯಿರಿ' ಎಂಬ ಕೂಗುಗಳು ಅರಣ್ಯವಾಸದ ಪಕ್ಷಿಗಳಿಗೆ ಬಲೆಯು ಪ್ರತಿಬಿಂಬವನ್ನು ನೋಡಿದುದಕ್ಕಿಂತ ಯಾತನಾಮಯವಾಗಿತ್ತು. ನೀರಿನಲ್ಲಿ- ಸಮುದ್ರದಲ್ಲಿಯ ಜಲಚರ ಪ್ರಾಣಿಗಳು ಮೀನುಗಳನ್ನು ಹಿಡಿಯುವ ಬಲೆಯಲ್ಲಿ ಬಿದ್ದುದಕ್ಕಿಂತ ಅಧಿಕ ದುಃಖವಾಯಿತು. ಮುಸಲ್ಮಾನರ ಸೈನ್ಯವು ಸಂಪೂರ್ಣ ಸಿದ್ಧತೆಯೊಂದಿಗೆ ಬರುತ್ತಿದೆಯೆಂದು ರಾಮರಾಜನ ಕಡೆಯವರು ನೋಡಿದರು. ರಾಮರಾಜನು ತನ್ನ ಸೊಕ್ಕಿನಲ್ಲಿ ಮುಸಲ್ಮಾನರ ಸೈನ್ಯದೊಂದಿಗಿನ ಯುದ್ಧವನ್ನು ಮಕ್ಕಳ ಆಟವೆಂದು ಭಾವಿಸಿದ್ದನು. ಅದರಲ್ಲೇನೂ ತೊಂದರೆಯಿಲ್ಲ ಸಹಜವಾಗಿ ಎದುರಿಸಬಹುದು ಎಂದು ತಿಳಿದಿದ್ದನು. ಹಾಗೆ ತಿಳಿದಿದ್ದುದೇ ಆತನ ಗರ್ವದ ಹಾಗೂ ಸೊಕ್ಕಿನ ಪರಿಣಾಮದ ಫಲವಾಗಿದೆ. ತನ್ನ ಯುದ್ಧದ ರಚನೆಯನ್ನೆ ಮಾಡದೆ ಪರಸ್ಪರರು ಯುದ್ಧದಲ್ಲಿ ಸೇರಿ ಬಿಟ್ಟರು. ಉಭಯತರ ಸೇನೆ ಒಂದರಿನ್ನೊಂದರಲ್ಲಿ ಸೇರಿ ಮುಸಲ್ಮಾನ ಸೈನ್ಯವನ್ನು ಎದುರಿಸಿತು. ಆ ಸಮಯದಲ್ಲಿ ರಾಮರಾಜನು ರತ್ನ ಖಚಿತವಾದ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದನು. ಅವನ ಸಂಗಡ ಇರುವ ಜನರೆಲ್ಲ ರಾಮರಾಜನಿಗೆ ಎಷ್ಟೆಂದು ತಿಳಿಹೇಳಿ ಇದು ಯುದ್ಧದ ಸಮಯ ಕುದುರೆಯ

ಮೇಲೆ ಕುಳಿತುಕೊಳ್ಳಿರಿ ಎಂದು ಹೇಳಿದರೂ ಆತನು ಅವರ ಮಾತಿಗೆ ಬೆಲೆ ಕೊಡದೆ, ಹೇಳುವವರಿಗೆ ದಿಕ್ಕಾರ ಹಾಕುತ್ತ 'ಇದಕ್ಕೆ ಯುದ್ಧವೆಂದು ಯಾರು ಹೇಳುತ್ತಾರೆ? ಇದು ಯುದ್ಧವಲ್ಲ- ಮಕ್ಕಳ ಆಟ ಇವರೆಲ್ಲ ಈಗಲೇ ಓಡಿಹೋಗುತ್ತಾರೆ' ಎಂದನು.

ಮುಸಲ್ಮಾನರ ಸೈನ್ಯವು ನಿರ್ಭಯದಿಂದ ಹಿಂದು ಜನರ ಸೈನ್ಯದ ಮೇಲೆ ಬಂದು ಬಿದ್ದಿತು. ಆಗ ಶಸ್ತ್ರಾಗ್ನಿಗಳು ಪ್ರಜ್ವಲಿಸಿದುವು. ಉಭಯತರ ಶೂರರು ಪರಸ್ಪರ ಎದುರಾದರು. ಯುದ್ಧವೆಂದರೆ ಹೇಗಿರುತ್ತದೆಂಬ ಪರಾಕ್ರಮವನ್ನು ಅವರು ತೋರಿಸುತ್ತಿದ್ದರು. ಒಂದೊಂದು ಸಮಯದಲ್ಲಿ ಮುಸಲ್ಮಾನರ ವೈರಿ-ಹಿಂದು ಜನಗಳ ಶರೀರದಲ್ಲಿಯ ಜೀವ ಪಕ್ಷಿಗಳನ್ನು ಹಾರಿಸಿಬಿಡುತ್ತಿದ್ದರು. ಇನ್ನೊಮ್ಮೆ ಹಿಂದು ಜನರು ರಾಕ್ಷಸೀ ಸ್ವಭಾವದಿಂದ, ಮೂರ್ಖತೆಯಿಂದ, ಮುಠ್ಠಾಳತನದಿಂದ ಮುಸಲ್ಮಾನ ಸೈನ್ಯದ ಜನರ ಪ್ರಾಣವನ್ನು ತೆಗೆಯುತ್ತಿದ್ದರು. ರಾಮರಾಜನು ಮುಸಲ್ಮಾನರ ಪ್ರತಾಪವನ್ನು ನೋಡಿ, 'ಇವರ ಕೈಯಿಂದ ಏನಾದೀತು?' ಎಂದು ತಿಳಿದವನು ಈಗ 'ವಿಪರೀತವಾಗಿ ಕಾಣುತ್ತಿದೆ' ಎಂದು ಭಾವಿಸಿ ಪ್ರಜ್ಞೆಯ ಮೇಲೆ ಬಂದನು.

ರತ್ನ ಖಚಿತ ಸಿಂಹಾಸನದಿಂದ ಇಳಿದು ಬಂಗಾರದ ಖುರ್ಚಿಯ ಮೇಲೆ ಕುಳಿತನು. ತನ್ನ ಬಿಡಾರದ ಎದುರಿಗೆ ನಾಲ್ಕು ಕಂಬಗಳನ್ನು ನೆಟ್ಟು ಅದಕ್ಕೆ ಹಾಸುಗಂಬಳಿಯೊಂದನ್ನು ಹೊದಿಸಿ ಅದಕ್ಕೆ ಮಖಮಲ್ಲಿನ ಬಟ್ಟೆಯನ್ನು ಹೊದಿಸಿ ಮಂಟಪವನ್ನು ಸಿದ್ಧಪಡಿಸಿದನು. ನಾಲ್ಕು ಮೂಲೆಗಳಿಗೂ ಮುತ್ತುಗಳ ಸರವನ್ನು ಪವಣಿಸಿ ಇಳಿ ಬಿಡಲಾಯಿತು. ಮಧ್ಯದಲ್ಲಿ ದೂರದಿಂದ ಹೊಳೆಯುವಂತೆ ಬಂಗಾರದ ಸೂರ್ಯನನ್ನು ಹಾಸುಗಂಬಳಿಯ ಮೇಲೆ ಹಚ್ಚಲಾಯಿತು. ಅದರ ಅಡಿಯಲ್ಲಿ ಬಂಗಾರದ ಆಸನವೊಂದನ್ನು ಹಾಕಿ ರಾಮರಾಜನು ಕುಳಿತುಕೊಂಡನು. ತನ್ನ ಎಡ ಬಲದಲ್ಲಿ ರೂಪಾಯಿಗಳ ಹಾಗೂ ಮುತ್ತು ರತ್ನಗಳ ರಾಶಿಯನ್ನು ಹಾಕಲು ಆಜ್ಞಾಪಿಸಿದನು. ಅದರಂತೆ ಎರಡು ರಾಶಿಗಳನ್ನು ಹಾಕಿದರು. ಜೊತೆಗೆ ರತ್ನ ಖಚಿತ ತಟ್ಟೆಗಳಲ್ಲಿ ಮುತ್ತು ರತ್ನಗಳನ್ನು, ವಸ್ತ್ರಗಳನ್ನು ತುಂಬಿಟ್ಟರು. ಶೂರ ಸೈನಿಕರಿಗೆ ಬಹುಮಾನ ಕೊಡಲು ನಿರ್ಧರಿಸಿದನು. 'ಯಾರು ಶೂರತನದಿಂದ ಕಾದಿ ನನ್ನ ಹತ್ತಿರ ಬರುವರೋ ಅವರಿಗೆ ಈ ಮುತ್ತು ರತ್ನಗಳನ್ನು ತುಂಬಿದ ತಟ್ಟೆಯನ್ನು ಕೊಡುವೆನು. ಅವರ ಅಂತಸ್ತು ಹಾಗು ಪದಾಧಿಕಾರಗಳನ್ನು ಎತ್ತರಿಸುವೆನು' ಎಂದು ಬಹಿರಂಗವಾಗಿ ಘೋಷಿಸಿ ಆ ತರದ ಆಜ್ಞೆಯನ್ನು ಮಾಡಿದನು. ಅದನ್ನು ಕೇಳಿದ ರಾಮರಾಜನ ಸವಾರರು-ಸೈನಿಕರು ಸಂತೋಷಪಟ್ಟು ಸ್ವಾಮಿ ಸೇವೆಗಾಗಿ ಯುದ್ಧದಲ್ಲಿ ಪ್ರಾಣಾರ್ಪಣ ಮಾಡಲು ಮತ್ತು ತಮ್ಮ ಜೀವಗಳ ಕುರಿತು ಉದಾರವಾಗಿ ರಣಭೂಮಿಯಲ್ಲಿ ಇನ್ನಷ್ಟು ಕೆಚ್ಚಿನಿಂದ ಕಾದಿದರು.

ವಿಜಯನಗರದ ಬಂದೂಕುಧಾರಿಗಳು ಎಂದೂ ಗುರಿಯನ್ನು ತಪ್ಪುತ್ತಿರಲಿಲ್ಲ. ಸೂರ್ಯನ ಕಿರಣಗಳಲ್ಲಿಯ ಸೂಕ್ಷ್ಮ ಅಣುಗಳನ್ನು ಕೂಡ ಗುರುತಿಸಿ ಬಂದೂಕಿನ ಗುಂಡುಗಳಿಂದ ಹಾರಿಸುತ್ತಿದ್ದರು. ಅಂಥವರು ಆ ರಣಭೂಮಿಯಲ್ಲಿಯ ಮನುಷ್ಯರ ಮಸ್ತಕಗಳನ್ನು ತಮ್ಮ ಬಂದೂಕಿನಿಂದ ಹಾರಿಸುವುದರಲ್ಲಿ ಅಶಕ್ಯವೇನಿದೆ? ತಲೆಗಳನ್ನು ಚೆಂಡಿನಂತೆ ಹಾರಿಸಿ ಭೂಮಿಗೆ ಉರುಳಿಸುತ್ತಿದ್ದಾರೆ? ಬಿಲ್ಲುಗಾರರು ಸರಿಯಾಗಿ ಬಾಣವನ್ನು ಬಿಡುವವರು, ಕೂದಲಿನ ತುದಿ ಭಾಗವನ್ನು ಕೂಡ ತಮ್ಮ ಬಾಣಗಳ ಗುರಿಯಿಂದ ತಪ್ಪಿಸುತ್ತಿರಲಿಲ್ಲ ಅಂಥ ಗುರಿಕಾರರಿದ್ದರು. ಅಂಥವರಿದ್ದಾಗ ರಣಭೂಮಿಯಲ್ಲಿ ಮೃತ್ಯುವು ಪ್ರಳಯ ಸಂಕಟವನ್ನು ಎದ್ದು ನಿಲ್ಲಿಸಲಿಕ್ಕಿಲ್ಲವೆ? ಸಿಂಹಗಳಂತೆ ಪರಾಕ್ರಮ ತೋರಿಸುವ ಶೂರ ಮುಸಲ್ಮಾನ ಬಾದಶಹರ ಕಡೆಯ ಸೈನಿಕರು ರಣಭೂಮಿಯಲ್ಲಿ ಪ್ರಾಣ ಕೊಡುವ ಪ್ರೀತಿಯನ್ನಿಟ್ಟಿರುತ್ತಿದ್ದರು. ಅವರು ಪ್ರತಿಯೊಂದು ಹಲ್ಲೆಯಲ್ಲೂ ಯಮದೂತರಂತೆ, ಆ ಮೃತ್ಯುಗ್ರಸ್ತ ರಾಮರಾಜನ ಕಡೆಯ ಸೈನ್ಯದ ಮೇಲೆ ಓಡಿ ಹೋಗಿ ಹೆಣಗಳ

ರಾಶಿಯನ್ನೆ ಒಟ್ಟುತ್ತಿದ್ದರು. ಪ್ರತಿ ಹಲ್ಲೆಯಲ್ಲೂ ಗಿಡಗಳಲ್ಲಿಯ ಫಲಗಳು, ಪುಷ್ಪಗಳು ಎಲೆಗಳು ಉದುರಿ ಬೀಳುವ ಗಾಳಿಯಂತೆ ಆ ನಾಶವಂತರ ಮೇಲೆ ದಾಳಿ ಮಾಡಿ ವಸಂತ ಋತುವಿನಲ್ಲಿಯ ವೃಕ್ಷಗಳ ಫಲಪುಷ್ಪಗಳನ್ನು ಝಾಡಿಸುವಂತೆ ಜಾಲಾಡುತ್ತಿದ್ದರು.

ವಿಜಯನಗರದವರು ತಾವು ಸಾಕಷ್ಟು ಸಂಖ್ಯೆಯಲ್ಲಿದ್ದೇವೆ. ಪರಾಕ್ರಮದಿಂದ ಯುದ್ಧ ಮಾಡಿದರೆ ರಾಮರಾಜನು ಬಹುಮಾನಗಳನ್ನು ಕೊಡುತ್ತಾನೆ ಎಂಬ ಗರ್ವದಿಂದ ಸರದಾರರು-ಸೈನಿಕರು ತಮ್ಮ ಶಸ್ತ್ರಗಳನ್ನು ಉಪಯೋಗಿಸಿ ಉದ್ವಸ್ತಗೊಳಿಸುವಲ್ಲಿ ತಿಲಮಾತ್ರವೂ ಅಂತರವಿಡದೆ ಪೂರ್ಣ ಪ್ರಯತ್ನ ಮಾಡಿದರು. ಐದು ಸಾವಿರ ಬಿಲ್ಲುಗಾರರು ಒಮ್ಮೆಲೆ ಬಾಣಗಳನ್ನು ಬಿಟ್ಟರು. ಅದರಂತೆ ಜಗತ್ತು ಪ್ರಳಯವಾಗುವ ರೀತಿಯಲ್ಲಿ ತೋಫುಗಳ ಸರಮಾಲೆಯನ್ನೆ ಹಚ್ಚಿದರು. ವಿಜಯನಗರದ ಕಾಲ್ಬಲದವರು ಪಿಶಾಚಿಯಂತೆ ಉತ್ಪತ್ತಿಯಾದವರು, ಅವರು ತಲವಾರಗಳನ್ನು ತಿರುವುತ್ತ, ಕೊಲ್ಲುತ್ತ, ಬಂದೂಕಿನ ಗುಂಡುಗಳ ಸುರಿಮಳೆಯನ್ನೆ ಸುರಿಸುತ್ತ ಧೈರ್ಯದಿಂದ ಅತಿ ಹುಂಬತನದಿಂದ ಮೂರ್ಖತನದಿಂದ ಮುಸಲ್ಮಾನರ ಸೈನ್ಯದ ಮೇಲೆ ಗದ್ದಲ ಮಾಡುತ್ತ ಮೈಮೇಲೆ ಬಿದ್ದರು. ದಾಳಿ ಪ್ರಾರಂಭವಾಯಿತು. ಕೊನೆಗೆ ರಾಮರಾಜನ ಕಡೆಯ ಸೈನ್ಯದ ದಾಳಿಯಿಂದ ಮುಸಲ್ಮಾನ ಜನರ ಎಡಗಡೆಯಲ್ಲಿ ನಿಂತ ಕುತುಬಶಾಹ ಹಾಗು ಅಲೀಬರೀದರ ಸೈನ್ಯವು ಉದ್ವಸ್ತವಾಯಿತು.

ನಿಜಾಮಶಾಹನ ಸೈನ್ಯದಲ್ಲಿ ಬಿರುಕು ಬಿಟ್ಟಿತು. ಯುದ್ಧಾರಂಭದಲ್ಲಿ ಕುತುಬಶಾಹನ ಹಾಗೂ ಅಲೀಬರೀದರು ಹಿಡಿದ ಸ್ಥಳವನ್ನು ಬಿಟ್ಟರು. ಈ ಸುದ್ದಿಯು ನಿಜಾಮಶಹನಿಗೂ ತಿಳಿಯಿತು. ಅನಂತರ ನಿಜಾಮಶಾಹನು ಒಬ್ಬ ಸಂಭಾವಿತ ಅಮೀರನನ್ನು ಕುತುಬಶಾಹ ಮತ್ತು ಅಲೀಬರೀದರ ಹತ್ತಿರ ಕಳಿಸಿ ಅವರನ್ನು ತನ್ನ ಕಡೆಗೆ ಕರೆಯಿಸಿಕೊಂಡನು. ಒಂದೆಡೆ ಸೇರಿ ವಿಜಯನಗರದವರ ಮೇಲೆ ದಾಳಿ ಮಾಡಿ ಮೊದಲು ಹಿಡಿದ ಸ್ಥಳವನ್ನು ಪುನಃ ಆಕ್ರಮಿಸಿ ಅಲ್ಲಿಯೇ ಉಳಿದರು. ಶಸ್ತ್ರಗಳನ್ನು ತುಂಡರಿಸುವಲ್ಲಿ ಮತ್ತು ಯುದ್ಧ ಮಾಡುವಲ್ಲಿ ಶೂರತ್ವವನ್ನು ಸ್ಥಾಪಿಸುತ್ತಲೇ ಇದ್ದರು. ವಿಜಯನಗರದವರು ಬಹಳ ಅನುಚಿತವಾಗಿ ವರ್ತಿಸುವಲ್ಲಿ ಸ್ಥಿರವಾಗಿದ್ದಾರೆಂದು ನಿಜಾಮಶಹನು ನೋಡಿ, ಮರಣಸಿದ್ಧರಾಗಿಯೇ ಬಂದು ಸ್ಥಿರವಾಗಿ ನಿಂತ ಮುಸಲ್ಮಾನರ ಸೈನ್ಯಕ್ಕೆ ದೃಷ್ಟಿ ತಾಗುವುದೆಂದು ಸ್ಥಳ ಬದಲಾಯಿಸಿದನು. ಆ ಸ್ಥಳವನ್ನು ಬಿಟ್ಟು ಹೊರಟನು.

ಹಿಂದೂ ಜನರು ಉಭಯ ಸೇನೆಗಳ ಮಧ್ಯ ರಣಸ್ಥಂಭವನ್ನು ನಿಲ್ಲಿಸಲು ಆಜ್ಞೆ ಮಾಡಿದರು. ಈ ರಣಕಂಬವನ್ನು ನಿಲ್ಲಿಸುವ ಉದ್ದೇಶವೆಂದರೆ ರಣಭೂಮಿಯಲ್ಲಿ ಬಂದ ಅನಂತರ ಮರಣದ ಭಯವನ್ನು ತಾಳಿ, ಈ ರಣಸ್ಥಂಭದಿಂದ ಹಿಂದೆ ಹೆಜ್ಜೆಯನ್ನು ಇಡುವುದಿಲ್ಲ. ನಾನು ನನ್ನ ಪ್ರಾಣವನ್ನು ಈ ಯುದ್ಧದಲ್ಲಿ ಅರ್ಪಿಸುವೆ ಇಲ್ಲವೆ ಶತ್ರುವಿನ ಪ್ರಾಣವನ್ನು ತೆಗೆದುಕೊಳ್ಳುವೆ ಎಂಬ ಪ್ರತಿಜ್ಞೆಗಾಗಿ ರಣಸ್ಥಂಭವನ್ನು ನಿಲ್ಲಿಸುತ್ತಾರೆ. ಅದನ್ನು ನಿಲ್ಲಿಸಿದರು.

ಈ ಯುದ್ಧದಲ್ಲಿ ನಿಜಾಮಶಹನ ಜೊತೆಗೆ ನಿಜಾಮಶಹನ ಒಂದು ನೂರು ಖಾಸಾ ಮದುವೆಯ ಹೆಂಡಂದಿರೂ ಇದ್ದರು. ಪ್ರತಿಯೊಬ್ಬ ಸ್ತ್ರೀಯ-ಜೊತೆಗೆ ಒಬ್ಬ ಖೋಜಾ (ನಪುಂಸಕ) ನನ್ನು ಬಿಚ್ಚುಗತ್ತಿಯೊಂದಿಗೆ ಇಟ್ಟಿದ್ದನು. ಯಾಕೆಂದರೆ ಕಾರ್ಯಭಾಗವು ವಿಪರೀತವಾಗಿ ಒಂದು ವೇಳೆ ನಿಜಾಮಶಹನು ಸತ್ತರೆ ಆ ಖೋಜಾಗಳು ತಕ್ಷಣ ತಮ್ಮ ಬಿಚ್ಚುಗತ್ತಿಯಿಂದ ಆ ಸ್ತ್ರೀಯರನ್ನು ಕತ್ತರಿಸಿ ಹಾಕಬೇಕು. ಇದನ್ನೆಲ್ಲ ಕಂಡ ರಾಮರಾಜನು ಮುಸಲ್ಮಾನ ಜನರು ಕೊನೆಯ ಯುದ್ಧಕ್ಕಾಗಿ ಬಂದಿದ್ದಾರೆಂದು ಖಚಿತಪಡಿಸಕೊಂಡನು.

ತನ್ನ ಜನರಿಗೆ ಇನ್ನಷ್ಟು ಕೆಚ್ಚಿನಿಂದ ಕಾದಾಡಲು ಬೋಧಿಸಿದನು. ಬಹಳಷ್ಟು ಆಶೆಯನ್ನು ತೋರಿಸಿದನು. ಯುದ್ಧದಲ್ಲಿ ಪರಾಕ್ರಮದಿಂದ ಕಾದಿದರೆ, ಬಹಳಷ್ಟು ದ್ರವ್ಯವನ್ನು ನೀಡುವುದಾಗಿ ಆಶೆಯನ್ನು ತೋರಿಸಿದನು. ಶಸ್ತ್ರಾಗ್ನಿಯು ಇನ್ನಷ್ಟು ಪ್ರದೀಪ್ತವಾಯಿತು. ಆ ಗದ್ದಲದಲ್ಲಿ ಅಲಿ ಆದಿಲಶಹನು ಬಲಗಡೆಯಿಂದ ರಾಮರಾಜನ ಸಹೋದರ ತಿಮ್ಮರಾಜ (ತಿರುಮಲ)ನನ್ನು ಎದುರಿಸಿ ಯುದ್ಧ ಪ್ರಾರಂಭಿಸಿದನು. ವಿಜಯನಗರದವರ ಬಹಳಷ್ಟು ಬಡಿ-ಮುರಿಯಾಗಿತ್ತು. ಅದರಿಂದಾಗಿ ತಿಮ್ಮರಾಜನಿಗೆ ಬಹಳ ಧಕ್ಕೆಯಾದಂತಾಗಿ ಗಾಬರಿಯಾದನು. ಅಲಿ ಆದಿಲಶಹನ ಮುಂದೆ ಯುದ್ಧ ಸಾಧ್ಯವಿಲ್ಲ ಮತ್ತು ಎದುರಿಗೆ ನಿಲ್ಲುವ ಧೈರ್ಯವೂ ಸಾಲದು ಎಂದು ತಿಳಿದು ತಿಮ್ಮರಾಜನು ಅಲ್ಲಿಂದ ಸ್ಥಳ ಬಿಟ್ಟನು. ತಿಮ್ಮರಾಜನು ಸ್ಥಳವನ್ನು ಬಿಡುತ್ತಿದ್ದಂತೆಯೇ ಆದಿಲಶಹನು ಸೈನ್ಯವನ್ನು ತೆಗೆದುಕೊಂಡು ತಿಮ್ಮರಾಜನ ಮೇಲೆ ಬಿದ್ದು ದಾಳಿ ಮಾಡಿದನು. ತಿಮ್ಮರಾಜನು ರಾಮರಾಜನ ಕಡೆಗೆ ಓಡಿದನು. ಆಗ ಆದಿಲಶಹನು ಆತನ ಬೆನ್ನು ಹತ್ತಿ ಹೊಡೆಯುತ್ತ - ಬಡಿಯುತ್ತ ಬೆನ್ನು ಬಿಡದೆ ತಿಮ್ಮರಾಜನನ್ನು ರಾಮರಾಜನ ಪಾಳೆಯದಲ್ಲಿ ಒಗೆದನು. ಮತ್ತೆ ಹಿಂದು ಜನರ ಬೆನ್ನು ಹತ್ತಿ, ತುಂಟರ ಕಳ್ಳಕಾಕರ - ತಂಡವನ್ನು ಹಿಡಿದು ಥಳಿಸಿ, ರಾಮರಾಜನ ಮೇಲೆಯೇ ಏರಿ ಹೋದನು. ಆ ತುಂಟರ ತಂಡದ ದಾಳಿಯನ್ನು ರಾಮರಾಜನ ಮೇಲೆ ಹಾಕಿದನು.

ತನ್ನ ಹಿಂದಿನಿಂದ ದಾಳಿ ಪ್ರಾರಂಭವಾಗಿದೆ ಎಂಬ ಸುದ್ದಿಯೊಂದಿಗೆ ಆದಿಲಶಾಹನು ತನ್ನ ಸೈನ್ಯದೊಂದಿಗೆ ದಾಳಿ ಮಾಡುತ್ತ ಹಿಂದಿನಿಂದ ಬರುತ್ತಿದ್ದಾನೆಂಬ ವರ್ತಮಾನವು ರಾಮರಾಜನಿಗೆ ತಿಳಿಯಿತು. ಆಗ ತಾನು ಯುದ್ಧ ಭೂಮಿಯಲ್ಲಿ ಸಿಕ್ಕುಬಿದ್ದೆ ಎಂಬುದು ಖಚಿತವಾಯಿತು. ಮುಂದೆ ನಿಜಾಮಶಹ ಹಾಗು ಕುತುಬಶಾಹನ ಸೈನ್ಯ ಮತ್ತು ಹಿಂದಿನಿಂದ ಆದಿಲಶಾಹ, ಎಡಬಲಗಳಲ್ಲಿ ಕಳ್ಳರ ತಂಡಗಳು ಇತ್ಯಾದಿ ಸೈನ್ಯ ಬರುತ್ತಿದೆ. ಒಬ್ಬರೊಬ್ಬರಿಗೆ ಹೊರಗೆ ಹೋಗಲು ಹೇಳಲು ಮಾರ್ಗವೂ ಮುಚ್ಚಿದ ಕಠಿಣ ಪ್ರಸಂಗವು ಉದ್ಭವಿಸಿತು. ಆಗ ರಾಮರಾಜನು ನಿರುಪಾಯನಾಗಿ ಶಸ್ತ್ರ ಹಿಡಿಯಲು ಮನದಲ್ಲಿ ನಿರ್ಧರಿಸಿದನು. ಸರದಾರ-ಸೈನಿಕರಿಗೆ ಯುದ್ಧ ಮುಂದುವರಿಸುವ ಕುರಿತು ಮತ್ತೆ ಮತ್ತೆ ಬಹಳಷ್ಟು ಆಶೆಯನ್ನು ತೋರಿಸುತ್ತ ಉತ್ತೇಜಿಸುತ್ತಿದ್ದನು- ಧೈರ್ಯ ಹೇಳುತ್ತಿದ್ದನು.

ಈ ದೊಡ್ಡ ಗದ್ದಲ ಹಾಗೂ ದಾಳಿಯ ಸಮಯದಲ್ಲಿ ನಿಜಾಮಶಹನಿಗೆ ಈ ದಾಳಿಯನ್ನು ಆದಿಲಶಹನೆ ಮಾಡಿದ್ದೆಂದು ತಿಳಿದಿರಲಿಲ್ಲ. ತಿಮ್ಮರಾಜನನ್ನು ಮುಂದೆ ಹಾಕಿ ಆತನ ಬೆನ್ನು ಹತ್ತಿ, ತಿಮ್ಮರಾಜನನ್ನು ರಾಮರಾಜನ ಮೈಮೇಲೆ ಒಗೆದು, ಉಭಯತರ ಹಿಂದೆ ದಾಳಿ ಮಾಡುತ್ತ, ಅವರ ಸೈನ್ಯವನ್ನು ಜರ್ಜರಿಸುತ್ತ, ಸಂಪೂರ್ಣ ಪ್ರತಾಪದಿಂದ ಆದಿಲಶಹನು ಯುದ್ಧ ಮಾಡುತ್ತ ಬರುತ್ತಿದ್ದಾನೆಂಬ ಸುದ್ದಿ ಆತನಿಗೆ ಗೊತ್ತಿರಲಿಲ್ಲ. ತನ್ನ ಉಭಯಗಳಲ್ಲಿ ಆದಿಲಶಹನ ಸೈನ್ಯ ಸಹ ಇತ್ತು ಎಂಬುದು ಮಾತ್ರ ನಿಜಾಮಶಹನ ಮನದಲ್ಲಿತ್ತು. ಅದು ಯಾವ ಕಡೆಗೆ ಹಾರಿ ಹೋಗಿದೆ ಎಂಬುದು ಗೊತ್ತಿರಲಿಲ್ಲ. ಬಲಬದಿಯಲ್ಲಿ ಸೈನ್ಯವಿಲ್ಲದೆ ಖಾಲಿ ಸ್ಥಳವನ್ನು ನೋಡಿ ಮನದಲ್ಲಿ ಭಯಭೀತನಾಗಿ ಚಿಂತೆಯಲ್ಲಿ ಬಿದ್ದು ಖಿನ್ನನಾದನು. ಅಂಥ ಚಿಂತೆಯ ಅವಸ್ಥೆಯಲ್ಲಿದ್ದಾಗ, ತೋಫುಖಾನೆಗಳ ಮುಖ್ಯಸ್ಥನಾದ ರೂಮಿಖಾನನು ನಿಜಾಮಶಹನ ಹತ್ತಿರ ಬಂದನು. 'ತೋಫುಖಾನೆಗಳು ಎಲ್ಲಿವೆ? ಎಂದು ಆತನಿಗೆ ಕೇಳಿದನು, ಎಲ್ಲವೂ ಸಿದ್ಧವಾಗಿವೆ. 'ಎರಡು ದೊಡ್ಡ ತೋಫುಗಳಂತೂ ಈಗಲೇ ಸಿದ್ಧವಾಗಿವೆ' ಎಂದು ರೂಮಿಖಾನನು ಹೇಳಿದನು. ಅದನ್ನು ಕೇಳುತ್ತಲೇ ನಿಜಾಮಶಾಹನು 'ಮತ್ತೇನು ನೋಡುತ್ತೀ? ಮುಲ್ಕ ಮೈದಾನ ತೋಫಿನಲ್ಲಿ ಮದ್ದನ್ನು ತುಂಬಿ ಹಾರಿಸಿ ಬಿಡು' ಎಂದು ಆದೇಶವಿತ್ತನು. ಆಗ ರೂಮಿಖಾನನು ಆ ತೋಫನ್ನು ಮುಂದೆ ಜಗ್ಗಿ ತೋಫನ್ನು ಹಾರಿಸಲು ಪ್ರಾರಂಭಿಸಿದನು. ಆಗ ಹಿಂದು ಜನರ ಸೈನ್ಯ ಪಟಪಟನೆ ಉದುರಿಬಿತ್ತು.

ರೂಮೀಖಾನನು ಆನೆಯ ಮೇಲೆ ಕುಳಿತು ತೋಫನ್ನು ಮುಂದೆ-ಮುಂದೆ ಜಗ್ಗುತ್ತ ಅದನ್ನು ಹಾರಿಸುತ್ತ ಸೈನ್ಯದೊಂದಿಗೆ ಮುಂದೆ ಮುಂದೆ ಹೊರಟನು. ಆಗ ಆ ತೋಫಿನ ಎದುರಿಗೆ ಹೋಗುವ ಸಾಮರ್ಥ್ಯ ಯಾರಲ್ಲೂ ಇರಲಿಲ್ಲ. ಹೀಗೆ ದಾಳಿ ಮಾಡುತ್ತ-ಮಾಡುತ್ತ ವಿಜಯನಗರದವರ ಸೈನ್ಯದ ಮಧ್ಯದಲ್ಲಿಯೆ ಬಂದು ಮುಟ್ಟಿದನು.

ಅಲ್ಲಿ ಒಂದೆಡೆ ಬಹಳ ಜನರು ಸೇರಿದ್ದನ್ನು ಕಂಡು ಆ ಗುಂಪಿನಮೇಲೆ ರೂಮೀಖಾನನು ತಕ್ಷಣ ತನ್ನ ಆನೆಯನ್ನು ತೂರಿಸಿದನು. ಕರ್ಮಧರ್ಮ ಸಂಯೋಗದಿಂದ ಆ ಗುಂಪಿನಲ್ಲಿಯೆ ರಾಮರಾಜನು ಇದ್ದನು. ತೋಫನ್ನು ಹಾರಿಸುವವನ ತೋಫಿನ ಭಯದಿಂದ ಮತ್ತು ಮದಗಜದ ಹಲ್ಲೆಯಿಂದ ಅಲ್ಲಿದ್ದ ಎಲ್ಲರೂ ಒಬ್ಬರೊಬ್ಬರಮೇಲೆ ಬಿದ್ದು ತಮ್ಮ ಒಡೆಯನಾದ ರಾಮರಾಜನ ಆಶೆಯನ್ನು ಬಿಟ್ಟು ಪ್ರತಿಯೊಬ್ಬರೂ ಓಡಿಹೋಗಹತ್ತಿದರು. ಅರಬ್ಬೀ ಭಾಷೆಯಲ್ಲಿಯ ಒಂದು ವಾಕ್ಯದ ಅರ್ಥ ಹೀಗಿದೆ 'ಅಂತ್ಯಕಾಲದಲ್ಲಿ ತನ್ನ ಸಹೋದರರು, ತಾಯಿ ಅಥವಾ, ತಂದೆ ಯಾರಿದ್ದರೂ ಅವರನ್ನು ಬಿಟ್ಟು ಮನುಷ್ಯ ಓಡಿ ಹೋಗುತ್ತಾನೆ'. ಅಂಥ ದಿನ ಬಂದಿತ್ತು. ರಾಮರಾಜನು ಜನರ ಗದ್ದಲದಲ್ಲಿ ಸಿಕ್ಕುಒದ್ದಾಡಿ ಒದೆ ತಿಂದು ಬೀಳುವ ಮನುಷ್ಯನಂತೆ, ಗಾಯಾಳುವಾಗಿ ಒಂದೆಡೆ ಬಿದ್ದಿದ್ದನು. ರಾಮರಾಜನ ಹತ್ತಿರದ ಸೇವಕರಲ್ಲಿಯ ಯಾರೊಬ್ಬರೂ ಆತನ ಹತ್ತಿರ ಇರಲಿಲ್ಲ. ಆದರೆ ದಲಪತರಾದ ಎಂಬ ಒಬ್ಬ ಬ್ರಾಹ್ಮಣನು ಮಾತ್ರ ಆತನು ರಾಮರಾಜನ ಸನ್ನಿಧಿಯಲ್ಲೇ ಯಾವಾಗಲೂ ಇರುತ್ತಿದ್ದ. ಸೇವಕರಿಗಿಂತ ನಿಷ್ಠನಾಗಿ ಅವನ ಜೊತೆಯಲ್ಲಿ ಇರುತ್ತಿದ್ದವನು; ಆ ಬ್ರಾಹ್ಮಣನು ಮಾತ್ರ ರಾಮರಾಜನಿಗೆ ಧೈರ್ಯವನ್ನು ಹೇಳುತ್ತಿದ್ದನು. ಉಳಿದೆಲ್ಲ ಸೇವಕರೂ ಹೋಗಿ ಬಿಟ್ಟಿದ್ದರು. ಅಂಥ ಸಮಯದಲ್ಲಿ ರೂಮೀಖಾನನು ಆನೆಯನ್ನು ನಡೆಸುತ್ತ ನೇರವಾಗಿ ರಾಮರಾಜನ ಎದುರಿಗೆಯೇ ಬಂದನು. ಆನೆಯ ಮೇಲಿನ ಈ ಮನುಷ್ಯ ರಾಮರಾಜನ ಮೇಲೆಯೇ ಬಂದಿದ್ದಾನೆಂದೂ ಆತನನ್ನು ಕೊಲ್ಲುತ್ತಾನೆಂದು ತಿಳಿದು ದಲಪತರಾವ ಬ್ರಾಹ್ಮಣನು ಧೈರ್ಯ ಕೊಡುತ್ತಿದ್ದವನು ಒಮ್ಮೆಲೆ ಆತನನ್ನು ಉಳಿಸಲು ರಾಮರಾಜನ ಮೇಲೆಯೇ ಬಿದ್ದುಬಿಟ್ಟನು. ಮತ್ತು ದೊಡ್ಡ ದನಿಯಿಂದ ಕೂಗ ಹತ್ತಿದನು. 'ಹಾಂ, ಹಾಂ, ಹಾಗೆ ಮಾಡಬೇಡ, ಬೇಡ ಸಂಕಟ ತರಬೇಡ, ಯಾರ ಮೇಲೆ ನೀನು ಬಂದಿರುವೆಯೋ ಆತನು ಸಾಮಾನ್ಯ ಮನುಷ್ಯನಲ್ಲ. ಈತ ವಿಜಯನಗರದ ಧಣಿಯಾದ ರಾಮರಾಜ. ಈ ಸಮಯದಲ್ಲಿ ನೀನು ಒಂದು ವೇಳೆ ಸ್ನೇಹ ಸಂಪಾದಿಸಿ, ಗೆಳೆತನದಿಂದ ರಾಜನನ್ನು ಉಳಿಸಿದೆಯಾದರೆ ಪ್ರತ್ಯುಪಕಾರವಾಗಿ ಈ ರಾಜನು ನಿನ್ನ ಯೋಗ್ಯತೆಯನ್ನು ಅಧಿಕಗೊಳಿಸಿ ಸರದಾರನನ್ನಾಗಿ ಮಾಡುತ್ತಾನೆ' ಎಂದೆಲ್ಲ ಬಡಬಡಿಸಿದನು.

'ರಾಮರಾಜ' ಎಂಬ ಹೆಸರನ್ನು ಕೇಳುತ್ತಲ್ಲೇ ರೂಮೀಖಾನನು ತನ್ನ ಆನೆಗೆ ಸನ್ನೆ ಮಾಡಿದನು. ಅದು ತನ್ನ ಸೊಂಡೆಯಿಂದ ರಾಮರಾಜನನ್ನು ಎತ್ತಿ ಬೆನ್ನ ಮೇಲೆ ತೆಗೆದುಕೊಂಡಿತು. ಮನೋರಥದ ಮುಕ್ತಾಫಲವು ಕೈಗೆ ದೊರೆತ ಸಂತೋಷದಲ್ಲಿ ರೂಮೀಖಾನನು ತಕ್ಷಣ ಆನೆಯನ್ನು ಹಿಂತಿರುಗಿಸಿದನು. ಹಾಗೂ ವಾಯುವಿನಂತೆ, ವಿದ್ಯುತ್ತಿನಂತೆ ಆನೆಯನ್ನು ಓಡಿಸುತ್ತ ತನ್ನ ಸೈನ್ಯದಲ್ಲಿ ಬಂದನು. ರಾಮರಾಜನನ್ನು ಜೀವಂತವಾಗಿ ತಂದು ನಿಜಾಮಶಾಹನ ವಶಕ್ಕೆ ಕೊಟ್ಟನು. ಎಂದೂ ದೊರಕದ ವಸ್ತುವಿನ ಅಲಭ್ಯ ಲಾಭದಿಂದ ನಿಜಾಮಶಹನು ಅತ್ಯಂತ ಸಂತೋಷದಿಂದ ರಾಮರಾಜನನ್ನು ತನ್ನ ಹತ್ತಿರ ಕರೆದುಕೊಂಡು ಕೂಡಿಸಿದನು. ಅವನನ್ನು ಮಾತನಾಡಿಸುತ್ತ ನಿಜಾಮಶಾಹನು 'ರಾಮರಾಜ ನಿಮ್ಮ ಅವಸ್ಥೆ ಏನಾಗಿದೆ? ಹೇಗಿದ್ದೀರಿ?' ಎಂದು ವ್ಯಂಗ್ಯವಾಗಿ ಕೇಳಿದಾಗ, ರಾಮರಾಜನು ಅದನ್ನು ಕೇಳಿ ಏನನ್ನೂ ಉತ್ತರ ಕೊಡಲಿಲ್ಲ. ತನ್ನ ಕೈಯಿಂದ ಹಣೆಯನ್ನು ಬಡೆದುಕೊಂಡನು. ಹಣೆ ಬಡೆದುಕೊಳ್ಳುವುದೆಂದರೆ 'ನನ್ನ ಹಣೆಯಲ್ಲಿ ಏನು

ಬರೆದಿದೆಯೋ ಆದರ ಫಲವನ್ನು ಪಡೆದಿರುವೆ' ಎಂದಾಗುತ್ತದೆ. ಹೀಗೆ ನಿಜಾಮಶಾಹ ಹಾಗು ರಾಮರಾಜರ ನಡುವೆ ಮಾತುಗಳು ನಡೆದಾಗ, ಮಧ್ಯದಲ್ಲಿ ಹಕೀಮ ಕಾಸಮ ಬೇಗ ತಬರೀ ಎಂಬ ನಿಜಾಮಶಾಹನ ವಿಶ್ವಾಸಿಕ ಸೇವಕನು ಗಾಬರಿಯಿಂದ ನಿಜಾಮಶಾಹನ ಎದುರಿಗೆ ಬಂದು ನಿಂತು 'ಇದು ಮಾತುಕತೆಯಾಡುವ ಸಮಯವಲ್ಲ, ತಕ್ಷಣ ಈ ರಾಮರಾಜನನ್ನು ಶೂಲಕ್ಕೇರಿಸಿ ಕೊಲ್ಲಿರಿ, ಆತನ ಭಯದಿಂದ ಮುಕ್ತರಾಗಿರಿ. ಇಲ್ಲದಿದ್ದಲ್ಲಿ ಆದಿಲಶಾಹನು ರಾಮರಾಜನೊಂದಿಗೆ ಮಗನ ಸಂಬಂಧವನ್ನಿಟ್ಟುಕೊಂಡಿದ್ದಾನೆ. ರಾಮರಾಜನನ್ನು ತೀರ್ಥರೂಪನಂತೆ ಕಾಣುತ್ತಾನೆ. ಆದ್ದರಿಂದ ತಂದೆ ಮಗನ ಸಂಬಂಧದಿಂದಾಗಿ ಪೂರ್ಣ ಧೈರ್ಯದಿಂದ ತನ್ನ ಸೈನ್ಯವನ್ನು ತೆಗೆದುಕೊಂಡು ಹಿಂದೆ ಬರುತ್ತಿದ್ದಾನೆ. ಆದಿಲಶಹನು ಬಂದನೆಂದರೆ ಈಗಲೇ ರಾಮರಾಜನನ್ನು ನಿಮ್ಮ ಕೈಯಿಂದ ಕಸಿದುಕೊಳ್ಳುತ್ತಾನೆ. ನಿಮ್ಮ ಕೈಯಲ್ಲಿ ಇರಗೊಡುವುದಿಲ್ಲ ಅನಂತರ ಏನಾಗುತ್ತದೆಂಬುದು ಅಲ್ಲಾನಿಗೆ ಗೊತ್ತು' ಎಂದು ಹೇಳಿದನು. ನಿಜಾಮಶಹನಿಗೆ ಹಕೀಮನ ಮಾತಿನ ಅರ್ಥವಾಯಿತು. ಆಗ ರಾಮರಾಜನ ತಲೆಯನ್ನು ಕಡಿಯಲು ಆಜ್ಞೆ ಮಾಡಿದನು. ಅನಂತರ ಶೂಲಕ್ಕೆ ಸಿಕ್ಕಿಸಿ. ವಿಜಯನಗರದ ಸೈನ್ಯದ ಎದುರಿಗೆ ನಿಲ್ಲಿಸಿರಿ ಎಂದು ಆದೇಶ ಕೊಟ್ಟನು.[೫] ಶೂಲದ ಮೇಲಿನ ರಾಮರಾಜನ ರುಂಡವನ್ನು ಕಂಡು ಹಿಂದು ಜನರಿಗೆ ತಮ್ಮ ರಾಜನು ಸತ್ತದ್ದು ತಿಳಿಯಿತು. ಮತ್ತು ಮುಸಲ್ಮಾನ ಸೈನ್ಯಕ್ಕೆ ವಿಜಯ ದೊರೆಯಿತೆಂದೂ ತಿಳಿದರು. ತಮ್ಮ ಸೋಲಾಯಿತೆಂದು ತಿಳಿದು ತಕ್ಷಣ ಓಡಿಹೋಗಿರದಿದ್ದರೆ ಇನ್ನೂ ಯುದ್ಧ ನಡೆಯುತ್ತಲೇ ಇತ್ತು. ಯಾಕೆಂದರೆ, ಲಕ್ಷಾವಧಿ ಹಿಂದು ಜನರ ಸೈನ್ಯ ಮುಸಲ್ಮಾನರನ್ನು ಕೊಲ್ಲಲು ಸಿದ್ಧವಾಗಿ ನಿಂತಿತ್ತು.

### ೯. *ಹಿಂದು ಸೈನ್ಯದ ಸೋಲು, ಆ ಸೈನ್ಯವನ್ನು ಮುಸಲ್ಮಾನ ಸೈನ್ಯ ಬೆನ್ನು ಹತ್ತಿದ್ದು. ಮುಸಲ್ಮಾನರ ಕೈಗೆ ಅಗಣಿತ ಸುಲಿಗೆ ವಸ್ತು ದೊರಕಿತು.*

ಯುದ್ಧ ಭೀತಿಯಿಂದ ತಪ್ಪಿಸಿಕೊಂಡು ಹೋಗುತ್ತಿದ್ದ ಸಾವಿರಾರು ಜನ ಹಿಂದು ಸೈನಿಕರನ್ನು ಮುಸಲ್ಮಾನ ಸೈನಿಕರು ಬೆನ್ನು ಹತ್ತಿ ಅವರನ್ನು ಬಂಧಿಸ ಹತ್ತಿದರು. ಎಲ್ಲೆಲ್ಲಿ ಮುಸಲ್ಮಾನ ಸೈನಿಕರು ಓಡುತ್ತಿದ್ದರೋ ಅಲ್ಲಲ್ಲಿ ಹಿಂದು ಸೈನಿಕರ ಸಾಲಿಗೆ ಸಾಲನ್ನೇ ಕೊಲ್ಲಲಾಗುತ್ತಿತ್ತು. ಹಲ್ಲೆಯಾದಲ್ಲೆಲ್ಲ ಹತಿಯಾರುಗಳಿಂದ ತುಂಡರಿಸಿದ ಹಿಂದುಗಳ ಪ್ರೇತಗಳ ರಾಶಿಯನ್ನೆ ಒಟ್ಟಲಾಗುತ್ತಿತ್ತು. ಕತ್ತರಿಸಿ ಬಿದ್ದ ಹಿಂದುಗಳ ರಕ್ತ ಎಷ್ಟೋ ಕೋಸುಗಳವರೆಗೆ ಹರಿದು ಭೂಮಿಯೆಲ್ಲ ತಾಮ್ರ ವರ್ಣದ್ದಾಯಿತು. ಹನ್ನೆರಡು ಕೋಸುಗಳವರೆಗೆ ರಣಭೂಮಿಯಲ್ಲಿ ಹೆಣಗಳು, ಗಾಯಾಳುಗಳು, ಅರ್ಧ ಸತ್ತ ಜನರು, ಕುದುರೆಗಳು, ಆನೆಗಳು, ಒಂಟೆಗಳು, ಬಂಗಾರದ ಆಭರಣಗಳು ಮುತ್ತು, ರತ್ನಗಳು, ಭಾರೀ ಕಿಮ್ಮತ್ತಿನ ಅದೆಷ್ಟೋ ಪದಾರ್ಥಗಳು ಹೀಗೆ ಅಗಣಿತ ವಸ್ತುಗಳ ಹಾಸಿಗೆಯನ್ನೆ ಹಾಸಲಾಗಿತ್ತು. ಮುಸಲ್ಮಾನ ಬಾದಶಹರ ಯಶಸ್ವೀ ಸೈನ್ಯದ ಯೋದರು ಬಂಗಾರದ-ಬೆಳ್ಳಿಯ ಆಭರಣಗಳನ್ನು ಮುತ್ತು ರತ್ನಗಳನ್ನು ಕುದುರೆಗಳನ್ನು, ತಲವಾರಗಳನ್ನು, ಮತ್ತು ತಲವಾರ ಇತ್ಯಾದಿ ಶಸ್ತ್ರಗಳಿಂದ ತಲೆಗೆ ಪೆಟ್ಟು ಬೀಳದಂತೆ ಧರಿಸುವ ಲೋಹದ ಟೊಪ್ಪಿಗೆಗಳನ್ನು ಚಿಲಖತ್ತುಗಳನ್ನು, ಸೇವಕ, ಸೇವಿಕೆಯರನ್ನು ಮತ್ತೆಷ್ಟೋ ಪದಾರ್ಥಗಳನ್ನು ಹರಣ ಮಾಡಿ ತಮ್ಮ ಉಳಿದ ಆಯುಷ್ಯ ಪರ್ಯಂತ ಹೊಟ್ಟೆ ಪಾಡಿಗಾಗಿ ದುಡಿಯುವ ಗರಜು ಇಲ್ಲವೆಂಬಂತೆ ಶ್ರೀಮಂತರಾದರು.

---

೫. ರಾಮರಾಜನ ತಲೆ ಕಡಿದದ್ದು ೩ ಜಮಾದಿಲಾಖರ ೯೭೨ ಹಿ (೫ ಜನವರಿ) ೧೫೬೫) ಎಂದು ಬುರ್ಹಾನ ಮಾಸಿರ, ೩೦, ಜಮಾದಿಲಾಖರ (೨೩ ಜನವರಿ) ಎಂದು ತಾರೀಖೆ ಕುತುಬಶಹಾ ಹೇಳುತ್ತದೆ.

ಆನೆಗಳು, ತೋಫುಗಳು, ಧ್ವಜಗಳು, ಧ್ವಜದಂತಿರುವ ಸೈನ್ಯದ ಢಾಲುಗಳು, ಚೌಘಡಗಳು, ವಾದ್ಯಗಳು ಮತ್ತು ಬಾದಶಾಹಿ ಥಾಟಿನ ಪದಾರ್ಥಗಳನ್ನು ಮಾತ್ರ ಯಾರೂ ತೆಗೆದುಕೊಂಡು ಹೋಗಬಾರದು. ಉಳಿದದ್ದರಲ್ಲಿ ಸರಕಾರಕ್ಕೆ ಏನನ್ನೂ ಇಡಬೇಡಿರಿ ಎಂದರು. ಯಾರ ಕೈಗೆ ಏನೆಲ್ಲ ನಗದು ಹಣ, ಮುತ್ತು ರತ್ನಗಳು ಆಭರಣಗಳು, ವಸ್ತ್ರಗಳು ಬೆಲೆಬಾಳುವ ಬಟ್ಟೆಗಳು ದೊರೆಯುತ್ತವೆಯೋ, ಸುಲಿಗೆಯ ಆ ಪದಾರ್ಥಗಳನ್ನು ಒಯ್ಯಲು ಅನುಮತಿ ನೀಡಲಾಯಿತು. ಹಾಗೆ ಅಪಹರಿಸಿದ ವಸ್ತ್ರಗಳನ್ನು ಯಾರೂ ಮತ್ತೆ ಯಾರಿಂದಲೂ ಅಪಹರಿಸಿ ತೆಗೆದುಕೊಳ್ಳಬಾರದು. ಆ ಬಗ್ಗೆ ಸರಕಾರಕ್ಕೆ ಉಪದ್ರವವಾದ ಕುರಿತು ಯಾರಿಂದಲೂ ತಕರಾರು ಬರಬಾರದು, ಎಂದು ಮುಸಲ್ಮಾನ ಬಾದಶಹರು ಡಂಗುರ ಸಾರಿದರು.

ಒಂದು ಸಾವಿರ ಆನೆಗಳು, ಒಂದು ಸಾವಿರ ತೋಫುಗಳು, ಮತ್ತು ಬಾದಶಾಹಿ ಥಾಟಿನ ಅನೇಕ ಪದಾರ್ಥಗಳು ಸುಲಿಗೆಯ ರೂಪದಲ್ಲಿ ಮುಸಲ್ಮಾನ ಬಾದಶಹರ ಸರಕಾರಕ್ಕೆ ದೊರೆತುವು. ರಣಭೂಮಿಯಿಂದ ಆನೆಗುಂದಿಯವರೆಗೆ, ಆನೆಗುಂದಿಯಿಂದ ವಿಜಯನಗರ ಹತ್ತು ಕೋಸು ದೂರವಿದೆ ಅಲ್ಲಿಯವರೆಗೂ ಹಿಂದು ಜನರ ಹೆಣಗಳಿಂದ ತುಂಬಿತ್ತು. ಆಗ ಲೆಕ್ಕ ಬರೆಯುವ ಗುಮಾಸ್ತನೊಬ್ಬನು ಸತ್ತವರ ಹಾಗು ಗಾಯಾಳುಗಳ ಗಣತಿ ಮಾಡಲು ಹನ್ನೆರಡು ದಿನಗಳನ್ನು ತೆಗೆದುಕೊಂಡನು. ರಣಭೂಮಿಯಲ್ಲಿ ಒಂದು ಲಕ್ಷ ಜನರ ಹೆಣಗಳು, ಹಾಗು ಗಾಯಾಳುಗಳ ಯಾದಿಯನ್ನು ತಯಾರಿಸಿದನು. ಇದೊಂದು ದೊಡ್ಡ ವಿಜಯವಾಗಿತ್ತು. ಅನಂತರ ಮುಸಲ್ಮಾನ ಬಾದಶಹರು ಅತಿ ವಿನಯದಿಂದ ಭೂಮಿಗೆ ತಲೆ ಹಚ್ಚಿ ನಮಸ್ಕರಿಸಿ ಅಲ್ಲಾನ ಸ್ತುತಿಯನ್ನು ಮಾಡಿದರು. ಇಪ್ಪತ್ತು ದಿನ ಯುದ್ಧ ಭೂಮಿಯಲ್ಲಿ ನಿಂತು ಹಿಂದು ಜನರನ್ನು ಸೋಲಿಸುವಲ್ಲಿ ಬಹು ಶ್ರಮಿಸಿದ್ದರು. ಆದ್ದರಿಂದ ಅಲ್ಲಿಯೆ ವಿಶ್ರಾಂತಿ ಪಡೆಯುತ್ತ ಗಾಯಾಳುಗಳನ್ನು ಉಪಚರಿಸಿ ಅವರನ್ನು ಬದುಕಿಸುವ ಪ್ರಯತ್ನ ಮಾಡಿದರು.

### ೧೦. ಮುಸಲ್ಮಾನ ಬಾದಶಹರು ವಿಜಯನಗರಕ್ಕೆ ಬಂದು ಸುಲಿಗೆ ಮಾಡಿದರು :

ಅನಂತರ ವಿಜಯನಗರದತ್ತ ಬಂದು, ದೊಡ್ಡ ದೊಡ್ಡ ಗಟ್ಟಿಯಾದ ಥರವನ್ನು ತುಂಬಿ ಕಟ್ಟಿದ ಕಟ್ಟಡಗಳನ್ನು, ವಿಶಾಲವಾದ ಅರಮನೆಗಳನ್ನು, ವಾಡೆಗಳನ್ನು, ದೇವಾಲಯಗಳನ್ನು ದೊಡ್ಡ ದೊಡ್ಡ ಕಟ್ಟಿದ ಮಹಲುಗಳನ್ನು ಕೆಡವಿ ನೆಲಸಮಮಾಡಿ ಧೂಳಿಪಟ ಮಾಡಿದರು. ಆ ದುಷ್ಟ ಮತ್ತು ಅಧರ್ಮಿ ರಾಮರಾಜನು ಮಸೀದಿಗಳನ್ನು ಕೆಡವಿ ನಾಶ ಮಾಡಿದುದರ ನೂರುಪಟ್ಟು ಅಧಿಕವಾಗಿ ನಾಶಮಾಡಿ ದೇವಾಲಯಗಳನ್ನು ಕೆಡವಿ ನಾಶಮಾಡಿದರು. ವಿಜಯನಗರವು ದೊಡ್ಡದು ಮತ್ತು ಬಹಳ ಜನವಸತಿಯೊಂದಿಗೆ ಭರಭರಾಟೆಯಲ್ಲಿತ್ತು. ಸಾವಿರ ವರುಷಗಳಲ್ಲಿ ಎಂದೂ ಪರಕೀಯರ ಸೈನ್ಯವು ಬಂದು ಆ ನಗರದಲ್ಲಿ ಕಾಲಿಟ್ಟಿರಲಿಲ್ಲ. ಅಲ್ಲಿ ವಾಸಿಸುತ್ತಿದ್ದ ಅಮೀರ ಜನರು, ಸಾಹುಕಾರರು, ರೈತರು, ಎಲ್ಲ ಜಾತಿಯ ಜನರು, ಫಕೀರರು ಇತ್ಯಾದಿಯಾಗಿ ಬಹಳ ಸಂತೋಷದಿಂದ ಜೀವನ ನಡೆಸುತ್ತಿದ್ದರು. ಅವರು ವಿಶ್ವ ಪ್ರಳಯದ ಸಂಕಟ ಭಯದಿಂದ ಯಾರ-ಯಾರ ಹತ್ತಿರ ಏನೇನಿತ್ತೋ ಅವರು ತಮ್ಮಲ್ಲಿಯ ವಸ್ತುಗಳನ್ನು ಮುಸಲ್ಮಾನ ಜನರು ಲೂಟಿಮಾಡುತ್ತಾರೆಂದು ತಿಳಿದು ಮನೆಯಲ್ಲಿಯ ನೆಲಮನೆಯಲ್ಲಿ, ಬಾವಿಗಳಲ್ಲಿ, ಹೌದುಗಳಲ್ಲಿ ಮುಳುಗಿಸಿ ಇಟ್ಟಿದ್ದರು. ಬಹುತೇಕ ದೊಡ್ಡ ದೊಡ್ಡ ಗೃಹಸ್ಥರು ಶ್ರೀಮಂತರಿದ್ದರು. ಅವರು ತಮ್ಮ ಕುಟುಂಬದ ಸಮುದಾಯ, ಹೆಂಡತಿ, ಮಕ್ಕಳು ಮತ್ತು ಉದರ ನಿರ್ವಹಣಾರ್ಥ ತಕ್ಷಣ ಬೇಕಾಗುವ ವಸ್ತುಗಳನ್ನು ತೆಗೆದುಕೊಂಡು ಬೆಟ್ಟದ ಗುಹೆಗಳಲ್ಲಿ ಹೋದರು. ಆ ನಗರದ ಸುತ್ತಮುತ್ತಲು

ಇರುವ ಬೆಟ್ಟಗಳಲ್ಲಿ ದೊಡ್ಡ ದೊಡ್ಡ ಗವಿಗಳಿದ್ದುವು. ಅಲ್ಲಿ ಇಟ್ಟು ಕಣ್ಣು ತಪ್ಪಿಸಿ ಇರಹತ್ತಿದರು. ಮುಸಲ್ಮಾನ ಜನರ ಸೈನ್ಯವು ಅಲ್ಲಿ ಬಂದು ಮುಟ್ಟಿತು. ಮತ್ತು ಕಣ್ಣಿಗೆ ಕಂಡದ್ದನ್ನು ಲೂಟಿ ಮಾಡುತ್ತ ಸಂಪೂರ್ಣವಾಗಿ ನಿಶ್ಯೇಷವಾಗಿ ಸುಲಿಗೆ ಮಾಡಿತು. ಆಗ ಮುಸಲ್ಮಾನ ಜನರಿಗೆ, ಬಹಳಷ್ಟು ದ್ರವ್ಯವನ್ನು ಸಾಕಷ್ಟು ಜನರು ಭೂಮಿಯಲ್ಲಿ ಹುಗಿದು ಇಟ್ಟಿದ್ದಾರೆಂದು ತಿಳಿಯಿತು. ಹಾಗೆ ಗೊತ್ತಾದ ತಕ್ಷಣ ಅದರ ಹಿಂದೆಯೇ ಮನೆಗಳನ್ನು, ಕಟ್ಟಡಗಳನ್ನು ಮತ್ತು ಅಂಗಡಿಗಳನ್ನು ಅಗೆದು ತೆಗೆಯಹತ್ತಿದರು. ಇದರಿಂದಾಗಿ ಅವರಿಗೆ ಸಾಕಷ್ಟು ಸಂಪತ್ತು ದೊರಕಿತು.

ಇಷ್ಟರಲ್ಲಿ ಒಂದು ದಿನ ನಿಜಾಮಶಹನು, ವಿಜಯನಗರ ಪಟ್ಟಣವನ್ನು ಒಂದು ಸಲ ಅಡ್ಡಾಡಿ ನೋಡಬೇಕೆಂದು ಬಯಸಿ ಹೊರಟನು. ವಿಜಯನಗರ ಪಟ್ಟಣದ ರಸ್ತೆರಸ್ತೆಗಳಲ್ಲಿ, ಗಲ್ಲಿಗಲ್ಲಿಗಳಲ್ಲಿ ತಿರುಗಿದನು. ಅಲ್ಲಿ ಒಂದು ಸ್ಥಳದಲ್ಲಿ ಆದಿಲಶಹನ ಸೈನ್ಯದವರಲ್ಲಿಯ ಬಾಜಾರೀ ಜನರು ಮತ್ತು ಫಕೀರರು ಸೇರಿ, ಅವರು ಒಂದು ಸ್ಥಳದಿಂದ ಬಂಗಾರ, ಮುತ್ತು ರತ್ನಗಳು ಮತ್ತು ಆಭರಣಗಳನ್ನು ತುಂಬಿತಂದಿದ್ದ ತಾಮ್ರದ ಒಂದು ಕೊಡವನ್ನು ಸುರುವಿ, ಆ ನಗರದ ಕುಸಿದು ಬಿದ್ದ ಮನೆಯ ಒಂದು ಕೊರಕಲಿನಲ್ಲಿ ಕುಳಿತು ಹಂಚಿಕೊಳ್ಳುತ್ತಿದ್ದರು. ಅಷ್ಟರಲ್ಲಿ ನಿಜಾಮಶಹನ ಸೈನ್ಯದ ಗುಂಪು ಹಂಚಿಕೊಳ್ಳುವ ಸಮಯದಲ್ಲಿಯೆ ಬಂದಿತು. ಅವರು ಕೂಡ ಬಲಾತ್ಕಾರದಿಂದ ತಮಗೂ ಕೊಡಬೇಕೆಂದು ಗದ್ದಲ ಮಾಡಹತ್ತಿದರು. ಆದಿಲಶಾಹಿ ಹಾಗೂ ನಿಜಾಮಶಾಹಿ ಜನರ ಮಧ್ಯ ಕಲಹಪ್ರಾರಂಭವಾಗಿ ಬಿಚ್ಚು ಕತ್ತಿಯ ಯುದ್ಧವೇ ಪ್ರಾರಂಭವಾಯಿತು. ಇಬ್ಬರಕಡೆಯಲ್ಲಿಯೂ ಅನೇಕ ಜನರು ಸತ್ತರು. ಕೆಲವರು ಬಂದಿಗಳಾದರು. ಅವರಲ್ಲಿ ಒಬ್ಬರು 'ಆಶಿಕ ಆಬದಾಲ' ಎಂಬ ಫಕೀರನು ತರೆಯಾ (ವಿಜಾಪುರದ ಹತ್ತಿರದ ಹಳ್ಳಿ) ದ ಧಣಿ, ದೊಡ್ಡ ಸಾಧು ಪುರುಷ, ಕೀರ್ತಿವಂತ ಪುರಷನಾಗಿದ್ದನು. ಮೂವತ್ತು-ನಾಲ್ವತ್ತು ಜ್ಞಾನವಂತ ಪುರುಷರು ಆತನ ಹತ್ತಿರ ಶಿಷ್ಯರಾಗಿದ್ದರು. ಆ ಫಕೀರನಿಗೂ ಹೊಡೆದಾಟದಲ್ಲಿ ಹಿಂದಿನಿಂದ ಬೆನ್ನಮೇಲೆ ತಲುವಾರಿನ ಗಾಯವಾಗಿತ್ತು. ಫಕೀರನ ಬೆನ್ನಿನಲ್ಲಿ ಕೆಳಗಿನಿಂದ ಕುತ್ತಿಗೆಯಲ್ಲಿ ಗಂಟಲಿನವರೆಗೂ ಕತ್ತರಿಸಿತ್ತು. ಆದರೆ ಗಂಟಲಿನ ಮುಖ್ಯ ನರ ಮಾತ್ರ ಕತ್ತರಿಸಿರಲಿಲ್ಲ. ಆದ್ದರಿಂದ ಆತನ ಗಾಯವನ್ನು ಹೊಲಿದು ಮಲಾಮ ಪಟ್ಟಿಯನ್ನು ಹಚ್ಚಲಾಯಿತು. ಅವರ ಆಯುಷ್ಯ ಇನ್ನೂ ಬಾಕಿ ಇತ್ತು. ಆದ್ದರಿಂದ ಆ ಫಕೀರನು ಉಳಿದನು. ಮುಂದೆ ಹತ್ತು ವರ್ಷ ಜೀವಂತವಾಗಿದ್ದನು. ಆತನ ಕುತ್ತಿಗೆ ಪೂರ್ತಿ ಕತ್ತರಿಸಿದ್ದರೂ ಆತ ಉಳಿದ, ಇದು ಅಲ್ಲಾನ ಸಾಮರ್ಥ್ಯವೆಂದು ಎಲ್ಲರಿಗೂ ತಿಳಿಯಿತು.

ನಡೆದ ಘಟನೆಯನ್ನು ಅವಲೋಕನ ಮಾಡಿದ ನಿಜಾಮಶಾಹನು ತನ್ನ ಕಾರಭಾರಿ ಜನರನ್ನು ಕರೆದು ಆಜ್ಞೆ ಮಾಡಿದನು. 'ಈ ಕೊರಕಲುಗಳಲ್ಲಿ ಹೀಗೆ ಜಗಳಗಳಾಗಿ ಹೊಡೆದಾಟವಾಗುತ್ತವೆ. ನಿತ್ಯ ವಿನಾಕಾರಣ ಒಬ್ಬರೊಬ್ಬರ ಜೀವ ತೆಗೆದುಕೊಳ್ಳುತ್ತಾರೆ. ಇದರಿಂದಾಗಿ ಬರಬರುತ್ತ ದೊಡ್ಡದೊಡ್ಡ ಸರದಾರರ ಮಧ್ಯ ವೈರತ್ವ ಬೆಳೆಯುತ್ತದೆ. ಆಮೇಲೆ ಬಹುಶಃ ಈ ಕಾರಣಗಳಿಂದ ಬಾದಶಹರ ಮನದಲ್ಲೂ ವೈಮನಸ್ಸು ಹುಟ್ಟಬಹುದು. ಆದ್ದರಿಂದ ಒಂದು ಕೆಲಸ ಮಾಡಬೇಕು. ಅದರಿಂದ ಇಂಥ ಜಗಳಗಳು ನಿಲ್ಲುತ್ತವೆ' ಎಂದು ನಿರ್ಧರಿಸಿ ಅಲ್ಲಿಯೇ ನಿಂತು ತನ್ನ ಸೈನ್ಯಕ್ಕೆ ಆಜ್ಞೆ ಮಾಡಿದನು. ಅಲ್ಲಿದ್ದ ಕಸಕಡ್ಡಿಗಳನ್ನು, ಕಟ್ಟಿಗೆಗಳನ್ನು ಉರುವಲನ್ನು ಒಂದು ಕಡೆಗೆ ಕೂಡಿಸಿ ಪ್ರತಿಯೊಂದು ಮನೆ, ಕಟ್ಟಡ ಹಾಗು ಅಂಗಡಿಗಳಿಗೆ ಬೆಂಕಿ ಹಚ್ಚಲು ಹೇಳಿದನು. ಅದರಂತೆ ಬೆಂಕಿ ಹಚ್ಚಿದರು. ಆಗ ಸಂಪೂರ್ಣ ಕಟ್ಟಡಗಳು ಮನೆಗಳೇ ಇತ್ಯಾದಿಯಾಗಿ ಹತ್ತಿಯಂತೆ ಉರಿದು ನೆಲಸಮವಾದುವು. ಇದರಿಂದಾಗಿ ಮನೆಮನೆಯ ನೆಲತಳಗಳು ಫರಸಿಗಳು ಬಯಲಾಗಿ ಗೋಡೆಗಳು ಬಿದ್ದುವು. ಅದರಿಂದ ಮನೆಮನೆಗಳ ನೆಲವನ್ನು ಅಗೆದು ಸಂಪತ್ತನ್ನು ಹುಡುಕಹತ್ತಿದರು

ಕೆಲಕೆಲವು ಕಡೆಗೆ ಹುಗಿದಿಟ್ಟ ದ್ರವ್ಯ ದೊರಕುತ್ತಿರಲಿಲ್ಲವಾದರೂ ಬಹಳ ಕಡೆಗೆ ಹುಡುಕಿದಲ್ಲೆಲ್ಲ ಸಿಗುತ್ತಿತ್ತು. ಆರು ತಿಂಗಳುಗಳ ಕಾಲ ಮುಸಲ್ಮಾನರ ಸೈನ್ಯ ವಿಜಯ ನಗರದಲ್ಲಿತ್ತು. ಸಾವಿರ ಕೋಸುಗಳ ಪರ್ಯಂತ ವಿಜಯನಗರದ ಆಸುಪಾಸಿನಲ್ಲಿಯ ಕಸಬೆಗಳು, ಗ್ರಾಮಗಳು, ಹಳ್ಳಿಗಳು ಇತ್ಯಾದಿಗಳೆಲ್ಲ ನಾಶವಾದುವು. ಬಯಲಾದುವು. ಧೂಳಿಪಟವಾದುವು. ರಾಮಮರಾಜನ ಹಿರಿಯ ಅಣ್ಣ ತಿಮ್ಮರಾಜನು, ಸಾವಿರ ಯುಕ್ತಿಗಳಿಂದ ಆ ಯುದ್ಧಪ್ರಳಯದಿಂದ ಬದುಕಿ ಉಳಿದಿದ್ದನು. ಆತನು ಪೆನಗುಂಡಿಯ ಕೋಟೆಯಲ್ಲಿ ಆಶ್ರಯ ಪಡೆದು ಇರಹತ್ತಿದನು. ರಾಮರಾಜನಿಗೆ ಮಗನಿದ್ದನು. ಆತನು ತನ್ನ ಮನೆಯ ಆಪ್ತ ಮಂಡಳಿಯನ್ನು ತೆಗೆದುಕೊಂಡು ಆನೆಗುಂದಿಯಿಂದ ಮೂರು ಕೋಸುಗಳ ಅಂತರದಲ್ಲಿದ್ದ ಒಂದು ಬೆಟ್ಟದಮೇಲಿನ ಒಂದು ವಿಶಾಲವಾದ ಗುಹೆಯನ್ನು ಸೇರಿ ಕಾಲಹರಣವನ್ನು ಮಾಡುತ್ತಿದ್ದನು.

### *೧೧. ವಿಜಯನಗರದ ಸುತ್ತ ಮುತ್ತಲಿನ ಬೆಟ್ಟಗಳಲ್ಲಿಯ ಗುಹೆಗಳು ಮತ್ತು ಬಿಲಗಳ ಸವಿವರ ವರ್ಣನೆ :*

ವಿಜಯನಗರದ ಸನ್ನಿಧಿಯಲ್ಲಿ ಮತ್ತು ವಿಜಯನಗರದ ಆಸುಪಾಸಿನಲ್ಲಿ ಬೆಟ್ಟಗಳಿವೆ. ಆ ಬೆಟ್ಟಗಳಲ್ಲಿ ದೊಡ್ಡ ದೊಡ್ಡ ಆಳವಾದ ಗುಹೆಗಳು, ಗವಿಗಳು ಇರುತ್ತವೆ. ಎಂಟು ಹತ್ತು ಕೋಸುಗಳವರೆಗೆ ಆ ಗುಹೆಗಳಲ್ಲಿ ಒಳಗೆ ನಡೆದು ಹೋಗಬೇಕಾಗುತ್ತದೆ. ಆ ಮಾರ್ಗಗಳೂ ಅನೇಕ ರೀತಿಯಲ್ಲಿವೆ. ಕೆಲವೆಡೆ ತುಂಬ ಕಠಿಣ, ಕೆಲವೆಡೆ ದೊಡ್ಡ ರಸ್ತೆಗಳು, ಇನ್ನು ಕೆಲವೆಡೆ ಗಾಢ ಅಂಧಃಕಾರ, ಅಲ್ಲಿ ದಿವಟಿಗೆಗಳಿಲ್ಲದೆ ಮುಂದೆ ಹೆಜ್ಜೆಗಳನ್ನಿಡುವುದೇ ಸಾಧ್ಯವಿಲ್ಲ. ಕೆಲವು ಕಡೆಗಳಲ್ಲಿ ಪ್ರಕಾಶ ಬಿದ್ದುದು ಕಾಣುತ್ತದೆ. ಆ ಬೆಳಕಿನಲ್ಲಿ ಆಕಾಶವನ್ನು ನೋಡಬಹುದು. ಬಹುತೇಕವಾಗಿ ವಿಜಯನಗರದ ಜನರು ಭಯಭೀತರಾಗಿ ಬೇರೆ ಬೇರೆ ದಿಕ್ಕಿನ ಗ್ರಾಮ, ಊರುಗಳಿಗೆ ಓಡಿಹೋಗಿದ್ದರು. ಇನ್ನು ಕೆಲವು ಜನರು ಈ ತರದ ಗುಹೆಗಳಲ್ಲಿ ಆಶ್ರಯ ಪಡೆದು ಆ ಗುಹೆಗಳಲ್ಲಿಯೇ ಸಂಸಾರ ಸಾಗಿಸುತ್ತಿದ್ದರು. ಯಾರೆಲ್ಲ ಗುಹೆಗಳನ್ನು ಹೊಕ್ಕು ದಿನಗಳನ್ನು ನೂಕುತ್ತಿದ್ದರೋ ಅವರೆಲ್ಲ ರಾತ್ರಿ ಹೊತ್ತು ಬಿಲಗಳಿಂದ ಹೊರಬಂದು ನೀರು ನಿಡಿ ಮತ್ತು ಸಂಸಾರಕ್ಕೆ ಬೇಕಾಗುವ ವಸ್ತುಗಳನ್ನು ತಮಗೆ ಗೊತ್ತಿದ್ದ ಸ್ಥಳಗಳಿಂದ ಪಡೆದುಕೊಂಡು ತಿರುಗಿ ಗುಹೆಗಳಲ್ಲಿ ಸೇರುತ್ತಿದ್ದರು. ಮುಸಲ್ಮಾನ ಜನರಿಗೆ ಈ ಸುದ್ದಿ ಹತ್ತಿತ್ತು. ಆಗ ಮುಸಲ್ಮಾನ ಜನರು ಆ ಜನರನ್ನು ಹಿಡಿಯಲು ದಾರಿಯಲ್ಲಿ ಜಪ್ಪಿಸಿ ಕುಳಿತುಕೊಳ್ಳ ಹತ್ತಿದರು. ಗುಹೆಗಳಿಂದ ಆ ಜನರು ಹೊರಬರುತ್ತಲೇ ಅವರನ್ನು ಹಿಡಿದು ಅವರ ಮುಖಗಳಿಗೆ ಮುಸುಕು ಹಾಕಿ ಕರೆದೊಯ್ಯುತ್ತಿದ್ದರು. ಆ ವ್ಯಕ್ತಿಯಿಂದ ಏನನ್ನಾದರೂ ತೆಗೆದುಕೊಳ್ಳದ ಹೊರತು ಅವನನ್ನು ಬಿಡುತ್ತಿರಲಿಲ್ಲ. ಇಂಥ ಸಂದರ್ಭಗಳಲ್ಲಿ ಭಾಗವಹಿಸಿ ಅನುಭವಿಸಿದ ರಫಿಉದ್ದೀನ ಶಿರಾಜ ತನ್ನ ಕಥೆಯನ್ನು ಹೇಳಿಕೊಂಡಿದ್ದಾನೆ. ಆತನಿಗೆ ಒಂದು ದಿನ ಇಂಥ ಪ್ರಸಂಗ ಬಂದಿತ್ತಂತೆ. ವಿವರ ಹೀಗಿದೆ.

'ಒಂದು ದಿನ ವಿಜಯನಗರದವರು ಗವಿಯಿಂದ ಹೊರಬಿದ್ದರು. ಅವರಲ್ಲಿಯ ಇಬ್ಬರು ಮೂವರು ಜನರನ್ನು ಹಿಡಿದೆನು. ಅವರಿಗೆ ತುಂಬ ತೊಂದರೆ ಕೊಟ್ಟನಂತರ ಅವರು ಮಾತನಾಡಿದರು. ಇಂಥದೊಂದು ಬೆಟ್ಟದಲ್ಲಿ ಒಂದು ಗುಹೆ ಇದೆ. ಆ ಗುಹೆಯಲ್ಲಿ ನಮ್ಮ ಹೆಂಡಿರು ಮಕ್ಕಳು ಮತ್ತು ಸಂಪತ್ತು ಇದೆ. ಒಂದು ವೇಳೆ ನಮ್ಮನ್ನು ಕೊಲ್ಲದಿದ್ದರೆ ನಮ್ಮೊಂದಿಗೆ ಬನ್ನಿರಿ, ನಿಮಗೆ ಸಾಕಷ್ಟು ದ್ರವ್ಯವನ್ನು ಕೊಡುತ್ತೇವೆ ಎಂದರು. ಎಲ್ಲ ಜನರಿಗೂ ಆಶೆ ಬೆಂಬತ್ತಿದೆ. ಆದ್ದರಿಂದ ನಾವೂ ಕೆಲವು ಜನರನ್ನು ಕರೆದುಕೊಂಡು ಆ ವ್ಯಕ್ತಿಗಳ ಜೊತೆಗೆ ಗುಹೆಗೆ ನಡೆದೆವು. ತುಸು ಹೊತ್ತು ಆ ಗುಹೆಯಲ್ಲಿ ನಡೆದು ಹೋದ ಅನಂತರ ಅಲ್ಲಿ ಬಹಳ

ಸಂದಿಗಳು ಕಾಣ ಹತ್ತಿದುವು. ಪ್ರತಿಯೊಂದು ಸಂದಿಯ ದಾರಿಗಳೂ ಬೇರೆಬೇರೆಯಾಗಿದ್ದವು. ಅದನ್ನು ಕಂಡು ನಾವು ವಿಚಾರದಲ್ಲಿ ಬಿದ್ದೆವು. ತಿರುಗಿ ಬರುವಾಗ ದಾರಿ ಸಿಗಲಾರದು. ದಾರಿ ತಪ್ಪಿ ಇಲ್ಲವೆ ಗುಹೆಯಲ್ಲಿ ಗಾಬರಿಯಾಗಿ ಉಳಿದು ಬಿಡಬಹುದು. ಇಲ್ಲವೆ ಈ ಜನರ ಕೈಯಲ್ಲಿ ಸಿಕ್ಕು ಬಂದಿಗಳಾಗಬಹುದು ಜೀವವನ್ನೂ ಕಳೆದುಕೊಳ್ಳಬಹುದು. ಆದ್ದರಿಂದ ಸಾವಧರಾಗಿ ಕೆಲವು ಇಜ್ಜಲು ತುಂಡುಗಳನ್ನು ತೆಗೆದುಕೊಂಡೆವು ಮತ್ತು ಎರಡು ಮೂರು ಸಮಯದ ದೀಪಗಳನ್ನು ಹಚ್ಚಿ ಬೆಳಕನ್ನು ಮಾಡಿದೆವು. ಗುಹೆಯಲ್ಲಿ ಹೊರಟೆವು. ಯಾಕೆಂದರೆ ತಿರುಗಿ ಬರುವಾಗ ಆ ಗುರುತುಗಳಿಂದ ಹೊರಗೆ ಬರಲು ದಾರಿ ತಪ್ಪಲಾರದು. ಮುಂದೆ ಮುಂದೆ ಹೋದಂತೆ ಕೆಲವೆಡೆ ಬಹಳ ಕತ್ತಲೆಯಿತ್ತು. ಇನ್ನು ಕೆಲವೆಡೆ ತಲೆಯ ಮೇಲಿನ ಬಿರುಕುಗಳಿಂದ ಬೆಳಕು ಕಾಣುತ್ತಿತ್ತು.

ಕೆಲವು ಕಡೆಗೆ ಆಕಾಶವೂ ಕಾಣುತ್ತಿತ್ತು ಸ್ವಚ್ಛವಾದ ಪ್ರಕಾಶವೂ ಬಿದ್ದಿತ್ತು. ಆಗ ಆನಂದದಿಂದ ಖುಶಾಲಿಯಿಂದ ದಾರಿಯನ್ನು ಸವೆಸುತ್ತಿದ್ದೆವು. ಹೀಗೆ ಸುಮಾರು ಒಂದು-ಒಂದೂಕಾಲು ಕೋಸುಗಳ ವರೆಗೆ ಆ ಭಯಂಕರ ಗುಹೆಯಲ್ಲಿ ಹೋಗಿದ್ದೆವು. ಒಂದು ಸ್ಥಳಕ್ಕೆ ಹೋಗಿ ಮುಟ್ಟಿದ ಮೇಲೆ ಅಲ್ಲಿ ಒಳಗೆ ಹೋಗುವ ದಾರಿ ತುಂಬ ಚಿಕ್ಕದಾಗಿತ್ತು. ಆ ಇಕ್ಕಟ್ಟಿನ ದಾರಿಯಲ್ಲಿ ನಾಲ್ಕು ಗಜಗಳವರೆಗೆ ತುಂಬ ಸಂಕಟದಿಂದ ಎದ್ದು, ಕುಳಿತು ಮತ್ತೆ ನಡೆದು ಹೋಗಬೇಕಾಗುತ್ತಿತ್ತು. ಆ ಇಬ್ಬರೂ ಕೈದಿಗಳು ಇಬ್ಬರ ಕೈಗಳನ್ನು ಕಟ್ಟಿ ಅವರಿಗೆ ಮುಖವಾಡಗಳನ್ನೂ ಹಾಕಿದ್ದವು. ಅವರು ಆ ಚಿಕ್ಕ ಸಂದಿಯಲ್ಲಿ ಸೇರಿ ಒಳಗೆ ಹೊರಟು ಹೋದರು. ನಾವೂ ಅವರ ಹಿಂದೆ ಹೋಗಬೇಕೆಂದು ಒಂದು ಕ್ಷಣ ವಿಚಾರಿಸಿದೆವು. ಆದರೆ ಒಮ್ಮೆಲೆ ಆ ಗುಹೆಯ ಒಳಗಿನಿಂದ ಬಹಳ ಜನರ ಕೂಗಾಟದ ಗದ್ದಲದ ದನಿಯು ಕೇಳಿ ಬರಹತ್ತಿತು. ಶಸ್ತ್ರಗಳ ಸದ್ದೂ ಕೇಳಿಬರಹತ್ತಿತ್ತು. ಆ ಇಬ್ಬರೂ ಗೃಹಸ್ಥರು ತಮ್ಮ ಕೈಗಳಿಗೆ ಕಟ್ಟಿದ ಕಬ್ಬಿಣದ ಕಟ್ಟನ್ನು ಬಿಡಿಸಿಕೊಳ್ಳುತ್ತಿದ್ದರು. ಒಳಗಿಂದೊಳಗೆಯೇ ಅದನ್ನು ಮುರಿದುಬಿಟ್ಟಿದ್ದರು. ಇಬ್ಬರೂ ಒಳಗೆ ಹೋಗಿದ್ದರು. ಗದ್ದಲ ನಡೆದೇ ಇದ್ದುದು ಇನ್ನಷ್ಟು ಅಧಿಕವಾಯಿತು. ಒಳಗಡೆ ತುಂಬ ಜನರಿದ್ದಾರೆಂದು ತಿಳಿದು ನಮಗೆ ಭಯವಾಯಿತು. ಒಂದು ವೇಳೆ ನಾವು ತುಸುವೆ ಮುಂದೆ ಸರಿದು ಹೋದೆವಾದರೆ ಅವರೆಲ್ಲ ಬಂದು ನಮ್ಮನ್ನು ಹಿಡಿಯುತ್ತಾರೆ. ಹಿಂಸೆ ಕೊಡುತ್ತಾರೆಂದು ನಮಗೆಲ್ಲ ತಿಳಿಯಿತು. ಮುಂದೆ ಬಂಧಿಸಿ ಕೊಲ್ಲಲೂ ಬಹುದೆಂದು ಅನಿಸಿತು. ತುಸು ದ್ರವ್ಯಕ್ಕಾಗಿ ನಮ್ಮ ಜೀವವನ್ನೆ ಕೊಡಬೇಕಾಗುತ್ತದೆ. ಎಂದು ತಿಳಿದು ನಿರುಪಾಯರಾಗಿ, ನಿರಾಶರಾಗಿ ಅಲ್ಲಿಂದ ತಿರುಗಿ ಹೊರಟೆವು.

ಕಲ್ಲಿನ ಮೇಲೆ ಮಾಡಿದ ಗುರುತುಗಳಿಂದ ಜೀವಂತವಾಗಿ ಹೊರಗೆ ಬಂದೆವು. ಆ ಜಿಲ್ಲೆಯಲ್ಲಿಯ ಎಲ್ಲ ಬೆಟ್ಟಗಳಲ್ಲೂ ಇಂಥ ಗುಹೆಗಳು, ಗವಿಗಳು ಮತ್ತು ಬಿಲಗಳು ಇವೆ. ವಿಜಯನಗರದ ಹತ್ತಿರವೆ ಆನೆಗೊಂದಿ ಎಂಬ ಒಂದು ದೊಡ್ಡ ಕಸಬಾ ಇದೆ. ಹಾಗೆಯೇ ವಿಜಯನಗರದ ಆಸುಪಾಸಿನಲ್ಲಿ ದೊಡ್ಡ ದೊಡ್ಡ ಅಣೆಕಟ್ಟುಗಳು, ನೀರಿನ ಸಂಗ್ರಹವೂ ಇದೆ. ಆದಿಲಶಹನು ವಿಜಯನಗರವನ್ನು ನಾಶಮಾಡಿದ ನಂತರ ಆ ಪ್ರದೇಶದಲ್ಲಿ ಕಟ್ಟಡಗಳನ್ನು ಕಟ್ಟಿದನು ಮತ್ತು ಇಲಾಖೆಯನ್ನು ದೊಡ್ಡದು ಮಾಡಿ. ತನ್ನೊಬ್ಬ ಗುಮಾಸ್ತನನ್ನು ಇಟ್ಟು ಅಲ್ಲಿ ಮತ್ತೆ ಜನವಸತಿಯನ್ನು ಬೆಳೆಸಲು ಆಜ್ಞೆ ಮಾಡಿದನು. ಕೆಲವು ದಿನಗಳ ಅನಂತರ ಆ ಇಲಾಖೆ ಜನಭರಿತವೂ ಆಯಿತು. ಮೂರು ವರುಷಗಳ ಅನಂತರ ರಾಮರಾಜನ ಮಗ, ಯುದ್ಧದಲ್ಲಿ ಬದುಕಿ ಗುಹೆಯಲ್ಲಿ ತನ್ನ ಕುಟುಂಬದೊಂದಿಗೆ ಇದ್ದವನು ಹೊರಬಂದು ಕೋಟೆಯನ್ನು ವಶಪಡಿಸಿಕೊಂಡನು. ಆ ಇಲಾಖೆಯ ಒಡೆಯನಾದನು. ಆದಿಲಶಾಹನ ಗುಮಾಸ್ತನನ್ನು ಹೊರ ಹಾಕಿದನು. ರಫೀಉದ್ದೀನ ಶಿರಾಜಿ ಹೇಳುವಂತೆ ಹಿಜರಿ ಸನ್ ೧೦೧೭ (ಕ್ರಿ.ಶ. ೧೬೦೮-೧೬೦೯)ರವರೆಗೂ

ರಾಮರಾಜನ ಮಗನು ಹೆಂಡತಿ ಮಕ್ಕಳೊಡನೆ ಆ ಕೋಟೆಯಲ್ಲಿಯೇ ವಾಸಿಸುತ್ತಿದ್ದನು. ಆ ಕೋಟೆಯ ಇಲಾಖೆಯ ಮತ್ತು ಆ ಇಲಾಖೆಯಲ್ಲಿ ಬರುವ ಗ್ರಾಮಗಳ ವಸೂಲಿಯನ್ನು ಮಾಡಿ ಜೀವಿಸುತ್ತಿದ್ದನು.

ರಾಮರಾಜನು ಯುದ್ಧದಲ್ಲಿ ಸತ್ತ ದಿನಾಂಕವನ್ನು ಬೇರೆ ಬೇರೆ ವಿದ್ವಾಂಸರು ಬೇರೆ ಬೇರೆ ದಿನಗಳನ್ನು ಕೊಟ್ಟಿದ್ದಾರೆ. 'ಫತೇಹದೀನ ಮರ್ಗೆಲಈನ' ಎಂಬುದರ ಅರ್ಥ ಮುಸಲ್ಮಾನರ ವಿಜಯವಾಯಿತು. ರಾಮರಾಜನು ಸತ್ತನು ಎಂದಾಗುತ್ತದೆ. ಇವೇ ಅಕ್ಷರಗಳನ್ನು 'ಅಬಜದ'ದ ಲೆಕ್ಕದಿಂದ ಗುಣಿಸಿದರೆ ರಾಮರಾಜನು ಸತ್ತದಿನ ಹಿಜರಿ ಶಕ ೯೭೨ (ಕ್ರಿ.ಶ. ೧೫೬೪-೬೫) ಎಂದಾಗುತ್ತದೆ. ಮಹಮ್ಮದ ಕಾಸಿಮ ಫೆರಿಸ್ತಾನ ತಂದೆ ಗುಲಾಮ ಅಲಿ ಇಸ್ತರಾಬಾದಿಯು ರಾಮರಾಜನು ಯುದ್ಧಯಲ್ಲಿ ಸತ್ತ ದಿನವನ್ನು 'ಕತಲ ರಾಮರಾಜ' ಎಂದು ಬರೆದಿದ್ದು, ಅದನ್ನು ಪರ್ಶಿಯನ್ ಅಕ್ಷರಗಳಲ್ಲಿ ಬರೆದು ಅಕ್ಷರಗಳಲ್ಲಿಯ 'ಜೀಮ' ಈ ಅಕ್ಷರವನ್ನು ಬಿಟ್ಟರೆ ಉಳಿದ ಅಕ್ಷರಗಳು 'ಅಬಜದ' ಲೆಕ್ಕದಲ್ಲಿ ೯೭೨ ಎಂದು ಬರುತ್ತದೆ. ರಾಮರಾಜನ ಶಿರಚ್ಛೇದನ ಮಾಡಿದ ನಂತರ ಆತನ ಕತ್ತರಿಸಿದ ರುಂಡವನ್ನು ನೋಡಲು ಇಮಾದುಲ್ಮುಲ್ಕ ಬಾದಶಹನ ಕಡೆಗೆ ಕಳಿಸಲಾಯಿತು. ಯಾಕೆಂದರೆ ಇಮಾದುಲ್ಮುಲ್ಕನು ಮುಸಲ್ಮಾನ ಬಾದಶಹನಿದ್ದರೂ ಆದಿಲಶಹನಿಗೆ ಸಹಾಯ ಮಾಡಲಿಲ್ಲ. ನಿಜಾಮಶಾಹನ ಇಲಾಖೆಯಲ್ಲಿ ಲೂಟಿ ಮಾಡುತ್ತ ದಂಗೆ ಮಾಡುತ್ತಿದ್ದನು. ಆದ್ದರಿಂದ ರಾಮರಾಜನ ರುಂಡವನ್ನು ಆತನ ಹತ್ತಿರ ನೋಡಲು ಕಳಿಸಲಾಯಿತು. ಅಲೀ ಆದಿಲಶಹನ ತಾರೀಖು 'ಶಮಸೀರ ಅಲ್ಲೀ ಬುರ್ಧ' ಎಂಬುದರ ಅರ್ಥ ಅಲಿ ಆದಿಲಶಹನ ತಲವಾರ ಶ್ರೇಷ್ಠ ಎಂದಾಗುತ್ತದೆ. 'ಅಬಜದ' ದಂತೆ. ಅಕ್ಷರಗಳನ್ನು ಗುಣಿಸಿದರೆ ಅಲಿ ಆದಿಲಶಹನ ವಿಜಯದ ದಿನ ೯೭೨ (ಕ್ರಿ.ಶ. ೧೫೬೪-೬೫) ಎಂದೇ ಆಗುತ್ತದೆ. ರಾಮರಾಜನ ಮರಣ ಹಾಗೂ ಅಲಿ ಆದಿಲಶಹನ ವಿಜಯ ಒಂದೇ ದಿನ ಆದಂತಾಯಿತು.

### *೧೨. ನಿಜಾಮಶಹ ಮತ್ತು ಕುತುಬಶಹರು ವಿಜಯನಗರದಿಂದ ತಿರುಗಿ ಹೋದರು :*

ವಿಜಯನಗರದಲ್ಲಿ ಗೆಲುವಾಗಿ, ತಮಗೆ ವಿಜಯ ದೊರೆತರೆ ನಾಲ್ಕು ನಾಮಾಂಕಿತ ಕೋಟೆಗಳನ್ನು, ಅವುಗಳಲ್ಲಿ ರಾಯಚೂರು, ಮುದಗಲ್ ಎರಡು ಕೋಟೆಗಳನ್ನು ಆದಿಲಶಹನಿಗೆ ಕೊಡಬೇಕೆಂದು ಈ ಮೊದಲೆ ಮುಸಲ್ಮಾನ ಬಾದಶಹರ ಮಧ್ಯ ಕರಾರುಗಳಾಗಿದ್ದುವು. ಆದಿಲಶಹನ ಮನೋರಥವು ಪೂರ್ಣವಾಯಿತು. ಆದರೆ ನಿಜಾಮಶಾಹ ಹಾಗು ಕುತುಬಶಾಹರು ಒಬ್ಬ ವಕೀಲನನ್ನು ತಿಮ್ಮರಾಜನ ಹತ್ತಿರ ಕಳಿಸಿ, ನಾಲ್ಕು ಕೋಟೆಗಳನ್ನು ತಮ್ಮ ಕೈವಶ ಮಾಡಿಕೊಡಬೇಕೆಂದು ಹೇಳಿ ಕಳಿಸಿದರು. ತಿಮ್ಮರಾಜನು ಕೋಟೆಗಳನ್ನು ಕೊಡುವುದಿಲ್ಲ ಎಂದು ಹೇಳುತ್ತಿದ್ದನು. ಈ ಇಬ್ಬರೂ ಬಾದಶಹರು ಯುದ್ಧಕ್ಕೆ ಸಿದ್ಧರಾಗುತ್ತಿದರು. ಆದಿಲಶಹನು ಇವರ ಕೆಲಸದಲ್ಲಿಯ ಭಾವವನ್ನರಿತು ಚಿಂತಿತನಾದನು. ಅದರ ಪರಿಣಾಮವೆಂದರೆ ನಿಜಾಮಶಾಹ ಹಾಗೂ ಕುತುಬಶಾಹರು, ಆದಿಲಶಹನಿಗೆ ಕೋಟೆಗಳನ್ನು ಕೊಡಿಸುವ ವಿಷಯದಲ್ಲಿ ಪ್ರಯತ್ನ ಮಾಡುತ್ತಿಲ್ಲವೆಂದು ಕಂಡು ಬರಹತ್ತಿತು. ಇಲ್ಲವಾದಲ್ಲಿ 'ನಾನು ಕೋಟೆಗಳನ್ನು ಕೊಡುವುದಿಲ್ಲ'ಎಂದು ಹೇಳುವ ಸಾಹಸ ತಿಮ್ಮರಾಜನಿಗೆ ಹೇಗೆ ಬಂದಿತು? ಬಹುಶಃ ಇವರೇ ತಿಮ್ಮರಾಜನಿಗೆ ಕಲಿಸುತ್ತಿರಬೇಕು, 'ನೀವು ಕೋಟೆಗಳನ್ನು ಕೊಡಬಾರದು' ಎಂದು ತಿಮ್ಮರಾಜನಿಗೆ ಕಲಿಸಿ, ಹೊರಗೆ, 'ತಿಮ್ಮರಾಜನು ಕೋಟೆಗಳನ್ನು ಕೊಡುತ್ತಿಲ್ಲ ಆದ್ದರಿಂದ ಆತನೊಂದಿಗೆ ಯುದ್ಧ ಮಾಡಬೇಕಾಗಿದೆ' ಎಂದು ತೋರಿಸುತ್ತಿರಬೇಕು. ಇದರಲ್ಲಿಯ ಮುಖ್ಯ ಕಾರಣವೆಂದರೆ, ಆದಿಲಶಾಹನಿಗೆ ಕೋಟೆಗಳನ್ನು ಕೊಡಬೇಕೆಂದು ಮೊದಲೇ ಕರಾರೇನೋ ಆದಿದ್ದುದು ನಿಜ, ಆದರೆ ಈಗಿನ ಪರಿಸ್ಥಿತಿಯಲ್ಲಿ ಇಂಥ ದೊಡ್ಡ ದೊಡ್ಡ

ಕೋಟೆಗಳನ್ನು ಆದಿಲಶಹನಿಗೆ ಕೊಟ್ಟರೆ, ಆದಿಲಶಹನು ಈ ಕೋಟೆಗಳ ಒಡೆಯನಾಗಿ ಅವನು ಇನ್ನಷ್ಟು ಬಲಿಷ್ಠನಾಗುತ್ತಾನೆಂದು ಆ ಉಭಯತರ ಮನದಲ್ಲಿ ಬಂದಿತ್ತು. ಅನಂತರ ಆದಿಲಶಹನ ಮುಂದೆ ನಿಲ್ಲುವ ಶಕ್ತಿಯೇ ತಮ್ಮಲ್ಲಿ ಉಳಿಯುವುದಿಲ್ಲ ಎಂದು ತಿಳಿದು ಈ ಗುಪ್ತ ಯೋಜನೆಯನ್ನು ಹಾಕಿದ್ದರು, ಆದರೆ ನಿಜಾಮಶಹ ಭಯಭೀತನಾದನು. ಯಾಕೆಂದರೆ ಒಂದು ವೇಳೆ ಆದಿಲಶಹನು ತಮ್ಮೊಂದಿಗೆ ದ್ವೇಷ ಮಾಡಹತ್ತಿ ತಿರುಗಿಬಿದ್ದರೆ ತಾವು ತಮ್ಮ ಪ್ರದೇಶಕ್ಕೆ ಮರಳಿ ಹೋಗಲೂ ಬಿಡಲಾರ. ಕಠಿಣ ಪ್ರಸಂಗ ಬರುತ್ತದೆ ಎಂದು ತಿಳಿದು ನಿಜಾಮಶಹನು ತಾನು ತಿರುಗಿ ಹೋಗುವ ಕುರಿತು ಆದಿಲಶಹನಿಗೆ ನಿರೋಪ ಹೇಳಿ ಕಳಿಸಿದನು. ಸುಳ್ಳು ನೆಪ ಹೇಳಿ ಅಹಮದನಗರಕ್ಕೆ ಹೋಗುವುದಾಗಿ ಹೇಳಿದನು. ಆದಿಲಶಹನೂ ಅದನ್ನು ಅರ್ಥ ಮಾಡಿಕೊಂಡನು. ಇವರು ಇಲ್ಲಿದ್ದರೆ ತನಗೆ ಕೋಟೆ ಕೊತ್ತಲಗಳನ್ನು ಸ್ವಾಧೀನ ಪಡಿಸುವ ಕಾರ್ಯಗಳಲ್ಲಿ ಆತಂಕ ಒಡ್ಡುತ್ತಾರೆಂದು ತಿಳಿದು, ನಿಜಾಮಶಹ, ಕುತುಬಶಾಹ ಮತ್ತು ಅಲೀ ಬರೀದರಿಗೆ ತಂತಮ್ಮ ಪ್ರದೇಶಗಳಿಗೆ ಹಿಂತಿರುಗುವ ಬಗ್ಗೆ ಒಂದು ಮೇಜವಾನಿಯನ್ನು ಏರ್ಪಡಿಸಿ ಹೋಗಲು ಅವರಿಗೆ ನಿರೋಪ ಕೊಟ್ಟನು. ಅವರೆಲ್ಲ ತಂತಮ್ಮ ಪ್ರದೇಶಗಳಿಗೆ ಹೋದರು.

### *೧೩. ಆದಿಲಶಹನು ಸಾವಕಾಶವಾಗಿ ಮತ್ತು ಸುಲಭವಾಗಿ ನಾಲ್ಕು ಕೋಟೆಗಳನ್ನು ಸ್ವಾಧೀನ ಪಡಿಸಿಕೊಂಡು ವಿಜಾಪುರಕ್ಕೆ ಬಂದದ್ದು :*

ಆ ಬಾದಶಹರುಗಳೆಲ್ಲ ಹೊರಟು ಹೋದ ಅನಂತರ ಆದಿಲಶಹನು ರಾಯಚೂರು ಕೋಟೆ ಹಾಗು ಉಳಿದ ಕೋಟೆಗಳ ಮೇಲೆ ಏರಿ ಹೋದನು. ಅವರೆಲ್ಲ ಪ್ರತಿಭಟನೆಯಿಲ್ಲದೆ, ಆದಿಲಶಹನಿಗೆ ಶರಣಾದರು. ಆದಿಲಶಹನು ಅವರಿಗೆಲ್ಲ ಅಭಯ ನೀಡಿ, ಅವರವರ ಜಹಗೀರುಗಳನ್ನು ಅವರವರಿಗೇ ಕೊಟ್ಟು ಜೊತೆಗೆ ತನ್ನ ರಾಜ್ಯದ ಕೆಲವು ಅಧಿಕಾರಿಗಳನ್ನು ಸೈನ್ಯವನ್ನು ಕೊಟ್ಟನು. ಕೋಟೆಗಳ ದುರಸ್ತಿ ಮಾಡಲು ಹಣವನ್ನು ನೀಡಿ ವಿಜಯಧ್ವಜದೊಂದಿಗೆ ತನ್ನ ಸೈನ್ಯ ಸಮೇತ ರಾಜಧಾನಿ ವಿಜಾಪುರಕ್ಕೆ ಬಂದನು. ಅಲ್ಲಾನ ಕೃಪೆಯಿಂದ ತನಗೆ ಇಂಥ ಗೆಲುವು ಸಾಧಿಸಿತೆಂದು ತಿಳಿದು ಧರ್ಮ ಕಾರ್ಯಕ್ಕಾಗಿ ತನ್ನ ರಾಜ್ಯದ ದ್ರವ್ಯ ಭಂಡಾರದ ಬಾಗಿಲನ್ನು ತೆರೆದು ಬಡಬಗ್ಗರಿಗೂ, ಫಕೀರರಿಗೂ ಮತ್ತೆಲ್ಲರಿಗೂ ಉದಾರವಾಗಿ ದಾನ ನೀಡಿದನು. ಎಲ್ಲೆಡೆ ಜನರು ಹಗಲು ರಾತ್ರಿ ಎನ್ನದೆ ವಿಜಯೋತ್ಸವವನ್ನು ಆಚರಿಸಿದರು.

### *೧೪. ಅಲೀ ಆದಿಲಶಹನು, ಕಿಶ್ವರಖಾನನಿಂದ ವಿಜಾಪುರದ ಕೋಟೆಯನ್ನು ಕಟ್ಟಿದ್ದು. ಮತ್ತು ಅವನಿಂದಲೇ ಜುಮ್ಮಮಸೀದಿಯನ್ನು ಕಟ್ಟಿಸಿ, ನಗರದಲ್ಲಿ ನಲ್ಲಿ ನೀರನ್ನು ತಂದುದು :*

ಅಲ್ಲಾನ ಕೃಪೆಯಿಂದ ಅಲಿ ಆದಿಲಶಹನ ಐಶ್ವರ್ಯ ಹಾಗೂ ವೈಭವಗಳು ಅಧಿಕವಾಗುತ್ತಿದ್ದಂತೆ, ವಿಶ್ವದ ನಾನಾ ಭಾಗಗಳಿಂದ ಜನರು ಬಂದು ಬಾದಶಹನ ಆಸ್ಥಾನದಲ್ಲಿ ಸೇರಿದರು. ಯಾವ ಸಮಯದಲ್ಲಿ ಏನಾಗುತ್ತದೆ ಎಂಬ ಕಾಲಚಕ್ರದ ಭಯದಿಂದ ವಿಜಾಪುರದ ಆಶ್ರಯದಲ್ಲಿ ಬಂದು ಸ್ವಸ್ಥವಾಗಿ ಸುಖದಿಂದ ಸಂಸಾರ ಮಾಡುತ್ತಿದ್ದರು. ಆದರೆ ಶತ್ರುವಿನ ಭಯದ ಧಕ್ಕೆ ನಿರಂತರವಾಗಿತ್ತು. ಯಾಕೆಂದರೆ, ಅಹಮದನಗರದ ವಿಷಯದಲ್ಲಿ ವೈರಿಗಳು ಯಾವಾಗ ಸೇರಿ ಸೇಡು ತೀರಿಸಿಕೊಳ್ಳಲು ಬರುತ್ತಾರೆಂಬುದನ್ನು ಹೇಳಲು ಬರುವಂತಿರಲಿಲ್ಲ. ಆದಿಲಶಹನು ಆಗಲೆ ಎರಡು ಸಲ ಸೈನ್ಯವನ್ನು ತೆಗೆದುಕೊಂಡು ಹೋಗಿ ಅಹಮದನಗರದ

ಪ್ರದೇಶವನ್ನು ನಾಶ ಮಾಡಿ ಧೂಳಿಪಟ ಮಾಡಿದ್ದನು. ಆದ್ದರಿಂದ ಈ ವೈರತ್ವವು ಮನದಲ್ಲಿ ಬಂದು ಶತ್ರುಗಳು ಬಂದು ದಾಳಿಮಾಡಬಹುದೆಂದು ನಗರದ ಸುತ್ತಲೂ ಸುಣ್ಣ ಗುಚ್ಚ ಮತ್ತು ದೊಡ್ಡ ಕಲ್ಲುಗಳನ್ನು ಹಾಕಿ ಕೋಟೆಯನ್ನು ಕಟ್ಟಿಸಿದನು.

ಈ ಕೋಟೆಯನ್ನು ಕಟ್ಟುವ ಕೆಲಸದ ಉಸ್ತುವಾರಿಯನ್ನು ಕಿಶ್ವರಖಾನನಿಗೆ ವಹಿಸಿದನು. ಗ್ರಾಮ-ಗ್ರಾಮಗಳಲ್ಲಿಯ ಎಲ್ಲ ಗೌಂಡಿಗಳನ್ನು, ಚತುರ ಕಲ್ಲುಕುಟಿಗರನ್ನು ಕರೆಸಿದನು. ಅವರ ಮೇಲೆ ಕೆಲಸಗಾರ ಗುಮಾಸ್ತನೊಬ್ಬನನ್ನು ನಿಯಮಿಸಿದನು. ಕೋಟೆಯ ಒಂದೊಂದು ಭಾಗಕ್ಕೆ ಒಬ್ಬೊಬ್ಬ ಸರದಾರರನ್ನು, ಅಮೀರ ಜನರಲ್ಲಿ ಆರಿಸಿ ನಿಯಮಿಸಿದನು. ಈ ಕೆಲಸವನ್ನು ಕಿಶ್ವರಖಾನನು ತುಂಬ ಪ್ರಯತ್ನಮಾಡಿ, ಬಹಳ ಶ್ರಮವಹಿಸಿ ಎರಡೂವರೆ ವರುಷಗಳಲ್ಲಿ ಕೋಟೆಯನ್ನು ಕಟ್ಟಿಸಿ ಸಿದ್ಧಪಡಿಸಿದನು. ಕೋಟೆಯ ಸುತ್ತಳತೆ ಆರು 'ಫರಸಖ' ಆಯಿತು. ಫರಸಖ ಈ ಶಬ್ದದ ಅರ್ಥವು 'ಕುಂಬುಲಲುಗ' 'ಕಜಫಲುಗ' ಮತ್ತು 'ಮುಂತಬಬುಲಲುಗ', 'ಬುರಹಾನ ಕಾತೆ' ಮತ್ತು 'ಜ್ಯಾಹನಗಿರಿ' ಎಂಬೆಲ್ಲ ನಿಘಂಟುಗಳಲ್ಲಿ ನೋಡಲಾಗಿ, ಒಂದು 'ಫರಸಖ'ವು ಮೂರು ಮೈಲುಗಳೆಂದು ಮತ್ತು ಒಂದು ಮೈಲು ವೇಗದಲ್ಲಿ ನಡೆಯುವ ಒಂಟೆಯ ನಾಲ್ಕು ಸಾವಿರ ಎರಡುನೂರದ ಇಪ್ಪತ್ತು ಹೆಜ್ಜೆಗಳು ಎಂದು ಹೇಳಲಾಗಿದೆ. ಒಂಟೆಯ ಒಂದು ಹೆಜ್ಜೆ, ಒಂದು ಗಜಕ್ಕೂ ಮತ್ತು ಒಂದು ಗಜಕ್ಕೆ ೨೪ ಬೆರಳುಗಳು ಸಮನಾಗಿವೆ. ಆದರೆ, ತಳದಿಂದ ಹಿಡಿದು ಎಲ್ಲಿಂದ ಬೆರಳುಗಳು ಪ್ರಾರಂಭವಾಗುತ್ತವೆಯೊ ಅಲ್ಲಿಂದಲೇ ೨೪ ಬೆರಳುಗಳ ಅಗಲದ ಸ್ಥಳವಾಗುತ್ತದೆ. ಮತ್ತು ನಾಲ್ಕು ಬೆರಳುಗಳ ಒಂದು ಮುಷ್ಠಿ ಮತ್ತು ಆರು ಮುಷ್ಠಿಗಳ ಒಂದು ಕೈ ಎಂದೆಲ್ಲ ವರ್ಣಿಸಲಾಗಿದೆ. ಕೋಟೆ ಗೋಡೆಯ ಅಗಲವು ಎಂಟು ಗಜಗಳು, ಎತ್ತರ ಇಪ್ಪತ್ತು ಗಜ ಮತ್ತು ಗೋಪುರಗಳ (ಬುರುಜಗಳು) ಸಂಖ್ಯೆ ಒಂದುನೂರದ ಇಪ್ಪತ್ತು. ಪ್ರತಿಯೊಂದು ಬುರುಜುಗಳೂ ಮಜಬೂತಾಗಿದ್ದು ಕೋಟೆಯಂತೆಯೇ ಇವೆ. ಆರು ಸಾವಿರ ತೂಬುಗಳನ್ನು (ಬಂದೂಕಿನ ನಳಿಗಳನ್ನಿಡಲು) ಕೋಟೆಯ ಸುತ್ತಲೂ ಕೊರೆಯಲಾಗಿದೆ. ಅಲ್ಲದೆ ಎಪ್ಪತ್ತು ಕಳ್ಳಗಿಂಡಿಗಳನ್ನು, ಜರೂರು ಬಿದ್ದಾಗ ಉಪಯೋಗಿಸಲೆಂದು ಕೊರೆದು, ಮತ್ತೆ ಅವುಗಳನ್ನು ಕಲ್ಲು ಮತ್ತು ಸುಣ್ಣಗಳಿಂದ ಮುಚ್ಚಲಾಗಿದೆ. ಕೋಟೆಗೆ ಆರು ಬಾಗಿಲುಗಳನ್ನು ಇಡಲಾಗಿದೆ. ಕೋಟೆಯ ಕಡೆಗೆ ಮುಖ ಮಾಡಿದ ಬಾಗಿಲು 'ಮಕ್ಕಾ ಬಾಗಿಲು' ಎಂದು ಪ್ರಸಿದ್ಧವಾಗಿದೆ. ಉಳಿದ ಬಾಗಿಲುಗಳಿಗೆ, ಯಾವ-ಯಾವ ಬಾಗಿಲುಗಳ ಹತ್ತಿರದಲ್ಲಿ ಗ್ರಾಮಗಳಿವೆಯೊ ಆ ಗ್ರಾಮಗಳ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಕೋಟೆಯ ಕೆಳಗೆ ತುಂಬ ಅಗಲವಾದ, ಆಳವಾದ ಕಂದಕವನ್ನು ಅಗೆಯಲಾಗಿದೆ. ಆ ಕಂದಕದಲ್ಲಿಯ ನೀರು ಎಂದೂ ಕಡಿಮೆಯಾಗುವುದಿಲ್ಲ. ಕೋಟೆಯನ್ನು ಕಟ್ಟುವ ಕೆಲಸವು ಹಿಜರಿ ಸನ್ ೯೭೩ (ಕ್ರಿ.ಶ. ೧೫೬೫-೬೬)ರಲ್ಲಿ ಪೂರ್ತಿಯಾಯಿತು.❖

ಅಮೀರ ಜನರು, ವಜೀರರು, ದ್ರವ್ಯವಾನರು ಮತ್ತು ಸಾಹುಕಾರ ಜನರು ನಿರ್ಭಯದಿಂದ ಕಟ್ಟಡಗಳನ್ನು ಕಟ್ಟಲು ಪ್ರಾರಂಭಿಸಿದರು. ದೊಡ್ಡ ದೊಡ್ಡ ವಾಡೆಗಳನ್ನು ಹವೇಲಿಗಳನ್ನು ಬಹಳ ಶ್ರಮಪಟ್ಟು ಕಟ್ಟಿದರು. ಅಲಿ ಆದಿಲಶಹನ ತಂದೆ ಇಬ್ರಾಹಿಮ ಆದಿಲಶಹನು ಕಟ್ಟಿದ ಎರಡು ಸುತ್ತಿನ ಕೋಟೆ ಮತ್ತು ನೀರು ತುಂಬಿದ ಕಂದಕಗಳು ನಗರದ ಮಧ್ಯಭಾಗದಲ್ಲಿವೆ. ನಗರದ ಕೋಟೆಯಲ್ಲಿ ದೊಡ್ಡ-ದೊಡ್ಡ ಹೂತೋಟಗಳನ್ನು ರಚಿಸಲು ಆರಂಭಿಸಿದರು. ತುಸು ದಿನಗಳಲ್ಲಿ ಅದು ಸಿದ್ಧವಾಯಿತು. ಮೊದಲನೆಯ ತೋಟಕ್ಕೆ 'ಇಬ್ರಾಹಿಮ ತೋಟ'ವೆಂದು ಹೆಸರಿಟ್ಟರು. ಹೀಗೆ ಹೆಸರನ್ನಿಡಲು ಕಾರಣವೆಂದರೆ, ಈ

❖ ಇದು ಸರಿಯಲ್ಲ. ವಿಜಯನಗರದ ನಿರ್ಣಾಯಕ ಯುದ್ಧದ ಅನಂತರ ಪ್ರಾರಂಭಿಸಿದರೆ (ಕ್ರಿ.ಶ. ೧೫೬೯-೭೦ರಲ್ಲಿ) ಪೂರ್ತಿಯಾಗುವ ಸಾಧ್ಯತೆ ಇದೆ. (ಅನುವಾದಕ)

ಮೊದಲು ಚಿಕ್ಕ-ಚಿಕ್ಕ ಹನ್ನೆರಡು ತೋಟಗಳಿದ್ದುವು ಅವುಗಳನ್ನೆಲ್ಲ ಒಂದೇ ತೋಟದಲ್ಲಿ ಸೇರಿಸಿದರು. ಆದ್ದರಿಂದ ಹನ್ನೆರಡು ಇಮಾಮರ ತೋಟ (ಬಾರಾ ಇಮಾಮ ಬಾಗ)ವೆಂದು ಹೆಸರು ಬಿತ್ತು. ಎರಡನೆಯ ತೋಟದ ಹೆಸರನ್ನು 'ಉಲಬಿ'ಎಂದು, ಮೂರನೆಯದಕ್ಕೆ 'ಅಲಿ' ಬಾಗ ಎಂದು ಹೆಸರನ್ನಿಟ್ಟರು.

ಅಮೀರ ಜನರು, ದರಬಾರದಲ್ಲಿಯ ಕಾರಭಾರಿ ಜನರು ಇತ್ಯಾದಿಯಾಗಿ ಪ್ರತಿಯೊಬ್ಬರು ತಂತಮ್ಮ ಮನೆಗಳ ಹತ್ತಿರ, ಚಿತ್ತ ಸಮಾಧಾನಕ್ಕಾಗಿ, ಶೋಭೆಗಾಗಿ ಹೂತೋಟಗಳನ್ನು ಮಾಡಿದ್ದರು. ನಗರದ ಸುತ್ತಲು ಕೂಡ ಬಹಳಷ್ಟು ತೋಟಪಟ್ಟಿಗಳನ್ನು ನಿರ್ಮಿಸಲಾಗಿತ್ತು. ಆ ಎಲ್ಲ ತೋಟಗಳಲ್ಲಿ ನಾನಾ ತರದ ಫಲ-ಪುಷ್ಪಗಳು ಶೀತಕಾಲದಲ್ಲೂ-ಬೇಸಿಗೆಯಲ್ಲೂ ದೊರೆಯುತ್ತಿದ್ದುವು. ಅಲಿ ಆದಿಲಶಹನ ಆಜ್ಞೆಯಂತೆ ಕಿಶ್ವರಖಾನನು ಐದು ಕೋಸುಗಳ ಅಂತರದಿಂದ, ನಗರಕ್ಕೆ ನೀರನ್ನು ತಂದನು. ಮಾರ್ಗ ಮಧ್ಯದಲ್ಲಿ ದೊಡ್ಡ-ದೊಡ್ಡ ಬಂಡೆಗಳನ್ನೊಡೆದು ಕಾಲುವೆ ಮಾಡಿ ನಳದ ಮೂಲಕ ನೀರನ್ನು ತಂದನು. ಕೋಟೆಯ ಹತ್ತಿರವೇ ಒಂದು ದೊಡ್ಡ ಪುಷ್ಕರಣಿಯನ್ನು ಕಟ್ಟಿದನು. ಅದಕ್ಕೆ 'ಕಾರಂಜೆ' ಎಂದು ಹೆಸರು. (ಚಾಂದದಬಾವಡಿ) ಯಾವಗಲೂ ನೀರಿನಿಂದ ತುಂಬಿರುತ್ತಿತ್ತು. ನಗರದ ಜನರೆಲ್ಲ ಆ ಬಾವಿಯಿಂದ ನೀರನ್ನು ಪಡೆದು ತೃಪ್ತರಾಗಿದ್ದಾರೆ.

ವಿಜಾಪುರದ ನೀರು ಹಾಗೂ ಹವಾಗುಣಗಳು ಪೂರ್ಣ ಶಕ್ತಿಯುತವಾಗಿವೆ. ಮತ್ತು ಸಮಸಮಾನವಾಗಿವೆ. ಅದರರ್ಥ ವಿಜಾಪುರದ ನೀರಿನಿಂದ ಮತ್ತು ಹವಾಗುಣದಿಂದ ಜನರಲ್ಲಿ ಅಧಿಕ ಶಕ್ತಿ ಬರುತ್ತದೆ. ಪ್ರಕೃತಿ ಕೆಡದೆ ಅವರು ಆರೋಗ್ಯದಿಂದ ಇರುತ್ತಾರೆ. ವಿಜಾಪುರದಲ್ಲಿ ಇರುವ ಜನರು ಯಾವಾಗಲೂ ಆರೋಗ್ಯವಂತರೂ-ದಷ್ಟಪುಷ್ಟರೂ ಆಗಿರುತ್ತಾರೆ. ಜಠರಾಗ್ನಿಯು ಪ್ರದೀಪ್ತವಾಗಿರುತ್ತಿದ್ದು ಬಹಳ ಹಸಿವಾಗುತ್ತದೆ. ನಗರದ ಹೊರಗೂ ದೊಡ್ಡ ಜನವಸತಿಯಾಗಿದೆ. ಆ ಜನವಸತಿಯು ಸಾಗರೋಪಾದಿಯಂತಿದ್ದು, ಅದಕ್ಕೆ ಶಹಪುರ ಎಂಬ ಹೆಸರಿದೆ. ನಾಲ್ಕು ಕಡೆಯ ಜನರು ತರಫ-ತರಫಗಳಿಂದ, ಪ್ರತಿಯೊಂದು ಪ್ರದೇಶದಿಂದ ವ್ಯಾಪಾರಸ್ಥರು ಪ್ರತಿಯೊಂದು ತರದ ಪದಾರ್ಥಗಳನ್ನು ಖರೀದಿಸಿ ಬೇರೆಡೆಗಳಲ್ಲೆಲ್ಲ ಮಾರಲು ತೆಗೆದುಕೊಂಡು ಹೋಗುತ್ತಾರೆ. ಬಹು ಬೆಲೆಯ ಅನೇಕ ಪದಾರ್ಥಗಳು ಶಹಪುರದಲ್ಲಿಯೆ ತಯಾರಾಗುತ್ತವೆ. ಜನವಸತಿ ಪ್ರಾರಂಭವಾದಾಗ, ಜನವಸತಿಗೂ ವಿಜಾಪುರ ನಗರಕ್ಕೂ ಎರಡೂವರೆ ಕೋಸುಗಳ ಅಂತರವಿತ್ತು. ಆದರೆ ಈಗ ಆ ಜನವಸತಿ ವಿಜಾಪುರ ನಗರದಲ್ಲಿಯೇ ಸೇರಿಕೊಂಡು ಬಿಟ್ಟಿದೆ. ಮೊದಲಿನ ಅಂತರದ ಗುರುತು ಎಂದರೆ ಈ ಬಾವಿ ಹಾಗು ಕಂದಕಗಳೇ ಆಗಿವೆ. ನಗರದಲ್ಲಿ ಕಿಶ್ವರಖಾನನ ಉಸ್ತುವಾರಿಯಲ್ಲಿ ಬಹುದೊಡ್ಡ ಹಾಗೂ ಸುಂದರವಾದ ಗಟ್ಟಿ ಮುಟ್ಟಾದ ಮಸೀದಿಯನ್ನು ಕಟ್ಟಲಾಯಿತು. ಜುಮ್ಮಾಮಸೀದಿಯ ಸುಂದರತೆಗೆ ಮತ್ತು ಅದರ ಗಟ್ಟಿತನಕ್ಕೆ ಸಮನಾದ ಇನ್ನೊಂದು ದೃಷ್ಟಾಂತವೇ ಇಲ್ಲ. ಅಂಥ ಅನುಪಮವಾದ ಜುಮ್ಮಾ ಮಸೀದಿಯು ತಯಾರಾಯಿತು.

### ೧೫. ಆದಿಲಶಹನು ಕರ್ನಾಟಕದ ಮೇಲೆ ಸೈನ್ಯವನ್ನು ಕಳಿಸುವುದು ಮತ್ತು ನಿಜಾಮಶಹ ಇತ್ಯಾದಿಗಳು ವೈರತ್ವದಿಂದ ಎದ್ದು ನಿಲ್ಲುವುದು :

ರಾಮರಾಜನು ಸತ್ತು ವಿಜಯನಗರವು ನಾಶವಾದ ಅನಂತರ, ವಿಜಯನಗರದ ವಶದಲ್ಲಿದ್ದ ಕೃಷ್ಣಾನದಿಯ ತೀರದಿಂದ ಉದ್ದಗಲ ಸೇತುಬಂಧ ರಾಮೇಶ್ವರದವರೆಗೂ ವಿಸ್ತೀರ್ಣವಾದ ಪ್ರದೇಶವಿತ್ತು. ಅದನ್ನು ಹಲವಾರು ಜನ ಅಮೀರ ಜನರು ಫೌಜುದಾರರು ಮತ್ತು ಪ್ರತಿಯೊಂದು ಗ್ರಾಮದ ಕೋಟೆಗಳಿಗೆ ಕಿಲ್ಲೇದಾರರು ಹೀಗೆ ನೋಡಿಕೊಳ್ಳುತ್ತಿದ್ದರು. ಎಲ್ಲೆಲ್ಲಿ, ಯಾವ ಯಾವ ಗ್ರಾಮಗಳು ಅಥವ ಕೋಟೆಗಳು

ಮತ್ತು ಇಲಾಖೆಗಳಲ್ಲಿ ಅಧಿಕಾರಿಗಳಿದ್ದರೋ ಅವರೆ ಬಲಾತ್ಕಾರದಿಂದ ತಾವೇ ಆ ಸ್ಥಳಗಳ ಅಧಿಪತಿಗಳಾಗಿ ತಮ್ಮ ಧ್ವಜಗಳನ್ನು ನೆಟ್ಟಿದ್ದರು. ಅವರು ಪರಸ್ಪರ ನಮ್ರತೆಯಿಂದಲೂ ಇರುತ್ತಿರಲಿಲ್ಲ. ಯಾರು, ಯಾರನ್ನೂ ಒಪ್ಪಿಕೊಳ್ಳುತ್ತಿರಲಿಲ್ಲ. ರಾಮರಾಜನ ಸಹೋದರ ತಿಮ್ಮರಾಜನೂ ಪೆನಗುಂಡಿಯಲ್ಲಿ ಇರಹತ್ತಿ ತುಸು ಪ್ರದೇಶವನ್ನು ಕೈವಶ ಮಾಡಿಕೊಂಡು ಅಷ್ಟರಲ್ಲಿಯೇ ತೃಪ್ತನಾಗಿ ದಿನಗಳನ್ನು ನೂಕುತ್ತಿದ್ದನು.

ಅಲ್ಲಾನ ಕೃಪೆಯಿಂದ ಆದಿಲಶಹನ ಮನೋಗತಾನುರೂಪ ವೈಭವ ಹಾಗೂ ಸಂಪತ್ತುಗಳು ದೊರೆತು ತಾನು ಸಂತೋಷವಾಗಿದ್ದು, ತನ್ನ ಪ್ರಜೆಗಳಿಗೂ ಅನೇಕ ಬಗೆಯ ಬಹುಮಾನಗಳನ್ನು, ದೇಣಿಗೆಗಳನ್ನು ನೀಡಿ ಅವರನ್ನು ಸುಖದಲ್ಲಿ ಇಟ್ಟಿದ್ದನು. ಹೀಗಿರುತ್ತ ಕೆಲವು ಕಾಲದ ಅನಂತರ ಯುದ್ಧ ಮಾಡಿ ಮತ್ತಷ್ಟು ಪ್ರದೇಶಗಳನ್ನು ಕೈವಶಮಾಡಿಕೊಳ್ಳಬೇಕೆಂದು ಆದಿಲಶಹನು ಮನದಲ್ಲಿ ತಂದು ಸಂಕಲ್ಪ ಮಾಡಿದನು. ತಾನೆ ಸ್ವತಃ ಪೆನಗುಂಡಿಯ ಕಡೆಗೆ ಹೋಗಿ ಯುದ್ಧಮಾಡಿ ಶಾಂತಿಧರ್ಮದ ಹಾಗು ಬಾದಶಾಹೀ ವೈಭವದ ಧ್ವಜವನ್ನು ಹಾರಿಸಬೇಕೆಂದು ಬಯಸಿದನು. ಹಾಗೆ ಮನದಲ್ಲಿ ಬರುತ್ತಿದಂತೆ ಆತನ ಸಂಪೂರ್ಣ ವಿಶ್ವಾಸದ 'ಮದಾರುಲ್ ಮಹಾಮ ಕಿಶ್ವರಖಾನ'ನ್ನು ಕರೆದು ವಿಚಾರಿಸಿದನು. ಅದಕ್ಕೆ ಅವನು, 'ಹಿಂದು ಜನರ ಪ್ರದೇಶಗಳಲ್ಲಿ ಹೇಳಿಕೊಳ್ಳುವಂಥ ಬಾದಶಹರಿಲ್ಲ ಸೈನ್ಯವನ್ನು ತೆಗೆದುಕೊಂಡು ತಾವೇ ಸ್ವತಃ ಅಲ್ಲಿಗೆ ಹೋಗುವ ಪ್ರಸಂಗವೇನೂ ಇಲ್ಲ. ಬಾದಶಹರ ಸನ್ನಿಧಿಯಲ್ಲಿ ಸಿಂಹಾಸನಕ್ಕೆ ವಿಧೇಯರಾಗಿ ನಿಂತಿರುವ ತಮ್ಮ ಸೇವಕರಲ್ಲಿಯ ಯಾರೊಬ್ಬ ಸೇವಕನನ್ನು ಕರೆದು ಆಜ್ಞೆ ಮಾಡಿದರೂ ಸಾಕು, ಆ ಸೇವಕ ಈ ಕೆಲಸವನ್ನು ಮಾಡುತ್ತಾನೆ' ಎಂದು ವಿನಂತಿ ಮಾಡಿಕೊಂಡನು. ಅದನ್ನು ಕೇಳಿದ ಆದಿಲಶಹನು ಅವನ ಮನಸ್ಸಿನಲ್ಲಿದ್ದುದನ್ನು ತಿಳಿದು ಸಿಪಹಸಾಲರ ಕಿಶ್ವರಖಾನನಿಗೆ 'ಸಿಪಹಸಾಲರೀ' ಹುದ್ದೆಯನ್ನು ನೀಡಿ ೨೦ ಸಾವಿರ ಹತ್ಯಾರಬಂದ ಸವಾರರನ್ನು ಕೊಟ್ಟು ಅಲ್ಲಿಗೆ ಕಳಿಸಿದನು.

ಈ ವಿಷಯ ಅಲ್ಲಿಯ ಹತ್ತಿರದ ಬಾದಶಹರಿಗೆ ಗೊತ್ತಾಗುತ್ತಿದ್ದಂತೆ ಕುತುಬಶಹನು ಒಬ್ಬ ವಕೀಲನನ್ನು ನಿಜಾಮಶಹನ ಹತ್ತಿರ ಕಳಿಸಿದನು. 'ಇಲ್ಲಿಯ ವಿಶಾಲವಾದ ಪ್ರದೇಶದಲ್ಲಿ ಬಂಗಾರ ಇತ್ಯಾದಿಗಳ ಖಣಿಗಳಿವೆ, ಬಹಳಷ್ಟು ಸಂಪತ್ತಿನ ವಸೂಲಿಯ ಪ್ರದೇಶವಿದು. ವಿಜಾಪುರದ ದಕ್ಷಿಣಕ್ಕಿದ್ದ ಈ ಪ್ರದೇಶಕ್ಕೆ ಸಾಮರ್ಥ್ಯವುಳ್ಳ ಯಾವ ಒಡೆಯನೂ ಇಲ್ಲ. ಇತ್ತೀಚೆಗೆ ಕೇಳಿ ಬರುತ್ತಿದ್ದಂತೆ, ಆದಿಲಶಹನು ಸೈನ್ಯವನ್ನು ಕೊಟ್ಟು ಯುದ್ಧ ಮಾಡಲು ಕಿಶ್ವರಖಾನನನ್ನು ಅಲ್ಲಿಗೆ ಕಳಿಸಿದ್ದಾನಂತೆ. ಆದಿಲಶಹನ ಹತ್ತಿರ ಈಗಿರುವ ಪ್ರದೇಶಗಳೇ ಆತನನ್ನು ಐಶ್ವರ್ಯವಂತನನ್ನಾಗಿ ಮಾಡಿದ್ದು ಅವುಗಳಿಂದ ಆತನ ಎದುರಿಗೆ ನಾವು ನಿಲ್ಲುವುದು ಕಠಿಣವಾಗಿದೆ. ಈಗ ಮತ್ತೆ ಯಾವ ಯಾವ ಪ್ರದೇಶಗಳು ಕೈವಶ ಮಾಡಿಕೊಳ್ಳಲು ಕಿಶ್ವರಖಾನನು ಹೋಗಿದ್ದಾನೆಯೋ ಆ ಎಲ್ಲ ಪ್ರದೇಶಗಳು ಕೈಗೆ ಸಿಕ್ಕರೆ ಆದಿಲಶಾಹನ ಸಂಪತ್ತು ಮತ್ತು ಸಾಮರ್ಥ್ಯ ಬಹಳ ಅಧಿಕವಾಗುತ್ತದೆ. ಆಗ ನಾವು ಆತನ ಸೇವೆ ಮಾಡುವ ಸಂದರ್ಭ ಬರುತ್ತದೆ ಮತ್ತು ಸಂಕಟದಲ್ಲಿ ಬೀಳಬೇಕಾಗುತ್ತದೆ. ಆದ್ದರಿಂದ ಈ ಸಮಯದಲ್ಲಿ ಸೈನ್ಯವನ್ನು ತೆಗೆದುಕೊಂಡು ಆದಿಲಶಹನ ಪ್ರದೇಶದಲ್ಲಿ ಆಕ್ರಮಣ ಮಾಡುವುದು ಸರಿ ಎನಿಸುತ್ತದೆ. ಒಂದು ವೇಳೆ ಸಾಧ್ಯವಾದರೆ ಆತನ ಕೆಲವು ಪ್ರದೇಶಗಳನ್ನು ನಾವು ಕೈವಶ ಮಾಡಿಕೊಳ್ಳೋಣ, ಅದಾಗದಿದ್ದರೆ. ಕಿಶ್ವರಖಾನನು, ರಾಜ್ಯ ವಿಸ್ತಾರದ ಆಶೆಯಿಂದ ಸೈನ್ಯ ತೆಗೆದುಕೊಂಡು ಹೋದವನು, ಈ ಆಘಾತದಿಂದ ಮುಂದೆ ಹೋಗದೆ ಹಿಂತಿರುಗುತ್ತಾನೆ. ಈ ಯೋಗದಿಂದ ಆದಿಲಶಹನ ಭಾಗ್ಯವು ಅಧಿಕವಾಗುವುದನ್ನು ತಡೆದಂತಾಗುತ್ತದೆ. ಎಂದು ಹೇಳಿ ಕಳಿಸಿದನು. ನಿಜಾಮಶಹನಿಗೆ ಕುತುಬಶಾಹನ ಈ ಯುಕ್ತಿ ತುಂಬ ಹಿಡಿಸಿತು. ವರ್ಹಾಡ ದೇಶದ ಮಾಲಕನನ್ನೂ, ಕುತುಬಶಹನನ್ನೂ ಜೊತೆಮಾಡಿಕೊಂಡು ಎಲ್ಲರೂ ಒಂದಾಗಿ ವಿಜಾಪುರದ ಪ್ರದೇಶದ ಮೇಲೆ ಏರಿ ಬಂದರು.

### ೧೬. *ಆದಿಲಶಾಹನ ಪ್ರದೇಶದಲ್ಲಿ ಮೂವರು ಬಾದಶಹರು ಸೈನ್ಯ ತೆಗೆದುಕೊಂಡು ಏರಿ ಬರುವುದು, ಕಿಶ್ವರಖಾನನು ಕರ್ನಾಟಕದಿಂದ ತಿರುಗಿ ಬರುವುದು ಮತ್ತು ಮೂವರೂ ಬಾದಶಹರು ಸೋತದ್ದು :*

ನಿಜಾಮಶಾಹ, ಕುತುಬಶಾಹ ಮತ್ತು ಮದಾರುಲ್ ಮಹಾಮ ಇಮಾದುಲ್ಮುಲ್ಕ ಬಾದಶಹನ ಮಗ ತಫಾವಲಖಾನ ಹೀಗೆ ಮೂವರೂ ಬಾದಶಹರು ಒಂದಾಗಿ ಆದಿಲಶಹನ ಪ್ರದೇಶದಲ್ಲಿ ಸೈನ್ಯ ತೆಗೆದುಕೊಂಡು ಬಂದರು. ಆದಿಲಶಾಹನಿಗೆ ಈ ಸುದ್ದಿ ತಿಳಿಯುತ್ತಲೇ ತಕ್ಷಣ ಏನನ್ನೂ ವಿಚಾರಿಸದೆ ತಾನೆ ಸ್ವತಃ ಆ ಮೂವರನ್ನೂ ಎದುರಿಸಲು ವಿಜಾಪುರದಿಂದ ಹೊರಟು ಆ ಬಾದಶಹರ ದಾರಿಯನ್ನು ತೆಡೆಯಲು ಎದುರಿಗೆ ಬಂದನು. ಶಹಾದುರ್ಗದ ಕೋಟೆಯಲ್ಲಿ ಹೋಗಿ ಕುಳಿತನು. ಆ ಮೂವರು ಬಾದಶಹರಿಗೂ ಈ ವರ್ತಮಾನ ತಿಳಿಯಿತು. ಆಗ ಶಹಾದುರ್ಗದ ದಾರಿಯಿಂದ ಹೋಗುವುದನ್ನು ಬಿಟ್ಟು ಬೇರೆ ಮಾರ್ಗದಿಂದ ವಿಜಾಪುರ ನಗರದ ಹತ್ತಿರದ ಶಹಪುರದ ಹತ್ತಿರ ಬಂದು ಇಳಿದರು. ಆದರೆ ಅವರಿಗೆ ಆಶ್ಚರ್ಯವೆನಿಸಿತು. ಇಂಥ ದೊಡ್ಡ ನಗರ, ಹಾಗು ಭಾರೀ ಜನವಸತಿಯ ನಗರದಲ್ಲಿ ನಗರದ ಸಂರಕ್ಷಣೆಗಾಗಿ ಸೈನಿಕರನ್ನಾಗಲೀ ಸೈನ್ಯವನ್ನಾಗಲೀ ಎಲ್ಲಿಯೂ ಇಟ್ಟಿರಲಿಲ್ಲ. ನಗರದ ಕೆಲವು ಕಡೆಗೆ ಕಟ್ಟುತ್ತಿದ್ದ ಕೋಟೆಗಳ ಕೆಲಸವೂ ಮುಗಿದಿರಲಿಲ್ಲ. ಆದ್ದರಿಂದ ಈ ನಗರವು ಸುಲಭವಾಗಿ ತಮ್ಮ ಕೈಸೇರಬಹುದೆಂದು ಸಂಕಲ್ಪದಿಂದಲೇ ಬಂದಿದ್ದರು. ಆದಿಲಶಹನಾದರೋ ಪೂರ್ಣ ಸ್ಥಿರವಾದ ವ್ಯವಸ್ಥೆಯನ್ನು ಮಾಡುವಲ್ಲಿ ತುಂಬ ಎಚ್ಚರಿಕೆಯನ್ನು ವಹಿಸಿದ್ದನು. ಈ ಮೂವರು ಬಾದಶಹರ ಕಿಂಚಿತ್ ಭಯವನ್ನೂ ಮನದಲ್ಲಿ ತಾರದೆ ಶಾಹದುರ್ಗದ ಕೋಟೆಯಲ್ಲಿ ಹೋಗಿ ಕುಳಿತಿದ್ದನು. ನಗರದ ವ್ಯವಸ್ಥೆಗಾಗಿ ಸೈನ್ಯವನ್ನು ಕಳಿಸಿದ್ದನು. ಆ ಮೂವರು ಬಾದಶಹರು ಬಂದು ಮುಟ್ಟುವ ಒಂದು ದಿನ ಮೊದಲೇ ಆದಿಲಶಹನ ಸರದಾರ ಜನರು ಬಂದು ಬುರಜುಗಳ ಮತ್ತು ಕೋಟೆಯ ಹಾಗು ಮಹಲುಗಳ, ಕೋಟೆಯ ಬಾಗಿಲುಗಳನ್ನು ಗಟ್ಟಿಯಾಗಿ ಇಡುವ ವ್ಯವಸ್ಥೆ ಮಾಡಿ ತಂತಮ್ಮಲ್ಲಿ ಹಂಚಿಕೊಂಡು ವ್ಯವಸ್ಥಿತವಾಗಿದ್ದರು. ಆರು ಸಾವಿರ ನಿಷ್ಣಾತ ಗುರಿಕಾರರನ್ನು-ಭಲ್ಲೆಕಾರರನ್ನು ನಗರದ ಮಧ್ಯಭಾಗದಲ್ಲಟ್ಟಿದ್ದರು. ಅವರ ಕೆಲಸವೆಂದರೆ ಯಾವ ಬದಿಯಿಂದ ಶತ್ರುಗಳು ಹಲ್ಲೆ ಮಾಡಲು ಬರುವರೋ ಆ ಬದಿಗೆ ಬಂದು ಸೈನಿಕರಿಗೆ ಸಹಾಯ ಮಾಡುತ್ತ ಶತ್ರುಗಳನ್ನು ಎದುರಿಸಬೇಕು.

ಅನಂತರ ಮೂರನೆಯ ದಿನ ಆ ಮೂವರು ಬಾದಶಹರು ಸೈನಿಕರನ್ನು ಸಿದ್ಧಗೊಳಿಸಿ, ನಗರದ ಹತ್ತಿರ ಬಂದು ಮುಟ್ಟಿದರು. ನಗರದ ಸುತ್ತಲೂ ತಿರುಗಹತ್ತಿದರು. ಯಾಕೆಂದರೆ ಯಾವ ಸ್ಥಳದಲ್ಲಿ ಅವಕಾಶ ದೊರೆಯುವುದೋ ಅಲ್ಲಿಂದ ನಗರದ ಒಳಗೆ ಹೋಗಿ ಗದ್ದಲ ಹಾಕುವುದು ಅವರ ಯೋಜನೆಯಾಗಿತ್ತು. ಆದ್ದರಿಂದ ಸುತ್ತಲೂ ತಿರುಗುತ್ತಿದ್ದರು. ಒಂದೆಡೆ ಅವರು ಕೋಟೆಯ ಬದಿಯಿಂದ ತುಸು ದಾರಿ ನಡೆಯುತ್ತ ನಗರದತ್ತ ಬರುವಷ್ಟರಲ್ಲಿ ಕೋಟೆಯ ಮೇಲಿನಿಂದ ತೋಫು ಹಾರಿತು. ತೋಫುಗಳ ಗುಂಡಿನಿಂದ ಒಂದು ಆನೆ ಮತ್ತು ಎರಡು ಕುದುರೆಗಳು ಗಾಯಗೊಂಡವು. ಆಗ ಅವರು ಸಾರವಾಡ ಬಾಗಿಲದ (ಮಕ್ಕಾಗೇಟ) ಹತ್ತಿರ ಬಂದು ಮುಟ್ಟಿದರು. ಅಲ್ಲಿಯ ಬಾಗಿಲದ ರಕ್ಷಣೆಗೆ ನಿಂತ (ಆದಿಲಶಾಹಿ ಸರದಾರರು) ಶತ್ರುಗಳ ಮೇಲೆ ಏರಿ ಹೋಗಿ ಯುದ್ಧ ಮಾಡಿ ಮತ್ತೆ ತಮ್ಮ ಸ್ಥಳಕ್ಕೆ ಬಂದರು. ಬಾದಶಹರು ನಗರದ ಸುತ್ತಲೂ ತಿರುಗುತ್ತ ತಿರುಗುತ್ತ ಮನಗೂಳಿ ಬಾಗಿಲದ ಹತ್ತಿರ ಬಂದರು ಅಲ್ಲಿಯೂ ಬಾಗಿಲ ರಕ್ಷಣೆಗೆ ನಿಂತ ಸೈನಿಕರು ತುಂಬ ಯುದ್ಧ ಮಾಡಿದರು.

ಆ ಸೈನಿಕರಲ್ಲಿಯ ಒಬ್ಬ ಸರದಾರ ಹಿಂದು ಮನುಷ್ಯನಾಗಿದ್ದು ಆತನ ಹೆಸರು ಹಿಂದರಾವ ಎಂಬುದಾಗಿತ್ತು. ಆತ ಆದಿಲಶಾಹಿ ಸೈನ್ಯದಲ್ಲಿ ಯಕ್ಷ-ಕಿನ್ನರರ ಹಾಗೆ ಉಡ್ಡಾಣ ಮಾಡುವ ಎರಡುಸಾವಿರ ಕುದುರೆಗಳ ಸರದಾರನಾಗಿದ್ದನು. ಅವುಗಳಲ್ಲಿಯ ಚಿಕ್ಕ-ಚಿಕ್ಕ ಕುದುರೆಗಳು ಕೂಡ ಮೂರುನೂರು ಹೊನ್ನುಗಳ ಬೆಲೆಯುಳ್ಳದ್ದಾಗಿದ್ದುವು. ಆ ಹಿಂದರಾವ ಸರದಾರನು ತನ್ನ ಸೈನ್ಯವನ್ನು ಒಂದೆಡೆ ಗುಪ್ತವಾಗಿ ಇಟ್ಟು ತಾನು ಸ್ವತಃ ಕೇವಲ ಮುನ್ನೂರು ಸವಾರರನ್ನು ಕರೆದುಕೊಂಡು ಶತ್ರುಗಳ ಸೈನ್ಯ ಮೇಲೆ ಬಿದ್ದು 'ಜಂಗಗುರಿಜೀ' ಯುದ್ಧ ಮಾಡಿದನು. ಜಂಗ ಗುರಿಜೀ ಯುದ್ಧವೆಂದರೆ ವಿಚಿತ್ರವಾದದ್ದು. ಶತ್ರುಗಳ ಮೇಲೆ ಒಮ್ಮೆಲೇ ಓಡಿಹೋಗಿ ಬೀಳುವುದು ತಕ್ಷಣ ಸಿಕ್ಕಷ್ಟರಮೇಲೆ ಹಲ್ಲೆಮಾಡಿ ತಿರುಗುವುದು, ಮತ್ತೆ ಪುನಃ ಇನ್ನಷ್ಟು ಜೋರಾಗಿ ಓಡಿ ಹೋಗುವುದು ಮತ್ತೆ ಹಲ್ಲೆ ಮಾಡುವುದು. ಹೀಗೆ ಮೇಲಿಂದ ಮೇಲೆ ಹಲ್ಲೆ ಮಾಡುವುದಕ್ಕೆ ಜಂಗ ಗುರಿಜೀ ಎನ್ನುತ್ತಾರೆ. ಈ ಪ್ರಕಾರದ ಯುದ್ಧವನ್ನು ಮಾಡಿ ಶತ್ರುಗಳ ಕಡೆಯ ಸೈನಿಕರನ್ನು ಕೊಲ್ಲುತ್ತಿದ್ದನು. ಇದೇ ಸಮಯದಲ್ಲಿ ಗುಪ್ತ ಸ್ಥಳದಲ್ಲಿದ್ದ ಸೈನ್ಯವೂ ಓಡಿ ಬಂದು ಶತ್ರುವಿನ ಸೈನ್ಯದ ಹಿಂದು ಮುಂದು ಸುತ್ತುವರೆದು ಯುದ್ಧ ಮಾಡಹತ್ತಿತು. ಯುದ್ಧದಲ್ಲಿ ಶತ್ರುಗಳ ಕಡೆಯ ಆನೆಗಳನ್ನು ಕುದುರೆಗಳನ್ನು ಯಾವುದು ಕೈಗೆ ಸಿಗುತ್ತದೆಯೋ ಅವುಗಳನ್ನು ತಂದು ತನ್ನ ಸೈನ್ಯದಲ್ಲಿ ಸೇರಿಸುತ್ತಿದ್ದನು. ಹೀಗೆ ಎಷ್ಟೋ ಕೋಸುಗಳವರೆಗೆ ಶತ್ರುಗಳನ್ನು ಉರಿಬಿಸಿಲಿನಲ್ಲಿ ಬೆನ್ನಟ್ಟಿ ಹೊಡೆಯುತ್ತ-ಬಡಿಯುತ್ತ ತೆಗೆದುಕೊಂಡು ಹೋದನು.

ಶತ್ರುಗಳ ಸೈನ್ಯಕ್ಕೆ ಕುಡಿಯಲು ನೀರು ಸಿಗದಂತೆ ಮೊದಲೆ ವ್ಯವಸ್ಥೆಯನ್ನು ಮಾಡಲಾಗಿತ್ತು. ಆದರಿಂದಾಗಿ ಎಲ್ಲಿಯೂ ನೀರು ಸಿಗದಂತಾಯಿತು. ಉರಿಬಿಸಿಲಿನ ತಾಪವನ್ನು ಸಹಿಸಲಾಗಲಿಲ್ಲ. ಮತ್ತು ಸೈನಿಕರಲ್ಲಿ ಪಶುಗಳಲ್ಲಿ ಸಾಮರ್ಥ್ಯ ಶಕ್ತಿಗಳು ಉಳಿಯಲಿಲ್ಲ. ಪ್ರಾಣ ಹೋಗುವ ಸಮಯ ಬಂದಿತು. ಅಷ್ಟರಲ್ಲಿ ಶತ್ರುಗಳ ದೃಷ್ಟಿ ಒಮ್ಮಿಂದೊಮ್ಮೆಲೆ ಇಲಾಹಪುರದ ಬಾವಿಯ ಕಡೆಗೆ ಬಿತ್ತು. ಅಲ್ಲಿಗೆ ಹೋಗಿ ನೀರು ಕುಡಿಯಬೇಕೆಂದರು. ಶಾಮೀರಖಾನ, ನಾಸೀರುಲ್ಮುಲ್ಕ ಮತ್ತು ಮೀರ ಮಹಮ್ಮದ ಮುಕರಬಖಾನ ಎಂಬವರು ಇಲಾಹಪುರ ಬಾಗಿಲದ ಹವಾಲ್ದಾರರಾಗಿದ್ದರು. ಅವರು ತಕ್ಷಣ ಆ ಸೈನಿಕರಿಗೆ ನೀರು ಸಿಗದಂತೆ ವ್ಯವಸ್ಥೆ ಮಾಡಿದರು. ಬಿಸಿಲಿನಿಂದ ಮತ್ತು ಬಾಯಾರಿಕೆಯಿಂದ ಸೈನಿಕರು ಮತ್ತು ಕುದುರೆಗಳು ನಿಂತುವು. ಇವರ ಅವಸ್ಥೆಯನ್ನು ಕಂಡು ಆದಿಲಶಾಹಿಯ ಕಡೆಯ ಸರದಾರರು ಅವರನ್ನು ಮುತ್ತಿ ಸುಲಿಗೆ ಮಾಡಲಾರಂಭಿಸಿದರು. 'ಹಿಡಿ-ಹಿಡಿಯಿರಿ, ಹೊಡೆ-ಹೊಡೆಯಿರಿ' ಎಂದು ಕೂಗುಹತ್ತಿದರು. ಶತ್ರುಗಳ ಅನೇಕ ಸರದಾರರು ಸತ್ತರು. ಮತ್ತೆ ಕೆಲವರಿಗೆ ಗಾಯವಾಯಿತು, ಇನ್ನು ಕೆಲವರನ್ನು ಬಂಧಿಸಲಾಯಿತು.

ಅಷ್ಟರಲ್ಲಿ ಕರ್ಮಧರ್ಮ ಸಂಯೋಗವೆಂಬಂತೆ ಪೂರ್ವದಿಶೆಯಲ್ಲಿ ದೊಡ್ಡ ಧೂಳು ಕಾಣಿಸಿತು. ಆ ಧೂಳಿನಲ್ಲಿ ಬರುತ್ತಿರುವ ಸೈನ್ಯ ಕಂಡು ಬಂದಿತು. ಶತ್ರಗಳ ಹಾಗು ಆದಿಲಶಾಹಿಕಡೆಯ ಎರಡೂ ಬದಿಯ ಸೈನ್ಯದ ಎದೆ ಧಸ್ ಎಂದಿತು. 'ಹೇ ಅಲ್ಲಾ ಮತ್ತೆ ಇದು ಯಾರ ಸೈನ್ಯ? ಎಲ್ಲಿಂದ ಬಂದಿತು?' ಸೈನ್ಯ ಹತ್ತಿರವೇ ಬಂದು ಮುಟ್ಟಿತು. ಕಿಶ್ವರಖಾನನು ಇಪ್ಪತ್ತು ಸಾವಿರ ಸ್ವಾರರೊಂದಿಗೆ 'ನಿರ್ಮಲ' ಎಂಬ ಊರಿನಿಂದ ಶತ್ರುಗಳನ್ನು ಎದುರಿಸಲು ತಾನೆ ಸ್ವತಃ ತಿರುಗಿ ಬಂದಿದ್ದನು. ಆಗ ಆದಿಲಶಾಹಿ ಕಡೆಯ ಸೈನ್ಯಕ್ಕೆ ಕಿಶ್ವರಖಾನನ ಆಗಮನದಿಂದ ದುಪ್ಪಟ್ಟು ಬಲ ಬಂದಂತಾಯಿತು. ಉಭಯ ಸೈನ್ಯಗಳೂ ಸೇರಿ ಶತ್ರುಗಳ ನಾಶವನ್ನು ಪ್ರಾರಂಭಿಸಿದರು. ೧೫೦ ಆನೆಗಳು ಮತ್ತು ನಾಲ್ಕೈದು ಸಾವಿರ ಕುದುರೆಗಳು ಇತ್ಯಾದಿ ಬಹಳಷ್ಟು ವಸ್ತುಗಳು ಕಿಶ್ವರಖಾನನ ಕೈಗೆ ಸಿಕ್ಕುವು. ನಿಜಾಮಶಹ ಮತ್ತಿತರರ ಶತ್ರುಗಳ ಸೈನ್ಯಕ್ಕೆ ದೊಡ್ಡ ಸೋಲಾಯಿತು. ಇಂಥ ಸೋಲನ್ನು ಅವರು ಎಂದೂ ಕಂಡಿರಲಿಲ್ಲ.

ಮೌಲಾನಾ ಇನಾಯತ್‌ಉಲ್ಲಾ ಎಂಬುವನು ನಿಜಾಮಶಹನ ಬಹು ಮುಖ್ಯಕಾರಭಾರಿ, ಯಾವಾಗಲೂ ನಿಜಾಮಶಹನ ಸನ್ನಿಧಿಯಲ್ಲಿ ಇರುವವನು, ಆ ಗದ್ದಲದಲ್ಲಿ ಪೀರಜಾದ ಎಂಬ ಆದಿಲಶಾಹಿ ಕಡೆಯ ಸಿಪಾಯಿಯ ಕೈಗೆ ಸಿಕ್ಕು ಬಂಧಿತನಾಗಿದ್ದನು. ಆದರೆ ಇನಾಯತ್‌ಉಲ್ಲಾನಿಗೂ ಪೀರಜಾದನಿಗೂ ಮೊದಲಿನಿಂದಲೇ ಸ್ನೇಹವಿತ್ತು. ಆದ್ದರಿಂದ ಪೀರಜಾದನು ಮೌಲಾನಾ ಇನಾಯತ್‌ಉಲ್ಲಾನನ್ನು ಸಂರಕ್ಷಣೆ ಮಾಡಿ ತನ್ನ ಹೊಸ ಕುದುರೆಯೊಂದನ್ನು ಅವನಿಗೆ ಕೊಟ್ಟು, ದಾರಿತೋರಿಸಿ, ನಿಜಾಮಶಹನ ಸೈನ್ಯಕ್ಕೆ ಕಳುಹಿಸಿ ಕೊಟ್ಟನು. ಮೌಲಾನಾ ಜಮಾಲುದ್ದೀನ ಎಂಬವನು ನಿಜಾಮಶಹನ ಭಾಂಡಾರದ ಮೇಲೆ ಪ್ರಮುಖ ನೌಕರದಾರನಾಗಿದ್ದನು. ಆತನು ಕೂಡ ತನ್ನ ಎಷ್ಟೋ ಸೇವಕರೊಂದಿಗೆ ಬಂಧಿತನಾಗಿದ್ದನು. ಕಾಮಿಲಖಾನನೆಂಬವನು ಮೊದಲು ನಿಜಾಮಶಾಹನ ನೌಕರನಿದ್ದವನು ಈಗ ಆದಿಲಶಾಹಿಯಲ್ಲಿ ನೌಕರಿಗಿದ್ದನು ಬಡತಿ ಪಡೆಯುತ್ತ ದೊಡ್ಡ ಹುದ್ದೆಗೆ ಏರಿ 'ಸರಲಷ್ಕರ' (ಸೇನಾಪತಿ)ನಾಗಿದ್ದನು. ಆದ್ದರಿಂದ ಆತನೂ ತನ್ನ ಮೊದಲಿನ ಒಡೆಯನ ಋಣದಿಂದಾಗಿ ಆ ಎಲ್ಲ ಬಂಧಿತ ಕೈದಿಗಳನ್ನೂ ನಾಲ್ಕು ನೂರು ಜನರನ್ನು ಸುರಕ್ಷಿತವಾಗಿ ಕಳಿಸುತ್ತ, ನಿಜಾಮ ಶಾಹನಿಗೆ ನಿರೋಪವನ್ನೂ ಹೇಳಿ ಕಳಿಸಿದ್ದನು, 'ತಮ್ಮ ಸೈನ್ಯದ ಮೇಲೆ ದೊಡ್ಡ ಸಂಕಟ ಬಂದಿತ್ತು. ಆದಿಲಶಾಹಿ ಸೈನ್ಯ ದೊಂದಿಗೆ ಕಿಶ್ವರಖಾನನ ಸೈನ್ಯವೂ ಬಂದು ಅವರ ಬಲ ಹತ್ತು ಪಟ್ಟು ಅಧಿಕವಾಯಿತು. ನಾನು ತಮ್ಮ ಸೇವಕನಾಗಿದ್ದೆ. ನನ್ನ ಕೈಯಲ್ಲಿ ಎಷ್ಟು ಶಕ್ತಿಯಿದೆಯೋ ಅಷ್ಟು ಸೇವೆಯನ್ನು ಪ್ರಾಮಾಣಿಕ ತನದಿಂದ ಮಾಡಲು ಪ್ರಯತ್ನಿಸಿರುವೆ. ಕಿಶ್ವರಖಾನನು ಬಂಧಿತರನ್ನು ಎಂದಿಗೂ ಬಿಡುತ್ತಿರಲಿಲ್ಲ. ಆದ್ದರಿಂದ ತಾವು ಇಂದೇ ತಮ್ಮ ಪ್ರದೇಶಕ್ಕೆ ಹಿಂತಿರುಗಿ ಹೋದರೆ ಒಳ್ಳೇಯದು ಮತ್ತು ಕ್ಷೇಮಕರವಾದದ್ದು. ಈ ಘಾತುಕ ಸ್ಥಾನದಿಂದ ಸುರಕ್ಷಿತವಾಗಿ ಹೊರಗೆ ಹೋಗಿರಿ. ಇದನ್ನು ಕೇಳದಿದ್ದರೆ ಯಾರಿಗೆ ಗೊತ್ತು? ಒಂದು ಗಳಿಗೆಯಲ್ಲಿ ನಾನಾ ಬಗೆಯ ಆಟಗಳನ್ನಾಡುವ ಕಾಲಚಕ್ರದ ಆಟ ಮತ್ತೆ ತಿರುಗಿಬೀಳಬಹುದೆಂದು ಹೇಳಲು ಬರುವುದಿಲ್ಲ. ಆಗ ನಿಮಗೆ ಹೊರಬೀಳುವ ಸಾಮರ್ಥ್ಯವೂ ಬೇಕಿದ್ದರೆ ಉಳಿದಿರುವುದಿಲ್ಲ.' ಎಂದು ನಿರೋಪ ಇತ್ತು. ಅದನ್ನು ಕಂಡ ನಿಜಾಮಶಾಹನು ಕಮಾಲಖಾನನ ಯುಕ್ತಿ ಸರಿ ಎಂದು ಭಾವಿಸಿ ಮೂರನೆಯ ದಿನವೆ ತನ್ನ ಸಂಪೂರ್ಣ ಸೈನ್ಯವನ್ನು ತೆಗೆದುಕೊಂಡು ತನ್ನ ಪ್ರದೇಶಕ್ಕೆ ಹೊರಟು ಹೋದನು.

ಆಗ ಕಿಶ್ವರಖಾನನು ಇದೇ ಸಮಯವೆಂದು ತಿಳಿದು ಅವರನ್ನು ಬೆನ್ನಟ್ಟಿ ಪೂರ್ತಿ ಸೋಲಿಸಿದರೆ ದಕ್ಷಿಣದಲ್ಲಿ ತಮ್ಮದೊಂದೇ ರಾಜ್ಯವಾಗುತ್ತದೆಂದು ಜೊತೆಗಾರ ಅಮೀರ ಜನರಲ್ಲಿ ಸಲಹೆಯನ್ನು ಮುಂದಿಟ್ಟನು. ಆದರೆ ಶಾಹ ಅಬ್ದುಲ್ ಹಸನ ವಲದ್ ಶಾಹ ತಾಹಿರ ಮತ್ತು ಇತರ ಅನೇಕ ಸರದಾರರು ಆತನ ಸಲಹೆಯನ್ನು ಒಪ್ಪಲಿಲ್ಲ ಬೇಡವೆಂದರು. ಪ್ರತಿಯಾಗಿ ಶತ್ರು ಪ್ರಬಲನಾಗಿ ತಿರುಗಿ ಬಿದ್ದರೆ ಇದ್ದ ರಾಜ್ಯವೂ ಹೋದೀತೆಂದರು. ಆದರೂ ಕಿಶ್ವರಖಾನನು ಅವರ ಮಾತನ್ನು ಕೇಳದೆ ತನ್ನ ಸ್ವಂತ ಸೈನ್ಯದೊಂದಿಗೆ ಶತ್ರುಗಳ ಬೆನ್ನು ಹತ್ತಿದನು. ಶತ್ರು ಸೈನ್ಯವನ್ನು ಸಾಕಷ್ಟು ಹಣ್ಣುಗಾಯಿ ನೀರುಗಾಯಿ ಮಾಡಿ. ಅನೇಕ ಜನರನ್ನು, ಆನೆ, ಕುದುರೆ, ಒಂಟೆಗಳನ್ನು, ಅನೇಕ ಪದಾರ್ಥಗಳನ್ನು ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ನಿಜಾಮಶಾಹ ಮತ್ತಿತರರನ್ನು ಅವರವರ ಸರಹದ್ದಿನಲ್ಲಿ ಬಿಟ್ಟನು. ಶತ್ರುಗಳ ಸೈನ್ಯ ತಮ್ಮ ಸರಹದ್ದಿನಿಂದ ದಾಟಿ ಹೋದ ಮೇಲೆ, ಕಿಶ್ವರಖಾನ ಹಾಗು ಶಾಹ ಅಬ್ದುಲ್ ಹಸನ್ ಮೊದಲಾದವರು ಶಹಾದುರ್ಗದ ಕೋಟೆಗೆ ಹೋಗಿ ಅಲಿ ಆದಿಲಶಹನನ್ನು ಭೆಟ್ಟಿಯಾಗಿ ಮುಜುರೆ ಸಲ್ಲಿಸಿದರು. ಬಾದಶಹನು ಯೋಗ್ಯತಾನುಸಾರ ಪೋಷಾಖುಗಳನ್ನು ಕೊಟ್ಟು ಅವರನ್ನೆಲ್ಲ ಕರೆದುಕೊಂಡು ರಾಜಧಾನಿ ವಿಜಾಪುರಕ್ಕೆ ಬಂದನು. ಮನೋರಥ ಪೂರ್ಣವಾದುದಕ್ಕೆ ಬಹಳ ಸಂತೋಷ ಪಟ್ಟನು.

### ೧೭ ಮತ್ತೆ ನಿಜಾಮಶಹ ಮೊದಲಾದವರು ಸೈನ್ಯ ಸೇರಿಸಿ ಆದಿಲಶಾಹಿ ಇಲಾಖೆಯಲ್ಲಿ ಬರುವುದು :

ಶತ್ರುಗಳ ಮನೋರಥವು ಪೂರ್ಣಗೊಳ್ಳಲಿಲ್ಲ. ಮತ್ತೆ ಮತ್ತೆ ಯುದ್ಧ ಮಾಡಿ ಸೋಲುತ್ತಿದ್ದರು. ಪುನಃ ಯುದ್ಧ ಮಾಡುವುದನ್ನೂ ಬಿಡುತ್ತಿರಲಿಲ್ಲ. ಸೋತು ತಿರುಗಿ ಬರುತ್ತಿದ್ದರು. ಮತ್ತೆ ವೈರತ್ವ ಮೋಸಗಳು ಜಾಗೃತವಾಗಿ ಆದಿಲಶಾಹಿಯ ನಾಶ ಕುರಿತು ಚಿಂತಿಸುತ್ತಿದ್ದರು. ಅದರಂತೆ ಮತ್ತೆ ಮೂವರು ಬಾದಶಹರು ಒಂದಾಗಿ, ಸಾಕಷ್ಟು ಸಿದ್ಧತೆಗಳನ್ನು ಮಾಡಿಕೊಂಡು ಆದಿಲಶಾಹನ ಇಲಾಖೆಯನ್ನು ಆಕ್ರಮಿಸಿದರು. ಆಗ ಆದಿಲಶಹನು ಕಿಶ್ವರಖಾನನ ಜೊತೆಗೆ ದೊಡ್ಡ-ದೊಡ್ಡ ಅಮೀರರನ್ನು ಜೊತೆಮಾಡಿ ಶತ್ರುಗಳ ಪಾರುಪತ್ಯವನ್ನು ಮಾಡಲು ಕಳಿಸಿಕೊಟ್ಟನು. ಕಿಶ್ವರಖಾನನು ಆಹಸನಾಬಾದದ ಕೋಟೆಯನ್ನು ಆಶ್ರಯಿಸಿ ಯುದ್ಧದ ಸಿದ್ಧತೆಯನ್ನು ಮಾಡಿಕೊಂಡನು. ಉಭಯತರ ಮಧ್ಯ ದಿನನಿತ್ಯ ಕಾಳಗವಾಗುತ್ತಲೇ ಇತ್ತು. ಇಬ್ಬರ ಬದಿಯೂ ಸಾಕಷ್ಟು ಜನರು ಸಾಯುತ್ತಲೂ ಇದ್ದರು. ಒಂದು ದಿನ ಶತ್ರು ಸೈನ್ಯವು ಯೋಜನೆಯೊಂದನ್ನು ರೂಪಿಸಿತು. ಕಿಶ್ವರಖಾನನಿಗೂ ಅವನ ಜೊತೆ ಬಂದ ಅಮೀರ ಜನರಿಗೂ ಸಂಬಂಧ ಚೆನ್ನಾಗಿಲ್ಲದ್ದನ್ನು ಅರಿತು, ಅತಿ ಧೈರ್ಯದಿಂದ- ಒಂದೇ ಮನದಿಂದ ಕೋಟೆಗೆ ಲಗ್ಗೆ ಹಾಕಿದರು. ಕಿಶ್ವರಖಾನನು ಸ್ವತಃ ಯುದ್ಧ ಮಾಡುತ್ತಿದ್ದ. ಅಂದು ಸಾಯಂಕಾಲದ ವರೆಗೂ ಘನ ಘೋರ ಕಾಳಗವಾದಾಗ, ಮೂವರೂ ಬಾದಶಹರನ್ನು ಎದುರಿಸುವ ಧೈರ್ಯ ಕಿಶ್ವರಖಾನನಿಗಾಗಲಿಲ್ಲ. ಆಗ ಕೋಟೆಯ ಹತ್ತಿರ ತಿರುಗಿ ಬಂದು, ಒಳಗಿನ ಜನರಿಗೆ ಕೋಟೆಯ ಮೇಲಿನಿಂದ ತೋಪುಗಳನ್ನು ಹಾರಿಸಲು ಹೇಳಿದನು. ಮತ್ತೆ ಮತ್ತೆ ಹೇಳಿ ಕಳಿಸಿದರೂ - ಅವರವರಲ್ಲಿ ಸರಿ ಇರದಿದ್ದ ಕಾರಣ ಆತನಿಗೆ ಸರಿಯಾದ ಸಹಾಯ ನೀಡಲಿಲ್ಲ. ಆಗ ಕಿಶ್ವರಖಾನನು ಕೋಟೆಯನ್ನು ಪ್ರವೇಶಿಸಿ, ಅಂದೇ ರಾತ್ರಿ ಕೋಟೆಯ ಪ್ರಮುಖರನ್ನು ಹಿಡಿದುಕೊಂದನು. ಈ ಸುದ್ದಿ ತಿಳಿದ ತಕ್ಷಣ ಆದಿಲಶಾಹನು ಸ್ವತಃ ಬಂದು ಶತ್ರುಗಳ ಸೈನ್ಯದ ಮೇಲೆ ಹಲ್ಲೆ ಮಾಡಿದನು. ಅವನನ್ನು ಎದುರಿಸುವ ಸಾಮರ್ಥ್ಯವಿರದ್ದರಿಂದ ಶತ್ರುಗಳು ತಿರುಗಿ ಹೋದರು. ಆದಿಲಶಹನು ವಿಜಯಿಯಾಗಿ ಆನಂದದಿಂದ ತಿರುಗಿ ವಿಜಾಪುರಕ್ಕೆ ಬಂದನು.

### ೧೮. ಕಿಶ್ವರಖಾನನು ಮಹಾದುರ್ಗದ ಕೋಟೆಯನ್ನು ಕಟ್ಟಿದ್ದು. ಅದು ಧಾರೂರ ಹತ್ತಿರ ಪ್ರಸಿದ್ಧವಾಗಿದೆ. ಕಿಶ್ವರಖಾನನನ್ನು ಕೊಲ್ಲಿಸಿದ್ದು, ಆದಿಲಶಾಹನು ಪಶ್ಚಾತ್ತಾಪ ಪಟ್ಟದ್ದು :

ಸಿಪಹಸಾಲಾರ ಕಿಶ್ವರಖಾನನು ಆ ಕಾಲದ ಶೂರರಲ್ಲಿ ಅಧಿಕ ಶುರನೂ ಪರಾಕ್ರಮಿಯೂ ಆಗಿದ್ದನು. ದಿನದಿನಕ್ಕೂ ಆತನಿಂದ ಉತ್ತಮೋತ್ತಮ ಕೆಲಸಗಳು ಹಾಗು ವಿಜಯಗಳು ಆಗುತ್ತಲೇ ಇದ್ದುವು.ಅದರಂತೆ ಆದಿಲಶಹನಿಂದ ಬಹುಮಾನಗಳು, ಜಹಗೀರುಗಳು ದಿನದಿಂದ ದಿನಕ್ಕೆ ಅವನಿಗೆ ದೊರೆಯಹತ್ತಿದುವು. ಎಲ್ಲಿ ಅಲ್ಲಾನ ಕೃಪೆ ಹಾಗೂ ಬಾದಶಹರ ಒಲುಮೆ ಇದ್ದುದು, ಆತನ ದೈವ ತೆರೆಯುತ್ತಿದ್ದರೆ, ಅಂಥವರ ಮೇಲೆ, ಎಲ್ಲರೂ ವಕ್ರ ದೃಷ್ಟಿಯನ್ನಿಡುವುದು ಲೋಕದ ರೂಢಿಯಾಗಿದೆ. ಆತನಿಗೆ ಕೆಡುಕಾಗಲಿ ಎಂಬ ವಿಷಯದಲ್ಲಿ ಘಾತುಕ ಪ್ರವೃತ್ತಿಯನ್ನಿಟ್ಟುಕೊಂಡಿರುತ್ತಾರೆ. ಆತನ ಬಲ ಕಡಿಮೆಯಾಗುವಂತೆ ಎಲ್ಲ ಜನರೂ ಬಹಳಷ್ಟು ಪ್ರಯತ್ನ ಮಾಡುತ್ತಿರುತ್ತಾರೆ. ಇದು ಕೂಡ ರೂಢಿಯಲ್ಲಿದ್ದದ್ದೆ. ಆಸ್ಥಾನದ ಎಲ್ಲ ಕಾರಭಾರಿಗಳು, ಅಧಿಕಾರಿಗಳು ತಮ್ಮ ಮನದ ಹೊಲದಲ್ಲಿ ಮೋಸದ ವೃಕ್ಷಗಳನ್ನು ನೆಟ್ಟರು. ಅವನೊಂದಿಗೆ ವಿರೋಧವಾಗಿ ನಡೆದುಕೊಳ್ಳಹತ್ತಿದರು. ಆಗಾಗ ಆತನ ಬಗ್ಗೆ ಇಲ್ಲ ಸಲ್ಲದ ಆರೋಪಗಳನ್ನು ಸರಕಾರದ ಕಿವಿಯಲ್ಲಿ ಹಾಕ ಹತ್ತಿದರು.

ಅದರಿಂದ ಬೇಸತ್ತ ಕಿಶ್ವರಖಾನನು, ಈ ಜನರ ಸಹವಾಸವನ್ನೆ ತೊರೆದು ದೂರ ಹೋಗಿ ಅವರ ಮೋಸಗಳಿಂದ ಪಾರಾಗುವುದರಲ್ಲೆ ತನ್ನ ಕಲ್ಯಾಣವನ್ನು ಕಂಡನು. ರಹಸ್ಯದಲ್ಲಿ ಆದಿಲಶಹನ ಪ್ರಾಮಾಣಿಕ ಸೇವೆಯ ಮೇಲೆ, ದೃಷ್ಟಿಯನ್ನಿಟ್ಟು ಆತನ ಕೆಲಸ ಹಾಗೂ ತನಗೆ ಕೀರ್ತಿ ಬರುವಹಾಗೆ ವರ್ತಿಸುವುದೆಂದು ನಿರ್ಧರಿಸಿದನು. ಅದಕ್ಕಾಗಿ ಆದಿಲಶಹನಿಗೆ ಒಂದು ಬಿನ್ನವತ್ತಳೆಯನ್ನು ಅರ್ಪಿಸಿದನು. 'ಶಹದುರ್ಗದಿಂದ ಎರಡೂವರೆ ಕೋಸುಗಳ ಅಂತರದಲ್ಲಿ ನಿಜಾಮಶಹನ ಪ್ರದೇಶದ ಹತ್ತಿರವಿರುವ ಒಂದು ಹಳ್ಳಿಯಲ್ಲಿ ಹಳೆಯ ಕೋಟೆಯಿದೆ. ಆ ಕೋಟೆಯ ಹೆಸರು 'ಮಹಾದುರ್ಗ' ಎಂದಾಗಿದೆ. ಆದರೆ ಈಗ ಕೋಟೆಯ ಗುರುತು ಕೂಡ ಉಳಿದಿಲ್ಲ. ತಾವು ಒಪ್ಪಿದರೆ ಆ ಕೋಟೆಯನ್ನು ತುಸು ದಿನಗಳಲ್ಲಿ ಪುನಃ ಹೊಸದಾಗಿ ಕಟ್ಟುವೆನು. ಮತ್ತು ಆ ಕೋಟೆಯ ಆಶ್ರಯವನ್ನು ಪಡೆದು ನಿಜಾಮಶಹನ ಪ್ರದೇಶಗಳನ್ನು ಮೇಲಿಂದ ಮೇಲೆ ಆಕ್ರಮಿಸಲು ಅನುಕೂಲವಾಗುವುದು' ಎಂದು ಬಿನ್ನವಿಸಿಕೊಂಡನು. ಅದಕ್ಕೆ ಆಸ್ಥಾನದ ಕಾರಭಾರಿ ಜನರು ವಿರೋಧ ವ್ಯಕ್ತ ಪಡಿಸಿದರು. ಕೆಲವು ಜನ ಸರಿ ಎಂದರು. ಆಗ ಆದಿಲ ಶಾಹನು 'ಈ ವಿಷಯವನ್ನು ಕುರಾನ ಶರೀಫದಲ್ಲಿ ಪ್ರಶ್ನಿಸಿ ಕೇಳೋಣ. ಅದರಲ್ಲಿ ಏನು ಉತ್ತರ ಬರುತ್ತದೆಯೊ ಹಾಗೆ ಮಾಡೋಣ' ಎಂದನು.

ಆಸ್ಥಾನದಲ್ಲಯೇ ಉಪಸ್ಥಿತನಿದ್ದ ಬುದ್ಧಿವಂತ, ವಿದ್ವಾಂಸನಾದ ಮೌಲಾನಾ ಐನುದ್ದೀನ ಮಕಸೂದ ಶಿರಾಜಿ, ಆತ ಅಫಜಲಖಾನ ಎಂದೇ ಪ್ರಸಿದ್ಧನಾಗಿದ್ದನು. ಅವನನ್ನು ಕರೆದು ಕಿಶ್ವರಖಾನ ಕೇಳಿದ ಪ್ರಶ್ನೆಗೆ ಕುರಾನದಲ್ಲಿ ನೋಡಲು, ಆದಿಲಶಹನು ಆಜ್ಞೆ ಮಾಡಿದನು. ಆಗ ಅಫಜಲಖಾನನು ಕುರಾನ್ ಪುಸ್ತಕವನ್ನು ತೆರೆದುನೋಡಿದನು. ಯಾವ ಪುಟದ ಮೇಲೆ ಬೆರಳಿಟ್ಟನೋ ಮೊದಲ ಸಾಲಿನಲ್ಲಿಯೆ ಅಶುಭದ ವಿಷಯ ಬರೆದಿತ್ತು. ಅಫಜಲಖಾನನು 'ಈ ಕೆಲಸವನ್ನು ಮಾಡಬೇಡಿ ಮಾಡಿದರೆ ಅಶುಭದ ಹೊರತು ಇನ್ನಾವ ಫಲವೂ ದೊರೆಯದು' ಎದು ಹೇಳಿದನು. ಆದರೆ ಕಿಶ್ವರಖಾನ ಮಾತ್ರ ತನ್ನ ಹಟ ಬಿಡಲಿಲ್ಲ. ಅಲ್ಲದೆ 'ಪ್ರಶ್ನೆ ಹೇಳುವುದರಲ್ಲೂ ಮೋಸ ಸಂಶಯ ಬರುತ್ತದೆ. ಯಾಕಂದರೆ ಅಫಜಲಖಾನನು ನಿಜಾಮಶಾಹ ಮತ್ತಿತರ ಶತ್ರುಗಳೊಂದಿಗೆ ಸಂಬಂಧವಿಟ್ಟು ಕೊಂಡಿದ್ದಾನೆ. ಅದಕ್ಕೆಂದೇ ಹೀಗೆ ಹೇಳುತ್ತಾನೆ' ಎಂದು ಚೇಷ್ಟೆ ಮಾಡಿದನು. ಕಿಶ್ವರಖಾನನು ತನ್ನ ಹಟವನ್ನು ಬಿಡುತ್ತಿಲ್ಲ ಎಂದರು. ಅದನ್ನು ಕೇಳಿದ ಆದಿಲಶಾಹನು 'ಆಯ್ತು ಕಿಶ್ವರರಖಾನನಿಗೆ ಗೊತ್ತು, ಕುರಾನಗೆ ಗೊತ್ತು ಯಾವುದು ಬೇಕೋ ಅದನ್ನು ಮಾಡಲಿ, ಏನಾಗುತ್ತದೆಯೋ ಆಗಲಿ' ಎಂದು ತನ್ನ ತೀರ್ಪು ಕೊಟ್ಟನು.

ಅನಂತರ ಕಿಶ್ವರಖಾನನು ಕೋಟೆಯನ್ನು ಕಟ್ಟುವ ಸಿದ್ಧತೆಗಳನ್ನು ಮಾಡಿಕೊಂಡು ಬಹಳಷ್ಟು 'ಅಮೀರ' ಜನರೊಂದಿಗೆ ಮಹಾದುರ್ಗದತ್ತ ಹೊರಟನು. ಕೋಟೆಯನ್ನು ಕಟ್ಟುವ ವಿಷಯದಲ್ಲಿ ಒಬ್ಬೊಬ್ಬ ಅಮೀರ ಜನರಿಗೆ ಒಂದೊಂದು ಬುರುಜು (ಗೋಪುರ)ಗಳನ್ನು ಕಟ್ಟಲು ಹೇಳಿದನು. ಪ್ರತಿಯೊಬ್ಬರೂ ಕೋಟೆಯನ್ನು ಗಟ್ಟಿಮುಟ್ಟಾಗಿ ಕಟ್ಟಲು ಅತ್ಯಂತ ಶ್ರಮವಹಿಸಹತ್ತಿದರು. ಆದರೆ ಅಂಕುಶಖಾನನು ಎಲ್ಲರಗಿಂತ ಅಧಿಕವಾಗಿ ಕಿಶ್ವರಖಾನನ್ನು ದ್ವೇಷಿಸುತ್ತಿದ್ದನು. ಆತ ತನ್ನ ಪಾಲಿಗೆ ಬಂದ ಕೋಟೆಯ ಗೋಡೆಗೆ ಒಂದು ಸಣ್ಣ ಬಾಗಿಲನ್ನು ಛಿದ್ರದಹಾಗೆ ಕಟ್ಟಿದನು. ಅದರರ್ಥ ಕೆಲವೇ ದಿನಗಳಲ್ಲಿ ಕೋಟೆಯ ಕಟ್ಟೋಣವನ್ನು ಮುಗಿಸಿದನು. ಈಗಲೂ ಕೂಡ ಆ ಕೋಟೆ ಧಾರೂರದ ಹತ್ತಿರ ಪ್ರಸಿದ್ಧವಾಗಿದೆ. ಕೋಟೆಯನ್ನು ಕಟ್ಟಿದ ಅನಂತರ ಕೋಟೆಯ ಸಂರಕ್ಷಣೆಗೆ ತೋಫುಗಳನ್ನು, ಬಂದೂಕುಗಳನ್ನು ಮತ್ತು 'ಮಜನೀಮ್' ಗಳನ್ನು ಅಂದಿನ ಕಾಲದ ಯುದ್ಧ ಸಿದ್ಧತೆಗೆ ಬೇಕಾದ ವಸ್ತುಗಳನ್ನು ತರಿಸಿ ಇಟ್ಟನು. ಮಜನೀಮ್ ಎಂದರೆ,

ಕಟ್ಟಿಗೆಯ ಒಂದು ದೊಡ್ಡ ಯಂತ್ರ. ಆ ಯಂತ್ರದಲ್ಲಿ ಕಲ್ಲು, ಮಣ್ಣುಗಳನ್ನು ಇಟ್ಟು ಅಗ್ನಿಕವಣೆಯಲ್ಲಿ ಶತ್ರುಗಳ ಮೇಲೆ ಕೋಟೆಯ ಮೇಲಿನಿಂದ ಹಾರಿಸುತ್ತಾರೆ, ಅದಕ್ಕೆ ಮಜನೀಮ್ ಎಂದು ಹೆಸರು. ಆ ಯಂತ್ರವನ್ನು ಹಾಗೂ ತೋಫು ಹಾರಿಸುವವರನ್ನು ಅಲ್ಲಲ್ಲಿ ಕೋಟೆಯ ಮೇಲೆ ನಿಯಮಿಸಿದನು. ನಲ್ವತ್ತು ಸಾವಿರ ಖಂಡುಗ ಧಾನ್ಯ ಸಂಗ್ರಹವನ್ನು ಕಿಶ್ವರಖಾನನು ನಿಜಾಮಶಹನ ಪ್ರದೇಶದಿಂದ ಲೂಟಿ ಮಾಡಿ ಕೋಟೆಯಲ್ಲಿ ತಂದಿಟ್ಟನು.

ನಿಜಾಮಶಹನಾದರೋ ಎಲ್ಲ ಕಾಲದಲ್ಲಿಯೂ ಆದಿಲಶಾಹಿ ಜನರ ವೈರತ್ವದ ಬೀಜವನ್ನು ತನ್ನ ಮನದಲ್ಲಿನೆಟ್ಟು ಅದನ್ನು ಪೋಷಿಸುತ್ತಲೇ ಇದ್ದನು. ಅದರರ್ಥ ಯಾವಾಗಲೂ ಅವರನ್ನು ದ್ವೇಷಿಸುತ್ತಲೇ ಇದ್ದನು. ಈಗ ಕಿಶ್ವರಖಾನನ ಗುಂಡಾಗರ್ದಿಯಿಂದ ಇನ್ನಷ್ಟು ತಪ್ತನಾದನು. ಯುದ್ಧದ ಸಾಮಾನುಗಳನ್ನು, ಸೈನ್ಯದ ಜಮಾವಣೆಯ ಸಿದ್ಧತೆಯಲ್ಲಿ ತೊಡಗಿದನು. ಅನಂತರ ಮೂವರು ಬಾದಶಹರ ಸೈನ್ಯದೊಂದಿಗೆ ನಿಜಾಮಶಹನು ಕಿಶ್ವರಖಾನನ ಮೇಲೆ ಏರಿ ಬಂದನು. ಆಗ ಕಿಶ್ವರಖಾನನು ಆ ಮೂವರೂ ಬಾದಶಹರನ್ನು ಎದುರಿಸಲು ಧೈರ್ಯಮಾಡಿ ಕೋಟೆಯ ಬುರಜುಗಳನ್ನು - ತೂಬುಗಳನ್ನು ಆಯುಧಗಳಿಂದ ಮತ್ತು ಮದ್ದು ಗುಂಡುಗಳಿಂದ ಸಿದ್ಧತೆಮಾಡಿ ಎದುರಿಸಲು ನಿಂತನು. ದಿನಂಪ್ರತಿ ನಡೆದ ಘಟನೆಗಳನ್ನು ತಪ್ಪದೆ ಆದಿಲಶಾಹನಿಗೆ ವರದಿ ಮಾಡಿ ಕಳಿಸುತ್ತಿದ್ದನು. ಅದರಲ್ಲಿ 'ಮೂವರು ಬಾದಶಹರು ಒಂದಾಗಿ ತಮ್ಮ ಸೈನ್ಯದೊಂದಿಗೆ ಬಂದು ಲೂಟಿ, ದಂಗೆ, ಹಾಗೂ ಯುದ್ಧ ಮಾಡುವ ಸಿದ್ಧತೆಯಲ್ಲಿದ್ದಾರೆ. ಆದ್ದರಿಂದ ಸರಕಾರಕ್ಕೆ ವಿನಂತಿ ಏನೆಂದರೆ, ದರಬಾರದಲ್ಲಿಯ ಎಲ್ಲ ಅಮೀರ ಜನರೂ ತಮ್ಮ ಸೈನ್ಯ ಸಿದ್ಧತೆಯೊಂದಿಗೆ ತಕ್ಷಣ ಮಿಂಚಿನಂತೆ ಅತಿ ಶೀಘ್ರವಾಗಿ ಇಲ್ಲಿಗೆ ಬಂದು ಸೇವಕನಿಗೆ ಸಹಾಯ ಮಾಡುವಂತೆ ಆಜ್ಞೆ ಮಾಡಬೇಕೆಂದು ಕೋರುತ್ತೇನೆ. ಕೋಟೆಯ ಸಂರಕ್ಷಣೆಯ ಬಗ್ಗೆ ತಾವು ಎಳ್ಳಷ್ಟೂ ಚಿಂತಿಸಬಾರದು. ತಾವು ಕೂಡ ಸ್ವತಃ ವೈಭವದಿಂದ ಹಾಗೂ ಐಶ್ವರ್ಯಸಹಿತವಾಗಿ ವಿಜಾಪುರದಿಂದ ನಾಲ್ಕು ಹೆಜ್ಜೆ ಇತ್ತ ಬಂದು ಸಮುದ್ರದ ದಂಡೆಯಲ್ಲಿ ತಮ್ಮ ಡೇರೆಗಳನ್ನು ಹಾಕಿರಿ, ಅಂದರೆ ತಮ್ಮ ಚರಣ ಪ್ರತಾಪದ ಪ್ರಸಾದದಿಂದ ಶತ್ರುಗಳ ನಾಶವಾಗುತ್ತದೆ? ಎಂದು ಬರೆದು ಪತ್ರವನ್ನು ಕಳಿಸಿದನು. ಅದನ್ನು ಕಂಡ ಆದಿಲಶಹನು ಆಜ್ಞೆ ಮಾಡಿದನು. ಅಮೀರ ಜನರು ಸೈನ್ಯಸಹಿತವಾಗಿ ಕೋಟೆಯ ಹತ್ತಿರ ಬಂದು ಮುಟ್ಟಿದರು.

ಈ ಅಮೀರ ಜನರೆಲ್ಲ ಕಿಶ್ವರಖಾನನ ಸಹಾಯಕ್ಕೆ ಬಂದಿದ್ದರಾದರೂ ಒಳಗೊಳಗೆ ಅವನೊಂದಿಗೆ ಸರಿ ಇರಲಿಲ್ಲ. ಯಾಕೆಂದರೆ ಆದಿಲಶಹನ ಅಮೀರ ಜನರಲ್ಲಿ ಐನುಲ್ಮುಲ್ಕ, ನೂರಖಾನ, ಶಾಹ ಅಬ್ದುಲ್‌ಹಸನ ಹಾಗೂ ಇನ್ನು ಕೆಲ ಅಮೀರರು ಕಿಶ್ವರಖಾನನನ್ನು ದ್ವೇಷಿಸುತ್ತಿದ್ದರು. ಅವನ ಏರಿಕೆಯನ್ನು ಸಹಿಸುತ್ತಿರಲಿಲ್ಲ. ಆದ್ದರಿಂದಲೇ ಕಿಶ್ವರಖಾನನೊಂದಿಗೆ ಸ್ನೇಹಪೂರ್ಣವಾಗಿ ನಡೆದುಕೊಳ್ಳುತ್ತಿರಲಿಲ್ಲ. ಶಹ ಅಬುಲ್ ಹಸನನು ಮನಸಾರೆ ನಿಜಾಮಶಹನ ಮಿತ್ರನಾಗಿದ್ದನು. ಆದ್ದರಿಂದ ಪ್ರತಿಯೊಂದು ಕೆಲಸದಲ್ಲೂ ನಿಜಾಮಶಹನತ್ತ ಲಕ್ಷ್ಯವಿಟ್ಟು ಮಾಡುತ್ತ ಆತನ ಸ್ನೇಹವನ್ನು ಉಳಿಸಿಕೊಂಡಿದ್ದನು. ಕಿಶ್ವರಖಾನನ ಸಹಾಯಕ್ಕೆ ತಾವು ಹೋಗ ಬಾರದೆಂದು ಆದಿಲಶಹನಿಗೂ ಹೇಳಿದ್ದನು. ಮಹಾದುರ್ಗದಲ್ಲಿಯ ಮೋಸದ ಬಗ್ಗೆ ಅಮೀರ ಜನರಿಗೂ ಹೇಳಿದನು. ಕಿಶ್ವರಖಾನನಿಗೆ ಸಹಾಯ ಮಾಡುವುದರಿಂದ ನಿಮಗೆ ಯಾವ ಉಪಯೋಗವೂ ಇಲ್ಲ. ಒಂದು ವೇಳೆ ಕಿಶ್ವರಖಾನನು ಗೆದ್ದು ಯಶಸ್ವಿಯಾದರೆ ಆತನ ಅಧ್ಯತೆ ಅಧಿಕವಾಗುತ್ತದೆ. ಇನ್ನಷ್ಟು ಉನ್ನತ ಅಧಿಕಾರ ಪಡೆಯುತ್ತಾನೆ. ಆಗ ನೀವೆಲ್ಲ ಆತನ ಕೈಕೆಳಗಿನ ಜನರಾಗುತ್ತೀರಿ. ಹೋಗಲಿ ಇಲ್ಲಿಯವರೆಗೆ ಬಂದಿದ್ದೇವಲ್ಲ, ಇಲ್ಲಿಂದ ಹೊರಟು ನಿಜಾಮಶಹನ ಪ್ರದೇಶಗಳನ್ನು ಪ್ರವೇಶಿಸಿ

ಅಲ್ಲಿ ದಂಗೆ ಹಾಕೋಣ, ಲೂಟಿ ಮಾಡೋಣ ಅಂದರೆ, ನಿಜಾಮಶಹನ ಅಮೀರರು ಗಾಬರಿಯಾಗಿ ತಮ್ಮ ಮರ್ಯಾದೆಯ ರಕ್ಷಣೆಗಾಗಿ ಯುದ್ಧ ಪ್ರವರ್ತಕರಾಗುವುದಿಲ್ಲ. ಯುದ್ಧಕ್ಕೆ ಬರುವುದಿಲ್ಲ. ಆಗ ನಿಜಾಮಶಹನಲ್ಲೂ ಯುದ್ಧ ಸಾಮರ್ಥ್ಯ ಇಲ್ಲದಂತಾಗುತ್ತದೆ. ನಿರುಪಾಯನಾಗಿ ಆತನು ಇಲ್ಲಿಂದ ಹೊರಟು ತನ್ನ ರಾಜಧಾನಿಯತ್ತ ಮರಳುತ್ತಾನೆ' ಎಂದು ಮುಂತಾಗಿ ಹೇಳಿದ ಅಬದುಲಾ ಹಸನನ ಮಾತುಗಳನ್ನು ಲಕ್ಷಿಸದೆ ಅಹಮದ ನಗರದತ್ತ ಪ್ರಯಾಣ ಬೆಳೆಸಿದರು. ಅಲ್ಲಿಗೆ ಹೋಗಿ ದಂಗೆ ಹಾಕಹತ್ತಿದರು.

ನಿಜಾಮಶಹನಿಗೆ ಈ ಸುದ್ದಿ ತಿಳಿಯಿತು. ಆದಿಲಶಹನ ಸರದಾರರು ಕಿಶ್ವರಖಾನನ ಸಹಾಯವನ್ನು ಬಿಟ್ಟು ತನ್ನ ಪ್ರದೇಶಕ್ಕೆ ಹೋಗಿ ಲೂಟಿ ಮಾಡುತ್ತಿದ್ದಾರೆಂದು ತಿಳಿದ ನಿಜಾಮಶಹನು ಅವಕಾಶವನ್ನು ಉಪಯೋಗಿಸಿಕೊಂಡು, ತನ್ನ ಪ್ರದೇಶದಲ್ಲಿಯ ದಂಗೆಯನ್ನು ಗಣಿಸದೆ, ಮೊದಲು ಕೋಟೆಯ ಮೇಲೆ ಹಲ್ಲೆ ಮಾಡಿದನು. ಪ್ರಬಲ ಯುದ್ಧ ಮಾಡಿದನು. ಕಿಶ್ವರಖಾನನೂ ಮುಂದೆ ಬಂದು ಸಿಂಹದಂತೆ ಯುದ್ಧ ಮಾಡಿದನು. ಪ್ರತಿಯೊಂದು ಹಲ್ಲೆಯಲ್ಲೂ ಶತ್ರು ಪ್ರಬಲವಾಗಿ ತಿರುಗೇಟು ಕೊಡುತ್ತಿತ್ತು. ಕಿಶ್ವರಖಾನನೂ ಸಿಂಹದಂತೆ ಆ ಜನರ ಮೇಲೆ ಏರಿ ಹೋಗಿ ಅವರನ್ನು ಹಿಂದಕ್ಕೆ ಸರಿಸುತ್ತಿದ್ದನು, ಸೋಲಿಸುತ್ತಿದ್ದನು. ತನ್ನ ಪ್ರತಿಯೊಂದು ಹೊಡೆತಕ್ಕೂ ಒಂದೊಂದು ಜೀವವನ್ನು ಬಲಿ ತೆಗೆದುಕೊಳ್ಳುತ್ತಿದ್ದನು. ಒಂದು ದಿನ ಶತ್ರುಗಳು ಅಂದರೆ, ನಿಜಾಮಶಾಹ ಮತ್ತಿತರರು ಸೇರಿ. ಇಂದು ದೊಡ್ಡ ಯುದ್ಧ ಮಾಡಬೇಕು. ಅದು ನಿರ್ಣಾಯಕ ಯುದ್ಧವಾಗಬೇಕೆಂದು ನಿರ್ಧರಿಸಿ ಬೆನ್ನಮೇಲಿನ ನರಗಳಂತೆ ಕೋಟೆಯನ್ನು ಸುತ್ತುವರಿದು ದೊಡ್ಡ ಯುದ್ಧ ಮಾಡಿ ಗೆಲ್ಲಬೇಕು ಎಂದು ನಿರ್ಧರಿಸಿದರು. ಅದರಂತೆ ದಾರುಣ ಯುದ್ಧವಾಯಿತು.

ಕಿಶ್ವರಖಾನನು ಕೋಟೆಯ ಬಾಗಿಲ ಎದುರಿಗೆ ನಿಂತು ಶತ್ರು ನಿವಾರಣದ ಪ್ರಯತ್ನದಲ್ಲಿದ್ದನು ಪ್ರತಿಯೊಂದು ಹಲ್ಲೆಯಲ್ಲೂ ಶತ್ರುಗಳ ಎಷ್ಟೋ ಜನರನ್ನು ಕೊಲ್ಲುತ್ತಿದ್ದನು. ಎಷ್ಟೋ ಜನ ಗಾಯಾಳುಗಳಾಗಿ ಗಾಬರಿಯಾಗುತ್ತಿದ್ದರು. ಅಂಥ ಸಮಯದಲ್ಲಿ ಶತ್ರು ಸೈನ್ಯವು ಕೋಟೆಯನ್ನು ಸುತ್ತೂ ಕಡೆಯಿಂದ ಮುತ್ತಿತ್ತು. ಮತ್ತು ಎಲ್ಲೆಲ್ಲಿ ಸಂಧಿ ಸಿಗುತ್ತದೆಯೋ ಅಲ್ಲಲ್ಲಿಂದ ಕೋಟೆಯಲ್ಲಿ ಒಳಗೆ ಹೋಗುವುದೆಂದು ಯೋಜಿಸಿದ್ದರು. ಈ ಮೊದಲೆ ಅಂಕುಶಖಾನನು ದ್ವೇಷದಿಂದ ಕೋಟೆಯನ್ನು ಕಟ್ಟುವಾಗ ಗೋಡೆಯಲ್ಲಿ ಕಿಂಡಿಯನ್ನು ಬಿಟ್ಟು ದನಕರುಗಳು ಹೋಗಿ ಬರುವಂತೆ ಮಾಡಿದ್ದ ಕಿಂಡಿಯ ಹತ್ತಿರ ಬಂದು ಮುಟ್ಟಿದರು. ಆ ಕಿಂಡಿಯ ಮೂಲಕ ಕೋಟೆಯನ್ನು ಹೊಕ್ಕರು. ಕೋಟೆಯ ಉಸ್ತುವಾರಿಯ ಮನುಷ್ಯನೂ ಕಿಶ್ವರಖಾನನನ್ನು ಸೇರುತ್ತಿರಲ್ಲಿಲ್ಲವಾದ್ದರಿಂದ ಅವನೂ ಅವರನ್ನು ಒಳಗೆ ಬರುವಂತೆ ತನ್ನ ಉಸ್ತುವಾರಿಯಲ್ಲಿ ಸಡಿಲು ಬಿಟ್ಟನು.

ನಿಜಾಮಶಹನ ಸೈನಿಕರು ನಿರ್ಭಯವಾಗಿ ಆ ಕಿಂಡಿಯ ಮೂಲಕ ಕೋಟೆಯ ಒಳಗೆ ಹೋಗುತ್ತಿದ್ದರೆ ಇತ್ತ ಕಿಶ್ವರಖಾನನು ರಣಭೂಮಿಯಲ್ಲಿ ವೀರ ಯೋಧನಾಗಿ ಕಾದಾಡುತ್ತಿದ್ದನು. ತನ್ನ ಶೂರತ್ವದ ಯುದ್ಧ ಪರಾಕ್ರಮವನ್ನು ತೋರಿಸುತ್ತಿದ್ದನು. ಅಂಥ ಸಮಯದಲ್ಲಿಯೆ ನಿಜಾಮಶಹನ ಸೈನಿಕರು ಕೋಟೆಯ ಒಳಗಡೆ ಸೇರಿದ್ದಾರೆಂಬ ಸುದ್ದಿ ಕೇಳಿ ಚಿಂತಾಗ್ರಸ್ತನಾದನು. ಹುಮ್ಮಸು ಇಳಿಯಿತು. ಮರಣಕ್ಕೆ ಉದಾರನಾಗಿ, ಕುದುರೆಯಿಂದಿಳಿದು ಕಾಲ್ನಡಿಗೆಯಲ್ಲಿಯೇ ನಡೆಯುತ್ತ ಬಹಳ ಶೌರ್ಯದಿಂದ ಕಾದಾಡತೊಡಗಿದನು. ಅಧಿಕ ಹಲ್ಲೆಯಿಂದ ಶತ್ರುವಿನ ಗುಂಪಿಗೆ ಗುಂಪನ್ನೆ ಸವರತೊಡಗಿದನು. ಬಹಳಷ್ಟು ಜನ ಸತ್ತರಲ್ಲದೆ, ಅಧಿಕ ಜನ ಗಾಯಗೊಂಡರು. ತನ್ನ ಹಿಂದೆ ಈ ವಿಶ್ವದಲ್ಲಿ ತನ್ನ ಕೀರ್ತಿ ಉಳಿಯಲಿ ಎಂಬ ಅರ್ಥದಲ್ಲಿ ಕಾದಿದನು. ಆದರೆ ಅಲ್ಲಾನ ಕೃಪೆ ಕಿಶ್ವರಖಾನನತ್ತ ಇರಲಿಲ್ಲ. ಆದ್ದರಿಂದ ಅವನ ಕಾದಾಟ ಉಪಯೋಗಕ್ಕೆ

ಬರಲಿಲ್ಲ. ಅಷ್ಟರಲ್ಲಿ ಪರಸ್ಪರ ಬಾಣ ಬಿಡುವ ಗುರಿಕಾರರು ಮುಸಲಾಧಾರೆಯ ಮಳೆಯಂತೆ ಬಾಣಗಳನ್ನು ಬಿಡುತ್ತಿದ್ದರು. ಅವುಗಳಲ್ಲಿ ಶತ್ರುಗಳ ಕಡೆಯಿಂದ ಬಂದ ಒಂದು ಬಾಣ ನೇರವಾಗಿ ಕಿಶ್ವರಖಾನನ ಎದುರಿಗೆಯೇ ಬಂದು ಅವನ ಹೊಟ್ಟೆಯಲ್ಲಿ ಹೊಕ್ಕುಳದ ಕೆಳಗೆ ಒಂದು ಕೈ ಉದ್ದದಷ್ಟು ದೇಹದಲ್ಲಿ ಸೇರಿಕೊಂಡಿತು. ಬಾಣದ ಗಾಯದಿಂದ ಕಿಶ್ವರಖಾನನು ಭೂಮಿಯ ಮೇಲೆ ಬಿದ್ದನು. ಆತನ ಸೈನ್ಯವೂ ಸೋತಿತು. ಶತ್ರುಗಳು ಓಡಿ ಬಂದು ಕಿಶ್ವರಖಾನನ ತಲೆಯನ್ನು ಕತ್ತರಿಸಿ ನಿಜಾಮಶಹನ ಹತ್ತಿರ ತೆಗೆದುಕೊಂಡು ಹೋದರು. ಆಗ ನಿಜಾಮಶಹನು ಆತನ ಕರುಳಗಳನ್ನು ಕಿತ್ತಿ ಅವನ ಶರೀರದಲ್ಲಿ ಹುಲ್ಲನ್ನು ತುಂಬಿ ಕಿಶ್ವರಖಾನನ ಸೈನ್ಯದಲ್ಲಿ ಪ್ರದರ್ಶಿಸಿರಿ ಎಂದು ಆಜ್ಞೆ ಮಾಡಿದನು. ಅದರಂತೆ ಮಾಡಿದರು.

ಅಲ್ಲದೆ ಈ ಬಗ್ಗೆ ಹೀಗೂ ಕೇಳಿ ಬರುತ್ತದೆ. ಅದೆಂದರೆ, ಕಿಶ್ವರಖಾನನು ಶಸ್ತ್ರಧಾರಣನಾಗಿ ಯುದ್ಧಕ್ಕೆ ಹೋಗುವಾಗ, ಕುದುರೆಯ ಮೇಲೆ ಕೂಡುವವನಿದ್ದನು ಆಗ ಒಬ್ಬ ಗೃಹಸ್ಥನು, ಖಾಜಾ ಆಫೀನ ಶಿರಾಜಿಯ ಪುಸ್ತಕ 'ದಿವಾನ ಆಫೀನ'ನ್ನು ತಂದನು. ಆಗ ಕಿಶ್ವರಖಾನನು ಅವನಿಂದ ಆ ಪುಸ್ತಕದಲ್ಲಿ ಪ್ರಶ್ನೆ ನೋಡಲು ಹೇಳಿದನು. ಆಗ ಪುಸ್ತಕವನ್ನು ತೆರೆದು ನೋಡಿದಾಗ ಆ ಪುಟದಲ್ಲಿ ಬಂದ ಉತ್ತರದ ಅರ್ಥ ಹೀಗಿತ್ತು 'ಯಾವ ಗೃಹಸ್ಥನ ಮಸ್ತಕದಲ್ಲಿ ಪ್ರಾತಃಕಾಲ ರತ್ನ ಖಚಿತ ಮಮುಕುಟವಿತ್ತೊ ಆತನಿಗೆ ಸಾಯಂಕಾಲ ನೋಡಿದರೆ ತಲೆದಿಂಬಿನ ಕೆಳಗೆ ಮಣ್ಣಿನ ಇಟ್ಟಿಗೆ ಇದೆ' ಎಂಬುದಾಗಿತ್ತು. ಅಂದರೆ ಪ್ರಾಣ ಹೋಗಿ ಪ್ರೇತವನ್ನು ಭೂಮಿಯ ಮೇಲೆ ಇಟ್ಟಿದ್ದರು, ಎಂಬ ಭಾವದ ಪ್ರಶ್ನೋತ್ತರವನ್ನು ತಿಳಿದು ಖಿನ್ನನಾದನು. ನಿರುಪಾಯನಾಗಿ ಕುದುರೆಯ ಮೇಲೆ ಕುಳಿತು ಯುದ್ಧಕ್ಕೆ ಹೊರಟನು. ಕೊನೆಗೆ ಅದರಲ್ಲಿ ಹೇಳಿದಂತೆಯೇ ಪರಿಣಾಮ ಆಗಿತ್ತು. ಪ್ರಶ್ನೆಯಲ್ಲಿ ತಲೆದಿಂಬಿನ ಕೆಳಗೆ ಮಣ್ಣಿನ ಇಟ್ಟಿಗೆಯನ್ನು ಇಟ್ಟಿದ್ದಾರೆ ಎಂದು ಬಂದಿತ್ತಾದರೂ ಪಾಪ! ಅಸಹಾಯಕ ಕಿಶ್ವರಖಾನನಿಗೆ ಮರಣದ ಸಮಯದಲ್ಲಿ ಮಣ್ಣಿನ ಇಟ್ಟಿಗೆಯೂ ದೊರೆಯಲಿಲ್ಲ.

ಕಿಶ್ವರಖಾನನು ಸತ್ತ ಅನಂತರ ನಿಜಾಮಶಹನು ಸಂತೋಷಯುಕ್ತನಾಗಿ ಕೋಟೆಯ ಮೇಲೆ ಏರಿ ಬಂದನು. ಆ ಕೋಟೆಯನ್ನು ತನ್ನ ವಿಶ್ವಾಸದ ಒಬ್ಬನಿಗೆ ಕೊಟ್ಟು ಹವಾಲದಾರನೆಂದು ನಿಯಮಿಸಿದನು. ಈ ಆನಂದದ ಗಳಿಗೆಯಲ್ಲಿ ನಿಜಾಮಶಹನ ಮುಂದೆ ತಂದ ಯುದ್ಧ ಕೈದಿಗಳು, ಗಾಯಾಳುಗಳಿಗೆ, ವಸ್ತ್ರಗಳನ್ನು ನೀಡಿ ಬಿಡುಗಡೆ ಮಾಡುತ್ತಿದ್ದರು. ಆ ಎಲ್ಲ ಕೈದಿಗಳಲ್ಲಿ ಒಬ್ಬ 'ಯಾಕುದ' ಎಂಬ ಹೆಸರಿನ ಕೈದಿಯು ಕಿಶ್ವರಖಾನನ ಖಾಸಾ ನೌಕರನಾಗಿದ್ದನು. ಕಿಶ್ವರಖಾನನ ಕರುಳು ಕಿತ್ತಿದ ಶರೀರವನ್ನು ಯಾಕೂದನಿಗೆ ಕೊಡಲು ನಿಜಾಮಶಹನು ಆಜ್ಞೆ ಮಾಡಿದನು. ಆಗ ಯಾಕೂದನು, ಎಲ್ಲರಂತೆ ಕಿಶ್ವರಖಾನನಿಗೂ ವಸ್ತ್ರಗಳನ್ನು ನೀಡುವ ಕೃಪೆ ಮಾಡಬೇಕೆಂದು ನಿಜಾಮಶಹನನ್ನು ಬಿನ್ನವಿಸಿಕೊಂಡನು. ಅವನ ವಿನಂತಿಯ ಉದ್ದೇಶವು, ಕರುಳು ಕಿತ್ತಿ-ಹುಲ್ಲು ತುಂಬಿದ ಕಿಶ್ವರಖಾನನ ಶರೀರದಲ್ಲಿಯ, ಹುಲ್ಲನ್ನು ತೆಗೆದು, ಕರುಳು ಜೋಡಿಸಿ, ಮಸ್ತಕ ಸಹಿತವಾಗಿಟ್ಟರೆ ಆತನನ್ನು 'ದಫನ' ಮಾಡಲು ಅನುಕೂಲವಾಗುತ್ತದೆ ಎಂಬುದೇ ಆಗಿತ್ತು. ಆತನ ಮನೋಗತವನ್ನು ಗುರುತಿಸಿದ ನಿಜಾಮಶಹನು ಅದರಂತೆ ಆಜ್ಞೆ ಮಾಡಿ ಆತನ ಶವವನ್ನು ವಿಜಾಪುರಕ್ಕೆ ತೆಗೆದುಕೊಂಡು ಹೋಗಲು ಅನುಮತಿಯನ್ನಿತ್ತನು. ನಗರದಲ್ಲಿ ಆತನದೇ ತೋಟವಿದೆ. ಆ ತೋಟದಲ್ಲಿಯೆ ಕಿಶ್ವರಖಾನನ ಸಮಾಧಿ ಮಾಡಲು ಆದೇಶ ನೀಡಿದನು.

ನಿಜಾಮಶಹನು ಕೋಟೆಯನ್ನು ಕೈವಶ ಮಾಡಿಕೊಂಡ ಅನಂತರ, ಅಹಮದನಗರದ ಮೇಲೆ ಏರಿ ಬಂದ ಆದಿಲಶಹನ ಅಮೀರ ಜನರ ದಂಗೆಯನ್ನು ಅಡಗಿಸಲು ರಾಜಧಾನಿಯತ್ತ ಹೊರಟನು. ಅವರನ್ನು ಸುತ್ತುವರಿದನು. ಅವರು ಕೂಡ ದೊಡ್ಡ ಯುದ್ಧ ಮಾಡಿದರು. ಆದರೆ, ಅವರಲ್ಲಿಯ ಪರಸ್ಪರ

ದ್ವೇಷ ಹಾಗು ಸೇರಿಕೆ ಇಲ್ಲದರಿಂದಾಗಿ ಯಶ ದೊರೆಯದೆ ತಮ್ಮ ಯಜಮಾನನ ರಾಜಧಾನಿಗೂ ವಿಘ್ನ ತಂದರು. ಆ ಕರ್ಮದ ಶಿಕ್ಷೆಯಂಬಂತೆ ಫಲವನ್ನು ಪಡೆದರು. ಐನುಲ್‌ಮುಲ್ಕನ ಮೇಲೆ ತಲವಾರನ್ನೆ ಬೀಸಿದರು. ನೂರಖಾನನು ಕೈದಿಯಾದನು. ಕಿಶ್ವರಖಾನ ಸತ್ತ ಹಾಗೂ ಕೋಟೆಯಲ್ಲಿಯ ಎಲ್ಲ ಸಾಮಾನುಗಳು ಆನೆ, ಒಂಟೆಗಳನ್ನು ಸಹ ಶತ್ರುಗಳು ಲೂಟಿಮಾಡಿ ಒಯಿದ ಸುದ್ದಿಯನ್ನು ಕೇಳಿದ ಆದಿಲಶಹನು ಬಹಳ ಪಶ್ಚಾತ್ತಾಪ ಪಟ್ಟನು. ಸಿಟ್ಟಿನಿಂದ, 'ಕಿಶ್ವರಖಾನನು ಅಫಜಲಖಾನನು ಹೇಳಿದ ಮಾತನ್ನು ಕೇಳಲಿಲ್ಲ ಅದಕ್ಕೆಂದೆ ಕುರಾನವು ತನ್ನ ಆಜ್ಞಾ ಭಂಗದ ಚಮತ್ಕಾರವನ್ನು ತೋರಿಸಿತು' ಎಂದು ಹೇಳಿದನು. ನಿಜಾಮಶಾಹನನ್ನು ಎದುರಿಸಲು ಹೋಗಬೇಕೆಂದು ನಿರ್ಧರಿಸುತ್ತಿದ್ದಂತೆ ಆತನು ತನ್ನ ರಾಜಧಾನಿಗೆ ಹಿಂತಿರುಗಿದ್ದನ್ನು ಕೇಳಿ ಮುಂದೆ ಒಂದು ಸಮಯ ಸಾಧಿಸಿ ಎದುರಿಸುವುದೆಂದುಕೊಂಡನು.

### ೧೯. *ಅಂಕುಶಖಾನನು ಸರದಾರರೊಂದಿಗೆ ತನ್ನ ಯಶಸ್ವಿ ಸೈನ್ಯದೊಂದಿಗೆ ಉದೋನಿ (ಆದೋನಿ) ಕೋಟೆಯನ್ನು ತೆಗೆದುಕೊಳ್ಳಲು ಹೋಗುವುದು ಮತ್ತು ಆದೋನಿ ಕೋಟೆಯನ್ನು ಪಡೆದದ್ದು :*

ಶಾಹ ಅಬದುಲ್ ಹಸನ ಬಾದಶಾಹ ತಾಹರನು ಕಿಶ್ವರಖಾನನು ಸತ್ತನಂತರ 'ಜುಮಲತ್ ಉಲ್‌ಮುಲ್ಕ' (ಪ್ರಧಾನ ಮಂತ್ರಿ) ಪದವಿಯನ್ನು ಯುಕ್ತಿಯಿಂದ ಪಡೆದಿದ್ದನು. ಜೊತೆಗೆ 'ವಕೀಲುಲ್‌ಸಲ್ತನತ್' ಎಂಬ ಪದವಿಯನ್ನೂ ಪಡೆದಿದ್ದನು. ಆತನು ಆದೋನಿಯ ಕೋಟೆಯನ್ನು ತೆಗೆದುಕೊಳ್ಳಬೇಕೆಂದು ವಿಚಾರ ಮಾಡಿದನು. ಆ ಕೋಟೆ ಬಹಳ ಗಟ್ಟಿಮುಟ್ಟಾಗಿದ್ದು ಈ ಮೊದಲು ಯಾವ ಮುಸಲಮಾನ ಬಾದಶಹನ ಕೈಗೂ ದೊರೆತಿರಲಿಲ್ಲ. ಆ ಕೋಟೆಯನ್ನು ತುಂಬ ಎತ್ತರದ ಪರ್ವತದ ಮೇಲೆ ವಿಶಾಲವಾಗಿ ಕಟ್ಟಲಾಗಿದೆ. ಆ ಕೋಟೆಯಲ್ಲಿ ದೊಡ್ಡ ದೊಡ್ಡ ಕಟ್ಟಡಗಳು ಹಾಗು ಸಿಹಿ ನೀರಿನ ಝರಿಗಳೂ ಬಹಳಷ್ಟಿವೆ. ಶಿವರಾಯನ ಕಾಲದಿಂದ ರಾಮರಾಯನವರೆಗೂ- ವಿಜಯನಗರದ ಆ ರಾಮರಾಯನು ಮುಸಲಮಾನ ಬಾದಶಹರ ಭಯದಿಂದ ಪಾರಾಗಲು ಆ ಕೋಟೆಯನ್ನು ಇನ್ನಷ್ಟು ಗಟ್ಟಿ ಮಾಡಿ ಬರುಜುಗಳನ್ನು ಸೀಸದಿಂದ ಕಟ್ಟಿಸಿದ್ದನು. ಅಂಕುಶಖಾನನು ಎಂಟು ಸಾವಿರ ಸವಾರರನ್ನು, ಇನ್ನಷ್ಟು ಸಿಬ್ಬಂದಿ ಹಾಗು ಸಾಕಷ್ಟು ತೋಫುಗಳನ್ನು ಜೊತೆಗೆ ತೆಗೆದುಕೊಂಡು ಆ ಕೋಟೆಯ ಕಡೆಗೆ ಹೊರಟನು.

ಆ ಸಮಯದಲ್ಲಿ ಕೋಟೆಯ ಒಡೆತನ ರಾಮರಾಜನ ಕಡೆಯ ಅಮೀರ ಜನರಲ್ಲಿಯ ಒಬ್ಬ ಸಂಭಾವಿತ ಅಮೀರನ ಕಡೆಗಿತ್ತು. ರಾಮರಾಯನು ಸತ್ತ ಅನಂತರ ಆತನು ಆ ಕೋಟೆಯನ್ನು ಹಾಗೂ ಕೋಟೆಯ ಅಧೀನದಲ್ಲಿ ಪ್ರದೇಶವನ್ನು ತನ್ನ ಕೈವಶದಲ್ಲಿಟ್ಟುಕೊಂಡು, ಯಾರ ನೌಕರಿಯನ್ನೂ ಮಾಡದೆ ತಾನೆ ಸ್ವತಂತ್ರನಾಗಿದ್ದನು. ಆತನು ಮುಸಲಮಾನರ ಸೈನ್ಯದ ಪಾರುಪತ್ಯವನ್ನು ಮಾಡಲು ಅಂಕುಶಖಾನನೊಂದಿಗೆ ಸಾಕಷ್ಟು ಸೆಣಸಿದನು. ಆದರೆ ಪ್ರತಿ ಯುದ್ಧದಲ್ಲೂ ಆ ಕೋಟೆಯ ಯಜಮಾನನಿಗೆ ಸೋಲಾಗುತ್ತಿತ್ತು. ಕೊನೆಗೆ ಸಾಕಷ್ಟು ಧಾನ್ಯ ಸಂಗ್ರಹವನ್ನು ಮಾಡಿ ಕೋಟೆಯ ಬಾಗಿಲನ್ನು ಮುಚ್ಚಿ ಬಿಟ್ಟಿದ್ದನು. ಅದರಿಂದ ಯುದ್ಧವು ತುಂಬ ದಿನಗಳವರೆಗೆ ಸಾಗಿತು. ದಿನಾಲು ಯುದ್ಧ ನಡೆಯುತ್ತಿತ್ತು. ಕೋಟೆಯ ಒಳಗಿನ ಸಂಗ್ರಹ ತೀರಿತು. ಆದ್ದರಿಂದ ನಿರುಪಾಯನಾಗಿ ಪ್ರಾಣಭಿಕ್ಷೆ ಬೇಡಿ ಕೋಟೆಯನ್ನು ಅಂಕುಶಖಾನನನಿಗೆ ಒಪ್ಪಿಸಿದನು. ಅದರಿಂದಾಗಿ ಆದಿಲಶಹನು ತುಂಬ ಸಂತೋಷಗೊಂಡನು ಮತ್ತು ಅದರಂತೆ ಉಳಿದ ಕೋಟೆಗಳನ್ನು ಹಾಗೂ ಕೋಟೆಯ ಅಧೀನದಲ್ಲಿದ್ದ ಪ್ರದೇಶಗಳನ್ನು ಕೈವಶ ಮಾಡಿಕೊಂಡನು. ಹಾಗೆಯೇ ಮುಂದೆ - ಮುಂದೆ ಬರುತ್ತ ವಿಜಯನಗರದ ವಶದಲ್ಲಿದ್ದ ಸಂಪೂರ್ಣ

ಪ್ರದೇಶವನ್ನು ಹಸ್ತಗತ ಮಾಡಿಕೊಂಡು ಹಿಂದು ಜನರ ಪ್ರದೇಶಗಳಲ್ಲಿ ಮುಸಲಮಾನರ ದೀಪವನ್ನು ಬೆಳಗಿಸಿದರು. ಹಿಂದು ಜನರ ದೇವತೆಗಳ ಬಹಳಷ್ಟು ದೇವಾಲಯಗಳನ್ನು ಕೆಡವಿ ನೆಲಸಮಮಾಡಿ ಆ ಸ್ಥಳದಲ್ಲಿ ಮಸೀದಿಗಳನ್ನು ಕಟ್ಟಿ ನಮಾಜ ಓದುವುದು ಮತ್ತು ಬಾಂಗ ಕೊಡುವ ವ್ಯವಸ್ಥೆಯನ್ನು ಮಾಡಿ ಮುಸಲ್ಮಾನರ ಧ್ವಜವನ್ನು ನಿಲ್ಲಿಸಿದನು.

### ೨೦. *ಆಬದುಲ ಹಸನ ಹಾಗೂ ಚುಂಗೀರಖಾನ ಇವರ ಯತ್ನದಿಂದ ಸರಹದ್ದಿನಲ್ಲಿ ಆದಿಲಶಹ ಹಾಗೂ ನಿಜಾಮಶಹರ ಭೆಟ್ಟಿಯಾಗುವುದು ಮತ್ತು ಉಭಯತರ ಸಖ್ಯದ ಒಪ್ಪಂದದ ಕರಾರುಗಳು :*

ಈ ಮೊದಲಿನ ದಿನಗಳಲ್ಲಿ ವಿಚಾರವಂತರ ಮಧ್ಯಸ್ಥಿಕೆಯಿಂದ ಆದಿಲಶಹ ಹಾಗೂ ನಿಜಾಮಶಹರ ಮಧ್ಯ ಸ್ನೇಹದ ಸಂಬಂಧ ಕುದುರಿತ್ತಾದರೂ, ಅದರ ಉಪಯೋಗವಾಗಿರಲಿಲ್ಲ. ಆ ಒಪ್ಪಂದದ ಕರಾರುಗಳಿಂದ ಇನ್ನಷ್ಟು ಮೋಸ ಹಾಗೂ ದ್ವೇಷಗಳೇ ಬೆಳೆದುವು. ಉಭಯ ಬಾದಶಹರ ಪರಸ್ಪರ ಯುದ್ಧಗಳಿಂದ ರಾಜ್ಯ ಹಾಳಾಗುತ್ತಿತ್ತು. ಜನಜೀವನ ಹಾಗು ಕೃಷಿ ಪ್ರದೇಶ ಹಾನಿಗೊಳಗಾಗುತ್ತಿತ್ತು. ಇದರಿಂದಾಗಿ ಬಾದಶಹ ಅಬ್ದುಲ್ ಹಸನ್ ತಾಹರ ಹಾಗು ನಿಜಾಮಶಹನ ಪ್ರಧಾನ ಸಚಿವ ಖಾನ್ ಅಮೀರಲಾ ಊರ್ಫ ಚುಂಗತಖಾನ ಇಬ್ಬರೂ ಕೂಡಿ ಉಭಯ ಬಾದಶಹರ ಮಧ್ಯ ಹೇಗಾದರೂ ಮಾಡಿ ಸ್ನೇಹದ ಮಿತ್ರತ್ವದ ಬೆಸುಗೆಯನ್ನು ಹಾಕಬೇಕೆಂದು ಯೋಚಿಸಿದರು. ಒಳ್ಳೆಯ ಮಾತುಗಳಿಂದ ಹಾಗೂ ಉಪಾಯಗಳಿಂದ ಉಭಯ ಬಾದಶಹರನ್ನು ಸರಹದ್ದಿನಲ್ಲಿ ಭಟ್ಟಿಯಾಗುವಂತೆ ಅವಕಾಶವನ್ನು ಕಲ್ಪಿಸಿದರು. ಇಬ್ಬರ ಮನದಲ್ಲಿಯ ವೈಷಮ್ಯವನ್ನು ತೆಗೆಯುವಂತೆ ಮಾಡಿದರು. ಸಖ್ಯದಿಂದ, ಸ್ನೇಹದಿಂದ ಇರುವಂತೆ ಕೆಲವು ಕರಾರುಗಳನ್ನು ಹಾಕಿದರು. ಅದರಂತೆ, ಆದಿಲಶಹನು ವಿಜಯನಗರದ ಪ್ರದೇಶದಲ್ಲಿ ಬೇಕಾದಷ್ಟನ್ನು ಕೈವಶ ಮಾಡಿಕೊಳ್ಳಬಹುದು. ನಿಜಾಮಶಹನು ಬೀದರ ಹಾಗು ವರ್ಹಾಡದ ಪ್ರದೇಶಗಳನ್ನು ಬೇಕಷ್ಟು ಸ್ವಾಧೀನಪಡಿಸಿಕೊಳ್ಳಬಹುದು. ಆದರಿಂದಾಗಿ ಒಬ್ಬರ ಪ್ರದೇಶ ಕಡಿಮೆಯಾಯಿತೆಂದು ಪರಸ್ಪರ ಯುದ್ಧ ಮಾಡುವುದನ್ನು ನಿಲ್ಲಿಸಬೇಕು. ಇನ್ನು ಮೇಲೆ, ಒಬ್ಬರೊಬ್ಬರು ಯುದ್ಧ ಮಾಡಬಾರದು. ಬಹಳ ವರುಷಗಳಿಂದ ಇದ್ದ ದ್ವೇಷವನ್ನು ಬಿಟ್ಟು ಬಿಡಬೇಕು. ಇಲ್ಲಿಂದ ಮುಂದಿನ ದಿನಗಳಲ್ಲಿ ಇಬ್ಬರೂ ಸ್ನೇಹದಿಂದ ಇರಬೇಕು. ಇದರಿಂದಾಗಿ ಅಲ್ಲಾನ ಸೃಷ್ಟಿಯ ಪ್ರಾಣಿವರ್ಗ ಹಾಗು ನಗರ ಪಟ್ಟಣಗಳಲ್ಲಿ, ದೇಶ-ದೇಶಗಳಲ್ಲಿ ಸುಖ ಸಮೃದ್ಧಿಯಾಗುವುದು. ಹೀಗೆ ನಿರ್ಧರಿಸಿ ಉಭಯ ಬಾದಶಹರು ಸಂತೋಷದಿಂದ ಪರಸ್ಪರ ನಿರೋಪ ಪಡೆದು ತಂತಮ್ಮ ರಾಜ್ಯಗಳಿಗೆ ಮರಳಿದರು.

ನಿರ್ಧರಿಸಿದ ಕರಾರಿನಂತೆ ನಿಜಾಮಶಹನು ತನ್ನ ಸೈನ್ಯವನ್ನು ಸಿದ್ಧಮಾಡಿ ಕೊಂಡು ವರ್ಹಾಡ ದೇಶದ ಮೇಲೆ ಸೈನ್ಯ ತೆಗೆದುಕೊಂಡು ಹೊರಟನು. ಆಗ ವರ್ಹಾಡ ದೇಶದಲ್ಲಿ ತಫಾವಲಖಾನನ ಗುಂಡಾಗರ್ದಿಯಿಂದ, ಅಪ್ರಾಮಾಣಿಕತೆಯಿಂದ ಎಲ್ಲ ಜನರು ಬೇಸತ್ತಿದ್ದರು, ತೊಂದರೆಗೊಳಗಾಗಿದ್ದರು. ಯಾಕೆಂದರೆ ತಫಾವಲಖಾನನು ತನ್ನ ಒಡೆಯನನ್ನು ಬಂಧಿಸಿ- ಸೆರೆಮನೆಯಲ್ಲಿಟ್ಟು ತಾನೆ ಜಬರದಸ್ತಿಯಿಂದ ಮಾಲಕನಾಗಿದ್ದನು. ಆದ್ದರಿಂದ ಅಲ್ಲಿಯ ಎಲ್ಲ ಅಧಿಕಾರಿವರ್ಗವೂ ಅವನನ್ನು ಮನದಲ್ಲಯೇ ವಿರೋಧಿಸುತ್ತಿದ್ದು ಆತನ ನೌಕರಿಯನ್ನು ಬಿಟ್ಟು ನಿಜಾಮಶಹನ ಮಿತ್ರತ್ವವನ್ನು ಬಯಸುತ್ತಿತ್ತು. ನಿಜಾಮಶಹನು ತಫಾವಲಖಾನನ್ನು ಹಿಡಿದು ಆತನಿಗೆ ಶಿಕ್ಷೆ ಕೊಟ್ಟನು. ವರ್ಹಾಡ ಪೂರ್ಣ ಪ್ರದೇಶವನ್ನು ಬಡಿದಾಟ-ಯುದ್ಧವಿಲ್ಲದೆ ಸಂಪೂರ್ಣವಾಗಿ ಕೈವಶಮಾಡಿಕೊಂಡನು.

ಇತ್ತ ಆದಿಲಶಹನು ಕೂಡ ಸಿದ್ಧತೆ ಮಾಡಿಕೊಂಡು, ಸೈನ್ಯದೊಂದಿಗೆ ವಿಜಯನಗರದ ಪ್ರದೇಶಗಳನ್ನು ಕೈವಶಮಾಡಿಕೊಳ್ಳಲು ಹೊರಟನು. ದಾರಿಯಲ್ಲಿ ದೊರೆಯುವ ಕೋಟೆಗಳನ್ನು ಕೈವಶಮಾಡಿಕೊಳ್ಳುತ್ತ ಪಿಳಗುಂಡಿಯ ಕೋಟೆಯ ಹತ್ತಿರ ಬಂದು ಮುಟ್ಟಿದನು. ಆ ಕೋಟೆಯ ಮೇಲೂ ಹಲ್ಲೆ ಮಾಡಿದನು. ಹಿಂದು ಅಮೀರ ಜನ, ಅಂದರೆ, ಆ ಹಿಂದು ಜನರಿಗೆ ಪಾರಾಹೀರ (ಪಾಳೆಯಗಾರ) ಎಂದು ಕರೆಯುತ್ತಿದ್ದರು ಮತ್ತು ಅವರಿಗೆಯೇ ನಾಯಕವಾಡಿ ಎಂದೂ ಕರೆಯುತ್ತಿದ್ದರು. ಆ ಜನರು ಸೈನಿಕರಾಗಿ ಶೂರತ್ವದಲ್ಲಿ ತುಂಬ ಸಮರ್ಥರಾಗಿದ್ದರು. ಅವರು ರಾಮರಾಜನು ಸತ್ತ ನಂತರ ಮೊದಲು ಆದಿಲಶಹನ ಸಾಮಂತರಾಗಿ, ಆದಿಲಶಹನ ಆಜ್ಞೆಯಂತೆ ನಮ್ರತೆಯಿಂದ ನಡೆಯುತ್ತಿದ್ದರು. ಆದಿಲಶಹನ ಆದೇಶಗಳನ್ನು ಮೀರುತ್ತಿರಲಿಲ್ಲ. ಆದಿಲಶಹನ ಸೈನ್ಯದೊಂದಿಗೆ ಬಂದು ಅವರ ಪ್ರತಿಯೊಂದು ಕಾರ್ಯದಲ್ಲೂ ಸಹಾಯವನ್ನು ಮಾಡುತ್ತಿದ್ದರು. ಶತ್ರುಗಳ ಪ್ರದೇಶಗಳನ್ನು ಆಕ್ರಮಿಸಿ, ಅದನ್ನು ಹಾಳು ಮಾಡಿ ಲೂಟಿ ಮಾಡುತ್ತಿದ್ದರು. ಸುಲಿಗೆಯಲ್ಲಿ ಬಂದ ಆನೆ, ಕುದುರೆ ಒಂಟೆಗಳಿಂದ ಇತರ ಪದಾರ್ಥಗಳಿಂದ ಅವರು ಸಾಕಷ್ಟು ಸಮರ್ಥರೂ ಆಗಿದ್ದರು. ಈಗ ಆ ಜನರಲ್ಲಿ ಬಹಳಷ್ಟು ದ್ರವ್ಯ, ಸಂಪತ್ತು ಕೂಡಿದ್ದರಿಂದ ಸೊಕ್ಕಿನಿಂದ ಮೆರೆಯುತ್ತಿದ್ದರು. ಅದರಿಂದಾಗಿ ತಮ್ಮ ಒಡೆಯನನ್ನು ಬದಲಿಸುವ ಧೋರಣೆಯಲ್ಲಿದ್ದರು. ಸಾಮಂತರಾಗಿ, ನೌಕಕರಾಗಿ, ಮೊದಲಿದ್ದ ನಡತೆಯನ್ನು ಬಿಟ್ಟು ಗರ್ವದಿಂದ ಹುಂಬತನದ ಮಾರ್ಗವನ್ನು ಹಿಡಿದಿದ್ದರು. ಮುಸಲಮಾನರ ಯಶಸ್ವೀ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು, ತಿನ್ನುವ ಪದಾರ್ಥಗಳನ್ನು ಕೊಡಬಾರದೆಂದು ಅಪ್ಪಣೆ ಮಾಡಿದರು. ಗೆಲುವಿಗೆ ಅಡ್ಡ ಬಂದರು. ಕೋಟೆಯ ಮುಖ್ಯಸ್ಥನಿಗೆ ಸಹಾಯ ಮಾಡುವಲ್ಲಿ ತತ್ಪರರಾಗಿ, ಕೋಟೆಯಲ್ಲಿ ಆಹಾರ ಧಾನ್ಯ ಸಂಗ್ರಹವನ್ನು ನಿರಂತರ ಮುಟ್ಟಿಸುತ್ತಿದ್ದರು. ಅವರಲ್ಲಿ ನಾನಾ ಪ್ರಕಾರದ ವಾಹನಗಳು, ಕಳುವು ಮಾಡಿದ ಶಸ್ತ್ರಾಸ್ತ್ರಗಳು ಸಾಕಷ್ಟಿದ್ದುವು. ಒಟ್ಟು ಹದಿನೈದು ಸಾವಿರ ಸೈನ್ಯದಲ್ಲಿ ಶ್ರೇಷ್ಠ-ಕನಿಷ್ಠ ಜಮಾದಾರರು, ಭಲ್ಲೆ ಹೊಡೆಯುವವರು, ತಲವಾರಿನವರು ಎಲ್ಲ ಹಿಂದುಗಳೂ ಸೇರಿದ್ದರು. ಆದ್ದರಿಂದ ಈ ಸಮಯದಲ್ಲಿ ಕೋಟೆಯನ್ನು (ಪಿಳಗುಂಡಿ) ತೆಗೆದುಕೊಳ್ಳುವುದು ಸರಿಯಲ್ಲವೆಂದು ಭಾವಿಸಿ, ಮತ್ತೆಂದಾದರೂ ತೆಗೆದುಕೊಳ್ಳಬಹುದೆಂದು ನಿರ್ಧರಿಸಿ ಅಲ್ಲಿಂದ ಕಲಬುರ್ಗಿಯ ಕಡೆಗೆ ತನ್ನ ಸೈನ್ಯವನ್ನು ತಿರುಗಿಸಿ ಬರ-ಬರುತ್ತ ವಿಜಾಪುರಕ್ಕೆ ಬಂದು ಮುಟ್ಟಿದನು.

### *೨೧. ಮತ್ತೆ ಹಿಂದುಗಳ ಪ್ರದೇಶದ ಮೇಲೆ ಸೈನ್ಯವನ್ನು ತೆಗೆದುಕೊಂಡು ಹೋಗುವುದು. ಮತ್ತು ಅಬದುಲ ಹಸನ ಈತನನ್ನು ವಕೀಲ ಕೆಲಸದಿಂದ ಕಿತ್ತಿಹಾಕಿ ಮುಸ್ತಫಾಖಾನ ಇರದಸ್ತಾನೀ ಎಂಬವನಿಗೆ ವಕೀಲ ಪದವಿಯನ್ನು ನೀಡಿದ್ದು :*

ಕೆಲವು ದಿವಸಗಳ ಅನಂತರ ಹೊಸದಾಗಿ ಸಿದ್ಧತೆ ಮಾಡಿಕೊಂಡು ಮತ್ತೆ ಆ ಪ್ರದೇಶವನ್ನು ತೆಗೆದುಕೊಳ್ಳಲು ಸೈನ್ಯದೊಂದಿಗೆ ಹೊರಟನು. ಮೊದಲು ತೊರಗಲ್ಲದ ಕೋಟೆಯ ಮೇಲೆ. ಆ ಕೋಟೆಯ ಮಾಲಕನು ತನ್ನ ಧಣಿಯನ್ನು ಮರೆತು ಸೊಕ್ಕಿನಿಂದ ಇದ್ದನು. ಆ ಕೋಟೆಯನ್ನು ತುಸುವೆ ದಿನಗಳಲ್ಲಿ ತೆಗೆದುಕೊಂಡು, ಗೆಲುವು ಸಾಧಿಸಿ ಕೋಟೆಯ ಅಪ್ರಾಮಾಣಿಕ ಮಾಲಕನ ಪಾರುಪತ್ಯವನ್ನು ಮಾಡಿದರು. ಅಲ್ಲಿಂದ ಧಾರವಾಡದ ಕೋಟೆಯ ಕಡೆಗೆ ಥಾಲನ್ನು ತಿರುವುತ್ತ, ಆ ಕೋಟೆಯನ್ನು ಕೆಲವು ತಿಂಗಳುಗಳಲ್ಲಿ ಹಸ್ತಗತ ಮಾಡಿಕೊಂಡರು. ಈ ಪ್ರಕರಣದಲ್ಲಿ ಶಾಹ ಅಬದುಲ್ ಹಸನನು ಬಹಳ ವ್ಯತ್ಯಯ ಮಾಡಿದ್ದರಿಂದ ಆತನನ್ನು ವಕೀಲಿ ಪದವಿಯಿಂದ ತೆಗೆದು ಹಾಕಿ ಮುಸ್ತಫಾಖಾನನನ್ನು ಮುಖ್ಯ ವಕೀಲನನ್ನಾಗಿ ಮಾಡಲಾಯಿತು ಆತನಿಗೆ 'ವಕೀಲುಲ್‌ಸಲತನತ್' ಎಂಬ ಪದವಿಯನ್ನು ನೀಡಲಾಯಿತು. ಆತನ ಹೆಸರು ಸಯ್ಯದ

ಕಮಾಲುದ್ದೀನ ಹುಸೇನ ಎಂಬುದಾಗಿತ್ತು. ಕಮಾಲುದ್ದೀನನು ತನ್ನ ದೇಶದಿಂದ ಬಂದು ಕುತುಬಶಾಹನ ರಾಜಧಾನಿಯಲ್ಲಿ ನೆಲೆಯೂರಿದ್ದನು. ತನ್ನ ಯೋಗ್ಯತೆಯಿಂದಾಗಿ ಅಲ್ಲಿಯೇ 'ಮುಸ್ತಫಾಖಾನ' ಎಂಬ ಹೆಸರನ್ನು ಗಳಿಸಿದ್ದನು. ಮತ್ತು ಅಲ್ಲಿಯೂ 'ವಕೀಲುಲ್‌ಸಲತನತ್'ನಾಗಿದ್ದನು. ಬಹಳ ದಿನ ಅಲ್ಲಿಯೆ ಉಳಿದು ಪ್ರಾಮಾಣಿಕತನದಿಂದ ಕೆಲಸ ಮಾಡುತ್ತ ಸತ್ಕೀರ್ತಿಗೆ ಪಾತ್ರನಾಗಿದ್ದನು. ರಾಮರಾಜನು ಸತ್ತ ಅನಂತರ ಕುತುಬಶಾಹನಿಂದ ನಿರೋಪ ಪಡೆದು ಬಂದು ಆದಿಲಶಹನಲ್ಲಿ ಕೆಲಸಕ್ಕಿದ್ದನು. ಸಾವಾಕಾಶವಾಗಿ ಮೇಲೇರುತ್ತ ಮೊದಲು ರಾಜಧಾನಿಯು 'ಮುಲ್ಕೀ' (ನಾಗರಿಕ) ಮುಖ್ಯಸ್ಥನಾದನು. ಆತನ ಯೋಗ್ಯ ಪ್ರಯತ್ನದಿಂದಾಗಿ ವಿಜಾಪುರ ನಗರದ ವೈಭವವೂ ದಿನದಿಂದ ದಿನಕ್ಕೆ ಅಧಿಕವಾಗುತ್ತಿತ್ತು. ಕರ್ನಾಟಕದ ಸಮಸ್ತ ಗರ್ವಿಷ್ಠ ಜನರನ್ನು ಹತ್ತಿಕ್ಕಿ ತನ್ನ ಯುಕ್ತಿಯಿಂದ ಅವರನ್ನೆಲ್ಲ ತನ್ನ ಅಂಕಿತದಲ್ಲಿಟ್ಟುಕೊಂಡನು. ಕರ್ನಾಟಕದ ಬಹುತೇಕ ಪ್ರದೇಶ ಹಾಗು ನಗರ ಪಟ್ಟಣಗಳು ಆದಿಲಶಾಹಿ ರಾಜ್ಯದಲ್ಲಿ ಸೇರಿ ಆದಿಲಶಾಹಿ ರಾಜ್ಯವನ್ನು ವಿಸ್ತಾರ ಮಾಡಿದನು.

### *೨೨. ಬಂಕಾಪುರದ ಕೋಟೆಯ ಗೆಲುವು :*

ಧಾರವಾಡದ ಗೆಲುವಿನಿಂದ ಮತ್ತೆ ಅವಕಾಶ ಮಾಡಿಕೊಂಡರು. ಧಾರವಾಡ ಕೋಟೆಯ ಕೈವಶವಾದಂದಿನಿಂದ ಆದಿಲಶಹನ ಮನಸ್ಸು ಸ್ವಸ್ಥವಾಗಿತ್ತು. ಅನಂತರ ಮುಸ್ತಫಾಖಾನ ಇರದಸ್ತಾನಿಯು ಬಂಕಾಪುರದ ಕೋಟೆಯನ್ನು ಸ್ವಾಧೀನ ಪಡಿಸಿಕೊಳ್ಳಲು ಸೈನ್ಯವನ್ನು ತೆಗೆದುಕೊಂಡು ಹೊರಟನು. ಆ ಕೋಟೆಯ ಮೇಲೆ ಹಲ್ಲೆ ಮಾಡಿದನು. ಆ ಕೋಟೆಯ ಮುಖ್ಯಸ್ಥನು (ಕಿಲ್ಲೇದಾರ) ರಾಮರಾಜನ 'ತಾಂಬೂಲದಾರ' ಎಂದರೆ ವೀಳ್ಯ ಪಡೆಯುವ ಹೆಸರಾಂತ ರಾಜನಾಗಿದ್ದನು. ಆತನು ರಾಮರಾಜ ಸತ್ತ ನಂತರ ಆ ಕೋಟೆಯನ್ನು ಹಾಗೂ ಬಂಕಾಪುರ ಕೋಟೆಯ ಅಧೀನದಲ್ಲಿದ್ದ ಒಟ್ಟಾರೆ ಪ್ರದೇಶವನ್ನು ಹಸ್ತಗತ ಮಾಡಿಕೊಂಡು ತಾನೆಯೆ ಮಾಲಕನಾಗಿದ್ದನು. ತನ್ನನ್ನು ಯಾರೂ ಕೇಳುವುದಿಲ್ಲ ಎಂದುಕೊಂಡಿದ್ದನು. ತನ್ನ ಪ್ರದೇಶದ ಧಣಿಯ ನೌಕರಿಯನ್ನು ಮಾಡುತ್ತಿರಲಿಲ್ಲ. ಆಗ ಮುಸಲಮಾನ ಸೈನ್ಯವು ಆ ಕೋಟೆಯನ್ನು ತೆಗೆದುಕೊಳ್ಳಲು ಬಂದು ಮುಟ್ಟಿತ್ತು. ಅದರಿಂದ ಆತನು ತನ್ನ ಮಗನೊಂದಿಗೆ ಒಂದು ಸಾವಿರ ಶಸ್ತ್ರಧಾರಿ ಕಾಲ್ದಳದೊಂದಿಗೆ ಕೋಟೆಯನ್ನು ಸಂರಕ್ಷಿಸಲು ಹೊರಗೆ ಇಟ್ಟನು. ತಾನು ಸಾಕಷ್ಟು ಸಂಗ್ರಹದೊಂದಿಗೆ ಒಳಗಿದ್ದನು. ಆತನ ಮಗನು ಕೋಟೆಯ ಬದಿಯ ದಟ್ಟ ಅರಣ್ಯದಲ್ಲಿ ಕಲ್ಲು-ಮುಳ್ಳುಗಳು, ಎತ್ತರವಾದ ವೃಕ್ಷಗಳ ಆಶ್ರಯದಲ್ಲಿದ್ದುಕೊಂಡು ಮುಸಲಮಾನ ಸೈನ್ಯದ ಮೇಲೆ ಹಲ್ಲೆ ಮಾಡತೊಡಗಿದನು. ಎಡ-ಬಲಗಳ ಕಡೆಯಿಂದ ಮುಸಲಮಾನರ ಸೈನ್ಯದಲ್ಲಿಯ ಜನರನ್ನು ಬಂಧಿಸತೊಡಗಿದನು. ಕೊಲ್ಲತೊಡಗಿದನು. ಮುಸಲ್ಮಾನ ಸೈನ್ಯಕ್ಕೆ ಯಾವುದೇ ತರದ ಆಹಾರ ಧಾನ್ಯ ಕಿರುಕುಳ ಪದಾರ್ಥಗಳು ದೊರೆಯದಂತೆ ಮತ್ತು ಅವುಗಳನ್ನು ವಸೂಲು ಮಾಡದಂತೆ ವ್ಯವಸ್ಥೆ ಮಾಡಿದನು.

ಕೋಟೆಯ ಮಾಲಿಕನು, ಪಿಳಗುಂಡಿಯ (ಪೆನುಗೊಂಡ) ಮಾಲಕನಿಗೆ ಪತ್ರ ಬರೆದನು. ಪಿಳಗುಂಡಿಯ ಮಾಲಕನು ರಾಮರಾಜನ ಸಹೋದರನಾಗಿದ್ದು ಆತನು ರಾಮರಾಜನ ಸ್ಥಳವನ್ನು ತಾನೆ ಪಡೆದುಕೊಂಡು ಆಳುತ್ತಿದ್ದನು. ಪಿಲಗುಂಡಿಯನ್ನೆ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಆತನಿಗೆ ಬರೆದ ವಿನಂತಿ ಪತ್ರದಲ್ಲಿ 'ನಾನು ಪುರಾತನ ಸೇವಕನಿದ್ದು ತಾವೆ ನನ್ನನ್ನು ಪೋಷಿಸಿದ್ದೀರಿ. ಆದರೂ ಈಗಿನವರೆಗೆ ನಾನು ಗರ್ವಿಷ್ಟನಾಗಿ- ಸೊಕ್ಕಿನಿಂದ ಇದ್ದೆನು. ಈಗ ನಾನು ನನ್ನ ಅಪರಾಧವನ್ನು ಒಪ್ಪಿಕೊಳ್ಳುವೆನು. ನನ್ನ ಸೊಕ್ಕಿನ ಅರಿವಾಗಿದೆ. ಇಂದಿನವರೆಗೆ ತಮ್ಮೊಂದಿಗೆ ನಡೆದ ಅಮಾರ್ಗವನ್ನು

ತೊರೆದು ಪ್ರತಿಜ್ಞೆ ಮಾಡುವೆ ಇನ್ನು ಮುಂದೆ, ಇಂದಿನಿಂದ ತಮ್ಮ ಸೇವೆಯನ್ನೆ ಮಾಡುತ್ತ ಇರುವೆ. ತಮ್ಮ ಆಜ್ಞೆಯನ್ನು ಎಂದೂ ಮೀರದೆ, ತಮ್ಮ ಸೇವೆಯಲ್ಲೆ ಮಗ್ನನಾಗುವೆ. ನನ್ನ ತಪ್ಪನ್ನು ಕ್ಷಮೆ ಮಾಡಿ. ಈ ಸಮಯದಲ್ಲಿ ತಾವು ಸೈನ್ಯದೊಂದಿಗೆ ಇತ್ತ ಬರುವುದರಲ್ಲಿ ಅನುಮಾನ ಮಾಡಬೇಡಿರಿ. ತಮ್ಮ ಅಧೀನದ ಎಲ್ಲ ಪಾಳೆಯಗಾರರಿಗೂ ಆಜ್ಞಾಪತ್ರವನ್ನು ಕಳಿಸಿರಿ. ಅವರಾದರೂ ಎಲ್ಲರೂ ಬಂದು ಈ ಸೇವಕನಿಗೆ ಸಹಾಯಮಾಡಿ ಮುಸಲಮಾನರ ಸೈನ್ಯವನ್ನು ಈ ಪ್ರದೇಶದಿಂದ ಹೊರಗೆ ಹಾಕಲಿ. ಇಲ್ಲವಾದಲ್ಲಿ ಹತ್ತಿದ ಬೆಂಕಿ ನಾಲ್ಕು ಕಡೆಗೂ ಪಸರಿಸುತ್ತದೆ. ಈ ಮುಸಲ್ಮಾನ ಜನರು ಹೀಗೆಯೇ ಸಾವಕಾಶವಾಗಿ ಎಲ್ಲ ಪ್ರದೇಶಗಳನ್ನೂ ತೆಗೆದುಕೊಳ್ಳುತ್ತಾರೆ' ಎಂದು ವಿನಂತಿ ಪತ್ರವನ್ನು ಬರೆದನು. ಅದಕ್ಕೆ ಪ್ರತಿಯಾಗಿ ಪಿಲಗುಂಡಿಯ ಖಾವಂದರು ಅಂದರೆ ರಾಮರಾಜನ ಸಹೋದರನು ಅತ್ಯಂತ ಕ್ರುದ್ಧನಾಗಿ ಆ ವಿನಂತಿ ಪತ್ರದ ಉತ್ತರವನ್ನು ಕ್ರೋಧಮಿಶ್ರಿತವಾಗಿಯೆ ಬರೆದನು. 'ನೀನು ಮೊದಲು ಅಪ್ರಾಮಾಣಿಕನಿದ್ದು ಕೃತಘ್ನತೆಯನ್ನು ಮಾಡಿರುವಿ. ಗರ್ವದಿಂದ ನಡೆದು ಸೊಕ್ಕು ತೋರಿಸಿರುವಿ. ಅದರಿಂದಾಗಿ ನಿನ್ನ ದುರ್ಗುಣಗಳನ್ನು ಕಂಡು ಉಳಿದ ಎಷ್ಟೋ ಜನರು ಕೂಡ ಕೃತಘ್ನರಾದರು. ಹೀಗಾಗಿ ಎಲ್ಲ ಕೃತಘ್ನ ಸರದಾರರು ಇಲ್ಲಿಯ ಸೇವೆಯನ್ನು ನಿಲ್ಲಿಸಿದ್ದಾರೆ, ಆಜ್ಞೆಗಳನ್ನು ಮನ್ನಿಸುತ್ತಿಲ್ಲ. ಹೀಗಿದ್ದಾಗಲೂ ಅಲ್ಲಲ್ಲಿಯ ಸರದಾರರಿಗೆ ಆಜ್ಞಾಪತ್ರಗಳನ್ನ ಕಳಿಸುತ್ತ, ನಿನ್ನ ಹತ್ತಿರ ಹೋಗಿ ಕೋಟೆಯನ್ನು ರಕ್ಷಿಸಲು ತಿಳಿಸಿದ್ದೇವೆ. ನಿಮ್ಮ ಯುದ್ಧ ಪರಾಕ್ರಮದಿಂದ ಕೋಟೆಯು ಮುಸಲಮಾನರ ಕೈಗೆ ಸಿಗದಂತೆ ಮಾಡಿರಿ' ಎಂದು ತಿಳಿಸಿದನು.

ಅದರಂತೆ, ತರಫ-ತರಫದಲ್ಲಿಯ ಅಮೀರ ಜನರು, ಪಾಳೆಯಗಾರರು ಪಿಲಗುಂಡಿಯ ಮಾಲಕನ ಆಜ್ಞಾಪತ್ರದಂತೆ ಮುಸಲಮಾನ ಸೈನ್ಯದ ಮೇಲೆ ತಮ್ಮ ಸೈನ್ಯವನ್ನು ತೆಗೆದುಕೊಂಡು ಹೋಗಿ ಗದ್ದಲ ಹಾಕಹತ್ತಿದರು. ಜನರು ಹೋಗ-ಬರುವ ದಾರಿಯನ್ನು, ವಸೂಲಿಯನ್ನು ಮತ್ತು ತಿನ್ನುಣ್ಣುವ ಪದಾರ್ಥಗಳು ಸಿಗದಂತೆ ಮಾಡಿದರು. ಎಡ-ಬಲಗಳ ಕಡೆಯಿಂದ ಮುಸಲ್ಮಾನ ಸೈನ್ಯದ ಮೇಲೆ ಏರಿ ಹೋಗಿ ಆ ಜನರನ್ನು ಕೊಲ್ಲಹತ್ತಿದರು. ಕಿವಿ, ಮೂಗುಗಳನ್ನು ಕತ್ತರಿಸ ಹತ್ತಿದರು. ರಾತ್ರಿ ಸಮಯದಲ್ಲಿ ಮುಸಲ್ಮಾನ ದಂಡಿನಲ್ಲಿ ಚೋರರಂತೆ ಬಂದು ಸುಲಿಗೆ ಮಾಡಹತ್ತಿದರು. ಕೈಗೆ ಸಿಕ್ಕಿದ್ದನ್ನು ಲೂಟಿ ಮಾಡಿಕೊಂಡು ಹೋಗ ಹತ್ತಿದರು. ಆಗ ಮುಸಲ್ಮಾನ ಜನರ ಸೈನ್ಯವು ಈ ಹಿಂದುಗಳ ಉಪದ್ರವದಿಂದ, ಹಲ್ಲೆಯಿಂದ, ತಿನ್ನುಣಲು ಪದಾರ್ಥಗಳು ಸಿಗದೆ ಭಾರೀ ಸಂಕಷ್ಟವನ್ನು ಅನುಭವಿಸಿ, ಅವರ ಪ್ರಾಣಕ್ಕೆಯೆ ಕುತ್ತು ಬಂದಿತು. ಸೈನಿಕರು ತಿರುಗಿ ಹೋಗುವ ವಿಚಾರ ಮಾಡಹತ್ತಿದರು. ಅಂಥ ಸಮಯದಲ್ಲಿ ಮುಸ್ತಫಾಖಾನನು ತನ್ನ ಸೈನ್ಯಕ್ಕೆ ಧೈರ್ಯವನ್ನು ನೀಡಿ ಭರವಸೆಯ ಆಧಾರವನ್ನು ನೀಡಿದನು.

ತಾನು ಪೂರ್ಣಪ್ರಮಾಣದ ಒಂದು ಯೋಜನೆಯನ್ನು ಮನಸ್ಸಿನಲ್ಲಿ ಹಾಕಿದನು. ಅದಕ್ಕನುಗುಣವಾಗಿ ಆರುಸಾವಿರ ಹಿಂದು ಸರದಾರರ ಸ್ವಾರರನ್ನು ಕೂಡಿಸಿದನು. ಅವರು ಮೊದಲು ವೈರಭಾವವನ್ನು ಹೊಂದಿದವರು. 'ಜಂಗೆಗುರಿಜೀ' ಅಂದರೆ ಮತ್ತೆ ಮತ್ತೆ ಬಂದು ಹಲ್ಲೆ ಮಾಡುವ ಕಲೆ, ಇಂಥ ಯುದ್ಧದಲ್ಲಿ ಮುಸಲಮಾನ ಜನರಿಗಿಂತ ಅಧಿಕ ಶೂರರಾಗಿದ್ದರು, ಅಂಥ ಆ ಆರು ಸಾವಿರ ಸವಾರರಿಗೆ ಬಹಳಷ್ಟು ದ್ರವ್ಯವನ್ನು ಮತ್ತು ವಸ್ತ್ರಾದಿ ಬಹುಮಾನಗಳನ್ನು ಕೊಟ್ಟು ಸಂತೋಷ ಪಡಿಸಿ, ಅವರನ್ನು ತನ್ನ ನೌಕರಿಯಲ್ಲಿ ಇಟ್ಟುಕೊಂಡಿದ್ದನು. ಹಿಂದು ಸೈನ್ಯದ ವಿರುದ್ಧವಾಗಿ ಇವರನ್ನು ನಿಯಮಿಸಿದನು. ಬೇರೆಯವರು ಮುಸಲ್ಮಾನ ಸೈನ್ಯದ ಮೇಲೆ ಏರಿ ಬಂದರೆ. ನೀವು ಅವರನ್ನು ಎದುರಿಸಿ ನಮಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು.

ಅಲ್ಲದೆ ಸ್ಥಳೀಯ ವಸೂಲಿಯನ್ನು ಹಾಗೂ ಖಾದ್ಯ ಪದಾರ್ಥಗಳನ್ನು ಬಹಳ ಸಾವಧಾನದಿಂದ- ವ್ಯವಸ್ಥಿತವಾಗಿ ನಮ್ಮ ಸೈನ್ಯಕ್ಕೆ ತಂದು ಮುಟ್ಟಿಸಬೇಕು' ಎಂದು ಅವರಿಗೆ ಹೇಳಲಾಯಿತು. ಇನ್ನು ಎಂಟು ಸಾವಿರ ಶಸ್ತ್ರಧಾರಿ, ತರುಣ ಹಾಗು ಧೈರ್ಯವುಳ್ಳ ಹಿಂದು ಸೈನಿಕರ ಸೈನ್ಯವನ್ನು ಕೋಟೆಯ ಸುತ್ತಲೂ ನಿಯಮಿಸಿದರು. ಅವರಿಗೆ ಕಟ್ಟು ನಿಟ್ಟಿನ ಆಜ್ಞೆ ಮಾಡಿ ರಾತ್ರಿ ಕೂಡ ಕಣ್ಣಿಗೆ ಕಣ್ಣು ಹಚ್ಚದೆ ಪಹರೆಯನ್ನು ಮಾಡಬೇಕು. ಒಬ್ಬ ಮನುಷ್ಯನನ್ನು ಕೂಡ ನಮ್ಮ ಸೈನ್ಯದಲ್ಲಿ ಬರದಂತೆ ನೋಡಿಕೊಳ್ಳಬೇಕು. ಖಾದ್ಯ ಪೇಯ ಪದಾರ್ಥಗಳು ಕೋಟೆಯ ಒಳಗಡೆಗೆ ಹೋಗದಂತೆ ಎಚ್ಚರವಹಿಸಬೇಕು. ಹೀಗೆ ವ್ಯವಸ್ಥೆಯಾದ ಅನಂತರ ಆ ಕಳ್ಳರ ಕಾಟ ಹಾಗೂ ಸುಲಿಗೆ ನಿಂತಿತು. ದಂಡಿಗೆ ಬೇಕಾಗುವಷ್ಟು ಧಾನ್ಯ ಸಂಗ್ರಹ ಖಾದ್ಯ ಪೇಯಗಳು ನಿರ್ಭಯವಾಗಿ ಬಂದು ಮುಟ್ಟ ಹತ್ತಿದುವು. ಹೌಹಾರಿದ ಮುಸಲಮಾನರ ಸೈನ್ಯಕ್ಕೆ ಮರಳಿ ಜೀವ ಬಂದಂತಾಯಿತು. ಭರವಸೆ ಹುಟ್ಟಹತ್ತಿತ್ತು, ಸಂತೋಷಪಟ್ಟರು. ಮತ್ತೆ ದೊಡ್ಡ ಧಿಮಾಕಿನಿಂದ ಕೋಟೆಯ ಮೇಲೆ ಹಲ್ಲೆ ಮಾಡತೊಡಗಿದರು. ಈಗ ಕೋಟೆಯ ಒಳಗಿದ್ದವರ ಮೇಲೆ ದೊಡ್ಡ ಸಂಕಟವನ್ನು ತಂದರು. ಕೋಟೆಯ ಒಳಗಿದ್ದ ಧಾನ್ಯ ಸಂಗ್ರಹ, ಖಾದ್ಯ ಪೇಯಗಳೂ ಮುಗಿಯಹತ್ತಿದುವು. ಬೇರೆ ಬೇರೆ ಭಾಗಗಳಿಂದ ಸಹಾಯಕ್ಕೆಂದು ಬಂದ ಅಮೀರ ಜನರು ತೊಂದರೆಗೀಡಾಗಿ ತಿರುಗಿ ಹೋಗಹತ್ತಿದರು. ಆಗ ಕೋಟೆಯ ಮಾಲಿಕನು ನಿರುಪಾಯನಾಗಿ ಒಪ್ಪಂದಕ್ಕೆ ಮುಂದಾದನು. 'ನನ್ನ ಜೀವ ಉಳಿಸಿರಿ, ನನ್ನನ್ನು ಕೊಲ್ಲಬೇಡಿರಿ; ನನ್ನ ಜೀವವನ್ನು ಹೊಡಿಯಬೇಡಿರಿ, ಪ್ರಾಣದಾನವನ್ನು ನೀಡಿರಿ' ಎಂಬೆಲ್ಲ ಅಭಯಗಳನ್ನು ಬೇಡಿ ಕೋಟೆಯನ್ನು ಅವರ ವಶಕ್ಕೆ ಕೊಟ್ಟನು. ತಾನು ಕೋಟೆಯನ್ನು ಬಿಟ್ಟು ಹೊರಗೆ ಹೋದನು.

ಆಗ ಆದಿಲಶಹ ಹಾಗೂ ಮುಸ್ತಫಾಖಾನರು ಅಲ್ಲಾನು ದೊರಕಿಸಿಕೊಟ್ಟ ಯಶಕ್ಕಾಗಿ ಅವನನ್ನು ಸ್ತುತಿಸಿದರು. ನಮಸ್ಕರಿಸಿದರು. ಅದೇ ದಿನ ಕೋಟೆಯ ಮೇಲೆ ಹತ್ತಿದರು. ಹೋಗುತ್ತಲೇ ಮೊದಲು ಆ ಕೋಟೆಯ ಮೇಲಿದ್ದ ದೊಡ್ಡ ದೇವಾಲಯ ಬಹಳ ವರುಷಗಳಿಂದ ಆ ದೇವರ ಸೇವೆ, ಪೂಜೆ, ನೈವೇದ್ಯಗಳು ನಡೆಯುತ್ತಿದ್ದುವು, ಆ ದೇವಾಲಯವು ಅಲ್ಲಿಯ ಸುತ್ತಮುತ್ತಲಿನ ಗ್ರಾಮಗಳಲ್ಲೂ ಪ್ರದೇಶದಲ್ಲೂ ಪ್ರಸಿದ್ಧವಾಗಿತ್ತು. ಆ ದೇವಾಲಯವನ್ನು ಕೆಡವಿ ನೆಲಸಮ ಮಾಡಲು ಆಜ್ಞೆ ಮಾಡಲಾಯಿತು. ಆ ಸ್ಥಳದಲ್ಲಿ ದೊಡ್ಡ ಮಸೀದಿಯನ್ನು ಕಟ್ಟಿದರು. ಮೊದಲು ಬಾದಶಹ ಸ್ವತಃ ಧರ್ಮನೀತಿಯನ್ನು ಬಲ್ಲವನು. ಅವನ ದಿವಾಣನೂ ಜಾಣ. ಆದ್ದರಿಂದ ಕೋಟೆಯಲ್ಲಿ ಮಸೀದಿಯನ್ನು ಕಟ್ಟುವಾಗ ಪರಲೋಕದಲ್ಲಿ ಉತ್ತಮ ಪ್ರಾಪ್ತಿಗಾಗಿ ಮಸೀದಿಯ ಶಂಕುಸ್ಥಾಪನೆಯನ್ನು ಮಾಡಿದರು. ಥರದಲ್ಲಿ ಆದಿಲಶಹನು ತನ್ನ ಹಸ್ತಗಳಿಂದ ಮೊದಲು ಎರಡು ಕಲ್ಲುಗಳನ್ನಿಟ್ಟನು. ನಂತರ ಥರವನ್ನು ತುಂಬಿದರು. ಮತ್ತು ಮಸೀದಿಯನ್ನು ಕಟ್ಟಿದರು. ಖತೀಬರು ಮತ್ತು ಮವಜನರು ಅಂದರೆ 'ಬಾಂಗ' ಕೊಡುವ ಫಕೀರರು ಮತ್ತು ಇಮಾಮರನ್ನು ಆ ಮಸೀದಿಗೆ ನಿಯಮಿಸಲಾಯಿತು. ನಮಾಜ ಮಾಡುವುದು, ಬಾಂಗ ಕೊಡುವುದು ಇತ್ಯಾದಿ ಮುಸಲಮಾನ ಧರ್ಮದ ರೀತಿ ರಿವಾಜುಗಳು ಪ್ರಾರಂಭವಾದುವು. ಈ ಕೆಲಸವನ್ನು ಮುಸ್ತಫಾಖಾನ ಇರದಸ್ತಾನಿಯು ತುಂಬ ಶ್ರದ್ಧೆಯಿಂದ ಮಾಡಿ ಮುಗಿಸಿದನು. ಆದ್ದರಿಂದ ಆದಿಲಶಹನು ಅವನ ಮೇಲೆ ಕೃಪೆ ತೋರಿ, ಅನುಗ್ರಹ ಮಾಡಿದನು ಆತನ ಕೀರ್ತಿ ದಿನದಿಂದ ದಿನಕ್ಕೆ ಪ್ರವರ್ಧಮಾನವಾಗಿ ಗೌರವಾನ್ವಿತನಾದನು. ಮುಸ್ತಫಾಖಾನನ ಕೀರ್ತಿ ಹಾಗು ಅಧಿಕಾರಗಳು ತುಂಬ ಮೇಲೆ ಏರಿದುವು. ಎಲ್ಲಿಯವರೆಗೆ ಆತನ ಅಧಿಕಾರ ಬೆಳೆಯಿತೆಂದರೆ, ಆದಿಲಶಹನು ತನ್ನ ಬೆರಳಿನಲ್ಲಿ ಧರಿಸುತ್ತಿದ್ದ 'ಮೋಹರ'ನ್ನು ಕೂಡ ಆತನಿಗೆ ಕೊಟ್ಟನು. ಮತ್ತು ಮುಸ್ತಫಾಖಾನನಿಗೆ ಆದೇಶ ನೀಡಿ. 'ಮುಲ್ಕೀ ಹಾಗು ಮಾಲಿ ಎಲ್ಲ ಕೆಲಸಗಳಲ್ಲೂ

ನಿನಗೆ ಸರಿಕಂಡದ್ದನ್ನು ಮಾಡಲು ಕಾಗದದಲ್ಲಿ ಸಹಿ ಹಾಕಲು ಮೊಹರನ್ನು ಕೊಟ್ಟಿರುವೆ' ಎಂದು ಹೇಳಿದನು. 'ಮತ್ತೆ ನಮ್ಮ ಆಜ್ಞೆಯ ಅಪೇಕ್ಷೆಯನ್ನು ಮಾಡಬಾರದು' ಎಂದು ಹೇಳಿ ಸಂತೋಷದಲ್ಲಿ ಬಾದಶಹನು ಮಗ್ನನಾದನು. ಮುಸ್ತಫಾಖಾನನಿಗೆ ಇನ್ನಷ್ಟು ಸೈನ್ಯವನ್ನು ಕೊಟ್ಟು ಉಳಿದ ಕೋಟೆಗಳನ್ನು ಹಾಗೂ ದೊಡ್ಡ-ದೊಡ್ಡ ಸ್ಥಳಗಳನ್ನು ಅಂದರೆ ರಾಮರಾಜನ ಕಡೆಯ ಅಮೀರ ಜನರು (ಪಾಳೆಯಗಾರರು) ಅಲ್ಲಲ್ಲಿ ಕೋಟೆಗಳನ್ನು ಕಟ್ಟಿಕೊಂಡು ಪ್ರದೇಶಗಳನ್ನು ಕೈವಶಮಾಡಿಕೊಂಡು ತಾವೇ ರಾಜರಾಗಿ ಯಾರ ಒಡೆತನವನ್ನೂ ಒಪ್ಪದೆ ಇರುವ ಕೋಟೆಗಳನ್ನು, ಗ್ರಾಮ ಪಟ್ಟಣಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಅವನನ್ನು ಕಳಿಸಿದನು.

ಮುಸ್ತಫಾಖಾನನು 'ಕುಫರಸ್ಥಾನ' ದಲ್ಲಿಯ ಅಂದರೆ ಹಿಂದು ಜನರ ಪ್ರದೇಶಗಳಲ್ಲಿಯ ಒಂದೊಂದಾಗಿ ಕೋಟೆಗಳನ್ನು, ಗ್ರಾಮಗಳನ್ನು ಹಾಗು ಆ ಕಡೆಯ ಪಾಳೆಯಗಾರರ ವಶದಲ್ಲಿದ್ದವುಗಳನ್ನೆಲ್ಲ ಸಾವಕಾಶವಾಗಿ ಬಿಡಿಸಿಕೊಳ್ಳುತ್ತ ಕೈವಶಮಾಡಿಕೊಂಡನು. ಅಲ್ಲಿ ಮುಸಲ್ಮಾನಿ ಧ್ವಜವನ್ನು ನೆಟ್ಟನು. ಹಳೆಯ ದೇವಾಲಯಗಳನ್ನು ಬಹಳಷ್ಟು ಕೆಡವಿದನು. ಆ ಸ್ಥಳದಲ್ಲಿ ಮಸೀದಿಗಳನ್ನು ಕಟ್ಟಿದನು. ನಮಾಜ ಓದುವುದು, ಬಾಂಗ ಕೊಡುವುದು ಮತ್ತು ಮುಸಲ್ಮಾನಿ ಧರ್ಮದ ರೀತಿ ರಿವಾಜುಗಳನ್ನು ಪ್ರಾರಂಭಿಸಿದನು. ಹೀಗೂ ಹೇಳಲಾಗುತ್ತದೆ ಆ ವೇಳೆಯಲ್ಲಿ ಇನ್ನೂರು-ಮುನ್ನೂರು ದೇವಾಲಯಗಳನ್ನು ಕೆಡವಲಾಯಿತು. ನಾಲ್ಕೈದು ಸಾವಿರ ಕಂಚಿನ, ಕಲ್ಲಿನ ಬೆಳ್ಳಿಯ ಮತ್ತು ಬಂಗಾರದ ಮೂರ್ತಿಗಳನ್ನು ಒಡೆದರು. ಪರಲೋಕದಲ್ಲಿ ಸತ್ಕರ್ಮದ ಉತ್ತಮ ಫಲಪ್ರಾಪ್ತಿಗಾಗಿ ಅಲಿ ಆದಿಲಶಹನನ್ನು ತಾನೆ ಸ್ವತಃ ತನ್ನಕೈಯಿಂದ ಎಷ್ಟೋ ದೇವರ ವಿಗ್ರಹಗಳನ್ನು ಒಡೆದನು. 'ಮುಜಾಹಿದ್' ಎಂದರೆ ಯೋಧ್ಧಾ, ಯುದ್ಧ ಮಾಡುವವನು, 'ಗಾಜಿ' ಎಂದರೆ ಯುದ್ಧ ಪರಾಕ್ರಮದಿಂದ ಜಗತ್ತನ್ನು ಜಯಿಸುವವನು, ಎಂಬುದಾಗಿ ತನ್ನ ಹೆಸರುಗಳನ್ನು ಮುಜಾಹಿದ, ಗಾಜಿ ಎಂದು ಸೇರಿಸಿಕೊಂಡನು. ಅನಂತರ ಎಲ್ಲ ಪ್ರದೇಶವನ್ನು ಗೆದ್ದು ಕೈವಶಮಾಡಿಕೊಂಡ ಮುಸ್ತಫಾಖಾನನಿಗೆ ಜಹಗೀರನ್ನು ಹಾಕಿಕೊಟ್ಟನು. ತಾನು ಹಲವು ದಿನಗಳವರೆಗೆ ಅಲ್ಲಿದ್ದು ಮೂರುವರುಷಗಳ ಅನಂತರ ವೈಭವದಿಂದ ತನ್ನ ರಾಜಧಾನಿ ವಿಜಾಪುರಕ್ಕೆ ಬಂದನು. 'ಮನಸಬೆವಕಾಲತ' ಎಂದರೆ ವಕೀಲಿ ಪದ, 'ಆಮಿರೆ ಜುಮಲಗೀ' ಎಂದರೆ ಅಮೀರರ ಮುಖ್ಯಸ್ಥ. ಈ ಪದವಿಗಳನ್ನು ಇನಾಯತ್‌ಉಲ್ ರಬಾದಿಜಾ ಮಕಸುದ ಶಿರಾಜಿ ಉರ್ಫ ಅಫಜಲ್‌ಖಾನನಿಗೆ ಕೊಡಲಾಯಿತು.

### ೨೩ *ಅಫಜಲಖಾನ ಶಿರಾಜಿಯ ತುಸು ವರ್ಣನೆ :*

ಅಫಜಲಖಾನನ ತಂದೆ ಪರ್ಶಿಯ ದೇಶದ ಅಮಲದಾರರಲ್ಲೊಬ್ಬನಾಗಿದ್ದನು. ಒಳ್ಳೆಯ ಮನುಷ್ಯ. ಶಿರಾಜ ನಗರದ ಒಡೆಯ, ಅಧಿಕಾರಿಗಳು ಹಾಗೂ ದೊಡ್ಡ ದೊಡ್ಡ ಮನುಷ್ಯರು ಅಫಜಲಖಾನನ ತಂದೆಯನ್ನು ಕೇಳಿಯೇ ಮಾಡುತ್ತಿದ್ದರು. ಆ ಸಮಯದಲ್ಲಿ ಅಫಜಲಖಾನನು ಎಂಟು ವರುಷದವನಿದ್ದನು. ಆಗಲೇ ಅವನ ತಂದೆ ತೀರಿಕೊಂಡದ್ದು. ಅಫಜಲಖಾನನಿಗೆ ಕಲಿಯುವ ಆಸೆ ಬಹಳಿತ್ತು. ವಿದ್ಯೆಯನ್ನು ಕಲಿಯುವ ಪ್ರಯತ್ನ ಮಾಡಿದನು. ಆ ಸಮಯದ ಬಹುದೊಡ್ಡ ವಿದ್ವಾಂಸ, ಆತನ ಸಮ ಮತ್ತಾರೂ ಇಲ್ಲದಂಥ ಅದ್ವಿತೀಯ ಪಂಡಿತ 'ಫತಹಲ್ಲಾಹ ಶಿರಾಜ' ಇದ್ದನು. ಆತನ ಹತ್ತಿರ ಎರಡು ವರುಷ ವಿದ್ಯಾಭ್ಯಾಸದಲ್ಲಿ ಕಳೆದನು. ಇನ್ನು ಕೆಲವುದಿನಗಳಲ್ಲಿಯೆ ಸಂಪೂರ್ಣ ವಿದ್ಯಾಭ್ಯಾಸವನ್ನು ತೀರಿಸಿ ಉಳಿದೆಲ್ಲರಿಗಿಂತ ಮೇಲೆ ಬಂದು ಪೂರ್ಣ ಪ್ರಮಾಣದ ವಿದ್ವಾಂಸನಾದನು. ಕಾಲಚಕ್ರದ ಗತಿಯಲ್ಲಿ ಹೊಟ್ಟೆಗಾಗಿ ಜನ್ಮಭೂಮಿಯನ್ನು ಬಿಟ್ಟು ಹಿಂದುಸ್ಥಾನಕ್ಕೆ ಬಂದನು. ಅಲಿ ಆದಿಲ ಶಹನ ಕಾಲದಲ್ಲಿ

ವಿಜಾಪುರಕ್ಕೆ ಬಂದು ಇರಹತ್ತಿದನು. ಮತ್ತೆ ವಿಜಾಪುರದಲ್ಲಿಯೆ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದನು. ಇನ್ನು ಕೆಲವು ಜನರೂ ವಿದ್ಯಾಭ್ಯಾಸಕ್ಕಾಗಿ ಶಿರಾಜದಿಂದ ಇಲ್ಲಿಗೆ ಆತನ ಜೊತೆಗೆ ಬಂದಿದ್ದರು. ಇನ್ನು ಕೆಲವು ಜನ ದಕ್ಷಿಣದೇಶದವರು ಆತನ ಜೊತೆಗೆ ವಿದ್ಯಾಭ್ಯಾಸ ಕಲಿಯುತ್ತಿದ್ದರು. ಆಸ್ಥಾನದ ಅಧಿಕಾರಿಗಳಲ್ಲಿ ಅಫಜಲಖಾನನ ವಿದ್ಯೆಯ, ಬುದ್ಧಿಯ ಹಾಗೂ ಸಲ್ಲಕ್ಷಣಗಳ ಚರ್ಚೆಯಾಗಿ ಅಲಿ ಆದಿಲಶಹನ ಕಿವಿಗೂ ಮುಟ್ಟಿತು. ಬಹಳಷ್ಟು ವರ್ಣಿಸಿದರು. ಅಫಜಲಖಾನನ ಹೊಗಳಿಕೆಯಿಂದ ಬಾದಶಹನಿಗೆ ಆತನನ್ನು ತನ್ನ ಹತ್ತಿರವೇ ಇಟ್ಟುಕೊಳ್ಳಬೇಕೆಂಬ ಆಶೆಯಾಯಿತು. ಅಫಜಲಖಾನನನ್ನು ಕರೆಸಿ ಬಾದಶಹನೊಂದಿಗೆ ಭೆಟ್ಟಿ ಮಾಡಿಸಿದರು. ಆತ ಬಾದಶಹರಿಗೆ ತುಂಬ ಮನಸ್ಸಿಗೆ ಬಂದನು. ಸರಕಾರದಲ್ಲಿಯ ದೊಡ್ಡ ದೊಡ್ಡ ಅಧಿಕಾರಿಗಳ ಆಗ್ರಹದಿಂದ ಬಾದಶಹನಲ್ಲಿ ನೌಕರಿಯನ್ನು ಮಾಡಲು ಆತನೂ ಒಪ್ಪಿಕೊಂಡನು.

ಸರಕಾರೀ ಕಛೇರಿಯಲ್ಲಿ ಹುಜೂರು ಕೆಲಸಕ್ಕೆ ಹಾಜರಾದನು. ಆಸ್ಥಾನದ ಅಧಿಕಾರಿಗಳ ಪ್ರಮುಖನಾದನು. ಆತನ ಪ್ರಾಮುಖ್ಯತೆಯು ಆತನ ಅನುಭವವನ್ನು ಇನ್ನಷ್ಟು ವಿಸ್ತರಿಸಿತು. ಅದರಿಂದ ಮುಲ್ಕಿ ಹಾಗೂ ಮಾಲಿ ಕೆಲಸಗಳಲ್ಲಿ ಯಾವುದನ್ನು ಆತನ ಸಲಹೆ ಇಲ್ಲದೆ ಮಾಡದಂತಾಯಿತು. ಆತನ ಬುದ್ಧಿವಂತಿಕೆಯಿಂದಾಗಿ ಆತನ ಅಧಿಕಾರ ಹಾಗು ಪದವಿಗಳೂ ವೃದ್ಧಿಸತೊಡಗಿದುವು. ಕೊನೆಗೆ ಆತನು ಅಫಜಲಖಾನ 'ಅಮೀರ ಜುಮಲಗೀ' ಎಂದರೆ ಸಂಪೂರ್ಣ ಅಮೀರ ಜನರ (ಸರದಾರರ) ಪ್ರಮುಖನಾಗಿಯೂ ಹಾಗೂ 'ವಕೀಲುಲ್ ಸಲತನತ್' ಎಂದರೆ ಸರಕಾರದ ಮುಖ್ಯ ವಕೀಲನಾದನು. ಆತ ಸರಕಾರಿ ಕೆಲಸದಲ್ಲಿದ್ದಾಗಲೇ ಮೊದಲು ವಿದ್ವಾಂಸರನ್ನು, ಶಾಸ್ತ್ರ ಬಲ್ಲವರನ್ನು ಸೇರಿಸಿಕೊಂಡಿದ್ದನು. ಬುದ್ಧಿವಂತರನ್ನು, ತಿಳುವಳಿಕೆಯುಳ್ಳ ಜನರನ್ನು ನಿಯಮಿಸಿದ್ದನು. 'ಪ್ರದೇಶದ ವಸಾಹತು' ಎಂದರೆ ರೈತರ ಬಿತ್ತುವ ಭೂಮಿ ಇತ್ಯಾದಿಗಳಲ್ಲಿ ಉತ್ಕರ್ಷವನ್ನು ಮಾಡಿದ್ದನು. ಸೈನಿಕರು, ಶಿಪಾಯಿಗಳಿಗೆ ಮಾನಸಿಕವಾಗಿ ಖುಶಿಪಡಿಸಿ ಸಂತುಷ್ಟಗೊಳಿಸಿದ್ದನು. ದರಬಾರದಲ್ಲಿಯ ಕೆಲಸಗಾರ - ಕಾರಭಾರಿಗಳನ್ನೂ ತನ್ನ ಮಾತುಗಳಿಂದ ಹಿಡಿದಿಟ್ಟುಕೊಂಡು ತನ್ನ ಮಾತನ್ನೆ ಕೇಳುವ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದ್ದನು. ಯಾರೂ ಆತನ ಆದೇಶವಿಲ್ಲದೆ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಅಫಜಲಖಾನನು ಮೂರುನೂರು ಬ್ರಾಹ್ಮಣರನ್ನು ಹರಕಾರರೆಂದು, ಏಳುನೂರು ಜನ ಗುಪ್ತಚಾರರನ್ನಾಗಿಯೂ ನಿಯಮಿಸಿಕೊಂಡಿದ್ದನು. ಆ ಗುಪ್ತಚಾರರು ಆಂತರಿಕ ಹಾಗು ಬಾಹ್ಯ ದೇಶಗಳ ಎಲ್ಲ ಸುದ್ದಿಗಳನ್ನು ತಿಲಮಾತ್ರ ಸಂಶಯವಿರದಂತೆ ತಕ್ಷಣ ತಂದು ಮುಟ್ಟಿಸುತ್ತಿದ್ದರು. ಅಫಜಲಖಾನನು, ದೊಡ್ಡ ದೊಡ್ಡ ಕೆಲಸಗಳನ್ನು, ಇನ್ನಿತರ ಜವಾಬ್ದಾರಿಯುತ ಕೆಲಸಗಳನ್ನು ಬುದ್ಧಿವಂತ-ವಿದ್ವಾಂಸರ ಹೊರತು ಕೊಡುತ್ತಿರಲಿಲ್ಲ.

ಷಾಹ ಅಬದುಲ್ ಹಸನನು ಗರ್ವದಿಂದ ಅಭಿಮಾನದಿಂದ ಹಾಗೂ ಮೋಸಗಳಿಂದಾಗಿ ತನ್ನ ಬಂಧುವಿನೊಂದಿಗೆ ಬಂಧಿತನಾದನು. ಮುಸ್ತಫಾಖಾನ ಹಾಗೂ ಕಾಮಿಲ್‌ಖಾನ ಇಬ್ಬರೂ ದೊಡ್ಡ ಅಧಿಕಾರದ ಸಚಿವರಾಗಿದ್ದರು. ಅವರಿಗೆ ಸಚಿವಕೆಲಸದಲ್ಲಿ ಸ್ವಾತಂತ್ರ್ಯ ಕೊಟ್ಟು ಅವರು ತಂತಮ್ಮ ಜಹಗೀರುಗಳಲ್ಲಿ ಸುಖದಿಂದ ಇರುವಂತೆ ಮಾಡಿದ್ದನು. ಅವನೊಂದಿಗೆ ಕಿಂಚಿತ್ತೂ ವೈರಭಾವನೆ ಆದಿಲಶಹನ ಮನದಲ್ಲಿ ಬರುತ್ತಿರಲಿಲ್ಲ. ಮುರಾದಖಾನನಿಗೆ ಕೊಂಕಣ ಪ್ರದೇಶದ ಹವಾಲದಾರನನ್ನಾಗಿ ನಿಯಮಿಸಿದರು. ಆ ಪ್ರದೇಶವು ಪರ್ವತಗಳ ದಂಡೆಯಲ್ಲಿ ಬಹಳ ವಿಸ್ತೀರ್ಣವಾಗಿಯೂ, ಅಧಿಕ ಉತ್ಪನ್ನಗಳಿಂದ ಕೂಡಿತ್ತು, ಆ ಪ್ರದೇಶದ ಕಾಯಂ ಅಧಿಕಾರಿಯನ್ನಾಗಿ ಮಾಡಿದನು. ಮಾತಬ್ಬರಖಾನನು ಬಹಳ ದಿನ ಪೇಶವಾಯಿ (ದರಬಾರೀ ಕೆಲಸ) ಕೆಲಸ ಮಾಡಿದ್ದರಿಂದ ಆತನಿಗೆ 'ಸರನೋಬತ' ಪದವಿಯನ್ನು ನೀಡಿದನು. ಶೇಖ

ಸಲೀಮನಿಗೆ 'ಸರಖೇಲಿ' ಪದವಿಯನ್ನು ಕೊಟ್ಟಿದ್ದನು. ಶೇಖ ಸಲೀಮನೂ ದೊಡ್ಡ ವಿದ್ವಾಂಸ. ಬುದ್ಧಿವಂತ, ಶಿರಾಜಿಯಲ್ಲೆ ಅಭ್ಯಾಸ ಮಾಡಿದವನಾಗಿದ್ದನು. ಆದ್ದರಿಂದ 'ಮಾಲಿ' ಕೆಲಸ ಎಂದರೆ ಒಟ್ಟಾರೆ ಕೋಶಾಧಿಕಾರಿಯ ಮೇಲೆ ಹಾಗೂ ಸೈನ್ಯದ ವ್ಯವಸ್ಥೆ ಈ ಎರಡು ಕೆಲಸಗಳು ಆತನ ಕಡೆಗಿದ್ದುವು. ನಾಲ್ಕೂ ಕಡೆಯ ವಸೂಲು ಮಾಡುವ ಅಧಿಕಾರವನ್ನು ಲತೀಫಖಾನನಿಗೆ, ನಸಾಯಿ ಪ್ರದೇಶದವನು, ತುಂಬ ಚತುರನು ಕವಿತೆ ಬರೆಯುವವನೂ ಆಗಿದ್ದನು. ಕವಿತೆಯ ಕೊನೆಗೆ ತನ್ನ ಹೆಸರನ್ನ 'ವಸಲಿ' ಎಂದು ಬರೆಯುತ್ತಿದ್ದನು. ಮುಲಕೀ ಕೆಲಸವನ್ನೂ ಸದರ ಖಾನನಿಗೆ, ಯಾಕೆಂದರೆ ಆತನು 'ಲಾರ' ನಗರದ ಸಯ್ಯದ ವಂಶದವನಾಗಿದ್ದನು. ಆತನ ಕೈಗೆ ಕೊಟ್ಟನು. ಪ್ರದೇಶದ ಹಾಗೂ ಕೋಟೆಯ ಮೇಲ್ವಿಚಾರಣೆಯ (ದಾರೋಗಾ) ಕೆಲಸವನ್ನು ಶೇಖ ನೂರುದ್ದೀನ ಮಹಮ್ಮದ ಲ್ಯಾರಿ ಈತನ ಕಡೆಗೆ ಕೊಟ್ಟನು. ಪ್ರತಿಯೊಂದು ಪ್ರದೇಶದ ಹಾಗೂ ಕೋಟೆಗಳ ವಿಷಯದ ಸುದ್ದಿಗಳು, ವಿನಂತಿಪತ್ರಗಳು ಆತನ ಕಡೆಗೆ ಬರುತ್ತಿದ್ದುವು. ಆತನು ಬಾದಶಹನಿಗೆ ವಿಷಯವನ್ನು ತಿಳಿಸಿ ಆಯಾ ವಿಷಯಗಳ ವ್ಯವಸ್ಥೆ ಮಾಡಿ ಕಳಿಸುತ್ತಿದ್ದನು. 'ಖಾನಸಾಕರೀ' ಪದವಿಯನ್ನು ದಕ್ಷಿಣದವನಿಗೆ. ಆತನಿಗೆ 'ಚಾಷನ್‌ಗೀರ' ಎಂದೂ ಹೆಸರು, ಆತನಿಗೆ ಖಾಸಗೀ ಮಹಲುಗಳ ಖಜೀನದಾರಿ ಹಾಗೂ ಹವಾಲದಾರಿಯನ್ನು ಆತನ ಕಕ್ಕನ ಮಗ ತಮ್ಮರಫಿಯುದ್ದೀನ ಶಿರಾಜಿಗೆ ವಹಿಸಿಕೊಟ್ಟಿದ್ದನು. ಇರಲಿ ತಾತ್ಪರ್ಯವೆಂದರೆ, ಎಲ್ಲ ಕೆಲಸಗಳ ಮುಖ್ಯಸ್ಥರೂ ಬುದ್ಧಿವಂತರು-ವಿದ್ವಾಂಸರೂ ಆಗಿದ್ದರೆಂಬುದು.

ಇಂದ್ರಭವನದಂಥ ಸಭೆಯಲ್ಲಿ ಶಾಹಾ ಕಮಾಲುದ್ದೀನ ಫತಹುಲ್ಲಾಹ ಶೀರಾಜಿ ಎಂದರೆ 'ಅಕಲಹಾದಿ ಆಷರ' ಇದ್ದಹಾಗೆ. 'ಮಂತೀಕದ ವಿದ್ಯೆ'ಯಲ್ಲಿ ಬುದ್ಧಿಯ ಹತ್ತು ಪ್ರಕಾರಗಳನ್ನು ವರ್ಣಿಸಲಾಗಿದೆ. ಹೀಗಿರುವಾಗ ಈತನನ್ನು ಹನ್ನೊಂದನೆಯ ಬುದ್ಧಿಯವ ಎಂದು ಹೇಳುತ್ತಿದ್ದರು. ಅರ್ಥಾತ್ ಮಹಾಬುದ್ಧಿವಂತನೆಂದು ಗಣಿಸಲಾಗುತ್ತಿತ್ತು. ಶೇಖ ಮಹಮ್ಮದ, ತರಾಬಲೀಸ ಪ್ರದೇಶದವ, ಆತನು, 'ಮಾಅಕುಲಾತ್' ಮತ್ತು 'ಮನಕುಲಾತ' ಎಂದರೆ ಬುದ್ಧಿ ಹಾಗು ಮಾತುಗಾರಿಕೆಯಲ್ಲಿ ಅನುಭವಿಕ ಮತ್ತು ಶಾಬ್ದಿಕ ಕೆಲಸಗಳಲ್ಲಿ ಅಂದಿನ ದಿನಗಳಲ್ಲಿ ಆತನು ಅದ್ವಿತೀಯನಾಗಿದ್ದನು. ಮೀರ ಐನುದ್ದೀನ ಫಜಲುಲ್ಲಾಹ ಇನಿದೀ ಇನ್ನೊಬ್ಬ ವಿದ್ವಾಂಸನು ವಿಜಾಪುರದಲ್ಲಿ ನಹಬ, ಸರ್ಫ, ತಫಸೀರ, ಫಿಲಾಹ ಹಾಗೂ ಹಾಸೀದ ವಿದ್ಯೆಗಳಲ್ಲಿ ಅಭ್ಯಾಸಮಾಡಿ ಆ ಕಾಲದಲ್ಲಿಯ ಪ್ರಮುಖ ವಿದ್ವಾಂಸನಾಗಿದ್ದನು. ಆಸ್ಥಾನದಲ್ಲಿ ಯಾವಾಗಲೂ ಹಾಜರಿರುತ್ತಿದ್ದನು. ಯಾವಾಗಲೂ ವಿದ್ಯೆಯ ಕುರಿತು ಶಾಸ್ತ್ರಗಳ ಕುರಿತು ಚರ್ಚೆಯಲ್ಲಿ ನಿಮಗ್ನನಾಗಿರುತ್ತಿದ್ದನು. ವಿದ್ಯಾಭ್ಯಾಸ ಮಾಡುವವರೂ ಬಹಳಷ್ಟು ಜನರಿರುತ್ತಿದ್ದರು. ಅವರು ಶಹಾ ಕಮಾಲುದ್ದೀನ ಸೇವೆಯಲ್ಲಿದ್ದು ಅವನ ಮನೆಯಲ್ಲಿ ನಿತ್ಯ ಪಾಠ ಹೇಳಿಸಿಕೊಳ್ಳುತ್ತಿದ್ದರು. ಚರ್ಚೆ ನಡೆಯುತ್ತಿತ್ತು. ಈ ಎಲ್ಲ ವಿದ್ವಾಂಸರೂ ಶಾಹಾ ಕಮುಲುದ್ದೀನನ ಸೇವೆಯಲ್ಲಿ ಸೇರಿಕೊಳ್ಳುತ್ತಿದ್ದರು. ಮತ್ತು ಚರ್ಚೆ ಮಾಡುತ್ತಿದ್ದರು. ಒಟ್ಟಾರೆಯಾಗಿ ಹೇಳಬೇಕೆಂದರೆ, ಇವರಲ್ಲಿಯ ಪ್ರತಿಯೊಬ್ಬನೂ ವಿದ್ವಾಂಸನಾಗಿದ್ದನು. ಅವರೆಲ್ಲ ಅಫಜಲಖಾನನ ಪ್ರಭಾವದಿಂದಾಗಿ ಮತ್ತು ಆತನ ಯುಕ್ತಿಯಿಂದಾಗಿ ದರಬಾರದಲ್ಲಿ ಬಂದು ಸೇರಿದ್ದರು.

ಅದಕ್ಕೂ ಮೊದಲು ಅಫಜಲಖಾನನ ಯೋಗ್ಯತೆ ಹಾಗೂ ವಿದ್ಯೆಯಲ್ಲಿ ಆತನ ಅಧಿಕಾರ ಎಷ್ಟಿದೆ ಎಂಬುದು ಯಾರಿಗೂ ಗೊತ್ತಿರಲಿಲ್ಲ. ಯಾವಾಗ ಅಫಜಲಖಾನನು ಈ ಮಂಡಳಿಯನ್ನು ಒಂದುಗೂಡಿಸಿ ನಿಯಮಿಸಿದನೋ ಆಗಲೇ ಆತನ ಯೋಗ್ಯತೆ ಹಾಗೂ ಗುಣಗಳು ಎಲ್ಲರಿಗೂ ಗೊತ್ತಾದುವು. ಶಾಹ ಕಮಾಲುದ್ದೀನನನ್ನು ಶಿರಾಜದಿಂದ ವಿಜಾಪುರಕ್ಕೆ ಕರೆತರಲು ಒಬ್ಬ ಮನುಷ್ಯನನ್ನು ಕಳಿಸಿದ್ದರು. ಅಂದಿನಿಂದ

ಕಮಾಲುದ್ದೀನನು ಬಂದು ಆದಿಲಶಹನನ್ನು ಭೆಟ್ಟಿಯಾಗುವವರೆಗೆ ಅವನನ್ನು ಕರೆತರಲಿಕ್ಕೆಯೇ ನಾಲ್ವತ್ತು ಸಾವಿರ ಹೊನ್ನುಗಳು ಖರ್ಚಾಗಿದ್ದುವು.

ಯಾವಾಗಲಾದರೂ ಆದಿಲಶಹನು ಶಾಲೆಗೆ ಭೆಟ್ಟಿ ಕೊಡುತ್ತಿದ್ದನು. ಒಂದು ದಿನ ಅಫಜಲಖಾನನ ವಿದ್ಯೆಯ ಕುರಿತು. ಶಾಹ ಫತೀಲಲ್ಲಾಹನ ಜೊತೆ ಚರ್ಚೆವಾದ ನಡೆಯಿತು. ಆ ವಿಷಯ ಆದಿಲಶಹನ ಕಿವಿಗೂ ಬಿತ್ತು. ಅಫಜಲಖಾನನು ವಿಜಾಪುರಕ್ಕೆ ಬಂದ ದಿನವೇ ಆತನ ಪಾಂಡಿತ್ಯ ಹಾಗೂ ಯೋಗ್ಯತೆಗಳು ಎಷ್ಟಿವೆ ಎಂಬುದನ್ನು ಗುರುತಿಸಲು ಯಾರೂ ಇರಲಿಲ್ಲವೆಂದು ಆದಿಲಶಹನೇ ಅಪ್ಪಣೆ ಕೊಟ್ಟನು. ಅಫಜಲಖಾನನು ಈ ವಿದ್ವಾಂಸ ಮಂಡಳಿಯನ್ನು ಸೇರಿಸಿದ ಕಾರಣವೂ ಇದೆಯೇ ಆಗಿದೆ. ಈ ಮಂಡಳಿಯ ಮೂಲಕ ತನ್ನ ವಿದ್ವತ್ತಿನ ರೂಪ ಗೊತ್ತಾಗುತ್ತದೆ ಎಂಬುದೇ ಆಗಿದೆ. ವಿದ್ವಾಂಸರು, ಪಂಡಿತಮಾನ್ಯರು ಹಾಗೂ ಬಾದಶಹನ ಮಧ್ಯ ನಿರಂತರ ವಾದ ಚರ್ಚೆಗಳು ನಡೆದೇ ಇರುತ್ತಿದ್ದುವು. ಅಲಿ ಆದಿಲಶಹನು ಜೀವಂತ ಇರುವವರೆಗೆ ಅದು ನಡೆಯಿತು. ಇನ್ನೂರು ವಿದ್ವಾಂಸರನ್ನು ಸೂಜ್ಞರನ್ನು, ಶಾಸ್ತ್ರಬಲ್ಲವರನ್ನು ಆಸ್ಥಾನದಲ್ಲಿ ನಿಯಮಿಸಿದ್ದಕ್ಕೆ ಲೆಕ್ಕವೆ ಇರಲಿಲ್ಲ. ಹೀಗೆ ಅಫಜಲಖಾನನು ತನ್ನ ವಿದ್ವತ್ತಿನಿಂದ - ಪಾಂಡಿತ್ಯದಿಂದ ಬಾದಶಹನ ಇಡೀ ರಾಜ್ಯದ ವ್ಯವಸ್ಥೆಯನ್ನು ಮಾಡುತ್ತಿದ್ದನು. ಅಫಜಲಖಾನನು ಬಂದಂದಿನಿಂದ 'ರಾಜ್ಯಾಡಳಿತವೆಂದರೆ ಏನು? ಹೇಗೆ ಮಾಡಬೇಕು? ಎಂಬುದು ನನಗೆ ತಿಳಿಯ ಹತ್ತಿತು' ಎಂದು ಅಲಿ ಆದಿಲಶಹನೇ ಒಂದು ದಿನ ಹೇಳಿದ್ದನು.

### ೨೪. ಮುಸ್ತಫಾಖಾನ ಅರಬ ಸ್ಥಾನೀಯ ತುಸು ವರ್ಣನೆ :

ಮುಸ್ತಫಾಖಾನ ಅರಬ ಸ್ಥಾನಿಯ ಮೂಲ ಹೆಸರು ಸಯ್ಯದ ಕಮಾಲುದ್ದೀನ ಹುಸೇನ ಎಂಬುದಾಗಿತ್ತು. ಅರಬ ಸ್ಥಾನದ ಪ್ರದೇಶದಲ್ಲಿ 'ಸಯ್ಯದ ಜಾದಾ' ಎಂದರೆ 'ಸೈದ-ಕುಲಿ' ವಂಶದವನಾಗಿದ್ದನು. ಬಹು ಯೋಗ್ಯ ಹಾಗೂ ವಿದ್ವಾಂಸನಾಗಿದ್ದನು. ಆತನು ದುಡಿಯಲು ಹಿಂದುಸ್ಥಾನಕ್ಕೆ ಬಂದನು. ಇಬ್ರಾಹಿಮ ಕುತುಬಶಾಹನ ಕಾಲದಲ್ಲಿ ಗೋವಳಕುಂಡಕ್ಕೆ ಬಂದನು. ಕಮಾಲುದ್ದೀನನು ವಿದ್ವಾಂಸನಾಗಿದ್ದಾನೆಂಬುದನ್ನು ತಿಳಿದಿದ್ದ ಕುತುಬಶಾಹನು ಆತನನ್ನು ಪ್ರೋತ್ಸಾಹಿಸುತ್ತ ಅವನ ಯೋಗ್ಯತೆಯನ್ನು ಅಧಿಕಗೊಳಿಸಿದನು. ತನ್ನ ಪಾಂಡಿತ್ಯದಿಂದ ಮುಸ್ತಫಾಖಾನನು ಯುಕ್ತಿಯಿಂದ ರಾಜ್ಯ ವಸಾಹತನ್ನು, ಸೈನ್ಯದ ಜಮಾವಣೆಯನ್ನು ಮತ್ತು ರೈತರ ಸುಖವನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದನು. ಅದರಿಂದಾಗಿ ಸೈನ್ಯ ಹಾಗೂ ನಾಗರಿಕ ಜನರು ತುಂಬ ಸುಖದಿಂದ ಇದ್ದು ಮುಸ್ತಫಾಖಾನನನ್ನು ಸ್ತುತಿಸುತ್ತಿದ್ದರು. ತುಸುವೆ ದಿನಗಳಲ್ಲಿ ಮುಲಕೀ ಮತ್ತು ಮಹಾಲೀ ವಿಷಯಗಳಲ್ಲಿ ಆತನ ಚಾಕಚಕ್ಯತೆಯನ್ನು ಕಂಡು ಕುತುಬ ಶಾಹನು ಆತನ ಕೆಲಸಗಳಲ್ಲಿ ತಲೆ ಹಾಕುತ್ತಿರಲಿಲ್ಲ. ಎಲ್ಲ ಮುಖ್ತ್ಯಾರಿಯನ್ನು ಆತನ ಮೇಲೆಯೇ ಹಾಕಿದನು. ಆತನ ಕೆಲಸವನ್ನು ಕುತುಬಶಾಹನು ಮನಸಾರೆ ಗುರುತಿಸಿ ಒಪ್ಪುತ್ತಿದ್ದನು ಮತ್ತು ಆತನು ಅದನ್ನು ಕಾರ್ಯಗತಗೊಳಿಸುತ್ತಿದ್ದನು. ಅದರಿಂದಾಗಿ ಉಳಿದ ರಾಜ್ಯಗಳ ಎದುರಿಗೆ ಕುತುಬಶಾಹನ ರಾಜ್ಯದ ದೌಲು-ವೈಭವ ಎದ್ದು ಕಾಣುತ್ತಿತ್ತು. ಕೆಲವೊಮ್ಮೆ ಕುತುಬಶಾಹನು ತಾನು ಸ್ವತಃ ಸಹಜವಾಗಿ ಕೆಲಸಗಳನ್ನು ಕೈಗೊಳ್ಳುತ್ತಿರುವಾಗ, ಅದು ಮುಸ್ತಫಾಖಾನನಿಗೆ ಸರಿಬರುತ್ತಿರಲಿಲ್ಲ. ಬಹಳ ದಿನಗಳವರೆಗೆ ಕುತುಬಶಾಹನ ವಕೀಲನಾಗಿ ದುಡಿಯುತ್ತಿರುವಾಗ ಮುಸ್ತಫಾಖಾನನ ಸಂಪತ್ತೂ ವೃದ್ಧಿಯಾಗಿತ್ತು. ಅದರಿಂದಾಗಿ ಆತನಿಗೆ ತುಂಬ ಗರ್ವ ಬಂದಿತ್ತು. ಸಾವಕಾಶವಾಗಿ ಬಾದಶಹನ ಮನದಲ್ಲಿ ಇದು ಗೊತ್ತಾಗುತ್ತಿದ್ದಂತೆ ಪರಸ್ಪರ ವಿರುದ್ಧವಾದರು. ಮುಸ್ತಫಾಖಾನನನ್ನು ಕೆಲಸದಿಂದ ತೆಗೆದು ಆತನ ಹತ್ತಿರದ ಬಹು ಸಂಪತ್ತನ್ನು ಲೂಟಿ ಮಾಡಬೇಕೆಂದು ಕುತುಬಶಾಹನು ಯೋಚಿಸಿದನು.

ಈ ಸುದ್ದಿ ತಿಳಿಯುತ್ತಲೆ ಮುಸ್ತಫಾಖಾನನು ದರಬಾರದಿಂದ ಹೊರಬೀಳುವ, ಆತನಿಂದ ಬಿಡುಗಡೆಯಾಗುವ ದಾರಿಯನ್ನು ಹುಡುಕಹತ್ತಿದನು. ನಿಮಿತ್ತಗಳಿಗಾಗಿ ಕಾಯತೊಡಗಿದನು. ಆದರೆ ಬಿಡುಗಡೆಯ ಯೋಗ ಘಟಿಸಿ ಬರಲೇ ಇಲ್ಲ. ಅಂಥ ಸಮಯದಲ್ಲಿ, ಕುತುಬಶಾಹ ಮತ್ತು ರಾಮರಾಜನ ಮಧ್ಯ ಯುದ್ಧದ ಕುರಿತು ಪ್ರಶ್ನೋತ್ತರ ಪರಸ್ಪರರಲ್ಲಿ ನಡೆದಿದ್ದುವು. ಇದು ನಡೆಯುತ್ತಿರುವಾಗ ಭಗವಂತನ ಆಸ್ಥಾನದಲ್ಲಿಯ ಬ್ರಹ್ಮದೇವನೇ ಮೊದಲಾದವರು, ಮುಸ್ತಫಾಖಾನನ ಬಿಡುಗಡೆಯನ್ನು ಯೋಚಿಸುತ್ತಿದ್ದರು. ಇದೊಂದು ಅಲಭ್ಯ ಅವಕಾಶವೆಂದು ತಿಳಿದ ಮುಸ್ತಫಾಖಾನನು ಕುತುಬಶಾಹನ ಮನದಲ್ಲಿ ಯುದ್ಧಕ್ಕಾಗಿ ಪ್ರಚೋದಿಸಿದನು. ಯುದ್ಧದಲ್ಲಿ ರಾಮರಾಜನ ವಿರುದ್ಧ ಟೊಂಕಕಟ್ಟಿ ನಿಂತೆಯಾದರೆ ಇಹಲೋಕದಲ್ಲಿ ಕೀರ್ತಿ, ಪರಲೋಕದಲ್ಲಿ ಉತ್ತಮ ಫಲ ಪ್ರಾಪ್ತಿಯಾಗುವುದೆಂದು ಬೋಧಿಸಿದನು. ಕುತುಬಶಾಹನು ಆತನ ಮಾತನ್ನು ಒಪ್ಪಿದನು. ರಾಯಭಾರದ ವಸ್ತ್ರಗಳನ್ನು ಆತನಿಗೆ ಕೊಟ್ಟನು. ರಾಯಭಾರವನ್ನು ಒಪ್ಪುವ ಮೊದಲು ಮುಸ್ತಫಾಖಾನನು ಬಾದಶಹನಿಗೆ ಮುಜುರೆ ಸಲ್ಲಿಸಿ ವಿನಂತಿ ಮಾಡಿಕೊಂಡಿದ್ದನು. ಈ ವೃದ್ಧನ ಮೇಲೆ ಕರುಣೆ ತೋರಿ, ನನಗೊಂದು ಕರಾರುಪತ್ರವನ್ನು ಬರೆದುಕೊಡಲು ಕೇಳಿಕೊಂಡನು. ಮನೋರಥವು ಪೂರ್ಣಗೊಂಡು, ಹಿಂದು ಜನರ ಸೋಲಿನ ಅನಂತರ ಸೇವೆಯಿಂದ ಬಿಡುಗಡೆಮಾಡಿ ಮಕ್ಕೆಗೆ ಹೋಗಲು ಅನುಮತಿ ನೀಡಬೇಕು. ಎಂದರೆ ಮಕ್ಕಾ, ಮದೀನಾ ಹಾಗೂ ಪವಿತ್ರ ಹನ್ನೆರಡು ಇಮಾಮರ ಸ್ಥಳಗಳಿಗೆ ಹೋಗಿ, ಯಾತ್ರೆಯನ್ನು ಮಾಡಿ ನನ್ನ ವ್ರತವನ್ನು ಪೂರ್ತಿಗೊಳಿಸುವ ಮತ್ತು ತಮ್ಮ ಆಯ್ಯುಷ್ಯ ಚಿರಕಾಲವೂ ವೈಭವದಿಂದ ಇರಲು ಆಶೀರ್ವಾದ ಕೊಡುವಲ್ಲಿ ಮಗ್ನನಾಗುವೆ ಎಂದನು. ಕುತುಬಶಾಹನು ಆತನ ವಿನಂತಿಯನ್ನು ಮಾನ್ಯ ಮಾಡಿ 'ಕೌಲನಾಮಾ' ಎಂದರೆ ಕರಾರು ಪತ್ರವನ್ನು ಬರೆದುಕೊಟ್ಟು ಪೂರ್ಣ ಸಂತೋಷದಿಂದ ಅಹಮದನಗರಕ್ಕೆ ಹೋಗಲು ನಿರೋಪ ಕೊಟ್ಟನು. ಆಗ ಮುಸ್ತಫಾಖಾನನು ನಿಜಾಮಶಹನ ಕಡೆಗೆ ಹೋಗಿ ಎಲ್ಲ ವಿಷಯಗಳನ್ನು ನಿರ್ಧರಿಸಿದನು. ಅನಂತರ ಉಭಯ ಬಾದಶಹರು ಕೂಡಿಕೊಂಡು ರಾಮರಾಜನನ್ನು ಎದುರಿಸಿದ್ದು, ಇತ್ಯಾದಿ ಈ ಮೊದಲೆ ವರ್ಣಿಸಲಾಗಿದೆ.

ಬಾದಶಹರು ಗೆದ್ದು ಅವರ ಮನೋರಥಗಳು ಪೂರ್ಣಗೊಂಡ ನಂತರ ಮುಸ್ತಫಾಖಾನನು ಇಂಥ ಅಲಭ್ಯ ಅವಕಾಶ ದೊರೆಯುವುದಿಲ್ಲವೆಂದು ತಿಳಿದು, ಆದಿಲಶಹನ ಮುಖ್ಯ ಕಾರಭಾರಿ ಕಿಶ್ವರಖಾನ, ಹಾಗೂ ನಿಜಾಮಶಹನ ಮುಖ್ಯ ಕಾರಭಾರಿ ಮೌಲಾನಾ ಇನಾಯತ್‌ಉಲ್ಲಾ ಈ ಇಬ್ಬರನ್ನೂ ಕಂಡು, ಅವರ ಪ್ರಭಾವದಿಂದ ಕುತುಬಶಾಹನಿಂದ ಬಿಡುಗಡೆಯಾಗಲು ಪ್ರಯತ್ನಿಸಿದನು. ಮೊದಲೊಮ್ಮೆ ತಾನೆ ಸ್ವತಃ ಕುತುಬಶಾಹನನ್ನು ಕಂಡು ವಿನಂತಿಸಿಕೊಂಡನು. ಕರಾರಿನಂತೆ ಮಕ್ಕೆಗೆ ಹೋಗಲು ನನಗೆ ಬಿಡುಗಡೆ ಮಾಡಬೇಕೆಂದು ಕೇಳಿಕೊಂಡನು. ಅದಕ್ಕೆ ಕುತುಬಶಾಹನು, ರಾಜಧಾನಿಗೆ ತಿರುಗಿ ಹೋದ ಅನಂತರ ಬಿಡುಗಡೆ ಮಾಡಿ ನಿರೋಪ ಕೊಡುತ್ತೇವೆಂದು ಅಪ್ಪಣೆ ಮಾಡಿದನು. ಅದು ಮುಸ್ತಫಾಖಾನನಿಗೆ ತಿಳಿದೇ ಇತ್ತು. ಈ ಬಾದಶಹನು ರಾಜಧಾನಿಗೆ ಹೋದ ನಂತರ ನಿರೋಪವನ್ನು ಕೊಡಲಾರ. ಪ್ರಾಣವನ್ನೆ ತೆಗೆದುಕೊಳ್ಳುತ್ತಾನೆ. ಎಂದು ತಿಳಿದು ನಿರುಪಾಯನಾಗಿ ಈ ವಿಷಯದಲ್ಲಿ ಉಭಯ ಮುಖ್ಯಸ್ಥರನ್ನು ಕಂಡು ಆಗ್ರಹಿಸಿದನು. ಅವರು ಈ ಕುರಿತು ಬಹಳಷ್ಟು ಪ್ರಯತ್ನ ಮಾಡಿದರು. ಆದರೂ ಕುತುಬಶಾಹ ಒಪ್ಪಲಿಲ್ಲ. ಅದಕ್ಕೆ ಜಗ್ಗದೆ ಕಿಶ್ವರಖಾನ ಹಾಗು ಮೌಲಾನಾ ಇನಾಯತ್ ಉಲ್ಲಾರು ಮತ್ತೆ ಮತ್ತೆ ಯತ್ನ ಮಾಡಿ ಆಗ್ರಹ ಮಾಡಿದರು. ಆಗ ಕುತುಬಶಾಹನು ನಿರುಪಾಯನಾಗಿ ಅತಿ ಆಗ್ರಹದ ಮೇರೆಗೆ ನಿರೋಪ ನೀಡಿದನು.

ಮುಸ್ತಫಾಖಾನನ ಹೆಂಡಿರು ಮಕ್ಕಳು ಮತ್ತು ಸಂಪತ್ತು ಸಾಮಗ್ರಿಗಳು ಗೋವಳಕೊಂಡದಲ್ಲಿದ್ದುವು. ಅವುಗಳ ಬಿಡುಗಡೆಯೂ ಆಗಬೇಕು. ಅದಕ್ಕಾಗಿ ಕಿಶ್ವರಖಾನ ಹಾಗೂ ಇನಾಯತ್‌ಉಲ್ಲಾರು ಬಾದಶಹನೊಂದಿಗೆ ಯತ್ನ ಮಾಡಿದರು. ಕುತುಬಶಾಹನು, ಮುಸ್ತಫಖಾನನ ಹೆಂಡತಿ ಮಕ್ಕಳು ಮತ್ತು ಸಂಪತ್ತು ಸಹಿತ ಒಟ್ಟಾರೆ ನಿರೋಪ ಕೊಡಲು ಬಾರದಂತೆ ಅನೇಕ ತರದ ಅಡಚಣೆಗಳನ್ನು ಮುಂದೆ ಮಾಡಿದನು. ಆದರೆ ಉಭಯ ಮುಖ್ಯಸ್ಥರು ಮುಸ್ತಫಾಖಾನನ ಹೆಂಡಿರು ಮಕ್ಕಳನ್ನು ಬಿಟ್ಟು ಕೊಡಲು ಬಾದಶಹನಿಗೆ ಆಗ್ರಹಿಸಿದರು. ಆಗ ಕುತುಬಶಾಹನು ಯೋಚಿಸಿ, ಈ ವಿಷಯದಲ್ಲಿ ಕಿಂಚಿತ್ ಸಡಿಲಾಗಿ ಕಟ್ಟು ನಿಟ್ಟಾದರೆ ಆದಿಲಶಹ ಹಾಗೂ ನಿಜಾಮಶಹರು ಸಂಕಟಗಳನ್ನು ಒಡ್ಡಬಹುದೆಂದು ಯೋಚಿಸಿ ನಿರುಪಾಯನಾಗಿ, ಸಾವಿರ ಖಿನ್ನತೆಗಳೊಂದಿಗೆ ನಿರೋಪ ಕೊಟ್ಟನು. ಮುಸ್ತಫಾಖಾನನು ವಿಜಯನಗರದಿಂದ ಹೊರಟು ಕಲಬುರ್ಗಿಗೆ ಬಂದು ನಿಂತನು. ತನ್ನ ಹೆಂಡಿರು ಮಕ್ಕಳು, ಸಾಮಾನು ಸಂಪತ್ತುಗಳು ಗೋವಳಕುಂಡದಿಂದ ಕಲಬುರ್ಗಿಗೆ ಸುರಕ್ಷಿತವಾಗಿ ಬಂದು ಮುಟ್ಟಿದುವು. ಎಲ್ಲರಿಗೂ ಗೊತ್ತಿದ್ದಂತೆ ಅವನ ಸಂಪತ್ತು ಎಂಟು ಸಾವಿರ ಹೇರೆತ್ತುಗಳು. ಹಾಗೂ ಒಬ್ಬ ಮನುಷ್ಯನ ಭಾರದ, ಹನ್ನೆರಡು ಸಾವಿರ ಜನರ ಭಾರದ ರೋಖ ಹಣ ಮತ್ತು ಜಡಜವಾಹಿರಗಳು ಆತನಲ್ಲಿದ್ದುವು. ಇಪ್ಪತ್ತು ಲಕ್ಷಕ್ಕಿಂತ ಅಧಿಕ ಹೊನ್ನು ಆತನಲ್ಲಿತ್ತು. ಇಷ್ಟೊಂದು ಸಂಪತ್ತನ್ನು ಆತ ಕುತುಬಶಾಹನು ಪ್ರಧಾನಿಯಾಗಿದ್ದಾಗ ಗಳಿಸಿದ್ದನು.

ಮುಸ್ತಫಾಖಾನನಿಗೆ ನಿರೋಪ ಕೊಟ್ಟನಂತರ ಕುತುಬಶಾಹನು ಅತ್ಯಂತ ಕ್ರುದ್ಧನಾಗಿ ಆತನ ವಾಡೆಯನ್ನು ಕೆಡವಲು ಆಜ್ಞೆ ಮಾಡಿದನು. ಅದರಂತೆ ಎಲ್ಲವನ್ನೂ ಕೆಡವಿದರು, ಆತನ ವಾಡೆಯಲ್ಲಿಯ ಅಡುಗೆಯ ಮನೆಯೊಂದು ಉಳಿಯಿತು. ಅದು ಆ ಕಾಲದಲ್ಲಿಯ ಬಾದಶಹ ಜನರ ವಾಡೆಯಷ್ಟೆ ಇತ್ತು. ಅನಂತರ ಮುಸ್ತಫಾಖಾನನು ತನ್ನ ಪರಿವಾರ ಸಂಪತ್ತು ಸಹಿತ ವಿಜಾಪುರಕ್ಕೆ ಬಂದು ಇರಹತ್ತಿದನು. ಆದಿಲಶಹನು ಆತನಿಗೆ ಇರಲು ಒಂದು ದೊಡ್ಡ ವಾಡೆಯನ್ನು ಕೊಟ್ಟನು. ಆತನ ಕಣ್ಣರಿಕೆಗೆ ಎರಡು ಸಾವಿರ ಸವಾರರನ್ನು ಕೊಟ್ಟನು. ಬಹಳ ದಿನ 'ಅಮೀರ' (ಸರದಾರ) ಕೆಲಸದಲ್ಲಿಯೆ ಇದ್ದನು. ಕಿಶ್ವರಖಾನನು ಸತ್ತ ಅನಂತರ ಮತ್ತು ಅಬ್ದುಲ್ ಹಸನನ ಬಂಧನವಾದ ಮೇಲೆ ಆದಿಲಶಾಹಿಯ ಪ್ರಧಾನ ಅಮಾತ್ಯ ಪದವಿ ಆತನಿಗೆ ದೊರೆಯಿತು. ರಾಜಧಾನಿಯಲ್ಲಿ 'ಮದಾರುಲ್ ಮಾಹಾಮ' ಎಂದರೆ ಮುಖ್ಯ ಕಾರಭಾರಿಯಾದನು. ಆದಿಲಶಹನ ವಿಶ್ವಾಸಕ್ಕೆ ಪಾತ್ರನಾಗಿ ಪೂರ್ಣ ಅಧಿಕಾರ ಪಡೆದನು. ಆದಿಲಶಹನು ತನ್ನ ಮುಖ್ಯ ಮೊಹರನ್ನು ಎಂದೂ ಅಗಲುತ್ತಿರಲಿಲ್ಲ. ಉಂಗುರದ ಹಾಗೆ ಆತನ ಬೆರಳಿನಲ್ಲಿಯೇ ಇರುತ್ತಿತ್ತು, ಅದನ್ನು ಮುಸ್ತಫಾಖಾನನಿಗೆ ಕೊಟ್ಟನು. ಮುಸ್ತಫಾಖಾನನು ಹೋದಲ್ಲೆಲ್ಲ ಆ ಮೊಹರು ಅವನೊಂದಿಗೆ ಹೋಗುತ್ತಿತ್ತು. ಉಳಿದ ಸಮಯದಲ್ಲಿ ಅದು ಮುಸ್ತಫಾಖಾನನ ಮನೆಯಲ್ಲಿ ಇರುತ್ತಿತ್ತು. ಹೀಗೆ ಆದಿಲಶಾಹಿಯ ಪ್ರಧಾನ ಸಚಿವನಾಗಿ ಕೆಲಸ ಮಾಡುವಾಗಲೂ ಆತನು ಸಾಕಷ್ಟು ಸಂಪತ್ತನ್ನು ಗಳಿಸಿದ್ದನು. ಅಂದಿನ ಕಾಲದ ಯಾವುದೇ ಒಬ್ಬ ಬಾದಶಹನಲ್ಲಿರದಷ್ಟು ಸಂಪತ್ತು ಆತನಲ್ಲಿತ್ತು. ಗುಜರಾಥದ ಸಮುದ್ರದಿಂದ ಬಂಗಾಲದ ಸಮುದ್ರದ ವರೆಗೆ ಒಂದು ನೂರು ಹಬಶೀ ಹಡಗುಗಳು ಆತನ ಸ್ವಾಧೀನದಲ್ಲಿದ್ದುವು. ಅಂದಿನ ದೊಡ್ಡ ದೊಡ್ಡ ಬಾದಶಹರುಗಳಾದ ರೂಮ ದೇಶದ ಸುಲ್ತಾನ ಸುಲೇಮಾನ ಬಾದಶಹ, ಇರಾನದ ತಹಮಾಸೀಫ ಬಾದಶಹ, ಹಿಂದುಸ್ತಾನದ ಅಕಬರ ಬಾದಶಹನೊಂದಿಗೆ ಪತ್ರವ್ಯವಹಾರವಿತ್ತು. ಅವರಿಗೆ ಬೆಲೆಯುಳ್ಳ ಪದಾರ್ಥಗಳನ್ನು ಕಾಣಿಕೆಯಾಗಿ ಕಳಿಸುತ್ತಿದ್ದರೆ ಅವರೂ ಇವನಿಗೆ ಕಳುಸುತ್ತಿದ್ದರು.

ಆತನ ಬುದ್ಧಿವಂತಿಕೆಯಿಂದ ರಾಜ್ಯಕ್ಕೂ ಲಾಭವಾಗುತ್ತಿತ್ತು. ಮೇವಾಡ, ಮತ್ತು ಕರ್ನಾಟಕದ ಪ್ರದೇಶಗಳನ್ನು ಹಿಡಿದು ಕರಾವಳಿಗುಂಟ ತುಂಬ ವ್ಯವಸ್ಥಿತವಾಗಿ ಇಟ್ಟಿದ್ದನು. ಎಲ್ಲ ಕಡೆಯ ಹಿಂದು ಜಾತಿಯ ಅಮೀರರು(ಸರದಾರರು) ಕೆಲಸಗಾರರು, ಗಡಿಗಳಲ್ಲಿಯ ರಾಜರು, ಮುಸ್ತಫಾಖಾನನ ಆಧೀನತೆಯನ್ನು ಒಪ್ಪಿ ಆತನ ಆದೇಶದಂತೆ ನಡೆಯುತ್ತಿದ್ದರು. ಕೇಳದಿದ್ದರೆ ಅವರನ್ನು ಹಿಡಿದು ಸದೆಬಡಿಯುತ್ತಿದ್ದನು. ಮತ್ತು ಅಲ್ಲಿ ಮುಸಲಮಾನ ರಾಜ ಸತ್ತೆಯನ್ನು ನಡೆಸುತ್ತಿದ್ದನು. ಹಿಂದು ಜನರ ದೇವರ ದೇವಾಲಯಗಳನ್ನು ಕೆಡವಿ ನೆಲಸಮ ಮಾಡುತ್ತಿದ್ದನು. ಆ ದೇವಾಲಯಗಳ ಸ್ಥಳಗಳಲ್ಲಿ ಮಸೀದಿಗಳನ್ನು ಕಟ್ಟುತ್ತಿದ್ದನು. ಇಮಾಮ, ಖತೀಬ ಮತ್ತು ಮರ್ಜನ ಎಂದರೆ ಬಾಂಗ ಕೊಡುವವರನ್ನು ನಿಯಮಿಸಿ ನಮಾಜ ಓದುವ ಪದ್ಧತಿಯನ್ನು ಪ್ರಾರಂಭಿಸುತ್ತಿದ್ದನು. ಯಾರು ತಾವಾಗಿಯೇ ಮುಂದೆ ಬಂದು ಮುಸಲಮಾನಿ ರಾಜ ಸತ್ತೆಯನ್ನು ಒಪ್ಪಿಕೊಳ್ಳುತ್ತಾರೊ, ಅವರಿಗೆ ವರುಷಕ್ಕೆ ಇಂತಿಷ್ಟು ದ್ರವ್ಯವನ್ನು ಕೊಡಬೇಕೆಂದು ಕರಾರುಮಾಡಿ, ಅವರ ಪ್ರದೇಶವನ್ನು ಅವರಿಗೆಯೇ ಕಾಯಂ ಆಗಿ ಕೊಡುತ್ತಿದ್ದನು. ಠರಾವಿಸಿದಂತೆ ಪ್ರತಿ ವರುಷವೂ ಆತ ಕಪ್ಪುಕಾಣಿಕೆಯನ್ನು ಸರ್ಕಾರದ ಭಾಂಡಾರದಲ್ಲಿ ತಂದೊಪ್ಪಿಸುವ ವ್ಯವಸ್ಥೆಯನ್ನು ಮಾಡಿದನು. ಮುಸ್ತಫಾಖಾನನ ಪ್ರಯತ್ನದಿಂದ ವಿಜಯನಗರದ ಬಹಳಷ್ಟು ಪ್ರದೇಶವು ಆದಿಲಶಹನ ರಾಜ್ಯಕ್ಕೆ ಸೇರಿ ಆತನ ರಾಜ್ಯ ವಿಸ್ತಾರವಾಯಿತು.

ದಕ್ಷಿಣದ ಯಾವ ಬಾದಶಹನಿಗೂ ಅಷ್ಟೊಂದು ರಾಜ್ಯ ವಿಸ್ತಾರವಿರಲಿಲ್ಲ. ಆದರೆ ಅಲೀ ಆದಿಲಶಹನು ತುಂಬ ಗರ್ವಿಷ್ಠನೂ, ಅಭಿಮಾನಿಯೂ ಹಾಗೂ ಕ್ರೂರನೂ ಆಗಿದ್ದನು. ತುಸು ತಪ್ಪಾದರೂ ಆ ತಪ್ಪಿತಸ್ಥನಿಗೆ ಬಹಳಷ್ಟು ಶಿಕ್ಷೆ ಕಾದಿರುತ್ತಿತ್ತು. ಕುತ್ತಿಗೆ ಹಿಚುಕುವುದು, ಜೀವ ತೆಗೆಯುವುದು, ಕೈ ಅಥವಾ ಕಿವಿಗಳನ್ನು ಕತ್ತರಿಸುವುದು ಇತ್ಯಾದಿ ಕ್ರೂರ ಶಿಕ್ಷೆಯನ್ನು ಕೊಡುತ್ತಿದ್ದ. ಅವಿಚಾರಿಯಾಗಿದ್ದ. ಹೀಗೆಯೇ ಒಂದು ಸಲ ಆದಿಲಶಹನ ವೈದ್ಯಶಾಲೆಯಲ್ಲಿಯ ಒಂದು ಔಷಧದ ಕಟ್ಟು ಎಲ್ಲಿಯೋ ಕಳೆದಿತ್ತು. ಕೆಲವು ದಿನಗಳ ಅನಂತರ ಆ ಔಷಧವು ಅಡುಗೆಯವರ ಹತ್ತಿರ ದೊರೆಯಿತೆಂಬ ಸುದ್ದಿಯು ತಿಳಿಯಿತು. ಆ ಜನರನ್ನು ಶೋಧಿಸಿದಾಗ, ಕಳುವಿನ ಕೆಲಸದಲ್ಲಿ ಭಾಗವಹಿಸಿದ್ದ ಇಪ್ಪತ್ತೆರಡು ಜನರು ಸಿಕ್ಕರು. ಅವರನ್ನೆಲ್ಲ ಹಿಡಿದು ಶಿಕ್ಷಿಸಿ ಕೊಲ್ಲಲಾಯಿತು. ಅವರ ಶವಗಳು ಹೊರಗೆ ಬಂದುವು. ಹೀಗಿತ್ತು ಆತನ ವ್ಯವಸ್ಥೆ. ಅರವತ್ತು ವರುಷಗಳವರೆಗೆ ದಕ್ಷಿಣದಲ್ಲಿ ಮುಸ್ತಫಾಖಾನನು ರಾಜಭೋಗವನ್ನು ಮಾಡಿದನು. ಆತನ ಅಡುಗೆಯ ಮನೆಯಲ್ಲಿ ಚೀನಿ ಪಾತ್ರೆಗಳು ಕೂಡ ಒಡೆಯುತ್ತಿರಲಿಲ್ಲ. ಒಂದು ವೇಳೆ ಒಡೆದರೆ. ಆತನ ಕೈಯಿಂದ ಅದರ ಬೆಲೆಯನ್ನು ವಸೂಲುಮಾಡಿ ಇನ್ನೊಂದು ಪಾತ್ರೆಯನ್ನು ತಂದು ಇಡುತ್ತಿದ್ದರು. ಕೊನೆಗೆ ಅಲೀ ಆದಿಲಶಹನು ಸತ್ತ ಮೇಲೆ ಏಳು ತಿಂಗಳುಗಳಲ್ಲಿ ಕಿಶ್ವರಖಾನನ ಮಗ, ಕಿರಿಯ ಕಿಶ್ವರಖಾನನೆಂದು ಪ್ರಸಿದ್ಧನಾಗಿದ್ದನು. ಆತನು ನಾಲ್ಕು ತಿಂಗಳು ಮುಖ್ತ್ಯಾರಿಯ ಕೆಲಸವನ್ನು ವಹಿಸಿಕೊಂಡಿದ್ದನು. ಆ ಕಿರಿಯ ಕಿಶ್ವರಖಾನನನ್ನು ಬಂಕಾಪುರದಲ್ಲಿ ಕೊಲೆ ಮಾಡಲಾಯಿತು. ಆತನ ಸಂಪತ್ತನ್ನೆಲ್ಲ ಲೂಟಿ ಮಾಡಿದರು.

### ೨೫. *ದೊಡ್ಡ ವಜ್ರದ ವರ್ಣನೆ :*

ಈ ಹಿಂದೆ (ವಿಜಯನಗರದ) ಭೋಜ ತಿರುಮಲರಾಜನು ಅಲಿ ಆದಿಲಶಹನಿಗೆ ಆರು ಲಕ್ಷ ಹೊನ್ನನ್ನೂ ನಗದಾಗಿ ಕೊಟ್ಟು ಪತ್ರ ಬರೆದಿದ್ದನು. ವಿಜಯನಗರಕ್ಕೆ ಬಂದು ರಾಮರಾಜನನ್ನು ಕಿತ್ತೊಗೆದು ನಿಜವಾದ ವಾರಸುದಾರನಾದ ತನ್ನನ್ನು ಸಿಂಹಾಸನದ ಮೇಲೆ ಕೂಡಿಸಲು ಕೇಳಿಕೊಂಡಿದ್ದನು. ಹಾಗೆ ಮಾಡಿದರೆ ಇನ್ನಷ್ಟು ದ್ರವ್ಯವನ್ನೂ ಕೊಡುವೆ ಎಂದೂ ಬರೆದಿದ್ದನು. ಅದರಂತೆ ಆದಿಲಶಹನು ಆತನ

ವಿನಂತಿಯಂತೆ ಅತ್ತ ಹೊರಟು ವಿಜಯನಗರದ ಹತ್ತಿರ ಬಂದು ಮುಟ್ಟಿದ್ದನು. ತಿರುಮಲನು, ತಿಮ್ಮರಾಜನ ಮೋಸದಿಂದ ಆದಿಲಶಹನನ್ನು ತಿರುಗಿ ಕಳಿಸಲು ಮತ್ತೆ ಎಂಟು ಲಕ್ಷ ಹೊನ್ನನ್ನು ಹಾಗು ಒಂದು ದೊಡ್ಡ ವಜ್ರವನ್ನು, ಅತ್ಯಂತ ಭಾರದ ವಜ್ರವನ್ನು ಆದಿಲಶಹನಿಗೆ ಕಳಿಸಿಕೊಟ್ಟು ಅರ್ಧ ದಾರಿಯಲ್ಲಿಯೇ ಆತನನ್ನು ಹಿಂದಕ್ಕೆ ಕಳಿಸಿದ್ದನು. ಮುಂದೆ ಅಲಿ ಆದಿಲಶಹನು ರಾಮರಾಜನ ಭೆಟ್ಟಿಗೆ ಹೋದಾಗ ಅದೇ ವಜ್ರದೊಂದಿಗೆ ಇನ್ನಷ್ಟು ಕಾಣಿಕೆಗಳನ್ನು ರಾಮರಾಜನಿಗೆ ಕೊಟ್ಟಿದ್ದನು. ಆ ವಜ್ರದ ಭಾರ ಹದಿನೈದು ಮಿಸ್ಕಾಲ ಇತ್ತು ಒಂದು ಮಿಸ್ಕಲ ಎಂದರೆ ನಾಲ್ಕು ಮಾಸಿ, ಆ ಲೆಕ್ಕದಿಂದ ವಜ್ರದ ಭಾರ ೬೦ ಮಾಸಿ ಇತ್ತು. ಅದೇ ಲೆಕ್ಕದಂತೆ ೧೫ ಮಿಸ್ಕಲ ಎಂದರೆ ೨೧ ದಿರಮ್ ಭಾರವಾಗಿತ್ತು. ಒಂದು ದಿರಮ್ ....... ಮಾಸಿ* ಭಾರ ಚೌಕೋನಾಕಾರದ ಅಂಗೈತಳದಷ್ಟಿತ್ತು. ಆ ವಜ್ರದ ಭಾಗದಲ್ಲಿ ಒಂದು ಕಪ್ಪು ಕಲೆ ಇತ್ತು. ಹಾಗೆ ವಜ್ರದ ಮೇಲೆ ಕಪ್ಪು ಕಲೆ ಇದ್ದರೆ ಅದು ದುಃಖದಾಯಕವಾಗಿರುತ್ತದೆ. ಅಂಥ ವಜ್ರ ಪೀಡಾದಾಯಕವೆಂದೂ ವಜ್ರ ಪರೀಕ್ಷಕರ ಅಭಿಮತ. ಅದು ಅಮಂಗಳಕರವೆಂದೂ ತಿಳಿಯುತ್ತಾರೆ. ಆ ವಜ್ರದ ದುಃಖದಾಯಕ ಹಾಗೂ ಕೇಡುಕಾರಕ ಗುಣವೂ ಕಂಡು ಬಂದಿತು. ಅದು ಹೇಗೆ ಬಂದದ್ದೆಂದು ಎಲ್ಲರಿಗೂ ಗೊತ್ತಿದ್ದ ವಿಷಯವೇ ಆಗಿದೆ.

ಮೊದಲು ಅದು ವಿಜಯನಗರದ ಕಿಸನರಾವರಾಯನ ಸರಕಾರದಲ್ಲಿ ಬಂದಾಗ ಕೆಲವೇ ದಿನಗಳಲ್ಲಿ ಕಿಸನರಾವ್ ರಾಜನು ತಾರುಣ್ಯದಲ್ಲಿ ಹಾಗೂ ಸುಖಸಂತೋಷದಲ್ಲಿರುವಾಗ, ಯಾವ ರೋಗರುಜಿನಗಳು ಇರದೆ. ಒಮ್ಮೆಲೆ ತೀರಿಕೊಂಡುಬಿಟ್ಟನು. ಮತ್ತೆ ತುಸುವೆ ದಿನಗಳಲ್ಲಿ ಆತನ ಮನೆತನದ ಜನರು ವಜ್ರದ ಗುಣದಿಂದಾಗಿ ನಾಶವಾದರು. ಅದೇ ವಜ್ರ ಇಬ್ರಾಹಿಮ ಆದಿಲಶಹನ ಭಂಡಾರಕ್ಕೆ ಬಂದಿತು. ಆಗ ಕೆಲವೆ ದಿನಗಳಲ್ಲಿ ಇಬ್ರಾಹಿಮ ಆದಿಲಶಹನು ನಾನಾ ಪ್ರಕಾರದ ರೋಗಗಳಿಂದ ಬಳಲಿದನು. ಆಗ ರಾಜ್ಯ ವೈದ್ಯರೆಲ್ಲರೂ ಉಪಚರಿಸಿದರು. ಆದರೆ ಯಾವ ಔಷಧಗಳಿಂದಲೂ ಗುಣವಾಗಲಿಲ್ಲ. ಆಯುರ್ದಾಯ ಇರುವವರೆಗೂ ಬಹಳ ದಿನ ರೋಗಗ್ರಸ್ತನಾಗಿ ಪೀಡೆಯನ್ನು ಅನುಭವಿಸಿ ಸತ್ತನು. ಅಲಿ ಆದಿಲಶಹನು ಮತ್ತೆ ಅದೆ ವಜ್ರವನ್ನು ವಿಜಯನಗರಕ್ಕೆ ತೆಗೆದುಕೊಂಡು ಹೋಗಿ ರಾಮರಾಜನಿಗೆ ಕೊಟ್ಟನು. ವಜ್ರವನ್ನು ಪಡೆದ ನಾಲ್ಕು ವರುಷಗಳ ಅನಂತರ ರಾಮರಾಜನ ಮೇಲೆ ವಿಷಮ ಪ್ರಸಂಗ ಬಂದಿತು. ಅದರ ಪರಿಣಾಮ ಏನಾಯಿತೆಂಬುದನ್ನು ಎಲ್ಲರೂ ಬಲ್ಲರು. ರಾಮರಾಜನ ರಾಜ್ಯ, ಮನೆಯ ಜನರು ಕೂಡ ನಾಶವಾಗಿ ನಿರ್ವಂಶವಾಯಿತು. ಅದನ್ನೆಲ್ಲ ಈ ಮೊದಲೆ ಬರೆದಾಗಿದೆ.

ಕೆಲವು ದಿನಗಳು ಉರುಳಿದ ಅನಂತರ ಅಲಿ ಆದಿಲಶಹನಿಗೆ ಒಂದು ಸುದ್ದಿ ಬಂದು ಮುಟ್ಟಿತು. ಯಾವನೋ ಒಬ್ಬ ಗೃಹಸ್ಥನು ಆ ವಜ್ರವನ್ನು ತಂದು ಗೋವೆಯಲ್ಲಿ ಮಾರುತ್ತಿದ್ದಾನಂತೆ. ಗೋವೆಯ ಮಾಲಕನು ಆ ವಜ್ರವನ್ನು ಖರೀದಿಸಲು ಸಿದ್ಧನಾಗಿ ವಜ್ರ ಪರೀಕ್ಷಕನನ್ನು ಕರೆಸಿ ಆ ವಜ್ರದ ಬೆಲೆಯನ್ನು ನಿರ್ಧರಿಸಿದ್ದಾನಂತೆ. ಅರವತ್ತು ಸಾವಿರ ಹೊನ್ನೆಂದು ಅದರ ಬೆಲೆ ನಿಗದಿಯಾಗಿತ್ತು. ಆಗ ಗೋವೆಯ ಮಾಲಕನು ವಿಚಾರಿಸಿ, 'ಪುರಾತನದಿಂದಲೂ ಬಾದಶಹರು ನಮಗೆ ಧಣಿಗಳಾಗಿದ್ದಾರೆ. ಆತನ ಆದೇಶವಿಲ್ಲದೆ ವಜ್ರವನ್ನು ಖರೀದಿಸಲು ಬರುವುದಿಲ್ಲ. ಅರವತ್ತು ಸಾವಿರ ಹೊನ್ನು ಎಂದರೆ ಬೆಲೆಯೂ ಭಾರವಾಯಿತು. ಇಷ್ಟೊಂದು ಹಣವನ್ನು ಕೊಟ್ಟು ಈ ಕಲ್ಲಿನ ತುಣುಕನ್ನು ತೆಗೆದುಕೊಳ್ಳುವಲ್ಲಿ ನಮ್ಮ ಬುದ್ಧಿಯೂ ನಡೆಯುವುದಿಲ್ಲ' ಎಂದೆಲ್ಲ ವಿಚಾರಿಸಿ ವಜ್ರದ ಮಾಲಕನಿಗೆ 'ಕೆಲವು ದಿನ ಇಲ್ಲಯೇ ಇರಿ, ಬಾದಶಹನ ಅನುಮತಿ ಪಡೆದು

*ಮೂಲದಲ್ಲಿ ಹಾಗೆಯೇ ಇದೆ.

ವಜ್ರವನ್ನು ಖರೀದಿಸುವೆ' ಎಂದು ಹೇಳಿದನು. ಈ ವಿಷಯ ಅಲಿ ಆದಿಲಶಹನ ಕಿವಿಗೂ ಬಂದು ಮುಟ್ಟಿತು. ಆಗ ಅಲಿ ಆದಿಲಶಹನಿಗೆ ಆ ವಜ್ರವನ್ನು ತರಬೇಕೆಂಬ ಆಶೆಯಾಯಿತು.

ಆಸಿಕಬಿ ಎಂಬ ಹೆಣ್ಣುಮಗಳೊಬ್ಬಳನ್ನು ಅದನ್ನು ತರಲು ಗೋವೆಗೆ ಕಳಿಸಿದನು. ಆಸಿಕಬಿ ಹೆಣ್ಣು ಆ ಕಾಲದಲ್ಲಿ ಮೋಸ ವಿದ್ಯೆಗೆ ಹೆಸರಾಗಿದ್ದಳು. ನಾನಾ ಪ್ರಕಾರದ ಮೋಸ ವಿದ್ಯೆಗಳನ್ನು ಅವಳು ಬಲ್ಲವಳಾಗಿದ್ದಳು. ಅವಳನ್ನು ಗೋವೆಗೆ ಕಳಿಸಲಾಯಿತು. ಅವಳು ತನ್ನ ಮೋಸದ ವಿದ್ಯೆಯಿಂದ ವಜ್ರದ ಮಾಲಕನನ್ನು ವಿಜಾಪುರಕ್ಕೆ ಕರೆತರುವಂತಾಯಿತು. ಆಸಿಕಬಿ ಗೋವೆಗೆ ಹೋಗಿ ವಜ್ರದ ಒಡೆಯನನ್ನು ಭೆಟ್ಟಿಯಾದಳು. ಅವನಿಗೆ ಹಣದ ಆಮಿಷ ತೋರಿಸಿ ವಿಜಾಪುರಕ್ಕೆ ಬರಲು ಒಪ್ಪಿಸಿದಳು. ಅಷ್ಟರಲ್ಲಿ ಆತನ ಆಪ್ತಮಂಡಳಿಗೆ ವಜ್ರದ ವಿಷಯ ತಿಳಿದು, ಒಂದು ಮಧ್ಯರಾತ್ರಿಯಲ್ಲಿ ಮಲಗಿದಾಗ ಹಾಸಿಗೆಯಲ್ಲೆ ಆತನನ್ನು ಕೊಂದು ವಜ್ರದೊಂದಿಗೆ ಗೋವೆಯಿಂದ ಪರಾರಿಯಾದರು. ಆಸಿಕಬಿ ಅಷ್ಟಕ್ಕೆ ಬಿಡದೆ ವಜ್ರಕಳ್ಳರನ್ನು ಶೋಧಿಸತೊಡಗಿದಳು. ಕೊನೆಗೆ, ವಜ್ರದ ಶೋಧವಾಗಿ ಆ ಜನ ಮುಜಫರಬಾದದಲ್ಲಿ ಸಿಕ್ಕರು. ಅವಳು ಅಲ್ಲಿಗೆ ಹೋದಳು. ವಜ್ರ ತೆಗೆದಕೊಂಡು ಹೋದವನನ್ನು ಪತ್ತೆ ಹಚ್ಚಿ ಆತನನ್ನು ವಿಜಾಪುರಕ್ಕೆ ಕರೆತಂದಳು. ಆದಿಲಶಹನು ಆತನಿಗೆ ಖುಷಿಯಾಗುವಷ್ಟು ಹಣವನ್ನು ಕೊಟ್ಟು ಆತನಿಂದ ವಜ್ರವನ್ನು ಖರೀದಿಸಿದನು.

ಅದು ದುಃಖದಾಯಕ, ಅಮಂಗಳಕಾರಕ ಮತ್ತು ಘಾತುಕ ವಜ್ರವೆಂದು ಡಾಣಾಡಂಗುರವಾಗಿ ಎಲ್ಲರಿಗೂ ಗೊತ್ತಿತ್ತು. ಅದರಿಂದಾಗಿ ಕೆಲವು ದಿನ ಅದನ್ನು ಒಂದು ಹಾಳು ಬಿದ್ದ ಜಾಗೆಯಲ್ಲಿ ಗುಪ್ತವಾಗಿ ಇಡಲಾಯಿತು. ಕೊನೆಗೆ ಅಲಿ ಆದಿಲಶಹನು, ಈ ಭಾರಿ ಕಿಮ್ಮತ್ತಿನ ಘಾತುಕ ವಜ್ರವನ್ನು 'ಬಾರಾ ಇಮಾಮರ' ಒಂದು ಸ್ಥಳದಲ್ಲಿ ಇಟ್ಟರೆ. ವಜ್ರದ ದುರ್ಗುಣಗಳು ಹೋಗಿ ಒಳ್ಳೆಯದಾಗಿ, ಕಲ್ಯಾಣಪ್ರದ-ಸುಖಕಾರಕ ಲಕ್ಷಣಗಳು ಬರಬಹುದೆಂದು ಯೋಚಿಸಿದನು. ಆದಿಲಶಹನ ಲಕ್ಷ್ಯದಲ್ಲಿ ಇದು ಇನ್ನೂ ಬಂದಿತ್ತೋ ಇಲ್ಲವೋ, ಮೈಗುಣ ಹಾಗೂ ಹುಟ್ಟುಗುಣಗಳು ಹಾಗೆ ಮೇಲಿನ ಉಪಾಯಗಳಿಂದ ಹೋಗುವುದಿಲ್ಲ. ಸುಡುವುದು ಅಗ್ನಿಯ ಸ್ವಭಾವವಾಗಿದೆ. ಅಗ್ನಿಯ ಎದುರಿಗೆ, ಕುರಾನ ಪುಸ್ತಕದ ಪ್ರತಿಯನ್ನು ಇಟ್ಟರೂ ಅದು ಕುರಾನ ಇದೆ, ಈ ಕುರಾನನ್ನು ಹೇಗೆ ಸುಡುವುದು ಎಂದು ಯೋಚಿಸುವುದಿಲ್ಲ. ಅದರ ಸುಡುವ ಗುಣ ಸುಟ್ಟು ಬಿಡುತ್ತದೆ. ಇರಲಿ, ಕೊನೆಗೆ ಆ ವಜ್ರವು ಎಂಟನೆಯ ಇಮಾಮ, 'ಅಲೀ ಮುಸಾ ಸಲಲ್ಲಾಹ ಅಲೈಹಿ ವಅಲೀಹಿ ವಸ್ಸಲಮ್' ಅವರ ಹತ್ತಿರ ಕಳಿಸಬೇಕೆಂದು ನಿರ್ಧರಿಸಿ, ತಹಮಾಸೀಪ ಬಾದಶಹನ ಹತ್ತಿರ ಕಳಿಸಿದನು ಮತ್ತು ಅದನ್ನು ಎಂಟನೆಯ ಇಮಾಮರಿಗೆ ಮುಟ್ಟಿಸಲು ಹೇಳಿದನು. ವಜ್ರವು ತಹಮಾಸೀಪ ದೊರೆಯ ಹತ್ತಿರ ಬಂದಮೇಲೆ, ಅದನ್ನು ಕೆಲವು ದಿನ ದೊರೆಯು ತನ್ನ ಹತ್ತಿರವೇ ಇಟ್ಟುಕೊಂಡನು. ಅದರಿಂದಾಗಿ ಕೆಲವೆ ದಿನಗಳಲ್ಲಿ ಆತನು ಸತ್ತನು. ಆತನ ಮಗ ಇಸ್ಮಾಯಿಲ್‌ಶಾಹನು, ತಂದೆ ಸತ್ತನಂತರ ಖುರಾಸಾನದ ಗದ್ದುಗೆಯನ್ನು ಏರಿದನು. ಆತನೂ ಒಂದು ವರುಷ ಐದು ತಿಂಗಳುಗಳಲ್ಲಿ ಸತ್ತನು. ಆತ ಸತ್ತಮೇಲೆ ಆತನ ಸಹೋದರ ಸುಲ್ತಾನ ಮಹಮ್ಮದ ಎಂಬವನು ಇರಾನದ ಬಾದಶಹನಾದನು. ಆತನ ನಾಲ್ಕು 'ಕುಬೆ' ಎಂದರೆ ಶಹಮೃಗದ ತತ್ತಿಯಂಥ ನಾಲ್ಕು ದುಂಡಗಿನ ಗೊಂಚಲಗಳನ್ನು, ಅಲಂಕಾರಯುಕ್ತವಾಗಿ ಸಿದ್ಧಪಡಿಸಿ ಹಜರತ ಇಮಾಮ ಶ್ರೇಷ್ಠ ಎಂಟನೆಯ ಇಮಾಮರ ಸಮಾಧಿಯ ಮೇಲೆ ಕಟ್ಟಲು, ಅದರಲ್ಲಿಯ ಒಂದು ಗೊಂಚಲಿನಲ್ಲಿ ಆ ವಜ್ರವನ್ನಿಟ್ಟು ಮಿನೋರಾದ ಕಡೆಗೆ ಕಳಿಸಿದನು. ಅದನ್ನು ಕಲ್ಯಾಣಪ್ರದವಾದ ಸಮಾಧಿಯ ಮೇಲೆ ಕಟ್ಟಲಾಯಿತು.

ಗೊಂಚಲುಗಳನ್ನು ಕಟ್ಟಿ ಮೂರು ವರುಷಗಳಾಗಿರಲು ಅದೇ ಅಬ್ದುಲ್ಲಾ ಖಾನನು ಉಜಬೆಕಿನ ಸಮರಕಂದದಿಂದ ಹೊರಟು ಸೈನ್ಯಸಹಿತವಾಗಿ ಖುರಾಸಾನ ಪ್ರದೇಶದ ಮೇಲೆ ಏರಿ ಬಂದನು. ಆ ಸಂಪೂರ್ಣ ಪ್ರದೇಶವನ್ನು ಕೈವಶಮಾಡಿಕೊಂಡನು. ಒಂದು ದಿನ 'ದುಸ್' ಪಟ್ಟಣದಲ್ಲಿ, ಆ ನಗರದಲ್ಲಿಯೇ ಸದರೀ ಇಮಾಮರ ಸಮಾಧಿ ಪ್ರಸಿದ್ಧವಾಗಿದೆ, ಆ ನಗರವನ್ನೂ ಹಸ್ತಗತ ಮಾಡಿಕೊಂಡನು. ಅಲ್ಲಿ ಬಹಳಷ್ಟು ಜನರನ್ನು ಕೊಲೆ ಮಾಡಲಾಯಿತು. 'ಖಾಸ ಖನೇ ಮುಬಾರಕ' ದಲ್ಲಿಯೆ ನಾಲ್ಕು ಸಾವಿರ ಸಯ್ಯದ ಜನರನ್ನು, ಆ ಜನರು ಸಂಕಟ-ಭಯಗಳಿಂದಾಗಿ ಗುಹೆಯ ಆಶ್ರಯವನ್ನು ಪಡೆದವರು, ಅವರೆಲ್ಲರನ್ನೂ ಕೊಲೆ ಮಾಡಲಾಯಿತು. ಆ ಕೊಲೆಯಿಂದಾಗಿ ಜನರ ರಕ್ತ ರಸ್ತೆಗಳಲ್ಲಿ ಹರಿಯಿತು. ಬಾದಶಹರಲ್ಲಿ ಕೂಡ ಇರದಷ್ಟು ಸಂಪತ್ತು ಆ ಸಯ್ಯದರು 'ಖನೆ ಮುಬಾರಕ'ದಲ್ಲಿ ಸಂಗ್ರಹಿಸಿದ್ದರು ಅದನ್ನೆಲ್ಲ- ಲೂಟಿ ಮಾಡಿ ತೆಗೆದುಕೊಂಡು ಹೋದರು. ಎಲ್ಲ ಸಂಪತ್ತಿನೊಂದಿಗೆ ಆ ವಜ್ರವೂ ಬಂದು ಅಬ್ದುಲಾಖಾನನ ಭಂಡಾರದಲ್ಲಿ ಸೇರಿತು. ಕೆಲವೆ ದಿನಗಳಲ್ಲಿ ಅಬ್ದುಲ್ಲಾಖಾನನೂ ಮರಣ ಹೊಂದಿದನು. ಆತನ ಮಗ ಅಬ್ದುಲ್ಲಾ ಮೋಮಿನಖಾನನು ತನ್ನ ತಂದೆಯ ಸ್ಥಳದಲ್ಲಿ ಬಂದನು. ಆ ವಜ್ರದ ಘಾತುಕ ಲಕ್ಷಣಗಳಿಂದಾಗಿ ಆತನೂ ಬೇಗ ಮಡಿದನು. ಅನಂತರ ಆ ವಜ್ರವು ಒಬ್ಬ ಗೃಹಸ್ಥನ ಕೈ-ಸೇರಿತು. ಆತ ಅದನ್ನು ರೂಮ ದೇಶಕ್ಕೆ ತೆಗೆದುಕೊಂಡು ಹೋದನು.

ರೂಮ ರಾಜ್ಯದ ಬಾದಶಹ ಸುಲ್ತಾನ ಮಹಮ್ಮದನು, ತರುಣ ಭರ್ತೀ ಹರೆಯದಲ್ಲಿ ಸತ್ತನು. ಆ ದಿನದಿಂದ ವಜ್ರವು ರೂಮ ದೇಶಕ್ಕೆ ಹೋಗಿ ರೂಮದ ರಾಜಧಾನಿಯಲ್ಲಿ ಪ್ರಳಯವನ್ನೆ ಮಾಡಿತು. ಮೊದಲು ರೂಮ ದೇಶದ ಅಮೀರರಲ್ಲಿ ಪರಸ್ಪರ ವೈರತ್ವವನ್ನು ಉಂಟು ಮಾಡಿತು. ಎರಡನೆಯದಾಗಿ ರೂಮದ ಸೈನ್ಯಕ್ಕೆ ಇರಾಣದ ಸೈನ್ಯದ ಮಧ್ಯ ನಾಲ್ಕು ಸಲ ಯುದ್ಧಗಳಾದುವು. ಪ್ರತಿಯೊಂದು ಯುದ್ಧದಲ್ಲೂ ಇರಾಣದ ಸೈನ್ಯವು ರೂಮ ಸೈನ್ಯವನ್ನು ಘಾಸಿಗೊಳಿಸಿ ಪ್ರಬಲತೆಯನ್ನು ಸಾಧಿಸಿತು. ಮೂರನೆಯದಾಗಿ ರೂಮದ ಅಮೀರ ಜನರು, ಶಾಹ ಅಬ್ಬಾಸ ಬಿನ್ ಸುಲ್ತಾನ ಮಹಮ್ಮದ ಬಿನ್ ಶಾಹಾ ತಹಮಾಸೀಪನನ್ನು ಭೆಟ್ಟಿಯಾದರು ಮತ್ತು ಜೀವದ ಮೇಲೆ ಉದಾರರಾಗಿ, ಸೇವೆಗೆ ಕಟಿಬದ್ಧರಾಗಿ, ಆಜುರ್ ಬೈಜಾನ ಮತ್ತು ಪರವಾದನ ಗಡಿಗಳಲ್ಲಿ ಪ್ರದೇಶಗಳನ್ನು ಶಾಹ ತಹಮಾಸೀಪನು ಸತ್ತನಂತರ ರೂಮೀ ಜನರ ಕೈಗೆ ಹೋದದ್ದನ್ನು ಮತ್ತೆ ಶಾಹ ಅಬ್ಬಾಸನ ಸ್ವಾಧೀನಪಡಿಸಿದರು. ಆ ವಜ್ರದ ಕೆಟ್ಟ ಪರಿಣಾಮವು ರೂಮ ದೇಶದಲ್ಲಿ ಬಹಳ ದಿನಗಳವರೆಗೆ ಇತ್ತು. ಅಲ್ಲಾನು ಆ ವಜ್ರದ ಸಂಕಟದಿಂದ ರಕ್ಷಿಸಲಿ.

### ೨೬. ಅಲಿ ಆದಿಲಶಹನ ಮರಣ :

ಅಲಿ ಆದಿಲಶಹನ ತಂಗಿ 'ತಾನಿ ಬೀಬಿ ಸುಲ್ತಾನಾ'ಳನ್ನು ಅಲೀ ಬರೀದನಿಗೆ ಕೊಟ್ಟು ಮದುವೆ ಮಾಡಿದ್ದರು. ಅವಳು ಮಕ್ಕಳಿಲ್ಲದೆ ಸತ್ತಳು. ಅವಳ ಆಪದ್ಧನ ಹಾಗೂ ಅನೇಕ ಆಭರಣಗಳು ಅಲೀ ಬರೀದನ ಮನೆಯಲ್ಲೆ ಉಳಿದುವು. ಸತ್ತವರಿಗೆ ಸಂಬಂಧಿಸಿದ ಪದಾರ್ಥಗಳನ್ನು ವಿತರಿಸುವ ನಾಲ್ಕು ವಿಧಾನಗಳನ್ನು ಕುರಾನ ಶರೀಫದಲ್ಲಿ ಹೇಳಲಾಗಿದೆ. ಮೊದಲನೆಯದು, ಸ್ತ್ರೀಯಾಗಲಿ, ಪುರುಷನಾಗಲಿ ಸತ್ತರೆ ಅವರ ಆಸ್ತಿಯನ್ನು ಅವರ ತಾಯಿ-ತಂದೆಗಳಿಗೆ ಮರಳಿ ಕೊಡಬೇಕು. ಎರಡನೆಯದು, ಆ ಗ್ರಾಮದಲ್ಲಿಯ ಒಳ್ಳೆಯ ನಡತೆಯ ಮನುಷ್ಯನು ಸಾಲದಿಂದ ಪೀಡಿತನಾಗಿ, ಆತನ ಮನೆ ಮಾರುಗಳು ಲಿಲಾವ ಆಗುವ ಪ್ರಸಂಗವಿದ್ದರೆ, ಆತನಿಗೆ ಸತ್ತವರ ಸಂಪತ್ತು ಇತ್ಯಾದಿಗಳನ್ನು ಕೊಟ್ಟು, ಸಂಕಟದಿಂದ ಮುಕ್ತ ಮಾಡಬೇಕು. ಮೂರನೆಯದು, ಸತ್ತವನ ಗ್ರಾಮದಲ್ಲಿಯ ನದಿ ಹಳ್ಳಗಳಿಗೆ ಅಡ್ಡಲಾಗಿ ಕಟ್ಟಿರುವ

ಸೇತುವೆಯು ಬಿದ್ದು ಮಾರ್ಗವು ಬಂದಾಗಿದ್ದರೆ ಅದನ್ನು ಸತ್ತವನ ಸಂಪತ್ತನ್ನು ಖರ್ಚುಮಾಡಿ ಆ ಸೇತುವೆಯನ್ನು ದುರಸ್ತಿ ಮಾಡಿ ಮಾರ್ಗವನ್ನು ಉಪಯೋಗಕ್ಕೆ ತರಬೇಕು. ಇಲ್ಲವೆ ಮಸೀದಿ ಇತ್ಯಾದಿ ಪ್ರಸಿದ್ಧ ಸ್ಥಳಗಳ ಕಟ್ಟಡಗಳು ಬಿದ್ದಿದ್ದರೆ ಅವುಗಳನ್ನು ದುರಸ್ತಿ ಮಾಡಿ ಸರಿಮಾಡಬೇಕು. ಅಥವಾ ಆತನ ಸಂಪತ್ತನ್ನು ಖರ್ಚುಮಾಡಿ ಹೊಸದಾಗಿ ಕಟ್ಟಿಸಬೇಕು. ನಾಲ್ಕನೆಯ ಪರ್ಯಾಯವೆಂದರೆ, ಸಾಯುವ ಮುನ್ನ ಸ್ತ್ರೀಯಾಗಲಿ ಪುರಷನಾಗಲಿ, ಯಾರಿಗೆ ಕೊಡಬೇಕು ಅಥವಾ ಹೇಗೆ ವಿತರಿಸಬೇಕು ಎಂದು ಹೇಳಿರುತ್ತಾರೋ ಅಥವಾ ಬರೆದು ಇಟ್ಟಿರುತ್ತಾರೊ ಆ ರೀತಿಯಾಗಿ ಮೃತ್ಯುಲೇಖದಂತೆ ಕಾರ್ಯಮಾಡಬೇಕು.

ಹೀಗೆ ಶಾಸ್ತ್ರಗಳ ಪ್ರಕಾರ ತನ್ನ ತಂಗಿಯ ಸಂಪತ್ತನ್ನು ಆಭರಣ ಮೊದಲಾದವುಗಳನ್ನು ತರಲು ಒಬ್ಬ ವಕೀಲನನ್ನು ಆದಿಲಶಹನು ಅಲೀಬರೀದನ ಹತ್ತಿರ ಕಳಿಸಿದ್ದನು. ಆಗ ಅಲೀ ಬರೀದನು ಅವಳ ಜಡಜವಾಹಿರಗಳನ್ನು ಕೊಡದೆ ಉಳಿದ ಎಲ್ಲ ವಸ್ತುಗಳನ್ನು ತಿರುಗಿ ಕೊಟ್ಟನು. ಅವಳ ಆಭರಣಗಳು ಹಾಗೆಯೇ ಉಳಿದುವು. ಹಿಸರಿಸನ್ ೯೮೮ರಲ್ಲಿ (ಕ್ರಿ.ಶ. ೧೫೮೦) ಕಾಮಿಲಖಾನನು ಈ ವಿಷಯವನ್ನು ಆದಿಲಶಹನಿಗೆ ನೆನಪಿಸಿದನು. ಮತ್ತು ತನ್ನ ಹಾಗು ಅಲೀಬರೀದನ ಸ್ನೇಹವಿದೆ, ತಮ್ಮ ಅಪ್ಪಣೆಯಾದರೆ ನಾನು ಯಾರನ್ನಾದರೂ ಅಲ್ಲಿಗೆ ಕಳಿಸಿ ತಮ್ಮ ತಂಗಿಯ ಉಳಿದ ಆಭರಣಗಳನ್ನು ತಿರುಗಿ ತರಿಸಿಕೊಳ್ಳುವೆ ಎಂದನು. ಅದಕ್ಕೆ ಆದಿಲಶಹನು, ಅಲೀ ಬರೀದನ ಕಡೆಯಿಂದ ನಮಗೆ ಬರಬೇಕಾದ ವಸ್ತುಗಳು ಕುರಾನ ಷರೀಫ ಶಾಸ್ತ್ರದ ಪ್ರಕಾರ ಬರಬೇಕು ಎಂದನು. ಆ ಮಾತನ್ನು ಕೇಳಿದ ಕಾಮಿಲಖಾನನು ಬಾದಶಹನಿಂದ ಅನುಮತಿ ದೊರೆಯಿತೆಂದು ತಿಳಿದು 'ಅಲಿ ಆಖಾ ಸರಖೇಲ' ಎಂಬ ವ್ಯಕ್ತಿಯನ್ನು ಕರೆದು ಆದಿಲಶಹನ ಹತ್ತಿರ ತಂದು ಆತನಿಗೆ ವಕೀಲಿಯ ಕೆಲಸವನ್ನು ಕೊಟ್ಟು ಬೀದರಕ್ಕೆ ಕಳಿಸಿದನು. ನಾಲ್ಕು ತಿಂಗಳುಗಳ ನಂತರ ಅಲಿ ಆಖಾನು ತಿರುಗಿ ಬಂದನು. ಅವನ ತಂಗಿಯ ಆಭರಣಗಳಲ್ಲಿಯ ಕೆಲವು ಆಭರಣಗಳು ಹಾಗೂ ತಂಗಿಯ ಸೇವೆಯಲ್ಲಿದ್ದ ಇಬ್ಬರು ನಪುಂಸಕ ಸೇವಕರನ್ನು ಕರೆದುಕೊಂಡು ಬಂದು ಒಪ್ಪಿಸಿದನು.

ಆ ಇಬ್ಬರು ಸೇವಕರಲ್ಲಿಯ ಒಬ್ಬನನ್ನು ಆದಿಲಶಹನು ರಾತ್ರಿಯಲ್ಲಿ ತನ್ನ ತಂಗಿಯ ಆಭರಣಗಳು ಕುರಿತು ಶೋಧಿಸಲು ಕರೆದನು. ಆ ನಪುಂಸಕ ಸೇವಕನು ಕೀಳು ಉತ್ಪತ್ತಿಯವನಾಗಿದ್ದು, ಬಾದಶಹನ ಸನ್ನಿಧಿಯಲ್ಲಿ ಬಂದನು. ಬಾದಶಹನ ಹತ್ತಿರ ಆತನ ಅಂಗರಕ್ಷಕರು ಪ್ರತ್ಯಕ್ಷವಾಗಿ ಇದ್ದಾಗಲೂ ಒಮ್ಮೆಲೇ ಬಾದಶಹನ ಎದೆಯ ಮೇಲೆ ಕತ್ತಿಯಿಂದ ಹೊಡೆದನು. ಆ ಕತ್ತಿ ಬಾದಶಹನ ಎದೆ ಸೀಳಿ ಬೆನ್ನ ಹಿಂದೆ ಬಂದಿತು. ಬಾದಶಹನು ಆ ಸ್ಥಳದಿಂದ ಎದ್ದು ಗಾಯಾಳುವಾಗಿ ಅಂಗಳದಲ್ಲಿ ಬಂದು ಬಿದ್ದನು. ಹತ್ತಿರ ಇದ್ದ ಜನರು ಕೂಗಹತ್ತಿದರು.

ರಫೀಉದ್ದೀನ ಶಿರಾಜಿ, ಅರಮನೆಯ ಹವಾಲದಾರನು, 'ಖಾನಸಾಕರಿ' ಮತ್ತು ಖಜೀನೆಗಳ ಮೇಲೆ ಆತನ್ನು ನಿಯಮಿಸಲಾಗಿತ್ತು. ಆತನೂ ಹೇಳುತ್ತಾನೆ. 'ಆ ಸಮಯದಲ್ಲಿ ನಾನು ಹೊರಗಿದ್ದೆ ಮತ್ತು ಅಫಜಲಖಾನನೂ ಅಲ್ಲಿ ಎಷ್ಟೋ ಅಧಿಕಾರಿಗಳೊಂದಿಗೆ ಕುಳಿತಿದ್ದನು ಎಲ್ಲರೂ ಅದೇ ಸಮಯದಲ್ಲಿ ತಂತಮ್ಮ ಮನೆಗಳಿಗೆ ಹೊರಡಲು ಸಿದ್ಧರಾಗಿದ್ದರು. ಕೋಟೆಯ ಬಾಗಿಲವರೆಗೂ ಬಂದು ಮುಟ್ಟಿರಬೇಕು, ಅಷ್ಟರಲ್ಲಿ ಕೂಗು ಕೇಳಿಸಿತು. ಅದನ್ನು ಕೇಳಿದ ನಾನು ಬಾಗಿಲದ ಒಳಗೆ ಬಂದು ನೋಡಿದರೆ ಬಾದಶಹನು ಗಾಯಾಳುವಾಗಿ ರಕ್ತ ಸುರಿಸುತ್ತ ಬಿದ್ದಿದ್ದಾನೆ. ಅಫಜಲಖಾನನೂ ಮನೆಗೆ ಹೋಗುತ್ತಿದ್ದವನು ತಿರುಗಿ ಓಡಿ-ಓಡಿ ಬಂದನು. ಆತನು ಅವಸ್ಥೆಯನ್ನು ನೋಡಿ ಆದಿಲಶಹನ ನಾಡಿಗಳನ್ನು ಪರೀಕ್ಷಿಸಿದನು. ಮತ್ತು 'ಎಂಥ ಸಂಕಟ ಇದು, ನಮ್ಮ ಎಲ್ಲರ ಮುಖದ ಮೇಲೂ ಮಣ್ಣು ಬೀಳಲಿ' ಎಂದು ಕೂಗಿದನು. ಬಾದಶಹನನ್ನು ಕೊಂದ ನಪುಂಸಕನು ಅಲ್ಲಯೇ ಒಂದು ಏಕಾಂತ ಸ್ಥಳದಲ್ಲಿ ನಿಂತಿದ್ದನು. ಒಬ್ಬ ಗೃಹಸ್ಥನು

ಅವನನ್ನು ಹಿಡಿದು ಕೊಲ್ಲಬೇಕೆಂದು ಮುಂದೆ ಬರುವಷ್ಟರಲ್ಲಿ ನಪುಂಸಕನು ಒಂದು ಕೋಣೆಯಲ್ಲಿ ಜಿಗಿದು ಬಾಗಿಲು ಮುಚ್ಚಿಕೊಂಡು ಬಿಟ್ಟನು. ಮರುದಿನ ಆ ನಪುಂಸಕನನ್ನು ಕೊಲ್ಲಲಾಯಿತು. ಇನ್ನೊಬ್ಬ ನಪುಂಸಕನನ್ನೂ ಬಾದಶಹನ ನೌಕರರು ಹಿಡಿದು ಅದೇ ದಿನ ಕೊಲೆಮಾಡಿದರು'.

ಆದಿಲಶಹನ ಕೊಲೆಯಾಗಿದೆ [1] ಎಂದು ನಗರದ ಎಲ್ಲ ಜನರಿಗೂ ತಿಳಿಯುತ್ತಿದ್ದಂತೆ ಅದೇ ರಾತ್ರಿ ಬಹಳಷ್ಟು ಜನರು ಬಂದು ಅರಮನೆಯ ಕೋಟೆಯ ಬಾಗಿಲಲ್ಲಿ ಸೇರಿದರು. ಕಾರಭಾರಿಗಳು, ಅಧಿಕಾರಿಗಳು, ಅಮೀರರು ಸಣ್ಣ-ದೊಡ್ಡವರಾದಿಯಾಗಿ ಎಲ್ಲರೂ ಬಾಗಿಲ ಮುಂದೆ ಸೇರಿದರು. ಆದರೆ ಯಾರಿಗೂ ಬಾಗಿಲದ ಒಳಗೆ ಹೋಗುವ ಧೈರ್ಯವಾಗಲಿಲ್ಲ. ಬೆಳಗಾದ ಅನಂತರ ಒಬ್ಬ ಗೃಹಸ್ಥನು 'ಬಾಗಿಲಮುಂದೆ ಸೇರಿದ್ದೇವೆ. ವಕೀಲುಲ್‌ಸಲ್ತನತ್ ಅಫಜಲ ಖಾನರಿಗೆ ಸಲಾಮುಗಳನ್ನು ಸಲ್ಲಿಸಿ ನಿರೋಪ ಕೊಡುತ್ತಿದ್ದೇವೆ. ನಾವು ಇಡೀ ರಾತ್ರಿ ಇಲ್ಲಿ ನೀರಿನಿಂದ ಹೊರಬಿದ್ದ ಮೀನುಗಳಂತೆ ಗಾಬರಿಯಿಂದ ಚಡಪಡಿಸುತ್ತಿದ್ದೇವೆ. ನೀವೆಲ್ಲ ಯಾವ ವಿಚಾರದಲ್ಲಿದ್ದೀರಿ? ಯಾವ ಚಿಂತೆ ಇದೆ; ಯಾವ ಮನುಷ್ಯನನ್ನು ಯೋಗ್ಯನೆಂದು ಕಂಡು ಗದ್ದುಗೆಯ ಮೇಲೆ ಕೂಡಿಸಲು ನಿರ್ಧರಿಸಿದ್ದೀರಿ? ನಾವೆಲ್ಲ ಕಾರಭಾರಿಗಳು ತಮ್ಮ ಇಚ್ಛೆಯಂತೆ ನಡೆದುಕೊಳ್ಳುತ್ತೇವೆ' ಎಂದನು. ಅದಕ್ಕೆ ಅಫಜಲಖಾನನು, 'ನಾನು ನಿಮ್ಮೆಲ್ಲ ಮಿತ್ರರ ಸೇವಕನಾಗಿರುವೆ - ತಮಗೆ ಯೋಗ್ಯ ಕಂಡದ್ದು ಮತ್ತು ತಾವು ಯಾವ ವ್ಯಕ್ತಿಯನ್ನು ಗದ್ದುಗೆಯ ಮೇಲೆ ಕೂಡಿಸುತ್ತೀರೋ ಅದಕ್ಕೆ ತಾವೇ ಮುಖ್ತ್ಯಾರರಾಗಿದ್ದೀರಿ.' ಎಂದನು. ಆತನ ಉತ್ತರ ಕೇಳಿ ಕಾರಭಾರಿ ಜನರು ತಂತಮ್ಮಲ್ಲೇ ವಿಚಾರ ಮಾಡಿ, ಮೀರ ಮುರ್ತಜಾ ಖಾನ ಆಂಜೂನನ್ನು ಕಳಿಸಿದರು. ಬಾಗಿಲದ ಹತ್ತಿರ ಬಂದು ಸಭೆ ನಡೆಸಿದರು. ಆತನ ಕಡೆಯಿಂದ ವಕೀಲನಾಗಿ ಬಂದ ಶಾಹ ಕಮಾಲುದ್ದೀನ ಫತಲುಲ್ಲಾಹನು ಎಲ್ಲ ಕಾರಭಾರಿಗಳೊಂದಿಗೆ ಚರ್ಚಿಸಿ ಒಂದು ನಿರ್ಧಾರಕ್ಕೆ ಬಂದರು. ರಾಜಕುಮಾರ ಇಬ್ರಾಹಿಮ ಎಂಬವನು ಆದಿಲಶಹನ ಅಣ್ಣನ ಮಗನಿದ್ದು, ಆತನೇ ನಿಜವಾದ ವಾರಸದಾರನಾಗಿದ್ದಾನೆ. ಅಲಿ ಆದಿಲಶಹನು ಕೂಡ ಜೀವಂತ ಇದ್ದಾಗ ಮೇಲಿಂದ ಮೇಲೆ, ತನ್ನ ಹಿಂದೆ ಈ ಗದ್ದುಗೆಯ ಧಣಿ ಇಬ್ರಾಹಿಮನೇ ಆಗಬೇಕೆಂದು ಮತ್ತು ಹಾಗೆ ಮಾಡಿರೆಂದು ಹೇಳುತ್ತಿದ್ದನು. ಬಾದಶಹನು ಆತನನ್ನು ತನ್ನ ಮಗನಂತೆ ನೋಡಿಕೊಂಡಿದ್ದಾನೆ. ಆ ಇಬ್ರಾಹಿಮನನ್ನೆ ಗದ್ದುಗೆಯ ಮೇಲೆ ಕೂಡಿಸಬೇಕು. ವಕೀಲುಲ್ ಸಲ್ತನತ್ ಕೆಲಸವನ್ನು ಮೊದಲಿನಂತೆ ತಾವು-ತಾವೇ ಮಾಡಬೇಕು. ಉಳಿದ ಅಧಿಕಾರಿಗಳನ್ನು ತಮ್ಮ ಮನಸೋ ಇಚ್ಛೆ ಬದಲಿಸಬಹುದು. ತಮಗೆ ಸರಿ ಕಂಡ ಅಧಿಕಾರ ಪದವಿಗಳನ್ನು ಯಾರಿಗೂ ಕೊಡಬಹುದು' ಎಂದರು. ಅದಕ್ಕೆ ಅಫಜಲಖಾನನು ಉತ್ತರಿಸಿ 'ಇನ್ನು ಮುಂದೆ ನನಗೆ ವಕೀಲುಲ್ ಸಲ್ತನತ್ ಕಾರ್ಯ ಬೇಡ, ಬೇರೆ ಯಾರನ್ನಾದರೂ ನಿಯಮಿಸಿರಿ' ಎಂದನು. ಅದಕ್ಕೆ ಮುರ್ತಜಾಖಾನನು, 'ಇದೊಂದು ಸಲ ನೀವೇ ಮನಸ್ಸಿನ ಮೇಲೆ ತೆಗೆದುಕೊಂಡು ನಿಮಗೆ ಸರಿಕಂಡದ್ದನ್ನು ಮಾಡಿರಿ' ಎಂದನು, ಆಗ ಅಫಜಲಖಾನನು 'ಹೇಳಿ, ಬಹಳಷ್ಟು ಜನ ಸೇರಿದ್ದಾರೆ; ಒಂದು ವೇಳೆ ಕೋಟೆಯ ಬಾಗಿಲನ್ನು ತೆರೆದರೆ, ಜನರು ಗದ್ದಲವಾಗಿ, ಆ ಗದ್ದಲದಲ್ಲಿ ಬೇರೊಂದು ಸಂಕಟವೇ ನಿರ್ಮಾಣವಾಗಬಹುದು. ಆದ್ದರಿಂದ ಮೂರು ನಾಲ್ಕು ಜನ ಗೃಹಸ್ಥರು ಮುಖ್ಯಸ್ಥರಾಗಿ ಒಳಗೆ ಬನ್ನಿರಿ, ಅದೇ ಸರಿ ಎಂದು ಕಾಣುತ್ತದೆ' ಎಂದನು. ಶಾಹ ಕಮಾಲುದ್ದೀನ, ಫತಲುಲ್ಲಾಹ, ಕಾಮಿಲ್‌ಖಾನ, ಮುರ್ತಜಾಖಾನ, ಮತ್ತು ಕಿಶ್ವರಖಾನನ ಕಿರಿಯ ಮಗ, ಕಾಮಿಲಖಾನನ ಅಳಿಯ ಮಂಜಲ್‌ಖಾನ ಇಷ್ಟು ಜನರು ಒಳಗೆ ಬಂದರು. ತಮ್ಮ ತಮ್ಮೊಳಗೆ ಮಾತನಾಡಿ, ಒಂದು ನಿರ್ಧಾರಕ್ಕೆ ಬಂದು ರಾಣೀವಾಸದ ಬಾಗಿಲಲ್ಲಿ ಬಂದು ಮುಟ್ಟಿದರು.

---

೧. ಅಲಿ ಆದಿಲಶಹನ ಮೃತ್ಯು ೨೪ ಸಫರ ೯೮೮ (೯, ಏಪ್ರಿಲ್, ೧೫೮೦)

ಇಬ್ರಾಹಿಮ ಆದಿಲಶಹನನ್ನು ಮನೆಯಿಂದ ಹೊರಗೆ ಕರೆತಂದು ಗೋಪುರದ ಮೇಲೆ ಒಂದು ಆಸನವನ್ನು ಹಾಕಿ, ಅದರಲ್ಲಿ ಅವನನ್ನು ಕುಳ್ಳಿರಿಸಿದರು. ಬಾದಶಾಹಿ ಥಾಟಿನ ಹಸಿರು ಬಣ್ಣದ ಕಲಾಬತ್ತಿನ ಛತ್ರ-ಚಾಮರಗಳನ್ನು ಆತನ ತಲೆಯಮೇಲೆ ಹಿಡಿದರು. ದರಬಾರದ ಕಾಮದಾರರು, ಕಾರಭಾರಿಗಳು ಮುಜುರೆ ಸಲ್ಲಿಸಿ ಶುಭಾಶಯಗಳನ್ನು ಸಲ್ಲಿಸಹತ್ತಿದರು. ಕಪ್ಪುಕಾಣಿಕೆಗಳನ್ನು ಕೊಡಹತ್ತಿದರು. ಅನಂತರ ಹೊರಗಿನ ಎಲ್ಲ ಜನರು ಮುಜುರೆ ಸಲ್ಲಿಸುತ್ತ, ಪರಾಕುಗಳನ್ನು ಹೇಳುತ್ತ ತಿರುಗಿ ಹೋಗಹತ್ತಿದರು. ಅನಂತರ ಶಾಹ ಕಮಾಲುದ್ದೀನ ಫತಲುಲ್ಲಾಹನನ್ನು ಸಂಪೂರ್ಣ ಕಾರಭಾರಿಯನ್ನಾಗಿ ಮಾಡಿದರು.

ಕಾಮದಾರ ಕಛೇರಿಯ ಎಲ್ಲ ಜನರು, ವಿದ್ವಾಂಸರು, ಗುಣವಂತರು ಹೀಗೆ ನಗರದಲ್ಲಿಯ ಎಲ್ಲ ಜನರ ಸಮ್ಮುಖದಲ್ಲಿ ಅಲ್ ಆದಿಲಶಹನ ಶವಕ್ಕೆ ಸ್ನಾನ ಮಾಡಿಸಿ, ಕಫನ ಮಾಡಿ, ಅಂದರೆ ಪ್ರೇತದ ಮೇಲೆ ವಸ್ತ್ರಗಳನ್ನು ಹೊದಿಸಿ ಆತನ ಪ್ರೇತವನ್ನು ತಂದೆಯ ಶವಪೆಟ್ಟಿಗೆಯಲ್ಲಿಟ್ಟು ನಗರದ ಪ್ರಸಿದ್ಧ ಸ್ಥಳದಲ್ಲಿ ಶನಿವಾರ ದಿನಾಂಕ ೨೪, ತಿಂಗಳು ಸಫರ, ಹಿಜರಿ ಸನ್ ೯೮೮ರಂದು (೯, ಏಪ್ರಿಲ್ ೧೫೮೦) ಆ ರತ್ನವನ್ನು ಎಂದರೆ ಅಲೀ ಆದಿಲಶಹನನ್ನು ಭೂಮಿಯಲ್ಲಿ ಧಫನ ಮಾಡಿದರು. ಮುಂದೆ ಹಿಜರಿ ಸನ್ ೧೦೫೮ರಲ್ಲಿ (ಕ್ರಿ.ಶ. ೧೬೪೭-೪೮)ರಲ್ಲಿ ಸುಲ್ತಾನ ಮಹ್ಮದ ಆದಿಲಶಹ ದಬೀರ ಈತನು ಅಲಿ ಆದಿಲಶಹನ ಸಮಾಧಿಯ ಮೇಲೆ ಚೌಖಂಡಿಯನ್ನು ಕಟ್ಟಿದನು.

ರಫಿಯುದ್ದೀನ ಶಿರಾಜಿ ಹೇಳಿಕೆಯಲ್ಲಿ ಆದಿಲಶಹನು ಕಾಮಿಲಖಾನನ ಮಸಲಿತ್ತಿನಿಂದ ಸತ್ತನು ಎಂದೂ ಪ್ರಸಿದ್ಧವಾಗಿದೆ. ಆ ವಿಷಯದಲ್ಲಿ ಕಾರಣವೆಂದರೆ, ಕಾಮಿಲಖಾನನು ಮುಲಕೀ ಕೆಲಸದಲ್ಲಿದ್ದಾಗ, ಆತನಿಗೆ ತುಂಬ ಗರ್ವ ಬಂದಿತ್ತು. ಮತ್ತು ತಾನೆ ಎಲ್ಲರಲ್ಲಿ ಶ್ರೇಷ್ಠನು, ಜಾಣನು ಎಂದು ತಿಳಿದುಕೊಂಡಿದ್ದನು. ಆಗ ಕಲ್ಲೋರದ ಕೋಟೆಯಲ್ಲಿ, ಎಂದರೆ ಆ ಕೋಟೆ ಕಾಮಿಲಖಾನನ ಜಹಗೀಯಲ್ಲಿತ್ತು. ಆ ಕೋಟೆಯಲ್ಲಿ ಒಬ್ಬ ಸಯ್ಯದನು (ವಾಸಿಸುತ್ತಿದ್ದ) ಕಾಮಿಲಖಾನನ ಮಂಡಳಿಯು ಆತನ ಮೇಲೆ ಏನೋ ಒಂದು ದೋಷವನ್ನು ಹೊರಿಸಿ, ಆತನ ಕಾಲಲ್ಲಿ ಬೇಡಿಗಳನ್ನು ಹಾಕಿ ಬಂಧನದಲ್ಲಿಟ್ಟಿದ್ದನು. ಆ ಬಲವಂತದ ಪೀಡೆಯ ಬಬ್ಬಾಟವು ಸಾಕಷ್ಟು ಸಲ ಆದಿಲಶಹನ ಕಿವಿಯ ಮೇಲೆ ಬಿದ್ದಿತ್ತು. ಆದಿಲಶಹನು ಕಾಮಿಲಖಾನನಿಗೆ ಸಯ್ಯದ ಜನರನ್ನು ಶಿಕ್ಷಿಸುವುದು ಯೋಗ್ಯವಲ್ಲವೆಂದು ನಾಲ್ಕು ಸಲ ಹೇಳಿದ್ದನು. ಆತನನ್ನು ಬಂಧನದಿಂದ ಮುಕ್ತಮಾಡಲು ಆದೇಶವಿತ್ತಿದ್ದನು. ಕಾಮಿಲಖಾನನು, ಬಾದಶಹನ ಆಜ್ಞೆಗೆ ಮನ್ನಣೆ ಕೊಡದೆ, ಆತನ ಆದೇಶದಂತೆ ಕೆಲಸ ಮಾಡಿರಲಿಲ್ಲ. ಆ ಸಯ್ಯದನನ್ನು ಬಿಡುಗಡೆ ಮಾಡುವ ಕೆಲಸದಲ್ಲಿ ಸಡಿಲು ಬಿಟ್ಟಿದ್ದನು. ಆಗ ಒಂದು ದಿನ ಆದಿಲಶಹನು ಒಂದು ಸ್ಥಳಕ್ಕೆ ಹೊರಟಿದ್ದನು. ಕಾಮಿಲಖಾನನೂ ಬಾದಶಹನ ಜೊತೆಗಿದ್ದನು. ಆಗ ಆ ಬಂಧಿತ ಸಯ್ಯದನ ವೃದ್ಧ ತಂದೆ, ಅಲ್ಲಿಗೆ ಹೋಗಿ ಬಾದಶಹನ ಎದುರು ಕೂಗುತ್ತ 'ಕಾಮಿಲಖಾನನು ಬಲವಂತದಿಂದ ನನ್ನ ಮಗನನ್ನು ಬಹಳದಿನಗಳಿಂದ ಸೆರೆ ಮನೆಯಲ್ಲಿಟ್ಟಿದ್ದಾನೆ' ಎಂದನು. ಆದಿಲಶಹನು ಆ ಮುದುಕನ ಅಳುವನ್ನು ಕೇಳುತ್ತಲೇ ಗಾಬರಿಯಿಂದ ಅತ್ಯಂತ ಸಿಟ್ಟಿನಿಂದ ಸಂತಪ್ತನಾದನು ಮತ್ತು ಆದಿಲಶಹನು ಕಾಮಿಲಖಾನನಿಗೆ ಜೋರಾಗಿ ಒದ್ದನು. ಆತನ ಹಿಂದೆಯೆ ರಫೀಯುದ್ದೀನ ಶಿರಾಜಿ ನಿಂತಿದ್ದನು. ಒದಿಕೆಯಿಂದ ಕಾಮಿಲಖಾನನು ಶಿರಾಜಿಯ ಮೇಲೆ ಬಿದ್ದನು. ಅನಂತರ ಆದಿಲಶಹನು ಕಾಮಿಲಖಾನನನ್ನು ಸಮಾಧಾನ ಪಡಿಸುತ್ತ ಅನೇಕ ಜಡಜವಾಹಿರಗಳನ್ನು, ವಸ್ತ್ರಗಳನ್ನು ಕೊಡುತ್ತ ಆತನನ್ನು ಅದೇ ಅಧಿಕಾರದಲ್ಲಿ ಮುಂದು ವರಿಸಿದನಾದರೂ ಕಾಮಿಲಖಾನನ ಮನದಲ್ಲಿ ಈ ಸಿಟ್ಟು ಉಳಿದಿತ್ತು ಮತ್ತು ಅವಕಾಶಕ್ಕಾಗಿ ಕಾಯುತ್ತ ಒಂದು ಸಮಯವನ್ನು ಸಾಧಿಸಿ ಕಾಮಿಲಖಾನನು ಬಾದಶಹನನ್ನು ಕೊಲ್ಲಿಸಿದನು.

ಅಲ್ಲಾನಿಗೆ ಗೊತ್ತು, ಮಹಮ್ಮದ ಕಾಸೀಮ ಫರಿಶ್ತಾ ಇಸ್ತರಾಬಾದಿಯು ಅಲೀ ಆದಿಲಶಹನ ಮರಣದ ವಿಷಯದಲ್ಲಿ ಬೇರೆಯಾಗಿಯೇ ಬರೆದಿದ್ದಾನೆ. ಆದರೆ ಈ ಪ್ರಸಂಗ ಹಾಗು ಬೇರೆ ಅನೇಕ ಪ್ರಸಂಗಗಳಲ್ಲಿ ರಫೀಯುದ್ದೀನ ಶಿರಾಜಿಯು ಪ್ರತ್ಯಕ್ಷವಾಗಿ ನೋಡಿದ್ದನು. ಮಹಮ್ಮದ ಕಾಸಿಮ ಫಿರಿಶ್ತಾನು ಕೇಳಿದ್ದನು. ಆದ್ದರಿಂದ ಒಂದು ಪದ್ಯದ ಅರ್ಥದಂತೆ, 'ಪ್ರತ್ಯಕ್ಷ ಕಂಡದ್ದಕ್ಕೆ ಕೇಳಿದ್ದು ಹೇಗೆ ಸರಿ ಹೋದೀತು' ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಯಾಕೆಂದರೆ, ರಫಿಯುದ್ದೀನ ಶಿರಾಜಿಯು ರಾಮರಾಜನ ಯುದ್ಧಕ್ಕಿಂತ ಐದು ವರುಷ ಮೊದಲು ತನ್ನ ದೇಶದಿಂದ ಬಂದು ಆದಿಲಶಹನ ದರಬಾರಿನಲ್ಲಿ ನೌಕರಿಗಿದ್ದನು. ಉತ್ತಮ ಪ್ರಕಾರದ ಸೇವೆಯಿಂದ ಯೋಗ್ಯತೆಯನ್ನು ಪಡೆದು ಹಗಲು-ರಾತ್ರಿ ಬಾದಶಹನ ಸಮ್ಮುಖದಲ್ಲೆ ಇರುತ್ತಿದ್ದನು. ಇಪ್ಪತ್ತೊಂದು ವರುಷ ಅಲಿ ಆದಿಲಶಹನ ಸೇವೆಯನ್ನು ಮಾಡಿದನು. ಎಲ್ಲ ಪ್ರಸಂಗಗಳನ್ನು ರಫೀಯುದ್ದೀನನು ಪ್ರತ್ಯಕ್ಷ ತನ್ನ ಕಣ್ಣಾರೆ ಕಂಡಿದ್ದನು. ಈ ವಿಷಯದಲ್ಲಿ ಆತನು ನಿಸ್ಸಂಶಯವಾಗಿ ಬರೆದಿದ್ದಾನೆ. ಮಹ್ಮದ ಕಾಸಿಮ ಫಿರಿಶ್ತಾನ ಹೇಳಿಕೆ ಭಿನ್ನವಾಗಿದೆ. ಒಂದಕ್ಕೊಂದು ಹೊಂದುವುದಿಲ್ಲ. ಯಾಕೆಂದರೆ ಮಹ್ಮದ ಕಾಸಿಮನು ಆ ಯುದ್ಧವಾದ ಅನಂತರ ಬಹಳ ವರುಷಗಳಾದ ಮೇಲೆ ದರಬಾರದಲ್ಲಿ ಬಂದು ಇರಹತ್ತಿದನು ಮತ್ತು ತನಗೆ ಬೇಕಾದ ಹಾಗೆ ವಿಷಯಗಳನ್ನು ಬರೆದನು. ನ್ಯಾಯದಿಂದ ಓದುವವರ ಅವಲೋಕನದಲ್ಲಿ ಇದು ಪ್ರತ್ಯಕ್ಷ ಸಿದ್ಧವಾಗಿದೆ. ಏನೆಂದರೆ, ಮಹಮ್ಮದ ಕಾಸಿಮನು ನಿಜಾಮಶಹನ ದೊಡ್ಡತನದ ಇರುವಿಕೆಯನ್ನು ತೋರಿಸಿದಂತೆ ಆದಿಲಶಹನ ದೊಡ್ಡತನವನ್ನು ತೋರಿಸುವಲ್ಲಿ ಯತ್ನ ಮಾಡಿಲ್ಲ. ಆದ್ದರಿಂದ ಈ ಗ್ರಂಥಕಾರನು ಎಷ್ಟೇ ವಿಷಯಗಳಲ್ಲಿ ರಫಿಯುದ್ದೀನ ಶಿರಾಜಿ ಬರೆದ ಕಥಾಭಾಗಗಳ ವರ್ಣನೆಯು ಮಹ್ಮದ ಕಾಸಿಮ ಫಿರಿಶ್ತಾನು ವರ್ಣನೆ ಮಾಡಿದ ವಿಷಯಗಳಿಗಿಂತ ಅಧಿಕವೆಂದು ತಿಳಿದು ಸ್ವೀಕರಿಸಿದ್ದಾನೆ. ಹಾಗೆಯೇ ಯುದ್ಧದ ವಿಷಯ, ಆದಿಲಶಾಹ ಹಾಗೂ ರಾಮರಾಜನ ಮಧ್ಯದ ಯುದ್ಧ ಯೂಸುಫ ಆದಿಲಖಾನನ ಉತ್ಪತ್ತಿ ಮತ್ತು ಕೆಲವು ವಿಷಯಗಳಲ್ಲಿ ಆತನು ಹೇಳಿದ್ದನ್ನು ಬಿಡಲಾಗಿದೆ.

### *೨೭. ಸತ್ತ ಅಲಿ ಆದಿಲಶಹನ ಉತ್ತಮ ಲಕ್ಷಣಗಳು, ಶ್ರೇಷ್ಠ ಸ್ವಭಾವ ಹಾಗು ಆತನ ಮರಣದ ಸೂಚನೆ :*

ರಫೀಯುದ್ದೀನ ಶಿರಾಜಿಯನ್ನು ಖಾನಸಾಕರಿ (ಅಡುಗೆ ಮೇಲ್ವಿಚಾರಣೆ), ಹವಾಲದಾರೀ ಕೆಲಸ, ಮಹಾಲಹವಾಲದಾರಿ (ಜಮಾಬಂದಿಯ ಮೇಲ್ವಿಚಾರಣೆ) ಹಾಗೂ ಭಾಂಡಾರದ ಮೇಲೆ ನಿಯಮಿಸಲಾಗಿತ್ತು. ಆತನು ಇಪ್ಪತ್ತೊಂದು ವರುಷ ಅಲೀ ಆದಿಲಶಹನ ಸೇವೆಯಲ್ಲಿ ಇದ್ದನು. ಆದಿಲಶಹನ ನಡೆ-ನುಡಿಗಳ ಜೊತೆಗೆ ಯಾವಾಗಲೂ ಆತನ ಜೊತೆಗೆಯೇ ಇರುತ್ತಿದ್ದನು. ದಯಾವಂತ ಬಾದಶಹನ ಅನೇಕ ಲಕ್ಷಣಗಳನ್ನು ಸ್ವಭಾವವನ್ನು ಗುರುತಿಸಿ ಅವಲೋಕನ ಮಾಡಿ ಆತನು ಬರವಣಿಗೆಯಲ್ಲಿ ಇಳಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಬರೆಯುವುದು ಸೂಕ್ತವೆಂದು ಕಾಣುತ್ತದೆ. ಆದ್ದರಿಂದ ಆತನು ವರ್ಣಿಸಿದ್ದನ್ನು ಇಲ್ಲಿ ಬರೆಯಲಾಗಿದೆ :

'ಅಲೀ ಆದಿಲಶಹ ಬಹಳ ದಯಾವಂತ ಸ್ವಭಾವದವನಾಗಿದ್ದರು. ಫಕೀರರಂತೆ (ಸಂನ್ಯಾಸಿ, ಭಿಕ್ಷುಕರ ಹಾಗೆ) ಇರುತ್ತಿದ್ದನು. ತಿನ್ನುಣ್ಣುವುದರಲ್ಲಿ, ಸುಖಪಡುವುದರಲ್ಲಿ ಆತನ ಇಚ್ಛೆ ಇರಲಿಲ್ಲ. ಅವುಗಳ ಇಚ್ಛೆಯನ್ನು ಪ್ರತಿಬಂಧಿಸುತ್ತಿದ್ದನು. ಎಲ್ಲ ಮನುಷ್ಯರ ಮೇಲೆ ಪ್ರೀತಿ, ಧರ್ಮ ಹಾಗೂ ಬಕ್ಷೀಸು ಕೊಡುವುದರಲ್ಲಿ ಅದ್ವಿತೀಯನಾಗಿದ್ದನು. ಆತನ ಧರ್ಮನೀತಿ, ಬಕ್ಷೀಸು ಇತ್ಯಾದಿ ಕೊಡುವುದರ ಕುರಿತು ವಿಶ್ವದಲ್ಲೆ ಖ್ಯಾತಿಯಿತ್ತು.

ವಿಶ್ವದ ನಾನಾ ಮೂಲೆಗಳಿಂದ ಆತನ ದರಬಾರಿನಲ್ಲಿ ಬಂದು ಸೇರಿ ಆತನ ಉಪಕಾರದ ಹಾಗೂ ಧರ್ಮದ ತಟ್ಟೆಯಲ್ಲಿಯ ಉಚ್ಛಿಷ್ಟವನ್ನು ತೆಗೆದುಕೊಂಡು ಹೋಗುತ್ತಿದ್ದರು. ಅಂದರೆ ಎಲ್ಲ ಜನರು ಬಕ್ಷೀಸು ಇನಾಮುಗಳನ್ನು ಪಡೆಯುತ್ತಿದ್ದರು. ವಿದ್ವಾಂಸ ಜನರು, ಗುಣೀ ಜನರು, ಶಾಸ್ತ್ರಜ್ಞರು ಕವಿಗಳು, ಬುದ್ಧಿವಂತರು, ಸಲಹೆಯನ್ನು ಕೊಡುವ ಸಮುದಾಯ ಮತ್ತು ಪರ್ಶಿಯನ್ ದೇಶದ, ಆರಕಾನಿನ, ಅಜರ್‌ಬೆಜಾನದ ಅರಬಸ್ಥಾನದ ಮತ್ತೆಲ್ಲ ದೇಶಗಳ ಜನರು ಬರುತ್ತಿದ್ದರು. ದೊಡ್ಡಸ್ತಿಕೆಯನ್ನು ಪಡೆದು ತಮ್ಮ ಅಭೀಷ್ಟಗಳನ್ನು ಪೂರೈಸಿಕೊಂಡು ತಂತಮ್ಮ ದೇಶಗಳಿಗೆ ತಿರುಗಿ ಹೋಗುತ್ತಿದ್ದರು. ಎಲ್ಲಿಯವರೆಗೆಂದರೆ, ನನಗೆ ಗೊತ್ತಿದೆ ಶಿರಾಜ ನನ್ನ ಜನ್ಮಭೂಮಿ, ನಾನು ಅಲ್ಲಿಯೇ ಬೆಳದಿರುವೆ, ಅಲ್ಲಿಯ ಸಾವಿರರು ಜನರು ಬಂದು ಬಹಳಷ್ಟು ಸಾಮಾನು ಸರಂಜಾಮುಗಳನ್ನು ಪಡೆದು ತೆಗೆದುಕೊಂಡು ಹೋಗಿದ್ದಾರೆ.

ಒಂದು ದಿನ ಸ್ತುತಿ ಮಾಡುವ ಫಕೀರ, ಖಲಂದರ ಎಂಬ ಹೆಸರಿನವನು ಬಂದು ಒಂದು ಕುರಾನ ಶರೀಫದ ಪ್ರತಿಯನ್ನು ಆದಿಲಶಹನಿಗೆ ಕೊಟ್ಟನು. ಆಗ ಆದಿಲಶಹನು ಆ ಫಕೀರನನ್ನು ತನ್ನ ಜೊತೆಗೆ ಕರೆದುಕೊಂಡು ತನ್ನ ಶ್ರೇಷ್ಠ ದ್ರವ್ಯಭಂಢಾರದ ಹತ್ತಿರ ಬಂದನು. ಅಲ್ಲಿ ಒಂದು ದೊಡ್ಡ ಪೆಟ್ಟಿಗೆಯು ತಾಮ್ರದ ಪಾತ್ರೆಗಳಿಂದ ತುಂಬಿತ್ತು. ಅಲ್ಲಿಯ ಪ್ರತಿಯೊಂದು ತಾಮ್ರದ ಪಾತ್ರೆಯಲ್ಲಿ ಐದೈದು ಸಹಸ್ರ ಹೊನ್ನುಗಳಿದ್ದುವು. ಕೆಲವಲ್ಲಿ ಹತ್ತು ಸಾವಿರ ಹೊನ್ನುಗಳಿದ್ದವು. ಆ ಪೆಟ್ಟಿಗೆಯನ್ನು ತೆರೆದು ಆ ಫಕೀರನಿಗೆ ಆಜ್ಞೆ ಮಾಡಿದನು. ನಿನ್ನ ಶಕ್ತಿಯಿದ್ದಷ್ಟು ಇದರಲ್ಲಿಯದನ್ನು ತೆಗೆದುಕೊ. ಆಗ ಆ ಫಕೀರನು ಐದು ಸಾವಿರ ಹೊನ್ನುಗಳಿದ್ದ ಪಾತ್ರೆಯನ್ನು ಎತ್ತಿದನು. ಮತ್ತೆ ಇನ್ನೊಬ್ಬ ಗೃಹಸ್ಥ, ನಿಲಜೀ ಎಂಬವನು ಆತನ ಜೊತೆಗಿದ್ದನು. ಆತನು ತನ್ನ ಮನೆಯಲ್ಲಿ ಮದುವೆ ಇದ್ದು, ಮದುವೆಯ ಖರ್ಚಿಗೆ ಸರಕಾರದಿಂದ ಸಹಾಯ ನೀಡಲು ಭಿನ್ನವಿಸಿಕೊಂಡನು. ಅದೇ ಸಮಯದಲ್ಲಿ ಎಂಭತ್ತು ಸಾವಿರ ಹೊನ್ನುಗಳು ಬಂದದನ್ನು ಅಲ್ಲಿಯೇ ಇಡಲಾಗಿತ್ತು. ಆ ಶಿಷ್ಯನಿಗೆ ಆಜ್ಞೆ ಮಾಡಿ, ಇದರಲ್ಲಿ ನಿನಗೆಷ್ಟು ತೆಗೆದುಕೊಳ್ಳಲು ಸಾಧ್ಯವೋ ಅಷ್ಟನ್ನು ತೆಗೆದುಕೊ ಎಂದನು. ಆತನು ಹದಿನಾರು ಚೀಲಗಳನ್ನು ಎತ್ತಿದನು. ಒಂದೊಂದು ಚೀಲದಲ್ಲಿ ಒಂದೊಂದು ಸಾವಿರ ಹೊನ್ನುಗಳಿದ್ದುವು. ಅವು ತುಂಬ ಭಾರವಾಗಿದ್ದುವು. ಆದ್ದರಿಂದ ಹದಿನಾರು ಚೀಲಗಳ ಭಾರವನ್ನು ಎತ್ತುವುದಾಗಲಿಲ್ಲ. ಕೆಲವು ಚೀಲಗಳನ್ನು ತಲೆಯ ಮೇಲೆ, ಇನ್ನು ಕೆಲವು ಹೆಗಲಮೇಲೆ. ಮತ್ತೆ ಕೆಲವನ್ನು ಉಡಿಯಲ್ಲಿ ತೆಗೆದುಕೊಂಡನು. ಮತ್ತು ತುಂಬ ಕಷ್ಟದಿಂದ ಹೊರಟನು. ಆಗ ಕೆಲವು ಚೀಲಗಳು ಕೆಳಗೆ ಬಿದ್ದುವು. ಅವುಗಳನ್ನು ಜಮೆ ಮಾಡಲಾಯಿತು. ಮತ್ತೆ ಹಲವಾರು ಜನರು ಹೀಗೆಯೇ ಬಂದಾಗ ಅವರಿಗೂ ಎತ್ತಿಕೊಂಡು ಹೋಗಲು ಹೇಳುತ್ತಿದ್ದನು. ಆ ಚೀಲಗಳಲ್ಲಿಯ ಕೆಲವು ಹೊನ್ನುಗಳನ್ನು ತನಗೆಂದು ತೆಗೆದುಕೊಳ್ಳುತ್ತಿದ್ದನು. ಅವುಗಳಲ್ಲಿಯ ನಾಲ್ಕು ಸಾವಿರ ಹೊನ್ನುಗಳು ಇನ್ನೊಬ್ಬರ ಕೈಗೆ ಸಿಕ್ಕುವು. ಇದೇ ರೀತಿಯಲ್ಲಿ ಬಹಳಷ್ಟು ಸಂಗತಿಗಳಿವೆ. ಆ ಎಲ್ಲ ಸಂಗತಿಗಳನ್ನು ಸೇರಿಸಿ ಒಂದೆಡೆ ಬರೆದಿಡಲು ಒಂದು ದೊಡ್ಡ ದಫ್ತರವೇ (ಪುಸ್ತಕ) ಬೇಕಾಗುತ್ತದೆ.

ನಿತ್ಯ ದರಬಾರಿನಲ್ಲಿಯ ಕಾರಭಾರಿಗಳು, ಕಾಮದಾರರು, ಹುಜೂರ ಸೇವಕರು, ಮುಜುರೆ ಸಲ್ಲಿಸಲು ಬರುತ್ತಿದ್ದರು. ಮೂರು ನಾಲ್ಕು ಜನರ ಕೆಲಸಗಳನ್ನು ಬಿನ್ನವಿಸಿ ಮಾಡಿಕೊಂಡು ಹೋಗುತ್ತಿದ್ದರು. ಭಂಡಾರದಲ್ಲಿ ಇಲ್ಲವೆ, ಆಡಳಿತದಲ್ಲಿ ಇಲ್ಲವೆ ಕೃಷಿ ಭೂಮಿಗಳಲ್ಲಿ ಪ್ರತಿವರುಷ ಇನಾಮು ಚಲಾವಣೆಯಲ್ಲಿ ಇರುವಂತೆ ಮಾಡಿಕೊಡುತ್ತಿದ್ದನು. ಸಾರಾಂಶವೆಂದರೆ, ನಗರಭಂಡಾರ, ಜಡಜವಾಹಿರಗಳು ಮತ್ತು ವಸ್ತ್ರಗಳು ಪ್ರತಿನಿತ್ಯ ಎಷ್ಟೆಲ್ಲ ಜಮೆಯಾಗುತ್ತಿದ್ದವೋ, ಅಷ್ಟನ್ನೆಲ್ಲ ಈ ಧರ್ಮಕಾರ್ಯದಿಂದ, ಬಕ್ಷೀಸು ಕೊಡುವುದರಿಂದ, ತುಸುವೆ ದಿನಗಳಲ್ಲಿ ಖರ್ಚಾಗಿ ಹೋಗುತ್ತಿತ್ತು. ಆತನ ಸ್ವಭಾವ ವಿಚಿತ್ರವಾಗಿತ್ತು.

ನೌಕರರೊಂದಿಗೆ ಇರುತ್ತ ಚಿಲ್ಲರೆ ಜನರೊಂದಿಗೆ ಒಡನಾಡವಿತ್ತು. ಚಿಲ್ಲರೆ ಜನರೊಂದಿಗೆಯೇ ಕಾಲಕಳೆಯುತ್ತಿದ್ದನು. ಚಿಲ್ಲರೆ ಜನರೊಂದಿಗೆ ಎಷ್ಟೆಂದು ಒಡನಾಟವಿಟ್ಟಿದ್ದನೆಂದರೆ, ಆ ಹಲಾಲಖೋರ ಜನರು ಖಜಾನೆಯನ್ನೆಲ್ಲ ಸ್ವಚ್ಛ ಮಾಡಿಬಿಡುತ್ತಿದ್ದರು. ಬಾದಶಹನು ನಮ್ಮ ಮೇಲಿಟ್ಟ ವಿಶ್ವಾಸದಷ್ಟು ಯಾರ ಮೇಲೂ ಇಡುವುದಿಲ್ಲವೆಂದು ಆ ಹಲಾಲಖೋರರಿಗೂ ಅನಿಸುತ್ತಿತ್ತು. ಒಂದೊಂದು ಸಲ ಹೀಗೂ ಘಟಿಸುತ್ತಿತ್ತು. ಬಾದಶಹನು ಏನಾದರೊಂದು ವಿಷಯದಲ್ಲಿ ಮಾತನಾಡತೊಡಗಿದನೆಂದರೆ, ಆ ಮಾತುಗಳಲ್ಲಿ ಯಾರ ವಿರುದ್ಧವಾದರೂ ಹೇಳುವ ಮಾತುಗಳಿರುತ್ತಿದ್ದುವು. ಆಗ ಆ ಜನ ತಿರುಗಿ 'ಅದು ಹಾಗಲ್ಲ, ನಮ್ಮ ಮಾತುಗಳನ್ನು ಕೇಳಿರಿ, ನಮ್ಮ ವಿನಂತಿಯನ್ನು ಪೂರ್ತಿಯಾಗಿ ಲಕ್ಷ್ಯಕೊಟ್ಟು ಕೇಳಿರಿ ಅನಂತರ ತಕರಾರು ಇದ್ದರೆ ಹೇಳಿರಿ' ಎಂದು ತಿರುಗಿ ಮಾತನಾಡುತ್ತಿದ್ದರು ಇದನ್ನು ಹೇಳುವ ತಾತ್ಪರ್ಯವೆಂದರೆ, ಬಾದಶಹನು ಯಾವ ಆಜ್ಞೆಯನ್ನು ಮಾಡುತ್ತಾನೆಯೊ ಅದನ್ನು ಎಲ್ಲರೂ ಒಪ್ಪಬೇಕು. ಆತನ ವಿರುದ್ಧ ಯಾರೂ ಮಾತನಾಡಬಾರದು. ಆದರೆ ಸಲುಗೆಯಿಂದಾಗಿ ಹೀಗೆ ಮನಬಂದಂತೆ ಅವಿನಯವಾಗಿ ಮಾತನಾಡುತ್ತಿದ್ದರು.

ಆ ಬಾದಶಹನ ಕೃಪೆ ಹಾಗೂ ದಯಾಗುಣಗಳು ಎಷ್ಟಿದ್ದುವೆಂದರೆ, ನಾನು ಅಡುಗೆಮನೆಯ ಮೇಲ್ವಿಚಾರಕನಾಗಿದ್ದೆ. ಒಂದು ದಿನ ಬಾದಶಹರು ಕರೆದು ಆಜ್ಞೆ ಮಾಡಿದರು. ನಮ್ಮ 'ಮುತಬ್ಬರಖಾನಾ' ಅಂದರೆ ಅಡುಗೆಯ ಮನೆಯಲ್ಲಿ ಜೀವಂತ ದನಗಳನ್ನು ಕೊಲ್ಲಬೇಡಿರಿ. ಅದರಲ್ಲೇನು ಉಪಯೋಗವಿದೆ? ನಮ್ಮ ಒಂದು ಜೀವಕ್ಕಾಗಿ ಎಷ್ಟೊಂದು ಜೀವಗಳ ಕುತ್ತಿಗೆಯನ್ನು ಕತ್ತರಿಸುತ್ತೀರಿ. ಉಳಿದವರೆಲ್ಲ ಹೇಗೆ ಬಾಜಾರದಿಂದ ಮಾಂಸವನ್ನುಕೊಂಡು ತರುತ್ತಾರೊ, ಹಾಗೆ ನೀವು ಕೂಡ ಬಾಜಾರಿನಿಂದಲೇ ಖರೀದಿಯನ್ನು ಮಾಡಿ ತೆಗೆದುಕೊಂಡು ಬನ್ನಿರಿ ಎಂದರು. ಅಲ್ಲದೆ ಬಾದಶಹರು ಹೀಗೆ ಆದೇಶ ನೀಡುತ್ತಿದ್ದರಲ್ಲ, ತಮ್ಮ ಖಾಸಾ ಊಟದ ಪದಾರ್ಥಗಳನ್ನು ಒಂದು ಮಣ್ಣಿನ ಪಾತ್ರೆಯಲ್ಲಿ ಇಲ್ಲವೆ ಚೀನಿ ಮಣ್ಣಿನ ಇತ್ಯಾದಿ ಪಾತ್ರೆಗಳಲ್ಲಿ ತನ್ನಿರಿ. ಉಳಿದೆಲ್ಲ ನಡವಳಿಕೆಗಳು ಹಾಗೆಯೇ ಇರುತ್ತಿದ್ದರೂ, ಚಿಂತೆ ಇಲ್ಲ. ಊಟ, ವಸ್ತ್ರಗಳು ಹಾಗೂ ಹಾಸಿಗೆಯ ವಿಷಯಗಳಲ್ಲಿ ಎಂದೂ ಆಸ್ಥೆಯನ್ನು ತೋರುತ್ತಿರಲಿಲ್ಲ. ಆಭರಣ ಇತ್ಯಾದಿಗಳನ್ನು ಮೈಮೇಲೆ ಇಟ್ಟುಕೊಂಡು ನಟಿಸುವುದರಲ್ಲೂ ಆಸ್ಥೆ ಇರಲಿಲ್ಲ. ಆದಿಲಶಹನು ಬಹಳಷ್ಟು ಸಲ ಗಾದಿ ಇತ್ಯಾದಿಗಳನ್ನು ಹಾಸಿಕೊಳ್ಳದೆ ನೆಲದಮೇಲೆಯೇ ಕುಳಿತುಕೊಳ್ಳುತ್ತಿದ್ದನು. ಆ ಕಾಲದ ಫಕೀರರ ನಡತೆ, ಮುಕ್ತ ಮನಸ್ಸು, ಮತ್ತು ಯಾವುದೇ ಪದಾರ್ಥಗಳಲ್ಲಿ ತಲೆಹಾಕದ ಅವನಂಥ ವ್ಯಕ್ತಿ ಇನ್ನೊಬ್ಬ ಇರಲಿಲ್ಲ. ಎಲ್ಲರೊಂದಿಗೂ ತುಂಬ ಗೌರವದಿಂದ ಇರುತ್ತಿದ್ದನು. ಅಲ್ಲಾನ ಬಗ್ಗೆ ತುಂಬ ನಮ್ರತೆ ಇತ್ತು. ಹಸಿವಾದಾಗ ತಿನ್ನುವ ಯಾವ ಪದಾರ್ಥವಾದರೂ ಕಣ್ಣಿಗೆ ಬಿದ್ದರೆ ಅದನ್ನು ತಿನ್ನುತ್ತಿದ್ದನು.

ಒಂದು ವೇಳೆ ಅಡುಗೆ ಕೆಟ್ಟರೆ, ಎಂದರೆ ಖಾರ ಇಲ್ಲವೆ ಹುಳಿಯಾಗಿದ್ದರೆ, ರುಚಿಯಾಗಿರದಿದ್ದರೆ, ಉಣ್ಣುವ ವೇಳೆಯಲ್ಲಿ ಬೇಸರಿಸಿಕೊಳ್ಳುತ್ತಿರಲಿಲ್ಲ. ಆನಂದದಿಂದ ತಿನ್ನುತ್ತಿದ್ದನು. ಒಂದು ವೇಳೆ ಪಂಕ್ತಿಯಲ್ಲಿ ಉಣ್ಣುವ ಜನರು ಅಥವಾ ಸನ್ನಿಧಿಯಲ್ಲಿರುವ ಜನರು ಅಡುಗೆಯ ಪದಾರ್ಥಗಳು 'ಕೆಟ್ಟಿವೆ ಇಲ್ಲವೆ ಹುಳಿಯಾಗಿದೆ ಅಥವಾ ರುಚಿಯಾಗಿಲ್ಲ' ಎಂದರೆ, 'ಅನ್ನದಾತನಾದ ಅಲ್ಲಾನು ಅನ್ನವನ್ನು ಸಿದ್ಧಪಡಿಸಿ ತಿನ್ನುವ ಪದಾರ್ಥಗಳನ್ನು ನಮಗೆ ಕಳಿಸಿರುತ್ತಾನೆ. ಆದ್ದರಿಂದ ಆ ಪದಾರ್ಥಗಳಿಗೆ ಏನೊಂದು ಹೆಸರನ್ನಿಡದೆ ಬಹಳ ಪ್ರೀತಿಯಿಂದ ಊಟಮಾಡಿ ಅಲ್ಲಾನನ್ನು ಸ್ತುತಿಸಬೇಕು ಅಂದರೆ ಮಳೆ ಬೆಳೆಗಳು ವೃದ್ಧಿಯಾಗುತ್ತವೆ' ಎಂದು ಅಪ್ಪಣೆ ಕೊಡುತ್ತಿದ್ದನು. ಹಸಿವಾದಾಗ ಯಾವ ಖಾದ್ಯ ಪದಾರ್ಥಗಳು ಎದುರಿಗೆ ಬರುವವೋ ಅವುಗಳ ಕುರಿತು ಬೇಸರಿಸಬಾರದು. ಯಾಕೆಂದರೆ ಯಾವ ವೇಳೆಯಲ್ಲಿ ಯಾವ ಅನ್ನ ದೊರೆಯುವುದೋ

ಅದಕ್ಕೆ ಹೆಸರನ್ನಿಟ್ಟು ಕೆಟ್ಟದಾಗಿ ಮಾತನಾಡುವುದೆಂದರೆ ಕೃತಘ್ನತೆ ಎನಿಸುತ್ತದೆ. ಅದಕ್ಕೊಂದು ದೃಷ್ಟಾಂತ ಹೇಳಬೇಕೆಂದರೆ, ಒಂದು ದಿನ ಅನೇಕ ಸೌತೆಕಾಯಿಗಳನ್ನು ತರಲಾಗಿತ್ತು. ನಾನು ಆ ಸೌತೆಕಾಯಿಗಳನ್ನು ಸ್ವಚ್ಛ ಮಾಡಿ, ಮೇಲಿನ ತೊಗಟೆಯನ್ನು ತೆಗೆದು, ಸೋಜ್ವಲ ಮಾಡಿ, ಒಂದು ಸೌತೆಕಾಯಿಯಲ್ಲಿ ನಾಲ್ಕು ಹೋಳುಗಳನ್ನು ಮಾಡಿ ಬಾದಶಹರ ಎದುರಿಗೆ ಇಡುತ್ತಿದ್ದೆ. ಅವುಗಳಲ್ಲಿ ಐದಾರನ್ನು ಬಹು ಪ್ರೀತಿಯಿಂದ ಪ್ರಭುಗಳು ತಿಂದರು. ಕೊನೆಗೆ ಒಂದು ಸೌತೆಕಾಯಿಯಲ್ಲಿಯ ಮೂರು ಹೋಳುಗಳನ್ನು ತಿಂದು ಅದರಲ್ಲಿಯ ನಾಲ್ಕನೆಯ ಹೋಳನ್ನು ನನಗೆ ಕೊಟ್ಟರು' ಮತ್ತು 'ನೀನೊಂದು ತಿನ್ನು' ಎಂದು ಆದೇಶಿಸಿದರು. ಅವರ ಆಜ್ಞೆಯಂತೆ ನಾನು ಆ ಸೌತೆಕಾಯಿಯ ಒಂದು ಹೋಳನ್ನು ಬಾಯಿಯಲ್ಲಿ ಇಟ್ಟುಕೊಂಡೆ. ತಿನ್ನುತ್ತಿದ್ದಂತೆ ಅದು ಇಷ್ಟು ಕಹಿಯಾಗಿತ್ತಲ್ಲ ವಿಷವೇ ಆಗಿತ್ತು. ಆ ಸೌತೆಕಾಯಿಯಂತೆ ನಾನು ಎಂದೂ ಅಷ್ಟು ಕಹಿಯಾದದ್ದನ್ನು ತಿಂದಿರಲಿಲ್ಲ. ಆದ್ದರಿಂದ ನನಗೆ ಬಹಳ ಆಶ್ಚರ್ಯವಾಯಿತು. ಅಂಥ ಕಹಿ ಹೋಳುಗಳನ್ನು ಬಾದಶಹರು ಹೇಗೆ ತಿಂದಿರಬೇಕು? ಯಾಕೆಂದರೆ ಅವುಗಳಲ್ಲಿಯ ಒಂದು ಹೋಳು ನನ್ನ ನಖ ಶಿಖಾಂತ ಕಹಿಯಾಯಿತು. ಆಶ್ಚರ್ಯವೆಂದರೆ ಬಾದಶಹರ ನಾಲಿಗೆಗೆ ಯಾವುದೂ ಕಹಿಯಾಗಿ ಹತ್ತುತ್ತಿರಲಿಕ್ಕಿಲ್ಲ. ಸೌತೆಕಾಯಿಯ ಹೊರಗಿನ ಉತ್ತಮ ಬಣ್ಣದಿಂದಲೇ ಬಾದಶಹರು ಕಾಯಿ ಶ್ರೇಷ್ಠವೆಂದು ತಿಳಿದಿದ್ದರು. ಕೊನೆಗೆ ಅದರಲ್ಲಿಯ ಒಂದು ಹೋಳನ್ನು ನನಗೆ ಕೊಟ್ಟು ತಮ್ಮ ಸೇವಕರಿಗೆಲ್ಲ ಈ ವಿಷಯ ಕಛೇರಿಯ ಯಾರಿಗಾದರೂ ತಿಳಿದರೆ ನಿಮಗೆ ಶಿಕ್ಷೆ ಕೊಡುವೆ ಎಂದು ಎಚ್ಚರಿಕೆ ಕೊಟ್ಟರು.

ಒಂದು ದಿನ ನನಗೆ ಊಟದ ಸಿದ್ಧತೆ ಮಾಡಲು ಹೇಳುತ್ತ ಅವರು ಅಲ್ಲಿಯೇ ಶತಪಥ ತಿರುಗುತ್ತಿದ್ದರು. ನಾನು ಊಟದ ಸಿದ್ಧತೆಯನ್ನು ಮಾಡುತ್ತಿದ್ದಂತೆ ಅವರು ಇನ್ನೊಂದು ಕೋಣೆಯಲ್ಲಿ ಹೋಗಿದ್ದರು. ಅಲ್ಲಿಗೆ ನಾನು ಹೋಗಿ ಊಟ ಸಿದ್ಧವಾಗಿದೆ ಎಂದು ಹೇಳಲು ಹೋದರೆ, ಅಲ್ಲಿ ಎಷ್ಟೋ ಜನ, ಭಾಂಡಾರದವರು ಅಡುಗೆ ಮನೆ ಸೇವಕರು ಊಟದ ತಟ್ಟೆಗಳನ್ನಿಟ್ಟುಕೊಂಡು ಉಣ್ಣುತ್ತಿದ್ದರು. ಬಾದಶಹರೂ ಸೇವಕರ ಮಧ್ಯ ಕುಳಿತಿದ್ದಾರೆ ಮತ್ತು ಆ ನೌಕರರೊಂದಿಗೆ ಉಣ್ಣುಮುತ್ತಿದ್ದಾರೆ ಆ ಊಟದ ಪದಾರ್ಥಗಳೆಂದರೆ ಜೋಳದ ರೊಟ್ಟಿ ಹಾಗೂ ಹಸಿರು ತೊಪ್ಪಲದ ಪಲ್ಯ! ಯಾಕೆಂದರೆ ದಕ್ಷಿಣದವರು ತೊಪ್ಪಲು ಪಲ್ಯವನ್ನು ಬೇಯಿಸಿ ರೊಟ್ಟಿಯೊಂದಿಗೆ ತಿನ್ನುತ್ತಾರೆ. ಅದೇ ರೀತಿಯಲ್ಲಿ ಬಾದಶಹರೂ ಊಟ ಮಾಡುತ್ತಿದ್ದರು ನಾನು ಅಲ್ಲಿಗೆ ಹೋದೆ, ನನ್ನನ್ನು ಕಂಡು ಬಾದಶಹರು 'ನಿಮ್ಮ ಉಪಕಾರ ಸ್ಮರಿಸದೆ ನಾವು ನಮ್ಮ ಹೊಟ್ಟೆಯನ್ನು ತುಂಬಿಸಿಕೊಂಡೆವು' ಎಂದು ಹೇಳಿದರು. ಊಟದ ವಿಷಯದಲ್ಲಿ ಮತ್ತು ಹಾಗೆಯೇ ವೇಷದ ವಿಷಯದಲ್ಲೂ ಬಹಳ ಆಸ್ಥೆ ಇರಲಿಲ್ಲ.

ಬಾದಶಹರ ಸೇವೆಯಲ್ಲಿ ಅನೇಕ ಜನ ಹುಜೂರ ಇತ್ಯಾದಿ ನೌಕರಿರುತ್ತಾರೆ. ಅವರಿಗಾಗಿ 'ಕೂಪ' ಎಂಬ ಬಿಳಿ ಬಣ್ಣದ ತೆಳುವಾದ ಬಟ್ಟೆಯ ಪೋಷಾಕುಗಳನ್ನು ಸಮವಸ್ತ್ರವೆಂದೆ ನಾವು ಹೊಲಿಸಿಕೊಡುತ್ತಿದ್ದೆವು. ಅದರ ಬೆಲೆ ಐದು ಅಥವಾ ಆರು ಹೊನ್ನುಗಳಷ್ಟಿತ್ತು. ಆದರೆ ಬಾದಶಹರ ಸ್ವಂತಕ್ಕೆ ಧರಿಸಲು ವಸ್ತ್ರವನ್ನು ಎರಡು ಹೊನ್ನಿನ ಬೆಲೆಯಲ್ಲಿ ಖರೀದಿಸಿ ಹೊಲಿದು ಕೊಡಲಾಗುತ್ತಿತ್ತು. ಇದರಲ್ಲಿಯ ತಾತ್ಪರ್ಯವೆಂದರೆ. ನೌಕರರು ಧರಿಸುವ ವಸ್ತ್ರದ ಬೆಲೆ ಆರು ಹೊನ್ನು ಬಾದಶಹನ ವಸ್ತ್ರದ ಬೆಲೆ ಎರಡು ಹೊನ್ನು. ಇಷ್ಟೊಂದು ಉದಾಸೀನನಾಗಿ ಬಾದಶಹನು ಇರುತ್ತಿದ್ದನು. ಬಾದಶಹರಿಗೆ ಆಭರಣಯುಕ್ತ ಹೊನ್ನಿನ ಟೊಂಕಪಟ್ಟಿ ಇರಬೇಕು ಅದು ಆದಿಲಶಹನಿಗೆ ತಾಮ್ರ, ಕಬ್ಬಿಣ, ಹಿತ್ತಾಳಿ ಹಾಗೂ ಸೀಸಗಳ ಮಿಶ್ರಣದಿಂದಾದ ಪಟ್ಟಿ ಇರುತ್ತಿತ್ತು. ಅದರ ಮೇಲೆ ಒಂದೊಂದು ಪದಾರ್ಥಗಳನ್ನು ತಂತಿಯಲ್ಲಿ ಜೋಡಿಸಿ ಸುತ್ತುವರಿದು ಟೊಂಕಕ್ಕೆ ಕಟ್ಟಿಕೊಳ್ಳುತ್ತಿದ್ದನು. ತಲೆಯ ಮೇಲೆ ಫಕೀರರಂತೆ ಟೊಪ್ಪಿಗೆಯನ್ನು ಹಾಕಿಕೊಳ್ಳುತ್ತಿದ್ದನು.

ಫಕೀರರ ಕಂಬಳಿಯಂತೆ, ಚೌಕಾದ ಚದ್ದರನ್ನು ಹೆಗಲ ಮೇಲೆ ಹಾಕಿಕೊಂಡು ಅದರ ಒಂದು ಪದರನ್ನು ಎದೆಯ ಮೇಲೆ ಇಳಿ ಬಿಡುತ್ತಿದ್ದನು. ಕಾಲಲ್ಲಿ ತೊಗಲಿನ ಚಪ್ಪಲಿಗಳನ್ನು ಧರಿಸುತ್ತಿದ್ದನು. ಇಲ್ಲವಾದಲ್ಲಿ ಬಾದಶಹರ ಕಾಲಲ್ಲಿಯ ಚಪ್ಪಲಿಗಳು ಕಲಾಬತ್ತಿನಿಂತ ಕೂಡಿದ್ದು ಮುತ್ತುಗಳನ್ನು ಹಚ್ಚಿರುತ್ತವೆ, ಅದನ್ನು ಧರಿಸದೆ ಚರ್ಮದ ಜೋಡುಗಳನ್ನು ಹಾಕಿಕೊಳ್ಳುತ್ತಿದ್ದನು. ಯಾವಾಗಲೂ ಇದೇ ರೀತಿಯ ವೇಷ ಭೂಷಣಗಳ್ನು ಹೊಂದಿರುತ್ತಿದ್ದನು. ಕೈಯಲ್ಲೊಂದು ಕೋಲು ಇರುತ್ತಿತ್ತು. ತನ್ನ ಹೆಸರು ಅಲೀ ಆದಿಲಶಹಾ ಎಂದಿದ್ದರೂ, ಅಲಿ ಶೇರ ಖಲಂದರ ಎಂದು ಹೆಸರನ್ನಿಟ್ಟುಕೊಂಡು ಫಕೀರ ಹುದ್ದೆಯಲ್ಲಿ ನಡೆಯುತ್ತಿದ್ದನು. ಹಾಸಿಗೆಯ ಮೇಲೆ ಇಲ್ಲವೆ ಎತ್ತರದ ಮೇಲೆ ಕೊಡಬೇಕೆಂಬ ಪ್ರತಿಷ್ಠೆ ಏನೂ ಇರಲಿಲ್ಲ. ದೊಡ್ಡ ವಾಡೆಯನ್ನು ಮತ್ತು ಬಹು ದೊಡ್ಡ ಕಟ್ಟಡವನ್ನು ಕಟ್ಟಿತ್ತಾದರೂ ನೆಲದ ಮೇಲೆ ಗಾಲಿಚಾ ಹಾಸಿ ಬಹಳ ವರುಷಗಳಾಗಿದ್ದುವು. ಹಳೆಯ ದರಬಾರದ ಕಾಲದಲ್ಲಿ ಹಾಸಿದ ಗಾಲಿಚಾದ ಮೇಲೆಯೆ ಕುಳಿತುಕೊಳ್ಳುತ್ತಿದ್ದನು. ಆದರೆ ಬೇರೆ ಕಡೆಯಿಂದ ಬಾದಶಹರ ವಕೀಲರಾಗಲಿ ಇಲ್ಲವೆ ಯಾರಾದರೂ ಕಾರಭಾರಿಗಳು ಭೆಟ್ಟಿಗೆ ಬಂದ ಸಮಯದಲ್ಲಿ ಮಾತ್ರ ಹಾಸಿಗೆಯಮೇಲೆ ಪಟ್ಟದ ಗಾದಿಯನ್ನು ಪ್ರತ್ಯೇಕವಾಗಿ ಹಾಸಿ ಆ ಹಾಸಿಗೆಯ ಮೇಲೆ ಕಲಾಬತ್ತಿನ ಮುಖಮಲ್ ಬಟ್ಟೆ ಹಾಗೂ ಕಲಾಬತ್ತಿನ ರೇಶ್ಮೆ ಬಟ್ಟೆಯ ಮೇಲೆ ಕಸೂತಿಯಿಂದ ಹೆಣೆದದ್ದನ್ನು ಹಾಸಿ, ಲೋಡು, ತೆಕ್ಕೆಗಳನ್ನಿಟ್ಟು ದರಬಾರಿ ಥಾಟಿನ ಸಭೆಯನ್ನು ನಡೆಸುತ್ತಿದ್ದನು. ಆಗ ಇಂಥ ವೈಭವದ ಸಭೆ ಇನ್ನೆಲ್ಲೂ ಇರಲಿಕ್ಕಿಲ್ಲವೆಂಬಂತೆ ಇರುತ್ತಿತ್ತು. ಎಲ್ಲರೊಂದಿಗೆ ಬಹಳ ಗೌರವದಿಂದ ನಡೆದುಕೊಳ್ಳುತ್ತಿದ್ದನು. ಬಾದಶಾಹಿ ರೀತಿ-ರಿವಾಜುಗಳನ್ನು ವ್ಯವಸ್ಥಿತವಾಗಿ ಕಾಪಾಡುತ್ತಿದ್ದನು.

ಒಂದು ದಿನ ಊಟವಾದನಂತರ ಬಾದಶಹನು ಹಕೀಮುಲ್ಮುಲ್ಕನ ಮೈಗೆ ಆನಿಸಿಕೊಂಡು ಕುಳಿತಿದ್ದನು. ಅಲ್ಲಿಯೇ ನಾನು ನಿಂತುಕೊಂಡಿದ್ದೆ. ಆಗ ಬಾದಶಹರು ನನ್ನ ಪದರನ್ನು ಜಗ್ಗಿ ಕೆಳಗೆ ಕೂಡಲು ಆಜ್ಞೆ ಮಾಡಿದರು. ಅವರ ಆಜ್ಞೆಯ ಮೇರೆಗೆ ನಾನು ಕೆಳಗೆ ಕುಳಿತುಕೊಂಡೆನು. ಆಗ ಬಾದಶಹರು ಅಪ್ಪಣೆ ಮಾಡುತ್ತ, ಎಲ್ಲ ಜನರು ನನಗೆ ಏನು ಅನ್ನುತ್ತಾರೆ? ಮತ್ತು ನನ್ನ ಯೋಗ್ಯತೆಯನ್ನು ಹೇಗೆ ಗುರುತಿಸಲಾಗುತ್ತಿದೆ? ಎಂದು ವಿಚಾರಿಸಿದರು. ಆಗ ನಾನು ಅಲಿ ಆದಿಲಶಹರ ಉಲ್ಲಸಿತ ಲಕ್ಷಣಗಳನ್ನು ಗುರುತಿಸಿ ಅಮರ್ಯಾದೆಯಿಂದ ಉತ್ತರಿಸಿದೆ. 'ಎಲ್ಲ ಜನರು ತಾವು ಹೇಗಿದ್ದೀರೋ ಆ ರೀತಿಯಲ್ಲಿ ತಮ್ಮನ್ನು ಇನ್ನೂ ಗುರುತಿಸಿಲ್ಲ' ಎಂದು ಹೇಳಿದೆ, ನನ್ನ ಉತ್ತರ ಬಾದಶಹನಿಗೆ ಬಹಳ ಒಪ್ಪಿಗೆಯಾಯಿತು. ಸಂತೋಷಗೊಂಡು ಹಾಸ್ಯವದನರಾಗಿ ನನ್ನನ್ನು ಹಿಡಿದು ಆಜ್ಞೆ ಮಾಡಿದರು. 'ನೀನು ಏನು ಈಗ ಹೇಳಿದಿಯಲ್ಲ? ಅದನ್ನು ವಿಸ್ತಾರಪೂರ್ವವಾಗಿ ಹೇಳು' ಎಂದರು. ಆಗ ನಾನು ವಿನಂತಿಸಿಕೊಂಡೆ. 'ಅಹೋ ಖುದಾವಂತರೆ, ತಮ್ಮಲ್ಲಿ ಬಹಳ ವಿದ್ಯೆ ಹಾಗು ಗುಣಗಳಿವೆ. ಅವುಗಳು ಮನುಷ್ಯನ ಬುದ್ಧಿಗೆ ಹೇಗೆ ತಿಳಿಯುತ್ತವೆ? ತಾವು ನೌಕರ ಜನರೊಂದಿಗಿರುವಾಗ ಯಾವಾಗಲಾದರೂ ಮುಸಾಫಿರನಂತೆ (ಪ್ರವಾಸಿಗನಂತೆ) ಮಾತನಾಡುತ್ತೀರಿ. ಯಾವಾಗಲಾದರೂ ಸಾಧು ಸಂತರೊಂದಿಗಿದ್ದರೆ, ಅಲ್ಲಾನ ಜ್ಞಾನವನ್ನು ತಿಳಿದ ದೊಡ್ಡ ಸಿದ್ಧ ಪುರುಷನಂತೆ ಸಮಾಧಿಸ್ಥಿತಿಯಲ್ಲಿದ್ದಂತೆ ಮಾತನಾಡುತ್ತೀರಿ. ನಿಮ್ಮ ಮಾತಿನ ಮೇಲೆ ಇನ್ನಾರ ತರ್ಕವೂ ನಡೆಯುವುದಿಲ್ಲ. ಮತ್ತೆ ವಿದ್ವಾಂಸರ ಮಧ್ಯ ಕುಳಿತಿದ್ದರೆ ಆಗ ವಿವಿಧ ವಿದ್ಯೆಗಳ ಸೂಕ್ಷ್ಮ ವಿಷಯಗಳನ್ನು ಮಹಾ ಬುದ್ಧಿವಂತರಾಗಿ ಮಾತನಾಡುತ್ತೀರಿ. ಆಗ ನೋಡಿದವರಿಗೆ ಇವನೊಬ್ಬ ಬಹು ದೊಡ್ಡ ವಿದ್ವಾಂಸನಿದ್ದಾನೆ. ಸಂಪೂರ್ಣ ವಿದ್ಯೆಯನ್ನು ಕಲಿತಿದ್ದಾನೆ ಎಂದು ಅನಿಸುತ್ತದೆ ಮತ್ತೆ ಕಛೇರಿಯಲ್ಲಿದ್ದ ಎಲ್ಲರನ್ನೂ ಸಂತೋಷಗೊಳಿಸುತ್ತೀರಿ. ಯಾವ ಸಮಯದಲ್ಲಿ ತಾವು, ಬುದ್ಧಿವಂತ, ಯುಕ್ತಿವಂತ, ವಿಚಾರವಂತ ಮತ್ತು ನಾಲ್ಕೂ ಕಡೆಯ

ಬಾದಶಹರ ವಕೀಲರೊಂದಿಗೆ ಮಾತನಾಡಲು ಆರಂಭಿಸಿದರೆ ಆಗ ಅನಿಸುವುದು. ಈ ಕಾಲದ ಇವನೊಬ್ಬ ಸಿಕಂದರ ಬಾದಶಹನೇ ಇರಬೇಕು ಎಂದು. ಆ ರೀತಿಯಲ್ಲಿ ಭಾಷಣ ಮಾಡುತ್ತೀರಿ, ಯಾವ ವ್ಯಕ್ತಿಯಲ್ಲಿ ಈ ಎಲ್ಲ ಲಕ್ಷಣಗಳು ಮತ್ತು ವಿದ್ಯೆಗಳು ಇರುತ್ತವೆಯೊ ಅವನು ಮಾತ್ರ ತಮ್ಮ ಯೋಗ್ಯತೆಯನ್ನು ಗುರುತಿಸಬಲ್ಲನು? ಎಂದು ಹೇಳಿದೆನು.

ಬಾದಶಹನಿಗೆ ಪುಸ್ತಕಗಳ ಮೇಲೆ ಬಹಳ ಪ್ರೀತಿ ಇತ್ತು. ಪರ್ಶಿಯನ್ ಪುಸ್ತಕಗಳನ್ನು ಬಹಳ ನೋಡುತ್ತಿದ್ದನು. ಪ್ರತಿಯೊಂದು ಪ್ರಕಾರದ ಹಾಗು ಪ್ರತಿಯೊಂದು ವಿಷಯಗಳ ಪುಸ್ತಕಗಳನ್ನು ದೊರಕಿಸಿಕೊಂಡಿದ್ದನು. ಆತನ ಗ್ರಂಥಾಲಯ ತುಂಬ ದೊಡ್ಡದಾಗಿ ಶೋಭಿಸುತ್ತಿತ್ತು. ಆ ಗ್ರಂಥಾಲಯದಲ್ಲಿ 'ಖುಷ್‌ನವೀಸ್' ಎಂದರೆ, ಸುಂದರ ಅಕ್ಷರಗಳನ್ನು ಬರೆಯುವ ಅರವತ್ತು ಲೇಖಕರಿದ್ದರು. ಸೋನೇರಿ ಕೆಲಸ ಮಾಡುವವರು, ರೇಖೆಗಳನ್ನು ಎಳೆಯುವವರು, ಗ್ರಂಥಗಳನ್ನು ಕಟ್ಟುವವರು (Book-binders) ಮತ್ತು ಚಿತ್ರಗಳನ್ನು ಬಿಡಿಸುವವರು ಹೀಗೆ ಗ್ರಂಥಾಲಯದಲ್ಲಿ ಎಲ್ಲ ಕೆಲಸಗಾರರು ತಂತಮ್ಮ ಕೆಲಸಗಳಲ್ಲಿ ಇದ್ದರು, ಗ್ರಂಥಾಲಯದ ಪುಸ್ತಕಗಳಲ್ಲಿ ವಿಶೇಷ ಪುಸ್ತಕಗಳ ನಾಲ್ಕು ಪೆಟ್ಟಿಗೆಗಳು ಯಾವಾಗಲೂ ಬಾದಶಹರ ಹತ್ತಿರ ಇರುತ್ತಿದ್ದುವು. ಎಲ್ಲಿಯೇ ಪ್ರವಾಸಕ್ಕೆ ಹೋದರೂ ಅವುಗಳು ಅಲಿ ಆದಿಲಶಹನ ಜೊತೆಗೆಯೇ ಇರುತ್ತಿದ್ದುವು. ಒಂದು ಸಲ ಹೀಗೆಯೇ ಪ್ರವಾಸದಲ್ಲಿದ್ದಾಗ ಸಾಯಂಕಾಲ ವಸತಿ ಸ್ಥಾನಕ್ಕೆ ಬಂದು ಮುಟ್ಟಿದ್ದೆವು. ದೊಡ್ಡ ಮಳೆ ಬೀಳ ಹತ್ತಿತ್ತು. ಸೈನ್ಯ ಹಿಂದು ಮುಂದಾಗಿತ್ತು. ಬಾದಶಹರು ಮುಕ್ಕಾಮಿಗೆ ಬಂದು ಮುಟ್ಟಿದ್ದರು. ಆಗ ಪುಸ್ತಕಗಳ ಪೆಟ್ಟಿಗೆಗಳ ನೆನಪಾಯಿತು. ಹುಡುಕಾಡಿದ ನಂತರ ಗೊತ್ತಾಯಿತು. ಭಂಡಾರದ ಜೊತೆಗೆ ಆ ಪುಸ್ತಕಗಳ ನಾಲ್ಕು ಪೆಟ್ಟಿಗೆಗಳು ಬೇರೆ ಮಾರ್ಗದಿಂದ ಇನ್ನೊಂದು ಗ್ರಾಮದಲ್ಲಿ ಇಳಿಸಲಾಗಿತ್ತು. ಇದು ಗೊತ್ತಾದ ತಕ್ಷಣ ಬಾದಶಹ ಅತ್ಯಂತ ಸಿಟ್ಟಾಗಿ ಆಜ್ಞೆ ಮಾಡಿದ. 'ಎಷ್ಟೋ ಸಲ ಹೇಳಿರುವೆ. ಪುಸ್ತಕಗಳ ಪೆಟ್ಟಿಗೆಗಳನ್ನು ನನ್ನಿಂದ ದೂರ ಮಾಡಬೇಡಿರಿ ಎಂದು, ಹೀಗೆ ತಾಕೀತು ಮಾಡಿದ್ದರೂ ಅದರ ಉಪಯೋಗವಾಗಲಿಲ್ಲ.' ಎಂದಾಗ ಅಂಥ ಧಾರಾಕಾರ ಮಳೆಯಲ್ಲಿಯೇ ಒಬ್ಬ ಸರದಾರನನ್ನು ಪುಸ್ತಕ ಪೆಟ್ಟಿಗೆಗಳನ್ನು ತರಲು ಕಳಿಸಲಾಯಿತು. ಅವುಗಳು ಬರುವವರೆಗೂ ಬಾದಶಹ ಸಿಡಿಮಿಡಿಗೊಳ್ಳುತ್ತಲೆ ಇದ್ದನು.

ಆಗ ಸಾಯಂಕಾಲವಾಗಿತ್ತು. ಕುದಿಸಿದ ಕೋಳಿ ಮೊಟ್ಟೆಗಳನ್ನು ತರಲು ಆಜ್ಞೆ ಮಾಡಿದನು. ನಾನು ಇಪ್ಪತ್ತು ಮೊಟ್ಟೆಗಳನ್ನು ರುಮಾಲಿನಲ್ಲಿ ಕಟ್ಟಿ ನೀರಿನಲ್ಲಿ ಕುದಿಸಿ, ಬಿಸಿ-ಬಿಸಿ ಮೊಟ್ಟೆಗಳನ್ನು ರುಮಾಲಿನಲ್ಲಿಯೇ ತಂದು ಕೊಡುತ್ತಿದ್ದೆನು. ಮೊಟ್ಟೆಗಳನ್ನು ಒಡೆದು ಅದರಲ್ಲಿಯ ಹಳದಿಯನ್ನು ಚಮಚೆಯಿಂದ ಬಾದಶಹನು ತಿನ್ನುತ್ತಿದ್ದನು. ಒಮ್ಮೊಮ್ಮೆ ಹನ್ನೊಂದು ಹನ್ನೆರಡು ಮೊಟ್ಟೆಗಳನ್ನು ತಿನ್ನುತ್ತಿದ್ದನು. ಅಂದು ಕಷ್ಟಪಟ್ಟು ಇಪ್ಪತ್ತು ಮೊಟ್ಟೆಗಳನ್ನು ದೊರಕಿಸಿ ಕುದಿಸಿದ್ದೆನಾದರೂ ಅವುಗಳಲ್ಲಿ ಕೇವಲ ಎರಡರಲ್ಲಿ ಹಳದಿ ರಸ ಪೂರ್ಣವಾಗಿ ಬಂದಿತ್ತು ಉಳಿದ್ದದರಲ್ಲಿ ಒಡಕಾಗಿತ್ತು. ಆ ಎರಡು ಮೊಟ್ಟೆಗಳ ಹಳದಿ ರಸವನ್ನಷ್ಟೆ ಬಾದಶಹ ತಿಂದನು. ಮತ್ತೆ ಇಪ್ಪತ್ತು ಮೊಟ್ಟೆಗಳನ್ನು ಕುದಿಸಿದರೂ ಒಳಗಿನ ರಸ ಒಡೆದಿರುತ್ತಿತ್ತು. ಒಂದರಲ್ಲಿ ಮಾತ್ರ ಒಡೆಯದ ಹಳದಿ ರಸ ಬಂದಿತು. ಅಷ್ಟನ್ನೆ ತಿಂದನು. ಆಗ ಅಪ್ಪಣೆ ಕೊಡಿಸುತ್ತ. 'ನನ್ನ ದೈವ ಇನ್ನು ಅಧಿಕವಾಗಿಲ್ಲವೆಂದೇ ನನಗನಿಸುತ್ತದೆ ಅಂತಲೇ ಹೀಗಾಗಿದೆ' ಎಂದನು. ತನ್ನ ಆಯುಷ್ಯ ಎಂದಿಗೆ ಮುಗಿಯುತ್ತದೆ ಎಂಬುದು ಬಾದಶಹನಿಗೆ ಗೊತ್ತಾಗಿತ್ತು. ಯಾವಾಗಲಾದರೂ ಒಮ್ಮೆಮ್ಮೆ ಊಟಕ್ಕೆ ಕುಳಿತಾಗ ತನ್ನ ಮರಣದ ವಿಷಯವನ್ನು ಪ್ರಕಟಿಸುತ್ತಿದ್ದನು. ಹಾಗೆಯೇ ಒಂದು ದಿನ ಊಟಕ್ಕೆ ಕುಳಿತಿದ್ದನು. ನಿಯಾಜ ಅಹ್ಮದ ಖಾನನ ಜೊತೆಗೆ ರಾಜ್ಯದ ನಾಲ್ಕೂ ಬದಿಗಳ ಮಾತನಾಡುತ್ತ ಕುಳಿತಿದ್ದನು. ಕೊನೆಕೊನೆಗೆ ಆತ ಮಾತನಾಡುತ್ತ ಆಡುತ್ತ

'ಇಪ್ಪತ್ತೆರಡು ವರುಷಗಳಾದುವು ಅಲ್ಲಾನು ನನ್ನ ಮನೋರಥವನ್ನು ಪೂರ್ಣಗೊಳಿಸಲಿಲ್ಲ ಆದರೆ ಈಗ ಅದನ್ನು ಪೂರೈಸುವ ಉತ್ತರಸಿಗಹತ್ತಿದೆ, ನಾನು ಏನನ್ನು ಬೇಡಿದ್ದನೋ ಅದನ್ನು ಕೊಟ್ಟಿರುವೆ ಎಂದಿದ್ದಾನೆ' ಎಂದನು. ನನಗೆ ಅರ್ಥವಾಗಲಿಲ್ಲ. ಅಮರ್ಯಾದೆ ಎನಿಸಿದರೂ ನಾನು ಕೇಳಿದೆ. ಏನದು? ಎಂದು. ಅದಕ್ಕೆ ಬಾದಶಹನು ಬಹಳ ಸಂತೋಷದಿಂದ ಮತ್ತು ದೊಡ್ಡ ಆನಂದದಿಂದ ಹೇಳಿದನು. 'ಅದು ನನ್ನ ಮರಣದ ವಿಷಯ' ಎಂದು. ಬಾದಶಹನ ಮಾತನ್ನು ಕೇಳುತ್ತಲೆ ನಾನು ನನ್ನ ಪ್ರಶ್ನೆಗೆ ಬಹಳ ಪಶ್ಚಾತ್ತಾಪ ಪಟ್ಟು ಖಿನ್ನನಾದೆನು. ಚಿಂತಾಗ್ರಸ್ತನಾದೆನು. ಅದನ್ನು ಕಂಡ ಬಾದಶಹನು ನನಗೆ 'ನೀನು ತುಂಬ ಮೂರ್ಖನಿದ್ದೀ, ಯಾವ ಪದಾರ್ಥವನ್ನು ನಾನು ಬಹಳ ವರುಷಗಳಿಂದ ಆಶೆ ಮಾಡುತ್ತ ಅಲ್ಲಾನ ಹತ್ತಿರ ಕೇಳುತ್ತಿದ್ದೆನೋ ಅದರ ಉತ್ತರ ಇಂದು ದೊರಕಿದೆ. ಹೀಗಿದ್ದರೂ ನೀನು ಖಿನ್ನನಾಗುತ್ತಿಯಲ್ಲ?' ಎಂದನು.

ಅನಂತರ ತುಸು ದಿನಗಳಾದ ಮೇಲೆ ರಾಣೀವಾಸದ ಒಬ್ಬ ಕುಣಬೀಸೇವಕಿ ಬಂದು ಬಾದಶಹರಿಗೆ ಏನನ್ನೋ ಹೇಳಿದಳು. ಆಗ ಬಾದಶಹನು ನನ್ನ ಕಡೆಗೆ ನೋಡುತ್ತ 'ನಮ್ಮ ರಾಣಿಯರಿಗೆ ಉಡಲು ವಸ್ತ್ರಗಳನ್ನು ಕೇಳಿದ್ದಾರೆ. ಅವುಗಳನ್ನು ಕೊಡು ಎಂದು ಆಜ್ಞೆ ಮಾಡಿದನು. ನಾನು ಪ್ರತಿಯಾಗಿ ವಿನಂತಿಸುತ್ತ 'ಯಾವ ಬಣ್ಣದ ವಸ್ತ್ರಗಳನ್ನು ಕೊಡಲಿ ಮತ್ತು ಎಂಥವುಗಳನ್ನು ಕೊಡಲಿ ಎಂದು ಕೇಳಿದೆನು. 'ತಮ್ಮ ಆಜ್ಞೆಯಂತೆ ಕೊಡುವೆನು' ಎಂದೆನು. ಆಗ ಬಾದಶಹನು ಆಜ್ಞೆ ಮಾಡುತ್ತ 'ಬಿಳೀ ವಸ್ತ್ರಗಳನ್ನು ಕೊಡು ಯಾಕೆಂದರೆ ದಕ್ಷಿಣ ದೇಶದಲ್ಲಿ ವಿಧವಾ ಸ್ತ್ರೀಯರು ಬಿಳಿ ವಸ್ತ್ರಗಳನ್ನು ಉಡುವುದು ರೂಢಿಯಲ್ಲಿದೆ' ಎಂದನು. ರಾಣೀವಾಸದ ಸೇವಿಕೆ ಮತ್ತೆ ಬಂದು ನನ್ನನ್ನು ವಸ್ತ್ರಗಳನ್ನು ಕೊಡಲು ಕೇಳಿದಾಗ ನಾನು ಬಾದಶಹನು ಕೊಡಲು ಹೇಳಿದ ವಿಷಯವನ್ನು ಅವಳಿಗೆ ಹೇಳಿದೆ. ಆಗ ಅವಳು ಹಣೆಗೆ ಕೈಹಚ್ಚಿಕೊಂಡು, 'ನಿಮ್ಮ ಧಣಿಗಳಿಗೆ ಏನಾಗಿದೆಯಂತ ಹೀಗೆ ಮಾತನಾಡುತ್ತಾರೆ?' ಎಂದು ತಿರುಗಿ ಹೋದಳು. ಆ ವೇಳೆಯನ್ನ ಬದಲಿಸಿ ಮತ್ತೆ ನಾನು ವಿನಂತಿಸಿಕೊಂಡೆನು. 'ತಮ್ಮ ಆಜ್ಞೆಯಂತೆ, ತಮ್ಮ ರಾಣಿಯರಿಗೆ ಬಿಳಿ ವಸ್ತ್ರಗಳನ್ನು ಕಳಿಸಿದ್ದೆ. ಆದರೆ ತಮ್ಮ ರಾಣಿಯರು ಅದು ಅಶುಭ ಎಂದು ತಿಳಿದರು. ತಮ್ಮ ಆಜ್ಞೆಯಾದರೆ ಬಣ್ಣದ ವಸ್ತ್ರಗಳನ್ನು ಕಳಿಸುವೆನು' ಎಂದೆನು. ಅದನ್ನು ಕೇಳಿದ ಬಾದಶಹನು ಮತ್ತೆ ಆಜ್ಞೆ ಮಾಡಿದನು. 'ನಾನು ಹೇಳಿದ ಹಾಗೆಯೇ ಇದೆ. ನಾನು ಹೊರಟೆ, ನಿನಗೆ ಯಾವುದು ಬೇಕೋ ಆ ಬಣ್ಣದ ವಸ್ತ್ರಗಳನ್ನು ಕೊಡು' ಎಂದನು.

ಪುರಕೋಟೆಯಲ್ಲಿ ಎರಡು ಖಂದಕಗಳ ಮಧ್ಯ ಒಂದು ತೋಟವಿದೆ ಅಲ್ಲಿ ಒಂದು ಮಸೀದಿಯನ್ನೂ ಕಟ್ಟಲಾಗಿದೆ. ಆ ಮಸೀದಿಯಲ್ಲಿ ಒಂದು ಸಾವಿರದ ಮೂವತ್ತೂರು ದೀಪಗಳ-ಪಣತಿಗಳನ್ನು ಹಚ್ಚುತ್ತಾರೆ. ದೀಪಗಳ ಲೆಕ್ಕವೇ ಸಿಗುವುದಿಲ್ಲ. ಆದ್ದರಿಂದ ಆ ಮಸೀದಿಗೆ 'ನೇದೆ ಗಾಲಿಬ' ಎಂದು ಹೆಸರನ್ನಿಟ್ಟಿದ್ದಾರೆ. ಆ ಮಸೀದಿಯ ಎದುರು ಗಾಲಿಬನು ನಿಂತಿದ್ದನು ಮತ್ತು ನನಗೆ ಹೇಳಿದನು. 'ನನ್ನ ಅಜ್ಜ ಇಸ್ಮಾಯಿಲ ಆದಿಲಶಹನು ತನ್ನ ಸ್ಮರಣೆಗಾಗಿ ತನ್ನ ತಲವಾರನ್ನು ಭಂಡಾರದಲ್ಲಿಟ್ಟಿದ್ದಾನೆ. ಅದನ್ನು ತೆಗೆದುಕೊಂಡು ಬಾ' ಎಂದು ಆಜ್ಞೆ ಮಾಡಿದನು. ನಾವು ಅದನ್ನು ತಂದೆವು. ಆ ತಲವಾರನ್ನು ತೆಗೆದುಕೊಂಡು ಬಾದಶಹನು, ಕಟ್ಟಿನಿಂದ ಹೊರತೆರೆದು ತುಸುಹೊತ್ತು ದಿಟ್ಟಿಸಿ ನೋಡಿದನು. 'ಇಂದು ಇದನ್ನ ನಮ್ಮ ಟೊಂಕಕ್ಕೆ ಕಟ್ಟಿಕೊಳ್ಳುವೆವು. ಮತ್ತೆ ಪುನಃ ಎಂದೂ ಕಟ್ಟಿಕೊಳ್ಳುವುದಿಲ್ಲ. ಅನಂತರ ಈ ತಲವಾರನ್ನು ಮಸಜಿದ ಗಾಲಿಬದ ಮೆಹರಾಬಿನ ಮೇಲೆ ಕಟ್ಟಿ ಇಡಿರಿ' ಎಂದು ಹೇಳಿದನು. ರಫಿಯುದ್ದೀನ ಶಿರಾಜಿ ಹೇಳುವಂತೆ ಈಗಲೂ ಆ ತಲವಾರವು ಮಸಜಿದಗಾಲಿಬದ ಮೆಹರಾಬಿನಲ್ಲಿ ಇದೆಯಂತೆ.

ಕೆಲವು ದಿನಗಳ ಅನಂತರ ಒಂದು ರಾತ್ರಿ ಅಫಜಲಖಾನನ ಜೊತೆಗೆ ಕುಳಿತಿದ್ದನು. ಅಫಜಲಖಾನನಿಗೆ ಆಜ್ಞೆ ಮಾಡುತ್ತ ನಾಲ್ಕು ಸಾವಿರ ಹೊನ್ನುಗಳನ್ನು ಮೌಲಾನಾ ಲುತಫಿ ಖಾನಸಾಕರೀಗೆ ಕೊಡಲು ಹೇಳಿದನು. ಮತ್ತು ಅವನಿಗೆ ಅದನ್ನು ಶಿರಾಜ ನಗರಕ್ಕೆ ತೆಗೆದುಕೊಂಡು ಹೋಗಿ ಮೀರ ಸಯ್ಯದ ಅಹಮದ ಬಿನ್ ಇಮಾಮ ಮೂಸಾ ಕಾನಮ್ ರಜೆಯಾಲ್ಲಾಹ ಅನಹುಮಾ ಈತನ ಖನಾ ಇಮಾರತಿಯನ್ನು ಸರಿಯಾಗಿ ಕಟ್ಟಲು ಹಾಗು ಅಲ್ಲಿಯ ನೌಕರ ಜನರಿಗೆ ಖರ್ಚು ಮಾಡಲು ಹೇಳಬೇಕು ಎಂದು ಆಜ್ಞೆ ಮಾಡಿದನು. ಆಗ ನಾನು ಎದ್ದು ನಿಂತಿದ್ದೆನು. ಈ ಆಜ್ಞೆಯನ್ನು ಅಫಜಲಖಾನನಿಗೆ ಮಾಡಿದ್ದನು ಅದಕ್ಕಾಗಿ ನನಗೆ ತುಂಬ ಆಶ್ಚರ್ಯವಾಯಿತು ಯಾಕೆಂದರೆ ಈ ಆಜ್ಞೆಯನ್ನು ಬಾದಶಹನು ಕೋಶಾಧಿಕಾರಿಗೆ ಏಕೆ ಮಾಡಲಿಲ್ಲವೆಂದು! ಆದ್ದರಿಂದ ನನಗೆ ಹೀಗೆ ಅನಿಸಿತು. ಬಹುಶಃ ಭಂಡಾರದಲ್ಲಿ ದ್ರವ್ಯ ಉಳಿದಿರಲಿಕ್ಕಿಲ್ಲವೆಂದು ಬಾದಶಹ ತಿಳಿದಿರಬೇಕು. ಅದನ್ನು ತಿಳಿದು ಬಾದಶಹನು ನನಗೆ ಆಜ್ಞೆ ಮಾಡುತ್ತ 'ನೀನೇನೂ ಚಿಂತಸಬೇಡ, ನಾನು ಜೀವಂತ ಇರುವವರೆಗೆ ನಮ್ಮ ಭಂಡಾರದಲ್ಲಿಯ ದ್ರವ್ಯ ಸಾಕಾಗುತ್ತದೆ' ಎಂದು ಹೀಗೆ ಮೂರು ನಾಲ್ಕು ತಿಂಗಳಲ್ಲಿ ಅಪಶಬ್ದಗಳನ್ನು ನುಡಿಯುತ್ತಿದ್ದನು. 'ನಾನು ಹೋಗುತ್ತೇನೆ' 'ನಾನು ಬೇಗ ಹೋಗುತ್ತೇನೆ' ಎಂದೆಲ್ಲ ಹೇಳುತ್ತಿದ್ದನು ಯಾವಾಗಲಾದರೂ ನಾನು 'ಎಲ್ಲಿಗೆ ಹೋಗುತ್ತೀರಿ' ಎಂದು ಕೇಳಿದರೆ. ನನ್ನ ಮನಸ್ಸನ್ನು ಸಮಾಧಾನ ಪಡಿಸಲು ಒಮ್ಮೊಮ್ಮೆ ಮಕ್ಕಾ-ಮದೀನಾಕ್ಕೆಂದು ಇನ್ನೊಮ್ಮೆ 'ಮದೀನಾ-ಮಿನೋರಾ'ಕ್ಕೆಂದು ಹೇಳುತ್ತಿದ್ದನು. ಒಮ್ಮೆ ಹೀಗೆ ಹೇಳಿದನು. 'ನನಗೊಂದು ಗುರುತು ಸಿಕ್ಕಿತು. ತಿಂಗಳ ಹದಿನಾಲ್ಕನೆಯ ತಾರೀಖಿನಂದು ರಾತ್ರಿ ಯಾರೋ ಒಬ್ಬ ಕಣ್ಣು ಮುಚ್ಚಿದಾಗ ಬೆಳದಿಂಗಳಲ್ಲಿ ನಿಂತಿದ್ದ ಕಣ್ಣು ತೆರೆದರೆ ಹಾರಿ ಹೋಗುತ್ತಿದ್ದ. ಒಂದು ವೇಳೆ ಆತನ ಆಯುಷ್ಯ ಇನ್ನೂ ಉಳಿದಿದ್ದರೆ ಆತನ ನೆರಳು ನಖಶಿಖಾಂತ ಪೂರ್ಣ ಕಾಣುತ್ತದೆ, ಆಯುಷ್ಯ ಮುಗಿದಿದ್ದರೆ ತಲೆಯ ಹೊರತು ಉಳಿದ ನೆರಳು ಕಾಣುತ್ತದೆ. ಹೀಗಿದ್ದದ್ದನ್ನು ನಾನು ನೋಡಿರುವೆ. ಅಂಥದ್ದನ್ನೆ ನಾನು ನನ್ನ ನೆರಳನ್ನು ತಲೆಯ ಹೊರತು ನೋಡಿದೆ.

ಯಾವ ದಿನ ಆತನು ಗದ್ದುಗೆಯ ಮೇಲೆ ಕುಳಿತಿದ್ದನೋ ಅಂದು ಒಂದು ಕೋಟಿ ಐವತ್ತು ಲಕ್ಷ ಹೊನ್ನು ನಗದು, ಅದರಂತೆ ರಾಜಧಾನಿಯ ಸಾಮಾನುಗಳು ಸರಂಜಾಮುಗಳು, ಜವಾಹಿರಗಳು ವಸ್ತ್ರಗಳು, ಪ್ರತಿಯೊಂದು ಕೆಲಸದ ಶಸ್ತ್ರಗಳು ಮತ್ತು ಭಾರೀ ಕಿಮ್ಮತ್ತಿನ ಪೋಷಾಕುಗಳು ಇತ್ಯಾದಿ ಅಗಣಿತವಾಗಿದ್ದುವು. ಅಲ್ಲದೆ ವಿಜಯನಗರ, ಕಿಲನಾರ ಕರ್ನಾಟಕ ಮತ್ತು ಮನೇವಾಡದ ಪ್ರದೇಶಗಳು, ಬಹಳಷ್ಟು ಉತ್ಪನ್ನ ಉಳ್ಳವುಗಳು ಇಂಥ ದೊಡ್ಡ, ಶ್ರೇಷ್ಠ ಹಾಗೂ ಪ್ರಸಿದ್ಧವಾದ ಪ್ರದೇಶಗಳು ಆದಿಲಶಾಹಿ ರಾಜ್ಯಕ್ಕೆ ಸೇರಿದುವು. ಅದರಲ್ಲಿಯ ಭಾವವೆಂದರೆ ಮೊದಲೆ ದೊಡ್ಡ ಸಂಪತ್ತು. ಅದಕ್ಕೆ ಮತ್ತೆ ಈ ಪ್ರದೇಶಗಳು ಸೇರಿದಾಗ ರಾಜ್ಯ ಇನ್ನಷ್ಟು ಬೆಳೆಯಿತು. ಆದ್ದರಿಂದ ಆದಿಲಶಹನ ಬಕ್ಷೀಸು ಕೊಡುವಲ್ಲಿ, ಧರ್ಮಕಾರಣ ಮಾಡುವಲ್ಲಿ ಎಷ್ಟೊಂದು ಬೆಳೆದಿತ್ತೆಂದರೆ, ಆದಿಲಶಹನು ಸತ್ತದಿನ ಅನೇಕ ದಿನಗಳಿಂದ ಇಲ್ಲಿ ಬಂದು ಇದ್ದ ಅಕಬರ ಬಾದಶಹನ ರಾಯಭಾರಿ ಐನುಲ್‌ಮುಲ್ಕನಿಗೆ ನಿರೋಪ ಕೊಟ್ಟು ದಾರಿಖರ್ಚನ್ನು ಕೊಡಲು ಭಂಡಾರದಲ್ಲಿ ಹಣವಿರಲಿಲ್ಲ. ಆದ್ದರಿಂದಲೇ ಆದಿಲಶಹ ಸತ್ತದಿನ ಆತ ವಿಜಾಪುರದಲ್ಲೆ ಇರಬೇಕಾಯಿತು. ಕೊನೆಗೆ 'ನೀವು ಹೊರಟು ಹೋಗಿರಿ' ಎಂದು ಹೇಳಿದಾಗ ಆತ ಹೊರಟು ಹೋದನು.

ಆದಿಲಶಹನ ಮರಣದ ದಿನವನ್ನು ಗ್ರಂಥಕಾರರು ಅಬಜದದ ಲೆಕ್ಕದಿಂದ 'ಜುಲಮದೀದ' ಈ ಅಕ್ಷರಗಳಲ್ಲಿ ಹೇಳಿದರು. ಅಕ್ಷರಗಳ ಅರ್ಥ ಆದಿಲಶಾಹನ ಮೇಲೆ ಬಲವಂತ ಮಾಡಲಾಯಿತು

ಎಂದಾಗುತ್ತದೆ. ಇವೇ ಅಕ್ಷರಗಳನ್ನು ಸದರೀ ಲೆಕ್ಕದಿಂದ ಬೇರೀಜು ಮಾಡಿದರೆ ಒಂಭೈನೂರು ಎಂಭತ್ತೆಂಟು ಎಂದಾಗುತ್ತದೆ. (ಕ್ರಿ.ಶ. ೧೫೮೦) ಅಂದರೆ ಅಂದು ಅಲಿ ಆದಿಲಶಹನು ಮರಣ ಹೊಂದಿದನು ಎಂದಾಗುತ್ತದೆ. ಮುಲ್ಲಾ ಮಹಮ್ಮದ ರಜಾ ಜಹಿದೀ ಅಲೀಮುರ್ತೇಖಲೀಸ ಎಂದರೆ, ಮುಲ್ಲಾ ಮಹಮ್ಮದನು ಕವಿತೆಗಳನ್ನು ಬರೆಯುತ್ತಿದ್ದನು. ಆ ಕವಿತೆಗಳ ಕೊನೆಗೆ ತನ್ನ ಹೆಸರನ್ನು 'ಶಹೀದ' ಎಂದು ಹೇಳಿಕೊಳ್ಳುತ್ತಿದ್ದನು, ಆತನು ಈ ಬಾದಶಹನ ಮೇಲೆ ಒಂದು 'ಮರಶಾ' ಬರೆದಿದ್ದಾನೆ (ಕಥನಕಾವ್ಯ) ಆ ಕಥನ ಕಾವ್ಯದ ಕೊನೆಯ ಬೈತ (ದ್ವಿಪದಿ)ದ ಎರಡನೆಯ ಸಾಲಿನಲ್ಲಿ ಅಲಿ ಆದಿಲಶಹನ ಮರಣದ ದಿನವನ್ನು ಹೇಳಿದ್ದಾನೆ. ಅದರ ಅರ್ಥವನ್ನು ಹೀಗೆ ಹೇಳಲಾಗುತ್ತದೆ...."ಅರೆ ಅರೆ! ಯಮ ದೂತರು ತಮ್ಮ ಕೈಗಳಿಂದ ನ್ಯಾಯಸ್ವರೂಪದ ತೋಟದಲ್ಲಿ ಶೂರತ್ವದ ಮರವನ್ನು ಬೀಳಿಸಿದರು ಮತ್ತು ಬಹುಮುಖ್ಯ ಥಾಲನ್ನು ಮುರಿದರು ॥ ೧ ॥ ಬಾದಶಾಹೀತನದ ಆಕಾಶದಲ್ಲಿ ಈ ವಿಷಯ ಪ್ರಸಿದ್ಧವಾಗಿದೆ : ಏನೆಂದರೆ ದಾನ ಧರ್ಮಗಳ ಸೂರ್ಯನು ಅಸ್ತನಾದನು ಮತ್ತು ದಾತೃತ್ವದ ಚಂದ್ರನು ಆಚ್ಛಾದಿತನಾದನು ॥ ೨ ॥ ದಿಲಶಾಹ ಎಂಬ ಅಡ್ಡ ಹೆಸರಿನ ಮತ್ತು ಅಲಿ ಎಂಬ ಹೆಸರಿನ: ಕಾಲಕಿರ್ದಿಯಲ್ಲಿ ಬಲವಂತನನ್ನು ಯಾರೂ ಕೇಳಲಿಲ್ಲ ॥ ೩ ॥ ನೀತಿವಂತ ನಡವಳಿಕೆಯಿಂದ ಸಂಕಟಪಟ್ಟು ಯಾರೂ ಸಾಯಲಿಲ್ಲ. ಕಾಲಚಕ್ರ ಕುಂಬಾರನ ಕೈಯಲ್ಲಿ ಮೃತ್ಯು ಶರಾಬನ್ನು ಸೇವಿಸಿದರು ॥ ೪ ॥ ಬ್ರಹ್ಮದೇವನು ಆತನ ಚರಿತ್ರೆಯನ್ನು ಬರೆಯುವಾಗ ಪುಸ್ತಕದಲ್ಲಿ 'ಪೃಥ್ವಿಯ ಧಣಿ ತೀರಿದನು ಎಂದು ಬರೆದನು'. ಇದರಲ್ಲಿಯ 'ಶಾಹೆಜಹಾನ ಶುದಶಹೀದ' ಇಷ್ಟು ಪರ್ಶಿಯನ್ ಅಕ್ಷರಗಳ ಅರ್ಥ, ಅಬಜದದ ಲೆಕ್ಕದಿಂದ ಬೇರೀಜು ಮಾಡಿದರೆ ಒಂಭೈನೂರು ಎಂಭತ್ತೆಂಟು ಎಂದಾಗುತ್ತದೆ. ಆ ವರುಷ ಸತ್ತನು ॥ ೫ ॥ ಇಬ್ರಾಹಿಮ ಅಸದಖಾನನು ಬರೆದ ಚರಿತ್ರೆಯಲ್ಲಿ ಆದಿಲಶಹನು ಗದ್ದುಗೆಯನ್ನು ಏರಿದ ದಿನವನ್ನು ಹಿಜರಿ ಸನ್ ೯೬೫ (ಕ್ರಿ.ಶ ೧೫೫೭-೫೮) ಎಂಬುದಾಗಿ, ಅದೇ ವರುಷ ಅಸದಖಾನ ಸತ್ತನು ಎಂದು ಹೇಳಿದೆ.

### ೨೮. ಕಾಲಾನುಕ್ರಮಣಿಕೆ ಮತ್ತು ಸೈನ್ಯದ ವಿವರಗಳು :

- ಶಾಹದುರ್ಗದ ಕೋಟೆಯನ್ನು ಮೀರ ಜಮೀತುಲ್ಲಾ ಈತನು ಹಿಸ ೯೬೬ (ಕ್ರಿ.ಶ ೧೫೫೮-೫೯)ರಲ್ಲಿ ಕಟ್ಟಿದನು.
- ವಿಜಾಪುರದ ಹತ್ತಿರ ಶಾಹಪುರವನ್ನು ಹಿ.ಸ. ೯೬೭ರಲ್ಲಿ ಕಟ್ಟಿದರು. (ಕ್ರಿ.ಶ.೧೫೫೯-೬೦)
- ನೀರಿನ ಸರಬರಾಜನ್ನು ಕಿಶ್ವರಖಾನನು ಹಿ.ಸ. ೯೬೭ರಲ್ಲಿ (ಕ್ರಿ.ಶ. ೧೫೫೯-೬೦)ಪೂರೈಸಿದನು.
- ಶಾಹಬುರುಜ ಮತ್ತು ಮಹಾಬುರುಜುಗಳನ್ನು ಕ್ರಿ.ಶ. ೯೬೭ರಲ್ಲಿ (ಕ್ರಿ.ಶ. ೧೫೫೯-೬೦) ಕಟ್ಟಿದರು.
- ಹೀರಾಮಹಲ ಹಿಸ ೯೬೮ (ಕ್ರಿ.ಶ. ೧೫೬೦-೬೧), ಕಂಕಣ ಮಹಲ ಹಿಸ ೯೬೯ (ಕ್ರಿಶ ೧೫೬೧-೬೨)ರಲ್ಲಿ ಕಟ್ಟಿದರು.
- ವಿಜಯನಗರ ಗೆಲುವು ಮತ್ತು ರಾಮರಾಜನ ಕೊಲೆ. ಹಿಸ ೯೭೨ (ಕ್ರಿಶ ೧೫೬೪-೬೫)ರಲ್ಲಿ ಆಯಿತು.

- ರಾಯಚೂರು-ಮುದಗಲ್ಲು ಎರಡೂ ಕೋಟೆಗಳ ಜಯ ಅದೇ ವರುಷ ಆಯಿತು.
- ವಿಜಾಪುರ ಕೋಟೆಯನ್ನು ಹಿ ಸ ೯೭೫ (ಕ್ರಿ.ಶ ೧೫೬೭-೬೮)
  ಧಾರವಾಡ ಕೋಟೆಯನ್ನು ಹಿ.ಸ. ೯೭೫ (ಕ್ರಿ.ಶ. ೧೫೬೭-೬೮ರಲ್ಲಿ)
  ಬಂಕಾಪುರ ಕೋಟೆಯನ್ನು ಹಿಸ ೯೮೧ (ಕ್ರಿ.ಶ. ೧೫೭೨-೭೩)
  ಕಿಶ್ವರಖಾನನು ಕಟ್ಟಿದನು.
- ಫಿದಕದ ತೋಟವನ್ನು ಹಿ.ಸ. ೯೭೬ (೧೫೬೮-೬೯ ಕ್ರಿ.ಶ.)
- ಬಾರಾ ಇಮಾಮರ ತೋಟ ಹಿಸ ೯೭೪ (೧೫೬೬-೬೭)ಕಟ್ಟಿದರು
- ಜುಮ್ಮಾಮಶೀದಿಯನ್ನು ಹಿ.ಸ. ೯೮೫ (ಕ್ರಿ.ಶ. ೧೫೭೭-೭೮)ರಲ್ಲಿ ಕಟ್ಟಲಾಯಿತು.
- ಒಟ್ಟು ಸೈನ್ಯ ೮೦ ಸಾವಿರ, ಆನೆಗಳು ೭೩೫

## ಬುಸ್ತಾನ : ಐದು

# ಎರಡನೆಯ ಇಬ್ರಾಹಿಮ ಆದಿಲಶಾಹ

### ೧. *ಇಬ್ರಾಹಿಮ ಆದಿಲಶಾಹ ಬಿನ್ ತಹಮಾಸಿಪ್ ಬಿನ್ ಇಬ್ರಾಹಹಿಮ ಆದಿಲಶಹನ ವರ್ಣನೆ :*

ಈ ಮೊದಲಿನ ಕಥಾಭಾಗವನ್ನು ವರ್ಣಿಸಲಾಗಿದೆ. ಅಲಿ ಆದಿಲಶಹನು ಸಿಂಹಾಸನದ ಮೇಲೆ ಕುಳಿತ ದಿನವೆ ತನ್ನ ಸಹೋದರ ತಹಮಾಸೀಪನ ಕಣ್ಣುಗಳನ್ನು ಕಿತ್ತಿ ನಜರಬಂದಿಯ ಬಂಧನದಲ್ಲಿಟ್ಟಿದ್ದನು. ತಹಮಾಸೀಪನಿಗೆ ಇಬ್ಬರು ಪುತ್ರರು ಜನಿಸಿದ್ದರು. ಅವರಲ್ಲಿ ಒಬ್ಬನ ಹೆಸರು ಇಬ್ರಾಹಿಮನೆಂದು ಇನ್ನೊಬ್ಬನ ಹೆಸರು ಇಸ್ಮಾಯಿಲ್ ಎಂದಾಗಿತ್ತು. ಅಲಿ ಆದಿಲಶಹನು ಈ ಉಭಯತರ ಮೇಲೂ ಮನಸ್ವೀ ಮಮತೆಯನ್ನು ತೋರಿ ಪೂರ್ಣ ಪ್ರೀತಿಯಿಂದ ಪಾಲನೆ ಮಾಡುತ್ತಿದ್ದನು. ಹೀಗಿರುವಾಗ ಪ್ರಾರಬ್ಧದಲ್ಲಿ ಬರೆದಂತೆ ಖೋಜಾ (ನಪುಂಸಕ)ನ ಕೈಯ ಕತ್ತಿಯಿಂದ ಕೊಲೆಯಾಗಿ ಅಲಿ ಆದಿಲಶಹನು ಸತ್ತನು. ಸರಕಾರದ ಅಧಿಕಾರಿವರ್ಗವು ಮರುದಿನವೇ ಇಬ್ರಾಹಿಮ ಆದಿಲಶಹನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿತು. ಆ ಸಮಯದಲ್ಲಿ ಇಬ್ರಾಹಿಮ ಆದಿಲಶಹನ ವಯಸ್ಸು ಒಂಭತ್ತು ವರುಷಕ್ಕಿಂತ ಅಧಿಕವಾಗಿರಲಿಲ್ಲ. ಅಂಥ ಸಣ್ಣ ವಯಸ್ಸಿನಲ್ಲಿಯೆ ಯೋಗ್ಯತೆ, ಬುದ್ಧಿವಂತಿಕೆ ಶ್ರೇಷ್ಠವಾಗಿದ್ದು ಆತ ಲಕ್ಷಣವಾಗಿದ್ದನು.ಆತನ ಬಾಲ್ಯದ ಹಣೆಯ ಮೇಲೆ ಪ್ರೌಢತೆಯ ಚಿಹ್ನೆಗಳು ಪ್ರಕಟವಾಗಿ ತೋರುತ್ತಿದ್ದುವು.

ಸಿಂಹಾಸನದ ಮೇಲೆ ಕುಳಿತ ದಿನ ಪ್ರಾತಃಕಾಲದಿಂದ ಸಾಯಂಕಾಲದವರೆಗೆ ಎಲ್ಲರ ಭೆಟ್ಟಿಯಾಗುವುದರಲ್ಲಿ ಮತ್ತು ಎಲ್ಲ ಅಧಿಕಾರಿ ವರ್ಗದವರ ಮುಜುರೆಗಳನ್ನು ತೆಗೆದುಕೊಳ್ಳುವಲ್ಲಿ ನಿಮಗ್ನನಾಗಿದ್ದನು. ಸಭೆಯಿಂದ ಎದ್ದಾಗ ಸರಕಾರದ ಸೇವಕರು ಅಂತಃಪುರದ ಬಾಗಿಲವರೆಗೂ ಬಾದಶಹನನ್ನು ಕಳಿಸಿ ಬಂದರು. ಆಗ ಆ ಸೇವಕರಲ್ಲಿಯ ಒಬ್ಬನು ವಿನಂತಿಸಿಕೊಳ್ಳುತ್ತ "ಇಂದು ಬಹಳ ಹೊತ್ತು ಕುಳಿತುಕೊಂಡದ್ದರಿಂದ ಪ್ರಭುಗಳಿಗೆ ತುಂಬ ಶ್ರಮವಾಗಿರಬೇಕು. ಶ್ರೀಮಂತರ ದೇಹ ದಣಿದಿರಬೇಕು. ಇನ್ನು ತುಸು ವಿಶ್ರಾಂತಿ ತೆಗೆದುಕೊಳ್ಳಿರಿ" ಎಂದನು. ಅದಕ್ಕೆ ಉತ್ತರರೂಪವಾಗಿ ನಾಲಿಗೆಯಿಂದ ಮುಕ್ತಾಫಲದ ಅಕ್ಷರಗಳು ಉದುರುವಂತೆ "ಸಾಂಪ್ರತ, ಕೆಲಸವನ್ನು ನನಗೆ ವಹಿಸಿಕೊಟ್ಟಾಗ, ಆ ಕೆಲಸದಲ್ಲಿ ಶರೀರಕ್ಕೆ ಸುಖ ಕೊಡುವುದೆಂದರೆ, ಸ್ವಸ್ಥವಾಗಿ ಮಲಗುವುದು ಇನ್ನು ಸಾಧ್ಯವೇ ಇಲ್ಲ" ಎಂದು ಬಾದಶಹನು ಅಪ್ಪಣೆ ಕೊಡಿಸಿದನು. ಆದರೂ ವಯಸ್ಸು ಚಿಕ್ಕದಾಗಿದ್ದರಿಂದ ಮಹಾಲಿ ಮತ್ತು ಮುಲಕೀ ಕೆಲಸಗಳನ್ನು ಮಾಡಲು ಸಾಧ್ಯವಿರಲಿಲ್ಲ. ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಸಮಯದಲ್ಲಿ ಎಷ್ಟೋ ಅಮೀರ ಜನರು ಮನಸ್ಸಿಗೆ ಬಂದಂತೆ ಒಬ್ಬರೊಬ್ಬರ ಮೇಲೆ ಗದ್ದಲ ಮಾಡಿ ರಾಜಧಾನಿಯ ಸೂತ್ರಗಳನ್ನು ತಂತಮ್ಮ ಸುಪರ್ದಿನಲ್ಲಿ ತೆಗೆದುಕೊಂಡರು.

*೨. ಕಾಮಿಲಖಾನನ ಸರ್ವಾಧಿಕಾರ, ರಾಜ್ಯವನ್ನು ಹಸ್ತಗತ ಮಾಡಿಕೊಂಡುದರ ವರ್ಣನೆ :*

ಕಾಮಿಲಖಾನನು ಪ್ರಾರಂಭದಲ್ಲಿ ರಾಜ್ಯದ ಸರದಾರ (ಅಮೀರ)ರಲ್ಲೊಬ್ಬನಾಗಿದ್ದನು. ಈ ವಿಷಯವನ್ನು ಮೊದಲು ಹೇಳಿಯಾಗಿದೆ. ಆ ದಿನಗಳಲ್ಲಿ ಕಾಮಿಲಖಾನನು ಸರಕಾರದ ಉತ್ತಮ ಸೇವೆಯನ್ನು ಮಾಡಿ ರಾಜ್ಯದ ಕೆಲಸಗಳಲ್ಲಿ ವಿಶ್ವಾಸವನ್ನು ಗಳಿಸಿ ಪ್ರಮುಖನಾಗಿದ್ದನು. ಮಹಾಲಿ (ಕಂದಾಯ) ಹಾಗೂ ಮುಲಕೀ (ವಸೂಲಿ) ಖಾತೆಗಳ ಮುಖ್ಯಸ್ಥನಾಗಿದ್ದನು. ಬಾದಶಹರ ಸರಕಾರದ ರಾಜಧಾನಿಯ ವ್ಯವಸ್ಥೆ, ಆಡಳಿತ ಹಾಗೂ ಎಲ್ಲ ನೌಕರವರ್ಗದವರು, ಇಲಾಖಾ ಪ್ರಮುಖರು, ಇತ್ಯಾದಿಗಳ ಮೇಲೆ 'ಸರಮುನಿಮ'ನೂ ( ಮುಖ್ಯಸ್ಥ) ಆಗಿದ್ದನು. ಕೋಟೆಯ ಉಸ್ತುವಾರಿಗೆ ತನ್ನ ಕಡೆಯ ಕೆಲಸಗಾರರಲ್ಲಿಯ ಒಬ್ಬನನ್ನು ನಿಯಮಿಸಿದ್ದನು. ಮೊದ ಮೊದಲಿಗೆ ಕಾಮಿಲಖಾನನು ಉತ್ತಮ ನಡತೆಯನ್ನೆ ಧಾರಣ ಮಾಡಿದ್ದನು. ತಹಮಾಸೀಪನ ಮಗ ಇಬ್ರಾಹಿಮ ಆದಿಲಶಹನ ಪಾಲನ ಪೋಷಣೆಯನ್ನು ಅಲಿ ಆದಿಲಶಹನ ಹೆಂಡತಿ ಚಾಂದಬೀಬಿ ಸುಲ್ತಾನಳ ಕಡೆಗೆಯೇ ವಹಿಸಿದ್ದನು. ರಾಜ್ಯದ ಎಲ್ಲ ಕಾರಭಾರಿ ಜನರಿಗೆ ಅಭಯ ಪತ್ರಗಳನ್ನು ಕಳಿಸುತ್ತ ಅವರ ಮನಸ್ಸಿಗೆ ಭರವಸೆಯನ್ನು ಕೊಟ್ಟಿದ್ದನು. ಕೆಲವು ದಿನಗಳಲ್ಲಿ ಸಾವಕಾಶವಾಗಿ ಕಾಮಿಲಖಾನನಿಗೆ ಗರ್ವ ಅಭಿಮಾನಗಳು ಹುಟ್ಟಿ ಬಾದಶಹನ ಭಂಡಾರದಲ್ಲಿ ಏರಿಳಿತ ಮಾಡ ಹತ್ತಿದನು. ಒಂದೊಂದು ಪೆಟ್ಟಿಗೆಯನ್ನು ತೆರೆದು ಅದರಲ್ಲಿಯ ಬಾರೀ ಕಿಮ್ಮತ್ತಿನ, ಶ್ರೇಷ್ಠ ಪದಾರ್ಥಗಳನ್ನು ಹೊರತೆಗೆದು ಇನ್ನೊಂದು ಪೆಟ್ಟಿಗೆಯಲ್ಲಿ ಇಡುತ್ತಿದ್ದನು.

ರಫೀಯುದ್ದೀನನು ಭಂಡಾರದ ಹವಾಲ್ದಾರನಾಗಿದ್ದನು. ಆತನು ಕಾಮಿಲಖಾನನ ಪೆಟ್ಟಿಗೆಯಲ್ಲಿಯ ಪದಾರ್ಥಗಳನ್ನು ತೆಗೆದು ಬೇರೆ ಪೆಟ್ಟಿಗೆಯಲ್ಲಿ ಇಡುತ್ತಿದ್ದನು. ಮತ್ತು ಅದನ್ನೆಲ್ಲ ಒಂದು ಪಟ್ಟಿಯಲ್ಲಿ ನಮೂದಿಸುತ್ತಿದ್ದನು. ಆದರಿಂದಾಗಿ ಕಾಮಿಲಖಾನನು ಅವನ ಮೇಲೆ ಬಹಳ ಸಿಟ್ಟಾಗುತ್ತಿದ್ದನು. ಮತ್ತು ಅವನಿಗೆ ಹೇಳುತ್ತಿದ್ದನು. 'ನೀನ್ಯಾಕೆ ನನ್ನೊಂದಿಗೆ ಸ್ಪರ್ಧೆಮಾಡುತ್ತೀ? ಮತ್ತು ವಾದ ಹಾಕುತ್ತೀ?' ಎಂದು ಹೇಳುತ್ತ ಏಕಾಂತ ಸ್ಥಳದಲ್ಲಿ ಕರೆದು ಜನರಿಂದ ಅವನಿಗೆ ಬೆದರಿಕೆಯನ್ನು ಹಾಕಹತ್ತಿದನು. 'ನಾವು ಏನು ಮಾಡಿದ್ದನ್ನೂ ನೀನು ಪಟ್ಟಿಯಲ್ಲಿ ಬರೆದಿಡುವ ಕಾರಣವಿಲ್ಲ' ಎಂದು ಬರೆಯಲು ಅಡ್ಡಿ ಮಾಡುತ್ತಿದ್ದನು. ಬಹಳಷ್ಟು ಪದಾರ್ಥಗಳನ್ನು ಏನಾದರೊಂದು ನೆಪಮಾಡಿ ಸರಕಾರದ ಭಂಡಾರದಿಂದ ಕಾಮಿಲಖಾನನು ತೆಗೆದುಕೊಂಡು ಹೋದನು ಮತ್ತು ಎಷ್ಟೋ ಪದಾರ್ಥಗಳನ್ನು ಬೇರೆ ಪೆಟ್ಟಿಗೆಯಲ್ಲಿ ಹಾಕಿ ಇಟ್ಟಿದ್ದನು. ಆದರೆ ಅವುಗಳನ್ನು ಭಂಡಾರದಿಂದ ಹೊರಗೆ ತೆಗೆದುಕೊಂಡು ಹೋಗುವ ಸಂಧಿ ಸಾಧಿಸಲಿಲ್ಲ. ಭಂಡಾರದಲ್ಲಿಯ ದ್ರವ್ಯವನ್ನು ರಾಣೀವಾಸದ ಕುಣಬೀ ಸ್ತ್ರೀಯರಿಗೂ ಕೊಡಲು ಪ್ರಾರಂಭಿಸಿದನು. ರಾಣೀ ವಾಸದ ಎಷ್ಟೋ ಜನರಿಗೆ ಪ್ರತಿತಿಂಗಳೂ ಭಂಡಾರದಿಂದ ತೈನಾತಿ ಇತ್ತು. ಪ್ರತಿತಿಂಗಳೂ ಅವರಿಗೆ ಅದನ್ನು ಮುಟ್ಟಿಸಲಾಗುತ್ತಿತ್ತು. ಕಾಮೀಲಖಾನನು ಕೋಶಾಧಿಕಾರಿಯನ್ನು ಕರೆದು 'ಇನ್ನು ಮುಂದೆ ಪ್ರತಿಯೊಬ್ಬರ ತೈನಾತಿಯನ್ನು ಬೇರೆ ಬೇರೆ ಬಟ್ಟೆಗಳಲ್ಲಿ ಕಟ್ಟಿ ಆ ಗಂಟಿನ ಮೇಲೆ ಸಂಬಂಧಿಸಿದ ವ್ಯಕ್ತಿಯ ಹೆಸರನ್ನು ಬರೆದು ನನ್ನ ಹತ್ತಿರ ತೆಗೆದುಕೊಂಡು ಬನ್ನಿರಿ. ನಾನು ಸ್ವತಃ ಒಬ್ಬೊಬ್ಬರ ಸೇವೆಯನ್ನು ಗಣಿಸಿ ಅವರ ಸಂಬಳವನ್ನು ವಿತರಿಸುತ್ತೇನೆ' ಎಂದನು.

ಅದರಂತೆ ಕೋಶಾಧಿಕಾರಿಯು ಅವನ ಹೇಳಿಕೆಯಂತೆ ಬೇರೆ-ಬೇರೆ ಬಟ್ಟೆಗಳಲ್ಲಿ ಕಟ್ಟಿ ಆತನ ಹತ್ತಿರ ತಂದನು. ಕಾಮಿಲಖಾನನು ಅವುಗಳನ್ನು ತೆಗೆದುಕೊಂಡು ರಾಣೀವಾಸದ ಮಹಲುಗಳಿಗೆ ಹೋದನು. ಅಲ್ಲಿಯ ಸೇವಕಿಯರನ್ನು ಒಬ್ಬೊಬ್ಬರನ್ನಾಗಿ ಹೆಸರುಗೊಂಡು ಕರೆದು ತನ್ನ ಹತ್ತಿರ ನಿಲ್ಲಿಸಿಕೊಂಡು ತನ್ನ

ಕೈಯಿಂದ ಸಂಬಳವನ್ನು ಕೊಡಹತ್ತಿದನು. ಆಗ ಎಲ್ಲ ಸೇವಕಿಯರನ್ನು ಲಕ್ಷ್ಯದಲ್ಲಿ ತೆಗೆದುಕೊಂಡು ಅವರಲ್ಲಿ ಇಪ್ಪತ್ತು ಸ್ತ್ರೀಯರನ್ನು ಆರಿಸಿ ಪ್ರತ್ಯೇಕವಾಗಿ ಒಂದೆಡೆ ಕೂಡಿಸಿದನು. ಉಳಿದವರಲ್ಲಿ ಎಷ್ಟೋ ಜನರು ಬಾದಶಹರ ವಂಶಸ್ಥರ ಮಹಾರಾಣಿಯರ, ಇನ್ನು ಕೆಲವರು ದೊಡ್ಡ ದೊಡ್ಡ ಜನರ, ಬಾದಶಹರ ಸಂಬಂಧಿಕರ ಸೇವಕಿಯರಾಗಿದ್ದರು. ಪ್ರತಿಯೊಬ್ಬರ ಮಹಲುಗಳು ಬೇರೆ-ಬೇರೆಯಾಗಿದ್ದುವು. ಅವರಿಗೆ ಸೇವೆಗಾಗಿ ಹಳ್ಳಿಗಳನ್ನು ಪರಗಣೆಗಳನ್ನು ಕೊಡಲಾಗಿತ್ತು. ಕಾಮಿಲಖಾನನು ಕಾರಕೂನರನ್ನು ಕರೆದು. 'ಕಛೇರಿಯ ಎಲ್ಲ ಜನರ ಸಂಬಳ ಹಾಗು ಗುಮಾಸ್ತರ ಸಂಬಳ, ಸರಕಾರೀ ಸೇವಕರ ಸಂಬಳವನ್ನು ಅಮಾನತ್ತಿನಲ್ಲಿಡಿರಿ. ಅನಂತರ ನಾವು ಒಬ್ಬೊಬ್ಬರನ್ನು ಪರೀಕ್ಷಿಸಿ, ಕೆಲಸಕ್ಕೆ ಉಪಯೋಗವಿದ್ದವರನ್ನು ನೋಡಿ ಸಂಬಳ ಕೊಡುತ್ತೇವೆ' ಎಂದು ಆಜ್ಞೆ ಮಾಡಿದನು. ಚಾಂದಬೀಬಿ ಸುಲ್ತಾನಳನ್ನು ಅಗೌರವದಿಂದ ಕಂಡು ಅವಳೊಂದಿಗೆ ಹುಂಬತನದಿಂದ ಕಠೋರ ಮಾತುಗಳನ್ನಾಡಿ, ಅಯೋಗ್ಯವಾಗಿ ನಡೆದುಕೊಳ್ಳಲು ಪ್ರಾರಂಭಿಸಿದನು. ಅದರಿಂದಾಗಿ ಸರಕಾರದ ಎಲ್ಲ ಕಾಮದಾರರು, ಕಾರಭಾರಿಗಳು, ದರಬಾರದಲ್ಲಿಯ ಅಮೀರರು ಮತ್ತು ಬಾದಶಹನ ಅರಮನೆಯ ಎಲ್ಲ ನೌಕರರು ಕಾಮೀಲಖಾನನೊಂದಿಗೆ ವಿರಸಗೊಂಡು ಕಪಟದಿಂದ ನಡೆದುಕೊಳ್ಳಹತ್ತಿದರು. ಕಾಮಿಲಖಾನನು ಸರಕಾರದಲ್ಲಿರಬಾರದು. ಆತನನ್ನು ತೆಗೆಯಬೇಕು ಎಂಬ ಪ್ರಯತ್ನದಲ್ಲಿದ್ದರು.

ಚಾಂದಬೀಬಿ ಸುಲ್ತಾನಳು ಒಂದು ದಿನ ಸ್ತ್ರೀಯರ ವಸ್ತ್ರಗಳನ್ನು ಅಂದರೆ ಸೀರೆ, ಕುಪ್ಪಸ, ಹತ್ತಿ ಹಾಗೂ ರಾಟಿಗಳನ್ನು ತರಿಸಿ ಅವುಗಳನ್ನು ಹಿರಿಯ ಕಿಶ್ವರಖಾನನ ಮಗ ಹಾಜಿ ಕಿಶ್ವರಖಾನನಿಗೆ ಕಳಸಿ ಅದರೊಂದಿಗೆ ಒಂದು ನಿರೋಪವನ್ನಿಟ್ಟಳು. 'ಕಾಮಿಲಖಾನನು ಪ್ರಧಾನಮಂತ್ರಿ ಪದವಿಗೆ ಯೋಗ್ಯನಿಲ್ಲ. ಅದು ನಿಮ್ಮ ತಂದೆಯ ಹಕ್ಕು ಆಗಿದೆ. ಅದನ್ನೀಗ ನಿನಗೆ ವಹಿಸಿ ಕೊಡಲಾಗಿದೆ. ನಿನ್ನ ಕೆಲಸವನ್ನು ನೀನು ಮಾಡು. ನಿನ್ನ ಧಣಿಯ ಕೀರ್ತಿಯನ್ನು ಸಂರಕ್ಷಣ ಮಾಡುವ ಪ್ರಯತ್ನ ಮಾಡಿ, ಆ ಕೃತಘ್ನನ ಎಂದರೆ ಕಾಮಿಲಖಾನನ ಸಂಕಟದಿಂದ ಎಲ್ಲರನ್ನೂ ನಿರ್ಭಯರನ್ನಾಗಿ ಮಾಡು. ಆ ದುಷ್ಟನ ಕೈಯಿಂದ ಎಲ್ಲರನ್ನೂ ಬಿಡಿಸು. ಕಾಮಿಲಖಾನನಿಗೆ ಆದಷ್ಟು ಬೇಗ ಪಾರುಪತ್ಯವನ್ನು ಮಾಡು. ಇಲ್ಲವಾದಲ್ಲಿ ಸೀರೆ-ಕುಪ್ಪಸಗಳನ್ನು ಕಳಿಸಿದೆ. ಅವುಗಳನ್ನು ತೊಟ್ಟು ಹತ್ತಿ ಹಾಗೂ ರಾಠಿಗಳನ್ನು ಕಳಸಿದೆ. ಅವುಗಳನ್ನು ತೆಗೆದುಕೊಂಡು ನೂಲನ್ನು ತೆಗೆಯುವಲ್ಲಿ ನಿರತನಾಗು' ಎಂದು ಬರೆದು ಕಳಿಸಿದಳು. ಕಿಶ್ವರಖಾನನು ನಿರೋಪವನ್ನು ಆಜ್ಞೆ ಎಂದೇ ಪರಿಭಾವಿಸಿ. ಕೆಲವು ಕಾರಭಾರಿಗಳೊಂದಿಗೆ ಸಮಾಲೋಚಿಸಿ ಕಾಮಿಲಖಾನನ ಪಾರುಪತ್ಯೆಗೆ ಪ್ರಯತ್ನ ಮಾಡಹತ್ತಿದನು.

ಈ ವಿಷಯ ಕಾಮಿಲಖಾನನ ಕಿವಿಯವರೆಗೂ ಬಂದಿತು. ಆದರೆ ಕಾಮಿಲಖಾನನು ಕಿವಿಯಲ್ಲಿ ಭ್ರಾಂತಿಯ ಹತ್ತಿಯನ್ನು ತುರುಕಿಕೊಂಡಿದ್ದನು. ಅದರಿಂದ ಅವನ ಕಿವಿಗೆ ಏನೂ ಕೇಳಿಸುತ್ತಿರಲಿಲ್ಲ. ಅದರರ್ಥ ಕಾಮಿಲಖಾನನ ದೈವ ತಿರುಗಿತ್ತು ಆದ್ದರಿಂದ ಈ ವಿಷಯಗಳು ಲಕ್ಷ್ಯದಲ್ಲಿ ಬರದಂತಿದ್ದುವು. ಅದನ್ನು ಮನಸ್ಸಿನಲ್ಲಿ ತಂದು ಅವುಗಳ ನಿವಾರಣೆಯ ಉಪಾಯಗಳನ್ನು ವಿಚಾರಿಸಲಿಲ್ಲ, ಅವರ ಪ್ರಯತ್ನಗಳನ್ನು ಹುಡುಗರ ಆಟದಂತೆ ತಿಳಿದನು ತನ್ನ ಏಕಾಂತದ ಮಂಡಳಿಯ ಮುಂದೆ ಹೇಳುತ್ತಿದ್ದನು. "ಬಾದಶಹನ ಜನರು ನನ್ನ ಹಿಂದೆ ಬೆನ್ನು ಹತ್ತಿ ಬೆದರಿಸುತ್ತಿದ್ದಾರೆ. ಈ ಆಟದಿಂದ ನಾನು ಭಯಭೀತನಾಗಿ ಕಾರಭಾರವನ್ನು ಬಿಟ್ಟು ಮನೆಯಲ್ಲಿ ಕುಳಿತುಕೊಳ್ಳುತ್ತೇನೆ ಎಂದು ಅವರು ತಿಳಿದಿದ್ದಾರೆ. ಆದರೆ ಅದು ಹೇಗಾದೀತು? ಹಲಾಲಖೋರರು ಹಾಗೂ ಚಿಲ್ಲರೆ ಜನರು ಅಧಿಕಾರಕ್ಕಾಗಿ ಜೀವ ಬಿಡುತ್ತಿದ್ದಾರೆ. ನಾನು ಹೇಗೆ ಈ ಕೆಲಸ ಬಿಡುತ್ತೇನೆ? ಇವರನ್ನು ಒಪ್ಪಿಕೊಳ್ಳುವುದೂ ಇಲ್ಲ. ಬೆದರುವುದೂ ಇಲ್ಲ. ಯಾಕೆಂದರೆ ರಾಜಧಾನಿಯ

ವಾರಸುದಾರನೇ ನಾನಿದ್ದೇನೆ ಮತ್ತು ಈ ರಾಜಧಾನಿ ನನ್ನ ಹಕ್ಕಿನದಾಗಿದೆ". ಎಂದು ಮುಂತಾಗಿ ಹುಚ್ಚು-ಹುಚ್ಚಾಗಿ ಮಾತನಾಡುತ್ತಿದ್ದನು. ಭ್ರಾಂತಿಯ ಹಾಗೂ ನಿರ್ದೈವತನದ ನಿದ್ರೆಯು ಅವನನ್ನು ಸುತ್ತಿಕೊಂಡಿತ್ತು. ಪ್ರತಿಗಳಿಗೆ-ಗಳಿಗೆಗೂ ಸುದ್ದಿ ಬಂದು ಮುಟ್ಟುತ್ತಿತ್ತು. ಇಂಥಿಂಥ ಗೃಹಸ್ಥರು ಇಂಥಿಂಥಲ್ಲಿ ಒಂದೆಡೆ ಸೇರಿದ್ದಾರೆ ಎಂಬ ಸುದ್ದಿಗಳು ಬಂದರೂ ಅವುಗಳ ಯಾವ ಪರಿವೆಯನ್ನೂ ಆತ ಮಾಡುತ್ತಿರಲಿಲ್ಲ. ಅಫಜಲಖಾನನು ಕೂಡ ಸ್ನೇಹ ಮಾರ್ಗದಿಂದ ಮತ್ತು ಮಮತೆಯಿಂದ ಆತನಿಗೆ ಬೋಧಿಸುತ್ತಿದ್ದನು ಆತನ ಕೆಲಸದ ಕುರಿತು ಸಲಹೆಯನ್ನು ಹೇಳಲು ಬಹಳಷ್ಟು ಪ್ರಯತ್ನ ಮಾಡುತ್ತಿದ್ದನು ಆದರೆ ಕಾಮಿಲಖಾನನು ಆತನ ಕಲಿಸುವಿಕೆ ಮತ್ತು ಬೋಧನೆಯನ್ನು ಮಕ್ಕಳ ಆಟದಂತೆ ಮಾಡುತ್ತಿದ್ದಾನೆಂದು ತಿಳಿದನು. ಆಗ ಯೋಜನೆಯೊಂದು ಸಿದ್ಧವಾಯಿತು ಮತ್ತು ಕಾಮಿಲಖಾನನನ್ನು ಜೀವ ಸಹಿತ ಕೊಲ್ಲುವುದಕ್ಕೆಂದು ಶತ್ರು ಜನರು ಆತನ ಮೇಲೆ ಏರಿ ಬಂದರು. ಆ ಸಮಯದಲ್ಲಿ ಕಾಮಿಲಖಾನನು ಅರಮನೆಯಲ್ಲಿ ಸರದಾರರೊಂದಿಗೆ ಕೆಲಸದಲ್ಲಿ ಮುಳುಗಿದ್ದನು. ಆಗ ಬಹಳಷ್ಟು ಜನ ಸೇರಿ ಬಂದುದನ್ನು ನೋಡಿ ಕೋಟೆಯ ಮೇಲೆ ಇದ್ದ ಬಾಗಿಲಿನಿಂದಹೊರಗೆ ಓಡಿ ಹೋಗಿ, ಹೊರಗಿನಿಂದ ಮುಚ್ಚಿ ಕೀಲಿ ಹಾಕಿದನು. ಹಾಗೂ ಬಾಗಿಲಿನಿಂದ ಯಾರೂ ಬೆನ್ನು ಹತ್ತದಂತೆ ಮಾಡಿದನು. ತಾನು ಕೋಟೆಯ ಮೇಲೆ ಹೋಗಿ ಒಂದು ಉದ್ದವಾದ ಹಗ್ಗವನ್ನು ಕೋಟೆಯ ಒಂದು ದಪ್ಪ ಬಂಡೆಗೆ ಕಟ್ಟಿ, ಹಿಡಿದು ಕೆಳಗೆ ಇಳಿದನು. ಇಳಿಯುವಾಗ ಘರ್ಷಣೆಯಿಂದ ಗಾಯಾಳುವಾಗಿ ಕಂದಕದ ಕೆಸರಿನಲ್ಲಿ ರಾಡಿಯಲ್ಲಿ ಟೊಂಕದವರೆಗೆ ಮುಳುಗಿದನು. ಅಲ್ಲಿಂದ ಶತಾವಧಿ ಸಂಕಟಗಳಿಂದ ಹೊರಬಂದು ನಗರದ ಕೋಟೆಯ ಬಾಗಿಲವರೆಗೂ ಬಂದು ಮುಟ್ಟಿದನು. ಬಾಗಿಲು ಮುಚ್ಚಿತ್ತು.

ಆದ್ದರಿಂದ ನಗರದ ಕೋಟೆಯ ಮೇಲೆ ಏರಿ ಹೊರಗಿನ ಕಂದಕದಲ್ಲಿ ಹಾರಿದನು. ಆಗ ಒಬ್ಬ ಕಾಮಿಲಖಾನನ ಹತ್ತಿರದ ಹಬಶೀ ಜಾತಿಯ ನೌಕರನು ಮನೆಗೆ ಓಡಿ ಹೋಗಿ ಕಾಮಿಲಖಾನನನ್ನು ಕರೆದುಕೊಂಡು ಹೋಗಲು ಒಂದು ಕುದುರೆಯನ್ನು ತಂದನು. ಆತನು ರಾಡಿಯಾಗಿದ್ದ ಕಾಮಿಲಖಾನನ ದೇಹವನ್ನು ಸ್ವಚ್ಛವಾಗಿ ತೊಳೆದು, ವಸ್ತ್ರಗಳನ್ನು ಬದಲಿಸಿ ಯಾರಿಗೂ ಗೊತ್ತಾಗದಂತೆ ವೇಷ ಬದಲಿಸಿದನು. ಒಂದಿಷ್ಟು ಹಣ ಹಾಗೂ ಮುತ್ತು ರತ್ನಗಳನ್ನು ತೆಗೆದುಕೊಂಡು ಕಲ್ಹೋರಕ್ಕೆ ಹೋದನು. ಯಾಕೆಂದರೆ ಕಲ್ಹೋರದ ಮುಖ್ಯಸ್ಥನು ಕಾಮಿಲಖಾನನ ಮನುಷ್ಯನಾಗಿದ್ದನು. ಆದ್ದರಿಂದ ಅಲ್ಲಿಂದ ಹೊರಬಿದ್ದು ಬೇರೆ ಪ್ರದೇಶದ ಆಶ್ರಯವನ್ನು ಪಡೆದನು. ಕಾಮಿಲಖಾನನ ಆಯುಷ್ಯ ಇನ್ನೂ ಇತ್ತು. ಆದ್ದರಿಂದ ಬಾದಶಹನ ಅರಮನೆಯಿಂದ ಹೊರಟು, ತನ್ನ ಮನೆಗೆ ಹೋಗಿ ಸೈನ್ಯದಲ್ಲಿ ಸೇರುವವರೆಗೂ ಯಾರೊಬ್ಬರಿಗೂ ಆತನ ಸುಳಿವು ಸಿಗಲಿಲ್ಲ. ಕಿಶ್ವರಖಾನನು ನಾಲ್ಕೈದು ನೂರು ಶಸ್ತ್ರಧಾರಿ ಸೈನಿಕರನ್ನು ತೆಗೆದುಕೊಂಡು ಕಾಮಿಲಖಾನನನ್ನು ಹೊಡೆಯಲು ಕೋಟೆಯ ಒಳಗೆ ಬಂದನು ಅವರನ್ನು ಎದುರಿಸಲು ಬಂದ ಕಾಮಿಲಖಾನನ ಸಿಪಾಯಿಗಳನ್ನು ಕೊಲೆಮಾಡುತ್ತ ಕಾಮಿಲಖಾನನ ಮಹಲದ ವರೆಗೂ ಬಂದು ಮುಟ್ಟಿದರು. ಆದರೆ ಕಾಮಿಲಖಾನನು ಅಲ್ಲಿರಲಿಲ್ಲ. ಅನಂತರ ಬಹಳ ಶೋಧಮಾಡಿ ಬಾದಶಹರ ಅರಮನೆಯಲ್ಲಿ ಹುಡುಕಿದರೂ ಸಿಗಲಿಲ್ಲ. ಎಲ್ಲಿಯೂ ದೊರೆಯದೆ ನಿರುಪಾಯರಾದರು.

ಕೋಟೆಯ ವ್ಯವಸ್ಥೆಯನ್ನು ಕಿಶ್ವರಖಾನನಿಗೆ ವಹಿಸಲಾಯಿತು. ಕಾಮಿಲಖಾನನ ಪೀಡೆಯಿಂದ ಎಲ್ಲರೂ ಮುಕ್ತರಾದರು. ಅಷ್ಟರಲ್ಲಿ ಕಾಮಿಲಖಾನನು ಕೋಟೆಯಿಂದ ಹೊರಗೆ ಇಳಿದು ತನ್ನ ಸೈನ್ಯದೊಂದಿಗೆ ಮನೆಗೆ ಹೋಗಿ ಅಲ್ಲಿಂದಲೂ ಹೊರಟು ಹೋಗಿದ್ದಾನೆಂಬ ಸುದ್ದಿ ತಿಳಿಯಿತು. ಸುದ್ದಿ ತಿಳಿಯುತ್ತಲೇ ಸಿದ್ಧವಾಗಿ ನಿಂತಿದ್ದ ಸೈನ್ಯವನ್ನು ತೆಗುದುಕೊಂಡು ಕಾಮಿಲಖಾನನನ್ನು ಬೆನ್ನು ಹತ್ತುವುದೆಂದು ನಿರ್ಧರಿಸಿದರು.

ಅದರಂತೆ ವಿಜಾಪುರದಿಂದ ಎಂಟು ಹತ್ತು ಕೋಸುಗಳ ಅಂತದರಲ್ಲಿ ನಗರದ ಹೊರಗೆ ಬಂದು ಮುಟ್ಟಿದರು. ಯುದ್ಧಕ್ಕೆ ಸಿದ್ಧನಾಗಿಯೇ ನಿಂತಿದ್ದ ಕಾಮಿಲಖಾನನೂ ರಣಭೂಮಿಯಲ್ಲಿ ಪರಾಕ್ರಮ ತೋರಿಸಹತ್ತಿದನು. ಧಣಿಯ ವಿರುದ್ಧ ಕೃತಘ್ನತೆಯ ದೀಪವು ಯಶದ ತೇಜದಿಂದ ಹೀನವಾಗುತ್ತದೆ ಎಂಬ ಹಾಗೆ, ಆತನಿಗೆ ಎಂದೂ ಯಶ ದೊರೆಯಲಿಲ್ಲ. ಸೈನ್ಯವೆಲ್ಲ ಸೋತು ಕಾಮಿಲಖಾನನೊಬ್ಬನೇ ಉಳಿದನು. ತಾನೊಬ್ಬನೇ ಉಳಿದದ್ದನ್ನು ಕಂಡು ಹೊರಗೆ ಹೋಗುವ ಸಾಮರ್ಥ್ಯವೂ ಉಳಿಯದಿದ್ದಾಗ ಆತ ರಣಭೂಮಿಯ ಸುತ್ತ ತನ್ನ ಕುದುರೆಯನ್ನು ಓಡಿಸಹತ್ತಿದನು. ಎಲ್ಲೆಲ್ಲಿ ಸುತ್ತುತ್ತಾನೋ ಅಲ್ಲೆಲ್ಲ ಕೈಗೆ ಸಿಕ್ಕ ಜನರನ್ನು ಕೊಲೆಮಾಡಿದನು. ಆತನನ್ನು ಹಿಡಿಯಲು ಬೆನ್ನಹಿಂದೆ ಹೋದ ಕುದುರೆ ಹಾಗೂ ಸವಾರ ಕೂಡ ದಣಿದರು. ಆಗ ಒಬ್ಬ ಸೈನಿಕನು ಹಿಂದಿನಿಂದ ಬಂದು ಭಲ್ಲೆಯಿಂದ ತಿವಿದು ಕಾಮಿಲಖಾನನನ್ನು ಕುದುರೆಯಿಂದ ಕೆಳಗೆ ಕೆಡವಿದನು. ಆಗ 'ಶೇರಬಚ್ಚಾ' ಎಂಬ ಇನ್ನೊಬ್ಬ ತರುಣ ಸೈನಿಕ ಆತನ ತಲೆಯನ್ನು ಕತ್ತರಿಸಲು ಮುಂದೆ ಬಂದನು. ಕಾಮಿಲ ಖಾನನು ತನ್ನ ಕೈಯಲ್ಲಿಯ ತಲವಾರಿನಿಂದ ಶೇರಬಚ್ಚಾನ ಎದೆಗೆ ಹೊಡೆದರೆ ಅದು ಆತನ ಎದೆಯ ಮೇಲಿನ ಚಿಲಕತ್ತನ್ನು ಕತ್ತರಿಸಿ ಆತನ ಎದೆಯ ಮೇಲೆ ಗಾಯವನ್ನು ಮಾಡಿತು. ಆದರೂ ಆತ ಕಾಮಿಲಖಾನನ ತಲೆಯನ್ನು ಕತ್ತರಿಸಿ ಸರಕಾರದ ಹತ್ತಿರ ತಂದನು. ಕಾಮಿಲಖಾನನ ಎಲ್ಲ ಸಾಮಾನು ಸರಂಜಾಮುಗಳನ್ನು ಸರಕಾರಕ್ಕೆ ತೆಗೆದುಕೊಳ್ಳಲಾಯಿತು. ಅನಂತರ ಅವುಗಳನ್ನು ಕಿಶ್ವರಖಾನನು ತೆಗೆದುಕೊಂಡನು. ಹೀಗೆ ಕಾಮಿಲಖಾನನ ಸರ್ವಾಧಿಕಾರದ ಕಾರಭಾರವು ಎರಡು ತಿಂಗಳು ಹತ್ತು ದಿನ ನಡೆಯಿತು.

### ೩. *ಕಿಶ್ವರಖಾನನು ಪರರಾಜ್ಯ ಪ್ರದೇಶಗಳನ್ನು ವಶಪಡಿಸಿಕೊಂಡದ್ದು ಮತ್ತು ಆಡಳಿತ ನಡೆಸಿದ ವರ್ಣನೆ :*

ಕಾಮಿಲಖಾನನ ದುರಾಡಳಿತದಿಂದ ಬಿಡುಗಡೆಯಾಗಿ ಚಿತ್ತ ಶಾಂತಿ ಉಂಟಾದಾಗ, ರಾಜಧಾನಿಯ ಕೆಲಸಗಾರರು ಸರಿಯಾಗಿ ಕೆಲಸ ಮಾಡಹತ್ತಿದರು. ಮೊದಲು ಎಲ್ಲ ಅಧಿಕಾರ ವರ್ಗದವರು 'ವಕೀಲ' ಪದವಿ ತಮಗೇ ಬರಬೇಕೆಂದು ತಮ್ಮ-ತಮ್ಮಲ್ಲಿ ಬಡಿದಾಡುತ್ತಿದ್ದರು. ಅವರಲ್ಲಿ ನಾಲ್ಕೈದು ಜನ ಗೃಹಸ್ಥರಿದ್ದರು. ದರಬಾರದ ಎಲ್ಲ ಅಧಿಕಾರಿಗಳ ಮನದಲ್ಲಿ ಅದು ತಮಗೇ ದಕ್ಕಬೇಕು ಎನ್ನುತ್ತಿದ್ದರು. ಕಿಶ್ವರಖಾನ ಮುರ್ತಜಾಖಾನ ಆಂಜೂ ಮತ್ತು ಆತನ ಸಹೋದರ ಶಾಹ ಕಾಸಮ, ಗಾಲಬಖಾನ ಸರಸೌಬತ್ ಮತ್ತು ಮಾತಬಾರಖಾನ ಇವರೆಲ್ಲ ಈ ವಿಷಯದಲ್ಲಿ ಬಡಿದಾಡುತ್ತಿದ್ದರು. ಒಬ್ಬರೊಬ್ಬರನ್ನು ಸೇರದೆ ಸಂಧಿ ಸಾಧಿಸುತ್ತಿದ್ದರು. ಅಲಿ ಆದಿಲಶಹನು ಸತ್ತ ರಾತ್ರಿ ಬೆಳಗಾಗುವವರೆಗೆ ಸರಕಾರೀ ಅಧಿಕಾರಿಗಳು ಅರಮನೆಯಲ್ಲಿಯೇ ಇದ್ದರು. ತಂತಮ್ಮಲ್ಲಿ ಯೋಜನೆಗಳನ್ನು ರೂಪಿಸುತ್ತಿದ್ದರು. ವಕೀಲ ಪದವಿಯನ್ನು ಯಾರಿಗೆ ಕೊಡಬೇಕೆಂದು ನಿರ್ಧರಿಸುವ ಸಮಯದಲ್ಲಿ ಪ್ರತಿ ಗೃಹಸ್ಥನು 'ಅದು ತನಗೇ ಕೊಡಿ' ಎಂದು ಸಲಹೆ ಕೊಡುತ್ತಿದ್ದನು. ಯಾರಿಗೂ ಪುರಸೊತ್ತಿರಲಿಲ್ಲ. ಮೂರು ನಾಲ್ಕು ದಿನ ಹೀಗೆಯೇ ಯೋಜನೆಗಳನ್ನು ರೂಪಿಸುವಲ್ಲೆ ಕಳೆಯಿತು. ಕೊನೆಗೆ ಅದರ ಪರಿಣಾಮ ಸರಕಾರದ ವಾಡೆಯಲ್ಲಿಯೆ ಈ ಮಂಡಳಿ ಹೊಡೆದಾಟ-ಬಡಿದಾಟಕ್ಕೆ ಬಂದಿತು. ಈ ಸಮಯದಲ್ಲಿ ಅಫಜಲಖಾನನು ತನ್ನ ಮನೆಯಲ್ಲಿ ಏಕಾಂತ ಸ್ಥಳದಲ್ಲಿ ಕುಳಿತಿದ್ದನು. ಆತ ಈ ಯೋಜನೆಗಳಲ್ಲಿ ಸೇರಿಕೊಂಡಿರಲಿಲ್ಲ. ದಾರಿಕಾಯುತ್ತ, 'ಕಾಲಚಕ್ರವು ತನ್ನ ನೀಲ ವರ್ಣದ ಪರದೆಯಿಂದ ಯಾವ ಚಮತ್ಕಾರ ಮತ್ತು ಯಾವ ಆಟವನ್ನು ಪ್ರಕಟಿಸುತ್ತದೆ ಎಂಬುದನ್ನು ನೋಡಬೇಕು. ಕಾಲ ಚಕ್ರದ ಗತಿ ಹೇಗೆ ತಿರುಗಬಹುದು?' ಎಂದು ನೋಡುತ್ತಿದ್ದನು.

ಐದನೇ ದಿನ ರಾತ್ರಿ ನಿದ್ದೆ ಹತ್ತಿರಬೇಕು ಆಗ ಕಿಶ್ವರಖಾನನು ಸ್ವತಃ ಆತನು ನಿದ್ದೆ ಮಾಡುತ್ತಿರುವ ಸ್ಥಳಕ್ಕೆಯೆ ಬಂದನು. ಬಹಳ ಕಕ್ಕುಲತೆಯಿಂದ ಮಾತನಾಡಿದನು. "ತಮ್ಮ ಮತ್ತು ನನ್ನ ಸಂಬಂಧ ಗುರು-ಶಿಷ್ಯರದಾಗಿದೆ. ನಾನು ತಮ್ಮಿಂದ ಕಲಿತ ಶಿಷ್ಯ. ತಮ್ಮ ಕೃಪೆಯಿಂದಲೇ ಬದುಕಿದ್ದೇನೆ. ಆದ್ದರಿಂದ ಈ ಸಂಕಟದ ಸಮಯದಲ್ಲಿ ನನ್ನ ಕೈಯನ್ನು ಹಿಡಿಯಬೇಕು. ನನಗೆ ಆಶ್ರಯ ಕೊಡಬೇಕು ಒಂದು ಸರಿಯಾದ ಉಪಾಯ ಮಾಡಿರಿ. ನನ್ನ ಮೇಲೆ ದೊಡ್ಡ ಕಠಿಣ ಪ್ರಸಂಗ ಬಂದಿದೆ. ನಾನು ನಂಬಿದ ಅಧಿಕಾರಿಗಳೇ ಈಗ ನನ್ನ ರಕ್ತವನ್ನು ಕುಡಿಯುವ ಹವಣಿಕೆಯಲ್ಲಿದ್ದಾರೆ. ನನ್ನ ಪ್ರಾಣವನ್ನು ತೆಗೆದುಕೊಳ್ಳಲು ಎದ್ದು ನಿಂತಿದ್ದಾರೆ. ಈಗ ನನ್ನ ಕುರಿತು ದಯೆ ಇರಲಿ. ತಾವು ಗುರುಗಳು, ನಾನು ಶಿಷ್ಯ, ಆದ್ದರಿಂದ ಈ ಸಮಯದಲ್ಲಿ ಶಿಷ್ಯನ ಫಿರ್ಯಾದಿಯನ್ನು ಕೇಳಿರಿ" ಎಂದೆಲ್ಲ ಹೇಳಿದನು. ಆದರೂ ಅಫಜಲಖಾನನು ಆತನ ಮಾತಿನಲ್ಲಿ ಮನಸ್ಸನ್ನು ಹಾಕಲಿಲ್ಲ. 'ನನಗೆ ಈ ವಿಷಯದ ಸಂಬಂಧ ಇಲ್ಲ. ನಾನು ಈ ಕೆಲಸದಲ್ಲಿ ಬೀಳಬಾರದೆಂದಿರುವೆ' ಎಂದನು. ಆಗ ಕಿಶ್ವರಖಾನನು ಬಹಳೇ ಆಗ್ರಹಿಸಿ. 'ತಾವು ಒಂದು ವೇಳೆ ಈ ಸಮಯದಲ್ಲಿ ಈ ಕೆಲಸದಲ್ಲಿ ಮನಸ್ಸನ್ನು ಹಾಕಿ ಸಲಹೆಯನ್ನು ಕೊಡದಿದ್ದರೆ, ಎಲ್ಲರ ಜೀವಗಳೂ ಹೋಗುತ್ತವೆ. ರಾಜಧಾನಿಯ ಕಾರಭಾರದಲ್ಲಿ ಬಹಳೇ ಬುಡಮೇಲಾಗುತ್ತದೆ. ಆದ್ದರಿಂದ ಈ ಸಮಯದಲ್ಲಿ ತಾವು ಸಂಬಂಧವಿಲ್ಲದಂತೆ ಇರುವುದು ಯೋಗ್ಯವಲ್ಲ' ಎಂದನು. ಅಫಜಲಖಾನನು ನಿರುಪಾಯನಾಗಿ ಒಪ್ಪಿ ಕಿಶ್ವರಖಾನನೊಂದಿಗೆ ಸೇರಿದನು.

ಮರುದಿನ ಸಭೆ ಸೇರಿದಾಗ ಕಿಶ್ವರಖಾನನು, ಗಾಲಿಬಖಾನನುದ್ದೇಶಿಸಿ ದೊಡ್ಡ ದನಿಯಲ್ಲಿ ಹೇಳಿದನು. "ಏನು ನೋಡುತ್ತೀ, ಏಳು, ಎದ್ದು ನಿಲ್ಲು, ಬೇಗ ಸಿದ್ಧವಾಗಿ ಒಪ್ಪಂದದಂತೆ ಕೆಲಸ ಮಾಡು" ಎಂದು ಕೂಗಿದನು. ಅದೇ ವೇಳೆಗೆ ಗಾಲಿಬಖಾನನು, ಮುರ್ತಜಾಖಾನ ಮತ್ತು ಆತನ ಬಂಧು ಶಾಹ ಕಾಸಮ ಇಬ್ಬರನ್ನೂ ಸಭೆಯಿಂದ ಎಬ್ಬಿಸಿ ಬೇರೆಡೆ ಜಗ್ಗಿ ಕರೆದುಕೊಂಡು ಹೋಗಿ ಬಂಧಿಸಿದನು. ಎರಡು ಮೂರು ದಿನಗಳ ಅನಂತರ ಕೋಟೆಯ ಮೇಲೆ ಕಳಿಸಿದನು. ಮಾತಬ್ಬರಖಾನನನ್ನು ಆತನ ಮಕ್ಕಳು-ಮರಿಗೊಳೊಂದಿಗೆ ನಗರದಿಂದ ಹೊರಗೆ ಹಾಕಿದರು. ಆತನು ದೆಹಲಿಗೆ ಅಕ್ಬರಬಾದಶಹನ ಹತ್ತಿರ ಹೋದನು. ಕಿಶ್ವರಖಾನನು ತನ್ನ ಸನ್ನಿಧಿಯಲ್ಲಿದ್ದ ಮಂಡಳಿಯನ್ನು ತೆಗೆದುಕೊಂಡು ಒಂದು ಏಕಾಂತ ಸ್ಥಳಕ್ಕೆ ಬಂದನು. ಅಫಜಲಖಾನನನ್ನು ಏಕಾಂತಕ್ಕೆ ಕರೆದು ಗಟ್ಟಿಯಾಗಿ ಅವನ ಕಾಲುಹಿಡಿದು "ತಾವು ಈ ಕೆಲಸದಲ್ಲಿ ಅನುಮಾನ ಪಡಬಾರದು" ಎಂದು ಹೇಳಿದನು. ಬಂಧಿಸಿ ಪಾರುಪತ್ಯ ಮಾಡಿದವರ ನಡಾವಳಿಕೆ ಹಾಗೂ ಯೋಜನೆಗಳನ್ನು ಸವಿಸ್ತಾರವಾಗಿ ಹೇಳಿದನು "ಈ ನಾಲ್ಕೈದು ದಿನಗಳಿಂದ ಬಹಳ ಗದ್ದಲ ಹಾಕುತ್ತಿದ್ದರು. ತಾವು-ತಾವೇ ಪ್ರಧಾನಿಗಳಾಗಬೇಕೆಂದು ಹೇಳುತ್ತಿದ್ದರು. ರಾಜ್ಯದ ಕೆಲಸಗಳು ಸುಸೂತ್ರವಾಗಿ ನಡೆಯಬೇಕೆಂದು ಯಾರೂ ವಿಚಾರಿಸುತ್ತಿರಲಿಲ್ಲ."

"ಈ ಎಲ್ಲರೂ ಕೂಡಿ ಯೋಜನೆಗಳನ್ನು ರೂಪಿಸಿ, ಇಬ್ರಾಹಿಮ ಆದಿಲಶಹನ ತಾಯಿಯನ್ನು ಕೂಡ ಮಕ್ಕೆಗೆ ಕಳಿಸಬೇಕು, ಶಾಹ ಫತಲೂಲ್ಲಾಹನನ್ನು ಬಂಧಿಸಬೇಕು. ಅಫಜಲಖಾನನ ಕೊಲೆ ಮಾಡಬೇಕು ಇಲ್ಲವೆ ಕಣ್ಣು ಕೀಳಬೇಕು, ರಫಿಯುದ್ದೀನ ಶಿರಾಜಿಯನ್ನು ಹಿಡಿದು ಅವನಿಂದ ಭಂಡಾರದ ಲೆಕ್ಕವನ್ನು ತೆಗೆದುಕೊಳ್ಳಬೇಕು. ಮಿಯಾ ಅಲಿಯ ಮಗ ಇಸ್ಮಾಯಿಲ್ ಆದಿಲಶಾಹ ಎಂಬವನಿದ್ದಾನೆ. ಆತ ಬಹಳ ದಿನ ಗೋವೆಯ ಬಂದರದಲ್ಲಿಯೆ ಇದ್ದವನು. ಅಲ್ಲಿಯೇ ಹುಟ್ಟಿ ಈಗ ಇಲ್ಲಿ ವಿಜಾಪುರದಲ್ಲಿದ್ದಾನೆ. ಅವನನ್ನು ಸಿಂಹಾಸನದ ಮೇಲೆ ಕೂಡಿಸಬೇಕು. ಮುರ್ತಜಾಖಾನನನ್ನು ಪ್ರಧಾನ ಮಂತ್ರಿಯನ್ನಾಗಿ ಮಾಡಬೇಕು. ಕಿಶ್ವರಖಾನ ಹಾಗು ಶಾಹ ಕಾಸಮ ಉಭಯತರಲ್ಲಿ ಒಬ್ಬರು ರಾಜಧಾನಿಯ ಕೆಲಸ

ಮಾಡಬೇಕು. ಇನ್ನೊಬ್ಬ ವಜೀರರಾಗಬೇಕು. ಉಳಿದ ಪದವಿಗಳನ್ನು ಅವರವರ ಯೋಗ್ಯತೆಯನ್ನು ನೋಡಿ ಕೊಡಬೇಕು. ಅಲಿ ಆದಿಲಶಹನು ಸಾಯುವಾಗ ಮೇಲಿಂದ ಮೇಲೆ ಹೇಳಿದ ಇಬ್ರಾಹೀಮ ಬಾದಶಹನು ಬುದ್ಧಿವಂತನಿದ್ದರೂ ಅವನು ಈಗ ವೈರಿಗಳೊಂದಿಗೆ ಕೂಡಿದ್ದಾನೆ. ಅವನನ್ನೂ ಅವನ ತಾಯಿಯನ್ನೂ ಮುಗಿಸಿಬಿಡಬೇಕು. ಈ ರಾಜ್ಯದಲ್ಲಿದ್ದ ಎಲ್ಲ ಹಳೆಯ ನೌಕರದಾರರನ್ನು ಸ್ವಾಮಿನಿಷ್ಠರನ್ನು ಕೊಲ್ಲಬೇಕೆಂದು ಯೋಜನೆಗಳನ್ನು ಹಾಕಿಕೊಂಡಿದ್ದಾರೆ. ಅಂಥದ್ದರಲ್ಲಿ ಉಳಿದ ಕೆಲಸಗಾರರು ಮತ್ತು ಸರದಾರರು ಸೈನ್ಯ ಮತ್ತು ರಾಜ್ಯಾಡಳಿತವು ನಮ್ಮ ಆಜ್ಞೆಗಳನ್ನು ಹೇಗೆ ಪಾಲಿಸುತ್ತಾರೆ? ಹಾಗೆ ನೋಡಿದರೆ ನನ್ನನ್ನೂ ಕಾಮಿಲಖಾನನ ಬೆನ್ನಹಿಂದೆ ಕಳಿಸುತ್ತಾರೆ. ಆದ್ದರಿಂದ ಇಂದಿನ ಸಮಯದಲ್ಲಿ ತಾವು ಈ ರಾಜ್ಯದ ಕೆಲಸದಲ್ಲಿ ಮನಸ್ಸನ್ನು ಹಾಕಿ ಮತ್ತೆ ಈ ರಾಜಧಾನಿಗೆ ಶೋಭೆ ತರಬೇಕು. ಶತ್ರುಗಳು ಮೇಲೆ ಏರಬಾರದು. ವಿವಿಧ ಭಾಗಗಳ ಬಾದಶಹರು ನಿರಂತರವಾಗಿ ಈ ರಾಜ್ಯದೊಂದಿಗೆ ವೈರಭಾವದಿಂದಲೇ ನಡೆದುಕೊಳ್ಳುತ್ತಿದ್ದಾರೆ. ಅವರಿಗೆ ಈಗ ಅವಕಾಶ ದೊರೆತು ತಮ್ಮ ದುರಾಶೆಯಿಂದ ಇಲ್ಲಿಯ ಪ್ರದೇಶಗಳನ್ನು ವಶ ಮಾಡಿಕೊಳ್ಳಲು ಸಿದ್ಧರಾಗಿದ್ದಾರೆ. ಸರಹದ್ದಿನಲ್ಲಿ ಬಂದು ನಾಶ ಮಾಡುವ ವಿಚಾರದಲ್ಲಿದ್ದಾರೆ. ಆದ್ದರಿಂದ ತಾವು ಈಗ ಶತ್ರು ಜನರು ನಿರಾಶರಾಗಿ ತಿರುಗಿ ಹೋಗುವಂಥ ಉಪಾಯಗಳನ್ನು ಹುಡುಕಬೇಕು" ಎಂದೆಲ್ಲ ಹೇಳಿದನು.

ಆಗ ಅಫಜಲಖಾನರು 'ಬಹಳ ದಿನಗಳಿಂದ ನಾನು ಬೇನೆಯಿಂದ ಬಳಲುತ್ತಿದ್ದೇನೆ. ಸೋತಿದ್ದೇನೆ. ಆ ಬೇನೆಯ ಬಳಲಿಕೆಯಲ್ಲಿ ನನ್ನ ಮನಸ್ಸು ಈ ಜಗತ್ತಿನ ಕಾರಭಾರದಲ್ಲಿ ಬೀಳುತ್ತಿಲ್ಲ. ಆದ್ದರಿಂದ ಮನೆಯಲ್ಲೇ ಇದ್ದು ಔಷಧೋಪಚಾರ ಮಾಡುವುದೇ ಈಗ ಸರಿ ಎನಿಸುತ್ತದೆ. ಒಂದು ವೇಳೆ ಅಲ್ಲಾನ ಕೃಪೆಯಿಂದ ಆರೋಗ್ಯವಂತನಾದರೆ, ನಾನು ನಿಮ್ಮ ಯೋಜನೆಗಳಿಂದ ಮತ್ತು ವಿಚಾರಗಳಿಂದ ಹೊರತಾಗಿಲ್ಲ. ನೀವು ಹೇಳಿದ ಕೆಲಸವನ್ನು ಮಾಡುವೆ' ಎಂದು ಉತ್ತರ ಕೊಟ್ಟನು. ಅದಕ್ಕೆ ಪ್ರತಿಯಾಗಿ ಕಿಶ್ವರಖಾನನು, 'ತಾವು ಕೆಲಸದಿಂದ ಮನಸ್ಸನ್ನು ತೆಗೆಯುವ ಮಾತನಾಡುತ್ತಿದ್ದೀರಿ ಮತ್ತು ಕೆಲಸ ಮಾಡುವುದಿಲ್ಲ ಎನ್ನುತ್ತಿದ್ದೀರಿ. ಆದರೆ ಈಗ ಅಂಥ ಸಮಯವಿಲ್ಲ. ನನ್ನನ್ನು ಎಷ್ಟೊಂದು ಘಾತುಕ ಶತ್ರುಗಳ ಕೈಗೆ ಕೊಡುತ್ತಿದ್ದೀರಿ. ಅದರಿಂದಾಗಿ ನಮ್ಮ ರಾಜಧಾನಿಯ ಪರಿಣಾಮ ನೆಟ್ಟಗಾಗುವುದಿಲ್ಲ. ಶತ್ರುಗಳು ನಗುತ್ತಾರೆ. ತಾವು ಏನು ಹೇಳಿದರೂ ತಮ್ಮನ್ನು ನಾನು ಬಿಡಲು ಸಿದ್ಧನಿಲ್ಲ ಎಂದನು. ಆಗ ಅಫಜಲಖಾನನು, ಕಿಶ್ವರಖಾನನು ತುಂಬ ಆಗ್ರಹ ಮಾಡುತ್ತಿದ್ದಾನೆಂಬುದನ್ನು ಕಂಡನು. 'ಈಗ ತನಗೆ ಕೆಲಸ ಬೇಡವೆಂದರೆ ನಡೆಯಲಾರದು' ಎಂದು ತಿಳಿದು, 'ಇನ್ನೂ ನಾನು ಒಲ್ಲೆನೆಂದರೆ ನನ್ನ ಪ್ರಾಣಕ್ಕೆಯೇ ಕುತ್ತು ಬರುತ್ತದೆಂದು' ಮನದಲ್ಲಿಯೆ ವಿಚಾರಿಸಿ, ನಿರುಪಾಯನಾಗಿ ಒಪ್ಪಿಕೊಂಡು 'ನಿಮ್ಮ ವಿಚಾರಗಳ ಹೊರತಾಗಿ ನಾನಿಲ್ಲ' ಎಂದನು. ಆಗ ಕಿಶ್ವರಖಾನನು ಮತ್ತೆ ಎದ್ದು ಆಲಂಗಿಸಿಕೊಂಡು ಪುನಃ ಕಾಲಿಗೆ ಬಿದ್ದನು. ಉಭಯತರ ಮನಸ್ಸುಗಳಲ್ಲಿದ್ದ ಕಲ್ಮಶವೆಲ್ಲ ದೂರಾಗಿ ಉಭಯತರೂ ಸರಕಾರಿ ಕೆಲಸದಲ್ಲಿ ಮಗ್ನರಾದರು. ಯಾರೆಲ್ಲ ವೈರಭಾವದಿಂದ ನಡೆದುಕೊಳ್ಳುತ್ತಿದ್ದರೊ ಆ ಮಂಡಳಿಗೂ ನಾನಾ ಪ್ರಕಾರದ ಸಂತೋಷಗಳನ್ನು ಮಾಡಿ, ಭರವಸೆಯನ್ನು ಕೊಟ್ಟರು. ಯಾರ ಯಾರ ಹತ್ತಿರ, ಯಾವ ಯಾವ ಪದವಿಗಳಿದ್ದವೋ, ಅವುಗಳನ್ನು ಅವರೇ ಮುಂದುವರೆಸುವಂತೆ ಮಾಡಿದರು.

ಮತ್ತೆ ಎಷ್ಟೋ ಜನರಿಗೆ ಅಮೀರ ಕೆಲಸವನ್ನೂ ಕೊಟ್ಟರು. ಈ ಮಧ್ಯ ಗಡಿಭಾಗದಲ್ಲಿ ನಾಲ್ಕೂಕಡೆಗಳಿಂದ ನಿಜಾಮಶಹನು, ಕುತುಬಶಾಹನು ಮತ್ತು ವಿಜಯನಗರದ ಹಿಂದುರಾಜರು ಸೈನ್ಯವನ್ನು ಕಳಿಸಿ ದಂಗೆ ಮಾಡುತ್ತಿದ್ದಾರೆಂಬ ವರ್ತಮಾನ ಬಂದಿತು. ಮೊದಲು ಆ ಶತ್ರುಗಳನ್ನು ಎದುರಿಸಲು

ಸೈನ್ಯವನ್ನು ಕಳಿಸಬೇಕಾಯಿತು. ರಾಜಧಾನಿಯ ವ್ಯವಸ್ಥೆ ಅದೇ ಆಗ ಪ್ರಾರಂಭವಾಗಿತ್ತು. ರಾಜ್ಯದ ಕೆಲಸಗಳನ್ನು ಮನಸ್ಸಿಗನುಗುಣವಾಗಿ ರೂಪಿಸಲು ಸಾಧ್ಯವಾಗಿರಲಿಲ್ಲ. ಅಂಥದ್ದರಲ್ಲಿ ನಾಲ್ಕು ಕಡೆಗಳಿಂದ ಎದ್ದು ನಿಂತ ವಿಘ್ನಗಳನ್ನು ಅಫಜಲಖಾನನ ಪಕ್ಕಾ ಯೋಜನೆ ಮತ್ತು ವಿಚಾರಗಳ ಹೊರತು ನಿವಾರಿಸುವುದು ಸಾಧ್ಯವೇ ಇಲ್ಲವೆಂದು ಕಿಶ್ವರಖಾನನು ತಿಳಿದನು. ನಿರುಪಾಯನಾಗಿ ಖಾನ ಮಶಾರನಿಲ್ದೆ ನನ್ನು ಕರೆದು 'ನೀವು ಸಾಕಷ್ಟು ಸೈನ್ಯದೊಂದಿಗೆ ಶತ್ರುಗಳನ್ನು ಎದುರಿಸಲು ಹೋಗಿರಿ ಯಥಾ ಪ್ರಕಾರ ಅವರನ್ನು ಗಡಿಭಾಗದಿಂದ ಹೊರಗೆ ಹಾಕರಿ. ನಮ್ಮ ಪ್ರದೇಶವನ್ನು ಈ ಮುಳ್ಳುಕಂಟಿಗಳಿಂದ ಮುಕ್ತ ಮಾಡಿರಿ' ಎಂದನು.

### ೪. *ಶತ್ರಗಳನ್ನು ಎದುರಿಸಲು ಕಿಶ್ವರಖಾನನು ಅಫಜಲಖಾನನೊಂದಿಗೆ ಸೈನ್ಯವನ್ನು ನಿಯಮಿಸುವುದು :*

ಅಫಜಲಖಾನನು ಸೈನ್ಯವನ್ನು ತೆಗದುಕೊಂಡು ವೈರಿಗಳನ್ನು ಎದುರಿಸಲು ಹೊರಟನು. ಮೊದಲು ಕುತುಬಶಾಹನ ಸರಹದ್ದಿನಲ್ಲಿ ಹೋಗಿ ಅನೇಕ ದಿನಗಳವರೆಗೆ ಯುದ್ಧ ಮಾಡಿದನು. ಆಗ ಆದಿಲಶಾಹನ ರಾಜಧಾನಿಯಲ್ಲಿಯ ಅಮೀರ ಜನರಾದ ಐನುಲ್‌ಮುಲ್ಕ, ಅಂಕುಶಖಾನ ಹಾಗೂ ಹಬಶೀಜಾತಿಯ ಯಖಲಾಸಖಾನ, ದಿಲಾವರಖಾನ ಮುಂತಾದ ಅಮೀರರು ಪ್ರತಿಯೊಂದು ದಿಕ್ಕಿನಿಂದ ಸೈನ್ಯವನ್ನು ತೆಗೆದುಕೊಂಡು ಬಂದು ಮುಟ್ಟಿದರು. ಗೊತ್ತಾಗದಂತೆ, ಎಲ್ಲ ಸೈನ್ಯವನ್ನು ಒಮ್ಮೆಲೇ ಅಫಜಲಖಾನನ ಮೇಲೆ ಹಲ್ಲೆ ಮಾಡಲು ಬಿಡಬೇಕೆಂದು ಶತ್ರುಗಳು ಯೋಚಿಸಿದ್ದರು. ಅವರ ಯೋಜನೆಯನ್ನು ಅರಿತ ಅಫಜಲಖಾನನು ಎಚ್ಚರಿಕೆಯಿಂದ ಯುದ್ಧ ಮಾಡಿದನು. ಘನ ಘೋರ ನಡೆದ ಕಾಳಗದಲ್ಲಿ ಕೊನೆಗೆ ಆದಿಲಶಾಹಿ ಸೈನ್ಯಕ್ಕೆ ಜಯ ದೊರೆತು ಕುತುಬಶಾಹನ ಸೈನ್ಯ (ಕ್ರಿ.ಶ.೧೫೪೦) ಸೋತಿತು. ಆನೆ, ಕುದುರೆ, ಒಂಟೆ ಮೊದಲಾದ ಅನೇಕ ಪದಾರ್ಥಗಳು ಆದಿಲಶಾಹಿ ಸೈನ್ಯದ ಕೈವಶವಾದುವು. ಅನಂತರ ಅಫಜಲಖಾನ ಹಾಗೂ ಇತರ ಅಮೀರರು ಯೋಚಿಸಿ ಆದಷ್ಟು ಬೇಗ ನಿಜಾಮಶಹನ ಸೈನ್ಯದ ಮೇಲೆ ಏರಿ ಹೋಗಬೇಕೆಂದರು. ಹಾಗೆ ನಿರ್ಧರಿಸಿ ನಿಜಾಮಶಹನ ಸೈನ್ಯದ ಸನ್ನಿಧಿಗೆ ಬಂದೂ ಮುಟ್ಟಿದರು. ನಿಜಾಮಶಹನ ಸೈನ್ಯವು ಯಾವ ಭಯವೂ ಇಲ್ಲದೆ ಸಿಷ್ಕಾಳಜಿಯಿಂದ ಅಲ್ಲಲ್ಲಿ ಚದುರಿಕೊಂಡು ಇಳಿದಿತ್ತು. ನಿಜಾಮಶಾಹಿಯ ಕಡೆಯ ಬಹೆಜಾದ-ಉಲ್-ಮುಲ್ಕ ಎಂಬವನು ಸೇನಾಪತಿಯಾಗಿದ್ದನು. ಆತನು ಯುದ್ಧಕ್ಕೆ ಸಿದ್ಧನಾಗಿ ಆದಿಲಶಾಹಿ ಸೈನ್ಯದ ಎದುರಿಗೆ ಬಂದನು. ಕುರಿಯ ಕೊರಳನ್ನು ಕತ್ತರಿಸಿದಾಗ ಅದು ಕೈ-ಕಾಲುಗಳನ್ನು ಝಾಡಿಸುವಂತೆ ಆದಿಲಶಹನ ಸೈನ್ಯದ ಮುಂದೆ ಧಡಪಡ ಮಾಡಿ ಓಡಹತ್ತಿದನು. ಕೊನೆಗೆ ದಣಿದು ನಿರುಪಾಯನಾಗಿ ಧೈರ್ಯ ಸಾಲದೆ ಹಿಂತಿರುಗಿ ಓಡಹತ್ತಿದನು . ನಿಜಾಮಶಾನಹ ಉಳಿದ ಸೈನ್ಯವೂ ಎದೆಗುಂದಿ ಓಡಿತು. ಅವರ ಸೈನ್ಯದ ಎಷ್ಟೋ ಜನರು ಗಾಯಾಳುಗಳಾದರು, ಸೋತರು. ಈ ವಿಜಯದಲ್ಲೂ ಬಹಳಷ್ಟು ಆನೆಗಳು, ಕುದುರೆಗಳು ಆದಿಲಶಹನ ಸೈನ್ಯದ ವಶವಾದುವು. ಹತ್ತು ದಿನಗಳ ಯುದ್ಧದಲ್ಲಿ ಆದಿಲಶಹನಿಗೆ ವಿಜಯ ಲಭಿಸಿತು.

ನಿಜಾಮಶಹನ ಉಳಿದ ಸೈನ್ಯವು ಸೋತ ಅನಂತರ ಆ ಸೈನ್ಯದ ಜನರು ಧಾರವಾಡದ ಕೋಟೆಯಲ್ಲಿ ಆಶ್ರಯ ಪಡೆದಿದ್ದರು. ಅವರಲ್ಲಿ ಸೈಯದ ಮುರ್ತುಜಾ ಒಬ್ಬನಾಗಿದ್ದನು. ಅವನ ಮೇಲೆ ಮತ್ತು ಉಳಿದ ಜನರ ಮೇಲೆ ಹಲ್ಲೆ ಮಾಡಬೇಕೆಂದು ಅಫಜಲಖಾನನು ಯೋಚಿಸಿದನು. ಆದರೆ ಅದಕ್ಕೆ ಉಳಿದ ಸರದಾರರ ಬೆಂಬಲ ದೊರೆಯಲಿಲ್ಲ. ಯಾಕೆಂದರೆ ಕಿಶ್ವರಖಾನನು ಸೈನ್ಯವನ್ನು ಕಳಿಸಿದ ಅನಂತರ ರಾಜಧಾನಿಯಲ್ಲಿ ತಾನೇ ಒಡೆಯನಾಗಬೇಕೆಂದು ವಿಚಾರ ಮಾಡಿ ಸಿದ್ಧತೆಯನ್ನು ಮಾಡಿ ಕೊಳ್ಳುತ್ತಿದ್ದಾನೆಂಬ

ಸುದ್ದಿ ಬಂದಿತ್ತು. ತನ್ನ ಕಡೆಯ ಜನರನ್ನು ಸಂಬಂಧಿಕರನ್ನು, ಬೇರೆ-ಬೇರೆ ಪ್ರದೇಶಗಳ ಹಾಗೂ ಕೋಟೆಗಳ ಕೆಲಸದ ಮೇಲೆ ನಿಯಮಿಸಹತ್ತಿದ್ದನು. ಅದರಲ್ಲಿ ಕೆಲವೇ ದಿನಗಳ ಅಂತರದಲ್ಲಿ ನಡೆದ ಎರಡು ಯುದ್ಧಗಳಲ್ಲಿ ಜಯ ದೊರೆತ ಸುದ್ದಿಯನ್ನು ಕೇಳಿ. ಕಿಶ್ವರಖಾನನು ಇನ್ನಷ್ಟು ಗರ್ವಿಷ್ಟನಾಗಿದ್ದನು. ತನ್ನ ಮುಂದೆ ಯಾರೂ ಇಲ್ಲವೆಂದು ತಿಳಿದನು. ಹಳೆಯ ನೌಕರರ ಎತ್ತಂಗಡಿ ಪ್ರಾರಂಭಿಸಿದನು.ಎಲ್ಲ ಕಡೆಗೂ ತನ್ನ ಆಪ್ತರನ್ನೆ ನಿಯಮಿಸಹತ್ತಿದನು. ಆದ್ದರಿಂದ ಇಂಥ ಸಮಯದಲ್ಲಿ ನಾವು ಕೆಲವು ದಿನಗಳವರೆಗೆ ಶಾಹದುರ್ಗದ ಕೋಟೆಯಲ್ಲಿ ಇದ್ದರೆ ಆನೆ-ಕುದುರೆಗಳಿಗೂ ವಿಶ್ರಾಂತಿ ದೊರೆಯುತ್ತದೆ. ಅಮೀರರಿಗೆ ಬರಲು ಆಜ್ಞಾ ಪತ್ರಗಳೂ ಹೋಗಿವೆ. ಅವರೂ ಈ ಸಮಯದಲ್ಲಿ ಬಂದು ಮುಟ್ಟಬಹುದು ಅನಂತರ ಎಲ್ಲರೂ ಕೂಡಿ ವಿಚಾರ ಮಾಡಿ ಶತ್ರುಗಳನ್ನು ಎದುರಿಸಬಹುದು' ಎಂದರು. ಅಷ್ಟರಲ್ಲಿ ಅಮೀರ ಜನರ ಹೆಸರಿನಲ್ಲಿ ಆಜ್ಞಾಪತ್ರಗಳು ಬಂದು ಮುಟ್ಟಿದುವು. ಅವುಗಳನ್ನು ಕಿಶ್ವರಖಾನನು ಚಾಂದಬೀಬಿ ಸುಲ್ತಾನಳ ಅಪ್ಪಣೆಯಿಲ್ಲದೆ ಕಳಿಸಿದ್ದನು. 'ನಿಜಾಮಶಾಹನ ಸೈನ್ಯದಿಂದ ಲೂಟಿ ಮಾಡಿದ ಆನೆಗಳನ್ನು ಇತ್ತ ಕಳಿಸಿಕೊಡಬೇಕು' ಎಂದು ಅದರಲ್ಲಿ ಬರೆಯಲಾಗಿತ್ತು. ಅದರಿಂದಾಗಿ ಮತ್ತೆ ಕಿಶ್ವರಖಾನನ ಕುರಿತು ಎಲ್ಲ ಅಮೀರ ಜನರ ಮನಸ್ಸು ಕಲುಷಿತಗೊಂಡಿತು. ಅವರ ಅಂತಃಕರಣ ದುಃಖಿತವಾದುವು. ಅವರೆಲ್ಲರೂ ಕೂಡಿ ಚಾಂದಬೀಬಿಗೆ ಒಂದು ಪತ್ರವನ್ನು ಬರೆಯಬೇಕೆಂದು ವಿಚಾರಿಸಿದರು. ಅದರಲ್ಲಿ ಮುಸ್ತಫಾಖಾನನನ್ನು ಬಂಕಾಪುರದಿಂದ ಕರೆಯಿಸಿ, ರಾಜ್ಯದ ಕಾರ್ಯಭಾರಗಳನ್ನು ಆತನ ಕಡೆಗೆ ವಹಿಸಬೇಕೆಂಬ ಆಜ್ಞೆಯಾಗಬೇಕು. ನಿಧನರಾದ ಬಾದಶಹರ ಕಾಲದಲ್ಲಿಯಂತೆ ಮುಸ್ತಫಾಖಾನನಿಗೆ 'ಜುಮಲುಲ್ಮುಲ್ಕ' ಮತ್ತು 'ವಕೀಲುಲ್ ಸಲ್ತನತ್' ಎಂಬ ಎರಡು ಪದವಿಗಳನ್ನು ನೀಡಬೇಕು. ಕಿಶ್ವರಖಾನನು ಗರ್ವದ ಮದ್ಯಪಾನದ ಮದದಲ್ಲಿದ್ದಾನೆ. ಅವನು ನಮಗೆಲ್ಲರಿಗೂ ತೊಂದರೆಕೊಡುವುದರಲ್ಲಿದ್ದಾನೆ. ಆತನ ಸೇವೆಯ ಆಶೆಯನ್ನು ಮತ್ತೆ ಹಿಡಿಯಬೇಡಿರಿ ಎಂಬುದಾಗಿ ಬರೆಯಬೇಕೆಂದು ನಿರ್ಧರಿಸಲಾಗಿತ್ತು. ಈ ಎಲ್ಲ ಯೋಜನೆಗಳ ತುಸು ಅಂಶ ಕಿಶ್ವರಖಾನನ ಕಿವಿಯ ಮೇಲೂ ಬಿತ್ತು. ಗರ್ವದಿಂದ ಎದೆಯುಬ್ಬಿಸಿಕೊಂಡ ಆತ ಈ ಸುದ್ದಿ ತಿಳಿಯುತ್ತಲೆ, ನಿರ್ಭಯನಾಗಿ ಬಲಾತ್ಕಾರದ ಮೈದಾನದಲ್ಲಿ ಹೆಜ್ಜೆಗಳನ್ನು ಮುಂದಿಟ್ಟನು. ಮುಸ್ತಫಾಖಾನನ ವಿರುದ್ಧ ಯಾವೊಂದು ಅಪರಾಧಗಳಿಲ್ಲದೆಯೂ ಆತನ ಪಾರುಪತ್ಯ ಮಾಡುವ ವಿಚಾರ ಮಾಡಹತ್ತಿದನು. ಮತ್ತೆ ಇನ್ನೂ ಕೆಲವು ಜನರ ಪಾರುಪತ್ಯದ ಕುರಿತೂ ಯೋಚಿಸಹತ್ತಿದನು.

*೫. ಮುಸ್ತಫಾಖಾನ ಆರದಸ್ತಾನಿಯ ಮೇಲೆ ಕಿಶ್ವರಖಾನನು - ಸೈನ್ಯವನ್ನು ಕಳಿಸಿದ್ದು :*

ಕಿಶ್ವರಖಾನನು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ಮೇಲೆ ಪ್ರಬಲನಾದನು. ರಾಜ್ಯದ ಹಳೆಯ ಸ್ವಾಮಿನಿಷ್ಠ ಸೇವಕರನ್ನು ಒಬ್ಬೊಬ್ಬರನ್ನಾಗಿ ಕೆಲಸದಿಂದ ತೆಗೆಯಹತ್ತಿದನು. ಅವರ ಸ್ಥಳದಲ್ಲಿ ತನಗೆ ಬೇಕಾದ-ವಿಶ್ವಾಸಿಕರನ್ನು ನಿಯಮಿಸ ಹತ್ತಿದನು. ಅಮೀರ ಜನರ ಯೋಜನೆಗಳ ಸುಳುವು ದೊರೆತಂದಿನಿಂದ, ಮುಸ್ತಫಾಖಾನನ ಬಗ್ಗೆ ಸಂಶಯ ಉಂಟಾಗಿ ಅವನನ್ನು ಮುಗಿಸುವ ವಿಚಾರ ಮಾಡಹತ್ತಿದನು. ಬಂಕಾಪುರದ ಹತ್ತಿರದ ಮಿಲನೋರದ ಕೋಟೆಯಲ್ಲಿ ಮುಸ್ತಫಾಖಾನನು ಇರುತ್ತಿದ್ದನು, ಆತನ ಮೇಲೆ ಐದು ಜನ ಅಮೀರರನ್ನು ಕಳಿಸಿದನು. ಕಿಶ್ವರಖಾನ ಹಾಗೂ ಮುಸ್ತಫಾಖಾನನ ಜನರ ಮಧ್ಯ ಯುದ್ಧಗಳಾದುವು. ಕೊನೆಯಲ್ಲಿ ಮುಸ್ತಫಾಖಾನನು ಸೋತು ಯುದ್ಧದಿಂದ ಹಿಂತಿರುಗಿದನು. ಹಿಂದೂ ಜನರ ಒಂದು ಕೋಟೆಯಲ್ಲಿ ಆಶ್ರಯ ಪಡೆದು ಇರಹತ್ತಿದನು. ಆಗ ಕೋಟೆಯಲ್ಲಿ ಇರುತ್ತಿದ್ದ ಜನರು ಕಿಶ್ವರಖಾನನ ಸೈನ್ಯವನ್ನು ಸ್ವಾಗತಿಸಿದರು. ಆದ್ದರಿಂದ ಕೋಟೆಯ ಒಳಗಡೆ ಬರಲು ಮುಸ್ತಫಾಖಾನನಿಗೆ ಬಾಗಿಲು

ತೆರೆಯಲಿಲ್ಲ. ಕೋಟೆಯ ಮೇಲೆ ಏರಿಬರುವಂತೆ ಮುಸ್ತಫಾಖಾನನಿಗೆ ಒಂದು ಹಗ್ಗವನ್ನು ಕೆಳಗೆ ಬಿಟ್ಟರು. ಮುಸ್ತಫಾಖಾನನು ಹಗ್ಗದ ಮುಖಾಂತರ ಅರ್ಧ ಕೋಟೆಯನ್ನು ಏರುತ್ತಿದ್ದಂತೆ ಕಿಶ್ವರಖಾನನ ಸೈನ್ಯದವರಿಗೆ ಈ ವಿಷಯ ತಿಳಿಯಿತು. ತಕ್ಷಣ ಓಡಿ ಬಂದು ಮುಸ್ತಫಾಖಾನನನ್ನು ಜಗ್ಗಿ ಕೆಳಗಿಳಿಸಿ ಅವನನ್ನು ಬಂಧಿಸಿ ಬಂಕಾಪುರ ಕೋಟೆಯಲ್ಲಿಟ್ಟರು. ಕೆಲವು ದಿನಗಳ ಅನಂತರ ಅವನನ್ನು ಕೊಲೆ ಮಾಡಿದರು.

ಇಲ್ಲಿ ಇನ್ನೊಂದು ಕಥೆಯನ್ನೂ ಹೇಳಲಾಗುತ್ತದೆ. ಬಂಕಾಪುರ ಪ್ರದೇಶದಲ್ಲಿ ಒಬ್ಬ ಬ್ರಾಹ್ಮಣ ಜೋಶಿ ಇರುತ್ತಿದ್ದನಂತೆ. ಅವನು ಜೋತಿಷ್ಯದ ಗಣಿತದಿಂದ ಉಭಯಲೋಕಗಳ ಭೂತ-ಭವಿಷ್ಯ ವರ್ತಮಾನಗಳು ತಿಳಿಯುತ್ತಿದ್ದುವು. ಮುಂದೆ ಯಾವ ಯಾವ ದಿನಗಳಲ್ಲಿ ಏನೇನು ಆಗುತ್ತದೆಯೊ ಭವಿಷ್ಯವನ್ನು ಇದ್ದಕ್ಕಿದ್ದ ಹಾಗೆ ಹೇಳುತ್ತಿದ್ದನು. ಆತನ ಪ್ರಶ್ನೆಗಳ ಉತ್ತರಗಳಲ್ಲಿ ಎಂದೂ ಅಂತರವಾಗಿರಲಿಲ್ಲ. ಹಾಗೆ ಹಿಂದೊಮ್ಮೆ ಬಂಕಾಪುರದ ಕೋಟೆಯನ್ನು ತೆಗೆದುಕೊಳ್ಳುವುದಕ್ಕಿಂತ ಮೊದಲು, ಇಪ್ಪತ್ತು ವರುಷಗಳ ನಂತರ ಈ ಕೋಟೆಯು ಮುಸ್ತಫಾಖಾನನಿಂದಾಗಿ ಹಿಂದು ರಾಜರ ಕೈಯಿಂದ ಬಿಟ್ಟ ಹೋಗುತ್ತದೆ ಎಂದು ಭವಿಷ್ಯ ಹೇಳಿದ್ದನಂತೆ. ಅದರಂತೆ ಆಯಿತು ಕೂಡ. ಇದು ಗೊತ್ತಾದಾಗ ಮುಸ್ತಫಾಖಾನನು ಆ ಜೋಶಿಯನ್ನು ಕರೆಯಲು ಹೇಳಿದ್ದನಂತೆ, ಜೋಶಿಯ ಬಂದಮೇಲೆ ಅವನನ್ನು ತುಂಬ ಆದರದಿಂದ ಬರಮಾಡಿಕೊಂಡು ತನ್ನ ಭವಿಷ್ಯವನ್ನು ಕೇಳಿದನು. ಆತನ ದೈವ ದಶೆಯನ್ನು ಗುಣಿಸಿ ನೋಡಿದಾಗ ಬಂದ ಉತ್ತರದಿಂದ ಜೋಶಿ ತಲೆ ಕೆಳಗೆ ಹಾಕಿ ಮೌನವಾಗಿ ಕುಳಿತನು. ಆಗ ಮುಸ್ತಫಾಖಾನನು ಮತ್ತೆ ಆತನಿಗೆ ಕೇಳಿದನು. 'ನನ್ನ ಪ್ರಶ್ನೆಗೆ ಬಂದ ಉತ್ತರವನ್ನು ನಿಸ್ಸಂಶಯವಾಗಿ ಹೇಳು. ಅದರಲ್ಲಿ ಏನನ್ನೂ ಮುಚ್ಚಿಡಬೇಡ ಎಂದನು. ಆಗ ಜೋಶಿಯು ಹೇಳದನು 'ಇಂಥ ವರುಷ, ವಿಜಾಪುರದಲ್ಲಿ ಇರುವ ಯಾರೋ ಒಬ್ಬ ಗೃಹಸ್ಥನು ಬಂದು ನಿನ್ನ ಜೀವ ತೆಗೆದುಕೊಳ್ಳುವ ಸಂಕಲ್ಪ ಮಾಡುತ್ತಾನೆ. ನೀನಿರುವ ಇದೇ ಬಂಕಾಪುರ ಕೋಟೆಯಲ್ಲಿಯೇ ನಿನ್ನ ಪ್ರಾಣವನ್ನು ತೆಗೆದುಕೊಳ್ಳುತ್ತಾನೆ. ನಿನ್ನ ಜೀವವನ್ನು ತೆಗೆದುಕೊಳ್ಳುವ ವ್ಯಕ್ತಿಯೂ ಮುಂದೆ ತುಸುವೆ ದಿನಗಳಲ್ಲಿ ಓಡಿ ತೆಲಂಗ ದೇಶಕ್ಕೆ ಹೋಗುತ್ತಾನೆ. ಅಲ್ಲಿ ಒಬ್ಬ ಮನುಷ್ಯನ ಕೈಯಿಂದ ತಲವಾರದ ಗಾಯದಿಂದ ಕೊಲೆಯಾಗುತ್ತಾನೆ' ಎಂದು ಹೇಳಿದನು. ಕೊನೆಗೆ ಜೋಶಿ ಹೇಳಿದಂತೆಯೆ ಮುಸ್ತಫಾಖಾನನು ಕಿಶ್ವರಖಾನನ ಕೈಯಿಂದ ಕೊಲೆಯಾದನು, ಕಿಶ್ವರಖಾನ ಕೂಡ ಅವನು ಹೇಳಿದ ದಿವಸವೇ (ವರ್ಷವೇ?) ಗೋವಳಕುಂಡದಲ್ಲಿ ತಲವಾರಿನಿಂದ ಕೊಲ್ಲಲ್ಪಟ್ಟನು.

### ೬. *ಚಾಂದಬೀಬಿ ಸುಲ್ತಾನಾಳನ್ನು ಅರಮನೆಯಿಂದ ಜಗ್ಗಿ ಕಿಶ್ವರಖಾನನು ಸಾತಾರಾ ಕೋಟೆಗೆ ಕಳಿಸಿ ಸೆರೆಮನೆಯಲ್ಲಿಟ್ಟನು :*

ಮುಸ್ತಫಾಖಾನನು ಬಹಳ ಸಂಭಾವಿತ ಮಂತ್ರಿಯಾಗಿದ್ದನು. ಸರಕಾರದಲ್ಲಿ ಅವನಂಥ ಮನುಷ್ಯ ಇನ್ನೊಬ್ಬರಿದ್ದಿಲ್ಲ. ಅಂಥ ಯೋಗ್ಯ ವ್ಯಕ್ತಿಯನ್ನು ಬಂಧಿಸಿದ ಮೇಲೆ ಕಿಶ್ವರಖಾನನಿಗೆ. ಇನ್ನಷ್ಟು ಸೊಕ್ಕು ಬಂದಿತು. ಅದೇ ಸೊಕ್ಕಿನಿಂದ ಚಾಂದಬೀಬಿಯ ಪಾರುಪತ್ಯದ ವಿಚಾರದಲ್ಲಿ ಬಿದ್ದನು. ಯಾಕೆಂದರೆ ಚಾಂದಬೀಬಿಯು ಕಿಶ್ವರಖಾನನು ನಿರಂತರ ತನ್ನ ಅಂಕಿತದಲ್ಲಿರಬೇಕು, ಸೇವಕನಂತೆ ನೌಕರಿಯನ್ನು ಮಾಡುತ್ತಿರಬೇಕು. ಸುಲ್ತಾನ ಇಬ್ರಾಹಿಮ ಬಾದಶಹನು ತನ್ನ ಮನೆಯಲ್ಲಿದ್ದು ಬೆಳೆಯಬೇಕು, ಮಹಾಲಿ ಹಾಗೂ ಮುಲಕೀ ಕೆಲಸಗಳನ್ನು ತನ್ನ ಆದೇಶದಂತೆ ನಡೆಯಬೇಕು ಎಂದು ಬಯಸುತ್ತಿದ್ದಳು. ಆದರೆ ಕಿಶ್ವರಖಾನನು ಇವುಗಳನ್ನು ಮಾನ್ಯ ಮಾಡುತ್ತಿರಲಿಲ್ಲ. ಯಾವುದೊಂದು ಕೆಲಸವನ್ನು ಮಾಡಬೇಕೆಂದು

ಆಜ್ಞೆಯಾದರೆ, ಅದನ್ನು ಮಾಡದೆ ಆಲಸ್ಯದಿಂದ ದಿನ ನೂಕುತ್ತಿದ್ದನು. ಅಂಥ ಸಮಯದಲ್ಲಿಯೇ ಮುಸ್ತಫಾಖಾನನ ಬಂಧನದ ವಿಷಯ ಬಂದು ಮುಟ್ಟಿತು, ಚಾಂದಬೀಬಿ ಸುಲ್ತಾನಳು ಕಿಶ್ವರಖಾನನ ಮೇಲೆ ಸಿಟ್ಟಾದಳು. ಅದೇ ಕ್ರೋಧಮಿಶ್ರಿತ ವ್ಯಂಗ್ಯದಿಂದ, ಚಿಲ್ಲರೆ ಶಬ್ದಗಳಲ್ಲಿ ಕಿಶ್ವರಖಾನನನ್ನು ಮಾತನಾಡಿಸಿದಳು. ಅವನನ್ನು ಬದಲಿಸಬೇಕೆಂಬ ದೃಷ್ಟಿಯಿಂದ ಬಾದಶಾಹಿ ನೌಕರವರ್ಗದಲ್ಲಿಯ ಹಿರಿಯ ವಕೀಲರು, ಅಮೀರ ಜನರೊಂದಿಗೆ ಈ ವಿಷಯದಲ್ಲಿ ವಿಚಾರಿಸಿದಳು. ಎಲ್ಲ ಕಾರಭಾರಿಗಳೂ ಕಿಶ್ವರಖಾನನ ವಿಷಯದಲ್ಲಿ ತಿರುಗಿ ಬಿದ್ದಿದ್ದರು. ಅವನೊಂದಿಗೆ ಸಹಾಯಮಾಡದಿರಲು ಬೋಧಿಸಿ ಎಲ್ಲರನ್ನೂ ತನ್ನತ್ತ ಸೆಳೆದುಕೊಂಡಳು. ಕಿಶ್ವರಖಾನನನ್ನು ಎದುರಿಸಲು ನಿಯಮಿಸಿದಳು. ಅವನನ್ನು ಸರಿಸಿದ ನಂತರ ಇಬ್ರಾಹಿಮ ಆದಿಲಶಹನನ್ನು ತನ್ನ ಹತ್ತಿರ ಕರೆತಂದು, ಅವನ ಪಾಲನ -ಪೋಷಣೆ ಮಾಡಬೇಕೆಂಬುದು ಅವಳ ವಿಚಾರವಾಗಿತ್ತು. ಇಬ್ರಾಹಿಮನ ಮೇಲೆ ತಾಯಿಯ ಮಮತೆ-ಆಸ್ಥೆಯನ್ನು ತೋರಿಸಬೇಕು. ಹುಸೇನನಿಜಾಮಶಾಹನ ಸ್ತ್ರೀಯ ಮಗ ಮುರ್ತಜಾನಿಜಾಮಶಾಹನ ಕಾಲದಲ್ಲಿ ಪ್ರಾರಂಭದ ಆರುವರುಷ ತನ್ನ ತಾಯಿ ರಾಜ್ಯಕಾರಭಾರವನ್ನು ಮಾಡಿದಂತೆ, ಅವಳೂ ಇಬ್ರಾಹಿಮ ಆದಿಲಶಹನ ರಾಜ್ಯ ಕಾರಭಾರವನ್ನು ಮಾಡಬೇಕೆಂದು ಬಯಸಿದ್ದಳು. ಈ ವಿಷಯ ಕಿಶ್ವರ ಖಾನನಿಗೆ ತಿಳಿಯಿತು. ಚಾಂದಬೀಬಿಯು ಒಂದು ದಿನ ಸಂಕಟವನ್ನು ತರುತ್ತಾಳೆ. ಆ ಸಂಕಟದ ಪರಿಹಾರ ಕಠಿಣವಾಗಿರುತ್ತದೆಂಬ ಭಯದಿಂದ ಚಾಂದಬೀಬಿಯನ್ನು ಬಂಧಿಸಬೇಕೆಂದು ದೃಢ ಸಂಕಲ್ಪ ಮಾಡಿದನು. ಕವಿತೆಯ ಒಂದು ಸಾಲಿನಲ್ಲಿ ಹೇಳಿದಂತೆ, 'ಆಗಬೇಕಾದ ಕೆಲಸ ಇನ್ನೂ ಆಗಿರದಿದ್ದಾಗ ಅದರ ಉಪಾಯವನ್ನು ಮಾಡಿಸಬೇಕು'.

ಚಾಂದಬೀಬಿಯು ಅರಮನೆಯಿಂದ ಹೊರಗೆ ಹೋಗಬಾರದೆಂದು ಅವಳನ್ನು ಗೃಹಬಂಧನದಲ್ಲಿಟ್ಟನು. ಚಾಂದಬೀಬಿಗೆ ಅರಮನೆಯ ಹೊರಗೆ ಹೋಗಲು ಸಾಧ್ಯವೇ ಆಗಲಿಲ್ಲ. ಅರಮನೆಯ ಖೋಜಾಗಳನ್ನು ಹಾಗೂ ವೃದ್ದರನ್ನು ಕಳಿಸಿ ಅವಳನ್ನು ಅರಮನೆಯಿಂದ ಜಗ್ಗಿ ಹೊರಗೆ ಕರೆದುಕೊಂಡು ಬರಲು ಹೇಳಿದನು. ಆದರೆ ವೃದ್ದರು ಗೌರವವನ್ನು ಕಾಯ್ದರು. ಚಾಂದಬೀಬಿಯ ಮರ್ಯಾದೆಯನ್ನು ತೆಗೆದುಕೊಳ್ಳುವುದು ಅವರಿಂದಾಗಲಿಲ್ಲ. ನಂತರ ಕಿಶ್ವರಖಾನನು ತನ್ನ ಸ್ವಂತದ ಖೋಜಾಗಳನ್ನು ಮತ್ತು ವಿಶ್ವಾಸದ ಮುದುಕರನ್ನು ಕಳಿಸಿದಾಗ ಅವರು ಚಾಂದಬೀಬಿಯ ಗೌರವ, ದೊಡ್ಡತನ ಯಾವುದನ್ನೂ ಗಣಿಸದೆ ನಿರ್ಭಿಡೆಯಿಂದ ಅರಮನೆಯಿಂದ ಜಗ್ಗಿ ಹೊರತಂದರು. ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಅವಮಾನಕರವಾಗಿ ನಗರದಿಂದ ಹೊರಹಾಕಿ ಸಾತಾರೆಯ ಕೋಟೆಗೆ ಕಳಿಸಿದರು. ಚಾಂದಬೀಬಿಯ ನೌಕರರು , ಚಾಕರರು, ಹೆಂಗಳೆಯರು, ಸೇವಿಕೆಯರು ಎದುರಿಗಿದ್ದಾಗಲೇ , ಹಾಡುಹಗಲೇ ಬಾಜಾರದ ಮಧ್ಯ ಎಲ್ಲರೂ ನೋಡ-ನೋಡುತ್ತಿದ್ದಂತೆ, ಬಾಯಿಮಾಡುತ್ತ ಅವಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಅದನ್ನು ನೋಡಿದ ಎಲ್ಲರೂ ತಕ್ಷಣ ಕೂಗಾಡುತ್ತ ದನಿ ತೆಗೆದು ಅಳಹತ್ತಿದರು. ಅಲಿ ಆದಿಶಹನು ಕೊಲೆಯಾದಾಗಲೂ ಈ ರೀತಿಯ ಗದ್ದಲ, ರೋದನವಾಗಿರಲಿಕ್ಕಿಲ್ಲ. ಅದಕ್ಕಿಂತ ಮಿಗಿಲಾಗಿ ಜನರು ಭುಗಿಲೆದ್ದರು. ಎಲ್ಲರೂ ಸಣ್ಣವರು, ದೊಡ್ಡವರು, ಎನ್ನದೆ, ಕಿಶ್ವರಖಾನನಿಗೆ,ಥೀ,ಥೂ, ಹಾಕುವವರೆ, ನಗರದ ಎಲ್ಲ ಜನರು ಕಿಶ್ವರಖಾನನ ಹೆಂಡಿರು ಮಕ್ಕಳು ಕೂಡ ಓಣಿ ಓಣಿಗಳಲ್ಲಿ, ರಸ್ತೆ -ರಸ್ತೆಗಳಲ್ಲಿ , ಬಾಜಾರುಗಳಲ್ಲಿ ಒದರಾಡುತ್ತಾ, ಚೀರಾಡುತ್ತಾ ಕಿಶ್ವರಖಾನನ್ನು ಬೈಯುತ್ತಿದ್ದರು, ಇದು ಯಜೀದನ ಬಲಾತ್ಕಾರವಾಗಿದೆ. ಯಜೀದನು ಪೈಗಂಬರರ ಮೊಮ್ಮಗನನ್ನು ಕೊಂದಂತೆ ಈತನು ಮುಸ್ತಫಾಖಾನನನ್ನು ಕೊಲೆಮಾಡಿ ಮಾತೃಶ್ರೀ ಚಾಂದಬೀಬಿಯ ಮೇಲೆ ಬಲಾತ್ಕಾರ ಮಾಡಿ ಅವಳನ್ನು ಜುಲುಮೆಯಿಂದ ಬಂಧಿಸಿದ್ದಾನೆ.

ಇಡೀ ರಾಜ್ಯವನ್ನು ಬೆದರಿಕೆಯಲ್ಲಿ ಹಾಕಿದ್ದಾನೆ. ಎಂದು ಹೇಳಿಕೊಳ್ಳುತ್ತಿದ್ದರು. ಎಲ್ಲರೂ ಕೂಡಿಕೊಂಡು ಕಿಶ್ವರಖಾನನನ್ನು ಹಿಡಿದು ಕುದುರೆಶಿಕ್ಷೆಯನ್ನು ಕೊಡಬೇಕೆಂದು ಯೋಚಿಸುತ್ತಿದ್ದರು. ಒಂದು ವೇಳೆ ಕಿಶ್ವರಖಾನನು, ಚಾಂದಬೀಬಿಯನ್ನು ಮಧ್ಯರಾತ್ರಿ ಹಿಡಿದು, ಅರಮನೆಯಿಂದ ಹೊರಹಾಕಿ - ಮರುದಿನ ಬೆಳಗಾಗುವುದರೊಳಗೆ ಸಾತಾರೆಯ ಕೋಟೆಗೆ ಕಳಿಸಿದ್ದರೆ, ಇಂಥ ಅಪಕೀರ್ತಿಯೂ ಬರುತ್ತಿರಲಿಲ್ಲ. ಇಂಥ ಗದ್ದಲವಾಗುತ್ತಿರಲಿಲ್ಲ. ಆದರೆ ಆತನ ಸೊಕ್ಕು ಆತನನ್ನು ಅಯೋಗ್ಯನನ್ನಾಗಿಸಿ, ದುರ್ನಿಮಿತ್ತಕ್ಕೆ ಪಾತ್ರನನ್ನಾಗಿ ಮಾಡಿತು.

ಅವನು ಇನ್ನೂ ಒಂದು ಕೆಲಸ ಮಾಡಿದ್ದನು. ರಾಣಿಯ ಅರಮನೆಯಲ್ಲಿಯ ಎಲ್ಲ ಸೇವಿಕೆಯರನ್ನು ಜಬರದಸ್ತಿನಿಂದ ಹಿಡಿದು ತನ್ನ ಆಪ್ತಮಂಡಳಿಯ ವಶಕ್ಕೆ ಕೊಟ್ಟಿದ್ದನು. ಯಜಮಾನನ ಮರ್ಯಾದೆಯ ಮೇಲೆ, ಗೌರವದಮೇಲೆ ಮತ್ತು ತಿಂದ ಅನ್ನದ ಮೇಲೆ ಆತ ಯಾವ ದೃಷ್ಟಿಯನ್ನೂ ಇಟ್ಟಿರಲಿಲ್ಲ. ಆತನ ದುರ್ನಡತೆಗೆ ಇನ್ನೂ ಒಂದು ದೃಷ್ಟಾಂತವೆಂದರೆ, ಒಂದು ದಿನ ಇಬ್ರಾಹಿಮ ಬಾದಶಹನ ಭಂಡಾರಕ್ಕೆ ಬಂದು ಆಭರಣಗಳ ಪೆಟ್ಟಿಗೆಯನ್ನು ತೆರೆದನು. ಅದರಲ್ಲಿಯ ತುಸು ಆಭರಣಗಳನ್ನು ತೆಗೆದುಕೊಂಡು ಸುಲ್ತಾನ ಇಬ್ರಾಹಿಮನ ತಾಯಿಗೆ ಧರಿಸಲು ರಾಣಿಯ ಸೇವಿಕೆಯ ಮುಖಾಂತರ ಕಳಿಸಿದನು. ಅದನ್ನು ಕಂಡ ಬಾದಶಹನ ತಾಯಿ, ಅದರಲ್ಲಿ ಕಡಿಮೆ ಬೆಲೆಯ ಆಭರಣಗಳನ್ನು ಕಳಿಸಿದ್ದಾನೆಂದು ತಿಳಿದು ಕಿಶ್ವರಖಾನನ ಮೇಲೆ ಸಂತಪ್ತಳಾದಳು . "ನಾನು ಇಷ್ಟು ಕಡಿಮೆ ಕಿಮ್ಮತ್ತಿನವಳೆ? ನನ್ನ ಯೋಗ್ಯತೆ ಕಡಿಮೆ ಎಂದೇ ಇಂಥ ಚಿಲ್ಲರೆ ಆಭರಣಗಳನ್ನು ಕಳಿಸಿದ್ದಾನೆ. ಇದಕ್ಕಿಂತ ಅಧಿಕ ಕಿಮ್ಮತ್ತಿನ ಆಭರಣಗಳನ್ನು ಕಳಿಸಿದ್ದರೆ, ಆತನದೇನು ಗಂಟು ಹೋಗುತ್ತಿತ್ತು. ತನ್ನ ಕೈಯಿಂದ ಕೊಡುತ್ತಾನೆಯೆ?" ಎಂದು ಮುಂತಾಗಿ ಹೇಳಿ ತಟ್ಟೆಯನ್ನು ತಂದವಳನ್ನು ಶಿಕ್ಷಿಸಿದಳು. ತಾಯಿಯ ಕೋಪವು ಶಾಂತವಾದ ಮೇಲೆ ಇಬ್ರಾಹಿಮ ಆದಿಲಶಹನು ಅವಳಿಗೆ ವಿನಂತಿ ಮಾಡಿಕೊಂಡನು. "ತಾಯಿ, ಎಷ್ಟೆಲ್ಲ ರಾಜ್ಯವಿದೆಯೋ ಅದೆಲ್ಲ ನಮ್ಮದೇ ಆಗಿದೆ. ಅಲ್ಲದೆ ಕೈವಶ ಮಾಡಿಕೊಂಡ ಇನ್ನು ಕೆಲ ಪ್ರದೇಶಗಳ ಮೇಲೂ ನಮ್ಮ ಅಧಿಕಾರವಿದೆ. ಹೀಗಿದ್ದಾಗ ಯಾಕೆ ಚಿಂತಿಸುತ್ತೀರಿ? ಮನಸ್ಸನ್ನು ಏಕೆ ಖಿನ್ನಗೊಳಿಸುತ್ತೀರಿ?" ಎಂದು ಹೇಳಿದನು. ಈ ಮಾತುಗಳು ಸುಮ್ಮನೆ ಇಲ್ಲ. ಸುವರ್ಣಾಕ್ಷರಗಳಿಂದ ಬರೆದಿಡುವ ಮಾತುಗಳಾಗಿವೆ. ಆ ಸಮಯದಲ್ಲಿ ಇಬ್ರಾಹಿಮನ ವಯಸ್ಸು ಅತಿ ಚಿಕ್ಕದು. ಆ ಬುದ್ಧಿವಂತ ಬಾದಶಹನ ಇಂಥ ಹಲವಾರು ಮಾತುಗಳು ಅಷ್ಟು ಚಿಕ್ಕವಯಸ್ಸಿನಲ್ಲೆ ಪ್ರಸಿದ್ಧವಾಗಿದ್ದುವು. ಹೀಗೆಯೇ ಒಮ್ಮೆ ಆತನ ತಾಯಿ ಇಬ್ರಾಹಿಮನು 'ನೀವು ಸಿಂಹಾಸನದ ಮೇಲೆ ಕುಳಿತಾಗ, ಸುಮ್ಮನೆ ಕುಳಿತಿರುತ್ತೀರಂತಲ್ಲ? ಯಾರೊಂದಿಗೂ ಮಾತನಾಡುವುದಿಲ್ಲ' ಎಂದು ಕೇಳಿದ್ದಳು. ಅದಕ್ಕೆ ಇಬ್ರಾಹಿಮನು ಉತ್ತರ ಕೊಡುತ್ತ "ಸಭೆಯಲ್ಲಿ ನನ್ನೊಂದಿಗೆ ಮಾತನಾಡುವಂಥವರು ಯಾರಿದ್ದಾರೆ ಹೇಳಿ? ಕೆಲವು ಜನ ನೌಕರರಿರುತ್ತಾರೆ. ಅವರು ಯಾವಾಗಾದರೊಮ್ಮೆ ನನಗೆ ವಿನಂತಿ ಮಾಡಿಕೊಳ್ಳುತ್ತಾರೆ. ಆಗ ಅವರಿಗೆ ಉತ್ತರ ಕೊಡುವೆ. ಉಳಿದಂತೆ ನನ್ನ ಹಾಗೆ ಇದ್ದವರನ್ನು ಕರೆತನ್ನಿ, ಅವರೊಂದಿಗೆ ಮಾತನಾಡುವೆ. ಅದೂ ಅಲ್ಲದೆ, ರಾಜಧಾನಿಯ ಯೋಗ್ಯತೆ ಮತ್ತು ಅಧಿಕಾರ ದೊಡ್ಡದು. ಬಾದಶಹನ ಯೋಗ್ಯತೆ ಇನ್ನೂ ಅಧಿಕವಾದದ್ದು. ಸಭೆಯಲ್ಲಿ ಬಾದಶಹನು ಎಷ್ಟು ಶ್ರೇಷ್ಠತೆ ಹಾಗೂ ಯೋಗ್ಯತೆಯಿಂದ ಇರುತ್ತಾನೆಯೊ ಅಷ್ಟು ಬಾದಶಹನ ಯೋಗ್ಯತೆ ಹಾಗೂ ಗೌರವಗಳು ವೃದ್ಧಿಯಾಗುತ್ತದೆ. ನಾನೊಬ್ಬನೇ ಹೀಗೆ ವರ್ತಿಸಬೇಕು ಎಂದಲ್ಲ, ಯಾರೇ ಬಾದಶಹರಾದರೂ ಅವರು ಇದೇ ರೀತಿಯಲ್ಲಿ ನೆಡೆದುಕೊಳ್ಳಬೇಕು. ನಾವಾದರೋ ಸಣ್ಣವಯಸ್ಸಿನವರು ಮತ್ತು ಹುಡುಗ"

**೭. ಕಿಶ್ವರಖಾನನು ವಿಜಾಪುರದಿಂದ ಹೊರಟು ಅಹ್ಮದನಗರಕ್ಕೆ ಹೋಗಿ ಇರುವುದು ಮತ್ತು ಅಲ್ಲಿಂದ ಕುತುಬಶಾಹನ ರಾಜ್ಯಕ್ಕೆ ಹೋಗುವುದು. ಅಲ್ಲಿ ಆತನ ಮರಣ.**

ಅಫಜಲಖಾನನು ಒಂದರ ಬೆನ್ನಲ್ಲಿ ಒಂದರಂತೆ ಎರಡು ಸಲ ಶತ್ರುಗಳನ್ನು ಸೋಲಿಸಿ ಯಶಸ್ವಿಯಾಗಿದ್ದನು. ಮೂರನೆಯ ಸಲ ಕೂಡ ಶತ್ರುಗಳು ಧಾರವಾಡದ ಕೋಟೆಯಲ್ಲಿದ್ದನ್ನು ಕೇಳಿ ಅಲ್ಲಿಗೆ ಹೋಗಿ ದಂಗೆ ಮಾಡಿ ವಿಜಯ ಸಾಧಿಸಬೇಕೆಂದಿದ್ದನು. ಯುದ್ಧ ವಿಷಯದಲ್ಲಿ ಅನುಮಾನ ಹಾಗೂ ಆಲಸ್ಯ ಬೇಡವೆಂದು ಅಮೀರ ಜನರಿಗೂ ಆಗ್ರಹ ಮಾಡುತ್ತಿದ್ದನು. ಆದರೆ ಅಮೀರ ಜನರು ಕಿಶ್ವರಖಾನನ ಮೋಸ ಹಾಗೂ ಸೊಕ್ಕುಗಳಿಗಾಗಿ ಅಫಜಲಖಾನನ ಸಲಹೆಯನ್ನು ಒಪ್ಪುತ್ತಿರಲಿಲ್ಲ. ಅವರಲ್ಲಿಯ ಕೆಲವರು ಅಫಜಲಖಾನನ ಸಮಾಧಾನಕ್ಕಾಗಿ. ರಾಜಧಾನಿಯಿಂದ ಇನ್ನಷ್ಟು ಜನ ಬರುವವರಿದ್ದಾರೆ. ಅವರು ಬಂದಮೇಲೆ ಎಲ್ಲರೂ ಕೂಡಿ ಶತ್ರುವನ್ನು ಎದುರಿಸುವುದು. ಸರಿ ಎನಿಸುತ್ತದೆ? ಎಂದು ಹೇಳುತ್ತಿದ್ದರು, ಈ ವಿಚಾರದಲ್ಲಿದ್ದಾಗಲೇ ಕೆಲವು ಜನ ಸರದಾರರು ಅಫಜಲಖಾನನ್ನು ಮತ್ತು ಕೆಲವು ಸರದಾರರನ್ನು ಭೆಟ್ಟಿಯಾಗಲು ಬಂದರು. ಅವರು ಉದ್ವಿಗ್ನ ಮತ್ತು ದುಖಿತ ಮನಸ್ಸಿನಿಂದ ಅಳುತ್ತ ತಮ್ಮ ನಿರ್ಲಜ್ಜತನಕ್ಕಾಗಿ, ಮರ್ಯಾದೆ ಗೆಟ್ಟ ಬದುಕಿಗಾಗಿ ಧಿಕ್ಕಾರ ಹಾಕುತ್ತ ಬಂದಿದ್ದರು. ಬಂದವರು ನಾವು ಇನ್ನೂ ಜೀವಂತ ಏಕೆ ಉಳಿದಿದ್ದೇವೆ? ನಮ್ಮ ಶರೀರದಲ್ಲಿ ಜೀವ ಹೇಗೆ ಉಳಿದುಕೊಂಡಿದೆ. ನಾವಿಂದು ದುಃಖ ಭೋಗಿಸುತ್ತ ಬದುಕಿರುವುದಕ್ಕಿಂತ ಸತ್ತಿದ್ದರೆ ಒಳ್ಳೆಯದಾಗಿತ್ತು. ಒಬ್ಬ ಮೂರ್ಖ, ನಿರ್ಲಜ್ಜ ವ್ಯಕ್ತಿಯು ಕೃತಘ್ನನಾಗಿ ಎಲ್ಲಿಯವರೆಗೆ ಬಂದಿದ್ದಾನೆ. ಅಪಕೀರ್ತಿಯ ನಾಶದ ಮಣ್ಣನ್ನು ನಮ್ಮಮುಖದಮೇಲೆ ಒಗೆದು ರಾಣೀಸಾಹೇಬರನ್ನು, ಮುರ್ತಜಾ ನಿಜಾಮಶಾಹರ ಅಕ್ಕನನ್ನು, ರಾಜ್ಯದ ಮತ್ತು ಸಿಂಹಾಸನದ ಧಣಿಯನ್ನು ಹೊರಹಾಕಿದ್ದಾನೆ. ಬಹಳ ವರುಷಗಳಿಂದ ಉಣ್ಣುತ್ತಿದ್ದ ಅನ್ನದ ಧಣಿಯನ್ನು ಮತ್ತು ಈ ಶ್ರೇಷ್ಠ ಅಮೀರ ಪದವಿಯನ್ನು ಇಂದು ನಮಗೆ ಕೊಟ್ಟವಳು, ಸಂಕಟದಿಂದ ನಗರವನ್ನು ಬಿಟ್ಟು ಹೋಗಿ ಬಿಟ್ಟಳು. ಇಂದು ನಮಗೆ ಜೀವ ಕೊಡುವ ಅಥವಾ ಸೇಡು ತೀರಿಸಿಕೊಳ್ಳುವ ಬದಲು ಬೇರೆ ಕರ್ತವ್ಯವೇ ಇಲ್ಲ. ಇಂದು ನಮ್ಮ ಮರಣದ ಅಥವಾ ನ್ಯಾಯದ ದಿನ! ಎಂದು ಹೇಳುತ್ತ ಕಿಶ್ವರಖಾನನ ಮಗ ಹಾಗೂ ಸಹೋದರನ ಮೇಲೆ ಏರಿ ಹೋದರು. ಕಿಶ್ವರಖಾನನ ಮಗ ಹಾಗೂ ಸಹೋದರರು ಆ ಸೈನ್ಯದಲ್ಲಿ ಎಲ್ಲ ಸರದಾರರೊಂದಿಗೆ ಶ್ರೇಷ್ಠ ಸರದಾರರಾಗಿದ್ದರು. ಕಿಶ್ವರಖಾನನ ಸಹೋದರನು ಮೊಗಲಖಾನನ ಹತ್ತಿರ ಸರಖೇಲಿ ಪದವಿಯಲ್ಲಿದ್ದನು. ಕಿಶ್ವರಖಾನನ ಮಗ ಕಮಾಲಖಾನನು ಸರನೋಬತ ಹುದ್ದೆಯಲ್ಲಿದ್ದನು.

ಆ ಉಭಯತರ ಮೇಲೆ ಉಳಿದ ಸರದಾರರು ಅತ್ಯಂತ ಕ್ರೋಧದಿಂದ ಮತ್ತು ಸಂತಾಪದಿಂದ ಹೋಗಿ ಆ ಇಬ್ಬರನ್ನು ಹಿಡಿದುಕೊಂಡು ಬಂದು ಶಹದುರ್ಗದ ಕೋಟೆಯಲ್ಲಿ ಬಂಧಿಸಿದ್ದರು. ಅನಂತರ ಎಖಲಾಸಖಾನ, ದೌಲತ್ ಖಾನರು ಮತ್ತು ಅನೇಕ ಸರದಾರರು ತಮ್ಮ ಸೈನ್ಯದೊಂದಿಗೆ ಕಿಶ್ವರಖಾನನ್ನು ಸದೆಬಡಿಯಲು ವಿಜಾಪುರದ ಕಡೆಗೆ ಹೊರಟರು. ಈ ಸುದ್ದಿ ಕಿಶ್ವರಖಾನನಿಗೆ ತಿಳಿಯಿತು. ಭಯಬೀತನಾಗಿ, ಗಾಬರಿಯಾಗಿ ಮಗನ ಹಾಗೂ ಸಹೋದರನ ಬಿಡುಗಡೆಯ ವಿಚಾರದಲ್ಲಿ ಬಿದ್ದನು. ಅವನ ಹತ್ತಿರ ಇದ್ದ ಜನರು ಇದನ್ನೂ ಹೇಳಿದ್ದರು. "ಸರದಾರರು ಮತ್ತು ಸೇವಕರು ಈಕೆಲಸ ಮಾಡಿದ್ದಾರೆ. ಅದರಲ್ಲಿ ನಿಮ್ಮ ಮಗ ಮತ್ತು ಬಂಧುವನ್ನು ಹಿಡಿದು ಬಂಧಿಸಿದ್ದಾರೆ. ಈ ಕೆಲಸ ಅಫಜಲಖಾನನ ಮಸಲತ್ತಿನ ಹೊರತು ಆಗಲು ಸಾಧ್ಯವಿಲ್ಲವೆಂದು ಮೇಲೆಯೇ ಕಾಣುತ್ತದೆ. ಆದ್ದರಿಂದ ಅಫಜಲಖಾನನ ಬಂಧು ರಫೀಯುದ್ದೀನ ಇಲ್ಲಿಯೇ ಇದ್ದಾನೆ. ಅವನನ್ನು ಹಿಡಿದು ಬಂಧಿಸಬೇಕು. ಅಂದರೆ ನಿಮ್ಮ ಬಂಧುವನ್ನು ಮತ್ತು ಮಗನನ್ನು ಬಿಡುತ್ತಾರೆ." ಎಂದರು. ಆಗ ಕಿಶ್ವರಖಾನನು ರಫೀಯುದ್ದೀನನನ್ನು ಹಿಡಿದು ಬಂಧಿಸಲು ಹೇಳಿ ಕಳಿಸಿದನು.

ಇನ್ನು ಕೆಲವರು ಬೇರೆ ಸಲಹೆಯನ್ನು ಕೊಟ್ಟರು. "ಈ ಸಮಯದಲ್ಲಿ ಅಫಜಲಖಾನನ ಬಂಧುವಾದ ರಫೀಯುದ್ದೀನನನ್ನು ಹಿಡಿದು ಬಂಧಿಸುವುದು ಯೋಗ್ಯವಲ್ಲ. ನಿಮಗೆ ಗೊತ್ತಿದ್ದಂತೆ ಅಫಜಲಖಾನನು ಬಹಳ ಸೈನ್ಯದೊಂದಿಗೆ ಇದಕ್ಕಾಗಿ ಸರಹದ್ದಿನಲ್ಲಿ ಬಂದು ಕುಳಿತಿದ್ದಾನೆ. ಈಗ ಆತನ ಬಂಧು ರಫೀಯುದ್ದೀನನನ್ನು ಹಿಡಿದು ಬಂಧನದಲ್ಲಿಟ್ಟಿದ್ದಾರೆ ಎಂಬ ಸುದ್ದಿಯನ್ನು ಕೇಳಿದರೆ, ತಕ್ಷಣ ಆತನು ಏನೊಂದನ್ನು ವಿಚಾರಿಸಿದೆ, ನಿಮ್ಮ ಮೇಲೆ ಏರಿ ಬರುತ್ತಾನೆ. ಸದ್ಯ ನಿಮ್ಮ ಸೈನ್ಯ ಸಿದ್ಧತೆ ಅಷ್ಟೊಂದಿಲ್ಲ. ಅವನನ್ನು ಎದುರಿಸುವುದು ಸಾಧ್ಯವಿಲ್ಲ. ನಗರದ ಜನರು ನಿಮ್ಮ ಬಗ್ಗೆ ಬೇಸತ್ತಿದ್ದಾರೆ. ಆ ಜನ ಎಂದೂ ನಿಮ್ಮೊಂದಿಗೆ ಸೇರುವುದಿಲ್ಲ. ಆಗ ಕಠಿಣ ಪ್ರಸಂಗವನ್ನು ಎದುರಿಸಬೇಕಾಗುತ್ತದೆ. ಅದಕ್ಕಿಂತ ಬೇರೊಂದು ಉಪಾಯವನ್ನು ಯೋಚಿಸುವುದು ಯುಕ್ತವೆಂದು ಕಾಣುತ್ತದೆ. ಅಫಜಲಖಾನನ ಬಂಧು, ರಫೀಯುದ್ದೀನನನ್ನು ಕರೆಸಿ ಆತನ ಚಿತ್ತ ಸಮಾಧಾನವನ್ನು ಮಾಡಬೇಕು. ಆತನನ್ನು ನಾನಾ ರೀತಿಯಿಂದ ಉಪಚರಿಸಿ ಆತನು ನಿಮ್ಮ ಶತ್ರುವಿನೊಂದಿಗೆ ಸಖ್ಯತನವನ್ನು ಮಾಡದಂತೆ ಆತನಿಂದ ಪ್ರತಿಜ್ಞೆಯನ್ನು ಮಾಡಿಸಬೇಕು." ಎಂದರು. ಕಿಶ್ವರಖಾನನಿಗೆ ಈ ಸಲಹೆ ಸರಿ ಎನಿಸಿತು. ಅದರಂತೆ ರಫೀಯುದ್ದೀನನನ್ನು ಕರೆದುಕೊಂಡು ಬಂದರು. ಆತನಿಗೆ ಎಲ್ಲಾ ವಿಷಯವನ್ನು ಹೇಳಿ, "ನಮಗೆ ಈ ರಾಜಧಾನಿಯಲ್ಲಿ ನಿಮ್ಮನ್ನು ಬಿಟ್ಟು ಬೇರೆ ಯಾರೂ ಇಲ್ಲ. ನಾವು ನಿರಾಶ್ರಿತರಾಗಿದ್ದೇವೆ. ಆದ್ದರಿಂದ ತಮ್ಮಿಂದ ಈ ವಿಷಯದಲ್ಲಿ ವಚನ ಹಾಗೂ ಕೆಲಸ ಗಳನ್ನು ಇಚ್ಛಿಸಿದ್ದೇವೆ. ನಮ್ಮ ಸಂಕಟದ ಈ ವೇಳೆಯಲ್ಲಿ ಶತ್ರು ಗುಂಪಿನ ಯಾರೊಬ್ಬರ ಕೂಡ ತಾವು ಸೇರಿ ಸಹಾಯ ಮಾಡಬಾರದು" ಎಂದನು. ರಫೀಯುದ್ದೀನನು ಪ್ರಸಂಗಾನುಸಾರವಾಗಿ ಮತ್ತು ಸಮಯವನ್ನು ಗುರುತಿಸಿ ಅನೇಕ ಪ್ರತಿಜ್ಞೆಗಳನ್ನು ಮಾಡಿದನು. ರಫೀಯುದ್ದೀನನ ಶಪಥದಿಂದಾಗಿ ಆತನ ಅಣ್ಣ ಅಫಜಲಖಾನನು ತನ್ನ ಶಕ್ತಿ ಇರುವವರೆಗೆ ಒಂದು ಹೆಜ್ಜೆಯನ್ನೂ ಮುಂದೆ ಇಡಲಿಲ್ಲ.

ಅದರ ಫಲಿತಾಂಶವೆಂದರೆ, ಯಖಲಾಸಖಾನನು ತನ್ನ ಸೈನ್ಯದೊಂದಿಗೆ ಕಿಶ್ವರಖಾನನ್ನು ಕೊಲ್ಲಲು ವಿಜಾಪುರದ ಸಮ್ಮುಖದಲ್ಲಿ ಬಂದು ಮುಟ್ಟಿದನು. ಕಿಶ್ವರಖಾನನು ತನ್ನ ಮರ್ಯಾದೆಗೋಸ್ಕರ ಹಾಗೂ ದೊಡ್ಡಸ್ತಿಕೆಯನ್ನು ಉಳಿಸಿಕೊಳ್ಳಲು ಮೊದಲು ಅವನನ್ನು ಎದುರಿಸಲು ಬಂದನಾದರೂ ಯಖಲಾಸಖಾನನ ಮುಂದೆ ತನ್ನ ಆಟ ನಡೆಯದೆಂದು ತಿಳಿದಿದ್ದನು. ಆದ್ದರಿಂದ ಧೈರ್ಯಮಾಡಿ ಬಹಳಷ್ಟು ಸಂಪತ್ತನ್ನು ತೆಗೆದುಕೊಂಡು ಆಭರಣೇತ್ಯಾದಿಗಳು ತುಂಬಿದ ಎರಡು -ಮೂರು ಪೆಟ್ಟಿಗೆಗಳ ಸಹಿತವಾಗಿ, ಮುಸ್ತಫಾಖಾನ ಮತ್ತು ಕಾಮಿಲಖಾನರೊಂದಿಗೆ, ದಾರಿ ಬಿಟ್ಟು ಬೇರೆ ಮಾರ್ಗದಿಂದ ನಿಜಾಮಶಹನ ರಾಜ್ಯಕ್ಕೆ ಓಡಿ ಹೋದನು. ಕಿಶ್ವರಖಾನನು ಬರುವ ಮೊದಲೆ ಅಹ್ಮದನಗರದ ಎಲ್ಲ ಸಣ್ಣ -ದೊಡ್ಡವರು ಆತನ ದುರ್ನಡತೆಯ ವಿಷಯ ಕೇಳಿ ಬಲ್ಲವರಾಗಿದ್ದರು. ಅಲ್ಲಿರಲಾರದೆ ಕಿಶ್ವರಖಾನನು ಕುತುಬಶಾಹನ ರಾಜ್ಯಕ್ಕೆ ಹೋದನು. ಅಲ್ಲಿಯೂ ಈ ಅಪಕೀರ್ತಿಯ ಪ್ರಸದ್ಧಿಯಿಂದಾಗಿ ಬಾದಶಹನ ಹತ್ತಿರ ಹೋಗುವುದು ಆಗಲಿಲ್ಲ. ಅಲ್ಲಿ ಮುಸ್ತಫಾಖಾನನ ಕಡೆಯ ಆರ್ದಸ್ತಾನಿ ಮನುಷ್ಯನೊಬ್ಬನಿದ್ದನು. ಆತನು ಕಿಶ್ವರಖಾನನ ಮೇಲೆ ತಲವಾರಿನಿಂದ ಹೊಡೆದನು. ಆ ಹೊಡೆತದಿಂದ ತಲೆಯಿಂದ - ಕಾಲಿನವರೆಗೆ ಎರಡು ಭಾಗವಾಗಿ ಸತ್ತನು. ಕೆಟ್ಟ ಕೆಲಸಕ್ಕೆ ಸರಿಯಾದ ಫಲ ಸಿಗದವರು ಯಾರಿದ್ದಾರೆ? ಎಂಬ ಮಾತು ಸತ್ಯ, ಕಿಶ್ವರಖಾನನು ನಾಲ್ಕು ತಿಂಗಳು ಹನ್ನೆರಡು ದಿನ (ಪ್ರಧಾನ ಮಂತ್ರಿ) ಸರ್ವಾಧಿಕಾರಿಯಾಗಿದ್ದನು.

### *೮. ಆದಿಲಶಾಹಿ ರಾಜ್ಯದ ಕಾರಭಾರವು ಯೆಖಲಾಸಖಾನನ ಕೈವಶ ಹಾಗೂ ಆತನು ಪ್ರಬಲನಾದುದು.*

ಕಿಶ್ವರಖಾನನು ಓಡಿ ಹೋದ ವರ್ತಮಾನವನ್ನು ಕೇಳಿ ಯಖಲಾಸಖಾನ ಹಾಗೂ ಇತರ

ಹಬಶೀ ಮತ್ತು ದಖಣೀ ಸರದಾರರು ಪೂರ್ಣ ಭರವಸೆಯಿಂದ ವಿಜಾಪುರಕ್ಕೆ ಬಂದು ಇಬ್ರಾಹಿಮ ಆದಿಲಶಹನ ಸೇವೆಗೆ ಹಾಜರಾದರು. ಪ್ರತಿಯೊಬ್ಬ ಸರದಾರರೂ ತಂತಮ್ಮ ಯೋಗ್ಯತೆಗನುಗುಣವಾಗಿ ಭಾರೀ ಕಿಮ್ಮತ್ತಿನ ಪೋಷಾಖುಗಳನ್ನು , ಪದಾಧಿಕಾರಿಗಳನ್ನು ಪಡೆದನು. ಯಖಲಾಸಖಾನನಿಗೆ ವಕೀಲಿ ಪದವಿ ದೊರೆತು ಆತನು ಮಾಲೀ ಮತ್ತು ಮುಲಕೀ ಕೆಲಸಗಳ ಹೊಣೆಯನ್ನು ಕೈಯಲ್ಲಿ ತೆಗೆದುಕೊಂಡನು. ಯಖಲಾಸಖಾನನು ಬಾದಶಹನಲ್ಲಿ ವಿನಂತಿ ಮಾಡಿ ಕೊಳ್ಳುತ್ತ, "ಕಿಶ್ವರಖಾನನ ಆಪ್ತರು, ಮತ್ತು ಆತನ ಜನರು ಬೇರೆ ಬೇರೆ ಕೋಟೆ ಹಾಗೂ ಗ್ರಾಮಗಳಲ್ಲಿ ಇದ್ದಾರೆ. ಆಜ್ಞೆಯಾದರೆ ಅವರನ್ನು ಕೆಲಸದಿಂದ ತೆಗೆದು ಹಾಕಿ ಬೇರೆ ಜನರನ್ನು ನಾವು ಕೆಲಸಕ್ಕೆ ಕಳಿಸುತ್ತೇವೆ" ಎಂದನು. ಅದಕ್ಕೆ ಉತ್ತರವಾಗಿ ಬಾದಶಹನು "ಅಫಜಲಖಾನನ ಬಂಧು ರಫೀಯುದ್ದೀನನ ವಿಷಯದಲ್ಲಿ ಪ್ರಸಂಗಾನುಸಾರವಾಗಿ ನಡೆದುಕೊಳ್ಳಿರಿ." ಎಂದು ಆಜ್ಞೆ ಮಾಡಿದನು. ಅದೇ ವೇಳೆಯಲ್ಲಿ ಸಾತಾರೆಯ ಕೋಟೆಯಲ್ಲಿಂದ ಚಾಂದಬೀಬಿ ಸುಲ್ತಾನಾಳನ್ನು ಕರೆತರುವ ವಿಷಯದಲ್ಲೂ ಆಜ್ಞೆ ಮಾಡಿದನು. ಅದರಂತೆ ಚಾಂದಬೀಬಿ ಸುಲ್ತಾನಳು ವಿಜಾಪುರಕ್ಕೆ ಬಂದು ಮುಟ್ಟಿದಳು. ಆಗ ಯಖಲಾಸಖಾನನು ಮೊದಲಿನಂತೆ ಬಾದಶಹನ ಪಾಲನ -ಪೋಷಣೆಯನ್ನು ಚಾಂದಬೀಬಿಗೆ ವಹಿಸಿದನು. ಸರಕಾರದ ಮೋಹರು (ಸಿಕ್ಕಾ) ಕಿಶ್ವರಖಾನನ ಜೊತೆಗೆಯೇ ಹೋಗಿತ್ತು. ಆದ್ದರಿಂದ ಮೊಹರನ್ನು ತರುವ ಬಗ್ಗೆ ವಿಚಾರದಲ್ಲಿ ಬಿದ್ದರು. ಆಗ ರಫೀಯುದ್ದೀನನು ವಿನಂತಿಮಾಡಿ ಕೊಳ್ಳುತ್ತ "ಕಲಯಮಗ(?)" ಕಲ್ಲಿನ ಮೋಹರೊಂದು ಇದೆ. ಅದರ ಮೇಲೆ 'ಅಸದುಲ್ಲಾಹ ಅಲ್ ಗಾಲಬ ಆಲಿಹಿ ಸನ ಅಲೀತಾಲಬ' ಎಂಬ ಅಕ್ಷರಗಳಿವೆ. ಆ ಮೋಹರು ದಿವಂಗತ ಬಾದಶಹರ ಬೆರಳಿನಲ್ಲಿತ್ತು. ಯಾವಾಗಲೊಮ್ಮೆ ಸರಕಾರದ ಆಜ್ಞಾಪತ್ರಗಳ ಮೇಲೆ ಆ ಮೊಹರಿನಿಂದಲೇ ಸಿಕ್ಕಾವನ್ನು ಹಾಕುತ್ತಿದ್ದರು. ಸದ್ಯ ಅದು ಸರಕಾರದ ಭಂಡಾರದಲ್ಲಿದೆ" ಎಂದು ವಿನಂತಿ ಮಾಡಿಕೊಂಡನು. ಆ ಮೊಹರನ್ನು ಭಂಡಾರದಿಂದ ತರಬೇಕು ಎಂದು ಆಜ್ಞೆಯಾಯಿತು. ಅದರಂತೆ ರಫೀಯುದ್ದೀನನು ಅದನ್ನು ತಂದು ಬಾದಶಹರಿಗೆ ಸಲ್ಲಿಸಿದನು. ಆಗ ಬಾದಶಹನು ಅದೇ ಮೊಹರನ್ನು ಉಪಯೋಗಿಸಲು ಆಜ್ಞೆಮಾಡಿದನು. ಬಹಳಷ್ಟು ದಿನ ಅದೇ ಮೊಹರು ಚಾಲ್ತಿಯಲ್ಲಿತ್ತು. ಕಿಶ್ವರಖಾನನು ಗೋವಳಕೊಂಡದಲ್ಲಿ ಸತ್ತಾಗ, ಕಿಶ್ವರಖಾನನ ಸೇವಕನೊಬ್ಬನು ಆ ಮೊಹರನ್ನು ಗೋವಳಕುಂಡದಿಂದ ತಂದು ವಿಜಾಪುರದಲ್ಲಿ ಹಾಜರು ಪಡಿಸಿದನು. ಅಂದಿನಿಂದ ಆ ಮೊಹರು ಚಾಲ್ತಿಯಲ್ಲಿ ಬಂದಿತು.

ಯಖಲಾಸಖಾನನು ಪ್ರತಿನಿತ್ಯ ಸರಕಾರದ ವಾಡೆಗೆ ಬರುತ್ತಿದ್ದನು. ಮಾಲೀ ಮತ್ತು ಮುಲಕೀ ಕೆಲಸಗಳನ್ನು ಮಾಡುತ್ತಿದ್ದನು. ಸೇವಕ ಜನರಿಂದ ಕೋಟೆಯ ಹಾಗೂ ರಾಜ್ಯದ ವ್ಯವಸ್ಥೆಯನ್ನು ಮಾಡಿ, ಅವುಗಳನ್ನು ರಕ್ಷಿಸುತ್ತಿದ್ದನು. ಮೂಲತಃ ಯಖಲಾಸಖಾನನು ನೀಚ ಮನುಷ್ಯನಾಗಿದ್ದನು. ಆದ್ದರಿಂದ ಆತನು ಕಿಶ್ವರಖಾನನ ಸಂಬಂಧಿಗಳನ್ನು, ಅವನ ಜನರನ್ನು ಪೀಡಿಸಹತ್ತಿದನು. ಕಿಶ್ವರಖಾನನು ತನ್ನ ಕಡೆಯ ಸೇವಕಜನರಲ್ಲಿಯ ಒಬ್ಬ ಸೇವಕ ಹಬಶೀ ಜಾತಿಯ ಯಾಕುತಖಾನನೆಂಬ ವಿಶ್ವಾಸಿಕನನ್ನು ಬಾದರಹರ ನೌಕರಿಯಲ್ಲಿ ನಿಯಮಿಸಿದ್ದನು. ಆ ಸೇವಕನನ್ನು ಹಿಡಿದು ಯಖಲಾಸಖಾನನು ಆತನ ಶರೀರವನ್ನು ತುಂಡು ತುಂಡು ಮಾಡಿ, ಒಂದೊಂದು ತುಂಡನ್ನು ನಗರದ ಕೋಟೆಯ ಬಾಗಿಲಿಗೆ ತೂಗು ಹಾಕಿದನು. ಅದರಂತೆ ಕಿಶ್ವರಖಾನನು ಬೆಳೆಸಿ-ಪಾಲಿಸಿದ ವ್ಯಕ್ತಿಗಳನ್ನೆಲ್ಲ ಹಿಡಿದು ಕೊಲೆ ಮಾಡಿದನು. ಕಿಶ್ವರಖಾನನ ಹೆಂಡತಿ-ಮಕ್ಕಳು, ತಾಯಿ ಮತ್ತು ಆತನ ಸೇವಕಜನರನ್ನು ಹಿಡಿಯುವ ಯೋಜನೆ ಹಾಕಿ, ಹೆಂಡತಿ ಮಕ್ಕಳನ್ನು ಮತ್ತು ತಾಯಿಯನ್ನು ಹಲಾಲ ಕೋರ ಚಮ್ಮಾರ ಇತ್ಯಾದಿ ನೀಚ ಜಾತಿಯ ಜನರಿಗೆ ಕೊಟ್ಟುಬಿಡಬೇಕೆಂದು ನಿರ್ಧರಿಸಿದ್ದನು. ಅದರಂತೆ ಆ ಜನರನ್ನು ಕರೆದು ಆಜ್ಞೆಮಾಡಿದನು. "ಕಿಶ್ವರಖಾನ

ಹೆಂಡತಿ ಮಕ್ಕಳು ಕೋಟೆಯಲ್ಲಿದ್ದಾರೆ. ಅವರನ್ನು ತಂದು ಈ ಹಲಾಲಖೋರ ಮಂಡಳಿಗೆ ಕೊಡಬೇಕು. ಯಾಕೆಂದರೆ, ಕಿಶ್ವರಖಾನನು ಮಹಾರಾಣಿಯವರ ಸೇವೆಯಲ್ಲಿದ್ದು, ಸ್ತ್ರೀಯರನ್ನೆಲ್ಲ ಹಿಡಿದು ಒಬ್ಬೊಬ್ಬ ವ್ಯಕ್ತಿಗೆ ಕೊಟ್ಟು ಬಿಟ್ಟಿದ್ದನು" ಎಂದನು. ತನ್ನ ಆಜ್ಞೆಯನ್ನು ಪಾಲಿಸಲು ತನ್ನವರಿಗೆ ಆಗಾಗ್ಗೆ ತಾಕೀದು ಮಾಡುತ್ತಿದ್ದನು. ಪ್ರತಿಸಲವೂ ಆಗ್ರಹದ ಪ್ರಚೋದನೆಯನ್ನು ಮಾಡುತ್ತಿದ್ದನು. ಆ ಸಮಯದಲ್ಲಿ ಆತನ ಮಾತಿಗೆ ಮತ್ತು ಕೃತಿಗೆ ವಿರೋಧವಾಗಿ ಮಾತನಾಡುವವರು ಯಾರೂ ಇರಲಿಲ್ಲ. ಆದರೆ ಮೀರ ರಫೀಯುದ್ದೀನನು ಅಲ್ಲಾನ ಸನ್ನಿಧಾನ ಪ್ರಾಪ್ತಿಗಾಗಿ ಯಖಲಾಸಖಾನನ ಮಾತುಗಳಿಗೆ ಮತ್ತು ಕಾರ್ಯಗಳಿಗೆ ಅಡ್ಡಿಯುಂಟುಮಾಡಲು ಸಿದ್ಧನಾದನು. ಆತನ ಕೆಲಸಕ್ಕೆ ಅಡ್ಡಿಯಾಗುವಂತೆ ಮಾತನಾಡಿದನು. ಕಿಶ್ವರಖಾನನು ಅಮಾರ್ಗ ವರ್ತನೆಯಿಂದ ರಾಣೀವಾಸದ ಸೇವಿಕೆಯರನ್ನು ಕುಣಬೀ ಸ್ತ್ರೀಯರನ್ನು ಹಿಡಿದು ತಂದರೂಕೂಡ, ಅವರನ್ನು ಅಸ್ಸಲ ಜಾತಿಯ ಜನರಿಗೆ ವಿತರಿಸಿದನು. ಆ ಜನರು ಶಾಸ್ತ್ರಪ್ರಮಾಣದಂತೆ ಆ ಜನರನ್ನು ಪಾಲನೆ ಮಾಡಿದರು. ಇಂಥ ವರ್ತನೆಯಿಂದ ಕಿಶ್ವರಖಾನನು ವಿಶ್ವದಲ್ಲಿ ಅಪಕೀರ್ತಿಯನ್ನು ಪಡೆದಿದ್ದಾನೆ, ಎಲ್ಲರೂ ಆತನನ್ನು ದೂಷಿಸಿದ್ದಾರೆ.

ಈ ಕೆಟ್ಟ ವರ್ತನೆಯಿಂದಾಗಿ ಕಿಶ್ವರಖಾನನು ಕೊಲೆಯಾಗಿದ್ದಾನೆ. ಹಿರಿಯ ಕಿಶ್ವರಖಾನನ ಸ್ತ್ರೀಯು ಈ ರಾಜ್ಯದ ಸಂರಕ್ಷಣೆಗಾಗಿ ತನ್ನ ಜೀವವನ್ನೆ ನಿವಾಳಿಸಿ ಒಗೆದಿದ್ದಾಳೆ. ಜೀವದಾರಭ್ಯ ಶ್ರಮ ವಹಿಸಿದ್ದಾಳೆ ಅವರಂತೆ ಕಿರಿಯ ಕಿಶ್ವರಖಾನನ ಹೆಂಡತಿಯು ಕೂಡ ದುಡಿದಿದ್ದಾಳೆ. ಅಂಥ ದೊಡ್ಡ ಹಾಗೂ ಕುಲೀನ ಮನೆತನದ ಹೆಣ್ಣು ಮಕ್ಕಳನ್ನು ತಾವು ಚಮ್ಮಾರರು, ಹಲಾಲಖೋರರಿಗೆ ಕೊಡುತ್ತಿದ್ದೀರಿ. ಮನದಲ್ಲೆ ತುಸು ಯೋಚಿಸಿರಿ. ಇದರಿಂದ ಯಾರಿಗೆ ಅಪಕೀರ್ತಿ ಬರುತ್ತದೆ? ಎಂದು ಹೇಳಿದನು. ರಫೀಯುದ್ದೀನನ ಮಾತುಗಳಿಂದ ಯಖಲಾಸಖಾನನು ಸಂತಪ್ತನಾಗಿ 'ಕಿರಿಯ ಕಿಶ್ವರಖಾನನು ಕೃತಘ್ನನಾಗಿದ್ದನು. ರಾಜ್ಯದ ಕೇಡುಬಯಸುತ್ತಿದ್ದನು. ಅದಕ್ಕಾಗಿ ಅವನಿಗೆ ಹೆಚ್ಚಿನ ಶಿಕ್ಷೆಯ ಅಗತ್ಯವಿದೆ' ಎಂದನು. ಆಗ ರಫೀಯುದ್ದೀನನು 'ಕಿಶ್ವರಖಾನನು ಮಾಡಿದ ಕರ್ಮಕ್ಕೆ ಫಲವನ್ನು ಪಡೆದಿದ್ದಾನೆ ಆದರೆ ಕಿಶ್ವರಖಾನನ ಹೆಂಡತಿ ಮಕ್ಕಳು ಯಾವ ಅಪರಾಧ ಮಾಡಿದ್ದಾರೆ? ತುಸುವಾದರೂ ಅಲ್ಲಾನ ಭಯವನ್ನು ಹಿಡಿಯಿರಿ. ಅಲ್ಲಾನ ಸೇವಕರ ಮರ್ಯಾದೆ ಮತ್ತು ಗೌರವಗಳನ್ನು ಕಾಪಾಡಿರಿ' ಎಂದು ಬಹಳಷ್ಟು ಮಾತುಗಳಾದ ನಂತರ ಅಷ್ಟಕ್ಕೆಯೇ ಬಿಡಲಾಯಿತು. ರಾತ್ರಿಯೆ ಅರಮನೆಯ ಸೇವಕರಿಗೆ ತಾಕೀದು ಮಾಡಿ, ನಸುಕಿನಲ್ಲಿ ನೀಚಜಾತಿಯವರನ್ನು ಮತ್ತು ಕಿಶ್ವರಖಾನನ ಹೆಂಡಿರನ್ನು ಕರೆತರಲು ಹೇಳಿದನು. ಯಾಕೆಂದರೆ ಸಭೆಯಲ್ಲಿ ಜನರು ಸೇರುವ ಮೊದಲೆ ಆತನ ಹೆಂಡಂದಿರನ್ನು ನೀಚ ಜಾತಿಯ ಜನರಿಗೆ ಕೊಟ್ಟು ಬಿಟ್ಟರೆ ಇಂಥ ಅಡ್ಡಿ-ಅಡಚಣೆಗಳು-ಬರುವುದಿಲ್ಲವೆಂದು ಯೋಚಿಸಿದನು.

ಈ ವಿಷಯ ರಫೀಯುದ್ದೀನನಿಗೆ ಗೊತ್ತಾದಾಗ ಆತ ಇಡೀ ರಾತ್ರಿ ಜಾಗರಣೆಯಲ್ಲಿ ಕಳೆದನು. ನಸುಕಿನಲ್ಲಿ ಯಖಲಾಸಖಾನನು ಬಂದು ಮುಟ್ಟುವ ಮೊದಲೆ ಅರಮನೆಯ ಕೋಟೆಯಲ್ಲಿ ಬಂದಿದ್ದನು. ಕಚೇರಿಯಲ್ಲಿ ಹಾಜರಾಗಿದ್ದನು. ಯಖಲಾಖಾನನು ಬಂದು ಕಚೇರಿಯ ದಿವಾಣಖಾನೆಯಲ್ಲಿ ಪ್ರವೇಶಿಸಿದಾಗ ರಫೀಯುದ್ದೀನನು ಮೊದಲೆ ಬಂದು ಕುಳಿತಿದ್ದನ್ನು ಕಂಡು ಆತನ ಚಹರೆ ಜರ್‍ರನೆ ಇಳಿಯಿತು. ಯಖಲಾಸಖಾನನ ಮುಖದ ಮೇಲೆ ಕ್ರೋಧದ ಲಕ್ಷಣಗಳು ಪ್ರಕಟವಾದವು. ಆಗ ಸಿಟ್ಟಿಗೆದ್ದು ತನ್ನ ಸೇವಕರನ್ನು ಕರೆದು "ಕಿಶ್ವರಖಾನನ ಹೆಂಡಂದಿರನ್ನು ಕರೆದುಕೊಂಡು ಬನ್ನಿರಿ ಮತ್ತು ಹಲಾಲಖೋರ ಮೊದಲಾದ ನೀಚ ಜಾತಿಯ ಜನರನ್ನು ತಂದು ಹಾಜರು ಮಾಡಿರಿ. ಆ ಸ್ತ್ರೀಯನ್ನು ನೀಚ ಜಾತಿಯ

ಜನರಿಗೆ ಕೊಟ್ಟು ಬಿಡೋಣ" ಎಂದನು. ಆಗ ಮತ್ತೆ ರಫೀಯುದ್ದೀನನು ಆತನ ಯುಕ್ತಿಗೆ ಪ್ರತಿಬಂಧಕನಾಗಿ ಮುಂದೆ ಬಂದು ಹೇಳಿದನು. "ಅಲ್ಲಾನ ಆಣೆಯಾಗಿದೆ. ಈ ನಿಮ್ಮ ನಡತೆ ನನಗೆ ಸರಿ ಕಾಣುವುದಿಲ್ಲ. ನಿಮಗೆ ಈ ಕೆಲಸ ಯೋಗ್ಯವೆಂದು ನನಗೆ ಅನಿಸುವುದಿಲ್ಲ. ಈ ಕೆಲಸಕ್ಕೆ ನಾನು ಎಂದೂ ಅನುಮೋದಿಸುವುದಿಲ್ಲ. ಈ ಕೆಲಸ ಮಾಡಿದರೆ ನಿಮಗೆ ಅಲ್ಲಾನ ಹಾಗು ಪೈಗಂಬರರ ಆಣೆಯಾಗಿದೆ. ನೀವು ಮನಸ್ಸಿನಲ್ಲಿ ಸಂಕಲ್ಪ ಮಾಡಿದ್ದನ್ನು ಬಿಟ್ಟು ಬಿಡಬೇಕು" ಎಂದನು. ಆದರೆ ಯಖಲಾಸಖಾನನು ಬಹಳ ಸೊಕ್ಕಿನವನು, ಗರ್ವಿಷ್ಠನೂ ಆಗ್ರಹಿಯೂ ಆಗಿದ್ದನು. ಆದ್ದರಿಂದ ರಫೀಯುದ್ದೀನನ ಕಡೆಯ ಒಬ್ಬ ಮನುಷ್ಯನು ರಫೀಯುದ್ದೀನನಿಗೆ ಹೇಳಿದನು. "ನೀವ್ಯಾಕೆ ಮಾತನಾಡುತ್ತೀರಿ? ಈ ಯಖಲಾಸಖಾನನು ಕೇವಲ ಪಿಶಾಚಿ, ಆತನಿಗೆ ಸೊಕ್ಕುತುಂಬಿ ಬಂದಿದೆ. ಯಾರ ಮಾತನ್ನು ಕೇಳುವುದಿಲ್ಲ. ಯಾರೂ ಆತನನ್ನು ನಂಬಲಾರರು. ನೀವ್ಯಾಕೆ ಸುಮ್ಮನೆ ಅಡ್ಡಿ ಮಾಡುತ್ತೀರಿ? ಯಖಲಾಸಖಾನನು ತನಗೆ ತೋಚಿದ್ದನ್ನು ಮಾಡಲಿ ಅದರ ಕರ್ಮಫಲ ಅವನಿಗೆ ಬಿಟ್ಟದ್ದು" ಎಂದನು ಅದಕ್ಕೆ ರಫೀಯುದ್ದೀನನು ಪ್ರತಿಯಾಗಿ "ಈಗ ಬಾದಶಹನ ದರಬಾರಿನಲ್ಲಿ ಪ್ರತಿಯೊಂದು ವಿಷಯಗಳ ಕುರಿತು ಬುದ್ದಿಯನ್ನು ಉಪಯೋಗಿಸುವಂಥ ಯಾವ ಮನುಷ್ಯನೂ ಇಲ್ಲ. ಆದ್ದರಿಂದ ನನಗೆ ಮಾತನಾಡಬೇಕಾಗಿದೆ. ಅದರಿಂದ ಗೌರವ -ಮರ್ಯಾದೆಗಳನ್ನು ರಕ್ಷಿಸಬೇಕಾಗಿದೆ. ಯಖಲಾಸಖಾನನು ನನ್ನ ಮೇಲೆ ಎಷ್ಟೇ ಸಿಟ್ಟಾದರೂ ನಾನು ಆತನ ಉಪಾಯ ಮಾಡಲಾರೆ. ಆದರೆ ಈ ಕೆಟ್ಟ ಕೆಲಸವನ್ನು ಮಾಡಲು ಬಿಡುವುದಿಲ್ಲ.' ಎಂದನು. ಈ ವಿಷಯದಲ್ಲಿ ಆತನು ಬಹಳ ಪ್ರಯತ್ನಮಾಡಿ, ದಂಗೆ ಮಾಡಿ ಯಖಲಾಸಖಾನನು ತನ್ನ ದುಷ್ಟಸಂಕಲ್ಪವನ್ನು ಈಡೇರಿಸದಂತೆ ಮಾಡಿದನು. ಅನಂತರ ರಫೀಯುದ್ದೀನನು ಕಿಶ್ವರಖಾನನ ಸ್ತ್ರೀಯರ ಜೊತೆಗೆ ಇಬ್ಬರು ಹಳೆಯ ಸೇವಿಕೆಯರನ್ನು ಕೊಟ್ಟು, ಅವರ ತಂದೆ ಹಾಗೂ ಬಂಧುಗಳ ಮನೆಗೆ ಕಳಿಸಿಕೊಟ್ಟನು. ಉಳಿದ ಸ್ತ್ರೀಯರನ್ನು ಬಾದಶಹರ ಮಾತೃಶ್ರೀ ಸಾಹೇಬರ ಅಂದರೆ ಚಾಂದಬೀಬಿಯ ನೌಕರಿಯಲ್ಲಿಟ್ಟನು. ಉಳಿದ ಅನೇಕ ವೃದ್ಧರನ್ನು ಅಶಕ್ತರನ್ನು ಬಿಡುಗಡೆಮಾಡಿದನು. ಹಿರಿಯ ಕಿಶ್ವರಖಾನನ ಕಿರಿಯ ಮಗ ಮಂಜಲಾಸಖಾನನು ಆತನ ಕಣ್ಣುಗಳನ್ನು ಕೀಳಲು ಆಜ್ಞೆಮಾಡಿದನು. ಆಗಲೂ ಕೂಡ ರಫೀಯುದ್ದೀನನು ಶತಾವಧಿಯತ್ನಗಳಿಂದ ಮಂಜುಖಾನನನ್ನು ಸಂಕಟದಿಂದ ಪಾರು ಮಾಡಿದನು.

ಇದೇ ಸಮಯದಲ್ಲಿ ಬಂಕಾಪುರದಲ್ಲಿ ಮುಸ್ತಫಾಖಾನನ ಸ್ಥಳದಲ್ಲಿ ಕಿಶ್ವರಖಾನನು ನಿಯಮಿಸಿದ್ದ ಅಮೀನಖಾನನ ಪತ್ರ ಬಂದಿತು. ಆತ ಮೊಗಲವಂಶದ ಅಬ್ದುಲ ಮೊಮೀನನಿಗೆ, ಅಮೀನಖಾನ ಎಂಬ ಬಿರುದನ್ನು ಕೊಟ್ಟಿತ್ತು. ಆ ಮೊಗಲನು ಕಿಶ್ವರಖಾನನಿಗೆ ಬರೆದ ಪತ್ರ ಅದಾಗಿತ್ತು. ಅದರಲ್ಲಿ ಹೀಗೆ ಬರೆಯಲಾಗಿತ್ತು. 'ಬಂಕಾಪುರದ ಕೆಲಸದಿಂದ ಮುಕ್ತನಾಗಿರುವೆ. ಸದ್ಯ ಬೆಳಗಾವಿ ಕೋಟೆಯ ಕಡೆಗೆ ಹೊರಟಿರುವೆ. ಅಲ್ಲಿಯ ಕೆಲಸವನ್ನು ಮಾಡಿ ಪನ್ಹಾಳದ ಕೋಟೆಯತ್ತ ಹೋಗುವೆನು.ಅಲ್ಲಿಯ ಕೆಲಸವನ್ನು ಆದಷ್ಟು ಬೇಗ ಮುಗಿಸಿ ತುಸುವೆ ದಿನಗಳಲ್ಲಿ ತಮ್ಮ ಸನ್ನಿಧಿಯಲ್ಲಿ ಬಂದು ಮುಟ್ಟುವೆನು' ಸರಕಾರದ ಜನರಿಗೆ ಈ ಗುಪ್ತ ಭಾಷೆಯ ಪತ್ರದ ಅರ್ಥ ಆಗಲಿಲ್ಲ. ಆಗ ಯಖಲಾಸಖಾನನು ಹೇಳಿದನು. ಅಮೀನ ಖಾನನು ಸೈನ್ಯ ಸಹಿತವಾಗ ಪ್ರತಿಯೊಂದು ಕೋಟೆಗೆ ಹೋಗುವೆನು ಎಂದು ಬರೆದದ್ದರಲ್ಲಿ ಕಾರಣ ಏನು? ಅಮೀನಖಾನನು ಕೆಲಸಗಳನ್ನೆಲ್ಲ ಮುಗಿಸಿರುವೆ. ಮುಗಿಸುತ್ತೇನೆ. ಕಿಶ್ವರಖಾನನು ಆತನಿಗೆ ಯಾವ ಕೆಲಸಗಳನ್ನು ಕೊಟ್ಟು ನಿಯಮಿಸಿದ್ದಾನೆ ಎಂದು ಬರೆದಿದ್ದಾನೆ, ಎಂದು ಕೇಳಿದನು. ಕಿಶ್ವರಖಾನನು ಅಮೀನಖಾನನಿಗೆ ಯಾವ ಕೆಲಸಗಳನ್ನು ಹೇಳಿದ್ದಾನೆ ಮತ್ತು ಏನು ಆಜ್ಞೆ ಮಾಡಿದ್ದಾನೋ ಎಂಬುದು ನನಗೆ ಗೊತ್ತಿಲ್ಲವಾದರೂ ಈ ಪತ್ರದ ಒಕ್ಕಣಿಕೆಯಿಂದ ತಿಳಿದು ಬರುವಂತೆ, ಅಮೀನಖಾನನನ್ನು ಆ

ನಗರಗಳ ಆಸು-ಪಾಸಿನಲ್ಲಿರುವ ಜನರನ್ನು ಕೊಲ್ಲಲು ನಿಯಮಿಸಿರಬೇಕು. ಅಂತೆಯೇ ಬಂಕಾಪುರದಲ್ಲಿ ಮುಸ್ತಫಾಖಾನನನ್ನು ಕೊಲೆ ಮಾಡಲಾಯಿತು. ಆದರೆ ಬೆಳಗಾವಿಯಲ್ಲಿ 'ಮುಸ್ತಫಾ ಬಂದ' ಎಂದು ಹೇಳಿದ್ದಾನೆ. ಆ ಬೆಳಗಾವಿಗೆ ಯಾಕೆ ಹೋಗುತ್ತಿರಬಹುದು ಎಂದರೆ, ಅಲ್ಲಿ ಶಾಹ ಅಬ್ದುಲ್ ಹಸನ್ ಮತ್ತು ಆತನ ಬಂಧು ಶಾಹ ರಫೀಯುದ್ದೀನರನ್ನು ಬಂಧಿಸಿ ಸೆರೆಮನೆಯಟ್ಟಿದ್ದಾರೆ. ಅವರನ್ನು ಕೊಲ್ಲಲು ನಿಯಮಿಸಿರಬಹುದು. ನಂತರ ಅಮೀನಖಾನನು ಪನ್ಹಾಳಾ ಕೋಟೆಗೆ ಹೋಗುತ್ತಾನೆ. ಅದಕ್ಕೆ ಕಾರಣವೆಂದರೆ, ಮುರ್ತಜಾಖಾನ ಅಂಜು ಮತ್ತು ಆತನ ಬಂಧು ಶಾಹ ಕಾಸಮನರನ್ನು ಅಲ್ಲಿ ಬಂಧಿಸಿಟ್ಟಿದ್ದಾರೆ. ಬಹುಶಃ ಅವರ ಜೀವವನ್ನೂ ತೆಗೆಯಲು ನಿಯಮಿಸಿರಬಹುದು ಎಂದು ರಫೀಯುದ್ದೀನ ಹೇಳಿದಾಗ, ಆತನ ಮಾತು ಸತ್ಯವೆಂದು ಒಪ್ಪಿಕೊಂಡರು. ಅಮೀನಖಾನನು ಕಿಶ್ವರಖಾನನ ಆಜ್ಞೆಯಂತೆ, ಮುಸ್ತಫಾಖಾನನನ್ನು ಕೊಂದು ತಿರುಗಿ ಬಂದು ಸೈನ್ಯದಲ್ಲಿ ಸೇರುವವನಿದ್ದನು. ಅದಕ್ಕೆ ಮೊದಲೆ ಮುಸ್ತಫಾಖಾನನನ್ನು ಹಿಂದು ಜನರ ಕೋಟೆಯೊಂದರಿಂದ ಹಿಡಿದುಕೊಂಡು ಬಂದು ಬಂಕಾಪುರದಲ್ಲಿ ಬಂಧಿಸಿಟ್ಟು ತಿರುಗಿ ವಿಜಾಪುರಕ್ಕೆ ಬಂದಿದ್ದನು. ಆಗ ಖುದಾವಂತ ಎಂಬ ಹಬಶೀ ಜಾತಿಯವನು ಆ ಸೈನ್ಯದ ಸೇನಾಪತಿ (ಸರಲಕ್ಷರ) ಆಗಿದ್ದನು. ಆ ಸೇನಾಪತಿಗೆ ಅಮೀನಖಾನನು ಮುಸ್ತಫಾಖಾನನನ್ನು ಕೊಂದು ಬಂದಿದ್ದಾನೆಂದು ತಿಳಿಯುತ್ತಲೆ ಖುದಾವಂತನು ಅಮೀನಖಾನನನ್ನು ಹಿಡಿದು ಕೊಂದು ಅವನ ಶರೀರವನ್ನು ತುಂಡು-ತುಂಡು ಮಾಡಿ ಕಾಗೆ - ಹದ್ದುಗಳಿಗೆ ಬಡಿಸಿದ್ದನು. ಯಖಲಾಸಖಾನನಿಗೆ ಈ ವಿಷಯ ತಿಳಿದಾಗ ಆತನು ಶಾಹ ಅಬ್ದುಲ ಹಸನ, ಶಾಹ ರಫೀಯುದ್ದೀನ ಹುಸೇನ ಮತ್ತು ಆತನ ಮಗ ಶಾಹ ತಾಹರ ಶೇಖ ಮುರ್ತಾಜಾಖಾನ ಅಂಜು ಮತ್ತು ಆತನ ಬಂಧು ಶಾಹ ಕಾಸಮರನ್ನು ತಿರುಗಿ ಕಳಿಸಲು ಬೆಳಗಾವಿ ಹಾಗೂ ಪನ್ಹಾಳಾಗಳಿಗೆ ಆಜ್ಞಾಪತ್ರಗಳನ್ನು ಕಳಿಸಿದನು. ಅವರು ಅತಿ ಶೀಘ್ರವಾಗಿ ಸುರಕ್ಷಿತವಾಗಿ ಸುಖರೂಪದಿಂದ ವಿಜಾಪುರಕ್ಕೆ ಬಂದು ಮುಟ್ಟಿದರು.

### *೯. ನಿಜಾಮಶಹನ ಸೋತ ಸೈನ್ಯವು ಮತ್ತೆ ಸೇರಿ ಅಫಜಲಖಾನನ ಮೇಲೆ ಏರಿ ಬಂದದ್ದು ಮತ್ತು ಅಫಜಲಖಾನನು ವಿಜಾಪುರಕ್ಕೆ ಹೋಗಲು ಹಿಂತಿರುಗಿದ್ದು.*

ಈ ಮೊದಲು ಕುತುಬಶಾಹ ಮತ್ತು ನಿಜಾಮಶಾಹರ ಸೈನ್ಯವನ್ನು ಹೊರಹಾಕಲು ಕಿಶ್ವರಖಾನನು ಸೈನ್ಯವನ್ನು ಸೇರಿಸಿ ಅಫಜಲಖಾನನ ಸೇನಾಪತ್ಯದಲ್ಲಿ ಕಳಿಸಿಕೊಟ್ಟಿದ್ದನು. ಅಫಜಲಖಾನನು ದೇವರ ಸಹಾಯದಿಂದ, ಯೋಗಾಯೋಗದಿಂದ, ಒಂಭತ್ತು ದಿನಗಳಲ್ಲಿ ಎರಡು ಸಲ ಶತ್ರುಗಳ ಮೇಲೆ ದಾಳಿ ಮಾಡಿ ವಿಜಯ ಸಂಪಾದಿಸಿದ್ದನು. ಅನಂತರ ಆದಿಲಶಹನ ಸೈನ್ಯವು ಚದುರಿ, ಕೆಲವು ಭಾಗ ಕಿಶ್ವರಖಾನನ ಹತ್ತಿರ ಬಂದಿತ್ತು. ಇನ್ನು ಕೆಲವು ಭಾಗ ಸೈನ್ಯವು ಕಿಶ್ವರಖಾನನ್ನೆ ಸದೆಬಡಿಯಲು ವಿಜಾಪುರದತ್ತ ಬಂದಿತ್ತು. ಮತ್ತೆ ಕೆಲ ಸೈನ್ಯ ಮುಸ್ತಫಾಖಾನನ ಕೆಲಸದ ಮೇಲೆ ಬಂಕಾಪುರದ ಕಡೆಗೆ ನಿಯಮಿಸಿತ್ತು. ಹೀಗಾಗಿ ಅಫಜಲಖಾನನ ಹತ್ತಿರ ತುಂಬ ಕಡಿಮೆ ಸೈನ್ಯವಿತ್ತು. ಅಂಥ ಸಮಯದಲ್ಲಿ ಸಂಧಿಯನ್ನು ಸಾಧಿಸಿ ಸೋತ ನಿಜಾಮ ಶಾಹನ ಸೈನ್ಯವು ಮತ್ತೆ ಸೇರಿಕೊಂಡು, ಆದಿಲಶಹನ ಮೇಲೆ ಏರಿ ಬಂದಿತು. ಆಗ ಆ ಸೈನ್ಯದ ಎದುರಿಗೆ ತನ್ನ ಸೈನ್ಯ ನಿಲ್ಲುವ ಧೈರ್ಯವಾಗದೆಂದು ತಿಳಿದು ಅಫಜಲಖಾನನು ವಿಜಾಪುರಕ್ಕೆ ಹಿಂತಿರುಗಿ ಬಂದನು.

### *೧೦. ಐನುಲ್ ಮುಲ್ಕನು ಹಬಶೀ ಜನರನ್ನು ಬಂಧಿಸಿ ಬೇಡಿಗಳನ್ನು ಹಾಕಿದ ಸಂಗತಿ.*

ಪ್ರಧಾನ ಮಂತ್ರಿ ಪದವಿಯನ್ನು ಯಾರಿಗೆ ಕೊಡಬೇಕೆಂಬುದು ಇನ್ನೂ ನಿರ್ಧಾರವಾಗಿರಲಿಲ್ಲ.

ದಖಣಿ ಜನರು ಮತ್ತು ಬೇರೆ ಸರದಾರರು ಐನುಲ್ ಮುಲ್ಕನಿಗೆ ಪ್ರಧಾನಿಪದವಿಯನ್ನು ಕೊಡಲು ಒಪ್ಪಿಕೊಂಡಿದ್ದರು. ನೌಕರರಲ್ಲಿ ತಮ್ಮೊಳಗಿನ ಒಬ್ಬನು ಪ್ರದಾನಿಯಾಗಬೇಕೆಂದು ಇಚ್ಛಿಸುತ್ತಿದ್ದರು. ಶಾಹ ಅಬ್ದುಲ್ ಹಸನ ಮತ್ತು ಮುರ್ತಜಾಖಾನ ಅಂಜು ಇವರುಗಳು ಸ್ವತಃ ತಮಗೆ ಪ್ರಧಾನಿಯಾಗಬೇಕೆಂದು ತುಂಬ ತೊಂದರೆ ಅನುಭವಿಸಿದ್ದರು. ಇದರಿಂದಾಗಿ ಈ ಕಾರಭಾರಿ ಜನರ ಮಧ್ಯ ಪ್ರಧಾನಿ ಪದವಿಗಾಗಿ ತಮ್ಮತಮ್ಮಲ್ಲೆ ಮುನಿಸಿಕೊಂಡಿದ್ದರು. ಎಲ್ಲರೂ ತಮ-ತಮಗೆ ಪ್ರಧಾನಿ ಪಟ್ಟ ದೊರೆಯಬೇಕೆಂದು ಮಾತನಾಡಿಕೊಳ್ಳುತ್ತಿದ್ದರು. ಈ ಕಾರಣಗಳಿಂದಾಗಿ ರಾಜ್ಯದ ಕಾರಭಾರಗಳು ಅನಿವಾರ್ಯವಾಗಿ ತ್ವರಿತವಾಗಿ ಜರುಗುತ್ತಿರಲಿಲ್ಲ. ಐನುಲ್ ಮುಲ್ಕನ ಹತ್ತಿರ ಎಲ್ಲ ಅಮೀರ ಸರದಾರ ಜನರು ಮತ್ತು ಕಾರಾಭಾರಿಗಳಿಗಿಂತ ಸೈನ್ಯದ ಸಿದ್ಧತೆ ಮತ್ತು ಸರಂಜಾಮುಗಳ ಪೂರ್ಣ ವ್ಯವಸ್ಥೆ ಇತ್ತು. ಆದ್ದರಿಂದ ಪ್ರತಿಯೊಬ್ಬ ಕಾಮದಾರ ಮತ್ತು ಕಾರಭಾರಿಗಳು ಪ್ರತಿನಿತ್ಯ ಐನುಲ್ ಮುಲ್ಕನ ಕಚೇರಿಯಲ್ಲಿ ಹಾಜರಿರುತ್ತಿದ್ದರು. ಸಂಧಿಯನ್ನು ಸಾಧಿಸಿ ಒಂದುದಿನ ಐನುಲ್ ಮುಲ್ಕನು, ಶ್ರೇಷ್ಠ ಸರದಾರರೂ ಮತ್ತು ರಾಜ್ಯದ ಉನ್ನತ ಅಧಿಕಾರವನ್ನು ಪಡೆದವರಾಗಿದ್ದು ಯಖಲಾಸಖಾನ, ಹಮೀದಖಾನ, ದಿಲಾವರಖಾನ ಹಬಶೀ ಮತ್ತು ಶಹರಾಬಖಾನ ತುರಕೀ ಈ ನಾಲ್ಕು ಜನರನ್ನು ಹಿಡಿದು ಬಂಧಿಸಿಟ್ಟನು. ಕಾಲಲ್ಲಿ ಬೇಡಿಗಳನ್ನು ಹಾಕಿದನು. ಉಳಿದ ಜನರ ಮೇಲೆ ಕಣ್ಣಿಟ್ಟನು. ಐನುಲ್ ಮುಲ್ಕನಿಗೆ ಈ ನಾಲ್ವರ ಬಗ್ಗೆ ಏನೋ ಭಯವಿತ್ತು. ಒಂದು ವೇಳೆ ಈ ಹಬಶಿ, ತುರ್ಕಿ ಮತ್ತು ಹಿಂದುಗಳನ್ನು ಸೇರಿಸಿದರೆ ಒಂದು ಸಾವಿರ ಜನರಾಗಬಹುದು. ಆದರೆ ಇವರೆಲ್ಲ ತರುಣರೂ ಶೂರರೂ ಧೈರ್ಯವಂತರೂ ಆಗಿದ್ದರಲ್ಲದೆ ಕುದುರೆಗಳನ್ನು ಸಿದ್ಧವಾಗಿಟ್ಟಿದ್ದರು. ಇವರೆಲ್ಲ ತಮ್ಮ ತಮ್ಮಲ್ಲಿ ಒಂದು ಮನಸ್ಸಿನವರಾಗಿ, ಒಂದೇ ವಿಚಾರದಿಂದ ನಡೆದುಕೊಳ್ಳುತ್ತಿದ್ದರು. ನಿರಂತರವಾಗಿ ರಾಜ್ಯದ ಕೆಲಸದಲ್ಲಿ ನಿಯಮಿತರಾಗಿದ್ದರು. ರಾಜ್ಯದ ಕೆಲಸಗಾರರೊಂದಿಗೆ ತುಂಬ ಸ್ನೇಹವನ್ನು ಇಟ್ಟುಕೊಂಡು ಬೆಳೆದಿದ್ದರು. ಇವರು ಅಗತ್ಯಬಿದ್ದಾಗ ಕರೆದರೆ, ಮೂರು ನಾಲ್ಕು ಸಾವಿರ ಜನರು, ಶೂರರು, ತರುಣರು, ಮತ್ತೆ ಅವರ ಅಂಕಿತದಲ್ಲಿಯ ಹತ್ತು ಹದಿನೈದು ಸಾವಿರ ಜನಕ್ಕಿಂತ ಅಧಿಕ ಜನರು ಸೇರುತ್ತಿದ್ದರು. ಆದ್ದರಿಂದ ಈ ಗುಂಪಿನ ಭಯದಿಂದಾಗಿ ಐನುಲ್ ಮುಲ್ಕನು ಮುಖ್ಯಸ್ಥರನ್ನೆಲ್ಲ ಬಂಧಿಸಿ ಪ್ರತಿಯೊಬ್ಬರನ್ನು ಕೋಟೆಯಲ್ಲಿ ಬಂಧಿಸಿ ಇಡಲು ಇಚ್ಛಿಸುತ್ತಿದ್ದನು. ಜನ ಪ್ರತಿನಿಧಿಗಳು ಇಲ್ಲದಿದ್ದರೆ ತಾನೆ ಆರಾಮವಾಗಿ ಶತ್ರುರಹಿತನಾಗಿ ಪ್ರಧಾನ ಪದವಿಯನ್ನು ಪಡೆದು ಪ್ರಬಲನಾಗಬಹುದು ಎಂಬುದು ಅವನ ಎಣಿಕೆಯಾಗಿತ್ತು.

### ೧೧. *ಮಕಸುದಖಾನನು ಐನುಲ್ ಮುಲ್ಕನ ಬಂಧನದಿಂದ ಹಬಶೀ ಜನರನ್ನು ಬಿಡಿಸಿ ಮತ್ತೆ ಕೆಲಸದ ಮೇಲೆ ಹಾಜರಾದದ್ದು.*

ಆದಿಲಶಹನ ಸೈನ್ಯ ಸೋತು ಚದುರಿದೆ ಮತ್ತು ಆದಿಲಶಹನ ರಾಜಧಾನಿಯಲ್ಲಿ ಯ ಕೆಲಸಗಳು ನಿಂತಿವೆ ಎಂದು ನಿಜಾಮ ಶಹನ ಜನರಿಗೆ ಗೊತ್ತಾದಾಗ, ಅವನ ಸೇನಾಪತಿ ಬೇಹಜಾದುಲ್ಮುಲ್ಕನು ತನ್ನ ಸೈನ್ಯವನ್ನು ಸಿದ್ಧಮಾಡಿಕೊಂಡನು. ಮಹಮ್ಮದ ಕುಲಿ ಕುತುಬ ಶಾಹನ ಸೈನ್ಯದೊಂದಿಗೆ ಆದಿಲಶಹನ ಸೈನ್ಯದ ಬೆನ್ನು ಹತ್ತಿದನು. ಕೋಟೆಯ ಹೊರಗಡೆ ಮುಟ್ಟಿದ ಸರದಾರರು ಕೋಟೆಯ ಒಳಗೆ ಬಂದರು. ಬಹಳ ಗದ್ದಲವಾಯಿತು. ಸೈನ್ಯ ಹಾಗೂ ಸರದಾರ ಜನರು ಬಂದು ಇಳಿದು ಕೊಳ್ಳಲು ಸ್ಥಳದ ವ್ಯವಸ್ಥೆ ಮಾಡಬೇಕೆಂದು ಅಫಜಲಖಾನನನ್ನು ಒಳಗೆ ಕಳಿಸಿದರು. ಆಗ ಐನುಲ್‌ಮುಲ್ಕ ಹಾಗೂ ಅಂಕುಶಖಾನರೂ ಒಳಗೆ ಬಂದು ದಾರಿಯನ್ನು ಮುಚ್ಚಿಬಿಟ್ಟರು. ನಾಲ್ಕು ಜನ ಅಮೀರ ಜನರು ಸಿಕ್ಕವರನ್ನು ಮೇಣೆಯಲ್ಲಿ

ಕುಳ್ಳಿರಿಸಿ ಸಮಕ್ಷಮ ಕರೆಸಿದರು. ಇಂಥ ಸಮಯದಲ್ಲಿ ಒಳಗಿನ ನೌಕರರು ಮೊದಲೆ ಹುಂಬತನದಿಂದ, ಮೋಸದಿಂದ ಸಿದ್ಧರಾಗಿದ್ದವರು ಕೋಟೆಯ ಮುಖ್ಯಸ್ಥ ದಸ್ತೂರಖಾನನನ್ನು ಹಿಡಿದು ಬಂಧಿಸಿದರು. ಆತ ಐನುಲ್ ಮುಲ್ಕನ ಸ್ನೇಹಿತನಾಗಿದ್ದನು. ಅರ್ಕಕಿಲ್ಲೆಯ (ಅರಮನೆಯ) ಬಾಗಿಲನ್ನು ಮುಚ್ಚಿ ಯುದ್ಧಕ್ಕಾಗಿ ಸಿದ್ಧರಾದರು. ಬಾದಶಹನ ಸೇವಕರಲ್ಲಿಯ ಒಬ್ಬನಾದ ಮಕಸೂದಖಾನನು ಕುದುರೆಯನ್ನು ಹತ್ತಿ ಹೊರಟನು. ಆತನ ಬೆನ್ನ ಹಿಂದೆ ಬೇರೆ ಕೆಲ ಸೇವಕರು ಆನೆಯ ಮೇಲೆ, ಇನ್ನಷ್ಟು ಜನ ಕುದುರೆ ಸವಾರರೂ ಹೊರಟರು. ಅಲ್ಲಾಪುರ ಬಾಗಿಲ ಹತ್ತಿರ ಬಂದು ಮುಟ್ಟಿದಾಗ ನಾಲ್ಕೂ ಜನ ಬಂಧಿತ ಅಮೀರ ಜನರೊಂದಿಗೆ ಭೆಟ್ಟಿಯಾಯಿತು. ಮಕಸೂದಖಾನನ ಕಣ್ಣು ಮೇಣೆಯ ಮೇಲೆ ಬೀಳುತ್ತಿದ್ದಂತೆ, ಆತನು ಅತಿ ವೇಗದಿಂದ ಅಲ್ಲಿಗೆ ಹೋಗಿ, ಐನುಲ್‌ಮುಲ್ಕನಿಗೂ ಮತ್ತು ಮೇಣೆಗಳಿಗೂ ಮಧ್ಯ ಅಡ್ಡಿಯಾಗಿ ನಿಂತನು. ಆ ನಾಲ್ವರೂ ಬಂಧಿತರನ್ನು ಮೇಣೆಗಳಿಂದ ಕೆಳಗೆ ಇಳಿಸಿ ಬೇಡಿಗಳನ್ನು ಕಡಿದು, ಕುದುರೆಯ ಮೇಲೆ ಕುಳ್ಳಿರಿಸಿ, ಕೋಟೆಯ ಕಡೆಗೆ ಹೊರಟನು. ಅವರನ್ನು ಬಾದಶಹನ ಹತ್ತಿರ ತಂದು ಮುಟ್ಟಿಸಲಾಯಿತು. ಐನುಲ್‌ಮುಲ್ಕನಿಗೆ ಇದನ್ನೆಲ್ಲ ಕಂಡು, ಬಾದಶಹನ ಸೇವಕರ ಈ ಗುಂಪು ತಂತಮ್ಮಲ್ಲಿ ಸ್ನೇಹವನ್ನಿಟ್ಟುಕೊಂಡು ಒಂದೇ ಮನ, ಒಂದೇ ವಿಚಾರದವರಾಗಿದ್ದಾರೆಂದು ಖಾತ್ರಿಯಾಯಿತು. ಯಾರಿಗೆ ಗೊತ್ತು? ಕಾರ್ಯಭಾಗವು ವಿಪರೀತವಾದೀತೆಂದು ತಿಳಿದು ಒಂದು ಕ್ಷಣ ಕೂಡ ಅಲ್ಲಿರುವುದು ಸರಿಯಲ್ಲವೆಂದು ಭಾವಿಸಿ ತನ್ನ ಊರಿನ ಹಾದಿಯನ್ನು ಹಿಡಿದನು. ಉಳಿದ ಅಮೀರ ಜನರಿಗೆ ಮತ್ತು ಕಾರಭಾರಿ ಜನರಿಗೆ ಯಖಲಾಸಖಾನನ ಸಂಗಡ ಸ್ನೇಹದಿಂದ ನಡೆದುಕೊಳ್ಳಲು ಮನಾಯಿ ಮಾಡುತ್ತಿದ್ದರು. ಯಖಲಸಖಾನನೊಂದಿಗೆ ಸ್ನೇಹದಿಂದ ನಡೆದುಕೊಳ್ಳುವವರಿಗೆ ಧಿಕ್ಕಾರ ಹಾಕಲಾಗುತ್ತಿತ್ತು. ಒಟ್ಟಾರೆಯಾಗಿ ಎಲ್ಲರೂ ಸೇರಿ ದಂಗೆ ಹಾಕಿದರು. ದಂಗೆಯಿಂದ ರಾಜಧಾನಿಯಲ್ಲಿ ಬಹಳ ಗದ್ದಲವಾಗಿ ಜಗಳಗಳಾದುವು.

### ೧೨. *ಚಿಲ್ಲರೆ ಮನುಷ್ಯನ ಹೇಳಿಕೆಯನ್ನು ಕೇಳಿ ಅಫಜಲಖಾನನ ಬಂಧನ :*

ಅದೇ ಸಮಯದಲ್ಲಿ ಏನೊಂದು ಖಾತರಿಯಿಲ್ಲದ ಗುಂಪು, ಮುಂದೆ ನಡೆಯುತ್ತ ಬಂದಿದ್ದು ಗುಂಪಿನ ಜನರು ಬಾದಶಹನಿಗೆ ವಿನಂತಿ ಮಾಡಿಕೊಳ್ಳುತ್ತ "ಹೊರಗೆ ಕುಳಿತ ಅಫಜಲಖಾನನು ಏನು ವಿಚಾರ ಮಾಡಿ ಬಂದಿದ್ದಾನೆ? ಯಾವ ಮಸಲತ್ತು ಇದೆಯೊ ಯಾರಿಗೆ ಗೊತ್ತು? ಆದ್ದರಿಂದ ಆತನನ್ನು ಹಿಡಿದು ಒಂದು ಕಡೆಗೆ ಕುಳ್ಳಿರಿಸುವುದು ಈಗಿನ ಸಂದರ್ಭದಲ್ಲಿ ಸರಿ ಎಂದು ಕಾಣುತ್ತದೆ. ಅಂದರೆ ವಿಘ್ನ ದೂರಾಗುತ್ತದೆ" ಎಂದರು, ಬಾದಶಹನು ಆ ಮೂರ್ಖರ ಮಾತು ಕೇಳಿ. 'ಆಯ್ತು ಸರಿ' ಎಂದನು. ಮಹಾಲೀ ಕೆಲಸದ ಇಮಾಮುಲ್‌ಮುಲ್ಕನು ಹೊರಗೆ ಬಂದು, 'ನಿಮ್ಮನ್ನು ಬಾದಶರು ಕರೆಯುತ್ತಿದ್ದಾರೆ' ಎಂದು ಅಫಜಲಖಾನನಿಗೆ ಹೇಳಿದನು, ಅಫಜಲಖಾನನು ಎದ್ದು ನಾಲ್ಕು ಹೆಜ್ಜೆ ಹಾಕಿ ಹೊರಡುತ್ತಿದ್ದಂತೆ, ಅವನನ್ನು ಹಿಡಿದು ಒಂದೆಡೆ ತೆಗೆದುಕೊಂಡು ಹೋಗಿ ಕುಳ್ಳಿರಿಸಿದರು. ಹೀಗೆ ನಾಲ್ಕು ದಿಕ್ಕುಗಳಿಂದಲೂ ವಿಚಿತ್ರ ಸಂದರ್ಭಗಳು ಉದ್ಭವಿಸಿ, ಯಾರಿಂದಲೂ ಉತ್ತಮ ವಿಚಾರದ ಘಟನೆಗಳು ಕಾಣದಂತಾದುವು.

### ೧೩. *ಚಾಂದಬೀಬಿಯು ಹಬಶೀ ಜನರನ್ನು ಕೆಲಸದಿಂದ ಕಡಿಮೆ ಮಾಡಿದ್ದು ಮತ್ತು ಶಾಹ ಅಬದುಲ್ ಹಸನನಿಗೆ ಪ್ರಧಾನಿ ಪದವಿ ಕೊಟ್ಟದ್ದು :*

ಈ ದಂಗೆ ಹಾಗೂ ಗದ್ದಲಗಳ ಸಮಯದಲ್ಲಿ ಬಾದಶಹನು ಸ್ವತಃ ಚಾಂದಬೀಬಿಯ ಮಹಲಿನಲ್ಲಿ

ಕುಳಿತು ಅವಳೊಂದಿಗೆ ಈ ಸಂಕಟಗಳ ನಿವಾರಣೆಗಾಗಿ ಏನೆಲ್ಲ ಮಾಡಬೇಕೆಂದು ವಿಚಾರಿಸುತ್ತಿದ್ದನು. ಅಂಥ, ಕೆಲಸಗಳಲ್ಲಿ ಚಾಂದಬೀಬಿಯಾದರೋ ತುಂಬ ಬುದ್ಧಿವಂತಳಾಗಿದ್ದಳು. ಈ ಗದ್ದಲ ಮತ್ತು ದಂಗೆಗಳು ಪ್ರತಿಯೊಂದು ವಿಭಾಗಗಳಿಂದಲೂ ಉಂಟಾಗಿವೆಯೆಂಬುದನ್ನು ಅವಳು ತಿಳಿದುಕೊಂಡಳು. ಈ ನೌಕರರು ಕೆಲಸದ ಜಗ್ಗಾಟದಲ್ಲಿ ತಂತಮ್ಮ ಕಾರಭಾರವೇ ನಡೆಯಬೇಕೆಂದು ಇದೆಲ್ಲ ಪ್ರಾರಂಭಿಸಿದ್ದಾರೆ. ಅಮೀರ ಜನರು, ದಖಣಿಗಳು, ಮುಸಲ್ಮಾನರು ಇವರೆಲ್ಲ ಹಬಶೀ ಜಾತಿಯ ಜನರ ಆಜ್ಞೆಗಳನ್ನು ಒಪ್ಪುತ್ತಿಲ್ಲ. ಹಬಶೀ ಜನರ ಮಾತಿನ ಮೇಲೆ ವಿಶ್ವಾಸವನ್ನು ಇಡುವುದಿಲ್ಲ. ಶತ್ರುಗಳನ್ನು ಎದುರಿಸುವ ವಿಷಯದಲ್ಲಿ ಒಂದಾಗುತ್ತಿಲ್ಲ ಎಂಬುದನ್ನು ತಿಳಿದುಕೊಂಡ ಚಾಂದಬೀಬಿಯು, ಹಬಶೀ ಜಾತಿಯ ಅಮೀರಜನರನ್ನು ಏಕಾಂತದಲ್ಲಿ ಕರೆಸಿದಳು. ಅವರಿಗೆ ವಿವರಗಳನ್ನೆಲ್ಲ ಅವರ ಅಂತಃಕರಣಗಳು ತುಂಬಿ ಬರುವಂತೆ ತಿಳಿ ಹೇಳಿದಳು. ಅದನ್ನು ಕೇಳಿದ ಹಬಶೀ ಜಾತಿಯ ಆ ಮೂರ್ಖ, ಗರ್ವಿಷ್ಠ ಮೂವರು ಸರದಾರರು ಪೂರ್ಣಮನಸ್ಸಿನಿಂದ ಚಾಂದಬೀಬಿಗೆ ಹೇಳಿದರು. "ತಮ್ಮ ಮನದಲ್ಲಿ ಯಾರಿಗೆ ಕಾರಭಾರವನ್ನು ಕೊಡುವುದು ಸರಿ ಎನಿಸುತ್ತದೆಯೊ ಅವರಿಗೆ ಕೊಡಿರಿ. ಮತ್ತು ರಾಜ್ಯದ ಕೆಲಸಗಳನ್ನು ನಡೆಸಿರಿ" ಎಂದರು. ಹೀಗೆ ಮೂವರೂ ತಮ್ಮ ಅಧಿಕಾರವನ್ನು ಬಿಟ್ಟುಕೊಟ್ಟರು. ಚಾಂದಬೀಬಿಯು ಅಬ್ದುಲ್ ಹಸನ್ ಹಾಗೂ ಮುರ್ತುಜಾಖಾನರನ್ನು ಹತ್ತಿರ ಕರೆದು, ಅಬ್ದುಲ್ ಹಸನನಿಗೆ ವಕೀಲಿ ಕೆಲಸದ ವಸ್ತ್ರಗಳನ್ನು ಕೊಟ್ಟು ರಾಜ್ಯದ ಕೆಲಸಗಳನ್ನು ನಡೆಸಹತ್ತಿದಳು.

### *೧೪. ಅಫಜಲಖಾನನ ಕೊಲೆ ಮತ್ತು ರಫೀಯುದ್ದೀನ ಶಿರಾಜಿಯ ಬಂಧನ :*

**ಈ** ಎಲ್ಲ ಗುಂಪುಗಳು ಅಡ್ಡದಾರಿಯನ್ನೆ ಹಿಡಿದಿದ್ದುವು. ಬುದ್ಧಿವಂತನಾದ, ಜಾಣ ಅಫಜಲಖಾನನು ಯಾವಾಗಲೂ ವಿಚಾರದಲ್ಲಿ ಇರುತ್ತಿದ್ದನು. ಅಫಜಲಖಾನನ ಬಗ್ಗೆ ಈ ರಾಜ್ಯದ ಎಲ್ಲ ಸಣ್ಣ ದೊಡ್ಡ ಮನುಷ್ಯರು ಮಾನ್ಯ ಮಾಡುತ್ತಾರೆ. ಅವನೇ ಇರಬೇಕು ಆತನ ಆಜ್ಞೆಯಂತೆ ನಾವೆಲ್ಲ ನಡೆಯಬೇಕು" ಎಂಬುದು ಎಲ್ಲರ ಮನದಲ್ಲಿತ್ತು. ಎಲ್ಲರೂ ಮನಸಾರೆ ಅವನನ್ನು ಪ್ರೀತಿಸುತ್ತಿದ್ದರು. ಆದರೆ ಈ ಕೆಲವು ಜನ ಅಫಜಲಖಾನನಿಗೆ ಯಾವಾಗಲೂ ಅಂಜುತ್ತಿದ್ದರು. ಅವನ ಕಾರಭಾರವು ತಮಗೆ ಸಿಗಲಿ ಎಂದು ಇಚ್ಛಿಸುತ್ತಿದ್ದರು ಸದ್ಯ ಆತನನ್ನು ಬಂಧಿಸಿಟ್ಟಿದ್ದಾರೆ. ಅವನಿಗೆ ಕೆಟ್ಟ ಮಾತುಗಳನ್ನಾಡುತ್ತಿದ್ದರು ಅವನನ್ನು ಕೊಲ್ಲಬೇಕೆಂದೂ ಯೋಜಿಸಿದ್ದರು.

ಅಂತೆಯೆ ಅಬ್ದುಲ್ ಹಸನನು "ಅಫಜಲಖಾನನನ್ನು ಕೊಲ್ಲದ ಹೊರತು ನಮ್ಮ ಚಿತ್ತವು ಸ್ವಾಸ್ಥದಲ್ಲಿ ಉಳಿಯುವುದಿಲ್ಲ. ಹಬಶೀ ಜನರ ಪಾರುಪತ್ಯವೂ ಆಗುವುದಿಲ್ಲ ಅಫಜಲಖಾನನ ದಂಗೆಯಿಂದ ಮುಕ್ತರಾಗದ ಹೊರತು ಸ್ವಸ್ಥವಾಗಿ ರಾಜ್ಯದ ಕೆಲಸದಲ್ಲಿ ಮನಸ್ಸನ್ನು ಹಾಕುವುದು ಸಾಧ್ಯವಿಲ್ಲ' ಎಂದನು. ಅನಂತರ ಎಲ್ಲ ಜನರು ವಿಚಾರಿಸಿ ಅಫಜಲಖಾನ ಮತ್ತು ಆತನ ತಮ್ಮನನ್ನು ಕೊಲ್ಲಬೇಕೆಂದು ನಿರ್ಧರಿಸಿದರು. ರಫೀಯುದ್ದೀನನನ್ನು ಬಂಧಿಸುವ ಆಜ್ಞೆಯನ್ನು ತೆಗೆದುಕೊಂಡು, ಆತನನ್ನು ಹಿಡಿದು ತರಲು ಒಬ್ಬನನ್ನು ಕಳಿಸಿದರು. ರಫೀಯುದ್ದೀನನ ಸೇವಕನೊಬ್ಬನು ಮೊದಲೆ ಈ ಸುಳಿವನ್ನು ಆತನಿಗೆ ನೀಡಿದ್ದನು. ಆಗ ರಫೀಯುದ್ದೀನನು 'ದೈವ ಮಾಡಿಸಿದಂತಾಗಲಿ' ಎಂದು ಒಬ್ಬನೇ ಮುತಬ್ಬರಖಾನದಲ್ಲಿ ದಾರಿಕಾಯುತ್ತಾ ಕುಳಿತಿದ್ದನು. ಆ ಸಮಯದಲ್ಲಿ ಒಮ್ಮೆಲೆ ಸೇವಕ ಬಂದು 'ಬಾದಶಹರು ನಿಮ್ಮ ನೆನಪನ್ನು ಮಾಡಿದ್ದಾರೆ' ಎಂದನು. ಅದನ್ನು ಕೇಳಿ ರಫೀಯುದ್ದೀನನು ಮುಷ್ಟಿಯಲ್ಲಿ ಪ್ರಾಣವನ್ನು ಹಿಡಿದುಕೊಂಡು, ಭಯಭೀತನಾಗಿ

ಗಾಬರಿಯಿಂದ ಹೊರಟನು. ಬಾದಶಹನು ಆ ಸಮಯದಲ್ಲಿ ಬಾಗಿಲದ ಗೋಪುರದ ಮೇಲೆ ಕುಳಿತಿದ್ದನು. ಅಲ್ಲಿ ಬಾದಶಹನ ಹತ್ತಿರ ರಫೀಯುದ್ದೀನನ ಕಡೆಯ ಯಾರೂ ಇರಲಿಲ್ಲ. ರಫೀಯುದ್ದೀನನ ಕೈಗಳನ್ನು ಕಟ್ಟಿ ಬಾದಶಹನ ಹತ್ತಿರ ತಂದರು. ರಫೀಯುದ್ದೀನನು ಇಂದಿನವರೆಗೂ ಬಾದಶಹನ ಸರಕಾರೀ ಕೆಲಸದಲ್ಲಿಯೇ ಇದ್ದನು. ಕೋಶಾಗಾರ ಮತ್ತು ಅಡುಗೆಮನೆಗಳು (ಮುತಬ್ಬರಖಾನಾ) ಆತನ ವಶದಲ್ಲಿದ್ದುವು. ಹಗಲು ರಾತ್ರಿ ಬಾದಶಹನ ಹತ್ತಿರವೇ ಇದ್ದು ಯಾವಾಗಲೂ ಬಾದಶಹನೊಂದಿಗೆ ಮಾತುಕತೆಗಳನ್ನಾಡುತ್ತಿದ್ದನು. ಹೀಗಿದ್ದಾಗ, ರಫೀಯುದ್ದೀನನ ಕೈಗಳನ್ನು ಕಟ್ಟಿ ತಂದದ್ದನ್ನು ನೋಡಿದ ತಕ್ಷಣ ಬಾದಶಹನು ತುಂಬ ಸಿಟ್ಟಾದನು. ಕಛೇರಿಯಲ್ಲಿಯ ಜನ, ರಫೀಯುದ್ದೀನನ ಜನ ಒಬ್ಬರಿಗೊಬ್ಬರು ಸರಿ ಇರಲಿಲ್ಲ. ಆ ಎಲ್ಲರೂ ಬಾದಶಹನ ಸಿಟ್ಟನ್ನು ಗಮನಿಸಿ ಶಿಪಾಯಿಗಳಿಗೆ ಸನ್ನೆ ಮಾಡಿದರು. ಅಷ್ಟರಿಂದಲೇ ಶಿಪಾಯಿಗಳು ರಫೀಯುದ್ದೀನನನ್ನು ಅಲ್ಲಿಂದ ಜಗ್ಗಿ ಸೆರೆಮನೆಗೆ ತಂದರು. ಸೆರೆಮನೆಗೆ ಬಂದ ರಫೀಯುದ್ದೀನನು ಅಲ್ಲಿ ತನ್ನ ಅಣ್ಣ ಅಫಜಲಖಾನನನ್ನು ಕಂಡನು. ಆತನೂ ಬಂದಿಯಾಗಿದ್ದನು. ಆತನು ಕೊರಳಲ್ಲಿ, ಕೈಯಲ್ಲಿ ಹಾಗೂ ಕಾಲಲ್ಲಿ, ಭಾರೀ ಭಾರದ ಕಬ್ಬಿಣದ ಬೇಡಿಗಳನ್ನು ಹಾಕಿಕೊಂಡು ಕುಳಿತಿದ್ದನು. ಇಷ್ಟೊಂದು ಅಪಮಾನ ಹಿಂದೆ ಯಾರಿಗೂ ಆಗಿರಲಿಕ್ಕಿಲ್ಲ. ಮುಂದೆ ಯಾರಿಗೂ ಆಗಲಿಕ್ಕಿಲ್ಲ ಎನಿಸಿತು. ಆಕಾಶದಿಂದ ಭೂಮಿಯವರೆಗೆ ಇಂಥದೊಂದು ಘಟನೆ ನಡೆದಿರಲಿಕ್ಕಿಲ್ಲ ಎಂಬ ಹಾಗೆ ದೇವರಾಜ್ಯದಲ್ಲಿ ಪ್ರಾರಬ್ಧಯೋಗದಿಂದ ಇದು ಘಟಿಸಿತ್ತು. ಅನಂತರ ಅಲ್ಲಿದ್ದ ಕಮ್ಮಾರನು ಅಣ್ಣನಿಗೆ ತೊಡಸಿದ ಆಭರಣಗಳನ್ನು ತನಗೂ ತೊಡಿಸಲು ಸಿದ್ಧನಾಗಿದ್ದನ್ನು ರಫೀಯುದ್ದೀನನು ಕಂಡನು. ಅಷ್ಟರಲ್ಲಿ ಒಮ್ಮಿಂದೊಮ್ಮೆಲೆ ಒಬ್ಬ ಮನುಷ್ಯನು ಬಾಗಿಲಿನಿಂದ ಒಳಗೆ ಬಂದು ಅಫಜಲಖಾನನನ್ನು ಕರೆದನು. ಅಫಜಲಖಾನನು ಎದ್ದು ನಿಂತು 'ಅಲ್ಲಾನ ಆಜ್ಞೆಗೆ ನನ್ನ ಒಪ್ಪಿಗೆ ಇದೆ' ಎಂದು ಹೊರಗೆ ಹೋದನು. ಬಂದ ವ್ಯಕ್ತಿ ಅವನನ್ನು ಕೊಂದು ಶರೀರದ ತುಂಡು-ತುಂಡುಗಳನ್ನು ಮಾಡಿ ಬಾಜಾರದಲ್ಲಿ ತೆಗೆದುಕೊಂಡು ಹೋಗಿ ಒಗೆದನು. ಆ ಮಾರ್ಗದಿಂದ ಬರುವ ಜನ ಅದನ್ನು ಮೂಕರಾಗಿ ನೋಡುತ್ತಿದ್ದರು. ಮತ್ತು ದುಃಖ ಪಡುತ್ತಿದ್ದರು. ಒಂದು ಹಗಲು ಮತ್ತು ಒಂದು ರಾತ್ರಿ ಪೂರ್ತಿಯಾಗಿ ಅಫಜಲಖಾನನ ಶರೀರದ ತುಂಡುಗಳು ಬಾಜಾರದಲ್ಲಿ ಬಿದ್ದಿದ್ದುವು. ಅಫಜಲಖಾನನ ಆಪ್ತ ಮಂಡಳಿಯಲ್ಲಿ ಕೆಲವು ಜನ ಬಂಧನದಲ್ಲಿದ್ದರು. ಇನ್ನೂ ಕೆಲವು ಜನ ತಲೆ ಮರೆಸಿಕೊಂಡಿದ್ದರು. ಮರುದಿನ ಶಾಹ ಫತೇಲುಲ್ಲಾಹ ಶಿರಾಜಿಯ ಶಿಷ್ಯನೊಬ್ಬನು ಅವನ ಶವವನ್ನು ಎತ್ತಿ ತೆಗೆದುಕೊಂಡು ಹೋದನು. ಶವಕ್ಕೆ ಸ್ನಾನ ಮಾಡಿಸಿ ಕಫನ, ದಫನ ಇತ್ಯಾದಿಗಳನ್ನು ಮಾಡಿದನು. ಅಫಜಲಖಾನನು ಹಿಜರಿ ಸನ್ ೯೮೮ರಲ್ಲಿ (ಕ್ರಿ.ಶ. ೧೫೮೦) ಸತ್ತನು. ಅನಂತರ ರಫೀಯುದ್ದೀನನ್ನೂ ಕೊಲ್ಲುವ ಆಜ್ಞೆಯನ್ನು ಕೆಲಸಗಾರರು ಪಡೆದಿದ್ದರು. ಆದರೆ ಅಲ್ಲಾನ ಕೃಪೆ ಹಾಗೂ ಆಯುಷ್ಯ ಇನ್ನೂ ಇತ್ತೆಂದು ಆತನು ಉಳಿದನು. ಕೆಲವು ಕಾಮದಾರ ಮಂಡಳಿ ಜನರ ಪ್ರಯತ್ನದಿಂದಾಗಿ ಆತನು ಜೀವಕಳೆದುಕೊಳ್ಳುವ ಸಂಕಟದಿಂದ ಪಾರಾದನು. ಆತ ಬಿಡುಗಡೆಯಾದ ಮೇಲೆ ಮತ್ತೆ ಮೊದಲಿನ ಕೆಲಸಕ್ಕೆ ಹಾಜರಾದನು. ೩೦ ವರುಷಗಳ ಕಾಲ ಇಬ್ರಾಹಿಮ ಆದಿಲಶಹನ ಸೇವೆಯಲ್ಲಿ ಗೌರವದಿಂದ ಮತ್ತು ಯೋಗ್ಯನಾಗಿ ಸೇವೆ ಮಾಡಿದನು. ರಫೀಯುದ್ದೀನನ ಬಗ್ಗೆ ಯಾರಾದರೂ ಬಾದಶಹನಿಗೆ ಕೆಟ್ಟದನ್ನು ಹೇಳಿದರು ಕೂಡ, ಅದನ್ನು ಬಾದಶಹನು ಮನಸ್ಸಿನ ಮೇಲೆ ತೆಗೆದುಕೊಳ್ಳಲಿಲ್ಲ. ದಿನದಿಂದ ದಿನಕ್ಕೆ ಆತನಿಗೆ ಒಳ್ಳೆಯ ಕೆಲಸಗಳು ಕಾಣ ಸಿಗುತ್ತಿದ್ದವು. ಅದರಿಂದ ಬಾದಶಹನ ಕಡೆಯಿಂದ ಯೋಗ್ಯ ಗೌರವವೂ ಸಿಗುತ್ತಿತ್ತು. ಹದಿನೈದು ಹದಿನಾರು ವರುಷ ವಿಜಾಪುರದ ರಾಜಧಾನಿಯ ಕೆಲಸವನ್ನೂ ಆತ ನೋಡಿಕೊಳ್ಳುತ್ತಿದ್ದನು.

೧೫. *ಹಬಶೀ ಅಮೀರ ಜನರಾದ ಯಖಲಾಸಖಾನ, ಹಮೀದಖಾನ ಮತ್ತು ದಿಲಾವರಖಾನ ಈ ಮೂವರೂ ಶಾಹ ಅಬ್ದುಲ್ ಹಸನನೊಂದಿಗೆ ಒಂದು ಗೂಡಿ ರಾಜ್ಯ ಕಾರಭಾರ ಮಾಡಿದ್ದು, ಕೊನೆಗೆ ಶಾಹ ಅಬ್ದುಲ್ ಹಸನನನ್ನು ಹಿಡಿದು ಬಂಧಿಸಿಟ್ಟಿದ್ದು :*

ಮೇಲೆ ಹೇಳಿದ ಹಬಶೀ ಜನರು ಐನುಲ್ ಮುಲ್ಕನ ಸಹಾಯದಿಂದ ಸೆರೆಯಮನೆಯಿಂದ ಬಿಡುಗಡೆಯಾದರು. ಐನುಲ್‌ಮುಲ್ಕನು ಸರಕಾರೀ ಸೇವಕರೆಲ್ಲ ಒಂದಾಗಿದ್ದನ್ನು ಕಂಡು ಭಯಭೀತನಾಗಿ ತನ್ನ ಊರಿಗೆ ಹೊರಟು ಹೋದನು. ಅನಂತರ ಕಾರಭಾರವೆಲ್ಲ ಹಬಶೀ ಜನರ ಕೈಯಲ್ಲಿ ಬಂದಿತು. ಮುಲ್ಕೀ ಮತ್ತು ಮಹಾಲೀ ಕೆಲಸವು ಯಖಲಾಸಖಾನನಿಗೆ ಬಂದಿತು. ಅಮೀರ ಜನರಲ್ಲಿ ಶ್ರೇಷ್ಠ ಪದವಿಯನ್ನು ಪಡೆದು ರಾಜಧಾನಿಯ ಕಾರಭಾರವನ್ನು ಮತ್ತು ಮುಖ್ತ್ಯಾರಿಯನ್ನು ಮಾಡಹತ್ತಿದನು. ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳಬೇಕಾದರೂ ಹಮೀದಖಾನನ ವಿಚಾರವನ್ನು ಕೇಳಿ ತೆಗೆದುಕೊಳ್ಳುತ್ತಿದ್ದನು. ಅಮೀರ ಜನರೆಲ್ಲ ಒಂದೇ ವಿಚಾರದವರಾಗಿದ್ದುಕೊಂಡಿದ್ದರು. ಬಾದಶಹನ ಆಜ್ಞೆಯನ್ನು ಪಾಲಿಸುತ್ತ ಶಾಹ ಅಬ್ದುಲ್ ಹಸನನು ರಾಜಧಾನಿಯ ಕೆಲಸವನ್ನು ಮಾಡುತ್ತಿದ್ದನು. ಮತ್ತು ಶತ್ರುಗಳನ್ನು ಎದುರಿಸುತ್ತಿದ್ದನು. ಹೀಗೆ ಕೆಲಸಗಳು ನಡೆಯುತ್ತಿದ್ದಾಗ, ಶತ್ರುಗಳು ಪ್ರತಿನಿತ್ಯ ಆದಿಲಶಹನ ರಾಜಧಾನಿಯ ಸುತ್ತಮುತ್ತ ಹುಂಬತನದಿಂದ ಬಂದು ವಿಜಾಪುರದ ಕೋಟೆಯ ಬಾಗಿಲ ಬಳಿ ಯುದ್ಧ ಮಾಡುತ್ತಿದ್ದರು. ಆದಿಲಶಹ ಬಾದಶಹನ ಖಾಸಾ ಮಂಡಳಿಯ ಮೂರು ಸಾವಿರ ಚಿಲಖತ್ ಸ್ವಾರರೆಲ್ಲರೂ ಶೂರರಾಗಿದ್ದು ಬಾದಶಹನ ಶಿಷ್ಯಗಣದವರೇ ಆಗಿದ್ದರು. ಅಂಥ ಶೂರ ಗುಂಪು ವಿಜಾಪುರದಲ್ಲಿ ಇನ್ನೊಂದಿರಲಿಲ್ಲ.

ಯಖಲಾಸಖಾನನೂ ದೊಡ್ಡ ಶೂರ, ಮತ್ತು ಧೈರ್ಯವಂತ ವ್ಯಕ್ತಿಯಾಗಿದ್ದನು. ಆತನು ಪ್ರತಿನಿತ್ಯ ತನ್ನ ಗುಂಪನ್ನು ತೆಗೆದುಕೊಂಡು ಹೋಗಿ ನಿರ್ಭಯದಿಂದ ಶತ್ರುಗಳನ್ನು ಎದುರಿಸಿ ರುಸ್ತುಮನಂತೆ ಯುದ್ಧ ಮಾಡುತ್ತಿದ್ದನು. ಪ್ರತಿ ಹಲ್ಲೆಯಲ್ಲಿಯೂ ಶತ್ರುಗಳ ಕಡೆಯ ಗುಂಪಿಗೆ ಗುಂಪನ್ನೆ ತಲವಾರಿನಿಂದ ಹೊಡೆದುಕೊಂಡು ಅಥವಾ ಕೋಟೆಯಿಂದ ಹೊರದಬ್ಬುತ್ತಿದ್ದನು. ಅಷ್ಟರಲ್ಲಿ ದುರಾದೃಷ್ಟವಶಾತ್ ಯಖಲಾಸಖಾನನ ಕೈಗೆ ಗಾಯವಾಯಿತು. ಆತನ ಕೈ-ಕೆಲಸ ಮಾಡದಂತಾಯಿತು. ಅನಂತರ ತಲವಾರನ್ನು ಎತ್ತಲೂ ಸಾಧ್ಯವಾಗಲಿಲ್ಲ. ಗಾಯಾಳುವಾಗಿ ಮನೆಯಲ್ಲಿಯೇ ಕುಳಿತು ಔಷದೋಪಚಾರದಲ್ಲಿ ನಿಮಗ್ನನಾದನು. ಆಗ ಬೇರೆ ಜನರು ಹೊರಗೆ ಹೋಗುತ್ತಿದ್ದರು. ಧೈರ್ಯದಿಂದ ಯುದ್ಧ ಮಾಡುತ್ತಿದ್ದರು. ಬಹಳ ದಿನ ಹೀಗೆ ಯುದ್ಧ ನಡೆಯಿತು. ಆಗ ಶತ್ರುಗಳು ಕೋಟೆಯ ಆಶೆಯನ್ನು ಬಿಟ್ಟು ಖಿನ್ನರಾಗಿ ವಿಜಾಪುರ ನಗರದ ಆಶೆಯನ್ನು ಬಿಟ್ಟು ಸುತ್ತಲಿನ ಪ್ರದೇಶಗಳ ಸುಲಿಗೆಯನ್ನು ಪ್ರಾರಂಭಿಸಿದರು. ಲೂಟಿಮಾಡಿದ ಪ್ರದೇಶಗಳನ್ನು ಹಾಳು ಮಾಡಹತ್ತಿದರು. ಹಾಜಿ ಕಿಶ್ವರಖಾನನು ವಿಜಾಪುರದಿಂದ ಓಡಿ ಹೋಗಿ ಅಹ್ಮಮನಗರದ ರಾಜ್ಯದಲ್ಲಿ ಎಲ್ಲಿಯೂ ಇರಲಾರದೆ ಗೋವಳ ಕೊಂಡದತ್ತ ಹೋಗಿ ಇರಹತ್ತಿದ್ದನಷ್ಟೆ, ಈ ಸಮಯದಲ್ಲಿ ಆತ ಕುತುಬಶಾಹನ ಸೈನ್ಯದಲ್ಲಿ ಸೇರಿ ಸಂಕಟಗಳನ್ನು ಉಂಟುಮಾಡಿ ಅವರಿಗೆ ಕೆಟ್ಟ ಸಲಹೆಗಳನ್ನು ಕೊಡುವಲ್ಲಿ ನಿರತನಾಗಿದ್ದನು. ಆ ವರುಷ ಕಿಶ್ವರಖಾನನ ಸಲಹೆಯಿಂದ ವಿಜಾಪುರದ ಆಸುಪಾಸಿನಲ್ಲಿಯ ಊರುಗಳಲ್ಲಿ ಬಹಳಷ್ಟು ಹಾನಿಯಾಯಿತು. ಕೆಲವು ದಿನಗಳ ನಂತರ ಮಳೆಗಾಲ ಪ್ರಾರಂಭವಾಯಿತು. ಆದರಿಂದ ಶತ್ರು ಸೈನ್ಯ ತಂತಮ್ಮ ಊರುಗಳಿಗೆ ಹೊರಟು ಹೋಯಿತು.

ಇತ್ತ ಮೂವರೂ ಹಬಶೀ ಅಮೀರರು ಎಷ್ಟೋ ದಿನ ಸ್ನೇಹದಿಂದ, ಒಂದೇ ಮನದವರಾಗಿದ್ದುಕೊಂಡು ರಾಜಧಾನಿಯ ಕಾರಭಾರವನ್ನು ನಡೆಸುತ್ತಿದ್ದರು. ಸರಕಾರದಲ್ಲಿ ತುರ್ಕೀ ಜನರು

ಮತ್ತು ಬೇರೆ ಅಮೀರ ಜನರು ಇರುತ್ತಿದ್ದರು. ಅವರು ಮತ್ತು ದಖಣಿ ಸಮುದಾಯ ತಳ ಊರಿದ್ದನ್ನು ಕಂಡು, ಅವರನ್ನೆಲ್ಲ ಒಬ್ಬೊಬ್ಬರನ್ನಾಗಿ ಬೇರೆ ಬೇರೆ ಕೋಟೆಗಳ ವ್ಯವಸ್ಥೆಗಾಗಿ ನಿಯಮಿಸಿ - ಅವರನ್ನು ಒಡೆದು ಕಳಿಸಲಾಯಿತು. ಅವರಲ್ಲಿ ಮಕಸೂದಖಾನನೆಂಬ ಒಬ್ಬ ಸರದಾರನಿದ್ದನು. ಅವನೆ, ಆ ಮೂರು ಹಬಶೀ ಅಮೀರರ ಮೇಲೆ ಬಹಳ ಉಪಕಾರ ಮಾಡಿ ಸೆರೆಮನೆಯಿಂದ ಬಿಡುಗಡೆ ಮಾಡಿದ್ದನು. ಎಷ್ಟೋ ದಿನ ಆ ಮೂವರೂ ಮಕಸೂದಖಾನನ ಉಪಕಾರವನ್ನು ಸ್ಮರಿಸುತ್ತಿದ್ದರು. ಕೊನೆಗೆ ಮಕಸೂದಖಾನನ ಮೇಲೆ ಸಂಶಯಪಟ್ಟು ಅವನನ್ನು ಶಿಕ್ಷಿಸಲು ಸಿದ್ಧರಾದರು. ಕೆಲವು ದಿನ ಶಾಹ ಅಬ್ದುಲ್ ಹಸನನ ಮಾತಿನಂತೆ ನಡೆದುಕೊಳ್ಳುತ್ತ ಕೊನೆಗೆ ಆತನ ಕುರಿತೂ ಸಂಶಯ ಪಟ್ಟು- ಚಿಂತಿತರಾದರು. ಯಾಕೆಂದರೆ, ಶಾಹ ಅಬ್ದುಲ್ ಹಸನನು ಅವಕಾಶಕ್ಕಾಗಿ ಕಾಯುತ್ತಿದ್ದನು. ಈ ಹಬಶೀ ಜನರನ್ನು ಶಿಕ್ಷಿಸಿ ತಾನೆ ಪ್ರಧಾನಿಯಾಗಿ ಮೇಲೇರಬೇಕೆಂದು ಸಂಕಲ್ಪ ಮಾಡಿದ್ದನು. ಹಬಶೀ ಜನರಿಗೆ ಇದು ಗೊತ್ತಾಗುತ್ತಿದ್ದಂತೆ ಅವರು ಧೈರ್ಯದಿಂದ ಅವನನ್ನು ಎದುರಿಸಿ ಅಬ್ದುಲ್ ಹಸನನನ್ನು ಹಿಡಿದು ಬಂಧಿಸಿ ಕೋಟೆಯ ಮೇಲೆ ಕಳಿಸಿದರು. ಅನಂತರ ಯಾರೊಬ್ಬರ ಸಹಾಯವನ್ನು ಇಚ್ಛಿಸದೆ ಹಬಶೀ ಜನರು ರಾಜಧಾನಿಯ ಕೆಲಸಗಳನ್ನು ನಡೆಸ ಹತ್ತಿದರು. ಈ ಮೂವರು ಅಮೀರ ಜನರಲ್ಲಿ ದಿಲಾವರಖಾನನು ಬಹಳ ಬುದ್ಧಿವಂತ, ಸಂಭಾವಿತ, ವೃದ್ಧ ಮತ್ತು ಯೋಗ್ಯ ವ್ಯಕ್ತಿಯಾಗಿದ್ದನು. ಒಳ್ಳೆಯ ಬರಹಗಾರನೂ ಆಗಿದ್ದನು. ಹಮೀದ ಖಾನನು ಭೋಳೆ ಮನುಷ್ಯ, ಸರಳ ನಡತೆಯ ದಯವಂತ ಮನುಷ್ಯನಾಗಿದ್ದನು. ಆ ಸಮಯದಲ್ಲಿ ಹಮೀದಖಾನನ ಸಹಾಯದಿಂದ ಸಾಗರದಲ್ಲಿಯ ನಿರಪರಾಧಿ ಜನರು ಯಖಲಸಖಾನನ ಸಂಕಟದಿಂದ ಪಾರಾದರು. ಹಮೀದಖಾನನಿರದಿದ್ದರೆ, ಯಖಲಸಖಾನನ ಕೈಯಲ್ಲಿ ಬಹುತೇಕ ಜನರ ಮನೆ-ಮಾರುಗಳು ಹಾಳುಗುತ್ತಿದ್ದುವು. ಒಟ್ಟಾರೆಯಾಗಿ ಈ ಮೂವರು ಹಬಶೀ ಅಮೀರ ಜನರು ತಂತಮ್ಮಲ್ಲಿ ವಿಜಾಪುರ ರಾಜ್ಯವನ್ನು ಮೂರು ಭಾಗಗಳನ್ನಾಗಿ ಮಾಡಿ ಹಂಚಿಕೊಂಡು, ಎರಡು ವರುಷಗಳವರೆಗೆ ರಾಜ್ಯವಾಳಿದರು.

### ೧೬. *ಕುತುಬಶಾಹನ ಸೇನಾಪತಿ ಮೀರ ಜುಮಲಾನು ಸೈನ್ಯ ತೆಗೆದುಕೊಂಡು ಆದಿಲಶಹನ ಸರಹದ್ದಿನಲ್ಲಿ ಏರಿ ಬಂದುದು. ಆದಿಲಶಹನು ದಿಲಾವರಖಾನನ ಸೇನಾಪತ್ಯದಲ್ಲಿ ಅವರನ್ನು ಶಿಕ್ಷಿಸಿದ್ದು :*

ಈ ಸಮಯದಲ್ಲಿ ಮೀರ್ ಜಂಬಲ್ ಮುಸ್ತಫಾಖಾನ ಎಂಬ ಪದವಿಯೊಂದಿಗೆ ಪ್ರಸಿದ್ಧನಾಗಿದ್ದನು. ಮಹಮ್ಮದ ಕುಲಿ ಕುತುಬ ಶಾಹನು ತನ್ನ ಸೈನ್ಯವನ್ನು ಸೇನಾಪತಿ ಮೀರ ಜಂಬಲ್ (ಮೀರ ಜುಮ್ಲಾ?) ಇಸ್ತರಾಬಾದಿಯೊಂದಿಗೆ ಆದಿಲ ಶಹನ ಸರಹದ್ದಿನಲ್ಲಿ ಕಳಿಸಿ ಲೂಟಿಮಾಡಿ ಸಂಕಟ ಉಂಟುಮಾಡಿದನು. ಆಗ ಈ ಶತ್ರುವಿನ ಶಿಕ್ಷೆ ಹಾಗೂ ರಾಜ್ಯವನ್ನು ಸಂರಕ್ಷಿಸುವುದು ಅಗತ್ಯವಾಯಿತು. ಆದ್ದರಿಂದ ಈ ಮೂವರು ಹಬಶೀ ಜನರು, ಬಾದಶಹನಿಂದ ಐನುಲ್‌ಮುಲ್ಕ, ಅಂಕುಶಖಾನ ಮತ್ತು ಅನೇಕ ಅಮೀರ ಜನರಿಗೆ ಆಜ್ಞಾಪತ್ರಗಳನ್ನು ಕಳಿಸಿದರು. ಪ್ರತಿಯೊಬ್ಬರಿಗೂ ಅವರವರ ಗ್ರಾಮ-ಊರುಗಳನ್ನು ಅವರಿಗೇ ಜಹಗೀರು ಹಾಕಿಕೊಟ್ಟರು. ಈ ಕಾರಣಗಳಿಂದ, ಅವರಿಗೆ ಅಭಯ ಆಧಾರಗಳು ದೊರೆತಮೇಲೆ, ಅವರೆಲ್ಲ ತಂತಮ್ಮ ಸೈನ್ಯಗಳೊಂದಿಗೆ ಬಂದು ಸೇರಿದರು. ಆದಿಲಶಾಹನು ಯಖಲಸಖಾನನ ಸಲಹೆಯಂತೆ ದಿಲಾವರಖಾನನನ್ನು ಸೇನಾಪತಿಯನ್ನಾಗಿ ಮಾಡಿ, ಕುತುಬ ಶಹನನ್ನು ದಂಡಿಸಲು ಕಳಿಸಿಕೊಟ್ಟನು. ಯಖಲಾಸಖಾನನು ತನ್ನ ಸೈನ್ಯದೊಂದಿಗೆ, ಬಾದಶಹನ ಹತ್ತಿರ ಉಳಿದನು. ದಿಲಾವರಖಾನನು ತನ್ನ ಸೈನ್ಯದೊಂದಿಗೆ ಶತ್ರುಗಳ ಸೈನ್ಯ ಎದುರಿಸಲು ಬಂದಾಗ, ಅದು ಎರಡು ಪರ್ವತಗಳ ಮಧ್ಯ ತುಂಬ

ಕಠಿಣ ಸ್ಥಳದಲ್ಲಿ ನಿಂತು, ಸುತ್ತಲೂ ಕಟ್ಟಿಗೆಯ ಕೋಟೆಯನ್ನು ಕಟ್ಟಿಕೊಂಡಿತ್ತು, ಎದುರಾಳಿಗಳು ಅದನ್ನು ಸುತ್ತುವರೆಯುವುದೂ ಸಾಧ್ಯವಿರಲಿಲ್ಲ. ಅಂಥ ಒಂದು ಸುರಕ್ಷಿತ ಸ್ಥಳದಲ್ಲಿ ಅದು ಠಾಣೆ ಹೂಡಿತ್ತು. ಮಳೆಗಾಲ ಬಂದಿದ್ದರಿಂದ ಯುದ್ಧವು ಮುಂದುವರಿಯಿತು. ದಿನಗಳು ಉರುಳಹತ್ತಿದ್ದುವು. ಅನಂತರ ದಿಲಾವರಖಾನನು ಒಂದು ಯುಕ್ತಿಯನ್ನು ಮಾಡಿ ಶತ್ರುವಿನ ಆಸುಪಾಸಿನ ಸ್ಥಳವನ್ನು ಮುತ್ತಿದನು. ಸೈನ್ಯಕ್ಕೆ ಏನೂ ದೊರೆಯದಂತೆ ಮಾಡಿದನು, ಶತ್ರುಗಳಿಗೆ ಅಲ್ಲಿ ಉಳಿದುಕೊಳ್ಳುವ ಧೈರ್ಯವಾಗದಂತೆ ಸಂಕಟ ತಂದನು. ಅವರು ನಿರುಪಾಯರಾಗಿ ರಾತ್ರೋರಾತ್ರಿ ಅಲ್ಲಿಂದ ಕೂಚ್ ಮಾಡಿ ತಮ್ಮ ರಾಜ್ಯಗಳ ದಾರಿಯನ್ನು ಹಿಡಿದರು. ದಿಲಾವರಖಾನನು ತನ್ನ ಸೈನ್ಯದೊಂದಿಗೆ ಬೆನ್ನು ಹತ್ತಿ, ಅವರ ಸೈನ್ಯದ ಎದುರಿಗೆಯೇ ಬಂದು ಮುಟ್ಟಿದನು. ಈಗ ಆತನ ಯುದ್ಧದ ಮುಂದೆ ನಿಲ್ಲುವ ಧೈರ್ಯವೂ ಆಗದೆ ಶತ್ರುಸೈನ್ಯ ಬೆದರಹತ್ತಿತು. ಪರ್ಶಿಯನ್ ದ್ವಿಪದಿಯೊಂದರ ಅರ್ಥ ಹೀಗಿದೆ "ಸಂಕಟದ ಸಮಯ ಬಂದು ಓಡಿಹೋಗಲೂ ಮಾರ್ಗವಿರದಂತಾದರೆ, ಆ ಮನುಷ್ಯ ನಿರುಪಾಯನಾಗಿ, ತಲವಾರಿಗೆ, ಕೈ-ಹಚ್ಚಿ, ತನ್ನ ಜೀವನದ ಮೇಲೆ ಉದಾರಿಯಾಗುತ್ತಾನೆ' ಹಾಗೆಯೇ ಆಯಿತು, 'ಜಂಗೆಗುರ್ಜೀ' ಎಂದರೆ ಓಡಿ ಬಂದು ಹಲ್ಲೆ ಮಾಡಿ ತಕ್ಷಣ ಹಿಂತಿರುಗಿ ಓಡುವುದು, ಹಾಗೂ ಇದೇ ರೀತಿ ಪದೇ ಪದೇ ಮಾಡುವ ಹಲ್ಲೆ ಅಂಥ ಯುದ್ಧವನ್ನು ಮಾಡುತ್ತ ಅರಣ್ಯದಲ್ಲಿ ಒಳಹೊಕ್ಕರು. ಸಾಯಂಕಾಲದ ವರೆಗೆ ಆನೆಗಳು, ಕುದುರೆಗಳು, ತಮ್ಮಲ್ಲಿದ್ದ ಸಾಮಾನು ಸರಂಜಾಮುಗಳನ್ನೆಲ್ಲ ಕೊಟ್ಟು ಶತ್ರು ಜನರು ಅರಣ್ಯವನ್ನು ಸೇರಿ ತಮ್ಮ ಪ್ರಾಣವನವನ್ನು ಉಳಿಸಿಕೊಂಡರು. ಆದಿಲಶಹನ ಅಮೀರ ಜನರ ಕೈಗೆ, ಲೂಟಿ ಮಾಡಿದ ನೂರ ಇಪ್ಪತ್ತು ಆನೆಗಳು ದೊರೆತುವು. ಕುದುರೆ ಹಾಗೂ ಬೇರೆ ಸಾಮಾನುಗಳು ದೊರೆತದ್ದರ ಲೆಕ್ಕವೆ ಇರಲಿಲ್ಲ.

ಹಮೀದಖಾನನ ಜನರಿಗೂ ಯಖಲಾಸಖಾನನ ಜನರಿಗೂ ಒಂದು ಆನೆಯ ಕುರಿತಾಗಿ ವ್ಯಾಜ್ಯ ಪ್ರಾರಂಭವಾಯಿತು. ಈ ವ್ಯಾಜ್ಯದಿಂದಾಗಿ ಪರಸ್ಪರ ಸೈನಿಕರ ಮಧ್ಯ ಯುದ್ಧವೇ ಆರಂಭವಾಯಿತು. ಮರುದಿನ ದಿಲಾವರಖಾನನು ಬಾದಶಹನ ಕಡೆಗೆ ಒಂದು ವಿನಂತಿ ಪತ್ರವನ್ನು ಕಳಿಸಿದನು, ಯಖಲಾಸಖಾನನಿಗೆ ಸುದ್ದಿ ತಿಳಿದು, ವಿನಂತಿ ಪತ್ರದಲ್ಲಿಯ ಭಾವವನ್ನು ಗಮನಿಸಿ, ಇನ್ನು ದಿಲಾವರಖಾನನು ಬಹು ಬೇಗ ಹೊರಟು ಬಾದಶಹರ ಹತ್ತಿರ ಬರುತ್ತಾನೆ ಎಂದು ತಿಳಿದನು. ಆದರೆ ಯಖಲಾಸಖಾನನಿಗೆ ದಿಲಾವರಖಾನನು ಬಾದಶಹರ ಹತ್ತಿರ ಬರುವುದು ಬೇಡವಾಗಿತ್ತು. ತಾನೊಬ್ಬನೆ ರಾಜ್ಯದ ಕಾರಭಾರವನ್ನು ಮಾಡಬೇಕೆಂಬದು ಆತನ ಇಚ್ಛೆಯಾಗಿತ್ತು. ಅದಕ್ಕಾಗಿ ಕೋಟೆಯ ವ್ಯವಸ್ಥೆಯ ಕೆಲಸವನ್ನು ದಿಲಾವರಖಾನನ ಆಪ್ತರಲ್ಲೊಬ್ಬನಾದ ಹೈದರಖಾನನ ಹತ್ತಿರ ಇದ್ದುದನ್ನು ಕಡಿಮೆಗೊಳಿಸಿ, ಆತನನ್ನು ಕೆಲಸದಿಂದ ತೆಗೆದು ಹಾಕಿ ಯಖಲಾಸಖಾನನು ತನ್ನ ಕಡೆಯ ಒಬ್ಬ ಮನುಷ್ಯನಿಗೆ ಆ ಕೆಲಸವನ್ನು ಕೊಟ್ಟನು. ಮತ್ತು ಒಂದು ಆಜ್ಞಾಪತ್ರವನ್ನು ದಿಲಾವರಖಾನ ಹೆಸರಿನಲ್ಲಿ ಕಳಿಸಿದನು, ಆ ಆಜ್ಞಾಪತ್ರದಲ್ಲಿ 'ದಿಲಾವರಖಾನನು ತನ್ನ ಸೈನ್ಯದೊಂದಿಗೆ ಇನ್ನೂ ಕೆಲವುದಿನ ಅಲ್ಲಿಯೇ ಇರಬೇಕು. ಯಾಕೆಂದರೆ ಮತ್ತೆ ಮತ್ತೆ ಸೈನ್ಯದ ಅಗತ್ಯಬಿದ್ದಾಗ ಕಳಿಸಬೇಕೆಂಬ ಪತ್ರಗಳು ಬರುವುದಿಲ್ಲ. ಆದ್ದರಿಂದ ದಿಲಾವರಖಾನನು ಅಲ್ಲಿಂದ ಹೊರಡಬಾರದು. ಅಮೀರ ಜನರ ಕೈಗೆ ದೊರೆತ ಆನೆಗಳನ್ನು ಸರಕಾರಕ್ಕೆ ಕಳಿಸಬೇಕು ಎಂದು ಬರೆಯಲಾಗಿತ್ತು. ಆಜ್ಞಾಪತ್ರವು ಬಂದು ಮುಟ್ಟಿದ ನಂತರ ದಿಲಾವರಖಾನನು ಎಲ್ಲ ಅಮೀರ ಜನರನ್ನು ಒಂದೆಡೆ ಸೇರಿಸಿ ಅವರ ಮುಂದೆ ಓದಿ ತೋರಿಸಿದನು. 'ನೀವೆಲ್ಲ ಈ ಪತ್ರದ ಹಿಂದಿದ್ದ ಯಖಲಾಸಖಾನನ ಮನಸ್ಸಿನಲ್ಲಿಯ ಭಾವವನ್ನು ತಿಳಿದಿರೇನು?' ಎಂದು ಕೇಳಿದನು, ಮುಂದುವರೆದು 'ನಿಮ್ಮೊಂದಿಗೆ ನಾನು ಜಗಳ ತೆಗೆಯಬೇಕು, ಮತ್ತು

ನಮ್ಮ ನಿಮ್ಮಲ್ಲಿ ವಿರಸವಾಗಬೇಕು. ನಾನು ಇಲ್ಲಿಯೇ ಇದ್ದು ವಿಜಾಪುರಕ್ಕೆ ಬರಬಾರದು ನಾನು ಇಲ್ಲಗೆ ಬಂದುದನ್ನು ತಿಳಿದು ನನ್ನ ಕಡೆಯ ಹೈದರಖಾನನನ್ನು ಬದಲಿಸಿ. ಕೋಟೆಯ ಉಸ್ತುವಾರಿಗೆ ತನ್ನವರಲ್ಲಿಯ ಒಬ್ಬನನ್ನು ನಿಯಮಿಸಿದ್ದಾನೆ. ತಾನೊಬ್ಬನೆ ರಾಜ್ಯದ ಕಾರಭಾರವನ್ನು ಮಾಡಬೇಕೆಂದಿದ್ದಾನೆ. ಆದ್ದರಿಂದ ನೀವೆಲ್ಲ ಬಂಧು ವರ್ಗದವರೇ ಆಗಿದ್ದೀರಿ, ಈ ವಿಷಯದಲ್ಲಿ ನೀವೆಲ್ಲ ಹೇಗೆ ವಿಚಾರಿಸುತ್ತೀರೋ ನೋಡಿರಿ" ಎಂದನು. ಆಗ ಅಮೀರ ಜನರು ಒಂದು ಕ್ಷಣ ವಿಚಾರಿಸಿ, ಲೂಟಿ ಮಾಡಿದ ಆನೆಗಳು ಪ್ರವಾಸದ ದಾರಿಯಲ್ಲಿವೆ. ಇದು ಅರಣ್ಯ ನಾವೆಲ್ಲ ದಿಲಾವರಖಾನನ ವಶದಲ್ಲಿದ್ದೇವೆ ಎಂದೆಲ್ಲ ಗಮನಿಸಿ, ನಿಮ್ಮ ವಿಚಾರವೇ ನಮ್ಮೆಲ್ಲರ ವಿಚಾರ, ಈ ಸಮಯದಲ್ಲಿ ತಮಗೆ ಹೇಗೆ ಯೋಗ್ಯವೆನಿಸುವುದೋ ಹಾಗೆ ಮಾಡಿರಿ. ನಾವೆಲ್ಲ ನಿಮ್ಮ ವಶದಲ್ಲಿದ್ದೇವೆ' ಎಂದರು. ಆಗ ದಿಲಾವರಖಾನನು, 'ಹತ್ತುದಿನಗಳ ದಾರಿಯನ್ನು ಐದು ದಿನಗಳಲ್ಲಿ ಹೋಗೋಣ' ಎಂದು ಹೇಳಿದವನೆ ಕುದುರೆ ಏರಿ ದಾಳಿಗಾಗಿ ಹೊರಟನು. ಉಳಿದೆಲ್ಲ ಅಮೀರ ಜನರೂ ತಮ್ಮ ಸೈನ್ಯದೊಂದಿಗೆ ಅವನ ಬೆನ್ನು ಹತ್ತಿದರು. ಪ್ರತಿನಿತ್ಯ ದಿಲಾವರಖಾನನಿಗೆ 'ಅಲ್ಲಿಯೇ ಇರು' 'ಬೇರೆಲ್ಲೂ ಹೋಗಬೇಡ' 'ಸ್ಥಾನ ಬದಲಿಸಬೇಡ' ಇತ್ಯಾದಿಯಾಗಿ ಆಜ್ಞಾಪತ್ರಗಳು ಬರುತ್ತಲೇ ಇದ್ದುವು. ಹಾಗಿದ್ದಾಗಲೂ ದಿಲಾವರಖಾನನು ಅದನ್ನೆಲ್ಲ ಮನಸ್ಸಿಗೆ ತಾರದೆ. ಮಾರ್ಗವನ್ನು ಕ್ರಮಿಸುತ್ತ ಬಹುಬೇಗ ಹೋಗ ಹತ್ತಿದನು. ವಿಜಾಪುರದಿಂದ ಮೂರು ಕೋಸುಗಳ ಅಂತರದಲ್ಲಿದ್ದಾಗ ಬಾದಶಹನ ಕಡೆಯ ಒಬ್ಬ ಸಂಭಾವಿತ ಗೃಹಸ್ಥನು ದಿಲಾವರಖಾನನನ್ನು ಭೆಟ್ಟಿಯಾಗಿ ಹೀಗೆ ಹೇಳಿದನು. 'ಬಾದಶಹರ ಆಜ್ಞೆ ಹೀಗಿದೆ, ಉದಯದಲ್ಲಿ ತಾವು ನಗರವನ್ನು ಪ್ರವೇಶಿಸಬೇಕು. ಯಾಕೆಂದರೆ, ಇಂದು ನಗರ ಪ್ರವೇಶಕ್ಕೆ ಮತ್ತು ಭೆಟ್ಟಿಗೆ ಚೆನ್ನಾದದಿನವಿಲ್ಲ'. ಎಂದು ಹೇಳಿದಾಗ ದಿಲಾವರಖಾನನು 'ನನ್ನ ಮೂಹೂರ್ತ ಮತ್ತು ನನ್ನ ಕಲ್ಯಾಣದ ಸಮಯಗಳು ಖುದಾವಂತರ ಚರಣದರ್ಶನದಲ್ಲಿವೆ' ಎಂದು ಹೇಳುತ್ತ ಕುದುರೆಗೆ ಚಾಟಿ ಬೀಸಿ ನಗರದತ್ತ ತ್ವರಿತವಾಗಿ ಹೊರಟನು. ಈ ವಿಷಯ ಯಖಲಾಸಖಾನನಿಗೆ ತಿಳಿಯಿತು. ತಕ್ಷಣ ಬಾದಶಹನ ಹತ್ತಿರ ವ್ಯವಸ್ಥೆಗಾಗಿ ತುಸು ಸೈನ್ಯವನ್ನಿಟ್ಟು ಸಮಾರಂಭ ಏರ್ಪಡಿಸಿ ಅಮೀರ ಜನರ ಹಾಗೂ ದಿಲಾವರಖಾನನ್ನು ಭೆಟ್ಟಿಯಾಗಿ ನಗರದಲ್ಲಿ ಬಂದನು.

ಯಖಲಾಸಖಾನ ಹಾಗೂ ಹಮೀದಖಾನನ ಮಧ್ಯ ಮೊದಲಿಗೆಯೇ ಆನೆಗಾಗಿ ವಿರಸವಾಗಿತ್ತು. ಅದು ಮತ್ತಷ್ಟು ಕೆಟ್ಟಿತು. ದಿಲಾವರಖಾನ ಹಾಗೂ ಹಮೀದಖಾನರು ತಂತಮ್ಮ ಗ್ರಾಮಗಳಿಗೆ ಹೋದದ್ದನ್ನು ಗಮನಿಸಿ ಯಖಲಾಸಖಾನನು ಸಮಯ ಸಾಧಿಸಿ ಅವರಿಗೆ ಗೊತ್ತಾಗದಂತೆ ಸರಕಾರದಿಂದ ಒಂದು ಆಜ್ಞಾಪತ್ರವನ್ನು ಪಡೆದು ಎಲ್ಲ ಕಾರಭಾರಿಗಳಿಗಿಂತ ಅಧಿಕವಾದ ಪ್ರದೇಶವನ್ನು ಗಳಿಸಿ, ಅಷ್ಟೇ ದೊಡ್ಡದಾದ ಸೈನ್ಯವನ್ನೂ ಕೂಡಿಸಿದ್ದನು. ಉಳಿದ ಎಲ್ಲ ಕಾರಭಾರಿಗಳೂ ಒಬ್ಬರೊಬ್ಬರಿಗೆ ಸಹಾಯ ಮಾಡಿ ತಾವೂ ಅಧಿಕ ಪ್ರದೇಶವನ್ನು ಗಳಿಸಿ, ದೊಡ್ಡ ಸೈನ್ಯವನ್ನು ಸೇರಿಸಿ ಯಖಲಾಸಖಾನನಿಗಿಂತ ಅಧಿಕವಾದ ಯೋಗ್ಯತೆಯನ್ನು ಪ್ರದೇಶವನ್ನು ದೊರಕಿಸಿಕೊಳ್ಳುವುದರಲ್ಲಿ ತೊಡಗಿದರು. ದಿನ ದಿನಕ್ಕೆ ಅಂಥ ಆಶೆ ಎಲ್ಲ ಕಾರಭಾರಿಗಳಲ್ಲೂ ಪ್ರಬಲವಾಗತೊಡಗಿತು. ಅದರಿಂದಾಗಿ ಒಬ್ಬರೊಬ್ಬರಲ್ಲಿ ದ್ವೇಷ ಅಸೂಯೆಗಳು ಉಂಟಾಗಿ ಸ್ನೇಹ-ಮಿತ್ರತ್ವಗಳಿಗೆ ಸ್ಥಳವೆ ಉಳಿಯಲಿಲ್ಲ. ಕಾರಭಾರಿ ಜನರಲ್ಲಿ ಕಪಟ-ಮೋಸ ಮತ್ತು ಒಬ್ಬರನ್ನೊಬ್ಬರು ಬದಲಾಯಿಸುವ ಭಾವ, ಪರಸ್ಪರರಲ್ಲಿ ಸಂಶಯ ಬರ ಹತ್ತಿತ್ತು. ಪ್ರತಿಯೊಬ್ಬ ಕಾರಭಾರಿಗಳು ದರಬಾರಿನಲ್ಲಿ ಬರುವ ಸಮಯದಲ್ಲಿ ತಂತಮ್ಮ ಗುಂಪಿನೊಂದಿಗೆ ಎಚ್ಚರಿಕೆಯಿಂದ ಬರಹತ್ತಿದರು. ಸಂಕಟವನ್ನು ಸೃಷ್ಟಿಸುವ ಜನರು, ಜಗಳಗಂಟರು ಜಗಳ ಹಚ್ಚಲು, ಮತ್ತು ಪರಸ್ಪರ

ವೈಮನಸ್ಯ ತರಲು ಒಬ್ಬರೊಬ್ಬರಲ್ಲಿ ಬೆಂಕಿ ಹಚ್ಚುತ್ತಿದ್ದರು. ನೌಕರರು ಒಬ್ಬರೊಬ್ಬರಲ್ಲಿ ಬೈಗಳದ ಭಾಷೆಯನ್ನು ಬಳಸುತ್ತಿದ್ದರು. ಅದು ವಿಕೋಪಕ್ಕೆ ಹೋಗಿ, ಯುದ್ಧದ ಸಿದ್ಧತೆ ನಡೆಯುತ್ತಿತ್ತು. ಕೋಟೆಯಲ್ಲಿಯೇ ತಲವಾರಿನ ಸಪ್ಪಳದ ಭಯ ಉಂಟಾಯಿತು. ಒಬ್ಬರೊಬ್ಬರನ್ನು ಕೊಂದು ಪ್ರಸಿದ್ಧರಾಗುವಂತಾಯಿತು. ಯಖಲಾಸಖಾನನಿಗೆ ಹಮೀದಖಾನನೊಂದಿಗೆ ಆನೆಯ ಬಗ್ಗೆ ಇದ್ದ ತಗಾದೆಯ ಜತೆ, ಯಖಲಾಸಖಾನನು ಬಹಳ ಪ್ರದೇಶಗಳನ್ನು ಹೊಂದಿದ್ದಾನೆಂದೂ ವಿರಸವಿತ್ತು. ದಿಲಾವರ ಖಾನನು ಈ ಇಬ್ಬರ ಮಧ್ಯ ಜಗಳ ಹಚ್ಚುತ್ತಿದ್ದನು. ಒಟ್ಟಾರೆಯಾಗಿ ಪರಸ್ಪರ ದ್ವೇಷಿಸುತ್ತ ಕೆಲಸ ಮಾಡುತ್ತಿದ್ದಿಲ್ಲ. ಅದರಿಂದಾಗಿ ರಾಜಧಾನಿಯ ಕಾರಭಾರವು ಸಂಕಟದಲ್ಲಿ ಬಿದ್ದಿತ್ತು.

### ೧೭. *ದಿಲಾವರಖಾನ ಮತ್ತು ಹಮೀದಖಾನರು ಒಂದಾಗಿ ಯಖಲಾಸಖಾನನನ್ನು ಕೆಲಸದಿಂದ ತೆಗೆಯಲು ಯುಕ್ತಿ, ಜಗಳ, ಯುದ್ಧಗಳಾದ ನಂತರ ಯಖಲಾಸಖಾನನನ್ನು ಎರಡು ತಿಂಗಳು ಬಂಧಿಸಿಟ್ಟದ್ದು :*

ಯಖಲಾಸಖಾನನನ್ನು ಕೆಲಸದಿಂದ ತೆಗೆಯಲು ದಿಲಾವರಖಾನ ಹಾಗೂ ಹಮೀದಖಾನರು ಒಂದಾಗಿ ಯಖಲಾಸಖಾನನು ನಮ್ಮನಮ್ಮಲ್ಲಿ ಪ್ರದೇಶಗಳನ್ನು ಸರಿಯಾಗಿ ಹಂಚಿಕೊಡದ ಹೊರತು ಕೋಟೆಯಲ್ಲಿ ಬರಬಾರದೆಂದು ನಿಷೇಧ ಮಾಡಿದರು. ದಿನದಿನವೂ ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಹತ್ತಿದರು. ಯಖಲಾಸಖಾನನು ಶಸ್ತ್ರಗಳನ್ನು ತೋಪುಗಳನ್ನು, ಬಂದೂಕು, ಗೋಲಂದಾಜಗಳನ್ನು ನಗರದ ಕೋಟೆಯಿಂದ ಕೆಳಗಿಳಿಸಿ, ಕೋಟೆಯ ಕಡೆಗೇ ಗುರಿಯಾಗಿ ಬೇರೆ-ಬೇರೆ ಸ್ಥಳಗಳಲ್ಲಿ ಇಟ್ಟನು. ದಾರಿಯನ್ನು ಮುಚ್ಚಿ ನಾಕಾಬಂದಿಯನ್ನು ಮಾಡಿದನು. ದಿಲಾವರಖಾನ-ಹಮೀದಖಾನರೂ ಕೋಟೆಯ ಬಾಗಿಲಲ್ಲಿ ಕುಳಿತು ಶಸ್ತ್ರಗಳನ್ನು ಇಟ್ಟಕೊಂಡು ಸಿದ್ಧರಾದರು. ಹೈದರಖಾನನು ಕೋಟೆಯ ಮೇಲೆ ತೋಫು ಬಂದೂಕು ಹಾರಿಸುವವರನ್ನಿಟ್ಟನು. ತೋಪು ಮತ್ತು ಬಂದೂಕುಗಳ ಮುಖವನ್ನು ಯಖಲಾಸಖಾನನ ಮನೆಯ ಕಡೆಗೆ ತಿರುಗಿಸಿದನು. ಯಖಲಾಸಖಾನ ಮತ್ತು ದಿಲಾವರಖಾನ ಈ ಇಬ್ಬರ ಕಡೆಯಿಂದಲೂ ತೋಫುಗಳು, ಹತ್ಯಾರಗಳು ಕೆಲಸಮಾಡತೊಡಗಿ ಯುದ್ಧಗಳಾಗುತ್ತಿದ್ದವು. ಈ ಉಭಯತರ ಯುದ್ಧದಲ್ಲಿ ಬಡಬಗ್ಗರು, ಫಕೀರರು, ರೈತರು ಬಹಳಷ್ಟು ಜನರು ನಿರ್ಗತಿಕರಾಗಿ ನಾಶವಾಗುತ್ತಿದ್ದರು. ಹೀಗೇಯೇ ಒಂದು ದಿನ ಮೌಲಾನಾ ಮಹಮ್ಮದ ಇಸ್ತರಾಬಾದಿ ಎಂಬ ಒಬ್ಬ ವ್ಯಾಪಾರಸ್ಥನು ಅಂಗಡಿಯಲ್ಲಿ ಕುಳುತಿದ್ದನು. ಒಮ್ಮೆಲೆ ಯಖಲಾಸಖಾನನ ಕಡೆಯಿಂದ ತೋಫಿನ ಒಂದು ಗುಂಡು ಮೌಲಾನಾನ ಅಂಗಡಿಯ ಆರು ಜನ ಸೇವಕರ ಮೇಲೆ ಬಂದು ಬಿದ್ದಿತು. ಅದರಿಂದಾಗಿ ಆ ನೌಕರರು ಒಬ್ಬರೊಬ್ಬರ ಮೇಲೆ ಬಿದ್ದು ಶರೀರ ತುಂಡು-ತುಂಡುಗಳಾಗಿ ಸತ್ತು ಬಿದ್ದರು. ಇನ್ನೊಂದು ದಿನ ಔಷಧದ ಅಂಗಡಿಯ ಮುಂದೆ ಐದು ಜನ ಒಬ್ಬರ ಮುಂದೆ ಒಬ್ಬರು ಕುಳಿತಿದ್ದರು. ತೋಫಿನ ಗುಂಡುಗಳು ಬಡಿದು ಆ ಐವರೂ ಸತ್ತು ಅವರ ಎಲಬು-ಮಾಂಸಗಳು ಎಲ್ಲಿ ಬಿದ್ದುವೋ ಗೊತ್ತಾಗಲಿಲ್ಲ.

ಪ್ರತಿನಿತ್ಯ ಹೀಗೆ ನಡೆದಿತ್ತು. ಕೊನೆಗೆ ದಿಲಾವರ ಖಾನ ಹಾಗೂ ಹಮೀದಖಾನರು ಯಖಲಾಸಖಾನನೊಂದಿಗೆ ಒಪ್ಪಂದ ಮಾಡಿಕೊಂಡು ಸಖ್ಯದಿಂದ ಇರಬೇಕೆಂದು ನಿರ್ಧರಿಸಿ ನಾಲ್ವರು ಗೃಹಸ್ಥರನ್ನು, ಸರಜಾಹ, ಶೇಖ ಸಲೀಮ, ಮೌಲಾನಾ ದೋಸ್ತ ಮಹಮ್ಮದ ಹಾಗೂ ರಫೀಯುದ್ದೀನ ಶಿರಾಜಿ ಈ ನಾಲ್ವರನ್ನು ಯಖಲಾಸಖಾನನ ಕಡೆಗೆ ನಿರೋಪ ಕೊಟ್ಟು ಕಳಿಸಿದರು. "ಈ ಸಮಯದಲ್ಲಿ

ಶತ್ರುಗಳು ಸಂಧಿಯನ್ನು ಸಾಧಿಸಿ ಸರಹದ್ದಿನಲ್ಲಿ ಬಂದು ಇಳಿದು ದಾರಿ ಕಾಯುತ್ತಿದ್ದಾರೆ. ಈ ರಾಜಧಾನಿಯಲ್ಲಿ ಸಂಕಟವನ್ನುಂಟು ಮಾಡಿ ಒಮ್ಮಿಂದೊಮ್ಮೆಲೆ ಹಲ್ಲೆಯನ್ನು ಮಾಡಿ ರಾಜಧಾನಿಯನ್ನು ಕೈವಶ ಮಾಡಿಕೊಳ್ಳುವ ದಾರಿಯನ್ನು ನೋಡುತ್ತ ಕುಳಿತಿದ್ದಾರೆ. ನೀವು ಈ ತರದ ಸಂಕಟವನ್ನು ಎದ್ದು ನಿಲ್ಲಿಸಿದ್ದೀರಿ. ರಾಜ್ಯದ ಕಲ್ಯಾಣವನ್ನು ಇಚ್ಛಿಸುವವರಿಗೆ ಇದು ಯೋಗ್ಯವಲ್ಲ. ಕದಾಚಿತ್ ರಾಜಧಾನಿಯಲ್ಲಿ ಒಂದೊಮ್ಮೆ ಸಂಕಟ ಎದುರಾಗಿ ಇಡೀ ರಾಜ್ಯವೇ ಕೈಯಿಂದ ಬಿಟ್ಟುಹೋಗಬಹುದೆಂದು ಹೇಳಲು ಬರುವುದಿಲ್ಲ. ಶತ್ರುಗಳು ನಮ್ಮನ್ನು ನೋಡಿ ನಗುತ್ತಾರೆ. ಇದು ಕೊನೆಯವರೆಗೂ ನಮಗೆ ಕಲಂಕ ತರುತ್ತದೆ. ಆದ್ದರಿಂದ ನಾವು ಮೂವರೂ ಬಂಧುಗಳು ಈ ರಾಜ್ಯವನ್ನು ಪಾಲಿಸುತ್ತ ಬಂದಿದ್ದೇವೆ. ಆದ್ದರಿಂದ ನಮ್ಮಲ್ಲಿದ್ದ ಪ್ರದೇಶಗಳನ್ನು ನಮ್ಮನಮ್ಮಲ್ಲೆ ಲೆಕ್ಕದ ಪ್ರಕಾರ ಹಂಚಿಕೊಳ್ಳುವುದು ಸರಿ ಎನಿಸುತ್ತದೆ. ತಾವು ಹಿರಿಯ ಅಣ್ಣಂದಿರಾಗಿದ್ದೀರಿ. ನಾವು ನಮ್ಮ ಸ್ವಸಂತೋಷದಿಂದ ಒಂದು ಲಕ್ಷ ಹೊನ್ನನ್ನು ತಮ್ಮ ಸೈನ್ಯದ ಖರ್ಚಿಗೆಂದು ಕೊಡುತ್ತೇವೆ. ತಾವು ಪ್ರಾರಂಭಿಸಿದ ಈ ಸಂಕಟವನ್ನು ಶಾಂತಗೊಳಿಸುವುದು ಯೋಗ್ಯವೆನಿಸುತ್ತದೆ. ನಮ್ಮೆಲ್ಲರ ಶ್ರೇಯೋಭಾಗ್ಯ ಇದರಲ್ಲಿಯೇ ಇದೆ" ಎಂದು ಆ ನಿರೋಪವಿತ್ತು, ಅದನ್ನು ತೆಗೆದುಕೊಂಡು ಸದರೀ ನಾಲ್ಕು ಜನ ಸಂಭಾವಿತ ಗೃಹಸ್ಥರು ಯಖಲಾಸಖಾನನ ಮನೆಗೆ ಹೋಗಿ ಈ ವಿಷಯವನ್ನು ಸವಿಸ್ತಾರವಾಗಿ ತಿಳಿ ಹೇಳಿದರು. ಅಲ್ಲದೆ ಪ್ರತಿಯೊಬ್ಬರೂ ರಾಜ್ಯದ ಹಿತದ ದೃಷ್ಟಿಯಿಂದ ಆತನಿಗೆ ಬೋಧಿಸಿದರು. ಯಜಮಾನನ ಕಲ್ಯಾಣವನ್ನು ಆಶಿಸುವುದನ್ನು ಒತ್ತಿ ಹೇಳಿದರು. ಆದರೆ ಯಖಲಾಸಖಾನನು ಆ ನಾಲ್ವರ ಮಾತನ್ನು ಎಳ್ಳಷ್ಟೂ ಒಪ್ಪಲಿಲ್ಲ. ಪ್ರತಿಯಾಗಿ ಕೋಪೋದ್ರಿಕ್ತನಾಗಿ ಇನ್ನಷ್ಟು ಶಸ್ತ್ರಗಳನ್ನು ಸಂಗ್ರಹಿಸಿ ಯುದ್ಧಕ್ಕ ಪ್ರಚೋದಿಸಿದನು.

ದೂರ-ದೂರದಲ್ಲಿದ್ದ ಅಮೀರ ಜನರು ವಿಜಾಪುರದ ಹತ್ತಿರ ಬಂದು ಇಲ್ಲಿಯ ವಿಷಯವನ್ನು ತಿಳಿದರು. ಆಗ ಮೊದಲು ಬುದ್ಧಿ ಹೇಳಿ ನೋಡಬೇಕೆಂದು ಯಖಲಾಸಖಾನನಿಗೆ ಉತ್ತಮ ನೀತಿಯಿಂದ ದೊರೆಯುವ ಉತ್ತಮ ಫಲದ ಬೋಧನೆಯನ್ನು ಮಾಡಿದರು. ಆದರೆ ಯಖಲಾಸಖಾನನ ಹಟ ಮತ್ತು ಹುಂಬತನದಿಂದಾಗಿ ಅವರ ಬೋಧನೆಗೆ ಫಲ ಸಿಗಲಿಲ್ಲ. ಹಾಗೆಯೇ ಹಗಲು-ರಾತ್ರಿ ಎರಡು ತಿಂಗಳುಗಳ ವರೆಗೆ ಯುದ್ಧ ನಡೆಯಿತು. ನಾಲ್ಕು ಕಡೆಯ ಹಾಗೂ ಗ್ರಾಮ ಗ್ರಾಮಗಳ ಜನರು ಸೇರಿ ಕೋಟೆ ಕಡೆಗೆ ಬಂದೂಕುಗಳನ್ನು ಹಾರಿಸುತ್ತಿದ್ದರು. ಅದರಿಂದಾಗಿ ಬಹಳ ಜನರು ಸಾಯುತ್ತಿದ್ದರು. ದಿಲಾವರಖಾನನು ತುಂಬ ಬುದ್ಧಿವಂತನೂ ವಿಚಾರವಂತನೂ, ಹಿತವಂತನೂ ಆಗಿದ್ದನು. ಜನರಿಗೆ ತೊಂದರೆಯಾಗಬಾರದೆಂದು ಸಾಧ್ಯವಿದ್ದಷ್ಟು ರಕ್ಷಣೆಗಾಗಿ ಪ್ರಯತ್ನಿಸುತ್ತಿದ್ದನು. ಎಲ್ಲರನ್ನೂ ಬಹಳ ಮುರವತ್ತಿನಿಂದ ಪ್ರೀತಿಸುತ್ತಿದ್ದನು. ಸ್ನೇಹದಿಂದ ಇರುತ್ತಿದ್ದನು. ಎಲ್ಲರ ಅಂತಃಕರಣವೂ ದಿಲಾವರಖಾನನತ್ತ ಇದ್ದಿತು. ದಿಲಾವರ ಖಾನನು ಯಖಲಾಸಖಾನನ ಕಡೆಯ ಸೈನ್ಯಕ್ಕೆ ಬಾದಶಹನ ಕಡೆಯಿಂದ ಹೀಗೆ ಆಶೆಯನ್ನು ತೋರಿಸಿದನು ಮತ್ತು ಬೆದರಿಕೆಯನ್ನು ಹಾಕಿದನು "ನೀವು ಒಂದು ವೇಳೆ ಬಾದಶಹನ ವಿರುದ್ಧ ನಡೆದರೆ ಬಾದಶಹನಿಂದ ಹಾಗೂ ನನ್ನಿಂದ ಶಿಕ್ಷೆಗೆ ಒಳಗಾಗುವಿರಿ, ಬಾದಶಹರ ಆಜ್ಞೆಯಂತೆ ನಡೆದರೆ ಅವರಿಂದ ಮತ್ತು ನನ್ನಿಂದ ಬಹಳಷ್ಟು ಬಹುಮಾನಗಳನ್ನು ಪಡೆಯುವಿರಿ" ಎಂದು ಯಖಲಾಸಖಾನನ ಸೈನ್ಯಕ್ಕ ಹೇಳಿ ಕಳಿಸಿದನು. ಆಗ ಯಖಲಾಸಖಾನನ ಸೈನ್ಯವು ಒಮ್ಮಿಂದೊಮ್ಮೆಲೆ ನಗರದ ಬಾಗಿಲಿನಿಂದ ಹೊರಗೆ ಓಡಿ ಹೋಯಿತು. ಆದರೆ, ಅವರಲ್ಲಿ ಮೊದಲಿನಿಂದಲೇ ಯಖಲಾಸಖಾನನ ಆಜ್ಞೆಯನ್ನು ಮೀರದ ಕೆಲವರು ಅವನೊಂದಿಗೆಯೇ ಉಳಿದರು. ಐನುಲ್‌ಮುಲ್ಕ ಹಾಗೂ ಅಂಕುಶಖಾನರು ಈ ಮೊದಲೆ ಯಖಲಾಸಖಾನನ ಮನೆಯ

ಹಿಂದೆ ಬಂದು ಇಳಿದಿದ್ದರು. ಅಲ್ಲಿಂದ ಹೊರಟು ದಿಲಾವರಖಾನ ಹಾಗೂ ಹಮೀದ ಖಾನರ ಹತ್ತಿರ ಬಂದು ಸೇರಿದರು. ದಿಲಾವರಖಾನನು ತನ್ನ ಸಿದ್ಧವಾಗಿದ್ದ ಸೈನ್ಯದೊಂದಿಗೆ ಹೊರಟು ಯಖಲಾಸಖಾನನ ಮನೆಯ ಹತ್ತಿರವೆ ಬಂದು ಅಲ್ಲಿ ರಾತ್ರಿ ಮುಕ್ಕಾಮ ಮಾಡಿದನು. ಅಳಿದುಳಿದ ಯಖಲಾಸಖಾನನ ಸೈನ್ಯವು ಅದನ್ನು ಕಂಡು ಓಡಿಹೊಯಿತು. ಯೆಖಲಾಸಖಾನನು ಒಬ್ಬನೇ ಉಳಿದನು. ಯಖಲಾಸಖಾನನು ಅದೇ ರಾತ್ರಿ ತನ್ನ ಮಗನೊಂದಿಗೆ ಯಾರಿಗೂ ಗೊತ್ತಾಗದಂತೆ ಹಮೀದಖಾನನು ಮಲಗಿದ್ದ ಸ್ಥಳಕ್ಕೆ ಬಂದನು. ಇದು ದಿಲಾವರಖಾನನಿಗೆ ಸರಿ ಕಾಣುವುದಿಲ್ಲವೆಂದು ತಿಳಿದು ಹಮೀದಖಾನನು ಅವನ ಮಾತನ್ನು ಕೇಳಲಿಲ್ಲ. ಅವನಿಗೆ ಇಷ್ಟನ್ನೆ ಹೇಳಿದನು "ಇರಲಿ, ನಿಮಗೆ ಮೋಸವಾಗುವುದಿಲ್ಲ ಆದರೆ, ನಿಮ್ಮನ್ನು ದಿಲಾವರಖಾನನು ಮಕ್ಕಾಗೆ ಕಳಿಸುವನು" ಇದನ್ನು ಹೇಳಿದಾಗ ಯಖಲಾಸಖಾನನು ಪೂರ್ಣ ಭರವಸಯೊಂದಿಗೆ ತಿರುಗಿ ತನ್ನ ಸ್ಥಳಕ್ಕೆ ಬಂದನು.

ಮರುದಿನ ದಿಲಾವಾರಖಾನನು ನಗರದ ಅಗಸೆಯ ಮುಂದೆ ಆಜ್ಞೆ ಹೊರಡಿಸಿ ಯಖಲಾಸಖಾನನನ್ನು ಅಗಸೆಯ ಹೊರಗಡೆ ಬಿಡಬಾರದೆಂದು ಅಪ್ಪಣೆ ಮಾಡಿದನು. ತಾನು ಸ್ವತಃ, ಹಮೀದಖಾನನಿಂದೊಡಗೂಡಿ ವೈಭವದಿಂದ ಕುದುರೆಯ ಮೇಲೆ ಕುಳಿತು, ಯಖಲಾಸಖಾನನ ಮನೆಯ ಮುಂದೆಯೇ ಹಾದು ದರಬಾರಕ್ಕೆ ಬಂದನು. ಮತ್ತು ಬಾದಶಹರಿಗೆ ಮುಜುರೆ ಸಲ್ಲಿಸಿದನು. ಆಗ ಯಖಲಾಸಖಾನನು ಮತ್ತೆ ಹಮೀದಖಾನನ ಮನೆಗೆ ಬಂದು ಹೊರಗೆ ಕುಳಿತಿದ್ದಾನೆಂಬ ಸುದ್ದಿ ಬಂದಿತು. ಸುದ್ದಿ ತಿಳಿಯುತ್ತಲೇ ದಿಲಾವರಖಾನನು ಬಾದಶಹನ ಕಡೆಯ ಜನರನ್ನು ಕಳಿಸಿ. 'ನೀವು ಮನೆಗೆ ಹೋಗಬಾರದು ಮಕ್ಕೆಗೆ ಹೋಗಲು ಸಿದ್ಧರಾದರೆ ಬಾದಶಹರ ಕಡೆಯಿಂದ ಅನುಗ್ರಹಪೂರ್ವಕವಾಗಿ ನಿರೂಪ ಕೊಡಲಾಗುತ್ತದೆ'. ಎಂದು ಹೇಳಿ ಕಳಿಸಿದನು. ಅದನ್ನು ಕೇಳಿ ಯಖಲಾಸಖಾನನು ಮಕ್ಕೆಗೆ ಹೋಗುವ ಸಿದ್ಧತೆಯನ್ನು ಮಾಡಿಕೊಳ್ಳಹತ್ತಿದನು. ನಿರೋಪ ಪಡೆದು ಮಕ್ಕೆಗೆ ಹೋದನು. ರಾಜ್ಯದ ಭಂಡಾರದಲ್ಲಿ ಕೆಲಸಕ್ಕಿದ್ದ ಅಹಮ್ಮದಖಾನ ಎಂಬವನನ್ನು ತುಸು ಸಿಬ್ಬಂದಿಯೊಂದಿಗೆ ಯಖಲಾಸಖಾನನೊಂದಿಗೆ ನಿಯಮಿಸಿದ್ದರು. ಅವರು ಮುರ್ತಜಾಬಾದವನ್ನು ಮುಟ್ಟಿದಾಗ ಅಹಮದಖಾನನು ಯಖಲಾಸಖಾನನಿಗೆ "ಸಮುದ್ರದಲ್ಲಿ ಹಡಗು ಬರುವವರೆಗೆ ನೀವು ಇಲ್ಲಿ ಮುರ್ತಜಾಬಾದದಲ್ಲಿಯೆ ಇರಬೇಕೆಂದು ಬಾದಶಹರು ಅಪ್ಪಣೆ ಕೊಡಿಸಿದ್ದಾರೆ" ಎಂದನು. ಅನಂತರ ಯಖಲಾಸಖಾನನನ್ನು ಅವನ ಹೆಂಡತಿ ಮಕ್ಕಳೊಂದಿಗೆ ಮುರ್ತಜಾಬಾದದ ಕೋಟೆಯಲ್ಲಿಯೆ ಬಂಧಿಸಿಟ್ಟನು. ದಿಲಾವರಖಾನನು ಹೋದ ನಂತರ ಇಬ್ರಾಹಿಮ ಆದಿಲಶಹ ಬಾದಶಹನು ಯಖಲಾಸಖಾನ ಮತ್ತು ಆತನ ಹೆಂಡಿರು ಮಕ್ಕಳನ್ನು ಬಿಡುಗಡೆ ಮಾಡಿ, ಆತನಿಗೆ ಜಹಗೀರನ್ನು ಹಾಕಿಕೊಟ್ಟನು. ಅದರಿಂದ ಯಖಲಾಸಖಾನನು ಜೀವಮಾನ ಪರ್ಯಂತ ಸುಖದಿಂದ ಕಳೆದನು. ಹಿಜರಿಸನ್ ೧೦೦೬ರಲ್ಲಿ (ಕ್ರಿ.ಶ ೧೫೯೭-೯೮) ಯಖಲಾಸಖಾನನು ಸತ್ತನು.

### *೧೮. ಕೆಲವು ದಿನಗಳ ಅನಂತರ ಹಮೀದಖಾನನನ್ನು ಕೂಡ ಬಂಧಿಸಿದ್ದು.*

ಯಖಲಾಸಖಾನನ ಬಂಧನವಾದ ಅನಂತರ, ದಿಲಾವರಖಾನ ಮತ್ತು ಹಮೀದಖಾನರು ಪರಸ್ಪರ ಸ್ನೇಹದಿಂದ ಇರಹತ್ತಿದರು. ಪ್ರತಿನಿತ್ಯ ಸರಕಾರೀ ಕಛೇರಿಗೆ ಬಂದು ಉಭಯತರು ಕೂಡಿ ರಾಜಧಾನಿಯ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು. ಹಮೀದಖಾನನು ತನಗೆ ಸರನೋಬತಿ ಪದವಿ ದೊರೆಯಬೇಕೆಂದು ಇಚ್ಛಿಸುತ್ತಿದ್ದನು. ಸರನೋಬತಿ ಪದವಿ ದೊರೆತರೆ ನಿರಂತರವಾಗಿ ರಾಜಧಾನಿಯ

ಕೆಲಸವನ್ನು ಮಾಡಬಹುದೆಂದು ಮನಸ್ಸಿನ ಇರಾದೆ ಇತ್ತು. ಎಲ್ಲ ಜನರಿಗೂ ಈ ತರದ ಸಂಶಯವೂ ಬಂದಿತ್ತು ಹಮೀದಖಾನನೇ ಸರನೋಬತನಾಗುತ್ತಾನೆಂದು ತಿಳಿದಿದ್ದರು. ಈ ಬಗ್ಗೆ ಎಲ್ಲ ಕಡೆಯವರು ಮಾರ್ಗ ಪ್ರತೀಕ್ಷೆಯನ್ನು ಮಾಡುತ್ತಿದ್ದರು. ಕೆಲವು ದಿಗನಳ ಅನಂತರ ದಿಲಾವರಖಾನನು ತನ್ನ ಮಗ ಕಮಾಲಖಾನನ್ನು ಬಾದಶಹರ ಹತ್ತಿರ ಕರೆತಂದು ಕಮಾಲಖಾನನಿಗೆ ಸರನೋಬತಿಯ ವಸ್ತ್ರಗಳನ್ನು ಕೊಡಿಸಿದನು. ಆಗ ದಿಲಾವರಖಾನನು ತಾನೆ ಪ್ರಬಲನಾಗಬೇಕೆಂದಿದ್ದಾನೆಂಬುದು ಎಲ್ಲರಿಗೂ ಸತ್ಯ ಗೋಚರಿಸಿ ಖಾತ್ರಿಯಾಯಿತು. ಸರಕಾರಿ ಕೆಲಸಗಳಲ್ಲಿ, ಆಜ್ಞೆ ಕೊಡುವ ಕೆಲಸಗಳಲ್ಲಿ ಬೇರೆ ಯಾರೂ ಇರಬಾರದು. ತಾನೊಬ್ಬನೆ ಕಾರಭಾರ ಮಾಡಬೇಕು ಎಂದು ಇಚ್ಛಿಸುತ್ತಿದ್ದಾನೆ. ಅಂತೆಯೇ ಕಮಾಲಖಾನನಿಗೆ ಸರನೋಬತಿಯ ವಸ್ತ್ರಗಳನ್ನು ಕೊಟ್ಟಿದ್ದಾರೆ. ಅದರಿಂದ ಹಮೀದಖಾನನು ಬಹಳ ಖಿನ್ನನಾದನು. ದಿಲಾವರಖಾನ-ಹಮೀದಖಾನರ ಮಧ್ಯ ದ್ವೇಷ ಹುಟ್ಟಿತು. ಮರುದಿನವೆ ದಿಲಾವರಖಾನನು ಬಾದಶಹನ ಕಡೆಯಿಂದ ಒಬ್ಬನನ್ನು ಹಮೀದ ಖಾನನ ಕಡೆಗೆ ಕಳಿಸಿ 'ಸರಕಾರದ ಆಜ್ಞೆಯ ಹೊರತಾಗಿ ನೀವು ನಿಮ್ಮ ಮನೆಯ ಹೊರಗೆ ಹೋಗಬಾರದು; ರಾಜ್ಯದ ಸಾಮಾನು ಸರಂಜಾಮುಗಳು, ಕುದುರೆಗಳು, ಆನೆಗಳು ಶಸ್ತ್ರಗಳು ಇತ್ಯಾದಿಯಾಗಿ ಏನಿದೆಯೋ ಅದನ್ನೆಲ್ಲವನ್ನೂ ಸರಕಾರಕ್ಕೆ ಸಲ್ಲಿಸಬೇಕು" ಎಂಬ ನಿರೋಪವನ್ನು ಕಳಿಸಿದನು. ಹಮೀದಖಾನನು ಕುದುರೆ ಏರಿ, ಆನೆ-ಕುದುರೆಗಳೊಂದಿಗೆ ನಗರದ ಹೊರಗೆ ಹೋಗಿ ಬಿಡಬೇಕೆಂದು ಮನಸ್ಸುಮಾಡಿದನು. ಹೀಗೆ ಯೋಚಿಸುತ್ತಿದ್ದಾನೆಂದು ತಿಳಿದಾಕ್ಷಣ ನಗರದ ಪ್ರತಿಯೊಂದು ಅಗಸೆಯ ಬಾಗಿಲಿಗೆ ಎಚ್ಚರಿಕೆಯನ್ನು ಕಳಿಸಿ, ಹಮೀದಖಾನನನ್ನು ಹೊರಗೆ ಬಿಡಬಾರದೆಂದು ಹೇಳಿ ಕಳಿಸಲಾಯಿತು. ಅದು ಗೊತ್ತಾದಾಗ ಹಮೀದಖಾನನು ಶತಾವಧಿ ಚಿಂತೆಗಳಿಂದ ಖಿನ್ನನಾಗಿ, ಮುಂದೆ ಏನಾಗುವುದೋ ನೋಡಬೇಕೆಂದು ಪ್ರತೀಕ್ಷೆ ಮಾಡುತ್ತ, ಖೇದ ಗಾಬರಿಗಳಿಂದ ಮನೆಯಲ್ಲಿಯೆ ಕುಳಿತನು. ಮರುದಿನ ಹಮೀದಖಾನನ ಹತ್ತಿರವಿದ್ದ ರಾಜ್ಯದ ಸಾಮಾನು ಸರಂಜಾಮುಗಳನೆಲ್ಲ ಸರಕಾರ ಜಪ್ತಿ ಮಾಡಿತು. ಅವನಲ್ಲಿ ಎಷ್ಟೊಂದು ಕುದುರೆ, ಆನೆ, ಶಸ್ತ್ರಗಳನ್ನು ಪದಾರ್ಥಗಳಿದ್ದುವೆಂದರೆ, ಅವುಗಳ ಅರ್ಧ ಅಥವಾ ಕಾಲುಭಾಗ ಯಾವುದೇ ಒಬ್ಬ ಅಮೀರನ ಹತ್ತಿರ ಇರಲಿಲ್ಲ. ತುಸುವೆ ದಿನಗಳಲ್ಲಿ ದಿಲಾವರಖಾನನು, ಹಮೀದ ಖಾನನನ್ನು ಒಂದು ಕೋಟೆಗೆ ಕಳಿಸಿ, ಅಲ್ಲಿಯೇ ಬಂಧಿಸಿ ಸೆರೆಮನೆಯಲ್ಲಿಟ್ಟನು. ತಾನೆ, ಮಾಲಕನಾಗಿ ತನ್ನ ಸರಿ ಇನ್ನು ಯಾರೂ ಇಲ್ಲ ಎಂಬ ಗರ್ವದ ಧ್ವಜವನ್ನು ನಿಲ್ಲಿಸಿದನು. ರಾಜಧಾನಿಯ ಕಾರಭಾರಗಳಲ್ಲೂ ಪ್ರಬಲನಾದನು. ಎಲ್ಲ ಕೆಲಸಗಳ ಮುಖ್ತ್ಯಾರಿಯನ್ನು ತನ್ನ ಕೈಯಲ್ಲೆ ಇಟ್ಟುಕೊಂಡನು.

### ೧೯. *ದಿಲಾವರಖಾನನು ವಿಜಾಪುರದ ಪ್ರಧಾನನಾಗಿ ಎಂಟು ವರುಷಗಳ ಕಾಲ ಕೆಲಸ ಮಾಡಿದ್ದರ ವರ್ಣನೆ :*

ದಿಲಾವರಖಾನನು ಬಹಳ ಬುದ್ಧಿವಂತನಾಗಿದ್ದನು. ದೊಡ್ಡ-ದೊಡ್ಡ ಕೆಲಸಗಳನ್ನು ಮಾಡಿದವನೂ ಆಗಿದ್ದನು. ೮೦ ವರುಷಗಳವರೆಗೆ ಅಮೀರ ಪದವಿಯಲ್ಲಿ ನೌಕರಿ ಮಾಡಿ ಆತ ಯೋಗ್ಯತೆಯನ್ನು ಸಂಪಾದಿಸಿದ್ದನು. ದಿಲಾವರನ ಮುಖ್ತ್ಯಾರಿಯ ಕೆಲಸ ಕಾಲವು ಒಳ್ಳೆಯ ವ್ಯವಸ್ಥೆಯಲ್ಲಿತ್ತು. ಬಹುಶಃ ಹಾಗೆ ಇನ್ನಾರೂ ಮಾಡಲಾರರು ಎಂಬಂತಿತ್ತು. ದಿಲಾವರಖಾನನು ಪುರಾತನ ಶ್ರೇಷ್ಠ ಅಮೀರ ಜನರೊಂದಿಗೆ ಶರೀರ ಸಂಬಂಧವನ್ನು ಬೆಳೆಸಿ, ಅನೇಕ ಅಮೀರರಿಗೆ ಇಲ್ಲಿಯ ಕನ್ಯೆಗಳನ್ನು ಕೊಟ್ಟು, ಇನ್ನೂ ಕೆಲವು ಅಮೀರರ ಕನ್ಯೆಗಳನ್ನು ತೆಗೆದುಕೊಂಡು, ಎಲ್ಲರ ಮಧ್ಯ ಆಪ್ತ ಸಂಬಂಧವನ್ನು ಜೋಡಿಸಿದನು. ದೊಡ್ಡ-ದೊಡ್ಡ

ಸಂಭಾವಿತ ಪ್ರಸಿದ್ಧರಾದ ಸೈನಿಕರು-ಸಿಪಾಯಿಗಳ ಜೊತೆಗೆ ಶರೀರ ಸಂಬಂಧವನ್ನು ಜೋಡಿಸಿ ಅವರಿಗೆ ಬಹಳ ಯೋಗ್ಯತೆಯನ್ನು ದೊರಕಿಸಿಕೊಟ್ಟನು. ತನ್ನ ಎಲ್ಲ ಮಕ್ಕಳಿಗೂ ದೊಡ್ಡ-ದೊಡ್ಡ ಪದವಿಗಳನ್ನು ನೀಡಿ ಅವರ ಯೋಗ್ಯತೆಯನ್ನು ಏರಿಸಿದನು. ಹಿರಿಯ ಮಗ ಮಹಮ್ಮದ ಖಾನನಿಗೆ ಶ್ರೇಷ್ಠ ಅಮೀರ ಪದವಿಯನ್ನು ನೀಡಿ, ಬಾದಶಹನಿಗೆ 'ಕುರಾನ ಶರೀಫ' ಹಾಗೂ 'ಗುಲೀಸ್ತಾನ ಬುಸ್ತಾನ' ಈ ಗ್ರಂಥಗಳನ್ನು ಕಲಿಸಲು ನಿಯಮಿಸಿದನು. ಎರಡನೆಯ ಮಗ ಕಮಾಲಖಾನನಿಗೆ ಅಮೀರ ಹಾಗೂ ಬಕ್ಷಿ ಪದವಿಗಳನ್ನು ನೀಡಿ ಬಾದಶಹನ ಹತ್ತಿರ ಚೆಂಡು, ದಾಂಡು ಇತ್ಯಾದಿ ನಾನಾ ಬಗೆಯ ಆಟಗಳನ್ನಾಡಲು ನಿಯಮಿಸಿದನು. ಮೂರನೆಯ ಮಗ ಖೈರಾತಖಾನನಿಗೂ ಶ್ರೇಷ್ಠ ಅಮೀರ ಪದವಿಯನ್ನು ನೀಡಿ ಬಾದಶಹನ ಸಂರಕ್ಷಣೆಗಾಗಿ ನಿಯಮಿಸಿದನು. ನಾಲ್ಕನೆಯ ಮಗ ಅಬ್ದುಲ್ ಖಾದರನನ್ನು ವಿಜಾಪುರ ನಗರದ ವ್ಯವಸ್ಥೆಗೆ ನಿಯಮಿಸಿದನು. ಎಲ್ಲ ಮಕ್ಕಳ ಹತ್ತಿರ ಎರಡೆರಡು ಸಾವಿರ ಕುದುರೆಗಳನ್ನಿಟ್ಟು ತನ್ನ ಹತ್ತಿರ ಆರು ಸಾವಿರ ಕುದುರೆಗಳನ್ನಿಟ್ಟುಕೊಂಡನು. ದತ್ತಕ ತೆಗೆದುಕೊಂಡಿದ್ದ ಬಲೂಲಖಾನನಿಗೂ ಶ್ರೇಷ್ಠ ಪದವಿಯನ್ನಿತ್ತು, ನೂರುಜನ ಮೊಗಲ ಚಾಕರರನ್ನು, ಹಬಶೀ ಜಾತಿಯ ಅಶಕ್ತ ವೃದ್ಧ ೬೦ ಜನರನ್ನು ಯಾರೂ ಅವರ ಬಗ್ಗೆ ತಕರಾರು ತೆಗೆಯದಂತೆ ಬಾದಶಹನ ಚಾಕರಿಗೆ ಇಟ್ಟಿದ್ದನು. ಅಲೀ ಆದಿಲಶಹನ ಕಾಲದಲ್ಲಿ ಇರಾಕ, ಖುರಸಾನ, ರೂಮ ಮತ್ತು ಈಜಿಪ್ತ ದೇಶಗಳಿಂದ ಬಂದ ಬಡಜನರು ನೌಕರಿ ಮಾಡುತ್ತಿದ್ದರು. ಅವರು ಕಾರಕೂನ ಮಂಡಲ, ಅಮೀರ ಜನ ಮತ್ತು ಶಿಪಾಯಿ ಮಂಡಳ ಎಂದು ಕೆಲಸ ಮಾಡುತ್ತಿದ್ದರು. ಎಲ್ಲರೂ ಒಟ್ಟು ಐದಾರು ಸಾವಿರ ಜನರಿದ್ದರು. ಅವರೆಲ್ಲ ಹೊರಟು ಹೋದ ಬಳಿಕ ಉಳಿದ ಕೆಲವು ಜನರನ್ನೂ ಕೆಲಸದಿಂದ ತೆಗೆದುಹಾಕಿ, ಅವರ ಸ್ಥಳದಲ್ಲಿ ತನ್ನ ಜನರನ್ನು ನಿಯಮಿಸಿದನು. ಕೇವಲ ಬಾದಶಹನ ಸೇವೆಯಲ್ಲಿದ್ದ ನೌಕರರು ಅಂದರೆ ಮಕ್ಕಳಿಗೆ ಹಾಲು ಕುಡಿಸುವ ದಾಯಿಗಳು, ಮತ್ತು ಕುಣಬಿಣಿ ಸೇವಿಕೆಯರು, ಅದರಂತೆ ಬಾದಶಹನ ತಾಯಿಯ ಸೇವೆಯಲ್ಲಿದ್ದ ಜನರನ್ನೆಲ್ಲ ಕೆಲಸದಿಂದ ತೆಗೆದು ಹಾಕಿ, ಅಲ್ಲಿ ತನ್ನವರನ್ನು ನಿಯಮಿಸಿದನು. ದ್ವಾರಪಾಲಕರನ್ನು ಕೂಡ ತನ್ನ ಕಡೆಯ ಜನರನ್ನು ನಿಯಮಿಸಿದನು. ತನ್ನ ಜನರನ್ನು ಬಿಟ್ಟು ಬೇರೆ ಯಾರೂ ಯಾವ ಸ್ಥಳದಲ್ಲೂ ಇರದಂತೆ ವ್ಯವಸ್ಥೆ ಮಾಡಿದನು.

ಯಖಲಾಸಖಾನನ ಆಜ್ಞೆಯಂತೆ ಬೇರೊಂದು ಕೋಟೆಯಲ್ಲಿ ಬಂದಿಯಾಗಿದ್ದ ಶಹ ಅಬ್ದುಲ್ ಹಸನನನ್ನು ಅಲ್ಲಿಗೆ ಆಜ್ಞೆ ಕಳಿಸಿ ಅಲ್ಲಿಯೇ ಅವನ ಕಣ್ಣುಗಳನ್ನು ಕಿತ್ತಲಾಯಿತು. ಅದರಿಂದಾಗಿ ಶಾಹ ಅಬ್ದುಲ್ ಹಸನನು ಕುರುಡನಾದನು. ಆದರೂ ಯಾವದಿನ ಏನು ಮಾಡುತ್ತಾನೋ ಹೇಳಬರುವುದಿಲ್ಲವೆಂಬ ಗಾಬರಿಯಿಂದ ಕೆಲವು ದಿನಗಳ ಅನಂತರ ಶಾಹ ಅಬ್ದುಲ್ ಹಸನನನ್ನು ಕೊಲ್ಲಲಾಯಿತು. ಮಾಲೀ ಮತ್ತು ಮುಲಕೀ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದ ಚಾಂದಬೀಬಿಯ ಅಧಿಕಾರವನ್ನೂ ಕಡಿಮೆ ಮಾಡಿದನು. ಅಲ್ಲದೆ ಯಾರೂ ಚಾಂದಬೀಬಿಯ ಆಜ್ಞೆಯನ್ನು ಪಾಲಿಸಬಾರದು ಎಂದು ಆಜ್ಞೆಯನ್ನ ಹೊರಡಿಸಿದನು. ಶಿಯಾ ಧರ್ಮವನ್ನು ಕಿತ್ತು, ಸುನ್ನಿ ಧರ್ಮವನ್ನು ಪ್ರಾರಂಭಿಸಿದನು. ಇಮಾಮ ಹನಫೀ ಧರ್ಮಕ್ಕೆ ಸಹಾಯ ಮಾಡುತ್ತ ಶಕ್ತಿ ಕೊಡಹತ್ತಿದನು. ಬಾದಶಹನು ಕೂಡ ದಿಲಾವರ ಖಾನನಿಗೆ ಎಲ್ಲ ಅಧಿಕಾರಿಗಳನ್ನು ಕೊಟ್ಟು, ಹತ್ತಿರದ ಹಾಗೂ ದೂರದ ಯಾರೂ ಸಂಶಯ ಪಡದಂತೆ ಮುಖ್ತಾರಿಯನ್ನು ಕೊಟ್ಟನು.

ದಿಲಾವರಖಾನನ ಹಿರಿಯ ಮಗ ದೊಡ್ಡ ವಿದ್ವಾಂಸನಿದ್ದನು. ಅವನು ಯಾವಾಗಲೂ ವಿದ್ಯಾಭ್ಯಾಸ ಮಾಡುವವರ ಹಾಗೂ ಕವಿತೆ ರಚಿಸುವವರ ಸಂಗಡವೆ ಇರುತ್ತಿದ್ದನು. ಸರ್ವಕಾಲದಲ್ಲೂ ಬಾದಶಹನ

ಜೊತೆಗಿದ್ದು ಆತನೊಂದಿಗೆ ವಿದ್ಯಾಭ್ಯಾಸದ ಚರ್ಚೆಯನ್ನು ಮಾಡುತ್ತಿದ್ದನು. ದಿಲಾವರ ಖಾನನೂ ವಿದ್ವಾಂಸನಾಗಿದ್ದನು. ಓದು-ಬಲ್ಲವರ ಜೊತೆ ಗೆಳತನವಿತ್ತು ಅವರ ಸಂಗತಿಯಲ್ಲೆ ಇರುತ್ತಿದ್ದನು. ಗುಜರಾತ, ಲಾಹೋರಗಳಿಂದ ಎಷ್ಟೋ ಜನ ವಿದ್ವಾಂಸರನ್ನು ಕರೆಸಿ ದರಬಾರಿನಲ್ಲಿ ಇಟ್ಟುಕೊಂಡಿದ್ದನು. ಅವರೊಂದಿಗೂ ಸಂಬಂಧವನ್ನಿಟ್ಟುಕೊಂಡಿದ್ದನು. ನ್ಯಾಯ ಹಾಗೂ ಧರ್ಮಶಾಸ್ತ್ರಗಳ ವಾಕ್ಯಗಳ ನಿರ್ಣಯವನ್ನು ಮಾಡುತ್ತಿದ್ದನು. ಈ ವಿದ್ವಾಂಸರೆಲ್ಲ ಪ್ರತಿನಿತ್ಯ ಸರಕಾರೀ ವಾಡೆಯಲ್ಲಿ ಸೇರಿ 'ತಪಸಿರಕಹೀರ' (ಕುರಾನದ ಟೀಕೆ-ಟಿಪ್ಪಣಿಗಳ ಪುಸ್ತಕ) ಮತ್ತು 'ಹದೀಸ' (ಪೈಗಂಬರರ ವಾಕ್ಯಗಳು, ಸಂವಾದಗಳು) ಮುಂತಾದ ಗ್ರಂಥಗಳನ್ನು ಓದುವಲ್ಲಿ ನಿರತರಾಗಿರುತ್ತಿದ್ದರು. ಎಲ್ಲರೊಂದಿಗೆ ಯೋಗ್ಯತೆಯಿಂದ ಗೌರವದಿಂದ ನಡೆದುಕೊಳ್ಳುತ್ತ ಸ್ನೇಹದಲ್ಲಿದ್ದನು. ಹೀಗೆ ೮ ವರುಷಗಳ ಕಾಲ ದಿಲಾವರಖಾನನು ಕಾರಭಾರ ಮಾಡಿದನು.

### ೨೦. *ದಿಲಾವರಖಾನನ ಪ್ರಯತ್ನದಿಂದ ಇಬ್ರಾಹಿಮ ಆದಿಲಶಹ ಹಾಗೂ ಮಹ್ಮದಕುಲಿ ಕುತುಬಶಾಹನ ತಂಗಿಯೊಂದಿಗೆ ಮದುವೆ ಮತ್ತು ಮುರ್ತಜಾ ನಿಜಾಮಶಾಹನ ಮಗನೊಂದಿಗೆ ಇಬ್ರಾಹಿಮ ಆದಿಲಶಹನ ತಂಗಿಯ ಮದುವೆ.*

ದಿಲಾವರಖಾನನು ಬಾದಶಹರಲ್ಲಿಯೂ ಪರಸ್ಪರ ಶರೀರ ಸಂಬಂಧ ಬೀಗತನವನ್ನು ಜೋಡಿಸಿ ತನ್ಮೂಲಕ ಸಖ್ಯತನವನ್ನು ಬೆಳೆಸಲು ಪ್ರಯತ್ನಿಸಿದನು. ಇಬ್ರಾಹಿಮ ಕುತುಬಶಾಹನ ಮಗಳನ್ನೂ ಇಬ್ರಾಹಿಮ ಆದಿಲಶಹನಿಗೆ ಕೇಳಿದನು. ಇಬ್ರಾಹಿಮ ಆದಿಲಶಹನ ತಂಗಿಯನ್ನು ಮುರ್ತಜಾ ನಿಜಾಮಶಾಹನ ಮಗನಿಗೆ ಯೋಜಿಸಿದನು. ಆದರೆ ಸಂಕಟಗಳನ್ನು ಸೃಷ್ಟಿಸುವ ಮತ್ತು ಕಪಟಮೋಸಗಳನ್ನು ಮಾಡಿ ಕೆಡುಕನ್ನು ಮಾಡುವ ಜನರು ದಿಲಾವಾರಖಾನನ ಪ್ರಯತ್ನಗಳನ್ನೆಲ್ಲ ನಿರರ್ಥಕ ಮಾಡಿದರು. ಬಾದಶಹರ, ಮಧ್ಯ ವಿರಸವಿರಬಾರದೆಂದು ಯೋಚಿಸಿದರೆ. ಒಬ್ಬರೊಬ್ಬರಲ್ಲಿ ದ್ವೇಷ ತಂದರು. ಶರೀರ ಸಂಬಂಧದ ವಿಷಯವನ್ನು ಮುಂದಕ್ಕೆ ಹಾಕಿದರು. ನಿಜಾಮಶಹನು ಬಹಳದಿನಗಳ ಮೊದಲೆ ಇಬ್ರಾಹಿಮ ಆದಿಲಶಹನ ತಂಗಿ ಖದೀಜಾ ಸುಲ್ತಾನಳ ಪಾಲಕಿಯನ್ನು ಕೋಟೆಯ ಹೊರಗಡೆಯೇ ನಿಲ್ಲಿಸಿ ಅದನ್ನು ಅರಮನೆಯ ಒಳಗಡೆಗೆ ತೆಗೆದುಕೊಂಡು ಹೋಗಿರಲಿಲ್ಲ. ಪಾಲಕಿಯ ಜೊತೆಗೆ ಹೋದ ಸೈನ್ಯದಲ್ಲಿಯ ಕೆಳದರ್ಜೆಯ ಜನರು ಹೊರಟು ವಿಜಾಪುರಕ್ಕೆ ಬಂದು ಬಿಟ್ಟರು. ದೊಡ್ಡ-ದೊಡ್ಡ ಜನರು ಚಿಂತಾಗ್ರಸ್ತರಾಗಿ ಅಹ್ಮದನಗರದಲ್ಲಿಯೇ ಗಾಬರಿಯಾಗಿ ಕುಳಿತರು. ಇತ್ತ ಕುತುಬಶಾಹನೂ ಶರೀರ ಸಂಬಂಧವನ್ನು ಮುಂದೆ-ಮುಂದೆ ಹಾಕತೊಡಗಿದ್ದನು. 'ಆಗಲಿ, ಆಗಲಿ, ನೋಡೋಣ-ನೋಡೋಣ' ಎನ್ನುತ್ತ ಸಾಗಿದ್ದನು. ಆದಿಲಶಹನು ಸ್ವತಃ ಕುತುಬ ಶಾಹನ ರಾಜ್ಯದ ಸರಹದ್ದಿನಲ್ಲಿ ಹೋಗಿ ಒಬ್ಬ ಸಂಭಾವಿತ ಗೃಹಸ್ಥನನ್ನು ಕಳಿಸಿ, ಮಹ್ಮದ ಕುಲಿ ಕುತುಬ ಶಾಹನ ತಂಗಿಯನ್ನು ಕರೆಯಲು ಕಳಿಸಿದನು. ಕುತುಬಶಾಹನು ಅವಳನ್ನು ಕಳಿಸಲು ಅನುಮಾನಿಸಿ, 'ಸಧ್ಯ ಕಳಿಸುವುದಿಲ್ಲ' ಎಂದು ಹೇಳಿ ಕಳಿಸಿದನು. ಮತ್ತೆ ಕಳಿಸಿದಾಗಲೂ ಬೇರೆ ಬೇರೆ ನೆಪಗಳನ್ನೊಡ್ಡಿ ಕಳಿಸಲಿಲ್ಲ. ಕೊನೆಗೆ ಆದಿಲಶಾಹನು ಬಹಳ ಒತ್ತಾಯ ಮಾಡಿದಾಗ, ಆತನ ಒತ್ತಾಯದ ಮುಂದೆ ತನ್ನ ಬಲವನ್ನು ತೂಗಿ ನೋಡಿ ತಕ್ಷಣ ತಂಗಿಯನ್ನು ಕಳಿಸಲು ಒಪ್ಪಿದನು. ದಕ್ಷಿಣದ ರಾಜರ ರೂಢಿಯಂತೆ, ಬಾದಶಾಹೀ ರೀವಿಯಲ್ಲಿ, ಅರಮನೆಯಲ್ಲಿ ಕುಳಿತು ತನ್ನ ಪ್ರಾಣಪ್ರಿಯ ತಂಗಿಯನ್ನು ಕುತುಬಶಾಹನು ಆನೆಯ ಮೇಲೆ ಅಂಬಾರಿಯನ್ನು ಹಾಕಿ ಅದರಲ್ಲಿ ಕುಳ್ಳಿರಿಸಿ, ಪರದೆಯನ್ನು ಬಿಟ್ಟು, ಜೊತೆಗೆ ವಿಶ್ವಾಸಿಕ ಸೇವಕರನ್ನು ಮತ್ತು ಚಾಕರರನ್ನು ಕೊಟ್ಟು ಕಳಿಸಿದನು. ಆದಿಲಶಹನು ಆ ಸರಹದ್ದಿನ ನಗರದಲ್ಲೆ ಸಂತೋಷದಿಂದ ಅವಳನ್ನು ಸ್ವೀಕರಿಸಿದನು. ಸಂತೋಷ ಕೂಟಗಳನ್ನು ಆನಂದ ಸಭೆಗಳನ್ನು

ಏರ್ಪಡಿಸಿದನು. ೪೦ ದಿನಗಳ ಪರ್ಯಂತ ನಡೆದ ಸಂತೋಷ ಸಭೆಗಳ ಧ್ವನಿ ಆಕಾಶಕ್ಕೆ ಮುಟ್ಟಿ ಅದರಂತೆ ಏಳು ಆಕಾಶಗಳಿಗೂ ಪಸರಿಸಿತು. ಬಹು ಬೆಲೆಯ ವಸ್ತ್ರಗಳನ್ನು, ಉತ್ತಮೋತ್ತಮ ಪದಾರ್ಥಗಳನ್ನು ಉಭಯ ಬಾದಶಹರುಗಳಿಂದ, ಉಭಯ ರಾಜ್ಯಗಳ ಕಾರಭಾರಿಗಳಿಗೆ ಕಾಮದಾರರಿಗೆ ಸರಕಾರಿ ನೌಕರರಿಗೆ ಮತ್ತು ಸಂಬಂಧಿಕರಿಗೆ ಯೋಗ್ಯತಾನುಸಾರ ಕೊಟ್ಟರು. ಧರ್ಮ ಶಾಸ್ತ್ರದ ಪ್ರಕಾರ ಉತ್ತಮ ಸಮಯದಲ್ಲಿ ಮದುವೆಯಾಗಿ, ಕಲ್ಯಾಣ ಪ್ರದವಾದ ಎರಡು ಗ್ರಹಗಳು ಒಂದೇ ಸ್ಥಳದಲ್ಲಿ ಸೇರಿದುವು. ವಧುವರರು ಏಕತ್ರರಾದರು.

ಮದುವೆಯಾದ ಅನಂತರ ಆದಿಲಶಹನು ನಿಜಾಮ ಶಹನ ರಾಜ್ಯದ ಕಡೆಗೆ ಹೊರಟು ಸರಹದ್ದಿನಲ್ಲಿ ಹೋಗಿ ಮುಟ್ಟಿದನು. ಒಬ್ಬ ಸಂಭಾವಿತ ಗೃಹಸ್ಥನೊಂದಿಗೆ ನಿಜಾಮಶಹನಿಗೆ ನಿರೋಪ ಕೊಡುತ್ತ ನೀತಿ ಬೋಧವನ್ನು ಹೇಳಿ ಕಳಿಸಿದನು. ಅದನ್ನು ಅರ್ಥಮಾಡಿಕೊಂಡ ನಿಜಾಮಶಹನು ತನ್ನ ಬಲವನ್ನು ಗಮನಿಸಿ ಆದಿಲಶಹನೊಂದಿಗೆ ಸಖ್ಯತನವನ್ನು ಬೆಳೆಸಿದನು. ಅವನ ತಂಗಿ ಖದೀಜಾ ಸುಲ್ತಾನಳನ್ನು ಗೌರವಪೂರ್ವಕವಾಗಿ ಸ್ವೀಕರಿಸಿ ಧರ್ಮಶಾಸ್ತ್ರದ ರೀತಿಯಾಗಿ ಮದುವೆಯಾದನು. ಅಲ್ಲಿಯೂ ಉಭಯ ಬಾದಶಹರು ಭಕ್ಷೀಸು-ಕಾಣಿಕೆಗಳನ್ನು ನೀಡಿದರು. ಎರಡೂ ಮದುವೆಗಳನ್ನು ಮುಗಿಸಿಕೊಂಡು ಆದಿಲಶಹನು ಯಶಸ್ವಿಯಾಗಿ ವಿಜಾಪುರಕ್ಕೆ ಬಂದನು.

### *೨೧. ಬಾದಶಹನ ವರ್ಚಸ್ಸಿನಿಂದಾಗಿ ರೆಪ್ಪೆ ಬಡಿಯುವಷ್ಟರಲ್ಲಿ ಪ್ರಬಲ ದಿಲಾವರಖಾನನ ಪ್ರಭಾವ ಇಳಿದದ್ದು :*

ಪ್ರವಾಸದಲ್ಲಿದ್ದಾಗ ಬಾದಶಹನಿಗೆ ದಿಲಾವರಖಾನನ ಪ್ರಬಲತೆಯ ಅರ್ಥವಾಯಿತು. ಎಲ್ಲ ಜನರಲ್ಲೂ ಅದು ಪ್ರಸಿದ್ಧವಾಗಿತ್ತು. ದಿಲಾವರಖಾನನ ಪ್ರಬಲತೆಯಿಂದಾಗಿ ಬಾದಶಹನು ಮದುವೆಯ ಕಾರ್ಯಗಳಿಗೆ ನಿರುಪಾಯನಾಗಿ ಒಪ್ಪಿಕೊಳ್ಳಬೇಕಾಯಿತು. ಇಲ್ಲದಿದ್ದಲ್ಲಿ ಈ ಬಾದಶಹರೊಂದಿಗೆ ಯುದ್ಧಕ್ಕೆ ನಿಲ್ಲುವ ಸಾಮಾನು-ಸರಂಜಾಮುಗಳು ಸಾಕಷ್ಟಿದ್ದುವು. ದಿಲಾವರಖಾನನ ಪ್ರಬಲತೆಯು ಆದಿಲಶಹನ ಮೇಲೆ ಹಾಗೂ ಆದಿಲಶಹನ ರಾಜ್ಯದಮೇಲೆ ಬಹಳಷ್ಟಾಗಿತ್ತು. ಅದು ಎಲ್ಲಿಯವರೆಗೆ ಹೋಗಿತ್ತೆಂದರೆ, ದಿಲಾವರಖಾನನ ಆಜ್ಞೆಯಾಗದ ಹೊರತು ಆದಿಲಶಹ ಬಾದಶಹನಿಗೆ ಕುಡಿಯಲು ನೀರು ಕೂಡ ದೊರೆಯುತ್ತಿರಲಿಲ್ಲ. ಮತ್ತೆ ದಿಲಾವರಖಾನನ ಆಜ್ಞೆಯಾಗದೆ ಬೇರೆ ಕೆಲಸಗಳು ಹೇಗೆ ಆದಾವು! ಇಷ್ಟೊಂದು ಸರ್ವಾಧಿಕಾರತ್ವ, ಈ ತರದ ಪ್ರಧಾನ ಮಂತ್ರಿತ್ವ, ಮುಖ್ತಾರಿ ಕೆಲಸಗಳು ಇದ್ದಾಗ, ದಿಲಾವರ ಖಾನನನ್ನು ಹಿಡಿಯವರೇ ಇರಲಿಲ್ಲ. ಇಂಥದ್ದರಲ್ಲಿ ಆದಿಲಶಹ ಬಾದಶಹನಿಗೆ ಬಂದ ಒಂದೇ ಒಂದು ಸಂಶಯದಿಂದ ರೆಪ್ಪೆ ಬಡಿಯುವಷ್ಟರಲ್ಲಿ ದಿಲಾವರ ಖಾನನು ಕೆಲಸದಿಂದ ಹೊರಬಿದ್ದನು. ಈ ವಿಷಯದಲ್ಲಿ ಸವಿಸ್ತರ ತಪಶೀಲು ಹೀಗಿದೆ.

ಆತನ ಕಾರಭಾರದಲ್ಲಿ ರಾಜ್ಯದ ಎಲ್ಲ ಕೆಲಸಗಳ ಮೇಲೆ ತನ್ನವರೇ ಇದ್ದು ಸರ್ವಾಧಿಕಾರಿಯಾಗಿದ್ದರೂ ದಿಲಾವರಖಾನನ ಮನದಲ್ಲಿ ಒಂದು ದುಷ್ಟ ಸಂಕಲ್ಪ ಹುಟ್ಟಿಕೊಂಡಿತು. ಇಬ್ರಾಹಿಮ ಆದಿಲಶಹನನ್ನು ಪದಚ್ಯುತಿಗೊಳಿಸಿ ಆತನ ತಮ್ಮ ಇಸ್ಮಾಯಿಲ್ ಎಂಬವನು ಮುಸ್ತಫಾಬಾದದ (ಬೆಳಗಾವಿ) ಕೋಟೆಯಲ್ಲಿ ಸೆರೆ ಮನೆಯಲ್ಲಿದ್ದನು, ಅವನನ್ನು ಅಲ್ಲಿಂದ ತಂದು ಸಿಂಹಾಸನದ ಮೇಲೆ ಕೂಡಿಸಬೇಕು ಎಂದು ಇಚ್ಛಿಸಿದನು. ಅಷ್ಟರಲ್ಲಿ ಅವನ ಈ ಗುಪ್ತ ಸಂಕಲ್ಪವು ಬಹಿರಂಗವಾಯಿತು. ಎಲ್ಲರ ಬಾಯಲ್ಲೂ ಈ ಸುದ್ದಿ ಪ್ರಕಟವಾಯಿತು. ತಿಂಗಳಗಟ್ಟಲೆ ಜನ ತಂತಮ್ಮಲ್ಲಿ ಇದನ್ನೆ ಮಾತನಾಡಿಕೊಳ್ಳುತ್ತಿದ್ದರು. ಅಲ್ಲಲ್ಲಿ

ಇದೆ ಕಥೆಯ ಚರ್ಚೆ ನಡೆಯುತ್ತಿತ್ತು. ಎಲ್ಲೆಡೆಯಲ್ಲಿಯ ದಿಲಾವರಖಾನನ ವಿಷಯ ಸರಕಾರಕ್ಕೂ ಬಂದು ಮುಟ್ಟುತ್ತಿತ್ತು. ದಿಲಾವರಖಾನನ ಈ ರಹಸ್ಯವು ಪ್ರಕಟವಾಗಿ ರಾಜಮಾತೆಯ ಕಿವಿಯ ಮೇಲೂ ಬಿತ್ತು.

ಬಾದಶಹ ಹಾಗೂ ಆತನ ತಾಯಿ ಆ ರಾತ್ರಿ ಅತ್ಯಂತ ಖಿನ್ನರಾಗಿ ಚಿಂತಾಗ್ರಸ್ತರಾಗಿ ಬಾಯಿ ಮುಸುರೆಯನ್ನೂ ಮಾಡಿಕೊಳ್ಳಲಿಲ್ಲ. ನಿದ್ದೆ-ಊಟಗಳೆರಡನ್ನೂ ಆ ರಾತ್ರಿ ಅವರು ಮಾಡಲಿಲ್ಲ. ಈ ವಿಷಯದಲ್ಲಿ ಅರಮನೆಯ ಎಲ್ಲರಿಗೂ ಚಿಂತೆಯಾಯಿತು. ಹತ್ತಿರದ ಹಾಗೂ ದೂರದ ಜನರು ಈ ಕೆಟ್ಟ ವರ್ತಮಾನ ಕೇಳಿ ಚಿಂತೆಯಲ್ಲಿ ಬಿದ್ದರು. ಸರಕಾರಿ ನೌಕರರು ಮಾತ್ರ ನಿರುಪಾಯರಾಗಿ ಮೌನರಾಗಿದ್ದರು. ಹೀಗಾಗಲು ಕಾರಣ ಏನು? ಯಾತಕ್ಕಾಗಿ ಈ ವಿಷಯ ಎದ್ದಿತು ಎಂಬ ಕುರಿತು ಯಾರೂ ತುಟಿ ಬಿಚ್ಚಲಿಲ್ಲ. ಆದರೆ ಬಾದಶಹನ ಶಿಪಾಯಿ ಜನರು ಮತ್ತು ಚಾಕರ ಜನರು, ದಿಲಾವರಖಾನನ ಈ ಕೃತಘ್ನತೆ ಮತ್ತು ದುರ್ನಡತೆಯ ವಿರುದ್ಧ ಮೌನವಾಗಿರದೆ, ಆತನನ್ನು ದೂಷಿಸುತ್ತ ಒಮ್ಮೆಂದೊಮ್ಮೆಲೆ ಒಟ್ಟಾರೆಯಾಗಿ ಅವನಿಂದ ಹೊರಟು ಹೋದರು. ದಿಲಾವರಖಾನನ ಭಯ, ಬೆದರಿಕೆಗಳನ್ನು ಮನಸ್ಸಿನಿಂದ ತೆಗೆದುಹಾಕಿ ಅವನೊಂದಿಗೆ ಸೇಡು ತೀರಿಸಿಕೊಳ್ಳಲು ಸಿದ್ಧರಾದರು. ಪ್ರತಿಯೊಬ್ಬರೂ ಕೈಯಲ್ಲಿ ಶಸ್ತ್ರಗಳನ್ನು ಹಿಡಿದುಕೊಂಡು ಮನೆಯಿಂದ ಹೊರಬಿದ್ದು ಗಲ್ಲಿಯಲ್ಲಿ ರಸ್ತೆಯಲ್ಲಿ , ಬಾಜಾರದಲ್ಲಿ ಅಂಗಡಿಗಳಲ್ಲಿ ಎರಡೂ ಬದಿಗೂ ಸಿದ್ಧರಾಗಿ ಕುಳಿತುಕೊಂಡರು, ಬಾದಶಹನ ಅಪ್ಪಣೆಯ ದಾರಿಯನ್ನು ಕಾಯುತ್ತಿದ್ದರು. ಅರಮನೆಯ ವ್ಯವಸ್ಥೆಗಾಗಿ ನಿಯಮಿತಗೊಂಡ ದಿಲಾವರಖಾನನ ಕಡೆಯ ಸ್ತ್ರೀಯರು ಆ ರಾತ್ರಿಯ ಸವಿಸ್ತರ ವಿಷಯವನ್ನು ದಿಲಾವರಖಾನನಿಗೆ ಹೇಳಿದ್ದರು. ಬಾದಶಹ ಹಾಗೂ ಆತನ ತಾಯಿ ಇಡೀ ರಾತ್ರಿ ಜಾಗರಣೆ ಮಾಡುತ್ತ ಚಿಂತೆಯಲ್ಲಿದ್ದುದನ್ನು ಹೇಳಿದ್ದರು. ಮರುದಿನ ದಿಲಾವರಖಾನನು ದರಬಾರಿಗೆ ಬಂದು ಜರೂರಿಯ ಕೆಲಸಗಳನ್ನು ತೀರಿಸಿ ನಿತ್ಯದ ರೂಢಿಯಂತೆ ಬಾದಶಹನಿಗೆ ಮುಜುರೆ ಸಲ್ಲಿಸಲು ಬಂದು, ಬಾದಶಹನಿಗೆ "ನನಗೆ ಒಂದಿಷ್ಟು ಜರೂರಿಯ ವಿನಂತಿಯನ್ನು ಮಾಡಿಕೊಳ್ಳಬೇಕಾಗಿದೆ, ಏಕಾಂತದಲ್ಲಿ ಮಾತನಾಡಬೇಕೆಂದಿರುವೆ" ಎಂದು ವಿನಂತಿಸಿಕೊಂಡನು. ಆಗ ಬಾದಶಹನು ತನ್ನ ಖಾಸಾ ಕೋಣೆಗೆ ಹೋಗಿ ಅಲ್ಲಿಯ ಎಲ್ಲ ಸೇವಕರನ್ನು ಕಳಿಸಿ, ದಿಲಾವರಖಾನನನ್ನು ಕರೆಕಳಿಸಿದನು. ಈ ವಿಷಯದಲ್ಲಿ ರಫಿಯುದ್ದೀನನು ಹೀಗೆ ಹೇಳುತ್ತಾನೆ.

ಆ ಸಮಯದಲ್ಲಿ ನನ್ನನ್ನು ಬೇರೆ ಕೆಲಸದಿಂದ ಬಿಡಿಸಿ ಬಾದಶಹರು ತಮ್ಮತ್ತ ಕರೆದರು. ಜಾಮದಾರ ಖಾತೆಯ ಕೆಲಸ ಹಾಗೂ ಅರಮನೆಯ ವಸ್ತ್ರಗಳ ವ್ಯವಸ್ಥೆಯ ಕೆಲಸವನ್ನು ನನಗೆ ಕೊಟ್ಟು ನನ್ನ ಯೋಗ್ಯತೆಯನ್ನು ಮೊದಲಿನಕ್ಕಿಂತ ಅಧಿಕಗೊಳಿಸಿದರು. ಆ ದಿನ ದಿಲಾವರಖಾನನ್ನು ಪ್ರಭುಗಳು ಕರೆದಾಗ ಅವರ ಏಕಾಂತ ಸ್ಥಳಕ್ಕೆ ಹೋಗುವಾಗ ನಾನೂ ದಿಲಾವರಖಾನನ ಜೊತೆಗೆ ಬಾದಶಹನ ಕೋಣೆಯ ಪರದೆಯ ಹಿಂದಿನವರೆಗೆ ಹೋಗಿ ಮುಟ್ಟಿದ್ದೆನು. ದಿಲಾವರ ಖಾನನ ಆ ಏಕಾಂತ ಸಂಭಾಷಣೆಯನ್ನು ಕೇಳಿಸಿಕೊಂಡೆನು. ದಿಲಾವರಖಾನನು ಬಾದಶಹನ ಹತ್ತಿರ ಬಂದು "ನಾನು ಹೀಗೆ ಕೇಳಿದ್ದೇನೆ. ತಾವು ಹಾಗೂ ತಮ್ಮ ತಾಯಿಯವರು ಮನದಲ್ಲಿ ಸಂಶಯ ತಂದುಕೊಂಡು, ಚಿಂತೆಯಲ್ಲಿ ನಿದ್ದೆಯನ್ನು ಮಾಡಲಿಲ್ಲವಂತೆ, ಊಟವನ್ನು ಮಾಡಲಿಲ್ಲವಂತೆ. ಇದರ ಕಾರಣವೇನೆಂದು ನನಗೆ ತಿಳಿಯಲಿಲ್ಲ. ಆದ್ದರಿಂದ ಪ್ರಭುಗಳು ಅಪ್ಪಣೆ ಕೊಡಬೇಕು" ಎಂದು ಹೇಳಿದನು. ಬಾದಶಹನು ತಾನು ಕೇಳಿದ ಸಂಗತಿಯನ್ನು ಸವಿಸ್ತಾರವಾಗಿ ಹೇಳಿದನು. ಅದನ್ನು ಕೇಳಿದ ದಿಲಾವರಖಾನನು ತಕ್ಷಣ ಖಿನ್ನನಾಗಿ ನಿರುಪಾಯತನವನ್ನು ಮುಖದ ಮೇಲೆ ತಂದುಕೊಂಡು ಹೇಳಿದನು. "ನಾನು ಹೀಗೆ ರಾಜ್ಯದ ಕಲ್ಯಾಣವನ್ನು ಬಯಸುವವನು, ಪ್ರಾಮಾಣಿಕವಾಗಿ ಸೇವೆಯನ್ನು ಮಾಡಿದ್ದು ಪ್ರತ್ಯಕ್ಷದಲ್ಲಿರುವಾಗ, ಈಗಲೂ ಪ್ರಭುಗಳಿಗೆ ನನ್ನ ದುರ್ನಡತೆಯ

ಬಗ್ಗ ಸಂಶಯವಿದೆಯೆ? ಇದರ ಮೇಲೆ ಸರಕಾರದ ಮರ್ಜಿ" ಎಂದು ಹೇಳಿ ಮೂರ್ಖನಂತೆ ದೊಡ್ಡ ದನಿಯಲ್ಲಿ ಅಳುತ್ತ ಅಲ್ಲಿಂದ ಎದ್ದು ಮನೆಯ ಕಡೆಗೆ ಹೊರಟನು. ದಿಲಾವರಖಾನನ ಮನೆಯಲ್ಲಿ ಕಾರಕೂನರು, ಕಚೇರಿಯ ಜನರು ಮತ್ತು ಎಲ್ಲ ಕೆಲಸಗಾರರು ಒಟ್ಟಾಗಿ ಸೇರಿ ಅಲ್ಲಿ ಕುಳಿತಿದ್ದರು. ಆ ಸ್ಥಳಕ್ಕೆ ಬಂದು ದಿಲಾವರಖಾನನು ದೊಡ್ಡ ದನಿಯಲ್ಲಿ ಒದರುತ್ತ ಅವರಿಗೆ ಹೇಳಿದನು. "ಇಂದಿನಿಂದ ಯಾರೂ ನನ್ನ ಮನೆಗೆ ಬರಬಾರದು. ಎಲ್ಲರೂ ಸರಕಾರದ ಅರಕಿಲ್ಲೆಯಲ್ಲಿಯೇ ಸೇರಬೇಕು. ನಾನೂ ಅಲ್ಲಿಯೇ ಬಂದು ಕೆಲಸವನ್ನು ನೋಡಿಕೊಳ್ಳುವೆನು" ಎಂದು ಹೇಳಿದನಲ್ಲದೆ, ಬಾಗಿಲಲ್ಲಿಯ ದ್ವಾರಪಾಲಕರಿಗೂ ಕಟ್ಟೆಚ್ಚರಿಕೆಯನ್ನು ಕೊಡುತ್ತ "ಇಂದಿನಿಂದ ನಮ್ಮ ವಾಡೆಯಲ್ಲಿ ಯಾರಿಗೂ ಬಂದು ಹೋಗಲು ಬಿಡಬಾರದು" ಎಂದು ಹೇಳಿದನು. ತಾನು ೫ ದಿನ, ಮಂಡಳಿಯ ಚರ್ಚೆಯ ಭಯದಿಂದ ಮನೆಯಿಂದ ಹೊರಗೆ ಹೆಜ್ಜೆ ಇಡಲಿಲ್ಲ ಮತ್ತು ಯಾರನ್ನೂ ಮನೆಯ ಒಳಗೆ ಬರಲು ಬಿಡಲಿಲ್ಲ. ಮನಸ್ಸಿನಲ್ಲಿ ಕೋಟೆಯತ್ತ ಬರಬೇಕೆಂದೆನಿಸಿದರೂ ಕೋಟೆಯಲ್ಲಿಯ ಕೆಲಸಗಾರರು ಏನಂದಾರು? ಎಂಬುದು ಗೊತ್ತಿರಲಿಲ್ಲ. ಕೋಟೆಯಲ್ಲಿ ರೂಮೀಖಾನನೆಂಬವನು ಕೆಲಸ ಮಾಡುತ್ತಿದ್ದನು. ಆ ರೂಮೀಖಾನನು ಮೊದಲು ದಿಲಾವರಖಾನನ ಕಾರಭಾರಿಯಾಗಿದ್ದನು. ಈ ರೂಮೀಖಾನನು ತಾಯಿಯು ಇಬ್ರಾಹಿಮ ಆದಿಲಶಹನ ತಂದೆ ತಹಮಾನೀಪನಿಗೆ ಹಾಲು ಕುಡಿಸುತ್ತಿದ್ದಳು. ಆದ್ದರಿಂದ ರೂಮೀಖಾನನ ಯೋಗ್ಯತೆ ಅಧಿಕಗೊಂಡು ಆತ ಅಮೀರಿ ಪದವಿಯನ್ನು ಪಡೆದಿದ್ದನು. ಬಾದಶಹನು ಕೋಟೆಯ ವ್ಯವಸ್ಥೆಯ ಕೆಲಸವನ್ನು ರೂಮೀಖಾನನ ವಶಕ್ಕೆ ಕೊಟ್ಟಿದ್ದನು. ರೂಮೀಖಾನನ ಮಗಳನ್ನು ದಿಲಾವರಖಾನನು ತನ್ನ ಮಗ ಅಬ್ದುಲ್ ಖಾದರನಿಗೆ ತೆಗೆದುಕೊಂಡಿದ್ದನು. ಆತನೂ ಕೋಟೆಯ ಉಸ್ತುವಾರಿಯನ್ನು ದಿಲಾವರಖಾನನ ಆಜ್ಞಾನುಸಾರ ಮಾಡುತ್ತಿದ್ದನು. ಇಷ್ಟೆಲ್ಲ ವಿಶ್ವಾಸಿಕರಿದ್ದರೂ ಈ ೫ ದಿನಗಳಲ್ಲಿ ದಿಲಾವರಖಾನನು ಕೋಟೆಯ ಒಳಗೆ ಹೋಗಲಿಲ್ಲ. ರೂಮೀಖಾನನು ಕೂಡ ಈ ದಿನಗಳಲ್ಲಿ ತಾನು ಸ್ವತಃ ಕೋಟೆಯ ಒಳಗಡೆ ಬರಲಿಲ್ಲ. ಬಹುತೇಕ ಎಲ್ಲ ಕಾಮದಾರರು ದರಬಾರದಲ್ಲಿಯ ಮುತ್ಸದ್ದಿಗಳು ತಂತಮ್ಮ ಮನೆಗಳಲ್ಲಿಯೆ ಕುಳಿತುಕೊಂಡರು.

ರಫೀಯುದ್ದೀನನೆ ಹೇಳುತ್ತಾನೆ : 'ನನ್ನ ಹತ್ತಿರ ಪ್ರತ್ಯಕ್ಷವಾಗಿ ಸರಕಾರದ ಜಾಮದಾರಖಾನೆಯ (ಬಟ್ಟೆ-ಬರೆಯ ವ್ಯವಸ್ಥೆ) ಹಾಗೂ ಪೋಷಾಕುಗಳನ್ನು ಪ್ರತಿನಿತ್ಯ ಇಡುವ ಮತ್ತು ಕೊಡುವ ಕೆಲಸವಿದ್ದರೂ ಜಾಮದಾರಖಾನೆಯಲ್ಲಿ ಹೋಗಲಿಲ್ಲ. ಪ್ರತಿನಿತ್ಯ ಹೊಸ ವಸ್ತ್ರಗಳನ್ನು ಕೊಡುವ ರೂಢಿ ಇದ್ದರೂ ಐದು ದಿನ ಪ್ರಭುಗಳಿಗೆ ಬೇರೆ ವಸ್ತ್ರಗಳನ್ನು ತೆಗೆದುಕೊಡುವುದಾಗಲಿಲ್ಲ. ಇದೆಲ್ಲ ಕೇವಲ ಭಯ ಮತ್ತು ಬೆದರಿಕೆಯಿಂದ, ಅರಮನೆಯಲ್ಲಿ ಹೋದರೆ ಏನಾದೀತೋ ಏನಾದರೂ ಹೆಚ್ಚು ಕಡಿಮೆಯಾದರೆ? ಯಾರಿಗೆ ಗೊತ್ತು? ಎಂದು ಅರಮನೆಗೆ ಹೋಗಲಿಲ್ಲ. ಆ ಸಮಯದಲ್ಲಿ ಬರೆಯುವ ಗುಮಾಸ್ತ ಜನರು ತಂತಮ್ಮ ಮನೆಗಳಲ್ಲಿ ಕುಳಿತರಾದರೂ ಆದರೆ ತಲವಾರು ಹಿಡಿದ ಶಿಪಾಯಿಗಳು ಮಾತ್ರ ಜೀವದ ಮೇಲೆ ಉದಾರರಾಗಿ ಬಾದಶಹನ ಆಜ್ಞೆಯ ದಾರಿಯನ್ನು ನೋಡುತ್ತ ಸಿದ್ಧರಾಗಿಯೇ ನಿಂತಿದ್ದರು. ಒಂದು ವೇಳೆ ಬಾದಶಹನ ಆಜ್ಞೆಯ ಕಿಂಚಿತ್ ಸೂಚನೆಯು ಯಾರಿಂದಲಾದರೂ ಬಂದಿದ್ದರೆ. ದಿಲಾವರಖಾನನ ವಾಡೆಯ ಮೇಲೆ ಹಲ್ಲೆ ಮಾಡಿ ದಿಲಾವರಖಾನನ ಹೆಂಡತಿ ಮಕ್ಕಳನ್ನು ಕೂಡ ನಾಶ ಮಾಡುತ್ತಿದ್ದರು. ಐದನೆಯ ದಿನ, ಎಲ್ಲ ಮುಲ್ಕೀ ಕೆಲಸಗಳ ಮುಖ್ತ್ಯಾರನಾಗಿದ್ದ ದಿಲಾವರಖಾನನ ಮಗ ಅಮೀರ ಹುಸೇನನು, (ಈತ ದಿಲಾವರಖಾನನು ಒಪ್ಪಿಕೊಂಡ ಮಗನೇ ಆಗಿದ್ದನು) ಸಯ್ಯದ ಇಸ್ಮಾಯಿಲ್ ಎಂಬ ದಿಲಾವರಖಾನನ ಮುಖ್ಯ ಕಾರಭಾರಿಯ ಸರದಾರ್ಯ ಮತ್ತು ದಿಲಾವರಖಾನನ ಪೂರ್ಣ ವಿಶ್ವಾಸಿಕ,

ಮತ್ತು ರೂಮೀಖಾನನು (ಆತ ಹೇಗಿದ್ದ ಎಂಬುದನ್ನು ಮೊದಲೆ ಹೇಳಿಯಾಗಿದೆ) ಕೂಡಿ ದಿಲಾವರ ಖಾನನ ಹತ್ತಿರ ಬಂದು 'ಈ ಸಂಕಟ, ಈ ವಿಘ್ನ ಹೇಗೆ ಹುಟ್ಟಿಕೊಂಡಿತು?" ಎಂದು ಕೇಳಿದರು. ಅವನಿಗೆ ಕಲ್ಯಾಣಕಾರಿ ಹಾಗೂ ಶ್ರೇಷ್ಠ ನೀತಿ ಮಾರ್ಗಗಳನ್ನು ಬೋಧಿಸಿದರು. ಆದರೆ ದಿಲಾವರಖಾನನ ಅಂತಃಕರಣದಲ್ಲಿ ಈ ಬೋಧಗಳ ಕಿಂಚಿತ್ ಪ್ರವೇಶವೂ ಆಗಲಿಲ್ಲ. ಆಗ ಎಲ್ಲರೂ ಚಿಂತಾಗ್ರಸ್ತರಾಗಿಯೇ ಎದ್ದರು. ಅನಂತರ ದಿಲಾವರಖಾನನ ಹಿರಿಯ ಮಗ ಮಹಮ್ಮದ ಖಾನನು ಮುಂದೆ ಬಂದು ತಂದೆಯೊಂದಿಗೆ ಚರ್ಚಿಸಿದನು. 'ಇದೆಲ್ಲ ಸಂಕಟ ವಿಘ್ನಗಳಿಂದ ದರಬಾರದ ಹಾಗೂ ದರಬಾರದ ಮಂಡಳಿಯ ಒಟ್ಟಾರೆ ಬಣ್ಣ ಬದಲಾಗಿದೆ. ಎಲ್ಲ ಶಿಪಾಯಿಗಳು ಶೂರ ಸೈನಿಕರು ಢಾಲು-ತಲವಾರಗಳನ್ನು ಹಿಡಿದುಕೊಂಡು ಸಿದ್ಧರಾಗಿ ನಿಂತಿದ್ದಾರೆ. ಬಾದಶಹನ ಸೂಚನೆಯ ದಾರಿಯನ್ನು ಕಾಯುತ್ತಲಿದ್ದಾರೆ. ಒಂದು ಕ್ಷಣದಲ್ಲಿ ನಮ್ಮ ಮನೆಯನ್ನು ನೆಲಸಮ ಮಾಡಿ, ನಮ್ಮ ಹೆಂಡಿರು ಮಕ್ಕಳನ್ನು ಹಲಾಲಖೋರರಿಗೆ ಕೊಟ್ಟು ಬಿಡುವ ಸನ್ನಾಹದಲ್ಲಿದ್ದಾರೆ. ಅಲ್ಲಾನ ಪ್ರೀತ್ಯರ್ಥವಾಗಿ ಮತ್ತು ನಮ್ಮ ಮೇಲೆ, ನಿಮ್ಮ ಪ್ರಾಣದ ಮೇಲೆ ದಯೆ ಮಾಡಿರಿ ಮತ್ತು ಈ ಕೆಲಸದಲ್ಲಿ ಉಪಯೋಗವಾಗುವಂಥ ಒಂದು ಬುದ್ಧಿ ಪೂರ್ಣ ಮಾರ್ಗವನ್ನು ವಿಚಾರಿಸಿರಿ. ಅಂದರೆ ಈ ಸಂಕಟದಿಂದ ಪಾರಾಗಿ ಇನ್ನು ಕೆಲ ದಿನ ಸಂಸಾರ ಮಾಡಬಹುದು. ಇಲ್ಲವಾದಲ್ಲಿ ಬೆಳಗಾಗುವದರೊಳಗೆ ನಾನು ಹೇಳಿದಂತೆ ಆಗುವುದು ಖಂಡೀತವೆಂಬುದು ನಿಮಗೆ ತಿಳಿದು ಬರುತ್ತದೆ' ಎಂದೆಲ್ಲ ಹೇಳಿದನು.

ದಿಲಾವರಖಾನನು ಆ ದಿನ ರಾತ್ರಿ ಮೂರು-ನಾಲ್ಕು ಜಾವದವರೆಗೆ ಚಿಂತಿಸುತ್ತ ಕೆಲಸಕ್ಕೆ ಬರುವ ಯುಕ್ತಿಯನ್ನು ತೆಗೆಯಬೇಕು ಎಂದೆಲ್ಲ ಹೇಳುತ್ತಿದ್ದನು. ಅನಂತರ ಒಬ್ಬ ಗೃಹಸ್ಥನನ್ನು ರೂಮೀಖಾನನ ಕಡೆಗೆ ಕಳಿಸಿ 'ಇಂದು ನೀವೆಲ್ಲ ಬಂದು ಏನೆಲ್ಲ ಹೇಳಿದಿರೋ ಅದರಲ್ಲಿ ಮಿತ್ರತೆಯ ನಡತೆಯಿಂದ ತಮಗೆ ಹೇಗೆ ಯೋಗ್ಯ ಕಾಣುತ್ತದೆಯೋ ಹಾಗೆ ಮಾಡಿರಿ" ಎಂದು ನಿರೋಪ ಕಳಿಸಿದನು. ರೂಮೀಖಾನನಿಗೆ ಭಯವಿತ್ತು. ಆದ್ದರಿಂದ ಈ ವಿಷಯದಲ್ಲಿ ಸ್ವತಃ ಕೋಟೆಯ ಒಳಗಡೆಗೆ ಹೋಗುವುದು ಆತನಿಗೆ ಆಗಲಿಲ್ಲ. ಒಬ್ಬ ವಿಶ್ವಾಸಿಕ ಮತ್ತು ತಿಳುವಳಿಕೆಯುಳ್ಳ ಬುದ್ಧಿವಂತನನ್ನು ಬಾದಶಹನ ತಾಯಿಯ ಕಡೆಗೆ ಕಳಿಸಿ ವಿನಂತಿಯನ್ನು ಮಾಡಿಕೊಂಡನು. ಎಲ್ಲ ಜನರ ಕೆಲಸಗಳು ಬಹಳ ದಿನಗಳಿಂದ ನಿಂತು ಬಿಟ್ಟಿವೆ. ಜನ ಎಲ್ಲೆಡೆ ಗಾಬರಿಯಾಗಿದ್ದಾರೆ. ಮತ್ತು ಈ ದುಗದುಗಿಯಲ್ಲೆ ಬಿದ್ದಿದ್ದಾರೆ. ಸರಕಾರದ ದರಬಾರ ಹಾಗೂ ದಿವಾಣೀ ಕಾರಭಾರಗಳು ಒಟ್ಟಾರೆಯಾಗಿ ಸ್ತಬ್ಧವಾಗಿ ನಿಸ್ತೇಜವಾಗಿವೆ. ಆದ್ದರಿಂದ ಅಲ್ಲಾನ ಪ್ರೀತ್ಯರ್ಥವಾಗಿ ಏನಾದರೊಂದು ದಾರಿ ಹುಡುಕಿರಿ ಮತ್ತು ಅದರಿಂದ ರಾಜ್ಯದ ವ್ಯವಸ್ಥೆ ಸರಳವಾಗಿರಲಿ, ಶತ್ರುಗಳು ನಗುವಂತಾಗದಿರಲಿ, ರಾಜ್ಯದ ಕಂಬವಾದ ಮುಖ್ಯಕಾರಭಾರಿ ದಿಲಾವರಖಾನನಾದರೋ ಪೂರ್ತಿಯಾಗಿ ಖಿನ್ನನಾಗಿ ಮತ್ತು ಲಜ್ಜಿತನಾಗಿ ತನ್ನ ಮರ್ಯಾದೆ ಹೇಗೆ ಉಳಿದೀತು ಎಂಬ ವಿಚಾರದಲ್ಲಿ ಹಾಗೂ ತನ್ನ ಪ್ರಾಣ ಉಳಿಯುವುದಿಲ್ಲ ಎಂಬ ಚಿಂತೆಯಲ್ಲಿ ಬಿದ್ದು, ಕೆಲಸ ಕಾರಭಾರಗಳನ್ನು ಬಿಟ್ಟು ಮನೆಯಲ್ಲಿ ಕುಳಿತಿದ್ದಾನೆ. ಇದರಿಂದ ರಾಜ್ಯದ ರಾಜಧಾನಿಯಲ್ಲಿ ದೊಡ್ಡದೊಂದು ವಿಘ್ನವು ಎದ್ದು ನಿಂತಿದೆ. ಆದ್ದರಿಂದ ತಾವು ಮನಸ್ಸಿನ ಮೇಲೆ ತೆಗೆದುಕೊಂಡು ಏನಾದರೊಂದು ಯುಕ್ತಿಯನ್ನು ಹುಡುಕಿರಿ. ಮತ್ತು ಪೃಥ್ವಿಯ ಆಶ್ರಯಭೂತ ಬಾದಶಹರು ನಾಳೆ ಬೆಳಿಗ್ಗೆ ದಿಲಾವರಖಾನನ ಮನೆಯವರೆಗೆ ಬಂದು, ದಿಲಾವರಖಾನನ ಮನಸ್ಸನ್ನು ಸಮಾಧಾನಗೊಳಿಸಿ, ಚಿಂತೆಯಲ್ಲಿ ಬಿದ್ದ ಆತನನ್ನು ಎಬ್ಬಿಸಿ ಸಂತೋಷಪಡಿಸಿ, ಅಭಯ ನೀಡಿ ದಿಲಾವರಖಾನನನ್ನು ಕೋಟೆಯ ಒಳಗೆ ಕರೆದುಕೊಂಡು ಬನ್ನಿರಿ. ಅಂದರೆ ದಿಲಾವರಖಾನನ ಗೌರವ ಇಮ್ಮಡಿಯಾಗಿ ಆತನ ಮನಸ್ಸಿಗೆ ಭರವಸೆ ಹುಟ್ಟಿ, ರಾಜಧಾನಿಯ ಎಲ್ಲ ಕೆಲಸ-ಕಾರಭಾರಗಳನ್ನು

ಮಾಡುವಲ್ಲಿ ಮಗ್ನನಾಗುತ್ತಾನೆ. ಹೀಗಾದಮೇಲೆ ತಾವು ಹಾಗೂ ದಿಲಾವರಖಾನ ಕೂಡಿಕೊಂಡು ರಾಜ್ಯದ ಒಪ್ಪಂದದ ವ್ಯವಸ್ಥೆಯನ್ನು ಮಾಡುವಲ್ಲಿ ಯತ್ನಿಸಿರಿ, ಎಂಬುದಾಗಿ ವಿನಂತಿಮಾಡಿಕೊಂಡರು. ಆಗ ಬಾದಶಹನ ತಾಯಿಯೂ ರೂಮೀಖಾನನ ವಿನಂತಿಯನ್ನು ಮಾನ್ಯ ಮಾಡಿ ಅದರಂತೆ ಮಾಡಿದಳು.

ಮರುದಿನ ಆದಿಲಶಹನು ಕುದುರೆಯ ಮೇಲೆ ಕುಳಿತು ದಿಲಾವರಖಾನನ ಮನೆಯ ಬಾಗಿಲವರೆಗೂ ಹೋದನು. ಆಗ ದಿಲಾವರಖಾನನು ಮನೆಯಿಂದ ಓಡಿ ಬಂದು ಬಾದಶಹರ ಚರಣಗಳಮೇಲೆ ಮಸ್ತಕವನ್ನಿಟ್ಟನು. ಬಾದಶಹನ ಕುದುರೆಯ ಲಗಾಮನ್ನು ಹಿಡಿದು ಶಹರದತ್ತ ಹೊರಟನು. ನಗರದ ಅಗಸೆಯ ಮುಂದೆ ಬರುವಷ್ಟರಲ್ಲಿ ಬಾದಶಹನ ಪಲ್ಲಕ್ಕಿ ಬಂದು ಅಲ್ಲಿಗೆ ಮುಟ್ಟಿತ್ತು. ಆಗ ಬಾದಶಹನು ಕುದುರೆಯಿಂದ ಇಳಿದು ಪಲ್ಲಕ್ಕಿಯಲ್ಲಿ ಕುಳಿತನು. ದಿಲಾವರಖಾನನನ್ನು ಕುದುರೆಯ ಮೇಲೆ ಕುಳ್ಳಿರಿಸಿ ಇಬ್ಬರೂ ಕೋಟೆಯ ಒಳಗೆ ಬಂದರು. ಅನಂತರ ದಿಲಾವರಖಾನನಿಗೆ ವಸ್ತ್ರಗಳನ್ನು ನೀಡಲು ತರಬೇಕೆಂದು ಬಾದಶಹನು ಆಜ್ಞೆ ಮಾಡಿದನು. ಆಗ ದಿಲಾವರಖಾನನು ಪ್ರಭುಗಳು ನನ್ನನ್ನು ರಕ್ಷಿಸಬೇಕೆಂದೇ ಆಗಿದ್ದಲ್ಲಿ ನನಗೆ ಕೊಡಬೇಕೆಂದು ತರಿಸುತ್ತಿರುವ ವಸ್ತ್ರಗಳನ್ನು ತರಿಸಿಬೇಡಿರಿ, ಈ ಸಮಯದಲ್ಲಿ ಪ್ರಭುಗಳ ಮೈಮೇಲಿದ್ದ ವಸ್ತ್ರಗಳನ್ನು ಕೊಡುವ ಕೃಪೆ ಮಾಡಬೇಕು. ಅಂದರೆ ಅದರಿಂದಾಗಿ ತಾವು ಸೇವಕರನ್ನು ಪ್ರತಿಪಾಲಿಸುತ್ತಿರುವ ನಡತೆ ಮತ್ತು ಅನುಗ್ರಹಗಳು ಎಲ್ಲ ಜನರಿಗೂ ಬಹಿರಂಗವಾಗಿ ತಿಳಿಯುತ್ತವೆ' ಎಂಬುದಾಗಿ ವಿನಂತಿಸಿಕೊಂಡನು. ಆಗ ಬಾದಶಹನು ಎದ್ದು ಒಳಗೆ ಹೋದನು. ಮತ್ತು ಬೇರೆ ವಸ್ತ್ರಗಳನ್ನು ಧರಿಸಿ ತನ್ನ ಮೈಮೇಲಿದ್ದ ವಸ್ತ್ರಗಳನ್ನು ದಿಲಾವರನಿಗೆ ಕೊಡಲು ಹೊರಗೆ ಕಳಿಸಿದನು. ಅನಂತರ ದಿಲಾವರಖಾನನು ಆ ವಸ್ತ್ರಗಳನ್ನು ಮೈಮೇಲೆ ಹೊತ್ತು ಪೂರ್ತಿ ಸಂತೋಷದಿಂದ ತನ್ನ ಮನೆಗೆ ಬಂದನು. ಮರುದಿನದಿಂದ ರಾಜಧಾನಿಯಲ್ಲಿಯ ಕೆಲಸಗಳನ್ನು- ಕಾರಭಾರವನ್ನು ನೋಡವಲ್ಲಿ ಮಗ್ನನಾದನು. ಬಂದ ವಿಘ್ನವು ಗುರುತಿಲ್ಲದಂತೆ ಹೊರಟು ಹೋಯಿತು. ಎಲ್ಲಡೆ ಜನರು ಭಯಮುಕ್ತರಾದರು. ದಿಲಾವರಖಾನನ ಪ್ರಬಲತೆ ಹಾಗೂ ಅಹಂಭಾವಗಳು ಬಾದಶಹನ ಕ್ಷಣ ಕ್ರೋಧದಿಂದ ನಿವಾರಣೆಯಾದುವೆಂದು ಎಲ್ಲ ಜನರಲ್ಲಿ ಪ್ರಸಿದ್ಧಿಯಾಯಿತು.

### ೨೨. ಈ ಸಂಗತಿಯ ಅನಂತರ ದಿಲಾವರಖಾನನು ಬೆದರಿದ್ದು ಮತ್ತು ಆತನು ತನ್ನ ರಕ್ಷಣೆಗೆ ಯತ್ನಿಸಿದ್ದು :

ದಿಲಾವರಖಾನನಿಂದಾಗಿ ಒಮ್ಮಿಂದೊಮ್ಮೆಲೆ ಉದ್ಭವಿಸಿದ ಗಂಭೀರ ಪ್ರಕರಣವು ನಿವಾರಣೆಯಾದ ಅನಂತರ, ಮತ್ತೆ ಕೆಲಸಗಳು ಸುಸೂತ್ರವಾಗಿ ನಡೆದುವು. ದಿಲಾವರಖಾನನ ದೈವಯೋಗ ಮತ್ತು ಪ್ರಾರಬ್ಧಗಳು ಇನ್ನುವರೆಗೂ ಸರಿಯಾಗಿಯೇ ಇದ್ದುವು. ಹೀಗಿದ್ದರೂ ದಿಲಾವರಖಾನನಿಗೆ ಇದರಿಂದ ಒಂದು ಬಗೆಯ ಧಕ್ಕೆ ಹಾಗೂ ಭಯಗಳು ಹುಟ್ಟಿಕೊಂಡುವು. ಆದ್ದರಿಂದ ತನ್ನ ಸಂರಕ್ಷಣಾರ್ಥವಾಗಿ ಮೊದಲಿಗಿಂತ ಅಧಿಕ ಎಚ್ಚರಿಕೆಯಿಂದ ಇರಹತ್ತಿದನು. ಶಿಪಾಯಿ ಜನರನ್ನು ಸೈನಿಕರನ್ನು ಸೇರಿಸಹತ್ತಿದನು. ಮೊದಲಿನ ಸೈನ್ಯಕ್ಕಿಂತ ಐದಾರು ಸಾವಿರ ಸವಾರರನ್ನು ಹೊಸದಾಗಿ ನೌಕರಿಗೆ ಸೇರಿಸಿಕೊಂಡನು. ಬಹಳ ಹಣ ಖರ್ಚುಮಾಡಿ ಕುದುರೆಯ ಹಾಗೂ ಆನೆಗಳ ಸಾಮಾನುಗಳನ್ನು ಮಖಮಲ್ ಕುಮಾಷ ಮತ್ತು ಕಲಾಬತ್ತಿನ ಬಟ್ಟೆಗಳಿಂದ ಹೊಲಿಸಿದನು. ಕುಮಾಷ ಎಂಬುದು ಭಾರೀ ಕಿಮ್ಮತ್ತಿನ ಬಟ್ಟೆಯಾಗಿತ್ತು. ಅದರಂತೆ, ಉತ್ತಮೋತ್ತಮ ತಲವಾರ ಹಾಗೂ ಇತರ ಶಸ್ತ್ರಗಳ ಧಾರಿಗಳನ್ನು ಸೇರಿಸಿ ಸೈನ್ಯವನ್ನು

ಸಿದ್ಧಪಡಿಸಕೊಂಡನು. ಅನಂತರ ದಿಲಾವರಖಾನನು ಆದಿಲಶಹನಿಗೆ ವಿನಂತಿ ಮಾಡಿಕೊಳ್ಳುತ್ತ 'ಹೇ ಮಹಾರಜರೇ, ನಾನು ಸ್ವಾಮಿ ಸೇವೆಗಾಗಿ ಪ್ರಾಣಾರ್ಪಣೆ ಮಾಡಲು ಸೈನ್ಯವನ್ನು ಸೇರಿಸಿದ್ದೇನೆ. ಈ ಸೈನ್ಯವನ್ನು ಪ್ರಭುಗಳು ನೋಡಬೇಕು' ಎಂದನು. ಆಗ ಬಾದಶಹನು ನಗರದ ಕೋಟೆಯ ಗೋಪುರದ ಮೇಲೆ ಕುಳಿತನು. ದಿಲಾವರಖಾನನು ಸ್ವಾರರನ್ನು ಸಿಬ್ಬಂದಿಯನ್ನು, ಆನೆ, ಕುದುರೆಗಳನ್ನು ಸಂಪೂರ್ಣ ಸೈನ್ಯವನ್ನು, ತಲವಾರ ಮತ್ತು ಹತ್ಯಾರ ಬಂದ ಸಿದ್ಧ ಮಾಡಿದ ಸೈನಿಕರಿಂದೊಡಗೂಡಿದ ಸೈನ್ಯವನ್ನು ಬಾದಶಹನ ಸಮ್ಮುಖದಲ್ಲಿ ತಂದು ನಿಲ್ಲಿಸಿದನು. ಅದನ್ನು ಅವಲೋಕಿಸಿದ ಬಾದಶಹನು ಅತ್ಯಂತ ಸಂತೋಷದಿಂದ 'ಶಾಭಾಸ್ ಶಾಭಾಸ್' ಎಂದು ಅಪ್ಪಣೆಕೊಟ್ಟನು. ದಿಲಾವರಖಾನನಿಗೂ ಆತನ ಮಕ್ಕಳಿಗೂ ವಸ್ತ್ರಗಳನ್ನು, ಕುದುರೆ, ಆನೆಗಳನ್ನು ಮತ್ತು ಆದಿಲಶಹನು ತನ್ನ ಸೊಂಟಕ್ಕೆ ಕಟ್ಟಿಕೊಳ್ಳುವ ವಿಶೇಷ ತಲವಾರ, ಖಂಜೀರ ಮತ್ತು ಜಡಾವದಾರ ಶಿರಪೇಚ, ಮುತ್ತು, ರತ್ನ, ಮಾಣಿಕ್ಯಗಳ ಉಂಗುರಗಳನ್ನು ಮತ್ತು ತನ್ನ ಖಾಸಾ ಕುದುರೆಯ ಭಾರೀ ಕಿಮ್ಮತ್ತಿನ ಜೀನನ್ನು ಲಗಾಮ ಸಹಿತವಾಗಿ, ಒಟ್ಟು ಎರಡು ಲಕ್ಷ ಹೊನ್ನುಗಳಷ್ಟು ಕಿಮ್ಮತ್ತಿನ ಭಾರೀ ಸಾಮಾನುಗಳನ್ನು ಆ ದಿನ ದಿಲಾವರಖಾನನಿಗೂ ಆತನ ಮಕ್ಕಳಿಗೂ ಬಕ್ಷೀಸಾಗಿ ಕೊಟ್ಟನು. ಹಾಗೆ ಆ ವರುಷ ದಿಲವಾರಖಾನನು ಐದು ಸಲ ಅದೇ ರೀತಿಯ ಬಹುಮಾನಗಳನ್ನು ಪಡೆದನು. ಅಲ್ಲದೆ ಬಾದಶಹನ ಗುರುತಿರುವ ಇನಾಮ ಪತ್ರಗಳನ್ನೂ ಪಡೆದನು. ಆ ಪತ್ರದಲ್ಲಿ ಹೀಗೆ ಬರೆದಿತ್ತು;

'ಸರಕಾರದ ಕಾರಕೂನರಿಗೂ, ಕಾಮಗಾರರಿಗೂ ತಿಳಿಸುವುದೇನೆಂದರೆ, ಖಾನ ಆಲೀಶಾನ್ ದಿಲಾವರಖಾನ ಅವರು ರಾಜ್ಯದ ಕಲ್ಯಾಣವನ್ನು ಬಯಸುವವರು, ಅವರು ಉತ್ತಮ ಸೇವೆ ಸಲ್ಲಿಸಿ, ಪ್ರಸಂಗದಲ್ಲಿ ಉಪಯೋಗಕ್ಕೆ ಬರುವ ಉತ್ತಮ ಸೈನ್ಯವನ್ನು ಸಂಗ್ರಹಿಸಿದ್ದಾರೆ. ದಿಲಾವರಖಾನರಿಗೆ ಈಗ ಇನಾಮ ಹಾಕಿ ಕೊಟ್ಟಿರುವ ಗ್ರಾಮಗಳಿಂದ, ಆ ಗ್ರಾಮಗಳ ವಸೂಲಿಯಿಂದ ಸೈನ್ಯದ ಖರ್ಚು ಪೂರೈಸುವುದಿಲ್ಲ. ಆದ್ದರಿಂದ ಪ್ರಭುಗಳು ಅನುಗ್ರಹ ಮಾಡಿ ಐದು ಸಾವಿರ ಸವಾರರ ಖರ್ಚಿಗಾಗಿ, ಮತ್ತೆ ಬೇರೊಂದು ಪ್ರದೇಶವನ್ನು ಹೊಸದಾಗಿ ದಿಲಾವರ ಖಾನನಿಗೆ ಕೊಟ್ಟಿದ್ದಾರೆ. ಅದನ್ನು ಅವರೇ ಉಪಭೋಗಿಸಬೇಕು.'

ಆ ಆಜ್ಞೆಯನ್ವಯ ನೂರು ಗ್ರಾಮಗಳನ್ನು ಆತನಿಗೆ ಕೊಟ್ಟನು. ಅನಂತರ ದಿಲಾವರಖಾನನು ಬಾದಶಹನ ಸೈನ್ಯದಲ್ಲಿಯ ೫೦೦೦ ಸೈನಿಕರನ್ನು ಕಡಿಮೆ ಮಾಡಿ ತನ್ನ ಸೈನ್ಯದಲ್ಲಿ ಅಷ್ಟನ್ನು ಬೆಳಸಿಕೊಂಡನು. ಒಟ್ಟಿನಲ್ಲಿ ದಿಲಾವರಖಾನನ ಕಾರ್ಯಭಾವ ತಾನು ಸಾಧ್ಯವಿದ್ದಷ್ಟು ಪ್ರಬಲನಾಗಿರಬೇಕು, ಬಾದಶಹನ ಸೈನ್ಯ ಕಡಿಮೆಯಾಗಿರಬೇಕು, ಅದರಿಂದ ಬಾದಶಹನು ಒತ್ತಡದಲ್ಲಿದ್ದು ದಿಲಾವರಖಾನನನ್ನು ರಕ್ಷಿಸುವ ಧೈರ್ಯ ಮಾಡಬಾರದು ಎಂಬುದಾಗಿತ್ತು. ದಿಲಾವರಖಾನನು ರಾಜಕಾರಣದ ಹೆಜ್ಜೆಯನ್ನು ಮುಂದೆ ಇಟ್ಟಿದ್ದನು. ಈಗ ಅಹಮದ ನಗರದ ನಿಜಾಮಶಾಹನ ಪ್ರದೇಶದ ಮೇಲೆ ದಾಳಿಮಾಡಿ ಅಲ್ಲಿಯೂ ಪ್ರಬಲನಾಗಿ, ಅಲ್ಲಿಯ ಪ್ರದೇಶದಮೇಲೆ ತನ್ನ ಕಡೆಯ ಒಬ್ಬರನ್ನು ನಿಯಮಿಸಬೇಕೆಂದು ವಿಚಾರ ಮಾಡಿದನು.

### ೨೩. *ದಿಲಾವರಖಾನನು ತಾನು ಪ್ರಬಲನಾಗಲೂ ಬುರ್ಹಾಣ ನಿಜಾಮಶಾಹನಿಗೆ ಸಹಾಯ ಮಾಡಿದ್ದು :*

ಬುರ್ಹಾಣಶಾಹ ಬಿನ್ ಹುಸೇನ ನಿಜಾಮಶಾಹನು ತನ್ನ ಬಂಧು ಮುರ್ತಜಾ ನಿಜಾಮಶಾಹನ ಸಂಶಯದಿಂದ, ಅಲಿ ಆದಿಲಶಹನ ಕಾಲದಲ್ಲಿಯೆ ವಿಜಾಪುರಕ್ಕೆ ಬಂದು ಆಶ್ರಯ ಪಡೆದಿದ್ದನು. ಆ ದಿನಗಳಲ್ಲಿ ಅಲಿ ಆದಿಲಶಹನು ಅವನನ್ನು ಪಾಲನ ಮಾಡುತ್ತ ಅಹಮದನಗರದ ಸಿಂಹಾಸನದ ಮೇಲೆ

ಅವನನ್ನು ಕೂಡ್ರಿಸಲು ಸಾಕಷ್ಟು ಪ್ರಯತ್ನ ಮಾಡಿದನು. ಆದರೆ ಅಲಿ ಆದಿಲಶಹನು ಜೀವಂತವಿದ್ದಾಗ ಆತನ ಆಶೆ ಪೂರೈಸಲಿಲ್ಲ. ಅವನ ಇಚ್ಛೆ ಗುಪ್ತವಾಗಿಯೇ ಉಳಿಯಿತು. ಅಲಿ ಆದಿಲಶಹನು ಸತ್ತ ನಂತರ ಬುರ್ಹಾಣ ಶಾಹನು ಇಬ್ರಾಹಿಮ ಆದಿಲಶಹನ ರಾಜ್ಯಕಾರಭಾರದ ಪ್ರಾರಂಭದ ದಿನಗಳಲ್ಲಿ ಆದಿಲಶಹನ ಅಮೀರ ಜನರಲ್ಲಿ ಆಶ್ರಯ ಪಡೆದಿದ್ದನು. ಆದರೂ ಆತನ ದುರ್ದೈವದ ದಿನಗಳು ಮುಗಿದಿರಲಿಲ್ಲ. ಆದ್ದರಿಂದ ಬುರ್ಹಾಣನು ವಿಜಾಪುರದಿಂದ ನಿರಾಶನಾಗಿ ಹೊರಟು ಅಕಬರ ಬಾದಶಹನ ರಾಜಧಾನಿಗೆ ಹೋಗಿ ಇರಹತ್ತಿದನು.

ವಿಜಾಪುರದಲ್ಲಿದ್ದಾಗ ಆತ ಅನೇಕ ಅಮೀರರು ಹಾಗೂ ಕಾರಭಾರಿಗಳೊಂದಿಗೆ ಸ್ನೇಹವನ್ನು ಸಂಪಾದಿಸಿಕೊಂಡಿದ್ದನು. ದೆಹಲಿಗೆ ಹೋದ ಮೇಲೂ ಅವರೊಂದಿಗೆ ಪತ್ರಮುಖೇನ ಸಂಪರ್ಕವನ್ನಿಟ್ಟುಕೊಂಡಿದ್ದನು. ಅಂಥ ದಿನಗಳಲ್ಲೆ ದಿಲಾವರಖಾನನಿಗೆ ತನ್ನ ಕೆಲಸದಲ್ಲಿ ಪೂರ್ತಿ ಧೈರ್ಯ ಹಾಗೂ ಭದ್ರತೆಗಳನ್ನು ಒದಗಿಸಿಕೊಳ್ಳುವುದರಲ್ಲಿ ನಿರತನಾಗಿದ್ದನು. ಆದ್ದರಿಂದ ದಿಲಾವರಖಾನನು ನಿಜಾಮಶಾಹಿ ಜನರನ್ನು ತನ್ನತ್ತ ಒಲಿಸಿಕೊಂಡು ತನ್ನ ಸಂಪೂರ್ಣ ಭದ್ರತೆಯನ್ನು ಮಾಡಿಕೊಳ್ಳಬೇಕೆಂದು ಯೋಚಿಸಿದನು. ನಿಜಾಮಶಾಹನ ಸರಕಾರದಲ್ಲಿಯ ಕಾಮದಾರ ಜನರಲ್ಲಿ ಜಮಾಲಖಾನ ನ್ಹೇದವಿ ಎಂಬ ಒಬ್ಬ ಸಂಭಾವಿತ ವ್ಯಕ್ತಿ ಇದ್ದುದು ಆತನಿಗೆ ತಿಳಿದಿತ್ತು. ಆತನು ಆ ರಾಜಧಾನಿಯಲ್ಲಿ ಬಹಳ ಗದ್ದಲ ತೊಂದರೆಗಳು ಉದ್ಭವಿಸಿದಾಗ ಬಂಧನದಲ್ಲಿದ್ದ ಬುರ್ಹಾಣನ ಮಗ ಹನ್ನೆರಡು ವರುಷದ ಇಸ್ಮಾಯಿಲನನ್ನು ಬಿಡುಗಡೆ ಮಾಡಿ ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದ್ದನು. ತಾನೆ ರಾಜ್ಯ ಸೂತ್ರಗಳನ್ನು ಹಿಡಿದು ಮುಖ್ತಾರನಾಗಿದ್ದನು, ಆ ಇಸ್ಮಾಯಿಲನ ತಂದೆಯೆ ಬುರ್ಹಾಣ ನಿಜಾಮಶಾಹನು ಅನೇಕ ವರುಷಗಳಿಂದ ದೇಶಾಂತರದಲ್ಲಿದ್ದು ಬಹಳ ವರುಷಗಳಿಂದ ತಾನೆ ರಾಜನಾಗಬೇಕು ಎಂಬ ತಳಮಳದಲ್ಲಿ ಚಡಪಡಿಸುತ್ತಿದ್ದನು. ಆದರೆ ಸರ್ವ ಕಾಲದಲ್ಲಿಯೂ ಅಪೂರ್ಣ ಮನೋರಥದ ವಿಷವನ್ನು ಕುಡಿಯುತ್ತಲ್ಲಿದ್ದನು.

ಅವನ ಸಂಕಲ್ಪ ಸಿದ್ಧಿಸಿರಲಿಲ್ಲ. ಬುರ್ಹಾಣಶಾಹನು ವಿಜಾಪುರದ ಅನೇಕ ಕಾರಭಾರಿಗಳಿಗೆ ಪತ್ರ ಬರೆಯುತ್ತಿರುವುದು ದಿಲಾವರಖಾನನಿಗೆ ಗೊತ್ತಿತ್ತು. ಅವರನ್ನು ಕರೆದು ಬುರ್ಹಾಣಶಾಹನ ಪತ್ರದ ಒಕ್ಕಣಿಕೆಯನ್ನು ಓದಿದನು. ಅದಕ್ಕೆ ಪ್ರತಿಯಾಗಿ 'ನಿಮ್ಮ ಪತ್ರದ ಒಕ್ಕಣಿಕೆಯ ವಿಷಯುವನ್ನು ಆದಿಲಶಹನ ಮುಖ್ಯಕಾರಭಾರಿಯಾದ ದಿಲಾವರಖಾನನಿಗೆ ತಿಳಿಸಿದ್ದೇವೆ' ಎಂದು ಬರೆಯಲು ಹೇಳಿದನು. ದಿಲಾವರಖಾನನು ಅದಕ್ಕೆ ಒಪ್ಪಿ ಸಹಾಯ ಮಾಡಲು ಸಿದ್ಧನಿದ್ದಾನೆ ಆದರೆ ಅಕಬರಬಾದಶಹನು ಒಂದು ಪತ್ರ ಬರೆದು ದಿಲಾವರಖಾನನಿಗೂ ಮತ್ತು ಖಾನದೇಶದ ಬಾದಶಹ ಅಲೀಖಾನನಿಗೂ ಅಜ್ಞಾಪತ್ರಗಳನ್ನು ಕಳಿಸಲು ಹೇಳಿದನು. ಸರಹದ್ದಿನಲ್ಲಿಯ ಅಮೀರ ಜನರಿಗೂ ಪತ್ರ ಬರೆದು ಅವರೆಲ್ಲರೂ ಬುರ್ಹಾಣಶಾಹನಿಗೆ ಸಹಾಯ ಮಾಡಲು ತಿಳಿಸುತ್ತ 'ಬುರ್ಹಾಣಶಾಹನು ಅತಿ ತ್ವರಿತವಾಗಿ ಅಹಮದನಗರಕ್ಕೆ ಬಂದು ಬಿಡಲಿ. ಅಷ್ಟರಲ್ಲಿ ದಿಲಾವರಖಾನನು ಇಬ್ರಾಹಿಮ ಆದಿಲಶಹನ ಜೊತೆಗೆ ಅಹಮದನಗರಕ್ಕೆ ಬಂದು ಬುರ್ಹಾಣಶಾಹನನ್ನು ಸಿಂಹಾಸನದ ಮೇಲೆ ಕೂಡಿಸುವ ಸಕಲ ಪ್ರಯತ್ನಗಳನ್ನು ಮಾಡುತ್ತಾನೆ' ಎಂದು ಉತ್ತರ ಬರೆಯಲು ಹೇಳಿದನು. ಅದರಂತೆ ಅವರು ಬರೆದರು. ಉತ್ತರವನ್ನು ಓದಿದ ಬುರ್ಹಾಣಶಹನು ಅತಿ ಖುಷಿಯಿಂದ ಪತ್ರದಲ್ಲಿ ಬರೆದಂತೆ ಅಕಬರ ಬಾದಶಹನ ಅಜ್ಞಾ ಪತ್ರಗಳನ್ನು ತೆಗೆದುಕೊಂಡು, ಸೈನ್ಯದೊಂದಿಗೆ ದಕ್ಷಿಣ ದೇಶದತ್ತ ಬಂದನು. ಅಸಾರ ಮತ್ತು ಬುರ್ಹಾಣಪುರದ ಹತ್ತಿರ ಬರುತ್ತಿದ್ದಂತೆ ಖಾನದೇಶದ ರಾಜ ಅಲೀಖಾನನು ಎದುರುಗೊಂಡು ವೈಭವದಿಂದ ನಗರಕ್ಕೆ ಬರಮಾಡಿಕೊಂಡನು.

ಹಸಿರು ಬಣ್ಣದ ಛತ್ರ, ಮಯೂರ ಪಂಖ ಇತ್ಯಾದಿಗಳನ್ನು ಹಿಡಿದು ಆತನನ್ನು ಸಿಂಹಾಸನದ ಮೇಲೆ ಕೂಡಿಸಿದನು. ಎಲ್ಲ ಜನರೂ ಮುಜುರೆ ಸಲ್ಲಿಸಿ ಕಾಣಿಕೆಗಳನ್ನು ಸಲ್ಲಿಸಲು ಅಲೀಖಾನನು ಆಜ್ಞೆ ಮಾಡಿದನು. ತನ್ನ ಸೈನ್ಯವನ್ನು ಸಿದ್ಧಪಡಿಸಿಕೊಂಡನು.

ಬುರ್ಹಾಣಶಾಹನು ಖಾನದೇಶಕ್ಕೆ ಬಂದು ಮುಟ್ಟಿದ ವಿಷಯವನ್ನು ಮತ್ತು ಆತನಿಗೆ ಸಹಾಯದ ವಿಷಯದಲ್ಲಿ ನಡೆದ ಸಿದ್ಧತೆಗಳನ್ನು ದಿಲಾವರಖಾನನಿಗೆ ಅಲೀಖಾನನು ತಿಳಿಸಿದನು. ಆಗ ದಿಲಾವರಖಾನನೂ ಬುರ್ಹಾಣಶಾಹನಿಗೆ ಸಹಾಯ ಮಾಡಲು ಇಬ್ರಾಹಿಮ ಆದಿಲ ಶಹನ ಜೊತೆಗೆ ಭಾರೀ ಸೈನ್ಯವನ್ನು ತೆಗೆದುಕೊಂಡು ನಿಜಾಮಶಹನ ರಾಜ್ಯದತ್ತ ಹೊರಟನು, ಆದಿಲಶಹನ ಸೈನ್ಯವು ಶಹಾದುರ್ಗದ ಕೋಟೆಯಲ್ಲಿ ಬಂದಾಗ, ಆದಿಲಶಹನಿಗೆ ಅಲ್ಲಿಯ ನೀರು ಹಾಗೂ ಹವಾಗುಣಗಳು ಅತ್ಯಂತ ಮನಸ್ಸಿಗೆ ಬಂದು ಸಂತೋಷವಾಯಿತು. ಕೆಲ ದಿನ ಇಲ್ಲಿಯೇ ಇರಬೇಕೆಂದು ಬಯಸಿದನು. ಬಾದಶಹನ ಮಂಡಳಿಯು ಕೆಲವು ದಿನ ಅಲ್ಲಿಯೇ ಉಳಿಯಿತು. ಈ ಎಲ್ಲದರ ಹಿಂದೆ ದಿಲಾವರಖಾನನಿಗೆ ತನ್ನ ಆಪ್ತ ಜನರಲ್ಲಿಯ ಒಬ್ಬರನ್ನು ವಿಜಾಪುರ ಕೆಲಸಗಳನ್ನು ನೋಡಿಕೊಳ್ಳಲು ಮತ್ತು ವಿಜಾಪುರದ ಕೋಟೆಯ ವ್ಯವಸ್ಥೆಗಾಗಿ ನಿಯಮಿಸಬೇಕೆಂದನು. ಬಾದಶಹನ ತಾಯಿ ಆತನ ಯೋಜನೆಗಳನ್ನು ಎಂದೂ ಕಾರ್ಯಗತಗೊಳಿಸವುದಿಲ್ಲವೆಂಬುದು ಆತನಿಗೆ ಗೊತ್ತಿತ್ತು, ಆದ್ದರಿಂದ ತಾಯಿ ಮತ್ತು ಮಗನನ್ನು ದೂರವಾಗಿಡಬೇಕು ಎಂದನು. ಕಳ್ಳರನ್ನು ದರೋಡೆಖೋರರನ್ನು ಕರೆದು ಅವರಿಗೆ ಪ್ರತಿನಿತ್ಯ ವಿಜಾಪುರದ ಮನೆಗಳನ್ನು, ಅಂಗಡಿ ಮುಂಗಟ್ಟುಗಳನ್ನು ರಾತ್ರಿಯ ಹೊತ್ತು ದರೋಡೆ ಮಾಡಿ ಲೂಟಿ ಮಾಡಲು ಸೂಚಿಸಿದನು. ಅದರಂತೆ ಕಳ್ಳರು ತಮ್ಮ ಕೆಲಸವನ್ನು ಮಾಡಹತ್ತಿದರು. ನಗರದ ರಹವಾಸಿಗಳ ಎಲ್ಲ ಸಂಪತ್ತನ್ನು ಲೂಟಿಮಾಡಿ ಒಯ್ಯತೊಡಗಿದರು. ಪರಿಸ್ಥಿತಿ ಗಂಭೀರವಾಗುತ್ತಿದ್ದಂತೆ ನಗರದ ಜನರು ಅಳುತ್ತ-ಕೂಗುತ್ತ, ಶಿಪಾಯಿಗಳು ಗಾಬರಿಯಾಗಿ ಭಯಭೀತರಾಗಿ ಪ್ರತಿನಿತ್ಯ ಆದಿಲಶಹನ ಅರಮನೆಗೆ ಬಂದು ಫಿರ್ಯಾದುಗಳನ್ನು ಕೊಡಹತ್ತಿದರು. ದಿಲಾವರಖಾನನ ಮನದಲ್ಲಿಯ ಸಂಕಲ್ಪಕ್ಕೆ ಚಾಲನೆ ದೊರೆಯಿತು. ಆಗ ದಿಲಾವರಖಾನನು ಬಾದಶಹನಿಗೆ ವಿನಂತಿ ಮಾಡಿಕೊಳ್ಳುತ್ತ 'ರೂಮೀಖಾನನ ಕೈಯಿಂದ ನಗರದ ಸಂರಕ್ಷಣೆ ಆಗಲೊಲ್ಲದು. ಕಳ್ಳರನ್ನು ನಿಗ್ರಹಿಸುವುದು ರೂಮೀಖಾನನಿಂದ ಆಗುತ್ತಿಲ್ಲ. ಪ್ರಭುಗಳು ಒಪ್ಪಿದರೆ, ನನ್ನ ಕಡೆಯ ಜನರಲ್ಲಿಯ ಒಬ್ಬ ಸಮರ್ಥನನ್ನು ಕೋಟೆಯ ವ್ಯವಸ್ಥೆಗೆ ನೋಡಿ ನಿಯಮಿಸುವೆನು' ಎಂದು ವಿನಂತಿ ಮಾಡಿಕೊಂಡನು. ಆಗ ಆದಿಲಶಹನು ಅಪ್ಪಣೆ ಕೊಡುತ್ತ, 'ರೂಮೀಖಾನನು ಬಹಳ ದಿನಗಳಿಂದ ಸೇವೆ ಮಾಡುತ್ತ ಕುಟುಂಬದ ಸೇವಕನಾಗಿದ್ದಾನೆ. ಕೆಲಸದಿಂದ ಕಡಿಮೆ ಮಾಡುವಷ್ಟು ಅಯೋಗ್ಯನಲ್ಲ. ಅವನಿಗೆ ನಾವು ಎಚ್ಚರಿಕೆ ಕೊಟ್ಟು ನಗರ ಕಳ್ಳರಿಗೆ ಯೋಗ್ಯ ಶಿಕ್ಷೆ ಕೊಡಲು ಹೇಳುತ್ತೇವೆ ಮತ್ತು ಆತನ ವ್ಯವಸ್ಥೆಯಿಂದ ಕಳ್ಳರ ಉಪದ್ರವ ನಗರದ ಜನರಿಗೆ ಆಗದಂತೆ ರೂಮೀಖಾನನಿಗೆ ತಾಕೀದು ಮಾಡುತ್ತೇವೆ' ಎಂದನು.

ದಿಲಾವರಖಾನನು ತನಗಾಗಿ ಈ ಸಂಕಟವನ್ನು ಉಂಟುಮಾಡಿ ವಿನಂತಿಮಾಡಿಕೊಂಡಿದ್ದನು. ಆದರೆ ಆತನ ಸಂಕಲ್ಪ ಸಿದ್ಧಿಯಾಗಲಿಲ್ಲ. ನಿರುಪಾಯನಾದನು. ರೂಮೀಖಾನನನ್ನು ಕೆಲಸದಿಂದ ಕಡಿಮೆ ಮಾಡದಿರಲು ಬಹುಶಃ ಬಾದಶಹನ ತಾಯಿಯೇ ಸೂಚಿಸಿರಬಹುದೆಂದು ಯೋಚಿಸಿ, ಇನ್ನೊಂದು ಯುಕ್ತಿಯನ್ನು ಹುಡುಕಿದನು. ತನ್ನ ಹೆಂಡಿರು ಮಕ್ಕಳು ಪರಿವಾರವನ್ನೂ ವಿಜಾಪುರದಿಂದ ದಂಡಿನಲ್ಲಿಯೇ ಕರೆಯಿಸಿಕೊಂಡನು. ಶಾಹದುರ್ಗದಿಂದ ಸೈನ್ಯವನ್ನು ಮುಂದೆ ತೆಗೆದೆಕೊಂಡು ಹೋಗಬೇಕೆಂದು ನಿರ್ಧರಿಸಿ ರಾಜಮಾತೆಗೆ ವಿನಂತಿಸಿಕೊಂಡನು. 'ಇನ್ನು ನಮ್ಮ ಸೈನ್ಯ ಮುಂದೆ ಹೋಗುತ್ತದೆ. ಶತ್ರುಗಳನ್ನು ಎದುರಿಸುತ್ತದೆ.

ಈ ಕೆಲಸದಲ್ಲಿ ಪರಿಣಾಮ ಏನಾದೀತೆಂದು ಹೇಳಲು ಬರುವುದಿಲ್ಲ. ನಾನು ಕೂಡ ನನ್ನ ಹೆಂಡಿರು ಮಕ್ಕಳನ್ನು ಶಹದುರ್ಗದ ಕೋಟೆಯಲ್ಲಿ ಇಡುತ್ತೇನೆ. ಆದ್ದರಿಂದ ನಾವು ಶತ್ರುಗಳನ್ನು ಎದುರಿಸಿ ಯುದ್ಧ ಮಾಡಿ ತಿರುಗಿ ಬರುವವರೆಗೆ ತಾವು ಕೂಡ ಐಶ್ವರ್ಯಸಹಿತವಾಗಿ ಶಹದುರ್ಗದ ಕೋಟೆಯಲ್ಲಿ ಇರುವುದು ಉಚಿತವೆಂದು ನನಗೆ ಅನಿಸುತ್ತದೆ? ಎಂದನು. ದಿಲಾವರಖಾನನ ಈ ಕಪಟವನ್ನರಿತ ರಾಜಮಾತೆ ಅದನ್ನು ಒಪ್ಪಲಿಲ್ಲ. 'ನನ್ನ ಪ್ರಾಣಪ್ರಿಯ ಮಗನಿಂದ ನಾನೆಂದೂ ಅಗಲಲಾರೆ. ಕಾಲಚಕ್ರದ ಗತಿಯಲ್ಲಿ ನನಗೇನು ಆಗಬೇಕೋ ಅದೇ ಆಗಲಿ' ಎಂದು ಅಪ್ಪಣೆ ಕೊಡಿಸಿದಳು. ದಿಲಾವರಖಾನನ ಈ ಯೋಜನೆಯೂ ನಡೆಯಲಿಲ್ಲ. ನಿರುಪಾಯನಾಗಿ ಖಿನ್ನನಾದನು. ತನ್ನ ಹೆಂಡಿರು ಮಕ್ಕಳನ್ನು ಶಹದುರ್ಗದ ಕೋಟೆಯಲ್ಲೆ ಇಟ್ಟು, ತಾನು ಆದಿಲಶಹನ ಸೈನ್ಯದೊಂದಿಗೆ ಶತ್ರುಗಳನ್ನು ಎದುರಿಸಲು ಹೊರಟನು.

### *೨೪. ಆದಿಲಶಹ ಹಾಗೂ ನಿಜಾಮಶಹರ ಯುದ್ಧದಲ್ಲಿ ಆದಿಲಶಹನ ಸೋಲು ಮತ್ತು ಆದಿಲಶಹನ ಚಿಂತೆ :*

ಜಮಾಲಖಾನ ಹಬಶೀ ಎಂಬುವನು ಬುರ್ಹಾಣಶಾಹನ ಮಗ ಇಸ್ಮಾಯಿಲ್ ನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ತಾನು ಸ್ವತಃ ರಾಜ್ಯದ ಮುಖ್ಯ ವಕೀಲನಾಗಿಯೂ ಪ್ರಧಾನಿಯೂ ಆಗಿದ್ದನು. ಆತನು ಇಸ್ಮಾಯಿಲ್ ನಿಜಾಮಶಹನ ಜೊತೆ ಬಹಳಷ್ಟು ಸೈನ್ಯವನ್ನು ತೆಗೆದುಕೊಂಡು ಬುರ್ಹಾಣಶಾಹ ಹಾಗೂ ಆದಿಲಶಹನನ್ನು ಎದುರಿಸಲು ಅಹ್ಮದನಗರದಿಂದ ಹೊರಟು, ಮೊದಲು ಆದಿಲಶಹನ ಮೇಲೆ ಏರಿ ಬಂದನು. ಆದಿಲಶಹನ ಸೈನ್ಯದ ಎದುರಿಗೆಯೇ ಬಂದು ಬೀಡಾರ ಹೂಡಿದನು. ಅನೇಕ ದಿನ ಪರಸ್ಪರ ಯುದ್ಧ ನಡೆಯಿತು. ಉಭಯ ಕಡೆಗಳಲ್ಲಿಯ ಸೈನ್ಯ ಯುದ್ಧದಿಂದಾಗಿ ನಾಶವಾಗುತ್ತಿತ್ತು. ಒಂದು ದಿನ ಬೆಳಗಿನಿಂದ ಸಾಯಂಕಾಲದವರೆಗೂ ಘನಘೋರ ಕಾಳಗ ನಡೆಯಿತು ರಾತ್ರಿಯ ಹೊತ್ತು ಉಭಯತರೂ ತಂತಮ್ಮ ಬೀಡಾರಗಳಿಗೆ ತಿರುಗಿ ಹೋಗಿದ್ದರು. ಮರುದಿನ ಮತ್ತೆ ಯುದ್ಧದ ಅಗ್ನಿ ಪ್ರದೀಪ್ತವಾಗಿ ಶಸ್ತ್ರರೂಪೀ ಜ್ವಾಲೆ ಪಸರಿಸಹತ್ತಿತ್ತು. ಉಭಯ ಕಡೆಗಳಲ್ಲಿಯ ಶೂರರು, ತರುಣರು ಬಹಾದ್ದೂರರು ಮೇಲಿಂದ ಮೇಲೆ ಹಲ್ಲೆ ಮಾಡುತ್ತಿದ್ದರು. ತಮ್ಮ ಪರಾಕ್ರಮ ತೋರಿಸುತ್ತಿದ್ದರು. ಶೂರರ ರಕ್ತದಿಂದ ಕುದುರೆಗಳ ಖುರಪುಟಗಳನ್ನು ತಾಮ್ರವರ್ಣದ್ದನ್ನಾಗಿ ಮಾಡುವಷ್ಟು ರಕ್ತ ಹರಿಯಿತು. ಪರಿಣಾಮವಾಗಿ ಯಶದ ಗಾಳಿ ಆದಿಲಶಹನ ಧ್ವಜದ ಕಡೆಗೆ ಬೀಸಿತು. ನಿಜಾಮಶಹನ ಸೈನ್ಯ ಸೋತಿತು. ಆದಿಲಶಾಹನ ಕಡೆಯ ಹಿಂದು ಅಮೀರ ಜನ, ಏಳೆಂಟು ಸಾವಿರ ಶಸ್ತ್ರಧಾರಿ ಶೂರ ಸ್ವಾರರ ಗುಂಪು ಆದಿಲಶಹನ ಸೈನ್ಯದ ಮುಂದುಗಡೆ ನಾಲ್ಕು ಕಡೆಗಳಿಂದಲೂ ಶತ್ರು ಸೈನ್ಯವನ್ನು ಮುತ್ತಿ ಲೂಟಿ ಮಾಡಲು ನಿಯಮಿಸಿತ್ತು. ಈ ಅಮೀರ ಜನರು ನಿಜಾಮ ಶಹನ ಕಡೆಯ ಸೈನ್ಯದಲ್ಲಿ ಹೊಕ್ಕು ಲೂಟಿ ಮಾಡಿ ಅನೇಕ ವಸ್ತುಗಳನ್ನು ಕೈವಶಮಾಡಿಕೊಂಡು ಹೊರಟುಹೋಗಿದ್ದರು. ಆ ಲೂಟಿಯಾದ ವಸ್ತುಗಳಲ್ಲಿ ೨೦೦ ಆನೆಗಳು, ೨೦೦೦ ಕುದುರೆಗಳು ಇದ್ದುವು. ಜಮಾಲಖಾನ ಹಾಗೂ ಆತನ ಅಳಿಯ ಖುದಾವಂದಖಾನನ ಸಹಿತವಾಗಿ ಇಸ್ಮಾಯಿಲ್‌ಖಾನನ ಜೊತೆಗೆ ಯುದ್ಧದಿಂದ ಬೇರೆಯಾಗಿ ಒಂದು ಸ್ಥಳದಲ್ಲಿ ಗುಪ್ತವಾಗಿ ಕುಳಿತಿದ್ದರು. ಹಿಂದು ಅಮೀರರು ಲೂಟಿ ಮಾಡಿಕೊಂಡು ಹೋದದ್ದು, ಆದಿಲಶಹನ ಉಳಿದ ಸೈನ್ಯ ನಿರ್ಭಯವಾಗಿ ಇನ್ನಷ್ಟು ಲೂಟಿಮಾಡುವುದರಲ್ಲಿ ತೊಡಗಿದ್ದು ಹಾಗೂ ದಿಲಾವರಖಾನನ ಹತ್ತಿರ ಈಗ ತುಸುವೆ ಸೈನ್ಯ ಇದೆ ಎಂಬುದು ಜಮಾಲಖಾನನಿಗೆ ಗೊತ್ತಾಗಿತ್ತು. ಆತ ತನ್ನ ಧಣಿಯೊಂದಿಗೆ ಸಾವಕಾಶವಾಗಿ ಹೊರಗೆ ಬಂದನು.

ಅದೇ ಸಮಯುದಲ್ಲಿ ಐನುಲ್‌ಮುಲ್ಕ ಹಾಗೂ ಅಂಕುಶಖಾನರು ದಿಲಾವರಖಾನನ ಸರ್ವಾಧಿಕಾರದಿಂದ ಬೇಸತ್ತು ಯುದ್ಧದಿಂದ ಹೊರಬಿದ್ದು ಬೇರೊಂದು ವಾರ್ತೆ ಕೇಳಿ ಆತನಿಗೆ ಶುಭಾಶಯ ಸಲ್ಲಿಸಲು ಆದಿಲಶಹನ ಕಡೆಗೆ ಹೊರಟಿದ್ದನು. ದಾರಿಯಲ್ಲಿ ಜಮಾಲಖಾನನ ಸೈನ್ಯ ಎದುರಾಯಿತು. ಪರಸ್ಪರದಲ್ಲಿ ಯುದ್ಧ ನಡೆಯಿತು. ನಿಜಾಮಶಹನ ಸೈನ್ಯ ಪ್ರಬಲವಾಯಿತು. ಆಗ ಐನುಲ್‌ಮುಲ್ಕ ಹಾಗೂ ಅಂಕುಶಖಾನ ಉಭಯತರೂ ೫೦-೬೦ ಆನೆಗಳನ್ನು, ಎಷ್ಟೋ ಕುದುರೆಗಳನ್ನು ಹಾಗೂ ಅನೇಕ ಸಾಮಾನು ಸರಂಜಾಮುಗಳನ್ನು ಅಲ್ಲಿಲ್ಲಿ ಬಿಟ್ಟು ಓಡಿ ಹೋದರು. ಮೊದಲು ಜಮಾಲಖಾನನ ಆನೆ ಕುದುರೆಗಳು ಅದೆಷ್ಟೋ ಯುದ್ಧ ಸಾಮಗ್ರಿಗಳು ಲೂಟಿಯಾಗಿ ನಿಜಾಮಶಹನ ಸೈನ್ಯ ಅನಾಯಾಸವಾಗಿ ಈಗ ಜಯ ಸಿಕ್ಕದ್ದು ಅವರಿಗೆ ಅತ್ಯಂತ ಸಂತೋಷತಂದಿತು. ಈ ವಿಷಯ ದಿಲಾವರಖಾನನಿಗೆ ತಿಳಿಯಿತು. ಇನ್ನು ಜಮಾಲಖಾನನು ತನ್ನ ಮೇಲೆಯೇ ಬರುತ್ತಿದ್ದಾನೆಂದು ಗೊತ್ತಾದಾಗ ಅಲ್ಲಿ ಉಳಿದುಕೊಳ್ಳುವುದು ಯೋಗ್ಯವಲ್ಲವೆಂದು ತಿಳಿದು ಜಮಾಲಖಾನನು ನೋಡ-ನೋಡುತ್ತಿರುವಂತೆ ಆತ ಓಡಿದನು. ಆದಿಲಶಹ ಬಾದಶಹನ ಹತ್ತಿರ ಬಂದು, ತಮ್ಮ ಸೈನ್ಯ ಸೋತದ್ದನ್ನು ಹಾಗೂ ಚದುರಿದ್ದನ್ನು ಹೇಳಿದನು. 'ಐನುಲ್ ಮುಲ್ಕ ಹಾಗೂ ಅಂಕುಶಖಾನರು ಸೋತರು. ಶತ್ರು ಜನರ ಬಲ ಪುನಃ ಅಧಿಕವಾಗಿದೆ. ಈಗ ಇಲ್ಲಿರುವುದರಲ್ಲಿ ಉಪಯೋಗವಿಲ್ಲ' ಎಂದು ವಿನಂತಿ ಮಾಡಿಕೊಳ್ಳುತ್ತ, ಆದಿಲಶಹನ ಜೊತೆಗೆಯೇ ಅಲ್ಲಿಂದ ಹೊರಟನು. ತಮ್ಮ ದಂಡಿನ ಸ್ಥಳಕ್ಕೆ ಬಂದು ಮುಟ್ಟಿದ್ದಾಗ ಅಲ್ಲಿ ತಮ್ಮ ಸಿಬ್ಬಂದಿ ಹಾಗೂ ಇತರ ಪರಿವಾರ ಆಗಲೇಹೊರಟು ಹೋಗಿದ್ದನ್ನು ಕಂಡರು. ಆಗ ಅಲ್ಲಿಂದಲೂ ಹೊರಟು ಶಹಾದುರ್ಗದ ಕಡೆಗೆ ಬಂದರು. ಇಡೀ ರಾತ್ರಿ ಅರಣ್ಯದಲ್ಲಿ ಬೆಟ್ಟಗುಡ್ಡಗಳಲ್ಲಿ ಅಲೆದು ತಿರುಗಿ ೧೮ ಕೋಸುಗಳಷ್ಟು ರಸ್ತೆಯನ್ನು ಸವೆಸಿ ದಣಿದು-ಹೈರಾಣರಾಗಿ ಮರುದಿನದ ಎರಡನೆಯ ಪ್ರಹರದ ಹೊತ್ತಿಗೆ ಶಹದುರ್ಗವನ್ನು ಬಂದು ಮುಟ್ಟಿದರು. ಹಾಗೆ ಆದಿಲಶಹನ ಸೈನ್ಯ ದಾರಿಯಲ್ಲಿ ಬೆಟ್ಟಗುಡ್ಡಗಳನ್ನು ಏರಿ ಇಳಿಯುತ್ತ ಗಾಢ ಕತ್ತಲೆಯಲ್ಲಿ ಗಾಬರಿಯಿಂದ ಬೇಗ ಬರುತ್ತಿರುವಾಗ ಕೆಲವು ಸಾಮಾನುಗಳನ್ನು ದಾರಿಯಲ್ಲೆ ಕಳೆದುಕೊಂಡರು. ಇನ್ನು ಕೆಲ ವಸ್ತುಗಳು ಭಾರವಾಗಿದ್ದರಿಂದ, ಅವುಗಳನ್ನು ಅಲ್ಲಿಯೇ ಒಗೆದರು. ಅದರಿಂದಾಗಿ ಬಹುತೇಕ ಜನರ ಹತ್ತಿರ ಯಾವ ಪದಾರ್ಥಗಳೂ ಉಳಿದಿರಲಿಲ್ಲ. ದಿಲಾವರಖಾನನ ಮಗನ ಮಲಗುವ ತಂಬೂ ಕೂಡ ಕಳೆದುಹೋಯಿತು. ನಗರ ಹಾಗೂ ರಹವಾಸಿಗಳ ಸ್ಥಳ ಹತ್ತಿರದಲ್ಲೆ ಇತ್ತೆಂದು ಹೇಗೋ ಕಳೆದು ರಾತ್ರೋರಾತ್ರಿ ಎಲ್ಲರೂ ಕೂಡಿ ನಡೆದು ಬರುತ್ತ ಒಂದು ರಾತ್ರಿಯನ್ನು ಕಳೆದಿದ್ದರು. ಅವರೆಲ್ಲರಿಗೂ ಅನಂತರ ವಿಜಾಪುರದಿಂದ ಸಾಮಾನುಗಳನ್ನು ತರಿಸಿದರು. ಇತ್ತ ಇಸ್ಮಾಯಿಲ್ ನಿಜಾಮಶಹನು ಕೂಡ ತನ್ನ ತುಸುವೆ ಸೈನ್ಯದೊಂದಿಗೆ ಯುದ್ಧ ಭೂಮಿಯಲ್ಲಿ ಬಹಳ ಭಯಭೀತರಾಗಿ ರಾತ್ರಿಯೆಲ್ಲ ಜಾಗರಣೆ ಮಾಡಿ ಅನ್ನ ಪಾನಾದಿಗಳಲ್ಲಿದೆ ರಾತ್ರಿಯನ್ನು ಕಳೆದರು. ನಿಜಾಮಶಹನ ಕಡೆಯ ಎಲ್ಲಿರಿಗೂ ಹಾಸಿ ಹೊದೆಯಲು ಆನೆ-ಕುದುರೆಗಳ ಮೇಲಿನ ಬಟ್ಟೆಗಳಲ್ಲದೆ ಏನೂ ಇರಲಿಲ್ಲ.

*೨೫. ಜಮಾಲಖಾನನು ಇಸ್ಮಾಯಿಲ್‌ಶಾಹನ ಜೊತೆಗೆ ಸೈನ್ಯ ತೆಗೆದುಕೊಂಡು ಬುರ್ಹಾಣ ನಿಜಾಮಶಹನನ್ನು ಎದುರಿಸಿದ್ದು ಮತ್ತು ಜಮಾಲಖಾನ ಹಾಗೂ ಖುದಾವಂತಖಾನರು ಕೊಲೆಯಾದದ್ದು.*

ಆದಿಲಶಹನ ಸೈನ್ಯ ಸೋತು ಶಾಹದುರ್ಗದತ್ತ ಹೋದ ವಿಷಯ ತಿಳಿಯುತ್ತಲೆ ಇಸ್ಮಾಯಿಲ್ ನಿಜಾಮಶಹನ ಮುಖ್ಯ ಕಾರಭಾರಿ ಜಮಾಲಖಾನ ಮೆಹದವಿ ಎಚ್ಚೆತ್ತನು. ಆತ ವಾಯುವೇಗದಲ್ಲಿ

ಅಹಮದನಗರವನ್ನು ಮುಟ್ಟಿ ಸೈನ್ಯ ಸಿದ್ಧ ಮಾಡಿಕೊಂಡು ಬುರ್ಹಾಣಶಾಹನ ಮೇಲೆ ಏರಿಹೋಗಲು ಯೋಚಿಸಿದನು. ಆದಿಲಶಹನು ಬುರ್ಹಾಣಶಾಹನ ಸಹಾಯಕ್ಕೆ ಬರದಿದ್ದರೆ ಬುರ್ಹಾಣಶಾಹನನ್ನು ಕೊಂದು ಮಧ್ಯದ ವ್ಯಾಧಿಯ್ನು ಕಡಿದೊಗೆದು ಬಿಡುವುದೆಂದು ಸಂಕಲ್ಪ ಮಾಡಿದನು. ಸೈನ್ಯ ಹಾಗೂ ಸಾಮಗ್ರಿಗಳನ್ನು ವ್ಯವಸ್ಥೆಗೊಳಿಸಿ ಅಹಮದನಗರದಿಂದ ವರ್ಹಾಡದೇಶದತ್ತ ಹೊರಟನು. ಬುರ್ಹಾಣಶಾಹನು ಅದಕ್ಕಿಂತ ಮೊದಲೆ ವರ್ಹಾಡದ ರಾಜಾ ಅಲೀಖಾನ ಸಹಿತವಾಗಿ ಅನೇಕ ಅಮೀರ ಜನರನ್ನು ಅವರಿಗೆ ಆಶೆ ತೋರಿಸಿ ತನ್ನ ಬುಟ್ಟಿಗೆ ಹಾಕಿಕೊಂಡಿದ್ದನು. ಆ ವಿಷಯ ಜಮಾಲಖಾನನಿಗೆ ತಿಳಿಯಗೊಟ್ಟಿರಲಿಲ್ಲ. ದಿಲಾವರಖಾನ ಕೂಡ ೧೦,೦೦೦ ಶೂರ ಸೈನಿಕರನ್ನು ಶಾಹದುರ್ಗದಿಂದ ಬುರ್ಹಾಣಶಾಹನ ಸಹಾಯಕ್ಕೆ ಕಳಿಸಿದ್ದನು. ಜಮಾಲಖಾನನಿಗೆ ಈ ವಿಷಯ ತಿಳಿಯಿತು. ಇನ್ನಷ್ಟು ವೇಗದಿಂದ ಆದಿಲಶಹನ ಸೈನ್ಯ ಬಂದು ಮುಟ್ಟುವ ಮೊದಲೇ ನಾಲ್ಕೈದು ದಿನ ಮೊದಲು ಬುರ್ಹಾಣಶಾಹನ ದಂಡಿನ ಆಸುಪಾಸಿನಲ್ಲಿ ಬಂದು ಮುಟ್ಟಿದನು. ಅಲ್ಲಿ ಅವನಿಗೆ ವರ್ಹಾಡದ ಎಲ್ಲ ಅಮೀರ ಜನರು ಬುರ್ಹಾಣಶಾಹನ ಸಹಾಯಕ್ಕೆ ನಿಂತಿದ್ದಾರೆಂದು ತಿಳಿಯಿತು. ಜಮಾಲಖಾನನಿಗೆ ದೊಡ್ಡ ನಿರಾಶೆಯಾಗಿ ಹುಮ್ಮಸು ಇಳಿಯಿತು. ನಿರುಪಾಯನಾಗಿ ಪ್ರಾಣದ ಹಂಗುತೊರೆದು ನಿಲ್ಲಲು ಸಿದ್ಧನಾದನು. ದೀಪದ ಮೇಲೆ ಪತಂಗವು ಬೀಳುವಂತೆ, ಬುರ್ಹಾಣಶಾಹನ ಮಧ್ಯಭಾಗದ ಸೈನ್ಯದ ಮೇಲೆ ಬಂದು ಬಿದ್ದನು. ರುಸ್ತುಮನ ಹಾಗೆ ಪರಾಕ್ರಮ ತೋರಿಸುತ್ತ ಕಾದಿದನು. ರುಸ್ತುಮನ ಅಜ್ಜ-ಮುತ್ತಜ್ಜರ ಹಾಗೆ ಯುದ್ಧ ಮಾಡಿದನು. ಬುರ್ಹಾಣಶಾಹನ ಮಧ್ಯಭಾಗದ ಸೈನ್ಯದ ಧೈರ್ಯ ಉಡುಗಿತ್ತು. ಎಡ-ಬಲದ ಸೈನ್ಯದಲ್ಲೂ ಪೆಟ್ಟು ಬಿದ್ದಿತು. ಇನ್ನೇನು ಬುರ್ಹಾಣಶಾಹನನ್ನು ಕೊಲ್ಲುವ ಸಮಯ ಬಂದು ಬಿಟ್ಟಿತ್ತು. ಅಷ್ಟರಲ್ಲಿ ಆದಿಲಶಹನ ಸೈನ್ಯ ಇತ್ತಕಡೆಯಿಂದ ರಾಜಾ ಅಲೀ ಖಾನನ ಸೈನ್ಯ ಅತ್ತಕಡೆಯಿಂದ ಒಮ್ಮಿಂದೊಮ್ಮೆಲೆ ಬಂದು ಮುಟ್ಟಿತು. ಇಸ್ಮಾಯಿಲ ನಿಜಾಮಶಾಹನ ಸೈನ್ಯವು ನಾಲ್ಕು ಕಡೆಗಳಿಂದಲೂ, ಸುತ್ತುವರಿಯಲ್ಪಟ್ಟಿತು. ಜಮಾಲಖಾನ ಹಾಗೂ ಆತನ ಅಳಿಯ ಖುದಾವಂತಖಾನನೂ ಜೀವದ ಆಶೆಯನ್ನು ತೊರೆದು ಕಾದಾಡಿದರು. ಹುಚ್ಚರ ಹಾಗೆ ಎಲ್ಲೆಂದರಲ್ಲಿ ಕತ್ತಿಯನ್ನು ತಿರುಗಿಸುತ್ತ ಸಿಕ್ಕ ಸಿಕ್ಕವರನ್ನು ಕೊಲ್ಲಹತ್ತಿದರು. ಅವರಿಬ್ಬರೂ ಎಲ್ಲಿಂದಲಾದರೂ ದಾರಿ ಸಿಕ್ಕೀತೆಂದು ನೋಡಿದರು. ಹೊರಗೆ ಓಡಿ ಹೋಗಿಬಿಡಬೇಕೆಂದು ಸಾಕಷ್ಟು ಪ್ರಯತ್ನ ಮಾಡಿದರು. ಆದರೆ ಓಡಿ ಹೋಗಲು ಸಾಧ್ಯವಾಗಲಿಲ್ಲ. ಕೊನೆಗೆ ಉಭಯತರ ಮೇಲೆ ಗಂಭೀರ ಪ್ರಸಂಗ ಒದಿಗಿಬಂದಿತು. ಕುದುರೆ ಹಾಗೂ ಅದರ ಸವಾರ ಇಬ್ಬರೂ ದಣಿದರು. ಅಷ್ಟರಲ್ಲಿ ಒಂದು ಬಾಣ ಬಂದು ಬಿಡಿದಾಗ ಜಮಾಲಖಾನನು ಕುದುರೆಯಿಂದ ಕೆಳಗೆ ಬಿದ್ದು ಸತ್ತನು. ಅದರಂತೆ ಖುದಾವಂತಖಾನನೂ ಸತ್ತಾಗ ಇಬ್ಬರ ತಲೆಗಳನ್ನು ಕತ್ತರಿಸಿ ಬುರ್ಹಾಣಶಾಹನ ಕುದುರೆಯ ಮುಂದೆ ತಂದು ಒಗೆದರು. ಜಮಾಲಖಾನನ ಉಳಿದ ಸೈನ್ಯ ಸೋತು ಓಡಿ ಹೋಯಿತು.

ಇಸ್ಮಾಯಿಲ್ ಶಾಹನ ಕುದುರೆಯ ಲಗಾಮನ್ನು ಹಿಡಿದು ಆತನ ತಂದೆ ಬುರ್ಹಾಣಶಾಹನ ಕಾಲಡಿಯಲ್ಲಿ ತಂದು ಬಿಟ್ಟರು. ಆಗ ತಂದೆಯ ಕರುಳು ಕಿತ್ತಿ ಬಂದು ಬುರ್ಹಾಣಶಾಹನು ಮಗನನ್ನು ಆಲಂಗಿಸಿ ಆತನ ಮಸ್ತಕವನ್ನು ಮೂಸಿ ನೋಡಿದನು. ಯಾಕೆಂದರೆ ತಮ್ಮ ಹತ್ತಿರದ ಯಾರಾದರೂ ಸಂಬಂಧಿಕರು ಯುದ್ಧದಿಂದ ಉಳಿದು ಬಂದು ಭೆಟ್ಟಿಯಾದರೆ, ಹಿರಿಯರು ಅವರ ತಲೆಯನ್ನು ಮೂಸಿ ನೋಡುವುದೆಂದರೆ ಪುರ್ನಜನ್ಮ ಆದಂತೆ ಎಂಬ ಭಾವನೆ ಇದೆ. ಉಭಯತರು ಬಹಳ ಹೊತ್ತು ಸಂತೋಷದಿಂದ ಕುಳಿತರು. ಖಾನದೇಶದ ಬಾದಶಹ ರಾಜಾ ಅಲೀಖಾನನು ಆ ಯುದ್ಧದ ಗದ್ದಲದಲ್ಲಿ ೨೦೦ ಆನೆಗಳನ್ನು, ೨-೩ ಸಾವಿರ

ಕುದುರೆಗಳನ್ನು ಮತ್ತು ಇತರ ಅನೇಕ ಯುದ್ಧ ಸಾಮಾನು-ಸರಂಜಾಮುಗಳನ್ನು ಲೂಟಿ ಮಾಡಿ ಏಳೆಂಟು ಕೋಸ ದೂರ ಹೋಗಿ ಬಿಡಾರ ಬಿಟ್ಟಿದ್ದನು. ಯಾಕೆಂದರೆ ಗೆದ್ದ ಬುರ್ಹಾಣ ಶಾಹನು ತನ್ನ ಮೇಲೇರಿ ಬಂದಾನೆಂಬ, ಲೂಟಿ ಮಾಡಿದ ಆನೆ ಕುದುರೆಗಳನ್ನು ತಿರುಗಿ ಬೇಡಬಹುದೆಂಬ ಸಂಶಯವಿತ್ತು.ಆದರೆ ಬುರ್ಹಾಣಶಾಹನು ಈ ಬಗ್ಗೆ ಏನೊಂದನ್ನೂ ಮನಸ್ಸಿನಲ್ಲಿ ತಾರದೆ ಆತನಿಗೆ ಕೆಲವು ಉತ್ತಮ ಪದಾರ್ಥಗಳನ್ನು ಕಾಣಿಕೆಯಾಗಿ ಕೊಡಬೇಕೆಂದು ರಾಜಾ ಅಲೀಖಾನನ ಹತ್ತಿರ ಹೊರಟನು. ಅನಂತರ ಅಹಮದನಗರಕ್ಕೆ ಬಂದು ಒಂದು ಉತ್ತಮ ಸಮಯವನ್ನು ನೋಡಿ ಸಿಂಹಾಸನವನ್ನು ಏರಿದನು.[1] ರಾಜಧಾನಿಯ ಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ತನ್ನ ಮಗ ಇಸ್ಮಾಯಿಲ್‌ಶಾಹನನ್ನು ಲೋಹರಗಡ ಕೋಟೆಯಲ್ಲಿ ಬಂಧಿಸಿಟ್ಟನು.ಆ ಕೋಟೆಯಲ್ಲೆ ಆತನ ಸಹೋದರ ಇಬ್ರಾಹಿಮನನ್ನು ಆಗಲೆ ಬಂಧಿಸಿಟ್ಟಿದ್ದರು.

### ೨೬. ಇಬ್ರಾಹಿಮ ಆದಿಲಶಾಹನು ದಿಲಾವರಖಾನನನ್ನು ಶಿಕ್ಷಿಸಿದ್ದು :

ದಿಲಾವರಖಾನನು ಈಗ ಎಲ್ಲೆಡೆ ತನ್ನವರನ್ನೆ ನಿಯಮಿಸಿ ಭದ್ರನಾಗಿದ್ದನು. ಇಬ್ರಾಹಿಮ ಆದಿಲಶಹನ ಆಪ್ತ ಪರಿವಾರದಲ್ಲಿ, ಅರಮನೆಯಲ್ಲಿ ಎಲ್ಲ ನೌಕರದಾರರನ್ನು, ಮಕ್ಕಳಿಗೆ ಹಾಲುಕುಡಿಸುವ ದಾದಿಯರನ್ನು, ಸರಕಾರದ ದರಬಾರದಲ್ಲಿಯ ಕಾರಕೂನರು, ಕಾಮದಾರರು ಎಲ್ಲರೂ ದಿಲಾವರಖಾನನ ಆಜ್ಞೆಯನ್ನು ಪಾಲಿಸುವಂತೆ ಆಗಿದ್ದರು. ಯಾವನೊಬ್ಬ ಬಾದಶಹನನ್ನು ಮಾತನಾಡಿಸಿ, ವಿನಂತಿ ಮಾಡಿಕೊಳ್ಳಲು ಕೂಡ ದಿಲಾವರಖಾನನ ಜನ ಇರದಿದ್ದರೆ ಪ್ರವೇಶ ನಿಷಿದ್ಧವಾಗಿತ್ತು. ಇದನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿದ್ದ ಬಾದಶಹನು, ಆತನ ಸರ್ವಾಧಿಕಾರ, ಹಾಗೂ ಹುಂಬತನವನ್ನು ಗಮನಿಸಿದ ಬಾದಶಹ ಅವಕಾಶಕ್ಕಾಗಿ ಕಾಯುತ್ತಿದ್ದನು. ಈ ಸಂದರ್ಭದಲ್ಲಿ ದಿಲಾವರಖಾನನು ಬಹು ಸೊಕ್ಕಿನಿಂದ ಮನ ಬಂದಂತೆ ವರ್ತಿಸುತ್ತಿದ್ದನು. ಆದರಿಂದಾಗಿ ಬಾದಶಹನು ದಿಲಾವರಖಾನನ ಮೊದಲಿನ ಹಾಗೂ ಇಂದಿನ ದುರ್ನಡತೆಯ ಬಗ್ಗೆ ತುಂಬ ದುಃಖಪಟ್ಟು, ಆತನನ್ನು ಶಿಕ್ಷಿಸಲು ಸಂಕಲ್ಪಮಾಡಿ ಸಂಧಿಗಾಗಿ ಕಾಯತೊಡಗಿದನು. ಇತ್ತೀಚಿನ ಯುದ್ಧದಲ್ಲಿ ಸೋತು ೨೦೦ ಆನೆಗಳು ೫೦೦೦ ಕುದುರೆಗಳು ಹಾಗೂ ಇನ್ನಿತರ ಸಾಮಗ್ರಿಗಳನ್ನು ದಿಲಾವರಖಾನನ ದೆಶೆಯಿಂದ ಕಳೆದುಕೊಂಡದ್ದರಿಂದ ಬಾದಶಹನು ಇನ್ನಷ್ಟು ಖಿನ್ನವಾಗಿದ್ದನು. ಅದರ ಬಗ್ಗೆ ಎಲ್ಲ ಜನರೂ ದಿಲಾವರಖಾನನನ್ನು ಡಾಣಾ ಡಂಗುರವಾಗಿ ದೂಷಿಸುತ್ತಿದ್ದರು. ಅದನ್ನು ಕೇಳಿದ ಬಾದಶಹನು ದಿಲಾವರಖಾನನ್ನು ಕೆಲಸದಿಂದ ತೆಗೆದು ಹಾಕಬೇಕೆಂದೇ ಚಿಂತಿಸುತ್ತಿದ್ದನು. ಇಂಥ ಸಮಯದಲ್ಲಿ ಇಬ್ಬರು ಪ್ರಾಮಾಣಿಕ ಹಿಂದು ಸೇವಕರು, ಅವರನ್ನು ಯಾರೂ ಗುರುತಿಸುತ್ತಿರಲಿಲ್ಲ. ಅವರು ರಾಜಮಾತೆಯ ಹತ್ತಿರ ಸೇವೆಯಲ್ಲಿದ್ದರು, ಅವರನ್ನು ಗುಪ್ತವಾಗಿ ಐನುಲ್ ಮುಲ್ಕ ಕನಾನಿ, ಅಂಕುಶಖಾನ ಹಾಗೂ ಅಲೀಖಾನ ಮೂವರು ಅಮೀರರ ಹತ್ತಿರ ಕಳಿಸಿದರು. ಆ ಮೂವರೂ ದಿಲಾವರಖಾನನನ್ನು ಸೇರುತ್ತಿರಲಿಲ್ಲ. ಅವರಿಗೆ ಹೇಳಿ ಕಳಿಸುತ್ತ "ಈ ಸಂದರ್ಭದಲ್ಲಿ ಸರಕಾರವು ನಿಮ್ಮಿಂದ ಸಹಾಯವನ್ನು ಅಪೇಕ್ಷಿಸುತ್ತಿದೆ. ಹಾಗೆಯೇ ಬಿಟ್ಟರೆ ಒಂದು ದಿನ ದಿಲಾವರಖಾನನು ಎಲ್ಲವನ್ನೂ ಕಬಳಿಸುತ್ತಾನೆ. ಇತ್ತೀಚಿನ ಯುದ್ಧದಲ್ಲಿ ಸಾಮ್ರಾಜ್ಯದ ಆನೆ-ಕುದುರೆ ಅನೇಕ ಪದಾರ್ಥಗಳನ್ನು ಸೋತಿದ್ದರೂ ಇನ್ನೂ ಆತನ ಗರ್ವ ಹೋಗಿಲ್ಲ. ನೀವು ಮೂವರು ರಾಜ್ಯದ ಹಳೆಯ ಸೇವಕರು ನಮ್ಮ ತಂದೆ-ಅಜ್ಜನ ಕಾಲದಿಂದಲೂ ಸೇವೆ ಮಾಡುತ್ತಿದ್ದೀರಿ. ಆದ್ದರಿಂದ ಪ್ರಸ್ತುತ ಸಂದರ್ಭದಲ್ಲಿ ನಿಮಗೆ ಹೇಗೆ ಸೂಕ್ತ ಎನಿಸುವುದೋ ಹಾಗೆ ಕೀರ್ತಿ ತರುವಂಥ

---

೧. ಹಿಜರಿ ಸನ್೯೧೮ (ಕ್ರಿ.ಶ ೧೫೪೯) ಬ್ರಿಗ್ಸ್-ಫೆ III ಪುಟ ೨೭೮ ರಿಂದ ೮೪

ಕೆಲಸ ಮಾಡಿರಿ. ಒಂದು ವೇಳೆ ನಿಮಗೆ ಅನುಕೂಲವೆನಿಸಿದರೆ ನಾವು ನಿಮ್ಮ ಹತ್ತಿರ ಬಂದು ಮುಟ್ಟಲೂ ಸಿದ್ಧರಾಗಿದ್ದೇವೆ. ಯಾಕೆಂದರೆ ನೀವುಗಳು ಪ್ರಾಮಾಣಿಕರು ಹಾಗು ವಿಶ್ವಾಸಿಕರಾಗಿದ್ದೀರಿ. ನಾವು ನಿಮ್ಮ ಹತ್ತಿರ ಬಂದು ಮುಟ್ಟಿದರೆ ನೀವು ಮತ್ತು ನಾವು ಕೂಡಿಯೇ ದಿಲಾವರಖಾನನನ್ನು ಶಿಕ್ಷಿಸುವ ಪ್ರಯತ್ನವನ್ನು ಮಾಡೋಣ. 'ಧೈರ್ಯ ಗಂಡಸುತನದ್ದು, ಸಹಾಯ ಅಲ್ಲಾನದು' ಎಂಬ ಮಾತು ಇದೆ. ಅದು ಸತ್ಯವಾಗಿದೆ ಯಾಕೆಂದರೆ ಈಗಲೇ ನಾನು ಆತನನ್ನು ಶಿಕ್ಷಿಸದಿರಲು ಅದೇ ಕಾರಣವಾಗಿದೆ. ಧೈರ್ಯದಿಂದ ನಿಮಗೆ ತಿಳಿಸುತ್ತಿರುವೆ. ಈ ಸಮಯದಲ್ಲಿ ಶಹಾದುರ್ಗದಲ್ಲಿದ್ದುಕೊಂಡೇ ದಿಲಾವರಖಾನನನ್ನು ದಂಡಿಸಬೇಕೆಂದರೆ ಆತನು ವಿಜಾಪುರಕ್ಕೆ ಹೋಗುತ್ತಾನೆ. ಅಲ್ಲಿಯ ಕೋಟೆಯನ್ನು ಕೈವಶ ಮಾಡಿಕೊಂಡು ನಮ್ಮನ್ನು ಇನ್ನಷ್ಟು ನಿಶ್ಚಿತವಾಗಿ ಜೇರಿಗೆ ತರುತ್ತಾನೆ. ಅಲ್ಲಾನಿಗೇ ಗೊತ್ತು ನಿಮ್ಮ ದಶೆಯನ್ನು ಹೇಗೆ ಮಾಡುತ್ತಾನೆಂಬುದು ಗೊತ್ತಿಲ್ಲ" ಎಂದು ಮುಂತಾಗಿ ಬರೆದು ಕಳಿಸಿದನು. ನಿರೋಪವನ್ನು ಕೇಳಿದ ಐನುಲ್ ಮುಲ್ಕನು ಬಾದಶಹನನ್ನು ತುಂಬ ಹೊಗಳಿ ಸ್ತುತಿಸಿದನು. "ಒಂದು ವೇಳೆ ಪ್ರಭುಗಳು ನಿಜವಾಗಿಯೂ ದಿಲಾವರವಾನನ ದುರ್ನಡತೆಯಿಂದ ಬೇಸತ್ತಿದ್ದರೆ, 'ಅಲಹಮ್ ದುಲಿಲ್ಲಾಹ' ನಾವು ಸಿದ್ಧರಿದ್ದೇವೆ. ನಾವು ಪ್ರಭುಗಳ ಪ್ರಾಮಾಣಿಕ ಸೇವಕರಾಗಿದ್ದೇವೆ. ನಮ್ಮ ಹತ್ತಿರ ಬಂದು ಪ್ರಭುಗಳು ನಮಗೆ ಹಿರಿತನವನ್ನು ನೀಡಲಿ. ನಾವು ದಿಲಾವರಖಾನನ ಅಯೋಗ್ಯ ನಡತೆಯ ಸೇಡನ್ನು ಹೇಗೆ ತೀರಿಸಿಕೊಳ್ಳುತ್ತೇವೆ ಎಂಬುದನ್ನು ಪ್ರಭುಗಳೇ ನೋಡಲಿ" ಎಂದು ಹೇಳಿಕಳಿಸಿ ಒಂದು ನಿರ್ಧಾರಕ್ಕೆ ಬಂದರು. ಅದರಂತೆ ರಜಬ ತಿಂಗಳ ೧೫ನೇ ದಿನದಂದು (೯ ಮೇ, ೧೫೮೦) ರಾತ್ರಿ ಒಳ್ಳೆಯ ಮುಹೂರ್ತವಿತ್ತು ಅಂದಿನ ರಾತ್ರಿ ಕಳೆದು ಪ್ರಾತಃಕಾಲದ ಅರುಣೋದಯದ ನಸುಕಿನಲ್ಲಿ 'ನಮಾಜ' ಮಾಡುವ ಸಮಯದಲ್ಲಿ ಮೂವರೂ ಅಮೀರ ಜನರು ತಂತಮ್ಮ ಸೈನ್ಯವನ್ನು ಸಿದ್ಧಪಡಿಸಿಕೊಂಡು ಪ್ರಭುಗಳು ಬರುವ ದಾರಿಯನ್ನು ಕಾಯಹತ್ತಿದರು. ಅದೇ ಸಮಯದಲ್ಲಿ ಬಾದಶಹನು ತನ್ನ ಬಿಡಾರದಿಂದ ಹೊರಟು ಇತ್ತ ಬರಬೇಕೆಂದು ದಾರಿ ಕಾಯುತ್ತಿದ್ದರು.

### *೨೭. ನಿರ್ಧರಿಸಿದಂತೆ ಅಂದು ರಾತ್ರಿ ಬಾದಶಹನು ಮೂವರು ಅಮೀರರ ಕಡೆಗೆ ಬರುವುದು ಮತ್ತು ದಿಲಾವರಖಾನನು ತನ್ನ ಮಗನೊಂದಿಗೆ ಓಡಿ ಹೋದದ್ದು:*

ನಿರ್ಧರಿಸಿದಂತೆ ಆದಿಲಶಹನು ಅಂದು ರಾತ್ರಿ-ಪ್ರಾತಃಕಾಲದ ೨ ಗಳಿಗೆ ರಾತ್ರಿಯ ಕಾಲದಲ್ಲಿ ತನ್ನ ಬಿಡಾರದಿಂದ ಹೊರ ಬಿದ್ದನು. ಬಾದಶಹನು ತನ್ನ ಮನದಲ್ಲಿಯ ಯೋಜನೆಯನ್ನು ಯಾರಿಗೂ ಹೇಳಿರಲಿಲ್ಲ 'ಕಫಷದಾರಖಾನ' ಎಂದರೆ ಪಾದರಕ್ಷೆಗಳನ್ನು ಎತ್ತಿಕೊಡುವ ಸೇವಕನು ಬಾದಶಹನ ಕಡೆಯವನೇ ಆಗಿದ್ದನು. ಅವನಿಗೆ ಆಜ್ಞೆ ಮಾಡುತ್ತ ತಾನು ಕುಳಿತಕೊಳ್ಳುವ ಕುದುರೆಯನ್ನು ತರಲು ಹೇಳಿದನು. ಅದನ್ನು ಕೇಳಿದ ಸೇವಕನು 'ಮೋತದದಾರ'ನಿಗೆ (ಕುದುರೆ ಮೇಲ್ವಿಚಾರಕ) ಎಚ್ಚರಿಕೆ ಕೊಟ್ಟು ಪ್ರಭುಗಳು ಕುಳಿತುಕೊಳ್ಳುವ ಕುದುರೆಯನ್ನು ಬೇಗ ತರಲು ಹೇಳಿದನು. ಆದರೆ ಆತನು ಪ್ರಭುಗಳ ಆಜ್ಞೆಯನ್ನು ಕೇಳದೆ 'ದಿಲಾವರಖಾನನ ಅಪ್ಪಣೆಯಿಲ್ಲದೆ ಕುದುರೆಯನ್ನು ತರಲಾಗದು' ಎಂದನು. ಹಾಗೆ ಹೇಳುತ್ತಿದ್ದಂತೆ ಕಫಷದಾರಖಾನನು ತಿಲಮಾತ್ರವೂ ಅವಕಾಶ ನೀಡದೆ ಆತನ ಮೈಮೇಲೆ ಬಿದ್ದು ಮುಖಕ್ಕೆ ಗುದ್ದಿದಾಗ ಆತ ಮೂರ್ಛೆಹೋದನು. ಅದನ್ನು ಕಂಡ ಉಳಿದ ಕುದುರೆಯ ಮೇಲ್ವಿಚಾರಕರು ಏನನ್ನೂ ಮಾತನಾಡದೆ ಅವರವರ ಕುದುರೆಗಳನ್ನು ಸಿದ್ಧಪಡಿಸಿ ತಂದು ಕೊಟ್ಟರು. ಆಗ ಬಾದಶಹನು ತನ್ನ ಪರಿವಾರ ಸಹಿತವಾಗಿ ಡೇರೆಯಿಂದ ಹೊರಬಿದ್ದು ಬಂದನು. ಬಾದಶಹನ ದಾಸಿಯ ಗಂಡ ಅಲಿಯಾಸಖಾನನೆಂಬವನು ಆ ರಾತ್ರಿ ಬಾದಶಹನ ಹತ್ತಿರ

ಪಹರೆಗೆ ಇದ್ದನು. ಬಾದಶಹರು ಹೊರ ಬೀಳುತ್ತಿದ್ದಂತೆ ಆತನು ಓಡಿ ಎದುರಿಗೆ ಬಂದನು. 'ಎಲ್ಲಿಗೆ ಹೊರಟಿರುವಿರಿ' ಎಂದು ಕೇಳಿದನು. 'ಇದು ಮಾತನಾಡುವ ಸಮಯವಲ್ಲ'ವೆಂದು ಹೇಳಿ. 'ನೀವೆಲ್ಲ ನನ್ನ ಜೊತೆ ಬನ್ನಿ' ಎಂದು ಆಜ್ಞೆ ಮಾಡಿದನು. ಅಲಿಯಾಸಖಾನನ ಹತ್ತಿರ ನೂರಕ್ಕಿಂತ ತುಸು ಕಡಿಮೆ ಸವಾರರಿದ್ದರು. ಅವರನ್ನೆಲ್ಲ ಕರೆದುಕೊಂಡು ಆತನೂ ಹೊರಟನು. ಡೇರೆಯ ಮುಂದಿನ ಬಾಜಾರದ ಮುಖಾಂತರವೇ ಹೊರಗೆ ಬಂದು ಐನುಲ್‌ಮುಲ್ಕ, ಅಂಕುಶಖಾನ ಹಾಗೂ ಆಲೀಖಾನರ ಸೈನ್ಯ ಇಳಿದ ಸ್ಥಳದ ಹತ್ತಿರ ಬಂದು ಮುಟ್ಟಿದರು. ಅಲ್ಲಿಂದ ಆ ಮೂವರ ಸೈನ್ಯ ಸರಾಸರಿ ಅರ್ಧ ಕೋಸಿನಷ್ಟು ಅಂತರದಲ್ಲಿತ್ತು. ಮೊದಲೇ ಹೇಳಿದಂತೆ ಆ ಮೂವರೂ ತಮ್ಮ ಸೈನ್ಯದೊಂದಿಗೆ ಬಾದಶಹನ ಹತ್ತಿರ ಬಂದರು. ಬಾದಶಹನ ಎಡ-ಬಲದಲ್ಲಿ ಸಾಲಾಗಿ ನಿಂತರು. ಅದೇ ಸಮಯದಲ್ಲಿ ಶಾಹದುರ್ಗದ ಮಂಡಳಿಗೆ ಬಾದಶಹರು ಡೇರೆಯಿಂದ ಹೊರಬಿದ್ದು ಹೋಗಿದ್ದಾರೆಂದು ತಿಳಿದಾಗ ಆತನ ಖಾಸಾ ಪರಿವಾರ ಎಂದರೆ, ಜರೀ ಪಟಕಾದ ಕಡೆಯವರು, ನಿಶಾನೆಯವರು, ಕಚೇರಿಯ ಕಾಮದಾರರು, ಸರನೋಬತ ಇತ್ಯಾದಿ ಜನರೆಲ್ಲ, (ಅವರಲ್ಲಿ ರಫೀಯುದ್ದೀನ ಶಿರಾಜಿ ಹಾಗೂ ಮಹ್ಮದ ಕಾಸಮ (ಫಿರಿಶ್ತಾ)ರೂ ಇದ್ದರು) ಶಸ್ತ್ರಧಾರಿಗಳಾಗಿ ಬಾದಶಹನ ಹತ್ತಿರವೇ ಹೊರಟರು. ಹೀಗೆ ಅಂದು ರಾತ್ರಿ ನೋಡ-ನೋಡುತ್ತಿದ್ದಂತೆ ಮೂರು ಸಾವಿರ ಜನರು ಬಾದಶಾಹನ ಹತ್ತಿರ ಸೇರಿದರು. ಅವರೆಲ್ಲ ಎಷ್ಟೋ ಆನೆಗಳನ್ನು ಮಾರ್ಗದಲ್ಲಿ ನಿಲ್ಲಿಸಿದರು. ಒಂದು ವೇಳೆ ದಿಲಾವರಖಾನನು ಏರಿ ಬಂದರೆ. ಅವನ ಮೇಲೆ ಆನೆಗಳನ್ನು ಬಿಟ್ಟು ಅವುಗಳ ಗದ್ದಲದಿಂದ ಆನೆಗಳ ಕಾಲಲ್ಲಿ ತುಳಿಸಿಬಿಡಬೇಕೆಂದು ಯೋಜಿಸಿದ್ದರು.

೮೦ ವರುಷದ ದಿಲಾವರಖಾನನು ಆ ರಾತ್ರಿ ಒಬ್ಬ ಹುಡಿಗೆಯ ತೆಕ್ಕೆಯಲ್ಲಿ ಬಿದ್ದು ವಿಷಯವಿಲಾಸದಲ್ಲಿದ್ದನು. ದಕ್ಷಿಣದ ಒಬ್ಬ ವ್ಯಕ್ತಿಯ ಮಗಳ ಸೌಂದರ್ಯವನ್ನು ಕೇಳಿ ಮೋಹಿತನಾಗಿ ಅವಳನ್ನು ತನ್ನ ಡೇರೆಗೆ ಕರೆಸಿದ್ದನು. ಬಾದಶಹನು ತನ್ನ ಡೇರೆಯಿಂದ ಹೊರಟಾಗ ದಿಲಾವರಖಾನನು ಹೊಸ ಅತಿಥಿಯೊಂದಿಗೆ ಕ್ರೀಡಿಸುತ್ತ ಮಲಗಿದ್ದನು. ಇಬ್ಬರಿಗೂ ಗಾಢ ನಿದ್ರೆ ಆವರಿಸಿತ್ತು. ಅವನ ಸನ್ನಿಧಿಯಲ್ಲಿದ್ದ ಸೇವಕರು ದಿಲಾವರಖಾನನನ್ನು ಎಬ್ಬಿಸಿ ಬಾದಶಹರು ಆತನ ಡೇರೆಯ ಎದುರಿಗೆಯೇ ಹಾಯ್ದು ಬಾಜಾರದ ಮುಖಾಂತರ ಹೋದ ವಿಷಯವನ್ನು ತಿಳಿಸಿದನು. ಅದು ಗೊತ್ತಾಗುತ್ತಿದ್ದಂತೆ, ದಿಲಾವರಖಾನನು ತನ್ನ ಮಗನೊಂದಿಗೆ ೫೦೦ ಶೂರ ಸವಾರರನ್ನು ಕೆಲವು ಆನೆಗಳನ್ನು ತೆಗೆದುಕೊಂಡು ಅರುಣೋದಯದ ಸಮಯದಲ್ಲಿ ಹೊರಟನು. ಯಾಕೆಂದರೆ ಬಾದಶಹನೊಂದಿಗೆ ಹೊರಟಿದ್ದ ಖಾಸಾ ಮಂಡಳಿ, ನಿಶಾನೆ ಕಡೆಯ ಕಾಮಗಾರರು ಮತ್ತು ಅಮೀರ ಜನರೆಲ್ಲ ದಿಲಾವರಖಾನನ ವರ್ಚಸ್ಸಿನಿಂದ ಭಯಭೀತರಾಗಿ ಬಾದಶಹನನ್ನು ಬಿಟ್ಟು ಓಡಿ ಹೋಗಿ ಬಾದಶಹನನ್ನು ದಿಲಾವರಖಾನನಿಗೆ ಒಪ್ಪಿಸಿಬಿಡುತ್ತಾರೆ ಮತ್ತು ದಿಲಾವರಖಾನನೇ ಮೊದಲಿನಂತೆ ಮುಖ್ತಾರಿಯಾಗಿ ಕಾರಭಾರವನ್ನೂ ನೋಡಿಕೊಳ್ಳಬೇಕೆಂದು ಅವರೆಲ್ಲ ಬಯಸುತ್ತಾರೆಂದು ಅವರ ಬೆನ್ನಹಿಂದೆಯೇ ಹೋದನು. ದಿಲಾವರಖಾನನು ಎಲ್ಲ ವ್ಯವಸ್ಥೆಯೊಂದಿಗೆ ಹಾಗೂ ಸಾಕಷ್ಟು ಹಣದೊಂದಿಗೆ ಹೋಗಿ, ತನ್ನ ಸೈನ್ಯವನ್ನು ಒಂದು ಬಾಣ ಬಿಡುವಷ್ಟು ಅಂತರದಲ್ಲಿ ನಿಲ್ಲಿಸಿ ತಾನು ಸ್ವತಃ ೪ ಆನೆಗಳು ಮತ್ತು ೧೦೦ ಸವಾರರೊಂದಿಗೆ ಹತ್ತಿರ ಹೋದನು. ಬಾದಶಹನು ದಿಲಾವರಖಾನನು ಬರದಂತೆ ಮತ್ತು ಬಂದರೆ ಹೊರದಬ್ಬಿ ಹೊಡೆಯುವಂತೆ ರಸ್ತೆಯಲ್ಲಿ ಆನೆಗಳನ್ನು ನಿಲ್ಲಿಸಿದ್ದನು. ಆದರೆ ಆನೆಗಳ ಮಾವುತರು ದಿಲಾವರಖಾನನ ದರ್ಪವನ್ನು ನೋಡಿದ ತಕ್ಷಣ ಆತನಿಗೆ ದಾರಿ ಬಿಟ್ಟು ಒಂದೆಡೆ ಸರಿದರು.

ದಿಲಾವರಖಾನನು ಬಾದಶಹನ ಎದುರಿಗೆಯೇ ಬಂದು ಕುದುರೆಯಿಂದ ಇಳಿಯದೇ ಅದರ ಮೇಲೆ ಕುಳಿತುಕೊಂಡೇ ಬಹಳ ಅವಮರ್ಯಾದೆಯಿಂದ ಗುಂಡಾಗಿರಿಯಂತೆ ಬಾದಶಹನನ್ನು ಮಾತನಾಡಿಸಿ ವಿಚಾರಿಸಹತ್ತಿದನು. “ಇಷ್ಟೊಂದು ರಾತ್ರಿಯಲ್ಲಿ ಯಾರ ಮಾತು ಕೇಳಿ ಯಾತಕ್ಕೆ ಹೊರಬಂದೆ? ಬಹಳ ಅಯೋಗ್ಯ ಕೆಲಸ ಮಾಡಿದೆ, ಇದು ಒಳ್ಳೇಯದಲ್ಲ, ನೀನು ಈಗಿಂದೀಗಲೇ ತಿರುಗಿ ನಿಮ್ಮ ಡೇರೆಗೆ ಹೊರಡಬೇಕು” ಎಂದನು. ಅದನ್ನು ಕೇಳಿದ ಬಾದಶಹನು ಸಿಟ್ಟಿನಿಂದ ಸಂತಪ್ತನಾದನು. ದಿಲಾವರಖಾನನಿಗೆ ಏನೊಂದೂ ಉತ್ತರ ಕೊಡಲಿಲ್ಲ. ತನ್ನ ಹತ್ತಿರದ ಜನರಿಗೆ ಆಜ್ಞೆ ಕೊಡುತ್ತ ‘ಈ ಅಯೋಗ್ಯನಿಗೆ ತಕ್ಕ ಶಿಕ್ಷೆ ಕೊಡಿರಿ’ ಎಂದನು. ಆಗ ಬಾದಶಹನ ಖಾಸಾಮಂಡಳಿಯಲ್ಲಿಯ ಜರದ ರುಮಾಲಿನ ಕಾಮಗಾರರಲ್ಲಿಯ ಆದಬಖಾನನೆಂಬವನು ತಕ್ಷಣ ವಿದ್ಯುತ್ತಿನಂತೆ ಆಕ್ರಮಣಮಾಡಿ ತಲವಾರಿನಿಂದ ದಿಲಾವರಖಾನನತ್ತ ಹೊಡೆದನು. ಆ ತಲವಾರಿನಿಂದ ದಿಲಾವರಖಾನನಿಗೆ ಗಾಯವಾಗಲಿಲ್ಲವಾದರೂ ಆತನ ಧೈರ್ಯ ಉಡುಗಿ ಭಯಭೀತನಾದನು. ಆದರೆ ಕುದುರೆಯ ಲಗಾಮನ್ನು ಹಿಂತಿರುಗಿಸಲಿಲ್ಲ. ಅಲ್ಲಿಯೇ ನಿಂತನು. ಆಗ ಮತ್ತೆ ಆದಬಖಾನನು ತಲವಾರನ್ನೆತ್ತಿ ಬೀಸಿ ಹೊಡೆಯ ಬೇಕೆಂಬಷ್ಟರಲ್ಲಿ ಆ ತಲವಾರಿನ ಹೊಳಪಿನಲ್ಲಿ ಕುದುರೆ ಎರಡು ಹೆಜ್ಜೆ ಜಗಿದು ದಿಲಾವರಖಾನನು ಕುದುರೆಯಿಂದ ಕೆಳಗೆ ಬಿದ್ದನು. ಆಗ ದಿಲಾವರಖಾನನೊಂದಿಗೆ ಬಂದಿದ್ದ ಒಂದು ಆನೆಯ ಮಾವುತನು ಒಡೆಯನ ಮೇಲಿನ ವಿಶ್ವಾಸದಿಂದ ಆನೆಯನ್ನು ಮುಂದೆ ತಂದನು. ಆದಿಲಶಹ ಹಾಗೂ ದಿಲಾವರಖಾನನ ಕಡೆಯ ಜನರ ಮಧ್ಯ ತಂದು ನಿಲ್ಲಿಸಿದನು. ಅದರಿಂದ ಬಾದಶಹನ ಕಡೆಯ ಜನರಿಂದ ತಕ್ಷಣ ಉಪದ್ರವವಾಗದೆ ದಿಲಾವರಖಾನನು ಅವಕಾಶ ಮಾಡಿಕೊಂಡು ಕುದುರೆಯ ಮೇಲೆ ಏರಿ ಕುಳಿತುಕೊಳ್ಳಬಹುದು. ಅದಕ್ಕಾಗಿ ಮಧ್ಯ ಆನೆಯನ್ನು ತಂದನು. ದಿಲಾವರಖಾನನ ಅಳಿಯ ಶಾಹ ಅಹಮದ ಸಿಫವಿ ಎಂಬವನು, ತನ್ನ ಕುದುರೆಯನ್ನು ದಿಲಾವರಖಾನನಿಗೆ ಕುಳಿತುಕೊಳ್ಳಲು ಆತನ ಹತ್ತಿರ ತಂದು ಈ ಕುದುರೆಯ ಮೇಲೆ ಕುಳಿತು ತಕ್ಷಣ ‘ಈ ಸೈನ್ಯದಿಂದ ಹೊರಗೆ ಹೋಗಿರಿ, ಯಾಕೆಂದರೆ ಇದು ನಿಲ್ಲುವ ಸಮಯವಲ್ಲ’ ಎಂದನು. ದಿಲಾವರಖಾನನು ಆ ಕುದುರೆಯನ್ನು ಹತ್ತಿ ಹೊರಟುಹೋದನು. ಆತನು ಹೋದದ್ದನ್ನು ನೋಡಿ ಆತನ ಸೈನ್ಯವೂ ತಿರುಗಿ ಓಡಿತು. ದಿಲಾವರಖಾನನ ಇಬ್ಬರು ಮಕ್ಕಳಾದ ಅಹಮ್ಮದ ಖಾನ ಮತ್ತು ಖೈರತಖಾನರು ಸಹಿತವಾಗಿ ಬೀದರ ನಗರಕ್ಕೆ ಹೋದರು. ಅಲ್ಲಿಂದ ಅಹಮ್ಮದ ನಗರದ ಬುರ್‍ಹಾಣಶಹನತ್ತ ಹೋದರು. ಅಲ್ಲಿ ಬುರ್‍ಹಾಣಶಹನು ದಿಲಾವರಖಾನನನ್ನು ಸ್ವಾಗತಿಸಿ ಬಹಳ ಸನ್ಮಾನ ಮಾಡಿ ಆತನಿಗೆ ಅಮೀರ ಪದವಿಯನ್ನಿತ್ತನು. ಮತ್ತು ಮುಂದಿನ ದಿನಗಳಲ್ಲಿ ಬುರ್‍ಹಾಣಶಾಹನು ಯಾವುದೇ ಕೆಲಸವನ್ನು ದಿಲಾವರಖಾನನನ್ನು ಕೇಳಿಯೇ ಮಾಡಹತ್ತಿದನು. ದಿಲಾವರಖಾನನ ಮೂರನೆಯ ಮಗ ಕಮಾಲಖಾನನು ಬಾದಶಹನ ಮೇಲೆ ವಿಶ್ವಾಸದಿಂದ ಮೊದಲಿನಂತೆ ಆದಿಲಶಹನತ್ತ ಬಂದಾಗ ಆತನ ಜನರು ಕಮಾಲಖಾನನನ್ನು ಕೊಂದರು.

### *೨೮. ಆದಿಲಶಹನು ಸಂತೋಷದಿಂದ ತನ್ನ ಡೇರೆಗೆ ಬಂದದ್ದು ಮತ್ತು ಸಿಂಹಾಸನವನ್ನೇರಿ ರಾಜ್ಯ ಸೂತ್ರಗಳನ್ನು ತನ್ನ ಕೈಯಲ್ಲೆ ತೆಗೆದುಕೊಂಡದ್ದು :*

ಕಾಲಚಕ್ರವು ಉಪದ್ರವದ ಮುಳ್ಳನ್ನು ತನ್ನ ಕೈಯಿಂದಲೇ ಕಿತ್ತಿ ಒಗೆಯಿತು. ಆ ಕೃತಘ್ನ ಮನುಷ್ಯ, ತನ್ನ ಒಡೆಯನ ವಿರುದ್ಧವೇ ನಿಂತಿದ್ದ ದಿಲಾವರಖಾನನು ಹೊರಟುಹೋದನು. ಅನಂತರ ಮೂವರು ಅಮೀರರಿಗೆ ಬಹು ಬೆಲೆಯ ವಸ್ತ್ರಗಳನ್ನು ಕೊಡಲಾಯಿತು. ಬಕ್ಷೀಸುಗಳನ್ನು, ಇನಾಮುಗಳನ್ನು ಕೊಟ್ಟು ಸಂತೋಷಪಡಿಸಲಾಯಿತು. ಐಶ್ವರ್ಯ ಹಾಗೂ ವೈಭವಯುಕ್ತವಾಗಿ ಪೂರ್ಣವಿಜಯದೊಂದಿಗೆ

ಆನಂದಯುಕ್ತನಾದ ಬಾದಶಹನು ಆ ದೊಡ್ಡ ಪ್ರಾತಃಕಾಲದಂದು ತನ್ನ ಡೇರೆಗೆ ಹಿಂತಿರುಗಿ ಬಂದು ಸಂಪೂರ್ಣ ಮನೋರಥ ಸಿದ್ಧಿಯೊಂದಿಗೆ ಸಿಂಹಾಸನದ ಮೇಲೆ ಕುಳಿತನು. ಜನರಿಲ್ಲದ ಏಕಾಂತ ಸ್ಥಳದಲ್ಲಿ ಕುಳಿತುಕೊಳ್ಳುವ ರೂಢಿ ತಪ್ಪಿ ಎಲ್ಲರಿಗೂ ಮುಕ್ತ ಅವಕಾಶವಿರುವಲ್ಲಿ ರಾಜನು ಕುಳಿತನು. ಆಗ ಎಲ್ಲ ಜನರು ಅತಿ ನಮ್ರತೆಯಿಂದ, ಬಹು ಲೀನತೆಯಿಂದ ಅಲ್ಲಾನ ಮಂದಿರಕ್ಕೆ ಬಂದು ಹಣೆಯನ್ನು ಹಚ್ಚುವಂತೆ ಭೂಪತಿಗೆ ಮುಜುರೆಗಳನ್ನು ಸಲ್ಲಿಸಿ ಸ್ತುತಿಯನ್ನು ಮಾಡಿದರು. ಶುಭಾಶಯಗಳನ್ನು ಸಲ್ಲಿಸಿದರು. ಕಾಣಿಕೆಗಳನ್ನು ಸಲ್ಲಿಸಿದರು. ಆ ರಾತ್ರಿ ಡೇರೆಯಿಂದ ಹೊರಡುವಾಗ ಬಾದಶಹನೊಂದಿಗೆ ಹೊರಟು ರಾಜ್ಯದ ಕಲ್ಯಾಣವನ್ನು ಬಯಸಿದ ಜನರಿಗೆಲ್ಲ ವಿಶೇಷ ಗೌರವವನ್ನು ನೀಡಲಾಯಿತು. ಅವರವರ ಯೋಗ್ಯತಾನುಸಾರ ಪದವಿಗಳನ್ನು ನೀಡಲಾಯಿತು. ಅದೇ ದಿನ ಬಾದಶಹನ ರಾಜ್ಯದಲ್ಲಿಯ ಹರಾಮಖೋರರು ಓಡಿಹೋದರು. ಅನಂತರ ಬುರ್ಹಾಣಶಹನ ವಿಜಯ ಹಾಗೂ ಜಮಾಲಖಾನನ ಕೊಲೆಯಾದ ಸುದ್ದಿ ಬಂದಾಗ, ನ್ಯಾಯನಿಷ್ಠ ಬಾದಶಹನು ಬುರ್ಹಾಣಶಹನಿಗೆ ಶುಭಾಷಯಗಳ ಪತ್ರವನ್ನು ಕಳಿಸಿ, ಒಂದು ಶುಭ ಮುಹೂರ್ತದಂದು ವಿಜಾಪುರದತ್ತ ಹೊರಟು ದಿನಾಂಕ೨೨ ರಜಬ ತಿಂಗಳು ಹಿಜರಿ ಸನ್ ೯೯೮ರಂದು (೧೭ ಮೇ, ೧೫೯೦) ವಿಜಾಪುರಕ್ಕೆ ಬಂದು ಮುಟ್ಟಿದನು.

## ೨೯. ಆ ದಿನದ ಇನ್ನೊಂದು ವಿಚಿತ್ರ ಪ್ರಸಂಗದ ವರ್ಣನೆ :

ಆ ದಿನ, ಬಹು ದೊಡ್ಡ ವಿಜಯದೊಂದಿಗೆ ಬಂದ ಬಾದಶಹನು ಬೆಳಗಿನ ಜಾವ ದರಬಾರದಿಂದ ತನ್ನ ಮಹಲಿಗೆ ಹೋದಾಗ ಒಂದು ಆಶ್ಚರ್ಯಚಕಿತ ಘಟನೆ ನಡೆಯಿತು. ದಿಲಾವರಖಾನನು ಹನಫಿ ಧರ್ಮದವನಾಗಿದ್ದನು. ಆತನು ಶಿಯಾ ಧರ್ಮವನ್ನು ಕಿತ್ತಿ 'ಆಸಹಾಬ' ಎಂದರೆ, ಪೈಗಂಬರರ ಸನ್ನಿಧಿಯಲ್ಲಿ ಇರುವವರ ಹೆಸರಿನಲ್ಲಿ 'ಖುತಬಾ'ವನ್ನು ಓದಿಸಲು ಪ್ರಾರಂಭಿಸಿದ್ದನು. ಆಗ ಬಹುತೇಕ ಜನರಿಗೆ ಬಾದಶಹನೂ ಹನಫೀ ಧರ್ಮದವನೇ ಇರಬಹುದೆಂದು ಭಾವಿಸಿದ್ದರು. ಇನ್ನು ಕೆಲವು ಜನರಿಗೆ, ಈ ಬಾದಶಹನ ಶ್ರೇಷ್ಠ ಕಕ್ಕ ಅಲೀ-ಆದಿಲಶಹನು ಶಿಯಾ ಧರ್ಮದವನೆಂದು ಗೊತ್ತಿದ್ದಿತು. ಆದ್ದರಿಂದ ಈ ಬಾದಶಹನು ಕೂಡ ಕಕ್ಕನ ಹಾಗೆ ತಂದೆಯ ಹಾಗೆ ಶಿಯಾ ಧರ್ಮದವನೇ ಆಗಿರಬೇಕೆಂದು ತಿಳಿದು, ಸುನ್ನೀ ಧರ್ಮದ ಬಹಳಷ್ಟು ಜನರು ಬಾಹ್ಯದಲ್ಲಿ ತಾವೂ ಶಿಯಾ ಧರ್ಮದವರೆಂದೇ ತೋರಿಸಹತ್ತಿದರು. ಬಹುತೇಕ ಜನರು 'ಬಾಂಗ' ಕೊಡುವಾಗ ಆ ದಿನ ಎರಡನೆಯ ಪ್ರಹರದ ಸಮಾಜದಲ್ಲಿ 'ಅಷಾಹಾ ದೋ ಆನಾ ಆಲೀ ಯಜೂವಲೀ ಯುಲ್ಲಾಹಾ' ಎಂದು ಕಲಮನ್ನು ಓದಿ ಶಿಯಾ ಧರ್ಮದ ಮಾರ್ಗದ ಬಾಂಗನ್ನು ಸಲ್ಲಿಸಿದರು. ಬಾದಶಹನಾದರೋ ಅಂತರ್‌ಬಾಹ್ಯದಲ್ಲಿ ಕೇವಲ ಸುನ್ನೀ ಧರ್ಮದವನೇ ಆಗಿದ್ದನು. ಈ ಸುದ್ದಿ ತಿಳಿಯುತ್ತಲೇ ಬಾದಶಹನು ಸಂತಪ್ತನಾಗಿ 'ಯಾರು ಶಿಯಾ ಧರ್ಮಕ್ಕೆ ಸಹಾಯ ಮಾಡಿ ಅದನ್ನು ಅನುಸರಿಸುತ್ತಿರುವರೋ ಶಿಕ್ಷೆಕೊಟ್ಟು ಬಂಧಿಸಬೇಕು' ಎಂದು ಆಜ್ಞೆ ಮಾಡಿದನು. ಆದರೆ ಕೊನೆಗೆ ಅವರೆಲ್ಲ ಸುನ್ನೀ ಧರ್ಮದವರೇ ಆಗಿದ್ದು ಬಾಹ್ಯದಲ್ಲಿ ಶಿಯಾ ಧರ್ಮವನ್ನು ತೋರಿಸುತ್ತಿದ್ದಾರೆಂದು ತಿಳಿದಾಗ, ಬಾದಶಹನು ನಕ್ಕು ಶಿಕ್ಷೆಯ ಆಜ್ಞೆಯನ್ನು ಸ್ಥಗಿತಗೊಳಿಸಿ, ಅವರೆಲ್ಲರ ತಪ್ಪನ್ನು ಮನ್ನಿಸಿದನು. ಬಹಳ ದಿನಗಳವರೆಗೆ ಅವರನ್ನು 'ಶಿಯಾಯಾನ ಮಸಹಲತೀ' ಎಂದರೆ ಪ್ರಸಂಗಾನುಸಾರದ ಶಿಯಾಗಳು ಎಂದು ಕರೆಯುತ್ತಿದ್ದನು. ಅನಂತರ ವಿಜಾಪುರ ನಗರದಲ್ಲಿ ಆಸಹಾಬಾದ ಹೆಸರಿನಲ್ಲಿ ಖುತಬಾವನ್ನೆ ಓದಹತ್ತಿದರು. ಸುನ್ನಿ ಧರ್ಮವನ್ನೇ ಕಾಯಂ ಆಗಿ ಇಡಲಾಯಿತು. ಯಾಕೆಂದರೆ ಅಲ್ಲಾಗೆ ಸುನ್ನೀ ಧರ್ಮವೇ ಪ್ರಿಯವಾಗಿದೆ ಎಂಬ ವಿಷಯದಲ್ಲಿ ಅಲ್ಲಾನ ಸ್ತುತಿಯೇ ಇದೆ.

## ೩೦. ವಿಜಾಪುರಕ್ಕೆ ತಿರುಗಿ ಬಂದ ನಂತರ ಆದಿಲಶಹನು ತಾನೆ ರಾಜ್ಯದ ಸೂತ್ರಗಳನ್ನು ವಹಿಸಿದ ಪ್ರಕರಣ :

ವಿಜಾಪುರಕ್ಕೆ ಬಂದು ಮುಟ್ಟಿದನಂತರ ಬಾದಶಹನು ತಾನೆ ಸ್ವತಃ ರಾಜ್ಯದ ಕಾರಭಾರವನ್ನು ಮಾಡಹತ್ತಿದನು. ಪ್ರತಿನಿತ್ಯ ದರಬಾರದಲ್ಲಿ ಬಂದು ಸಿಂಹಾಸನದ ಮೇಲೆ ಕುಳಿತು ಸಾರ್ವಜನಿಕರಿಗೆಲ್ಲ ಬರ-ಹೋಗಲು ಮಾರ್ಗ ಮುಕ್ತ ಮಾಡಿದನು. ಆಗ ಸರಕಾರದ ಎಲ್ಲ ಕಾರಭಾರಿಗಳು, ಕಾಮದಾರರು, ಸವಾರ-ಸಿಬ್ಬಂದಿಗಳು, ಖಾಸಗೀ ವ್ಯಕ್ತಿಗಳು, ರೈತಾಪಿ ಜನರು ರಾಜನ ಹತ್ತಿರ ಬಂದು ಸ್ವತಃ ಮುಜುರೆ ಸಲ್ಲಿಸಿ ಹೋಗಹತ್ತಿದರು. ತಮ್ಮ ಮನದಲ್ಲಿದ್ದ ಸಮಸ್ಯೆಗಳನ್ನು ಪ್ರಭುಗಳ ಸನ್ನಿಧಿಯಲ್ಲಿ ವಿನಂತಿ ಮಾಡಿಕೊಳ್ಳುತ್ತಿದ್ದರು.ಬಾದಶಹನು ಅವರ ಸಮಸ್ಯೆಗಳನ್ನು ಆಲಿಸಿ ಸೂಕ್ತ ವ್ಯವಸ್ಥೆಯನ್ನು ಮಾಡುತ್ತಿದ್ದನು. ಪದಾಧಿಕಾರಗಳನ್ನು ಮರು ವಿತರಣೆ ಮಾಡಿದನು. ರೂಮೀಖಾನನಿಗೆ ಪೇಶವಾಯಿ ಪದವಿಯನ್ನು, ಎಂದರೆ ಮುಖ್ಯ ಕಾರಭಾರಿಯ ಅಧಿಕಾರವನ್ನು ಕೊಟ್ಟನು. ಆದರಂತೆ ಸರನೋಬತಿ ಅಧಿಕಾರವನ್ನು ಎಲ್ಲ ಹಳೆಯ ಸೇವಕರನ್ನೆಲ್ಲ ಕರೆದು ಅವರವರ ಯೋಗ್ಯತಾನುಸಾರ ಪ್ರತಿಯೊಬ್ಬರಿಗೂ ಪದಾಧಿಕಾರವನ್ನು ಕೊಟ್ಟು ಮರು ನೇಮಕ ಮಾಡಿದನು. ರಾಜಧಾನಿಯ ಹೊರಗಿನ ಹಳ್ಳಿ-ಗ್ರಾಮ ಕೋಟೆಗಳಿಗೆ ವ್ಯವಸ್ಥೆಯ ಕೆಲಸಕ್ಕಾಗಿ ಸರಕಾರದಿಂದ ಜಾಣ ವ್ಯಕ್ತಿಗಳನ್ನು ಹುಡುಕಿ ನೇಮಕ ಮಾಡಿ ಕಳಿಸಿದನು. ರಾಜಧಾನಿಯಲ್ಲಿ ಕೂಡ ದಿನದಿಂದ ದಿನಕ್ಕೆ ಕಾಯ್ದೆ-ಕಾನೂನುಗಳು ಸುವ್ಯವಸ್ಥಿತಗೊಂಡುವು. ಇಂಥ ಸಮಯದಲ್ಲಿ ಕೆಲಸ ಕಳೆದುಕೊಂಡ ಕೆಲವು ಜನರು ತಿರುಗಿ ತಮ್ಮನ್ನು ತೆಗೆದುಕೊಳ್ಳುವುದಿಲ್ಲವೆಂದು ತಿಳಿದರು. ಮೊದಲಿನಂತೆ ತಮ್ಮ ಕೈಯಲ್ಲಿ ಅಧಿಕಾರವಿಲ್ಲವೆಂದು ತಿಳಿದರು. ಆಗ ಅವರು ಒಳಗಿಂದೊಳಗೆ ಮತ್ತೆ ಸಂಕಟ ನಿರ್ಮಿಸಲು ರಾಜ್ಯದ ಹಿತವನ್ನು ಬಯಸುವ ಜನರ ಮನಸ್ಸನ್ನೂ ಕೆಡಿಸಲು ಪ್ರಯತ್ನಿಸಹತ್ತಿದರು. ಅಲ್ಲಲ್ಲಿ ಪತ್ರಗಳನ್ನು ಬರೆಯಹತ್ತಿದರು. ಸಾವಕಾಶವಾಗಿ ವಿವಿಧ ಬಗೆಯ ಸಂಕಟಗಳನ್ನು ಸೃಷ್ಟಿಸಲು ಜನರನ್ನು ಪುಸಲಾಯಿಸಹತ್ತಿದರು. ಮನಸ್ಸು ಕೆಟ್ಟೇ ಹೋಗಿದ್ದ ದಿಲಾವರಖಾನನು ಮನದಲ್ಲಿಯೇ ಕುದಿಯುತ್ತಿದ್ದನು. ವಿಜಾಪುರದಲ್ಲಿಯ ಪಂತ ಪ್ರಧಾನಿಯ ಕೆಲಸ ಮಾಡಿದ್ದು ಹಗಲು-ರಾತ್ರಿಯನ್ನದೆ ಪ್ರತಿನಿತ್ಯ ನೆನಪಿಗೆ ಬರುತ್ತಿತ್ತು. ಆದ್ದರಿಂದ ದಿಲಾವರಖಾನನು ಎಲ್ಲರಿಗಿಂತ ಅಧಿಕವಾಗಿ ಆಸ್ಥೆ ವಹಿಸಿ ಸಂಕಟ ನಿರ್ಮಿಸಲು ಬುರ್ಹಾಣಶಾಹನನ್ನು ಪುಸಲಾಯಿಸಿದನು. ಪ್ರತಿ ದಿನ ಗಂಟೆ ಗಂಟೆಗೂ ಆದಿಲಶಹನ ಮೇಲೆ ಏರಿಹೋಗುವ ಕುರಿತು ಅವನನ್ನು ಹುರಿದುಂಬಿಸುತ್ತಿದ್ದನು. ಮುಗ್ಧ ಮನಸ್ಸಿನ ಬುರ್ಹಾಣಶಾಹನು ತಾನು ಸಿಂಹಾಸನ ಏರಿದ್ದು ಆದಿಲಶಹನ ಸಹಾಯದಿಂದ ಎಂಬುದನ್ನೂ ಮರೆತು, ಅವನಿಂದ ಏನೂ ಉಪಕಾರವೇ ಆಗಿಲ್ಲವೆಂಬಂತೆ ಆದಿಲಶಹನ ಪ್ರದೇಶಗಳ ಮೇಲೆ ದಾಳಿ ಮಾಡಲು ಬಂದನು. ಆದಿಲಶಹನ ಸರಹದ್ದಿನಲ್ಲಿ ಬಂದು ಅವನ ರಾಜ್ಯದ ಪ್ರದೇಶಗಳನ್ನು ನಾಶ ಪಡಿಸಹತ್ತಿದನು. (ಹಿಜರಿ ಸನ್೧೦೦೦ - ಮಾರ್ಚ್ ೧೫೯೨).

## ೩೧. ಬುರ್ಹಾಣಶಾಹನನ್ನು ಶಿಕ್ಷಿಸಲು ಆದಿಲಶಹನು ಸೈನ್ಯವನ್ನು ಕಳಿಸಿದ್ದು :

ಸೈನ್ಯವನ್ನು ಸೇರಿಸಲು ಆದಿಲಶಹನು ಆಜ್ಞೆಯನ್ನು ಮಾಡಿದನು. ಅದು ಸಿದ್ಧವಾಗಿದೆಯೆಂದು ತಿಳಿಯುತ್ತಿದ್ದಂತೆ ರೂಮೀಖಾನನ ಸೇನಾಪತ್ಯದಲ್ಲಿ ಸೈನ್ಯವನ್ನು ಕಳಿಸಿದನು. ನಿಜಾಮಶಹನ ಸೈನ್ಯವನ್ನು ಎದುರಿಸಲು ಆದಿಲಶಹನ ಸೈನ್ಯವು ಸರಹದ್ದಿಗೆ ಬಂದು ಮುಟ್ಟಿತು. ಪ್ರತಿದಿನ ಯುದ್ಧ ನಡೆಯಿತು.

ಉಭಯ ಪಕ್ಷಗಳಲ್ಲಿಯ ಬಹಳಷ್ಟು ಜನರು ಹತರಾದರು. ದಿಲಾವರಖಾನನಾದರೋ ಓಣಿಗಳಲ್ಲಿ ಓಡಿ ಹೋಗುವ ನರಿಯಂತಿದ್ದನು. ಮತ್ತೆ ಮತ್ತೆ ನಿಜಾಮಶಾಹನ ತಲೆ ತುಂಬುತ್ತಿದ್ದನು. ಭೀಮೆಯ ದಂಡೆಯ ಮೇಲೊಂದು ಕೋಟೆಯನ್ನು ಕಟ್ಟಬೇಕೆಂದು ಅವನ ಬೆನ್ನು ಹತ್ತಿದನು. ನಿಜಾಮಶಾಹನು ಆತನನ್ನು ತನ್ನ ಪ್ರಧಾನಿಯನ್ನಾಗಿಯೇ ಮಾಡಿದ್ದನಾದ್ದರಿಂದ, ಅವನ ಎಲ್ಲ ಮಾತುಗಳನ್ನು ಕೇಳುತ್ತಿದ್ದನು. ಅವನು ಹೇಳಿದಂತೆ, ಹಳೆಯ ಕೋಟೆಯ ಸ್ಥಳದಲ್ಲಿ ಒಂದು ಹೊಸ ಕೋಟೆಯನ್ನು ಕಟ್ಟಿ ಅದನ್ನು ನೋಡಿಕೊಳ್ಳಲು ಸಿಬ್ಬಂದಿಯನ್ನು ಇಟ್ಟನು. ಈ ವಿಷಯ ಆದಿಲಶಹನ ಕಿವಿಗೆ ಬಿತ್ತಾದರೂ ಆತ ವಿಶೇಷ ಕಾಳಜಿಯನ್ನು ವಹಿಸಲಿಲ್ಲ. ಪ್ರತಿಯಾಗಿ "ಮಳೆಗಾಲದಲ್ಲಿ ಬಹಳ ಶ್ರಮವಹಿಸಿ ಬುರ್ಹಾಣಶಹನು ಕೋಟೆಯನ್ನು ಕಟ್ಟುತ್ತಿದ್ದಾನೆ. ಆದರೆ ಅದರ ಪರಿಣಾಮವೆಂದರೆ ಚಿಕ್ಕ ಮಕ್ಕಳು ಆಟಕ್ಕಾಗಿ ಮನೆಗಳನ್ನು ಕಟ್ಟಿ ಕೊನೆಗೆ ಆಟ ಮುಗಿದು ತಿರುಗಿ ಹೋಗುವಾಗ ಅದನ್ನು ಕೆಡವಿ ಹೋಗುವುದಿಲ್ಲವೇ? ಹಾಗೆ ಬುರ್ಹಾಣಶಹನೂ ತನ್ನ ಕೈಯಾರೆ ಕಟ್ಟಿದ ಕೋಟೆಯನ್ನು ತಾನೆ ತನ್ನ ಕೈಯಾರೆ ಕೆಡವಿ ಹೋಗುತ್ತಾನೆ. ಈ ಪ್ರಯತ್ನದಲ್ಲಿ ಬುರ್ಹಾಣಶಾಹನಿಗೆ ಶ್ರಮದ ವಿನಃ ಇನ್ನಾವ ಪ್ರತಿಫಲವೂ ದೊರೆಯದು" ಎಂದು ಹೇಳಿ, ಆತನು ತನ್ನ ರಾಜಧಾನಿಯಲ್ಲೆ ಸ್ವಸ್ಥವಾಗಿ ಕುಳಿತು ರಾಜ್ಯದ ಕೆಲಸಗಳನ್ನು ಮಾಡುವಲ್ಲಿ ಮತ್ತು ಸೈನ್ಯಕ್ಕೆ ಸಹಾಯ ಕಳಿಸುವ ವಿಷಯದಲ್ಲಿ ವಿಚಾರ ಮಾಡುತ್ತ ಆನಂದದಿಂದ ಕಾಲ ಕಳೆದನು. ಮನದಲ್ಲಿ ಯಾವ ಸಂಶಯವನ್ನು ತರಲಿಲ್ಲ. ಇಂಥ ಒಬ್ಬ ಬಲಶಾಲಿಯಾದ ಶತ್ರುವು ಗಡಿಯಲ್ಲಿ ನಿಂತು ದಾಳಿ ಮಾಡುತ್ತಿದ್ದಾನೆಂದಾಗಲೀ, ಅವನಿಗೆ ದಿಲಾವರಖಾನನಂಥ ಒಬ್ಬ ಮೋಸಗಾರ ಕಪಟಿಯ ಬೆಂಬಲ ಇದೆ ಎಂದಾಗಲೀ, ಸಂಶಯ ಅಥವಾ ಭಯ ಅವನ ಮನದಲ್ಲಿ ಬರದೆ ಸ್ವಸ್ಥವಾಗಿದ್ದನು. ಆದರೆ ರಾಜನ ಈ ಕೆಲಸದಲ್ಲಿ ಎಲ್ಲ ಜನರು ಮಾತ್ರ ಆಶ್ಚರ್ಯಚಕಿತರಾಗಿ ಚಿಂತಾಗ್ರಸ್ತರಾಗಿದ್ದರು.

ಪ್ರತಿಯೊಬ್ಬರೂ ಬೇರೆ ಬೇರೆ ರೀತಿಯಾಗಿ ಯೋಚಿಸುತ್ತಿದ್ದರು. ಕೆಲವರಿಗೆ, ಕೋಪವೂ ಬರುತ್ತಿತ್ತು. ವಿಜಾಪುರದ ರಾಜಧಾನಿಯಲ್ಲಿ ಶತ್ರುವನ್ನು ಶಿಕ್ಷಿಸುವಂಥ ಯಾರೂ ಉಳಿದಿಲ್ಲ ಎಂದು ದಿಲಾವರಖಾನನು ಯೋಚಿಸಿದನು. 'ನಾನು ದರಬಾರದಿಂದ ಹೊರಗೆ ಹೋಗಿದ್ದೇನೆಂದೇ ವಿಜಾಪುರದ ಅವಸ್ಥೆ ಹೀಗಾಗಿದೆ. ರಾಜ್ಯ ಮುಳುಗುತ್ತಿದೆ. ಆದ್ದರಿಂದ ನಾನು ಪುನಃ ವಿಜಾಪುರದ ಕಾರಭಾರಕ್ಕೆ ಬರಬೇಕೆಂದೇ ಬಾದಶಹನು ಯೋಚಿಸುತ್ತಿರಬೇಕು. ನಾನು ಬರಲಿ ಎಂದೇ ಆತನ ಮನದಲ್ಲಿರಬೇಕು' ಎಂದು ದಿಲಾವರಖಾನನು ಯೋಚಿಸಿದನು. ಆದರೆ ಬಾದಶಹನು ತನ್ನ ಅವಸ್ಥೆಯನ್ನು ಹೇಗೆ ಮಾಡಿದ್ದಾನೆ ಹಾಗೂ ಇನ್ನು ಏನು ಮಾಡಬೇಕೆಂದಿದ್ದಾನೊ ಎಂಬುದನ್ನು ವಿಚಾರಿಸದೆ, ಒಂದು ಭ್ರಾಂತಿಯಲ್ಲಿ ಆತನು ಒಬ್ಬ ವಿಶ್ವಾಸಿಕನನ್ನು ಬಾದಶಹನ ಹತ್ತಿರ ಕಳಿಸಿ, 'ನಾನು ಪ್ರಭುಗಳಿಂದ ದೂರವಾಗಿ ಈ ರಾಜ್ಯಕ್ಕೆ ಬಂದಿರುವೆನಾದರೂ, ತಮ್ಮ ಅಪ್ಪಣೆಯಾದರೆ ನಾನು ತಮ್ಮ ಸೇವಕನೇ ಆಗಿರುವೆ. ತಮ್ಮ ಸನ್ನಿಧಿಯಲ್ಲೆ ಇರುವೆ. ಆಜ್ಞೆಯಾದರೆ ಬಂದು ಬಿಡುವೆ.

ತಾವು ಧಣಿಗಳು ಬಹಿರಂಗದಲ್ಲಿ ನಾನು ಮಂದಿರದಿಂದ ಎಷ್ಟೇ ದೂರವಿದ್ದರೂ ಅಂತರಂಗದಲ್ಲಿ ತಮ್ಮ ಪಾದರಕ್ಷೆಗಳನ್ನು ಎತ್ತುವ ಚಾಕರರಲ್ಲಿ ಒಬ್ಬನಾಗಿರುವೆ. ನಾನು ಹೇಳುವುದರ ಸಾರಾಂಶವೆಂದರೆ, ತಮ್ಮ ಶತ್ರು ಬುರ್ಹಾಣಶಾಹನು ಸೈನ್ಯವನ್ನು ಸಂಗ್ರಹಿಸಿ, ಸಾವಧಾನದಿಂದ ಸಿದ್ಧನಾಗಿ ಬಂದಿದ್ದಾನೆ. ಈ ವಿಷಯದಲ್ಲಿ ತಮಗೆ ಯಾವ ಚಿಂತೆಯೂ ಇಲ್ಲದಂತೆ ಇರುವುದು ಯೋಗ್ಯವಲ್ಲ. ತಮ್ಮ ಆಲಸ್ಯ ಹಾಗೂ ನಿಷ್ಕಾಳಜಿಯಿಂದ ಶತ್ರುವು ಪ್ರಬಲವಾಗಿ ಏನೆಲ್ಲ ಬಡಬಡಿಸುತ್ತಿದ್ದಾನೆ. ಆದ್ದರಿಂದ ಈ ವಿಷಯದಲ್ಲಿ

ತಾವು ಏನಾದರೊಂದು ಯೋಚಿಸಬೇಕು. ನಾನು ಸ್ವಾಮಿಸೇವೆಗಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧನಾಗಿರುವ ಸೇವಕನಾಗಿರುವೆ. ತಾವು ನನಗೆ ಅಪ್ಪಣೆಕೊಟ್ಟಂತೆ ಮಾಡಲು ಸಿದ್ಧನಾಗಿರುವೆ' ಎಂದು ವಿನಂತಿ ಪತ್ರವನ್ನು ಬರೆದು ಕಳಿಸಿದನು. ಅದಕ್ಕೆ ಪ್ರತಿಯಾಗಿ ಬುದ್ಧಿವಂತನಾದ ಬಾದಶಹನು ಉತ್ತರ ಬರೆದು ಕಳಿಸುತ್ತಾ 'ಸದ್ಯ ನೀವು ರಾಜ್ಯದ ಆಧಾರಸ್ಥಂಭವಾಗಿದ್ದೀರಿ. ನಾವು ನಿಮ್ಮ ಯೋಗ್ಯತೆಯ್ನನು ಗುರುತಿಸಲೇ ಇಲ್ಲ. ಈಗ ನಮಗೆ ತಿಳಿದಿದೆ. ನೀವು ಈ ರಾಜ್ಯದ ಬಗ್ಗೆ ತುಂಬ ನಿಷ್ಠರಾಗಿದ್ದೀರಿ ಎಂದು. ನಿಮ್ಮ ಹೊರತು ರಾಜಧಾನಿಯಲ್ಲಿ ಯಾವ ಕೆಲಸಗಳೂ ನಡೆಯುತ್ತಿಲ್ಲ. ಆದ್ದರಿಂದ ಇಂದಿನವರೆಗಾದ ವಿಷಯಗಳನ್ನೆಲ್ಲ ಮರೆತು ತಾವು ಇತ್ತ ಬಂದು ಮೊದಲಿನಂತೆ ರಾಜ್ಯದ ಕಾರಭಾರಗಳನ್ನೆಲ್ಲ ನೋಡಿಕೊಳ್ಳಬೇಕು' ಎಂದು ಉತ್ತರ ಬರೆದು ಕಳಿಸಿದನು.

### *೩೨. ಇಬ್ರಾಹಿಮ ಆದಿಲಶಹನ ದರಬಾರದಲ್ಲಿ ದಿಲಾವರಖಾನನು ಬರುವುದು ಮತ್ತು ಶಿಕ್ಷೆ ಅನುಭವಿಸಿ ಖೇಲಣೆ ಕೋಟೆಯಲ್ಲಿ ಬಂದಿಯಾಗಿರುವುದು.*

ಬಾದಶಹನ ನಿರೋಪ ಬರುತ್ತಿದ್ದಂತೆ ದಿಲಾವರಖಾನನು ಬಹಳ ಸಂತೋಷಪಟ್ಟು ಮತ್ತೆ ಒಬ್ಬನನ್ನು ಬಾದಶಹನಕಡೆಗೆ ಕಳಿಸಿಕೊಟ್ಟನು. ಅವನೊಂದಿಗೆ ಹೇಳಿ ಕಳಿಸುತ್ತ ' ಒಂದು ವೇಳೆ ತಾವು ನನ್ನ ಜೀವಕ್ಕೆ ಮತ್ತು ಸಂಪತ್ತಿಗೆ ಅಭಯನೀಡಿ ಮೋಸ ಮಾಡದಿದ್ದರೆ, ನನ್ನ ತಲೆಯನ್ನೆ ಕಾಲು ಮಾಡಿಕೊಂಡು ತಮ್ಮ ಸೇವೆಯಲ್ಲಿ ಬಂದು ಹಾಜರಾಗುವೆನು' ಎಂದು ಹೇಳಿ ಕಳಿಸಿದನು. ಅದನ್ನು ಕೇಳಿದ ಇಬ್ರಾಹಿಮ ಆದಿಲಶಹನು ಅವನು ಬಯಸಿದಂತೆ ಆಣೆ ಮಾಡಿ ಅಭಯ ಪತ್ರವನ್ನು ಕಳಿಸಿಕೊಟ್ಟನು. ಅನಂತರ ಈ ವಿಷಯದಲ್ಲಿ ಬುರ್ಹಾಣಶಾಹನು ಮತ್ತೆ ಮತ್ತೆ ಬೇಡವೆಂದರೂ, ಅವನ ಮಾತು ಕೇಳದೆ, ಆದಿಲಶಾಹನನ್ನು ಕಾಣಲು ಒಪ್ಪಿಗೆ ಕೊಡದಿದ್ದರೂ ಮತ್ತೆ ವಿಜಾಪುರ ರಾಜ್ಯದ ಪ್ರಧಾನಿಯಾಗಿ ಬಾದಶಹನನ್ನು ರಾಜಪದವಿಯಿಂದ ಕಿತ್ತು ಒಗೆಯುವ ಆಶೆಯಿಂದ ಬಹಳ ಆಗ್ರಹ ಮಾಡಿ ಬುರ್ಹಾಣಶಾಹನಿಂದ ನಿರೋಪ ಪಡೆದು, ತನ್ನ ಮಗ ಮಹಮ್ಮದಖಾನನ ಜೊತೆಗೆ ವಿಜಾಪುರಕ್ಕೆ ಹೊರಟನು. ಅವನು ಊರಿಗೆ ಬಂದು ಮುಟ್ಟುವ ಮೊದಲೆ ವಿಜಾಪುರದ ಜನರು ಐದಾರುಕೋಸುಗಳಷ್ಟು ಅಂತರದಲ್ಲಿ ದಿಲಾವರಖಾನನ್ನು ಎದುರುಗೊಳ್ಳಲು ಓಡಿ ಹೋದರು. ಎಲ್ಲರೂ ಅವನ ಮುಖದ ಮೇಲೆ ಹಣವನ್ನು ನಿವಾಳಿಸಿ ಒಗೆದರು. ಅಮೀರ ಜನರು ಬಂದು ಶುಭಾಶಯಗಳನ್ನು ಹೇಳಿದರು. ಎಲ್ಲರೂ ದಿಲಾವರಖಾನನ್ನು ಬಗ್ಗೆ ವಿಷಪ್ರದವಾಗಿದ್ದವರು ಈಗ ಎಲ್ಲರೂ ದಿಲಾವರಖಾನನ್ನು ಭೆಟ್ಟಿಯಾಗಲು ಹೋಗಿದ್ದಾರೆಂಬ ಸುದ್ದಿಯನ್ನು ಕೇಳಿದ ಬಾದಶಹನು ದಿಲಾವರಖಾನನ ಬಗ್ಗೆ ಗಂಭೀರನಾದನು. ಒಂದು ವೇಳೆ ಆತ ಬಂದು ವಿಜಾಪುರದಲ್ಲಿ ಐದು ದಿನ ಇದ್ದರೆ ಪ್ರಬಲನಾಗಿ ವಿಜಾಪುರಕ್ಕೆ ಅಧಿಕ ಪೀಡೆ ಖಂಡಿತ ಎಂದು ತಿಳಿದನು. 'ಬಾರಾ ಇಮಾಮರ ಬಾಗ' ದಿಂದ ಆರ್ಕಕಿಲ್ಲೆಯ ಕಡೆಗೆ ಹೊರಟ ಸಮಯದಲ್ಲಿ ದಿಲಾವರಖಾನನು ಎದುರು ಬಂದು ಬಾದಶಹನಿಗೆ ಮುಜುರೆ ಮಾಡಿ ಆತನ ಕುದುರೆಯ ರಿಕಾಬನ್ನು ಹಿಡಿದು ಕೋಟೆಯವರೆಗೂ ನಡೆಯುತ್ತ ಬಂದನು.

ದಿವಾನಖಾನೆಯಲ್ಲಿ ಕುಳ್ಳಿರಿಸಿದಾಗ ಆತನನ್ನು ಕಾಣಲು ನಗರದ ಜನರು ಬರಹತ್ತಿದರು. ಅದನ್ನು ಕಂಡ ಬಾದಶಹನು ಸ್ಥಳವನ್ನು ಬದಲಿಸಿ ಏಕಾಂತದಲ್ಲಿ ಕುಳ್ಳಿರಿಸಿದನು. ಆಗ ದಿಲಾವರಖಾನನಿಗೆ ಬಾದಶಹನ ಮನಸ್ಸು ಅರ್ಥವಾಯಿತು. ತಾನು ತಪ್ಪು ಮಾಡಿದೆನೆಂಬ ಅರಿವಾಯಿತು. ತಾನು ಇಲ್ಲಿ ಬರಬಾರದಾಗಿತ್ತೆಂದೂ

ಅನಿಸಿತು. ಆದರೆ ಅವುಗಳಿಗೆಲ್ಲ ಈಗ ಅರ್ಥವೇ ಇಲ್ಲವೆಂದೂ ತಿಳಿದನು. ಅಷ್ಟರಲ್ಲಿ ಬಾದಶಹನು ಕಣ್ಣುಕಿತ್ತುವಲ್ಲಿ ದಿಲಾವರಖಾನನು ಯಾರನ್ನು ನುರಿಸಿದ್ದನೋ ಆತನನ್ನೇ ಕರೆದು ದಿಲಾವರನ ಕಣ್ಣುಗಳನ್ನು ಕೀಳಲು ಆಜ್ಞೆ ಮಾರಾಡಿದನು. 'ದಿಲಾವರಖಾನನ ಗರಡಿಯಲ್ಲಿ ನೀನೆಷ್ಟು ನುರಿತಿರುವಿ ಎಂಬುದನ್ನು ತೋರಿಸು' ಎಂದು ಆಜ್ಞೆ ಮಾಡಿದನು. ಅದನ್ನು ಕೇಳಿದ ದಿಲಾವರಖಾನನು ಬಾದಶಹನ ಕಾಲಿಗೆ ಬಿದ್ದು ಪರಿಪರಿಯಿಂದ ಬೇಡಿಕೊಳ್ಳುತ್ತ ತನ್ನ ಜೀವದ ಕುರಿತು ಕೊಟ್ಟ ಅಭಯಪತ್ರವನ್ನು ನೆನಪಿಸಿದನು. 'ಅಭಯ ನೀಡಿ ಈ ರೀತಿ ಮಾಡುವುದು ಪ್ರಭುಗಳಿಗೆ ಉಚಿತವಲ್ಲ' ಎಂದನು. ಆಗ ಬಾದಶಹನು ದಿಲಾವರಖಾನನಿಗೆ ಉತ್ತರ ಕೊಡುತ್ತ "ನಮ್ಮ ಅಭಯ ಪತ್ರ ನಿನ್ನ ಜೀವ ಹಾಗೂ ಸಂಪತ್ತಿನ ಕುರಿತಾಗಿದೆ. ಕಣ್ಣು ತೆಗೆಯುವಲ್ಲಿ ನಿನ್ನ ಪ್ರಾಣದ ಹಾಗು ಸಂಪತ್ತಿನ ಹಾನಿ ಇಲ್ಲ. ಇನ್ನೊಂದು ವಚನ ಕೊಟ್ಟಂತೆ ನಾನು ನಿನ್ನ ಯಾವುದನ್ನೂ ನಾಶ ಮಾಡುವುದಿಲ್ಲ ಎಂಬ ಕುರಿತು ಸ್ಪಷ್ಟವಾಗಿಯೇ ಇದೆ. ನಿನ್ನ ಕಣ್ಣುಗಳನ್ನು ಕೀಳುತ್ತಿರುವವನು ಬೇರೆ ಮನುಷ್ಯ. ನಾನು ನನ್ನ ಕೈಯಾರೆ ತೆಗೆಯುತ್ತಿಲ್ಲ.' ಎಂದನು. ಅನಂತರ ಆಜ್ಞಾನುಸಾರ ಅವನ ಕಣ್ಣುಗಳನ್ನು ಕಿತ್ತಿ ಅಂಧನನ್ನಾಗಿ ಮಾಡಿದರು. ಮತ್ತು ಖೇಳಣಾ ಎಂಬ ಕೋಟೆಯಲ್ಲಿ ದಿಲಾವರಖಾನನನ್ನು ಆತನ ಪರಿವಾರ ಸಹಿತವಾಗಿ ಬಂಧಿಸಿಟ್ಟರು. ಅಲ್ಲಿ ಅವನ ಮುಂದೆ ೧೦ ವರುಷಗಳ ಕಾಲ ಬಂಧನದಲ್ಲಿಯೇ ಇದ್ದನು. ಅಲ್ಲಿಯೇ ಅವನಿಗೆ ಒಬ್ಬ ಮಗನೂ ಹುಟ್ಟಿದನು. ೧೧ ವರುಷಗಳ ಅನಂತರ ದಿಲಾವರಖಾನನು ಮರಣ ಹೊಂದಿದನು.

### ೩೩. *ಬುರ್ಹಾಣಶಾಹನ ಮೇಲೆ ದಾಳಿ ಮಾಡಿ ಆದಿಲಶಾಹಿ ಸೈನ್ಯ ಜಯ ಪಡೆದದ್ದು ಹಾಗೂ ಬುರ್ಹಾಣಶಾಹನು ಆದಿಲಶಹನೊಂದಿಗೆ ಸಖ್ಯ ಬೆಳೆಸುವ ನಿರೋಪ ಕಳಿಸಿ ತಾನು ಹೊಸದಾಗಿ ಕಟ್ಟಿದ ಕೋಟೆಯನ್ನು ಆಮೂಲಾಗ್ರ ಕೆಡವಿದ್ದು.*

ಬುರ್ಹಾಣಶಾಹನು ಬಹಳ ಶ್ರಮ ವಹಿಸಿ ಕೋಟೆಯನ್ನು ಕಟ್ಟಿದ್ದನು. ಕಿಲ್ಲೆಯ ಭದ್ರತೆಗಾಗಿ ಬೇಕಾಗುವ ಸಾಮಾನು ಸರಂಜಾಮುಗಳನ್ನು, ಖಾದ್ಯ ಪದಾರ್ಥಗಳನ್ನು ಊರೂರುಗಳಿಂದ ತರಿಸಿ ಅಲ್ಲಿ ಎಲ್ಲ ವ್ಯವಸ್ಥೆ ಮಾಡಿದ್ದನು. ಈ ವಿಷಯ ಕೇಳಿ ಆದಿಲಶಹನು ರೂಮೀಖಾನನ ನೇತತ್ವದಲ್ಲಿ ಅವನನ್ನು ಶಿಕ್ಷಿಸಲು ಬಹು ದೊಡ್ಡ ಸೈನ್ಯವನ್ನು ಕಳಿಸಿದನು.

ನಿಜಾಮಶಾಹನ ಸೈನ್ಯದ ನೇತೃತ್ವವನ್ನು ವರ್ಹಾಡದ ನೂರಖಾನ ದಖಣಿಯು ವಹಿಸಿದ್ದನು. ಅವನು ಆಯ್ದ ಹತ್ತುಸಾವಿರ ಸೈನ್ಯವನ್ನು ತೆಗೆದುಕೊಂಡು ಆದಿಲಶಹನನ್ನು ಎದುರಿಸಲು ಹೊರಟನು. ಉಭಯತರ ಮಧ್ಯ ಘನ ಘೋರ ಯುದ್ಧ ನಡೆಯಿತು. (ಹಿಜರಿ ಸನ್ ೧೦೦೦ / ಏಪ್ರಿಲ್ ಕ್ರಿ.ಶ. ೧೫೯೨) ಉಭಯ ಪಕ್ಷಗಳಲ್ಲಿಯ ಅನೇಕ ಶೂರರು ಹತರಾದರು. ಯುದ್ಧ ನಡೆದ ದಿನಗಳಲ್ಲಿಯ ಒಂದು ಸಾಯಂಕಾಲ ಯುದ್ಧ ವಿರಾಮ ಘೋಷಿಸಿ ನಿಜಾಮಶಹನ ಸೈನ್ಯವು ವಿಶ್ರಾಂತಿ ಪಡೆಯುತ್ತಿರುವಾಗ ಆದಿಲಶಹನ ಸೈನ್ಯವು ರುಸ್ತುಮನಂತೆ ಒಮ್ಮೆಲೆ ನಿಜಾಮಶಾಹನ ಸೈನ್ಯದ ಮೇಲೆ ಹಲ್ಲೆ ಮಾಡಿತು. ಅನಿರೀಕ್ಷಿತವಾಗಿ ಬಂದ ದಾಳಿಯನ್ನು ಎದುರಿಸದೆ ಬುರ್ಹಾಣಶಾಹನ ಸೈನ್ಯ ಧೈರ್ಯ ಸಾಲದೆ ಓಡ ಹತ್ತಿತ್ತು. ಹಲ್ಲೆಯಲ್ಲಿ ನೂರಖಾನ ಸಹಿತವಾಗಿ ಇನ್ನು ಇಬ್ಬರು ಮೂವರು ಸರದಾರರು ಹತರಾದರು. ಅದನ್ನು ಕಂಡು ಅಳಿದುಳಿದ ಸೈನ್ಯವೂ ಅರಣ್ಯ ಮಾರ್ಗವಾಗಿ ಓಡಿ ಹೋಯಿತು. ಓಡಿ ಹೋಗುವ ಸೈನ್ಯವನ್ನು ಆದಿಲಶಾಹಿ ಸೈನ್ಯವು ಬೆನ್ನು ಹತ್ತಿತು. ೧೭೦ ಆನೆಗಳನ್ನು ೧೦೦೦ ಕುದುರೆಗಳನ್ನು ಮತ್ತು ಅಸಂಖ್ಯ

ಶಸ್ತ್ರಗಳನ್ನು ಕೈವಶಮಾಡಿಕೊಂಡು ವಿಜಯಿಯಾಗಿ ಹಿಂತಿರುಗಿತು. ರೂಮಿಖಾನನು ವಿಜಯ ವಾರ್ತೆಯನ್ನು ಲೂಟಿ ಮಾಡಿದ ಆನೆ, ಕುದುರೆಗಳ ಸುದ್ದಿಯನ್ನು ಬಾದಶಹನಿಗೆ ಕಳಿಸಿದನು. ಪ್ರತಿಯಾಗಿ ಬಾದಶಹನು ತುಂಬ ಸಂತೋಷಪಟ್ಟು ಅವರಿಗೆಲ್ಲಾ ಬೆಲೆಯುಳ್ಳ ವಸ್ತ್ರಗಳನ್ನು ಮತ್ತು ಇತರ ಕಾಣಿಕೆಗಳನ್ನು ಕಳಿಸುತ್ತ ಶತ್ರುಗಳನ್ನು ಹೊರಗೆ ಬಿಡಬಾರದೆಂದು ಆಜ್ಞೆಯನ್ನು ಕಳಿಸಿದನು.

ಶತ್ರುಗಳ ಸೈನ್ಯ ಅರಣ್ಯದಲ್ಲಿ ಹಾಗೂ ಹೊಸದಾಗಿ ಕಟ್ಟಿದ ಕೋಟೆಯಲ್ಲಿಯೆ ಬಂದಿಯಾಗಿ ಉಳಿಯಿತು. ನಿಜಾಮಶಾಹನಿಗೂ ಮತ್ತು ಅವನ ಸೈನ್ಯಕ್ಕೂ ಹೊರಗಿನ ಸಂಪರ್ಕ ಕಡಿದು ಹೋಯಿತು. ಅವರು ರಾತ್ರಿ ಹೊತ್ತು ಓಡಿ ಹೋಗಲು ಪ್ರಾರಂಭಿಸಿದರು. ಇದನ್ನು ಕಂಡು ನಿಜಾಮಶಹನು ಆದಿಲಶಹನೊಂದಿಗೆ ಒಪ್ಪಂದಕ್ಕೆ ಮುಂದಾದನು. ಆದರೆ ಆದಿಲಶಹನು ಒಪ್ಪಂದದ ಜರೂರು ತನಗಿಲ್ಲವೆಂದು ಹೇಳಿಕಳಿಸುತ್ತ ತಿಂಗಳಾನುಗಟ್ಟಲೆ ಶತ್ರುವನ್ನು ಸತಾಯಿಸಹತ್ತಿದನು. ಬುರ್ಹಾಣಶಾಹನು, ಕುತುಬಾಶಾಹ ಮತ್ತು ಅಲೀಖಾನನ ಮಧ್ಯಸ್ಥಿಕೆಯಿಂದ ಮತ್ತೆ ಒಪ್ಪಂದಕ್ಕೆ ಆಗ್ರಹ ಪಡಿಸಿದನು. ಆಗ ಆದಿಲಶಹನು ಇವರಿಬ್ಬರ ಒತ್ತಾಯದಿಂದ ಎಂಬಂತೆ ಒಪ್ಪಂದಕ್ಕೆ ಮುಂದಾಗಿ ಒಪ್ಪಂದದ ಕರಾರಿನಂತೆ ಮೊದಲನೆಯದಾಗಿ ಹೊಸದಾಗಿ ಕಟ್ಟಿದ ಕೋಟೆಯನ್ನು ಬುರ್ಹಾಣಶಾಹನು ನೆಲಸಮವಾಗಿ ಕೆಡವಬೇಕೆಂದು ಹೇಳಿದನು. ಯಾಕೆಂದರೆ ಮತ್ತೆ ಆ ಕೋಟೆಯ ಆಶ್ರಯ ಪಡೆದು ಗಡಿಭಾಗದಲ್ಲಿ ನಿಜಾಮಶಹನು ಮೋಸ ಕಪಟದ ದಾಳಿಗಳನ್ನು ಮಾಡಬಾರದೆಂಬುದು ಆತನ ಇಚ್ಛೆಯಾಗಿತ್ತು. ಬುರ್ಹಾಣಶಾಹನು ಕರಾರಿಗೆ ಮೊದಮೊದಲು ಒಪ್ಪಲಿಲ್ಲವಾದರೂ ಕೊನೆಗೆ ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಯಿತು. ಅದರಂತೆ ಆ ಕೋಟೆಯನ್ನು ಕೆಡವಿ ನೆಲಸಮ ಮಾಡಿ ಅಹಮದನಗರದತ್ತ ಪ್ರಯಾಣ ಬೆಳೆಸಿದನು.

### ೩೪. *ಬುರ್ಹಾಣ ನಿಜಾಮಶಾಹನು ಒಪ್ಪಂದ ಮುರಿದು, ಆದಿಲಶಹನ ಬಂಧು ಇಸ್ಮಾಯಿಲನನ್ನು ಪುಸಲಾಯಿಸಿದ್ದು.*

ಬುರ್ಹಾಣಶಾಹನು ಈ ಯುದ್ಧದಲ್ಲಿ ದೊಡ್ಡದಾಗಿ ಸೋತು ಹಿಂತಿರುಗಿದನಂತರ ಬಹಳ ಖಿನ್ನನಾಗಿ ಪಶ್ಚಾತ್ತಾಪದಲ್ಲಿದ್ದ ಆದರೂ ಮನದಲ್ಲಿ ಮತ್ತೆ ದುರ್ಬುದ್ಧಿ ಹುಟ್ಟಿಕೊಂಡು ಮೋಸ-ಕಪಟಗಳಿಗೆ ಹೊಂಚು ಹಾಕಿದನು. ಕೆಲವು ದಿನಗಳ ಅನಂತರ ಕಪಟದ ಅಗ್ನಿಯು ಬುರ್ಹಾಣಶಹನ ಮನದಲ್ಲಿ ಪ್ರದಿಪ್ತವಾಗಿ ದುಷ್ಟ ಸಂಕಲ್ಪಕ್ಕೆ ಚಾಲನೆದೊರೆಯಿತು. ಒಪ್ಪಂದದ ಎಲ್ಲ ಕರಾರುಗಳನ್ನು ಮುರಿದು ಮತ್ತೆ ದ್ವೇಷಿಸ ಹತ್ತಿದನು. ಇಬ್ರಾಹಿಮ ಆದಿಲಶಹನ ತಮ್ಮ ಇಸ್ಮಾಯಿಲಶಾಹನು ಮುಸ್ತಫಾಬಾದ ಅಂದರೆ, ಬೆಳಗಾವಿ ಕೋಟೆಯಲ್ಲಿ ಬಂದಿಯಾಗಿದ್ದನು. ಅವನಿಗೆ ರಹಸ್ಯವಾಗಿ ಪತ್ರ ಬರೆದು ಇಸ್ಮಾಯಿಲಶಾಹನಿಗೆ ತನ್ನ ಹಕ್ಕಿನ ಪ್ರದೇಶಗಳನ್ನು ಪಡೆದುಕೊಳ್ಳಲು ಪುಸಲಾಯಿಸಿದನು. ಅವನಿಗೆ ಮೇಲಿಂದ ಮೇಲೆ ಪತ್ರ ಬರೆಯುತ್ತ ರಾಜ್ಯದಲ್ಲಿಯ ಹಕ್ಕಿಗಾಗಿ ಅವನಲ್ಲಿ ಆಸ್ಥೆ ಹುಟ್ಟಿಸಿದನು. ಅನಂತರ ಪ್ರಚೋದನೆ ಕಾರ್ಯರೂಪಕ್ಕೆ ಬರುವಂತೆ ಸಹಾಯರೂಪದಲ್ಲಿ ದ್ರವ್ಯವನ್ನು ಮತ್ತು ಇತರ ಪದಾರ್ಥಗಳನ್ನು ಸೈನ್ಯ ಸಂಗ್ರಹಿಸಲು ಇಸ್ಮಾಯಿಲ್ ಶಹನಿಗೆ ಕಳಿಸಿದನು. ಕೋಟೆಯಲ್ಲಿಯ ಇತರ ಬಂದಿಗಳಿಗೆ, ಇಸ್ಮಾಯಿಲ್‌ಶಹನು ಸಿಂಹಾಸನದ ಮೇಲೆ ಕುಳಿತುಕೊಳ್ಳುವವನಿದ್ದುರಿಂದ, ಆತನ ಆಜ್ಞೆಯನ್ನು ಪಾಲಿಸಬೇಕೆಂದೂ ಅವನಿಗೆ ಸಹಾಯ ಮಾಡಬೇಕೆಂದೂ ಹೇಳಿ ಕಳಿಸಿದನು. ಬೆಳಗಾವಿಯ ಕೋಟೆಯ ಬಳಿಯಲ್ಲಿಯೆ ಜಹಗೀರುಗಳನ್ನು ಹೊಂದಿದ ಐನುಲಮುಲ್ಕ ಹಾಗೂ ಅಂಕುಶಖಾನರಿಗೂ ಪತ್ರ ಬರೆದು, ಇಸ್ಮಾಯಿಲಶಾಹನಿಗೆ ಸಹಾಯ ನೀಡುವಲ್ಲಿ ಆಸ್ಥೆ ವಹಿಸಿರಿ

ಎಂದು ಹೇಳಿದನು. 'ನೀವು ಇಬ್ಬರೂ ಆದಿಲಶಾಹನ ರಾಜ್ಯದಲ್ಲಿ ಸಂಭಾವಿತರೂ ಮತ್ತು ದೊಡ್ಡ ಅಮೀರರೂ ಆಗಿದ್ದೀರಿ. ಇಂಥ ಸಂಧಿ ಮತ್ತೆ ಬರುವುದಿಲ್ಲ. ಇದೊಂದು ಅಲಭ್ಯಲಾಭದ ಸಮಯವೆಂದು ತಿಳಿದು ಇಸ್ಮಾಯಿಲಶಾಹನನ್ನು ಸೆರೆಮನೆಯಿಂದ ಬಿಡಿಸಿ, ಎಲ್ಲ ಸಿದ್ಧತೆಯೊಂದಿಗೆ ಕೋಟೆಯಿಂದ ಹೊರಗೆ ಕರೆದುಕೊಂಡು ಬನ್ನಿರಿ. ಉಳಿದೆಲ್ಲ ಜನರಿಗೂ-ಸರದಾರರಿಗೂ ಈ ವಿಷಯ ತಿಳಿಸಿ ಇಸ್ಮಾಯಿಲ ಶಾಹನ ಆಜ್ಞೆಯಂತೆ ನಡೆಯುವಂತೆ ಮಾಡಿ ವಿಜಾಪುರದತ್ತ ಹೊರಡಿರಿ. ನಾವೂ ಕೂಡ ಕುತುಬಶಾಹನನ್ನು ಕರೆದುಕೊಂಡು ಸೈನ್ಯದ ಸಿದ್ಧತೆಯೊಂದಿಗೆ ಸ್ವತಃ ಅಲ್ಲಿಗೆ ಬಂದು ಮುಟ್ಟುತ್ತೇವೆ. ಎಂದು ಹೇಳಿ ಕಳಿಸಿದನು. ಇಸ್ಮಾಯಿಲಶಾಹನನ್ನು ವಿಜಾಪುರ ರಾಜ್ಯದ ಸಿಂಹಾಸನದ ಮೇಲೆ ಕೂಡಿಸಬೇಕೆಂಬುದು ಐನುಲ್‌ಮುಲ್ಕನಿಗೆ ಬಹುದಿನಗಳಿಂದಲೇ ಯೋಚನೆ ಇತ್ತು. ಈಗ ಅವನಿಗೆ ಒಂದು ಅವಕಾಶ ದೊರೆತು ತಾನೂ ಉಳಿದ ಅಮೀರ-ಸರದಾರರಿಗೆ ಗುಪ್ತವಾಗಿ ತಿಳಿಸಿದನು. ಬುರ್‍ಹಾಣಶಾಹನು ಅದಕ್ಕೆ ತಕ್ಕ ಕುಮ್ಮಕ್ಕನ್ನು ಕೊಡುತ್ತಲೇ ಇದ್ದನು. ಹೀಗೆ ತಮ್ಮ ವಿಚಾರಗಳು ಕಾರ್ಯರೂಪಕ್ಕೆ ತರುವಲ್ಲಿ ಒಂದು ವರ್ಷ ಕಾಲ ಪ್ರಯತ್ನ ನಡೆಸಿದರು. ಅದಕ್ಕೆ ಸರಿಯಾಗಿ ಸಾವಂತವಾಡಿ ಕೋಟೆಯ ಸರದಾರನಾದ ಸಾವಂತರಾವ ನಾಯಕವಾಡಿ ಎಂಬವನು ಇಸ್ಮಾಯಿಲಶಾಹನೊಂದಿಗೆ ಒಪ್ಪಂದ ಮಾಡಿಕೊಂಡು ಕೋಟೆಯ ಎಲ್ಲ ಜನರನ್ನು ತನ್ನತ್ತ ಸೆಳೆದುಕೊಂಡನು. ಇಸ್ಮಾಯಿಲಶಾಹನಿಗೆ ತನ್ನ ಮಗಳನ್ನು ಕೊಟ್ಟು ಶರೀರ ಸಂಬಂಧವನ್ನು ಬೆಳೆಸಿಕೊಂಡನು. ಮತ್ತು ಒಂದು ಸಮಯವನ್ನು ಸಾಧಿಸಿ ಬೆಳಗಾವಿ ಕೋಟೆಯ ಮುಖ್ಯಸ್ಥನನ್ನು ಬಂಧಿಸಿ ಕೋಟೆಯನ್ನು ಕೈವಶ ಮಾಡಿಕೊಂಡನು. (೯, ರಮಜಾನ ೧೦೦೨/ ೧೨ ಮೇ ೧೫೯೪).

ಇಬ್ರಾಹಿಮ ಆದಿಲಶಹನಿಗೆ ಈ ಸುದ್ದಿ ತಿಳಿಯುತ್ತಿದ್ದಂತೆ ಆತನು ಸೈನ್ಯವನ್ನು ಸೇರಿಸಿ ಎಲಿಯಾಸಖಾನನ ಸೇನಾಪತ್ಯದಲ್ಲಿ ಕೃತಘ್ನರನ್ನು ದಂಡಿಸಲು ಸೈನ್ಯವನ್ನು ಕಳಿಸಿದನು. ಎಲಿಯಾಸಖಾನನು ಬೆಳಗಾವಿ ಕೋಟೆಯನ್ನು ಮುತ್ತಿ ಕೋಟೆಯ ಒಳ-ಹೊರ ಹೋಗುವ ದಾರಿಯನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟನು. ಎಲಿಯಾಸಖಾನನಿಗೆ ಸಹಾಯಮಾಡಲು ಐನುಲಮುಲ್ಕನಿಗೆ ಹಾಗೂ ಅಂಕುಶಖಾನನಿಗೆ ಆದಿಲಶಹನು ಆಜ್ಞಾಪತ್ರಗಳನ್ನು ಕಳಿಸಿದನು. ಆದರೆ ಅವರಿಬ್ಬರೂ ರಹಸ್ಯವಾಗಿ ಇಸ್ಮಾಯಿಲಶಾಹನೊಂದಿಗೆ ಕೂಡಿದ್ದಾರೆಂಬುದು ಗೊತ್ತಿರಲಿಲ್ಲ. ಬಾದಶಹನ ಆಜ್ಞಾಪತ್ರ ಮುಟ್ಟುತ್ತಿದ್ದಂತೆ ಐನುಲಮುಲ್ಕ ಹಾಗೂ ಅಂಕುಶಖಾನರು ಆದಿಲಶಹಾನಿಗೆ ಅಗತ್ಯವಿದೆ, ತಾವು ಸಹಾಯ ಮಾಡಬೇಕೆಂದು ಬಾಹ್ಯದಲ್ಲಿ ನಟಿಸುತ್ತ ಸೈನ್ಯವನ್ನು ಸೇರಿಸಿ ಎಲಿಯಾಸಖಾನನ ಸಹಾಯಕ್ಕೆ ಕಳಿಸಿದರು. ಎಲಿಯಾಸಖಾನನು ಅವರೊಂದಿಗೆ ಸೇರಿ ಕೋಟೆಯ ಮೇಲೆ ದಾಳಿ ಮಾಡಿದನು. ಆದರೆ ಅವರು ಅಂತರ್ಯದಲ್ಲಿ ಶತ್ರುವಿಗೆ ಪ್ರಬಲನಾಗಲು ಸಹಾಯ ಮಾಡುತ್ತಿದ್ದರು. ರಾತ್ರಿಯ ಹೊತ್ತು ಆದಿಲಶಹನ ಸೈನ್ಯದಲ್ಲಿಯ ಪದಾರ್ಥಗಳನ್ನು ಕೋಟೆಯ ಒಳಗೆ ಸಾಗಿಸುತ್ತಿದ್ದರು. ಇತ್ತ ವಿಜಾಪುರಕ್ಕೆ ಕೋಟೆಯ ಮುಖ್ಯಸ್ಥ ಖುರಶೀದಖಾನನನ್ನು ಒಡೆದುಕೊಂಡು, ಅವನ ಮುಖಾಂತರ ನಗರದ ಇತರ ಸರದಾರರಿಗೆ ಆಶೆ ಆಮಿಷಗಳನ್ನು ತೋರಿಸಿ ಒಡೆದುಕೊಳ್ಳ ಹತ್ತಿದರು. ಅತ್ತ ಬುರ್‍ಹಾಣಶಾಹ ಹಾಗೂ ಕುತುಬಶಾಹರು, ತಮ್ಮ ಸೈನ್ಯಗಳನ್ನು ಕಳಿಸಿ ವಿಜಾಪುರ ರಾಜ್ಯದ ಗಡಿ ಭಾಗಗಳಲ್ಲಿ ದಂಗೆ ಎಬ್ಬಿಸಿ ಪ್ರದೇಶಗಳನ್ನು ನಾಶಮಾಡಹತ್ತಿದರು.

ನಾಲ್ಕುದಿಕ್ಕಿನಿಂದಲೂ ಉದ್ಭವಿಸಿದ ಸಂಕಟದಿಂದ ಆದಿಲಶಹನು ಕಿಂಚಿತ್ತು ವಿಚಲಿತನಾಗದೆ ಅಲ್ಲಾನ ಮೇಲೆ ವಿಶ್ವಾಸವನ್ನಿಟ್ಟು ಸ್ವಸ್ಥನಾಗಿದ್ದನು. ಅಷ್ಟರಲ್ಲಿ ಐನುಲಮುಲ್ಕನು ಡಾಣಾಡಂಗೂರವಾಗಿಯೇ ಇಸ್ಮಾಯಿಲಶಾಹನನ್ನು ಭೆಟ್ಟಿಯಾಗಿ, ಆತನನ್ನು ಸಿಂಹಾಸನದ ಮೇಲೆ ಕೂಡಿಸಿ ಆತನ ತಲೆಯ ಮೇಲೆ

ಛತ್ರ ಚಾಮರಗಳನ್ನು ಹಿಡಿದನೆಂಬ ಸುದ್ದಿ ಬಂದು ಮುಟ್ಟಿತು.[೧] ವಿಜಾಪುರ ಸೈನ್ಯದಿಂದ ರಹಸ್ಯವಾಗಿ ಸಾಗಿಸಿದ ದ್ರವ್ಯ, ಸಾಮಾನು ಸರಂಜಾಮುಗಳನ್ನು ಕಾಣಿಕೆಯಾಗಿ ನೀಡಿ ಐನುಲಮುಲ್ಕನು, ಇಸ್ಮಾಯಿಲನನ್ನು ಸಿಂಹಾಸನದ ಮೇಲೆಯೇ ಕೂಡಿಸಿದನು. ಎಲ್ಲರಿಂದ ಬಾದಶಹನಿಗೆ ಮುಜುರೆ ಹಾಗೂ ಸಲಾಮುಗಳನ್ನು ಸಲ್ಲಿಸಿದನು. ಆಕುಸಖಾನ ಮೊದಲಾದ ಚಿಕ್ಕ-ಪುಟ್ಟ ಸರದಾರರೂ ಐನುಲಮುಲ್ಕನೊಂದಿಗೆ ಕೈಸೇರಿಸಿದರು. ಸುಮಾರು ೨೫ ಸಾವಿರ ಜನರನ್ನು ಇಸ್ಮಾಯಿಲಶಾಹನ ಕಡೆಗೆ ಸಂಗ್ರಹಿಸಿದರು. ಆವರೆಗೆ ಕೋಟೆಯ ಮೇಲೆ ದಾಳಿ ಮಾಡುತ್ತಿದ್ದ ಎಲಿಯಾಸಖಾನನು, ಐನುಲಮುಲ್ಕ ಇತ್ಯಾದಿಗಳ ಕೃತಘ್ನತೆಯನ್ನು ಗಮನಿಸಿ ದಾಳಿಯನ್ನು ನಿಲ್ಲಿಸಿ ಇಬ್ರಾಹಿಮ ಆದಿಲಶಹನಿಗೆ ಸುದ್ದಿ ತಿಳಿಸಲು ವಿಜಾಪುರ ಕೋಟೆಗೆ ಬಂದನು. ಮುರ್ತುಜಾಬಾದ ಅಂದರೆ ಮಿರಜ ಕೋಟೆಯ ಜನರೂ ಇಬ್ರಾಹಿಮ ಆದಿಲಶಹನ ಮೇಲಿನ ವಿಶ್ವಾಸವನ್ನು ಬದಲಿಸಿ, ಇಸ್ಮಾಯಿಲಶಾಹನ ಸೇವೆಗೆ ಕಟಿಬದ್ಧರಾಗಿ ಆತನ ಹೆಸರಿನಲ್ಲಿ ಖುತಬಾವನ್ನು ಓದಿದರು. ಇದೇ ಸಮಯದಲ್ಲಿ ಬುರ್ಹಾಣಶಾಹನು ಇಸ್ಮಾಯಿಲಶಾಹನ ಸಹಾಯಕ್ಕೆ ತನ್ನ ರಾಜ್ಯದ ಪ್ರಮುಖ ಕಾರಭಾರಿಗಳನ್ನು ಕಳಿಸಿ ತಾನು ಸ್ವತಃ ಅಹಮದನಗರದಿಂದ ಹೊರಡುತ್ತಿದ್ದಾನೆಂದು, ಸುದ್ದಿಗಾರರು ಬಂದು ಇಬ್ರಾಹಿಮನ ಆದಿಲಶಹನಿಗೆ ತಿಳಿಸಿದರು. ಅದೇ ದಿನ ಇನ್ನೊಬ್ಬ ಸುದ್ದಿಗಾರನು ಶತ್ರುಪಾಳಯದ ಪತ್ರವೊಂದನ್ನು ದೊರಕಿಸಿ ತಂದಿದ್ದನು. ಅದನ್ನು ದೇವನಾಯಕ ಎಂಬ ಸರದಾರನ ಮಗನು ಐನುಲಮುಲ್ಕನ ಪತ್ರಕ್ಕೆ ಬರೆದ ಉತ್ತರವಾಗಿತ್ತು. ಆ ಪತ್ರದಲ್ಲಿ ಹೀಗೆ ಬರೆಯಲಾಗಿತ್ತು.

'ತಮ್ಮ ಪತ್ರ ಮುಟ್ಟಿದೆ. ತಾವು ತಮ್ಮ ಪತ್ರದಲ್ಲಿ ನಾನು ಏನು ಮಾಡುತ್ತಿರುವೆ ಮತ್ತು ನನಗೆ ಹೇಳಿದ ಕೆಲಸ ಏನಾಯ್ತು ಎಂದು ಕೇಳಿರುವಿರಿ, ರೂಮೀಖಾನನು ನಗರದಲ್ಲಿಯೇ ಇದ್ದು ತನ್ನ ಕೆಲಸದಲ್ಲಿ ಎಚ್ಚರಿಕೆಯಿಂದಿದ್ದಾನೆ. ನಗರದ ಎಲ್ಲ ಜನರಿಗೂ ನಿರ್ಧರಿಸಿದಂತೆ ತಿಳಿಸಲಾಗಿದೆ. ಇಸ್ಮಾಯಿಲ ಆದಿಲಶಹನು ನಗರದ ಸಮೀಪ ಬರುತ್ತಿದ್ದಂತೆ ಒಂದು ವೇಳೆ ಸಂಧಿ ಸಾಧಿಸಿದರೆ, ಇಬ್ರಾಹಿಮ ಆದಿಲಶಹನನ್ನು ಬಂಧಿಸುವುದು ಅಥವಾ ಕೊಲೆ ಮಾಡುವುದೆಂದು ನಿರ್ದರಿಸಲಾಗಿದೆ. ನಾನು ನಗರದ ಹೊರಗೆಯೇ ಇದ್ದು ನನ್ನ ಕೆಲಸದಲ್ಲಿ ಎಚ್ಚರಿಕೆಯಿಂದ ಇದ್ದೇನೆ. ಎಲ್ಲರನ್ನೂ ವಶ ಮಾಡಿಕೊಳ್ಳಲಾಗಿದೆ. ತಾವು ಬರುವ ಮಾರ್ಗ ಪ್ರತೀಕ್ಷೆಯಲ್ಲಿದ್ದೇವೆ. ತಾವು ಆದಷ್ಟು ಬೇಗ ಬಂದು ಮುಟ್ಟಬೇಕು. ಯಾಕೆಂದರೆ ಇಲ್ಲಿಯ ಎಲ್ಲ ಕೆಲಸಗಳು ಸಂಕೇತದಂತೆ ಸಿದ್ಧಿಸಲಾಗಿದೆ. ಯಾವುದೂ ಬಾಕಿ ಉಳಿದಿಲ್ಲ' ಎಂದು ಬರೆಯಲಾಗಿತ್ತು. ತಾತ್ಪರ್ಯವೆಂದರೆ ಸಂಕಟ ಹಾಗೂ ದಂಗೆಗಳು ಇಷ್ಟರಮಟ್ಟಿಗೆ ಬೆಳೆದಿದ್ದುವು. ಎಲ್ಲರೂ ಐದಾರು ದಿನಗಳಲ್ಲಿ ಇಸ್ಮಾಯಿಲ ಆದಿಲಶಹನು ನಗರವನ್ನು ಕೈವಶಮಾಡಿಕೊಳ್ಳುತ್ತಾನೆಂದು ತಿಳಿದಿದ್ದರು. ವಿಜಾಪುರ ರಾಜ್ಯದ ಅಧಿಪತಿಯಾಗುತ್ತಾನೆಂಬಷ್ಟರ ಮಟ್ಟಿಗೆ ಕಾರ್ಯಭಾವವು ಬಂದು ಮುಟ್ಟಿತ್ತು. ಆಗ ಅಲ್ಲಾನ ಮೇಲೆ ಭರವಸೆಯನ್ನಿಟ್ಟುಕೊಂಡು ಸ್ವಸ್ಥನಾಗಿ ಕುಳಿತಿದ್ದ ಇಬ್ರಾಹಿಮ ಆದಿಲಶಹನು, ನಿವಾಂತನಾಗಿಯೇ ಇದ್ದನು. ಅದೇ ಶಾಂತ ಸ್ವಭಾವದಲ್ಲಿ ದಿಲಾವರಖಾನನು ಬಂಧಿಸಿಟ್ಟಿದ್ದ ಹಮೀದಖಾನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ ಅವನ ಯೋಗ್ಯತೆಯನ್ನು ಅಧಿಕಗೊಳಿಸಿ ದರಬಾರಕ್ಕೆ ಕರೆಸಿದನು. ಅವನಿಗೆ ಸೇನಾಧಿಪತಿಯ ವಸ್ತ್ರಗಳನ್ನು ನೀಡಿ ಶತ್ರುಗಳೊಂದಿಗೆ ಕೂಡಿರದ - ತನಗೆ ವಿಶ್ವಾಸಿಕರಾಗಿದ್ದ ಸರದಾರರನ್ನು ಮತ್ತು 'ಖಾಸಖೇಲ' ಅಂದರೆ ಪ್ರಮುಖ ಜರೀಪಟಕಾದ ಕಾಮದಾರರನ್ನು ಮತ್ತು ಅನೇಕ ಸೈನಿಕರನ್ನು ಜೊತೆಗೆ ಕೊಟ್ಟು

---

೧. ೬ ರಮಜಾನ ೧೦೦೨ ಹಿ. (೧೬. ಮೆ ೧೫೯೪) ರಂದು ಇಸ್ಮಾಯಿಲನು ಕೋಟೆಯನ್ನು ಶವಪಡಿಸಿಕೊಂಡು ಬಹಿರಂಗವಾಗಿ ಯುದ್ಧವನ್ನು ಘೋಷಿಸಿದನು. ಬ್ರಿ.ಫಿ III ಪು.೧೬೭

ಶತ್ರುಗಳನ್ನು ಎದುರಿಸಲು ಕಳಿಸಿಕೊಟ್ಟನು. ಶತ್ರುಗಳಿಗೆ ಅವಕಾಶ ಕೊಡದಂತೆ ತಕ್ಷಣ ವಾಯುವೇಗದಲ್ಲಿ ಹೋಗಿ ಅವರನ್ನು ಶಿಕ್ಷಿಸಲು ಆಜ್ಞೆ ಮಾಡಿದನು.

### ೩೫. *ಹಮೀದಖಾನನು ಪ್ರಬಲನಾಗಿ ಐನುಲಮುಲ್ಕನನ್ನು ಕೊಲೆ ಮಾಡಿದ್ದು ಮತ್ತು ಇಸ್ಮಾಯಿಲ್ ಆದಿಲಶಹನ ಕಣ್ಣಲ್ಲಿ ಸಲಾಕೆ ತಿವಿದುದರ ಪರಿಣಾಮ ಆತ ಸತ್ತದ್ದು.*

ದಿನಾಂಕ ೨೪ ತಿಂಗಳು ರಬಿಲಾವಲ ಹಿಜರಿ ಸನ್ ೧೦೦೩ ಬುಧವಾರದಂದು (೨೩, ನವೆಂಬರ್ ೧೫೯೪) ಹಮೀದಖಾನನು ತನಗೆ ವಹಿಸಿದ ಕೆಲಸವನ್ನು ಅಮೀರ ಜನರೊಂದಿಗೆ ಮಾಡಲು ಪ್ರಾರಂಭಿಸಿದನು. ಇತ್ತ ರೂಮೀಖಾನ, ಅಲೀಯಾಖಾನ ಮತ್ತು ಅಜಿಜಖಾನ ದೊಡ್ಡ ಸರದಾರರ ಬಗ್ಗೆ ಆದಿಲಶಹನಿಗೆ ಸಂಶಯ ಬಂದು, ಅವರನ್ನು ಮತ್ತು ಮುಲ್ಕೀಖಾತೆಯನ್ನು ನೋಡಿ ಕೊಳ್ಳುತ್ತಿದ್ದ ದೇವನಾಯಕ ಹಾಗೂ ಅಬಾಜೀಪಂಡಿತ ಇವರನ್ನು ಬಂಧಿಸಿ ಸೆರೆಮನೆಯಲ್ಲಿಟ್ಟನು. ಹಮೀದಖಾನನು ಬಾದಶಹನ ಆಜ್ಞೆಯಂತೆ ಶತ್ರುಗಳ ಸನ್ನಿಧಿಗೆ ಹೋಗಿ ಮುಟ್ಟಿದನು. ಬಹಿರಂಗದಲ್ಲಿ ಹಮೀದಖಾನನು ಯುದ್ಧಭಾವವನ್ನು ತೋರಿಸುತ್ತ, ಐನುಲಮುಲ್ಕನಿಗೆ ಒಂದು ನಿರೋಪವನ್ನು ಕಳಿಸಿದನು. ‘ನಾನು ಇಷ್ಟೆಲ್ಲ ಸಾಮಾನು-ಸರಂಜಾಮ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆಂದು ಬಂದಿರುವೆನೆಂದಲ್ಲ. ನಾನು ಬಂದದ್ದು ಬಾದಶಹನ ಆಜ್ಞೆಯಂತೆ ಪಾಲಿಸುವುದಕ್ಕಾಗಿ ತೋರಿಕೆಗಾಗಿ ಯುದ್ಧಕ್ಕೆ ಬಂದಂತೆ ಬಂದಿರುವೆ. ಆದರೆ ಅಂತಃಕರಣ ಪೂರ್ವಕವಾಗಿ ನಾನು ನಿಮ್ಮೊಂದಿಗೆ ಸ್ನೇಹವನ್ನು ಹೊಂದಿರುವೆ. ರಾಜಕುಮಾರ ಇಸ್ಮಾಯಿಲಶಾಹರ ಸೇವೆ ಮಾಡುವುದೇ ನನ್ನ ಮನಸ್ಸಿನಲ್ಲಿದೆ. ಆದ್ದರಿಂದ ಈ ಕೆಲಸದಲ್ಲಿ ತ್ವರೆ ಮಾಡಿ ನಿಜಾಮಶಹನು ಸಹಾಯಕ್ಕೆ ಬರುವ ಮೊದಲು ಇಸ್ಮಾಯಿಲಶಾಹನನ್ನು ಸಿಂಹಾಸನದ ಮೇಲೆ ಕೂಡಿಸೋಣ. ಅಂದರೆ ಯಾರ ಉಪಕಾರವೂ ಇಲ್ಲದೆ ನಮ್ಮ ಕೆಲಸವನ್ನು ಮಾಡಿ ಮನೋರಥವನ್ನು ಪೂರ್ಣಗೊಳಿಸಿದಂತಾಗುತ್ತದೆ,” ಎಂದು ನಿರೋಪ ಹೇಳಿ ಕಳಿಸಿದನು.

ಹಮೀದಖಾನನ ನಿರೋಪದಿಂದ ಇಸ್ಮಾಯಿಲಶಾಹನ ದೈವದ ಉತ್ಕರ್ಷ ಕಂಡು ಐನುಲಮುಲ್ಕನು ಸಂತೋಷಗೊಂಡನು. ಹಮೀದಖಾನನು ತಮ್ಮ ಮಿತ್ರನೆಂದೇ ಬಗೆದು ಅವನ ನಿರೋಪಕ್ಕೆ ಉತ್ತರ ಬರೆಯುತ್ತ ‘ನಾವು ನಿಮ್ಮ ಬರುವಿಕೆಯ ಮಾರ್ಗ ಪ್ರತೀಕ್ಷೆಯಲ್ಲಿದ್ದೇವೆ. ತಾವು ತಕ್ಷಣ ಬಂದು ಮುಟ್ಟಬೇಕು. ಅಂದರೆ ತಾವು ಹೇಳಿದಂತೆ, ನಾವು ನೀವು, ಕೂಡಿಯೇ ಇಸ್ಮಾಯಿಲಶಾಹನನ್ನು ಸಿಂಹಾಸನದ ಮೇಲೆ ಕೂಡಿಸೋಣ ಎಂದು ಉತ್ತರ ಹೇಳಿ ಕಳಿಸಿದನು. ಆ ಸಮಯದಲ್ಲಿ ರಾಜಕುಮಾರನ ಸಹಿತವಾಗಿ ರಾಯಬಾಗ ಹಾಗೂ ಬೆದರಿ (ಬಿದರಿ)ಗಳಲ್ಲಿ ಡೇರೆಗಳನ್ನು ಮತ್ತು ತಂಬೂಗಳನ್ನು ನೆಟ್ಟು, ಸೈನ್ಯವನ್ನು ತಂದು ಸಿದ್ಧಪಡಿಸುವಲ್ಲಿ ಮಗ್ನನಾಗಿದ್ದನು. ಅಷ್ಟರಲ್ಲಿ ಹಮೀದಖಾನನು ಇನ್ನಷ್ಟು ಹತ್ತಿರಬಂದು ಮುಟ್ಟಿದ್ದನು. ಆಗ ಐನುಲಮುಲ್ಕನು ಬಹಳ ಸಂತೋಷಬಿಟ್ಟು, ಹಮೀದಖಾನನು, ಕಪಟ ವೇಷದಿಂದ ಬರುತ್ತಿದ್ದಾನೆಂದು ಒಂದಿಷ್ಟೂ ಮನದಲ್ಲಿ ತರದೆ ಭ್ರಾಂತತನದಿಂದ ಆತನ ಸ್ವಾಗತಕ್ಕೆ ಸಿದ್ಧನಾಗುತ್ತಿದ್ದನು. ಬಾದಶಹನನ್ನು ಕೂಡಿಸಲು ಭಾರೀ ಕಿಮ್ಮತ್ತಿನ ಆಸನವನ್ನು, ಸಿದ್ಧಪಡಿಸಿ ಇಸ್ಮಾಯಿಲ ಸಹಿತವಾಗಿ ಐನುಲಮುಲ್ಕನು ಕಚೇರಿಯಲ್ಲಿ ಕುಳಿತಿದ್ದನು. ಹಮೀದಖಾನನು ತನ್ನ ಪೂರ್ಣಪ್ರಮಾಣದ ಸೈನ್ಯವನ್ನು, ತೋಫುಗಳು, ಗೋಲಂದಾಜ ಇತ್ಯಾದಿ ಸಾಮಾನು ಸರಂಜಾಮುಗಳು ಹತ್ಯಾರಗಳು, ಬಾಣ, ಬಿರುಸುಗಳು. ಇತ್ಯಾದಿಗಳನ್ನು ತಂದಿದ್ದನು. ಹತ್ತಿರ ಬಂದು ಮುಟ್ಟುತ್ತಿದ್ದಂತೆ ಒಮ್ಮೆಲೆ ಇಸ್ಮಾಯಿಲಶಾಹ ಹಾಗೂ ಐನುಲಮುಲ್ಕನ ಮೇಲೆ ದಾಳಿ ಮಾಡಿದನು. ಒಮ್ಮಿಂದೊಮ್ಮೆಲೆ ತೋಫುಗಳು ಹಾರಿದಾಗ ಇಸ್ಮಾಯಿಲಶಾಹನ ಸೈನ್ಯವು. ಇನ್ನೇನೂ

ಭಯವಿಲ್ಲವೆಂದು ನಿಷ್ಕಾಳಜಿಯಿಂದ ಕುಳಿತಿದ್ದು, ಒಮ್ಮೆಲೆ ಚಿಲ್ಲಾಪಿಲ್ಲಿಯಾಯಿತು. ತಂತಮ್ಮ ಕೆಲಸದಲ್ಲಿ ಮಗ್ನವಾಗಿದ್ದ ಸೈನ್ಯವು ಭಯಭೀತರಾಗಿ ಸೋತು ಓಡಿ ಹೋಯಿತು.

ಐನುಲಮುಲ್ಕನು ಹುಚ್ಚನಂತೆ ಗಾಬರಿಯಿಂದ ಇಸ್ಮಾಯಿಲಶಾಹನನ್ನು ಕುದುರೆಯ ಮೇಲೆ ಕುಳ್ಳರಿಸಿಕೊಂಡು, ಆ ಪ್ರಳಯದಿಂದ ಒಂದೆಡೆ ಕರೆದುಕೊಂಡು ಹೋಗುವ ವಿಚಾರದಲ್ಲಿದ್ದನು. ಇಷ್ಟರಲ್ಲಿ ಇಬ್ರಾಹಿಮ ಆದಿಲಶಹನ ಸೈನ್ಯದ ಶಿಪಾಯಿಗಳು ಈ ಅವಕಾಶವನ್ನು ಉಪಯೋಗಿಸಿಕೊಂಡು ಅವರಿಬ್ಬರ ಮೇಲೂ ಏರಿ ಹೋದರು. ಸೈನ್ಯದ ಪೀಲಖಾನೆಯ ಕಾಮದಾರರ ಜೊತೆ ಐವತ್ತು-ಅರವತ್ತು ಆನೆಗಳಿದ್ದುವು. ಆ ಆನೆಗಳನ್ನು ಅವರು ಚಿಲ್ಲಾಪಿಲ್ಲಿಯಾಗಿದ್ದ ಜನರ ಮಧ್ಯ ಹಾಗೂ ಇಸ್ಮಾಯಿಲಶಾಹ ಮತ್ತು ಐನುಲ ಮುಲ್ಕರ ಮಧ್ಯ ಬಿಟ್ಟರು. ಆ ಗದ್ದಲದಲ್ಲಿ ಒಂದು ದೊಡ್ಡ ಆನೆಯು ಐನುಲಮುಲ್ಕರ ಕುದುರೆಯ ಮೇಲೆ ಓಡಿ ಬಂದಿತು. ಅದರಿಂದ ಐನುಲಮುಲ್ಕನ ಮೊಳಕಾಲಿಗೆ ಪೆಟ್ಟು ಬಿದ್ದು ಗಾಯವಾಗಿ ಕುದುರೆಯಿಂದ ಕೆಳಗೆ ನೆಲದಮೇಲೆ ಬಿದ್ದನು. ಮತ್ತೆ ಎದ್ದು ಕುದುರೆಯ ಮೇಲೆ ಕುಳಿತುಕೊಳ್ಳುವ ಶಕ್ತಿ ಅವನಲ್ಲಿ ಉಳಿದಿರಲಿಲ್ಲ. ಆಗ ಇಬ್ರಾಹಿಮ ಆದಿಲಶಹನ ಕಡೆಯ ಆನೆಯ ಮಾವುತನು ಐನುಲಮುಲ್ಕನನ್ನು ನೆಲದಿಂದ ಎತ್ತಿ ತರಲು ತನ್ನ ಆನೆಗೆ ಸೂಚಿಸಿದಾಗ, ಅದು ತನ್ನ ಸೊಂಡೆಯಿಂದ ಅವನನ್ನು ಎತ್ತಿ ಮಾವುತನ ವಶಕ್ಕೆ ಒಪ್ಪಿಸಿತು. ಐನುಲಮುಲ್ಕನ ಅವಸ್ಥೆಯನ್ನು ನೋಡಿದ ಆತನ ಸೈನ್ಯವು ಓಡಿ ಹೋಯಿತು. ದೊಡ್ಡ ಸೋಲಾಯಿತು ಎಂದು ತಿಳಿದ ಆತನು ಮಗ ಗಾಲಿಬಖಾನನಿಗೆ ಕೂಡ ಈ ಗದ್ದಲದಿಂದ ಓಡಿ ಹೋಗಲು ಸೂಚಿಸಿದನು. ಗಾಲಿಬಖಾನನು ತನ್ನ ತಂದೆಯ ಮರಣ ಸಮಯದ ಬೋಧವನ್ನು ಆಲಿಸಿ, ತನ್ನ ಪರಿವಾರ ಸಮೇತವಾಗಿ. ಯುದ್ಧ ಭೂಮಿಯಿಂದ ಓಡಿ ಪೆನಗೊಂಡೆಯ ಕಡೆಗೆ ದಾರಿ ಹಿಡಿದನು. ಕೃತಘ್ನ ಅಂಕುಶಖಾನ ಕೂಡ ಐನುಲಮುಲ್ಕನ ಮಗನೊಂದಿಗೆ ಪಿಲಗುಂಡಿಗೆ (ಪೆನಗೊಂಡೆ) ಹೊರಟು ಹೋದನು.

ಐನುಲಮುಲ್ಕ ಹಾಗೂ ಇಸ್ಮಾಯಿಲ ಆದಿಲಶಹರು ಇಬ್ರಾಹಿಮ ಆದಿಲಶಹನ ಶೂರರ ವಶವಾದಾಗ ಐನುಲಮುಲ್ಕನ ತಲೆಯನ್ನು ಕತ್ತರಿಸಿ ಇಬ್ರಾಹಿಮ ಆದಿಲಶಹನಿಗೆ ವಿಜಾಪುರಕ್ಕೆ ಕಳಿಸಲಾಯಿತು. ಅಲ್ಲಿ ಎಷ್ಟೋ ದಿನ ಆ ತಲೆಯನ್ನು ಒಂದು ಭಲ್ಲೆಗೆ ಚುಚ್ಚಿ ಕೋಟೆಯ ಬಾಗಿಲು ಮುಂದೆ, ಎಲ್ಲ ಜನರೂ ಗಾಬರಿಯಾಗುವಂತೆ ಪ್ರದರ್ಶಿಸಿದ್ದರು. ಇತ್ತ ಬಾದಶಹನ ಆಜ್ಞೆಯಂತೆ ಇಸ್ಮಾಯಿಲಶಾಹನ ಕಣ್ಣಲ್ಲಿ ಕಣ್ಣು ಕಿತ್ತುವ ಸಲಾಕೆಯನ್ನು ಚುಚ್ಚಿ ತಿರುವಿದರು. ಆದರ ಬೇನೆಯಿಂದಾಗಿ ಇಸ್ಮಾಯಿಲಶಾಹನು ಸತ್ತನು. ಇವರಿಬ್ಬರೂ ಹಿಜರಿ ಸನ್ ೧೦೦೩ ರಲ್ಲಿ (ಕ್ರಿ.ಶ ೧೫೪೪-೪೫)ಸತ್ತರು. ಇಬ್ರಾಹಿಮ ಆದಿಲಶಹನ ಮೇಲೆ ಬಂದ ಕಂಟಕವು ಈ ಪ್ರಕಾರ ಪರಿಹಾರವಾಯಿತು. ವಿಜಯದ ಆನಂದದಲ್ಲಿ ಬಾದಶಹನು ಬಡ-ಬಗ್ಗರಿಗೆ ಭಿಕ್ಷುಕರು-ಫಕೀರರಿಗೆ ಉದಾರವಾಗಿ ದಾನ ಮಾಡಿದನು. ಅಲ್ಲದೆ ವಿಜಯದಲ್ಲಿ ಭಾಗವಹಿಸಿದ ಎಲ್ಲರಿಗೂ ಅವರವರ ಯೋಗ್ಯತಾನುಸಾರ ಮರ್ಯಾದೆಯನ್ನು ಮಾಡಿದನು.

ಇಸ್ಮಾಯಿಲಶಾಹನಿಗೆ ಸಹಾಯ ಮಾಡಲು ಅಹಮದನಗರದಿಂದ ಹೊರಟಿದ್ದ ಬುರ್ಹಾಣ ನಿಜಾಮಶಾಹನಿಗೆ ದಾರಿಯಲ್ಲಿಯೇ ಐನುಲಮುಲ್ಕ ಹಾಗೂ ಇಸ್ಮಾಯಿಲಶಾಹನ ಮರಣದ ವಾರ್ತೆ ತಿಳಿಯಿತು. ಸುದ್ದಿಯಿಂದ ಲಜ್ಜಿತನಾದ ಬುರ್ಹಾಣಶಾಹನು ತಿರುಗಿ ಹೋದನು. ಪೆನಗೊಂಡೆಗೆ ಹೋದ ಐನುಲಮುಲ್ಕನ ಮಗ ಹಾಗೂ ಅಂಕುಶಖಾನರು, ಅಲ್ಲಿ ಹಿಂದು ಜನರ ಆಶ್ರಯದಲ್ಲಿ ಕೆಲವು ದಿನ ಕಳೆದರು. ಅನಂತರ ಅಂಕುಶಖಾನನು ಇಬ್ರಾಹಿಮ ಆದಿಲಶಹನ ಆಜ್ಞೆಯಂತೆ ತಿರುಗಿ ವಿಜಾಪುರಕ್ಕೆ ಬಂದನು. ಮತ್ತೆ ಬಾದಶಹನ ಕೃಪೆಗೆ ಒಳಗಾಗಿ ಅಮೀರ ಪದವಿಯನ್ನು ಪಡೆದು ಕೆಲಸ ಮಾಡಹತ್ತಿದನು.

**೩೬. ಬುರ್ಹಾಣಶಾಹನು ಸತ್ತನಂತರ ಅವನ ಮಗ ಇಬ್ರಾಹಿಮ ನಿಜಾಮಶಾಹನು, ಆದಿಲಶಾಹಿ ರಾಜ್ಯದ ಮೇಲೆ ದಾಳಿ ಮಾಡಿದ್ದು. ಆತನನ್ನು ಶಿಕ್ಷಿಸಲು ಬಂದ ಇಬ್ರಾಹಿಮ ಆದಿಲಶಾಹನು ವಿಜಯಿಯಾದದ್ದು :**

ಬುರ್ಹಾಣಶಾಹನ ಪ್ರಕೃತಿ ತುಂಬ ಕೆಟ್ಟಿತು. ಇನ್ನು ತಾನು ಉಳಿಯುವುದಿಲ್ಲವೆಂದು ಆತನಿಗೆ ಅನಿಸಿತು. ಆಗ ಲೋಹಗಡದ ಕೋಟೆಯಲ್ಲಿ ಬಂಧಿಸಿಟ್ಟಿದ್ದ ತನ್ನ ಹಿರಿಯಮಗ ಇಬ್ರಾಹಿಮನನ್ನು ಬಂಧಮುಕ್ತನನ್ನಾಗಿ ಮಾಡಿ ಕರೆಸಿದನು. ಅವನನ್ನೆ ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿದನು. ಬುರ್ಹಾಣಶಾಹನು ಸತ್ತ ನಂತರ (ಮರಣ ದಿನಾಂಕ ೧೮-೪-೧೫೯೫) ಇಬ್ರಾಹಿಮನನ್ನು ಸಿಂಹಾಸನದ ಮೇಲೆ ಕೂಡಿಸಿದರು. ಬಿಸಿರಕ್ತದ ಇಬ್ರಾಹಿಮ ನಿಜಾಮಶಾಹನು ತುಸು ಅವಸರದವನಾಗಿದ್ದನು. ಯಾವ ಸಮಯದಲ್ಲಿ ಏನು ಮಾಡಬೇಕೆಂಬ ವಿಷಯದಲ್ಲಿ ಅನುಭವವಿರಲಿಲ್ಲ. ಆದಿಲಶಾಹನ ಕೈಯಲ್ಲಿ ತನ್ನ ತಂದೆ ಬುರ್ಹಾಣಶಾಹನು ಹಲವಾರು ಸಲಸೋತದ್ದು ಆತನ ಮನಸ್ಸಿನಲ್ಲಿ ದ್ವೇಷ ಹುಟ್ಟಿಸಿತ್ತು. ಅವನನ್ನು ಎದುರಿಸಿ ತಕ್ಕ ಪಾಠ ಕಲಿಸಬೇಕೆಂಬ ದುರ್ಬುದ್ಧಿ ಹುಟ್ಟಿತು. ಅದರಂತೆ ಇಬ್ರಾಹಿಮ ನಿಜಾಮಶಾಹನು ಸೈನ್ಯವನ್ನು ಸಿದ್ಧಪಡಿಸಿಕೊಂಡು ಆದಿಲಶಾಹಿ ರಾಜ್ಯದ ಸರಹದ್ದಿನಲ್ಲಿ ಬಂದು ದಂಗೆ ಮಾಡತೊಡಗಿದನು. ಅದನ್ನು ತಿಳಿದ ಇಬ್ರಾಹಿಮ ಆದಿಲಶಹನು ಸೈನ್ಯದೊಂದಿಗೆ ತಾನೆ ಸ್ವತಃ ಹೊರಟನು. (೨೦. ಸಾಬಾನ ೧೦೦೩ ಹಿ/ ೨೦, ಏಪ್ರಿಲ್ ೧೫೯೫) ತಾನೆ ಮೊದಲು ಹೋಗಿ ಶಾಹದುರ್ಗದ ಹತ್ತಿರ ತನ್ನ ಸೈನ್ಯದೊಂದಿಗೆ ಬೀಡು ಬಿಟ್ಟನು. ಉಭಯ ಪಕ್ಷಗಳಲ್ಲಿ ಘನ ಘೋರ ಯುದ್ಧವಾಗುತ್ತಿದ್ದಾಗ, ಇಬ್ರಾಹಿಮ ಆದಿಲಶಹನ ಆನೆಯ ಮಾವುತ ಮಕಸೂದಖಾನನೆಂಬವನು ಬಿಟ್ಟ ಒಂದು ಬಾಣ ನೇರವಾಗಿ ಹೋಗಿ ಇಬ್ರಾಹಿಮ ನಿಜಾಮಶಾಹನ ಎದೆಯನ್ನು ಸೀಳಿ ಬೆನ್ನಲ್ಲಿ ಪಾರಾಯಿತು.[1] ಆತನೆ ಇಬ್ರಾಹಿಮ ನಿಜಾಮ ಶಾಹನೆಂಬುದೂ ಮಾವುತನಿಗೆ ಗೊತ್ತಿರಲಿಲ್ಲ. ಆದರೆ ನಿಜಾಮಶಾಹನ ಪಾಳೆಯದಲ್ಲಿ ಬಾದಶಹನ ಮರಣದಿಂದ ಅಲ್ಲೋಲಕಲ್ಲೋಲವಾಗಿ ಸೇನೆ ದಿಕ್ಕಾಪಾಲಾಗಿ ಓಡಹತ್ತಿತು. ಇಬ್ರಾಹಿಮ ಆದಿಲಶಹನ ಸೈನ್ಯಕ್ಕೆ ವಿಜಯ ಪ್ರಾಪ್ತವಾದ ಸುದ್ಧಿ ತಿಳಿಯುತ್ತಿದ್ದಂತೆ ಬಾದಶಹನೂ ಅವನ ಪರಿವಾರವೂ ಸಂತೋಷಪಟ್ಟಿತು. ಮಧ್ಯರಾತ್ರಿಯಲ್ಲಿ ಮತ್ತೆ ಬೇಹುಗಾರರು ಸುದ್ದಿಯನ್ನು ತಂದು ಶತ್ರುಗಳ ಸೈನ್ಯ ಮುರಿದು ಹೋಗಿದೆ. ಶತಾವಧಿ ಪ್ರಯತ್ನದಿಂದ ಶತ್ರು ಸೈನ್ಯವು ಪರಾಂಡಾ ಕೋಟೆಯತ್ತ ಹೊರಟು ಹೋಯಿತು ಎಂದು ಹೇಳಿದರು. ಅಲ್ಲದೆ ಇಬ್ರಾಹಿಮ ನಿಜಾಮಶಾಹನಿಗೆ ಬಾಣ ಬಡಿದು ಗಾಯಾಳುವಾಗಿ ಕುದುರೆಯ ಮೇಲಿಂದ ಹೋಗುವಾಗ ಕೆಳಗೆಬಿದ್ದು ಮರಣ ಹೊಂದಿದನೆಂದೂ ಸುದ್ದಿ ತಂದರು. ಅದನ್ನು ಕೇಳಿದ ದಯಾವಂತ ಆದಿಲಶಾಹ ಬಾದಶಹನಿಗೆ ತುಂಬ ಹಳಹಳಿಯಾಯಿತು. ಇಬ್ರಾಹಿಮ ನಿಜಾಮಶಾಹನ ಪ್ರದೇಶವನ್ನು ಲೂಟಿ ಮಾಡಬಾರದೆಂದು ಆದಿಲಶಾಹನು ತನ್ನ ಸೈನ್ಯಕ್ಕೆ ಆಜ್ಞೆ ಮಾಡಿದನು. ಯಶಸ್ವಿಯಾಗಿ ವಿಜಯಿಯಾದ ಬಾದಶಹನು ತಿರುಗಿ ತನ್ನ ರಾಜಧಾನಿಗೆ ಬಂದನು.[2]

---

1. On the 16th Amardad (29th July 1595) a battle was faught about 40 miles from Ahmednagar in which he (Ibrahim Nizamshah) was killed by an arrow". Akbarnama Elliat and Dowson Vol VI P-97 Before the beginning of August 1595 - Briggs ಫೆರಿಶ್ತಾ Vol III P 291-293.
೨. ೧೩ ಮೋಹರಮ್ ೧೦೦೪ ಹಿ ( ೯ ಸೆಪ್ಟೆಂಬರ್ ೧೫೯೫) ರಂದು ಇಬ್ರಾಹಿಮ ಆದಿಲಶಹನು ವಿಜಾಪುರಕ್ಕೆ ಬಂದನು. ಬ್ರಿಗ್ಸ - ಫೆರಿಶ್ತಾ III ಪು ೧೮೭.

## ೩೩. *ಇಬ್ರಾಹಿಮ ಆದಿಲಶಹನು ಸಂತೋಷದಿಂದ ವಿಜಾಪುರಕ್ಕೆ ತಿರುಗಿ ಬಂದು ಯಾರ ಸಹಾಯ ಪಡೆಯದೆ ಸ್ವತಃ ರಾಜ್ಯ ಸೂತ್ರಗಳನ್ನು ಕೈಯಲ್ಲಿ ಹಿಡಿದದ್ದು.*

ವಿಜಯಿಯಾದ ಆದಿಲಶಹನು ಬಹಳ ಸಂತೋಷದಿಂದ ಶಾಹದುರ್ಗದಿಂದ ತಿರುಗಿ ಹೊರಟು ದಿನಾಂಕ, ೩೦ ತಿಂಗಳು ಜಿಲ್ಹೇಜ, ಹಿಜರಿ ಸನ್ ೧೦೦೩ ರಂದು (೨೬, ಅಗಸ್ಟ್ ೧೫೯೫) ಸಮುದ್ರ ದಂಡೆಗೆ ಬಂದು ಮುಟ್ಟಿದನು. ಮೋಹರಮದ ೧೦ ದಿನಗಳನ್ನು ಇಲ್ಲಿಯೇ ಸಮುದ್ರ ದಂಡೆಯಲ್ಲಿ ಕಳೆಯುತ್ತ ಪೈಗಂಬರರ ತಾಬೂತನ್ನು ನಿರ್ಮಿಸಬೇಕು, ನಂತರ ವಿಜಾಪುರಕ್ಕೆ ಹೋಗಬೇಕೆಂದು ನಿರ್ಧರಿಸಿದನು. ಅದರಂತೆ ಆಜ್ಞೆ ಮಾಡಿ ವಿಜಾಪುರಕ್ಕೆ ಹೇಳಿಕಳಿಸಿದನು. "ತಾನು ಇರದಿದ್ದರೂ ವಿಜಾಪುರದಲ್ಲಿಯ ಮೋಹರಮ್ ಉತ್ಸವಕ್ಕೆ ಯಾವ ಕೊರತೆಯನ್ನು ಉಂಟುಮಾಡಬಾರದು ಅದಕ್ಕಾಗಿ ಖರ್ಚು ಮಾಡಬೇಕಾಗುತ್ತದೆಂಬ ಚಿಂತೆ ಮಾಡದೆ ಅತ್ಯಂತ ವಿಜೃಂಭಣೆಯಿಂದ ಆಚರಿಸಬೇಕು. ಮನಸ್ಸಿಗೆ ಹೇಗೆ ಚೆನ್ನಾಗಿ ಮಾಡಬೇಕೆಂದು ಅನಿಸುತ್ತದೆಯೋ ಹಾಗೆ ಮಾಡಬೇಕೆಂದು" ಅಜ್ಞಾಪತ್ರವನ್ನು ಕಳಿಸಿದನು. ಅನಂತರ ಬಾದಶಹನ ಆಜ್ಞೆಯಂತೆ, ವಿಜಾಪುರದಲ್ಲಿಯ ಕಾರಭಾರಿ ಮಂಡಳಿಯು ಬಹಳ ಶ್ರಮವಹಿಸಿ ಅತ್ಯಂತ ಶೋಭೆ ತರುವಂತೆ ನಗರವನ್ನು ಸಿಂಗರಿಸಿದರು. ಅರಮನೆಯ ಕೋಟೆ ಬಾಗಿಲಿನಿಂದ ಅಲ್ಲಾಪುರ ಬಾಗಿಲದವರೆಗೆ ಸುಮಾರು ಒಂದು-ಒಂದೂಕಾಲು ಕೋಸು ಅಂತರದವರೆಗೆ, ಬಾಜಾರು ರಸ್ತೆ ಇದೆ. ಅಲ್ಲಿಯ ವರೆಗಿನ ಎರಡೂ ಬದಿಯ ಗೋಡೆಗಳಿಗೆ, ಬಾಗಿಲುಗಳಿಗೆ, ಬಂಡೆಗಲ್ಲುಗಳಿಗೆ ಮಕಮಲ್ ಹಾಗೂ ಕಲಾಬತ್ತಿನ, ರೂಮ, ಸಯಾಮ ದೇಶಗಳ ಭಾರೀ ಕಿಮ್ಮತ್ತಿನ 'ಕುಮಾಷ' ಎಂಬ ಬಟ್ಟೆಯನ್ನು ಕಟ್ಟಿದ್ದರು. ನೋಡುವವರ ಕಣ್ಣಿಗೆ ಹಬ್ಬವಾಗುತ್ತಿತ್ತು. ನೋಡುವವರು ತುಂಬ ಸಂತೋಷ ಪಡುತ್ತಿದ್ದರು. ನಗರದ ಶೃಂಗಾರ ಹಾಗೂ ಶೋಭೆಗಳನ್ನು ನೋಡುವವರ ಚಿತ್ತ ಭ್ರಮರವು ಆ ಶೋಭೆಯನ್ನು ಕಂಡು ಹಾರಾಡುತ್ತ ಬಂದು ಪರಾಧೀನರಾಗಿ ನಗರದ ಶೋಭೆಯನ್ನು ಬಣ್ಣಿಸುವ ಶಬ್ದಗಳಿಂದ ರೆಕ್ಕೆಗಳನ್ನು ಹಾರಿಸುತ್ತಿತ್ತು. ಅದರರ್ಥ ನೋಡಿದವರೆಲ್ಲ ಸಂತೋಷಪಡುತ್ತಿದ್ದರು. ಅರಮನೆಯ ಕೋಟೆಯ ಬಾಗಿಲದ ಮುಂದಿನ ಬಯಲಿನಲ್ಲಿ ದೊಡ್ಡ ದೊಡ್ಡ ಗುಣವಂತ ಜನರು ಬಹಳ ಆಸ್ಥೆಯಿಂದ ಕುಳಿತುಕೊಳ್ಳಲು ಕಟ್ಟಿಗೆಯ ಬೆಂಚು ಕುರ್ಚಿಗಳನ್ನು ಹಾಕಿದ್ದರು. ಬಜಾರದ ಶೋಭೆಯನ್ನು ಇದೇ ತೆರನಾಗಿ ಮಾಡಿದ್ದರು. ಅತ್ಯಂತ ಸ್ವಚ್ಛ ಹಾಗೂ ಸುಂದರವಾಗಿ ಕಾಣುವಂತೆ ಪ್ರತಿಯೊಂದು ಅಂಗಡಿಯಲ್ಲಿ ಮೂರು-ನಾಲ್ಕು ತರುಣರು, ಸ್ಪುರದ್ರೂಪಿಗಳು, ಇರಾಕ, ಖುರಾಸಾನ ಹಾಗೂ ರೂಮ ದೇಶದ ವಿದ್ವಾಂಸರು, ಚತುರ ಜನರು ಕುಳಿತು ಕೆಲಸಕಾರ್ಯಗಳನ್ನು ಮಾಡುತ್ತಿದ್ದರು.

ಅಲ್ಲಾಪುರ ಬಾಗಲಿನಿಂದ ಎರಡು ಎರಡೂವರೆ ಕೋಸುಗಳ ಪರ್ಯಂತದ ರಸ್ತೆ ಎರಡೂ ಬದಿಗೆ ಬೆಂಚು-ಕುರ್ಚಿಗಳನ್ನು ಹಾಕಿ ಅವುಗಳಿಗೆ ಮಖಮಲಿ ಹಾಗೂ ಕಲಾಬತ್ತಿನ ಬಟ್ಟೆಗಳಿಂದ ಶೃಂಗರಿಸಿದ್ದರು. ಅವುಗಳನ್ನು ಕಂದಕದ ಎದುರು ಹಾಗೂ ಹೂದೋಟಗಳ ಎದುರು ಹಾಕಿದ್ದರು. ಹೂದೋಟದಲ್ಲಿ ನಾನಾ ಪ್ರಕಾರದ ವೃಕ್ಷಗಳು ಚಿತ್ತಹರಣವನ್ನು ಮಾಡುತ್ತಿದ್ದರೆ, ಗಿಡಗಳು ಮನೋರಂಜನೆ ಮಾಡುವ ತರತರದ ಬಣ್ಣಗಳ ಹೂಗಳಿಂದ, ತರತರದ ಫಲಗಳಿಂದ ಅಲಂಕೃತವಾಗಿದ್ದುವು. ಅಲ್ಲದೆ ಪ್ರತಿಯೊಂದು ಮಹಲುಗಳಲ್ಲಿ, ವಾಡೆಗಳಲ್ಲಿ ಸುಸ್ವರ ಗಾಯನ ಮಾಡುವ ಗವಯಿಗಳು ಸ್ವರ್ಗಲೋಕದ ಸಂಗೀತಗಾರರಂತೆ, ಗಂಧರ್ವರ ಹಾಗೆ ಗಾಯನ ಮಾಡುತ್ತಿದ್ದರು. ಆ ಸಂಗೀತದ ಸುಸ್ವರದಿಂದ ಹರಿಯುವ ನೀರಿನ ಗತಿ ಸ್ಥಿರವಾಗುತ್ತಿತ್ತು. ಹಾರುವ ಪಕ್ಷಿಗಳ ಹಾರಾಟ ನಿಲ್ಲುತ್ತಿತ್ತು. ಅಷ್ಟು ಸುಮಧುರವಾಗಿ ಹಾಡುತ್ತಿದ್ದರು. ಅದೇ ರೀತಿಯಲ್ಲಿ ಕಲಾವಂತಿಣಿಯರ ಸೌಂದರ್ಯವನ್ನು ನೋಡುತ್ತಿದ್ದಂತೆ, ಮನುಷ್ಯ ಮೂರ್ಛೆ

ಹೋಗಬಹುದಾದಂಥ ಸುಂದರಿಯರು, ಮೈತುಂಬ ಆಭರಣಗಳನ್ನು ಹೊತ್ತು ನಟಿಸುತ್ತಿದ್ದ ನೃತ್ಯಾಂಗನೆಯರು ಪ್ರತಿಯೊಂದು ಸ್ಥಳದಲ್ಲಿ ಮಹಲುಗಳಲ್ಲಿ, ವಾಡೆಗಳಲ್ಲಿ ನೃತ್ಯ ಮಾಡುತ್ತ ಪ್ರತಿಯೊಂದು ನೋಟಗಳಿಂದ ಮುಗ್ಧ ಜನರನ್ನು ಹುಚ್ಚನನ್ನಾಗಿ ಮಾಡುತ್ತಿದ್ದರು. ಈ ದಕ್ಷಿಣ ದೇಶದಲ್ಲಿಯ ಯಾವ ನಗರವೂ ಇಷ್ಟು ಸುಂದರವಾಗಿ ಅಲಂಕರಣಗೊಂಡಿರಲಿಲ್ಲವೆಂದು ನಿಸ್ಸಂಶಯವಾಗಿ ಹೇಳಬಹುದು.

ಮೋಹರಮದ ೧೦ ದಿನಗಳಾದ ಅನಂತರ ಇಬ್ರಾಹಿಮ ಆದಿಲಶಹನು ಸಮುದ್ರ ದಂಡೆಯಿಂದ ತನ್ನ ಸೈನ್ಯದೊಂದಿಗೆ ಪೂರ್ಣ ಮನೋರಥನಾಗಿ ವೈಭವದಿಂದ ವಿಜಾಪುರದತ್ತ ಹೊರಟನು. ದಿನಾಂಕ ೧೪, ಮೋಹರಮ್ ಸನ್ ೧೦೦೪ (೬, ಸೆಪ್ಟೆಂಬರ್ ೧೫೯೫) ರಂದು ಪರ್ವತ ಗಾತ್ರದ ಕುದುರೆಯನ್ನೇರಿ ಸಾವಕಾಶವಾಗಿ ಬರಹತ್ತಿದನು. ದಾರಿಯಲ್ಲಿ ನಾಲ್ಕು ಕಡೆಗಳಲ್ಲೂ ಲಕ್ಷ್ಯವಿಟ್ಟು ನೋಡುತ್ತ, ಎಲ್ಲೆಲ್ಲಿ ಒಳ್ಳೆಯ ಕೆಲಸಕಾರ್ಯಗಳಾಗಿವೆಯೊ ಅವುಗಳನ್ನೆಲ್ಲ ಪರಿಶೀಲಿಸುತ್ತ ವಿಜಾಪುರದ ಕೋಟೆಗೆ ಬಂದನು. ಆನಂದ ಮಹಲ ಎಂಬುದು ಬಾದಶಹನ ಖಾಸಾ ಮಹಲಾಗಿತ್ತು. ಮಹಲನ್ನು ಇದೇ ಬಾದಶಹನು ತುಂಬ ಸುಂದರವಾಗಿ ಕಟ್ಟಿಸಿದ್ದನು. ಆ ಮಹಲಿನ ಸುತ್ತ ಸುಂದರವಾದ ಹೂತೋಟ, ಅದರಲ್ಲಿಯ ವೃಕ್ಷಗಳು ಸದಾ ಹಸಿರು ಬಣ್ಣದಿಂದ ಫಲ ಪುಷ್ಪಗಳಿಂದ ಶೋಭಾಯಮಾನವಾಗಿದ್ದುವು. ಈಗಲೂ ಕೂಡ ಆ ತೋಟವು ಸುವ್ಯವಸ್ಥೆಯಲ್ಲಿದೆ. ಆ ಆನಂದ ಮಹಲಿನಲ್ಲಿ ಇಬ್ರಾಹಿಮ ಆದಿಲಶಹ ಬಾದಶಹನು ತನ್ನ ಕಲ್ಯಾಣಪ್ರದ ಚರಣಗಳನ್ನಿಟ್ಟು ಸ್ವರ್ಗವು ನಾಚುವಂತೆ ಮಾಡಿದನು. ಬರುವಾಗ ನಗರದ ಗಲ್ಲಿ-ಗಲ್ಲಿಗಳಲ್ಲಿಯ, ರಸ್ತೆಯಲ್ಲಿಯ, ಮತ್ತು ಬಾಜಾರದಲ್ಲಿಯ ಅಲಂಕಾರ ಶೋಭೆಯನ್ನು ಕಂಡು ಬಹಳ ಸಂತೋಷ ಪಟ್ಟು 'ಶಾಭಾಸ, ಶಾಭಾಸ' ಎಂದು ಉದ್ಗಾರ ತೆಗೆಯುತ್ತಿದ್ದನು. ರಾಜ್ಯದ ಕಾಮದಾರರು, ಕಾರಭಾರಿ ಮಂಡಳಿ, ಅಮೀರಜನರು, ನಾಮಾಂಕಿತ ಯೋಧರು, ಸಿಬ್ಬಂದಿ, ಎಲ್ಲರಿಗೂ ಯೋಗ್ಯತಾನುಸಾರ ವಸ್ತ್ರಗಳನ್ನು, ಕಾಣಿಕೆಗಳನ್ನು ಕೊಟ್ಟು ಸಂತೋಷ ಪಡಿಸಿದನು. ಫಕೀರರು, ಔಲಿಯಾಗಳು, ಶೇಖರು, ವಿದ್ವಾಂಸರು, ಗುಣೀಜನರು ಮತ್ತು ಕವಿಗಳಿಗೆ ಬಹಳಷ್ಟು ಕಾಣಿಕೆಗಳನ್ನು ಕೊಟ್ಟು ಸಂತೋಷ ಪಡಿಸಿದನು. ಬಾದಶಹನು ಕೊಟ್ಟ ದಾನ ಧರ್ಮಗಳಿಂದ ಬಡ-ಬಗ್ಗರು ತಮ್ಮ ಮುಂದಿನ ಸಂಸಾರದ ಚಿಂತೆಯಿಂದ ಮುಕ್ತರಾದರು. ಆ ಮುಂದಿನ ದಿನಗಳಲ್ಲಿ ಬಾದಶಹನು ತಾನೆ ಸ್ವತಃ ರಾಜ್ಯದ ಎಲ್ಲ ಕೆಲಸ-ಕಾರ್ಯಗಳನ್ನು ಮಾಡಹತ್ತಿದನು.

ಪ್ರತಿನಿತ್ಯ ದಿನದ ಎರಡನೆಯ ಘಳಿಗೆಯಲ್ಲಿ ಅರಮನೆಯಿಂದ ಹೊರಟು ದರಬಾರಕ್ಕೆ ಬಂದು ೮ ಘಳಿಗೆಯವರೆಗೆ ಸಿಂಹಾಸನದ ಮೇಲೆ ಕುಳಿತು ಕೊಳ್ಳುತ್ತಿದ್ದನು. ಬಾದಶಹನ ಕೆಲಸಗಳನ್ನು ನೋಡುವಲ್ಲಿ ನಿರತನಾಗಿರುತ್ತಿದ್ದನು. ಬೇರೆ-ಬೇರೆ ಸ್ಥಳಗಳಿಂದ, ವಿವಿಧ ಪ್ರಾಂತ್ಯಗಳಿಂದ ಮತ್ತು ವಿವಿಧ ಬಾದಶಹರಿಂದ, ಸರದಾರರು, ಅಮೀರ ಜನರಿಂದ ಕಾಗದ ಪತ್ರಗಳು ಬರುತ್ತಿದ್ದುವು. ಅದರಂತೆ ಸಾರ್ವಜನಿಕರಿಂದ ಅರ್ಜಿಗಳು, ರಾಜಧಾನಿಯಲ್ಲಿ ಮತ್ತು ಸಿಂಹಾಸನದ ಹತ್ತಿರವೆ ಇರುತ್ತಿದ್ದ ನೌಕರ ವರ್ಗದವರಿಂದ ಬರುತ್ತಿದ್ದ ಅರ್ಜಿಗಳನ್ನು ಫಿರ್ಯಾದುಗಳನ್ನು ಬಾದಶಹನು ಸ್ವತಃ ತಾನೆ ಓದಿ ನೋಡುತ್ತಿದ್ದನು. ಆ ಅರ್ಜಿಗಳಲ್ಲಿ, ಪತ್ರಗಳಲ್ಲಿ ಬಂದ ವಿಷಯಗಳ ಬಗ್ಗೆ ತಾನೇ ವಿಚಾರಿಸಿ ಸೂಕ್ತ ಆಜ್ಞೆಗಳನ್ನು ಮಾಡುತ್ತಿದ್ದನು. ರಾಜ್ಯದ ಸಂಪೂರ್ಣ ಮಾಲಿ ಹಾಗೂ ಮುಲಕೀ ಕೆಲಸಗಳನ್ನು ರಾಜಧಾನಿಯ ಕೆಲಸಗಳನ್ನು ತಾನೆ ಸ್ವತಃ ನೋಡಿ, ಇನ್ನೊಬ್ಬರ ಸಹಾಯವನ್ನು ಇಚ್ಛಿಸದೆ, ತನ್ನ ಮನಸ್ಸಿಗೆ ತೋಚಿದ ಹಾಗೆ ಮಾಡುತ್ತಿದ್ದನು. ಬುದ್ಧವಂತ ಬಾದಶಹನು ಮಾಡುವ ಕೆಲಸಗಳಲ್ಲಿ ಜನರ ಕಲ್ಯಾಣವಿದೆ ಎಂಬ ಮಾತಿನಲ್ಲಿ ಸತ್ಯವಿದೆ. ಆದ್ದರಿಂದಲೇ ರಾಜ್ಯವು ಸುವ್ಯವಸ್ಥಿತವಾಗಿ ನಡೆದು ಕೆಲವೇ ದಿನಗಳಲ್ಲಿ ರಾಜಧಾನಿಯಲ್ಲಿ ಯಾವ ತಕರಾರುಗಳು ಬರದಂತೆ ಆದುವು.

*೨೮. ನಿಜಾಮಶಾಹನು ಚಾಂದಬೀಬಿಯೊಂದಿಗೆ ದ್ವೇಷ ಸಾಧಿಸಿದ್ದ. ಬಹಾದ್ದೂರಶಹನು ಕೋಟೆಯ ಮೇಲೆ ಹಲ್ಲೆ ಮಾಡಿದ್ದು ಮತ್ತು ಆದಿಲಶಹನು ರಫೀಉದ್ದೀನ ಶಿರಾಜಿಯನ್ನು ಉಭಯತರನ್ನು ಒಂದುಗೂಡಿಸಲು ಪ್ರಯತ್ನ ಮಾಡಲು ಕಳಿಸಿದ್ದು.*

ನಿಜಾಮಶಾಹನ ಅಮೀರ ಜನರು ತಮ್ಮ ಧಣಿಯಾದ ಇಬ್ರಾಹಿಮ ನಿಜಾಮಶಾಹನನ್ನು ಮೃತ್ಯು ಮುಖದಲ್ಲಿ ನೂಕಿ ಕೊಂದು, ತಾವು ಆಕಾಶದಲ್ಲಿಯ ಮೋಡಗಳ ಹಾಗೆ ಚದುರಿ ಅಹ್ಮದನಗರಕ್ಕೆ ಓಡಿ ಹೋದರು. ಹಾಗೆ ಆದ ನಂತರ ಅವರುಗಳಲ್ಲಿಯ ಇಬ್ರಾಹಿಮ ನಿಜಾಮಶಹನ ಮುಖ್ಯ ವಕೀಲನಾಗಿದ್ದ ಮಂಜೂಖಾನ ಎಂಬುವನು ಕೋಟೆ ಹಾಗೂ ದ್ರವ್ಯ ಭಂಡಾರವನ್ನು ಕಬಳಿಸಿ, ತನ್ನ ಜನರನ್ನೇ ರಾಜಧಾನಿಯ ಪ್ರತಿಯೊಂದು ಕೆಲಸಕ್ಕೆ ನಿಯಮಿಸಿ. ಪ್ರಬಲನಾದನು.[೧] ಆಗ ಉಳಿದ ಅಮೀರ ಜನರು ಮಂಜೂಖಾನನ ವಿರುದ್ಧ ಸಿಡಿದೆದ್ದು ದ್ವೇಷ ಸಾಧಿಸಹತ್ತಿದರು. ಕೊನೆಗೆ ದಖನಿ ಹಾಗೂ ಹಬಶೀ ಅಮೀರ ಜನರ ಮಧ್ಯೆ ಯುದ್ಧವೆ ಪ್ರಾರಂಭವಾಯಿತು. ಹಬಶೀ ಜನರು ಪ್ರಬಲರಾದರು. ಮಗ ಮಂಜೂಖಾನನು ಗಾಬರಿಯಾಗಿ ಕೋಟೆಯಲ್ಲಿಯೆ ಆಶ್ರಯ ಪಡೆದು ಇರ ಹತ್ತಿದನು. ಆ ದಿನಗಳಲ್ಲಿ ದೆಹಲಿಯ ಅಕಬರ ಬಾದಶಹನ ಮಗ ಮುರಾದನೆಂಬವನು, ತಂದೆಯಿಂದ ಅಹಮದಾಬಾದ ನಗರವನ್ನು ಕೈ-ವಶಮಾಡಿಕೊಂಡು ಗುಜರಾಥದಲ್ಲಿಯೇ ಇರುತ್ತಿದ್ದನು. ಮಂಜೂಖಾನನು ಭಯಭೀತನಾಗಿ ಮುರಾದನಿಗೆ ಪತ್ರ ಬರೆದು ಅಹಮ್ಮದ ನಗರದ ಕೋಟೆಯನ್ನು ಆತನಿಗೆ ವಶಮಾಡಿಕೊಡುವುದಾಗಿಯೂ ಆತನು ಅಲ್ಲಿಯವರೆಗೂ ಬಂದು ಆತನಿಗೆ ಸಹಾಯಮಾಡಬೇಕೆಂದೂ ವಿನಂತಿಸಿಕೊಂಡನು. ಮುರಾದನು ಇಂಥ ಅವಕಾಶಕ್ಕಾಗಿಯೇ ಕಾಯುತ್ತ ಕುಳಿತಿದ್ದನು. ವಿನಂತಿ ಪತ್ರ ಮುಟ್ಟುತ್ತಿದ್ದಂತೆ, ಇದುವೆ ಅಲಭ್ಯ ಲಾಭದ ಸಮಯವೆಂದು ತಿಳಿದು, ತಕ್ಷಣ ಹತ್ಯಾರಬಂದ್ ಸೈನಿಕರೊಂದಿಗೆ ದಕ್ಷಿಣ ದೇಶದ ಮೇಲೆ ಏರಿ ಬಂದನು.[೨] ಅಹಮದನಗರದ ಸನ್ನಿಧಿಯಲ್ಲೆ ಬಂದು ಮುಟ್ಟಿದನು.[೩] ಮತ್ತು ಕೋಟೆಯನ್ನು ತನ್ನ ವಶಕ್ಕೆ ಕೊಡಬೇಕೆಂಬ ಬೇಡಿಕೆಯನ್ನು ಮಂಜೂಖಾನನ ಮುಂದಿಟ್ಟನು. ರಾಜಕುಮಾರ ಮುರಾದನು ಈ ಪ್ರದೇಶದ ಶತ್ರುಗಳ ಮೇಲೆ ಹಾಗೂ ಹಬಶೀ ಜನರ ಮೇಲೆ ಪ್ರಬಲನಾಗಿದ್ದನು. ಆದ್ದರಿಂದ ರಾಜಕುಮಾರನು ಬರುವ ಪೂರ್ವದಲ್ಲಿ

---

೧. ಶಾಹ ತಾಹಿರನ ಮಗ ಅಹಮದನನ್ನು ದೌಲತ್ತಾಬಾದಿನಿಂದ ಕರೆತಂದು ನಿಜಾಮಶಾಹಿ ಸಿಂಹಾಸನದ ಮೇಲೆ ದಿನಾಂಕ ೧೦, ಜಿಲ್ಹೇಜ ೧೦೦೩ (೬, ಅಗಸ್ಟ ೧೫೯೬) ರಂದು ಮಿಯಾ ಮಂಜೂನು ಕೂಡಿಸಿದನು. - ಬ್ರಿಗ್ಸ . ಫೆ. III ಪು. ೨೬೩.

2. "The Prince Morad left Ahmedabad on 20th Aban, 40th Julus (2nd Nov 1595) and rested at Broach. He left Broach for the Deccan on 22nd Khurdad, 40th Julus (1st May 1596)", Akbarnama. Elliat & Dowson P. 92

3. "On the 23rd of Rubee-oos-Sany of 1004 AH (16th Dec 1595), Prince was at the fort of Chand, 30 Kos from Ahmadnagar,..... On the 8th Dai (19th Dec 1595) the army encamped half kos from the city........." Akbarnama -E.D.P. 92-93.

- 'ಮಂಜೂಖಾನನು ಶುಕ್ರವಾರ ರಬಿಯುಲ್ ಆವಲ (೨೩ ಡಿಸೆಂಬರ್ ೧೫೯೫) ರಂದು ತನ್ನ ಸೈನ್ಯ ಸಹಿತ ಬೀಡ ದತ್ತ ಓಡಿದನು-ಬುರ್ಹಾನೆ-ಮಾಸೀರ್ ಪು. ೨೮೬.
- "ಮರಾಠೀ ಅನುವಾದ-ರಬೀಲು ಸನೀ ೨೯ ಶನಿವಾರ ದಿನ (೩೦ ಡಿಶೆಂಬರ್ ೧೫೯೫) ಅಭಂಗಖಾನನು ಅಹಮದನಗರ ಕೋಟೆಯ ಹತ್ತಿರ ಹೋಗಿ ಹಲ್ಲೆ ಮಾಡಿದನು. ಪು. ೨೯೩. ಅದೇ
- "ರಜ್ಜಬದ ಪ್ರಾರಂಭದಲ್ಲಿ ಶುಕ್ರವಾರ ರಾತ್ರಿ (೧/೨ ಮಾರ್ಚ್ ೧೫೯೬) ಕೋಟೆಯ ಬುಡದಲ್ಲಿ ಸುರಂಗ ಹಚ್ಚಿದರು. ಪುಟ ೨೯೯ ಅದೇ.

ಮಂಜೂಖಾನನು ಆತನ ಮುಂದೆ ನಿರುಪಾಯನಾಗಿದ್ದನು. ಕೋಟೆಯನ್ನು ಕೊಡಲು ಸಾಧ್ಯವಿಲ್ಲವೆಂದು ಮನಾಯಿ ಮಾಡಹತ್ತಿದನು. ಆದರೆ ಹಿಂದುಗಳ ಸೈನ್ಯದ ಎದುರು ಧೈರ್ಯ ಸಾಲದಾಯಿತು. ಅಲ್ಲಿ ಇರುವುದೂ ಅಸಾಧ್ಯವಾಯಿತು. ಆತ ತನಗೆ ಸಾಧ್ಯವಾದಷ್ಟು, ಶಕ್ತ್ಯಾನುಸಾರ ದ್ರವ್ಯವನ್ನು ಸಂಗ್ರಹಿಸಿ, ಕೋಟೆಯ ವ್ಯವಸ್ಥೆಯನ್ನು ಮಾಡಿ, ಕೋಟೆಯ ಮೇಲೆ ಉಸ್ತುವಾರಿಗಾಗಿ ವಿಶ್ವಾಸಿಕ ಜನರನ್ನು ನಿಯಮಿಸಿ ಮಂಜೂಖಾನನು ಕೋಟೆ ಹೊರಗೆ ಬಂದನು. ಆಗ ರಾಜುಕುಮಾರ ಮುರಾದನು ಕೋಟೆಯ ಮೇಲೆ ದಾಳಿ ಮಾಡಲು ಆಜ್ಞೆ ಮಾಡಿದನು.

ಕೋಟೆಯಲ್ಲಿ ವಿಚಾರವಂತಳು, ಶೂರಳು, ಧೀರಳೂ. ಆದ ಚಾಂದಬೀಬಿ ಸುಲ್ತಾನಳು ಇದ್ದಳು. ಅವಳು ಕೋಟೆಯಲ್ಲಿದ್ದ ಸೈನ್ಯವನ್ನು ತೆಗೆದುಕೊಂಡು ಮೊಗಲರನ್ನು ಶಿಕ್ಷಿಸಲು ಮುಂದಾದಳು. ಮಂಜೂಖಾನನು ಕೂಡ ಚಾಂದಬೀಬಿಗೆ ಸಹಾಯಮಾಡಲು ಒಳಗಿನ ಜನರನ್ನು ಕೂಡಿಸಲು ಪ್ರಯತ್ನ ಮಾಡಿದನಾದರೂ, ಅವನನ್ನು ಸೇರದ ಅಮೀರ ಜನರು ಅವನ ಪ್ರಯತ್ನಕ್ಕೆ ಮುಂದಾಗಲಿಲ್ಲ. ನಿರುಪಾಯನಾಗಿ ಇಬ್ರಾಹಿಮ ಆದಿಲಶಹನಿಗೆ ಪತ್ರ ಬರೆದು ಸಹಾಯ ನೀಡಲು ಭಿನ್ನವಿಸಿಕೊಂಡನು. ಚಾಂದಬೀಬಿ ಕೂಡ ಸಹಾಯಕ್ಕಾಗಿ ಇಬ್ರಾಹಿಮ ಆದಿಲಶಹನಿಗೆ ಪತ್ರ ಬರೆದಳು. ಆಗ ಆದಿಲಶಹನು ಆಪ್ತವಿಷಯತನ ಹಾಗೂ ಶರೀರ ಸಂಬಂಧದ ನ್ಯಾಯಯುತ ದೃಷ್ಟಿಯಿಂದ ವಿಚಾರ ಮಾಡಿ ಯುದ್ಧ ಸೈನ್ಯವನ್ನು ಕಳಿಸಿದನು. ನಿಜಾಮಶಹನ ಕಡೆಯ ಅಮೀರಜನರು ತಮ್ಮತಮ್ಮಲ್ಲೆ ಬಡಿದಾಡುತ್ತ ತಮ್ಮ ಒಡೆಯನೊಂದಿಗೆ ಮೋಸ ಹಾಗೂ ವೈರತ್ವವನ್ನು ಕಟ್ಟಿಕೊಂಡು ಕೆಲಸ ಕಾರ್ಯಗಳನ್ನೆಲ್ಲ ಕೆಡಿಸುತ್ತಿದ್ದರು. ಅವರಿಗೆಲ್ಲ ಆದಿಲಶಹನು ಬುದ್ಧಿಮಾತು ಹೇಳಿ ಚಾಂದಬೀಬಿ ಸುಲ್ತಾನಗಳಿಗೆ ಸಹಾಯ ಮಾಡಲು ಹೇಳಿ ಕಳಿಸಿದನು. ರಾಜಧಾನಿಯನ್ನು ಭದ್ರಗೊಳಿಸಿ ಸಂರಕ್ಷಣೆ ಮಾಡಬೇಕೆಂದೂ ಹೇಳಿದನು.

ಅಲ್ಲಿ ಅರಮನೆಯ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದ ಆತಿತುದ್ದೌಲಾ ಸುಹೀಲಖಾನ ಎಂಬ ಒಬ್ಬ ಶೂರ ಖೋಜಾ ಇದ್ದನು. ಯುದ್ಧ ಪ್ರಸಂಗಗಳಲ್ಲಿ ಕೂಡ ಆ ಮೊದಲಿನ ಹಲವಾರು ವೀರ ಯೋಧರನ್ನು ಮರೆಸುವಂತಿದ್ದನು. ಸಾಕಷ್ಟು ಸಲ ಯುದ್ಧಗಳಲ್ಲಿ ಭಾಗವಹಿಸಿ ವಿಜಯಿಯೂ ಆಗಿದ್ದನು. ಆತ ಈ ಅಮೀರಜನರ ಮೇಲೆ ಮೋಸ-ಕಪಟಗಳಿಂದ ಬೇಸತ್ತಿದ್ದನು. ಒಬ್ಬ ಅಮೀರನಂತೂ ಅವನ ಏರಿಕೆಯನ್ನು ಸಹಿಸದೆ, ಅವನನ್ನು ಬಾದಶಹರು ಸೆರೆಮನೆಗೆ ಅಟ್ಟುತ್ತಾರೆಂದು ಬೆದರಿಕೆಯನ್ನು ಹಾಕಿದ್ದನು. ಅದರಿಂದಾಗಿ ಆತನು ಅರಮನೆಯಿಂದ ದೂರ ಹೋಗಿ ಶಾಹದುರ್ಗದಲ್ಲಿದ್ದು ಆಗೀಗ ಬಾದಶಹನ ಕಡೆಗೆ ಬಂದು ಹೋಗುತ್ತಿದ್ದನು. ಅಂಥ ಸಮಯದಲ್ಲಿಯೇ ಈ ಅಹಮದನಗರದ ರಾಜಕಾರಣ ಎದ್ದು ನಿಂತಿತ್ತು. ಆದಿಲಶಹನು ರಫೀಯುದ್ದೀನ ಶಿರಾಜಿಯನ್ನು ಕರೆದು, “ಇಲ್ಲಿಯ ಕೆಲಸಕ್ಕೆ ಆತನ ಮಗನನ್ನು ನಿಯಮಿಸಿ. ಅಹಮದನಗರಕ್ಕೆ ಹೋಗಲು ಹೇಳಿದನು. ಅಲ್ಲಿ ಅಮೀರ ಜನರು ಪರಸ್ಪರ ದ್ವೇಷಿಸುತ್ತ ಯುದ್ಧ ಪ್ರಸಂಗವನ್ನು ನಿರ್ಮಿಸಿದ್ದಾರೆ. ತಮ್ಮ ಒಡೆಯರ ವಿರುದ್ಧ ಬಂಡೆದ್ದು ರಾಜ್ಯದ ಕಲ್ಯಾಣವನ್ನು ಮರೆತಿದ್ದಾರೆ. ಆದ್ದರಿಂದ ನೀನು ಹೋಗಿ ಅಮೀರ ಜನರನ್ನು ಕಂಡು, ಅವರನ್ನು ಸರಿದಾರಿಗೆ ತರಬೇಕು. ಆಗ ಅವರು ಅರ್ಥಮಾಡಿಕೊಂಡು ಶತ್ರುಗಳನ್ನು ಶಿಕ್ಷಿಸುವ ಪ್ರಯತ್ನ ಮಾಡುತ್ತಾರೆ. ಮೊದಲು ಶಾಹದುರ್ಗಕ್ಕೆ ಹೋಗಿ ಸುಹೀಲಖಾನನ್ನು ಭೆಟ್ಟಿಯಾಗು. ಅವನ ಮನಸ್ಸಿನಲ್ಲಿದ್ದ ಸಂಶಯವನ್ನು ದೂರ ಮಾಡು” ಎಂದು ಎರಡು ಕೆಲಸಗಳನ್ನು ಮಾಡಿಕೊಂಡು ಬರಲು ಹೇಳಿದನು. ಈ ವಿಷಯದಲ್ಲಿ ರಫೀಯುದ್ದೀನನು ಹೀಗೆ ಹೇಳುತ್ತಾನೆ.

“ಆ ಸಮಯದಲ್ಲಿ ಸರಕಾರದ ಕಡೆಯಿಂದ ಬಹಳಷ್ಟು ಕೆಲಸಗಳನ್ನು ನನಗೆ ವಹಿಸಲಾಗಿತ್ತು. ವಿಜಾಪುರ ನಗರದ ವ್ಯವಸ್ಥೆ ನನ್ನ ಕಡೆಗಿತ್ತು. ಇಬ್ರಾಹಿಮನ ಆದಿಲಶಹನ ಮಗನಾದ ಫತೇಖಾನನ

ಪ್ರಧಾನ ಪೇಶವಾಯಿಯ ಕೆಲಸದ ಮುಖ್ಯ ಮೊಹರು ನನ್ನ ಕಡೆಗೆಯೇ ಇತ್ತು. ೨೦೦ ಆನೆಗಳು, ೭೦೦ ಒಂಟೆಗಳು ಮತ್ತು ೧೫೦೦ ಕುದುರೆಗಳು ನನ್ನ ವಶದಲ್ಲಿದ್ದವು. ಆನೆ, ಒಂಟೆ ಮತ್ತು ಕುದುರೆಗಳ ಪಾಲನೆಗಾಗಿ ದೊಡ್ಡ-ದೊಡ್ಡ ಗ್ರಾಮಗಳ ಒಂದು ಲಕ್ಷ ಹೊನ್ನುಗಳ ವಸೂಲಾಗುತ್ತಿತ್ತು. ರಾಜ್ಯದ ವಿವಿಧ ಭಾಗಗಳಿಂದ ಮಾಮಲೇದಾರರು, ಕಾರಕೂನಜನರು ಕಳಿಸುತ್ತಿದ್ದ ಅರ್ಜಿಗಳು, ವಿನಂತಿ ಪತ್ರಗಳನ್ನು ಪ್ರಭುಗಳ ಹತ್ತಿರ ಕಳಿಸುತ್ತಿದ್ದರು. ಆ ಕಾಗದ ಮತ್ತು ಬೇರೆ-ಬೇರೆ ಸ್ಥಳಗಳಿಂದ ತರುತ್ತಿದ್ದ ಬೇಹುಗಾರರ ಸುದ್ದಿ ಪತ್ರಗಳೆಲ್ಲ, ನನ್ನ ಹತ್ತಿರ ಜಮಾ ಆಗುತ್ತಿದ್ದುವು. ನಾನು ಅವುಗಳನ್ನು ಪ್ರಭುಗಳ ಹತ್ತಿರ ತೆಗೆದುಕೊಂಡು ಹೋಗಿ ಓದಿ ಹೇಳುತ್ತಿದ್ದೆ. ಸರಕಾರದ ಆಜ್ಞೆಯಿಂದಲೇ ಮಾಡುತ್ತಿದ್ದ ಈ ಎಲ್ಲ ಕೆಲಸಗಳನ್ನು ನಾನು ನನ್ನ ಸೇವಕರಲ್ಲಿಯ ಒಬ್ಬ ಸೇವಕನಿಗೆ ವಹಿಸಿ ರಾಯಭಾರಕ್ಕೆ ಹೊರಟೆನು. ನಾನು ಶಹಾದುರ್ಗದ ಹತ್ತಿರ ಹೋಗುತ್ತಿದ್ದಂತೆ, ಎರಡೂವರೆ ಕೋಸ ಅಂತರದಲ್ಲಿ ಸುಹೇಲಖಾನನು ಬಂದು ನನ್ನನ್ನು ಎದುರುಗೊಂಡನು. ನಾವಿಬ್ಬರೂ ಪರಸ್ಪರ ಭೆಟ್ಟಿಯಾದೆವು. ಸುಹೀಲಖಾನನ ವಾಡೆಗೆ ಹೋಗಿ ಅವನು ವಾಸಿಸುತ್ತಿದ್ದ ಸ್ಥಳವನ್ನು ನೋಡಿದೆನು. ಅದು ತುಂಬ ಎತ್ತರವಾಗಿಯೂ ವಿಸ್ತೀರ್ಣವಾಗಿಯೂ ಇತ್ತು. ದೊಡ್ಡ-ದೊಡ್ಡ ಕಟ್ಟಡಗಳ ಸಮುಚ್ಚಯವಾಗಿತ್ತು. ಆ ಅರಮನೆಯ ಕೆಳಗಡೆ ಒಂದು ಮಂಟಪವನ್ನು ನಿಲ್ಲಿಸಿದ್ದರು. ಅಲ್ಲಿ ಬಾದಶಾಹಿಗಳ ಥಾಟಿನಂತೆ ನೆಲಹಾಸುಗೆಯನ್ನು ಹಾಸಿ ಶೋಭೆಗೊಳಿಸಿದ್ದರು. ಅದರಲ್ಲಿ ಸರದಾರರು, ಶಿಪಾಯಿಗಳು, ಶಿಷ್ಯಗಣ ಹಾಗೂ ಖಿದಮತಗಾರರು ಕಾಯಿದೆಯಂತೆ ಶ್ರೇಷ್ಠ ಅಮೀರ ಜನರು ಕುಳಿತು, ಮತ್ತೆ ಕೆಲವರು ನಿಂತು, ತಂತಮ್ಮ ಕೆಲಸಗಳಲ್ಲಿ ಮಗ್ನನಾಗಿದ್ದರು. ಆತನ ಆಸ್ಥಾನವು ತುಂಬ ಪ್ರಭಾವಶಾಲಿಯೂ ತೇಜಸ್ವಿಯಾಗಿಯೂ ಇದ್ದುದನ್ನು ಕಂಡೆನು. ಸುಹೀಲಖಾನನು ತಾಜೀಮ-ತವಾಜುಗಳನ್ನು ತೆಗೆದುಕೊಳ್ಳುವಲ್ಲಿ ತಿಲಮಾತ್ರವೂ ಅನುಮಾನ ಮಾಡಲಿಲ್ಲ.

ಹಾಗೆ ಆತನ ಕಚೇರಿಯಲ್ಲಿ ಸಮಾರಂಭವು ನಡೆದ ಅನಂತರ ನಾನು ಅವನನ್ನು ವಿಚಾರಿಸುತ್ತ, ನಾನು ಬಂದ ವಿಚಾರವನ್ನು ತಿಳಿಸುತ್ತ ತಂದ ವಿಷಯವನ್ನು ಸವಿಸ್ತಾರವಾಗಿ ಹೇಳಿದೆನು. ಯಾವ ಯಾವ ಕಾರಣಗಳಿಂದ ಸುಹೀಲಖಾನನು ಭಯಗೊಂಡಿದ್ದನೋ ಅವುಗಳೆನ್ನೆಲ್ಲ ನನಗೆ ಸವಿಸ್ತಾರವಾಗಿ ಹೇಳಿದನು. ಆಗ ನಾನು ಪೃಥ್ವೀಪತಿ ಬಾದಶಹನು ಅಪ್ಪಣೆ ಕೊಡಿಸಿದಂತೆ ಅದರಂತೆ, ಕರುಣಾಯುಕ್ತವಾದ ಅನುಗ್ರಹದ ಮಾತುಗಳನ್ನು ಹೇಳಿ, ಆತನ ಮನದಲ್ಲಿಯ ಸಂಶಯವನ್ನು ನಿವಾರಿಸಿದೆನು. ಸ್ನೇಹ ಸಂಪಾದಿಸುವ ಎಷ್ಟೋ ವಿಷಯಗಳನ್ನು ಆತನಿಗೆ ಹೇಳುತ್ತ ನಾನು "ಪೃಥ್ವೀಪತಿ ಬಾದಶಹನು ನಿನ್ನ ಮೇಲೆ ತುಂಬ ಅನುಗ್ರಹ ಮಾಡಿದ್ದಾರೆ. ನಿನ್ನ ಬಗ್ಗೆ ಅವರಿಗೆ ತುಂಬ ಸಂತೋಷವಿದೆ. ನಿನ್ನನ್ನು ಅವರು ತುಂಬ ನೆನೆಸುತ್ತಾರೆ. ಬಾದಶಹರು ನಿನ್ನ ಕುರಿತು ಬಹಳ ಹೊಗಳುತ್ತಾರೆ. ನಿನ್ನ ಧೈರ್ಯ ಹಾಗೂ ಪ್ರಭಾವಗಳಿಂದಾಗಿ ಮೊಗಲರು, ನೀನಿಲ್ಲಿ ಇರುವವರೆಗೂ ಯುದ್ಧಮಾಡುವ ಸಾಮರ್ಥ್ಯವೂ ಅವರಲ್ಲಿಲ್ಲ: ಮೊಗಲರು ಆ ಸರಹದ್ದಿನಲ್ಲಿ ಯುದ್ಧವನ್ನು ಮಾಡಲೇ ಇಲ್ಲ. ಆದರೆ ಆತನು ಮನಸ್ಸನ್ನು ತೆಗೆದದ್ದರಿಂದ ಈ ಭಾಗದಲ್ಲಿ ಮೊಗಲರು ಕಿರುಕುಳ ಕೊಡಲು ಪ್ರಾರಂಭಿಸಿದ್ದರು. ಹೀಗೆ ನಾನು ಬಾದಶಹನ ಅನುಗ್ರಹದ ಮಾತುಗಳನ್ನು ಸುಹೀಲಖಾನನಿಗೆ ಮನಃಪೂರ್ವಕವಾಗಿ ಹೇಳಿದಾಗ, ಕೇಳಿದ ಸುಹೀಲಖಾನನು ತುಂಬ ಸಂತೋಷಪಟ್ಟ ನಂತರ ಅವನು 'ನಾನು ಸರಕಾರದ ಸೇವಕನು ನನಗೂ ಕೂಡ ಬಾದಶಹರ ಸೇವೆಯನ್ನು ಮಾಡುವ ಅದಮ್ಯ ಇಚ್ಛೆ ಇದೆ' ಎಂದು ಹೇಳಿದನು. ಈ ವಿಷಯವನ್ನೆಲ್ಲ ನಾನು ಬಂದು ಸಾದ್ಯಂತವಾಗಿ ಪ್ರಭುಗಳಿಗೆ ತಿಳಿಸಿದೆನು. ಅವರು ಅನುಗ್ರಹಪೂರ್ವಕವಾಗಿ ಪ್ರತಿಯಾಗಿ ಸುಹೀಲಖಾನನಿಗೆ ವಸ್ತ್ರಗಳನ್ನು ಮತ್ತು ಮುತ್ತು

ರತ್ನಗಳ ಕಾಣಿಕೆಗಳನ್ನು ಕಳಿಸುತ್ತ, ಆಜ್ಞಾಪತ್ರವನ್ನೂ ಕಳಿಸಿದರು. ಹೀಗೆ ಸುಹೀಲಖಾನ ಹಾಗೂ ಬಾದಶಹರ ಮಧ್ಯ ಮತ್ತೆ ಸಖ್ಯ ಬೆಳೆಯಿತು. ಆಗ ನಾನು ಸುಹೀಲಖಾನನ ಸ್ನೇಹ ಸಂಪಾದಿಸುವ ಕಾರ್ಯದಿಂದ ಮುಕ್ತನಾದೆನು.

ಅನಂತರ ನಾನು ಅಹಮದನಗರದತ್ತ ಪ್ರಯಾಣ ಬೆಳೆಸಿದೆನು. ನಿಜಾಮಶಹನ ಪ್ರದೇಶಗಳಲ್ಲಿ ಕಾಲಿಡುತ್ತಿದ್ದಂತೆ, ಅದೆಲ್ಲ ನಾಶವಾದದ್ದನ್ನು, ಭೂಮಿಯೆಲ್ಲ ಬಿತ್ತದೆ ಬಿದ್ದುದನ್ನು, ರೈತಾಪಿ ಜನರು, ಸಾರ್ವಜನಿಕರು ಹಳ್ಳಿಗಳನ್ನು ತ್ಯಜಿಸಿ ಗುಳೇ ಹೋದದ್ದನ್ನು ಕಂಡೆನು. ಕಂಡ ಜನರೆಲ್ಲ ಭಯಭೀತರಾದುದನ್ನು ಗಮನಿಸಿದೆನು. ಹಳ್ಳಿಗ್ರಾಮಗಳಲ್ಲಿ ಗೋಡೆಗಳು, ಹೆಂಚುಗಳು ಮಾತ್ರ ಉಳಿದಿದ್ದುವು. ಅದು ಬಿಟ್ಟು ಬೇರೆ ಏನೂ ನನ್ನ ದೃಷ್ಟಿಗೆ ಬೀಳಲಿಲ್ಲ. ಅಮೀರ ಜನರೆಲ್ಲ ತಮ್ಮ ಧಣಿಯ ಬಗ್ಗೆ ಮುಖ ತಿರುವಿ ದ್ವೇಷ ಸಾಧಿಸುತ್ತ ಬದಲಾಗಿದ್ದಾರೆ. ಅಭಂಗಖಾನ ಹಬಶೀಯು ಬೇರೆ ಹಬಶೀಗಳನ್ನು ದಖನಿಗಳನ್ನು ಸೇರಿಸಿ ೨೦,೦೦೦ ಸಶಸ್ತ್ರ ಸೈನ್ಯದೊಂದಿಗೆ ಕೋಟೆಯ ಹೊರಗಡೆಗೆ ನಿಂತಿದ್ದಾನೆ. ಕೋಟೆ ಒಳಗಿನ ಚಾಂದಬೀಬಿ ಹಾಗೂ ಕೈಲಾಸವಾಸಿ ಇಬ್ರಾಹಿಮ ನಿಜಾಮಶಾಹನ ಮಗ ಬಹಾದುದುರಶಾಹನೊಂದಿಗೆ ಮೋಸದಿಂದ ತೊಂದರೆ ಕೊಡುತ್ತಿದ್ದಾರೆ. ಜುನ್ನರದ ಕೋಟೆಯಲ್ಲಿ ಬಂಧಿಯಾಗಿದ್ದ ಬಹಾದ್ದುರ ಶಾಹನನ್ನು ಚಾಂದಬೀಬಿಯೇ ಮುಕ್ತಮಾಡಿ, ಅಹಮದನಗಕ್ಕೆ ಕರೆತಂದು ಸಿಂಹಾಸನದ ಮೇಲೆ ಕೂಡಿಸಿದ್ದಳು. ಈಗ ಇವರಿಬ್ಬರ ವಿರುದ್ಧ ಅಭಂಗಖಾನನು ಸೆಟೆದು ನಿಂತು, ಕೋಟೆಯ ಮೇಲೆ ಹಲ್ಲೆಯನ್ನು ಪ್ರಾರಂಭಿಸಿ, ತಿನ್ನುಣ್ಣುವ ಯಾವ ಪದಾರ್ಥವೂ ತನ್ನ ಒಡೆಯರಿಗೆ ಸಿಗದಂತೆ ವ್ಯವಸ್ಥೆ ಮಾಡಿದ್ದನು, ಇಂಥ ಸಮಯದಲ್ಲಿ ನಾನು ಅಲ್ಲಿಗೆ ಹೋಗಿ ಮುಟ್ಟಿದಾಗ, ಅಭಂಗಖಾನನು ಕೆಲವು ಸರದಾರರೊಂದಿಗೆ ಸೈನ್ಯವನ್ನು ತೆಗೆದುಕೊಂಡು. ನನ್ನ ಎದುರಿಗೆ ಬಂದನು. ಆತ ತನ್ನ ಸೈನ್ಯದೊಂದಿಗೆ ನನ್ನೆದುರಿಗೆ ಬಂದಿದ್ದು 'ತನ್ನಲ್ಲಿ ಇಷ್ಟೊಂದು ಸೈನ್ಯ ಸನ್ನದ್ಧವಾಗಿದೆ' ಎಂದು ತಿಳಿಸುವ ಯುಕ್ತಿಯಾಗಿತ್ತು. ಆ ದಿನ ಅಭಂಗಖಾನನ ಊಟ ಪಾಟಗಳು, ಮಲಗುವುದು ಇತ್ಯಾದಿಗಲು ದಂಡಿನಲ್ಲಿಯೇ ಆದುವು. ಮರುದಿನ ಅಲ್ಲಿಯ ಜನರಲ್ಲಿಯ ಸೈಯ್ಯದ ಅಲಿ ತಾರಿಖೀ ಎಂಬವನೊಬ್ಬನು ಸರನೋಬತನ ಜೊತೆಗೆ ಚಾಂದಬೀಬಿಯ ಕಡೆಯಿಂದ ಬಂದನು. ಆತನು ನನ್ನನ್ನು ಕೋಟೆಯ ಒಳಗಡೆಗೆ ಕರೆದುಕೊಂಡು ಹೋಗಿ ಬಾಹದ್ದೂರಶಾಹನೊಂದಿಗೆ ಭೆಟ್ಟಿ ಮಾಡಿಸಿದನು. ಅಲ್ಲಿದ್ದ ಬಹುತೇಕ ಸರದಾರರು ಸೈನಿಕರು ಗಾಬರಿಯಾಗಿದ್ದರು. ಅಭಂಗಖಾನ ಹಾಗೂ ಅನೇಕ ಅಮೀರ ಜನರ ದುರ್ನಡತೆಯ ಬಗ್ಗೆ ಅವರು ಹೇಳಿದ ಸಾವಿರಾರು ವಿಷಯಗಳನ್ನು ನಾನು ಅವರ ಮುಖದಿಂದ ಕೇಳಿದೆನು.

### ೭೯. *ರಫೀಉದ್ದೀನನ ಪ್ರಯತ್ನದಿಂದ ಬಹಾದೂರಶಾಹ ಹಾಗೂ ಅಮೀರ ಜನರ ಮಧ್ಯ ಸ್ನೇಹ ಏರ್ಪಟದ್ದು.*

ಅನಂತರ ನಾನು ಒಬ್ಬರೊಬ್ಬರ ಮಧ್ಯದ ವಿರಸವನ್ನು ಹೋಗಲಾಡಿಸಲು ಬಹಳ ಪ್ರಯತ್ನ ಮಾಡಿದೆನು. ಆ ಅಮೀರ ಜನರ ಪಂಗಡಗಳಲ್ಲಿಯ ಜನರಿಗೆ ಆದಿಲಶಹನ ಅಂಜಿಕೆಯನ್ನು ಹಾಕಿದೆನು. ನೀವು ಹೀಗೆಲ್ಲ ವರ್ತಿಸಿದರೆ ಆದಿಲಶಹನು ನಿಮ್ಮನ್ನು ಶಿಕ್ಷಿಸುತ್ತಾನೆಂದು ಹೇಳಿದೆನು. ಅವರಿಗೆ ದೊಡ್ಡ ಅಂಜಿಕೆಯನ್ನೆ ಹಾಕಿ ಸರಿದಾರಿಗೆ ತಂದೆನು. ಒಬ್ಬರೊಬ್ಬರಲ್ಲಿ ಸ್ನೇಹದ ಕರಾರನ್ನು ಹಾಕಿದೆನು. ಭೆಟ್ಟಿಯ ದಿನ ಬಹಾದ್ದೂರ ಶಹನು ಕೋಟೆಯ ಬುರುಜಿನ ಮೇಲೆ ಕುಳಿತಿದ್ದನು. ಅಮೀರಜನರು ಕೋಟೆಯ ಬುರುಜಿನ ಕೆಳಗಡೆ ಬಂದು ಎಲ್ಲರೂ ಬಾದಶಹನಿಗೆ ಸಲಾಮು ಮಾಡಿದರು. ರಾತ್ರಿಯಾಗಿತ್ತಾದ್ದರಿಂದ

ಅಂದಿನ ಕೆಲಸವನ್ನು ಅಷ್ಟಕ್ಕೆಯೆ ನಿಲ್ಲಿಸಿದೆನು. ಮರುದಿನ ದಂಡು ಪ್ರದೇಶದಲ್ಲಿ ಬಂದು ನಿಜಾಮಶಹನ ಖಾಸ ಡೇರೆಯನ್ನು ಹಾಕಿ, ಅಲ್ಲೊಂದು ಆಸನವನ್ನು ಸಿದ್ಧ ಪಡಿಸಿದೆನು. ಅದರ ಮೇಲೆ ರಾಜನ ಟೊಂಕಪಟ್ಟಿಯನ್ನು, ಮುಕುಟವನ್ನು ಇಟ್ಟೆನು. ದಂಡಿನಲ್ಲಿಯ ಅಮೀರ ಜನರು, ಸರದಾರರು ಒಬ್ಬೊಬ್ಬರಾಗಿ ಬಂದು ಆ ಸಿಂಹಾಸನ ಎದುರಿಗೆ ನಿಂತು ಸಲಾಮು ಮಾಡಿ ವಸ್ತ್ರಗಳನ್ನು ಕಾಣಿಕೆಗಳನ್ನು ಸ್ವೀಕರಿಸಿದರು.[೧] ಇದರಿಂದಾಗಿ ದಂಡಿನಲ್ಲಿಯ ಎಲ್ಲ ಜನರಿಗೂ ಹಾಗೂ ಕೋಟೆಯ ಮೇಲಿರುವ ಜನರಿಗೂ ತುಂಬ ಸಂತೋಷವಾಯಿತು. ಎಲ್ಲರೂ ಸಂತೋಷದ ವಾದ್ಯಗಳನ್ನು ಬಾರಿಸಿದರು. ಆದಿಲಶಹನ ಹೆಸರಿನಲ್ಲಿ ಎಲ್ಲರೂ ಆಶೀರ್ವದಿಸಿದರು. ಆದಿಲಶಹನ ರಾಜ್ಯ, ಐಶ್ವರ್ಯ ಹಾಗೂ ಕಲ್ಯಾಣಗಳು ನಿರಂತರವಾಗಿರಲಿ ಎಂದು ಎಲ್ಲರೂ ಹಾರೈಸಿದರು. ಯಾಕೆಂದರೆ, ಆದಿಲಶಹನ ಪ್ರಯತ್ನದಿಂದಲೇ ಈ ವಿಘ್ನವು ಮತ್ತು ಈ ಅರಿಷ್ಟವು ಕಳೆದಿತ್ತು. ಎಲ್ಲರಿಗೂ ಸುಖ ಹಾಗೂ ವಿಶ್ರಾಂತಿಗಳು ಲಭಿಸಿದ್ದುವು. ಕೋಟೆಯಲ್ಲಿಯ ಜನರು ಹೊರಗೆ ಬಂದು ದಂಡಿನಲ್ಲಿ ಹೋಗಿ ಬಹಳ ದಿನಗಳಿಂದ ಭೆಟ್ಟಿಯಾಗದ ಜನರನ್ನು ಕಂಡು ಆಪ್ತವಿಷಯಗಳನ್ನು ಮಾತನಾಡಿ, ತಮ್ಮ ಸುಖ-ದುಃಖಗಳನ್ನು ಹಂಚಿಕೊಂಡು ಸಂತೋಷಪಟ್ಟರು. ಎಲ್ಲೆಡೆ ಅಲ್ಲಾನ ಸ್ಮರಣೆ ಮಾಡಿದರು. ದಂಡಿನಲ್ಲಿಯ ಶಿಪಾಯಿ ಜನರೂ ಕೋಟೆಯ ಒಳಗಡೆ ಹೋಗಿ ಬಹಾದ್ದೂರಶಹನ ಸೇವೆ ಸಲ್ಲಿಸಲು ವಿನಂತಿಮಾಡಿಕೊಂಡು ಕೆಲಸ ಮಾಡಹತ್ತಿದರು. ಕೆಲಸ-ಕಾರ್ಯಗಳ ಉಸ್ತುವಾರಿಗೆ ಹೊಸಬರು ಬಂದರು. ಆ ಹೊಸ ಅಧಿಕಾರಿಗಳು ರಾಜಧಾನಿಯ ಹಾಗೂ ದಂಡಿನ ಕೆಲಸಗಳನ್ನು ಸುವ್ಯವಸ್ಥಿತವಾಗಿ ನೋಡಿಕೊಳ್ಳುತ್ತಿದ್ದರು. ಹಾಗೆ ಬಾದಶಹನು ಅಪ್ಪಣೆಯನ್ನು ಮಾಡಿದ್ದನು. ಅದರಿಂದಾಗಿ ಬಹಳದಿನ ವ್ಯವಸ್ಥಿತವಾಗಿ ರಾಜ್ಯ ಕಾರಭಾರವು ನಡೆಯಿತು. ಎಲ್ಲರಿಗೂ ಈಗ, ಇನ್ನು ಮುಂದೆ ತಮಗೆ ಒಳ್ಳೆಯದಾಗುತ್ತದೆ ಎಂದು ಆಶೆಪಟ್ಟರು.

### ೪೦. *ಮತ್ತೆ ದಗಾಬಾಜಿಗಳಿಂದ ಸ್ನೇಹದ ಒಪ್ಪಂದ ಮುರಿದು ನಾನಾವಿಧವಾದ ಸಂಕಟಗಳನ್ನು ಸೃಷ್ಟಿಸಿದ್ದು :*

ಇಂಥ ಸಮಯದಲ್ಲಿ ಮೋಸ-ಕಪಟಗಳಿಂದ ವರ್ತಿಸುವ ಜನರಿಗೆ ಈ ರೀತಿಯ ಸ್ನೇಹದಿಂದ ಯಾವ ಉಪಯೋಗವು ಕಂಡು ಬಾರದಂತಾಯಿತು. ಆಗ ಬಂಡುಖೋರರು ದಂಗೆ ಮಾಡುತ್ತ, ವೈರವನ್ನು ಸಾಧಿಸ ತೊಡಗಿದರು. ಮೂರು-ನಾಲ್ಕು ಜನ ಮಾಮಲೇದಾರರು ಮುಂತಾದವರನ್ನು ಹಿಡಿದು ಬಂಧಿಸಿಟ್ಟರು. ಆದರಿಂದಾಗಿ ಶಾಂತವಾಗಿದ್ದ ಸಂಕಟ ಪ್ರಸಂಗಗಳು ಮತ್ತೆ ಉದ್ಭವಿಸಿದುವು. ಹುರಿಮಾಡಿದ ದಾರವು ಮತ್ತೆ ಹಿಂಜಿದ ಹತ್ತಿಯಂತೆ ಬಿಚ್ಚತೊಡಗಿತು. ಮೋಸ-ಕಪಟಗಳಿಂದ ಬಜಾರವು ತುಂಬಿತ್ತು. ಕೋಟೆಯೊಳಗಿನ ಜನರೂ ವೈರತ್ವ ಸಾಧಿಸುವಲ್ಲಿ ಹಿಂದೆ ಬೀಳಲಿಲ್ಲ. ದಂಡಿನ ಜನರು ಕೋಟೆಯ ಸಿಬ್ಬಂದಿಯನ್ನು ತಮ್ಮ ಠಕ್ಕ ವಿದ್ಯೆಗಳಿಂದ, ನಾನಾ ರೀತಿಯ ಆಶೆ-ಅಮಿಷಗಳನ್ನು ಒಡ್ಡಿ ತಮತ್ತ ಸೆಳೆದುಕೊಂಡು, ಅವರೊಂದಿಗೆ ಒಪ್ಪಂದ ಮಾಡಿಕೊಂಡರು. 'ದಂಡಿನಲ್ಲಿಯ ಅಮೀರ ಜನರು ಸಿದ್ಧರಾಗಿ ಯಾವತ್ತೂ ಕೋಟೆಯ ಒಳಗಡೆ ಬಂದು ಕೋಟೆಯನ್ನು ಕೈವಶ ಮಾಡಿಕೊಳ್ಳಲು ಬರುತ್ತಾರೆ ಆಗ ನೀವು ಯುದ್ಧ ಮಾಡದೆ ಕೋಟೆಯ ಮೇಲಿನ ತೋಫುಗಳನ್ನು, ಬಂದೂಕುಗಳನ್ನು ಹಾರಿಸಬಾರದು' ಎಂದು ಕರಾರು

---

೧. ಬಹಾದ್ದುರಶಹನನ್ನು ನಿಜಾಮಶಾಹೀ ಗಾದಿಯಮೇಲೆ ಇಸ್ಫಂದರ ತಿಂಗಳ ೧೧ ರಿಂದ ೧೭ರ ಮಧ್ಯ ಅಂದರೆ ೨೦ರಿಂದ ೨೬ ಫೆಬ್ರವರಿ ೧೫೯೭ರ ಮಧ್ಯ ಸಿಂಹಾಸನಾರೂಢನನ್ನಾಗಿ (ತಖ್ತನಸೀನ) ಮಾಡಲಾಯಿತು. - ಅಕ್ಬರನಾಮಾ. ಇಲಿಯಟ್ ಡೌಸನ್ ಪುಟ ೯೪.

ಹಾಕಿದರು. ಹಾಗೆ ೨೦,೦೦೦ ಸೈನ್ಯದೊಂದಿಗೆ ಕೋಟೆಯಲ್ಲಿ ನುಗ್ಗಿದಾಗ ಈ ಜನ ಕರಾರಿನಂತೆ ಪ್ರತಿರೋಧ ತೋರಿಸದೆ ಸ್ವಸ್ಥವಾಗಿ ಕುಳಿತು ಬಿಟ್ಟರು. ಆದರೆ ಕೋಟೆಯೊಳಗಿದ್ದ ಇತರ ಕೆಲವು ಪ್ರಾಮಾಣಿಕ ಅಮೀರರು ಸರದಾರರು, ತಮ್ಮ ಶೂರತ್ವದ ಮೇಲೆ ಟೊಂಕ ಕಟ್ಟಿ ಶತ್ರುವಿನ ಮೇಲೆ ಹಲ್ಲೆ ಮಾಡಿದರು. ಕೋಟೆಯ ಬಾಗಿಲ ಎದುರಿಗೆ ಪ್ರಳಯಾಗ್ನಿಯ ಜ್ವಾಲೆ ಏಳ ಹತ್ತಿತ್ತು. ಚಿಕ್ಕ ವಯದ ಬಹಾದ್ದುರಶಹನು ಈ ಪ್ರಳಯದ ಸಮಯದಲ್ಲಿ ಕೋಟೆಯ ಬುರುಜಿನ ಮೇಲೆ ಏರಿ, ಯುದ್ಧದಲ್ಲಿಯ ತನ್ನ ಕಡೆಯ ಸೈನಿಕರಿಗೆ ಧೈರ್ಯ ಕೊಡುತ್ತ ಬಕ್ಷೀಸು-ಕಾಣಿಕೆಗಳನ್ನು ಸಾರಿದನು. ಆ ಸಮಯದಲ್ಲಿ ದಂಡಿನ ಜನರು ಮೂರು-ನಾಲ್ಕು ಬಾಣಗಳನ್ನು ಬಹಾದ್ದೂರಶಹನತ್ತ ಬಿಟ್ಟರು. ಅವುಗಳಲ್ಲಿಯ ಒಂದು ಬಾಣ ಬಹಾದ್ದೂರಶಹನ ಮೇಲಿನ ಛತ್ರಿಯ ಕೋಲಿಗೆ ಬಡಿದು ಒಂದು ಕಡೆಗೆ ಹೋಗಿ ಬಿತ್ತು. ಅದು ನೆಲದಲ್ಲಿ ಒಂದು ಬೀತ(?)ದಷ್ಟು ಒಳನೆಟ್ಟಿತು. ಇನ್ನೊಂದು ಬಾಣ 'ಖಾನ್ಯಾಸರ' ಎಂದರೆ ಬಾಹಾದ್ದೂರಶಹನ ಹಿಂದೆ ನಿಂತಿದ್ದ ಜನಾನಖಾನೆಯ ಒಬ್ಬ 'ಖೋಜಾ'ನ ಶಿರದಲ್ಲಿ ನಟ್ಟು ಪಾರಾಗಿ ಹೋಯಿತು. ಆತ ಅಲ್ಲಿಯೆ ಬಿದ್ದು ಪ್ರಾಣ ಬಿಟ್ಟನು. ಮತ್ತೆ ಇಬ್ಬರು. ಮೂವರು ಬಾಣಗಳಿಂದ ಗಾಯಗೊಂಡರು. ಇಂಥ ಗದ್ದಲದಲ್ಲಿ ಬಹಾದ್ದೂರಶಹನು ಸೈನಿಕರನ್ನು ಹುರಿದುಂಬಿಸುತ್ತಿದ್ದನು. ಅನೇಕ ತೋಪುಗಳು ಬಂದೂಕಗಳು ಕೋಟೆ ಮೇಲಿನಿಂದ ಹಾರಿದಾಗ, ಶತ್ರುಗಳ ಕಡೆಯ ಅನೇಕ ಜನರು ಸತ್ತರು. ಉಳಿದವರು ಹಿಂದೆಸರಿದು ದಂಡಿನ ಸ್ಥಳಕ್ಕೆ ಹೋದರು. ಹೀಗೆ ಮೋಸ-ಫಿತೂರಿಯ ಜನರಿಂದಾಗಿ ಪ್ರಳಯಾಗ್ನಿ ಪ್ರದೀಪ್ತವಾಗಿ ಒಪ್ಪಂದದ ಪ್ರಯತ್ನ ಸಂಪೂರ್ಣವಾಗಿ ವ್ಯರ್ಥವಾಯಿತು.

### ೪೧. *ಮತ್ತೆ ಒಪ್ಪಂದ ಪುನಃ ಕೆಟ್ಟದ್ದು.*

ಪುನಃ ನಾನು ಆಲಸ್ಯ ಮಾಡದೆ ಪ್ರಯತ್ನದಲ್ಲಿದ್ದೆ ತಮ್ಮ ಧಣಿಯ ವಿರುದ್ಧ ಬಿದ್ದು ಯಾರು ಆಹಾರಧಾನ್ಯಗಳನ್ನು ಕೋಟೆಗೆ ಪೂರೈಸದಂತೆ ಮಾಡಿ, ತಮ್ಮ ರಾಜನ ಪ್ರಾಣವನ್ನೇ ತೆಗೆಯುವ ಸಂಚು ಮಾಡಿದ್ದರೋ ಆ ಗುಂಪನ್ನು ಭೆಟ್ಟಿಯಾಗಿ ಅವರಿಗೆ ಬೆದರಿಕೆ ಹಾಕಿ, ನೀತಿ ಬೋಧೆಯನ್ನು ಮಾಡಿದೆನು "ಸುಲ್ತಾನ ಮುರಾದ ಬಾದಶಹನು ತನ್ನ ಅಸಂಖ್ಯ ಸೈನ್ಯದೊಂದಿಗೆ, ಬಂದು, ನಿಮ್ಮ ಎದುರಿಗೆಯೇ ಕುಳಿತು ಸಮಯಕ್ಕಾಗಿ ಕಾಯುತ್ತಿದ್ದಾನೆ. ನಿಮ್ಮಿಂದ ಈ ತರದ ಅಯೋಗ್ಯ, ಬುದ್ಧಿಯೇ ಇಲ್ಲದೆ ಮಾಡುತ್ತಿರುವ ಕೆಲಸದಿಂದ ಬಹುಶಃ ಇನ್ನು ಕೆಲವೆ ದಿನಗಳಲ್ಲಿ ಸುಲ್ತಾನ ಮುರಾದನು ನಿಮ್ಮ ರಾಜ್ಯವನ್ನು ತೆಗೆದುಕೊಂಡು ಬಿಡುತ್ತಾನೆಂದು ನನಗೆ ಖಾತ್ರಿಯಾಗಿದೆ. ಸುಮ್ಮನೆ ಯಾಕೆ ನಿಮ್ಮ ಕಾಲಮೇಲೆ ಕೊಡಲಿಯನ್ನು ಹಾಕಿಕೊಳ್ಳುತ್ತಿದ್ದೀರಿ? ಧಣಿಯ ಮನೆಯನ್ನು ಯಾಕೆ ಮುಳುಗಿಸುತ್ತಿರುವಿರಿ? ವ್ಯರ್ಥವಾಗಿ ಯಾಕೆ ಅಪಕೀರ್ತಿಯ, ಕೃತಘ್ನತೆಯ ಕಲೆಯನ್ನು ನಿಮ್ಮ ಮುಖದ ಮೇಲೆ ಹಚ್ಚಿಕೊಳ್ಳುತ್ತೀರಿ? ಈ ಅಪಯಶವು ನಿಮ್ಮ ಮೇಲೆ ಬಹಳ ಕಾಲದವರೆಗೆ ಉಳಿಯುತ್ತದೆ" ಹೀಗೆಲ್ಲಾ ಅನೇಕ ಸಂಗತಿಗಳನ್ನು ತಿಳಿ ಹೇಳಿ, ಪುನಃ ಅವರನ್ನು ಸರಿದಾರಿಗೆ ತಂದು, ಒಪ್ಪಂದ ಮಾಡಿಸಿದೆನು. ಆದರೆ ಈ ವೇಳೆಯಲ್ಲಿ ಚಾಂದಬೀಬಿ ಸುಲ್ತಾನಳು ಒಪ್ಪಂದ ಮಾಡಿಕೊಳ್ಳುವುದಕ್ಕೆ ಒಪ್ಪಲಿಲ್ಲ. ಅವಳು ಹೇಳಿದಳು " ಅಭಂಗಖಾನ ಹಬಶೀಯು ನನ್ನ ತಂದೆ ಹಣಕೊಟ್ಟು ಖರೀದಿಸಿದ ನೌಕರನಾಗಿದ್ದಾನೆ. ನನ್ನ ತಂದೆಯ ಹಾಗೂ ನನ್ನ ಅಣ್ಣನ ಕಾಲದಲ್ಲಿ ಅವನ ದುರ್ನಡತೆ ಕೃತಘ್ನತೆಗಳಿಂದ ಮೇಲಿಂದ ಮೇಲೆ ಜೇಲಿನಲ್ಲಿ ಬಿದ್ದಾಗ, ನನ್ನ ಸಣ್ಣ ತಮ್ಮ ಸತ್ತ ನಂತರ ನಾನೆ ಅವನನ್ನು ಜೇಲಿನಿಂದ ಬಿಡುಗಡೆ ಮಾಡಿದೆ. ಅವನ ಯೋಗ್ಯತೆಯನ್ನು ಎತ್ತರಿಸಿ ದೊಡ್ಡವನನ್ನಾಗಿ ಮಾಡಿದೆ. ಅದರ ಉಪಕಾರದ ಫಲ ಹೀಗೆ ಮಾಡಿ ತೋರಿಸುತ್ತ ನನ್ನ ಜೀವವನ್ನೇ ತೆಗೆದುಕೊಳ್ಳುವ

ಸಂಕಲ್ಪವನ್ನು ಮಾಡಿದ್ದಾನೆ. ನಮ್ಮನ್ನು ಕೊಲ್ಲುವುದನ್ನು ಬಿಟ್ಟು ಅವನ ಮನಸ್ಸಿನಲ್ಲಿ ಬೇರೆ ಯಾವ ಭಾವವೂ ಇಲ್ಲ. ಈ ಸೈನ್ಯ ಸಿದ್ಧ ಮಾಡುವುದು, ಈ ದಂಗೆ ಮಾಡುವುದು ಇವುಗಳೆಲ್ಲ ಖಚಿತವಾಗಿ ನನ್ನ ಜೀವವನ್ನೇ ತೆಗೆದುಕೊಳ್ಳುವುದಕ್ಕಾಗಿ ಇದೆ. ಹೀಗಿದ್ದಾಗ ನಾನು ಹೇಗೆ ವಿಶ್ವಾಸವಿಟ್ಟು ಅವನೊಂದಿಗೆ ಒಪ್ಪಂದಕ್ಕೆ ಅನುಮತಿಯನ್ನು ನೀಡಲಿ? ಇಂಥ ಪವಿತ್ರ ರಮಜಾನ ತಿಂಗಳಲ್ಲಿ (ಮೇ ೧೫೯೬) ಕೋಟೆಯಮೇಲೆ ಹಲ್ಲೆ ಮಾಡಿ ನಾವು ತಿನ್ನುಣ್ಣುವ ಆಹಾರ ಧಾನ್ಯಗಳ ಮಾರ್ಗವನ್ನು ತಡೆಹಿಡಿದಿದ್ದಾನೆ. ಈ ತಿಂಗಳಲ್ಲಿ ಮಾಂಸ ಹೇಗಿರುತ್ತದೆ ಎಂಬುದನ್ನು ಕಣ್ಣುಗಳಿಂದ ನೋಡಲು ಕೂಡ ಆಗಿಲ್ಲ. ಇನ್ನು ತಿನ್ನಲು ಎಲ್ಲಿಂದ ಸಿಗಬೇಕು? ಇನ್ನು ಬೇರೆ ತಿನ್ನುವ ಪದಾರ್ಥಗಳು ದೊರೆಯುವ ಮಾತಂತೂ ದೂರ ಉಳಿಯಿತು.

ರಮಜಾನ ರೋಜಾ ಬಿಡಲು (ಅಂದರೆ ದಿನಪೂರ್ತಿ ಉಪವಾಸವಿದ್ದು ಸಾಯಂಕಾಲ ಬಾಯಲ್ಲಿ ಏನಾದರೊಂದು ಹಾಕಿಕೊಂಡು ರೋಜಾ ಬಿಡುವ ಪದ್ಧತಿ) ಅವರವರ ಅನುಕೂಲ-ಯೋಗ್ಯತಾನುಸಾರ ಅಡುಗೆ ಮಾಡಿ ಉಣ್ಣುತ್ತಾರೆ. ಹಾಗೆ ರೋಜಾ ಬಿಡಲು ಆ ಕೋಟೆಯಲ್ಲಿ ಉಪ್ಪು ನೀರು ತುಂಬ ಕೆಟ್ಟದ್ದಾಗಿದೆ. ಅದನ್ನೆ ಕುಡಿದು, ಹಳೆಯ ಧಾನ್ಯ, ಹಗೆಯಲ್ಲಿ ಹಾಕಿದ್ದನ್ನೆ ತಿನ್ನುವಂಥ ಪ್ರಸಂಗವನ್ನು ನಮ್ಮ ಮೇಲೆ ತಂದಿದ್ದಾನೆ. ಅಂಥದ್ದರಲ್ಲಿ ಅವನೊಂದಿಗೆ ಒಪ್ಪಂದ ಮಾಡಿಕೊಂಡು ಸಖ್ಯದಿಂದ ಇರುವಲ್ಲಿ ನನ್ನ ಮನಸ್ಸಾದರೂ ಹೇಗೆ ಒಪ್ಪೀತು. ಸಧ್ಯ ಬೇಕಿದ್ದರೆ ಮೊಗಲ ಜನರ ಸಾಮಂತರಾಗಿ ಅವರ ಆಜ್ಞೆಯಂತೆ ಇದ್ದೇನು. ಆದರೆ ಈ ಕೃತಘ್ನ ನೌಕರನ ಒಡೆತನ ಒಪ್ಪಲು ಸಾಧ್ಯವಿಲ್ಲ" ಎಂಬುದಾಗಿ ಚಾಂದಬೀಬಿ ಹೇಳಿದ್ದಳು. ಅವಳು ಇದನ್ನೆಲ್ಲ ಶಾಹ ಮುರಾದ ರಾಜಕುಮಾರನಿಗೆ ಬರೆದು ಕೂಡ ತಿಳಿಸಿದ್ದಳು. ಆ ಶಾಹ ಮುರಾದ ರಾಜಕುಮಾರನು ಈ ವಿಷಯವನ್ನು ಸವಿಸ್ತಾರವಾಗಿ ತನ್ನ ತಂದೆ ಅಕಬರ ಬಾದಶಹನಿಗೆ ವಿನಂತಿ ಪತ್ರದಲ್ಲಿ ಬರೆದು ತಿಳಿಸಿದ್ದನು. ಅಕಬರ ಬಾದಶಹನು ತನ್ನ ಮಗನ ಪತ್ರವನ್ನು ಅವಲೋಕನ ಮಾಡಿ, ಆ ಪತ್ರವನ್ನು ಸುಲ್ತಾನ ಸಲೀಮನ ಮುಂದೆ, ಅಂದರೆ (ಆತನೆ ಮುಂದಿನ ದಿನಗಳಲ್ಲಿ ಸುಲ್ತಾನಶಾಹಾ ಜಹಾಂಗೀರ ಬಾದಶಹ ಎಂಬ ಹೆಸರಿನಿಂದ ಪ್ರಸಿದ್ಧನಾದವನು) ಕಳಿಸಿದನು. ಅಕಬರ ಬಾದಶಹನು 'ಇದು ನನ್ನ ದೈವದ ಉತ್ಕರ್ಷ ಕಾಲವಿದೆ. ಅಂತೆಯೇ ಇಂಥ ಕೆಲಸಗಳು ಯಶಸ್ವಿಯಾಗುತ್ತಿವೆ. ಎಲ್ಲೆಲ್ಲಿ ಹೋಗುತ್ತಾರೋ ಅಲ್ಲೆಲ್ಲ ಬೇಕಾದದ್ದನ್ನು ಮಾಡುತ್ತಾರೆ. ನಮ್ಮ ಸೈನ್ಯ ಹೋದರೆ ಸಾಕು ಕೆಲಸ ತನ್ನಿಂದ ತಾನೆ ಆಗುತ್ತದೆ. ಮನಸ್ಸಿನಲ್ಲಿ ಏನಿದೆಯೋ ಅದುವೆ ಕೈ ಜೋಡಿಸಿಕೊಂಡು ಎದುರು ಬಂದು ನಿಲ್ಲುತ್ತದೆ' ಎಂದು ಹೇಳಿದ್ದನು.[2] ಇಷ್ಟೆಲ್ಲ ಆದರೂ ನಾನು ಬಹಳ ಪ್ರಯತ್ನ ಮಾಡಿ ಚಾಂದಬೀಬಿಯನ್ನು ಅಭಂಗಖಾನನ

---

2. "They offered to elevate Bahadur. Son of the son of Burhanu-l- Mulk to the Throne, with the title of Nizamul-Mulk, and as a vassal of the imperial throne. The territory of Ahmednagar was to be confirmed to him and the province of Birar given up to the Emperor..... Notwithstanding the desperate state of the place, and the scarcity of provisions, these unworthy terms were agreed to, and a treaty was concluded on the 17th Isfandarmuz (26 February 1596)". - Akbar-Nama, Elliat & Dowson P. 94.

ರಜ್ಜಬ ೧೦ ರವಿವಾರ (೧೬ ಮಾರ್ಚ್ ೧೫೯೬) ರಂದು ಚಾಂದಬೀಬಿಯ ರಾಯಭಾರಿಯು ಮಾತನಾಡಲು ಖಾನ-ಇ-ಖಾನನ್ ಹಾಗು ಮುರಾದನ ಕಡೆಗೆ ಹೋದನು. - ಬುರ್ಹಾನೆ-ಮಾಸಿರ್, ಪು. ೩೦೫. ಮರಾಠಿ ಭಾಷಾಂತರದಲ್ಲಿ - ರಜ್ಜಬ -೨೩ (೨೩ ಮಾರ್ಚ ೧೫೯೬) ರಂದು ಯುದ್ಧ ನಿಂತಿತು. ಪುಟ ೩೦೮ ಅದೇ.

ಜೊತೆ ಒಪ್ಪಂದಕ್ಕೆ ಒಪ್ಪಿಸಿದ್ದನು[೩] ಪ್ರತಿಯೊಬ್ಬ ಅಮೀರನಿಗೂ ಸ್ನೇಹದಿಂದ ಇರಲು ವಸ್ತ್ರಗಳನ್ನು ಕೋಟೆಯಿಂದ ಹೊರಗೆ ಕಳಿಸಲಾಯಿತು. ಅದರಿಂದಾಗಿ ಕೆಲವು ದಿನಗಳವರೆಗೆ ಈ ದಂಗೆ, ಯುದ್ಧ ಶಾಂತವಾಯಿತು. ಅಮೀರ ಜನರು ಶಿಪಾಯಿಗಳು ಪರಸ್ಪರ ಕೋಟೆಯಿಂದ ಹೊರಬಂದು ದಂಡಿನಲ್ಲಿ ಇರಹತ್ತಿದರು. ಅದಕ್ಕಾಗಿ ಎಲ್ಲರೂ ಒಕ್ಕಟ್ಟಾಗಿ ಮೊಗಲರ ದಂಡಿನ ಮೇಲೆ ಏರಿ ಹೋಗಿ ಸುಲ್ತಾನ ಮುರಾದನನ್ನು ದಕ್ಷಿಣ ದೇಶದಿಂದ ಹೊರದಬ್ಬಬೇಕೆಂದು ಎಲ್ಲರಿಗೂ ವಸ್ತ್ರಗಳನ್ನು ಕಳಿಸಲಾಯಿತು.

### ೪೨. ಒಪ್ಪಂದ ಮಾಡಿಸಲು ಸಾಧ್ಯವಾಗದ್ದಕ್ಕೆ ನಿರಾಶನಾಗಿ ರಫೀಉದ್ದೀನನು ತಿರುಗಿ ವಿಜಾಪುರಕ್ಕೆ ಬಂದುದು.

ಇಂಥ ಸಮಯದಲ್ಲಿ ಬಹಾದ್ದೂರಶಾಹನ ಖಾಸಾ ಮಂಡಳಿಯ ಒಬ್ಬ ಗೃಹಸ್ಥನು, ಒಂದು ದಿನ ಆಕಸ್ಮಾತ್ತಾಗಿ ಮಹಡಿಯ ಮೇಲೆ ನಿಂತು ನೋಡಿದಾಗ, ಕೋಟೆಯ ಮೇಲೆ ಬಹಳಷ್ಟು ಶಿಪಾಯಿಗಳು ಒಂದೆಡೆ ಸೇರಿ ಕುಳಿತಿದ್ದು ಕಂಡಿತು. ಅವರ ಮುಂದೆ ಬಹಳಷ್ಟು ದ್ರವ್ಯರಾಶಿ ಇತ್ತು. ಆ ಜನರು ದ್ರವ್ಯವನ್ನು ತಮ್ಮ ತಮ್ಮೊಳಗೆ ಹಂಚಿಕೊಳ್ಳುತ್ತಿದ್ದುದನ್ನು ಕಂಡನು. ಈ ವಿಷಯವನ್ನು ಆತನು ಚಾಂದಬೀಬಿ ಸುಲ್ತಾನಳಿಗೆ ಹೇಳಿದನು. ಆಗ ಚಾಂದಬೀಬಿಯು ಈ ವಿಷಯದ ಬಗ್ಗೆ ಕೂಲಂಕಷವಾಗಿ ತಿಳಿಯಲು ಬೇಹುಗಾರರನ್ನು ಕಳಿಸಿದಳು. ಆಗ ಗೊತ್ತಾದ ವಿಷಯವೆಂದರೆ ಅಭಂಗಖಾನನು ಬಹಳಷ್ಟು ದ್ರವ್ಯವನ್ನು ಕಳಿಸಿ, ಕೋಟೆಯೊಳಗಿನ ಸೈನಿಕರನ್ನು ತನ್ನತ್ತ ಸೆಳೆದಿದ್ದನು. ಪ್ರಸಂಗ ಬಂದಾಗ ಅವರು ಕೋಟೆಯ ಬಾಗಿಲನ್ನು ತೆರೆದು ಅಭಂಗಖಾನನ ಮತ್ತು ಅವನ ಜನರನ್ನು ಒಳಗೆ ಬಿಡಬೇಕು. ಅಂದರೆ ಅವರು ಬಂದು ಕೋಟೆಯನ್ನು ಕೈವಶ ಮಾಡಿಕೊಳ್ಳಬೇಕು ಎಂದು ಕರಾರು ನಿರ್ಧಾರವಾಗಿತ್ತು. ಆದ್ದರಿಂದ ಈ ದ್ರವ್ಯವನ್ನು ಈ ಜನರಿಗೆ ಕಳಿಸಲಾಗಿತ್ತು. ಅದನ್ನು ಅವರು ಹಂಚಿಕೊಳ್ಳುತ್ತಿದ್ದರು. ಬೇಹುಗಾರರು ಈ ಸುದ್ದಿಯನ್ನು ತಂದರು. ಬೇಹುಗಾರರಿಂದ, ಅಭಂಗಖಾನನ ಯುಕ್ತಿ ಚಾಂದಬೀಬಿಗೆ ತಿಳಿದಿದೆ ಎಂಬ ವಿಷಯ ದ್ರವ್ಯ ಹಂಚಿಕೊಂಡ ಶಿಪಾಯಿಗಳಿಗೆ, ತಿಳಿಯಿತು. ಅವರು ಭಯಭೀತರಾಗಿ ಒಬ್ಬನನ್ನು ಅಭಂಗಖಾನನ ಹತ್ತಿರ ಕಳಿಸಿ, ಸವಿಸ್ತಾರವಾಗಿ ವಿಷಯವನ್ನು ತಿಳಿಸಿದರು. ಅದರೊಂದಿಗೆ ಅಭಂಗಖಾನನಿಗೆ ಮರುದಿನ ಬೆಳಗ್ಗೆಯೆ ಕೋಟೆಯನ್ನು ಪ್ರವೇಶಿಸುವುದು ಸೂಕ್ತವೆಂದೂ ತಿಳಿಸಿದರು. ಇಲ್ಲವಾದರೆ ಶಿಪಾಯಿಗಳ ಪ್ರಾಣಕ್ಕೆ ಸಂಚಕಾರ ಬರುತ್ತದೆಂದು ತಿಳಿಸಿ, ಬಾಗಿಲನ್ನು ತೆರೆದಿಡುವುದಾಗಿಯೂ ಹೇಳಿ ಕಳಿಸಿದರು. ಅದರಂತೆ ಮರುದಿನ ಪ್ರಾತಃಕಾಲದಲ್ಲಿ ಅಭಂಗಖಾನನು ತನ್ನ ಸೈನ್ಯದೊಂದಿಗೆ ಸನ್ನದ್ಧನಾಗಿ ಕೋಟೆಯ ಬಾಗಿಲ ಎದುರಿಗೆ ಬಂದು, ಬಾಗಿಲು ತೆರೆಯುವುದನ್ನು ಕಾಯುತ್ತ ನಿಂತನು. ಕೋಟೆಯ ಒಳಗಿನ ಸೈನಿಕರು ಕೋಟೆಯ ಬಾಗಿಲನ್ನು ಮುಚ್ಚಿ ಚಿಲಕ ಹಾಕಿ ದೊಡ್ಡ ಬಂಡೆಗಲ್ಲುಗಳನ್ನು ಹಚ್ಚಿದ್ದರು. ಕಿರಿಯ ಬಾಗಿಲನ್ನು ತೆರೆದಿಟ್ಟಿದ್ದರು. ಆ ಕಿರಿಯ ಬಾಗಿಲಿನಿಂದ ಹೋಗಿ ಬರುತ್ತಿದ್ದರು. ಅದೇ ದಾರಿಯಿಂದ ಒಳಬರಲು ಅಭಂಗಖಾನನಿಗೆ ಆ ಶಿಪಾಯಿಗಳು ಹೇಳಿ ಕಳಿಸಿದರು. ಈ ಸಮಯದಲ್ಲಿಯೇ ಚಾಂದಬೀಬಿ ಸುಲ್ತಾನಳು ಶಿಪಾಯಿ/ಸೈನಿಕರಲ್ಲಿಯ ಕೆಲವು ಸರದಾರರನ್ನು ಸೈನಿಕರನ್ನು ಒಡೆದುಕೊಂಡು ಅವರಿಗೆ ವಸ್ತುಸ್ಥಿತಿಯನ್ನು ತಿಳಿಸಿ, ಎಲ್ಲರಿಗೂ ರಾಜ್ಯ ಹಾಗೂ ಕೋಟೆ ಸಂರಕ್ಷಣೆಗಾಗಿ ಆಜ್ಞೆ ಮಾಡಿದಳು.

---

೩. ಇದರಲ್ಲಿಯ ಅಜಭಂಗಖಾನ ಹಾಗು ಫಿರಿಸ್ತಾನಲ್ಲಿಯ ನೇಹಂಗಖಾನ ಇಬ್ಬರೂ ಒಂದೇ ಎಂದು ಕಾಣುತ್ತದೆ.

ಕೋಟೆಯ ಸಿಬ್ಬಂದಿಯಲ್ಲಿಯ ಕೆಲವು ಸೈನಿಕರು ಅವಳ ಆಜ್ಞೆಯನ್ನು ಮಾನ್ಯ ಮಾಡಿದರು ಮತ್ತು ಅಲ್ಲಿಯೇ ಶಸ್ತ್ರಧಾರಿಗಳಾಗಿ ಬಂದರು. ಇನ್ನು ಕೆಲವರು ಅವಳ ಆಜ್ಞೆಯನ್ನು ಧಿಕ್ಕರಿಸಿ ಹಟದಿಂದ ಅಲ್ಲಿಯೇ ನಿಂತರು. ಇಷ್ಟರಲ್ಲಿ ಅಭಂಗಖಾನನು ಅಂಬರಜೀವ ಎಂಬ ಹಬಶೀ ನೌಕರನನ್ನು ಕೋಟೆಯ ಒಳಗಿನ ಸುದ್ದಿಯನ್ನು ತಿಳಿದುಕೊಳ್ಳಲು ಕಳಿಸಿದನು. ಅವನು ಒಳ ಬರುವಷ್ಟರಲ್ಲಿ ಚಾಂದಬೀಬಿ ಸುಲ್ತಾನಳ ಪರವಾಗಿದ್ದ ಸೈನಿಕರೂ ಹಾಗೂ ವಿರುದ್ಧವಾಗಿದ್ದ ಸೈನಿಕರ ಮಧ್ಯ ಯುದ್ಧ ಪ್ರಾರಂಭವಾಗಿತ್ತು. ಬಾಣಗಳನ್ನು ಬಂದೂಕುಗಳನ್ನು ಒಬ್ಬರೊಬ್ಬರ ಮೇಲೆ ಬಿಡುತ್ತಿದ್ದರು. ಕೊನೆಗೆ ವಿರೋಧ ಮಾಡುತ್ತಿದ್ದ ಸೈನಿಕರು ಚಾಂದಬೀಬಿಯ ಪರವಾಗಿದ್ದ ಸೈನಿಕರ ಎದುರು ನಿಲ್ಲಲಾಗದೆ ಕಿರುಬಾಗಿಲಿನಿಂದ ಹೊರಬಿದ್ದು ಓಡಿ ಹೋದರು. ಒಳಗಿನ ಸುದ್ಧಿಯನ್ನು ತರಲು ಬಂದ ಅಂಬರಜೀವನು ಬಂದ ಬಾಗಿಲಿನಿಂದಲೇ ಹೊರ ಬಂದು ನೋಡಿದಾಗ, ಕೋಟೆಯ ಮೇಲೆ 'ಮಸನದ-ಅಲೀ' ಎಂಬ ಪದವಿಯನ್ನು ಪಡೆದ ಮಲಿಕ ಸಂದಲ ಬರೀದನೆಂಬವನು, ೨೦೦ ಸೈನಿಕರೊಂದಿಗೆ ನಿಂತು ತಾಮ್ರದ ಗುಂಡುಗಳನ್ನು ಹಾರಿಸಿದನು. ಅದಕ್ಕೆ 'ಹುಕೆ' ಎನ್ನುತ್ತಾರೆ. ತಾಮ್ರದ ಗುಂಡುಗಳನ್ನು ಮಾಡಿ ಅದರಲ್ಲಿ ಮದ್ದನ್ನು ತುಂಬಿ ಹಾರಿಸಿದಾಗ ಆ ಒಂದು ಗುಂಡು ಬಹಳ ತುಂಡಗಳಾಗಿ ಸಾಕಷ್ಟು ಜನರ ಜೀವವನ್ನು ತೆಗೆದುಕೊಳ್ಳುತ್ತವೆ. ಅಭಂಗಖಾನನ ದಂಡಿನ ಮೇಲೆ ಹಾಗೂ ಕೋಟೆಯಲ್ಲಿದ್ದ ವಿರೋಧಿ ಗುಂಪಿನ ಮೇಲೆ ತಾಮ್ರದ ಗುಂಡಿನ ಸುರಿಮಳೆಗೈಲಾಯಿತು. ಒಳಗೆ ಏನು ನಡೆದಿದೆ ಎಂದು ನೋಡಲು ಬಂದ ಅಂಬರನಿಗೆ, ಇದನ್ನು ಕಂಡು ಮುಂದೆ ಹೋಗಲೂ ಧೈರ್ಯ ಸಾಲದಾಯಿತು. ನಿಂತ ಸ್ಥಳದಲ್ಲಿ ಇನ್ನೊಂದು ಕ್ಷಣ ನಿಲ್ಲಲೂ ಆಗದಂಥ ಪ್ರಸಂಗವನ್ನು ಕಂಡನು. ಯಾಕೆಂದರೆ ಕೋಟೆಯ ಮೇಲೆ ಬೆಂಕಿಯ ಮಳೆಯೇ ಬೀಳುತ್ತಿತ್ತು. ಆದ್ದರಿಂದ ನಿರುಪಾಯನಾಗಿ ಹಿಂದೆ ತಿರುಗಿದನು. ಆಗ ಅಭಂಗಖಾನನು ಧೈರ್ಯದಿಂದ ಕುದುರೆಯನ್ನು ಇಳಿದು ಕೋಟೆಯ ಬಾಗಿಲದ ಹತ್ತಿರ ನಿಂತಿದ್ದನು. ಇನ್ನು ಒಳಗೆ ಹೋಗಬೇಕು ಎಂದುಕೊಂಡಾಗ ಕೋಟೆಯ ಮೇಲಿನಿಂದ ತೋಫಿನ ಗುಂಡುಗಳು ಬಂದು ಅಭಂಗಖಾನನ ಹತ್ತಿರದ ಅನೇಕ ಜನರನ್ನು ಕೊಲೆ ಮಾಡಿ ಅವರನ್ನು ಧೂಳಿನಲ್ಲಿ ತುಂಬಿದುವು. ಅಭಂಗಖಾನನಿಗೆ ಅಲ್ಲಿ ನಿಲ್ಲಲು ಮತ್ತು ಕೋಟೆಯ ಒಳಗೆ ಹೋಗಲು ದಾರಿ ಕಾಣದಂತಾಯಿತು. ಅಭಂಗಖಾನನು ಹಿಂತಿರುಗಿ ತನ್ನ ದಂಡಿನ ಸ್ಥಳಕ್ಕೆ ಹೋದನು. ಅಂಬರನೂ ಅಭಂಗಖಾನನನೊಂದಿಗೆ ಹೋದನು. ಕೋಟೆಯ ಮೇಲಿನ ವಿರೋಧಿ ಗುಂಪು ಕೂಡ ಸಂಧಿ ಸಾಧಿಸಿ ಕೆಲವರು ಹೊರಗೆ ಬಂದು ತಮ್ಮ ಪ್ರಾಣವನ್ನು ಉಳಿಸಿಕೊಂಡರೆ ಕೆಲವರು ಸಿಕ್ಕು ಬಂದಿಗಳಾದರು.

ಇದನ್ನೆಲ್ಲಾ ಬರೆಯುವ ಹಾಗೂ ವಿಸ್ತಾರವಾಗಿ ವರ್ಣಿಸುವ ತಾತ್ಪರ್ಯವೆಂದರೆ ಯಾವುದೇ ರಾಜ್ಯ ಬಹಳ ಬೆಳೆದು ಉಚ್ಛಾಯ ಸ್ಥಿತಿಗೆ ಬಂದಾಗ, ಅಲ್ಲಾನು ಆ ರಾಜ್ಯವನ್ನು ನಾಶಮಾಡಬೇಕೆಂದು ಇಚ್ಛಿಸುತ್ತಾನಂತೆ. ಅಂತೆಯೇ ಅಂಥ ರಾಜ್ಯಗಳಲ್ಲಿ ಇಂಥ ಘಟನೆಗಳು ಸಂಭವಿಸುತ್ತವೆ. ಆಗ ಜನರು ರಾಜ್ಯವನ್ನು ಸುರಕ್ಷಿತವಾಗಿ ಇಡಲು ಪ್ರಯತ್ನಿಸುತ್ತಾರೆ. ಆದರೆ ಆ ಜನರಿಗೆ ತಮ್ಮ ಯತ್ನದಲ್ಲಿ ನಾಶದ ಬದಲು ಇನ್ನೊಂದು ಫಲ ಪ್ರಾಪ್ತಿಯಾಗುವುದಿಲ್ಲ. ಕಲ್ಯಾಣ ಮಾಡಬೇಕೆಂದು ಅಲ್ಲಾನಿಗೆ ಇಚ್ಛೆಯಾದರೆ, ಅದರಲ್ಲಿ ಬುದ್ಧಿ ನಡೆಯದಂಥ ಕಠಿಣ ಪ್ರಸಂಗವಿದ್ದರೂ ಅನಾಯಾಸವಾಗಿ ಉತ್ತಮ ಫಲಗಳು ಘಟಿಸುತ್ತವೆ ದಿನದಿಂದ ದಿನಕ್ಕೆ ಅಧಿಕ ಸುಖದ ದಿನಗಳು ಬರುತ್ತವೆ. ರಫೀಯುದ್ದೀನ ಶಿರಾಜಿ ಹೀಗೆ ಹೇಳುತ್ತಾನೆ.

"ನಾನು ನಾಲ್ಕು ತಿಂಗಳುಗಳ ಕಾಲ ಅಹ್ಮದನಗರದಲ್ಲಿ ಈ ನಿಜಾಮಶಾಹಿಯ ವ್ಯವಸ್ಥೆಗಾಗಿ ಉಳಿದುಕೊಂಡಿದ್ದೆನು. ಈ ನಾಲ್ಕು ತಿಂಗಳುಗಳಲ್ಲಿ ಮೂರು-ನಾಲ್ಕು ಸಲ ಬಹಳ ಪ್ರಯತ್ನದಿಂದ ಪರಸ್ಪರ ವಿರೋಧಿ ಬಣಗಳನ್ನು ಒಂದುಗೂಡಿಸಿದ್ದೆನು. ಮತ್ತೆ-ಮತ್ತೆ ಅವರಲ್ಲಿ ದ್ವೇಷ-ವೈರತ್ವಗಳು ಬೆಳೆದುವು. ಆಗ ನಾನು ನಿರುಪಾಯನಾದೆನು. ಅವರವರಲ್ಲಿ ಗೆಳತನ ಮಾಡಿಸುವಲ್ಲಿ ದಣಿದೆನು. ಅಂಥ ಸಮಯದಲ್ಲಿ, ಸರಹದ್ದಿನ ಅನೇಕ ಸ್ಥಳಗಳಲ್ಲಿ ಸುಲ್ತಾನ ಮುರಾದನ ಅನೇಕ ಅಮೀರ ಜನರು ಗಡಿಯಲ್ಲಿ ಬಂದು ದಂಗೆ ಮಾಡುತ್ತಿದ್ದಾರೆಂಬ ಸುದ್ದಿ ಬಂದಿತು. ಎಷ್ಟೋ ಜನರು ಊರುಗಳನ್ನು, ಪರಗಣೆಗಳನ್ನು ಕೈವಶಮಾಡಿಕೊಂಡಿದ್ದಾರೆ. ಅವರ ಸಹಾಯಕ್ಕಾಗಿ ಇನ್ನಷ್ಟು ಸೈನ್ಯವೂ ಬರುತ್ತಿದೆ. ಆ ಜನರು ಅಹಮದನಗರವನ್ನೂ ತೆಗೆದುಕೊಳ್ಳುತ್ತಾರೆಂದು ತಿಳಿಯಿತು. ಅಲ್ಲಿಯವರೆಗೆ ನಡೆದ ನ್ಯಾಯ, ಜಗಳ ಹಾಗೂ ಇಂದು ನಡೆಯುತ್ತಿರುವ ಈ ಜನರ ಪರಸ್ಪರ ವಿರೋಧಗಳ ಸವಿಸ್ತಾರ ತಪಶೀಲನ್ನು ಬರೆದು, ಆದಿಲಶಾಹನಿಗೆ ವಿನಂತಿ ಪತ್ರವನ್ನು ಬರೆದು ಕಳಿಸಿದೆನು. ಅದಕ್ಕೆ ಪ್ರತಿಯಾಗಿ ಆದಿಲಶಹನು ಉತ್ತರವನ್ನು ಕಳಿಸಿ, ಅದರಲ್ಲಿ, 'ಇನ್ನು ನೀವು ಅಲ್ಲಿ ನಿಲ್ಲಬೇಡಿರಿ. ಈ ಆಜ್ಞೆ ಮುಟ್ಟಿದ ತಕ್ಷಣ ಹೊರಟು ಇಲ್ಲಿಗೆ ಬಂದು ಮುಟ್ಟಬೇಕು' ಎಂದು ಆಜ್ಞೆ ಮಾಡಿದ್ದನು. ಆ ಆಜ್ಞಾಪತ್ರವನ್ನು ಚಾಂದಬೀಬಿ ಸುಲ್ತಾನಳಿಗೆ ಶ್ರುತಪಡಿಸಿ. ನಾನು ನಿರೋಪ ಕೇಳಿದನು. ಅದಕ್ಕೆ ಚಾಂದಬೀಬಿ ಸುಲ್ತಾನಳು ನಿರೋಪ ಕೊಟ್ಟಳು. ಆದರೆ ನನಗೆ ವಿಜಾಪುರಕ್ಕೆ ಹೋಗಲು ಸಂತೋಷದಿಂದ ಮತ್ತು ಪ್ರೀತಿಯಿಂದ ನಿರೋಪವನ್ನು ಕೊಡಲಿಲ್ಲ. ಚಾಂದಬೀಬಿ ಸುಲ್ತಾನಳು ನನಗೆ ಅಪ್ಪಣೆ ಕೊಡುತ್ತ "ನೀವು ಇಲ್ಲಿ ಇರುವವರೆಗೆ ಮೂರು-ನಾಲ್ಕು ಸಲ ನ್ಯಾಯ-ಜಗಳಗಳನ್ನು ಬಹಳ ಪ್ರಯತ್ನ ಪೂರ್ವಕವಾಗಿ ಬಗೆಹರಿಸಿ ಅರಿಷ್ಟ ನಿವಾರಣೆ ಮಾಡಿದಿರಿ. ಆದರೆ ಈಗ ನೀವು ವಿಜಾಪುರಕ್ಕೆ ಹೊರಟಿದ್ದೀರಿ, ಈಗ ಈ ಕೃತಘ್ನ ಜನರೊಂದಿಗೆ ನಿಮ್ಮ ಹಾಗೆ ಮಾತನಾಡುವ ಜನ ಯಾರಿದ್ದಾರೆ? ಅದರಲ್ಲೂ ನಿಮ್ಮ ಮಾತುಗಳಿಂದ ಒಪ್ಪಂದವಾಗುವಂತೆ ಬೇರೆ ಯಾರ ಮಾತುಗಳನ್ನು ಆ ಜನ ಮಾನ್ಯ ಮಾಡುತ್ತಾರೆ?" ಎಂದೆಲ್ಲ ಹೇಳಿದಳು. ತಾತ್ಪರ್ಯವೆಂದರೆ ಚಾಂದಬೀಬಿ ಸುಲ್ತಾನಳು ತುಂಬ ಖಿನ್ನತೆಯಿಂದ ನಿರೋಪ ಕೊಟ್ಟಳು.

ಮರುದಿನ ನಾನು ಅಹಮದನಗರದಿಂದ ಹೊರಟು ಏಳೆಂಟು ಕೋಸು ದಾರಿ ಕ್ರಮಿಸಿ ಉಳಿದುಕೊಂಡೆನು. ಕೆಲವೊಂದು ಜರೂರಿ ಕೆಲಸಗಳಿಂದಾಗಿ ನಾನು ಅಲ್ಲಿ ಎರಡು-ಮೂರು ದಿನ ಇರಬೇಕಾಯಿತು. ಕೆಲವು ಸಣ್ಣ-ದೊಡ್ಡ ಅಮೀರ ಜನರು ಅಲ್ಲಿಯವರೆಗೂ ನನ್ನನ್ನು ಕಳಿಸಲು ಬಂದು, ಅಲ್ಲಿ ನನಗೆ ತಂತಮ್ಮ ವಿನಂತಿ ಪತ್ರಗಳನ್ನು ಕೊಟ್ಟರು. ಅನಂತರ ನಾನು ಅಲ್ಲಿಂದ ಹೊರಟು ವಿಜಾಪುರದ ಕಡೆಗೆ ನಡೆದೆನು. ಆಗ ಅಹಮ್ಮದನಗರದ ಸುಮಾರು ೨೦ ಸಾವಿರ ಜನರು, ಸ್ವಾರರು, ಕಾಲ್ದಳದವರು ತಂತಮ್ಮ ಹೆಂಡಿರು ಮಕ್ಕಳು ಪರಿವಾರದೊಂದಿಗೆ, ಕಾರಭಾರಿ ಜನರು, ವಿದ್ವಾಂಸರು, ಗುಣೀ ಜನರು ಮತ್ತು ರೈತರು ರಾಜಧಾನಿಯು ಹಾಳಾಯಿತೆಂದು ತಿಳಿದು, ತಮ್ಮ ಮನೆಗಳ ಆಶೆಯನ್ನು ಬಿಟ್ಟು ನನ್ನ ಜೊತೆಗೆ ಬಂದರು. ಯಾಕೆಂದರೆ ದಾರಿಯಲ್ಲೂ ಬಹಳ ಭಯವಿತ್ತು. ಆದ್ದರಿಂದ ನನ್ನ ಜೊತೆಗೆ ಬುದ್ಧಿಪೂರ್ವಕವಾಗಿ ಸುರಕ್ಷಿತವಾಗಿ ಸುಖರೂಪವಾಗಿ ಬಂದು ಭಯ ಮುಕ್ತರಾದರು. ಆ ಜನರು ವಿಜಾಪುರ ರಾಜ್ಯದಲ್ಲಿ ಬೇರೆ-ಬೇರೆ ಗ್ರಾಮಗಳಲ್ಲಿ ಉಳಿದುಕೊಂಡರು. ನಾನು ಇಬ್ರಾಹಿಮ ಆದಿಲಶಹನ ದರ್ಶನ ಪಡೆದು ಭೆಟ್ಟಿಯಾದೆನು. ಆಗ ಬಾದಶಹನು ಮೊದಲಿನಂತೆ ನನ್ನ ಕಡೆಗೆ ಯಾವ-ಯಾವ ಕೆಲಸಗಳಿದ್ದುವೋ ಅವುಗಳನ್ನೆಲ್ಲ ಮರಳಿ ಕೊಟ್ಟನು. ನನ್ನ ಯೋಗ್ಯತೆಗಿಂತ ನೂರುಪಟ್ಟು ಅಧಿಕವಾಗಿ ಬಾದಶಹನು ದೊಡ್ಡತನವನ್ನು ಕೊಟ್ಟನು. ಆ ವಿಷಯವನ್ನೆಲ್ಲ ಸವಿಸ್ತಾರವಾಗಿ ಹೇಳಿದರೆ ಜನರು ಆಶ್ಚರ್ಯ ಪಡುತ್ತಾರೆ.

೪೩. *ಸೈಯದ ಮಹ್ಮದ ಮುಸ್ತಾಫಾ ಸಲ್ಲೀಲ್ಲಾಹ ಓಲೆಹ ವಸ್ಸಲಮ್ ಅವರ ಕೇಶ ಕಸ್ತೂರಿ ಸುವಾಸನೆಯು ವಿಜಾಪುರ ನಗರದಲ್ಲಿ ಬಂದು ಮುಟ್ಟಿದುದರ ಪ್ರಾರಂಭದಿಂದ ವರ್ಣನೆ.*

ಮಹಮ್ಮದ ಕಾಸಿಮ ಫರಿಸ್ತಾ ಬರೆಯುತ್ತಾನೆ. "ದಿನಾಂಕ ಒಂದು, ತಿಂಗಳು ಮೊಹರಮ್ ಸನ್ ೧೦೦೫ (೧೫ ಅಗಸ್ಟ ೧೫೯೬) ರಂದು ಇಬ್ರಾಹಿಮ ಆದಿಲಶಹನ ಸ್ವಪ್ನದಲ್ಲಿ ಅಲ್ಲಾನು ಸೂಚಿಸಿದಂತೆ, ಅಲ್ಲಾನ ಪೂರ್ಣ ಕೃಪೆಗೆ ಪಾತ್ರನಾದ, ಮೀರ ಮಹಮದ ಸಾಲಹ ಹಮದಾನಿ ಈ ನಗರದಲ್ಲಿ ಬಂದಿದ್ದಾನೆ. ಅವನ ಬರುವಿಕೆಯಿಂದ ಆಕಾಶದಲ್ಲಿರುವವರು ಮತ್ತು ಒಂಭತ್ತನೆಯ ಆಕಾಶದಲ್ಲಿ ಅನುಷ್ಠಾನ ಮಾಡುತ್ತಿರುವವರು ಆಶ್ಚರ್ಯ ಪಡುತ್ತ ಚಿಂತೆಯಲ್ಲಿ ಬಿದ್ದಿದ್ದಾರೆ. ಆಕಾಶದಲ್ಲಿಯ ನಕ್ಷತ್ರಗಣಗಳು ಆ ಮೀರ ಮಹಮ್ಮದನ ಸ್ವರೂಪದ ತೇಜದ ಮುಂದೆ ಮಂಕಾಗಿವೆ. ಫಕೀರರು ಭಿಕ್ಷೆ ಬೇಡುವಾಗ ಹಿಟ್ಟನ್ನು ಕೇಳಲು ಕೈಯಲ್ಲಿ ಪಾತ್ರೆಯನ್ನು ಹಿಡಿದಂತಾಗಿವೆ. ದ್ವಿತೀಯದ ಚಂದ್ರನು ಯೋಜನೆ ಮಾಡಿ ಭಿಕ್ಷೆ ಬೇಡಲು ತನ್ನ ಹತ್ತಿರ ಇಟ್ಟುಕೊಂಡಿದ್ದಾನೆ. ಅರ್ಥಾತ್ ಮೀರ ಮಹಮ್ಮದನ ತೇಜದ ಎದುರು ಚಂದ್ರನ ತೇಜಕೂಡ ಶೋಭಿಸುತ್ತಿಲ್ಲ. ಅಂಥ ತೇಜಸ್ವಿಯಾದ ಮೀರ ಮಹಮ್ಮದನು ಬಿಜಾಪುರಕ್ಕೆ ಬಂದಿದ್ದಾನೆ. ಈ ವಿಷಯದಲ್ಲಿ ಆಕಾಶದಲ್ಲಿರುವವರು ಕೂಡ ಅಲಭ್ಯ ಲಾಭವೆಂದು ತಿಳಿದಿದ್ದಾರೆ. ಅವನೊಂದಿಗೆ ಮಹಮ್ಮದ ಮುಸ್ತಫಾ ಸಲಿಲ್ಲಾಹ ವಸ್ತಲಮ್ ಅವರ ಕಸ್ತೂರಿಯಂತೆ ಸುವಾಸನೆ ಬೀರುವ ಎಷ್ಟೋ ಕೇಶಗಳಿವೆ. ಎಂಬುದಾಗಿ ಸ್ವಪ್ನ ಬಿದ್ದಿತು. ಈ ವಿಷಯ ತಿಲಿಯುತ್ತಿದ್ದಂತೆ ಇಬ್ರಾಹಿಮ ಆದಿಲಶಹನು ಬಹಳ ಸಂತೋಷದಿಂದ ಅಲ್ಲಾನ ಸ್ತುತಿ ಮಾಡಿದನು. ಮೀರ ಮಹಮ್ಮದ ಸಾಲಹನ ಹತ್ತಿರ ಹೋಗಿ ಆ ಶ್ರೇಷ್ಠ ಪುರುಷನ ಭೆಟ್ಟಿಯನ್ನು ವೈಭವದಿಂದ ಮಾಡಿದನು. ಆ ಪೈಗಂಬರರ ಕೇಶಗಳ ದರ್ಶನವನ್ನು ಪಡೆದನು. ಈ ಯೋಗದಿಂದಾಗಿ ಇಬ್ರಾಹಿಮ ಆದಿಲಶಹನ ಅಂತರ್ ಬಾಹ್ಯಗಳು ಶುದ್ಧವಾಗಿ ಏಸು, ಪೈಗಂಬರರಂತೆ ಮತ್ತು ಯೂಸುಫನ ರೂಪದಂತೆ ಅತಿ ಉತ್ತಮವಾದುವೆಂದು ಜಗದಲ್ಲೆಲ್ಲ ಪ್ರಸಿದ್ಧಿಯಾಯಿತು. ಏನು ಹೇಳಬೇಕು? ಆ ಕಾಲದಲ್ಲಿಯ ಎಷ್ಟೋ ಬಾದಶಹರು ಸಿಕಂದರನ ಸಮಾನರಾಗಿದ್ದರು. ಅವರೆಲ್ಲ ಆ ಪೈಗಂಬರರ ಶ್ರೇಷ್ಠ ಕೇಶಗಳ ದರ್ಶನ ಪಡೆಯಲು ಅನೇಕ ಪ್ರಯತ್ನಗಳನ್ನು ಮಾಡಿದ್ದಾರೆ. ಆದರೆ ದರ್ಶನ ಪ್ರಾಪ್ತಿಯಾಗಿಲ್ಲ.

ಬೆಳ್ಳಿಯ ಅಷ್ಟಪೈಲಿನ ಡಬ್ಬಿಯಲ್ಲಿ ಆ ಕೇಶಗಳನ್ನು ಇಟ್ಟಿದ್ದಾರೆ. ಆದರೂ ಆ ಬಾದಶಹರಿಗೆ ಕೇಶಗಳು ಡಬ್ಬಿಯಿಂದ ಹೊರ ಬರುತ್ತಿರಲಿಲ್ಲ. ಅಂಥ ಕೇಶಗಳ ಮುಂದೆ ಇಬ್ರಾಹಿಮ ಆದಿಲಶಹನು, ತಲೆಯನ್ನೇ ಕಾಲುಗಳನ್ನಾಗಿ ಮಾಡಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಬಾದಶಹನ ಜೊತೆಗಿದ್ದ ಜನರು ಲೋಬಾನ ಹಾಗೂ ಕರ್ಪೂರಗಳನ್ನು ಸುಟ್ಟು, ಆ ಕೇಶಗಳ ಎದುರು ನಮಾಜ (ಪ್ರಾರ್ಥನೆ) ಮಾಡಿ, ಹೂವುಗಳ ಮಾಲೆಗಳನ್ನೇ ಚೆಲ್ಲಿದರು. ಇಬ್ರಾಹಿಮ ಆದಿಲಶಹನು ಆ ಕೇಶಗಳ ಮುಂದೆ 'ಫಾತೆಹಾ' ಕೊಟ್ಟು 'ನಮಾಜ' ಮಾಡಿದನು. ಬೆಳ್ಳಿಯ ಡಬ್ಬಿಯಲ್ಲಿ ಪೈಗಂಬರರ ಆ ಕೇಶಗಳನ್ನಿಟ್ಟು ಡಬ್ಬಿಗೆ ಮುಚ್ಚಳವನ್ನಿಟ್ಟಿದ್ದಾರೆ. ಯಾರಿಗೆ ದರ್ಶನವನ್ನು ಪಡೆಯಬೇಕಾಗಿದೆಯೋ ಅವರು ಆ ಮುಚ್ಚಳಿಕೆಯನ್ನು ತೆರೆಯದೆ ಆ ಡಬ್ಬಿಹತ್ತಿರ ಬೆಳ್ಳಿಯ ಪಾತ್ರೆಯಲ್ಲಿ ಗುಲಾಬಿ ಹೂವಿನ ನೀರನ್ನು ಇಡಬೇಕು. ಮತ್ತು ಆ ಕೇಶಗಳ ಡಬ್ಬಿಯ ಎದುರು ಪ್ರಾರ್ಥನೆಯನ್ನು ಓದಬೇಕು. ಅಂದರೆ, ದರ್ಶನ ಪಡೆಯುವವನು, ಅಂತರ್ ಬಾಹ್ಯ ಶುಚಿರ್ಭೂತನಾಗಿ, ನಿರ್ಮಲನಾಗಿ, ಪುಣ್ಯ ಇದ್ದರೆ ಡಬ್ಬಿಯ ಮುಚ್ಚಳಿಕೆಯನ್ನು ಯಾರೂ ತೆರೆಯದೆ

ಆ ಕೇಶಗಳು ತನ್ನಿಂದ ತಾನೆ ಹೊರಬಿದ್ದು ಗುಲಾಬಿ ನೀರಿನಲ್ಲಿ ಸ್ನಾನ ಮಾಡುತ್ತವೆ. ದರ್ಶನ ಪಡೆದ ಅನಂತರ ಮತ್ತೆ ನಮಾಜ (ಪ್ರಾರ್ಥನೆ) ಮಾಡಿದರೆ, ಆ ಕೇಶಗಳು ಹೇಗೆ ಡಬ್ಬಿಯಿಂದ ಹೊರಗೆ ಬಂದಿದ್ದುವೋ ಹಾಗೆಯೇ ಅವುಗಳು ಮುಚ್ಚಳಿಕೆಯನ್ನು ತೆರೆಯದೆ ತಂತಾನೆ ಒಳಗೆ ಹೋಗುತ್ತವೆ. ಈ ರೀತಿಯಾಗಿ ದರ್ಶನ ಪಡೆಯಲು ಬೇರೆ-ಬೇರೆ ಸ್ಥಳಗಳಲ್ಲಿ ಅನೇಕ ಬಾದಶಹರು ಮೇಲೆ ಬರೆದಂತೆ ಗುಲಾಬಿನೀರನ್ನಿಟ್ಟು ದರ್ಶನ ಪಡೆಯಲು ಬಹಳ ಪ್ರಯತ್ನಪಟ್ಟಿದ್ದಾರೆ. ಆದರೆ ಆ ಕೇಶಗಳು ಹೊರಗೆ ಬಂದಿಲ್ಲ.

ಅದೇ ವಿಜಾಪುರಕ್ಕೆ ಬಂದಂತೆ, ಮತ್ತು ಇಬ್ರಾಹಿಮ ಆದಿಲಶಹನು ಪ್ರಾರ್ಥನೆ ಮಾಡುತ್ತಿರುವಂತೆಯೇ ಕುರಾನಿನಲ್ಲಿ ಅಲ್ಲಾನು ಅಪ್ಪಣೆ ಕೊಡಿಸಿದಂತೆ, 'ಯಾವ ವಿಷಯವನ್ನು ಅಲ್ಲಾನು ತನ್ನ ಕೃಪೆಯಿಂದ ಪ್ರಸಿದ್ಧ ಮಾಡಲು ಬಯಸುತ್ತಾನೆಯೋ ಆತನನ್ನು ತಡೆಯುವವರು ಯಾರೂ ಇಲ್ಲ ಎಂಬ ಆಯತವಿದೆ. ಆಯತಗಳೆಂದರೆ ಕುರಾನಿನಲ್ಲಿಯ ಅಲ್ಲಾನ ವಾಕ್ಯಗಳೆಂದೇ ಹೇಳುತ್ತಾರೆ. ಹಾಗೆ ಪರಲೋಕದಲ್ಲಿ ಯಮನ ಕೈಯಿಂದ ಬಿಡುಗಡೆ ಗೊಳ್ಳುವಂಥ ಒಂದೂ ಛಿದ್ರವಿಲ್ಲದ ಆ ಬೆಳ್ಳಿಯ ಡಬ್ಬಿಯಿಂದ, ಇಬ್ರಾಹಿಮ ಆದಿಲಶಹನಿಗೆ ದರ್ಶನ ಕೊಡಲು ಆ ಕೇಶಗಳು ಹೊರಬಂದಾಗ ಸೂರ್ಯನಂತೆ ಪ್ರಕಾಶಬಿತ್ತು. ಪೈಗಂಬರರ ವಿಯೋಗವಾಗಿ ಒಂದು ಸಾವಿರ ವರುಷಗಳಾದ ಅನಂತರ ಜಾದೂಗಿರಿಯಂತೆ, ದೊಡ್ಡ ಚಮತ್ಕಾರವಾಗಿ ಮತ್ತೆ ದರ್ಶನ ಲಭಿಸಿತು. ಆಗ ಬಾದಶಹ ಹಾಗೂ ಫಕೀರರು ದರ್ಶನ ಪಡೆದು ಧನ್ಯರಾದರು. ಮೀರ ಮಹಮ್ಮದನಿಗೆ ಬಾದಶಹನು ಬಹಳ ಬಕ್ಷೀಸು-ಇನಾಮುಗಳನ್ನು ಕೊಟ್ಟನು. ಅದರಿಂದ ಮೀರ ಮಹಮದನು ಬಹಳ ಸಂತೋಷ ಪಟ್ಟನು. ಆಗ ಇಬ್ರಾಹಿಮ ಆದಿಲಶಹನು ಸನ್ ೧೦೦೫ರ ಮೊಹರಂದ ೧೦ ದಿನಗಳಲ್ಲಿಯ ಮೊದಲನೆಯ ದಿನದಿಂದ (೧೫ ಅಗಸ್ಟ್ ೧೫೭೬/ ಹತ್ತನೆಯ ದಿನ ೨೪, ಅಗಸ್ಟ ೧೫೭೬) ಮೊದಲಿನ ರೂಢಿಯಂತೆ ಪೈಗಂಬರರ ತಾಬೂತನ್ನು ಮಾಡುವಲ್ಲಿ ಮಗ್ನನಾಗಿದ್ದನು. ಮೀರ ಮಹಮ್ಮದನಿಗೆ ವಿನಂತಿ ಮಾಡಿಕೊಂಡು 'ಈ ಹತ್ತು ದಿನಗಳಕಾಲ ನಾನು ಪೈಗಂಬರರ ದುಃಖದ ದಿನಗಳ ವ್ರತವನ್ನು ಹಿಡಿದಿರುವೆನು. ತಾವು ನನ್ನ ಅರಮನೆಗೆ ಬಂದು ತಮ್ಮ ತೇಜದಿಂದ ವಾಡೆಯನ್ನು ತೇಜಸ್ವಿಯನ್ನಾಗಿ ಮಾಡಿ, ಈ ನಗರದಲ್ಲಿಯೆ ಕೆಲವು ದಿನಗಳ ಮಟ್ಟಿಗೆ ಇದ್ದು, ತಮ್ಮ ಸನ್ನಿಧಿಯ ಲಾಭವನ್ನು ಕೊಟ್ಟರೆ ಎಲ್ಲಕ್ಕಿಂತ ಅಧಿಕ ಸಂತೋಷ ನನಗಾಗುತ್ತದೆ. ಎಂಬುದಾಗಿ ಪ್ರಾರ್ಥಿಸಿಕೊಂಡನು. ಕುರಾನ ಶರೀಫದಲ್ಲಿಯ ವಾಕ್ಯದಂತೆ, "ಅತಿಥಿಯ ಆಗ್ರಹದ ಆಮಂತ್ರಣವನ್ನು ಮುರಿಯದೆ ಮಾನ್ಯ ಮಾಡು" ಎಂಬಂತೆ ಮೀರ ಮಹಮ್ಮದನು ಇಬ್ರಾಹಿಮ ಆದಿಲಶಹನ ಆಗ್ರಹವನ್ನು ಮನ್ನಿಸಿ ಕಸ್ತೂರಿ ಸುವಾಸೆಯ ಕೇಶಗಳೊಂದಿಗೆ ಅರಕಿಲ್ಲೆಯ ಅರಮನೆಗೆ ಹೋದನು. ಇಬ್ರಾಹಿಮ ಆದಿಲಶಹನು ಎದ್ದು ಬಂದು ಎದುರುಗೊಂಡು ನಮಸ್ಕಾರ ಮಾಡಿದನು. ಸದಾಕಾಲ ಮೀರ ಮಹಮ್ಮದರ ಹತ್ತಿರ ಇದ್ದು ಎಲ್ಲರೂ ಸೇವೆ ಮಾಡಬೇಕೆಂದು ಆಸ್ಥಾನದ ಎಲ್ಲರಿಗೂ ಆಜ್ಞೆ ಮಾಡಿದನು. ಸ್ವತಃ ತಾನು ಆಗಾಗ ಅವರನ್ನು ಕಂಡು ನಗದಿ ಹಾಗೂ ಮುತ್ತುರತ್ನಗಳನ್ನು ನೀಡಿದನು. ಅನಂತರ ಮೊಹರಮ ತಿಂಗಳು ಮುಗಿದು ಸಫರ ತಿಂಗಳ ಚಂದ್ರನು ಉದಯಿಸಿದನು. (೧೪ ಸೆಪ್ಟೆಂಬರ್ ೧೫೭೬) ಮೀರ ಮಹಮ್ಮದನು ಮಕ್ಕೆಗೆ ಹೋಗಲು ನಿರ್ಧರಿಸಿದನು. ಆಗ ಬಾದಶಹನು ಮತ್ತೆ ಆಗಾಗ ಬಂದು ಹೀಗೆಯೇ ದರ್ಶನ ಕೊಡಬೇಕೆಂದು ಆಗ್ರಹ ಪಟ್ಟನು. ಅದಕ್ಕಾಗಿ ನಗದು ಹನ್ನೆರಡು ಸಾವಿರ ಹೊನ್ನುಗಳನ್ನು ಮತ್ತು ಭಾರೀ ಕಿಮ್ಮತ್ತಿನ ಅನೇಕ ವಸ್ತ್ರಗಳನ್ನು

ಪದಾರ್ಥಗಳನ್ನು ಕೊಟ್ಟು ಮಕ್ಕೆಗೆ ಹೋಗಲು ನಿರೋಪ ಕೊಟ್ಟನು. ಆಗ ಶ್ರೇಷ್ಠನಾದ ಮೀರ ಮಹಮದನು, ಕಾಣಿಕೆ ಪಡೆದ ಉಪಕಾರದಿಂದ ಲಜ್ಜಿತನಾಗಿ ನಿರೋಪ ಪಡೆಯುವ ಸಮಯದಲ್ಲಿ ಆ ಪೈಗಂಬರರ ಕೇಶಗಳಲ್ಲಿಯ ಎರಡು ಕೇಶಗಳನ್ನು ಕಸ್ತೂರಿಯ ಸುವಾಸನೆಯನ್ನು ಬೀರುವ ಬೆಳ್ಳಿಯ ಡಬ್ಬಿಯಿಂದ ಹೊರ ತೆಗೆದು ಬಾದಶಹನಿಗೆ ಕೊಟ್ಟನು. ಆ ಕೇಶಗಳನ್ನು ಇಂದಿಗೂ, ಬೆಳ್ಳಿಯ ಡಬ್ಬಿಯಲ್ಲಿಟ್ಟು ಆ ಡಬ್ಬಿಗೆ ಮುಚ್ಚಳಿಕೆಯನ್ನಿಟ್ಟು ಭದ್ರವಾಗಿಟ್ಟಿದ್ದಾರೆ. ಗುರುವಾರದ ರಾತ್ರಿಯಂದು ಮತ್ತು ಶ್ರೇಷ್ಠ ದಿನಗಳಂದು ಆ ಕೇಶಗಳ ದರ್ಶನ ಪಡೆಯುತ್ತಾರೆ. ಆ ಕೇಶಗಳ ಪ್ರಸಾದದಿಂದ ಬಾದಶಹನಿಗೆ ಅನೇಕ ವೇಳೆ ಯಶ ಪ್ರಾಪ್ತಿಯಾಗಿದೆ. ದಿನದಿಂದ ದಿನಕ್ಕೆ ಬಾದಶಹನ ದೈವ ತೆರೆದಿದೆ. ಹೀಗೆ ಈ ವಿಷಯ ಇಲ್ಲಿಗೆ ಸಮಾಪ್ತವಾಯಿತು.

### *೪೪. ಇಬ್ರಾಹಿಮ ಆದಿಲಶಹನು ನವರಸಪುರ ಎಂಬ ಹೊಸನಗರವನ್ನು ಕಟ್ಟಿದ ವರ್ಣನೆ:*

ಸಫಲ ಶ್ರೇಷ್ಠ ಯೋಗ್ಯತೆಯ ಸುದೈವಿಯಾದ ಇಬ್ರಾಹಿಮ ಆದಿಲಶಹನ ಸಂಪೂರ್ಣ ಕೆಲಸಗಳು ಮನೋರಥದಂತೆ ಘಟಿಸುತ್ತ ಬಂದುವು. ಅಲ್ಲಾನ ಕೃಪೆ ದಿನದಿಂದ ದಿನಕ್ಕೆ ಆತನ ಮೇಲೆ ಆಗುತ್ತಲೇ ಇತ್ತು. ಬಾದಶಹನ ಸಂತೋಷ ಹಾಗೂ ಸರ್ವೋಪರಿ ಸ್ವಸ್ಥತೆ ಪ್ರಾಪ್ತವಾಗಿತ್ತು. ಆಗ ಹೊಸದೊಂದು ನಗರವನ್ನು ಕಟ್ಟಬೇಕೆಂದು ಬಾದಶಹನು ಮನದಲ್ಲಿ ಸಂಕಲ್ಪ ಮಾಡಿದನು. ಅದು ಮನುಷ್ಯನ ಸಂಪೂರ್ಣ ಸುಖದ ಸ್ಥಳವಾಗಬೇಕು. ಆಶ್ರಯ ಸ್ಥಾನವಾಗಬೇಕು. ವಿಶ್ವದಲ್ಲಿಯ ಸಂತೋಷದ ಸ್ಥಳ ಹಾಗೂ ಇರಲು ಆಧಾರವಾಗಿರಬೇಕು. ಅದಕ್ಕಾಗಿ ಹಿ ಸನ್ ೧೦೦೮ (ಕ್ರಿಶ. ೧೫೯೯-೧೬೦೦)ರಲ್ಲಿ ವಿಜಾಪುರದಿಂದ ಎರಡು-ಎರಡೂವರೆ ಕೋಸು ಅಂತರದಲ್ಲಿ ಕೋಟೆಯ ಹತ್ತಿರ ನಗರವನ್ನು ಕಟ್ಟಲು ಪ್ರಾರಂಭಿಸಿದನು. ಈ ನಗರವನ್ನು ಕಟ್ಟುವ ಕೆಲಸದ ಕಾರಭಾರವನ್ನು ಶಹಾನವಾಜಖಾನನಿಗೆ, ವಹಿಸಿದನು. ಆತನು ಬಹಳ ದಿನಗಳಿಂದ ಮುಲ್ಕೀ ಕೆಲಸದ ಅಧಿಕಾರದಲ್ಲಿದ್ದನು. ಮತ್ತು ದಕ್ಷಿಣ ದೇಶದಲ್ಲಿ ಮುಲ್ಕೀ ಕೆಲಸದ ಪದವಿಗಿಂತ ದೊಡ್ಡದಾದ ಅಧಿಕಾರ ಇನ್ನೊಂದಿರಲಿಲ್ಲ. ಶಾಹನವಾಜಖಾನನು, ನಗರ ಕಟ್ಟುವ ಕೆಲಸದಲ್ಲಿ ಮಗ್ನನಾಧನು, ಬಹಳ ಶ್ರಮವಹಿಸಿ, ಪೂರ್ವದಲ್ಲಿ ಬಹುದೊಡ್ಡ ಲೆಕ್ಕ ಬಲ್ಲವನಾಗಿದ್ದ 'ಇಕಲಿದುಸ' ನಂತೆ ಲೆಕ್ಕಬಲ್ಲ ಜನರು(ಇಂಜನಿಯರ,) ಗವಂಡಿ ಜನರು, ಬಹಳ ಚತುರರು, ಬುದ್ಧಿವಂತರೂ ಆಗಿದ್ದವರನ್ನು ಹಾಗೂ ಅತಿ ಬೇಗ ಕಲ್ಲು ಒಡೆಯುವ, ಕೆತ್ತನೆ ಮಾಡುವ ಕಲ್ಲುಕುಟಿಕರನ್ನು, ಅವರು ತಮ್ಮ ಕೆಲಸದಲ್ಲಿ ಅದ್ವಿತೀಯರಾದವರನ್ನೆ ನಾಲ್ಕು ಕಡೆಗಳಿಂದ ತಂದು ಸಂಗ್ರಹಿಸಿ. ಅವರವರ ಕೆಲಸದಮೇಲೆ ನಿಯಮಿಸಿದನು. ಆ ಜನರಿಂದ ನಗರದ ನಕ್ಷೆಯನ್ನು ಬಿಡಿಸಿದನು. ಆ ನಕ್ಷೆಯಲ್ಲಿ ಮಹಲುಗಳನ್ನು ಪುರವನ್ನು, ರಸ್ತೆಗಳನ್ನು ಬಾಜಾರ ಇಮಾರತಿಗಳನ್ನು ದೊಡ್ಡ ದೊಡ್ಡ ವಾಡೆಗಳು, ಮಂಟಪಗಳು ಹಾಗೂ ಅಂಗಡಿಗಳನ್ನು ಗುರುತಿಸಿದನು. ಅದರಂತೆ ಜನರು ಕಾರ್ಯವನ್ನು ಪ್ರಾರಂಭಿಸಿದರು. ಹಾಗೆ ಮಾಡಲು ಕಾರಖಾನೆದಾರರನ್ನು, ಮಜೂರರನ್ನು ಕಮರಿ ಇತ್ಯಾದಿಗಳನ್ನು ನೇಮಿಸಿದನು. ಆ ಎಲ್ಲ ಜನ ಸೇರಿ ಇಪ್ಪತ್ತು ಸಾವಿರ ಜನರು ಕೆಲಸದಲ್ಲಿದ್ದರು. ಹಾಗೆಯೇ ಕಾರಕೂನರೂ ಇದ್ದರು. ಅವರ ಸಂಖ್ಯೆಯನ್ನು ಬರೆದಿಡಲಾಗಿದೆ. ಬಾದಶಹನ ಖಾಸಗೀ ಮಂಡಳಿಯ ಅನೇಕ ಕಾರಕೂನರೂ ಇದ್ದರು. ಕೆಲವರು ಇಮಾರತಿಯ ಕೆಲಸದಲ್ಲಿ, ಇನ್ನು ಕೆಲವು ಕಾರಭಾರಿಗಳು, ಕಾಮದಾರರು, ಸಚಿವಜನ, ಸಿಬ್ಬಂದಿ, ಸೌದಾಗರರು ಮತ್ತು ಶ್ರೀಮಂತರು

ಇತ್ಯಾದಿ ಎಲ್ಲ ಜನರೂ ಸೇರಿ ಎಷ್ಟು ಕಾರಕೂನರಿದ್ದರೆಂಬ ಲೆಕ್ಕ ಇಲ್ಲ. ಸರಕಾರದಿಂದ ಸಚಿವರಜನರ ಮಂಡಳಿ, ರಾಜನಕಡೆಯ ಕಾಮದಾರರು, ಮತ್ತು ಎಲ್ಲ ನೌಕರ ಜನರಿಗೆ ಆಜ್ಞೆ ಮಾಡಿ, ಪ್ರತಿಯೊಬ್ಬರೂ ತಮತಮಗೆ ಇರಲು ವಾಡೆಗಳನ್ನು, ಸಾಯಬಾನಿ ಮಂಟಪಗಳನ್ನು, ಖಿಡಕಿಗಳನ್ನು, ತೋಟಗಳನ್ನು ತಂತಮ್ಮ ಯೋಗ್ಯತಾನುಸಾರ ಕಟ್ಟಿಸಿಕೊಳ್ಳಬೇಕೆಂದು ಆಜ್ಞೆ ಮಾಡಿದನು. ಹಲವಾರು ಇಲಾಖೆಗಳ ಖಾಸಗಿ ಮಂಡಳಿಗಳಿಗೆ, ಸರಕಾರೀ ಕಚೇರಿ ಕಡೆಯ ಹಾಗೂ ಮಹಾಲೀ ಕಡೆಯಜನರಿಗೆ. ಹುಜೂರ ನೌಕರ ವರ್ಗದವರಿಗೆ, ಸರಕಾರೀ ಖಜಾನೆಯಿಂದ ಇಮಾರತಿಗಳನ್ನು ಕಟ್ಟಿಕೊಳ್ಳಲು ಖರ್ಚು ಕೊಡಲಾಯಿತು. ಆಗ ಸರಕಾರೀ ಖಾಸ ಮಂಡಳಿ ಹಾಗೂ ಎಲ್ಲ ಸಣ್ಣ ದೊಡ್ಡ ವ್ಯಕ್ತಿಗಳು ಇಮಾರತಿ ಕಟ್ಟುವ ಕೆಲಸದಲ್ಲಿ ಮಗ್ನರಾಗಿ ತಮಗೆ ಹೇಗೆ ಬೇಕೋ ಹಾಗೆ, ಎತ್ತರವಾಗಿ, ವಿಶಾಲವಾಗಿ, ನಾನಾ ಪ್ರಕಾರದ, ತರತರದ ಮತ್ತು ಹೂದೋಟ-ಕೈತೋಟಗಳನ್ನು, ಅವರವರ ಮನೆಗಳ ಹತ್ತಿರ ಉಳಿದಿದ್ದ ಸ್ಥಳವನ್ನು ಅವಲಂಬಿಸಿದಂತೆ ಕಟ್ಟುತ್ತ ಹೋದರು. ಶಹಾನವಾಜಖಾನನು ಈ ಜನವಸತಿಯ ಕೆಲಸದಲ್ಲಿ ಈ ಕಟ್ಟಡಗಳನ್ನು ಕಟ್ಟುವ ಕೆಲಸಗಳು ಪೂರ್ತಿಗೊಳ್ಳುವ ವಿಷಯದಲ್ಲಿ ತುಂಬ ಶ್ರಮ ವಹಿಸಿದನು.

ತುಸುವೆ ದಿನಗಳಲ್ಲಿ ಸಿದ್ಧವಾದ ನಗರವು ಹಿಂದುಸ್ಥಾನದ ಎಲ್ಲ ನಗರವನ್ನು ನಾಚಿಸುವಂತಿತ್ತು. ಹಿಂದುಸ್ತಾನದಲ್ಲಿ ಎಷ್ಟು ನಗರಗಳಿವೆಯೊ ಅವುಗಳಿಗಿಂತ ಮತ್ತು ಕಾಷಾನ, ಬಾದಷಾನ ಎಂಬ ನಗರಗಳಿಗಿಂತ ಈ ನಗರವು ಅಧಿಕ ಶೋಭಾಯಮಾನವಾಯಿತು. ಬಾದಶಹನಿಗೂ ಅತಿ ಎತ್ತರವಾದ, ವಿಶಾಲವಾದ, ಡೌಲದಾರ ಅದರಲ್ಲಿ ನಾನಾ ಪ್ರಕಾರದ ಕಾರಾಗಿರಿಯ ಕುಶಲತೆಯಿತ್ತು. ವಾಡೆಗೆ ಬಹಳ ಖಿಡಕಿಗಳನ್ನು ಬಿಟ್ಟು ಸಂದರವಾದ ಗೋಡೆ ಮತ್ತು ಮಂಟಪಗಳುಳ್ಳ ಬಾಗಿಲುಗಳಿದ್ದವು. ಆ ಗೋಡೆಗೆ ಆಕಾಶ ಬಣ್ಣದ ಸೋನೇರಿ ಕೆಲಸವನ್ನು ಮಾಡಿ ಅದರ ಮೇಲೆ ಚಿತ್ರಗಾರರು ಚಿತ್ರಗಳನ್ನು ಬಿಡಿಸಿದ್ದರು. ಅವುಗಳನ್ನು ಕಂಡರೆ ಜಾದುಗಾರರು ಆಶ್ಚರ್ಯ ಪಡಿಸುವ ಜಾದೂಗಿರಿಯ ಕುಂಚದಿಂದಲೇ ಬಿಡಿಸಿದಂತೆ ಭಾಸವಾಗುತ್ತಿತ್ತು. ತುಂಬ ಸುಂದರವಾದ ಚಿತ್ರಗಳನ್ನು ತೆಗೆದಿದ್ದರು. ಆ ವಾಡೆಯ ಒಳ-ಹೊರಗೆ ತೆಗೆದ ನಕ್ಷೆಗಳು, ಆ ಮೊದಲಿನ ಮಾನೀ ಹಾಗೂ ಆರಜಂಗ ಎಂಬ ದೊಡ್ಡ ಚಿತ್ರಗಾರರು ತೆಗೆದ ಚಿತ್ರಗಳು ಕೂಡ ಈ ಚಿತ್ರಗಳ ಮುಂದೆ ತೇಜವನ್ನು ಕಳೆದುಕೊಂಡುವು. ಆ ವಾಡೆಯ ಸುತ್ತಲೂ ನಾಲ್ಕು ಕಡೆಗೂ ಹೂದೋಟ-ಕೈತೋಟಗಳನ್ನು ಚಮತ್ಕಾರಿಕವಾಗಿ ಮಾಡಿದ್ದರು. ಆ ತೋಟಗಳು ನೋಡುವವರ ಕಣ್ಣುಗಳಿಗೆ ತೇಜ ಬಂದು ಮನಸ್ಸಿಗೆ ಸಮಾಧಾನವಾಗುತ್ತಿತ್ತು. ಆ ತೋಟಗಳಿಂದ ವಿಧ ವಿಧವಾದ ಪುಷ್ಪಗಳು ಮತ್ತು ಫಲಗಳು ದೊರೆಯುತ್ತಿದ್ದವು.

ರಾಜನ ಅರಮನೆಯ ಎದುರಿಗೆ ದೊಡ್ಡ ವಿಶಾಲವಾದ ಮೈದಾನವಿತ್ತು. ಆ ಮೈದಾನದ ನಾಲ್ಕು ಕಡೆಗೆ ದುಮಜಲಿನ ಕಟ್ಟಡಗಳು, ಆ ಕಟ್ಟಡಗಳ ನಾಲ್ಕು ಬದಿಗೂ ಸಾಕಷ್ಟು ಕಿಡಕಿಗಳಿದ್ದುವು. ಸಾಗವಾನಿ ಮಂಟಪಗಳಿಂದ ಆ ಮಹಡಿಗಳು ತುಂಬ ಸುಂದರವಾಗಿ, ಸ್ವಚ್ಛವಾಗಿ ಬಾದಶಹನಿಗಾಗಿ ಕಟ್ಟಿದ್ದರು. ಆ ಅರಮನೆಯ ನಾಲ್ಕು ಕಡೆಗೂ ಕಟ್ಟಿದ ಕಟ್ಟಡಗಳಲ್ಲಿ ಬಾದಶಹನ ಶಿಪಾಯಿಗಳು, ನೌಕರ-ಚಾಕರರು, ಸರನೋಬತ ಮಂಡಳಿ, ಇತ್ಯಾದಿ ಇರುವಂತೆ ಕಟ್ಟಿದ್ದರು. ಕಾರಖಾನೆದಾರರು ಹಾಗೂ ಕಾರಕೂನ ಜನರಿಗಾಗಿ ಬೇರೆ ಮನೆಗಳನ್ನು ಕಟ್ಟಿದರು. ಸರಕಾರದ ವಾಡೆಯ ಹಿಂದೆ ಅನೇಕ ಬೇರೆ ಬೇರೆ ವಾಡೆಗಳನ್ನು ದೊಡ್ಡ ದೊಡ್ಡದಾಗಿ ಬಹಳ ಸುಂದರವಾಗಿ ಕಟ್ಟಿ, ಅವುಗಳ ಮೇಲೆ ಸೋನೇರಿ ಬಣ್ಣದ ಚಿತ್ರಗಳನ್ನು

ಬಿಡಿಸಿದ್ದರು. ಬಾದಶಹನ ವಾಡೆಯ ಹಿಂಬದಿಯಲ್ಲಿ ಖಾಸಾ ಜನಾನಖಾನೆಯ ಮಹಲನ್ನು ಕಟ್ಟಿದ್ದರು. ಮುಂಭಾಗದಲ್ಲಿ ರಸ್ತೆಯನ್ನು ವಿಜಾಪುರದವರೆಗೆ ಒಂದೇ ರೀತಿಯಲ್ಲಿ ಕಟ್ಟಿದ್ದರು. ರಸ್ತೆಯ ಇಬ್ಬದಿಗಳಲ್ಲಿ ದೊಡ್ಡ-ದೊಡ್ಡ ಅಂಗಡಿಗಳು ಅವು ಕೂಡ ದುಮ್ಮಜಲಿನವು ಹಾಗೂ ಮೇಲಿನ ಮಹಡಿಗೆ ಕಿಡಕಿಗಳು, ಬಾಜಾರದ ಮಧ್ಯದಲ್ಲಿ ನಾನಾ ಪ್ರಕಾರದ ಪದಾರ್ಥಗಳು, ವಿಶಾಲವಾದ ಬಜಾರನ್ನು ಕಟ್ಟಲಾಗಿತ್ತು. ವಾಡೆಯ ಮುಂದಿನ ಬಾಜಾರದ ಚೌಕಿಗೆ 'ಮಾಣಿಕ ಚೌಕ' ಎಂದು ಹೆಸರನ್ನು ಇಟ್ಟಿದ್ದರು. ಆ ಮಾಣಿಕ ಚೌಕದ ನಾಲ್ಕು ಬದಿಗಳಿಗೂ ಬಜಾರದ ರಸ್ತೆಗಳು ಒಂದೇ ರೀತಿಯಲ್ಲಿ ನಗರದ ವಸತಿಯ ವರೆಗೂ ಹಬ್ಬಿ ಇದ್ದುವು. ಬಾಜಾರದ ಹಿಂಬದಿಯಲ್ಲಿ ಅಮೀರ ಜನರು, ರಾಜ್ಯದ ಕಾರಭಾರಿ ಮಂಡಳಿದವರು ವ್ಯಾಪಾರಿ ಜನರು, ಮತ್ತು ಶ್ರೀಮಂತ ಜನರು ದೊಡ್ಡ ದೊಡ್ಡ ಇಮಾರತಿಗಳ ಸಾಲನ್ನೆ ಕಟ್ಟಲಾಗಿದೆ. ಸದರೀ ಜನರ ಯೋಗ್ಯತಾನುಸಾರವಾಗಿ ಮಂಟಪಗಳನ್ನು, ತೋಟಗಳನ್ನು ಕಟ್ಟಲಾಗಿದೆ. ಉದ್ದ ಹಾಗೂ ಅಗಲವಾದ ಹೌಜನ್ನು ಕಟ್ಟಲಾಗಿದೆ. ಆ ಹೌಜಿನಲ್ಲಿ ನಿರಂತರವಾಗಿ ಸಿಹಿಯಾದ ನೀರು ಯಾವಾಗಲೂ ತುಂಬಿರುವಂತೆ ವ್ಯವಸ್ಥೆ ಮಾಡಲಾಗಿದೆ. ಹೌಜಿನ ನೀರು ಹೂದೋಟ-ಕೈತೋಟಗಳಿಗೂ, ಜನರಿಗೂ ದನಗಳಿಗೂ ನಿರಂತರ ತೃಪ್ತಿ ಕೊಡುತ್ತದೆ. ಆ ಹೌಜನ್ನು ತುಂಬ ಆಳವಾಗಿ ತೋಡಲಾಗಿದೆ. ಹೌಜಿನ ತಳವನ್ನು ಕಲ್ಲುಗಳಿಂದ ಗಟ್ಟಿಯಾಗಿ ಕಟ್ಟಲಾಗಿದೆ. ನೀರು ಸ್ವಚ್ಛ ಹಾಗೂ ಶುದ್ಧವಾಗಿರುತ್ತವೆ. ಶಹಾನವಾಜಖಾನನು ತನಗಾಗಿ ಒಂದು ವಾಡೆಯನ್ನು ಆ ನಗರದಲ್ಲಿ ಕಟ್ಟಿಕೊಂಡಿದ್ದಾನೆ. ಆ ವಾಡೆಯು ಹೊಗಳಿಕೆ ಹಾಗೂ ವರ್ಣನೆಗಳಿಂದ ಅತೀತವಾಗಿದೆ. ಅದರ ವರ್ಣನೆಯನ್ನು ಎಷ್ಟೆಂದು ಮಾಡುವುದು? ಆ ವಾಡೆಯನ್ನು ಬಹಳ ವಿಚಿತ್ರವಾಗಿ ಕಟ್ಟಲಾಗಿದೆ. ಅದನ್ನು ನೋಡಿದ ವ್ಯಕ್ತಿ ವಿಚಾರದಲ್ಲಿ ಬೀಳುತ್ತಾನೆ. ಅದರ ಎತ್ತರ ಹಾಗೂ ವಿಸ್ತೀರ್ಣತೆಯಲ್ಲಿ ಕೆಲಸದಲ್ಲಿ ಬಹಳ ಶ್ರಮ ವಹಿಸಿದ್ದಾರೆ. ಸುಂದರವಾದ ಬಾಗಿಲುಗಳು. ಚಮತ್ಕಾರಿಕವಾದ ಮಹಡಿಗಳು, ಸಾಕಷ್ಟು ಕಿಡಕಿಗಳು, ಸರಳ-ಸುಂದರವಾಗಿ ಬಹಳ ಉದ್ದವಾಗಿ ಕಟ್ಟಲಾಗಿದೆ. ಅದುವೆ ಆ ವಾಡೆಗೆ ಅತ್ಯಂತ ಶೋಭೆಯನ್ನು ತಂದಿದೆ.

ವಾಡೆಯ ಗೋಡೆಗಳ ಮೇಲೆ ಆಕಾಶ ಬಣ್ಣದ ಸೋನೇರಿ ಕಾರಾಗಿರಿಯನ್ನು ಮಾಡಲಾಗಿದೆ. ಮತ್ತು ನಾನಾ ಪ್ರಕಾರದ ಚಿತ್ರಗಳ್ಳನು ತೆಗೆಯಲಾಗಿದೆ. ತರತರಹ ಕುಶಲತೆಯಿಂದ ಚಮತ್ಕಾರಿಕವಾಗಿ ವಾಡೆಯನ್ನು ಕಟ್ಟಲಾಗಿದೆ. ವಾಡೆಯ ಎದುರಿಗೆ ನಾಲ್ಕು ಬದಿಗೂ ಹೂದೋಟಗಳು ಥಳಥಳ ಹೊಳೆಯುತ್ತಿವೆ. ನಿಸ್ಸಂಶಯವಾಗಿ ಹೇಳಬೇಕೆಂದರೆ. ಇಂಥ ವಾಡೆ, ಈ ತರಹದ ತೋಟ ಜಗದಲ್ಲಿ ಬೇರೆಲ್ಲೂ, ಇಲ್ಲ. ಇಷ್ಟು ಹೇಳಿದರೆ ಸಾಕು ಎನಿಸುತ್ತದೆ. ಇರಾನ ದುರಾನ ಪ್ರವಾಸಿ ಜನರು, ರೂಮ ಹಾಗೂ ಅರಬ ಸ್ಥಾನದ ಮುಸಾಫಿರರು ಹಾಗೂ ಹಿಂದುಸ್ತಾನದ ಬರ-ಹೋಗುವ ಜನರೆಲ್ಲ ಈ ನಗರವನ್ನು ನೋಡಿದವರು ಬೆಕ್ಕಸ-ಬೆರಗಾಗಿ, ಪ್ರಪಂಚವನ್ನೆಲ್ಲ ಸುತ್ತಿ ಬಂದರೂ ಈ ನಗರದ ಕಟ್ಟಡಗಳಂತೆ ಕಟ್ಟಿದ್ದನ್ನು ಬೇರಾವ ಪ್ರದೇಶಗಳಲ್ಲೂ ನೋಡಿಲ್ಲ ಕೇಳಿಲ್ಲ. ಆದಾಗ್ಯೂ ದೊಡ್ಡ ದೊಡ್ಡ ಜನರು ಲಕ್ಷಾವಧಿ ರೂಪಾಯಿಗಳನ್ನು ಖರ್ಚುಮಾಡಿ, ಚಿತ್ತ ಸಮಾಧಾನಕ್ಕಾಗಿ, ಮನೋರಂಜನೆಗಾಗಿ ವಾಡೆಗಳನ್ನು ಇಮಾರತಿಗಳನ್ನು ಈ ನಗರದಲ್ಲಿ ಹಾಗೂ ವಿಜಾಪುರದಲ್ಲಿ ಕಟ್ಟಿರುವರಾದರೂ ವಾಡೆಯಂಥ ಕಟ್ಟಡ ಬೇರೆಲ್ಲೂ ಇಲ್ಲ. ನವಾಬ ಶಹಾನವಾಜಖಾನನು, ವಿಜಾಪುರದಲ್ಲಿ ಒಂದು ವಾಡೆಯನ್ನು ಕಟ್ಟಿದ್ದಾನೆ. ಆ ಕಟ್ಟಡವೂ ಅನುಪಮವಾಗಿದೆ. ಆದರೆ ಆ ವಾಡೆ ಕೂಡ ಈ ಚಮತ್ಕಾರಿಕ ಹಾಗೂ ವೈಭವದ ವಾಡೆಯ ಮುಂದೆ ಏನೂ ಅಲ್ಲವೆಂದು ಕಾಣುತ್ತದೆ.

### ೪೫. ಹೊಸ ನಗರಕ್ಕೆ ನವರಸಪುರ ಎಂದು ಹೆಸರಿಡುವ ಕಾರಣ :

ಹೊಸನಗರವನ್ನು ಕಟ್ಟಿ ಪೂರ್ತಿಗೊಳಿಸಿದ ದಿನ ಇಬ್ರಾಹಿಮ ಆದಿಲಶಹನಿಗೆ, ಹತ್ತಿರದ ತೊರವೆ ಗ್ರಾಮದ ಒಬ್ಬ ಗೃಹಸ್ಥನು ಒಂದು ಬಾಟಲಿ ಮದ್ಯವನ್ನು ಕಾಣಿಕೆಯಾಗಿ ಕೊಟ್ಟನು. ಅಂಥ ರುಚಿಯಾದ ಮದ್ಯವನ್ನು ಬಾದಶಹನು ಎಂದೂ ಕುಡಿದಿರಲಿಲ್ಲವಂತೆ. ಅದನ್ನು ಎಲ್ಲಿಂದ ತಂದಿರಿ? ಎಂದು ಬಾದಶಹನು ವಿಚಾರಿಸಿದನು. ಅದು ಇಲ್ಲಿಯೇ ಉತ್ಪನ್ನವಾದುದೆಂದು ಗೊತ್ತಾದಾಗ ಬಾದಶಹನಿಗೆ ಇನ್ನಷ್ಟು ಆಶ್ಚರ್ಯವಾಯಿತು. ಆಗ ಬಾದಶಹನು ಸಂತೋಷದಿಂದ "ನನಗೆ ಹೊಸದೊಂದು ಸುಖವನ್ನು ಕೊಟ್ಟ ಈ ರಸ 'ನವರಸೀದ' ಎಂದನು. ಬಾದಶಹನ ನಾಲಿಗೆಯಿಂದ 'ನವರಸೀದ' ಶಬ್ದ ಹೊರಬಂದಿತು. ಅದೇ ಹೆಸರಿನಿಂದ ಈ ಹೊಸನಗರವನ್ನು ಕರೆಯಬೇಕೆಂದು ನಿರ್ಧರಿಸಲಾಯಿತು. ಆದ್ದರಿಂದ 'ನವರಸಪುರ'ಎಂಬುದಾಗಿ ಕರೆದನು. ಮುಂದೆ 'ನವರಸ' ದ ಹೆಸರಿನಿಂದಲೇ ಎಲ್ಲ ಕೆಲಸಗಳು ಪ್ರಾರಂಭವಾದುವು. ಮಹಾಲೀ ಹಾಗೂ ಮುಲ್ಕೀ ಕೆಲಸಗಳಲ್ಲಿ ಕೂಡ ನವರಸದ ಹೆಸರನ್ನು ಜಾರಿ ತರುವುದೆಂದು ನಿರ್ಧರಿಸಲಾಯಿತು. ನ್ಯಾಯ, ತಕರಾರು ಹಾಗೂ ಲೆಕ್ಕ ಪತ್ರಗಳ ಇಲಾಖೆಗೆ 'ಹಿಸಾಬೆ ನವರಸ' ಎಂದು ಕರೆದನು. ನವರಸ ಶಬ್ದದ ಬಗ್ಗೆ ಬಾದಶಹನಿಗೆ ವಿಲಕ್ಷಣ ಪ್ರೀತಿ ಉಂಟಾಗಿ. ಪ್ರತಿಯೊಂದು ಸ್ಥಳ, ಪದಾರ್ಥಗಳಿಗೆ 'ನವರಸ' ದ ಹೆಸರಿನ್ನಿಟ್ಟನು. ತನ್ನ ಖಾಸಾ ಮೋಹರನ್ನು ಬದಲಿಸಿ 'ನವರಸ ಇಬ್ರಾಹಿಮ' ಎಂಬುದಾಗಿ ಕೆತ್ತಿಸಿದನು. ಇಂದು ಬಾದಶಹನ ಗ್ರಂಥಾಲಯದಲ್ಲಿಯ ಪ್ರತಿಯೊಂದು ಪುಸ್ತಕಗಳ ಮೇಲೆ 'ನವರಸ ಇಬ್ರಾಹಿಮ' ಎಂಬುದಾಗಿ ಬರೆದದ್ದನ್ನು ಕಾಣಬಹುದಾಗಿದೆ. ಧ್ವಜ ಹಾಗೂ ನಿಶಾನಿಗಳನ್ನು 'ನಿಶಾನೆ ನವರಸ' ಹಾಗೂ 'ಆಲಮೆ ನವರಸ' ಎಂಬುದಾಗಿ ಕರೆದನು. ಆತನ ಧ್ವಜ ಹಳದಿ ಬಣ್ಣದ್ದಾಗಿದೆ. ಎಲ್ಲ ಮಹಲುಗಳಲ್ಲಿ ಅಧಿಕ ಶೋಭಾಯಮಾನವಾದ ಮಹಲನ್ನು ಬಾದಶಹನು ಕಟ್ಟಿಸಿದ್ದಾನೆ. ಅದಕ್ಕೆ 'ನವರಸ ಮಹಲ' ಎಂದು ಹೆಸರಿನ್ನಿಟ್ಟನು. ಗಾಯನದ ವಿಷಯದಲ್ಲಿ ಧೃಪದದ ಗ್ರಂಥವಿದೆ. ಅದು ಬಾದಶಹನ ಅತ್ಯಂತ ಪ್ರೀತಿಯ ಗ್ರಂಥವಾಗಿದೆ. ಆ ಪುಸ್ತಕಕ್ಕೂ ಕೂಡ 'ನವರಸ' ಎಂಬ ಹೆಸರನ್ನಿಟ್ಟನು. ಆ ಕಾಲದಲ್ಲಿ ಸರ್ವತ್ರ ಪ್ರಸಿದ್ಧಿಯಲ್ಲಿದ್ದ ಖುರ್ದಾ ಹಾಗೆ ಪೈಸೆಗಳಲ್ಲಿ ಖುರ್ದಾದ ಮೇಲೆ 'ಫಲುಸೆ ನವರಸ' ಎಂಬ ಹೆಸರು ಪ್ರಸಿದ್ಧವಾಗಿದೆ. ತನ್ನ ರಾಜಧಾನಿಯ ಎಲ್ಲ ರಸ್ತೆಗಳನ್ನು 'ರಾಹೆ ನವರಸ' ಎಂದು ಕರೆದನು. ನವರಸ ಮಹಲು ಬಹಳ ಎತ್ತರ, ತುಂಬ ಶೋಭೆಯನ್ನು ತರುವ ಕಟ್ಟಡವಾಗಿದೆ. ತಿಂಗಳ ಮೊದಲು ಬರುವ ಗುರುವಾರದಂದು ಒಂದು ಹಬ್ಬ ಬರುತ್ತದೆ. ಆ ಹಬ್ಬಕ್ಕೆ 'ಈದೆ ನವರಸ' ಎಂದು ಹೆಸರಿನ್ನಿಟ್ಟನು. ಸಾರಂಗಿ, ತಬಲಾ, ಮೃದಂಗ ಇತ್ಯಾದಿ ವಾದ್ಯಗಳನ್ನು ಸಂಗೀತಗಾರ ಹಾಗೂ ವಾದ್ಯಗಾರ ನುಡಿಸುವ ಮಂಡಳಿಗೆ 'ಲಷ್ಕರೆ ನವರಸ' ಎಂದು ಹೆಸರನ್ನು ಇಟ್ಟನು. ಬಾದಶಹನು ಪ್ರತಿಯೊಂದು ಕೆಲಸದಲ್ಲೂ ಈ 'ನವರಸ' ಎಂಬ ಶಬ್ದವನ್ನು ಸ್ವೀಕರಿಸಿದ್ದಾನೆ. ಇದು ಗೊತ್ತಾಗುತ್ತಿದ್ದಂತೆ 'ಆಯಾಕಾಲದ ಬಾದಶಹರು ಆಚರಿಸುವ ಧರ್ಮವನ್ನೇ ಜನರು ಆಚರಿಸುತ್ತಾರೆ' ಎಂದು ಕುರಾನಿನಲ್ಲಿ ಹೇಳಿದಂತೆ, ಎಲ್ಲ ಜನರು 'ನವರಸ' ಶಬ್ದವನ್ನು ಒಪ್ಪಿ ತಮ್ಮ ಎಲ್ಲ ಕೆಲಸಗಳಲ್ಲೂ ರೂಢಿಯಲ್ಲಿ ತಂದರು ಹೇಗೆಂದರೆ, ಆ ಬಾದಶಹನ ಹೆಸರಿನಲ್ಲಿದ್ದ ಬಾದಶಹನ ಇತಿಹಾಸಗ್ರಂಥಕ್ಕೆ ಬರೆದ ಮುನ್ನುಡಿಗೆ ಜಹೂರಿಯು 'ದಿವೋಚಯ ನವರಸ' ಎಂದೇ ಹೆಸರಿನ್ನಿಟ್ಟಿದ್ದಾನೆ. ಮಹಮ್ಮದ ಕಾಸಮ (ಫೆರಿಸ್ತಾ) ಎಂಬವನು ಬರೆದ ಇತಿಹಾಸ ಗ್ರಂಥಕ್ಕೆ 'ನವರಸ ನೋಮಯ ಫಿರಿಸ್ತಾ' ಎಂಬ ಹೆಸರಿದೆ. ಅಬ್ದುಲ ಕಾದಿರಿ ನವರಸ ಎಂಬವನು ಆ ಕಾಲದ ದೊಡ್ಡ ಕವಿ. ಅವನು ಬರೆದ ಕವಿತೆಗಳಲ್ಲಿ ಕೊನೆಗೆ ಅಬ್ದುಲ್ ಕಾದಿರಿಯು ತನ್ನ ಹೆಸರನ್ನು 'ನವರಸೀ' ಎಂದೇ ನಮೂದಿಸಿದ್ದಾನೆ.

**೪೬. ಇಬ್ರಾಹಿಮ ಆದಿಲಶಹನು 'ಈದೆ ನವರಸ' ಎಂಬ ಹೊಸ ಹಬ್ಬವನ್ನು ಪ್ರಾರಂಭಿಸಿದನು :**

ಪ್ರತಿ ತಿಂಗಳು ಮೊದಲ ಗುರುವಾರ ಬಂದಿತೆಂದರೆ ಆ ದಿನವನ್ನು 'ಈದೆ ನವರಸ' ಎಂದು ಹೆಸರನ್ನಿಟ್ಟು ನಾನಾ ಪ್ರಕಾರದ ಸಮಾರಂಭಗಳನ್ನು ಏರ್ಪಡಿಸುತ್ತಿದ್ದರು. ನವರಸ ಮಹಲನ್ನು ಅಲಂಕಾರ ಮಾಡಿ ಅಲ್ಲಿ ಎಲ್ಲರಿಗೂ ಬರಲು ಅನುಮತಿಯನ್ನು ನೀಡುತ್ತಿದ್ದರು. 'ಲಷ್ಕರೆ ನವರಸ' ಅಂದರೆ ದಾವೂದನಂತೆ ಹಾಡುವವರು, ನೃತ್ಯ ಮಾಡುವವರು ಮತ್ತು ವಾದ್ಯ ನುಡಿಸುವವರು, ಸುಸ್ವರ ದನಿಯ ಮಂಡಳಿ ಸೇರುತ್ತಿತ್ತು. ಆ ಕಾಲದಲ್ಲಿ ಈ ಗುಣೀ ಜನರ ಸಮುದಾಯಕ್ಕೆ 'ಅತಾರ್ಚ' ಎಂದು ಹೆಸರನ್ನು ಇಟ್ಟಿದ್ದರು. ಆ ಎಲ್ಲ ಜನರು 'ಕಂಚನೀ' ಎಂಬ ಹೆಸರಿನಿಂದ ಪ್ರಸಿದ್ಧರಾದರು. ಆ ಕಾಲದಲ್ಲಿ ಈ ಜನರ ಯೋಗ್ಯತೆಯೇ ಅಧಿಕ ವೃದ್ಧಿಯಾಗಿತ್ತು. ಅವರ ಶ್ರೇಷ್ಠತೆ ಎಷ್ಟರಮಟ್ಟಿಗೆ ಬೆಳೆದಿತ್ತೆಂದರೆ, ಅದನ್ನು ವಿಸ್ತರಿಸಿ ಹೇಳಲು ಬರುವುದಿಲ್ಲ. ಹೇಳಬೇಕೆಂದರೆ ಎಷ್ಟು ಹೇಳಬಹುದು? ದೊಡ್ಡ-ದೊಡ್ಡ ಕುಲದಲ್ಲಿಯ ಬಹಳಷ್ಟು ಸಂಭಾವಿತ ಕುಲೀನ ಜನರು ಇದೇ ಗುಣೀ ಜನರ ಸಮುದಾಯದಲ್ಲಿ ಸೇರಿ, ದೊಡ್ಡಸ್ತಿಕೆಗೆ ಏರುವ ಉಮೇದಿಯನ್ನು ಇಟ್ಟುಕೊಂಡಿದ್ದರು. ಅದೇ ಆಶೆಯಿಂದ ಮತ್ತು ಬಯಕೆಯಿಂದ ಈ ಗುಂಪಿನಲ್ಲಿ ಸೇರುತ್ತಿದ್ದರು. ಒಂದಿಷ್ಟು ಅಭ್ಯಾಸ ಒಂದಿಷ್ಟು ಪರಿಜ್ಞಾನವನ್ನು ಗಾಯನ ಮತ್ತು ವಾದ್ಯ ನುಡಿಸುವ ವಿದ್ಯೆಯಲ್ಲಿ ಪಡೆದರೆ ಸಾಕು, ಸಂಗೀತ ಸಭೆಗಳಲ್ಲಿ ಕುಳಿತು ಈ ಗುಣೀ ಜನರ ಸಮುದಾಯದಲ್ಲಿ ದೊರೆಯುವ ಬಕ್ಷೀಸುಗಳಲ್ಲಿ ಪಾಲುದಾರರಾಗುತ್ತಿದ್ದರು. 'ಈದೇ ನವರಸ'ದ ದಿನದಂದು ಪ್ರಖ್ಯಾತ ಗಾಯಕರು, ವಾದ್ಯ ವಿಶಾರದರು ಸಣ್ಣವರು- ದೊಡ್ಡವರು ಎಲ್ಲರೂ ಸೇರಿ, ಗಾಯನ ಮಾಡುತ್ತಿದ್ದರು. ವಾದ್ಯಗಳನ್ನು ನುಡಿಸುತ್ತಿದ್ದರು. ಎಲ್ಲ ಜನರೂ ಆನಂದ ಪಡೆಯುತ್ತಿದ್ದರು. ಕಸ್ತೂರಿ, ಕೇಶರ, ಅಬೀರ, ಗುಲಾಲ ಮತ್ತು ಅತ್ತರ ಇತ್ಯಾದಿ ಎಲ್ಲ ಸುವಾಸನೆಯುಕ್ತ ವಸ್ತುಗಳು ಆದಿನ ಖರ್ಚಾಗುತ್ತಿದ್ದುವು. ಅದಕ್ಕೊಂದು ಅಂತ್ಯವೇ ಇರಲಿಲ್ಲ. ಮೇವಾ, ಮಿಠಾಯಿ ಇತ್ಯಾದಿ ಸಿಹಿ ತಿಂಡಿಗಳನ್ನು ಎಲ್ಲರಿಗೂ ಹಂಚಲಾಗುತ್ತಿತ್ತು. ಆಗ ಯಾರಿಗೆ ಎಷ್ಟು ಶಕ್ತಿ ಇದೆಯೋ ಅಷ್ಟನ್ನು ಅವರು ತಿನ್ನುತ್ತಿದ್ದರು ಮತ್ತು ತೆಗೆದುಕೊಂಡು ಹೋಗುತ್ತಿದ್ದರು. ಅದರಂತೆ ಭೋಜನದ ಪದಾರ್ಥಗಳು, ಅತ್ಯಂತ ಮೃಷ್ಟಾನ್ನ ಅದರಲ್ಲಿ ನಾನಾ ತರದ ಷಡರಸದ ಪಕ್ವಾನ್ನಗಳಿರುತ್ತಿದ್ದವು. ಆ ದಿನ ಎಲ್ಲ ಕಾರಭಾರಿ ಜನರು, ದೊಡ್ಡ ದೊಡ್ಡ ಕಾಮದಾರರು ಊಟ ಮಾಡಿ ಹೋದ ಮೇಲೆ ಸದರೀ ಗುಣೀ ಜನರು ಅಂದರೆ ಗಾಯಕರು, ನೃತ್ಯ ಮಾಡುವವರು ಇತ್ಯಾದಿ ಜನರ ಪಂಕ್ತಿ ಕೂಡುತ್ತಿತ್ತು. ಅನಂತರ ಎಲ್ಲರನ್ನೂ ಕೂಡಿಸಿ ಎಲೆ ಹಾಕಿ ಊಟಕ್ಕೆ ಕೂಡ್ರಿಸುತ್ತಿದ್ದರು. ಆಗ ಶಿಷ್ಯರು, ಖಿದಮತಗಾರರು, ಫಕೀರರು ಮತ್ತು ಭಿಕ್ಷುಕ ಜನರು ಇತ್ಯಾದಿ, ಯಾರೆಲ್ಲ ಬರಲಿ ಅವರೆಲ್ಲ ಊಟ ಮಾಡುತ್ತಿದ್ದರು. ಸಾಯಂಕಾಲದಲ್ಲಿ ಬಾದಶಹನು ಪ್ರತಿಯೊಬ್ಬ ಕಲಾವಂತನಿಗೆ ಭಾರಿ ಕಿಮ್ಮತ್ತಿನ ವಸ್ತ್ರಗಳನ್ನು ಕೊಟ್ಟು ಅವರ ಯೋಗ್ಯತೆಯನ್ನು ಅಧಿಕಗೊಳಿಸುತ್ತಿದ್ದನು. ಅಲ್ಲದೆ ಆ ದಿನ ಇನಾಮುಗಳನ್ನು ಬಕ್ಷೀಸುಗಳನ್ನು ಮುತ್ತು ರತ್ನ ನಗದು ಹಣವನ್ನು ಅವರವರ ಯೋಗ್ಯತಾನುರೂಪದಲ್ಲಿ ಕೊಡುತ್ತಿದ್ದನು. ಅಲ್ಲಲ್ಲಿ ರಾಜ್ಯದ ವ್ಯವಸ್ಥೆಗಾಗಿ ಕಳಿಸಿದ ಮಾಮಲೆದಾರರನ್ನು ಕೂಡ ಆ ದಿನ ಕರೆಯಿಸಿ, ವಸ್ತ್ರಗಳನ್ನು ಕೊಟ್ಟು ಕಳಿಸುತ್ತಿದ್ದನು.

ಬಾದಶಹನು ಸಣ್ಣವನಿದ್ದಾಗಿನಿಂದಲೇ ಗಾಯನ ಕಲೆ ಅಭ್ಯಾಸ ಮಾಡಿದ್ದನು. ಆದ್ದರಿಂದ ಬಾದಶಹನ ಅಭ್ಯಾಸವು ಗಾಯನ ಕಲೆಯಲ್ಲಿ ಬಹಳ ದೃಢವಾಗಿತ್ತು. ಬಾದಶಹನ ಹಾಡುಗಾರಿಕೆಯಲ್ಲಿ ಅರ್ಥ ಬರುತ್ತಿದ್ದಂತೆ ತುಸುವೆ ದಿನಗಳಲ್ಲಿ ಅವನಂತೆ ಹಾಡುವ ಇನ್ನೊಬ್ಬರಿರಲಿಲ್ಲ ಎಂಬಷ್ಟು ಜ್ಞಾನವನ್ನು ಸಂಗೀತದಲ್ಲಿ ಸಂಪಾದಿಸಿ

ಅದ್ವಿತೀಯ ಹಾಡುಗಾರನಾದನು. ಗಾಯನ ಕಲಿಸುವ ಗುರುಗಳಿಗೆ ಗುರುವಾದನು. ಅವನ ಹಾಡುಗಾರಿಕೆಯಲ್ಲಿ ಸುಸ್ವರ ದನಿ ಇತ್ತು. ಜಗದ ಹಾಡುಗಾರರಲ್ಲಿ ಅವನಿಗೆ ಮಾನ್ಯತೆ ದೊರೆಯಿತು. ಆತನ ಪ್ರಸಿದ್ಧಿಯಿಂದಾಗಿ ಆ ಕಾಲದ ವಿಶ್ವದ ನಾನಾ ಮೂಲೆಗಳಿಂದ ಆತನ ಹಾಡುಗಾರಿಕೆಯನ್ನು ಕೇಳಲು, ವ್ರತಧಾರಣ ಮಾಡಿ ಪ್ರಪಂಚ-ಪಾರಮಾರ್ಥವನ್ನು ಸಾಧಿಸಲು ಮಕ್ಕಾ ಕ್ಷೇತ್ರಕ್ಕೆ ಹೋಗುವಂತೆ ಸಂಗೀತಗಾರರು ವಿಜಾಪುರಕ್ಕೆ ಬರುತ್ತಿದ್ದರು. ತಾವೂ ಹಾಡಿ ಬಾದಶಹನ ಕೃಪೆಗೆ ಪಾತ್ರರಾಗುತ್ತಿದ್ದರು. ಆ ತರದ ಸುಮಾರು ಮೂರು ನಾಲ್ಕು ಸಾವಿರ ಜನರು ಸಂಗೀತ ಕಲಿಯಲೆಂದೇ ಬಾದಶಹನ ಶಿಷ್ಯರಾಗಿ ಬಂದು ಪ್ರಸಿದ್ಧರಾಗಿದ್ದರು. ಅವನ ಶಿಷ್ಯರಾದರೆ, ತಮಗೆ ತುಸುವೆ ಸಂಗೀತ ಬಂದರೂ ಸಾಕು ತಾವು ಸಂಗೀತ ಕಲೆಯನ್ನು ಪ್ರಾರಂಭಿಸಿದ 'ಫಿಸಾ ಗೌರಸ' ನಂತೆ ಆದೆವೆಂದು ತಿಳಿಯುತ್ತಿದ್ದರು.

### ೪೭. *ಇಬ್ರಾಹಿಮ ಆದಿಲಶಹನ ಶಿಷ್ಯರಲ್ಲಿ ಮೂರು ವರ್ಗದ ಹಾಡುಗಾರರು :*

ಆ ಹಾಡುಗಾರರಲ್ಲಿ ಮೂರು ವರ್ಗಗಳನ್ನು ಮಾಡಲಾಗಿತ್ತು. ಮೊದಲನೆಯ ವರ್ಗಕ್ಕೆ ಹುಜೂರಿಯಾನ ಎಂದು ಹೆಸರು. ಎರಡನೆಯ ವರ್ಗ ದರಬಾರಿಯಾನ ಎಂದಾದರೆ ಮೂರನೆಯ ವರ್ಗದ ಹೆಸರು ಶಹರೀಯಾನ ಎಂದು. ಗಾಯನ ಕಲೆಯಲ್ಲಿ ಪೂರ್ಣ ಅರ್ಥ ಹಾಗೂ ಜ್ಞಾನವನ್ನು ಸಂಪಾದಿಸಿ, ಸಂಗೀತದಲ್ಲಿಯ ಸೂಕ್ಷ್ಮಾತಿಸೂಕ್ಷ್ಮ ಲಕ್ಷಣಗಳನ್ನು ಪಡೆದು, ಗಾಯನಕಲೆಯ ಎಲ್ಲ ವಿದ್ಯೆಗಳೂ ಕರಗತವಾಗಿದ್ದರೆ, ಆ ಜನರು ಹಗಲು ರಾತ್ರಿ ಬಾದಶಹನ ಸನ್ನಿಧಾನದಲ್ಲಿಯೇ ಇದ್ದು ಸಂಗೀತದ ಉಪಯೋಗವನ್ನು ಪಡೆಯುತ್ತಿದ್ದರು. ಈ ಜನರ ಗುಂಪಿಗೆ ಹುಜೂರಿಯಾನ ಎಂದು ಕರೆಯುತ್ತಿದ್ದರು. ಈ ಮೊದಲವರ್ಗದ ಸಂಗೀತಗಾರರಿಗಿಂತ ಕಡಿಮೆ ಹಾಡುಗಾರರಿದ್ದರೆ ಅವರು ಸರಕಾರದ ಪ್ರಭುಗಳ ಖಾಸಾ ಪರದೆಯ ಹೊರಗೆ ಇದ್ದುಕೊಂಡು ಹಗಲುರಾತ್ರಿ ದರಬಾರದಲ್ಲಿ ಕುಳಿತುಕೊಳ್ಳುತ್ತಿದ್ದರು. ಆದ್ದರಿಂದ ಈ ಎರಡನೆಯ ವರ್ಗದ ಜನರಿಗೆ ದರಬಾರಿಯಾನ ಎಂದು ಕರೆಯುತ್ತಿದ್ದರು. ಇನ್ನುಳಿದ ಹಾಡುಗಾರರು ನವರಸ ಪುರದಲ್ಲಿದ್ದು ಎಲ್ಲ ಜನರಿಂದ ಇನಾಮುಗಳನ್ನು-ಬಕ್ಷೀಸುಗಳನ್ನು ಪಡೆದು ಪ್ರತಿನಿತ್ಯ ಸಂಗೀತವನ್ನು ಕಲಿಯುವುದರಲ್ಲೆ ಅಭ್ಯಾಸ ಮಾಡುವ ಮೂರನೆಯ ವರ್ಗದ ಜನರಿಗೆ ಶಹರಿಯಾನ ಎಂದು ಕರೆಯುತ್ತಿದ್ದರು.

ಬಾದಶಹನು ತಾನೆ ಸ್ವತಃ ಹಾಡುತ್ತಿದ್ದಾಗ, ತನ್ನ ಕೃಪಾವಂತ ಅಂತಃಕರಣದಿಂದ ಬಹಳ ಆಶ್ಚರ್ಯಜನಕವಾದ ಅಲಾಪಗಳನ್ನು ತೆರೆಯುತ್ತಿದ್ದನು. ಅದನ್ನು ಕಂಡು-ಕೇಳುತ್ತಿದ್ದ ಮೊದಲವರ್ಗದ ಹುಜೂರಿಯಾನ ಸಂಗೀತಗಾರರು ಅತ್ಯಂತ ಸಂತೋಷ ಪಡುತ್ತಿದ್ದರು. ಮನಃಪೂರ್ವಕವಾಗಿ ಬಾಯಿತುಂಬ ಬಾದಶಹನ ಸಂಗೀತವನ್ನು ವರ್ಣಿಸುತ್ತಿದ್ದರು. ಆತನ ಸಂಗೀತವನ್ನು ಗಮನಿಸುತ್ತ ಅದರಲ್ಲಿಯ ವಿಶೇಷತೆಯನ್ನು ಕಲಿಯುತ್ತಿದ್ದರು. ಬಾದಶಹನ ಗತ್ತುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಇನ್ನೊಬ್ಬರಿಗೆ ಕಲಿಸುವಾಗ ಮತ್ತು ಎರಡನೆಯ ವರ್ಗದ ದರಬಾರಿಯಾನ ಜನರ ಮುಂದೆ ಬಾದಶಹನ ಸಂಗೀತವನ್ನು ಹೊಗಳುತ್ತ ಅವನಂತೆ ಹಾಡಿ ತೋರಿಸುತ್ತಿದ್ದರು. ಆಗ ಆ ಜನರು ಬಾದಶಹನ ಸಂಗೀತದ ಗತ್ತನ್ನು ಕೇಳಿ. ದರಬಾರಿಯಾನ ವರ್ಗದ ಸಂಗೀತಗಾರರು ಅದರಂತೆ ಕಲಿಯುತ್ತಿದ್ದರು. ಅದೇ ಸಂಗೀತ ಕಲೆಯನ್ನು ನವರಸಪುರದಲ್ಲಿ ಇರುತ್ತಿದ್ದ ಮೂರನೆಯ ವರ್ಗದ ಶಹರಿಯಾನ ಸಂಗೀತಗಾರರಿಗೆ ಕಲಿಸುತ್ತಿದ್ದರು. ಹಾಗೆ ಪ್ರತಿನಿತ್ಯ ಶಹರಿಯಾನ ಜನರು ದರಬಾರಿಯಾನ ಜನರ ಶಿಷ್ಯರಾಗಿ ಅಭ್ಯಾಸ ಮಾಡುತ್ತಿದ್ದರೆ, ದರಬಾರಿಯಾನ ಜನರು ಹುಜೂರಿಯಾನ ಜನರ ಶಿಷ್ಯರಾಗಿದ್ದು ಸಂಗೀತ ಸಾಧನೆ ಮಾಡುತ್ತಿದ್ದರು. ಅಭ್ಯಾಸಮಾಡುವಲ್ಲಿ

ಪೂರ್ಣ ಶ್ರಮವನ್ನು, ಅವಿರತ ಸಾಧನೆಯನ್ನು ಮಾಡುತ್ತಿದ್ದರು. ಅಂದರೆ ಮೊದಲ ವರ್ಗದ ಹಾಡುವ ಜನರು ಹಗಲು ರಾತ್ರಿ ಬಾದಶಹನ ಶಿಷ್ಯರಾಗಿದ್ದು ಕೊಂಡು ಬಾದಶಹನಿಂದ ಕಲಿಯುವಲ್ಲಿ ಮಗ್ನರಾಗಿರುತ್ತಿದ್ದರು. ಈ ಎಲ್ಲ ಸಂಗೀತಗಾರರಿಗೆ ಭೂಮಿ-ಸೀಮೆಗಳು, ಜಹಗೀರುಗಳನ್ನು ಉಂಬಳಿಯಾಗಿ ಹಾಕಿಕೊಟ್ಟು ನಗದಾಗಿ ಸಂಬಳ ಹಾಗೂ ಬಕ್ಷಿಸುಗಳು ಕೃಪಾವಂತ ಸರಕಾರದಿಂದ ದೊರೆಯುತ್ತಿತ್ತು. ಕೆಲವರಿಗೆ ಸರಕಾರೀ ಖಜೀನೆಯಿಂದ ಪ್ರತಿ ತಿಂಗಳು ಸಂಬಳ ಮುಟ್ಟುತ್ತಿತ್ತು. ಕೆಲವು ಜನರಿಗೆ ನವರಸಪುರ ನಗರದಲ್ಲಿ ನಿರಂತರ ಪ್ರಾಪ್ತಿ ಇತ್ತು. ಇನ್ನು ಕೆಲವರಿಗೆ ವಿಜಾಪುರ ನಗರದ ವಸೂಲಿಗಳಲ್ಲಿ ಭಾಗಶಃ ಕೊಡಲಾಗುತ್ತಿತ್ತು. ಇನ್ನು ಕೆಲವರಿಗೆ ಗ್ರಾಮಗಳನ್ನು ಉಂಬಳಿಯಾಗಿ ಹಾಕಿ ಕೊಡಲಾಗುತ್ತಿತ್ತು. ಆದ್ದರಿಂದ ಆ ಎಲ್ಲ ಸಂಗೀತಗಾರರು ತಿಂದುಂಡು ಸುಖ ಸಂತೋಷಗಳಿಂದ ಸಂಸಾರ ಮಾಡುತ್ತಿದ್ದರು.

### *೪೮. ಅಕಬರ ಬಾದಶಹನು ಖಂಡಣಿಯನ್ನು ಕೇಳಿ, ಇಬ್ರಾಹಿಮ ಆದಿಲಶಹನ ಹತ್ತಿರ ರಾಯಭಾರಿಯನ್ನು ಕಳಿಸಿದ್ದು :*

ಈ ಮೊದಲು ಅಕಬರ ಬಾದಶಹನು ರಾಜಕುಮಾರ ಮುರಾದನನ್ನು ಖಾನಖಾನ ಜೊತೆಗೆ ದಕ್ಷಿಣದೇಶಗಳ ವ್ಯವಸ್ಥೆಗಾಗಿ ಕಳಿಸಿದ್ದನು. ದಕ್ಷಿಣ ದೇಶಗಳ ವ್ಯವಸ್ಥೆಗಾಗಿ ಖಾನಖಾನನು ಬಹಳ ಪ್ರಯತ್ನವನ್ನು ಮಾಡುತ್ತಿದ್ದನು. ಅವರೊಂದಿಗೆ ಸ್ನೇಹ ಸಂಪಾದಿಸುವ ಪ್ರಯತ್ನದಲ್ಲಿದ್ದನು. ಆದರೆ, ಯಾವ ವ್ಯವಸ್ಥೆಯೂ ಆಗಿರಲಿಲ್ಲ. ನಿಜಾಮಶಹನ ರಾಜ್ಯವನ್ನು ಹಸ್ತಗತ ಮಾಡಿಕೊಳ್ಳುವ ಪೂರ್ವದಲ್ಲಿಯೆ, ಇದು ಮನಸ್ಸಿನಲ್ಲಿತ್ತು. ಆದರೆ ಅದರಂತೆ ಘಟನೆಗಳು ಸಂಭವಿಸುತ್ತಿರಲಿಲ್ಲ. ನಿಜಾಮಶಹನ ಅಮೀರ ಜನರಲ್ಲಿ ತನ್ನವರೆನ್ನುವವರು ಮೊಗಲರ ಕಡೆಗೆ ಯಾರೂ ಇರಲಿಲ್ಲ. ಪ್ರತಿಯಾಗಿ ಮೊಗಲರು ಕೈವಶ ಪಡಿಸಿಕೊಂಡು ಇತರ ಠಾಣೆಗಳ ಮೇಲೆ ಈ ಜನ ಹಲ್ಲೆ ಮಾಡಿ ವಶಪಡಿಸಿಕೊಂಡಿದ್ದರು. ಇದರಿಂದಾಗಿ ಅಕಬರ ಬಾದಶಹನು ಮತ್ತಷ್ಟು ಕ್ರುದ್ಧನಾಗಿದ್ದನು. ಈ ಸಂದರ್ಭದಲ್ಲಿಯೇ ಆತನಿಗೆ ಭರಿಸಲಾರದಷ್ಟು ದುಃಖದ ಪ್ರಸಂಗ ಒದಗಿ ಬಂದಿತು. ಹಿಜರಿಸನ್ ೧೦೦೭ರಲ್ಲಿ (ಕ್ರಿ.ಶ ೧೫೯೮-೯೯) ಅಕಬರ ಬಾದಶಹನ ಮಗ ಮುರಾದನು ಮರಣ ಹೊಂದಿದನು.[1] ಅಕಬರ ಬಾದಶಹನಿಗೆ ಇದೊಂದು ತುಂಬಿ ಬಾರದ ನಷ್ಟವಾಗಿತ್ತು. ದುಃಖದ ಸಮುದ್ರ ಉಕ್ಕಿ ಬಂದಿತ್ತು. ಚಿಂತೆಯ ತೆರೆಗಳು ಎದ್ದು ಬರುತ್ತಿದ್ದವು. ಈ ಸಂಕಟದ ಹಾಗೂ ದುಃಖದ ಪ್ರಸಂಗದಲ್ಲಿಯೆ ಅಕಬರ ಬಾದಶಹನು ಮತ್ತೆ ದಕ್ಷಿಣ ದೇಶದ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಲು, ತನ್ನ ಇನ್ನೊಬ್ಬ ಮಗ ದಾನಿಯಲ್‌ನನ್ನು[2] ಖಾನಖಾನನ ಜೊತೆಗೆ ದೊಡ್ಡ ಸೈನ್ಯದೊಂದಿಗೆ ಕಳಿಸಿ ತಾನೂ ಸ್ವತಃ ಹಿಜರಿ ಸನ್ ೧೦೦೮ರಲ್ಲಿ (ಕ್ರಿ.ಶ ೧೫೯೯-೧೬೦೦) ಮತ್ತಷ್ಟು ಸೈನ್ಯವನ್ನು ತೆಗೆದುಕೊಂಡು ತನ್ನ ರಾಜಧಾನಿಯಿಂದ

---

1. On the 17th Urdibhitust, Jhlus 44, (27 April 1599) near Dihbari. On the banks of the Purta, twenty Kos from Daulatabad, Prince Sultan Murad's fits took a grave character, and on the 22nd (2 May 1599) he became insenisble and died`` -Akbar Nama Elliat Dowson P 97; Muntkhabu -t- Tawarikh. -E.D.P. 204.

2. "On the 2nd of the month of Ir (14 June 1599) Prince Daniyal was sent to subdue the Dakhin"- Munthkhabu-t-Twaraikh E.D P 204 Akbar gave the Govenment of the Deccan and Khandesh to prince Daniyal on 21st April 1601 and left for Deccan on 22nd April 1601- Inscription near Gateway of Asirgarh-Muslim Inscriptions" by V.S. Bendrly P. 137.

ಹೊರಟು ದಕ್ಷಿಣ ದೇಶಗಳತ್ತ ನಡೆದನು. ಮೊದಲು ಅಶರದ ಹತ್ತಿರ ಬಂದು ಮುಟ್ಟಿದನು. ಯಾಕೆಂದರೆ ರಾಜಾ ಅಲೀಖಾನನ ಮಗ ಹಾಜರಖಾನನು ಅಕಬರಬಾದಶಹನ ಆಜ್ಞೆಯಂತೆ ನಡೆಯುತ್ತಿರಲಿಲ್ಲ. ತನ್ನ ತಂದೆಯಂತೆಯೇ ಸ್ವತಂತ್ರವಾಗಿ ನಡೆದುಕೊಳ್ಳುತ್ತಿದ್ದನು. ಆದ್ದರಿಂದ ಮೊದಲು ಆ ಕೋಟೆಯ ಮೇಲೆ ದಾಳಿ ಮಾಡಿದನು.[3] ಅಕಬರ ಬಾದಶಹನ ಮಗ ರಾಜಕುಮಾರ ದಾನಿಯಲನು ಖಾನಖಾನನ ಜೊತೆಗೆ ಮುಂದೆ ಹೋಗಿ, ಅಹಮದನಗರದ ಕೋಟೆಯ ಮೇಲೆ ದಾಳಿ ಮಾಡಿದನು. ಅಂಥ ಸಮಯದಲ್ಲಿ ಅಕಬರ ಬಾದಶಹನು ಶರೀಫ ಸರಮದೀ ಎಂಬವನನ್ನು ಇಬ್ರಾಹಿಮ ಆದಿಲಶಹನ ಕಡೆಗೆ ವಿಜಾಪುರಕ್ಕೆ ಕಳಿಸಿ, ಬಹಳ ಇಚ್ಛೆ ಹಾಗೂ ಆಶೆಗಳಿಂದ ದೊಡ್ಡ ಮೊತ್ತದ ಖಂಡಣಿಯನ್ನು ಕೇಳಿ ಕಳಿಸಿದ್ದನು. ಇಬ್ರಾಹಿಮನ ಕಿವಿಗಳಿಗೆ ಕೇಳದಷ್ಟು ಕಠೋರ ಶಬ್ದಗಳಲ್ಲಿ ನಿರೋಪವನ್ನು ಹೇಳಿ ಕಳಿಸಿದ್ದನು. ಆದರೆ ಪ್ರಸಂಗಾವಧಾನದಿಂದ ಇಬ್ರಾಹಿಮ ಆದಿಲಶಹನು ತನ್ನ ಸೂಕ್ಷ್ಮ ಬುದ್ಧಿ ಹಗೂ ದೂರಾಲೋಚನೆಗಳಿಂದ, ಅಕಬರ ಬಾದಶಹನೊಂದಿಗೆ ಸಖ್ಯ ಬೆಳೆಸಿದನು. ಖಂಡಣಿಯನ್ನು ಕಳಿಸುವ ವಿಷಯದಲ್ಲಿ ಉಭಯ ಬಾದಶಹರಲ್ಲಿ ಸಖ್ಯದ ಬದಲು ದ್ವೇಷ ಉತ್ಪನ್ನವಾಗುವುದನ್ನು ತಪ್ಪಿಸಿ ಸ್ನೇಹದಲ್ಲಿ ಪರಿವರ್ತಿಸಿದನು.

### ೪೯. *ಆದಿಲಶಹನ ಮಗಳು ಸುಲ್ತಾನ ಬೇಗಂಳನ್ನು ಅಕಬರ ಬಾದಶನ ಮಗ ದಾನಿಯಲನಿಗೆ ಕೊಟ್ಟು ಮದುವೆ ಮಾಡಿದ್ದು, ಮತ್ತು ದೈವೇಚ್ಛೆಯಂತೆ ಅದೇ ವರುಷ ದಾನಿಯಲನ ಮರಣ :*

ಅಕಬರ ಬಾದಶಹನು ಶರೀಫ ಸರಮದಿಯನ್ನು ಕಳಿಸಿದ ಅನಂತರ ತುಸುವೆ ದಿನಗಳಲ್ಲಿ, ಸಯ್ಯದ ಜನರಲ್ಲಿ ಪ್ರಸಿದ್ದ ನಾಗಿದ್ದ ಮೀರ ಜಮಾಲುದ್ದೀನ ಹುಸೇನ ಅಂಜೂನನ್ನು ಆದಿಲಶಹನ ಕಡೆಗೆ ಕಳಿಸಿದನು. ಆತ ಬಂದು ಉಭಯ ರಾಜ್ಯಗಳ ಮಧ್ಯ ಸಖ್ಯತೆಯನ್ನು ಬೆಳೆಸಿದನು.ಅದರ ದ್ಯೋತಕವಾಗಿ ಇಬ್ರಾಹಿಮ ಆದಿಲಶಹನ ಮಗಳು ಸುಲ್ತಾನ ಬೇಗಮ್‌ಳನ್ನು ಅಕಬರಬಾದಶಹನ ಮಗ ರಾಜಕುಮಾರ ದಾನಿಯಲ್‌ನಿಗೆ ಕೊಟ್ಟು ಮದುವೆ ಮಾಡುವ ಪ್ರಸ್ತಾಪವನ್ನು ಮಾಡಿದನು. ಇಬ್ರಾಹಿಮ ಆದಿಲ್‌ಶಹನು ಪ್ರಸ್ತಾವವನ್ನು ಒಪ್ಪಿ ಮೀರ ಹುಸೇನ ಅಂಜೂನಿಗೆ ತನ್ನ ಒಪ್ಪಿಗೆಯನ್ನು ಸೂಚಿಸಿದನು. ಅದರ ಪ್ರತಿಯಾಗಿ ರಾಯಭಾರಿ ಮೀರಿ ಹುಸೇನ ಅಂಜೂನಿಗೆ ಬೆಲೆಯುಳ್ಳ ವಸ್ತ್ರಗಳನ್ನು ನೀಡಿ, ಅವನನ್ನು ಸಂತೋಷಪಡಿಸಿ ತಿರುಗಿ ಹೋಗಲು ನಿರೋಪ ಕೊಟ್ಟನು. ಅನಂತರ ಮದುವೆಯ ಸಿದ್ಧತೆ ನಡೆಯಿತು. ಆದರೆ ಕಾರಣಾಂತರಗಳಿಂದ ಮದುವೆ ಕಾರ್ಯ ಮುಂದೆ ಮುಂದೆ ಹೋಗಹತ್ತಿತು. ೫ ವರುಷಗಳ ಅನಂತರ ಮದುವೆಯ ಮುಹೂರ್ತ ಒದಗಿ ಬಂದಿತು. ಉಭಯ ಬಾದಶಹರ ಪರಿವಾರವೂ ಈ ಮದುವೆಯ ಸಿದ್ಧತೆಯಲ್ಲಿ ತೊಡಗಿ, ಅನಂತರ ಕರಾರು ಮಾಡಿದಂತೆ ರಾಜಕುಮಾರ ದಾನಿಯಲ್‌ನು ಬುರ್ಹಾಣಪುರದಿಂದ ಅಹಮದ ನಗರಕ್ಕೆ ಬರಬೇಕು. ಅಹಮದ ನಗರದಲ್ಲಿ ಮದುವೆ ಸಮಾರಂಭ ಮುಗಿಸಿಕೊಂಡು ಬುರ್ಹಾಣಪುರಕ್ಕೆ

---

3. The fort of AsirWas conqured on the 6th of Bahmanin theTlahi year 46 corresponding of 22nd Rajab (5th January 1602) and on the 24th of the same which corresponds to the 8th of Saban (2nd Februry 1602) Akbar honoured it by entry -Inscription on a pillar in the Jami Masjid Asirgarh -No 310 P. 137 and No 313 P 1388 " Muslim Inscription s" by Sri V.S. Bendreyy, Also see plus 46 of Akbarnama' E.D.. Fagi Sirhindis Supplement.

ತಿರುಗಿ ಹೋಗಬೇಕು. ಸುಲ್ತಾನ ಬೇಗಮ್‌ಳನ್ನು ಆನೆ ಮತ್ತು ಅಗಣಿತ ಪದಾರ್ಥಗಳೊಂದಿಗೆ ಮತ್ತು ದೊಡ್ಡ ಸೈನ್ಯದೊಂದಿಗೆ ಮೀರಹುಸೇನ ಅಂಜೂನ ಜೊತೆಗೆ ಕಳಿಸಲಾಯಿತು. ಅನಂತರ ಹಿಜರಿ ಸನ್ ೧೦೧೩ (ಕ್ರಿ.ಶ.೧೬೧೦-೦೫)ರಲ್ಲಿ ಅಹಮದನಗರವನ್ನು ಮುಟ್ಟಿದರು.[೧] ವಧುವಿನೊಂದಿಗೆ ಬಹಳಷ್ಟು ಜನರು ಬಂದಿದ್ದಾರೆಂದು ತಿಳಿದ ರಾಜಕುಮಾರನು, ಸೈನ್ಯ ತೆಗೆದುಕೊಂಡು ಯಾರೋ ಯುದ್ಧಕ್ಕೆಯೇ ಬಂದಿದ್ದಾರೆಂದು ವಿಪರೀತವಾಗಿ ತಿಳಿದುಕೊಂಡು ಭಯಭೀತನಾದನು. ಅಹಮದನಗರಕ್ಕೆ ಬರುವುದನ್ನು ಬಿಟ್ಟು ಮಧ್ಯದಲ್ಲಿಯೇ ಬಿಡಾರ ಹೂಡಿದನು. ಖಾನಖಾನನು ಅವನ ತಪ್ಪು ತಿಳುವಳಿಕೆಯನ್ನು ನಿವಾರಿಸಿ ಅಹಮದನಗರಕ್ಕೆ ಕರೆತರುವಲ್ಲಿ ಸಫಲನಾದನು. ಆದರೆ ಮದುವೆಯ ಮಂಗಲ ಕಾರ್ಯಗಳು ಪೈಠಣ ನಗರದಲ್ಲಿ ನಡೆದುವು. ಪೈಠಣ ನಗರವು ಗಂಗಾ ನದಿಯ ದಂಡೆಯಲ್ಲಿದ್ದು, ಅಹಮದನಗರದಿಂದ ೨೦ ಕೋಸುಗಳ ಅಂತರದಲ್ಲಿದೆ.[೨] ಕಾಣಿಕೆಗಳೊಂದಿಗೆ ವಧುವನ್ನು ಮೀರ ಹುಸೇನ ಆಂಜೂ, ಮಿರ್ಜಾಯನೀನರು ಖಾನಖಾನನ ಮಗನೊಂದಿಗೆ ಪೈಠಣ ನಗರಕ್ಕೆ ಕಳಿಸಿದರು. ಅಂಬಾರಿಯೊಂದಿಗೆ ಬಂದ ಆದಿಲಶಹಹನ ಕಡೆಯ ಕಾರಭಾರಿಗಳು, ಅಮೀರ ಜನರಿಗೆ ಪೈಠಣದಲ್ಲಿಯ ಮದುವೆ ಸಮಾರಂಭವನ್ನು ಮುಗಿಸಿ, ನಿಬ್ಬಣವನ್ನು ಬುರಾಣಪುರಕ್ಕೆ ಮುಟ್ಟಿಸಿ ವಿಜಾಪುರಕ್ಕೆ ತಿರುಗಿ ಬರಬೇಕೆಂದು ಆಜ್ಞೆ ಮಾಡಿದರು. ಅದನ್ನು ಕೇಳಿದ ಆದಿಲಶಹನ ಅಮೀರ ಜನರು ತಮ್ಮ ಪ್ರಭುಗಳ ಅಪ್ಪಣೆಯಂತೆ ಅಹಮದನಗರದವರೆಗೆ ಮಾತ್ರ ನಿಬ್ಬಣದೊಂದಿಗೆ ಹೋಗಿ ತಿರುಗಿ ಬರುವುದಾಗಿದೆ. ಅದರಂತೆ ನಾವು ನಮ್ಮ ಪ್ರಭುಗಳ ಅಪ್ಪಣೆಯಂತೆ ನಡೆಯುತ್ತೇವೆ ಮತ್ತು ಮುಂದೆ ಬರಲಾಗುವುದಿಲ್ಲ ಎಂದು ಹೇಳಿ ತಿರುಗಿದರು. ರಾಜಕುಮಾರನು, ವಧುವಿನ ಅಂಬಾರಿಯೊಂದಿಗೆ ತನ್ನ ಜನರೊಂದಿಗೆ, ಪೈಠಣಕ್ಕೆ ಹೋಗಿ ಮುಟ್ಟಿದನು. ಅಲ್ಲಿ ಬಾದಶಾಹಿ ವೈಭವದಲ್ಲಿ ಮದುವೆ ನೇರವೇರಿತು. ಮದುವೆಯ ಸಮಾರಂಭ ಆದ ನಂತರ, ರಾಜಕುಮಾರ ದಾನಿಯಲನು, ಬುರ್ಹಾಣಪುರಕ್ಕೆ ಹೋದನು. ಕರ್ಮಧರ್ಮ ಸಂಯೋಗದಿಂದ ಅದೇ ವರುಷ ದಿನಾಂಕ ೧೬ ತಿಂಗಳು ಜಿಲ್ಹೇಜದಂದು (೨೫ ಎಪ್ರಿಲ್ ೧೬೦೫) ದಾನಿಯಲ್‌ನು ಅಧಿಕ ಮದ್ಯಪ್ರಾಶನದಿಂದ ಮರಣ ಹೊಂದಿದನು.[೩] ಇದೊಂದು ಅತ್ಯಂತ ದುಃಖದ ಘಟನೆ ಸಂಭವಿಸಿತು. ಅಕಬರ ಬಾದಶಹನ ಮನದ ಗಾಯದ ಮೇಲೆ ಗಾಯವಾದಂತಾಯಿತು. ಈ ಮೊದಲೆ ಮಗ ರಾಜಕುಮಾರ ಮುರಾದನು ಮರಣ ಹೊಂದಿದ್ದನು. ಆ ದುಃಖವನ್ನು ಮರೆಯುವ ಮೊದಲೆ ಇನ್ನೊಬ್ಬ ಮಗ ರಾಜಕುಮಾರ ದಾನಿಯಲನೂ ಮರಣಹೊಂದಿದನು. ಅದರಿಂದಾಗಿ ಅಕಬರಬಾದಶಹನು ಚಿಂತೆಯಿಂದ ಅಶಕ್ತನಾದನು. ಉಭಯ ಮಕ್ಕಳ ಮೃತ್ಯುವಿನ ಸಂಕಟವನ್ನು ತಾಳಲಾರದ ಅಕಬರ ಬಾದಶಹನ ಪ್ರಾಣಕ್ಕೆಯೆ ಸಂಚಕಾರ ಬಂದಿತು.

---

೧. ಹಿ.ಸ ೧೦೧೩ರಲ್ಲಿ ರಾಜಕುಮಾರ ಡಾನಿಯಲ್‌ನು ಆದಿಲಶಹನ ಮಗಳೊಂದಿಗೆ ಮದುವೆಯಾಗಲು ಬುರ್ಹಾಣಪುರದಿಂದ ದೌಲತಾಬಾದ-ನಾಸಿಕಗಳ ಮುಖಾಂತರ ಅಹಮದನಗರಕ್ಕೆ ಹೋದನು. ಬ್ರಿಗ್ಸ್ - ಫಿರಿಸ್ತಾ III ಪುಟ ೩೧೭

೨. ಗಂಗಾನದಿ ದಂಡೆಯಲ್ಲ, ಗೋದಾವರಿ ದಂಡೆ.

೩. "This year (1013A.H./ 1604A.D.) is also marked by the arrival from the Dakhin of the news of the death of Sulthan Daniyal - "Anfo'ul Akhbar by Md. Amin E.D P 248 Also in the 50th Julus of Akbar (from 11th March 1605) "after 40 days of illness the young prince (Daniyal) died at the age of thirtythree "Takmila-t-Akbarnama by Inayatulla E.D.P 114.

ಮರುವರುಷವೇ ಹಿ.ಸನ್ ೧೦೧೪ರಲ್ಲಿ (ಕ್ರಿ.ಶ.೧೬೦೫-೬) ಅಕಬರಬಾದಶಹನು ಮರಣ ಹೊಂದಿದನು.[4] ಅನಂತರ ಶಾಹ ಸಲೀಮ ಉರ್ಫ ಜಹಾಂಗೀರ ಬಾದಶಹನು ಹಿಂದುಸ್ತಾನದ ಸಿಂಹಾಸನದ ಮೇಲೆ ಕುಳಿತನು.

### ೫೦. ಇಬ್ರಾಹಿಮ ಆದಿಲ್ ಶಹನ ಮಗಳನ್ನು ಶಾಹ ಹಬೀಬುಲ್ಲಾ ಹುಸೇನನಿಗೆ ಕೊಟ್ಟು ಮದುವೆ ಮಾಡಿದ್ದು.

ಹಿಜರಿಸನ್ ೧೦೧೪ ರಲ್ಲಿ (ಕ್ರಿ.ಶ.೧೬೦೫-೬) ಇಬ್ರಾಹಿಮ ಆದಿಲಶಹನ ಮಗಳು ಫಾತಿಮಾ ಸುಲ್ತಾನಳು ಉರ್ಫ ಪಾದಶಾಹಾ ಸಾಹೇಬಾಳ ಮದುವೆಯು ಸೈಯ್ಯದ ಕುಲದ ದೊಡ್ಡ ವಂಶದ ಶಾಹ ಹಬೀಬುಲ್ಲಾಹ ಬಿನ್ ಶಾಹಾ ಯದುಲ್ಲಾಹ ಹುಸೇನೀಯ ಜೊತೆಗೆ ನಿಶ್ಚಯವಾಯಿತು. ಆತನು ಸಯ್ಯದ ಕುಲದಲ್ಲಿಯ ಕಲ್ಯಾಣಪ್ರದ ಹಾಗೂ ಸುರಕ್ಷಿತ ಪ್ರದ ಸ್ಥಾನವಾದ ಗೌಸ ಪದವಿಯೊಂದಿಗೆ ಪ್ರಸಿದ್ಧನಾದ ಶ್ರೇಷ್ಠ ಆಶಕ್ ಶಾಹಬಾನ ಸಯ್ಯದ ಮಹಮ್ಮದ ಗೇಸೂದರಾಜ ಬಂದೇ ನವಾಜ ಹುಸೇನೀ ಎಂದೇ ಪ್ರಸಿದ್ಧರಾದ ಸಂತನ ವಂಶದವನಾಗಿದ್ದನು. ಮದುವೆಯ ಸಮಾರಂಭವು ಸಾವಿರ ಕಲ್ಯಾಣಗಳೊಂದಿಗೆ ಯಶಸ್ವಿಯಾಗಿ ವೈಭವದಿಂದ ನೆರವೇರಿತು. ಆ ಕಾಲದ ಎಲ್ಲ ಜನರಲ್ಲಿ ಶ್ರೇಷ್ಠ ಹಾಗೂ ದೊಡ್ಡ ಪದವಿಯ ಸನ್ನಡತೆಯ ಶಾಹಮಹಮದನೆಂಬ ವಿದ್ವಾಂಸನಿದ್ದನು, ಆತನೆ ಈ ಮದುವೆಯನ್ನು ನಿಶ್ಚಯಿಸಿ ಈ ಒಳ್ಳೆಯ ಕಾರ್ಯದಲ್ಲಿ ಇಬ್ರಾಹಿಮ ಆದಿಲಶಹನ ಪರವಾಗಿ ವಕೀಲನಾಗಿದ್ದನು. ಆತನೇ ಸ್ವತಃ ಬರೆದು ಇಟ್ಟಿದ್ದಾನೆ. ಅದರಲ್ಲಿ ಹೇಳಿದಂತೆ :

"ನಾನು ಅಲ್ಲಾನ ಸ್ತುತಿ ಮಾಡಿದ ಅನಂತರ ಮತ್ತು ಖುದಬಾದ ವರ್ಣನೆ ಮಾಡಿದ ನಂತರ ಹೇಳಿದೆ. ಆ ಸಮಯದಲ್ಲಿ ಯಾರು ಈ ಶ್ರೇಷ್ಠ ಕೆಲಸದ ಇಚ್ಛೆಯನ್ನು ಮಾಡಿದ್ದರೋ ಆ ಗೃಹಸ್ಥ ಅಲ್ಲಿಯೇ ಇದ್ದನು. ಆ ಗೃಹಸ್ಥ ಯಾರು? ಯಾರು ಕುಲೀನರೂ ದೊಡ್ಡ ಮನೆ ತನದವರೂ, ಬಹಳ ಸಂಭಾವಿತ ಬುದ್ಧಿವಂತ ಮತ್ತು ಶ್ರೇಷ್ಠನಾಗಿದ್ದನೋ, ಮತ್ತು ಯಾರು ಸಯ್ಯದ ಮಹಮ್ಮದ ಬಿನ್ ಶಾಹಾ ಯದುಲ್ಲಾಹ ಹಜರತ ಸಯ್ಯದ ಮಹಮ್ಮದ ಅವರ ವಂಶದ, ಯಾರು ಸಯ್ಯದ ಮಹಮ್ಮದ ಗೇಸೂದೀರಾಜ ಎಂಬ ಹೆಸರಿನಲ್ಲಿ ಪ್ರಸಿದ್ಧರಾಗಿದ್ದರೋ ಆ ಕುಲದಲ್ಲಿಯ ಶಾಹಾ ಯದುಲ್ಲಾಹ ಅವರ ಪುತ್ರ ಶಾಹ ಹಾಬಿಬುಲ್ಲಾಹ ಅವರು ತಮ್ಮ ೧೭ರ ವಯದಲ್ಲಿ ಜೊತೆಗಾತಿಯನ್ನು ಪಡೆದರು. ಅವನೊಂದಿಗೆ ಮದುವೆಯಾದ ಹೆಂಡತಿ ಆ ದಿನಗಳಲ್ಲಿ ಅವಳಂಥ ಇನ್ನೊಬ್ಬ ಸ್ತ್ರೀ ಇರಲಿಲ್ಲ. ಅವಳ ಹೆಸರು ಫಾತಿಮಾ ಸುಲ್ತಾನ ಎಂಬುದಾಗಿತ್ತು. ಅವಳು ಪಾದಶಾಹಾ - ಏ - ಸಾಹೇಬ ಎಂಬ ಹೆಸರಿನಿಂದಲೂ ಪ್ರಸಿದ್ಧಳಾಗಿದ್ದಳು.

---

4. "On the 9th Azur 50th Julus (20 Nov 1605) corresponding with the night of Wednesday, 12th Jumuda -t-Akhir (16 october 1605 Wednesday ) when the age of his Majesty had reached the period of 65 lunar years, he bade adieu to life at Agra" Takmila - t Akbar Nama - by Inayathulla E.D. P. 115

'Ma - Asir Rahimi of Abdul Baki gives only 23rd Jamadul awwal A.H. 1014 (26th October 1605 Saturday ) E.D. P. 243

On the other hand 'Anau-t-Akbar by Md. Amin tells - on Wednesday the 12th Jumadas Sani 1014 AH he died at Agra and interred in Sikandra -EDP 248. Jahangir, however Suggests it to be the previous Thursday, Jamada-s -Sani 20th A.H. 1014 (24 oct 1605) - Tuzuk -i-Jahangiri', P.1

ಶ್ರೇಷ್ಠ ಬಾದಶಹನ ಮಗಳು. ಆ ಬಾದಶಹನು ಎಲ್ಲರ ಪ್ರಾಣಗಳ ಒಡೆಯನಾಗಿದ್ದನು. ಆತನ ಹೆಸರು ಇಬ್ರಾಹಿಮ ಆದಿಲಶಾಹ ಎಂಬುದಾಗಿತ್ತು. ಆತನ ರಾಜ್ಯವನ್ನು ಅಲ್ಲಾನು ನಿರಂತರವಾಗಿ ರಕ್ಷಣೆ ಮಾಡಲಿ. ಆತನ ರಾಜಧಾನಿಯ ಹೆಸರು ವಿಜಾಪುರ ನಗರ ವೆಂದೂ, ಆದಕ್ಕೆ ವಿದ್ಯಾಪುರ ನಗರವೆಂದೂ ಪ್ರಸಿದ್ಧವಾಗಿದೆ. ಅಲ್ಲಿ ಅರಮನೆಯಿದೆ. ಮದುವೆಯ ಸಮಾರಂಭವು ಅರಮನೆಯಲ್ಲಿಯೇ ಆಯಿತು. ಆ ಸ್ಥಳದ ಹೆಸರನ್ನು 'ಸಬಜ ಮಹಾಲ' ಎಂದು ಕರೆಯುತ್ತಾರೆ. ಅದೇ ಸಬಜ ಮಹಾಲವು ಅರಮನೆಯೂ ಆಗಲಿದೆ. ಎಲ್ಲರ ಸಮಕ್ಷಮದಲ್ಲಿ 'ಈಜ್ಯಾಬ ಮತ್ತು ಕುಬುಲ' ಶ್ರವಣ ಮಾಡಲಾಯಿತು. ಈ ಜ್ಯಾಬ ಎಂದರೆ ಕನ್ಯಾದಾನ ಮಾಡುವುದು. 'ಕುಬುಲ' ಎಂದರೆ ಪಾಣಿಗ್ರಹಣ ಮಾಡುವುದು.

ಈಜ್ಯಾಬ ಮಾಡುವುದೆಂದರೆ ಕನ್ಯಾದಾನ ಮಾಡುವವರು ಮತ್ತು ಕುಬುಲ ಮಾಡುವುದೆಂದರೆ ವಧುಸ್ವೀಕಾರ ಮಾಡುವವರು ಉಭಯತರೂ ಅಲ್ಲಿದ್ದು ಅವರ ಸಮಕ್ಷಮದಲ್ಲಿ ಮದುವೆಯ ಸಮಾರಂಭದ ಸಭೆ ನಡೆದು ಅದರಲ್ಲಿ 'ಮಹರ'ನ್ನು ಒಪ್ಪಲಾಯಿತು. (ಮದುವೆಯ ಸಮಯದಲ್ಲಿ ಕನ್ಯೆ ಹಾಗೂ ಅವರವರ ಅನುಕೂಲದಂತೆ ಕೊಡುವ ದ್ರವ್ಯ ಹಾಗೂ ಇತರ ಪದಾರ್ಥಗಳನ್ನು ಕೊಡುವ ಠರಾವುಗಳನ್ನು ನಿರ್ಧರಿಸಿ ಅದರಲ್ಲಿಯ ಮೂರನೆಯ ಒಂದು ಭಾಗವನ್ನು ಅಲ್ಲಿಯೇ ಕೊಟ್ಟು ಉಳಿದದ್ದನ್ನು ಮದುವೆಯ ನಂತರ ಕೊಡುವುದಕ್ಕೆ 'ಮಹರ' ಎನ್ನುತ್ತಾರೆ.) ಅದರ ವಿವರಗಳನ್ನು ಬರೆಯಲಾಯಿತು. ೪೦೦೦ ಕುದುರೆಗಳು ಮತ್ತು ಆ ಕುದುರೆಗಳಲ್ಲಿ ೫೦೦ ಕುದುರೆಗಳಿಗೆ ಬಂಗಾರದ ಜೀನುಗಳು ಮತ್ತು ಬೆಲೆಯುಳ್ಳ ಬಟ್ಟೆ. ೧೦೦೦ ಒಂಟೆಗಳು, ೧೦೦೦ ರೇಷ್ಮೆಯ ಕಲಾಬತ್ತಿನ ಬಟ್ಟೆಯ ಗಂಟುಗಳು ಮತ್ತು ೧ ಲಕ್ಷ ದೀನಾರುಗಳು (ಒಂದು ದೀನಾರ ಎಂದರೆ ಐದೂವರೆ ರೂಪಾಯಿಗಳ ಬಂಗಾರದ ಒಂದು ತುಕುಡಿ) ಒಂದು ಬಿಳಿ ಬಣ್ಣದ ಆನೆ. ೫೦೦ ತುರ್ಕಿ ಚಾಕರರು. ೫೦೦ ಹಬಶೀ ಚಾಕರರು, ೫೦೦ ದಖಣೀ ಚಾಕರರು ಮತ್ತು ೫೦೦ ಕುಣಬಿಣೆ ಸೇವಿಕೆಯರು. ಮದುವೆ ಮಾಡಿಸಿದ ವಧುವಿನ ಕಡೆಯ ವಕೀಲರು ವಿದ್ವಾಂಸ ಬುದ್ಧಿವಂತನೂ, ವಿರಕ್ತನೂ ಸಾಧುವೂ ಆಗಿದ್ದನು. ಆತನ ಹೆಸರು ಶಾಹ ಮಹಮದ ವಲದ ಸಯ್ಯದ ನೂರುದ್ದೀನ ಬಿನ್ ಸಯ್ಯದ ಮಹಮ್ಮದ. ಆತನು 'ಮಕ್ಕಾ ಮಜ್ಯಾಲಸೀ' ಎಂದೇ ಹೆಸರಾಗಿದ್ದಾನೆ. ಆ ಕಾಜಿಯು ವಧುವಿನ ವಕೀಲನಮುಂದೆ ಖುತಬಾವನ್ನು ಓದಿದನು. ಆತನ ಹೆಸರು ಕಾಜೀ ಸಲೀಲುಲ್ಲಾಹ ಎಂಬುದಾಗಿದೆ. ನಾನು ವಧುವಿನ ಪರವಾಗಿ ನಿಂತು ಓದಿದನು. ವರನ ಕಡೆಯ ವಕೀಲನಾದ ಕಾಜೀ ಸಲ್ಲುಲ್ಲಾಹನು ಅದನ್ನು ಒಪ್ಪಿದನು. ಆ ಕನ್ಯೆಯನ್ನು ಮದುವೆಯಾಗಲು ಶಾಹಾ ಹಾಬಿಬುಲ್ಲಾಹ ಬಿನ್ ಯದುಲ್ಲಾಹ ಮಶಾರನಿಲ್ಹೆ ಒಪ್ಪಿಕೊಂಡನು. ಆ ಸಮಯದಲ್ಲಿ ಶಾಹಾ ಹಬೀಬುಲ್ಲಾಹನು ಅದೇ ಮದುವೆಯ ಕಚೇರಿಯಲ್ಲಿ ಇದ್ದನು ಮತ್ತು ಆ ಕಚೇರಿಯಲ್ಲಿ ಯೆಖಲಾಸಖಾನ, ಶಹಾನವಾಜಖಾನ, ಶುಜಾವತ ಖಾನ, ರೂಮೀಖಾನ, ಮುಲ್ಲಾಯೂಸುಫ ಮತ್ತು ಕಫಾವತದಾರಖಾನನು ಹಾಜರಿದ್ದರು. ಅವರು ಕೂಡ ಕನ್ಯಾದಾನ ಮತ್ತು ಕನ್ಯಾಸ್ವೀಕಾರದ ಮಜಕೂರನ್ನು ಕೇಳಿದರು. ಆಗ ಪರದೆಯ ಹಿಂದೆ ಇದ್ದ ಬಾದಶಹನ ಕನ್ಯೆಯು, ಶಾಹಾ ಹಬೀಬುಲ್ಲಾಹ ಮಶಾರನಿಲ್ಹೆಯು ಮಹರ (ವರನಿಗೆ ಕೊಡಬೇಕಾದ ವಸ್ತು) ಆದ್ದರಿಂದ, ಅಂದಿನಿಂದ ಬಾದಶಹನ ಮಗಳು ಅವನ ಸ್ತ್ರೀಯಾದಳು. ಆಗ ಬಾದಶಹರ ಹೆಣ್ಣುಮಕ್ಕಳು "ಠರಾವಿಸಿದ ಪದಾರ್ಥಗಳನ್ನು ಮಧ್ಯಮ ಪ್ರತಿಯಾಗಿ ತೆಗೆದುಕೊಳ್ಳಬೇಕು. ಕಡಿಮೆಯಾಗಲಿ ಅಧಿಕವಾಗಲಿ ತೆಗೆದುಕೊಳ್ಳಬಾರದು ಎಂದರು. ಚಾಕರರು ಸೇವಕಿಯರು, ಕುದುರೆ, ಒಂಟೆಗಳಿಗೆ ವರನು ಮುಖ್ತಾರನಾಗಿದ್ದಾನೆ. ಕರಾರುಮಾಡಿದಂತೆ ಸದರೀ ಪದಾರ್ಥಗಳ ಬೆಲೆಯನ್ನು ಕನ್ಯೆಯು ಕೇಳಿದರೆ

ಅವುಗಳ ಬೆಲೆಯನ್ನು ಕೊಡಲು ವರನೇ ಬಾಧ್ಯಸ್ತನಾಗಿದ್ದಾನೆ. ವರನು ಬೇರೆ ಹೆಣ್ಣನ್ನು ಮದುವೆಯಾಗಬಾರದು, ಸ್ತ್ರೀ ಸೇವಿಕೆಯರನ್ನು ಕೂಡ ಇಟ್ಟುಕೊಳ್ಳಬಾರದು. ಇದೇ ಪ್ರಕಾರ ಸ್ನೇಹದಿಂದ ಕೊನೆಯವರೆಗೂ ನಿಭಾಯಿಸಬೇಕು. ಆದ್ದರಿಂದಲೇ ವರನು ಈ ಎಲ್ಲ ಶಾಸ್ತ್ರಾರ್ಥ ಕಾರ್ಯಗಳನ್ನು ಮಾಡುತ್ತಿದ್ದಾನೆ. ಮದುವೆಯ ಪ್ರಾರಂಭದಲ್ಲಾದ ಕರಾರಿನಂತೆ ಠರಾವಿಸಿದ ಮೂರನೆಯ ಭಾಗವನ್ನು ತೆಗೆದುಕೊಳ್ಳಬೇಕು. ಯಾಕೆಂದರೆ, ಆ ಕರಾರಿನಂತೆ ಮೂರನೆಯ ಭಾಗವನ್ನು ಕೊಡಲು ಸಾಮರ್ಥ್ಯವಿದೆ. ವಧುವರರಿಗೆ ದೇವರು ಕಲ್ಯಾಣ ಮಾಡಲಿ ಇಬ್ಬರನ್ನೂ ಪ್ರೀತಿಯಿಂದ ಇಟ್ಟಿರಲಿ. ಈ ವಧುವರರಿಗೆ ಅಲ್ಲಾನು ಆನಂದವನ್ನು ಕೊಟ್ಟು ಪವಿತ್ರರನ್ನಾಗಿ ಇಟ್ಟಿರಲಿ? ಎಂದು ಹಾರೈಸಿದರು. ಅನಂತರ ಕುರಾನಿನಲ್ಲಿಯ ಶಾಸ್ತ್ರಾರ್ಥಗಳಂತೆ ಮದುವೆ ಆಯಿತು. ಆದ್ದರಿಂದ 'ಈ ಮದುವೆಯಲ್ಲಿಯ ಕರಾರುಗಳನ್ನು ಮುರಿಯುವುದು ಮತ್ತು ಮೋಸ ಮಾಡುವುದು ವರನಿಗೆ ಯೋಗ್ಯವಲ್ಲ. ಯಾಕೆಂದರೆ ಶಾಹಾ ಹಬೀಬುಲ್ಲಾಹನಂಥ ವರನ ಕುಲವು ಕುಲೀನವಾದದ್ದಾಗಿದೆ. ಈ ಉಭಯತರ ಮದುವೆಯನ್ನು ಯಾವ ಕಾರಣದಿಂದಲೂ ಯಾರಿಂದಲೂ ಮುರಿಯಲು ಅಥವಾ ತಪ್ಪಿಸಲು ಸಾಧ್ಯವಿಲ್ಲ. ಈ ಸ್ತ್ರೀಯು ಆ ವರನ ಅಧೀನಳಾದಳು. ಈ ಕರಾರುಗಳಂತೆ ವರನಮೇಲೆ ವಧುವಿನ ಸಾಲವಿದೆ. ಎಂದು ಮುಂತಾಗಿ ಈ ಮದುವೆಯ ಪತ್ರಿಕೆಯನ್ನು ತಾರೀಖು ಹಿಜರಿ ಸನ್ ೧೦೧೪ (ಕ್ರಿ.ಶ. ೧೬೦೫-೧೬೦೬) ಬರೆಯಲಾಯಿತು. (ಹಜರತ ಮಹಮ್ಮದ ಮುಸ್ತಫಾ ಸಲೀಲ್ಲಾಹ ವಸ್ಸಲಮ್ ಅವರ ವಿಯೋಗದ ದಿನವನ್ನು ಹಿಜರಿ ಎನ್ನುತ್ತಾರೆ). ಆ ಪೈಗಂಬರರ ಮೇಲೆ ದೇವರ ಪೂರ್ಣ ಕೃಪೆ ಇರಲಿ. ದೇವರು ಅವರನ್ನು ಬಹಳ ಕೃಪೆಯಿಂದ ಪಾಲನೆ ಮಾಡಲಿ.

### ೫೧. *ನಿಜಾಮಶಾಹನ ರಾಜಧಾನಿಯಲ್ಲಿ ಬಂಡು, ಆ ರಾಜ್ಯವನ್ನು ಉಳಿಸಲು ಮಲಿಕ ಅಂಬರನ ನೇಮಕ ಮತ್ತು ಮೊಗಲರೊಂದಿಗೆ ಯುದ್ಧ:*

ಅವಿನಾಶನಾದ ಅಲ್ಲಾನ ಯೋಗದಿಂದಾಗಿ ನಿಜಾಹಶಾಹನ ರಾಜ್ಯದ ಹ್ರಾಸವಾಗಿ, ಐಶ್ವರ್ಯ ಕಡಿಮೆಯಾಗತೊಡಗಿತು. ದಿನದಿಂದ ದಿನಕ್ಕೆ ನಾನಾ ಪ್ರಕಾರದ ಬಂಡು-ದಂಗೆಗಳು ಬೆಳೆಯತೊಡಗಿದುವು. ರಾಜ್ಯದ ಅಮೀರ ಜನರ ಹಾಗೂ ಬಾದಶಹನ ಚಾಕರರ ಮಧ್ಯದ ದ್ವೇಷವು ತಂತಮ್ಮಲ್ಲಿ ದಿನದಿಂದ ದಿನಕ್ಕೆ ಬಹಳ ಬೆಳೆಯತೊಡಗಿತು. ಈ ರಾಜ್ಯದಲ್ಲಿ ವಾಸಿಸುತ್ತಿರುವವರ ಪ್ರಾಣಘಾತನ್ನು ಮಾಡುವ ವಿಷಯದಲ್ಲಿ ಮೊಗಲರ ಯತ್ನವು ಬಹಳ ವರುಷಗಳಿಂದ ಮತ್ತು 'ಕರನ', ಎಂದರೆ ೪೦ ವರುಷಗಳಿಗೆ ಎನ್ನುತ್ತಾರೆ. ಹೀಗೆ ಬಹಳ 'ಕರನು' ವರುಷಗಳಿಂದ ನಡೆದಿತ್ತು. ಅದಕ್ಕಿಂತ ಮಿಗಿಲಾಗಿ ಮೊಗಲರು ಪ್ರಯತ್ನಿಸುತ್ತಿದ್ದರು. ಎಷ್ಟೋ ರಾಜಕುಮಾರರು ಮತ್ತು ಅಮೀರ ಜನರು ಈ ಕೆಲಸದಲ್ಲಿ ಸೇರಿಕೊಂಡಿದ್ದರು. ಎಷ್ಟೋ ಸೈನ್ಯ ನಾಶವಾಯಿತು. ಎಷ್ಟೋ ಜನ ಸತ್ತುಹೋದರು. ಆದರೂ ಮೊಗಲರು ಈ ವಿಷಯದಲ್ಲಿ ತಮ್ಮ ಪ್ರಯತ್ನವನ್ನು ಬಿಟ್ಟಿರಲಿಲ್ಲ. ಆಗ ಖಾನಖಾನನು ಹಿಂದು ಜನರು ರಾಜ್ಯಗಳಲ್ಲಿಯ ಮುಖ್ಯ ಕಾರಭಾರಿ ಮತ್ತು ಆ ಕಾಲದ ಅದ್ವಿತೀಯ ಪುರುಷನಾಗಿದ್ದನು. ದಖನಿ ಜನರನ್ನು ಬಲೆಯಲ್ಲಿ ಹಾಕಿಕೊಳ್ಳುವುದು ಮತ್ತು ಅವರಿಗೆ ದಿಲ್‌ಭರವಸೆಯನ್ನು ಕೊಟ್ಟು ಹಿಂದು ಜನರನ್ನು ಆಕರ್ಷಿಸಲು ಬಹಳ ರೀತಿಯ ಕೆಲಸಗಳನ್ನು ಮಾಡುತ್ತಿದ್ದನು. ಈತನು ಕೊನೆಗೆ ಶತಾವಧಿ ಪ್ರಯತ್ನಗಳಿಂದ ಮತ್ತು ಠಕ್ಕ ವಿದ್ಯೆಯಿಂದ ಅಹಮದನಗರದ ಕೋಟೆಯನ್ನು ಮತ್ತು ಅವರ ಅಧೀನದಲ್ಲಿದ್ದ ಕೆಲವು ಪ್ರದೇಶಗಳನ್ನು ಕೈವಶ ಮಾಡಿಕೊಂಡನು. ಉಳಿದ, ಬಹಳ ವಿಶಾಲವಾದ ನಿಜಾಮಶಾಹಿಯ ಪ್ರದೇಶವು ನಿಜಾಶಾಹಿಯ

ಕಡೆಯ ಅಮೀರ ಜನರ ಕೈಯಲ್ಲಿ ಹಾಗೆಯೇ ಉಳಿದುಕೊಂಡಿತು.[೧] ಮಲಿಕ ಅಂಬರ ಹಬಶೀ ಎಂಬ ಸೇವಕನೊಬ್ಬನು ಆ ರಾಜ್ಯದ ನೌಕರರಲ್ಲೊಬ್ಬನಾಗಿದ್ದನು. ಆತ ಬಹಳ ಬುದ್ಧಿವಂತ ಹಾಗೂ ಧೈರ್ಯವಂತನಾಗಿದ್ದನು. ಅವರುಗಳಲ್ಲಿ ರಾಜೂ ಮಂಜಾ ಎಂಬವನೂ ಒಬ್ಬ ಈ ಮಂಡಳಿಯಲ್ಲೊಬ್ಬನಾಗಿದ್ದನು. ಆತನು ದೌಲತಾಬಾದದ ಕೋಟೆಯನ್ನು ಕೈವಶ ಮಾಡಿಕೊಂಡಿದ್ದನು. ಆ ರಾಜು ಮಂಜಾನ ಸಖ್ಯತನ ಮಾಡಿ, ಉಭಯತರೂ ಸೇರಿಕೊಂಡು ನಿಜಾಮಶಾಹಿಯ ಕೀರ್ತಿಯನ್ನು ಸಂರಕ್ಷಿಸಲು ಮತ್ತು ರಾಜ್ಯವನ್ನು ವ್ಯವಸ್ಥಿತವಾಗಿ ಇಡಲು ಪ್ರಯತ್ನಿಸುತ್ತ, ಆ ಎಲ್ಲ ಪ್ರದೇಶವನ್ನು ತಮ್ಮ ಕೈಗೆ ತೆಗೆದುಕೊಂಡರು. ಮುರ್ತಜಾ ಬಿನ್ ಶಾಹ ಅಲೀ ಎಂಬವನು ಅದೇ ನಿಜಾಮಶಾಹಿಯ ಮನೆತನದವನೊಬ್ಬನನ್ನು ಪಟ್ಟಕ್ಕೆ ಕುಳ್ಳಿರಿಸಿ. ಯುದ್ಧವನ್ನು ಸಾರಿದರು. ಖಾನಖಾನನೊಂದಿಗೆ ಯುದ್ಧ ಪ್ರಾರಂಭಿಸಿದರು. ಮೊಗಲರ ವಶವಾಗಿದ್ದ ಅನೇಕ ಮಹಲುಗಳನ್ನು ಕೈವಶಮಾಡಿಕೊಂಡರು. ಈ ವಿಷಯದ ಸುದ್ದಿ ಜಹಾಂಗೀರ ಬಾದಶಹನ ಕಿವಿಗೆ ಬಿದ್ದಾಗ ಖಾನನ ಮೇಲೆ ತುಂಬ ಸಿಟ್ಟಾದನು. ಇದೇ ಸಮಯದಲ್ಲಿ ಬಾದಶಹನ ಸನ್ನಿಧಿಯಲ್ಲಿದ್ದ, ಖಾನಖಾನನ್ನು ಸೇರದ ಅನೇಕ ಜನರು ಆತನ ಬಗ್ಗೆ-ಕೃತಘ್ನತೆಯ ಪರಮಾವಧಿ ಎಂದು ಬಾದಶಹನ ಕಿವಿ ಕಚ್ಚಿದರು. ಇನ್ನಷ್ಟು ಸಿಟ್ಟಾದ ಬಾದಶಹನು ಕೊನೆಗೆ ಖಾನಖಾನನ್ನು ಕರೆಯಿಸಲು ಆಜ್ಞೆ ಹೊರಡಿಸಿದನು. ಹಿಜರಿ ಸನ್ ೧೦೧೭ರಲ್ಲಿ (ಕ್ರಿ.ಶ ೧೬೦೭-೮) ಖಾನಖಾನನು ಬುರ್ಹಾಣಪುರದಿಂದ ದಿಲ್ಲಿಗೆ ಹೊರಟನು.[೨] ಮತ್ತು ಬಾದಶಹನ ಕ್ರೋಧಕ್ಕೆ ಮತ್ತು ಶಿಕ್ಷೆಗೆ ಪಾತ್ರನಾದನು. ಆತನ ವಿರುದ್ಧದ ಜನರ ಕೈಮ್ಮೆಲಾಗಿದ್ದರಿಂದ ಖಾನಖಾನನು ನಿರುಪಾಯನಾಗಿ ಸುಮ್ಮನೆ ಇದ್ದನು. ಅದೇ ಸಮಯದಲ್ಲಿ ಖಾನಖಾನನ ವಶದಲ್ಲಿದ್ದ ಕಂಧಾರ ಕೋಟೆಯನ್ನು ಮಲಿಕ ಅಂಬರನು ತನ್ನ ವಶಕ್ಕೆ ತೆಗೆದುಕೊಂಡಿದ್ದಾನೆ ಎಂಬ ಸುದ್ದಿ ಬಂದಿತು. ಆ ಸುದ್ದಿಯನ್ನು ಕೇಳಿದ ಜಹಾಂಗೀರ ಬಾದಶಹನು ಅತ್ಯಂತ ಸಿಟ್ಟಾಗಿ ತಾನೆ ಸ್ವತಃ ದಕ್ಷಿಣ ದೇಶಗಳ ಮೇಲೆ ಏರಿ ಹೊರಡಲು ಸಂಕಲ್ಪ ಮಾಡಿದನು.

### *೫೨. ಜಹಾಂಗೀರ ಬಾದಶಹನು, ತಾಯಿಯ ಮಾತಿನಮೇಲೆ ದಕ್ಷಿಣ ದೇಶವನ್ನು ಗೆದ್ದದ್ದು ಮತ್ತು ಖಾನಖಾನನ್ನು ದಕ್ಷಿಣ ದೇಶಗಳ ಮೇಲೆ ಕಳಿಸಿದ್ದು.*

ಜಹಾಂಗೀರ ಬಾದಶಹನು ತಾನೆ ಸ್ವತಃ ದಕ್ಷಿಣ ದೇಶದ ಮೇಲೆ ದಂಡೆತ್ತಿ ಹೋಗುತ್ತಿದ್ದಾನೆಂದು ಆತನ ತಾಯಿಗೆ ತಿಳಿದಾಗ ಅವಳು ಅವನಿಗೆ ಹೋಗಲು ಸಮ್ಮತಿ ನೀಡಲಿಲ್ಲ. ಅತ್ಯಂತ ಶೋಕದಿಂದ ಕಣ್ಣು ತುಂಬ ನೀರು ತಂದುಕೊಂಡು ಜಹಾಂಗೀರನ ಮುಂದೆ ಅತ್ತಳು, " ನಿನ್ನ ಇಬ್ಬರು ಸೋದರರು ಈ ರಾಜ್ಯದ ತೋಟದಲ್ಲಿಯ ಹೊಸದಾಗಿ ಎದ್ದ ವೃಕ್ಷಗಳಾಗಿದ್ದುವು. ರಾಜ್ಯದ ಅಧಿಕಾರಕ್ಕೆ ಹೊಂದಿದವರಾಗಿದ್ದು ತುಂಬ ಚಿಕ್ಕ ವಯದವರಾಗಿದ್ದರು. ಮುಂದೆ ರಾಜ್ಯಪದಕ್ಕೆ ಯೋಗ್ಯರಾಗಿದ್ದು ರಾಜ್ಯಕಾರಭಾರವನ್ನು

1. On the 21st safar (22 Augst 1600) news arrived of the capture of Ahmednagar on the 18th (20th August 1600)-Akbarnama Faizi-Sirhindi E.D. P. 144, P.311 of Fer 3. On the 26th Farwardin (5 April 1600) the royal army arrived. On 2nd Urdibihist (11 April 1600) the various intrenchments were assigned. On 6 Shahry 45the Julus (18th August 1600), it (Ahmednagar Fort) was exploded. The siege lasted four months and four days (i.e. upto 19th August 1600 or so...) Akbar Nama by Abul-Faizi E.D. P 100-101.
2. On the 24th Jamadilawal 3 Julus (26 August 1608) Khan-Khanan arrived and waited on me (jahangir)- Tuz-i-J, P. 148.

ಮಾಡಲು ಯೋಗ್ಯರಾದಂಥ ಆ ನಿನ್ನ ಇಬ್ಬರೂ ಬಂಧುಗಳು ದಕ್ಷಿಣ ದೇಶದ ಮೇಲೆ ದಂಡೆತ್ತಿ ಹೋಗುವ ಕಾರ್ಯದಲ್ಲಿಯೆ ಮಡಿದರು. ಆದ್ದರಿಂದ ಸಾವಧಾನನಾಗಿ ಎಚ್ಚರದಿಂದ ಇರಬೇಕಾಗಿದೆ. ನೀನು ಈ ರಾಜ್ಯದ, ಸಿಂಹಾಸನದ ಹಾಗೂ ಮೊಹರಿನ ಧಣಿಯಾಗಿದ್ದು ದಕ್ಷಿಣ ದೇಶದಲ್ಲಿ ಹೆಜ್ಜೆ ಇಡುವುದು ಫಲಕಾರಿಯಾಗಿಲ್ಲ. ಶಕುನವೂ ಚೆನ್ನಾಗಿಲ್ಲ. ಆದ್ದರಿಂದ ಕದಾಪಿ ದಕ್ಷಿಣ ದೇಶದ ಮೇಲೆ. ದಂಡೆತ್ತಿ ಹೋಗುವ ಸಂಕಲ್ಪವನ್ನು ಮಾಡಬೇಡ. ಒಂದುವೇಳೆ ದಕ್ಷಿಣದ ದೇಶದ ಮಣ್ಣು ಬಂಗಾರದಂತಿದ್ದರೂ ನೀನು ಇಚ್ಛೆಯ ಕಣ್ಣುಗಳಿಂದ ಕೂಡ ನೋಡಬೇಡ. ಹಾಗೆ ವಿಚಾರ ಮಾಡಿನೋಡಿದರೆ ನಿನಗೆ ಅಂಥ ಜರೂರಿಯ ಕಾರಣವಾದರೂ ಏನಿದೆ? ಅಲ್ಲಾನು ನಿನಗೆ ಇಂಥ ಉದ್ದಗಲದ ವಿಶಾಲವಾದ ಹಿಂದುಸ್ತಾನವನ್ನೇ ಬಕ್ಷೀಸನ್ನಾಗಿ ಕೊಟ್ಟಿದ್ದಾನೆ. ಇದಕ್ಕಿಂತ ಅಧಿಕವಾದದ್ದು ಬೇರೇನು ಬೇಕು? ಆದ್ದರಿಂದ ನೀನು ಅಲ್ಲಾನನ್ನು ಸ್ತುತಿಸುತ್ತ ಸಂತೋಷದಿಂದಿರುವುದೇ ಶೋಭಿಸುತ್ತದೆ. ಇದ್ದುದರಲ್ಲಿಯೆ ಸಂತೋಷದಿಂದ ಇರಬೇಕು. ಮತ್ತೆ-ಮತ್ತೆ ಆಶೆ ಮಾಡಬಾರದು. ಹಾಗೆ ಅವಶ್ಯವೆನಿಸಿದರೆ, ಸೇವಕನಾದ ಖಾನಖಾನನ್ನು ಆ ಪ್ರಾಣಘಾತುಕ ಕೆಲಸದಮೇಲೆ ಕಳಿಸು ಯಾಕೆಂದರೆ ಆತನು ಈ ರಾಜ್ಯದ ಕಲ್ಯಾಣವನ್ನು ಬಯಸುತ್ತಾನೆ. ಅವನಿಂದ ಮತ್ತು ಅವನ ತಂದೆಯಿಂದ ಈ ರಾಜ್ಯಕ್ಕೆ ತುಂಬ ಒಳ್ಳೆಯದಾಗಿದೆ. ನಿನ್ನ ತಂದೆಯ ಕಾಲದಿಂದ ಇಂದಿನವರೆಗೂ ಅವರ ಸೇವಾ ಮನೋಭಾವನೆಯಲ್ಲಿ ಮತ್ತು ಸ್ವಾಮಿಸೇವೆಯಲ್ಲಿ ತಮ್ಮ ಜೀವದ ಹಂಗು ತೊರೆದು ಕೆಲಸ ಮಾಡುವುದನ್ನು ಬಿಟ್ಟು ಬೇರಿನ್ನೇನೂ ಮಾಡಿಲ್ಲ. ಅದನ್ನು ಮರೆಯುವ ಹಾಗಿಲ್ಲ. ನಿನಗೆ ಗೊತ್ತಿಲ್ಲವೆ? ಸಿಂಧ್‌ಪ್ರದೇಶದಂಥ ರಾಜ್ಯವನ್ನು ಹಸ್ತಗತ ಮಾಡಿಕೊಳ್ಳುವುದು ಸಣ್ಣ ಕೆಲಸವೇನಲ್ಲ. ಅಂಥ ಸಿಂಧ್ ಪ್ರದೇಶವನ್ನೆ ಕೈವಶಮಾಡಿಕೊಂಡರು. ಗುಜರಾತ ಮತ್ತು ಬೇರೆ ಅನೇಕ ದಕ್ಷಿಣದ ಪ್ರದೇಶಗಳನ್ನು ಖಾನಖಾನನೇ ತನ್ನ ಸ್ವಾಮಿನಿಷ್ಠೆಯನ್ನು ಮೆರೆದು ಗೆದ್ದಿದ್ದಾನೆ. ಒಂದು ವೇಳೆ ಅವನನ್ನೇ ದಕ್ಷಿಣ ದೇಶಗಳ ಮೇಲೆ ಕಳಿಸಿದೆಯಾದರೆ, ಖಚಿತವಾಗಿಯೂ ನೀನು ಯಶಸ್ವಿಯಾಗಿ ನಿನ್ನ ಮನೋರಥವು ಈಡೇರುತ್ತದೆ" ಎಂದಳು. ಜಹಾಂಗೀರ ಬಾದಶಹನು ತನ್ನ ತಾಯಿ ಹೇಳಿದಂತೆಯೇ ಖಾನಖಾನನ್ನು ಕರೆಯಿಸಿ ಉದಾಸೀನನಾಗಿದ್ದ ಅವನನ್ನು ವಿಶ್ವಾಸಕ್ಕೆ ತೆಗೆದುಕೊಂಡು ದಕ್ಷಿಣ ದೇಶಗಳನ್ನು ಗೆಲ್ಲುವ ವಿಷಯದಲ್ಲಿ ಮಾತನಾಡಿದನು.[3] ಪ್ರಾರಂಭದಲ್ಲಿ ಆತನು ತನ್ನ ಹೊರತಾಗಿ ಬೇರೆ ಯಾರನ್ನಾದರೂ ದಕ್ಷಿಣ ದೇಶಗಳ ಮೇಲೆ ಯುದ್ಧಮಾಡಲು ಕಳಿಸಲು ಬಿನ್ನವಿಸಿಕೊಂಡನು. ಸ್ಥಳೀಯ ಜನರ ದೂರುಗಳಿಂದ ಅವನ ಮನ ನೊಂದಿತ್ತು. ಆದ್ದರಿಂದ 'ಈ ಸಲ ನಾನು ಈ ಕೆಲಸದಲ್ಲಿ ಬೀಳುವುದಿಲ್ಲ' ಎಂದು ಹೇಳುತ್ತ "ಈ ಜನರು ದೂರದಿಂದ ಅಗ್ನಿಯನ್ನು ನೋಡಿದ್ದಾರೆ. ಆದರೆ ಇಂದಿನವರೆಗೂ ಅವರು ಆ ಬೆಂಕಿಯನ್ನು ಹತ್ತಿರದಿಂದ ನೋಡಿಲ್ಲ. ದಕ್ಷಿಣದ ಪ್ರದೇಶಗಳನ್ನು ಪಡೆಯುವಲ್ಲಿಯ ಶ್ರಮ ಹಾಗೂ ದಕ್ಷಿಣದವರ ಶೌರ್ಯ ಎರಡೂ ತಮ್ಮ ಸನ್ನಿಧಿಯಲ್ಲಿರುವ ಜನರಿಗೆ ಗೊತ್ತೇ ಇಲ್ಲ. ದಕ್ಷಿಣ ದೇಶದ ವಿಷಯ ಇದ್ದ ಹಾಗೆ ಇದ್ದದ್ದು ಒಂದು ವೇಳೆ ಇವರಿಗೆಲ್ಲ ಗೊತ್ತಿದ್ದರೆ ನನ್ನನ್ನು ತಮ್ಮಿಂದ ದೂರ ಏಕೆ ಇಡುತ್ತಿದ್ದರು? ಇಂದು ದಕ್ಷಿಣದಲ್ಲಿ ನಾಲ್ಕು ಬಾದಶಹರ (ಚೌಘಡಾ) ವಾದ್ಯ ವೃಂದ ಬಾರಿಸುತ್ತಿದೆ. ಆ ಬಾದಶಹರು ಬಹಳ ಪ್ರಬಲರಾಗಿ ರಾಜ್ಯ ಕಾರಭಾರವನ್ನು ಮಾಡುತ್ತಿದ್ದಾರೆ. ಅವರು ಸ್ವತಃ ಶೂರರಾಗಿದ್ದರಿಂದ ಬಹಳ ಸಂಪತ್ತು ಹಾಗೂ ಸೈನ್ಯವನ್ನು ಸಂಗ್ರಹಿಸಿ ಬೇರೆ ಯಾರನ್ನೂ ವಿಶ್ವಾಸದಿಂದ ಕಾಣುತ್ತಿಲ್ಲ. ಯಾರನ್ನೂ ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

---

3. On the 21st of the month (Jamadasani) (22 september 1608) Khankhanan determined to clear out the province of Nizamulmulk ....... and stated in writing that "If I do not complete this service in the course of two years, I shall be guilt (of a fault), on the condition that in addition to the force that had been allotted to that subah 1200 more horse with 10,00,000 rupees should be sent with me"- "Tuz-i-J. P. 149.

ವಿಜಯನಗರದ ಹಿಂದು ಜನರು ಮತ್ತು ಕರ್ನಾಟಕದ, ಪಾಳೆಯಗಾರರು ಸಹಿತ ಬಹುದೊಡ್ಡ ಪ್ರದೇಶ ಹಾಗು ಸಂಪತ್ತುಳ್ಳ ಆ ವಿಜಯನಗರ ಹಾಗೂ ಕರ್ನಾಟಕದ ಜನರು ಅಲ್ಲಿಯೇ ಸೇರಿದ್ದಾರೆ. ಆದ್ದರಿಂದ ಒಂದು ವೇಳೆ ದಕ್ಷಿಣದ ಸರದಾರರಲ್ಲಿಯ ಒಬ್ಬ ಸರದಾರನು ಶತ್ರುವಿನ ಮೇಲೆ ದಂಡೆತ್ತಿ ಬಂದರೆ, ಆ ಸರದಾರನು ಸಹಾಯಕ್ಕಾಗಿ ಕರೆದ ತತ್‌ಕ್ಷಣ ಎಲ್ಲ ಸರದಾರರೂ ಸನ್ನದ್ಧರಾಗಿ ಬಂದು, ಆ ಸರದಾರನ ಶತ್ರುವನ್ನು ಓಡಿಸುತ್ತಾರೆ. ಇಬ್ರಾಹಿಮ ಆದಿಲಶಹನಾದರೋ ಈ ಎಲ್ಲರಲ್ಲಿ ವಿಶೇಷವಾಗಿ ವೈಭವ ಸಂಪನ್ನನೂ ವರ್ಚಸ್ಸುಳ್ಳವನೂ ಆಗಿದ್ದಾನೆ. ದಕ್ಷಿಣ ದೇಶದಲ್ಲಿ ಆದಿಲಶಹನ ರಾಜ್ಯ ವಿಶಾಲವಾಗಿದೆ, ದೊಡ್ಡ ಸೈನ್ಯವಿದೆ. ಅಗಣಿತ ಸಂಪತ್ತಿದೆ. ಆದಿಲಶಹನೊಂದಿಗೆ ಸ್ನೇಹ ಬೆಳೆಸಿದವರು ಸರ್ವ ಸಂಕಟಗಳಿಂದ ನಿರ್ಭಯರಾಗಿರುತ್ತಾರೆ. ಆದಿಲಶಹನು ಯಾರಿಗೆ ಸಹಾಯ ಮಾಡುತ್ತಾನೋ, ಆತನ ಶತ್ರು ಪರ್ವತದಂತಿದ್ದರೂ ಆತನ ಸೈನ್ಯದ ಬಿರುಗಾಳಿಯಿಂದ ತರಗೆಲೆಗಳಂತೆ ಉದುರಿ ಬೀಳುತ್ತದೆ. ನಾನು ಹೇಳುವುದರಲ್ಲಿ ತಾತ್ಪರ್ಯವೆಂದರೆ, ನನ್ನ ಬಗ್ಗೆ ಈ ಜನ ವಿನಾಕಾರಣ ತಮ್ಮಲ್ಲಿ ದೂರಿದ್ದಾರೆ. ಒಂದುವೇಳೆ. ನಾನೇ ಈ ಕೆಲಸ ಮಾಡಬೇಕು ಎಂದು ಅಪ್ಪಣೆಯಾದರೆ ಅಗತ್ಯವಾಗಿ ದಕ್ಷಿಣ ದೇಶವನ್ನು ಗೆಲ್ಲುವೆ" ಎಂದು ಹೇಳಿದನು. ಜಹಾಂಗೀರ ಬಾದಶಹನು ಅವನ ಮಾತುಗಳನ್ನೆಲ್ಲ ಕೇಳಿ ಮತ್ತೆ ಮತ್ತೆ ಅವನ ಚಿತ್ತವನ್ನು ಸಮಾಧಾನಗೊಳಿಸಿ, ದಕ್ಷಿಣದ ಪ್ರದೇಶಗಳನ್ನು ಗೆಲ್ಲುವ ಕೆಲಸಕ್ಕೆ ನಿಯಮಿಸಿದನು.

*೫೩. ಮಲಿಕ ಅಂಬರನು ಆದಿಲಶಹನ ಸಹಾಯದಿಂದ ಕಂಧಾರ ಕೋಟೆಯನ್ನು ಕೇಳಿದ್ದು. ಅವನ ಖಾನಜಾದೆ ಜನರಲ್ಲಿಯ ಒಬ್ಬನ ಮಗಳನ್ನು ತನ್ನ ಮಗನಿಗೆ ಬೇಡಿದ್ದು ಮತ್ತು ಆದಿಲಶಹನು ಒಪ್ಪಿದ್ದು.*

ಖಾನಖಾನನು ದೆಹಲಿಗೆ ಹೋದ ದಿನವೇ ಮಲಿಕ ಅಂಬರನು ಒಬ್ಬ ಸಂಭಾವಿತ ಗೃಹಸ್ಥನನ್ನು ಮತ್ತು ವಿಶ್ವಾಸಿಕ ಮನುಷ್ಯನೊಂದಿಗೆ ವಿನಯ ಪೂರ್ವಕ ವಿನಂತಿ ಪತ್ರವನ್ನು ಬರೆದು ಇಬ್ರಾಹಿಮ ಆದಿಲಶಹನ ಹತ್ತಿರ ಕಳಿಸಿದ್ದನು. ಅದರಲ್ಲಿ "ನಾನು ನಿಜಾಮಶಾಹಿ ರಾಜ್ಯದಲ್ಲಿಯೇ ಬೆಳೆದು ಬಂದ ಸೇವಕನು. ತಾವು ಕೃಪೆ ಮಾಡಿ ನನ್ನ ಯೋಗ್ಯತೆಯನ್ನು ಬೆಳೆಸಿದ್ದೀರಿ. ಹುಟ್ಟಿದಾರಭ್ಯ ಇಂದಿನವರೆಗೂ ತಮ್ಮ ಸೇವೆಯಲ್ಲಿ ಮತ್ತು ಚಾಕರಿಯಲ್ಲೇ ಜೀವ ಸವೆಸುತ್ತಲಿರುವೆ. ಮುಂದೆ ಕೂಡ ನನ್ನ ಇಚ್ಛೆ ಅದುವೇ ಆಗಿದೆ. ಉಳಿದ ಆಯುಷ್ಯವನ್ನು ಈ ತಮ್ಮ ಸೇವೆಯಲ್ಲಿಯೇ ಚಾಕರಿಯನ್ನು ಮಾಡುತ್ತ ಕಳೆಯಬೇಕು. ಅಂದರೆ ಪರಲೋಕದಲ್ಲಿ ಯಮಧರ್ಮನ ಹತ್ತಿರ ಲೆಕ್ಕ ಕೇಳುವಾಗ ಅಲ್ಲಿಯ ಪ್ರಾಮಾಣಿಕ ಜನರಲ್ಲಿ ನನ್ನನ್ನೂ ಗಣಿಸಿ ನಿರಂತರವಾಗಿ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಕೀರ್ತಿಯನ್ನು ದೊರಕಿಸಿಕೊಳ್ಳಬೇಕು ಎಂಬುದೇ ನನ್ನ ಮನದಲ್ಲಿದೆ. ತಮ್ಮ ರಾಜ್ಯದ ರಕ್ಷಣೆ ಹಾಗೂ ನಿಜಾಮಶಾಹಿಯ ಹೆಸರನ್ನು ಸಂರಕ್ಷಣೆ ಮಾಡುವಲ್ಲಿ ನನ್ನ ಕೈಯಿಂದ ಎಷ್ಟು ಸಾಧ್ಯವಿದೆಯೊ ಅಷ್ಟು ಪ್ರಯತ್ನ ಮಾಡುವುದು, ಶಕ್ತಿ ಇರುವವರೆಗೆ ಹೋರಾಡಿ ಶತ್ರುವನ್ನು ದಂಡಿಸವುದು ನನ್ನ ಮನಸ್ಸಿನಲ್ಲಿದೆ. ಆದರೆ ತಮ್ಮ ಸಹಾಯವಿಲ್ಲದೆ ಈ ಕೆಲಸ ಆಗಲಾರದು. ಆದ್ದರಿಂದ ವಿಚಾರ ಮಾಡಿ ನೋಡಿದರೆ ಈ ಎರಡೂ ರಾಜಧಾನಿಗಳು, ಅಂದರೆ ತಮ್ಮ ಹಾಗೂ ನಿಜಾಮಶಾಹಿ ರಾಜ್ಯಗಳು ಒಂದೇ ಆಗಿವೆ. ಉಭಯ ರಾಜ್ಯಗಳಲ್ಲಿಯ ಒಬ್ಬರ ದುಃಖಕ್ಕೆ ಇನ್ನೊಬ್ಬರ ಆಶ್ರಯಬೇಕು. ಆದ್ದರಿಂದ ಈ ಕೆಲಸದಲ್ಲಿ ಸಹಾಯ ಮಾಡುವುದು ತಮಗೆ ಯೋಗ್ಯವಾಗಿದೆ. ಇತ್ತೀಚಿಗೆ ಕೇಳಿದಂತೆ ಖಾನಖಾನನು ಮತ್ತೆ ಹಿಂದುಸ್ತಾನದಿಂದ ಹೊರಟು ದಕ್ಷಿಣದೇಶಗಳ ಮೇಲೆ

ದಂಡೆತ್ತಿ ಬಂದಿದ್ದಾನಂತೆ.[೧] ನನಗೆ ಆ ಶತ್ರುವನ್ನು ಶಿಕ್ಷಿಸುವ ಪ್ರಸಂಗ ಒದಗಿ ಬಂದಿದೆ. ತಮ್ಮಲ್ಲಿ ಬೇಡಿಕೊಳ್ಳುವುದೆಂದರೆ, ನಿಜಾಮಶಾಹರ ಹೆಸರು ಮತ್ತು ರಾಜ್ಯವನ್ನು ಸಂರಕ್ಷಿಸುವ ದೃಷ್ಟಿಯನ್ನಿಟ್ಟುಕೊಂಡು, ತಾವು ಸಹಾಯಕ್ಕೆ ತಮ್ಮ ಸೈನ್ಯವನ್ನು ಕಳುಹಿಸಿ ಕೊಡಬೇಕು. ಆ ಸೈನ್ಯವನ್ನು ಸದಾಕಾಲ ಇಟ್ಟುಕೊಂಡು, ಜರೂರಿ ಬಿದ್ದಾಗ ಮಾತ್ರ ಉಪಯೋಗ ಮಾಡಿಕೊಳ್ಳುತ್ತೇವೆ. ಅಹಮದನಗರದ ಕೋಟೆ ಶತ್ರುವಿನ ಕೈಗೆ ಹೋಗಿದೆ. ಅಲ್ಲಿ ವಿಶ್ವಾಸಪಾತ್ರವಾದ ಸ್ಥಳವಾಗಿ ಯುದ್ಧ ಸಾಮಗ್ರಿಗಳನ್ನಾಗಲೀ ಭಂಡಾರವನ್ನಾಗಲೀ ಇಡುವಂಥ ಸ್ಥಳ ಉಳಿದಿಲ್ಲ. ಇಬ್ರಾಹಿಮ ನಿಜಾಮಶಾಹರು ಸತ್ತನಂತರ ತಮ್ಮ ವಶಕ್ಕೆ ಬಂದ ಕಂಧಾರದ ಆ ಕೋಟೆಯನ್ನು ಒಂದುವೇಳೆ ತಾವು ತಿರುಗಿ ಕೊಟ್ಟರಾದರೆ, ಪೂರ್ಣ ಮೆಹರಬಾನಗಿ ಆಗುತ್ತದೆ. ಅಲ್ಲಿ ದ್ರವ್ಯ ಭಂಡಾರವನ್ನು ಮತ್ತು ಕಿರುಕುಳ ಸಾಮಾನು ಸರಂಜಾಮನ್ನು ಸಾಗಿಸಿ ಸೈನ್ಯದೊಂದಿಗೆ ಶತ್ರುವನ್ನು ಎದುರಿಸಲು ನಿಲ್ಲುತ್ತೇನೆ. ಮೂರನೆಯ ವಿನಂತಿ ಹಾಗೂ ಜರೂರಿಯಾದ ಕೆಲಸವೆಂದರೆ, ನಾನು ತಮ್ಮನ್ನು ಹಾಗೂ ನಿಜಾಮ ಸರಕಾರವನ್ನು ಬೇರೆ ಎಂದು ಭಾವಿಸಿಲ್ಲ. ಈ ಎರಡೂ ರಾಜ್ಯಗಳಲ್ಲಿ ಯಾವುದೇ ಕಾರಣಗಳಿಂದ ನಾನು ಯಾವುದನ್ನೂ ಭಿನ್ನತೆಯಿಂದ ಕಾಣುವುದಿಲ್ಲ. ನಾನೊಬ್ಬ ಪ್ರಾಮಾಣಿಕ ಚಾಕರ ಹಾಗೂ ನನ್ನ ಮೇಲೆ ತಮ್ಮ ವಿಶ್ವಾಸವಿದೆ. ಆದ್ದರಿಂದ ಸರಕಾರದಲ್ಲಿಯ ಒಂದು ಒಳ್ಳೆಯ ಮನೆತನದ ಮಂಡಳಿಯಲ್ಲಿಯ, ಮಕ್ಕಳೊಂದಿಗರಲ್ಲಿಯ. ಒಬ್ಬರ ಕನ್ಯೆಯನ್ನು ನನ್ನ ಮಗನಿಗೆ ಮದುವೆ ಮಾಡಿಸಬೇಕು. ಅಂದರೆ ಆ ಯೋಗಾಯೋಗದಿಂದ ನನಗೆ ಶತ್ರುವನ್ನು ದಂಡಿಸಲು ಎರಡು ಪಟ್ಟು ಧೈರ್ಯ ಬರುತ್ತದೆ. ದುಷ್ಟರ ಪಾರುಪತ್ಯ ಮಾಡಲು ಈಗಿದ್ದ ಬಲದಲ್ಲಿ ಹತ್ತು ಪಟ್ಟು ಬಲ ಅಧಿಕವಾಗುತ್ತದೆ. ಹೀಗೆ ವಿನಂತಿ ಮಾಡಿಕೊಂಡನು.

ಇಬ್ರಾಹಿಮ ಆದಿಲಶಹನಿಗೂ, ನಿಜಾಮಶಹನ ದರಬಾರದ ಹೆಸರನ್ನು ಹಾಗೂ ನಿಜಾಮಶಹನ ರಾಜ್ಯವನ್ನು ರಕ್ಷಿಸುವುದು ಮನಸ್ಸಿನಲ್ಲಿ ಇತ್ತು. ಆದ್ದರಿಂದ ಮಲಿಕ ಅಂಬರನ ಮೂರನೆಯ ವಿನಂತಿಯನ್ನು ಒಪ್ಪಿಕೊಂಡನು. ಅಂದರೆ ಆತನ ಮಗನಿಗೆ ತನ್ನ ರಾಜ್ಯದಲ್ಲಿಯ ಒಬ್ಬ ಕನ್ಯೆಯನ್ನು ಕೊಡಿಸಲು ಒಪ್ಪಿದನು. ಕಂಧಾರದ ಕೋಟೆಯನ್ನು ಮಲಿಕ ಅಂಬರನಿಗೆ ತಿರುಗಿ ಕೊಟ್ಟನು. ಆಗ ಮಲಿಕ ಅಂಬರನು ಆ ಕೋಟೆಯಲ್ಲಿ ತನ್ನ ದ್ರವ್ಯಭಂಡಾರವನ್ನು ಕಿರುಕುಳ ಸಾಮಾನು ಸರಂಜಾಮುಗಳನ್ನು ಮತ್ತು ಯುದ್ಧ ಸಾಮಗ್ರಿಗಳನ್ನಿಟ್ಟು ನಿರ್ಭಯನಾದನು. ಇಬ್ರಾಹಿಮ ಆದಿಲಶಹನು ೧೦ ಸಾವಿರ ಆಯ್ದ ಸವಾರರನ್ನೂ ತನ್ನ ಸೈನ್ಯದಿಂದ ಆಯ್ದು ಮಲಿಕ ಅಂಬರನಿಗೆ ಸಹಾಯ ಮಾಡಲು ಕಳಿಸಿದನು. ಅವರಿಗೆ ಆಜ್ಞೆ ಮಾಡಿ, ಅವರೆಲ್ಲ ಯಾವಾಗಲೂ ಅಲ್ಲಿಯೇ ಇದ್ದು ಸಹಾಯ ಮಾಡಬೇಕೆಂದು ಹೇಳಿದನು. ಮಲಿಕ ಅಂಬರನು ಈ ಸೈನ್ಯದ ಖಂಡಣಿಯ ಬದಲಾಗಿ ಮತ್ತು ರಾಜ್ಯದ ವ್ಯವಸ್ಥೆಗಾಗಿ ೩ ಲಕ್ಷ ಹೊನ್ನುಗಳನ್ನು ಬೇರೆಯಾಗಿಯೇ ತೆಗೆದಿಟ್ಟನು. ಇಬ್ರಾಹಿಮ ಆದಿಲಶಹನ ದರಬಾರದದಲ್ಲಿಯ ಶ್ರೇಷ್ಠ ನೌಕರನಾಗಿದ್ದ ಯಾಕೂತಖಾನನ ಮಗಳನ್ನು ಮಲಿಕ ಅಂಬರನ ಹಿರಿಯ ಮಗ ಆಜೇನುಲ್‌ಮುಲ್ಕನಿಗೆ ಕೊಡಲು ಒಪ್ಪಿಸಿದನು. ಅದರಿಂದ ಮಲಿಕ ಅಂಬರನಿಗೆ ಬಹಳ ಸಂತೋಷವಾಯಿತು. ತನ್ನ ಹಿರಿಯ ಮಗ ಆಜೇನುಲ್‌ಮುಲ್ಕನ ಮದುವೆಯ ಸಮಾರಂಭದ ಸಾಹಿತ್ಯದ ಸಿದ್ಧತೆಯನ್ನು ಮಾಡಹತ್ತಿದನು.

---

1. "Khan-Kahnan was given leave to go to his duty in the Decan by Jahangir on 14th Shaban-Julus 3" (13 Nov 1608) - TUZ-I-J P.153..., On the 6th Zilqada Julus 4 (21 Jan 1610). Before parviz arrived at Burhanpur a petition came from Khan-Khanan and the Amirs that the Dakhanis had assembled together and were making disturbances - Ibid p 161.

**೫೪. *ಯಾಕೂತಖಾನನ ಮಗಳೊಂದಿಗೆ ಮಲಿಕ್ ಅಂಬರನ ಮಗ ಆಜೀನುಲ್‌ಮುಲ್ಕನ ವಿವಾಹ ಪ್ರಸಂಗ :***

ಮದುವೆಯ ಸಮಾರಂಭದ ಸಿದ್ಧತೆಯಾದನಂತರ, ಇಬ್ರಾಹಿಮ ಆದಿಲಶಹನು ಆಜೀನುಲ್‌ಮುಲ್ಕನನ್ನು ಜುನ್ನರ ನಗರದಿಂದ ಕರೆತರಲು ಹಜರತ್ ಮೌಲಾನಾ ಹಬೀಬುಲ್ಲಾನನ್ನು ಕಳಿಸಿದನು. ಹಜರತ್ ಮೌಲಾನಾ ಹೋಗಿ ಜುನ್ನರದಿಂದ ಆಜೀನುಲ್‌ಮುಲ್ಕನನ್ನು 'ದಾರುಸಸಲಾತನ ಬಲಾತಪುರ' ಉರ್ಫ ವಿಜಾಪುರಕ್ಕೆ ಕರೆತಂದನು. ಆಜೀನುಲ್‌ಮುಲ್ಕನಿಗೆ ಇಳಿದುಕೊಳ್ಳಲು 'ಜಾನಬಶಾ'ದಲ್ಲಿಯ ಕಿಶ್ವರಖಾನನ ದೊಡ್ಡ ವಾಡೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಮದುವೆ ವೈಭವದಿಂದ ಅನೇಕ ದಿನಗಳವರೆಗೆ ನಡೆಯಿತು. ಅನಂತರ ವಧುವರರು ಬಹಳ ಸಾಮಾನು ಸರಂಜಾಮುಗಳೊಂದಿಗೆ ಶ್ರೇಷ್ಠ ಅಂದಣದಲ್ಲಿ ಜುನ್ನರಿಗೆ ಹೋದರು. ವಧುವನ್ನು ಕಳಿಸಿ ಬರಲು ಅನೇಕ ಅಮೀರ ಜನರನ್ನು ನಿಯಮಿಸಲಾಗಿತ್ತು. ವಧುವರರು ಸುರಕ್ಷಿತವಾಗಿ, ಸುಖರೂಪದಿಂದ ಜುನ್ನರದ ಹತ್ತಿರ ಹೋಗಿ ಮುಟ್ಟುತ್ತಿದ್ದಂತೆ, ಮಲಿಕಅಂಬರನು ಎದುರಿಗೆ ಬಂದು ಬಹಳ ಸಮ್ಮಾನದಿಂದ ಮತ್ತು ಅತ್ಯಂತ ಯೋಗ್ಯ ರೀತಿಯಲ್ಲಿ ವಧುವಿನ ಸವಾರಿಯನ್ನು ಹಾಗೂ ಆದಿಲಶಹನ ಕಡೆಯ ಅಮೀರ ಜನರನ್ನು ಕೋಟೆಯ ಒಳಗಡೆ ಕರೆದುಕೊಂಡು ಬಂದನು. ಅಲ್ಲಿಯೂ ವೈಭವದಿಂದ ಸಭೆಗಳನ್ನು ನಡೆಸಿದನು. ಆದಿಲಶಹನ ಕಡೆಯ ಅಮೀರ ಜನರೊಂದಿಗೆ ಹಾಗೂ ಆದಿಲಶಹನ ದರಬಾರಿನ ಜನರೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಜೋಡಿಸಿದಂತಾಯಿತು. ಪ್ರತಿಯೊಬ್ಬರೂ ಬೇರೆ-ಬೇರೆ ಮನೆಗಳಲ್ಲಿದ್ದು ಅವರೊಂದಿಗೆ ಸಖ್ಯವನ್ನು ಬೆಳೆಸಿದರು. ಇಬ್ರಾಹಿಮ ಆದಿಲಶಹನ ಕಡೆಯ ಪ್ರತಿಯೊಬ್ಬರೂ ತಮ್ಮ ಸನ್ನಡತೆ, ಪ್ರಾಮಾಣಿಕತೆ ಹಾಗೂ ಸ್ನೇಹವನ್ನು ಪ್ರತಿಯೊಬ್ಬ ಅಮೀರರೊಂದಿಗೆ ಜಾಹೀರು ಮಾಡಿದರು. ಅನಂತರ ಬಹು ಬೆಲೆಯುಳ್ಳ ವಸ್ತ್ರಗಳನ್ನು, ಜಡಜವಾಹಿರಗಳನ್ನು ಮತ್ತು ನಗದಿ ಕಾಣಿಕೆಗಳನ್ನು ಅವರವರ ಯೋಗ್ಯತೆಗನುಸಾರವಾಗಿ ಕೊಟ್ಟು ತಿರುಗಿ ಹೋಗಲು ನಿರೋಪ ಕೊಡಲಾಯಿತು. ಅದೇ ಸಮಯದಲ್ಲಿ ಖಾನ ಖಾನನು ದಿಲ್ಲಿಯಿಂದ ಬುರ್ಹಾನಪುರಕ್ಕೆ ಬಂದು ಮುಟ್ಟಿ ಆದಿಲಶಹನಿಗೆ ಪತ್ರ ಬರೆದು ಗುಪ್ತಚಾರರನ್ನು ಕಳಿಸಿ, ತಾನು ಬುರ್ಹಾನಪುರಕ್ಕೆ ಸುರಕ್ಷಿತವಾಗಿ ಬಂದು ಮುಟ್ಟಿದ ಸುದ್ದಿಯನ್ನು ತಿಳಿಸಿದನು. ಮಲಿಕ ಅಂಬರನೊಂದಿಗೂ ಸ್ನೇಹವನ್ನು ಸಖ್ಯತೆಯನ್ನು ಇಟ್ಟುಕೊಂಡಿದ್ದನು. ಮಲಿಕ ಅಂಬರನು ಕೂಡ ಬಹಿರಂಗದಲ್ಲಿ ಏನನ್ನೂ ತೋರಗೊಡದೆ ಖಾನಖಾನನ ಭೆಟ್ಟಿಗೆ ಹೋದನು. ಅವನೊಂದಿಗೆ ಬಹಿರಂಗದಲ್ಲಿ ಸ್ನೇಹದಿಂದಲೇ ವರ್ತಿಸಿ-ಮಾತನಾಡಿ ತಿರುಗಿ ಬಂದನು.

**೫೫. *ಖಾನಖಾನನನ್ನು ದಕ್ಷಿಣ ದೇಶಗಳ ಮೇಲೆ ಕಳಿಸಿದ ನಂತರ ಜಹಾಂಗೀರ ಬಾದಶಹನು ಮತ್ತೆ ರಾಜಕುಮಾರ ಪರವೀಜನನ್ನು ರಾಜಾ ಮಾನಸಿಂಗ ಮೊದಲಾದ ಅಮೀರ ಜನರೊಂದಿಗೆ ದಕ್ಷಿಣಕ್ಕೆ ಕಳಿಸಿದ್ದು :***

ಖಾನಖಾನನು ಬಂದ ಅನಂತರದ ಏಳೆಂಟು ತಿಂಗಳುಗಳಾದ ಮೇಲೆ ಹಿಜರಿಸನ್ ೧೦೧೭ರಲ್ಲಿ (ಕ್ರಿ.ಶ. ೧೬೦೮-೯) ಜಹಾಂಗೀರ ಬಾದಶಹನು ತನ್ನ ನಡುವಿನ ಮಗ ಸುಲ್ತಾನ ಪರವೀಜನನ್ನು ೨೦ ಸಾವಿರ ಸವಾರರೊಂದಿಗೆ ಮಾನಸಿಂಗನನ್ನು ಖಾನ ಜಹಾನ ಲೋದಿ ಇತ್ಯಾದಿ ಅನೇಕ ಸರದಾರರ

ಯೋಧರೊಂದಿಗೆ, ದಕ್ಷಿಣ ದೇಶಗಳ ವ್ಯವಸ್ಥೆಗಾಗಿ ಕಳಿಸಿದನು.[1] ಅವರೆಲ್ಲ ಸೈನ್ಯಸಹಿತವಾಗಿ ಬುರ್ಹಾನಪುರಕ್ಕೆ ಬಂದು ಮುಟ್ಟಿದರು. ಮಲಿಕಅಂಬರನಿಗೆ ಈ ಸುದ್ದಿ ತಿಳಿಯುತ್ತಿದ್ದಂತೆ, ಅವನು ತನ್ನ ಖಾಸಾ ಸೈನ್ಯ ಹಾಗೂ ಆದಿಲಶಹನ ಕಡೆಯಿಂದ ಬಂದ ಸೈನ್ಯವನ್ನು ಸರಹದ್ದಿಗೆ ಕಳಿಸಿದನು. 'ರಹದಾರಿಗಳನ್ನು ಬಂದು ಮಾಡಿ ಹೋಗಿ ಬರುವ ಮಾರ್ಗವನ್ನು ಕೂಡ ಮುಚ್ಚಿ, ಶತ್ರುವಿಗೆ ರಾಜ್ಯದಲ್ಲಿ ಪ್ರವೇಶ ಮಾಡಲು ಸಾಧ್ಯವಾಗದಂತೆ ಮಾಡಿರಿ ಶತ್ರುಗಳ ಉಪದ್ರವ ಹಾಗೂ ಲೂಟಿಯಿಂದ ತಮ್ಮ ರಾಜ್ಯವನ್ನು ಸಂರಕ್ಷಿಸಿರಿ' ಎಂದು ಸೈನ್ಯಕ್ಕೆ ತಾಕೀದು ಮಾಡಿದನು. ಸರಹದ್ದಿನಲ್ಲಿ ಬಂದ ದಿಲ್ಲಿಯ ಸೈನ್ಯ ಹಾಗೂ ದಕ್ಷಿಣದ ಧೀರ ಯೋಧರೊಂದಿಗೆ ಯುದ್ಧ ಪ್ರಾರಂಭವಾಯಿತು. ರಾಜಾ ಮಾನಸಿಂಗನು ಹಿಂದು ರಾಜರಲ್ಲಿಯೆ ಶೂರತ್ವದಲ್ಲಿ ಬಹಳ ಯೋಗ್ಯನೆಂದು ಪ್ರಸಿದ್ಧನಾಗಿದ್ದನು. ಆತನು ಜನರನ್ನು ಅಡ್ಡಿ ಪಡಿಸುವುದು ಮತ್ತು ಮನಾಯಿ ಮಾಡುವುದನ್ನು ಲಕ್ಷ್ಯದಲ್ಲಿ ತಂದು, ದಕ್ಷಿಣದವರ ಈ ತುಡುಗು ಸ್ವಭಾವವನ್ನು ಹಾಗೂ 'ಜಂಗೆ-ಗುರುಜ' ಯುದ್ಧ ಕಲೆಯಲ್ಲಿಯ ಪ್ರಸಿದ್ಧಿಯನ್ನು ಗಮನಿಸಿದನು. 'ಈ ದಕ್ಷಿಣದ ಜನರು ಯುದ್ಧದಿಂದ ಓಡಿ ಹೋಗುವುದನ್ನು ಕಲಿತಿದ್ದಾರೆ. ಆದರೆ ಈ ಜನರು ಶೂರತನದ ಶಾಸ್ತ್ರವನ್ನು ನೋಡಿಲ್ಲ. ಯುದ್ಧದಿಂದ ಓಡಿ ಹೋಗದೆ ಅಚಲವಾಗಿ ನಿಂತು ಯುದ್ಧ ಮಾಡುವುದನ್ನ ನೋಡಿಲ್ಲ. ಆದ್ದರಿಂದ ಈ ಜನರೊಂದಿಗೆ ರುಸ್ತುಮನಂತೆ ಯುದ್ಧ ಮಾಡುವುದು ಹೇಗೆ ಎಂಬುದನ್ನು ತೋರಿಸುತ್ತೇನೆ ಆಗ ಇವರು ಮತ್ತೆ ಯುದ್ಧದ ಹೆಸರನ್ನು ಎತ್ತುವುದಿಲ್ಲ' ಎಂದಿತ್ಯಾದಿಯಾಗಿ ಮಾನಸಿಂಗನು ಬಡಬಡಿಸಿದ್ದನ್ನು, ಆದಿಲಶಹನ ಕಡೆಯ ಹಾಗೂ ನಿಜಾಮಶಹನ ಕಡೆಯ ಸರದಾರರು ಕೇಳಿ ವಿಚಾರದಲ್ಲಿ ಬಿದ್ದರು. ಈ ವಿಷಯವನ್ನು ಸವಿಸ್ತಾರವಾಗಿ ಬರೆದು ಶತ್ರುವಿನ ಕಡೆಯ ಭಾರೀಪ್ರಮಾಣದ ಸೈನ್ಯ ಹಾಗೂ ಮಾನಸಿಂಗ ರಾಜನ ಬಡಬಡಿಕೆಯನ್ನೆಲ್ಲ, ಇಬ್ರಾಹಿಮ ಆದಿಲಶಹನಿಗೆ ವಿನಂತಿ ಪತ್ರದಲ್ಲಿ ಬರೆದು ತಿಳಿಸಿದರು. ಮತ್ತು ಇನ್ನಷ್ಟು ಸಹಾಯಕ್ಕಾಗಿ ಯಾಚಿಸಿದರು.

ಆದಿಲಶಹನು ನಾಲ್ಕು ಕಡೆಗೂ ಸೈನ್ಯವನ್ನು ಕಳಿಸಿದ್ದನು. ಇನ್ನು ಕೆಲ ಸೈನ್ಯವನ್ನು ಕರ್ನಾಟಕದ ಪ್ರದೇಶದಲ್ಲಿ ಬಂಡುಖೋರರನ್ನು ಅಡಗಿಸಲು ಕಳಿಸಿದ್ದನು. ಮತ್ತೆ ಕೆಲಸೈನ್ಯವನ್ನು ಆದೋನಿಗೆ ಕಳಿಸಿದ್ದನು. ಒಂದಿಷ್ಟು ಸೈನ್ಯವನ್ನು ನಿಜಾಮಶಹನ ಸಹಾಯಕ್ಕೆ ಕಳಿಸಿದ್ದನು. ಹೀಗಾಗಿ ತುಸುವೆ ಕಾಯ್ದಿಟ್ಟ ಸೈನ್ಯ ಮಾತ್ರ ಆದಿಲಶಹನ ಹತ್ತಿರ ಇತ್ತು. ಅದರಲ್ಲಿಯ ಮೂರು-ನಾಲ್ಕು ಸಾವಿರ ಹತ್ಯಾರಬಂದರ ಸವಾರರನ್ನು ಇವರ ಸಹಾಯಕ್ಕಾಗಿ ಕಳಿಸಿದನು. ಅಹಮದನಗರದಲ್ಲಿಯ ಮರಾಠಾ ಜನರು, ಅಲ್ಲಿ ದಂಗೆಯಾದಾಗ ಓಡಿ ಹೋಗಿದ್ದರು. ಆ ಮರಾಠಾ ಜನರು ಕೂಡ ಈ ಸಮಯದಲ್ಲಿ ಸೇರಿ ಸುಮಾರು ೧೦ ಸಾವಿರದಷ್ಟು ಜನ ಸವಾರರೂ ಸೈನ್ಯದಲ್ಲಿ ಸೇರಿದರು. ಹೀಗೆ ಸುಮಾರು ಸೈನ್ಯ ಸಂಗ್ರಹವಾದಮೇಲೆ ದೆಹಲಿಯ ಸೈನ್ಯವನ್ನು ಎದುರಿಸಲು ಸಿದ್ಧರಾದರು. ಅಹಮದನಗರದಲ್ಲಿ ಮರಾಠಾ ಜನರು ಗುಪ್ತಯುದ್ಧ ವಿಷಯದಲ್ಲಿ ಪಳಗಿದವರು. ಆದ್ದರಿಂದ ಈ ಮರಾಠಾ ಜನರು ದೆಹಲಿಯ ಸೈನ್ಯವನ್ನು ಮುತ್ತಿ, ಹಿಂದಿನಿಂದ ಹಾಗೂ ಮುಂದಿನಿಂದ ಬಂದು ಅಪ್ಪಳಿಸಿ, ಯುದ್ಧ ಹಾಗೂ ಲೂಟಿಯಲ್ಲಿ ತೊಡಗಿದರು. ದೆಹಲಿ ಸೈನ್ಯದ ಎದುರಿನ ಸುಮಾರು ಹತ್ತು ಹನ್ನೆರಡು ಕೋಸುಗಳ ವರೆಗಿನ ಬೆಳೆದುನಿಂತ ಹೊಲಗಳನ್ನೆಲ್ಲ ಸುಟ್ಟು, ಕಾಳು-ಕಡಿಗಳೆಲ್ಲ ಸಿಗದಂತೆ ಮಾಡಿ ಆ ಸೈನ್ಯವು ಹಾಗೆಯೇ ನಿಲ್ಲುವಂತೆ ಮಾಡಿದರು. ಮಾನಸಿಂಗ ರಾಜ ಹಾಗೂ ಹಿಂದು ಸೈನ್ಯವು ತಮ್ಮ ಶೂರತ್ವವನ್ನು ಪಣಕ್ಕೆ ಒಡ್ಡಿದ್ದರು.

---

1. "On Tuesday, the 14th Rajb (3 October 1609) despatched my son Parwiz on the service of conquering the country of the Deccan" Tuz-I-J- P 156.

ದಕ್ಷಿಣದ ಶೂರರು ದೆಹಲಿ ಸೈನ್ಯದ ಎದುರಿಗೆ ನಿಂತು ಸಂಪೂರ್ಣ ಧೈರ್ಯದಿಂದ ಕಾದಾಡಿ ದಕ್ಷಿಣದ ಹೆಸರನ್ನು ಶ್ರೇಷ್ಠ ಮಟ್ಟಕ್ಕೆ ತರುತ್ತಿದ್ದರು. ಉಭಯಕಡೆಗಳ ಬಹಳಷ್ಟು ಜನರು ಪ್ರಾಣ ಕಳೆದುಕೊಂಡರು. ಮಾನಸಿಂಗ ರಾಜನ ಭಾವ ಮೈದುನ ಅಂದರೆ ಹೆಂಡತಿಯ ಸಹೋದರ ಹಾಗೂ ಅತ್ತಕಡೆಯ ಅನೇಕ ಸರದಾರರು ಯುದ್ಧದಲ್ಲಿ ಸತ್ತರು. ಕೊನೆಗೆ ಹಿಂದುಸ್ತಾನದ ಸೈನ್ಯವು ಬಹಳ ಕಠಿಣ ಪ್ರಸಂಗವನ್ನು ಎದುರಿಸಬೇಕಾಯಿತು. ಅವರ ಸೈನ್ಯದಲ್ಲಿ ದುಷ್ಕಾಳವೂ ಬಿದ್ದಿತು. ಅದರಿಂದಾಗಿ ಸಾಮರ್ಥ್ಯಹೀನರಾಗಿ ಬಹಳಷ್ಟು ಜನರು, ಕುದುರೆಗಳು, ಒಂಟೆಗಳು ಕೂಡ ಸತ್ತವು. ಅವುಗಳ ಪ್ರೇತಗಳಿಂದ ಮತ್ತು ದನಕರುಗಳ ಪ್ರೇತಗಳಿಂದ ಅರಣ್ಯದ ವಾತಾವರಣವೆಲ್ಲ ಬಹಳ ಕೆಟ್ಟಿತು. ಇವುಗಳಿಂದಾಗಿ ರಾಜಕುಮಾರ ಪರವೀಜನು ಭಯಭೀತನಾಗಿ ತನ್ನ ಸೈನ್ಯದಲ್ಲಿಯ ಕಾರಭಾರಿ ಜನರು ಹಾಗೂ ಅಮೀರ ಜನರೊಂದಿಗೆ ಚರ್ಚಿಸಿ ಎಲ್ಲರ ವಿಚಾರಗಳನ್ನು ಕೇಳಿದನು. ಎಲ್ಲರ ವಿಚಾರದಂತೆ, ಈ ಸ್ಥಳವನ್ನು ಬಿಟ್ಟು ತಮ್ಮ ಸರಹದ್ದಿಗೆ ಹೋಗಬೇಕು. ಅಲ್ಲಿ ಆಹಾರಸಾಮಗ್ರಿಗಳು ದೊರೆಯುತ್ತವೆ. ಎಂದೆಲ್ಲ ನಿಶ್ಚಯಿಸಿ ಬುರ್ಹಾನಪುರದಲ್ಲಿದ್ದ ಖಾನಖಾನನಿಗೆ ತಿಳಿಸಿದನು. ಆತನು ರಾಜಕುಮಾರನಿಗೆ ಬರೆದು, "ಕದಾಪಿ ಮುಂದೆ ಹೋಗುವ ಸಂಕಲ್ಪ ಮಾಡಬಾರದು. ಯಾಕೆಂದರೆ ಈ ಬಿಸಿಲು ದಿನಗಳಲ್ಲಿ ರಾಜ್ಯದಲ್ಲಿ ಎಲ್ಲೆಡೆ ಎಲ್ಲ ಪದಾರ್ಥಗಳೂ ದೊರೆಯುವುದಿಲ್ಲ. ಆದ್ದರಿಂದ ನೀವುಗಳೆಲ್ಲ ಬುರ್ಹಾಣಪುರಕ್ಕೆ ಹೊರಟು ಬರಬೇಕು. ಇಲ್ಲಿ ಎಲ್ಲ ತರದ ಪದಾರ್ಥಗಳು ದೊರೆಯುತ್ತವೆ. ಕೆಲವು ದಿನಗಳು ಕಳೆದ ಅನಂತರ ಮತ್ತೆ ಬೇಕಾದಂತೆ ಮಾಡಬಹುದು" ಎಂದು ತಿಳಿಸಿದನು.

*೫೬. ಸುಲ್ತಾನ ಪರವೀಜ ಹಾಗೂ ರಾಜಾ ಮಾನಸಿಂಗನು ಖಾನಖಾನನ ವಿಚಾರವನ್ನು ಕೇಳದೆ ಮುಂದೆ ಹೋಗಿ ಸೋತದ್ದು, ಮತ್ತೆ ಖಾನಖಾನನ ಉಪದೇಶದಿಂದ ಪ್ರಾಣಘಾತುಕ ಸಂಕಟದಿಂದ ಪಾರಾದದ್ದು. ಮತ್ತು ಅಹಮದನಗರ ಕೋಟೆಯು ಪುನಃ ನಿಜಾಮಶಹನ ಜನರ ಕೈಗೆ ಬಂದದ್ದು:*

ದೆಹಲಿಯ ಅಮೀರ ಜನರು ಖಾನಖಾನನ ಈ ಯುಕ್ತಿಯನ್ನು ಒಪ್ಪಲಿಲ್ಲ. ಅವನಿಂದಲೇ ಈ ಪ್ರಾಣಘಾತುಕ ಸಂಕಟದಲ್ಲಿ ಬಿದ್ದಿರುವೆವು ಎಂದು ಹೇಳುತ್ತ ದಕ್ಷಿಣದ ಜನರ ಮೇಲೆ ಇನ್ನಷ್ಟು ಏರಿ ಬಂದರು. ಅಹಮದನಗರದ ಮೇಲೆ ಬರುವುದೆಂದು ನಿರ್ಧರಿಸಿ ಮುಂದೆ ಬಂದರು. ದಕ್ಷಿಣದ ಸೈನ್ಯವೂ ಹಿಂದುಸ್ಥಾನದ ಸೈನ್ಯವನ್ನು ಎದುರಿಸುತ್ತ ಅದರ ಗತಿಗೆ ಕಡಿವಾಣ ಹಾಕುತ್ತ ಬೆನ್ನು ಹತ್ತಿತ್ತು. ಮರಾಠಾ ಜನರು ತಮ್ಮ ನಡೆಯಂತೆ ಹಿಂದುಸ್ತಾನದ ಸೈನ್ಯದ ಹಿಂದು-ಮುಂದೆ ಮತ್ತು ಎಡ-ಬಲಗಳಲ್ಲಿ ಸುತ್ತವರಿದು, ಅವರನ್ನು ಎದುರಿಸುತ್ತ ಲೂಟಿ ಮಾಡುತ್ತಿದ್ದರು. ಕೊನೆಗೆ ಒಂದು ಸ್ಥಳದಲ್ಲಿ ಹಿಂದುಸ್ತಾನದ ಸೈನ್ಯವು ಬೀಡು ಬಿಟ್ಟಿತು. ಅದೊಂದು ಕಲ್ಲು ಗುಡ್ಡಗಳಿಂದ ಕೂಡಿದ ಅರಣ್ಯವಾಗಿತ್ತು. ಆದ್ದರಿಂದ ಸೈನ್ಯ ಉಳಿದುಕೊಳ್ಳುವಂಥ ವಿಶಾಲವಾದ ಸ್ಥಳವಾಗಿರಲಿಲ್ಲ. ರಸ್ತೆಗಳೂ ಅಗಲವಾಗಿರಲಿಲ್ಲ. ದಕ್ಷಿಣದ ಜನರು, ಹಿಂದುಸ್ತಾನದ ಜನರನ್ನು ಇಂಥ ಅವಘಡ ಸ್ಥಳದಲ್ಲಿ ಹಿಡಿದು ಮಧ್ಯಭಾಗದಲ್ಲಿ ಸುತ್ತುವರಿದು ಮುಂದೆ ಹೊರಟರು. ಹಲ್ಲೆ ಮಾಡುತ್ತ ಹಿಂದುಸ್ತಾನದ ಸೈನ್ಯವನ್ನು ಜೇರಿಗೆ ತಂದರು. ಬಹಳಷ್ಟು ಮೊಗಲ ಜನರು ಆ ಕಾರಾಗೃಹದಲ್ಲಿ ಅಂದರೆ ಹಿಡಿದಿಟ್ಟ ಸ್ಥಳದಲ್ಲಿ ಕೊಲೆಯಾದರು. ಶತ್ರುಗಳ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ರಾಜಕುಮಾರ ಪರವೀಜನಿಗೂ ಮೊಗಲರ ಸರದಾರರಿಗೂ ಆ ಸಂಕಟದ ಸ್ಥಳದಲ್ಲಿ

ಜೀವಕ್ಕೆಯೇ ಕುತ್ತು ಬಂದಿತು. ಜೀವ ಉಳಿಸಿಕೊಳ್ಳುವುದು ಕಠಿಣವಾಗಿ ಖಾನಖಾನನ ಕಡೆಗೆ ಹೊರಟು ಹೋದರು. ಖಾನಖಾನನಿಗೆ ಶೋಕದ ಪತ್ರ ಬರೆದು, 'ತಮ್ಮ ಸಲಹೆಯಂತೆ ಮಾಡದೆ, ನೀವು ಹೇಳಿದ್ದನ್ನು ಕೇಳದೆ ನಮಗೆ ಇಂಥ ಸಂದರ್ಭ ಒದಗಿ ಬಂದಿದೆ. ನಮ್ಮ ಸೈನ್ಯವೆಲ್ಲ ಮರಣ ಸಂಕಟದಲ್ಲಿ ಬಿದ್ದಿದೆ. ಏನೊಂದೂ ಉಳಿದಿಲ್ಲ. ನಾವು ಮಾಡಿದ್ದು ತಪ್ಪಾಗಿದೆ. ಈಗ ನಿಮ್ಮ ಬೆನ್ನು ಹಿಡಿಯದೆ ಮತ್ತು ನಿಮ್ಮ ಸಲಹೆ ಇಲ್ಲದೆ, ಸೈನ್ಯವು ಸಂಕಟದಿಂದ ಪಾರಾಗುವ ಸಾಮರ್ಥ್ಯವನ್ನು ಹೊಂದಿಲ್ಲ. ನೀವು ಏನಾದರೂ ಹೇಗಾದರೂ ಮಾಡಿ ನಮ್ಮನ್ನು ಸಂಕಟದಿಂದ ಮುಕ್ತ ಮಾಡಬೇಕು. ಅಂದರೆ ನಾವು ಬುರ್ಹಾನಪುರಕ್ಕೆ ಬಂದು ಮುಟ್ಟುತ್ತೇವೆ'. ಎಂದಿತ್ಯಾದಿಯಾಗಿ ಬರೆದು ಕಳಿಸಿದರು. ಅದನ್ನು ಕಂಡ ಖಾನಖಾನನು ತಕ್ಷಣ ಸ್ನೇಹಪೂರ್ಣ ಸಂಬಂಧದ ರಸಭರಿತ ಪತ್ರಗಳನ್ನು ಬರೆದು, ದಕ್ಷಿಣದ ಪ್ರತಿಯೊಬ್ಬ ಸರದಾರರಿಗೂ ಪ್ರತ್ಯೇಕವಾಗಿ ಕಳಿಸಿದನು. ಅದರಲ್ಲಿ ಈ ಸೈನ್ಯದಲ್ಲಿ ಶಾಹ ಸಲೀಮ ಬಾದಶಹರ ಮಗನಿದ್ದಾನೆ. ಶಾಹ ಸಲೀಮರು ನಾಲ್ಕು ದಿಕ್ಕುಗಳ ಹಿಂದುಸ್ತಾನದ ಬಾದಶಹರಾಗಿದ್ದಾರೆ. ಗೊತ್ತಿಲ್ಲದಂತೆ ಅವರಿಗೆ ಧಕ್ಕೆಯಾಗುತ್ತದೆ. ಯುದ್ಧದ ಅನುಭವ ಇಲ್ಲದವರು, ಕೆಳ ತರಗತಿಯ ಜನರು ಅವನನ್ನು ಈ ದಾರಿಯಲ್ಲಿ ತಂದಿದ್ದಾರೆ. ಬಹುಶಃ ಯುಕ್ತಿ ಮಾಡಿ ಮರಣದ ಸಂಕಟದಲ್ಲಿ ಹಾಕಿದ್ದಾರೆ. ಆದ್ದರಿಂದ ಇಂಥ ಪ್ರಸಂಗದಲ್ಲಿ ದಕ್ಷಿಣದ ಜನರು ಯತ್ನ ಮಾಡುವ ಕಾರಣವಿಲ್ಲ. ಇದರಲ್ಲಿಯೇ ದಕ್ಷಿಣದ ಜನರ ಗೌರವವಿದೆ. ಆದ್ದರಿಂದ ಈ ಸ್ನೇಹವಾಚಕ ಪತ್ರ ಮುಟ್ಟುತ್ತಿದ್ದಂತೆ ರಾಜಕುಮಾರನಿಗೆ ಮತ್ತು ಅವನ ಸೈನ್ಯಕ್ಕೆ ದಾರಿಯನ್ನು ಬಿಟ್ಟು ಈ ಮಿತ್ರನ ಮೇಲೆ (ಅಂದರೆ ನನ್ನ ಮೇಲೆ) ಉಪಕಾರ ಮಾಡಬೇಕು. ಹೀಗೆ ಮಾಡಿದಿರಾದರೆ ಬಹಳ ದಿನಗಳವರೆಗೆ ನಿಮ್ಮ ಉಪಕಾರ ಸ್ಮರಣೆಯಲ್ಲಿ ಉಳಿಯುತ್ತದೆ" ಎಂದು ಬರೆದನು.

ಅದನ್ನು ಕಂಡ ಆದಿಲಶಹ ಹಾಗೂ ನಿಜಾಮಶಹನ ಅಮೀರ ಜನರು ತಂತಮ್ಮಲ್ಲಿ 'ಈ ಸಮಯದಲ್ಲಿ ಶತ್ರುವು ಹಣ್ಣಾಗಿ ಕೈಗೆ ಸಿಕ್ಕಿದ್ದಾನೆ. ಈಗ ನಮಗೆ ಅವನನ್ನು ಕೊಲ್ಲುವುದೂ ಬೇಡ, ಅವನೇ ನಾಲ್ಕೈದು ದಿನಗಳಲ್ಲಿ ತಾನೆ ಸಾಯುತ್ತಾನೆ. ಇಲ್ಲಿಂದ ಬಿಡುಗಡೆಯಾಗುವುದೇ ಇಲ್ಲ. ಆದ್ದರಿಂದ ವ್ಯರ್ಥವಾಗಿ ಕೈಗೆ ಬಂದದ್ದನ್ನು ಬಿಡುವುದು. ಮತ್ತು ಅವರಿಗೆ ಓಡಿ ಹೋಗಲು ಮಾರ್ಗ ಮುಕ್ತ ಮಾಡುವುದೆಂದರೆ, ಬುದ್ಧಿವಂತರ ಮುಂದೆ ನಾವು ಮೂರ್ಖರೂ ಅಜ್ಞಾನಿಗಳೂ ಎಂದೆನಿಸಿಕೊಂಡು ಮುಂದೆ ಪಶ್ಚಾತ್ತಾಪ ಪಡಬೇಕಾಗುತ್ತದೆ. ಆದ್ದರಿಂದ ಈ ವಿಷಯದಲ್ಲಿ ಖಚಿತವಾಗಿ ಬುದ್ಧಿ ಓಡಲಾರದಾಗಿದೆ' ಎಂದು ವಿಚಾರಿಸಿದರು. ಖಾನಖಾನನ ವಿಶ್ವಾಸವನ್ನು ಉಳಿಸಿಕೊಳ್ಳುವುದು ಈ ಅಮೀರ ಜನರಿಗೆ ಪ್ರೀತಿಯ ವಿಷಯವಾಗಿತ್ತು. ಖಾನಖಾನನೂ ತನ್ನ ಪತ್ರದಲ್ಲಿ ತುಂಬ ಕಳಕಳಿಯಿಂದ ಅತಿ ಆಗ್ರಹ ಮಾಡಿ ಬರೆದಿದ್ದಾನೆ. ಆದ್ದರಿಂದ ನಿರುಪಾಯರಾದರು. ತಮಗೆ ಉಪಯೋಗವಾಗುವಂಥ ವಿಷಯವನ್ನು ಬಿಟ್ಟು ರಾಜಕುಮಾರ ಪರವೀಜನಿಗೆ ಮತ್ತು ಆತನ ಸೈನ್ಯಕ್ಕೆ ಹೊರಟು ಹೋಗಲು ಮಾರ್ಗವನ್ನು ಮುಕ್ತ ಮಾಡಿದರು. ಆಗ ಪಂಜರದಲ್ಲಿಯ ಪಕ್ಷಿಯನ್ನು ಬಿಟ್ಟಂತೆ ತತ್‌ಕ್ಷಣ ರಾಜಕುಮಾರನು ತನ್ನ ಸೈನ್ಯದೊಂದಿಗೆ ಕಿಂಚಿತ್ತು ಅವಕಾಶ ನೀಡದೆ ಬುರ್ಹಾನಪುರಕ್ಕೆ ಹೋಗುವ ದಾರಿಯನ್ನು ಹಿಡಿದನು. ಆಗ ದಕ್ಷಿಣದ ಸೈನ್ಯವು ಕೂಡ ಬೆನ್ನು ಹತ್ತಿ ಲೂಟಿ ಮಾಡುವುದನ್ನು ಬಿಡದೆ, ಹಿಂದುಸ್ತಾನ ಸೈನ್ಯದ ಹಿಂದು ಮುಂದೆ ಮುತ್ತಿಗೆ ಹಾಕುತ್ತಲೆ ಹೋಯಿತು. 'ಹಿಡಿ-ಹಿಡಿಯಿರಿ, ಹೊಡೆ-ಹೊಡೆಯಿರಿ' ಎನ್ನುತ್ತ ಗದ್ದಲ-ಹಾಕುತ್ತ ಮತ್ತು ಎಡ-ಬಲ ಬದಿಗಳಲ್ಲಿ ಲೂಟಿ ಮಾಡುತ್ತ ಅವರನ್ನು ಬುರ್ಹಾನಪುರದ ಸರಹದ್ದಿನವರೆಗೂ ಮುಟ್ಟಿಸಿದರು. ರಾಜಕುಮಾರನ

ಸೈನ್ಯವು ಬುರ್ಹಾನಪುರವನ್ನು ಮುಟ್ಟುತ್ತಿದ್ದಂತೆ. ಜೀವದಾನ ಮಾಡಿದ ಅಲ್ಲಾನನ್ನು ಎಲ್ಲರೂ ಸ್ತುತಿಸಿದರು.[೧] ಹಜರತ್ ಮೌಲಾನಾ ಹಬೀಬುಲ್ಲಾಹನು ಈ ವಿಷಯದಲ್ಲಿ ಬರೆಯುತ್ತ ಹೀಗೆ ಹೇಳಿದ್ದಾನೆ.

"ಇಬ್ರಾಹಿಮ ಆದಿಲಶಹನು ಆ ಸಮಯದಲ್ಲಿ ನನಗೆ ರಾಯಭಾರಿಯ ಕೆಲಸವನ್ನು ಕೊಟ್ಟು ಸಖ್ಯ ಮಾಡಿಕೊಳ್ಳಲು ರಾಜಕುಮಾರ ಪರವೀಜ ಹಾಗೂ ಖಾನಖಾನನ ಕಡೆಗೆ ಕಳಿಸಿದ್ದನು. ಹಜರತ ಶಾಹಾ ಸಬಗದುಲ್ಲಾಹರು ನನಗೆ ಹೇಳಿದಂತೆ, ಒಂದುವೇಳೆ ಹಿಂದುಸ್ತಾನದ ಜನರು ನಿಮ್ಮನ್ನು ಕಂಡರೆ, ತಮ್ಮ ಕಣ್ಣುಗಳಲ್ಲಿ ಕೂಡ ನಿಮಗೆ ಸ್ಥಳಕೊಡಲಾರರು ಎಂದು ಹೇಳಿದ್ದರು. ಅರ್ಥಾತ್ ಅವರು ನಮ್ಮತ್ತ ತಿರುಗಿ ನೋಡುವುದಿಲ್ಲವೆಂಬ ಸಂಗತಿ ನನಗೆ ಕಂಡು ಬಂದಿತು. ಯಾಕೆಂದರೆ ರಾಜಕುಮಾರನು, ಖಾನಖಾನನು, ರಾಜಾ ಮಾನಸಿಂಗ ಮತ್ತು ಬೇರೆ ಕಾರಭಾರಿ ಮಂಡಳಿಗಳ ಬಹಳ ದೊಡ್ಡತನ ಹಾಗೂ ಶ್ರೇಷ್ಠತ್ವ ನೋಡಿದೆ. ಪ್ರತಿಯೊಬ್ಬರೂ ನನಗೆ ಇದೆಲ್ಲ ನಿಮ್ಮ ದೊಡ್ಡಸ್ತನವಲ್ಲದೆ ಬೇರೇನೂ ಅಲ್ಲ ಎಂದು ಹೇಳಿದ್ದರು"

"ಅಲ್ಲಿ ನನಗೊಂದು ಕನನಸು ಬಿದ್ದಿತ್ತು. ಒಬ್ಬ ಮನುಷ್ಯನ ಶರೀರದ ಆಕೃತಿ, ಅದರ ಹೆಸರು ಮಸಲಹತ ಆದಿಲಖಾನ ಎಂಬುದಾಗಿತ್ತು. ಅದು ನನ್ನ ವಶದಲ್ಲಿತ್ತು. ನಾನು ಅದನ್ನು ಒಂದು ಸ್ಥಳದಲ್ಲಿಟ್ಟು ಹಿಂದು-ಮುಂದೆ ಬಹಳ ಪ್ರಯತ್ನದಿಂದ ನೋಡುತ್ತಿದ್ದೆ. ಮೊಗಲ ಸೈನ್ಯದ ಎಲ್ಲರೂ ಆ ಶರೀರವನ್ನು, ರೂಪವನ್ನು ನೋಡಲು ಅಲ್ಲಿ ಸೇರಿದ್ದರು. ಅವರು ಮಾತನಾಡಿಕೊಳ್ಳುತ್ತಿದ್ದರು. ಶಾಹ ಮಸಹಲತ ಆದಿಲಖಾನನಿಗೆ ಕೈ ಇಲ್ಲ. ಇವನ ಕೈಯಿಂದ ಏನು ಕೆಲಸವಾದೀತು? ಅದನ್ನು ಕೇಳಿ ನನಗೆ ತುಂಬ ಕೆಡುಕೆನಿಸಿತು. ಅನಂತರ ಆ ಪುತ್ಥಳಿಗೆ ಕೈ ಮಾಡಿ ಹಚ್ಚಲು ಮೇಣವನ್ನು ತರಲು ಹೋದೆನು. ದೂರದಲ್ಲಿ ಒಂದು ಅಂಗಡಿ ಕಂಡಿತು. ಆ ಅಂಗಡಿಯಲ್ಲಿ ಒಬ್ಬ ವೃದ್ಧ ವ್ಯಕ್ತಿಯು ಕುಳಿತ್ತಿದ್ದನು. ಅವನಿಗೆ ನಾನು ಮೇಣವನ್ನು ಕೇಳಿದೆ. 'ಇದು ಯಾರ ಅಂಗಡಿ?' ಎಂದೂ ನಾನು ಅವನಿಗೆ ಕೇಳಿದೆ. ಆತ 'ಇದು ಹಜರತ ಶಾಹ ಸಿಬಗದುಲ್ಲಾಹರ ಅಂಗಡಿ' ಎಂದನು. ಆ ವೃದ್ಧ ವ್ಯಕ್ತಿಯಿಂದ ನಾನು ಮೇಣವನ್ನು ತಂದು, ಕೈಯನ್ನು ಮಾಡಿ ಆ ಶರೀರಕ್ಕೆ ಹಚ್ಚಿದೆನು. ಅದನ್ನು ಹಚ್ಚುತ್ತಿದ್ದಂತೆಯೇ ಆ ಶರೀರವು ಸಜೀವವಾಗಿ ನಡೆದಾಡಹತ್ತಿತು. ಈ ಮಸಹಲತ ಆದಿಲಖಾನನ ಸೈನ್ಯವು ಅತ್ಯಂತ ಘೋರ ಯುದ್ಧ ಮಾಡಿದಾಗ ಬಹಳ ಮೊಗಲ ಸೈನಿಕರು ಸತ್ತರು. ನಾನು ಈ ಕನಸಿನ ವಿಷಯವನ್ನು ನನ್ನ ಮಿತ್ರನಾದ, ಮೊಗಲರ ಸೇನಾಪತಿ ಮೀರಜಾ ಪುಷ್ಕರುಲ್ಲಾಹ ಫಾಜಲಖಾನನಿಗೆ ಹೇಳಿದೆ. ಆತ 'ಹಜರತರೆ ಸಲಾಮತ ಈರಾರ ಶಪಥ ಮಾಡಿ ಹೇಳುವೆ. ನಿಮಗೆ ಬಿದ್ದ ಕನಿಸಿನಂತೆಯೇ ಆಗುತ್ತದೆ' ಎಂದರು. ಆಗ ನಾನು 'ಇದು ಕನಸು, ಕನಸು ಎಲ್ಲಾದರೂ ಸತ್ಯವಾಗುತ್ತದೆಯೆ' ಎಂದು ಕೇಳಿದಾಗ, ಆತ 'ಮತ್ತೆ-ಮತ್ತೆ ಕನಸಿನಂತೆಯೇ ಘಟಿಸುತ್ತದೆ' ನಿಮ್ಮ ಕನಸು ಎಂದೂ ಸುಳ್ಳಾಗುವುದಿಲ್ಲ' ಎಂದನು. ಕೊನೆಗೆ ಅನೇಕ ದಿನಗಳ ಅನಂತರ ನೋಡಿದೆ. ಅದೊಂದು ಭಾರೀ ಸೈನ್ಯ, ಸುಮಾರು ೧ ಲಕ್ಷ ಸೈನಿಕರು ಅಫಜಲ ಖಾನನ ಜೊತೆಗಿದ್ದರು. ಬರ ಬಿದ್ದ ಕಾರಣ ಸೈನ್ಯದಲ್ಲಿ ರಕ್ತ ಭೇದಿ ಪಸರಿಸಿತು. ಅದರಿಂದ ಸೈನ್ಯದ ಜನರೆಲ್ಲ ಸತ್ತು ೩೦ ಸಾವಿರ ಸೈನಿಕರು ಮಾತ್ರ ಉಳಿದರು. ಅವರು ಏನನ್ನೂ ಹೇಳದೆ-ಕೇಳದೆ ತಂತಮ್ಮಲ್ಲಿ ಮಾತನಾಡಿಕೊಂಡು ಹೋಗಿ ಬಿಟ್ಟರು. ಆದರೆ ದೆಹಲಿಯ ಅಮೀರ ಜನರು 'ಈಗಿನ ಸೈನ್ಯದಲ್ಲಿ ರಾಜಕುಮಾರನಿಗೆ ಮತ್ತು

೧. ಈ ಸೋಲಿನ ವರ್ತಮಾನವು ಜಹಾಂಗೀರನಿಗೆ ದೊರೆತನಂತರ, ಖಾನಖಾನನ ಅಪಯಶವನ್ನು ಗಮನಿಸಿ ೧೧, ದಯ ಜುಲುಸ ೫ (೨೨ ಡಿಶಂಬರ ೧೬೧೦)ರಂದು ಆತನ ಸ್ಥಳದಲ್ಲಿ ಖಾನ ಅಜಮನನ್ನು ನೇಮಿಸಲಾಯಿತು. - ತುಜ - ಇ - ಜ. ಫುಟ ೧೮೩.

ಆತನ ಸೈನ್ಯಕ್ಕೆ ಈ ಕನಸು ಈ ಸಂಕಟ ಮತ್ತು ಸೋಲು ಎಲ್ಲವುಗಳು ಖಾನಖಾನನ ಮೋಸದಿಂದಲೇ ಆದದ್ದೆಂದು' ಭಾವಿಸಿದರು. ಆತನ ಬೊಬ್ಬಾಟ ಹಾಗೂ ಪದ್ಧತಿಗಳ ವಿಷಯಗಳನ್ನು ಬರೆದು ದೆಹಲಿಗೆ ಕಳಿಸಿದರು. ಮತ್ತೆ ಖಾನಖಾನನ ಕುರಿತು ಜಹಾಂಗೀರ ಬಾದಶಹನ ಮನಸ್ಸನ್ನು ಕೆಡಿಸಿ ಸಿಟ್ಟಿಗೆ ಬರುವಂತೆ ಮಾಡಿದರು. ಆಗ ಆದಿಲಶಹನ ಹಾಗೂ ನಿಜಾಮಶಹನ ಸೈನ್ಯವು ಬುರ್ಹಾನಪುರದ ಸರಹದ್ದಿನಿಂದ ತಿರುಗಿ ಹೊರಟಿತು. ಅಹಮದನಗರದಲ್ಲಿ ಮರಾಠಿ ಜನರೂ ಹಿಂತಿರುಗಿದರು. ಅದೇವೇಳೆಗೆ ದಾರಿ ಸವೆಸುತ್ತ ಅಹಮದನಗರದ ಕೋಟೆಯ ಹತ್ತಿರ ಬಂದು ಮುಟ್ಟಿ, ಆ ಕೋಟೆಯ ಮೇಲೆ ಹಲ್ಲೆ ಮಾಡಿದರು. ಕೋಟೆಯ ಒಳಗಿನ ಜನರು ಹಲ್ಲೆಯಿಂದ ಸುಸ್ತಾದರು. ಅಲ್ಲಿಯ ಕಿಲ್ಲೇದಾರನು ರಾಜಕುಮಾರನ ಸಹಾಯಕ್ಕೆಂದು ಕೋಟೆಯನ್ನು ಪ್ರಯತ್ನ ಪೂರ್ವಕನಾಗಿ ಸಜ್ಜು ಮಾಡಿದ್ದನು. ಆದರೆ ಈಗ ರಾಜಕುಮಾರನಿಗೆ ಸೋಲಾಗಿತ್ತು. ಆದ್ದರಿಂದ ನಿರಾಶನಾಗಿ ಧೈರ್ಯಗುಂದಿ ಆತನು ಬುರ್ಹಾಣಪುರದ ದಾರಿ ಹಿಡಿದನು. ಮತ್ತೆ ಅಹಮದನಗರದ ಕೋಟೆಯು ದಖನಿ ಜನರ ಕೈವಶವಾಯಿತು.[೨]

## ೫೭. *ನಿಜಾಮಶಹ ಹಾಗು ಮಲಿಕ ಅಂಬರರ ಮಧ್ಯ ವಿರಸ, ಆದಿಲಶಹನ ಸಲಹೆಯಿಂದ ಉಭಯತರು ಕೂಡಿದ್ದು.*

ಹಿಜರಿಸನ್ ೧೦೧೯ (ಕ್ರಿ.ಶ. ೧೬೧೦-೧೧)ನೇ ವರುಷದಲ್ಲಿ ಮುರ್ತಜಾ ನಿಜಾಮಶಾಹನು ಜುನ್ನರ ದಿಂದ ದೌಲತಾಬಾದಕ್ಕೆ ಬಂದು ಇರಹತ್ತಿದನು. ಅದನ್ನೇ ರಾಜ್ಯದ ರಾಜಧಾನಿಯನ್ನಾಗಿ ಮಾಡಿಕೊಂಡನು. ಅದೇ ದಿನಗಳಲ್ಲಿ ಕರ್ಮಧರ್ಮ ಸಂಯೋಗದಿಂದ, ಅನೇಕ ಜನರ ಸಂಕಟಗಳಿಂದಾಗಿ ನಿಜಾಮಶಹ ಹಾಗೂ ಮಲಿಕ ಅಂಬರ ಮಧ್ಯ ವಿರಸವಾಗಿ ವೈರತ್ವ ಉಂಟಾಯಿತು. ದಿನದಿನಕ್ಕೆ ಮೋಸ-ಕಪಟಗಳಿತ್ಯಾದಿ ಕಷ್ಟಗಳು ಅಧಿಕವಾದುವು. ಇಬ್ರಾಹಿಮ ಆದಲಶಹನು ಸಂಕಟಕಾಲದಲ್ಲಿ ನೆರೆಹೊರೆಯವರಂತೆ ಬಂದು ಸಂಕಟ ಪರಿಹಾರ ಮಾಡುವಲ್ಲಿ ಉಪಯೋಗಕ್ಕೆ ಬೀಳುತ್ತಿದ್ದನು. ನಿರಂತರವಾಗಿ ನಿಜಾಮಶಾಹಿಯ ಸಂರಕ್ಷಣೆ ಮಾಡುವಲ್ಲಿ ಇಬ್ರಾಹಿಮ ಆದಿಲಶಹನಿಗೆ ಆಸ್ಥೆ ಇದ್ದಿತು. ನಿಜಾಮಶಾಹಿಯ ರಾಜ್ಯದಲ್ಲಿ ಸಂಕಟ ಬಂದಾಗಲೆಲ್ಲ ನಿವಾರಣೆಗಾಗಿ ಆತ ವಿಚಾರಿಸುತ್ತಿದ್ದನು. ಅಮೀರ ಜನರಲ್ಲಿ ಪರಸ್ಪರ ವಿರಸ-ವೈರತ್ವಗಳ ಅಗ್ನಿ ಪ್ರದೀಪ್ತವಾದಾಗಲೂ ಆತ ಪರ್ಜನ್ಯ ನಕ್ಷತ್ರದಂತೆ, ತನ್ನ ವಿಚಾರಗಳ ಉದಕದಿಂದ ವಿರಸ-ವೈರತ್ವಗಳ ಅಗ್ನಿಯನ್ನು ಶಾಂತಗೊಳಿಸುತ್ತಿದ್ದನು. ಈ ಮೊದಲು ಹಿ ಸನ್ ೧೦೧೬ರಲ್ಲಿ (ಕ್ರಿ.ಶ ೧೬೦೭-೮) ಮುರ್ತಜಾ ನಿಜಾಮಶಾಹನು ಜುನ್ನರದಲ್ಲಿದ್ದಾಗ ಮಲಿಕ ಅಂಬರನು ಅವನನ್ನು ತೆಗೆದು ಬೇರೊಬ್ಬರನ್ನು ಸಿಂಹಾಸನದ ಮೇಲೆ ಕೂಡಿಸಬೇಕೆಂದು ಕೊಂಡಾಗ, ಇಬ್ರಾಹಿಮ ಆದಿಲಶಹನೆ ಮಧ್ಯಸ್ಥಿಕೆ ವಹಿಸಿ ಉಭಯತರ ಮಧ್ಯದ ವಿರಸವನ್ನು ಹೋಗಲಾಡಿಸಿದ್ದನು. ಅದೇ ಈಗ ಮತ್ತೆ ಅವರ ಮಧ್ಯ ವೈರಭಾವ ಉಂಟಾಗಿದೆಯೆಂದು ತಿಳಿದಾಗ, ಮುರ್ತಜಾ ನಿಜಾಮಶಾಹನಿಗೂ ಮಲಿಕ ಅಂಬರನಿಗೂ ಉಪದೇಶಿಸಿ ನೀವಿಬ್ಬರೂ ಹೊಂದಿಕೊಂಡು ಇದ್ದರೆ, ಇಬ್ಬರಿಗೂ ಉಪಯೋಗವಾಗುತ್ತದೆಂದು ಪತ್ರ ಬರೆದು ಕಳಿಸಿದನು. ಅದರಲ್ಲಿ 'ಸಂಧಿ ಕಾಯುತ್ತ ಕುಳಿತಿರುವ ಶತ್ರುವಿಗೆ ನಮ್ಮ ವಿರಸದಿಂದ ಫಲ ದೊರೆಯುತ್ತದೆ. ನೀವಿಬ್ಬರೂ ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಿದ್ದೀರಿ. ಆದ್ದರಿಂದ ನೀವು ಕಪಟ-ಮೋಸಗಳನ್ನು ವರ್ಜಿಸಿ ಭೋಜನ ಮಾಡಬೇಕು. ಪ್ರತಿಯಾಗಿ ನೀವಿಬ್ಬರೂ ಬಡಿದಾಡಿದರೆ

---

೨. ತು ಜ-ಇ ಜಹಾಂಗೀರ ಪು ೧೭೮-೧೮೨.

ಬೇರೆ ಯಾರೊಬ್ಬರಾದರೂ ಬಂದು ನಿಮ್ಮಿಬ್ಬರ ಮಧ್ಯದ ಅನ್ನದ ತಟ್ಟೆಯನ್ನು ತೆಗೆದುಕೊಂಡು ಹೋಗುತ್ತಾರೆ. ಆಗ ನೀವು ಪಶ್ಚಾತ್ತಾಪ ಮಾತ್ರ ಪಡಬೇಕಾಗುತ್ತದೆ. ನಿಮ್ಮ ರಾಜ್ಯ ಬೇರೆಯವರ ಕೈಗೆ ಹೋಗುತ್ತದೆ. ಕಾಲಚಕ್ರದ ಹೊತ್ತಿಗೆಯಲ್ಲಿ ನಿಜಾಮಶಾಹಿಯ ಹೆಸರು ಅಳಿಸಿ ಹೋಗುತ್ತದೆ. ಈ ವಿಷಯದಲ್ಲಿ ಅಪಕೀರ್ತಿಯ ಆರೋಪವು ನಿಮ್ಮಿಬ್ಬರ ಮೇಲೆ ಬಹಳ ದಿನ ಉಳಿಯುತ್ತದೆ. ಇದು ಬುದ್ಧಿವಂತರ ಲಕ್ಷಣವಲ್ಲ. ಆದ್ದರಿಂದ ನೀವಿಬ್ಬರೂ ಸ್ನೇಹದಿಂದ ವರ್ತಿಸಿ ಪರಸ್ಪರರಲ್ಲಿಯ ವೈರತ್ವವನ್ನು ತೆಗೆದು ಹಾಕಿರಿ' ಎಂದೆಲ್ಲ ಬರೆದು ಕಳಿಸಿದ. ಆಗ ಆದಿಲಶಾಹನ ಬೆದರಿಕೆಯಿಂದಲೂ ಹಾಗೂ ತಮ್ಮ ಮೇಲೆ ಬರುವ ಆರೋಪದ ಹೆದರಿಕೆಯಿಂದಲೂ ನಿಜಾಮಶಾಹ ಹಾಗೂ ಮಲಿಕ ಅಂಬರರು ಮೊದಲಿನಂತೆ ಸ್ನೇಹದಿಂದ ವರ್ತಿಸಹತ್ತಿದರು.

*೫೮. ಜಹಾಂಗೀರ ಬಾದಶಹನು ವಿಚಾರಮಾಡಿ ಶ್ರೇಷ್ಠ ಪರವೀಜಖಾನನನ್ನು ದಕ್ಷಿಣ ದೇಶದ ಮೇಲೆ ಕಳಿಸಿದ್ದು. ಕೆಲವು ದಿನಗಳ ಅನಂತರ ಅಬ್ದುಲ್‌ಖಾನನನ್ನು ಗುಜರಾತಕ್ಕೆ ನೇಮಿಸಿ. ಬಹುದೊಡ್ಡ ಸೈನ್ಯದೊಂದಿಗೆ ಕಳಿಸಿದ್ದು ಮತ್ತು ಮಲಿಕ ಅಂಬರನಿಂದ ಅಬ್ದುಲ್‌ಖಾನನ ಸೋಲು.*

ರಾಜಕುಮಾರ ಸುಲ್ತಾನ ಪರವೀಜನ ಸೋಲಿನ ಅನಂತರ ಜಹಾಂಗೀರ ಬಾದಶಹನು ವಿಚಾರಮಾಡಿ, ಪರವೀಜಖಾನ ಅಜಮನನ್ನು ಬಹಳ ದೊಡ್ಡ ಸೈನ್ಯದೊಂದಿಗೆ ದಕ್ಷಿಣ ದೇಶಗಳ ಮೇಲೆ ನಿಯಮಿಸಿ ಕಳಿಸಿದನು. ಹಿಜರಿ ಸನ್ ೧೦೨೦ರಲ್ಲಿ (ಕ್ರಿ.ಶ ೧೬೧೧-೧೨) ಅಬ್ದುಲ್‌ಖಾನನನ್ನು ಗುಜರಾತಿಗೆ ನಿಯಮಿಸಿದನು. 'ನೀನು ಭಾರೀ ಸೈನ್ಯದೊಂದಿಗೆ, ಬಹಳಷ್ಟು ಯುದ್ಧ ಸಾಮಗ್ರಿ, ಸಾಮಾನು ಸರಂಜಾಮುಗಳೊಂದಿಗೆ ನಿಜಾಮಶಹನ ರಾಜ್ಯದ ಮೇಲೆ ಹೋಗಿ. ಆ ರಾಜ್ಯವನ್ನು ಕೈವಶ ಮಾಡಿಕೊಳ್ಳುವ ಪೂರ್ಣ ಪ್ರಯತ್ನವನ್ನು ಮಾಡಬೇಕು, ಎಂದು ಆತನಿಗೆ ಆಜ್ಞೆಯನ್ನು ಕಳಿಸಿದನು. ಅಬ್ದುಲ್‌ಖಾನನು ಸರಕಾರೀ ಹುಕುಮಿನಂತೆ, ದೌಲತಾಬಾದಿಗೆ ಬಂದು, ಕೋಟೆಯ ಮೇಲೆ ಹಲ್ಲೆ ಮಾಡಿದನು. ಆ ಸಮಯದಲ್ಲಿ ಮಲಿಕ ಅಂಬರನು ಮುರ್ತಜಾ ನಿಜಾಮಶಾಹನನ್ನು ಕೋಟೆಯಲ್ಲಿಯೇ ಬಿಟ್ಟು, ತಾನು ಸೈನ್ಯದೊಂದಿಗೆ ಹೊರಗೆ ಬಂದು ಖಡಕಿ ಎಂಬ ಗ್ರಾಮದಲ್ಲಿ ಇದ್ದನು. ದೌಲತಾಬಾದದಿಂದ ಐದು ಕೋಸುಗಳ ಅಂತರದಲ್ಲಿ ಈ ಗ್ರಾಮವಿದೆ. ಅಲ್ಲಿಯ ವಿಶಾಲವಾದ, ಗಟ್ಟಿಮುಟ್ಟಾದ ಬಯಲಿನಲ್ಲಿ ತನ್ನ ಸೈನ್ಯಕ್ಕೆ ಬೀಡು ಬಿಡಲು ಸ್ಥಳ ಮಾಡಿ, ಅಲ್ಲಿಯೆ ಮಲಿಕ ಅಂಬರನೂ ಉಳಿದುಕೊಂಡನು. ಅಬ್ದುಲ್ಲಾಖಾನ ಹಾಗೂ ಮಲಿಕ ಅಂಬರರ ಮಧ್ಯೆ ದೊಡ್ಡ ಯುದ್ಧವಾಯಿತು. ಕೊನೆಗೆ ಮೊಗಲರ ಸೈನ್ಯದ ಮುಂದೆ ಮಲಿಕ ಅಂಬರನ ಕೈ ಮೇಲಾಯಿತು. ದೊಡ್ಡ ವಿಜಯ ದೊರೆಯಿತು. ಅಬ್ದುಲ್‌ಖಾನನಿಗೆ ಭಾರೀ ಸೋಲಾಗಿ ಗುಜರಾತಿಗೆ ಹಿಂತಿರುಗಿದನು.[೧] ಮಲಿಕ ಅಂಬರನಿಗೆ ಖಡಕಿ ಗ್ರಾಮದ ಮುಕ್ಕಾಮಿನಲ್ಲಿ ಜಯ ಸಿಕ್ಕದ್ದರಿಂದ ಆ ಗ್ರಾಮವು ಶಕುನದಂತೆ ಕಲ್ಯಾಣ ಪ್ರದವೆಂದು ತಿಳಿದು ಆ ಖಡಕಿಗೆ 'ಫತ್ತೇನಗರ' ಎಂದು ಹೆಸರನ್ನಿಟ್ಟನು. 'ಖಡಕ' ಎಂಬ ಶಬ್ದವನ್ನು ದಕ್ಷಿಣ ದೇಶಗಳಲ್ಲಿ ಕಲ್ಲುಭೂಮಿಗೆ ಉಪಯೋಗಿಸುತ್ತಾರೆ. ಆ ಗ್ರಾಮ ಪರಿಸರವು ಕಠಿಣ ಭೂಮಿಯಿಂದ ಒಡಗೂಡಿತ್ತಾದ್ದರಿಂದ ಅದನ್ನು ಖಡಕಿ ಎಂದು ಕರೆಯುತ್ತಿದ್ದರು. ಅದೇ ಗ್ರಾಮವನ್ನು ಮುಂದೆ ಸುಲ್ತಾನ್ ಔರಂಗಜೇಬ ಆಲಮಗೀರನು ಬಹು ದೊಡ್ಡ ನಗರವನ್ನಾಗಿ ಮಾಡಿ ಅದಕ್ಕೆ ಔರಂಗಾಬಾದ ಎಂದು ಹೆಸರನ್ನಿಟ್ಟನು.

೧. ತುಜ - ಇ - ಜಹಾಂಗೀರ ಪುಟ ೨೧೯-೨೨೧.

### ೫೯. ಕೆಲವು ದಿನಗಳ ಅನಂತರ ಜಹಾಂಗೀರ ಬಾದಶಹನು ಸುಲ್ತಾನ ಖುರ್ರಮನನ್ನು ದಕ್ಷಿಣ ದೇಶಕ್ಕೆ ಕಳಿಸಿದ್ದು ಮತ್ತು ಸುಲ್ತಾನ ಖುರ್ರಮನು ನಿಜಾಮಶಹನ ಮೇಲೆ ವಿಜಯ ಸಾಧಿಸಿದ್ದು.

ರಾಜಕುಮಾರ ಪರವೀಜನು ಮಾನಸಿಂಗ ರಾಜನೊಂದಿಗೆ ಬಹಳ ದಿನ ದಕ್ಷಿಣದಲ್ಲಿಯೇ ಇದ್ದು, ಉಭಯತರೂ ದಕ್ಷಿಣ ದೇಶವನ್ನು ಕೈವಶ ಮಾಡಿಕೊಳ್ಳಲು ಬಹಳ ಪ್ರಯತ್ನ ಮಾಡಿದರೂ ಸಾಧಿಸಲಿಲ್ಲ. ನಿಜಾಮಶಹನ ರಾಜ್ಯವನ್ನು ಹಸ್ತಗತ ಮಾಡಿಕೊಳ್ಳುವುದು ಆಗಲಿಲ್ಲ. ಆದ್ದರಿಂದ ಜಹಾಂಗೀರ ಬಾದಶಹನು ಪರವೀಜಖಾನನನ್ನು ರಾಜಧಾನಿಗೆ ಕರೆತಂದು ಹಿಜರಿ ಸನ್ ೧೦೨೪ ರಲ್ಲಿ (ಕ್ರಿ.ಶ. ೧೬೧೫) ತನ್ನ ಕೊನೆಯ ಮಗ ರಾಜಕುಮಾರ ಖುರ್ರಮನನ್ನು, (ಈತನು ಮುಂದೆ ಶಾಹಾಜಹಾನ್ ಎಂಬ ಹೆಸರಿನಿಂದ ಪ್ರಸಿದ್ಧನಾದನು) ಪೂರ್ಣ ತಯಾರಿಯೊಂದಿಗೆ ಸಾಮಾನು ಸರಂಜಾಮುಗಳನ್ನು ಕೊಟ್ಟು, ಬಹು ಸೈನ್ಯದೊಂದಿಗೆ ನಿಜಾಮಶಹನ ರಾಜ್ಯವನ್ನು ವಶಪಡಿಸಿಕೊಳ್ಳಲು ಕಳಿಸಿ ಕೊಟ್ಟನು.[೧] ಮಲಿಕ ಅಂಬರನು ಕೂಡ ಆ ರಾಜಕುಮಾರನೊಂದಿಗೆ ಎದುರಿಸಿ ಯುದ್ಧ ಮಾಡಿದನು. ಶತ್ರುವನ್ನು ಪರಾಭವಗೊಳಿಸುವ ಪಣ ತೊಟ್ಟನು. ಆದರೆ ಕೊನೆಯಲ್ಲಿ ಪ್ರಸಂಗಾನುಸಾರವಾಗಿ ದೌಲತಾಬಾದದ ಕೋಟೆಯೊಂದನ್ನು ಬಿಟ್ಟು ನಿಜಾಮಶಹನ ಉಳಿದೆಲ್ಲ ಪ್ರದೇಶಗಳನ್ನು ಮೊಗಲರೊಂದಿಗಿನ ಸ್ನೇಹಕ್ಕಾಗಿ ಕೊಡಬೇಕಾಯಿತು. ದೌಲತಾಬಾದಿನ ಕೋಟೆಯೊಂದು ಮಾತ್ರ ಮಲಿಕ ಅಂಬರನ ಕೈಯಲ್ಲಿ ಉಳಿಯಿತು. ಮೊಗಲರಿಗೆ ಎಂದಿಲ್ಲದ ವಿಜಯ ಸಾಧಿಸಿತು.[೨] ರಾಜಕುಮಾರ ಖುರ್ರಮನು ಸಂತೋಷದಿಂದ ದೆಹಲಿಗೆ ಹಿಂತಿರುಗಿದನು. ಜಹಾಂಗೀರ ಬಾದಶಹನು ತೃಪ್ತಿಪಟ್ಟು ಅವನನ್ನು ಯೋಗ್ಯರೀತಿಯಲ್ಲಿ ಸನ್ಮಾನಿಸಿದನು. ದಕ್ಷಿಣದ ವಿಜಯಕ್ಕಾಗಿ ಖುರ್ರಮನಿಗೆ ಶಾಹಜಹಾನ್ ಎಂಬ ಪದವಿಯನ್ನು ನೀಡಿದನು. ಖುರಾಸಾನದ ಬಾದಶಹ ಅಬ್ಬಾಸನು ಜಾಹಂಗೀರ ಬಾದಶಹನಿಗೆ ಕಳಿಸಿದ ೧ ಲಕ್ಷ ರೂಪಾಯಿಗಳ ಬೆಲೆಯ ರತ್ನವನ್ನು ಸುಲ್ತಾನ ಖುರ್ರಮನಿಗೆ ಕಾಣಿಕೆಯಾಗಿ ನೀಡಿದನು.

### ೬೦. ಆದಿಲಶಹನು ಬೀದರದ ಮೇಲೆ ಸೈನ್ಯ ಕಳಿಸಿದ್ದು, ಬೀದರ ಹಸ್ತಗತವಾದದ್ದು. ಮೊಗಲರ ಪ್ರದೇಶವನ್ನು ಬಿಡಿಸಿದ್ದು ಮತ್ತು ಕರ್ನಾಟಕದ ಕೋಟೆ ಆದಿಲಶಹನ ಕೈಗೆ ಬಂದದ್ದು.

ಹಿಜರಿ ಸನ್ ೧೦೨೯ರಲ್ಲಿ (ಕ್ರಿ.ಶ. ೧೬೧೯-೨೦) ಇಬ್ರಾಹಿಮ ಆದಿಲಶಹನು ಅಮೀರ

---

೧. "ರವಿವಾರ ೧೮ ಶವ್ವಲ ಜುಲುಸ ೧೧ (೨೦ ಆಕ್ಟೋಬರ ೧೬೧೬) ಸರಿಯಾಗಿ ಆಬಾನದ ಆನೆಯ ದಿನ ನನ್ನ ಮಗ ಬಾಬಾ ಖುರ್ರಮನ ಬೀಡಾರವು ದಕ್ಷಿಣ ದಿಗ್ವಿಜಯಕ್ಕಾಗಿ ಅಜಮೇರದಿಂದ ಹೊರಟಿತು. ನನ್ನ ಮಗನು ವೈಭವದ ರೀತಿಯಲ್ಲಿಯೇ (ಜಹಾಂಗೀರನ ಹಾಗೆ) ಮುಂದಾಗಿ ಹೋಗಬೇಕೆಂದೂ ನಿರ್ಧರಿತವಾಗಿತ್ತು" ತುಜ-ಇ-ಜ. ಪು ೩೩೭.

೨. "On the 29th, TirJulus 12 (10th July 1617), which was the auspicious day of Thursday, Sayyid Abdullah Barha, the envoy of my son of good fortune, Baba Khurram, waited on me, and presented a letter from that son containing news of a victory over the provinces of the Deccan..... especially the fort of Ahmednagar" Tuz-i-J P. 380.

ಜನರೊಂದಿಗೆ ಬಹಳಷ್ಟು ಸೈನ್ಯವನ್ನು ಕೊಟ್ಟು ಅಮೀರ ಬರೀದನನ್ನು ದಂಡಿಸಲು ಬೀದರಕ್ಕೆ ಕಳಿಸಿಕೊಟ್ಟನು.[೧] ಅಮೀರ ಬರೀದನು ಬರೀದಿ ಮನೆತನದಲ್ಲಿಯ ಕೊನೆಯವನು. ಆತ ಯುದ್ಧಾರ್ಥಿಯಾಗಿ ಎದುರಿಸಲು ಸಿದ್ಧನಾದನು. ಶತ್ರುವನ್ನು ಶಿಕ್ಷಿಸಲು ತನ್ನೆಲ್ಲ ಸಾಮರ್ಥ್ಯವನ್ನು ಪಣಕ್ಕಿಟ್ಟು ಹೋರಾಡಿದನು. ಆದರೆ ಅರಬ್ಬೀ ಭಾಷೆಯಲ್ಲಿ ಒಂದೆಡೆ ಹೇಳಿದಂತೆ 'ಅಲ್ಲಾ ಇಚ್ಛಿಸಿದರೆ ಅವನಿಗೆ ರಾಜ್ಯವನ್ನೂ ಕೊಡುತ್ತಾನೆ. ಮತ್ತು ರಾಜ್ಯವನ್ನು ಹರಣ ಮಾಡುತ್ತಾನೆ' ಅದರಂತೆ ಬರೀದಿ ಜನರ ರಾಜ್ಯ ನಾಶವಾಗುವುದನ್ನೇ ಅಲ್ಲಾನು ನಿರ್ಧರಿಸಿದ್ದನು. ಬರೀದಿ ಜನರ ದುರ್ದೈವ ಪ್ರಾರಂಭವಾಗಿತ್ತು. ಆದ್ದರಿಂದಲೇ ಅಮೀರ ಬರೀದನು ತನ್ನೆಲ್ಲ ಮಕ್ಕಳ ಸಹಿತನಾಗಿ ಆದಿಲಶಹ ಜನರ ಕೈಗೆ ಸಿಕ್ಕು ಬಂಧಿಯಾಗಿದ್ದನು. ಅವರನ್ನೆಲ್ಲ ಬಂಧಿಸಿ ಬಿಜಾಪುರಕ್ಕೆ ಕರೆತಂದಿದ್ದರು. ಅಂದಿನಿಂದ ಬೀದರದ ಕೋಟೆಯು ಆದಿಲಶಾಹಿಯ ಆಡಳಿತದ ವಶದಲ್ಲಿದ್ದಿತು. ಅದೇ ವರುಷ ಮಲಿಕ ಅಂಬರನು ಬಹಳ ಶಕ್ತಿಶಾಲಿಯಾಗಿ ಯುದ್ಧದ ಸಿದ್ಧತೆಯನ್ನು ನಡೆಸಿದ್ದನು. ಆತನು ಮೊಗಲ ಸ್ನೇಹಕ್ಕಾಗಿ ಕೊಟ್ಟಿದ್ದ ನಿಜಾಮಶಾಹಿಯ ಎಲ್ಲ ಪ್ರದೇಶಗಳನ್ನು ಯುದ್ಧ ಮಾಡಿ ತಿರುಗಿ ತನ್ನ ವಶಕ್ಕೆ ತೆಗೆದುಕೊಂಡಿದ್ದನು.[೨] ಈ ಸುದ್ದಿ ಜಹಾಂಗೀರ ಬಾದಶಹನಿಗೆ ಗೊತ್ತಾದಾಗ ಆತನು ಅತ್ಯಂತ ತಪ್ತನಾಗಿ ಶಹಾಜಹಾನನನ್ನು ಮತ್ತೆ ದಕ್ಷಿಣದ ಮೇಲೆ ಕಳಿಸಿಕೊಟ್ಟನು.[೩] ಸುಲ್ತಾನ ಖುಸ್ರೋ ಎಂಬ ಜಹಾಂಗೀರನ ಹಿರಿಯ ಮಗನು ತಂದೆಯ ವಿರೋಧದಿಂದಾಗಿ ಬಹಳ ದಿನಗಳವರೆಗೆ ನಜರಕೈದಿನಲ್ಲಿದ್ದನು. ಈಗ ಆತನನ್ನು ಬಂಧನದಿಂದ ಮುಕ್ತಮಾಡಿ ಶಹಾಜಹಾನನೊಂದಿಗೆ ದಕ್ಷಿಣ ದೇಶದ ಮೇಲೆ ಕಳಿಸಿದ್ದನು. ಆತನು ದೈವೇಚ್ಛೆಯಂತೆ ಹಿ.ಸನ್ ೧೦೩೦ರಲ್ಲಿ (ಕ್ರಿ.ಶ. ೧೬೨೦-೨೧)

---

೧. "17th July 1618, Thursday 4th Amardad Julus 13; As AdilKhan was constantly asking for a likeness of myself through my prosperous son Shah. Jahan, I sent him one with a ruby of great value and a special elephant. A gracious farman was issued that he should be presented with whatever-territory of Nizamul Mulk or Qutbul Mulk he might get into his possession, and whenever he should require any support and assistance, Shah Nawaz khan should prepare an army and appoint it to assert him. In former days Nizamul Mulk was the largest of the rulers of the Deccan, a superior whom all acknowledged, and whom they considered as their eldest brother. At this period Adil Khan did approved service, and was honoured with the exalted title of "Son" (ಫರ್ಜಂದ). I appointed him the head and leader of the whole country of the Deccan, and wrote this quatrain on the potrait with my own hand". Tuz-i-J. II P. 36-37.

This support of Jahangir has encouraged Adilshah to carry on incursions.

೨. Thursday the 25th Urdibihist Julus 15 (20 April 1620). At this time, on the representation of the commander-in-chief Khan-Khanan and all the loyal people, it was shown to me that Amber, the black fated one, had again placed his foot beyond the bounds of good behaviour...... had stretched out his hand to take possession of royal territory...... Two or three battles had already taken place.... many killed ..." Tuz-i-J II P-155-56.

Besieged Burhanpur..... many parganas of Berar and Khandesh passed into their possession..... Tuz-i-J II P. 189-90.

೩. Accordingly on Friday, the 4th of Dai, (15th December 1620) I despatched Khurram in that direction, bestowing on him .... I told him after he had conquered the province of the Deccan he should take as a reward to crores of dams from the country conquered......" Tuz-i-JII P. 190.

ಬುರ್ಹಾಣಪುರದಲ್ಲಿ ಮರಣ ಹೊಂದಿದನು.[೪] ಹಿಜರಿ ಸನ್ ೧೦೩೧ರಲ್ಲಿ (ಕ್ರಿ.ಶ. ೧೬೨೧-೨೨) ಆದಿಲಶಾಹನ ಸೈನ್ಯವು ಆದೋನಿಯ ಗಡಿಯಲ್ಲಿಯ ದಂಗೆಖೋರರನ್ನು ನಿಯಂತ್ರಿಸಿ ಕರ್ನೂಲು ಕೋಟೆಯನ್ನು ಗೆದ್ದಿತು.

### ೬೧. *ಆದಿಲಶಾಹನೊಂದಿಗೆ ಮಲಿಕ ಅಂಬರನ ದ್ವೇಷ. ಭಾತೋಡಿ ಯುದ್ಧದ ವರ್ಣನೆ ಮತ್ತು ಆದಿಲಶಾಹಿಯ ಹಾಗೂ ಮೊಗಲರ ಸೋಲು.*

ಮಲಿಕ ಅಂಬರನು ನಿಜಾಮಶಾಹಿ ರಾಜ್ಯದಲ್ಲಿಯ ಒಬ್ಬ ನೌಕರನಾಗಿದ್ದನು. ಆತ ತನ್ನ ಮೋಸ-ಕಪಟಗಳಿಂದ ಮತ್ತು ದೊಡ್ಡ ಯುಕ್ತಿಗಳಿಂದ ಬುರ್ಹಾಣಶಾಹನ ಕಾಲದಲ್ಲಿ ಸಾವಕಾಶವಾಗಿ ಮೇಲೆ ಏರುತ್ತ, ರಾಜ್ಯದ ಸೂತ್ರಗಳನ್ನೆ ತನ್ನ ಕೈಯಲ್ಲಿ ತೆಗೆದುಕೊಂಡನು. ಕೆಲವೆ ದಿನಗಳಲ್ಲಿ ಪ್ರಬಲನಾದನು. ರಾಜ್ಯದಲ್ಲಿಯ ಎಲ್ಲ ಕಾಮದಾರರನ್ನು ತನ್ನ ಕಪಿಮುಷ್ಠಿಯಲ್ಲಿಟ್ಟುಕೊಂಡು, ಠಕ್ಕ ವಿದ್ಯೆಯಿಂದ ಅವರನ್ನು ಹಣ್ಣು ಮಾಡಿ ತಾನೆ ಪ್ರಬಲನಾಗಿ ಎಲ್ಲರಮೇಲೆ ಮುಖ್ತ್ಯಾರನಾಗಿದ್ದನು. ಆತನ ಸಾಮರ್ಥ್ಯ ಕಡಿಮೆಯಾದಾಗಲೆಲ್ಲ ರಾಜ್ಯದ ಜನರು ಅವನಿಗೆ ತಿರುಗಿ ಬೀಳುತ್ತಿದ್ದರು. ಆಗ ಮಲಿಕ ಅಂಬರನು ಆದಿಲಶಹನ ಹತ್ತಿರ ತಕರಾರು ಮಾಡಿ ಆತನಿಂದ ಸಹಾಯ ಯಾಚಿಸುತ್ತಿದ್ದನು. ಆಗೆಲ್ಲ ಆದಿಲಶಹನೊಂದಿಗೆ ತುಂಬ ಸಖ್ಯತೆಯನ್ನು ಬೆಳೆಸುತ್ತಿದ್ದನು. ಅವನೊಂದಿಗೆ ಒಳ್ಳೆಯ ನಡತೆಯನ್ನು ಇಟ್ಟುಕೊಳ್ಳುತ್ತಿದ್ದನು. ತನ್ನ ಧಣಿ ನಿಜಾಮಶಾಹನಂತೆಯೇ, ಆದಿಲಶಹನನ್ನೂ ಧಣಿ ಎಂದೇ ತಿಳಿಯುತ್ತಿದ್ದನು. ಪ್ರತಿಯೊಂದು ಸಂಕಟ ಅಥವಾ ವಿಘ್ನ ಕಾಲಗಳಲ್ಲಿ ಮಲಿಕ ಅಂಬರನು ಅವುಗಳ ಪರಿಹಾರಾರ್ಥವಾಗಿ ಆದಿಲಶಹನ ಹತ್ತಿರ ಬಂದು ಸಹಾಯ ಕೇಳುತ್ತಿದ್ದನು. ದೊಡ್ಡ ದೊಡ್ಡ ಶತ್ರುಗಳನ್ನು ಆದಿಲಶಹನ ಕಡೆಯ ಜನರಿಂದ ಎದುರಿಸಿ ಗೆಲ್ಲುತ್ತಿದ್ದನು. ತನ್ನೆಲ್ಲ ಸಂಕಟಗಳ ಕಾಲದಲ್ಲಿ ತನಗೆ ಆಶ್ರಯ ಸ್ಥಾನ ಆದಿಲಶಾಹಿ ಮಂದಿರದಲ್ಲಿಯೆ ಇದೆಯೆಂದು ತಿಳಿಯುತ್ತಿದ್ದನು. ಆದಿಲಶಾಹನು ಕೂಡ ನಿಜಾಮಶಾಹನ ರಾಜ್ಯವನ್ನು ಸಂರಕ್ಷಿಸುವುದು ತನ್ನ ಕರ್ತವ್ಯವೆಂದೇ ತಿಳಿದು ಪ್ರತಿಸಲ ಹೊಸ ಸಂಕಟಗಳು ಎದುರಾದಾಗಲೂ ಮಲಿಕ ಅಂಬರನಿಗೆ ಸಹಾಯವನ್ನು ನೀಡುತ್ತಿದ್ದನು. ಆದರಿಂದಾಗಿ ಮಲಿಕ ಅಂಬರನು ಪ್ರಬಲನಾದನು. ಸಂಪೂರ್ಣ ಶಕ್ತಿವಂತನಾದನು. ಆಗ ಆದಿಲಶಾಹನೊಂದಿಗೆಯೇ ತಿರುಗಿ ಬೀಳುವ ಸ್ವಭಾವವನ್ನು ಧಾರಣ ಮಾಡಿದನು. ಶತ್ರುತ್ವವನ್ನು ಕಟ್ಟಿಕೊಂಡು ಆದಿಲಶಹನೊಂದಿಗೆಯೇ ಯುದ್ಧ ಮಾಡಲು ಪ್ರಾರಂಭಿಸಿದನು.

ಅರಬ್ಬೀ ವಾಕ್ಯದಲ್ಲಿ ಹೇಳಿದಂತೆ, "ಪ್ರತಿಯೊಂದು ಪದಾರ್ಥವೂ ತನ್ನ ಗುಣದ ಮೇಲೆ ಹೋಗುತ್ತದೆ" ಇದರಲ್ಲಿಯ ಭಾವವೆಂದರೆ, ಮಲಿಕ ಅಂಬರನು ಮೂಲತಃ ನೀಚ ಮನುಷ್ಯನಾಗಿದ್ದರಿಂದ ಆತನ ಯೋಗ್ಯತೆಯು ಎಷ್ಟೇ ಅಧಿಕವಾದರೂ, ತನ್ನ ನೀಚ ಬುದ್ಧಿಯನ್ನು ಬಿಡದೆ ಆದಿಲಶಹನೊಂದಿಗೆಯೇ ತಿರುಗಿ ಬಿದ್ದನು. ಆತನ ನೀಚೋತ್ಪತ್ತಿಯ ಬೆವರು ಆತನ ಹಣೆಯ ಮೇಲೆ ಕಾಣಿಸಿಕೊಂಡಿತು. ಆತನ ಕ್ಷುಲ್ಲಕತೆ ಪ್ರಕಟವಾಯಿತು. ಕೃತಘ್ನತೆಯ ನಡತೆಯನ್ನು ಪ್ರಾರಂಭಿಸಿದನು. ಯಾಕೆಂದರೆ ಕುರಾನ ಶರೀಫದಲ್ಲಿ ಅಲ್ಲಾನ ವಾಕ್ಯವೇ ಹೀಗಿದೆ. "ನಮ್ಮ ಸೇವಕರಲ್ಲಿ ಯಾರೂ ಉತ್ತಮ ಸೇವಕರಿಲ್ಲ". ಇದರಲ್ಲಿಯ ಭಾವವೆಂದರೆ ಎಷ್ಟು ಸೇವಕರೋ ಅಷ್ಟು ಜನ ಕೃತಘ್ನರು ಎಂದಾಗಿದೆ. ಅದು ಸತ್ಯವೇ ಆಗಿದೆ. ಮಲಕ ಅಂಬರನ ಸೊಕ್ಕು ಅಧಿಕವಾಗಿ ಗುಂಡಾಗಿರಿಯು ಅತಿಯಾದಾಗ ಆದಿಲಶಹನು ಆತನನ್ನು ಶಿಕ್ಷಿಸಬೇಕೆಂದು

---

೪. "At this time a report came from Khurram that Khasrau on the 8th of the month Bahaman (17the January 1622) had died...." Tuz-i-J, P. 228.

ಮನಸ್ಸು ಮಾಡಿದನು. ಮರೆಯದಂಥ ಶಿಕ್ಷೆಯನ್ನು ಕೊಡಬೇಕೆಂದನು. ಹಾಗೆ ಯೋಚಿಸಿ ಮೊಗಲರೊಂದಿಗೆ ಗೆಳೆತನ ಮಾಡಿಕೊಂಡು ಅವರಿಗೆ ಮಲಿಕ ಅಂಬರನಮೇಲೆ ಏರಿ ಹೋಗಲು ಆಜ್ಞೆ ಮಾಡಿದನು.[೧] ಅದರಿಂದ ಅವರಿಗೆ ಉಪಯೋಗವಿದೆಯೆಂದು ತಿಳಿಸಿದನು. ಮೊಗಲರಿಗೂ ಮಲಿಕ ಅಂಬರನು ತಲೆ ಬೇಸರಾಗಿ ಅವರು ಮನದಲ್ಲಿಯೇ ಕುದಿಯುತ್ತಿದ್ದರು. ಆದ್ದರಿಂದ ಮೊಗಲರಿಗೆ ಈ ಕೆಲಸದಲ್ಲಿ ಆದಿಲಶಹನ ಯುಕ್ತಿ ಅನುಕೂಲವೆ ಆಯಿತು. ಆದಿಲಶಹನು ತನ್ನ ಸೇನಾಪತಿ ಮುಲ್ಲಾ-ಮಹಮದ ಲ್ಯಾರಿಯೊಂದಿಗೆ ಸುಮಾರು ೪೦ ಸಾವಿರ ಸೈನಿಕರನ್ನು ಜೊತೆ ಮಾಡಿ ಮಲಿಕ ಅಂಬರನನ್ನು ಶಿಕ್ಷಿಸಲು ನಿಯಮಿಸಿದನು. ಆತನನ್ನು ಮುಲ್ಲಾ ಬಾಬಾ ಎಂದು, ಕರೆಯುತ್ತಿದ್ದರು.[೨] ಹಾಗೆಯೇ ಮೊಗಲರ ಸೇನಾಪತಿಯೂ ಈ ನಾಲವತ್ತು ಸಾವಿರ ಸೈನಿಕರನ್ನು ತೆಗೆದುಕೊಂಡು ನಿಜಾಮಶಾಹನ ರಾಜ್ಯದ ಮೇಲೆ ದಾಳಿ ಮಾಡಲು ಹೊರಟನು. ಆದಿಲಶಹನ ಹಾಗೂ ಮೊಗಲರ ಸೈನ್ಯ ಕೂಡಿಯೇ ಎರಡೂ ಸೈನ್ಯಗಳು ಅಹಮದನಗರದತ್ತ ಹೊರಟವು. ಆಗ ಮಲಿಕ ಅಂಬರನು ಆ ಉಭಯ ಸೈನ್ಯಗಳನ್ನು ಶಿಕ್ಷಿಸಲು ಕಟಿಬದ್ಧನಾಗಿ ನಾಲವತ್ತು ಸಾವಿರ ಸೈನ್ಯದೊಂದಿಗೆ ಎದುರಿಸಲು ಮುಂದೆ ಬಂದನು.

ಅಹಮದ ನಗರದಿಂದ ಐದು ಕೋಸಿನ ಅಂತರದಲ್ಲಿ 'ಭಾತೋಡಿ' ಎಂಬ ಸ್ಥಳವಿದೆ. ಅಲ್ಲಿ ಉಭಯತರು ಎದುರಾದರು. ಬಹು ದೊಡ್ಡ ದಾರುಣ ಯುದ್ಧ ನಡೆಯಿತು. ಉಭಯತರ ಸೈನ್ಯದಲ್ಲೂ ಶೂರತ್ವದಿಂದ- ಧೈರ್ಯದಿಂದ ಯೋಧರು ರಣಭೂಮಿಯಲ್ಲಿ ಕಾಲಿಟ್ಟರು. ಒಬ್ಬರೊಬ್ಬರಲ್ಲಿ ಶಸ್ತ್ರ ಪ್ರಳಯವನ್ನೇ ಮಾಡಿದರು. ಶೂರರು ಬಹಳಷ್ಟು ಜನ ಹತರಾದರು. ಆದಿಲಶಾಹಿಯ ಕಡೆಯ ಹಾಗೂ ಮೊಗಲರ ಕಡೆಯ ಸೈನಿಕ ಜನರು ಆ ಪ್ರಾಣ ಘಾತುಕ ಅರಣ್ಯದಲ್ಲಿ ಶತ್ರುವನ್ನು ವಧಿಸಲು ಯಾವ ರೀತಿಯ ಅನುಮಾನವನ್ನೂ ಮಾಡದೆ. ತಮ್ಮ ಸಾಮರ್ಥ್ಯಕ್ಕಿಂತ ಅಧಿಕವಾಗಿ ಯತ್ನ ಮಾಡಿದರು. ಆದರೆ ಈಗಲೂ ಮಲಿಕ ಅಂಬರನ ದೈವ ಉತ್ಕರ್ಷದಲ್ಲಿಯೆ ಇದ್ದಿತು. ಮಲಿಕ ಅಂಬರನ ದೈವ ಹಾಗೂ ಹಣೆಯಬರಹಗಳು ಪ್ರಬಲವಾಗಿದ್ದುವು. ಆದ್ದರಿಂದ ಮೊಗಲರ ಹಾಗೂ ಆದಿಲಶಾಹಿಗಳ ಪ್ರಯತ್ನಗಳಿಗೆ ಯಾವ ಫಲವೂ ದೊರೆಯಲಿಲ್ಲ. ಮಲಿಕ ಅಂಬರನ ಕಡೆಗೆಯೇ ಪ್ರಾಬಲ್ಯವಿತ್ತು. ಫಾರಸೀ ಫರ್ದೆಯಲ್ಲಿ ಹೇಳಿದಂತೆ, "ದೈವ ಹಾಗೂ ದೌಲತ್ತುಗಳು ಜಾಣತನದ ಮೇಲೆ ಅವಲಂಬಿಸಿಲ್ಲ. ದೈವವಾಗಲೀ, ದೌಲತ್ತಾಗಲೀ, ಪ್ರಾಪ್ತಿಯಾಗಬೇಕಾದರೆ, ಅಲ್ಲಾನ ಸಹಾಯವಿಲ್ಲದೆ ಸಾಧ್ಯವಿಲ್ಲ" ಮೊಗಲರ ಕಡೆಯ

---

೧. 1st of the Ilahi month of Isfandarmuz Julus 18 (9th February 1624). A report came from my son and Mahabat Khan. It contained the recommendation and the offer of service of Adil khan with a letter which he had sent to Mahabat, in which were set forth his submissiveness and loyalty..... At the request of my son I wrote a gracious farman to Adil Khan showing great favour to him and sent him a robe of honour with a special Nadiri-Tuz-i-J II P. 288

೨. 2nd Urdibihist, Julus 19, (11 April 1624). About this time there arrived a letter from Qazi Abdul Aziz that Adil Khan from the bottom of his heart had elected for service and loyalty, and agreed that he would send Mulla Md Lari, who Was his principal agent and minister and whom both in spoken and written message he called MullaBaba, with 5000 horse, that he might remain continually on duty, and they might know that other troops would follow...... Mahabat Khan was awaiting at Burhanpur the arrival of Mulla Md Lari so that when he arrived he would relieve himself of the care of the maintanance of order in that neighbourhood and came with him. (md lari) to wait on my son.... Tuz-i-J II p. 296.

ಸೇನಾಪತಿಗೆ ಬಹುದೊಡ್ಡ ಸೋಲಾದರೆ, ಆದಿಲಶಾಹಿ ಸೈನ್ಯಕ್ಕೆ ದೊಡ್ಡ ಪೆಟ್ಟು ಬಿತ್ತು. ಮಲಿಕಅಂಬರನು ಉಭಯ ಸೈನ್ಯಗಳಲ್ಲಿಯ ಸರದಾರರನ್ನು ಅಮೀರ ಜನರನ್ನು ಹಿಡಿದು ಬಂಧಿಸಿದನು. ಉಳಿದ ಸೈನ್ಯದ ಮೇಲೆ ಬಹು ದೊಡ್ಡ ಸಂಕಟ ಪ್ರಾಪ್ತವಾಯಿತು. ಆದಿಲಶಾಹನ ಕಡೆಯ ಎಲ್ಲ ಅಮೀರ ಜನರೂ ಮಲಿಕ ಅಂಬರನ ಕೈದಿಗಳಾಗಿದ್ದರು. ಅವರಲ್ಲಿ ರಣದುಲ್ಲಾಖಾನ, ಅಂಕುಶಖಾನ, ರುಸ್ತುಮರಾವ್, ಖೈರಿಯತಖಾನ, ಫರಹಾದಖಾನ, ಆಂಬರಖಾನ ಮುಂತಾದವರೂ ಅವನ ಸೆರೆ ಸಿಕ್ಕಿದ್ದರು. ಅಂಕುಶಖಾನ ಹಾಗೂ ರುಸ್ತುಮಖಾನರು ಮಲಿಕಅಂಬರನ ಸೆರೆಯಲ್ಲಿಯೇ ಮರಣ ಹೊಂದಿದರು. ಖೈರತಖಾನ ಹಾಗೂ ಆಂಬಂರಖಾನರು ಕೆಲವು ದಿನ ಸೆರೆಮನೆಯಲ್ಲಿದ್ದು, ಅನಂತರ ಪಾರಾಗಿ ವಿಜಾಪುರಕ್ಕೆ ಓಡಿ ಬಂದರು. ರಣದುಲ್ಲಾಖಾನ ಹಾಗೂ ಫರಹಾದಖಾನರನ್ನು, ಬುರ್ಹಾಣ ನಿಜಾಮಶಾಹನು ಸೆರೆಮನೆಯಿಂದ ಬಿಡುಗಡೆಮಾಡಿ ತನ್ನ ನೌಕರಿಯಲ್ಲಿಟ್ಟುಕೊಂಡನು. ಈ ಘಟನೆ ನಡೆದದ್ದು ಹಿಜರಿ ಸನ್ ೧೦೩೩ರಲ್ಲಿ. (ಕ್ರಿ.ಶ. ೧೬೨೩-೨೪)

*೬೨. ಒಂದು ಕಥೆಯ ವರ್ಣನೆ :*

ಹಜರತ್ ಮೌಲಾನಾ ಹಬೀಬುಲ್ಲಾಹ ಸಿಬಗದುಲ್ಲಾ ಅವರನ್ನು ಪವಿತ್ರವಾಗಿ ಇಟ್ಟಿರಲಿ ಮೌಲಾನಾ ಹಬೀಬುಲ್ಲಾಹರು ಈ ಪ್ರಕರಣದಲ್ಲಿ ಹೀಗೆ ಬರೆದಿದ್ದಾರೆ

"ಅದೇ ಸಮಯದಲ್ಲಿ ನಾನು ಒಂದು ಕನಸನ್ನು ಕಂಡೆನು. ಎರಡು ದೊಡ್ಡ ಹಡಗುಗಳು ಸೈನ್ಯದಿಂದ ತುಂಬಿಕೊಂಡು ವಿಸ್ತಾರವಾದ ಸಮುದ್ರದಲ್ಲಿ ತಿರುಗುತ್ತಿವೆ. ಒಮ್ಮಿಂದೊಮ್ಮೆಲೆ ಒಬ್ಬ ವ್ಯಕ್ತಿಯು ಉದ್ಭವಿಸಿ ನನ್ನೊಂದಿಗೆ ಮಾತನಾಡಿದನು. 'ದೇವರ ಆಜ್ಞೆಯಂತೆ, ನಿಮ್ಮ ಅನುಮತಿಯನ್ನು ಪಡೆದು, ಸೈನ್ಯದಿಂದ ತುಂಬಿದ ಎರಡೂ ಹಗಡುಗಳನ್ನು ಈ ಸಮುದ್ರದಲ್ಲಿ ಮುಳುಗಿಸುವೆ' ಎಂದು ಹೇಳಿದನು. ಆಗ ನಾನು 'ನಾನು ಯಾರು?' ನನ್ನ ಕಿಮ್ಮತ್ತೇನು? ಈ ವಿಷಯದಲ್ಲಿ ನನ್ನ ಅನುಮತಿಯನ್ನು ಪಡೆಯಲು ನನ್ನ ಯೋಗ್ಯತೆ ಏನು? ಎಂದು ಕೇಳಿದೆ. ಆಗ ಆತ 'ದೇವರ ಆಜ್ಞೆ ಹೀಗೆಯೇ ಇದೆ' ಎಂದನು. ಅನಂತರ ನಾನು 'ಈ ಎರಡು ಹಡಗುಗಳನ್ನು ಮುಳುಗಿಸಲು ಕಾರಣ ಏನು? ಯಾಕೆ ಮಳುಗಿಸುತ್ತೀ?' ಎಂದೆನು. ಆತ 'ಇಬ್ರಾಹಿಮ ಆದಿಲಶಹನ ಹಡಗಿನಲ್ಲಿ ಹಾಡುವವರು, ನಾಚು ಮಾಡುವವರು ಮತ್ತು ರಾಗರಂಗ ಇತ್ಯಾದಿ ವಿಷಯಗಳ ಬಹಳ ಅಯೋಗ್ಯ ಮಾರ್ಗ ನಡೆಯುತ್ತಿದೆ. ಮೊಗಲರ ಹಡಗಿನಲ್ಲಿ ಕೂಡ ಬಹಳ ಕಪಟಿಗಳು, ಮೋಸಗಾರರು ಇತ್ಯಾದಿ ಕೆಟ್ಟ ಜನರಿಂದ ತುಂಬಿದೆ. ಆದ್ದರಿಂದ ಮುಳುಗಿಸುವೆ' ಎಂಬುದಾಗಿ ಹೇಳಿದನು. ಅನಂತರ ನಾನು ನೋಡುತ್ತಿದ್ದಂತೆಯೇ ಆ ಎರಡೂ ಹಡಗುಗಳನ್ನು ಆ ವ್ಯಕ್ತಿಯು ಮುಳುಗಿಸಿದನು".

ಹಜರತ ಮೌಲಾನಾ ಅವರು ಅನಂತರ ಹೀಗೆ ಹೇಳುತ್ತಾರೆ : "ವಾಸ್ತವದಲ್ಲಿ ಆ ಎರಡೂ ಸೈನ್ಯದಲ್ಲಿ ಬಹುದೊಡ್ಡ ಬರ ಬಿದ್ದಿತು. ಮತ್ತು ತಿನ್ನುಣ್ಣಲು ಏನೊಂದೂ ಉಳಿಯಲಿಲ್ಲ. ಎಲ್ಲಿಯವರೆಗೆಂದರೆ ಮನುಷ್ಯರು ತಿನ್ನುವಂಥ ಅನ್ನ ಇತ್ಯಾದಿಗಳು ಸಿಗದಂತಾದುವು. ಆಗ ಮನುಷ್ಯರು ಕುದುರೆ ಒಂಟೆ ಮತ್ತು ದನಗಳನ್ನು ಕತ್ತರಿಸಿ ಜೀವ ತೆಗೆದು ತಿನ್ನ ಹತ್ತಿದರು. ಬಹಳಷ್ಟು ಜನರು ಆ ಬರದಲ್ಲಿ ಉಪವಾಸದಿಂದ ಮರಣ ಹೊಂದಿದರು. ಉಳಿದ ಜನರು ಹಾಗೆಯೇ ಕಾಲ್ನಡಿಗೆಯಲ್ಲಿಯೇ ಹೊರಟು ಹೋದರು.

## ೬೩. ಮಲಿಕ ಅಂಬರನು ನವರಸಪುರದ ಮೇಲೆ ಏರಿ ಬಂದದ್ದು ಮತ್ತು ವಿಜಾಪುರದ ಮೇಲೆ ಹಲ್ಲೆ ಮಾಡಿದ್ದು :

ಮರು ವರುಷ ಮಲಿಕ ಅಂಬರನು ಹಿ. ಸನ್ ೧೦೩೪ (ಕ್ರಿ.ಶ. ೧೬೨೫)ರಲ್ಲಿ ಏರಿ ಬಂದನು. ಆತನಿಗೆ ಸೊಕ್ಕಿನ ಮದ ಏರಿತ್ತು. ಅದಕ್ಕಾಗಿ ಮೊದಲಿಗಿಂತ ಅಧಿಕವಾದ ಗುಂಡಾಗಿರಿ-ದಂಗೆ ಲೂಟಿಗಳನ್ನು ಮಾಡಲು ನಿರ್ಧರಿಸಿನು. ಆದಿಲಶಾಹಿಗಳ ರಾಜಧಾನಿಯ ಮೇಲೆ ಏರಿ ಹೋಗುವ ಸಂಕಲ್ಪವನ್ನು ಮಾಡಿ ೫೦-೬೦ ಸಾವಿರ ಸೈನಿಕರನ್ನು, ತೋಫುಗಳನ್ನು ಬಂದೂಕುಗಳನ್ನು ಸಾಕಷ್ಟು ತೆಗೆದುಕೊಂಡು ವಿಜಾಪುರದ ಕಡೆಗೆ ಬಂದನು. ಆ ದಿನಗಳಲ್ಲಿ ನವರಸಪುರ ನಗರವು ಅರಬ ಮತ್ತು ಅಂಜಮಗಳ ನಗರಗಳಗಿಂತ ಅಧಿಕವಾಗಿ ತುಂಬಿ, ದೊಡ್ಡ-ದೊಡ್ಡ ಕಟ್ಟಡಗಳಿಂದ ಶೋಭಾಯಮಾನವಾಗಿತ್ತು. ಬಹು ದೊಡ್ಡ-ದೊಡ್ಡ ಇಮಾರತುಗಳು, ಅಗಲವಾದ ರಸ್ತೆಗಳು, ಬಜಾರುಗಳುಳ್ಳ ಆ ನಗರದಲ್ಲಿ ಬಹಳಷ್ಟು ವಿದ್ವಾಂಸ ಜನರು, ಗುಣೀ ಜನರು ಇರುತ್ತಿದ್ದರು. ಶ್ರೀಮಂತರ ವಸತಿಯಿಂದಾಗಿ ಸಂಪತ್ತು, ಸಾಮಾನು, ಸರಂಜಾಮುಗಳಿಂದಲೂ ತುಂಬಿತ್ತು. ಅದೊಂದು ಅದ್ವಿತೀಯವಾದ ಪಟ್ಟಣ ಎನಿಸಿತ್ತು. ಆದರೆ, ಅದ್ಯಾಪಿ ಆ ನಗರದ ಸುತ್ತಲೂ ನಗರ ಕೋಟೆಯು ಕಟ್ಟಿ ಸಿದ್ಧವಾಗಿರಲಿಲ್ಲ. ಮಲಿಕ ಅಂಬರನು ಈ ಸಂಧಿಯನ್ನೇ ಕಾಯುತ್ತ ಜಪ್ಪಿಸಿ ಕುಳಿತಿದ್ದನು. ಅವಕಾಶ ದೊರೆತಂತೆ ಬಹಳಷ್ಟು ಸೈನ್ಯದೊಂದಿಗೆ ಬಂದು ಆ ಅತ್ಯಂತ ಶೋಭಾಯ ಮಾನವಾದ ನಗರ, ನವರಸಪುರದ ಮೇಲೆ ಹಲ್ಲೆ ಮಾಡಿದನು. ಲೂಟಿ ಮಾಡಿ ನಗರವನ್ನು ಹಾಳು ಮಾಡಿದನು. ಆಗ ಇಬ್ರಾಹಿಮ ಆದಿಲಶಹನು ಆ ತಾರೀಖಿನಿಂದ ನವರಸವನ್ನು ಬಿಟ್ಟು ವಿಜಾಪುರದಲ್ಲಿಯೆ ಬಂದು ಇರಹತ್ತಿದನು. ನವರಸಪುರ ನಗರವು ಜನರಹಿತವಾಯಿತು. ನವರಸಪುರವನ್ನು ನಾಶ ಮಾಡಿದ ನಂತರ ಮಲಿಕ ಅಂಬರನು ವಿಜಾಪುರ ನಗರದ ಮೇಲೆ ಹಲ್ಲೆ ಮಾಡಿದನು. ವಿಜಾಪುರವನ್ನು ಬಹಳ ನಾಶ ಮಾಡಹತ್ತಿದನು.[೧] ಆದಿಲಶಹನ ಬಹಳಷ್ಟು ಪ್ರದೇಶಗಳನ್ನು ಕೈವಶ ಮಾಡಿಕೊಂಡನು.[೨] ಅದರಂತೆ ಮೊಗಲರ ಬಹಳಷ್ಟು ಪ್ರದೇಶಗಳನ್ನೂ ತೆಗೆದುಕೊಂಡನು. ಇದೇ ಗದ್ದಲದಲ್ಲಿ ಮತ್ತು ದಂಗೆಯಲ್ಲಿ ಆದಿಲಶಹನ ಮುಖ್ಯ ಕಾರಭಾರಿ ಮುಬಾರಕಬಾದನನ್ನು ಮಲಿಕ ಅಂಬರನು ಕೊಲೆ ಮಾಡಿದನು. ಮಲಿಕ ಅಂಬರನ ಈ ತರದ ದಂಗೆ ಧಾಂದಲೆಗಳಿಂದ ಇಬ್ರಾಹಿಮ ಆದಿಲಶಹನ ಮನಸ್ಸು ತುಂಬ ಖತಿಕೊಂಡಿತು. ಒಂದು ದೊಡ್ಡ ಯುಕ್ತಿಯೊಂದಿಗೆ, ಭಾರೀ ಪ್ರಮಾಣದಲ್ಲಿ ಮಲಿಕ ಅಂಬರನ ಜೊತೆ ಸೇಡು ತೀರಿಸಿಕೊಳ್ಳಬೇಕೆಂದು ಇಚ್ಛಿಸಿದ್ದನು. ಆದರೆ, ಮರುವರುಷವೇ ಆತ ಒಮ್ಮಿಂದೊಮ್ಮೆಲೆ ಹಿ. ಸನ್ ೧೦೩೫ರಲ್ಲಿ (ಕ್ರಿ.ಶ.೧೬೨೫-೨೬) ಮಲಿಕ ಅಂಬರನು ಮರಣ ಹೊಂದಿದನು.[೩] ಸುಲ್ತಾನ ಮಹಮ್ಮದ ಕುತುಬಶಾಹನು ಕೂಡ ಅದೇ ಸಮಯದಲ್ಲಿ ಕೆಲವೆ ದಿನಗಳಲ್ಲಿ ಮರಣ ಹೊಂದಿದನು.[೪]

---

೧. ವಿಜಾಪುರದ ಮೇಲಿನ ಹಲ್ಲೆಯೂ ಭಾತವಡಿ ಯುದ್ಧ ಪೂರ್ವ ಪ್ರಸಂಗವಾಗಿದ್ದು ಸೊಲ್ಲಾಪುರದ ಮೇಲಿನ ಹಲ್ಲೆ ಮಾತ್ರ ಅನಂತರದ್ದು. ಆದಿಲಶಹ ಹಾಗೂ ಮೊಗಲ ಸೈನ್ಯಗಳ ಪರಾಭವದ ಕುರಿತು. ಇಕ್ಬಾಲನಾಮಾದಲ್ಲಿ ಸಾಕಷ್ಟು ಬಂದಿದೆ. – Ikbal-Nama-i-Jahangir by- Mutamad Khan. E.D.PP 411-417.

೨. ಶಕೆ. ೧೫೪೬ರಲ್ಲಿ (ಕ್ರಿ.ಶ ೧೬೨೪-೨೫) ಮಲಿಕ ಅಂಬರನು ಸೋಲಾಪುರಕ್ಕೆ ಮುತ್ತಿಗೆ ಹಾಕಿ ಆದಿಲಶಾಹಿಗಳಿಂದ ಕೋಟೆಯನ್ನು ತಗೆದುಕೊಂಡನು- ಜೇಧೆ ಶತಾವಲಿ, ಶಿವಚರಿತ್ರೆ-ಪು.೧೬

3. Intelligence now arrived of the death of Ambar the Abyssinian, in the eightieth year of his age, on the 31st Urdibihist (10, May 1625) - Ikbat-Nama, E.D. P. 428.

4. "The death of...... Sultan Muhammad Qutb shah, son of Mirza Muhammad Amin, son of Ibrahim Qutb Shah, occured OnWednesday the 13th of Jumada I 1035 ( 1 February 1626) -Inscription on the Tomb of Muhammad Qutb shah P-144. No. 364, "Muslim Inscriptions" by V.S. Bendrey.

### ೬೪. ಇಬ್ರಾಹಿಮ ಆದಿಲಶಹನ ಉತ್ತಮ ಲಕ್ಷಣಗಳ ಒಂದಿಷ್ಟು ವರ್ಣನೆ :

ಇಬ್ರಾಹಿಮ ಆದಿಲಶಹ ಬಾದಶಹನು ಬಹಳ ಸುಲಕ್ಷಣವಂತನಾಗಿದ್ದನು. ಅತಿ ಲಾವ್ಯಣ್ಯವಂತ, ಬಹಳ ಉತ್ತಮ ಸ್ವಭಾವದವನಾಗಿದ್ದನು. ಒಳ್ಳೆಯ ನ್ಯಾಯವಂತ, ಧೈರ್ಯವಂತ, ಹಿಮ್ಮತ್ರದಾರ, ರೈತರ ಪಾಲನೆ ಮಾಡುವವ, ವಿದ್ವಾಂಸರು ಗುಣವಂತರನ್ನು ಆದರಿಸುವವನು, ಶೇಖಜನರನ್ನು, ಫಕೀರರನ್ನು, ಸುನ್ನಿ ಧರ್ಮದವರನ್ನು, ಸಾಧು ಸಂತರನ್ನು ಮತ್ತು ಶ್ರೇಷ್ಠ ಔಲಿಯಾ ಜನರ ಯೋಗ್ಯತೆಗಳನ್ನು ತಿಳಿದುಕೊಳ್ಳಬಲ್ಲವನು, ದೊಡ್ಡ ವಿದ್ವಾಂಸರು, ಪೂರ್ಣ ಜ್ಞಾನಿಗಳು, ಶೇಖ ಜನರು, ಕವಿಗಳು, ಯೋಗ್ಯ ಜನರು, ಶೂರ ಸೈನಿಕರು ಮತ್ತು ಸಂಪೂರ್ಣ ಗುಣವಂತರು ಆ ಕಾಲದಲ್ಲಿ ನಾಲ್ಕುಕಡೆಗಳಿಂದಲೂ ಪೃಥ್ವಿಪತಿ ಇಬ್ರಾಹಿಮ ಆದಿಲಶಹನ ಹತ್ತಿರ ಬಂದು, ವಿಜಾಪುರ ನಗರದಲ್ಲಿ ಇದ್ದು, ಅದಕ್ಕೆ ತಮ್ಮ ನಿರಂತರ ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದನು. ದೊಡ್ಡ ದೊಡ್ಡ ಔಲಿಯಾಗಳು ಬಂದು ಸೇರಿದ್ದರು. ಅವರ ಸಮಾಧಿಗಳು ಇನ್ನುವರೆಗೂ ಅಲ್ಲಿ ಪ್ರಸಿದ್ಧವಾಗಿವೆ. ಇದಲ್ಲದೆ ಖದೀಮ ಪರಂಪರೆಯ ಏಳೆಂಟು ಜನರು ಆತನ ಕಾಲದಲ್ಲಿ ಇದ್ದು, ಅವರು ತಮ್ಮ ಶ್ರೇಷ್ಠ ಚರಣಗಳ ಯೋಗದಿಂದ ವಿಜಾಪುರವನ್ನು ಕಲ್ಯಾಣದ, ಕೃಪೆಯ ಸಂಪತ್ತಿನ ಸ್ಥಳವನ್ನಾಗಿ ಮಾಡಿದ್ದರು. ನಾಮಾಂಕಿತರಾದವರಲ್ಲಿ ಮುಲ್ಲಾ ಜುಹೂರಿ ಎಂಬವನಿದ್ದಾನೆ. ಮುಲ್ಲಾ ಜುಹೂರಿಯ ಕವಿತೆಗಳ ಪುಸ್ತಕವು ಬಹಳ ಉತ್ತಮವಾಗಿದೆ, ವಿಸ್ತಾರವಾಗಿದೆ. ತುಸುವೆ ಬರವಣಿಗೆಯಲ್ಲಿ ತುಂಬ ಪ್ರೌಢವಾಗಿರುವ ಗ್ರಂಥವಾಗಿದೆ. ಆತನ ಕವಿತೆಗಳು ಹಿಂದುಸ್ತಾನದ ಎಲ್ಲ ನಗರಗಳಲ್ಲಿ, ಇರಾನ, ದುರಾನಗಳಲ್ಲೂ ಪ್ರಸಿದ್ಧವಾಗಿವೆ. ಆದಿಲಶಹನ ವರ್ಣನೆ ಹಾಗೂ ಸ್ತುತಿಗಳ ವಿಷಯದಲ್ಲಂತೂ ಮುಲ್ಲಾಜುಹೂರಿಯು ತನ್ನ ಜಿಹ್ವಾರೂಪಿ ಕುದುರೆಯನ್ನು ವಿಸ್ತಾರವಾದ ಅರಣ್ಯದಲ್ಲಿ ಓಡಿಸಿ ಬಿಟ್ಟಿದ್ದಾನೆ. ಆತ ವರ್ಣನೆ ಮಾಡಿದ ಗ್ರಂಥಗಳ ಹೆಸರು 'ಆರ್ಗವಾನೆ-ಖಲೀಲ', 'ಗುಲಜಾರೆ-ಇಬರಾಹೀಮ' ಮತ್ತು ದೇಶೀಯವಾಗಿ 'ನವರಸ' ಈ ಹೆಸರುಗಳಿಂದ ಪ್ರಸಿದ್ಧವಾಗಿವೆ. ಮುಲ್ಲಾ ಜುಹೂರಿಯು ತನ್ನ ಸ್ನೇಹಿತರಿಗೆ ಪತ್ರಗಳನ್ನು ಬರೆದಿದ್ದಾನೆ. ಆ ಪತ್ರಗಳಲ್ಲಿ ವಿಷಯಗಳನ್ನು ನಮೂದಿಸುತ್ತ ಇಬ್ರಾಹಿಮ ಆದಿಲಶಹನ ಬಕ್ಷೀಸು ಕೊಡುವ ಹಾಗೂ ಆತನ ದಾತೃತ್ವದ ವರ್ಣನೆಯಿದೆ. ಇದನ್ನು 'ಗುಲಜಾರೆ-ಇಬರಾಹೀಮ' ಎಂಬ ಗ್ರಂಥದಲ್ಲೂ ವರ್ಣಿಸಿದ್ದಾನೆ. ಮುಲ್ಲಾ ಹುಜೂರಿ ಹೇಳಿರುವಂತೆ.

'ನವರಸಪುರದ ಯೋಗ್ಯತೆಯು ಇಷ್ಟಿತ್ತಲ್ಲ, ಶೋಭೆಯಲ್ಲಿ, ಆ ನಗರದ ಎದುರು ಚಂದ್ರನು ಕೂಡ ನಾಚುತ್ತಿದ್ದಂಥ ನಗರ ಅದಾಗಿತ್ತು. ಅಲ್ಲಿರುವ ಸುದೈವ ನನ್ನದಾಗಿತ್ತು. ಆಶ್ರಯಕ್ಕಾಗಿ ಇಬ್ರಾಹಿಮ ಆದಿಲಶಹನೆಂಬ ದೊಡ್ಡ ತೋಟವೇ ಇತ್ತು. ಅದನ್ನು ತಿಳಿದೇ ನಾನು ಅಲ್ಲಿ ಉಳಿದುಕೊಂಡು ಬಿಟ್ಟೆನು. ಬಾದಶಹನ ಕಡೆಯಿಂದ ಏನಾದರೂ ಬಕ್ಷೀಸನ್ನು ಕೇಳಬೇಕೆಂದು ನಾನೆಂದೂ ಮನ್ನಸು ಮಾಡಲಿಲ್ಲ. ಅದು ನನ್ನ ಮನದಲ್ಲಿಯೇ ಬರುತ್ತಿರಲಿಲ್ಲ. ಯಾಕೆಂದರೆ ನನಗೆ ಪ್ರತಿ ತಿಂಗಳೂ ಸಂಬಳ ದೊರೆಯುತ್ತಿತ್ತು. ಅಲ್ಲದೆ ಪ್ರತಿಯೊಂದು ವಿದ್ಯೆಗೂ, ಪ್ರತಿಯೊಂದು ಗಜಲಿಗೂ ಬೇರೆ ಬೇರೆ ಬಕ್ಷೀಸು ದೊರೆಯುತ್ತಿತ್ತು. ನಾನು ಈ ಎಲ್ಲ ಕವಿತೆಗಳ ಹಾಗೂ ಗಜಲುಗಳ, ಇಬ್ರಾಹಿಮ ಆದಿಲಶಹನ ವರ್ಣನೆಯ ಗ್ರಂಥವನ್ನು ಸಿದ್ಧಪಡಿಸಿಕೊಂಡು ನವಾಬ ಶಹಾನವಾಜಖಾನನ ಇಂದ್ರ ಭುವನದಂಥ ಕಚೇರಿಯಲ್ಲಿಯ ಜನರ ಮಧ್ಯ ಹೋದಾಗ, ಖಜೀನೆಯ ನೌಕರರು ಕಟ್ಟು ಮಸ್ತಾದ ಪರ್ವತದಂಥ ನಾಲ್ಕು ಒಂಟೆಗಳನ್ನು ತಂದು ನನ್ನ ಮುಂದೆ ನಿಲ್ಲಿಸಿದರು. ಅವುಗಳ ಮೇಲೆ, ಅವುಗಳು ಹೊರುವಷ್ಟು ಭಾರದ ಸುವರ್ಣವಿತ್ತು. ಮತ್ತು ಅವರು ನನಗೆ ಹೇಳಿದರು. ನವರಸ ಹಜಾರ ಲ್ಯಾರಿ ದ್ರವ್ಯವನ್ನು ಕೊಡಬೇಕೆಂದು ಇಬ್ರಾಹಿಮ ಆದಿಲಶಹರ

ಆಜ್ಞೆಯಾಗಿದೆ ಎಂದರು. ಐದೂವರೆ ರೂಪಾಯಿಗಳ ಬೆಲೆಯ ಬಂಗಾರದ ತುಂಡುಗಳಿವೆ. ಆ ಒಂದು ತುಂಡಿಗೆ ಲ್ಯಾರಿ ಎನ್ನುತ್ತಾರೆ. ಅಂಥ ಎಂಭತ್ತೊಂದು ಸಾವಿರ ಲ್ಯಾರಿಗಳನ್ನು ಕೊಡುವ ಹುಕುಂ ಆಗಿದೆ, ಎಂದು ಹೇಳುತ್ತ ಆತ ಬಂಗಾರದಿಂದ ತುಂಬಿದ ನಾಲ್ಕು ಒಂಟೆಗಳನ್ನು ನನ್ನ ವಶಕ್ಕೆ ಕೊಟ್ಟನು. ಅನಂತರ ನಾನು ನಗರಕ್ಕೆ ಬಂದು ಆ ದ್ರವ್ಯವನ್ನು ಒಂಟೆಯಮೇಲಿನಿಂದ ಇಳಿಸಿ ಸಯ್ಯದ ಜನರಲ್ಲಿ ಹಂಚಿದೆನು. ಕೆಲವಷ್ಟನ್ನು ಸಯ್ಯದ ಜನರ ಹೊರತಾಗಿ ಬೇರೆ ಜನರಿಗೂ ಹಂಚಿದೆನು. ಹೀಗಾಗಿ ಇದರಿಂದ ಪರಲೋಕದಲ್ಲಿ ಉತ್ತಮ ಫಲದ ಪ್ರಾಪ್ತಿಗಾಗಿ ನಾನು ಸಾಹಿತ್ಯ ರಚಿಸಿದ್ದೇನೆ.

ಮಹಮೂದಶಾಹನು ಗ್ರಂಥಕ್ಕಾಗಿ ಫಿರದೋಸಿಗೆ ಕೊಡುತ್ತೇನೆಂದು ಹೇಳಿದಷ್ಟು ದ್ರವ್ಯವನ್ನು ಕೊಟ್ಟಿರಲಿಲ್ಲ. ಅದರಿಂದಾಗಿ ಈ ವಿಷಯದಲ್ಲಿ ಮಹಮೂದಶಾಹನಿಗೆ ನಿರಂತರ ಅಪಕೀರ್ತಿ ಉಳಿದುಕೊಂಡಿದೆ. ಈ ವಿಷಯವನ್ನು ಶಾಹಜಾದಾನ ಪುಸ್ತಕದ ಆರಂಭದಲ್ಲಿಯೇ ಫಿರದೋಸಿಯು ನಮೂದಿಸಿದ್ದಾನೆ. ಆದ್ದರಿಂದ ಈ ದೃಷ್ಟಾಂತವನ್ನು ಹೇಳಿದೆ. ಯಾಕೆಂದರೆ ಮಹಮೂದಶಾಹನು ಈತರದ ಕೃತಘ್ನತೆಯನ್ನು ತೋರಿಸಿದನು ಮತ್ತು ಇಬರಾಹೀಮ ಆದಿಲಶಾಹನು ಈತರದ ದ್ರವ್ಯ ಕೊಟ್ಟು ಅವನಿಗಿಂತ ಅಧಿಕವಾದನು.

ಆಶುಕವಿತೆ ಮಾಡುವ ಅನೇಕ ಜನರು ಈ ಉದಾರಿಯ ಹತ್ತಿರ ಸೇರಿದ್ದರು. ಅದರಂತೆ ಅನೇಕ ಖುಶ್‌ನವೀಸರು ಅಂದರೆ ಉತ್ತಮವಾಗಿ ಲೇಖನ ಮಾಡುವ ಲೇಖಕರು, ಜಾದುವಿನಂತೆ ಚಮತ್ಕಾರಿಕವಾಗಿ ಮತ್ತು ಸಿಹಿಯಾಗಿ ಬರೆಯುವವರು ಮತ್ತು ಪ್ರತಿಯೊಂದು ವಿದ್ಯೆಯ ವಸ್ತಾದರು, ಪ್ರತಿಯೊಂದು ಗುಣಗಳ ಗುಣೀ ಜನರು ಆ ಕಾಲದಲ್ಲಿ ಸೇರಿ ಅವರು ಪ್ರತಿಯೊಂದು ಗುಣಗಳ ಕೀರ್ತಿಯ ಧ್ವನಿಯನ್ನು ಪೂರ್ವದಿಂದ ಪಶ್ಚಿಮದವರೆಗೂ ಮುಟ್ಟಿಸುತ್ತಿದ್ದರು. ಮಹಮದ ಕಾಸಮ ಫಿರಿಷ್ತಾ ಅಸ್ತ್ರಾಬಾದಿಯು, 'ತಾರೀಖೆ-ಫಿರಿಸ್ತಾ' ಎಂದು ಬರೆದ ಗ್ರಂಥವು ಎಲ್ಲರಲ್ಲಿಯೂ ಪ್ರಸಿದ್ಧವಾಗಿದೆ. ಮೀರ ರಫೀಯುದ್ದೀನ ಷಿರಾಜಿಯು 'ಜ್ಯಾಮಯೆತನ ಕರಡೀಲ ಮುಲುಕ' ಎಂಬ ಗ್ರಂಥವನ್ನು ಬರೆದಿದ್ದಾನೆ. ಈ ಜನರು ಕೂಡ ಈ ಗ್ರಂಥಗಳನ್ನು ಬರೆದು ಇಬರಾಹೀಮ ಆದಿಲಶಾಹನಿಂದ ಇನಾಮುಗಳನ್ನು ಮತ್ತು ಬಕ್ಷೀಸುಗಳನ್ನು ಪಡೆದಿದ್ದಾರೆ. ಈ ಎಲ್ಲರ ಮೇಲೂ ಆದಿಲಶಾಹನ ಉಪಕಾರವಿದೆ. ಆ ಇಬರಾಹೀಮ ಆದಿಲಶಾಹ ಬಾದಶಹನು ಪೂರ್ಣ ಮನೋರಥನು, ಸರ್ವಲಕ್ಷಣಗಳಿಂದ ಸುಲಕ್ಷಣನೂ ಆಗಿದ್ದು, ಎಲ್ಲ ಬಾದಶಹರ ಮಂಡಳಿಯಲ್ಲಿ ಇಬರಾಹೀಮ ಆದಿಲಶಹನು ಬಹಳ ಯೋಗ್ಯನಾಗಿದ್ದನು. ಮತ್ತು ಇಬರಾಹೀಮ ಆದಿಲಶಹನ ದಾನಧರ್ಮ ಮತ್ತು ಬಕ್ಷೀಸಕೊಡುವ ಪ್ರಮಾಣದಲ್ಲಿಯ ಆತನ ಶೂರತ್ವ, ವೈಭವ, ಬುದ್ಧಿ ಮತ್ತು ಮನಃಪೂರ್ವಕವಾದ ದಯಾಳುತನ ಮತ್ತು ರೈತರ ಪಾಲನೆಯನ್ನು ಮಾಡುವುದು. ಇವುಗಳಲ್ಲಿ ಅವನಂತೆ ಯಾರೂ ಇರಲಿಲ್ಲ. ಇದಲ್ಲದೆ, ಬೇರೆ ಅನೇಕ ವಿದ್ಯೆಗಳಲ್ಲೂ ಆದಿಲಶಹನಿಗೆ ಅಭ್ಯಾಸವಿತ್ತು. ಗೌರವ ವಿದ್ಯೆ, ಲೇಖನ ವಿದ್ಯೆ, ಚಿತ್ರ ಇತ್ಯಾದಿ ನಕ್ಷೆಗಳನ್ನು ಬಿಡಿಸುವುದು ಮತ್ತು ಚಿತ್ರಕಲೆಯ ಕಸಬಿನಲ್ಲಿ ಇತ್ಯಾದಿಗಳಲ್ಲಿ ಬಹಳಷ್ಟು ಅಭ್ಯಾಸವನ್ನು ಮಾಡಿದ್ದನು. ಗಾಯನೇತ್ಯಾದಿ ವಿದ್ಯೆಗಳಲ್ಲೂ ಆತನಿಗೆ ಪೂರ್ಣ ಅಭ್ಯಾಸವಿತ್ತು. ಆದರೂ ಆ ಕಾಲದಲ್ಲಿ ಉತ್ತಮ ಪ್ರಕಾರದ ಲೇಖನಗಳನ್ನು ಮಾಡುವ ಖುಶ್‌ನವೀಸರು ಸೇರಿದ್ದರಾದರೂ ಇಬರಾಹೀಮ ಆದಿಲಶಹನು ಲೇಖಣಿಯ ರಾಜನಾಗಿದ್ದನು. ಆತನ ಮುಂದೆ ಬರೆಯಲು ಲೆಕ್ಕಣಿಕೆಯನ್ನು ಹಿಡಿಯುವಂಥ ಯಾವ ಲೇಖಕನೂ ಇರಲಿಲ್ಲ. ಸುಲಸ, ನಖಸ ಮತ್ತು ನಸ್ತಾಲಿಕ ಮುಂತಾದ ತರದ ಅಕ್ಷರಗಳನ್ನು ಇಷ್ಟೊಂದು ಶ್ರಮವಹಿಸಿ, ಅಭ್ಯಾಸಮಾಡಿ ಬರೆದದ್ದರ ಮುಂದೆ ಆ

ಅಕ್ಷರಗಳು ಇಬ್ರಾಹಿಮ ಆದಿಲಶಾಹನ ಅಕ್ಷರಗಳ ಮುಂದೆ ರದ್ದಾಗುತ್ತಿದ್ದುವು. ಅದರಂತೆಯೇ ಗಾಯನ ಮಾಡುವಲ್ಲಿ, ವಾದ್ಯಗಳನ್ನು ನುಡಿಸುವಲ್ಲಿ, ಈ ವಿದ್ಯೆಗಳಲ್ಲಿ ಅಭ್ಯಾಸ ಮಾಡಿದ ಜನರು, ನಾಲ್ಕೂ ದಿಕ್ಕಿನ ಊರೂರುಗಳಿಂದ ರಾಜಧಾನಿಗೆ ಬಂದು, ಅವರೆಲ್ಲ ಆ ವಿದ್ಯೆಯನ್ನು ಕಲಿಯಲು ಆದಿಲಶಹನ ಶಿಷ್ಯತ್ವವನ್ನು ವಹಿಸುತ್ತಿದ್ದರು. ಅವನಿಂದ ಸಾಧನೆ ಮಾಡಿ "ನಾವೂ ಆದಿಲಶಹನ ಶಾಗಿರ್ದರಾಗಿದ್ದೇವೆ." ಎಂದುಕೊಳ್ಳುತ್ತ ತಮ್ಮ ದೊಡ್ಡತನವನ್ನು ಮೆರೆಯುತ್ತಿದ್ದರು.

### ೬೫. *ಆದಿಲಶಹನು ತನ್ನ ಮೂಲಧರ್ಮವನ್ನು ಬಿಟ್ಟು ಪರಧರ್ಮದ ನಡತೆಯನ್ನು ಹಿಡಿದಿದ್ದಾನೆಂದು ಎಲ್ಲರಲ್ಲಿ ಪ್ರಸಿದ್ಧವಾದ ವಿಷಯ :*

ದೊಡ್ಡವರಿಂದ ಮತ್ತು ಸಂಭಾವಿತರಿಂದ ಕೇಳಿದ್ದ ವಿಷಯವೆಂದರೆ ಇಬರಾಹೀಮ ಆದಿಲಶಹನು ಬಹುದೊಡ್ಡ ವಿದ್ವಾಂಸನಾಗಿದ್ದನು. ಮುಸಲಮಾನ ಧರ್ಮಾಚರಣೆಯಲ್ಲಿ ಮತ್ತು ಮುಸಲ್ಮಾನರ ದಾರಿಯಲ್ಲಿ ಆದಿಲಶಹನ ಹೆಜ್ಜೆ ಸುನ್ನೀ ಜನರ ಜಮಾತಿನ ವಿಶ್ವಾಸದಮೇಲೆ ಮಜಬೂತಾಗಿತ್ತು. ಆದರೆ ಇಬರಾಹೀಮ ಆದಿಲಶಹನಿಗೆ ಸಂಗೀತದಲ್ಲಿ ತುಂಬ ಆಸಕ್ತಿ ಇತ್ತು. ಸುಸ್ವರ ಸಂಗೀತದಲ್ಲಿ ಬಹಳ ಪ್ರೀತಿ ಇತ್ತು. ಆದ್ದರಿಂದ ಹಿಂದು ಜನರ ಸಂಗತಿಯಲ್ಲಿ ಇದ್ದು ಹಿಂದು ಜಾತಿಯ ಹಾಡುಗಾರರೊಂದಿಗೆ ಸ್ನೇಹವನ್ನು ಇಟ್ಟುಕೊಂಡಿದ್ದನು. ಸರಸ್ವತಿಯ ಪೂಜೆ ಹಾಗೂ ಸೇವೆ ಮಾಡುವುದು ಹಿಂದೂ ಜನರ ಪದ್ಧತಿ ನಿಶ್ಚಯವಾದುದೆಂದು ಗೊತ್ತಿದ್ದುದೇ ಆಗಿದೆ. ಯಾಕೆಂದರೆ, ಸರಸ್ವತಿಯು ಹಿಂದು ಜನರ ದೇವರುಗಳಲ್ಲಿಯ ಪೂಜೆಮಾಡಿಸಿಕೊಳ್ಳುವ ಒಬ್ಬ ದೇವತೆಯಾಗಿದ್ದಾಳೆ. ಈ ದೇವತೆ ಸುಸ್ವರ ಗಾಯನ ಹಾಗೂ ಉತ್ತಮ ಪ್ರಕಾರದ ಗಾಯನದ ದನಿಯನ್ನು ನೀಡಿ, ಗಾಯನ ವಿದ್ಯೆ ಉಚ್ಚತರಕ್ಕೆ ಮುಟ್ಟಲು ಅಧಿದೈವವಾಗಿದ್ದಾಳೆ. ಸರಸ್ವತಿಯ ಪೂಜೆಯನ್ನು ಮಾಡಿದರೆ ಗಾಯನ ವಿದ್ಯೆ ಬರುತ್ತದೆ. ಆದ್ದರಿಂದ ಎಲ್ಲ ಹಿಂದು ಜಾತಿಯ ಗವಯಿಗಳು ಮತ್ತು ಇತರ ಜಾತಿಯ ಜನರು ಸಂಗೀತ ಕಲಿಯಬೇಕೆಂದರೆ ಮೊದಲು ಸರಸ್ವತಿಯ ಪೂಜೆಯನ್ನು ಮಾಡುತ್ತಾರೆ. ಆದ್ದರಿಂದ ಹಿಂದು ಜನರ ನಡತೆಯಂತೆ ಇಬ್ರಾಹೀಮ ಆದಿಲಶಹನು ಸರಸ್ವತಿಯ ಪೂಜೆಯನ್ನು ಮಾಡಹತ್ತಿದನು. ಆಗ ಎಲ್ಲ ಜನರಲ್ಲಿ ವದಂತಿ ಹುಟ್ಟಿಕೊಂಡಿತು. ಇಬ್ರಾಹೀಮ ಆದಿಲಶಹನು ಅಕಬರ ಬಾದಶಹನಂತೆ ಮುಸಲ್ಮಾನೀ ಧರ್ಮದ ಪ್ರಬಲ ಮಾರ್ಗವನ್ನು ಬಿಟ್ಟಿದ್ದಾನೆಂದು ಎಲ್ಲರೂ ಎಲ್ಲೆಡೆಯಲ್ಲೂ ಮಾತನಾಡತೊಡಗಿದರು. ಆದರೂ ಈಗಲೂ ಇಬ್ರಾಹಿಮ ಆದಿಲಶಹನು ಪವಿತ್ರ ಮತ್ತು ಏಕೇಶ್ವರಿಯನ್ನೆ ಉಪಾಸಿಸುತ್ತಾನೆ. ಅದರಲ್ಲಿ ನಿರ್ಮಲ ವಿಶ್ವಾಸವಿದೆ. ಅಮಾರ್ಗ ಹಾಗೂ ಅಯೋಗ್ಯ ನಡತೆಯ ಮಾರ್ಗದಿಂದ ಅಲಿಪ್ತನಾಗಿದ್ದಾನೆ. ದೂರವಿದ್ದಾನೆ. ಆದರೆ ಸಂಗೀತ ವಿದ್ಯೆಯಲ್ಲಿ ತುಂಬ ಪ್ರೀತಿಯನ್ನಿಟ್ಟುಕೊಂಡಿದ್ದಾನೆ. ಆದ್ದರಿಂದ ಹಿಂದು ಜನರ ನಡತೆಯತ್ತಲೂ ಆದಿಲಶಹನ ಮನಸ್ಸು ಇತ್ತು.

### ೬೬. *ಹಜರತಶಾಹ ಸಬಗದುಲ್ಲಾಹರು ಮದೀನಾ ಮಿನೋರಾದಿಂದ ವಿಜಾಪುರಕ್ಕೆ ಬಂದ ವಿಷಯ ವರ್ಣನೆ :*

ಇಬ್ರಾಹೀಮ ಆದಿಲಶಹನ ಮೇಲೆ ಅಲ್ಲಾನ ಕೃಪೆ ಹಾಗೂ ಅವಿನಾಶಿ ಅಲ್ಲಾನ ದಯೆ ಪೂರ್ಣವಾಗಿ ಇತ್ತಾದರೂ ಇದೊಂದು ಕಂಟಕ, ಅರ್ಥಾತ್ ಮುಳ್ಳು ಇಬ್ರಾಹೀಮ ಆದಿಲಶಹನ ಸ್ನೇಹಪರ ಮಾರ್ಗದಲ್ಲಿ

ಉಳಿದು ಕೊಂಡು ಬಿಟ್ಟಿತ್ತು. ಅದು ಆತನ ಕಾಲಲ್ಲಿ ಮುರಿದುಬಿಟ್ಟೀತೆಂದು ತಿಳಿದು ಆ ಮುಳ್ಳನ್ನು ಇರಗೊಡಲಿಲ್ಲ. ಅರಬ್ಬೀ ವಾಕ್ಯದಲ್ಲಿ ಹೇಳಿದಂತೆ, "ಮನುಷ್ಯ ದಾರಿ ತಪ್ಪುತ್ತಾನೆ. ಅವನಿಗೆ ಮಾರ್ಗ ತೋರಿಸುವ ಸರ್ವ ಪೈಗಂಬರರ ಸರದಾರ ಮತ್ತು ಪರಲೋಕದಲ್ಲಿ ಅಪರಾಧ ಕ್ಷಮೆ ಮಾಡುವವರ ಮೇಲೆ ದೇವರ ಕೃಪೆ ಇರುತ್ತದೆ. ಆತನಿಗೆ ಕಲ್ಯಾಣವಾಗಲಿ ಸರ್ವ ಇಚ್ಛುಕರಿಗೆ ಆಜ್ಞೆಯನ್ನು ಮಾಡುವವನು ಮತ್ತು ಅಲ್ಲಾನ ಜ್ಞಾನವನ್ನು ತಿಳಿದುಕೊಂಡವರು ಎಂದರೆ. ಹಜರತ್ ಮಹಮ್ಮದ ಮುಸ್ತಫಾ ಮತ್ತು ಪೈಗಂಬರರೇ ಆಗಿದ್ದಾರೆ". ಅವರ ರಾಯಭಾರಿಯಾಗಿ ಶಾಹ ಸಬಗದುಲ್ಲಾಹ ಹುಸೇನಿ ಅವರು, ಭಡೋಚದಲ್ಲಿ ಇರುತ್ತಿದ್ದರು, ಅವರು ಹಜರತ ಪೀರ ಮುರುಷದ, ಎಲ್ಲ ಮುಸಲ್ಮಾನರ ಶೇಖರು, ಶಾಹಾ ಬಜೀಹುದ್ದೀನ ಉಲಚೀ ಹುಸೇನಿ ಅವರ ಶಿಷ್ಯರು. ಅವರು ಬಹಳ ದಿನ ಪೈಗಂಬರರ ಕ್ಷೇತ್ರದಲ್ಲಿಯೇ ಇದ್ದು, ಮದೀನಾ-ಮಿನೋರಾದಲ್ಲಿ ಶಿಷ್ಯ ಮಂಡಳಿಗೆ ಉಪದೇಶಮಾಡುತ್ತ ಇರುತ್ತಿದ್ದರು. ಆ ಸಬಗದುಲ್ಲಾಹರಿಗೆ ಒಂದು ದಿನ ಪೈಗಂಬರರು ಕನಸಿನಲ್ಲಿ ಬಂದು "ನೀವು ತಕ್ಷಣ, ತ್ವರಿತವಾಗಿ ದಕ್ಷಿಣ ದೇಶಗಳ ಕಡೆಗೆ ಹೋಗಬೇಕು" ಎಂದು ಆಜ್ಞೆ ಮಾಡಿದರು.

ಪೈಗಂಬರರ ಆಜ್ಞೆಯಂತೆ ಹಜರತ ಶಾಹಾ ಸಬಗದುಲ್ಲಾಹರು, ಮದೀನಾ-ಮಿನೋರಾ ಪವಿತ್ರ ಕ್ಷೇತ್ರದಿಂದ ಹೊರಟು ದಕ್ಷಿಣ ದೇಶಗಳತ್ತ ನಡೆದರು. ಹಿಜರಿ ಸನ್ ೧೦೦೦ ದಲ್ಲಿ (ಕ್ರಿ.ಶ. ೧೫೯೧-೯೨) ವಿಜಾಪುರಕ್ಕೆ ಬಂದು ಮುಟ್ಟಿದರು. ಕೆಲವು ದಿನಗಳ ಅನಂತರ ಶಾಹಾ ಹಜರತ ಸಬಗದುಲ್ಲಾಹರಿಗೆ ತಿಳಿದಂತೆ, ಈ ವಿಜಾಪುರದ ಬಾದಶಹನು, ಸಂಗೀತದ ಮೇಲಿನ ಪ್ರೀತಿಯಿಂದ ತನ್ನ ಧರ್ಮವನ್ನು ಬಿಟ್ಟು ಹಿಂದು ಜನರ ಧರ್ಮದಂತೆ ನಡೆಯುತ್ತಿದ್ದಾನೆ. ಆದ್ದರಿಂದ ಶಾಹ ಸಬಗದುಲ್ಲಾಹ ಅವರು ಇಬ್ರಾಹಿಮ ಆದಿಲಶಹನಿಗೆ 'ಪರಧರ್ಮ ಆಚರಣೆಯನ್ನು ಬಿಟ್ಟು ಅಲ್ಲಾನ ಕಡೆಯ ರುಜು ಮಾರ್ಗವನ್ನು ಧಾರಣ ಮಾಡು. ಹಿಂದು ಧರ್ಮದ ನಡತೆಯಿಂದ ಅಸತ್ಯ ಸಂಕಲ್ಪದಲ್ಲಿ ವಿಶ್ವಾಸವನ್ನಿಟ್ಟಿದ್ದೀಯಾ, ಅದನ್ನು ಬಿಟ್ಟು ನಿನ್ನ ಚಿತ್ತವನ್ನು ಸಮಾಧಾನ ಪಡಿಸಿಕೊಳ್ಳು. ಅಲ್ಲಾನ ಮೇಲೊಂದೇ ವಿಶ್ವಾಸವನ್ನಿಟ್ಟು ಮುಸಲ್ಮಾನನಾಗಿರು' ಎಂದು ಆಜ್ಞೆ ಮಾಡಿದರು. ಆಗ ಇಬ್ರಾಹೀಮ ಆದಿಲಶಹನು ಅವರಿಗೆ ವಿನಂತಿಯನ್ನು ಮಾಡಿಕೊಳ್ಳುತ್ತ 'ನನ್ನ ಮನಸ್ಸಿನಲ್ಲಿ ಬೇರೆ ಯಾವುದೂ ಇಲ್ಲ. ನನ್ನ ಗಾಯನದಲ್ಲಿ ಅಂತರ ಬರಬಾರದೆಂದು ಹೀಗೆ ನಡೆದುಕೊಂಡಿರುವೆ. ಇಲ್ಲದಿದ್ದಲ್ಲಿ ಅಲ್ಲಾನ ಆಣೆಯಾಗಿಯೂ ನಾನು ಮುಸಲ್ಮಾನ ಧರ್ಮವನ್ನು ವಿಶ್ವಾಸದಿಂದ ಧಾರಣ ಮಾಡಿಕೊಂಡಿರುವೆನು, ಅದರಲ್ಲಿ ಅವಿಶ್ವಾಸ ಉಂಟಾಗುವುದಾದರೆ, ನನ್ನ ಸಂಗೀತದಲ್ಲಿಯೂ ಅವಿಶ್ವಾಸ ಬಂದಂತೆ, ನಾನು ಹಿಂದು ಧರ್ಮದಂತೆ ನಡೆದುಕೊಳ್ಳುತ್ತೇನೆ ಎಂದರೆ. ಸರಸ್ವತಿ ಪೂಜೆಯನ್ನು ಮಾಡುತ್ತೇನೆ, ಎಂಬುದಾಗಿ ವಿನಂತಿಯನ್ನು ಮಾಡಿಕೊಂಡನು. ಅದಕ್ಕೆ ಪ್ರತಿಯಾಗಿ ಹಜರತ ಶಾಹ ಸಬಗದುಲ್ಲಾಹರು ಆಜ್ಞೆ ಮಾಡುತ್ತ ನೀನು ಯಾವ ಸಂಶಯವನ್ನು ಹಿಡಿಯಬೇಡ, ಅಲ್ಲಾನ ಕೃಪೆಯಿಂದ ಸರಿಯಾಗುತ್ತದೆ. ಅಲ್ಲಾನು ಸಹಾಯ ಮಾಡುತ್ತಾನೆ. ನಿನ್ನ ಸುಸ್ವರ ಗಾಯನ ಹಾಗು ಉತ್ತಮ ಪ್ರಕಾರದ ಹಾಡುಗಾರಿಕೆ ಕಾಯಮಾಗಿ ಉಳಿಯುತ್ತದೆ. ಈ ಮಾರ್ಗದಿಂದ ನಡೆದರೆ ಅಧಿಕವಾಗಿಯೆ ವೃದ್ಧಿಯಾಗುತ್ತದೆ. ಅದನ್ನು ಕೇಳಿ ಬಾದಶಹನು ತಕ್ಷಣ ಮನದಲ್ಲಿಯ ಸಂಶಯವನ್ನು ಬಿಟ್ಟು ಮುಸಲ್ಮಾನ ಧರ್ಮವನ್ನು ಧಾರಣ ಮಾಡಿದನು. ಅಲ್ಲಾನ ಕೃಪೆಯ ಮೇಲೆ ಭರವಸೆಯನ್ನು ಇಟ್ಟನು. ಇಂದಿನಿಂದ ಹಿಂದುಧರ್ಮದಂತೆ ನಡೆಯುವುದಿಲ್ಲ ಎಂಬುದಾಗಿ ನಿಶ್ಚಯಿಸಿದನು. ಆ ದಿನದಿಂದ, ಅಲ್ಲಾನ ಕೃಪೆಯಿಂದಾಗಿ ಇಬ್ರಾಹೀಮ ಆದಿಲಶಹನ ಹಾಡುಗಾರಿಕೆಯಲ್ಲಿಯ ಸುಸ್ವರ ದನಿಯು ಮೊದಲಿನಕ್ಕಿಂತ ಹತ್ತು ಪಟ್ಟು ಅಧಿಕ

ಸುಸ್ವರವಾಯಿತು. ಇದರನುಗುಣವಾಗಿ ಇಬ್ರಾಹೀಮ ಆದಿಲಶಹನ ಸಮಾಧಿಯಮೇಲೆ ಒಂದು ದ್ವಿಪದಿಯನ್ನು ಬರೆಯಲಾಗಿದೆ. ಆ ದ್ವಿಪದಿಯ ಅರ್ಥ ಹೀಗಿದೆ.

*"ಇಬ್ರಾಹೀಮ ಪೈಗಂಬರನು ಯಹೂದಿಯಾಗಿರಲಿಲ್ಲ*
*ನಸರಾತಿ ಎಂದರೆ ಫಿರಂಗಿಯೂ ಆಗಿರಲಿಲ್ಲ. ನಿಜನಡತೆಯ*
*ಧರ್ಮದ ಮುಸಲ್ಮಾನನಾಗಿದ್ದನು"*

ಬಾದಶಹನ ಹತ್ತಿರ ಇರುತ್ತಿದ್ದ ಜನರು ಹೀಗೆ ನಡೆದುಕೊಳ್ಳಬೇಕು, ಹಾಗೆ ನಡೆದುಕೊಳ್ಳಬೇಕು ಎಂಬವರು ಶಾಹ ಹಜರತ್ ಸಬಗದುಲ್ಲಾಹ ಅವರಿಗೆ ದಕ್ಷಿಣ ದೇಶಗಳಿಗೆ ಹೋಗಬೇಕೆಂದು ಪೈಗಂಬರರು ಸ್ವಪ್ನದಲ್ಲಿ ಹೇಳಿದ್ದರು ಎಂಬುದರ ಹಿಂದಿನ ತಾತ್ಪರ್ಯವೆಂದರೆ, ಇಬ್ರಾಹೀಮ ಆದಿಲಶಹನು ಮುಸಲ್ಮಾನ ಜನರ ಧರ್ಮಾಚರಣೆಯ ಮಾರ್ಗದಲ್ಲಿ ಅಡ್ಡಿಯಾಗಿ ಬಿದ್ದಿದ್ದನು. ಅದನ್ನೀಗ ಬಿಟ್ಟು, ಎಂದರೆ, ಮುಸಲಮಾನೀ ಧರ್ಮವನ್ನು ಧಾರಣ ಮಾಡಿ, ಮೂಲ ಮಾರ್ಗದ ಆಚರಣೆ ಮಾಡಿ ಸನ್ಮಾರ್ಗ ಹಿಡಿಯಬೇಕು ಎಂಬುದೇ ಆಗಿತ್ತು. ಆದ್ದರಿಂದ ಹಜರತಶಾಹರು ಇತ್ತ ಬರುವುದರಿಂದ ಬಹಳ ಉಪಯೋಗವಾಗಿ ಅತ್ಯಂತ ಫಲ ಪ್ರಾಪ್ತಿಯಾಯಿತು. ಬಹಳಷ್ಟು ಜನರಿಗೆ ಹಜರತ ಶಾಹರ ಉಪದೇಶದಿಂದಾಗಿ ಪೂರ್ಣ ಜ್ಞಾನೋದಯವಾಯಿತು, ಜ್ಞಾನಿಗಳಾದರು.

### ೬೭. *ಹಜರತಶಾಹಾ ಸಬಗದುಲ್ಲಾಹರು ಮದೀನಾ-ಮೀನೋರಾಗೆ ತಿರುಗಿ ಹೋದದ್ದು:*

ಹಜರತ ಮೌಲಾನಾ ಹಬೀಬುಲ್ಲಾಹರು 'ಮಲಫುನ' ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ ಅವರು ಬರೆದಿದ್ದಾರೆ. ಹಜರತ ಶಾಹ ಸಬಗದುಲ್ಲಾಹರು ಸನ್ ೧೦೦೦ (ಕ್ರಿ.ಶ. ೧೫೯೧-೯೨) ಹಿಜರಿ ಶಕೆಯಲ್ಲಿ ಮದೀನಾ ಮಿನೋರಾದಿಂದ ವಿಜಾಪುರಕ್ಕೆ ಬಂದರು. ಆ ಕಾಲದಲ್ಲಿ ಇಬರಾಹೀಮ ಆದಿಲಶಹನು ಬಾದಶಾಹನಾಗಿದ್ದನು. ಇಬ್ರಾಹೀಮ ಆದಿಲಶಹನು ಪೂರ್ಣ ಮನಸ್ಸಿನಿಂದ ಶಾಹ ಸಬಗದುಲ್ಲಾರನ್ನು ಭೆಟ್ಟಿಯಾಗಿ ಅವರ ಚರಣಾರವಿಂದಗಳಲ್ಲಿ ತನ್ನ ರಾಜ್ಯ ವಿಸ್ತಾರವನ್ನು ಹಾಗೂ ಕಲ್ಯಾಣವನ್ನು ಅರ್ಪಿಸಿ ತನ್ನ ವೈಭವವು ಶಾಶ್ವತ ಹಾಗೂ ವೃದ್ಧಿಯಾಗುತ್ತದೆಂದು ತಿಳಿದಿದ್ದನು. ಹಜರತ ಶಾಹ ಸಬಗದುಲ್ಲಾಹರು ನಿರಂತರವಾಗಿ ಇಲ್ಲಿಯೇ ಇದ್ದು ತಿರುಗಿ ಹೋಗುವ ಇರಾದೆಯನ್ನು ಮಾಡಬಾರದೆಂದು ಆದಿಲಶಾಹನ ಇಚ್ಛೆಯಾಗಿತ್ತು. ಅಂದರೆ ಅವರ ಭೆಟ್ಟಿ ದಿನವೂ ಆಗುತ್ತದೆ. ಬಾಗಿಲಲ್ಲಿಯ ಪಹರೆಯವರಿಗೆ ತಾಕೀದನ್ನು ಮಾಡಿದ್ದನು. 'ಒಂದು ವೇಳೆ ಹಜರತ ಶಾಹ ಸಬಗದುಲ್ಲಾಹರು ಹೊರಗೆ ಹೋಗಬೇಕೆಂದು ಇಚ್ಛೆ ಮಾಡಿದರೆ, ನೀವು ಅವರಿಗೆ ಅಡ್ಡಿ ಮಾಡಿ ಅವರನ್ನು ಹೊರಗೆ ಹೋಗಲು ಬಿಡಬೇಡಿರಿ' ಎಂದು ತಾಕೀದು ಮಾಡಿದ್ದನು. ಅದಕ್ಕೆ ಕಾರಣ ಇದೆಯೇ ಆಗಿತ್ತು. ಈ ಸುದ್ದಿ ಹಜರತಶಾಹ, ಸಬಗದುಲ್ಲಾಹರ ಕಿವಿಗೆ ಬಿದ್ದಾಗ ಹಜರತರು ಆಶ್ಚರ್ಯಚಕಿತರಾಗಿ, 'ಒಂದು ವೇಳೆ ನಾವು ಹೊರಟೇ ಹೋದರೆ, ಬಾಗಿಲಲ್ಲಿಯ ಪಹರೆಯವರು ಅಡ್ಡಿ ಮಾಡುತ್ತಾರೆಯೇ? ಅವರು ಮಾಡುವುದಿಲ್ಲ' ಎಂದರು. ಹಜರತಶಾಹ ಸಬಗದುಲ್ಲಾಹರು ವಿಜಾಪುರಕ್ಕೆ ಬಂದ ಹೊಸತರಲ್ಲಿ ಶುಕ್ರವಾರದ ನಮಾಜ ಓದಲು ಜುಮ್ಮಾಮಸೀದಿಗೆ ಹೋಗಿ, ಬಲ ಬದಿಯ ಮೊದಲ ಸಾಲಿನಲ್ಲಿ ನಿಂತು ಓದುತ್ತಿದ್ದರು. ಆ ಹಜರತರ ಮೇಲ್ಬದಿಗೆ, ಯಾರೂ ಇರಬಾರದು ಅಂಥ ಸ್ಥಳದಲ್ಲಿ ಹಜರತರು ನಮಾಜ ಓದುತ್ತಿದ್ದರು. ಆಗ ಹಜರತರು ಹೋಗಬರುವ ದಾರಿಯಲ್ಲಿ ಅಶಾಸ್ತ್ರ ಹಾಗು ಅಯೋಗ್ಯ ಪದಾರ್ಥಗಳನ್ನು ಮತ್ತು ಮದ್ಯಮಾರಾಟ ಮಾಡುವ ಕಲಾಲರ

ಅಂಗಡಿಗಳು ಕಣ್ಣಿಗೆ ಬೀಳುತ್ತಿದ್ದುವು. ಆದ್ದರಿಂದ ಹಜರತರು ಶುಕ್ರವಾರದ ನಮಾಜ ಓದುವುದನ್ನು ಬಿಟ್ಟು ಆಜ್ಞೆ ಮಾಡಿ, 'ಈ ನಗರದಲ್ಲಿ ಶುಕ್ರವಾರದ ನಮಾಜನ್ನು ಓದುವುದು ಯೋಗ್ಯವಾಗಿಲ್ಲ' ಎಂದರು.

ಒಂದು ದಿನ ಹಜರತ ಶಾಹ ಸಬಗದುಲ್ಲಾಹರು ತಮ್ಮ ಗೃಹಕಚೇರಿಯಲ್ಲಿ ಹೇಳುತ್ತ 'ಒಂದು ವೇಳೆ ಈ ನಗರದ ಧಣಿ ಅಂದರೆ ಇಬ್ರಾಹೀಮ ಆದಿಲಶಹನು ತನ್ನ ಅಮಾರ್ಗ ನಡತೆಯನ್ನು ಬಿಟ್ಟು ನಮ್ಮ ಆಜ್ಞೆಯಂತೆ ನಡೆದನಾದರೆ, ಮೂರು ಮಾತುಗಳನ್ನು ಹೇಳುತ್ತೇನೆ ಅದರಂತೆ ಮಾಡಿದರೆ ಅಲ್ಲಾನು ಆ ಮೂರು ಮಾತುಗಳ ಬದಲಾಗಿ ಮೂರು ರಾಜ್ಯಗಳನ್ನೆ, ಅಂದರೆ ಮೂರು ರಾಜ್ಯಗಳ ವೈಭವವನ್ನು ಬಕ್ಷೀಸಾಗಿ ಕೊಡುತ್ತಾನೆ. ನಾನು ಹೇಳುವುದು ಸತ್ಯವೊ-ಅಸತ್ಯವೊ ಎಂಬುದರ ಪರೀಕ್ಷೆಯಾಗಲಿ' ಎಂದರು. ಮೂರು ಮಾತುಗಳಲ್ಲಿಯ ಮೊದಲ ಮಾತು, 'ಇಬ್ರಾಹೀಮ ಆದಿಲಶಹನು ತನ್ನ ರಾಜ್ಯದಲ್ಲಿ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಿ ಮಾರಾಟಕ್ಕೆ ಮನಾಯಿ ಮಾಡಬೇಕು. ಇದರ ಬದಲಾಗಿ ಗುಜರಾತ ರಾಜ್ಯವನ್ನು ನಾನು ಅಲ್ಲಾನಿಂದ ಕೊಡಿಸಿಕೊಡುತ್ತೇನೆ. ಯುದ್ಧ ಪ್ರಸಂಗ ತರಲಿ. ಗುಜರಾತ ರಾಜ್ಯ ಹಸ್ತಗತವಾಗುತ್ತದೆ. ಅದಕ್ಕಾಗಿ ಯುದ್ಧ ಮಾಡಿ ಆ ರಾಜ್ಯವನ್ನು ತೆಗೆದುಕೊಳ್ಳಬೇಕೆಂದೇನೂ ಹೇಳುತ್ತಿಲ್ಲ. ಬೇಕಿದ್ದರೆ ನಾನು ಇಬ್ರಾಹಿಮ ಆದಿಲಶಹನ ಜೊತೆಗೆ ಹೋಗಿ ಗುಜರಾತದ ಸಿಂಹಾಸನದ ಮೇಲೆ ಆದಿಲಶಹನನ್ನು ಕುಳ್ಳಿರಿಸುತ್ತೇನೆ. ಇದು ಸಾಧ್ಯವಾಗದಿದ್ದರೆ, ಇಬ್ರಾಹಿಮ ಆದಿಲಶಹನು ಮದ್ಯದ ಒಂದು ಅಂಗಡಿಯ ಸ್ಥಳದಲ್ಲಿ ಹತ್ತು ಮದ್ಯದ ಅಂಗಡಿಗಳನ್ನು ಅಧಿಕ ಮಾಡಲಿ. ಅದರಂತೆ ವ್ಯಭಿಚಾರಣಿ ಸ್ತ್ರೀಯರನ್ನು ಅಂದರೆ ಸೂಳೆಗಾರಿಕೆ ಮಾಡುವವರನ್ನು, ಕಲಾವಂತಿಣಿಯರು ಮುಂತಾದ ಸ್ತ್ರೀಯರ ಮದುವೆ ಮಾಡಿಕೊಡುವ ಆಜ್ಞೆಯನ್ನು ಮಾಡಬೇಕು. ರಾಫಜೀ ಜನರಿಗೆ ಯಾವುದೇ ಸ್ಥಳದಲ್ಲಿ ಕೆಲಸದಮೇಲೆ ಇಡಬಾರದು. ಈ ಎರಡು ಮಾತುಗಳ ಬದಲಾಗಿ ಬೇರೆ ಎರಡು ರಾಜ್ಯಗಳನ್ನು ಕೊಡಿಸುತ್ತೇನೆ. ಇದೆಲ್ಲ ನಿಜವೋ ಅಥವಾ ಸುಳ್ಳು ಎಂಬುದನ್ನು ಇಬ್ರಾಹಿಮ ಆದಿಲಶಹನು ಮಾಡಿ ನೋಡಲಿ. ಈ ವಿಷಯದಲ್ಲಿ ಪರೀಕ್ಷೆ ಮಾಡಿ ನೋಡುವುದರಲ್ಲಿ ಕಷ್ಟವೇನೂ ಇಲ್ಲವಲ್ಲ?' ಎಂಬುದಾಗಿ ಹೇಳಿದರು. ಆಗ ಆ ಸಭೆಯಲ್ಲಿದ್ದ ಜನರು ಹೀಗೆ ವಿನಂತಿ ಮಾಡಿಕೊಂಡರು. 'ಇದನ್ನು ಮಾಡಲು ತುಂಬ ಖರ್ಚು ಮಾಡಬೇಕಾಗುತ್ತದೆ. ಆಗ ಈ ಕೆಲಸಗಳು ಕೈಗೂಡುತ್ತವೆ' ಅದಕ್ಕೆ ಪ್ರತಿಯಾಗಿ 'ಖರ್ಚಿಗೂ -ನನಗೂ ಏನು ಸಂಬಂಧ' ಎಂದರು ಹಜರತರು. 'ಇಬ್ರಾಹೀಮ ಆದಿಲಶಹನಿಗೆ ಜಗತ್ತನ್ನೇ ಗೆಲ್ಲುವ ಇಚ್ಛೆ ಇದ್ದರೆ, ಪೃಥ್ವಿಯಲ್ಲಿಯ ಪ್ರದೇಶಗಳನ್ನೆಲ್ಲ ಪಡೆಯುವ ಇಚ್ಛೆಯಾದರೆ ನನ್ನ ಆಜ್ಞೆಯನ್ನು ಮನ್ನಿಸುತ್ತಾನೆ? ಎಂದರು.

ಇಷ್ಟರಲ್ಲಿ ಈ ವಿಷಯವು ಬಾದಶಹನ ಕಿವಿಯವರೆಗೂ ಹೋಯಿತು. ಆಗ ಬಾದಶಹನು ನವಾಬ ಕರಮುಲುಕನಿಗೆ, ಒಳ್ಳೆಯ ವಿಶ್ವಾಸಿಕ ವಜೀರ, ರಾಫಜೀಯಾಗಿದ್ದ ಅವನನ್ನು ಕರೆದು ಈ ಕುರಿತು ಯುಕ್ತಿಯನ್ನು ವಿಚಾರಿಸಿದನು. ಆಗ ನವಾಬನು ಹೇಳಿದನು. ಹಜರತ ಶಾಹ ಸಬಗದುಲ್ಲಾಹರು ಏನೆಲ್ಲ ಆಜ್ಞೆ ಮಾಡುತ್ತಿದ್ದಾರೋ ಅದೆಲ್ಲ ಸತ್ಯವೇ ಇರಬೇಕು, ಎಂದಿಗೂ ಅಸತ್ಯವಾಗಲಾರದು. ಆದರೆ ಹೀಗೆ ಮಾಡುವುದರಿಂದ ರಾಜ್ಯದ ಪ್ರಭಾವ ಹಾಗು ಪ್ರದೇಶಗಳ ವ್ಯವಸ್ಥೆ ಉಳಿಯುವುದಿಲ್ಲ. ಅಲ್ಲದೆ ತಮ್ಮ ಚಿತ್ತಕ್ಕೂ ಸಮಾಧಾನ ಉಳಿಯದೆ ಖಿನ್ನತೆ ಪ್ರಾಪ್ತವಾಗುತ್ತದೆ. ಅದರಿಂದ ರಾಜ್ಯ ನಾಶವಾಗುವುದಕ್ಕೆ ಕಾರಣವಾಗುತ್ತದೆ. ಆದ್ದರಿಂದ ಹಜರತ ಶಾಹ ಸಬಗದುಲ್ಲಾಹರನ್ನು ಇಲ್ಲಿಂದ ಕಳಿಸುವುದೇ ಯೋಗ್ಯವೆನಿಸುತ್ತದೆ. ಅವರಿಗೆ ತಿರುಗಿ ಹೋಗಲು ನಿರೋಪ ಕೊಟ್ಟರೆ ಸರಿಯಾಗುತ್ತದೆ? ಎಂದನು. ಕೊನೆಗೆ ರಾಫಜೀ ಜನರ ಅಯೋಗ್ಯ ಯುಕ್ತಿಗೆ ಬಾದಶಹನು ಒಪ್ಪಿ ಒಂದು ದಿನ ಸಾಯಂಕಾಲದ

ಕಚೇರಿಯಲ್ಲಿ ಹೇಳಿಬಿಟ್ಟನು. 'ಒಂದು ವೇಳೆ ಹಜರತಶಾಹರು ಮದೀನಾಮಿನೋರಾದ ಕಡೆಗೆ ಹೋಗುತ್ತೇನೆಂದರೆ. ನಾವು ನಿರೋಪ ಕೊಡುತ್ತೇವೆ' ಎಂದು ಹೇಳಿದನು. ಆ ಕಚೇರಿಯಲ್ಲಿಯೇ ಇದ್ದ ಹಜರತರ ಬಾತಮೀದಾರ ಅಬ್ದುಲ್‌ಖಾದರನು ಈ ವಿಷಯವನ್ನು ಹಜರತರಿಗೆ ಹೇಳಿದನು. ಹಜರತರು ವಿಷಯವನ್ನು ತಿಳಿಯುತ್ತಲೇ ಅದೇ ದಿನ ಸಾಯಂಕಾಲದ ನಮಾಜವನ್ನು ಓದಿದ ಅನಂತರ ಅದೇ ಪೋಷಾಕಿನಲ್ಲಿಯೇ ನಿರೋಪ ಕೇಳಲು ಬಾದಶಹನ ಹತ್ತಿರ ಹೋಗಿ ನಿರೋಪ ತೆಗೆದುಕೊಂಡರು. ಬಾದಶಹನು ನಾಲ್ಕು ಸಾವಿರ ಹೊನ್ನುಗಳನ್ನು ದಾರಿ ಖರ್ಚಿಗೆಂದು ಕೊಟ್ಟು ನಿರೋಪ ಕೊಟ್ಟು, ಆಸಾರ ಕುದಸೀಯಲ್ಲಿಯ ಆನವಾರ, ಎಂದರೆ ಹಜರತ ಸಯ್ಯದ ಮಹಮ್ಮದ ಮುಸ್ತಫಾ ಸಲಿಲ್ಲಾಹ ಅಲಹೈ ವಸಲ್ಲಮ್ ಅವರ ಚಮತ್ಕಾರಿಕ ಕೇಶಗಳ ದರ್ಶನ ಮಾಡಿಕೊಂಡು ಹೋಗಬೇಕೆಂದು ವಿನಂತಿಸಿಕೊಂಡನು.

### ೭೪. *ಹಜರತ ರಸೂಲಿಲ್ಲಾಹರ ರಾಯಭಾರಿ ಹಜರತ ಸಬಗದುಲ್ಲಾಹರು ಹಜರತ ಪೈಗಂಬರರ ದರ್ಶನ ಪಡೆದ ಪ್ರಸಂಗ :*

ಹಜರತಶಾಹರು ಅಲ್ಲಿಂದ ಹೊರಟು ಪೈಗಂಬರರ ಕೇಶಗಳ ದರ್ಶನವನ್ನು ಪಡೆಯಲು ಆಸಾರ ಮಹಲಿಗೆ ಬಂದರು. ಅಲ್ಲಿಯ ಸೇವಕ ಜನರು ಬಾದಶಹನ ಆಜ್ಞೆಯಂತೆ ಪೆಟ್ಟಿಗೆಯನ್ನು ತೆಗೆದು ಬೆಳ್ಳಿಯ ಮುಚ್ಚಿದ ಡಬ್ಬಿಯನ್ನು (ಅದರಲ್ಲಿ ಹಜರತ ರಿಸಾಲತಪನ್ನಾ ಸಲೀಲ್ಲಾಹ ಅಲಹೆ ವಸ್ಸಲ್ಲಮರ ಅನೇಕ ಕೇಶಗಳಿವೆ) ಪೆಟ್ಟಿಗೆಯಿಂದ ತೆಗದು, ಹಜರತ ಶಾಹರ ಎದುರಿಗೆ ತಟ್ಟೆಯಲ್ಲಿ ಇಟ್ಟರು. ಆಗ ಹಜರತ್ ಶಾಹರು ಆಸಾರಮಹಲಿನ ಸೇವಕರಿಗೆ ಆಜ್ಞೆಮಾಡಿ 'ಡಬ್ಬಿಯ ಮುಚ್ಚಳವನ್ನು ತೆರೆಯಿರಿ ಅಂದರೆ ಆ ಕೇಶಗಳನ್ನು ನೋಡಿ ದರ್ಶನ ಪಡೆಯುತ್ತೇನೆ' ಎಂದರು. ಹಜರತ ಪೈಬಂಗಬರರ ಕೇಶಗಳ ಡಬ್ಬಿಯನ್ನು ತೆರೆಯುವ ಪದ್ಧತಿ ಇಲ್ಲ. ಈ ವಿಷಯದಲ್ಲಿಯ ನಮ್ಮ ಅಪರಾಧವನ್ನು ಮನ್ನಿಸಬೇಕೆಂದು ಸೇವಕರು ಹೇಳಿದರು. ಆಗ 'ಹಜರತಶಾಹರು ಆ ಬೆಳ್ಳಿಯ ಕಲ್ಯಾಣಪ್ರದ ಡಬ್ಬಿಯನ್ನು ಕೈಯಲ್ಲಿ ತೆಗೆದುಕೊಂಡು ಒಂದು ಗಳಿಗೆ ಪರ್ಯಂತ ನಮಾಜ ಓದಿದರು. ಮತ್ತು ದೀಪಗಳನ್ನು ಹಚ್ಚಿದರು. ಸುತ್ತಲೂ ಸುಮಾರು ೫೦ ಜನರಿದ್ದರು.

ಹಜರತ ಮೌಲಾನಾ-ಹಬೀಬುಲ್ಲಾಹರು ಈ ಕುರಿತು ಹೇಳುತ್ತಾ 'ನಾನೂ ಆ ಮಂಡಳಿಯಲ್ಲಿ ಹಾಜರಿದ್ದೆನು. ಆಗ ಹಜರತಶಾಹರು ನನ್ನನ್ನು ಹತ್ತಿರ ಕರೆದು ನನಗೆ ಆಜ್ಞೆ ಮಾಡಿದರು. ಪೈಗಂಬರರ ಕೇಶಗಳ ಮೇಲೆ ಪೂರ್ತಿ ದೃಷ್ಟಿಯನ್ನಿಡಿರಿ. ಎಂದು ಹೇಳಿದರು. ನಾನು ನೋಡಿದೆ ಒಮ್ಮಿಂದೊಮ್ಮೆ ಪೈಗಂಬರರ ಕೇಶಗಳಿದ್ದ ಡಬ್ಬಿಗೆ ಛಿದ್ರ ಬಿದ್ದಿತು. ಆ ಛಿದ್ರದಿಂದ ಪವಿತ್ರ ಕೇಶವು, ದೊಡ್ಡದೂ ಅಲ್ಲ ಸಣ್ಣದೂ ಅಲ್ಲ. ಅಷ್ಟು ಕಪ್ಪೂ ಇಲ್ಲ, ಅಷ್ಟೊಂದು ಬೆಳ್ಳಗೂ ಅಲ್ಲ ಬಟ್ಟೆನಷ್ಟು ಉದ್ದದ ಆ ಕೇಶವು ಛಿದ್ರದಿಂದ ತಂತಾನೆ ಹೊರಬಂದು ಛಿದ್ರದಲ್ಲಿಯೇ ಎದ್ದು ನಿಂತಿತು. ಕೇಶ ಡಬ್ಬಿಯು ಊದಬತ್ತಿಯ ಗಿಡದಂತೆ ಕಾಣುತ್ತಿತ್ತು. ಡಬ್ಬಿಯ ಛಿದ್ರಗಳೂ ಕಾಣಿಸುತ್ತಿದ್ದುವು. ಒಂದು ಗಳಿಗೆಯ ನಂತರ, ಆ ಪವಿತ್ರಕೇಶವು ತುಸು-ತುಸುವೆ ತನ್ನ ಸ್ಥಳದಲ್ಲಿ ಒಳಗೆ ಹೋಗಹತ್ತಿತ್ತು. ಅನಂತರ ನಾನು ನೋಡ ನೋಡುತ್ತಿದ್ದಂತೆ ಆ ಡಬ್ಬಿಯ ಛಿದ್ರಗಳೂ ಕಾಣದಂತಾದುವು. ಹಜರತಶಾಹರು ಪೈಗಂಬರರ ಕೇಶಗಳನ್ನು ಈ ರೀತಿಯಾಗಿ ಕಂಡರು.

*೬೯. ಇಬ್ರಾಹಿಮ ಆದಿಲಶಹನು ಜಗದ್ಗುರು ಎಂಬ ಹೆಸರಿನಿಂದ ಪ್ರಸಿದ್ಧನಾದದ್ದು :*

ಇಬ್ರಾಹಿಮ ಆದಿಲಶಹನು ಜಗದ್ಗುರು ಎಂಬ ಹೆಸರಿನಿಂದ ಎಲ್ಲರ ಬಾಯಲ್ಲೂ ಪ್ರಸಿದ್ಧನಾಗಿದ್ದನು. ಆದರ ಕಾರಣವೆಂದರೆ ಗುರು ಎಂಬ ಶಬ್ದವು ದಕ್ಷಿಣದ ಜನರಲ್ಲಿಯೆ ಹುಟ್ಟಿದ್ದಾಗಿದೆ. ಎಲ್ಲ ಜನರು ಆ ಸುಲಕ್ಷಣ ಬಾದಶಹನ ಲಕ್ಷಣದಮೇಲೆ ಜೀವದಿಂದ ಮತ್ತು ಮನಃಪೂರ್ವಕವಾಗಿ ಪ್ರಸನ್ನರಾಗಿ ಸಂತೋಷ ಪಡುತ್ತಿದ್ದರು. ಆದ್ದರಿಂದ ಎಲ್ಲರೂ ಇಬ್ರಾಹೀಮ ಆದಿಲಶಹ ಬಾದಶಹನ ಹೆಸರನ್ನು ಜಗದ್ಗುರು ಎಂದು ಇಟ್ಟಿದ್ದರು. ಯಾಕೆಂದರೆ ಬಾದಶಹನ ಹೆಸರು 'ಶಾಹೆ ಜಹಾನ' ಎಂಬುದಾಗಿತ್ತು. ಶಾಹೆ ಜಹಾನ ಎಂದರೆ, ಜಗದ ಧಣಿ. ಈ ಜಗತ್ತಿನಲ್ಲಿ ದಕ್ಷಿಣದ ಎಲ್ಲ ಜನರೂ ಬಾದಶಹನ ಶಿಷ್ಯತ್ವವನ್ನು ವಹಿಸಿದ್ದಾರೆ. ಆದ್ದರಿಂದ ಈ ಬಾದಶಹನು ಎಲ್ಲರ ಗುರುವಾದನು. ಗುರುವಿಗೆ ಪರ್ಶಿಯನ್‌ದಲ್ಲಿ ಪೀರ ಹಾಗು ವಸ್ತಾದ ಎಂದು ಕರೆಯುತ್ತಾರೆ. ಶಾಹ ಜಹಾನ ಈ ಹೆಸರಿನ ಅರ್ಥದ ಅನುಸಾರವಾಗಿ ಎಲ್ಲ ಜಗತ್ತಿನ ಧಣಿ ಎಂದು ಅರ್ಥ ಸಿದ್ಧವಾಯಿತು. ಗಾಯನದ ವಿದ್ಯೆಯಲ್ಲಿ ಎಲ್ಲ ವಸ್ತಾದರ ವಸ್ತಾದನು. ಮತ್ತು ಎಲ್ಲ ಜನರು ಈ ಬಾದಶಹನ ಶಿಷ್ಯಮಂಡಳಿ. ಆದ್ದರಿಂದ ಎಲ್ಲ ಜಗತ್ತಿಗೆ ನಮ್ಮಗುರು, ಬಾದಶಹನಾದ್ದರಿಂದ ಬಾದಶಹನ ಹೆಸರನ್ನು ಜಗದ್ಗುರು ಎಂದು ಇಡಲಾಯಿತು. ಮಾಜಿ ಇಬ್ರಾಹೀಮ ಎಂದರೆ ಮೊದಲನೆಯ ಇಬ್ರಾಹೀಮ ಆದಿಲಶಹನು ಆಗಿ ಹೋಗಿದ್ದನು. ಆತನ ಹಾಗೂ ಈ ಬಾದಶಹನ ಹೆಸರು ಒಂದೇ ಆಗಿದೆ. ಆದರೆ ಮೊದಲ ಇಬ್ರಾಹಿಮ ಆದಿಲಶಹನ ಹೆಸರಿಗಿಂತ ಈ ಬಾದಶಹನ ಹೆಸರಿನಲ್ಲಿ ಜಗದ್ಗುರು ಎಂಬ ಉಪಾಧಿಯು ಈ ಕಾರಣದಿಂದಲೂ ಪ್ರಸಿದ್ಧಿಯಾಯಿತು.

*೭೦. ಇಬ್ರಾಹೀಮ ಆದಿಲಶಹನು ಮರಣ ಹೊಂದಿದ ವಿಷಯ :*

ಇಬ್ರಾಹೀಮ ಆದಿಲಶಹನಿಗೆ ಹಿಜರಿಸನ್ ಒಂದು ಸಾವಿರದ ಮೂವತ್ತರಲ್ಲಿ (ಕ್ರಿ.ಶ ೧೬೨೦-೨೧) ಭಗೇಂದ್ರ ರೋಗ ಹತ್ತತ್ತು. ವೈದ್ಯ ಜನರು ಆ ರೋಗ ಪರಿಹಾರಾರ್ಥವಾಗಿ ಬಹಳಷ್ಟು ಔಷದೋಪಚಾರಗಳನ್ನು ಮಾಡಿದರು. ಆದರೆ ಎಳ್ಳಷ್ಟು ಗುಣವಾಗಲಿಲ್ಲ. ಅಲ್ಲಾನಿಂದಲೇ ಹುಕುಂ ಬಂದು ಮುಟ್ಟಿತ್ತು. ಅಂದರೆ ಆಯುರ್ದಾಯವು ಮುಗಿದಿತ್ತು. ಆದ್ದರಿಂದ ವೈದ್ಯ ಜನರ ಮತ್ತು ಹಕೀಮ ಜನರ ಉಪಚಾರ ಫಲ ಕೊಟ್ಟಿರಲಿಲ್ಲ. ದಿವಸದಿಂದ ದಿವಸಕ್ಕೆ ಆ ರೋಗವು ಅಧಿಕವಾಗಿಯೆ ಉಲ್ಬಣಗೊಂಡಿತು. ಆ ರೋಗಕ್ಕೆ ಚಂದನವನ್ನು ಲೇಪಿಸಿದರು ಕೂಡ ಬೆಂಕಿಯಂತೆ ಉರಿಯುತ್ತಿತ್ತು. ಆತನ ದೇಹದಲ್ಲಿಯ ಜೀವವು ಯಾವಾಗ ದೇಹವನ್ನು ಬಿಡಬೇಕು ಎಂದು ಇಚ್ಛಿಸಿತೋ, ಆಗ ಔಷಧೋಪಾಯಗಳಿಂದ ಯಾವ ಉಪಾಯಗಳೂ ನಡೆಯುವುದಿಲ್ಲ. ಫರನಾಲಿಬ್ (ಫರ್ನಾಲುಬ್) ಎಂಬ ಒಬ್ಬ ದೊಡ್ಡ ಫಿರಂಗಿ ವೈದ್ಯನಿದ್ದನು. ಮತ್ತು ಆ ಮೊದಲು ಬುಮರಾತ್ ಎಂಬ ದೊಡ್ಡ ವೈದ್ಯನೂ ಆಗಿ ಹೋಗಿದ್ದಾನೆ. ಅವನಂತೆಯೇ ಈ ಕೆಲಸದಲ್ಲಿ ಈತ ಎನ್ನುತ್ತಿದ್ದರು. ಸರಕಾರದ ಸೇವೆಯಲ್ಲಿಯ ನೌಕರನಾಗಿದ್ದನು. ಫಿರಂಗೀ ವೈದ್ಯನು ನಾಲ್ಕೈದು ದಿನ ಬಾದಶಹನಿಗೆ ಔಷಧ ಉಪಚಾರ ಮಾಡುವ ಹೊತ್ತಿಗೆ ರೋಗವು ಮೊದಲಿನಕಿಂತಲೂ ಅಧಿಕವಾಗಿ ಉಲ್ಬಣಗೊಂಡಿತು. ಬಾದಶಹನು ಫರ್ನಾಲಿಬ್ ಫಿರಂಗಿ ವೈದ್ಯನಿಗೆ ಆಜ್ಞೆ ಮಾಡುತ್ತ 'ಇದೆಂಥ ಔಷಧ ಕೊಟ್ಟಿರುವಿ? ಏನು ಉಪಾಯ ಮಾಡಿದಿ, ನಿನ್ನ ಉಪಾಯದಿಂದ ರೋಗವು ಇನ್ನಷ್ಟು ಅಧಿಕವಾಯಿತು' ಎಂದನು. ಅದಕ್ಕೆ ಫಿರಂಗಿ ವೈದ್ಯನು ವಿನಂತಿಸಿಕೊಳ್ಳುತ್ತ, 'ನಾನು ಇಂಥ ರೋಗಕ್ಕೆ ಔಷಧೋಪಾಯ ಮಾಡಿಲ್ಲ. ಅನುಭವವಿಲ್ಲದೆ ಔಷಧ ಕೊಟ್ಟಿರುವೆ. ನನ್ನಿಂದ

ಅನ್ಯಾಯವಾಯಿತು. ನಾನು ತಪ್ಪಿದೆ? ಎಂಬುದಾಗಿ ವಿನಂತಿಸಿಕೊಂಡನು. ಬಾದಶಹನು ಉತ್ತಮ ಸ್ವಭಾವದಾಗಿದ್ದನು. ದೇವರ ಕೃಪೆಯಮೇಲೆ ಭರವಸೆಯನ್ನಿಟ್ಟು ಆಜ್ಞೆ ಮಾಡಿದನು. ಈ ಫಿರಂಗಿ ವೈದ್ಯನು ನನ್ನ ಕೆಲಸವನ್ನು ಮುಗಿಸಿದನು. ಅಂದರೆ 'ನಾನು ಇನ್ನು ಬದುಕುತ್ತೇನೆಂದು ಕಾಣುವುದಿಲ್ಲ. ನಾನು ಸತ್ತನಂತರ ನಿನ್ನನ್ನು ಯಾರೂ ಜೀವಂತ ಉಳಿಸುವುದಿಲ್ಲ. ಬೇಗ ಓಡಿ ಹೋಗು. ಇನ್ನೂ ನನ್ನ ದೇಹದಲ್ಲಿ ಜೀವ ಇದೆ. ನಿನ್ನ ಕಾಲು ಇರುವಷ್ಟು ಕಾಲ ಓಡು ನಿನ್ನ ಮರ್ಯಾದೆಯನ್ನು ಸಂರಕ್ಷಿಸಿಕೊ' ಎಂದನು. ಆ ಫಿರಂಗಿ ವೈದ್ಯನು ಬಾದಶಹನ ಆಜ್ಞೆಯಂತೆ ಓಡಿ ಹೋಗಲಿಲ್ಲ. ನಗರದಲ್ಲಿಯೇ ಇದ್ದನು. ಬಾದಶಹನು ಸತ್ತನಂತರ ಖವಾಸಖಾನನು ಆ ಫಿರಂಗಿ ವೈದ್ಯನ ಮೂಗು ಹಾಗೂ ಮೇಲಿನ ತುಟಿಯನ್ನು ಕತ್ತರಿಸಿ ಶಿಕ್ಷೆ ಕೊಟ್ಟನು. ಆಗ ಘರ್ನಾಲುಬನು ತನ್ನ ಮನೆಗೆ ಬಂದು ತನ್ನ ನೌಕರನ ಮೂಗು ಮತ್ತ ತುಟಿಯನ್ನು ಕತ್ತರಿಸಿ ತನ್ನ ಕತ್ತರಿಸಿದ ಮೂಗಿನ ಸ್ಥಳದಲ್ಲಿ ಮೂಗನ್ನು ಮತ್ತು ಕತ್ತರಿಸಿದ ತುಟಿಯ ಸ್ಥಳದಲ್ಲಿ ಆ ತುಟಿಯನ್ನು ಜೋಡಿಸಿ ಹೊಲಿದು ಔಷಧೋಪಚಾರವನ್ನು ಮಾಡಿಕೊಂಡನು. ಆಗ ಮತ್ತೆ ಮೊದಲಿನಂತೆಯೇ ಆದನು. ಬಹಳ ದಿನ ವಿಜಾಪುರ ನಗರದಲ್ಲಿಯೇ ಇದ್ದು ಎಲ್ಲರಿಗೂ ಔಷಧೋಪಚಾರ ಮಾಡುತ್ತಿದ್ದನು. ಔಷಧ ಉಪಾಯ ಮಾಡುವಲ್ಲಿ ಅದ್ವಿತೀಯ ವೈದ್ಯನಾಗಿದ್ದನು.

### *೭೧. ಇಬ್ರಾಹೀಮ ಆದಿಲಶಹನು ಸತ್ತನಂತರ ತನ್ನ ಹಿಂದೆ ಆತನ ಮಗ ಸುಲ್ತಾನ ಮಹಮ್ಮದನನ್ನು ಸಿಂಹಾಸನದ ಮೇಲೆ ಕೂಡಿಸಬೇಕೆಂದು ಅಂತ್ಯಕಾಲದಲ್ಲಿ ಬೋಧಿಸಿದ ಪ್ರಕರಣ :*

ಇಬ್ರಾಹೀಮ ಆದಿಲಶಹನಿಗೆ ನಾಲ್ಕು ಜನ ಗಂಡು ಮಕ್ಕಳು ದೊಡ್ಡವರಾಗಿದ್ದರು. ಮೊದಲನೆಯ ಮಗ ದರವೇಶ ಬಾದಶಾಹ ಎಂಬುದಾಗಿ ತರುಣ ಮಗನಿದ್ದನು. ಎರಡನೆಯವನು, ಸುಲ್ತಾನ ಸುಲೇಮಾನ ಮತ್ತು ಅವರ ತಾಯಿಯ ಹೆಸರು ಕಮಾಲ ಖಾತೂನ ಎಂಬುದಾಗಿತ್ತು. ಮೂರನೆಯ ಮಗನು ಸುಲ್ತಾನ ಮಹಮ್ಮದ ಎಂದು ಹೆಸರು. ಆತನು ಬಾದಶಾಹಿ ಬಂಗಾರದ ಮುಕಟುದೊಂದಿಗೆ ಜನ್ಮ ತಾಳಿದ್ದನು. ಇನ್ನೊಬ್ಬ ಮಗ ಎಲ್ಲರಕ್ಕಿಂತ ಸಣ್ಣವನು. ಆತನ ತಾಯಿಯ ಹೆಸರು ಸುಂದರ ಮಹಾಲ ಎಂಬುದಾಗಿತ್ತು. ನಾಲ್ಕೂ ಮಕ್ಕಳು ಬಹಳ ಯೋಗ್ಯರಾಗಿದ್ದರು. ಯೆಖಲಾಸಖಾನ ಹಬಶೀ ಎಂಬುವನು ಜೋಹಾರಿಖಾನ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಮತ್ತು ಖದೀಮ ಪಂಥದ ಪೂರ್ಣ ವಿಶ್ವಾಸಿಕ, ಸಂಭಾವಿತ ಮತ್ತು ಶೂರನಾಗಿದ್ದನು. ಬಹಳ ದಿನ ಆತನು ವಜೀರನಾಗಿದ್ದನು. ಸರಕಾರದ ನೌಕರಿಯ ವಿಷಯದಲ್ಲಿ ಪೂರ್ಣ ಭರವಸೆಯ ಪ್ರಮಾಣಿಕ ವ್ಯಕ್ತಿಯಾಗಿದ್ದನು. ಪ್ರತಿಯೊಂದು ಕೆಲಸದಲ್ಲೂ ತನ್ನ ಧಣಿಯ ಅನುಮತಿಯನ್ನು ಪಡೆಯದ ಹೊರತು ಯಾವ ಕೆಲಸವನ್ನು ಮಾಡುತ್ತಿರಲಿಲ್ಲ. ಶಹಾನವಾಜಖಾನನೆಂದು ಬಿರುದು ಪಡೆದ ಜ್ಯಾನುಲ್‌ಮುಲ್ಕನು ಮುಲಕೀ ಕೆಲಸದ ಉನ್ನತ ಅಧಿಕಾರಿಯಾಗಿದ್ದನು. ಸಾಕಷ್ಟು ಸಂಪತ್ತನ್ನು ಸಂಗ್ರಹಿಸಿದ್ದನು. ನವಾಬ ಅಮೀನುಲ್‌ಮುಲ್ಕ ಆಕಾ ರಜಾ ಶಿರಾಜಿಗೆ ಬಾದಶಾಹ ನವಾಬಖಾನ ಎನ್ನುತ್ತಿದ್ದರು. ಮಾಲೀ ಮತ್ತು ಮುಲಕೀ ಕೆಲಸಗಳೊಂದಿಗೆ ಖಾಸಾ ಪಾಗೆಯ ಕೆಲಸವನ್ನು ಅವನಿಗೆ ವಹಿಸಲಾಗಿತ್ತು. ಮತ್ತೆಲ್ಲ ಬೇರೆ ಕಾರಭಾರಿ ಮಂಡಳಿ ಹಾಗೂ ಕಾಮದಾರರು, ಬಹಾಮನಿ ಜನರು ಅವರೆಲ್ಲರೂ ಇಬ್ರಾಹಿಮ ಆದಿಲಶಹನ ಮಗ ದರವೇಶನ ಪಕ್ಷಪಾತಿಗಳಾಗಿದ್ದರು. ಅವನನ್ನೆ ಸಿಂಹಾಸನದ ಮೇಲೇ ಕುಳ್ಳಿರಿಸಬೇಕೆಂದು ಇಚ್ಛಿಸುತ್ತಿದ್ದರು. ಇಬ್ರಾಹಿಮ ಆದಿಲಶಹನು ದರವೇಶನನ್ನು ಆತನ ತಾಯಿಯ ಪ್ರಕರಣದಿಂದಾಗಿ ತನ್ನ ಕಣ್ಣಿಗೆ ಹಾಕಬಾರದೆಂದು ಅಪ್ಪಣೆ ಮಾಡಿದ್ದನು. ಬಾದಶಹನು ಅವನನ್ನು ನೋಡುತ್ತಿರಲಿಲ್ಲ. ಪ್ರಾಣಘಾತಕ

ರೋಗದಿಂದ ಬಳಲುತ್ತಿದ್ದಾಗ, ಇನ್ನು ಬದುಕುವುದಿಲ್ಲವೆಂದು ತಿಳಿದಾಗ, ಬಾದಶಹನ ಹತ್ತಿರವೇ ಇರುತ್ತಿದ್ದ ಮುಲ್ಲಾಬಾಬಾನ ಅಳಿಯ ಮಿರಜಾ ಮಹಮ್ಮದ ಅಮೀನಕಾರಿಗೆ ಮಲಿಕಅಂಬರನ ದಾಳಿ ಹಾಗೂ ಮುಲ್ಲಾಬಾಬಾರ ಸಾವು ಬಹಳ ತೊಂದರೆ ಕೊಟ್ಟ ಸಮಯದಲ್ಲಿ, 'ಈ ಎಲ್ಲ ಕೆಲಸಗಳ ಪರಿಣಾಮ ನಿನಗೆ-ನಿನ್ನ ಬುದ್ಧಿಗೆ ಹೇಗೆ ಅನಿಸುತ್ತದೆ?' ಎಂದು ಕೇಳಿದನು. ಆಗ ಆತನು 'ನನಗೆ ಈ ಕಚೇರಿಯಲ್ಲಿ ರಕ್ತದ ವಾಸನೆ ಬರುತ್ತಿದೆ, ಎಂದರೆ ಘಾತುಕ ಚಿಹ್ನೆ ಕಾಣುತ್ತದೆ' ಎಂದನು. ಮುಲ್ಲಾಬಾಬಾನ ಕೊಲೆಯಾದನಂತರ ಬಾದಶಹನು ಮಹಮ್ಮದ ಅಮೀನನ ದೂರದರ್ಶಿತ್ವ ಹಾಗೂ ಬುದ್ಧಿವಂತಿಕೆಯನ್ನು ಗಮನಿಸಿ, ಆತನನ್ನು ತನ್ನ ಏಕಾಂತದಲ್ಲಿ ತೆಗೆದುಕೊಂಡಿದ್ದನು. ಯಾವುದೇ ವಿಷಯದಲ್ಲೂ ಆತನ ವಿಚಾರವನ್ನು ಕೇಳುತ್ತಿದ್ದನು. ಅಂಥ ಮಹಮ್ಮದ ಅಮೀನನನ್ನು ಏಕಾಂತದಲ್ಲಿ ಕರೆದು ಹೀಗೆ ಆಜ್ಞೆ ಮಾಡಿದನು.

'ಯಖಲಾಸಖಾನನು ನಾನು ಆಜ್ಞೆ ಮಾಡಿದಷ್ಟೇ ಕೆಲಸವನ್ನು ಮಾಡುತ್ತಾನೆ. ಆದ್ದರಿಂದ ನಾನು ಸತ್ತ ನಂತರ ನನ್ನ ಆಜ್ಞೆಯಂತೆ ಯಖಲಾಸಖಾನನು ಕೆಲಸ ಮಾಡುವುದಿಲ್ಲವೆಂದು ಕಾಣುತ್ತದೆ. ದಿಯಾತನುಲ್ಮುಲ್ಕ ಮುಂತಾದ ಕಾರಭಾರಿ ಮಂಡಳಿಯು ದರವೇಶ ಶಾಹನ ಪಕ್ಷಪಾತವನ್ನು ಹಿಡಿಯುತ್ತಾರೆ. ದರವೇಶಶಾಹನನ್ನು ಸಿಂಹಾಸನದ ಮೇಲೆ ಕೂಡಿಸಿ ಮಾಲಕನನ್ನಾಗಿ ಮಾಡಿದರೆ, ನನ್ನ ರಾಜ್ಯದಲ್ಲಿ ಕುತುಬಶಾಹನ ಮನೆತನದಂತೆ ಗುರುತಿಲ್ಲದ ಬಹಳೀ ಜನರು ಸೇರುತ್ತಾರೆ. ರಾಫಜೀ ಜನರು ಬಹಳಷ್ಟು ಸೇರಿ ಆ ಜನರ ಧರ್ಮವನ್ನು ಪ್ರಾರಂಭಿಸುತ್ತಾರೆ. ಆದ್ದರಿಂದ ನಾನು ದರವೇಶಶಾಹನನ್ನು ಸಿಂಹಾಸನದ ಮೇಲೆ ಕೂಡಿಸಲು ಒಪ್ಪುವುದಿಲ್ಲ. ಆಗಾಗ ಮತ್ತೆ-ಮತ್ತೆ ನಿಮಗೆ ಬಹಳಷ್ಟು ಸಲ ಹೇಳಿದ್ದೇನೆ. ನನ್ನ ಎಲ್ಲ ಪ್ರಿಯಪುತ್ರರಲ್ಲಿ ಕಿರೀಟ ಮತ್ತು ಸಿಂಹಾಸನಕ್ಕೆ ಶೋಭಾಯಮಾನವಾಗುವವನು ಮತ್ತು ಛತ್ರ-ಚಾಮರಗಳನ್ನು ಹಿಡಿಸಿಕೊಳ್ಳಲು ಯೋಗ್ಯನಾದವನು ಸುಲ್ತಾನ ಮಹಮ್ಮದನು. ಆದ್ದರಿಂದ ನೀವು ನಾನು ಸತ್ತ ನಂತರ ಸ್ವಾಮಿಕಾರ್ಯಾರ್ಥವಾಗಿ ಈ ಸೇವೆಯಲ್ಲಿ ಕಟಿಬದ್ಧರಾಗಿ, ಸುಲ್ತಾನ ಮಹಮ್ಮದನನ್ನು ಸಿಂಹಾಸನದ ಮೇಲೆ ಕೂಡಿಸಿರಿ. ರಾಜ್ಯದ ಕಲ್ಯಾಣವನ್ನು ಇಚ್ಛಿಸುವ ನಡತೆಯಂತೆ ಮತ್ತು ಸ್ವಾಮಿಕಾರ್ಯದಲ್ಲಿ ಪ್ರಾಣಾರ್ಪಣೆ ಮಾಡುವ ರೀತಿಯಲ್ಲಿ ಆತನ ಆಜ್ಞೆಯಂತೆ ನಡೆದುಕೊಳ್ಳುವಲ್ಲಿ ಕಿಂಚಿತ್ತಾದರೂ ಅಂತರ ಮಾಡಬೇಡಿರಿ. ನಿನ್ನ ದೇಹದಲ್ಲಿ ಜೀವ ಇರುವ ಪರ್ಯಂತ, ಆತನ ಆಜ್ಞೆಯ ಹೊರತು ತಲೆ ಎತ್ತಬೇಡಿರಿ ಅರ್ಥಾತ್ ಜೀವ ಇರುವವರೆಗೂ ಆತನ ಆಜ್ಞೆಯನ್ನು ಮುರಿಯಬೇಡ? ಯಾಕೆಂದರೆ ನಿನಗೆ ಈ ಕೆಲಸದ ಮುಖ್ಯಸ್ಥನನ್ನಾಗಿ ನಾನು ಮಾಡುತ್ತಿರುವೆ.

ಆಗ ಮಿರಜಾ ಮಹಮದ ಅಮೀನನು ಬಾದಶಹನ ಆಜ್ಞೆಯನ್ನು ಶಿರಸಾವಹಿಸಿ ಒಪ್ಪಿದನು. ಪ್ರತಿಜ್ಞೆ ಮಾಡಿದನು. ತನ್ನ ಪ್ರತಿಜ್ಞೆಯ ಸರಪಳಿಯನ್ನು ತನ್ನ ಜೀವದ ಕಂಠದಲ್ಲಿ ಧರಿಸಿ, ಪ್ರಾಣ ಹೋದರೂ ಸಹಿತ ಬಾದಶಹನ ಆಜ್ಞೆಯನ್ನು ನಡೆಯಿಸುವಲ್ಲಿ ತಪ್ಪುವುದಿಲ್ಲ ಎಂದು ನಿರ್ಧರಿಸಿ, ಕೆಲಸವನ್ನು ಪ್ರಾರಂಭಿಸಿದನು. ಜೊತೆಗೆ 'ಒಬ್ಬ ಯೋಗ್ಯ ಸೇವಕನನ್ನು ನನ್ನ ಕೈಕೆಳಗೆ ಕೊಡಿರಿ' ಎಂದು ವಿನಂತಿಯನ್ನು ಮಾಡಿಕೊಂಡನು. ಅದಕ್ಕೆ ಬಾದಶಹನು 'ನಿನಗೆ ಒಪ್ಪಿದ ಸೇವಕನನ್ನು ಹೇಳು ಆತನನ್ನೆ ನಿನ್ನ ಕೈಕೆಳಗೆ ನಿಯಮಿಸುತ್ತೇನೆ' ಎಂದನು. ಆಗ ಮಿರಜಾ ಅಮೀನನು ವಿನಂತಿ ಮಾಡಿಕೊಳ್ಳುತ್ತ 'ದೌಲತ ಖಾನನು ರಾಜ್ಯದ ಎಲ್ಲ ಕೆಲಸಗಳಲ್ಲೂ ವ್ಯವಸ್ಥೆ ಮಾಡುವಲ್ಲಿ ಬುದ್ಧಿವಂತನಾಗಿದ್ದಾನೆ. ಈ ವಿಷಯದಲ್ಲಿ ರಾಜಧಾನಿಯ ಎಲ್ಲ ಕೆಲಸಗಳನ್ನು ವ್ಯವಸ್ಥೆ ಮಾಡುವ ಕೆಲಸಕ್ಕೆ ಯೋಗ್ಯನಾಗಿದ್ದಾನೆ' ಎಂದಾಗ ಬಾದಶಹನು 'ನೀನು

ಹೇಳಿದ್ದು ನಿಜವಿದೆ. ಆತ ಹಾಗೆಯೇ ಇದ್ದಾನೆ. ಆದರೆ ನಾನು ಹೇಳಿದ್ದನ್ನು ಪಕ್ಕಾ ಸ್ಮರಣೆಯಲ್ಲಿಡು - ಅದೆಂದರೆ, ದೌಲತಖಾನನು ಬಹಳ ಕೃತಘ್ನನಿದ್ದಾನೆ. ನಿನ್ನೊಂದಿಗೆ ಪ್ರಾಮಾಣಿಕತೆಯಿಂದ ಇದ್ದು ಎಂದೂ ಉಪಯೋಗಕ್ಕೆ ಬೀಳುವವನಲ್ಲ, ಈ ನನ್ನ ಮಾತು ಮುಂದೆ ನಿನಗೆ ನೆನಪಾಗುತ್ತದೆ' ಎಂದನು.

### ೭೨. *ದೌಲತಖಾನನ ವಿಷಯದಲ್ಲಿ ಬಾದಶಹನು ಬುದ್ಧಿಮಾರ್ಗ ಹೇಳಿದ ಪ್ರಕರಣ :*

ಬಾದಶಹನು ಹೀಗೆ ಆಜ್ಞೆ ಮಾಡುವ ಕಾರಣವೆಂದರೆ, ದೌಲತಖಾನನು ಹಾಗೂ ಮುಬಾರಕರು ಇಬ್ಬರೂ ಚಾಂದಖಾನನ ಸೇವಕರಾಗಿದ್ದರು. ಚಾಂದಖಾನನು ಇಬ್ರಾಹಿಮ ಆದಿಲಶಹನ ಶಿಷ್ಯರುಗಳಲ್ಲಿಯ ಒಬ್ಬ ಶಿಷ್ಯನಾಗಿದ್ದನು. ಕೆಲವು ಹುಜರೆ- ಮಂಡಳಿಯಲ್ಲಿ ದೌಲತಖಾನನು ಮರಾಠಿ ಜಾತಿಯ ನಿಂಬಾಳಕರ ಮಂಡಳಿಗಿಂತ ಜಾಣ ನೌಕರನಾಗಿದ್ದನು. ಬಾದಶಹನು ದೌಲತಖಾನನನ್ನು ಕೃಪಾ ದೃಷ್ಟಿಯಿಂದಲೇ ನೋಡುತ್ತಿದ್ದನು. ಚಾಂದಖಾನನು ಈ ಇಬ್ಬರನ್ನೂ ಅಂದರೆ ದೌಲತಖಾನ ಮತ್ತು ಮುಬಾರಕನನ್ನು ಬಾದಶಹನಿಗೆ ಕಾಣಿಕೆಯಾಗಿ 'ನಜರ' ಎಂದು ಒಪ್ಪಿಸಿದನು. ಒಂದು ದಿನ ಇಬ್ರಾಹಿಮ ಆದಿಲಶಹನು ಪರೀಕ್ಷೆ ಮಾಡಬೇಕೆಂದು ದೌಲತಖಾನನಿಗೆ ಆಜ್ಞೆ ಮಾಡುತ್ತಾ 'ಚಾಂದಖಾನನ ಮುಖದ ಮೇಲೆ ಉಗುಳು' ಎಂದನು. ದೌಲತಖಾನನು ಕಿಂಚಿತ್ತೂ ಅನುಮಾನಿಸದೆ, ಚಾಂದಖಾನನ ಮುಖದ ಮೇಲೆ ಉಗುಳಿದನು. ಈ ಕೆಲಸವು ಬಾದಶಹನಿಗೆ ಸರಿ ಕಾಣಲಿಲ್ಲ. ಈತ ಕೃತಘ್ನನಿದ್ದಾನೆ ಎಂದು ನಿಶ್ಚಯಿಸಿದನು. ಆ ಸಮಯದಲ್ಲಿ ಬಾದಶಹನ ಸವಾರಿಯು ನವರಸಪುರದಿಂದ ವಿಜಾಪುರಕ್ಕೆ ಬಂದಿತ್ತು. ಆ ದಿನದ ತಾರೀಖು ಒಂಭತ್ತು ತಿಂಗಳು ಮೊಹರಮ್ ಹಿಜರಿ ಸನ್ ೧೦೩೪ (೧೨, ಅಕ್ಟೋಬರ ೧೬೨೪) ಆಗಿತ್ತು. ಅದೇ ದಿನ ದೌಲತಯಾರ ನಾಗಿದ್ದವನು ದೌಲತಖಾನ ಎಂಬ ಪದವಿಯನ್ನು ಪಡೆದು ಬಾದಶಹನಿಂದ ವಿಜಾಪುರದ ಹವಾಲದಾರಿಯನ್ನು ಪಡೆದನು.

ಕೆಲವು ದಿನಗಳ ಅನಂತರ ಒಂದು ದಿನ ಬಾದಶಹನ ಸವಾರಿಯು ಬೇಟೆಗೆ ಹೋಗಿತ್ತು, ರಾತ್ರಿ ಸಮಯದಲ್ಲಿ ತಿರುಗಿತು. ಬೇಟೆಯ ಸೈನ್ಯ ಬಾಗಿಲ ಹತ್ತಿರ ಬಂದು ಮುಟ್ಟಿದಾಗ ದೌಲತಖಾನ ಹವಾಲದಾರನು, 'ಬಾದಶಹರ ಗುರುತಾದ ಜರೀಪಟಕ್ತಾ ಇತ್ಯಾದಿಗಳನ್ನು ನಾನು ನನ್ನ ಕಣ್ಣಿಂದ ನೋಡುವವರೆಗೆ ಬಾಗಿಲು ತೆರೆಯುವುದಿಲ್ಲ' ಎಂದನು. ಬಾದಶಹನು ಸಮೀಪದಲ್ಲಿ ಬಂದು ಮುಟ್ಟಿದ ಮೇಲೆ ದೌಲತಖಾನನು ಬಾದಶಹನನ್ನು ತನ್ನ ಕಣ್ಣಿನಿಂದ ನೋಡಿಯೆ ಬಾಗಿಲನ್ನು ತೆರೆದನು. ಬಾದಶಹನಿಗೆ ಆತನ ಈ ಕೆಲಸವೂ ಸರಿ ಎನಿಸಲಿಲ್ಲ. ಆದ್ದರಿಂದ ಹವಾಲದಾರಿ ಕೆಲಸದಿಂದ ತೆಗೆದು ಬಂಧಿಸಿ ಸೆರೆಮನೆಯಲ್ಲಿಟ್ಟಿದ್ದನು. ಈ ಮಧ್ಯದಲ್ಲಿಯೇ ಮಿರಜಾ ಅಮೀನನು ದೌಲತಖಾನನ ಕುರಿತು ವಿನಂತಿಸಿಕೊಂಡಿದ್ದನು. ಮತ್ತು ಸೆರೆಮನೆಯಿಂದ ಬಿಡಿಸಿಕೊಂಡು ಅವನನ್ನು ಮಿರಜಾ ಅಮೀನನ ಕೈಗೆ ಒಪ್ಪಿಸಿದನು. ದೌಲತಖಾನನಿಗೆ ಆಜ್ಞೆ ಮಾಡುತ್ತಾ 'ಮೀರಜಾ ಮಹಮದ ಅಮೀನನನ್ನು ನಾನೇ ಎಂದು ತಿಳಿದು ಆತನ ಆಜ್ಞೆಯನ್ನು ಮುರಿದು ನಡೆಯಬೇಡ' ಎಂದು ಹೇಳಿ ಮತ್ತೆ ಹವಾಲದಾರಿಯ ಕೆಲಸದ ಮೇಲೆ ಖಾಯಮಾಗಿ ನಿಯಮಿಸಿದನು. ಅನೇಕ ದಿನಗಳ ಅನಂತರ ತಾರೀಖು ೧೦, ತಿಂಗಳು ಮೊಹರಮ್ ಸನ್ ೧೦೩೭ ರಂದು (೧೧ ಸಪ್ಟಂಬರ ೧೬೨೭) ಇಬ್ರಾಹಿಮನು ಈ ಮೃತ್ಯುಲೋಕವನ್ನು ಪರಿತ್ಯಾಗ ಮಾಡಿ ಪರಲೋಕಕ್ಕೆ ಹೋದನು.[೧] ಜೋಹರಾಪುರ ಎಂಬ ಗ್ರಾಮವನ್ನು ಬಾದಶಹನು ತನಗಾಗಿ

೧. 'ಮುಹಮ್ಮದನಾಮಾ' - ಶಿವಾಜಿ ನಿಬಂಧಾವಲಿ ಭಾಗ-೨ ಪರಿಚ್ಛೇದ-೩ ಪುಟ ೭೯.

ಕಟ್ಟಿಕೊಂಡಿದ್ದನು. ಆ ಗ್ರಾಮದಲ್ಲಿಯೇ ಕಬರಸ್ಥಾನದಲ್ಲಿ ವಿಶ್ರಾಂತಿ ಪಡೆದನು. ಬಾದಶಹನನ್ನು ಅಲ್ಲಿ ದಫನ ಮಾಡಿದರು. ಇಬ್ರಾಹಿಮ ಆದಿಲಶಹನು ಒಟ್ಟು ೫೦ ವರುಷ ರಾಜ್ಯವಾಳಿದನು.

**೭೩. *ಕಾಲಾನುಕ್ರಮಣಿಕೆ :***

ಇಬ್ರಾಹಿಮ ಆದಿಲಶಹನ ಕಾಲಕಿರ್ದಿಯಲ್ಲಿ ಕಟ್ಟಿದ ಕಟ್ಟಡಗಳ ವಿವರ :- ಸಾತಖಣಿ ಮಹಲ ಸನ್ ೯೯೧ (ಕ್ರಿ.ಶ ೧೫೮೩). ದಿಲಖುಶ ಮಹಲನ್ನೂ ಅದೇ ವರುಷ ಕಟ್ಟಿದರು. ಹೈದರೀ ಬುರುಜ-ಈ ಗೋಪುರವು ಎಲ್ಲರ ಹೇಳಿಕೆಯಂತೆ ಎತ್ತರವಾಗಿದ್ದು ಉಪರೀ ಬುರುಜ ಎಂದೇ ಪ್ರಸಿದ್ಧವಾಗಿದೆ. ಈ ಬುರುಜನ್ನು ಸನ್ ೯೯೨ (ಕ್ರಿ.ಶ ೧೫೮೪) ಕಟ್ಟಿತು. ಮಸಜಿದ ಮಲಿಕಾ ಜಹಾನ್ ಸನ್ ೯೯೬ (ಕ್ರಿ.ಶ. ೧೫೮೭-೮೮)ರಲ್ಲಿ ಕಟ್ಟಿತು. ಆನಂದ ಮಹಲನ್ನು ಸನ್ ೯೯೮ರಲ್ಲಿ (ಕ್ರಿ.ಶ. ೧೫೮೯-೯೦) ಕಟ್ಟಲಾಯಿತು. ನಗರ ನವರಸಪುರವನ್ನು ಕಟ್ಟಲು ಪ್ರಾರಂಭಿಸಿದ್ದು ಸನ್ ೧೦೦೮ (ಕ್ರಿ.ಶ. ೧೫೯೯-೧೬೦೦), ಐದಾರು ವರುಷಗಳಲ್ಲಿ ಪೂರ್ತಿಯಾಯಿತು. ನವರಸ ಮಹಲ ಸನ್ ೧೦೦೯ (ಕ್ರಿ.ಶ. ೧೬೦೦-೧)ರಲ್ಲಿ ಸಿದ್ಧವಾಯಿತು. ಭಾತವಾಡಿಯ ಯುದ್ಧ-ಘನ ಘೋರ ಕಾಳಗವು ಸನ್ ೧೦೩೪ರಲ್ಲಿ (ಕ್ರಿ.ಶ. ೧೬೨೪-೨೫) ರಲ್ಲಿ ನಡೆಯಿತು. ಅದೇ ವರುಷ ನವರಸಪುರ ನಗರವು ಪರಾಕ್ರಮಣದಿಂದ ನಾಶವಾಯಿತು.

**೭೪. *ಸೈನ್ಯದ ಸಂಖ್ಯೆ :***

ಸವಾರರು ೧೨೦೦೦೦, ಸಿಬ್ಬಂದಿ ೨೪೦೦೦೦, ಆನೆಗಳು ೯೫೫. ಗವಯಿ ಜನರು, ವಾದ್ಯಗಾರರು, ವಿದ್ಯಾಭ್ಯಾಸ ಮಾಡುವವರು, ಮತ್ತು ವಸ್ತಾದ ಮಂಡಳಿ ಎಲ್ಲ ಸೇರಿ ಒಟ್ಟು ೧೪೪೫. ಬಾದಶಹನ ಶಿಷ್ಯ (ಶಾಗೀರ್ದ) ಮಂಡಳಿ ಮೂರು ಸಾವಿರ.

ಬುಸ್ತಾನ : ಆರು

# ಮಹಮ್ಮದ ಆದಿಲಶಾಹ

### ೧. *ಸುಲ್ತಾನ ಮಹಮ್ಮದ ಬಿನ್ ಇಬ್ರಾಹಿಮ ಆದಿಲಶಾಹ :*

ಇಬ್ರಾಹೀಮ ಆದಿಲಶಹನು ಮರಣ ಹೊಂದಿದನು.[1] ಆಗ ಮಿರಜಾ ಮಹಮ್ಮದ ಅಮೀನ ಮತ್ತು ದೌಲತಖಾನರು ಬಾದಶಹನು ಮರಣ ಹೊಂದಿದ ವರ್ತಮಾನವನ್ನು ಗುಪ್ತವಾಗಿಟ್ಟು ಬಾಗಿಲನ್ನು ಮುಚ್ಚಿದರು. ಹೋಗ ಬರುವವರಿಗಾಗಿ ಕಿರು ಬಾಗಿಲನ್ನು ತೆರೆದಿಟ್ಟರು. ಯೆಖಲಾಸಖಾನ, ದಿಯಾನತುಲ್ಮುಲ್ಕ, ಆಕಾ ರಾಜ, ಬಾಹಮನಿ ಮಂಡಳಿ ಮತ್ತು ರಾಜ್ಯದ ಮುತ್ಸದ್ಧಿ ಮಂಡಳಿಗಳನ್ನು ಕರೆಸಿ 'ಒಬ್ಬೊಬ್ಬರನ್ನಾಗಿ ದಿವಾಣಖಾನೆಯಲ್ಲಿ ಕೂಡಿಸಿದರು. ಅರಮನೆಯ ಖಾಜಗಳಿಂದ ಬಾದಶಹನ ನಿರೋಪವನ್ನು ಯೆಖಲಾಸಖಾನನಿಗೆ ಹೇಳಿ ಕಳಿಸಿದರು. ಬಾದಶಹನು ಹೀಗೆ ಆಜ್ಞೆ ಮಾಡಿದ್ದಾನೆ. 'ನಾನು ಸತ್ತ ನಂತರ ಸುಲ್ತಾನ ಮಹಮ್ಮದನನ್ನು ಸಿಂಹಾಸನದ ಮೇಲೆ ಕೂಡಿಸಬೇಕು. ಯಾಕೆಂದರೆ, ಬಾದಶಹನ ಸಿಂಹಾಸನಕ್ಕೆ ಮತ್ತು ಮುಕುಟಕ್ಕೆ ಆತನೇ ಶೋಭಾಯಮಾನವಾಗುತ್ತಾನೆ' ಎಂದು ಕಳಿಸಿದ ನಿರೋಪವನ್ನು ಕೇಳಿದ ತಕ್ಷಣ, ದಿಯಾನತುಲ್ಮುಲ್ಕನು ತಲೆ ಎತ್ತಿ ಮಾತನಾಡಿದನು. "ಇದು ಕಠಿಣದ ಕೆಲಸ, ಹಿರಿಯ ಮಗನು ಇರುತ್ತಿದ್ದಾಗಲೂ ಕಿರಿಯ ಮಗನನ್ನು ಮುಂದೆ ಮಾಡುತ್ತಿದ್ದಾರೆ. ಹೀಗೆ ಮಾಡುವುದು ಪೂರ್ತಿಯಾಗಿ ದಕ್ಷಿಣದ ಜನರಹಾಗೆ ಆಗುತ್ತದೆ. ಕಾರಣವೇನೆಂದರೆ, ತಲೆಯನ್ನು ಬಿಟ್ಟು ಮುಂಡಕ್ಕೆ ಮುಂಡಾಸನ್ನು ಹಾಕಿದಂತೆ ಕಾಣುತ್ತದೆ. ಹೀಗೆ ಮಾಡುವುದು ವಿಸರ್ಯಾಸವೆನಿಸುತ್ತದೆ".

ದೌಲತಾಖಾನನು ಇದನ್ನು ಕೇಳಿದ ತಕ್ಷಣ ದಿಯಾನತುಲ್ಮುಲ್ಕನ ಮೇಲೆ ಸಿಟ್ಟಿಗೆ ಬಂದು 'ನಾವು ನಿಮ್ಮನ್ನು ವಿಚಾರಿಸುತ್ತಿಲ್ಲ. ನೀವು ಸುಮ್ಮನೆ ನಿಮ್ಮ ಸ್ಥಳದಲ್ಲಿ ಕುಳಿತುಕೊಳ್ಳಿರಿ' ಎಂದನು. ಅದನ್ನು ಕೇಳಿದ ದಿಯಾನತುಲ್ಮುಲ್ಕನು ಸ್ಥಬ್ಧನಾದನು. ಅನಂತರ, ದೌಲತಖಾನನು, ಯೆಖಲಾಸಖಾನನಿಗೆ 'ನೀವು ಹೇಗೆ ಹೇಳುತ್ತೀರಿ?' ಎಂದು ಕೇಳಿದನು. "ಈ ವಿಷಯದಲ್ಲಿ ಬಡೀ ಸಾಹೇಬರ ಸಲಹೆಯನ್ನು ವಿಚಾರಿಸಬೇಕು, ಬಾದಶಹರು ಸತ್ತ ನಂತರ ನಾನು ಕಾರಭಾರ ಮಾಡುವುದಿಲ್ಲ. ರಾಜ್ಯದ ಜಮಾ-ಖರ್ಚಿನ ಕಾಮಕಾಜಗಳನ್ನು ನಾನು ನೋಡುವುದಿಲ್ಲ. ದರವೇಶಶಾಹಾ ಮತ್ತು ಸುಲ್ತಾನ ಮಹಮ್ಮದ ಈ ಇಬ್ಬರೂ ನನ್ನ ಧಣಿಯ ಮಕ್ಕಳು. ತಮ್ಮ ಹಾಗೂ ಬಡೀ ಸಾಹೇಬಾರ ವಿಚಾರಗಳಿಗೆ ಸರಿ ಕಂಡವರನ್ನು ಸಿಂಹಾಸನದ ಮೇಲೆ

---

1. "Ibrahim Adilshah died on Wednesday the 11th Muharam A.H. 1037 (12 Sept 1627) and was buried in Zohrapur. Mahammad Nama - Shivaji Nibandhavalli Vol13. Pt. 3 page 79.

ಕೂಡಿಸಿರಿ" ಎಂದು ಯೆಖಲಾಸಖಾನನು ಹೇಳಿದನು. ಈ ಉತ್ತರವನ್ನು ಕೇಳಿದ ದೌಲತಖಾನನು ಅಲ್ಲಿಂದ ಹೊರಟು ಬಡೀಸಾಹೇಬಾರ ದರಬಾರಿಗೆ ಬಂದು ಅದನ್ನೆ ವಿನಂತಿ ಮಾಡಿಕೊಂಡನು. ಅದಕ್ಕೆ ಉತ್ತರ ಕೊಡುತ್ತ ಬಡೀಸಾಹೇಬಾರು 'ಇಬ್ರಾಹಿಮ ಆದಿಲಶಾಹರು ಯಾವ ಮಗನನ್ನು ಸಿಂಹಾಸನದ ಮೇಲೆ ಕೂಡಿಸಲು ಆಜ್ಞೆ ಮಾಡಿದ್ದಾರೋ ಆತನನ್ನೇ ಸಿಂಹಾಸನದ ಮೇಲೆ ಕುಳ್ಳಿರಿಸಬೇಕು' ಎಂದಳು.

## ೨. ಸುಲ್ತಾನ ಮಹಮ್ಮದನು ಸಿಂಹಾಸನದ ಮೇಲೆ ಕುಳಿತದ್ದು :

ಅನಂತರ ಮಿರಜಾ ಮಹಮ್ಮದ ಅಮೀನ ಮತ್ತು ದೌಲತಖಾನರು ದಿನಾಂಕ ೧೧ ತಿಂಗಳು ಮೊಹರಮ್ ಸನ್ ೧೦೩೭ ರಂದು (೧೨ ಸಪ್ಟಂಬರ ೧೬೨೭) ಎರಡೂವರೆ ಗಳಿಗೆಯ ದಿವಸದ ಅನಂತರ ಬಾದಶಹನ ಮಗ, ಶ್ರೇಷ್ಠ ಹಾಗೂ ಐಶ್ವರ್ಯವಾನನಾದ ಸುಲತಾನ ಮಹಮ್ಮದನನ್ನು ಆತನ ೧೫ನೆಯ ವಯಸ್ಸಿನಲ್ಲಿ[1] ಸಿಂಹಾಸನದ ಮೇಲೆ ಕುಳ್ಳಿರಿಸಿ, ರಾಜ್ಯಕ್ಕೆ ಹಾಗೂ ಮುಸಲ್ಮಾನ ಜನರ ಜಾತಿಗೆ ಶೋಭೆಯನ್ನು ತಂದರು. ಯೆಖಲಾಸಖಾನನಿಗೆ ಮನೆಗೆ ಹೋಗಲು ನಿರೋಪ ಕೊಟ್ಟರು. ದಿಯಾನತುಲ್ಲುಲ್ಕ, ಆಕಾ ರಾಜಾ, ಮತ್ತು ಬಹಮನಿ ಜನರನ್ನು ಒಂದು ಸೆರೆಮನೆಯಲ್ಲಿ ಬಂಧಿಸಿ ಇಬ್ರಾಹಿಮ ಬಾದಶಹನ ಶವಕ್ಕೆ ಸ್ನಾನ ಮಾಡಿಸಿದರು. ಕಫನ (ಶವಕ್ಕೆ ವಸ್ತ್ರವನ್ನು) ಹಾಕಿದರು. ಆ ಶವದೊಂದಿಗೆ ಸಂಪೂರ್ಣ ಕಾರಭಾರಿ ಮಂಡಳಿ ಮತ್ತು ಎಲ್ಲ ಸಣ್ಣ ದೊಡ್ಡವರೊಂದಿಗೆ ಹೋಗಿ ಜೋಹರಾಪುರದ ಸಮಾಧಿಯಲ್ಲಿ, ಮುತ್ತುರತ್ನಗಳಿದೊಡಗೂಡಿದ ಪೆಟ್ಟಿಗೆಯಲ್ಲಿ ಆ ಶವವನ್ನು ಹಾಕಿ ದಫನ ಮಾಡಿದರು. ಅನಂತರ ದರವೇಶಶಾಹನ ಕಣ್ಣಲ್ಲಿ, ಸಲಾಕೆಗಳನ್ನು ತಿರುವಿ ಕುರುಡನನ್ನಾಗಿ ಮಾಡಿದರು. ಸುಲೇಮಾನನ ಉಂಗುರ ಧರಿಸುವ ಬೆರಳನ್ನು ಕತ್ತರಿಸಿದರು. ಮತ್ತೊಬ್ಬ ಎಲ್ಲರಿಗಿಂತ ಕೊನೆಯ ಸಣ್ಣ ಮಗುವಿನ ಬೆರಳನ್ನೂ ಕತ್ತರಿಸಿದರು. ಇದೆಲ್ಲ ಸಂಪೂರ್ಣ ವ್ಯವಸ್ಥೆಯಾದನಂತರ ದಿಯಾನತುಲ್ಲುಲ್ಕ, ಆಕಾ ರಜಾ, ಮತ್ತು ಬಹಮನಿ ಜನರನ್ನು ಸೆರೆಮನೆಯಿಂದ ಬಿಡುಗಡೆ ಮಾಡಿದರು. ಮರುದಿನ ವಜೀರ ಜನರು, ಮಾನಕರಿಗಳು ಮತ್ತು ಕಾರಭಾರಿ ಮಂಡಳಿಯು ಸುದೈವವಾನ ಮತ್ತು ತರುಣ ಸುಲ್ತಾನ ಮಹಮ್ಮದನಿಗೆ ಮುಜುರೆ ಸಲ್ಲಿಸಿದರು. ಬಾದಶಹರಿಗೆ ಶುಭಾಶಯಗಳನ್ನು ಹೇಳಿದರು. ಆಕಾ ರಜಾನಿಗೆ ಮುಲಕೀ ಕೆಲಸದ ಕಾರಭಾರವನ್ನು ಕೊಟ್ಟರು. ದಿಯಾನತುಲ್ಲುಲ್ಕನಿಗೆ ಸರಖೇಲಿಯ ಪದವಿಯನ್ನು ನೀಡಿದರು. ಮಿರಜಾ ಮಹಮ್ಮದ ಅಮೀನನಿಗೆ ಮುಸ್ತಫಾಖಾನ ಎಂಬ ಪದವಿ ಹೆಸರನ್ನು ಕೊಡಲಾಯಿತು. ದೌಲತಖಾನನಿಗೆ ಖವಾಸಖಾನ ಎಂಬ ಪದ ಪ್ರಾಪ್ತವಾಯಿತು.

## ೩. ಬುರ್‍ಹಾಣ ನಿಜಾಮಶಾಹನು ಸೈನ್ಯದೊಂದಿಗೆ ಆದಿಲಶಾಹಿ ರಾಜ್ಯದ ಮೇಲೆ ಏರಿ ಬಂದದ್ದು ಮತ್ತು ಸೋತು ತಿರುಗಿ ಹೋದದ್ದು :

ಸುಲ್ತಾನ ಮಹಮ್ಮದ ಬಾದಶಾಹ ಗಾಜಿ ಸಿಂಹಾಸನದ ಮೇಲೆ ಕುಳಿತ ವರುಷವೇ ನಿಜಾಮಶಾಹನು ಆದಿಲಶಹನ ಪ್ರದೇಶಗಳನ್ನು ತೆಗೆದುಕೊಳ್ಳಲು ಸ್ವತಃ ಸೈನ್ಯವನ್ನು ತೆಗೆದುಕೊಂಡು ಮೊದಲು ಧಾರೂರದ ಕೋಟೆಯನ್ನು ವಶಪಡಿಸಿಕೊಳ್ಳಲು ಸದರೀ ಕೋಟೆಯ ಮೇಲೆ ಏರಿ ಬಂದನು. ಅದು ಗೊತ್ತಾದಂತೆ ಸುಲ್ತಾನ ಮಹಮ್ಮದ ಗಾಜಿಯು ತನ್ನ ಸೈನ್ಯವನ್ನು ಅಮೀರಜನರೊಂದಿಗೆ ಅತ್ತ ಕಳಿಸಿದನು. ಆದಿಲಶಹನ

1. "Muhammad Adilshah was born in Nauraspur in the month of Zilquad on Sunday right of the year A.H. 1022" (Dec-1613) Md.Nama p. 79.




ಮಹಮ್ಮದ್ ಆದಿಲಶಾಹ

ಸೈನ್ಯವು ಶತ್ರುವಿನ ಸೈನ್ಯದ ಹತ್ತಿರ ಹೋಗಿ ಮುಟ್ಟಿದಾಗ ಎರಡೂ ಕಡೆಯ ಸೈನ್ಯಗಳು ಎದುರು ಬದರಾದುವು. ಉಭಯ ಸೈನ್ಯಗಳು ಒಬ್ಬರನ್ನೊಬ್ಬರು ಎದುರಿಸಲು ನಿಂತವು. ಶಸ್ತ್ರಾಗ್ನಿಗಳು ಉರಿದವು. ಒಂದು ದಿನ ಬಹುದೊಡ್ಡ ದಾರುಣ ಯುದ್ಧವಾಯಿತು. ಬೆಳಗಿನಿಂದ ಸಾಯಂಕಾಲದವರೆಗೆ ಒಂದೇರೀತಿಯ ಯುದ್ಧವಾಯಿತು. ಕೊನೆಗೆ ಯಶದ ಮತ್ತು ಜಯದ ಗಾಳಿ ಬಾದಶಾಹ ಗಾಜಿಯ ಧ್ವಜದ ಕಡೆಗೆಯೇ ವಾಲಿತು. ಸುಲ್ತಾನ ಮಹಮ್ಮದ ಬಾದಶಹನು ಜಯಶಾಲಿಯಾದನು. ನಿಜಾಮಶಾಹಿ ಜನರು ರಣಭೂಮಿಯಿಂದ ಮುಖ ತಿರುಗಿಸಿದರು. ಆದಿಲಶಹನ ಕಡೆಯ ಜನರು ವಿಜಯಿಗಳಾಗಿ ಹಿಂತಿರುಗಿ ತಮ್ಮ ಡೇರೆಗಳಿಗೆ ಬಂದು ವಿಶ್ರಾಂತಿ ಪಡೆದರು. ಕೆಲವು ದಿನಗಳ ಅನಂತರ ನಿಜಾಮಶಾಹಿಗಳು ಮತ್ತೆ ಸೈನ್ಯ ಸೇರಿಸಿ ಪುನಃ ಆದಿಲಶಾಹಿ ಸೈನ್ಯದ ಮೇಲೆ ಏರಿ ಬಂದರು ಆದಿಲಶಾಹಿ ಜನರಿಗೆ ಈ ವಿಷಯ ಗೊತ್ತಿರಲಿಲ್ಲ. ಅದರಿಂದಾಗಿ ಆದಿಲಶಹನ ಕಡೆಯ ಸಾದತಖಾನ ಹಾಗೂ ಆತೆಮದಖಾನರನ್ನು ಹಿಡಿದುಕೊಂಡು ಹೋದರು. ನಿಜಾಮಶಹನು ಅವರನ್ನು ಹಿಂಸಿಸದೆ, ಉಭಯತರಿಗೂ ವಸ್ತ್ರಗಳನ್ನು ಕೊಟ್ಟು ತಿರುಗಿ ಹೋಗಲು ಆಜ್ಞೆ ಮಾಡಿದನು. ಆದಿಲಶಾಹಿಯ ಸೈನ್ಯವು ಅಲ್ಲಿಂದ ಹೊರಟು ಕೃಷ್ಣಾ ತೀರಕ್ಕೆ ಬಂದು ಅಲ್ಲಿ ಉಳಿದುಕೊಂಡು ವಿಶ್ರಾಂತಿ ಪಡೆದರು.

*೪. ಎರಡನೆಯ ಸಲ ನಿಜಾಮಶಹನ ಸೈನ್ಯವು ವಿಜಾಪುರದ ಮೇಲೆ ಏರಿ ಬಂದದ್ದು ಮತ್ತು ಪುನಃ ಸೋತು ತಿರುಗಿ ಹೋದದ್ದು :*

ಕೆಲವು ದಿನಗಳ ಅನಂತರ ನಿಜಾಮಶಹನ ಸರದಾರ ಹಮೀದಖಾನನ ಪ್ರೇರಣೆಯಿಂದ, ನಿಜಾಮಶಾಹನು ಪುನಃ ಸೈನ್ಯವನ್ನು ಸಿದ್ಧಪಡಿಸಿಕೊಂಡು, ಆ ಸೈನ್ಯದೊಂದಿಗೆ ಆದಿಲಶಹನ ರಾಜ್ಯದ ಮೇಲೆ ಬಂದನು. ಪೂರ್ಣ ಧೈರ್ಯದಿಂದ ತನ್ನ ಸರಹದ್ದನ್ನು ದಾಟಿ ಮುಂದೆ ಹೆಜ್ಜೆ ಇಟ್ಟು ಆದಿಲಶಹನ ಗಡಿಗಳಲ್ಲಿ ಕಾಲಿಟ್ಟನು. ವಿಜಾಪುರ ನಗರದ ಹತ್ತಿರ ಬಂದು ಮುಟ್ಟಿ ದಂಗೆ ಮಾಡಲು ಪ್ರಾರಂಭಿಸಿದನು. ವಿಜಾಪುರ ಸುತ್ತ ಮುತ್ತಲಿನ ತರಫ-ತರಫಗಳಲ್ಲಿಯೂ, ಊರೂರುಗಳಲ್ಲಿ ದಂಗೆ ಲೂಟಿ ಮಾಡಲು ಪ್ರಾರಂಭಿಸಿದನು. ಆಗ ಆದಿಲಶಹನು ನಿಜಾಮಶಹನನ್ನು ದಂಡಿಸಲು ನವಾಬ ಖಾನಬಾಬಾ ಯೆಖಲಾಸಖಾನ ಹಾಗೂ ಬೇರೆ ಅನೇಕ ಅಮೀರ ಜನರನ್ನು ಖಾಸಖೇಲ ಹಾಗೂ ಯಾತೇಮಾದಖಾನ ಸರನೋಬತರನ್ನು ಜೊತೆ ಮಾಡಿ, ನಿಯಮಿಸಿದನು. ಕದರೀಕಂದೋರಿಯ ಹತ್ತಿರ ಹೋಗಿ ಉಭಯ ಸೈನ್ಯಗಳು ಎದುರಾದವು. ದೊಡ್ಡ ಯುದ್ಧವಾಯಿತು. ನಿಜಾಮಶಾಹನ ಕಡೆಗೆ ಹಮೀದಖಾನನು ಸೇನಾಪತಿಯಾಗಿದ್ದನು. ಆತನಿಗೆ ಧೈರ್ಯ ಸಾಲದಾಯಿತು. ಭಯಭೀತನಾಗಿ ರಣಭೂಮಿಯಿಂದ ಹಮೀದಖಾನನು ಮುಖ ತಿರುವಿದನು. ನಿಜಾಮಶಹನ ಕಡೆಯ ಬೇರೆ ಅಮೀರಜನರು ಧೈರ್ಯಮಾಡಿ ಇನ್ನಷ್ಟು ನಿಂತರು. ಆದರೆ ಕೊನೆಯಲ್ಲಿ ಆತೇಮದಖಾನನ ಶೂರತನದಿಂದ ನಿಜಾಮಶಹನ ಕಡೆಯ ಧೈರ್ಯಹಿಡಿದು ನಿಂತ ಅಮೀರಜನರಲ್ಲೂ ಗಾಬರಿ ಆಯಿತು. ಆಗ ನಿಜಾಮಶಹನ ಕಡೆಯ ಜನರು ಸೋತು ತಮ್ಮ ರಾಜ್ಯಕ್ಕೆ ಹೋದರು. ಆದಿಲಶಹನ ಕಡೆಯ ಜನರು ಪೂರ್ಣ ಮನೋರಥರಾಗಿ ಮತ್ತು ಯಶಸ್ವಿಗಳಾಗಿ ವಿಜಾಪುರಕ್ಕೆ ತಿರುಗಿ ಬಂದರು.

ಅದೇ ಸಮಯದಲ್ಲಿ ಬಂಕಾಪುರದ ಕಾಮದಾರನು ಕೃತಘ್ನನಾಗಿ ಧಣಿಯ ವಿರುದ್ಧ ನಿಂತು ದಂಗೆ ಮಾಡುತ್ತಿದ್ದಾನೆಂಬ ಸುದ್ದಿ ಬಂದಿತು. ಆದಿಲಶಹನು ಅವನನ್ನು ಶಿಕ್ಷಿಸಲು ಮೀರ ಅಂಜೂನನ್ನು ಕಳಿಸಿದನು. ರಜಾ ಅಲಿಯು ಬಂಕಾಪುರದ ಹತ್ತಿರ ಮುಟ್ಟುತ್ತಿದ್ದಂತೆ ಕದಮರಾವನು ಅವನನ್ನು ಎದುರಿಸಲು ಸಿದ್ಧನಾಗಿ

ನಿಂತನು. ಪರಸ್ಪರರಲ್ಲಿ ಮೇಲಿಂದ ಮೇಲೆ ಯುದ್ಧಗಳಾಹತ್ತಿದುವು. ಅದು ಒಂದು ವರುಷದವರೆಗೂ ನಡೆಯಿತು. ಕೊನೆಗೆ ದೊಡ್ಡ ಯುದ್ಧವಾಗಿ ಕದಮರಾವನು ಮಿರಜಾ ಅಲಿಯ ಕೈಗೆ ಸಿಕ್ಕು ಬಂಧಿತನಾದನು. ಆತನ ಸೊಕ್ಕಿನಿಂದಾಗಿ ಅವನನ್ನು ಕೊಲೆ ಮಾಡಿದರು.[1] ಮಿರಜಾ ಅಲಿ ರಜಾನು ಅಲ್ಲಿಯ ಕೆಲಸವನ್ನು ವ್ಯವಸ್ಥೆಗೊಳಿಸಿದ ಅನಂತರ ವಿಜಾಪುರಕ್ಕೆ ತಿರುಗಿ ಬಂದನು.

### ೫. *ನಿಜಾಮಶಾಹಿ ರಾಜ್ಯದಲ್ಲಿ ಪುನಃ ಹೊಸ ದಂಗೆ, ಗದ್ದಲ, ಮೋಸಕಪಟಗಳು ಮತ್ತು ಆ ರಾಜ್ಯದ ನಾಶ :*

ಹಮೀದಖಾನನು ಬುರ್ಹಾನ ನಿಜಾಮಶಹನ ರಾಜ್ಯದ ಮುಖ್ಯ ವಕೀಲ-ವಿಶ್ವಾಸಿಕನಾಗಿದ್ದನು. ಆತನು ಮಲಿಕ ಅಂಬರನ ಮಗ ಫತ್ತೆಖಾನನ ವಿರುದ್ಧ ನಿಜಾಮಶಹನ ಮನಸ್ಸನ್ನು ಕೆಡಿಸಿದನು. ಅವನ ಮಾತಿನಂತೆ ಬುರ್ಹಾಣ ನಿಜಾಮಶಾಹನು ಅನೇಕ ಪ್ರಕಾರದ ನೆಪಗಳನ್ನು ಮುಂದುಮಾಡಿ ಫತ್ತೆಖಾನನನ್ನು ಹಿಡಿದು ಬಂಧಿಸಿಟ್ಟನು. ಈ ವಿಷಯ ಬಹಿರಂಗಗೊಂಡಂತೆ ರಾಜ್ಯದಲ್ಲಿಯ ಸಂಪೂರ್ಣ ಕಾರಭಾರಿ ಮಂಡಳಿ ಮತ್ತು ಕಾಮದಾರರು ಬುರ್ಹಾನಶಾಹನಿಂದ ಬಹಳ ಭಯಭೀತರಾಗಿ ತಮ್ಮ ಜೀವ ಉಳಿಸಿಕೊಳ್ಳುವ, ಗೌರವ ಕಾಯ್ದುಕೊಳ್ಳುವ ಚಿಂತೆಯಲ್ಲಿ ಬಿದ್ದರು. ಪ್ರತಿಯೊಬ್ಬರೂ ತಮಗೆ ನಿರ್ಭಯ ಸ್ಥಳ ಹೇಗೆ ದೊರೆತೀತು ತಮ್ಮ ಸಂರಕ್ಷಣೆ ಹೇಗೆ ಆದೀತು ಈ ವಿಷಯದಲ್ಲೆ ವಿಚಾರಿಸುತ್ತಿದ್ದರು. ಆ ಮಂಡಳಿಯಲ್ಲಿಯ ಜಾಧವರಾವ ಎಂಬವನು ಆ ರಾಜ್ಯದಲ್ಲಿಯ ಎಲ್ಲ ಕಾರಕೂನ ಮಂಡಳಿಯಲ್ಲಿ ಶ್ರೇಷ್ಠನೂ, ಸಂಭಾವಿತನೂ ಆಗಿದ್ದನು. ಆತನೂ ಭಯಭೀತನಾಗಿ ವಿಚಾರದಲ್ಲಿ ಬಿದ್ದು ತನ್ನ ರಕ್ಷಣೆಯ ಚಿಂತೆಯಲ್ಲಿ ಬಿದ್ದನು. ಜಾಧವರಾವನು ಓಡಿ ಹೋಗಿ, ಮೊಗಲರ ಆಶ್ರಯ ಪಡೆದು ಇರಬೇಕೆಂದು ನಿಶ್ಚಯಿಸಿದನು. ಅದೇ ಒಮ್ಮೆಲೇ ಆತನ ಯುಕ್ತಿಯ ತುಸು ವಿಷಯ ಬುರ್ಹಾನಶಾಹನಿಗೆ ತಿಳಿಯಿತು. ಆಗ ಬುರ್ಹಾನ ನಿಜಾಮಶಾಹನು ಸಂಶಯಗ್ರಸ್ತನಾಗಿ ಮತ್ತು ಭಯಭೀತನಾಗಿ, ಈ ವಿಷಯದಲ್ಲಿ ಹಮೀದಖಾನನನ್ನು ಮತ್ತು ಯೆಖಲಾಸಖಾನನನ್ನು ವಿಚಾರಿಸಿದನು.'ಜಾಧವರಾವನು ಓಡಿ ಹೋದರೆ, ಆತ ಇಲ್ಲಿಯ ಎಲ್ಲ ಗೊತ್ತಿದ್ದವನು, ಎಲ್ಲ ಸಣ್ಣ-ದೊಡ್ಡ ಕೆಲಸಗಳೂ ಆತನಿಗೆ ಗೊತ್ತಿವೆ. ಆತ ಮೊಗಲರ ಹಿಂದೆ ಬಿದ್ದರೆ ನಾನಾ ಪ್ರಕಾರದ ಸಂಕಟಗಳು ಎದ್ದು ನಿಲ್ಲುತ್ತವೆ. ಮೋಸಕಪಟಗಳು ಪ್ರಾರಂಭವಾಗುತ್ತವೆ. ಅನಂತರ ಯಾವ ವಿಚಾರಗಳೂ ನಡೆಯಲಾರವು' ಎಂದು ಬುರ್ಹಾನಶಾಹನು ಹೇಳಿದನು. ಅದಕ್ಕೆ ಯೆಖಲಾಸಖಾನ ಹಾಗೂ ಹಮೀದಖಾನ ಉಭಯತರೂ ವಿನಂತಿ ಮಾಡಿಕೊಳ್ಳುತ್ತ 'ನಮ್ಮ ಸಲಹೆಯನ್ನು ಕೇಳಿದರೆ ಜಾಧವರಾವನನ್ನು ಬಂಧಿಸುವುದು ಸರಿ ಎನಿಸುತ್ತದೆ. ಆತನ ಮಗ ಅಚಲೋಜಿಯನ್ನು ತಾಲೂಕಿನ ಕಾಮದಾರನೆಂದು ನೇಮಿಸಿ ಅತ್ತ ಕಳಿಸಿಬಿಡಬೇಕು' ಎಂದರು. ಈ ಯುಕ್ತಿ ಮತ್ತು ಕಾರ್ಯಕ್ರಮ ನಿರ್ಧರಿಸಿದ ಮೇಲೆ ಬುರಹಾನ ನಿಜಾಮಶಾಹನು ಫರಹಾದಖಾನ ಮತ್ತು ಸಫದರಖಾನರಿಗೆ ಆಜ್ಞೆ ಮಾಡಿ ಮೋತಿಖಾನ ಖಾಟಲನ ಸಹಾಯದಿಂದ ಜಾಧವರಾವನನ್ನು ಬಂಧಿಸಿ ತರಬೇಕೆಂದು ಹೇಳಿದನು.

ಒಂದು ದಿನ ಜಾಧವರಾವನು ನೌಕರಿಗೆಂದು ದರಬಾರದಲ್ಲಿ ಬಂದನು. ಬುರಹಾನ ನಿಜಾಮಶಾಹನು ಒಂದು ಕ್ಷಣ ದರಬಾರದಿಂದ ಎದ್ದು ಏಕಾಂತಕ್ಕೆ ಹೋದನು. ಸಫದರಖಾನ, ಫರಹಾದಖಾನ ಮತ್ತು ಮೋತೀಖಾನರು ಜಾಧವರಾವ ಹಾಗೂ ಆತನ ಮಗನ ಮೇಲೆ ಓಡಿ ಹೋಗಿ ಅವರ ಕೈಯಲ್ಲಿದ್ದ

1. "The siege of Bankapur lasted for 12 months and then on the 10th Rabiul-awwal. A.H. 1038 (28, Oct 1628) Kadamrao was killed"- Mahammad Nama. p-80.

ತಲವಾರಗಳನ್ನು ಕಸಿದುಕೊಂಡರು. ಜಾಧವರಾವ ಮತ್ತು ಆತನ ಮಗ ಇಬ್ಬರೂ ವಿಪರೀತ ವೈರಭಾವದ ರಂಗವನ್ನು ನೋಡಿ, ಸೊಂಟಕ್ಕೆ ಸಿಕ್ಕಿಸಿದ ಕಠಾರಿಯನ್ನು ತೆಗೆದುಕೊಂಡು ಆ ಮೂವರ ಮೇಲೂ ಏರಿ ಹೋದರು. ಶಸ್ತ್ರಗಳು ಹೊಡೆದಾಡಹತ್ತಿದುವು. ಕೊನೆಗೆ ಜಾಧವರಾವನ ಮೇಲೆ ಸಫದರಖಾನನು ತಲವಾರಿನಿಂದ ಹೊಡೆದನು. ಆ ಘಾಯದಿಂದ ಜಾಧವರಾವನು ಸತ್ತನು. ಆತನ ಮಗನೂ ಶಿಪಾಯಿಗಳ ಕೈಯಲ್ಲಿ ಮರಣ ಹೊಂದಿದನು.[೧] ಜಾಧವರಾವನ ಬಂಧು ಜೋತಾಜೀರಾವನು ಇದನ್ನು ಕಂಡು ಓಡಿಹೋಗಿ ಮೊಗಲರ ಆಶ್ರಯವನ್ನು ಪಡೆದು ಇರಹತ್ತಿದನು.

ಜಾಧವರಾವನ ಅಳಿಯ ಶಾಹಾಜೀ ಭೋಸಲೆಯು ಪರಾಂಡೆಯ ಆಸುಪಾಸಿನಲ್ಲಿ ಇರುತ್ತಿದ್ದವನು, ಈ ವರ್ತಮಾನವನ್ನು ಕೇಳಿ ಸಂಗಮನೇರದ ಕಡೆಗೆ ಓಡಿ ಹೋದನು. ಅಲ್ಲಿಂದ ಲೂಟಿ ಮಾಡುತ್ತ ಮಾಡುತ್ತ ಪುಣೆಗೆ ಬಂದನು. ದೊಡ್ಡ ದಂಗೆಯನ್ನೆ ಆರಂಭಿಸಿದನು. ಒಳಸಂಚು, ಕುಟಿಲೋಪಾಯಗಳ ಸಂಕಟವನ್ನೆ ಎಬ್ಬಿಸಿದನು. ಸುತ್ತಮುತ್ತಲಿನ ನಿಜಾಮಶಹನ ಮತ್ತು ಆಸುಪಾಸಿನ ಆದಿಲಶಹನ ಪ್ರದೇಶಗಳನ್ನು, ಬಲಾತ್ಕಾರದಿಂದ ಕೈವಶ ಮಾಡಿಕೊಂಡನು. ಆ ಪ್ರದೇಶಗಳ ಒಡೆಯನಾದನು. ಖವಾಸಖಾನನು ಆತನ ಈ ಸೊಕ್ಕಿನ ಹಾಗೂ ಗುದಮುರಿಗೆಯ ವರ್ತಮಾನವನ್ನು ಕೇಳಿ, ಮುರಾರಿಯೊಂದಿಗೆ ಬಹಳಷ್ಟು ಸೈನ್ಯವನ್ನು ಕೊಟ್ಟು ಆತನನ್ನು ಶಿಕ್ಷಿಸಲು ವಿಜಾಪುರದಿಂದ ಕಳಿಸಿದನು. ಶಹಾಜಿಯು ಈ ಸಂಕಟದ ಅಗ್ನಿಯನ್ನು ಕಂಡು ಜುನ್ನರದ ಸರನಾಯಕ ಹಾಗೂ ಮುಖ್ಯಸ್ಥನಾಗಿದ್ದ ಶ್ರೀನಿವಾಸರಾಯನ ಜೊತೆ ಸಖ್ಯವನ್ನು ಬೆಳಸಿ, ಆತನ ಬೆನ್ನಿಗೆ ಬಿದ್ದನು. ಮುರಾರಿಯು ಪುಣೆ ಮತ್ತು ಇಂದಾಪುರ ಮೊದಲಾದ ಕಡೆಗೆ ಇದ್ದ ಶಹಾಜೀ ಭೋಸಲೆಯ ವಾಡೆಗಳನ್ನು ಸುಟ್ಟು ನಾಶ ಮಾಡಿದನು. ಪುಣೆಯಿಂದ ೧೬ ಕೋಸುಗಳ ಮೇಲೆ ಭೇಲಸಾರ ಗುಡ್ಡ ಇದೆ. ಆ ಗುಡ್ಡದ ಮೇಲೆ ಕೋಟೆಯನ್ನು ಕಟ್ಟಿ ಆ ಕೋಟೆಯ ಹೆಸರನ್ನು 'ದೌಲತ ಮಂಗಲ' ಎಂಬುದಾಗಿ ಇಟ್ಟನು.[೨] ರಾಯಾರಾವನಿಗೆ ೨ ಸಾವಿರ ಸವಾರರನ್ನು ಕೊಟ್ಟು ಅಲ್ಲಿ ಇಟ್ಟನು. ಚಂದರರಾವ ಮತ್ತು ರಾಜಾರಾವ ಮತ್ತು ದಳವಿ ಮುಂತಾದ ಸರದಾರರನ್ನು ರಾಯಾರಾವನ ಜೊತೆಗೆ ಕೊಟ್ಟಿದ್ದನು. ಅವರನ್ನು 'ತಳಕೊಂಕಣ' ವನ್ನು ಹಸ್ತಗತ ಮಾಡಿಕೊಳ್ಳಲು ನಿಯಮಿಸಿದನು. ಅವರನ್ನೂ ದಾಭೋಳದ ಕಡೆಗೆ ಕಳಿಸಿ ತಾನು ವಿಜಾಪುರಕ್ಕೆ ಹೊರಟು ಬಂದನು.

ಶಾಹಾಜಿ ಭೋಸಲೆಯು ಶ್ರೀನಿವಾಸರಾಯನ ಬೆನ್ನಿಗೆ ಬಿದ್ದು ಜುನ್ನಾರದಲ್ಲಿ ಬಂದು ಇರಹತ್ತಿದ್ದ. ಅಲ್ಲಿ ಮಜಬೂತಾದ ಸ್ಥಳ ಹಾಗು ವ್ಯವಸ್ಥಿತವಾದ ಮನೆ ಕಾಣಲಿಲ್ಲ ಆದ್ದರಿಂದ ಆತ ಹಾಳಾದ- ಬಿದ್ದ ಪೇಮಗಡದ ಕೋಟೆಯನ್ನು ಹೊಸದಾಗಿ ಕಟ್ಟಿಸಿಕೊಂಡು, ಆ ಕೋಟೆಗೆ ಶಾಮಗಡ ಎಂದು ಹೆಸರಿನ್ನಿಟ್ಟು ಇರಹತ್ತಿದನು. ಸಾವಕಾಶವಾಗಿ, ಮತ್ತು ಯುಕ್ತಿಯಿಂದ ಐದಾರುಸಾವಿರ ಸವಾರರನ್ನು ಸೇರಿಸಿಕೊಂಡು, ಆ ಭಾಗದ ನಗರ ಮತ್ತು ಕೋಟೆಗಳನ್ನು ಕೈವಶ ಮಾಡಿಕೊಳ್ಳ ಹತ್ತಿದನು. ಬಾಲಾಘಾಟದ ಪ್ರದೇಶ, ಜುನ್ನರ ಮತ್ತು ಸಂಗಮನೇರದಿಂದ ಅಹಮದ ನಗರದವರೆಗೆ ಮತ್ತು ದೌಲತಾಬಾದದವರೆಗೆ. ಎಲ್ಲ ಪ್ರದೇಶಗಳನ್ನು ಕೈವಶ ಮಾಡಿಕೊಂಡನು. ಪೂರ್ತಿ ಪ್ರಬಲನಾದನು. ಬಾಜೀ ದಳವಿ ಮುಂತಾದವರಿಗೆ ಮುರಾರಿಯು ಹೆಸರುಗಳನ್ನು ಬರೆದು ತಳಕೊಂಕಣವನ್ನು ಕೈವಶಮಾಡಿಕೊಳ್ಳಲು ಕಳಿಸಿದ್ದನು. ಅವರು

---

೧. "ಶಕೆ ೧೫೫೧. ಶ್ರಾವಣ ಪೌರ್ಣಿಮೆಯಂದು (೨೫ ಜುಲೈ ೧೬೨೯) ಲಖೂಜಿ ಜಾಧವರಾವನಿಗೆ ನಿಜಾಮುಶಾಹನು ಕೊಂದನು" ಜೇಧೆಶಕಾವಲಿ ಪುಟ – ೧೬.

೨. ಶಕೆ ೧೫೫೬ (ಕ್ರಿ.ಶ ೧೬೩೪) ರಲ್ಲಿ ಮುರಾರ ಜಗದೇವರಾಯನು ಭುಲೇಶ್ವರದ ಹತ್ತಿರ ಗುಡ್ಡದ ಮೇಲೆ. ದೌಲತಮಂಗಲ ಕೋಟೆಯನ್ನು ಕಟ್ಟದನು. ಅದೇ ಪು. ೭೧.

ದಾಭೋಳದ ಮಾರ್ಗದಿಂದ ಬಂದು. ಮಹಾಡ, ಕೋರೆಗಾವ, ನಿಜಾಮಪೂರ ಮತ್ತು ಅನೇಕ ಪೇಟೆಗಳನ್ನು, ಬಹಳಷ್ಟು ವಸೂಲಿಯಾಗುವಂಥ ಆ ಭಾಗದ ಪ್ರದೇಶಗಳನ್ನೆಲ್ಲ ಕೈವಶ ಮಾಡಿಕೊಂಡರು. ಸಿದ್ದಿ ಮರ್ಜ್ಯಾನ ಇನಾಯತುಲ್ಲಾಖಾನೀಯು ತಳಕೊಂಕಣದ ಸುಬೇದಾರ ನಾಗಿದ್ದನು. ಆತನು ನಿಜಾಮಶಹನಿಂದ ಸುಬೇದಾರಿ ಕೆಲಸದಮೇಲಿದ್ದನು. ಆತನು ಜಿವಳ (ಚೌಲ) ದಿಂದ ಹೊರಟು ಪಾರುಪತ್ಯೆಗೆ ಓಡಿ ಬಂದನು. ಉಭಯತರು ಎದುರಾದ ಮೇಲೆ ಯುದ್ಧ ಪ್ರಾರಂಭವಾಯಿತು. ಸಿದ್ದಿ ಮರ್ಜ್ಯಾನನು ಆ ಯುದ್ಧದಲ್ಲಿ ಸತ್ತನು. ನಂತರ ನಿಜಾಮಶಾಹೀ ಜನರ ದೊಡ್ಡ ಸೋಲಾಯಿತು. ಆದಿಲಶಾಹನ ಕಡೆಯ ಜನರ ದೊಡ್ಡ ಗೆಲುವಾಗಿ, ಆದಿಲಶಾಹೀ ಜನರು ಆ ಎಲ್ಲ ಪ್ರದೇಶಗಳನ್ನು ಚೌಲ ಬಂದರದವರೆಗೆ ಕೈವಶ ಮಾಡಿಕೊಂಡರು. ಬುರ್ಹಾನ ನಿಜಾಮ ಶಾಹನು ಈ ಸೋಲಿನ ಸುದ್ದಿಯನ್ನು ಕೇಳಿದ ನಂತರ, ಸಿದ್ದೀ ಸಾಬಾ ಆಂಬರಖಾನೀಯನ್ನು ಯಖಲಾಸಖಾನನ ಜಮಾತೆಯೊಂದಿಗೆ ಆದಿಲಶಹನ ಕಡೆಯ ಜನರ ಪಾರುಪತ್ಯೆಗಾಗಿ ಕಳಿಸಿದನು. ಸಿದ್ದೀಸಾಬಾನು ಪುಣೆ ಹಾಗು ಜುನ್ನರದ ಘಟ್ಟಗಳಿಂದ ಇಳಿದು, ಆದಿಲಶಾಹೀ ಜನರಮೇಲೆ ಏರಿ ಬಂದನು. ಚೌಲದಲ್ಲಿದ್ದ ಆದಿಲಶಾಹೀ ಜನರು ಸಿದ್ದೀ ಸಾಬಾನ ಪ್ರಬಲತೆಯನ್ನು ಕಂಡು ಓಡಿ ಹೋದರು. ಕೋಲಾರದ ಹತ್ತಿರ ಉಭಯ ಸೈನ್ಯಗಳ ಭೆಟ್ಟಿಯಾಯಿತು. ಇಬ್ಬರ ನಡುವೆ ಘನಘೋರ ಕಾಳಗ ನಡೆಯಿತು. ಆ ಯುದ್ಧದಲ್ಲಿ ಬಾಜೀ ದಳವಿಯು ಸತ್ತನು. ಉಳಿದ ಜನ ಮತ್ತೆ ಓಡಿದರು. ಈ ಸಲ ನಿಜಾಮಶಹನ ಜನರು ಯಶಸ್ವಿಯಾದರು. ಸಿದ್ದೀ ಸಾಬಾನು ಆದಿಲಶಹನ ಕಡೆಗೆ ಹೋದ ಚೌಲ ಮೊದಲಾದ ಪ್ರದೇಶಗಳನ್ನು ತನ್ನ ಕಡೆಗೆ ತೆಗೆದುಕೊಂಡನು. ನಿಜಾಮಶಹನ ಆನೆಗಳ ಸಂಗ್ರಹಣ (ಹತ್ತೀಖಾನೆ) ಇಲ್ಲಿಯೇ ಇತ್ತು. ಅದನ್ನು ತೆಗೆದುಕೊಂಡು ಕಲ್ಯಾಣಕ್ಕೆ ಹೋಗಿ ಅಲ್ಲಿ ಇರಹತ್ತಿದರು.

ಇದೇ ದಿನಗಳಲ್ಲಿ ಯಾಕುತಖಾನ ಮತ್ತು ಉದಾಜೀರಾವರು ಬುರ್ಹಾನ ನಿಜಾಮಶಾಹನಿಗೆ ಪತ್ರ ಬರೆದು ಇಂಥ ಸಂಕಟದ ಸಮಯದಲ್ಲಿ. ಮೊಗಲರಂಥ ಶತ್ರುಗಳ ಸಮಯ ಸಾಧಿಸುತ್ತ ಕುಳಿತಿದ್ದಾರೆ. ರಾಜ್ಯದ ಕಾರಭಾರಿ ಜನರು ಭಯಭೀತರಾಗಿದ್ದಾರೆ. ಜಾಧವರಾಯನಂಥ ಮುತ್ಸದ್ದಿ. ಮುಖ್ಯ ಕಾರಭಾರಿ ಅಂಥ ಸೇವಕನನ್ನು ಕೊಲ್ಲಲು ಯಾವ ಯುಕ್ತಿಯನ್ನು ನೋಡಿದಿರಿ? ಅದರಲ್ಲಿಯ ಯಾವ ಉಪಯೋಗವನ್ನು ಮನಸ್ಸಿನಲ್ಲಿ ಮಾಡಿದ್ದಿರಿ? ತಮ್ಮ ಕೆಲಸವನ್ನು ಮಾತ್ರ ಕೆಡಿಸಿಕೊಂಡಿರಿ. ಈಗ ಸರಕಾರದಲ್ಲಿ ರಾಜ್ಯದ ಕೆಲಸಗಳನ್ನು ನೋಡಿಕೊಳ್ಳುವಂಥ ಅಂಥವರು ಯಾರಿದ್ದಾರೆ? ಇಂಥ ಪ್ರಬಲ ಶತ್ರುವನ್ನು ಎದುರಿಸಿ ಶಿಕ್ಷಿಸುವಂಥವರು ಯಾರಿದ್ದಾರೆ? ಅಂಥವರು ಈಗ ಯಾರೂ ಇಲ್ಲ. ಇಂದಿನ ಪ್ರಸಂಗದಲ್ಲಿ ಒಬ್ಬ ವ್ಯಕ್ತಿಯಿಂದ ಮಾತ್ರ ಈ ಕೆಲಸಗಳೆಲ್ಲ ಆಗ ಬಲ್ಲುವು. ಯಾಕೆಂದರೆ ಈ ಪ್ರಕಾರದ ದೊಡ್ಡ ಕೆಲಸಗಳಲ್ಲಿ ಅವನೊಬ್ಬ ಶಕ್ತಿಯವಂತನಾಗಿದ್ದಾನೆ. ನಾವು ನಿಮ್ಮ ರಾಜ್ಯದ ಕಲ್ಯಾಣವನ್ನು ಇಚ್ಚಿಸುವವರಾಗಿದ್ದೇವೆ. ನಮ್ಮ ವಿಚಾರಕ್ಕೆ ಮತ್ತು ನಮ್ಮ ದೃಷ್ಟಿಗೆ ಫತೇಖಾನನೊಬ್ಬನೇ ಶೂರ ಹಾಗೂ ಪೂರ್ಣ ವಿಚಾರವಂತನಾಗಿದ್ದಾನೆ. ಆತನ ತಂದೆಯು ನಾನಾ ಪ್ರಕಾರದ ಸಂಕಟ ಹಾಗು ತರತರಹ ಗದ್ದಲಗಳ ಸಮಯದಲ್ಲಿ ಬುದ್ಧಿ ಓಡಿಸಿ, ಯುಕ್ತಿ ಮಾಡಿ. ಬಹಳ ಶೂರತನದಿಂದ ರಾಜ್ಯವನ್ನು ಒಳ್ಳೆಯ ವ್ಯವಸ್ಥೆಯಲ್ಲಿಟ್ಟಿದ್ದನು. ಆತನ ಮಗನಾದ ಈತನೂ ಅವನಂತೆಯೇ ಇದ್ದಾನೆ. ಅವನನ್ನು ಸೆರೆಮನೆಯಿಂದ ಮುಕ್ತ ಮಾಡಿ ಅವನಿಗೆ ಭರವಸೆಯನ್ನು ಕೊಟ್ಟು, ರಾಜ್ಯದ ಬಗ್ಗೆ ವಿಚಾರಿಸಿರಿ. ಆತನ ಸಲಹೆಯನ್ನು ಪಡೆಯಿರಿ. ಶತ್ರುವಿನ ಪಾರುಪತ್ಯವನ್ನು ಅವನಿಂದ ಮಾಡಿಸಿರಿ. ಎಂಬುದಾಗಿ ವಿನಂತಿಯನ್ನು ಮಾಡಿಕೊಂಡರು.

ಅದನ್ನು ಓದಿದ ಬುರ್ಹಾನ ನಿಜಾಮಶಹನು ಕಾರಭಾರಿ ಮಂಡಳಿಯನ್ನು ಕರೆಯಿಸಿ ಫತ್ತೆಖಾನನನ್ನು ಸೆರೆಮನೆಯಿಂದ ಬಿಡುಗಡೆ ಮಾಡುವ ಕುರಿತು ಸಲಹೆಯನ್ನು ಕೇಳಿದನು. ಕಾರಭಾರಿ ಮಂಡಳಿಯು,

"ಫತ್ತೇಖಾನನು ಒಳ್ಳೆಯ ಮನುಷ್ಯನಲ್ಲ. ಆತ ತುಂಬ ಗರ್ವಿಷ್ಠ ತನ್ನ ಮುಂದೆ ಯಾರೂ ಬುದ್ಧಿವಂತರಲ್ಲ. ತಾನೊಬ್ಬನೇ ಬುದ್ಧಿವಂತ ಎಂದು ತಿಳಿದ ದೊಡ್ಡ ಸ್ವಾಭಿಮಾನಿಯಾಗಿದ್ದಾನೆ. ಇನ್ನಷ್ಟು ಸಂಕಟಗಳನ್ನು ಎದ್ದು ನಿಲ್ಲಿಸುವ ವ್ಯಕ್ತಿಯಾಗಿದ್ದಾನೆ. ಪ್ರಸ್ತುತ ಸೆರೆಮನೆಯಲ್ಲಿದ್ದಾನೆ. ಅದರಿಂದ ಆತನ ಮನಸ್ಸು ದುಃಖಿತ ಗೊಂಡಿದೆ ಎಂಬುದು ಗೊತ್ತಿದ್ದುದೇ ಆಗಿದೆ. ಆದ್ದರಿಂದ ಗಾಯಗೊಂಡ ಸರ್ಪವನ್ನು ಬಿಟ್ಟು ಬಿಡುವುದು ಸರಿಯಲ್ಲ. ಇದರಲ್ಲಿ ಉತ್ತಮ ಎಂಬುದೇನೂ ಇಲ್ಲ. ಯಾರಿಗೆ ಗೊತ್ತು? ಪ್ರಬಲನಾದರೆ ಸೇಡು ತೀರಿಸಿಕೊಳ್ಳಲು ಸಿದ್ಧನಾಗಬಹುದು ಫತ್ತೇಖಾನನೆಂದರೆ ಸಂಕಟ ಮತ್ತು ಒಳಸಂಚುಗಳನ್ನು ನಿರ್ಮಿಸುವ ಸ್ಥಾನವೇ ಆಗಿದ್ದಾನೆ. ಆತನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿದರೆ ದೊಡ್ಡ ಪ್ರಳಯವನ್ನೆ ಮಾಡುತ್ತಾನೆ" ಎಂಬುದಾಗಿ ಅಭಿಪ್ರಾಯ ಪಟ್ಟಿತು. ಆಗ ಬುರ್ಹಾನ ನಿಜಾಮಶಾಹನು ಮಾತನಾಡುತ್ತ, "ಫತೇಖಾನನಿಂದ ಶಪಥ ಮಾಡಿಸಿಕೊಳ್ಳುತ್ತೇನೆ. ನಿಮ್ಮ ಸಲಹೆಯಂತೆ ಫತ್ತೇಖಾನನಿಂದ ಕರಾರುಗಳನ್ನು ಮಾಡಿಸುತ್ತೇನೆ. ಅನಂತರ ರಾಜ್ಯದ ವ್ಯವಸ್ಥೆಗಾಗಿ ಅವನನ್ನು ನಿಯಮಿಸುತ್ತೇನೆ" ಎಂದು ಆಜ್ಞೆ ಮಾಡಿದನು. ಆಗ ಕಾರಭಾರಿ ಮಂಡಳಿಯು "ನಮಗೆಲ್ಲ ನಿಮ್ಮ ಕಲ್ಯಾಣದ ಇಚ್ಛೆ ಇದೆ. ತಮ್ಮ ರಾಜ್ಯ ನಿರಂತರವಾಗಿ ಇರಬೇಕು ಎಂಬುದೇ ಮನಸ್ಸಿನಲ್ಲಿದೆ. ನಮಗೆ ನಮ್ಮ ಸ್ವಂತದ ಬಗ್ಗೆ ಏನೊಂದು ಚಿಂತೆ ಇಲ್ಲ" ಎಂದರು. ಬುರ್ಹಾನ ನಿಜಾಶಾಹನು ಯೆಖಲಾಸಖಾನ ಮತ್ತು ಫರಹಾದಖಾನರನ್ನು ಫತ್ತೇಖಾನನ್ನು ಸೆರೆಮನೆಯಿಂದ ತರಲು ಕಳಿಸಿದನು. ಅವರು ಕೋಟೆಗೆ ಹೋಗಿ ಫತ್ತೇಖಾನನನ್ನು ಬಿಡುಗಡೆ ಮಾಡಿ ಪಲ್ಲಕ್ಕಿಯಲ್ಲಿ ಕುಳ್ಳರಿಸಿ. ಪಲ್ಲಕ್ಕಿಯ ಪರದೆಯನ್ನು ಇಳಿಬಿಟ್ಟು ಸೆರೆಮನೆಯಿಂದ ಕೋಟೆಯ ಹೊರಗೆ ತಂದರು. ಆಗ ಫತ್ತೇಖಾನನು, "ನನ್ನನ್ನು ಕದ್ದು ಮುಚ್ಚಿ ಪಲ್ಲಕ್ಕಿಯ ಮೇಲೆ ಪರದೆಯನ್ನು ಇಳಿಬಿಟ್ಟು ಕರೆದುಕೊಂಡು ಹೋಗುವ ಕಾರಣ ಏನು? ಪರದೆಯನ್ನು ತೆಗೆಯಿರಿ" ಎಂದನು. ಯೆಖಲಾಸಖಾನ ಮತ್ತಿತರರು ಮನಸ್ಸಿನಲ್ಲಿಯೇ ವಿಚಾರಿಸಿ, 'ಒಂದುವೇಳೆ ನಾವು ಬೇಡವೆಂದರೆ, ಫತ್ತೇಖಾನನು ಹೇಳಿದಂತೆ ಕೇಳದಿದ್ದರೆ, ಈತ ನಮ್ಮ ಶತ್ರುವಾಗುತ್ತಾನೆ' ಎಂದು ತಿಳಿದು ಪಲ್ಲಕ್ಕಿಯ ಮೇಲಿನ ಪರದೆಯನ್ನು ತೆರೆದರು. ರಸ್ತೆಯ ಇಬ್ಬದಿಗಳಲ್ಲಿಯ ಜನರು ಫತ್ತೇಖಾನನನ್ನು ಕಂಡು, ಮುಂದೆ ಬಂದು ಹೊಗಳುತ್ತ, ಆತನಿಗೆ ಕಲ್ಯಾಣವನ್ನು ಬಯಸಿ, ಮುಜುರೆ ಮತ್ತು ಸಲಾಮುಗಳನ್ನು ತುಂಬ ಗೌರವದಿಂದ ಮಾಡ ಹತ್ತಿದರು. ಮುಂದೆ ಬಂದ ವ್ಯಕ್ತಿಯೊಬ್ಬ, ಫತ್ತೇಖಾನನು, ಮಲಿಕ ಅಂಬರನ ಮಗ, ಎಂದು ಹೇಳುತ್ತಿದ್ದ. ಹಾಗೆಯೇ ನಜರನ್ನು ಸಲ್ಲಿಸುತ್ತ ನಿವಾಳಿಸಿ ಒಗೆಯುತ್ತ ದರಬಾರದ ವರೆಗೂ ಕರೆದುಕೊಂಡು ಬಂದರು.

ಬುರ್ಹಾನ ನಿಜಾಮಶಾಹನು ವೈಭವದಿಂದ, ಬಹಳ ಆದರದಿಂದ ಆತನನ್ನು ಎದುರುಗೊಂಡು, ಫತ್ತೇಖಾನನ ಮೇಲೆ ಬಹಳ ಮೆಹರಬಾನಗಿ ಮಾಡಿದನು.[೩] ಅವನ ಯೋಗ್ಯತೆಯನ್ನು ಎತ್ತರಿಸಿದನು. ಆತನಿಗೆ ಬಹಳಷ್ಟು ವಸ್ತ್ರಗಳನ್ನು ಕೊಟ್ಟನು. ಬುರ್ಹಾನಶಾಹನು ತನ್ನ ಮನದಲ್ಲಿದ್ದಂತೆ, ಫತ್ತೇಖಾನನಿಂದ ಶಪಥ ಹಾಗೂ ಕರಾರು ಪತ್ರವನ್ನು ಠರಾವಿಸಿದಂತೆ ತೆಗೆದುಕೊಂಡು ಆತನಿಗೆ "ನೀವು ನಿಮ್ಮ ತಂದೆಯವರಂತೆ ಉಪ್ಪಿನ ಋಣವನ್ನು ನೆನಪಿಸಿಕೊಳ್ಳಿರಿ. ನನ್ನ ಪ್ರಾಣ ಸಂರಕ್ಷಣೆ ಮತ್ತು ತಮ್ಮ ಧಣಿಯ ರಾಜ್ಯದ ಸಂರಕ್ಷಣೆಯನ್ನು ಮಾಡಿರಿ. ಇದನ್ನು ಮಾಡುವುದರಿಂದ ದೇವರ ಸನ್ನಿಧಾನ ಪ್ರಾಪ್ತವಾಗುವ ಫಲವಿದೆ" ಎಂಬುದಾಗಿ ಆಜ್ಞೆ ಮಾಡಿದನು.[೩] ಮತ್ತು ಮನೆಗೆ ಹೋಗಲು ನಿರೋಪ ಕೊಟ್ಟನು. ಫತ್ತೇಖಾನನಿಗೆ ಇಳಿದುಕೊಳ್ಳಲು ಸಲಾಬತಖಾನನ ವಾಡೆಯನ್ನು ಕೊಟ್ಟನು. ಅನಂತರ ರಾಜ್ಯದ ಕಾರಭಾರವನ್ನು ಆತನಿಗೆ ವಹಿಸಿದನು.

---

೩. ಶಕೆ ೧೫೫೨ ಪೌಷ ವದ್ಯ ಏಕಾದಶಿ (೧೮ ಜನವರಿ ೧೬೩೧) ಫತ್ತೇಖಾನನ್ನು ಬಿಡುಗಡೆ ಮಾಡಿದರು.
– ಜೇಧೆ ಶಕಾವಲಿ ಪು ೧೬

ಕೆಲವೇ ದಿನಗಳಲ್ಲಿ ರಾಜ್ಯವು ವ್ಯವಸ್ಥಿತವಾಗಿ ನಡೆಯಿತು. ಒಳ್ಳೆಯ ದಿನಗಳು ಬಂದುವೆಂದು ಎಲ್ಲರೂ ತಿಳಿದರು. ಕೆಲವು ದಿನಗಳ ಅನಂತರ ಬುರ್ಹಾನ ನಿಜಾಮಶಾಹನಿಗೆ ಹುಚ್ಚು ಹಿಡಿದಿದೆ ಎಂದರು. ಫತ್ತೇಖಾನನು ಅವನ ರೋಗವನ್ನು ಉಪಚರಿಸಲು ಆತನನ್ನು ತನ್ನ ವಾಡೆಗೇ ಕರೆತಂದನು. ತಾನು ಬೇರೆ ಸ್ಥಳಕ್ಕೆ ಹೋದನು. ಬಾದಶಹನಿಗೆ ಗುಣವಾಗಲೆಂದು ಹಲವಾರು ಉಪಚಾರಗಳನ್ನು ಮಾಡಿದನು. ಆದರೆ ಆತನ ಹುಚ್ಚು ಕಡಿಮೆಯಾಗಲಿಲ್ಲ. ಅದರಲ್ಲಿಯೇ ಆತ ಸತ್ತನು. ಆತನ ಮರಣಕ್ಕೆ ಫತ್ತೇಖಾನನೇ ಕಾರಣನೆಂದು ಎಲ್ಲರೂ ಮಾತನಾಡಿಕೊಳ್ಳುತ್ತಿದ್ದರು.[೪] ಆದರೆ ನಿಜ ವಿಷಯ ಭಗವಂತನಿಗೇ ಗೊತ್ತು!

### ೬. ಬುರ್ಹಾನ ನಿಜಾಮಶಹನ ರಾಜ್ಯ ಮುಳುಗಿದ ಕೆಲವು ದೊಡ್ಡ ಕಾರಣಗಳು :

ಪ್ರಥಮ ದೊಡ್ಡ ಕಾರಣವೆಂದರೆ, ಮಿತ್ರ ಮಂಡಳಿಯ ಮತ್ತು ಸ್ನೇಹಿತರ ಮನಸ್ಸನ್ನು ದುಃಖ ಪಡಿಸಿದ್ದೇ ಆಗಿದೆ. ಹೀಗೆ ಹೇಳುವುದರಲ್ಲಿಯ ವಿವರಗಳನ್ನು ಹೇಳಬೇಕು. ಕೈಲಾಸವಾಸಿ ಇಬ್ರಾಹಿಮ ಆದಿಲಶಾಹ ಪಾದಶಾಹನು ತನ್ನ ಕಲ್ಯಾಣಪ್ರದ ಕಾಲಕೀರ್ತಿಯಲ್ಲಿ ನಿಜಾಮಶಾಹಿ ಜನರ ಸಹಾಯ ಮಾಡುವ ವಿಷಯದಲ್ಲಿ ಅವರಿಗೆ ಸಹಾಯ ಮಾಡುವಲ್ಲಿ ಬಹಳ ಪ್ರಯತ್ನ ಮಾಡುತ್ತಿದ್ದನು. ನಿಜಾಮಶಾಹಿ ರಾಜ್ಯದ ವ್ಯವಸ್ಥೆಗೆ ಅದರ ಸ್ಥಿರತೆಗೆ ಬಹಳ ಯತ್ನಿಸುತ್ತಿದ್ದನು. ಆದರೂ ನಿಜಾಮಶಾಹಿ ಜನರ ಕಡೆಯಿಂದ ಬಹಳಷ್ಟು ಸಲ ಆದಿಲಶಾಹನೊಂದಿಗೆ ಕುಚೋದ್ಯತನದ ನಡವಳಿಕೆ ಪ್ರಸಿದ್ಧವೇ ಆಗಿತ್ತು. ಮಿತ್ರರನ್ನು ಬದಲಿಸಬಾರದು ಯಾಕೆಂದರೆ, ಮಿತ್ರರ ಮತ್ತು ನೆರೆಹೊರೆಯವರ ಹಕ್ಕು ಉಳಿದೆಲ್ಲ ಹಕ್ಕುದಾರರಗಿಂತಲೂ ಅಧಿಕವಾಗಿದೆ ಎಂಬುದು ಅಲ್ಲಾನ ಆಜ್ಞೆಯಾಗಿದೆ. ಅದು ಸತ್ಯವಾಗಿದೆ. ಮಿತ್ರರ ಹಾಗೂ ನೆರೆಹೊರೆಯಲ್ಲಿ ಇರುವವರೊಂದಿಗೆ ಸ್ನೇಹದಿಂದ ಇರದೆ, ನಿರಂತರವಾಗಿ ಆದಿಲಶಹನ ರಾಜ್ಯದ ಮೇಲೆ ಸೈನ್ಯವನ್ನು ತೆಗೆದುಕೊಂಡು ಬಂದು ಬಹಳ ಉಪದ್ರವವನ್ನು ಕೊಡುತ್ತಿದ್ದನು. ಆದರೆ ಸಹನಶೀಲತೆ ಮತ್ತು ವಿಚಾರಗಳ ಪರ್ವತದಂತಿದ್ದ ಆದಿಲಶಹನು, ನಿಜಾಮಶಾಹಿಗಳ ಈ ಕೆಲಸವನ್ನು ಮನಸ್ಸಿನಲ್ಲಿ ತರದೆ, ಕಣ್ಣು ಮುಚ್ಚಿ ಅವರೊಂದಿಗೆ ವೈರಭಾವದೊಂದಿಗೆ ಇರದೆ, ಯಾವಾಗಲೂ ಕ್ಷಮಿಸುತ್ತಿದ್ದನು. ಪ್ರತಿಯಾಗಿ ನಿಜಾಮಶಾಹಿಗಳ ಮೇಲೆ ಸಂಕಟ ಪ್ರಸಂಗಗಳು ಬಂದಾಗ, ಆದಿಲಶಹನು ಸ್ವತಃ ಅವರಿಗೆ ಸಹಾಯ ಮಾಡುತ್ತಿದ್ದನು. ಮೊಗಲರ ಉಪದ್ರವದಲ್ಲಿ, ದೆಹಲಿವಾಲೆಗಳ ಹಲ್ಲೆಯಲ್ಲಿ ಒಂದು ವೇಳೆ ಆದಿಲಶಹನ ಕಡೆಯಿಂದ ಸಹಾಯ ದೊರೆತಿರದಿದ್ದರೆ, ಅದು ಉಳಿಯುತ್ತಿರಲಿಲ್ಲ. ಇದು ಮೊಗಲರಿಗೂ ಗೊತ್ತಿತ್ತು ಅವರು ಬಹಿರಂಗವಾಗಿಯೇ ಅದನ್ನು ಹೇಳುತ್ತಿದ್ದರು. ಹಿಂದುಸ್ತಾನದ ವಕೀಲನಾದ ಖಾನಖಾನನು ಅಕಬರ ಬಾದಶಹನಿಗೂ, ಜಹಾಂಗೀರ ಬಾದಶಹನಿಗೂ ಸ್ವತಃ ಬಂದು “ಇಬ್ರಾಹಿಮ ಆದಿಲಶಹನು ಬಂದು ನಿಜಾಮಶಾಹಿಗಳಿಗೆ ಸಹಾಯಮಾಡಿದಾಗ, ಕಡ್ಡಿಯಂತಿದ್ದ ನಮ್ಮ ಶತ್ರು ಪರ್ವತದಂತೆ ಕಾಣಿಸುತ್ತಾನೆ” ಎಂದು ಹೇಳಿದ್ದಾನೆ. ಇಬ್ರಾಹಿಮ ಆದಿಲಶಹನಿಗೆ ನಿಜಾಮಶಾಹಿಯು ನಿರಂತರವಾಗಿ ಶಾಶ್ವತವಾಗಿ ಇರಬೇಕೆಂಬ ಜರೂರಿ ಇತ್ತು ಅಂತೆಯೇ ಆತನು ಮಲಿಕ ಅಂಬರನಿಗೆ ಅಗಣಿತ ಸಹಾಯ ನೀಡಿದನು. ಆತನ ಸಹಾಯದಿಂದಲೇ ಮಲಿಕಅಂಬರನು ಇಷ್ಟೊಂದು ಉನ್ನತ ಪದವಿಗೆ ಏರಿದನು, ತಾನು ಮಜಬೂತಾದನು. ಇದೆಲ್ಲ ಆದಿಲಶಾಹಿಯ ಆಧಾರದಿಂದ ಮೇಲಿಂದಲೇ ಸಾಧ್ಯವಾಗಿತ್ತು. ಆದಿಲಶಹನ ಮೆಹರಬಾನಗಿಯಿಂದ ಮತ್ತು ಪಾಲನ ಪೋಷಣೆಯಿಂದ ಮಲಿಕ ಅಂಬರನು ಇಂಥ ಶ್ರೇಷ್ಠ ಪದವಿಗೆ

---

೪. ಶಕೆ ೧೫೫೩ (ಕ್ರಿ.ಶ ೧೬೩೧-೨) ಫತ್ತೇಖಾನನು ಬುರ್ಹಾನ ನಿಜಾಮಶಾಹನನ್ನು ಕೊಂದನು.- ಜೇಶಕಾ ಪುಟ-೧೬

ಬಂದು ಮುಟ್ಟಿದನು. ಆದರೆ ಮಲಿಕ ಅಂಬರನು ತನ್ನ ಮೂಲ ಉತ್ಪತ್ತಿಯ ನೀಚ ಕುಲವನ್ನು ಬಿಡಲಿಲ್ಲ. ಆತನ ಉತ್ಪತ್ತಿಯಲ್ಲಿ ಅಂತರವಿತ್ತು. ನಿಜವಾದ ಬೀಜದಿಂದ ಹುಟ್ಟಿರಲಿಲ್ಲ. ಕುರಾನ ಶರೀಫದಲ್ಲಿ ದೇವರು ಅಪ್ಪಣೆ ಕೊಡಿಸಿದಂತೆ, 'ನಮ್ಮೆಲ್ಲ ಸೇವಕರಲ್ಲಿ ಯಾವ ಸೇವಕನೂ ಉತ್ತಮನಿಲ್ಲ' ಎಂಬುದರ ತಾತ್ಪರ್ಯವೆಂದರೆ ಚಾಕರನಿದ್ದೂ ಪ್ರಾಮಾಣಿಕನಾಗಿರುವುದು ದುರ್ಮಿಳ ಎಂಬುದೇ ಆಗಿದೆ. 'ಪ್ರತಿಯೊಂದು ಪದಾರ್ಥವೂ ತನ್ನ ಮೂಲ ಬೀಜದ ಗುಣದಿಂದಲೇ ನಡೆಯುತ್ತದೆ' ಎಂದು ಹೇಳಿದಂತೆ, ಪ್ರತಿಯೊಬ್ಬ ಮನುಷ್ಯ ಅಥವಾ ವಸ್ತುವು ತನ್ನ ಜಾತಿಯ ಗುಣವನ್ನೆ ಪ್ರಸಿದ್ಧ ಪಡಿಸುತ್ತದೆ. ಅದರಂತೆ ಮಲಿಕ ಅಂಬರನು ತನ್ನ ಯಜಮಾನನಿಗೆ ಅಂದರೆ ಆದಿಲಶಾಹನಿಗೆ ಕೊನೆಗಾಲದಲ್ಲಿ ಬಹಳ ತೊಂದರೆ ಕೊಟ್ಟನು. ಆದಿಲಶಾಹನ ಮನಸ್ಸನ್ನು ತುಂಬ ಘಾಸಿಗೊಳಿಸಿದನು. ಯುದ್ಧಕಾಲದಲ್ಲಿ ಮಲಿಕ ಅಂಬರನು ಉದ್ದಂಡತನದಿಂದ ವಿಜಾಪುರ ಮತ್ತು ನವರಸಪುರಗಳನ್ನು ಲೂಟಿ ಮಾಡಿದಾಗ ತನ್ನ ಯಜಮಾನನ, ಧಣಿಯ ಮರ್ಯಾದೆಯ ಕುರಿತೂ ಯೋಚಿಸದೆ, ಅಯೋಗ್ಯನಂತೆ ನಡೆದುಕೊಂಡನು. ಆ ಕಾರಣದಿಂದಲೇ ರೈತರಿಗೆ ಆಧಾರದಂತಿದ್ದ ಆದಿಲಶಹನು, ಮಲಿಕ ಅಂಬರ ಹಾಗೂ ನಿಜಾಮಶಾಹಿಗಳ ಪ್ರತಿಯಾಗಿ ಮನಸ್ಸನ್ನು ಕೆಡಿಸಿಕೊಂಡನು. ಕ್ಷಮಾಶೀಲ ಸಹನಶೀಲನಾದ ಇಬ್ರಾಹಿಮ ಆದಿಲಶಹನು ಅವುಗಳನ್ನೆಲ್ಲ ಬದಿಗಿಟ್ಟು ಸೇಡು ತೀರಿಸಿಕೊಳ್ಳುವ ಇರಾದೆಯಿಂದ 'ನಿಜಾಮಶಾಹಿ ಜನರ ಮನೆತನವನ್ನೆ ನಾಶ ಮಾಡಬೇಕು, ನಿಜಾಮಶಾಹಿಗಳ ಜನರಲ್ಲಿ ಒಂದು ಗುರುತನ್ನು ಕೂಡ ಇಡಬಾರದೆಂದು' ನಿಶ್ಚಯಿಸಿದನು. ಪ್ರತಿಯಾಗಿ ನವಾಬ ಮುಸ್ತಫಾಖಾನನನ್ನು ಕಳಿಸಿ ಮೊಗಲರೊಂದಿಗೆ ಸಖ್ಯ ಮಾಡಿ ನಿಜಾಮಶಾಹನನ್ನು ಉಚ್ಚೇದಿಸಬೇಕು ಎಂದು ಇಚ್ಛಿಸಿದನು. ಇಷ್ಟರಲ್ಲಿ ಸನ್ ೧೦೩೮ (ಕ್ರಿ.ಶ. ೧೬೨೯ರಿಂದ ೩೦) ರಲ್ಲಿ ಶಾಹಜಹಾನ್ ಪಾದಶಹನ ವಕೀಲ ಶೇಖ ಮಶ್ನುದ್ದೀನನ್ನು[1] ತನ್ನ ಬಾದಶಹನು ಸಿಂಹಾಸದನ ಮೇಲೆ ಕುಳಿತುಕೊಂಡದ್ದರ ಬಗ್ಗೆ ಶುಭಾಶಯದ ಪತ್ರವನ್ನು ತೆಗೆದುಕೊಂಡು ಬಂದು ಮುಟ್ಟಿದ್ದನು. ಬಾದಶಹನ ಕಾಣಿಕೆಗಳನ್ನು ಮುಟ್ಟಿಸಿದನು. ಮುಸ್ತಫಾಖಾನನು ಇದೇ ಸಂಧಿಯನ್ನು ಸಾಧಿಸಿ ಖವಾಸಖಾನನ ಸಲಹೆಯನ್ನು ಕೇಳಿದನು. ನಿಜಾಮಶಹನನ್ನು ಸೋಲಿಸಲು ಮೊಗಲರೊಂದಿಗೆ ಸ್ನೇಹ ಮಾಡಿಕೊಳ್ಳುವುದನ್ನು ಮತ್ತು ನಿಜಾಮಶಹನ ರಾಜ್ಯವನ್ನು ಅರ್ಧ-ಅರ್ಧ ಹಂಚಿಕೊಂಡು ತೆಗೆದುಕೊಳ್ಳಬೇಕೆಂದು ವಿಚಾರಿಸಿದರು. ನಾನಾ ಪ್ರಕಾರದ ಲೋಭ ಹಾಗೂ ಆಶೆಗಳನ್ನು ತೋರಿಸಿದರು. ಆದರೂ ಖವಾಸಖಾನ, ಮುರಾರರಾವ್ ಹಾಗೂ ರಾಜ್ಯದ ಎಲ್ಲ ಸಂಭಾವಿತ ಜನರು ಈ ಬಗ್ಗೆ ಒಪ್ಪಿಕೊಳ್ಳಲಿಲ್ಲ. ಎಲ್ಲರ ಮನದಲ್ಲಿ ನಿಜಾಮಶಾಹನ ರಾಜ್ಯ ಹಾಳಾಗಬಾರದೆಂಬುದಾಗಿತ್ತು. ಅಂತೆಯೇ ಒಂದು ದಿನ ದರಬಾರದಲ್ಲಿ ಈ ಯುಕ್ತಿ ನಿರ್ಧರಿತವಾಗುತ್ತಿರುವಾಗ, ಅಮೀರುಲ್ ಉಮರಾವ ರಣದುಲ್ಲಾಖಾನನ ವಕೀಲ ಖಾಜಿ ಸೈಯದನು ಬಾದಶಹನಿಗೆ ವಿನಂತಿ ಮಾಡಿಕೊಂಡನು.

"ಅಧಿಕ ರಾಜ್ಯದಾಶೆಯಿಂದ ನಿಜಾಮಶಹನ ನಾಶ ಮಾಡಲು ಮೊಗಲರೊಂದಿಗೆ ಸಖ್ಯ ಮಾಡಿಕೊಳ್ಳುವುದು ನನಗೆ ಸರಿ ಕಾಣುವುದಿಲ್ಲ ಎನಿಸುತ್ತದೆ. ನನ್ನ ಬುದ್ಧಿಗೆ ಇದು ಯೋಗ್ಯವೆನಿಸುವುದಿಲ್ಲ. ನನ್ನನ್ನು ಕೇಳಿದರೆ ನಿಜಾಮಶಹನ ರಾಜ್ಯವನ್ನು ಕಾಯಮಾಗಿ ಮತ್ತು ಸ್ಥಿರವಾಗಿ ಉಳಿಯುವಂತೆ ಯತ್ನ ಮಾಡುವುದೇ ಸರಿ ಎಂದು ಕಾಣುತ್ತದೆ. ಈ ವಿಷಯದಲ್ಲಿ ನಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಬೇಕು.

---

1. "On 10th Jamadiulawwal, 1041 AH (24 Nov 1631) Shaikh Mughamiya ambassador of shah Jahan came and it was settled that the kingdom of Nizam shah may be devided between the two sovereigns"- Mahammad Nama p-82.

ಒಂದು ವೇಳೆ ನಿಜಾಮಶಹನ ನಾಶವಾದರೆ, ನಮಗೆ ಮೊಗಲರ ನೆರೆಹೊರೆ ಪ್ರಾಪ್ತವಾಗುತ್ತದೆ. ಮೊಗಲರ ಹಾಗೂ ನಮ್ಮ ಸರಹದ್ದು ಒಂದೇ ಆಗುತ್ತದೆ. ಒಂದು ವೇಳೆ ಮೊಗಲರೊಂದಿಗೆ ಒಂದು ವೇಳೆ ವೈರಭಾವ ಉತ್ಪನ್ನವಾದರೆ, ದೊಡ್ಡ ಸಂಕಟವೆ ಪ್ರಾಪ್ತವಾಗುತ್ತದೆ. ಆ ಸಂಕಟದ ನಿವಾರಣೆ ನಮ್ಮಿಂದ ಆಗುವುದು ಸಾಧ್ಯವೇ ಇಲ್ಲ"

ಈ ಮಾತುಗಳಿಂದ ಮುಸ್ತಫಾಖಾನನು ಕಾಜಿ ಸೈಯದನ ಮೇಲೆ ಬಹಳ ಸಿಟ್ಟಿಗೆ ಬಂದನು. ಖವಾಸಖಾನನು ಈ ಮೂರ್ಖತನದ ನಡತೆ ಅಯೋಗ್ಯವೆಂದೇ ತಿಳಿದಿದ್ದನು. ಆದರೆ ಖವಾಸಖಾನನು ಈ ಮೊದಲೆ ಮುಸ್ತಫಾಖಾನನೊಂದಿಗೆ ಒಪ್ಪಂದ ಮಾಡಿಕೊಂಡಿದ್ದನು. ಆದ್ದರಿಂದ ಪ್ರತಿಯೊಂದು ವಿಷಯದಲ್ಲಿ ಮುಸ್ತಫಾಖಾನನ ಮಾತಿನಂತೆ ನಡೆಯುತ್ತಿದ್ದನು. ಮುಸ್ತಫಾಖಾನನ ಹೇಳಿಕೆಯ ಮೇರೆಗೆ ಮೊಗಲರೊಂದಿಗೆ ಕೂಡಿಕೊಂಡನು. ಹಳೆಯ ಅಮೀರ ಜನರಾದ ಅಂಬರಖಾನ, ಅಂಕುಶಖಾನ, ಸರ್ಜೇರಾವ ಘಾಟಗೆ ಮೊದಲಾದವರಿಗೆ, ಅಧಿಕ ಜಹಗೀರುಗಳನ್ನು ಕೊಟ್ಟು, ಫರಹಾದಖಾನ, ಖೈರತಖಾನರನ್ನು ತಮ್ಮೊಂದಿಗೆ ಸೇರಿಸಿಕೊಂಡು ರಣದುಲ್ಲಾಖಾನನ ಜೊತೆಗೆ ಕೊಟ್ಟು, ಆ ಸೈನ್ಯವನ್ನು ಮೊಗಲರ ಸಹಾಯಕ್ಕಾಗಿ ಕಳಿಸುವುದೆಂದು ನಿರ್ಧರಿಸಿದರು. ಆಗ ಆದಿಲಶಹ ಹಾಗೂ ಮೊಗಲರ ಮಧ್ಯ ಒಪ್ಪಂದ ಮಾಡಿಕೊಳ್ಳುವುದೆಂದು ನಿಶ್ಚಯವಾಯಿತು. ನಿಜಾಮಶಹನ ರಾಜ್ಯವನ್ನು ಉಭಯತರು ಅರ್ಧರ್ಧ ಹಂಚಿಕೊಳ್ಳುವುದೆಂದೂ ನಿರ್ಧರಿಸಿತು. ಉಭಯತರ ಮಧ್ಯ ಕರಾರು-ಒಪ್ಪಂದಗಳಾದ ಮೇಲೆ ಸುಲ್ತಾನ ಮಹಮ್ಮದ ಆದಿಲಶಹನು ಶೇಖ ಮೊಯಿನುದ್ದೀನ ಸಾಹೇಬನಿಗೆ ಮೆಹರಬಾನಿಯಿಂದ ವಸ್ತ್ರಗಳನ್ನು ಮತ್ತು ಕಾಣಿಕೆಗಳನ್ನು ಕೊಟ್ಟು ನಿರೋಪ ಕೊಟ್ಟನು. ಆದರೆ ಈ ಯೋಜನೆಯ ನಿರ್ಧಾರದಿಂದ ಮತ್ತು ನಿಜಾಮಶಾಹನ ಉಚ್ಛೇದ ಮಾಡಲು ಮೊಗಲರೊಂದಿಗೆ ಕೈಜೋಡಿಸಿದ ವಿಚಾರಗಳಿಂದ ರಾಜ್ಯದ ಎಲ್ಲ ಕಾಮದಾರರು, ಮತ್ತು ಹಳೆಯ ಕಾರಭಾರಿ ಮಂಡಳಿಯು ನಿಜಾಮಶಹನೊಂದಿಗೆ ವೈರತ್ವವನ್ನು ಕಟ್ಟಿಕೊಂಡ ಬಗ್ಗೆ ಮುಸ್ತಫಾಖಾನನನ್ನು ಕೆಟ್ಟ ದೃಷ್ಟಿಯಿಂದ ನೋಡತೊಡಗಿದರು. ಅವರ ಮನ ನೊಂದಿತು. ಕೊನೆಗೆ ಸಾವಕಾಶವಾಗಿ ಖವಾಸಖಾನ ಮತ್ತು ಮುಸ್ತಫಾಖಾನರ ಮಧ್ಯ ವಿರಸ ಬಂದಿತು. ಅದನ್ನೂ ಮುಂದೆ ಬರೆಯಲಾಗಿದೆ. ರಾಯಭಾರಿಯು ಹೋದ ನಂತರ ಕೆಲವೆ ದಿನಗಳಲ್ಲಿ, ಮೊಗಲರೊಂದಿಗೆ ಒಪ್ಪಂದವಾದ ಕರಾರುಗಳು ಮುರಿದು ಬಿದ್ದಿವೆ ಎಂಬ ಸುದ್ದಿ ಬಂದಿತು. ಅದಕ್ಕೆ ಕಾರಣವೆಂದರೆ, ಆ ಸೈನ್ಯವು ತನ್ನ ಸರಹದ್ದನ್ನು ರಕ್ಷಣೆ ಮಾಡಿಕೊಳ್ಳುವ ಸ್ಥಳದಲ್ಲಿರದೆ ಮುಂದೆ ಬಂದು ಕೇಜ ಧಾರೂರದ ಕೋಟೆಯವರೆಗೂ ಬಂದು ಮುಟ್ಟಿತ್ತು.[2] ಈ ಸುದ್ದಿ ಬಂದು ಮುಟ್ಟುತ್ತಿದ್ದಂತೆಯೇ ಆದಿಲಶಹನು ಗುಪ್ತಚಾರರೊಂದಿಗೆ ಮರ್ಜ್ಯಾನಕ್ಕೆ ಪತ್ರ ಕಳಿಸಿ ಶೇಖ ಮೊಯಿನುದ್ದೀನನನ್ನು ಬಂಧಿಸಿದನು.

### ೭. *ಶಾಹಜಹಾನ ಬಾದಶಹನ ಆಜ್ಞೆಯಂತೆ ಆಸಫಖಾನನು ಬಹಳ ಸೈನ್ಯದೊಂದಿಗೆ ಬಂದು ಆದಿಲಶಹನ ರಾಜ್ಯದಮೇಲೆ ದಾಳಿ ಮಾಡಿದ್ದು :*

ಈ ಮೊಕದ್ದಮೆಯ ಮೊದಲೇ ಶಾಹಜಹಾನ ಬಾದಶಹನು ಖಾಜಾ ಅಬುಲ ಹಸನ ದಿವಾಣ ಹಾಗೂ ಬಕ್ಷಿಯನ್ನು, ದಕ್ಷಿಣದೇಶದ ವ್ಯವಸ್ಥೆ ಮಾಡಲು ಮತ್ತು ನಿಜಾಮಶಹನ ರಾಜ್ಯವನ್ನು ಕೈವಶ ಮಾಡಿಕೊಳ್ಳಲು ಬುರ್ಹಾಣಪುರದಲ್ಲಿ ನಿಯಮಿಸಿ ಇಟ್ಟಿದ್ದನು. ಖಾಜಾ ಅಬುಲ ಹಸನನು ಬುರ್ಹಾಣಪುರದಿಂದ,

2. "On the 23rd Jamadas -Sani. Julus 4, 1040 A.H. (Jan 1631) ....Azam Khan entered the fort of Dharoor" Badshah Nama E.D. P -70

ಇರಾದತ್‌ಖಾನನನ್ನು ಪರಾಂಡೆಯ ಕೋಟೆಯನ್ನು ವಶಪಡಿಸಿಕೊಳ್ಳಲು ನಿಯಮಿಸಿದ್ದನು. ನಸರತಖಾನನನ್ನು ಕಂಧಾರ ಕೋಟೆಗಾಗಿ ನಿಯಮಿಸಿದ್ದನು. ನಸರತಖಾನನು ಕಂಧಾರವನ್ನು ಮುತ್ತಿ ಹಲ್ಲೆ ಮಾಡಿದನು.[೧] ಇರಾದತಖಾನನು ಪರಾಂಡೆಯಮೇಲೆ ಹೋಗಿ ನೋಡಿದರೆ, ಪರಾಂಡಾ ಕೋಟೆ ಅಷ್ಟು ಸುಲಭವಾಗಿ ಕೈವಶವಾಗುವುದಿಲ್ಲವೆಂದು ತಿಳಿದು ಅಲ್ಲಿಂದ ಹೊರಟು ಧಾರೂರ ಕೋಟೆಯ ಮೇಲೆ ಹಲ್ಲೆ ಮಾಡಿದನು. ಕೆಲವು ದಿನಗಳಲ್ಲಿ ಕೋಟೆಯನ್ನು ವಶಪಡಿಸಿಕೊಂಡನು. ಅನಂತರ ನಸರತಖಾನನು ಬಹಳ ಯತ್ನ ಮಾಡಿ ಕಂಧಾರ ಕೋಟೆಯನ್ನು ವಶಪಡಿಸಿಕೊಂಡನು. ಈ ಸಮಯದಲ್ಲಿ ಶೇಖ ಮುಯಿನುದ್ದೀನನ ಬಂಧನದ ಸುದ್ದಿ ಶಹಾಜಹಾನ ಬಾದಶಹನಿಗೆ ಬಂದು ಮುಟ್ಟಿತು. ಆಗ ಶಹಾಜಹಾನನು ನೂರಜಹಾನ ಬೇಗಮಳ ಅಣ್ಣ ಅಸಫಖಾನನನ್ನು ಬೇರೆ ಅನೇಕ ಅಮೀರಜನರೊಂದಿಗೆ ಅಬ್ದುಲ್ಲಾಖಾನ, ಖಾನಾಜಾದಾಖಾನ, ಬಹಾದೂರಖಾನ, ಅಮೀದತಖಾನ, ರಾಜಾ ಕಪಸಿಂಗ, ರಾಜಾರಾಮ ಮೊದಲಾದವರೊಂದಿಗೆ ಅತ್ತ ನಿಯಮಿಸಿದನು. ಆಗ ಅಸಫಖಾನನು ಅಮೀರ ಜನರೊಂದಿಗೆ ಬುರ್ಹಾಣಪುರಕ್ಕೆ ಹೋಗಿ ಮುಂದೆ ಹೆಜ್ಜೆ ಇಟ್ಟನು. ಅಬುಲ ಹಸನ ಮತ್ತು ಈರಾದತಖಾನರನ್ನು ಸೇರಿಸಿಕೊಂಡು ದೊಡ್ಡ ಜರಬಿನಿಂದ ಲೂಟಿ ಮಾಡುತ್ತ, ಆಹಸನಾಬಾದದ ವರೆಗೆ ಹೋದನು. ಅಲ್ಲಿಯೂ ಸಾಕಷ್ಟು ಸೈನ್ಯವನ್ನು ಸಂಗ್ರಹಿಸಿದನು. ದಾರಿಯಲ್ಲಿ ಲೂಟಿ ಮಾಡುತ್ತ- ಪ್ರದೇಶಗಳನ್ನು ಹಾಳು ಮಾಡುತ್ತ ಮಾಡುತ್ತ ವಿಜಾಪುರದ ಹತ್ತಿರವೆ ಬಂದನು, ಯಾವ ಭಯಗಳಿಲ್ಲದೆ ರಂಗಾರಿಯ ಹೌಜಿನವರೆಗೆ ಬಂದು ಬೀಡು ಬಿಟ್ಟನು. ಉದ್ದಂಡತನದಿಂದ ಪ್ರತಿನಿತ್ಯ ಲೂಟಾ-ಲೂಟಿಯಲ್ಲಿ ತೊಡಗಿದನು.

ಆಗ ಆದಿಲಶಹನ ಸೈನಿಕರು ಆತನನ್ನು ಎದುರಿಸಲು ನಿತ್ಯ ಬಂದು ಯುದ್ಧ ಮಾಡುತ್ತಿದ್ದರು. ಒಂದು ದಿನ ಉಭಯತರಲ್ಲಿ ದೊಡ್ಡ ಯುದ್ಧವೇ ಜರುಗಿತು.[೨] ಆ ಯುದ್ಧದಲ್ಲಿ ದೆಹಲಿ ಸೈನ್ಯದ ನಾಮಾಂಕಿತ ಅಮೀರನಾದ ಸಿಕಂದರ ಅಲಿಯು ಸತ್ತನು. ಅನಂತರದ ಐದಾರು ದಿನಗಳಲ್ಲಿ ಮೊಗಲರ ಸೈನ್ಯವು ಕೋಟೆಯ ಸುತ್ತಲೂ ಮುತ್ತಿಗೆ ಹಾಕಿ, ನಗರದ ಸುತ್ತಲೂ ತಿರುಗಹತ್ತಿತು. ದಬ್ಬಾಳಿಕೆ ನಡೆಸಹತ್ತಿದರು. ಆದಿಲಶಾಹಿ ಸೈನ್ಯ ಕೆಚ್ಚೆದೆಯಿಂದ ಮೊಗಲ ಸೈನ್ಯವನ್ನು ಎದುರಿಸಿತು. ಆದಿಲಶಾಹಿ ಸೈನ್ಯದ ಪರಾಕ್ರಮದಿಂದಾಗಿ ಮೊಗಲರ ಸೈನ್ಯಕ್ಕೆ ಧೈರ್ಯ ಸಾಲದಾಗಿ ಗಾಬರಿಯಾಯಿತು. ರಂಗಾರಿಯ ಹೌದಿನ ಹತ್ತಿರ ಇಳಿದಿದ್ದ ಸೈನ್ಯವು, ದಾಟಿ ಇನ್ನೊಂದು ಬದಿಗೆ ಹೋಗಿ ದೂರ ಹೊರಟು ಹೋಯಿತು[೩] ದಕ್ಷಿಣದ ಜನರು ಪರಾಕ್ರಮದಿಂದ ಹಲ್ಲೆಯನ್ನು ಮಾಡುತ್ತ ಹತ್ತುಪಟ್ಟು ಧೈರ್ಯದಿಂದ ಮೊಗಲರ ಮೇಲೆ ಬಿದ್ದರು. ಹಿಂದೆ-ಹಿಂದೆ ಹೋದ ಮೊಗಲ ಸೈನ್ಯ ಆಜಿನಿಯಿಂದಲೂ ಹಿಂದೆ ಸರಿದು ಆ ಸ್ಥಳವನ್ನು ಬಿಟ್ಟರು ಓಡಿದರು. ಅವರು ಬೆದರಿದ್ದನ್ನು ಕಂಡ ದಕ್ಷಿಣ ಸೈನ್ಯ ಮೊಗಲರ ಬೆನ್ನು ಹತ್ತಿ ಹಲ್ಲೆಯ ಮೇಲೆ ಹಲ್ಲೆ ಮಾಡಿದರು. ಮೊಗಲರ ಸೈನ್ಯ ಚದುರಿ ಓಡಹತ್ತಿತು. ಆಗ ದಕ್ಷಿಣದ ಜನರು ಅವರ ಬೆನ್ನು ಬಿಡದೆ

1. "On the 23rd Jamadal-awwal, Julus 4, A.H. 1040 (18, Dec 1630) Naziri Khan Encamped one kos from the fortress (khandhar).... The siege had lasted four months and nineteen days) and the place fell on 15th shawwal (7 May 1631)" Badshah Nama E.D. P 26-27.
2. The Mughals again attacked on 2nd Shaaban 1041 A.H. (13 Feb 1632) but they were defeated -Md-Nama p-83
3. At last on 9th Shaaban (20 Feb 1632) they attacked in full fury.... battle ensued..... again defeated Ibid - p.83

ಹಲ್ಲೆ ಮಾಡಿದರು. ಮುರಾರಿಯು ಆದಿಲಶಾಹಿ ಸೈನ್ಯದ ಮುಖ್ಯಸ್ಥನಾಗಿದ್ದನು. ಅವನು ದೆಹಲಿಯ ಸೈನ್ಯವನ್ನು ಸರಹದ್ದಿನವರೆಗೂ ಓಡಿಸಿ ಗಡಿಯಾಚೆ ದಬ್ಬಿ, ತಿರುಗಿ ಬಂದು ಪರಾಂಡೆಯ ಕೋಟೆಯಲ್ಲಿ ಉಳಿದುಕೊಂಡನು.

### ೮. *ಮುರಾರಿ ಪಂಡಿತನು, ಸುಲ್ತಾನ ಮಹಮ್ಮದ ಆದಿಲಶಹನ ಆಣತಿಯಂತೆ, ಪರಾಂಡಾ ಕೋಟೆಯ ಮೇಲಿನ ಮಲಿಕ ಮೈದಾನ ತೋಫನ್ನು ವಿಜಾಪುರಕ್ಕೆ ತಂದದ್ದು :*

ಈ ಮೊದಲು ಬಹಳ ದಿನಗಳಿಂದ ಆಕಾ ರೆಜವಾನನು ಬುರಹಾನ ನಿಜಾಮಶಹನ ಪರವಾಗಿ ಪರಾಂಡಾ ಕೋಟೆಯ ಮುಖ್ಯಸ್ಥನಾಗಿದ್ದನು. ನಿಜಾಮಶಹನ ರಾಜ್ಯದಲ್ಲಿ ಗದ್ದಲವಾದಾಗ, ಆತ ಆದಿಲಶಹನ ಪಕ್ಷಕ್ಕೆ ಸೇರಿದ್ದನು. ಆದಿಲಶಹನ ಸೇವೆಯ ಸರಪಳಿಯನ್ನು ತನ್ನ ಕೊರಳಲ್ಲಿ ಧರಿಸಿ ಪರಾಂಡೆಯ ಕೋಟೆಯನ್ನು ಆದಿಲಶಹನ ವಶಕ್ಕೆ ಒಪ್ಪಿಸಿದ್ದನು.[೧] ಆದ್ದರಿಂದ ಮುರಾರರಾವನು ದೆಹಲಿ ಜನರ ಬೆನ್ನು ಹತ್ತಿ, ಅವರನ್ನು ದಬ್ಬಿ ತಿರುಗಿ ಬಂದು ಪರಾಂಡಾ ಕೋಟೆಯಲ್ಲಿ ಇದ್ದನು. ಆಗ ಆದಿಲಶಹನು ಮುರಾರರಾವನಿಗೆ 'ಪರಾಂಡಾ ಕೋಟೆಯ ಮೇಲೆ ಮಲಿಕಮೈದಾನ ಎಂಬ ತೋಫು ಇದೆ. ಅದನ್ನು ಅಲ್ಲಿಂದ ವಿಜಾಪುರಕ್ಕೆ ಕಳಿಸಬೇಕು' ಎಂದು ಆಜ್ಞೆ ಮಾಡಿದನು. ಆಗ ಮುರಾರರಾವನು ಆದಿಲಶಹನ ಆಣತಿಯಂತೆ, ಮಲಿಕ ಮೈದಾನ ತೋಫನ್ನು ಪರಾಂಡೆಯ ಕೋಟೆಯಿಂದ ವಿಜಾಪುರಕ್ಕೆ ತಂದು, ದಿನಾಂಕ ೧೫ ತಿಂಗಳು ಸಫರ ಸನ್ ೧೦೪೨ (೨೨, ಆಗಸ್ಟ ೧೬೩೨) ರಂದು ಶಹಾಪುರ ಬಾಗಿಲು ಮತ್ತು ಮಲಿಕ ಬಾಗಿಲುಗಳ ಮಧ್ಯಭಾಗದಲ್ಲಿ, ನಗರದ ಪಶ್ಚಿಮ ಭಾಗದಲ್ಲಿ ಪ್ರಸಿದ್ಧವಾದ ಬುರುಜಿನ ಮೇಲೆ ಇಟ್ಟರು.[೨] ಆ ತೋಫು ಬಹಳ ದೊಡ್ಡದಾಗಿದೆ. ಅಷ್ಟಧಾತು ಮತ್ತು ಸೀಸುಗಳಿಂದ ಹೊಯ್ದು ಆ ತೋಫು ೬೦ ಖಂಡಿ ಭಾರವಿದೆ ಎಂದು ಹೇಳುತ್ತಾರೆ. ಆದರೆ ಇಂಗ್ರಜಿ ಬಹಾದ್ದೂರರ ಆಳ್ವಿಕೆಯಲ್ಲಿ ಒಬ್ಬ ಚತುರ ಕಾರಿಗಾರನು ತೋಫಿನ ಭಾರವನ್ನು ೩೨೦೦ ರತ್ತಲ ಎಂದು ಹೇಳಿದ್ದಾನೆ. ಒಂದು ಸೇರಿಗೆ ೨ ರತ್ತಲು. ಆ ತೋಫು ಮೊದಲು ಅಹಮದ ನಗರದಲ್ಲಿತ್ತು. ನಿಜಾಮಶಹನ ಆಜ್ಞೆಯಂತೆ ರೂಮದೇಶದ ಕಾರಾಗಿರಿಯೊಬ್ಬನು ಅದನ್ನು ತಯಾರಿಸಿದ್ದಾನೆ. ರಾಮರಾಜನ ಜೊತೆಯ ಯುದ್ಧದಲ್ಲಿ ಅದು ನಿಜಾಮಶಹನ ಜೊತೆಗೆ ಇತ್ತು. ಈ ತೋಫನ್ನು ಹೊಯ್ದ ಮುಸಿಯು ಇಂದಿಗೂ- ಅಹಮದನಗರದಿಂದ ಒಂದು ಕೋಸು ಅಂತರದ ಮೇಲಿದೆ. ಅದರ ಗುರುತು ಈಗಲೂ ಇದೆ. ಮುಲುಕ ಮೈದಾನ ತೋಫಿನ ಉದ್ದವು ಪುರುಷನ ಒಂಭತ್ತು ಕೈಗಳಷ್ಟು ಇದೆ. ತೋಫಿನ ಪರೀಘವೂ ಒಂಭತ್ತು ಕೈಗಳಷ್ಟಿದೆ. ತೋಫಿನ ಮದ್ದು ತುಂಬುವ ಬಾಯಿ ತುಂಬ ವಿಸ್ತೀರ್ಣವಾಗಿದೆ. ಅದರಲ್ಲಿ ಒಬ್ಬ ದಪ್ಪ ಮನುಷ್ಯ ಕುಳಿತು ತನ್ನ ರುಮಾಲನ್ನು ಸುತ್ತಿಕೊಳ್ಳುವಷ್ಟು ಅಗಲವಾಗಿದೆ. ತೋಫು ನೋಡತಕ್ಕಂಥ ವಸ್ತುವಾಗಿದೆ. ಈ ಕಾಲದಲ್ಲಿಯೂ ಅದೊಂದು ದೊಡ್ಡ ಚಮತ್ಕಾರಿಕ ಅಪೂರ್ವ ವಸ್ತುಗಳಲ್ಲೊಂದಾಗಿದೆ. ದೂರ-ದೂರದ ವರೆಗೆ ನಾಲ್ಕು ಕಡೆಗಳಲ್ಲೂ ಪ್ರಸಿದ್ಧವಾಗಿದೆ. ಹೊಸದಾಗಿ ವಿಜಾಪುರಕ್ಕೆ ಬಂದ ವ್ಯಕ್ತಿಯು, ಮಲಿಕ ಮೈದಾನ ತೋಫು ಹೇಗಿದೆ ಎಂದು ಬಹಳ ಆಸ್ಥೆಯಿಂದ ನೋಡುತ್ತಾನೆ. ದೂರದೇಶದ ಜನ ಬಂದು ತೋಫನ್ನು ನೋಡಿ ವಿಸ್ಮಿತರಾಗುತ್ತಾರೆ.

---

1. "On the 10th Muharram 1042 A.H. (18th July 1632) Aqua-Rezwan, whose title was Haibat Khan, revolted against Nizamshah. and offered parenda to Adilshah-Mahammd Nama p-81
2. Muhammad Nama P - 82.

*೯. ಬುರ್ಹಾನ ನಿಜಾಮಶಹನ ಮಗನನ್ನು ಫತೇಖಾನನು ಸಿಂಹಾಸನದ ಮೇಲೆ ಕುಳ್ಳಿರಿಸುತ್ತಾನೆ. ಮತ್ತು ಮೊಹಬ್ಬತಖಾನನು ದೌಲತಾಬಾದನ್ನು ಕೈವಶಮಾಡಿಕೊಳ್ಳಲು ಬಂದು ಮುಟ್ಟಿದ್ದು ಸುಲ್ತಾನ ಮಹಮ್ಮದ ಆದಿಲಶಹನು ದೌಲತಾಬಾದಿನ ಸಂರಕ್ಷಣಾರ್ಥ ಸಹಾಯ ಕಳಿಸಿದ್ದು :*

ಆಸಫಖಾನನಿಗೆ ಸೋಲುಂಟಾಗಿ, ದೆಹಲಿ ಸೈನ್ಯ ತಿರುಗಿದ ಸುದ್ದಿ ಶಹಾಜಹಾನನಿಗೆ ತಿಳಿದಾಗ ಆತನ ಮನಸ್ಸಿಗೆ ಬೇಸರವಾಗಿ, ಬಹಳ ಸಿಟ್ಟಿಗೆ ಬಂದನು. ಈ ವಿಷಯದಲ್ಲಿ ಸೇಡು ತೀರಿಸಿಕೊಳ್ಳುವ ವಿಚಾರದಲ್ಲಿ ಬಿದ್ದನು. ಮಹಾಬ್ಬತಖಾನ ಹೆಸರಿನಲ್ಲಿ ಆಜ್ಞಾಪತ್ರವನ್ನು ಬರೆದು, ಸುಬೆ ಲಾಹೋರಿಗೆ ಕಳಿಸಿದನು. ಮೊಹಬತಖಾನನು ರಾಜಧಾನಿಗೆ ಬಂದು ಮುಟ್ಟಿದನು. ಆಗ ಆತನಿಗೆ ಖಾನದೇಶ ಸುಭೆಯ ಕೆಲಸವನ್ನು ನೇಮಿಸಿ ದಕ್ಷಿಣ ದೇಶದ ವ್ಯವಸ್ಥೆಗಾಗಿ ಮತ್ತು ನಿಜಾಮಶಹನ ರಾಜ್ಯವನ್ನು ವಶಪಡಿಸಿಕೊಳ್ಳಲು ನಿಯಮಿಸಿದನು. ಮೊಹಬತಖಾನನು ಬಹಳ ಸೈನ್ಯ ಸಾಮಾನು ಸರಂಜಾಮುಗಳೊಂದಿಗೆ ದಕ್ಷಿಣ ದೇಶದ ಮೇಲೆ ಹೊರಟನು. ಬುರ್ಹಾನಪುರಕ್ಕೆ ಬಂದು ಮುಟ್ಟಿ ಅಲ್ಲಿಯೆ ಇರಹತ್ತಿದನು. ಈ ಮೊದಲೆ ಫತ್ತೆಖಾನನ ಕೈಯಲ್ಲಿ ಬುರ್ಹಾಣ ನಿಜಾಮಶಹನು ಸತ್ತಿದ್ದನಷ್ಟೆ. ಫತ್ತೇಖಾನನು ಬುರ್ಹಾನ ನಿಜಾಮಶಹನ ೭ ವರುಷದ ಮಗ ಶಾಹ ಹುಸೇನನನ್ನು ತಂದು ನಿಜಾಮಶಾಹೀ ಸಿಂಹಾಸನದ ಕುಳ್ಳಿರಿಸಿದ್ದನು. ಆತನ ಮೇಲೆ ಬಾದಶಾಹೀ ಛತ್ರ ಚಾಮರಗಳನ್ನು ಹಿಡಿದಿದ್ದನು. ರಾಜ್ಯದ ಸೂತ್ರಗಳನ್ನು ತನ್ನ ಕೈಯಲ್ಲೆ ಇಟ್ಟುಕೊಂಡು ತಾನೆ ಪ್ರಧಾನನಾಗಬೇಕೆಂದು ವ್ಯವಸ್ಥೆಯನ್ನು ಮಜಬೂತಾಗಿಸಿಕೊಳ್ಳುತ್ತಿದ್ದನು. ತನ್ನ ಜೊತೆಯ ಕಾರಭಾರಿಗಳಲ್ಲಿ ಸಂಶಯ ಬಂದವರನ್ನೆಲ್ಲ ತೆಗೆದು ಹಾಕುವ ವಿಚಾರದಲ್ಲಿದ್ದನು. ಸಾಬಾಜಿ ಆನಂದರಾವ (ಅನಂತ) ಎಂಬವನು ಮಲಿಕ ಅಂಬರನ ಬಹು ದೊಡ್ಡ ವಿಶ್ವಾಸಿಕನಾಗಿದ್ದನು. ಸಿವಾಜಿಪಂತ ಮುತ್ಸದ್ದಿ, ಸಖಾರಾಮ ಮೊಕಾಶಿ ಕಾರಭಾರಿಗಳು ಶ್ರೇಷ್ಠರೂ ಸಂಭಾವಿತರೂ ಆಗಿದ್ದರು. ಇವರೆಲ್ಲ ಫತೇಖಾನನ ಭಯದಿಂದ ಓಡಿ ಹೋಗಿ, ಶಹಾಜಹಾನ ಬಾದಶಹನ ಸೇವೆಯಲ್ಲಿ ಇರಹತ್ತಿದರು. ಆದರಂತೆಯೇ ಬೇರೆ ಅನೇಕ ಕಾರಭಾರಿ ಮಂಡಳಿ ಜನರು ಮತ್ತು ಅಮೀರರು ಖದೀಮ ಮತ್ತು ಜದಿದ (ಅಂದರೆ ಹಳಬರು ಹೊಸಬರು) ಇದ್ದವರೆಲ್ಲ ಭಯಭೀತರಾಗಿ ನಗರವನ್ನು ಬಿಟ್ಟು ಬೇರೆ ಬೇರೆ ಸ್ಥಳಗಳಿಗೆ ಹೋಗಿ ತಮ್ಮ ಪ್ರಾಣ ಹಾಗೂ ಗೌರವಗಳನ್ನು ರಕ್ಷಿಸಿಕೊಂಡು ಇರಹತ್ತಿದರು.

ರಾಜಧಾನಿಯಲ್ಲಿ ಅಧಿಕಾಧಿಕವೆಂದರೆ ಸಾವಿರಸ್ವಾರರು ಮತ್ತು ತುಸು ಕಾರಭಾರಿ ಮಂಡಳಿ ಕೆಲವು ಅಮೀರರು ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಇದ್ದರು. ಆದರಲ್ಲಿಯೇ ಆ ವರುಷ ಬರವೂ ಬಿದ್ದಿತು.[೧] ಗದ್ದಲದಲ್ಲಿಯೇ ಪ್ರಳಯವೂ ಎದ್ದು ನಿಂತಂತಾಯಿತು. ಧಾನ್ಯ ಸಂಗ್ರಹ ಖಾಲಿಯಾಯಿತು. ಒಂದು ದಮಡಿಗೆ, ದಮಡಿ ಎಂದರೆ ರೂಪಾಯಿಯ ಒಂದು ತುಂಡು, ಎರಡು ಸೇರು ಕಾಳುಗಳು ಮಾರಹತ್ತಿದುವು. ಕೊನೆ-ಕೊನೆಗೆ ಬರದ ಪ್ರಳಯ ಪ್ರಮಾಣ ಎಷ್ಟೊಂದು ಘೋರವಾಯಿತೆಂದರೆ, ಮನುಷ್ಯರ ದೇಹದ ಮಾಂಸವನ್ನೆ ಮನುಷ್ಯರು ತಿನ್ನಬೇಕಾಯಿತು. ಆದರೆ ದೌಲತಾಬಾದಿನಲ್ಲಿ ಬಹಳಷ್ಟು ಧಾನ್ಯ ಸಂಗ್ರಹವಿತ್ತು. ಫತೇಖಾನನು ಪ್ರತಿಯೊಂದು ಕುದುರೆಗೂ ಎರಡು ಸೇರು ಚಂದಾ ಎಂದು ನಿರ್ಧರಿಸಿದ್ದನು. ಆದರಂತೆ ಸ್ವಾರರು ಮತ್ತು ಸಿಬ್ಬಂದಿಗಳೂ ಧಾನ್ಯವನ್ನು ತಂದು ಮುಟ್ಟಿಸುವ ವಿಷಯದಲ್ಲಿ

---

೧. ಈ 'ವರುಷ ದುಷ್ಕಾಳ ಬದ್ದಿತು' ಜೇಧೇ ಶಕಾವಲಿ ಪುಟ ೧೬ ನೋಡಿ –ಬಾದಶಹನಾಮಾ E.D. ಪು ೨೪–೨೫.

ಮತ್ತು ನಗರದ ಜನರಿಗೆ ಸಹಾಯ ನೀಡುವಲ್ಲಿ ಯತ್ನ ಮಾಡುತ್ತಿದ್ದರು. ಈ ತರಹದ ಪ್ರಳಯ ಮತ್ತು ಫತೇಖಾನನ ಉಪದ್ರವ ಮತ್ತು ಬರ ಒಂದು ವರುಷದವರೆಗೆ ನಡೆಯಿತು.

ಮಹಾಬತಖಾನನಿಗೆ ಈ ವಿಷಯ ತಿಳಿಯುತ್ತಿದ್ದಂತೆ, ೪೦ ಸಾವಿರ ಸೈನಿಕರನ್ನು ತೆಗೆದುಕೊಂಡು ಬುರಾಣಪುರದಿಂದ ದೌಲತಾಬಾದಿನ ಕಡೆಗೆ ಹೊರಟನು.[2] ಸುಲ್ತಾನ ಮಹಮ್ಮದನಿಗೆ ಈ ಸುದ್ದಿ ತಿಳಿದ ನಂತರ ಇದೊಂದು ದೊಡ್ಡ ಸಂಕಟದ ಸಮಯವೆಂದು ತಿಳಿದು ಪೂರ್ತಿಯಾಗಿ ಎಚ್ಚರಿಕೆಯಿಂದ ಇದ್ದನು. ಮದತ ಮತ್ತು ಸಹಾಯಮಾಡುವಲ್ಲಿ ತನ್ನ ಉಳಿಗಾಲವಿದೆ ಎಂದು ತಿಳಿದು ತನ್ನ ರಾಜ್ಯದ ಅಮೀರ ಜನರೊಂದಿಗೆ ಬಹಳಷ್ಟು ಸೈನ್ಯವನ್ನು ಕೊಟ್ಟು ರಣದುಲ್ಲಾಖಾನನೊಂದಿಗೆ ದೌಲತಾಬಾದದ ಕಡೆಗೆ ಕಳಿಸಿದನು. ಆದಿಲಶಾಹನ ಸೈನ್ಯ ಬಂದು ಮುಟ್ಟುವಷ್ಟರಲ್ಲಿ ಮಹಾಬತಖಾನನೂ ಅತಿ ವೇಗದಿಂದ ದೌಲತಾಬಾದಿನ ಕಸಬೆಯಲ್ಲಿ ಬಂದು ಮುಟ್ಟಿದ್ದನು. ಅವನು ದೌಲತಾಬಾದ ಕೋಟೆಯನ್ನು ಕೈವಶ ಮಾಡಿಕೊಳ್ಳುವ ಕುರಿತು ವಿಚಾರಿಸುತ್ತಿದ್ದನು. ಆದಿಲಶಾಹನ ಸೈನ್ಯ ಹಾಗೂ ಅದರಂತೆ ನಿಜಾಮಶಾಹನ ಕಡೆಯ ಸೈನ್ಯಗಳು ಕೋಟೆಯ ಹೊರಗಿದ್ದು, ಮೊಗಲರ ಸೈನ್ಯದ ಮೇಲೆ ಹಲ್ಲೆ ಮಾಡುತ್ತಿದ್ದುವು. ಮೊಗಲರನ್ನು ಸೋಲಿಸಲು ಕೋಟೆಯ ತಳವನ್ನು ಹಿಡಿದು ಯತ್ನ ಮಾಡುತ್ತಿದ್ದರು. ಫತೇಖಾನನೂ ಕೋಟೆಯ ಒಳಗಿನಿಂದ ತನ್ನ ಶಕ್ತಿ ಮೀರಿ ಹಲ್ಲೆ ಮಾಡುತ್ತಿದ್ದನು. ಈ ಗದ್ದಲದ ದಿನಗಳಲ್ಲಿಯೇ ಮೊಗಲರ ಪ್ರಬಲ ದಂಗೆಯೊಂದಿಗೆ ನಾಲ್ಕು ದಿಕ್ಕುಗಳಿಂದಲೂ ಗದ್ದಲ ಎದ್ದಿತು. ಸಿದ್ದಿ ರೇಹಾನನು ಸೋಲಾಪುರದ ಕಡೆಯಿಂದ ಅತಿ ಪರಾಕ್ರಮದಿಂದಾಗಿ ಎಲ್ಲರಿಗೂ ಪೀಡೆ ಕೊಡುವವನಾಗಿದ್ದನು. ಅದರಂತೆ ಒಂದು ಸಮಯದಲ್ಲಿ ಸಿದ್ದಿ ಪೋಲಾದ ಹಾಗೂ ದೌಲತಖಾನ ಈ ಇಬ್ಬರೂ ವಿಜಾಪುರದ ಸೆರೆಮನೆಯಿಂದ ಓಡಿ ಹೋಗಿ ಸಿದ್ದಿ ರೇಹಾನನೊಂದಿಗೆ ಸೇರಿಕೊಂಡಿದ್ದರು. ಈ ಉಭಯತರನ್ನು ಸಿದ್ದಿ ರೇಹಾನನು ಬಹಳ ಆಶೆ ಹುಟ್ಟಿಸಿ ಮೆಹರಬಾನಗಿ ಮಾಡಿ ತನ್ನ ಹತ್ತಿರವೆ ಇಟ್ಟುಕೊಂಡಿದ್ದನು.

ತನ್ನ ವಿಶ್ವಾಸಿಕ ಜನರನ್ನು ಸೋಲಾಪುರದಲ್ಲಿಟ್ಟು ಸಿದ್ದಿ ರೇಹಾನನು (ಅವನಲ್ಲಿ ೩-೪ ಸಾವಿರ ಸವಾರರಿದ್ದರು. ನಿಜಾಮಶಾಹಿಯ ಕಡೆಯ ಹಳೆಯ ಸೈನ್ಯದ ಜನರು ಅವನಲ್ಲಿ ಸೇರಿಕೊಂಡಿದ್ದರು) ಸೈನಿಕರನ್ನು ತೆಗೆದುಕೊಂಡು ಸೋಲಾಪುರದಿಂದ ದೇವಗಾಂವದ ಮೇಲೆ ಏರಿ ಹೋದನು. ಆ ಊರಿನಲ್ಲಿ ಇರುವವರಿಂದ ೧೦ ಸಾವಿರ ಹೊನ್ನುಗಳನ್ನು ದಬ್ಬಾಳಿಕೆ ಮಾಡಿ, ಬಲಾತ್ಕಾರದಿಂದ ವಸೂಲಿ ಮಾಡಿ ನಿಜಾಮಶಹನ ರಾಜ್ಯದಲ್ಲಿ ಒಳ ಹೊಕ್ಕನು. ಪ್ರತಿಯೊಂದು ಸ್ಥಳದಲ್ಲಿ ಪ್ರತಿಯೊಂದು ಮನೆಯಿಂದ ಹೀಗೆಯೇ ದ್ರವ್ಯವನ್ನು ಸುಲಿದು ಭೀಡ ಸರಹದ್ದಿನಲ್ಲಿ ಬಂದು ಮುಟ್ಟಿದನು. ಇಷ್ಟರಲ್ಲಿ ಖಾನ ಜಮಾನನು ೭-೮ ಸಾವಿರ ಸ್ವಾರರ ಗುಂಪನ್ನು ತೆಗೆದುಕೊಂಡು, ತಿನ್ನುಣ್ಣುವ ಪದಾರ್ಥಗಳನ್ನು ಧಾನ್ಯ ಸಂಗ್ರಹವನ್ನು ಮೊಗಲರಿಂದ ಪಡೆದುಕೊಂಡು, ಮಹಾಬತಖಾನನ ಸೈನ್ಯಕ್ಕಾಗಿ ತರುತ್ತಿದ್ದನು. ಜಾಫರಾಬಾದದ ಹತ್ತಿರ ಜಳಗಾವ ಮತ್ತು ವರಾಡಗಳಲ್ಲಿ ಸಿದ್ದಿ ರೇಹಾನ ಹಾಗೂ ಖಾನ ಜಮಾನರ ಭೆಟ್ಟಿಯಾಯಿತು. ಉಭತರಲ್ಲಿ ಯುದ್ಧ ಪ್ರಾರಂಭವಾಯಿತು. ಖಾನ ಜಮಾನನ ಸೈನ್ಯವನ್ನು ಬೆದರಿಸಿ ಬಹಳಷ್ಟು ಹೊಡಿ-ಬಡಿ ಮಾಡಿದನು. ಅದಕ್ಕೊಂದು ಅಂತ್ಯವೆ ಇರಲಿಲ್ಲ.

ಪೇಶಜೀ ಯಾಕುತಖಾನನು ಅಹಮದನಗರದಿಂದ ಹೊರಟು ಮೊಗಲರೊಂದಿಗೆ ಸೇರಿ, ಮೊಗಲರ

---

2. `The Khan Khanan (Mahabat Khan) accordingly sent forward his son Khan-Zaman, with an advanced force. and he himself followed on the 9th Jumadas-sani, Julus 6 A.H. 1042`` (11 Dec 1632) Badshah Nama E.D. P-37.

ಚಾಕರನಾಗಿದ್ದನು. ಅವನೀಗ ಫತೇಖಾನನಿಗೆ ಸಹಾಯ ಮಾಡುತ್ತಿದ್ದನು. ತಿನ್ನುಣ್ಣುವ ಪದಾರ್ಥಗಳನ್ನು ಮತ್ತು ಸುದ್ದಿಗಳನ್ನು ಫತೇಖಾನನಿಗೂ ಹೊರಗಿನ ಸೈನ್ಯಕ್ಕೂ ಕಳಿಸುತ್ತಿದ್ದನು. ಮಹಾಬತಖಾನನಿಗೆ, ಯಾಕುತಖಾನನ ಈ ಮೋಸದ ನಡತೆಯು ಗೊತ್ತಾದಾಗ ಯಾಕುತಖಾನನ ಮೇಲೆ ಬಹಳ ಸಿಟ್ಟಿಗೆದ್ದು ಬೆದರಿಕೆ ಹಾಕಿದನು. ಬೆದರಿಕೆಯಿಂದ ಯಾಕುತಖಾನನು ಮಹಾಬತಖಾನನ ಸಂಗತಿಯನ್ನು ಬಿಟ್ಟು ೩-೪ ಸಾವಿರ ಸ್ವಾರರೊಂದಿಗೆ ಬೇರೆಯಾಗಿ, ದಕ್ಷಿಣದ ಸೈನ್ಯದಲ್ಲಿ ಸೇರಿದನು. ಅವರೊಂದಿಗೆ ಮಹಾಬತಖಾನನನ್ನು ಶಿಕ್ಷಿಸಲು ಸೇರಿಕೊಂಡು ಯುದ್ಧ ಮಾಡಹತ್ತಿದನು. ಯಾಕುತಖಾನನು ರಾಜ್ಯದ ಹಳೆಯ ಸರದಾರನಾಗಿದ್ದನು. ಅವನ ಬರುವಿಕೆಯಿಂದ ದಕ್ಷಿಣದ ಸೈನ್ಯಕ್ಕೆ ಅಧಿಕವಾದ ಬಲ ಬಂದಂತಾಯಿತು, ಆದಿಲಶಾಹನ ಕಡೆಯ ಮತ್ತು ನಿಜಾಮಶಹನ ಕಡೆಯ ಅಮೀರ ಜನರು ಸಂಪೂರ್ಣ ರಸ್ತೆಗಳನ್ನು - ದಾರಿಗಳನ್ನು ಮುಚ್ಚಿ ಮಹಾಬತಖಾನನ ಸೈನ್ಯಕ್ಕೆ ತಿನ್ನಲು-ಉಣ್ಣಲು ಏನೂ ಸಿಗದಂತೆ ಮಾಡಿದರು. ಅವರಿಗೆ ದೊಡ್ಡ ದುಷ್ಕಾಳ ಬಿದ್ದಂತಾಯಿತು.

ಪದಾರ್ಥಗಳು ಎಷ್ಟೊಂದು ತುಟ್ಟಿಯಾದುವೆಂದರೆ, ಒಂದು ಹೊನ್ನಿಗೆ ಒಂದು ಪಾಯಲಿ ಕಾಳು ಮಾರಹತ್ತಿತು. ಅದನ್ನು ಕಂಡ ಮಹಾಬತಖಾನನು ಅಲ್ಲಿಂದ ಹೊರಟು ಎರಡು ಮಜಲು ಹಿಂದೆ ಸರಿದನು. ಆಗ ದಕ್ಷಿಣದ ಸೈನ್ಯದಲ್ಲಿಯ ಜನರು ಮಹಾಬತಖಾನನ ಬೆನ್ನುಹತ್ತಿ ಯುದ್ಧ ಮಾಡತೊಡಗಿದರು. ಕೊನೆಗೆ ಆ ಯುದ್ಧದಲ್ಲಿ ಯಾಕುತಖಾನನಿಗೆ ಗಾಯವಾಗಿ ಆತ ಮರಣಹೊಂದಿದನು. ಯಾಕುತಖಾನನ ಮರಣದಿಂದ ಮಹಾಬತಖಾನನಿಗೆ ಬಹಳ ಸಂತೋಷವಾಯಿತು. ದಾರಿಯಿಂದ ತಿರುಗಿ ಬಂದು ಮೊದಲಿನ ಸ್ಥಳದಲ್ಲಿಯೆ ಬೀಡು ಬಿಟ್ಟನು. ಮತ್ತೆ ಯುದ್ಧ ಪ್ರಾರಂಭವಾಗಿ ಮೊದಲಿಗಿಂತ ಅಧಿಕ ಮಜಬೂತಿಯಿಂದ ಯುದ್ಧ ಹೋರಾಟಕ್ಕೆ ವ್ಯವಸ್ಥೆ ಮಾಡಿದನು. ಆಹಾರ ಸಾಮಗ್ರಿ ಹಾಗೂ ಕಿರುಕುಳ ಪದಾರ್ಥಗಳು ಮುಗಿದದ್ದನ್ನು ಕಂಡ ಫತೇಖಾನನು, ಶತ್ರುವಿನ ಹೊಸ ಬಲವನ್ನು ಗಮನಿಸಿ ನಿರುಪಾಯನಾದನು. ವಿಚಾರ ಮಾಡಿ ಆದಿಲಶಹನಿಗೆ ವಿನಂತಿ ಪತ್ರವನ್ನು ಬರೆದನು. "ಮಹಾಬತಖಾನನು ಬಹಳಷ್ಟು ಸೈನ್ಯವನ್ನು ತೆಗೆದುಕೊಂಡು ಬಂದು ದೌಲತಾಬಾದಿನ ಕಸಬೆಯಲ್ಲಿಯೇ ನಿಂತಿದ್ದಾನೆ.[3] ಕೋಟೆಯನ್ನು ಗೆಲ್ಲಲು ಬಹಳ ಪ್ರಯತ್ನ ಮಾಡುತ್ತಿದ್ದಾನೆ. ಕೋಟೆಯಲ್ಲಿಯ ಆಹಾರ ಸಾಮಗ್ರಿ ಪೂರ್ತಿ ತೀರಿ ಹೋಗಿ ಗುರುತಿಗೂ ಒಂದು ಕಾಳು ಉಳಿದಿಲ್ಲ. ಈ ಸಮಯದಲ್ಲಿ ಒಂದು ವೇಳೆ ಸಹಾಯ ಮಾಡಬೇಕೆಂದು ಮನಸ್ಸು ಮಾಡಿ. ತಮ್ಮ ಯಶಸ್ವಿ ಸೈನ್ಯವನ್ನು ಕಳಿಸಿ, ಆಹಾರ ಸಾಮಗ್ರಿಗಳನ್ನು ಕಳಿಸಿ ಉಪಕಾರ ಮಾಡಿದರೆ ನಾನು ಶತ್ರುವಿನ ಕೈ ಮುರಿದು ಬಿಡುತ್ತೇನೆ, ಮೊಗಲರ ಸೈನ್ಯವನ್ನೆ ಈ ಜಿಲ್ಲೆಯಿಂದ ಹೊರ ದಬ್ಬುತ್ತೇನೆ. ದೌಲತಾಬಾದ ಕೋಟೆಯನ್ನು ತಮ್ಮ ವಶಕ್ಕೆ ಕೊಡುತ್ತೇನೆ" ಎಂದು ಬರೆದು ಕಳಿಸಿದನು.

### ೧೦. *ಆದಿಲಶಹನು ಮುರಾರಿಯೊಂದಿಗೆ ಆಹಾರ ಸಾಮಗ್ರಿಯನ್ನು ದೌಲತಾಬಾದಿಗೆ ಕಳಿಸುವುದು ಮತ್ತು ಮುರಾರಿಯು ಆ ಸಾಮಗ್ರಿಗಳನ್ನು ಕೋಟೆಯಲ್ಲಿ ಕಳಿಸಲು ಅನುಮಾನಿಸಿದ್ದು :*

ಬಾದಶಾಹ ಗಾಜಿ ಆದಿಲಶಾಹನು ಫತೇಖಾನನ ವಿನಂತಿಯನ್ನು ಒಪ್ಪಿಕೊಂಡನು. ಆ ಕಾರಣದ

3. "Khan-Khanan... marched from Zafarnagar to Daul-atabad and reached there on the last day of Shaban (1 March 1633) a mine... was charged.... wall breached.... On the 25th Zilkada (24 May 1633) second mine was to be exploded... Fate Khan sent vakil to Mahabat Khan.... On the 19th Zillija (17 June 1633) Fate Khan came out of the fortress of Daulatabad and delivered it up to the Mogul``- Badshah Nama E.D. p-36-41

ಹಿಂದೆ ತನ್ನ ರಾಜ್ಯ ಮತ್ತು ವೈಭವಗಳ ಹಿತವಿದೆಯೆಂದು ತಿಳಿದು ಫತೇಖಾನನಿಗೆ ಸಹಾಯ ಮಾಡಲು ವಿಚಾರ ಮಾಡಿದನು. ಈ ಮೊದಲು ರಣದುಲ್ಲಾಖಾನನೊಂದಿಗೆ ಸೈನ್ಯವನ್ನು ಕಳಿಸಿಯೇ ಇದ್ದನು. ಈಗ ಮತ್ತೆ ಹೊಸದಾಗಿ ಸೈನ್ಯವನ್ನು ಜೊತೆಗೆ ಆಹಾರ ಸಾಮಗ್ರಿಯನ್ನು ಕಳಿಸಲು ಖವಾಸಖಾನನಿಗೆ ಆಜ್ಞೆ ಮಾಡಿದನು. ತುಸುವೆ ದಿನಗಳಲ್ಲಿ ಖವಾಸಖಾನನು ಆಹಾರ ಸಾಮಗ್ರಿಗಳನ್ನು, ಕಿರುಕುಳ ಸಾಮಾನುಗಳನ್ನು ಮತ್ತು ಧಾನ್ಯ ಸಂಗ್ರಹವನ್ನು ಅಲ್ಲದೆ ಕೋಟೆಗೆ ಏನೇನು ಬೇಕೋ ಅದೆಲ್ಲವನ್ನು ಒಂದೆಡೆ ಸೇರಿಸಿ ಮುರಾರಿಯೊಂದಿಗೆ ಇನ್ನಷ್ಟು ಸೈನ್ಯ ಸಿಬ್ಬಂದಿಯನ್ನು ಕೊಟ್ಟು ದೌಲತಾಬಾದ ಕಡೆಗೆ ಕಳಿಸಿದನು. ಮುಟ್ಟಿದ ತಕ್ಷಣ ಫತೇಖಾನನಿಗೆ ಪಾವತಿ ಮಾಡಬೇಕೆಂದು ಮುರಾರಿಗೆ ತಾಕೀದು ಮಾಡಿದನು. ಈ ಮೊದಲು ಕಳಿಸಿದ ಸೈನ್ಯ ಹಾಗೂ ಈಗಿನ ಸೈನ್ಯ ಸೇರಿ ಒಟ್ಟಾರೆ ಫತೇಖಾನನಿಗೆ ಸಹಾಯಮಾಡಿ ಕೋಟೆಯನ್ನು ಸಂರಕ್ಷಿಸಬೇಕೆಂದು ಮತ್ತು ಶತ್ರುವನ್ನು ಶಿಕ್ಷಿಸಬೇಕೆಂದು, ಶಕ್ತಿ ಇರುವವರೆಗೆ ಪ್ರಯತ್ನ ಮಾಡಿ ವೈರಿಗಳನ್ನು ಕೋಟೆಯ ಮುತ್ತಿಗೆಯಿಂದ ಹೊರಹಾಕಬೇಕು. ಕೋಟೆಯನ್ನು ಶತ್ರುವಿನ ಕೈಗೆ ಕೊಡಬಾರದು ಎಂಬುದಾಗಿ ತಾಕೀದು ಮಾಡಿದನು. ಮುರಾರಿಯು ಸೈನ್ಯ ಹಾಗೂ ಸಾಮಾನುಗಳೊಂದಿಗೆ ದೌಲತಾಬಾದನ್ನು ಮುಟ್ಟಿದಾಗ ಆದಿಲಶಹನ ಕಡೆಯ ಮೊದಲೆ ಇದ್ದ ಅಮೀರ ಜನರು ಮುರಾರಿ ಬಂದ ಬಗ್ಗೆ ಮನಸ್ಸಿನಲ್ಲಿ ಖಿನ್ನರಾದರು. ಯಾಕೆಂದರೆ, ಮುರಾರಿಯ ಅಮೀರತನಕ್ಕೆ ಮತ್ತು ಆತನ ಕಾರಭಾರಕ್ಕೆ ಯಾರದೂ ಒಪ್ಪಿಗೆ ಇರಲಿಲ್ಲ. ಆದ್ದರಿಂದ ಅವರೆಲ್ಲರೂ ತಂತಮ್ಮಲ್ಲಿ ವಿಚಾರ ಮಾಡಿ ಮುರಾರಿ ಇರುವವರೆಗೆ ಯುದ್ಧ ಮಾಡಬಾರದೆಂದು ನಿರ್ಧರಿಸಿದರು. ಯುದ್ಧ ಮಾಡಿ ವಿಜಯಿಯಾದರೆ, ಮುರಾರಿಯ ಹೆಸರು ಬರುತ್ತದೆ. ಜಯ ಬಂದ ಪತ್ರವನ್ನು ಮುರಾರಿಯ ಹೆಸರಿನಿಂದ ಬರೆಯಲಾಗುತ್ತದೆ. ಆದ್ದರಿಂದ ಹೀಗೆ ಯುಕ್ತಿ ಮಾಡಿ ಮೊದಲು ಹೋದ ಅಮೀರ ಜನರು ಯುದ್ಧ ಮಾಡಲಿಲ್ಲ.

ಫತೇಖಾನನು ಮುರಾರಿಗೆ ಎಷ್ಟೆಲ್ಲ ನಿರೋಪಗಳನ್ನು ಕಳಿಸಿ ಆದಿಲಶಹನು ಕಳಿಸಿದ ಆಹಾರ ಸಾಮಗ್ರಿಗಳನ್ನು ಇತ್ತ ಕಳಿಸಬೇಕೆಂದು, ಕೋಟೆಯಲ್ಲಿ ಒಂದು ಕಾಳು ಕೂಡ ಇಲ್ಲವೆಂದು, ತನ್ನ ಹತ್ತಿರವಿದ್ದ ಜನರೆಲ್ಲ ಉಪವಾಸದಿಂದ ದಣಿದು ಉಸಿರಾಡಲೂ ಕೂಡ ಶಕ್ತಿ ಇಲ್ಲವೆಂದು ನಿರೋಪಗಳನ್ನು ಕಳಿಸಿದನು. ಆದರೂ ಮುರಾರಿಯು ಫತೇಖಾನನಿಗೆ ಏನೊಂದು ಸಾಮಾನುಗಳನ್ನು ಕಳಿಸಲಿಲ್ಲ. ಆದ್ದರಿಂದ ಫತೇಖಾನನು ಮುರಾರಿಗೆ ಮೇಲಿಂದ ಮೇಲೆ ಸಾಮಾನುಗಳ ಬಗ್ಗೆ ಕೇಳುತ್ತಲೇ ಇದ್ದನು. ಮುರಾರಿಯು ಫತ್ತೇಖಾನನಿಗೆ ಉತ್ತರ ಕಳಿಸಿ, ಆಹಾರ ಪದಾರ್ಥಗಳನ್ನು ಯಾಕೆ ಕೇಳುತ್ತೀ? ಏಳು ಇಲ್ಲಿಗೆ ಬಾ ಮತ್ತು ಕೋಟೆಯ ಕೀಲಿಕೈಯನ್ನು ನನ್ನ ವಶಕ್ಕೆ ಕೊಡು. ಆಮೇಲೆ ನಾನು ಬಲ್ಲೆ ಮತ್ತು ಕೋಟೆ ಬಲ್ಲುದು. ಕೋಟೆಯನ್ನು ನನ್ನ ವಶಕ್ಕೆ ಕೊಟ್ಟರೆ ನಿನ್ನನ್ನು ಮತ್ತಷ್ಟು ಉನ್ನತ ಅಧಿಕಾರಕ್ಕೆ ಎತ್ತರಿಸುವೆ. ಇಲ್ಲವಾದಲ್ಲಿ ನಿನ್ನ ಕೈ-ಕಾಲುಗಳನ್ನು ಕಟ್ಟಿ ನಿನ್ನನ್ನು ಕೋಟೆಯ ಬುರುಜಿನಿಂದ ಕೆಳಗೆ ಖಂದಕದಲ್ಲಿ ನೂಕುವೆನು ಎಂಬುದಾಗಿ ಉತ್ತರ ಕಳಿಸಿದನು. ಯಾಕೆಂದರೆ, ಮುರಾರಿಯು ನೀಚ ಉತ್ಪತ್ತಿಯ, ಅಧೀರ ಮನದ ಮತ್ತು ಮಹಾ ಗರ್ವಿಷ್ಠನಾಗಿದ್ದನು. ಬುದ್ಧಿ ಸರಿಯಾಗಿ ಇರಲಿಲ್ಲ. ಯಾವುದೇ ವಿಷಯ ಆತನ ಮನಸ್ಸಿಗೆ ಹೋದೀತು ಎಂದಿರಲಿಲ್ಲ. ಆದ್ದರಿಂದಲೇ ಬಾದಶಹನು ಹೇಳಿದ ಮಾತುಗಳು, ಖವಾಸಖಾನನು ತಾಕೀದು ಮಾಡಿದ ವಿಷಯಗಳು ಎಲ್ಲವನ್ನೂ ಮರೆತು ಬಹಳೇ ಗರ್ವಿಷ್ಠನಾಗಿದ್ದನು ಮತ್ತು ಫತೇಖಾನನಿಗೆ ಯಾವ ಪದಾರ್ಥಗಳನ್ನೂ ಕಳಿಸಲಿಲ್ಲ.

## ೧೧. *ದೌಲತಾಬಾದ ಕೋಟೆ ನಿಜಾಮಶಾಹನ ಕೈಯಿಂದ ಮೊಗಲರ ಕೈಗೆ :*

ಮುರಾರಿಯು ಈ ರೀತಿ ಮುಂದೆ ಹೆಜ್ಜೆ ಇಟ್ಟು ಬಂದಿದ್ದಾನೆ. ತನ್ನ ಮಾತನ್ನು ಕೇಳುತ್ತಿಲ್ಲ.

ತನ್ನ ಧಣಿಯಾದ ಆದಿಲಶಹನ ಆಜ್ಞೆಯನ್ನು ಕೂಡ ಧಿಕ್ಕರಿಸುತ್ತಿದ್ದಾನೆ. ಖವಾಸಖಾನನು ಎಚ್ಚರಿಕೆ ಕೊಟ್ಟಿದ್ದನ್ನೂ ಮನ್ನಿಸದೆ ತನ್ನ ಮನಸ್ಸಿಗೆ ಬಂದಂತೆ ಮಾಡುತ್ತಿದ್ದಾನೆ. ತಾನು ಎಷ್ಟೇ ವಿನಂತಿಸಿಕೊಂಡರೂ ಏನನ್ನೂ ಕಳಿಸುತ್ತಿಲ್ಲ ಎಂಬುದನ್ನು ಕಂಡು ಫತೇಖಾನನು ಕೊನೆಗೆ ನಿರಾಶನಾದನು. ಫತೇಖಾನನಿಗೆ ಮೊಗಲರೊಂದಿಗೆ ಸ್ನೇಹ ಬೆಳೆಸಿ ಒಪ್ಪಂದ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಆದರ ಹೊರತು ಬೇರೆ ದಾರಿಯೇ ಇರಲಿಲ್ಲ. ತನ್ನ ಕಡೆಯ ಮಲಿಕ ಕುತುಬ ಮಹಮ್ಮದ ಗುಜರಾಥಿ ಹಾಗು ಕೃಷ್ಣಾಜಿ ಭಾಸ್ಕರ ಇಬ್ಬರನ್ನೂ ಮಹಬತಖಾನನ ಕಡೆಗೆ ನಿರೋಪ ಕೊಟ್ಟು ಕಳಿಸಿದನು. ದೌಲತಾಬಾದದ ಕೋಟೆಯನ್ನು ಶಹಾಜಹಾನನ ವಶಕ್ಕೆ ಕೊಡುವೆನು. ಆದರೆ ನೀವು ನಮ್ಮೊಂದಿಗೆ ಕರಾರು ಪತ್ರವನ್ನು ಬರೆದು ನಾನು ವಿನಂತಿಸಿಕೊಂಡ ಕೆಲಸವನ್ನು ಮಾಡಬೇಕು. ಈ ವಿಷಯದಲ್ಲಿ ಶಪಥಮಾಡಿ ಕರಾರಿನಂತೆ ಒಂದು ಕೂದಲೆಳೆಯಷ್ಟು ಬದಲಿಸಬಾರದು ಎಂಬುದಾಗಿ ಬರೆದು ಕಳಿಸಿದನು. ಅವರಿಬ್ಬರೂ ಮಹಾಬತಖಾನನ ಹತ್ತಿರ ಹೋಗಿ ಫತೇಖಾನನು ಹೇಳಿದ್ದನ್ನೆಲ್ಲ ಸವಿಸ್ತಾರವಾಗಿ ವಿಷಯವನ್ನು ವಿನಂತಿ ಮಾಡಿಕೊಂಡರು.

ಅಲಭ್ಯ ಲಾಭದ ಐಶ್ವರ್ಯವು ತಂತಾನೆ ಮನೆ ಬಾಗಿಲಿಗೆ ನಡೆದು ಬರುತ್ತಿದೆ ಎಂದು ಮಹಾಬತಖಾನನು ತಿಳಿದನು. ಪ್ರತಿದಿನ ಪ್ರಾತಃಕಾಲದಲ್ಲಿ ಮಾಡಿದ ಅಲ್ಲಾನ ಪ್ರಾರ್ಥನೆಯ ಫಲವೇ ಇದು ಎಂದು ತಿಳಿದನು. ಅತಿ ಹರುಷದಿಂದ ತಕ್ಷಣ ಕರಾರು ಪತ್ರವನ್ನು ಬಹಳ ಮಜಬೂತಿಯಿಂದ, ಶಪಥಪೂರ್ವಕವಾಗಿ ಮತ್ತು ಅವನ ಕರಾರುಗಳನ್ನೆಲ್ಲ, ಫತೇಖಾನನ ಮನೋಗತದಂತೆ ಬರೆದನು. ಕೋಟೆಯನ್ನು ತಮ್ಮ ವಶಕ್ಕೆ ಕೊಟ್ಟೆಯಾದರೆ, ನಿಮ್ಮನ್ನು ಮತ್ತು ನಿಜಾಮಶಾಹರನ್ನು ತುಂಬ ವೈಭವದಿಂದ ಶಾಹಜಹಾನ ಬಾದಶಹರ ಹತ್ತಿರ ಕರೆದೊಯ್ದು ನಿಮ್ಮಗಳ ಮೇಲೆ ಬಾದಶಹರ ಕೃಪೆಯಾಗುವಂತೆ ನೋಡಿಕೊಳ್ಳುವೆ. ಮತ್ತು ಹುಸೇನ ನಿಜಾಮಶಾಹರನ್ನು ಸಿಂಹಾಸನದ ಮೇಲೆ ಕುಳ್ಳಿರಿಸುತ್ತೇವೆ. ನಿಮಗೆ ಮೊದಲಿನಂತೆ ವಜೀರ ಹಾಗೂ ವಕೀಲಿ ಕೆಲಸವನ್ನು ಕಾಯಮಗೊಳಿಸುತ್ತೇವೆ. ಪ್ರತಿಯೊಂದು ವಿಷಯದಲ್ಲೂ ನಾವು ನಿಮಗೆ ಸಹಾಯ ಮಾಡುತ್ತೇವೆ. ನಿಮ್ಮ ಕಲ್ಯಾಣದ ವಿಷಯದಲ್ಲಿ ನಮ್ಮ ಒಪ್ಪಿಗೆ ಇದೆ. ಇದರಲ್ಲಿ ಏನೊಂದೂ ತಪ್ಪುವುದಿಲ್ಲ. ನೀವು ದೌಲತಾಬಾದ ಕೋಟೆಯನ್ನು ನಮ್ಮ ಕೈಗೆ ಕೊಡುತ್ತಿದ್ದಂತೆ ನಿಮಗೆ ೪೦ ಸಾವಿರ ಮೊಹರುಗಳನ್ನು ಕೊಡಲಾಗುತ್ತದೆ, ಎಂಬುದಾಗಿ ಕರಾರು ಪತ್ರವನ್ನು ಬರೆದು. ಆ ಕರಾರು ಪತ್ರವನ್ನು ಮತ್ತು ಆಹಾರ ಸಾಮಗ್ರಿಗಳನ್ನು ಸಾಮಾನು ಸರಂಜಾಮುಗಳ ಸಹಿತವಾಗಿ ಮಹಾಬತಖಾನನು ತನ್ನ ಮಗ ಇರಾದತಖಾನನೊಂದಿಗೆ ಫತೇಖಾನನ ಹತ್ತಿರ ಕಳಿಸಿದನು. ಕರಾರು ಪತ್ರವನ್ನು ನೋಡಿದ ಫತೇಖಾನನು ತನ್ನ ಮನಸ್ಸಿನಂತೆ ಆದುದನ್ನು ಕಂಡು ದೌಲತಾಬಾದದ ಕೋಟೆಯನ್ನು ಮಹಾಬತಖಾನನ ವಶಕ್ಕೆ ಕೊಟ್ಟನು.[೧] ಸ್ವತಃ ಶಾಹ ಹುಸೇನ ಬಾದಶಾಹಾ ಮತ್ತು ಬಾದಶಹನ ಕುಟುಂಬ ಪರಿವಾರ ಮತ್ತು ಬಾದಶಹನ ಆಪ್ತ ಮಂಡಳಿ, ಫತೇಖಾನ ಹೀಗೆ ಎಲ್ಲರೂ ದೌಲತಾಬಾದ ಕೋಟೆಯಿಂದ ಹೊರಬಿದ್ದು ಒಂದು ಸಾವಿರ ಸವಾರರೊಂದಿಗೆ ಮಹಾಬತಖಾನನ ಹತ್ತಿರ ಬಂದು ಮುಟ್ಟಿದರು. ಮಹಾಬತಖಾನನು ತನ್ನ ಮಗ ಇರಾದತಖಾನನನ್ನು ಸವಾರ ಸಿಬ್ಬಂದಿ ಸಹಿತವಾಗಿ ದೌಲತಾಬಾದದ ವ್ಯವಸ್ಥೆಗಾಗಿ ಕಳಿಸಿದನು. ಶಾಹ ಹುಸೇನ ಹಾಗು ಫತೇಖಾನರನ್ನು ಜೊತೆಗೆ ಕರೆದುಕೊಂಡು ಮಹಾಬತಖಾನನು ಬುರಾಣಪುರದತ್ತ ಹೊರಟನು. ಫತೇಖಾನನು ಸೈನಿಕರನ್ನು ಸಂಗ್ರಹಿಸುವ ನಿಮಿತ್ತದಿಂದ ನಾಲ್ಕು ಐದುಸಾವಿರ ಸವಾರರನ್ನು ಹೊಸದಾಗಿ ನಿಯಮಿಸಿಕೊಂಡನು. ದಾರಿಯಲ್ಲಿ ಒಂದು ಹೊಸ ಚಮತ್ಕಾರಿಕ ಘಟನೆ ನಡೆಯಿತು.

---

೧. ಶಕೆ ೧೫೫೪ ಜೇಷ್ಠ ಮಾಸ (ಮೇ, ಜೂನ್ ೧೬೩೨) ದಲ್ಲಿ ಮಹಾಬತಖಾನನು ಮುತ್ತಿಗೆ ಹಾಕಿ ದೌಲತಾಬಾದನ್ನು ತೆಗೆದುಕೊಂಡನು - ಜೇಧೆಶಕಾವಲಿ ಪುಟ-೧೬.

ಮಹಾಬತಖಾನನು ಮುಂದೆ ಹೊರಟಾಗ ಆ ಸಮಯದಲ್ಲಿ ಖಾನಜಮಾನನು ಫತೇಖಾನನ ಡೇರೆಯಲ್ಲಿ ಬಂದು ಫತೇಖಾನನ ಚಾಕರಿಗೆ ಇರಲು ಸಿದ್ಧನಾಗಿ ಕುಳಿತನು. ಫತೇಖಾನನು ಸಿದ್ಧನಾಗಿ ಕುದುರೆಯಮೇಲೆ ಕುಳಿತು ಹೊರಟರೆ ಖಾನಜಮಾನನು ಅವನ ಜೊತೆಗೆ ಮುಕ್ಕಾಮಿನ ವರೆಗೆ ಬರುತ್ತಿದ್ದನು. ಇದೇ ಪ್ರಕಾರ ನಜರ ಬಂದಿಯಾಗಿ ಮತ್ತು ವ್ಯವಸ್ಥಿತ ರೀತಿಯಲ್ಲಿ ದೌಲತಾಬಾದಿನಿಂದ ಏಳೆಂಟು ಕೋಸುಗಳ ಮೇಲಿನ ಜಾಫರಾಬಾದ, ಮಾಲೇಗಾವ ಎಂಬ ನಗರಗಳ ವರೆಗೆ ಬಂದು ಮುಟ್ಟಿದರು. ಒಂದು ದಿನ ಮಹಾಬತಖಾನನು ದಾರಿಯಲ್ಲಿಯೇ ಡೇರೆಯನ್ನು ನಿಲ್ಲಿಸಿದನು. ಆ ಡೇರೆಯ ಸುತ್ತಲೂ ಮರೆ ಮಾಡಿ, ಮರೆಯ ಹಿಂದೆ ರಜಪೂತ ಜನರನ್ನಿಟ್ಟು ಫತೇಖಾನನನ್ನು ಡೇರೆಯಲ್ಲಿ ಕರೆದನು. ಫತೇಖಾನನು ಮರೆಯಿಂದ ಡೇರೆಯಲ್ಲಿ ಬರುತ್ತಿರುವಾಗ ಅರ್ಧ ದಾರಿ ಡೇರೆಯಲ್ಲಿ ಬಂದಿರಬೇಕು ಆಗ ಒಮ್ಮಿಂದೊಮ್ಮಲೆ ಡೇರೆಯ ಹಗ್ಗವನ್ನು ಜಗ್ಗಿದಾಗ ಡೇರೆ ಸಹಿತವಾಗಿ ಎಲ್ಲವೂ ಫತೇಖಾನನ ಮೈಮೇಲೆ ಬಿದ್ದಿತು. ಡೇರೆಯ ಕೆಳಗೆ ಆತನನ್ನು ಹಿಡಿದು ಬಂಧಿಸಿದರು. ಫತೇಖಾನನ ಕಡೆಗಿದ್ದ ಬಾದಶಾಹೀ ಛತ್ರ ಚಾಮರಗಳನ್ನೆಲ್ಲ ಕಸಿದುಕೊಂಡು ಶಾಹಹುಸೇನನನ್ನು ಹಿಡಿದು ಪಹರೆಯವರ ವಶಕ್ಕೆ ಕೊಟ್ಟರು. ಫತೇಖಾನನು ಈ ತರದ ಬಣ್ಣವನ್ನು ಕಂಡು ಜೀವದ ಆಶೆಯನ್ನು ಬಿಟ್ಟನು. ಮಹಾಬತಖಾನನನ್ನು ಮನಸಾರೆ ಬೈಯ ಹತ್ತಿದನು. ಆತನ ಮುಖದ ಮೇಲೆ ಉಗುಳಿದನು. ಅದೇ ಸ್ಥಿತಿಯಲ್ಲಿ ಅವರಿಬ್ಬರನ್ನೂ ಮಹಾಬತಖಾನನು ಶಾಹಜಹಾನ ಬಾದಶಹನ ಕಡೆಗೆ ಕರೆದುಕೊಂಡು ಹೋದನು. ಹೀಗೆ ದೌಲತಬಾದದಂಥ ಒಂದು ಮಜಬೂತಾದ ಕೋಟೆ, ಇಂಥ ಕೋಟೆಯಂಥ ಬೇರೊಂದು ಕೋಟೆ ಈ ಪೃಥ್ವಿಯಲ್ಲಿಯೇ ಕಡಿಮೆಯಾಗಿರುವಂಥ ಕೋಟೆ, ಯುದ್ಧ ಮಾಡದೆ ಯಾವ ಜಗಳ ತಂಟೆಗಳೂ ಇಲ್ಲದೆ ಸಹಜವಾಗಿ ಗೆಲ್ಲಲ್ಪಟ್ಟಿತು. ಇದಕ್ಕಾಗಿ ಮಹಾಬತಖಾನನು ಶಾಹಜಹಾನ ಬಾದಶಹನ ಕೃಪೆಗೆ ಪಾತ್ರನಾದನು. ಆ ದಿನದಿಂದ ನಿಜಾಮಶಾಹಿ ಪರಂಪರೆಯು ಮುಳುಗಿತು.

ಅಹಮದ ನಿಜಾಮಶಾಹ ಬಹರಿಯಿಂದ ಶಾಹ ಹುಸೇನ ನಿಜಾಮಶಾಹನ ವರೆಗೆ ಹನ್ನೊಂದು ವ್ಯಕ್ತಿಗಳು ೧೩೦ ವರುಷಗಳವರೆಗೆ ರಾಜ್ಯವಾಳಿದರು. ಅನಂತರ ಆದರೂ ಶಾಹಾಜಿ ಭೋಸಲೆಯು ಖವಾಸಖಾನ ಹಾಗೂ ಮುರಾರಿಗಳ ಸಹಾಯದಿಂದ ನಿಜಾಮಶಾಹನ ವಂಶದ ಮುರ್ತಜಾ ಎಂಬವನನ್ನು ಪೇಮಗಡದ ಕೋಟೆಯಲ್ಲಿ, ಆ ಕೋಟೆಗೆ ಶಾಹಗಡ ಎಂದು ಹೆಸರೂ ಇದೆ, ಅಲ್ಲಿ ಮುರ್ತಜಾನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಎರಡು ಮೂರು ವರುಷ ನಿಜಾಮ ಶಾಹನ ಹೆಸರಿನಿಂದ ರಾಜ್ಯ ನಡೆಸಿದನು.[೨] ಇನ್ನಷ್ಟು ಜನ, ಸೈನ್ಯ ಸಂಗ್ರಹಣೆಯಲ್ಲಿ ಮತ್ತು ಕೋಟೆಗಳನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿದ್ದನು. ಆಗ ಒಮ್ಮೆಲೆ ಖವಾಸಖಾನನು ಕೊಲೆಯಾದನು ಮತ್ತು ಮುಸ್ತಫಾಖಾನನು ಈ ಮಧ್ಯ ಪ್ರಬಲನಾದನು. ಶಾಹಜಿ ಭೋಸಲೆಯ ಯೋಜನೆಗಳಲ್ಲಿ ತಲೆಕೆಳಗಾದುವು. ಮುಸ್ತಫಾಖಾನನು ನಿಜಾಮಶಾಹಿಯ ನಿರ್ಮೂಲ ಮಾಡಲು ಶಾಹಜಹಾನ ಬಾದಶಹನೊಂದಿಗೆ ಸೇರಿ ಶಾಹಜಿ ಭೋಸಲೆಯಿಂದ ಮುರ್ತಜಾ ನಿಜಾಮಶಾಹನನ್ನು ತೆಗೆದುಕೊಂಡು ಶಾಹಜಹಾನ ಬಾದಶಹನಿಗೆ ಒಪ್ಪಿಸಿದನು. ಆ ದಿನದಿಂದ ನಿಜಾಮಶಾಹಿಯ ಒಂದೇ ಒಂದು ಗುರುತುಕೂಡ ಈ ಭೂಮಿಯ ಮೇಲೆ ಉಳಿಯಲಿಲ್ಲ. ಮುಸ್ತಫಾಖಾನನು ಮುಲ್ಲಾಬಾಬಾನನ್ನು ಕೊಂದನಂತರ ನಿಜಾಮಶಾಹಿ ಜನರಲ್ಲಿಯ ಒಬ್ಬರ ಗುರುತು ಕೂಡ ಉಳಿಯಲಿಲ್ಲ.

---

೨. 'ಶಕೆ ೧೫೫೪ ಭಾದ್ರಪದ ಮಾಸ (ಅಗಸ್ಟ ೧೬೩೨)ದಲ್ಲಿ ಶಾಹಾಜಿ ರಾಜೆಯು ಪೆಮಗಿರಿಯಲ್ಲಿ ನಿಜಾಮಶಹನ ಮೇಲೆ ಛತ್ರ ಹಿಡಿದನು. ಜೇಧೇಶಕಾವಲಿ. ಪುಟ ೧೬.

ದೌಲತಾಬಾದನನ್ನು ವಶಪಡಿಸಿಕೊಂಡು ಮಹಾಬತಖಾನನು ಬುರಾನಪುರಕ್ಕೆ ಹೋಗುತ್ತಿರುವಾಗ ಆತನ ಸೈನ್ಯದಲ್ಲಿಯ ಜನರು ಧಾನ್ಯದ ದುಷ್ಕಾಳದಿಂದ, ಆ ಮೊದಲೆ ದೌಲತಾಬಾದಿನ ಮೇಲೆ ಹಲ್ಲೆ ಮಾಡುವಾಗ ಬಿದ್ದ ಬರದಿಂದ ಬಹಳ ಜನರು, ಒಂಟೆಗಳು, ಕುದುರೆಗಳನ್ನು ತಿಂದು ಪ್ರಾಣಗಳನ್ನು ರಕ್ಷಿಸಿಕೊಂಡಿದ್ದರು. ಕಾಲ್ನಡಿಗೆಯಿಂದ ನಡೆಯುತ್ತಿದ್ದರು. ಅಶಕ್ತತನದಿಂದಾಗಿ ಸಾಮರ್ಥ್ಯಹೀನರಾಗಿದ್ದರು. ಆದರಿಂದಾಗಿ ಪ್ರತಿದಿನ ಎರಡು ಇಲ್ಲವೆ ಮೂರು ಕೋಸುಗಳಿಗಿಂತ ಅಧಿಕವಾಗಿ ಅವರು ದಾರಿಯನ್ನು ನಡೆಯುತ್ತಿರಲಿಲ್ಲ. ಮುರಾರಿ ಮತ್ತು ಆದಿಲಶಹನ ಕಡೆಯ ಎಲ್ಲ ಅಮೀರ ಜನರು ತಮ್ಮ ಸೈನ್ಯವನ್ನು ತೆಗೆದುಕೊಂಡು ಮೊಗಲರ ಬೆನ್ನುಹತ್ತಿ ಆನೆ, ಒಂಟೆ ಮತ್ತು ಕುದುರೆಗಳನ್ನು ಏನೆಲ್ಲ ಕೈಗೆ ಸಿಗುತ್ತದೆಯೊ ಅದೆಲ್ಲವನ್ನೂ ತೆಗೆದುಕೊಂಡು ಹೋಗುತ್ತಿದ್ದರು. ತೋಡಾತೋಡಿ ಹಾಗೂ ಮಾರಾಮಾರಿ ಮಾಡುವ ವಿಷಯದಲ್ಲಿ ಕಿಂಚಿತ್ತೂ ಅಂತರವನ್ನಿಟ್ಟಿರಲಿಲ್ಲ. ಇದರಿಂದ ಮಹಾಬತಖಾನನು ದಣಿದು ನಿರುಪಾಯನಾಗಿ ಆದಿಲಶಹನ ಕಡೆಯ ಜನರ ಕಾಲು ಹಿಡಿದು ಬೇಡಿಕೊಳ್ಳುವ ದೈನ್ಯ ಸ್ಥಿತಿಗೂ ಬಂದನು. ತನ್ನ ಬಿಡುಗಡೆಗಾಗಿ ಆದಿಲಶಾಹಿಯ ಎಲ್ಲರಿಗೂ ನಗದು ಹಣ ಕಳಿಸಿದನು. ಏನಾದರೂ ಮಾಡಿ ಅವರಿಂದ ಪಾರಾಗುವ ಹೊಂಚು ಹಾಕುತ್ತಿದ್ದನು. ಸಾವಿರ ಸಂಕಟಗಳಿಂದ ಪಾರಾಗಿ ಮಹಾಬತಖಾನನು ತನ್ನ ಸರಹದ್ದಿಗೆ ಬಂದು ಮುಟ್ಟಿದಾಗ [3] ಮುರಾರಿ, ರಣದುಲ್ಲಾಖಾನ ಮತ್ತು ಶಾಹಾಜಿ ಭೋಸಲೆಗಳು ಈ ಸರಹದ್ದಿನಿಂದ ತಿರುಗಿ ನಾಸಿಕಕ್ಕೆ ಬಂದು ಮುಟ್ಟಿದರು. ಶಾಹಾಜಿ ಭೋಸಲೆ ಅಲ್ಲಿಂದ ಹೊರಟನು. ಮುರಾರಿ ಹಾಗೂ ರಣದುಲ್ಲಾಖಾನರು ಅತಿ ಬೇಗ ಓಡಿ ವಿಜಾಪುರಕ್ಕೆ ಬಂದರು. ಮುರಾರಿಯು ಫತೇಖಾನನೊಂದಿಗೆ ಕೃತಘ್ನತೆ ಮಾಡಿ ದೌಲತಾಬಾದನ್ನು ಮಹಾಬತಖಾನನಿಗೆ ವಶವಾಗುವಂತೆ ಮಾಡಿದ್ದರಿಂದ ಖವಾಸಖಾನನು ಮುರಾರಿಯನ್ನು ಬಲವಾಗಿ ತರಾಟೆಗೆ ತೆಗೆದುಕೊಂಡನು. ಅವನಿಗೆ ಶಿಕ್ಷೆ ಕೊಡುತ್ತ, ಬಾದಶಹನ ಎಲ್ಲ ಕೆಲಸಗಳನ್ನು ಕೆಡಿಸಿಬಿಟ್ಟೆ. ಎಷ್ಟೊಂದು ಯುಕ್ತಿಗಳು, ಹಣ ಎಲ್ಲವೂ ಈ ಯುದ್ಧದಲ್ಲಿ ಖರ್ಚಾಗಿ ವ್ಯರ್ಥವಾಯಿತು ಎಂದು ಹೇಳಿದಾಗ ಮುರಾರಿಯು ಖವಾಸಖಾನನ ಕಾಲಿಗೆ ಬಿದ್ದು ಲಜ್ಜಿತನಾಗಿ ಖಿನ್ನನಾದನು.

## ೧೨. *ಶಾಹಜಹಾನ ಬಾದಶಹನ ಹಾಗೂ ಸುಲ್ತಾನ ಮಹಮ್ಮದ ಆದಿಲಶಾಹರ ಮಧ್ಯ ವಿರಸ ಆದಿಲಶಹನು ಖಂಡಣಿಯನ್ನು ಕೊಡದಿದ್ದುದು.*

ಇದರಿಂದಾಗಿ ಶಹಾಜಹಾನ ಬಾದಶಹನಿಗೂ, ಆದಿಲಶಹನಿಗೂ ಉಭಯತರಲ್ಲಿ ವಿರಸ ಉಂಟಾಗಿ ವೈರತ್ವದ, ಶತೃತ್ವದ ಭಾವನೆ ನಿರ್ಮಾಣವಾಯಿತು. ಮೊಗಲರಿಗೆ ಪ್ರತಿವರುಷ ಕೊಡುತ್ತಿದ್ದ ಖಂಡಣಿಯ ವಿಷಯದಲ್ಲಿ ನಿರ್ಲಕ್ಷ್ಯ ತೋರಿಸಿದನು. ಅದರ ಪ್ರತಿಯಾಗಿ ಶಾಹಜಹಾನ ಬಾದಶಹನಿಂದ ವಿರಸದ, ವೈರಭಾವದ ವಿಷಯಗಳನ್ನೊಳಗೊಂಡ ಪತ್ರಗಳು ಆದಿಲಶಹನಿಗೆ ಬರಹತ್ತಿದುವು.[1] ಪ್ರತಿಯಾಗಿ ಆದಿಲಶಹನೂ ಅಷ್ಟೇ ಖಾರವಾಗಿ ತನ್ನ ಬಲವನ್ನು ಪ್ರಕಟಿಸಿ ಉತ್ತರ ಬರೆಯುತ್ತಿದ್ದನು. ಹಾಗೆ ಶಾಹಜಹಾನ ಬಾದಶಹನಿಂದ ಬಂದ ಪತ್ರಗಳಲ್ಲಿಯ ಒಂದು ಪತ್ರದ ನಕಲನ್ನು ಹಾಗೂ ಆದಿಲಶಹನು ಕೊಟ್ಟ ಉತ್ತರಗಳಲ್ಲಿಯ ಒಂದು ಪತ್ರದ ನಕಲನ್ನು ಈ ಕೆಳಗೆ ಕೊಡಲಾಗಿದೆ.

---

3. On the 14th Jumadal-awwal, July 7, AH 1043 (27 October 1633) intellegence arrived of the death of "Mahabat Khan-Khan-Khanan" Badshah Nama P. 43. "There after Yaminuddayala-asab-Khan Was promoted to dignity of Khan-Khanan" Ibid-46

1. See Bad Shah Nama E.D. p. 51 Under Julus 9th 1043. (1635 A.D)

೧೩. *ಶಾಹಜಹಾನ ಬಾದಶಹನ ಪತ್ರದ ನಕಲು :*

"ದೇವರ ಸ್ತುತಿ ಸದಾಕಾಲ ಇರಲಿ. ಯಾಕೆಂದರೆ ದೇವರು ತನ್ನ ಪೂರ್ಣ ಸಾಮರ್ಥ್ಯದಿಂದ ನೀರಿನ ಒಂದು ಹನಿಯಿಂದ ತಾಯಿಯ ಸ್ವರೂಪದಿಂದ ಆಕಾರಕ್ಕೆ ತಂದು, ನಮ್ಮನ್ನು ಪೃಥ್ವಿಯ ಬಾದಶಹನನ್ನಾಗಿ ಮಾಡಿದ್ದಾನೆ. ಆದ್ದರಿಂದ ಹೀಗೆ ಮಾಡಬೇಕಾಗಿದೆ. ಈ ಪೃಥ್ವಿಯಲ್ಲಿ ನಾಲ್ಕು ಕಡೆಗೂ, ವಿಜಾಪುರದ ರಾಜ್ಯ, ಗೋವಳಕುಂಡ, ಭಾಗಾನಗರಗಳಲ್ಲೂ, ಲಂಕಾ, ಪಡಲಂಕಾಗಳಲ್ಲೂ, ಶಾಹಾಜಹಾನ ಈ ಹೆಸರಿನಲ್ಲಿ ಖುತಬಾ ಓದುವುದನ್ನು ಮತ್ತು ಮೊಹರನ್ನು (ಶಿಕ್ಕಾ) ನಾವು ನಡೆಸಬೇಕಾಗಿದೆ. ನೀವು ಎಲ್ಲರೂ ಆಯಾ ನಗರಗಳಲ್ಲಿ ಅಸಂತೋಷ (ಖುದಖುದ) ಪಕ್ಷಿಯಂತೆ ಪ್ರತಿಯೊಬ್ಬ ಬಾದಶಹನ ಹೆಸರುಗಳನ್ನು ಓದುತ್ತಿದ್ದೀರಿ. ಆದ್ದರಿಂದ ನೀವು ಈಗ ನಮ್ಮ ಸೇವೆಯ ದಾರವನ್ನು ನಿಮ್ಮ ಜೀವದ ಕೊರಳಿನಲ್ಲಿ ಹಾಕಿಕೊಂಡು ಅತ್ತಕಡೆಯ ನಗರಗಳಲ್ಲಿ ಖುತಬಾ, ಶಿಕ್ಕಾ ಮತ್ತು ಹೆಸರುಗಳನ್ನು ಶಾಹಜಹಾನ ಬಾದಶಹರ ಹೆಸರಿನಲ್ಲಿಯೇ ನಡೆಸುವುದು ನಿಮಗೆ ಯೋಗ್ಯವೆನಿಸುತ್ತದೆ. ಇಲ್ಲವಾದಲ್ಲಿ ಗಿಡುಗ ಪಕ್ಷಿಯ ಕೈಯಿಂದ ನಿಮ್ಮ ದೇಹದಲ್ಲಿಯ ಕರುಳುಗಳನ್ನು ಬಗೆದು, ಅದರಲ್ಲಿಯ ಮಾಂಸವನ್ನು ಹೊರತೆಗೆದು, ಆ ಮಾಂಸವನ್ನು ಪೃಥ್ವಿಯ ಎಲ್ಲ ಧಾರೆಗಳಲ್ಲೂ ಹಾಕಿ ಲೂಟಿ ಮಾಡಬೇಕಾಗುತ್ತದೆ. ಈ ವಿಷಯವನ್ನು ನೀವು ಚೆನ್ನಾಗಿ ಜೀವದ ಕಿವಿಯಿಂದ ಕೇಳಿರಿ. ಮೊಲದ ಹುಸಿ ನಿದ್ರೆ ನಟಿಸಬೇಡಿರಿ. ಮೊಲದ ಹಿಂದೆ ಒಂದು ಕ್ರೂರ ಪಶು ಬೆನ್ನುಹತ್ತಿದ ಸಮಯದಲ್ಲಿ, ಮೊಲವು ಓಡುತ್ತ-ಓಡುತ್ತ ಒಮ್ಮಿಂದೊಮ್ಮಲೆ ದಾರಿಯಲ್ಲಿ ಬಿದ್ದು ಆ ಭಯದಿಂದ ನಿದ್ರೆ ನಟಿಸಿ, ತನ್ನ ಎರಡೂ ಕಿವಿಗಳನ್ನು ತನ್ನ ಎರಡು ಕಣ್ಣುಗಳ ಮೇಲೆ ಮುಚ್ಚಿಕೊಂಡು ಗಾಢ ನಿದ್ರೆ ಹತ್ತಿದಂತೆ ನಟಿಸುತ್ತದೆ. ತನ್ನ ಬೆನ್ನ ಹಿಂದೆ ಬರುತ್ತಿರುವ ಪಶುವು ತನ್ನ ನಿದ್ದೆಯನ್ನು ಹೇಗೆ ಭಂಗ ಪಡಿಸುತ್ತದೆ? ಎಂದು ಆ ಮೊಲವು ತಿಳಿದಿರುತ್ತದೆ. ನಿದ್ದೆ ಹತ್ತಿದ್ದನ್ನು ನೋಡಿ ಆ ಪಶುವು ತಿರುಗಿ ಹೋಗುತ್ತದೆ ಮತ್ತು ತನ್ನ ಪ್ರಾಣ ಉಳಿಯುತ್ತದೆ ಎಂದು ಮನಸ್ಸಿನಲ್ಲಿ ತಿಳಿದುಕೊಂಡು ಮಲಗುತ್ತದೆ. ಆದರೆ ಅದರ ಬೆನ್ನು ಹತ್ತಿದ ಪಶುವು ಆ ಮೊಲವನ್ನು ತತ್ಕಾಲದಲ್ಲಿಯೆ ತಿಂದು ಬಿಡುತ್ತದೆ. ಆದ್ದರಿಂದ ಆ ಮೊಲದಂತೆ ನಿದ್ರೆಯ ನಟನೆ ಮಾಡಬೇಡ. ಯಾಕೆಂದರೆ, ನಾನು ಗರುಡ ಪಕ್ಷಿಯಂತೆ ಶೋಧ ಮಾಡುತ್ತ ಬೆನ್ನು ಹತ್ತಿರುವೆ. ಆದಕಾರಣ ಎಲ್ಲ ಅಮೀರ ಜನರಲ್ಲಿಯ ಮುಖ್ಯ ಅಮೀರ, ಇಮಾನದಾರ ಮತ್ತು ದೊಡ್ಡ ಮನೆತನದ ವಿಚಾರವಂತನಾದ ಮಕರಮತಖಾನನನ್ನು ನಿಮ್ಮ ಹತ್ತಿರ ಕಳಿಸಲಾಗಿದೆ. ಅವರೊಂದಿಗೆ ನಿಮಗೆ ನಿಮ್ಮ ಕಲ್ಯಾಣ ಹೇಗೆ ಕಾಣುತ್ತದೆಯೋ ಹಾಗೆ ಮಾಡಿರಿ"

೧೪. *ಸುಲ್ತಾನ ಮಹಮ್ಮದ ಆದಿಲಶಹನು ಶಾಹಜಹಾನ ಬಾದಶಹನಿಗೆ ಬರೆದ ಉತ್ತರ-ಪತ್ರದ ನಕಲು.*

"ಸತ್ಯ ಸ್ವರೂಪನಾದ ದೇವರ ಉಪಕಾರವಿದೆ ಯಾಕೆಂದರೆ, ಅವನು ಈ ಪೃಥ್ವಿಯಲ್ಲಿ ಯಾರಿಗೂ ಗರ್ವದಿಂದ ಮತ್ತು ಅಭಿಮಾನದಿಂದ ಇರಲು ಬಿಟ್ಟಿಲ್ಲ. ಗರ್ವ ಮತ್ತು ಅಭಿಮಾನಗಳಿಂದ ಮೆರೆಯುವವನನ್ನು ನೆಲಸಮ ಮಾಡಿದ್ದಾನೆ. ಫಾರಸಿಯಲ್ಲಿಯ ಒಂದು ದ್ವಿಪದಿಯ ಅರ್ಥ ಹೀಗಿದೆ. "ನಾನೇ ಒಬ್ಬ ಶ್ರೇಷ್ಠನಿದ್ದೇನೆ ಎಂಬ ಅಭಿಮಾನದಿಂದ ಬೀಗುವುದು ದೇವರಗೊಬ್ಬನಿಗೇ ಶೋಭಿಸುತ್ತದೆ" ಯಾಕೆಂದರೆ ಆ ದೇವರ ರಾಜ್ಯ ಶಾಶ್ವತವಾಗಿದೆ. ಆತನ ಶರೀರ ಮಾತ್ರ ಯಾವುದನ್ನೂ ಲೆಕ್ಕಿಸುವುದಿಲ್ಲ. ಅರ್ಥಾತ್ ಯಾರಿಗೂ ಯಾಚನೆಯನ್ನು ಮಾಡುವುದಿಲ್ಲ. ಈ ದ್ವಿಪದಿಯಲ್ಲಿ ಭಾವ ಹೀಗಿದೆ "ಹೀಗೆ ಮಾಡುವುದು ದೇವರಿಗೆ

ಶೋಭಿಸುತ್ತದೆ. ಯಾಕೆಂದರೆ, ಅವನು ಶಾಶ್ವತನಾಗಿದ್ದಾನೆ" ಗರ್ವ ತೋರಿಸುವುದು ನಿಮಗೆ ಶೋಭಿಸುವುದಿಲ್ಲ. ಯಾಕೆಂದರೆ ನೀವು ಅಶಾಶ್ವತರು ನಾಶವಂತರೂ ಆಗಿದ್ದೀರಿ. ಮೂರ್ಖ ಕಾರಭಾರಿಯ ಕೈಯಿಂದ ಬರೆಯಿಸಿ ಇತ್ತ ಕಳಿಸಿದ ಪತ್ರವನ್ನು ನೋಡಿದೆ. ವಿಷಯ ತಿಳಿಯಿತು. ಆ ಪತ್ರದಲ್ಲಿಯ ವಿಷಯವು ಸೂರ್ಯನ ತೇಜದಷ್ಟು ಸ್ಪಷ್ಟವಾಗಿದೆ. ತಾವು ನನಗೆ ಖುದಖುದ ಪಕ್ಷಿಯ ಉಪಮೆಯನ್ನು ಕೊಟ್ಟಿದ್ದೀರಿ. ಈ ಖುದಖುದ ಪಕ್ಷಿಗೆ ರಾಜ್ಯಾಧಿಕಾರದ ಮುಕುಟುವನ್ನು ಬಾದಶಾಹಿ ತಾಜವನ್ನೂ ದೇವರೆ ಕೊಟ್ಟಿದ್ದಾನೆ. ಇದರಲ್ಲಿ ಆಶ್ಚರ್ಯವೇನಿದೆ? ಸುಲೇನಾಮ ಅಲೇಹು ಸನಲಿಮ ಈತನು ಅನೇಕ ದಿನಗಳವರೆಗೆ ಗಿಡುಗ ಪಕ್ಷಿಯ ಯೋಗ್ಯತೆಯನ್ನು ಬೆಳೆಸಿಕೊಂಡಿದ್ದನು. ಆದರೆ ತನ್ನ ಪಂಜರದಿಂದ ಹೊಡೆದು ಹಳೆಯದನ್ನು ಉರುಳಿಸಿ ಹೊಸದನ್ನು ಸೃಷ್ಟಿಸುವ ಸಾಮರ್ಥ್ಯ ಗಿಡುಗನಿಗೆಲ್ಲಿದೆ? ಅಂಥ ಯಾವ ವಿಶೇಷವಿದೆ? ಇದರಲ್ಲಿಯ ಭಾವವೆಂದರೆ, ಸುಲೇಮಾನ ಪೈಗಂಬರರ ಪುರಾತನವಾದ ಪ್ರಮುಖವಾದ ಖುದಖುದ ಪಕ್ಷಿ ಮತ್ತು ಆ ಪಕ್ಷಿಗೆ ರಾಜ್ಯಾಧಿಕಾರವನ್ನು ದೇವರು ಕೊಟ್ಟಿದ್ದಾನೆ, ಎಂದಿದ್ದರೂ ಸುಲೈಮಾನ ಪೈಗಂಬರರು ಕೆಲವು ದಿನ ಗಿಡುಗ ಪಕ್ಷಿಯ ಹೊಸ ಯೋಗ್ಯತೆಯನ್ನು ಬೆಳೆಸಿಕೊಂಡಿದ್ದರು. ಆದರೆ ಆ ಗಿಡುಗ ಪಕ್ಷಿಗೆ ಖುದಖುದ ಪಕ್ಷಿಯ ಯೋಗ್ಯತೆ ಎಲ್ಲಿಂದ ಬರಬೇಕು? ಇದರಲ್ಲಿಯ ಭಾವವೆಂದರೆ, ನಾವು ಪುರಾತನರು, ನಮಗೆ ರಾಜ್ಯಾಧಿಕಾರ ಬಂದದ್ದು ದೇವರ ದೇಣಿಗೆಯಾಗಿದೆ. ನೀವು ಎಷ್ಟೇ ದೊಡ್ಡವರಾದರೂ ಹೊಸಬರಿದ್ದೀರಿ. ನಮ್ಮ ಅಕಲ್ಯಾಣವನ್ನು ಮಾಡುವುದು ನಿಮ್ಮ ಕೈಯಿಂದ ಹೇಗೆ ಆದೀತು? ಪತ್ರದಲ್ಲಿ ಮೊಲದ ಭ್ರಾಂತಿರೂಪದ ನಿದ್ರೆಯನ್ನು ನಟಿಸಬಾರದೆಂದು ಬರೆಯಲಾಗಿದೆ. ಮೊಲ ನಿದ್ದೆ ಮಾಡಬಹುದು, ಆದರೆ ಪ್ರಸಂಗ ಬಂದಾಗ ಇಷ್ಟು ಜೋರಾಗಿ ಓಡುತ್ತದೆಂದರೆ ತನ್ನ ಬೆನ್ನುಹತ್ತಿದ ಪಶುವಿನ ಪ್ರಾಣವನ್ನು ತೆಗೆದುಕೊಳ್ಳುತ್ತದೆ. ಗರುಡ ಪಕ್ಷಿ ಎಷ್ಟೇ ಬೆನ್ನು ಹತ್ತಬಹುದು. ಆದರೆ ತನ್ನ ಮೂರ್ಖತನದಿಂದಾಗಿ ಮೊಲದ ಮಾಂಸವನ್ನು ತಿನ್ನುವ ಆಸೆಯಲ್ಲಿ ಬಂದು ಬಂಧನದಲ್ಲಿ ಬೀಳುತ್ತದೆ. ಇದರಲ್ಲಿಯ ಭಾವವೆಂದರೆ, ಇನ್ನೊಬ್ಬರ ಅಕಲ್ಯಾಣವನ್ನು ಇಚ್ಛಿಸುವುದರಲ್ಲಿ ತಮಗೇ ಅಪಾಯವಿದೆ. ಖಂಡಣಿಯ ಬದಲಾಗಿ ಇಂದಿನವರೆಗೆ ಎಷ್ಟು ಕೊಟ್ಟಿದೆಯೋ ಆ ಪ್ರಮಾಣದಲ್ಲಿ ಕೊಡೋಣ ಅದರಲ್ಲಿ ಸಂಶಯವಿಲ್ಲ. "ನೀವು ದೇವರ ಆಜ್ಞೆಯಿಂದ ಮುಖ ತಿರುಪಬೇಡಿರಿ" ಹೀಗೆ ಮಾಡಿದರೆ ನಿಮ್ಮ ಆಜ್ಞೆಯನ್ನು ಯಾರೂ ಮುರಿಯುವುದಿಲ್ಲ" (ಪತ್ರದ ನಕಲು ಸಮಾಪ್ತವಾಯಿತು)

*೧೫. ನಿಜಾಮಶಹನ ರಾಜ್ಯ ಮುಳುಗಿದ ನಂತರದ ಘಟನೆಗಳು :*

ನಿಜಾಮಶಾಹಿ ರಾಜ್ಯವು ಬಾದಶಹ ರಹಿತವಾದಾಗ, ಅರ್ಥಾತ್ ರಾಜ್ಯವು ಮುಳುಗಿದಾಗ, ಸೂತ್ರ ಕಿತ್ತಿದ ಪುಸ್ತಕದಂತಾಯಿತು. ಪುಸ್ತಕವನ್ನು ಹೊಲಿಯುವ ಬೈಂಡರನಿಗೆ ಶಿರಾಜಾ ಎಂದು ಹೆಸರು. ಆತ ಪುಸ್ತಕದ ಹಾಳೆಗಳನ್ನು ಒಂದೆಡೆ ಜೋಡಿಸಿ ಎರಡೂ ಬದಿಗಳಲ್ಲಿ ರೇಶ್ಮೆಯ ದಾರದಿಂದ ಹೊಲಿಯುತ್ತಾನೆ. ಆ ಗಟ್ಟಿಯಾದ ದಾರ ಹರಿದಾಗ ಕಾಗದಗಳೆಲ್ಲ ಚೆಲ್ಲಾಪಿಲ್ಲಿಯಾಗುತ್ತವೆ. ಅದರಂತೆ ನಿಜಾಮಶಹನ ರಾಜ್ಯದಲ್ಲಿ ನಿಜಾಮಶಾಹನೇ ಇಲ್ಲದಿದ್ದಾಗ ಸೂತ್ರವೇ ಹರಿದಹಾಗೆ, ರಾಜ್ಯದಲ್ಲಿಯ ಅಮೀರ ಜನರು ತಂತಮ್ಮ ಸ್ಥಳಗಳಿಗೆ ತಾವೆ ಒಡೆಯರಾದರು. ಸಿದ್ದಿ ರೇಹಾನನು ಸೋಲಾಪುರದಲ್ಲಿ, ಶಾಹಾಜಿ ಭೋಸಲೆಯು ಪೇಮಗಡದಲ್ಲಿ, ಶ್ರೀನಿವಾಸರಾಯನು ಜುನ್ನರದಲ್ಲಿ, ಸಿದ್ದಿ ಸಾಬಾ ಮತ್ತು ಸಫೀಖಾನರು ತಳಕೊಂಕಣದಲ್ಲಿ, ಸಿದ್ದೀ ಸಾಬಾ ಅಂಬರನು ರಾಜಾಪುರಿಯ ಬಂದರದಲ್ಲಿ ಮತ್ತು ಬೇರೆ-ಬೇರೆ ಕಿಲ್ಲೇದಾರರು, ಜಮೇದಾರರು

ಎಲ್ಲೆಲ್ಲಿ ಇದ್ದರೋ ಆಯಾಸ್ಥಾನಗಳಲ್ಲಿ ತಾವೆ ಮಾಲಿಕರೆಂದು ಸಾರಿಕೊಂಡರು. ಅಲ್ಲದೆ ಉನ್ನತ್ತರಾಗಿ ಸವಾರರನ್ನು ಸಿಬ್ಬಂದಿಗಳನ್ನು ಸೇರಿಸಿಕೊಳ್ಳುತ್ತ ರಾಜ್ಯ ವಿಸ್ತರಿಸುವ ಯತ್ನದಲ್ಲಿದ್ದರು. ಸಿದ್ದೀ ರೇಹಾನನು ಬಹಳಷ್ಟು ಸೈನ್ಯವನ್ನು ತೆಗೆದುಕೊಂಡು ಮೊಹಬತಖಾನನೊಂದಿಗೆ ಯುದ್ಧ ಮಾಡಿದ್ದನು; ಆ ಯುದ್ಧದಲ್ಲಿ ಸ್ವತಃ ಹೋಗಿ ಶೂರತ್ವದಿಂದ, ಪರಾಕ್ರಮದಿಂದ ಹೋರಾಡಿ ಯಶಸ್ವಿಯಾಗಿ ಬಾದಶಹನಿಗೆ ತೃಪ್ತಿ ತಂದಿದ್ದನು. ಆತನ ಪರಾಕ್ರಮ ಎಲ್ಲರಲ್ಲೂ ಪ್ರಸಿದ್ಧಿಯಾಗಿತ್ತು. ನಿಜಾಮಶಾಹನ ಕಡೆಯ ೪-೫ ಸಾವಿರ ಸೈನಿಕರೂ ಸರದಾರರೂ ಆತನನ್ನು ಸೇರಿಕೊಂಡಿದ್ದರು. ಅದರಿಂದಾಗಿ ಅವನಿಗೆ ದೊಡ್ಡಸ್ತಿಕೆ ಬಂದಿತ್ತು. ಖವಾಸಖಾನನು ನಿರಂತರವಾಗಿ ಅವನೊಂದಿಗೆ ಸ್ನೇಹದಿಂದ ವರ್ತಿಸುತ್ತಿದ್ದನು. ಆ ಸಮಯದಲ್ಲಿ ಆದಿಲಶಾಹನ ಕಡೆಯ ವಿಶ್ವಾಸಿಕನಾದ ನಸರತುಲ್ಲಾಹನ ಕೈಯಲ್ಲಿ ಆದಿಲಶಹನ ವಸ್ತ್ರಗಳನ್ನು, ಶುಭಾಶಯಗಳನ್ನೂ ಕಳಿಸಿದರು. ಪತ್ರದಲ್ಲಿ "ಮೊಹಬತಖಾನನೊಂದಿಗೆ ಯುದ್ಧ ಮಾಡಿ ವಿಜಯಿಯಾದ ಬಗ್ಗೆ ಸರಹದ್ದಿಯ ಸಂರಕ್ಷಣೆ ಮತ್ತು ಶತ್ರುವಿನ ಪಾರುಪತ್ಯದಲ್ಲಿಯೆ ನಿಮ್ಮ ವಿಜಯಕ್ಕಾಗಿ, ಸುಲ್ತಾನ ಮಹಮ್ಮದ ಗಾಜಿ ಬಾದಶಹರು ನಿಮ್ಮ ಮೇಲೆ ತುಂಬ ಸಂತೋಷರಾಗಿದ್ದಾರೆ. ಬಾದಶಹರು ನಿಮ್ಮನ್ನು ಇನ್ನಷ್ಟು ಅಧಿಕ ಅಧಿಕಾರದ ಪದವಿಗೆ ಏರಿಸಬೇಕೆಂದು ಇಚ್ಛಿಸಿದ್ದಾರೆ. ಆದ್ದರಿಂದ ನಿಮ್ಮ ಕಡೆಯ ವಿಶ್ವಾಸಿಕನೊಬ್ಬನನ್ನು ಬಾದಶಹರ ಸನ್ನಿಧಿಗೆ ಕಳಿಸಬೇಕು" ಎಂಬುದಾಗಿ ಬರೆದಿತ್ತು. ಅದರಿಂದಾಗಿ ಸಿದ್ದಿ ರೇಹಾನನು ತುಂಬ ಸಂತೋಷಪಟ್ಟು ಹಾಫೀಜ ನಸರತುಲ್ಲಾಹನನ್ನು ಅತಿ ಆದರದಿಂದ ಬರಮಾಡಿಕೊಂಡನು.

ಸಿದ್ದಿ ಫೋಲಾದ, ದೌಲತಖಾನ ಮತ್ತು ನಿಯಾಮತಖಾನರನ್ನು ಹಾಫೀಜ ನಸರತುಲ್ಲಾಹನೊಂದಿಗೆ ಅತ್ಯಂತ ಆದರಪೂರ್ವಕ ಪತ್ರ ಬರೆದು ಆದಿಲಶಹನ ಕಡೆಗೆ ಕಳಿಸಿದನು. ಬಾದಶಹ ಹಾಗೂ ಖವಾಸಖಾನರು ಅವರ ಚಿತ್ತ ಸಮಾಧಾನ ಪಡುವಂತೆ ಪೂರ್ಣ ಕೃಪೆಯಿಂದ ದಿಲ್‌ಭರವಸೆ ನೀಡಿದರು. ಸಿದ್ದೀ ರೇಹಾನನ ಹತ್ತಿರ ಇದ್ದ ಜಹಗೀರಿಯೊಂದಿಗೆ ಪರಗಣೆ ಕರಾಡ, ಕೊಲ್ಲಾಪುರ ಮತ್ತು ಖಾನಾಪುರ ಭಾಗಗಳನ್ನು, ಅವುಗಳಿಂದ ಬರುವ ೧ ಲಕ್ಷ ಹೊನ್ನಿನ ವಸೂಲಿಯ ಪ್ರದೇಶಗಳನ್ನು ಜಹಗೀರು ಹಾಕಿಕೊಟ್ಟನು. ಅತ್ಯಂತ ಮೆಹರಬಾನಗಿಯಿಂದ ಮತ್ತು ಸ್ನೇಹದಿಂದ ಸಿದ್ದಿ ರೇಹಾನನನ್ನು ತನ್ನಂತೆ ಮಾಡಿಕೊಂಡು, ಸರಹದ್ದಿನ ರಕ್ಷಣೆ ಹಾಗೂ ಶತ್ರುಗಳನ್ನು ಎದುರಿಸುವಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕೆಂದು ಬೋಧಿಸಿ, ಅದರಲ್ಲಿಯೇ ನಿಮ್ಮ ಉಪಯೋಗ ಮಹತ್ವದ್ದಾಗಿದೆ ಎಂದು ಹೇಳಿ ಕಳಿಸಿದನು. ಫೋಲಾದಖಾನ ಮತ್ತು ನಿಯಾಮತಖಾನರನ್ನು ಆದಿಲಶಾಹ ಬಾದಶಹನು ತನ್ನ ಹತ್ತಿರವೇ ಸರಕಾರದಲ್ಲಿ ಉಳಿಸಿಕೊಂಡನು.

### ೧೬. *ನಿಜಾಮಶಾಹನ ಬಹಳಷ್ಟು ಪ್ರದೇಶಗಳನ್ನು ಶಾಹಾಜೀರಾಜೆ ಭೋಸಲೆಯು ಕೈವಶ ಮಾಡಿಕೊಂಡದ್ದು :*

ಶಾಹಾಜಿರಾಜೆ ಭೋಸಲೆಯು ಪೇಮಗಡಕ್ಕೆ ಹೋದ ಮೇಲೆ ನಿಜಾಮಶಾಹನ ಪ್ರದೇಶಗಳಲ್ಲಿ ಹೋಗಿ ಆತನ ಪ್ರದೇಶಗಳನ್ನು ತೆಗೆದುಕೊಳ್ಳಲು ಕೈಯನ್ನು ಉದ್ದವಾಗಿ ಮಾಡಿದನು. ಪುಣೆ ಮತ್ತು ಚಾಕಣಗಳಿಂದ ಬಾಲಾಘಾಟದ ವರೆಗೆ ಮತ್ತು ಜುನ್ನರ, ಅಹಮದನಗರ ಸಂಗಮನೇರ ಮತ್ತು ನಾಸಿಕ, ತ್ರ್ಯಂಬಕ ಸಹಿತವಾಗಿ ಅತ್ತ ಕಡೆಯ ಎಲ್ಲ ಸುತ್ತಮುತ್ತಲಿನ ಪ್ರದೇಶಗಳನ್ನು ಕೈವಶ ಮಾಡಿಕೊಂಡನು. ೬ ಸಾವಿರ ಸ್ವಾರರನ್ನು ಚಾಕರಿಯ ಮೇಲಿಟ್ಟು ಪ್ರಬಲನಾದನು. ಪ್ರತಿಯೊಂದು ಕಡೆಗೆ ಹೋಗಿ ಹಲ್ಲೆ ಮಾಡುತ್ತಿದ್ದನು. ಇರಾದತಖಾನನು ದೌಲತಾಬಾದದಲ್ಲಿಯೇ ಇದ್ದನು. ಆತನು ಮಾಲೋಜಿರಾಜೆ ಭೋಸಲೆಯ ವಶೀಲಿಯಿಂದ ಶಾಹಾಜಿ ರಾಜೆ ಭೋಸಲೆಯ ಜೊತೆಗೆ. ಸ್ನೇಹ ಬೆಳೆಸಿ ಶಾಹಾಜಹಾನ

ಬಾದಶಹನ ಮೇಹರಬಾನಗಿ ತನ್ನ ಮೇಲೆ ಆಗುವಂತೆ ಶಾಹಾಜಿರಾಜೆ ಭೋಸಲೆಯಲ್ಲಿ ಆಶೆ ಹುಟ್ಟಿಸಿದನು. ಆಗ ಶಾಹಾಜಿರಾಜೆ ಭೋಸಲೆಯು ತನ್ನನ್ನು ಶಾಹಜಹಾನ ಬಾದಶಹನು ತನ್ನ ಮಗನಂತೆ ಕಂಡು ನನಗೆ ೨೨ ಸಾವಿರ (ಬಾವಿಸಹಜಾರೀ)ದ ಪದವಿಯನ್ನು ಕೊಡಬೇಕು ಎಂದು ಹೇಳಿದನು. ಅದನ್ನು ಕೇಳಿದ ಇರಾದತಖಾನನು ಬಾದಶಹನ ಕಡೆಯಿಂದ ಮಾನ್ಯತೆಯ ಆಜ್ಞಾಪತ್ರವನ್ನು ಮತ್ತು ಬಾದಶಹನ ಮೈಮೇಲಿನ ಅಂಗವಸ್ತ್ರವನ್ನು ಒಬ್ಬ ಬುದ್ಧಿವಂತ ವಕೀಲನ ಜೊತೆಗೆ ಕೊಟ್ಟು ಶಾಹಾಜಿ ರಾಜೇ ಭೋಸಲೇನ ಹತ್ತಿರ ಕಳಿಸಿದನು. ಶಾಹಾಜಿ ರಾಜೆ ಭೋಸಲೆಯು ಮಾಡಬೇಕೆಂದಿದ್ದ ಕೆಲಸಕ್ಕೆ ತತ್ಕಾಲ ಒಪ್ಪಿಗೆ ಕೊಟ್ಟನು. ಆಗಾಗ ಅವನಿಗೆ ಭರವಸೆ ಕೊಡುತ್ತ ಚಿತ್ತ ಸಮಧಾನ ಪಡಿಸಿದನು. ಶಾಹಾಜಿರಾಜೆ ಭೋಸಲೆಗೆ ಬಾದಶಹನ ವತಿಯಿಂದ ಪೂರ್ಣ ಆಧಾರವನ್ನು ಕೊಟ್ಟು ಶತ್ರುವಿನ ಪಾರುಪತ್ಯ ಮಾಡುವುದು ಹಾಗೂ ನಿಜಾಮಶಹನ ಎಲ್ಲ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಬೇಕೆಂದು ನಿರ್ಧರಿಸಿದರು. ಶಾಹಾಜಿ ರಾಜೇ ಭೋಸಲೆಯು ಯೋಜನೆಗಳನ್ನು ಹಾಕುವಲ್ಲಿ, ದೂರದ ವಿಚಾರ ಮಾಡುವಲ್ಲಿ ಅಂದಿನ ಕಾಲದ ಜಾಣರಲ್ಲಿ ಅದ್ವಿತೀಯನಾಗಿದ್ದನು. ಅವನಂಥ ಬುದ್ಧಿವಂತರು ಯಾರೂ ಇರಲಿಲ್ಲ. ಆತನು ಕೂಡ ತಾನು ಶ್ರೇಷ್ಠ ಹಾಗೂ ಪೂರ್ಣ ಮನೋರಥ ಎಂದೇ ತಿಳಿದಿದ್ದನು; ಮುರಾರಿಯ ವಶೀಲಿಯಿಂದ ಗುಪ್ತವಾಗಿ ಯಾರಿಗೂ ಗೊತ್ತಾಗದಂತೆ, ಖವಾಸಖಾನನೊಂದಿಗೆ ಮಾತುಕತೆ, ಪ್ರಶ್ನೋತ್ತರಗಳನ್ನು ಪ್ರಾರಂಭಿಸಿದ್ದನು.

"ನಿಜಾಹಮಶಹನ ೮೪ ಕೋಟೆಗಳಲ್ಲಿ ದೌಲತಾಬಾದದ ಒಂದು ಕೋಟೆ ಹೋದರೆ ಹೋಗಲಿ ಜುನ್ನರದಂಥ ಸಿಂಹಾಸನದ ಸ್ಥಳ ನಮ್ಮ ಕೈಯಲ್ಲಿದೆ. ಒಂದು ವೇಳೆ ತಾವು ನನ್ನೊಂದಿಗೆ ಸ್ನೇಹವನ್ನು ಅಂಗೀಕರಿಸಿ, ನನಗೆ ಸಹಾಯ ಮಾಡಿದರೆ, ಶತಪ್ರಯತ್ನ ಮಾಡಿ ನಿಜಾಮಶಹನ ಧ್ವಜವನ್ನು ಮತ್ತೆ ನಿಲ್ಲಿಸೋಣ" ಎಂಬ ಶಾಹಾಜಿ ರಾಜೇ ಭೋಸಲೆಯ ಈ ಯೋಜನೆಯು ಖವಾಸಖಾನನಿಗೆ ಮತ್ತು ಎಲ್ಲ ಸಂಭಾವಿತ ಅಮೀರ ಮಂಡಳಿಯ ಮನದಲ್ಲಿತ್ತು. ಆದರೆ ಮುಸ್ತಾಫಖಾನನು ಈ ಯೋಜನೆಯನ್ನು ಒಪ್ಪುತ್ತಿರಲಿಲ್ಲ. ಇದಕ್ಕೆ ಅವನು ಅಡ್ಡಿ ಪಡಿಸುತ್ತಿದ್ದ. ಖವಾಸಖಾನನಾದರೋ ದೌಲತಾಬಾದ ಕೋಟೆ ಹೋದದ್ದಕ್ಕೆ ಬಹಳ ಖಿನ್ನನಾಗಿ ಚಿಂತ್ರಾಗ್ರಸ್ತನಾಗಿದ್ದನು. ಇರಾದತಖಾನ ಮತ್ತು ಶಾಹಾಜಿರಾಜೇ ಭೋಸಲೆ ಅವರ ಮಧ್ಯದ ಮಿತ್ರತ್ವದಿಂದಾಗಿ ಮನಸ್ಸಿನಲ್ಲಿ ಬಹಳ ಭಯಗೊಂಡಿದ್ದನು. ಈಗ ಸಂಶಯ ನಿವಾರಣೆಯಾಗಿ ಶಾಹಾಜಿ ರಾಜೇ ಭೋಸಲೆಯ ಯುಕ್ತಿ ಬಹಳ ಒಳ್ಳೆಯದೆಂದು, ಮತ್ತು ಅದರಲ್ಲಿ ಉಪಯೋಗ ಇದೆಯೆಂದು ಮನಸ್ಸಿನಲ್ಲಿಯೆ ತಿಳಿದು, ಆತನ ಯೋಜನೆಗೆ ಬಹಳ ಶಾಭಾಸಗಿರಿಯನ್ನು ಕೊಟ್ಟು ಆತನನ್ನು ಹೊಗಳಿ, ಯೋಜನೆಯನ್ನು ಒಪ್ಪಿಕೊಂಡನು. ಶಾಹಾಜಿ ರಾಜೇ ಭೋಸಲೆಗೆ ಸಹಾಯ ಮಾಡಹತ್ತಿದನು. ಅವನ ಯೋಜನೆಯ ಪ್ರಕಾರ ನಿಜಾಮಶಾಹನ ವಂಶದಲ್ಲಿಯ ಒಬ್ಬ ಹುಡುಗನನ್ನು ತಂದು ಬಾದಶಾಹಿ ಸಿಂಹಾಸನದ ಮೇಲೆ ಕೂಡ್ರಿಸುವುದೆಂದು ನಿರ್ಧರಿಸಿದರು. ಹಾಗೆ ಮುರಾರಿಯ ಜೊತೆಗೆ ಸೈನ್ಯವನ್ನು ಕೊಟ್ಟು ಬಾದಶಹನ ಕಡೆಯಿಂದ ನಿರೋಪದ ವಸ್ತ್ರಗಳ ಸಹಿತವಾಗಿ ಮುರಾರಿಯನ್ನು ಶಾಹಾಜಿ ರಾಜೇ ಭೋಸಲೆಯ ಸಹಾಯಕ್ಕೆ ಕಳಿಸಿದರು.

*೧೭. ಶಾಹಾಜಿರಾಜೆ ಭೋಸಲೆಯು ನಿಜಾಮಶಹನ ವಂಶದ ಮುರ್ತಜಾ ಎಂಬ ರಾಜಕುಮಾರನನ್ನು ಸಿಂಹಾಸನದ ಮೇಲೆ ಕೂಡಿಸಿದ್ದು :*

ಜುನ್ನರದಿಂದ ೨೦ ಕೋಸುಗಳ ಮೇಲೆ ತಳಕೊಂಕಣದ ಕಡೆಗೆ ಜಿವಧನ ಎಂಬ ಕೋಟೆ ಇದೆ. ಆ ಕೋಟೆಯಲ್ಲಿ ನಿಜಾಮಶಹನ ವಂಶದ ೧೦-೧೧ ವರುಷದ ವಯಸ್ಸಿನ ಮುರ್ತಜಾ ಎಂಬ ಹೆಸರಿನ

ಹುಡುಗನು ನಜರಬಂದಿಯ ಪಹರೆಯಲ್ಲಿದ್ದನು. ಶಾಹಾಜೀ ರಾಜೇ ಭೋಸಲೆಯು ಮುರಾರಿಯು ಕೂಡಿಕೊಂಡು ಆತನನ್ನು ಬಂಧನದಿಂದ ಬಿಡುಗಡೆ ಮಾಡಿ ತಂದು, ಪೆಮಗಡದ ಕೋಟೆಯಲ್ಲಿ ಸಿಂಹಾಸನದ ಮೇಲೆ ಕೂಡಿಸಿದನು (ಆಗಸ್ಟ ೧೬೩೨); ಬಾದಶಾಹಿ ಛತ್ರ ಚಾಮರಗಳನ್ನು ಆತನ ಮೇಲೆ ಹಿಡಿದನು. ದಿವಸ ದಿವಸವೂ ಮುರ್ತುಜಾ ನಿಜಾಮಶಹನ ಪಾಲನೆಯಲ್ಲಿ ತತ್ಪರರಾಗಿ ಸೈನ್ಯವನ್ನು ಸಂಗ್ರಹಿಸುವಲ್ಲಿ ಕೋಟೆಗಳನ್ನು ವಶಪಡಿಸಿಕೊಳ್ಳುವಲ್ಲಿ ಪ್ರಯತ್ನಿಸ ಹತ್ತಿದರು. ಒಂದು ಹೊಸ ಪ್ರಕರಣವನ್ನೆ ಎಬ್ಬಿಸಿ ನಿಲ್ಲಿಸಿದಂತಾಯಿತು. ಸಿದ್ದಿ ಸಾಬಾ ಸೈಫಖಾನನು ತಳಕೊಂಕಣವನ್ನು ವಶಪಡಿಸಿಕೊಂಡು ಅಲ್ಲಿಯೇ ಇರುತ್ತಿದ್ದನು. ಆತನಿಗೆ ಪತ್ರ ಬರೆದು ಮುರಾರಿಯನ್ನು ಕಳಿಸಿದನು. ಆ ಪತ್ರದಲ್ಲಿ 'ನೀವು ಬೇಗ ಇತ್ತ ಬಂದು ಮುಟ್ಟಿ ಹೊಸದಾಗಿ ಸಿಂಹಾಸನದ ಮೇಲೆ ಕುಳಿತ ಮುರ್ತಜಾ ನಿಜಾಮಶಹನ ಭೆಟ್ಟಿಯಾಗಿ ನೀವು ಶಾಹಾಜಿ ರಾಜೇ ಭೋಸಲೇನ ಸ್ನೇಹವನ್ನು ಒಪ್ಪಿಕೊಂಡು ಇರಬೇಕು' ಎಂದು ಬರೆಯಲಾಗಿತ್ತು. ಸೈಫಖಾನನು ಶಾಹಾಜಿರಾಜೇ ಭೋಸಲೆನೊಂದಿಗೆ ಸ್ನೇಹವನ್ನು ಒಪ್ಪಲು ಸಿದ್ಧನಿರಲಿಲ್ಲ. ಬಾದಶಾಹಾ ಗಾಜಿ ಆದಿಲಶಾಹನ ಸೇವೆ ಮತ್ತು ಆತನ ಅಧೀನದಲ್ಲಿರಲು ಒಪ್ಪಿ ಕರಾರಿನಂತೆ ತಳಕೊಂಕಣದ ಎಲ್ಲ ಪ್ರದೇಶಗಳನ್ನು ಶಾಹಾಜಿ ರಾಜೇ ಭೋಸಲೇನ ವಶಕ್ಕೆ ಕೊಟ್ಟು ೨ ಸಾವಿರ ಸವಾರರೊಂದಿಗೆ ಮುರಾರಿಯ ಹತ್ತಿರ ಹೋದನು. ತಳಕೊಂಕಣದ ಪ್ರದೇಶ, ಮಹಾಡದಿಂದ ಸಿವರಿಯ ಸರಹದ್ದಿನವರೆಗೆ ಸಂಪೂರ್ಣ ಕೋಟೆಗಳ ಸಹಿತವಾಗಿ ಶಾಹಾಜಿಯ ಕಡೆಗೆ ಬಂದುವು. ಮುರಾರಿಯು ಶಾಹಾಜೀ ರಾಜೇ ಭೋಸಲೇನಿಗೆ ಬಾದಶಹ ಮುರ್ತಜಾ ನಿಜಾಮಶಾಹನ ರಾಜ್ಯದ ಕಾರಭಾರದ ಕೆಲಸದ ಮುಖ್ತ್ಯಾರಿಯನ್ನು ಕೊಟ್ಟು, ಅಂಬಾರಖಾನನಿಗೆ ೫-೬ ಸಾವಿರ ಸ್ವಾರರೊಂದಿಗೆ ಶಾಹಜಿರಾಜೇ ಭೋಸಲೇನ ಸಹಾಯಕ್ಕಾಗಿ ಇಟ್ಟು, ತಾನು ಸ್ವತಃ ವಿಜಾಪುರಕ್ಕೆ ಹೊರಟು ಬಂದನು. ಭೀಮಾ ಮತ್ತು ಇಂದ್ರಾಯಣಿ ನದಿಗಳ ಸಂಗಮದ ದಡದಲ್ಲಿರುವ ಬಾಭಳೀ (ಪಾಬಳಿ)ಎಂಬ ಗ್ರಾಮಕ್ಕೆ ಬಂದು ಮುಟ್ಟಿದನು.

"ಈ ಸಂಗಮ ಸ್ಥಳದಲ್ಲಿ ಹಿಂದುಸ್ತಾನದ ಹಿಂದು ಜನರ ಸ್ನಾನದಾನಗಳ ಸಂಪ್ರದಾಯದಂತೆ, ಸ್ನಾನದಾನಗಳನ್ನು ಮಾಡಲು ಉಳಿದುಕೊಂಡನು.[೧] ಅಲ್ಲಿ ಸಪ್ತಧಾತು ಅಂದರೆ ಬಂಗಾರ, ಬೆಳ್ಳಿ ಇತ್ಯಾದಿ ಏಳು ಪ್ರಕಾರಗಳ ಧಾತುಗಳಿಂದ ತನ್ನ ತುಲಾಭಾರ ಮಾಡಿಕೊಂಡು, ಆ ದ್ರವ್ಯವನ್ನು ದಾನ ಮಾಡಿದನು. ಅಂಥ ಸಮಯದಲ್ಲಿ ಸೈಫ ಖಾನನು ಕೊಂಕಣದಿಂದ ಬರುತ್ತಿದ್ದನು. ಶಾಹಾಜೀ ರಾಜೇ ಭೋಸಲೆಯು ತನ್ನ ಸ್ನೇಹವನ್ನು ಒಪ್ಪಲಿಲ್ಲ ಎಂಬ ಕಾರಣದಿಂದ ಸೈಫಖಾನನೊಂದಿಗೆ ಕಪಟ ಧಾರಣ ಮಾಡಿದ್ದನು. ಪ್ರಸ್ತುತ ನಿಜಾಮಶಾಹನ 'ಗಜ' ಎಂದರೆ ಹತ್ತೀಖಾನೆಯನ್ನು ಕೇಳುವ ನೆಪದಲ್ಲಿ, ಲೂಟಿ ಮಾಡಲು ಸೈನ್ಯವನ್ನು ಕಳಿಸಿ ಖೇಡ ಮತ್ತು ಕರ್ಡುಸಗಳ ಹತ್ತಿರ ೯ ಕೋಸುಗಳ ಅಂತರದಲ್ಲಿ ಬಾಭಳ (ಪಾಬಳಿ) ಗ್ರಾಮದಲ್ಲಿ ಶಾಹಾಜೀ ರಾಜೇ ಭೋಸಲೇನ ಸೈನ್ಯವು ಸೈಫಖಾನನ ಕಡೆಗೆ ಬಂದು ಮುಟ್ಟಿತು. ದೊಡ್ಡ ಯುದ್ಧವಾಯಿತು. ಉಭಯಕಡೆಗಳ ಜನರು ಈ ಯುದ್ಧದಲ್ಲಿ ಸತ್ತರು. ಬಹಳಷ್ಟು ಜನ ಗಾಯಾಳುಗಳಾದರು. ಸಿದ್ದೀ ಅಂಬರ ಆತಶಖಾನಿ ಎಂಬ ಸೈಫಖಾನನ ಸರದಾರನು ಗಾಯಾಳುವಾಗಿ, ಶಾಹಾಜೀರಾಜೇ ಭೋಸಲೆಯ ಜನರ ಕೈಗೆ ಸಿಕ್ಕು ಬಂದಿಯಾದನು. ಸೈಫಖಾನನು ೨ ದಿನ ಖೇಡದಲ್ಲಿಯೇ ಅಡಗಿ

---

೧. "ಶಕೆ ೧೫೫೫ ಭಾದ್ರಪದ ಅಮಾವ್ಯಾಸೆ (೨೩ ಸಪ್ಟಂಬರ ೧೬೩೩) ರಂದು ಸೂರ್ಯ ಗ್ರಹಣವು ಸೋಮವತೀಯಲ್ಲಿ ಆಯಿತು. ಆ ಸಮಯದಲ್ಲಿ ಮುರಾರ ಜಗದೇವರಾಯನು 'ಚೋವಿಸ ತುಳಾ' ಮಾಡಿಕೊಂಡನು. ನಾಗರಗಾವೀ-ತುಳಾಪುರೀ ಸಹಾಕಲಮೀ ಶಕಾವಲೀ- ಶಿವಚರಿತ್ರ ಪು. ೭೧. ಈ ಬಗ್ಗೆ ಸನದು ಕೂಡ ಪ್ರಸಿದ್ಧವಾಗಿದೆ.

ಕುಳಿತನು. ಮುರಾರಿಯು ಬಾಭಳದಿಂದ ತನ್ನ ಸೈನ್ಯವನ್ನು ಕಳಿಸಿ ಸೈಫಖಾನನನ್ನು ತನ್ನ ಹತ್ತಿರ ಕರೆಸಿಕೊಂಡನು ಮತ್ತು ತನ್ನ ಜೊತೆಗೆ ವಿಜಾಪುರಕ್ಕೆ ಕರೆದುಕೊಂಡು ಬಂದನು. ಬಾದಶಹನು ಆತನಿಗೆ ೨ ಲಕ್ಷ ಹೊನ್ನಿನ ಜಹಾಗೀರನ್ನು ಹಾಕಿ ಕೊಟ್ಟನು.

ಹರಪನಹಳ್ಳಿ ಜಮೇದಾರ ದರಬಾರನಾಯಕನು ಬಂಡುಹೂಡಿ ದಂಗೆ ಮಾಡಹತ್ತಿದ್ದನು. ಅವನನ್ನು ಹತ್ತಿಕ್ಕಲು ಸೈಫಖಾನನನ್ನು ನಿಯಮಿಸಿದನು. ಕೆಲವು ದಿನಗಳ ಅನಂತರ ಸೈಫಖಾನನು ಅಲ್ಲಿಯೇ ಬಂದೂಕಿನ ಗುಂಡಿನಿಂದ ಸತ್ತನು. ಮುರಾರಿಯು ತಿರುಗಿ ಬಂದನಂತರ ಶಾಹಾಜೀ ರಾಜೇ ಭೋಸಲೆಯು ಜುನ್ನರದ ಮಾಲಿಕ ಶ್ರೀನಿವಾಸರಾಯನ ಮಗಳನ್ನು ತನ್ನ ಹಿರಿಯ ಮಗ ಸಂಭಾಜಿಗೆ ಕೇಳಿದನು. ಸ್ನೇಹದ ನಟನೆ ಮಾಡಿ ಶ್ರೀನಿವಾಸರಾಯನನ್ನು ಮೋಸದಿಂದ ಬಂಧಿಸಿದನು. ಜುನ್ನಾರದ ಕೋಟೆ, ಜೀವಧನದ ಕೋಟೆ, ಸೋಂದಾ, ಭೋರಗಡ, ಪರಸಗಡ ಮಾಹುಲ ಮತ್ತು ಘೋಸಳ ಕೋಟೆಗಳನ್ನು ಶ್ರೀನಿವಾಸರಾಯನ ವಶದಲ್ಲಿದ್ದವುಗಳನ್ನು ಶಾಹಾಜೀರಾಜೆ ಭೋಸಲೆ ವಶಪಡಿಸಿಕೊಂಡನು. ಮುರ್ತಜಾ ನಿಜಾಮಶಾಹನನ್ನು ಪೇಮಗಡದಿಂದ ತೆಗೆದು ಜುನ್ನಾರಕ್ಕೆ ಕರೆದುಕೊಂಡು ಬಂದು ಇಟ್ಟರು. ಶ್ರೀನಿವಾಸರಾಯನಿಂದ ಮತ್ತು ಬೇರೆ ಅನೇಕ ಕಾಮದಾರ ಮಂಡಳಿಗಳಿಂದ, ಅಲ್ಲಿ ವಾಸಿಸುತ್ತಿದ್ದ ಶ್ರೀಮಂತರಿಂದ ಸಂಪತ್ತನ್ನು ವಶಪಡಿಸಿಕೊಂಡು ಮಜಬೂತಾದನು. ಶಾಹಾಜೀರಾಜೇ ಭೋಸಲೆಯ ಕುಮ್ಮಕ್ಕಿನಿಂದ ಮುರ್ತಜಾ ನಿಜಾಮುಶಾಹನ ಹೊಸ ಬೆಳವಣಿಗೆ ಮೊಹಬ್ಬತಖಾನನಿಗೆ ಗೊತ್ತಾದಾಗ ಆತ ಅತ್ಯಂತ ಕ್ರೋಧಾಯಮಾನನಾದನು, ಬೆದರಿದನು ಕೂಡ. ಅತ್ತ ಶಾಹಾಜಹಾನ ಬಾದಶಹನ ಆಜ್ಞೆಯನ್ನು ಪಡೆದು ರಾಜಕುಮಾರ ಮಹಮದ ಶೂಜಾನನ್ನು ಬುರ್ಹಾನಪುರದಿಂದ ಹೊರತಂದು ಪರಾಂಡೆ ಕೋಟೆಗೆ ಬಂದು ಮುಟ್ಟಿದನು. ಆ ಕೋಟೆಯನ್ನು ಸುರಂಗ ಹಚ್ಚಿ ಬೀಳಿಸ ತೊಡಗಿದರು. ಪರಾಂಡೆಯ ಕೋಟೆಯಲ್ಲಿದ್ದ ಸೈನ್ಯ ಪ್ರತಿನಿತ್ಯ ಯುದ್ಧ ಮಾಡುತ್ತ ಮೊಗಲರ ಮೇಲೆ ದಾಳಿ ಮಾಡುತ್ತಿತ್ತು. ಆದಿಲಶಾಹನ ಕಡೆಯ ಅಮೀರ ಜನರಾದ ರಣದುಲ್ಲಾಖಾನ, ಪೇಶಜಂಗಖಾನ, ಫರಹಾದಖಾನ, ಅಂಕುಶಖಾನ ಮೊದಲಾದವರು ಕೋಟೆಯ ಉಸ್ತುವಾರಿಗೆ ಬಂದವರು, ದಿನರಾತ್ರಿಯೂ ಮೊಗಲರ ಸೈನ್ಯದ ಮೇಲೆ ಹಲ್ಲೆ ಮಾಡುತ್ತಿದ್ದರು. ೪ ತಿಂಗಳುಗಳವರೆಗೆ ಪರಸ್ಪರ ಯುದ್ಧ ನಡೆಯಿತು. ಭೂಮಿಯಲ್ಲಿ ಗುಹೆಯನ್ನು ನಿರ್ಮಿಸಿ ಅದರಲ್ಲಿ ಮದ್ದು ತುಂಬಿ ಹಾರಿಸಿದರೂ ಕೋಟೆ ಕಟ್ಟಡಗಳು ಬೀಳಲಿಲ್ಲ. ಸುರಂಗ ನಡೆಯುವುದಿಲ್ಲವೆಂದು ತಿಳಿದಾಗ ಮೊಹಬ್ಬತಖಾನನು ಇಷ್ಟು ದಿನ ಯುದ್ಧವಾದರೂ ಕೋಟೆ ಕೈವಶವಾಗದ್ದನ್ನು ಕಂಡು ಖಿನ್ನನಾದನು. ಬಾದಶಹನಿಂದ ತಿರುಗಿ ಬರಲು ಆಜ್ಞೆಯಾಗಿದೆಯೆಂದು ನಟನೆ ಮಾಡಿ ಯುದ್ಧವನ್ನು ನಿಲ್ಲಿಸಿ ಹಿಂತಿರುಗಿ ಬುರ್ಹಾನಪುರಕ್ಕೆ ಹೋದನು.[2]

### ೧೮. *ಖವಾಸಖಾನನು ಮುಸ್ತಫಾಖಾನನನ್ನು ಬೆಳಗಾವಿ ಕೋಟೆಯಲ್ಲಿ ಬಂಧಿಸಿದ್ದು ಮತ್ತು ಕೃತಘ್ನ ನಡತೆ ಸ್ವೀಕರಿಸಿದ್ದು :*

ಇದೇ ಕೆಲವು ದಿನಗಳಲ್ಲಿ ಖವಾಸಖಾನನು ಪ್ರಬಲನಾಗಿ 'ನನ್ನ ಮುಂದೆ ಯಾರೂ ಇಲ್ಲ' ಎಂದು ತಿಳಿಯಹತ್ತಿದನು. ಮುಸ್ತಫಾಖಾನನೊಂದಿಗೆ ವಿರಸವನ್ನು ಕಟ್ಟಿಕೊಂಡಿದ್ದನು. ಅದರಿಂದಾಗಿ ಅನೇಕ

2. See under 'March of Prince Shah Shuja against Parenda' in Julus 7th A.H. 1043 (1633 A.D. i.e. before June 1633) - Badshah Nama E.D. p. 43-44.

ಯುಕ್ತಿಗಳನ್ನು ಮಾಡಿ ನಾಟಕೀಯ ರೀತಿಯಲ್ಲಿ ಮುಸ್ತಫಾಖಾನನನ್ನು ಬಂಧಿಸಿ ಬೆಳಗಾವಿ ಕೋಟೆಯಲ್ಲಿಟ್ಟನು. ಕಾರ್ಯಭಾಗವು ಇಲ್ಲಿಯವರೆಗೂ ಬಂದು ಮುಟ್ಟಿತು. ಯಾಕೆಂದರೆ ಮುಸ್ತಫಾಖಾನನಂಥ ಶ್ರೇಷ್ಠ ವಜೀರರಿರಲಿಲ್ಲ. ಖವಾಸಖಾನನಿಗೆ ಬಹಳ ಸೊಕ್ಕು ಬಂದಿತ್ತು. ಆತ ಅಪ್ರಾಮಾಣಿಕನಾಗಿ ವರ್ತಿಸ ಹತ್ತಿದನು. ಈ ವಿಷಯವನ್ನು ಮೊದಲೇ ಮುಂದಿನ ಕುರಿತು ವಿಚಾರ ಮಾಡುತ್ತಿದ್ದ ಇಬ್ರಾಹಿಮ ಆದಿಲಶಾಹ ಬಾದಶಹನು ತನ್ನ ಅಂತ್ಯಕಾಲದಲ್ಲಿ ಸುಲ್ತಾನ ಮಹಮ್ಮದನನ್ನು ಸಿಂಹಾಸನದ ಮೇಲೆ ಕೂಡ್ರಿಸುವ ಪ್ರಕರಣದಲ್ಲಿ ಮುಸ್ತಫಾಖಾನನಿಗೆ ಹೇಳಿಯೂ ಇದ್ದನು. 'ಈ ದೌಲತಖಾನನು ಅಪ್ರಾಮಾಣಿಕನಾಗಿದ್ದಾನೆ ಈತ ನಿನ್ನೊಂದಿಗೆ ಪ್ರಾಮಾಣಿಕ ತನದಿಂದ ನಡೆಯಲಾರನು' ಎಂದು ಹೇಳಿದ್ದನು. ಆ ವಿಷಯ ಬಹಳ ವರುಷಗಳಾದ ಮೇಲೆ ನಿಜವಾಯಿತು. ಖವಾಸಖಾನನು ತನ್ನ ಮಜಬೂತಿಗಾಗಿ ದಿನದಿನವೂ ಪ್ರಯತ್ನಿಸ ಹತ್ತಿದನು. ದರಬಾರದಲ್ಲಿಯ ಅವಿಶ್ವಾಸೀ ಜನರನ್ನು ಸರಕಾರೀ ಚಾಕರಿಯಿಂದ ತೆಗೆದು ಹಾಕಿ, ತನ್ನ ವಿಶ್ವಾಸದ ಜನರನ್ನು ಅವರ ಸ್ಥಳದಲ್ಲಿ ನಿಯಮಿಸಿದನು. ಸುಲ್ತಾನ ಮಹಮ್ಮದ ಆದಿಲಶಾಹ ಬಾದಶಹನು ಮೊದಲಿನಿಂದಲೇ ಖವಾಸಖಾನನ ಅಮಾರ್ಗ ನಡತೆಯನ್ನು ಒಪ್ಪಿರಲಿಲ್ಲ. ಅದರಲ್ಲಿ ಈಗ ಮುಸ್ತಫಾಖಾನನ್ನು ಹಿಡಿದು ಬಂಧಿಸಿದ್ದರಿಂದ ಎಲ್ಲ ರೀತಿಯಿಂದಲೂ ಬೇಸರ ಪಟ್ಟನು. ಯಾರಿಗೂ ಗೊತ್ತಾಗದಂತೆ ಖವಾಸಖಾನನನ್ನು ಮುಗಿಸಿಬೇಕೆಂದು ರಣದುಲ್ಲಾಖಾನನೊಂದಿಗೆ ಯುಕ್ತಿ ಮಾಡಿದನು. ಬಹಳಷ್ಟು ಅಮೀರ ಜನರು ಮುರಾರಿಯ ದುರ್ನಡತೆಯಿಂದ ತೊಂದರೆಗೊಳಗಾಗಿ ಮನದಲ್ಲಿಯೇ ಕುದಿಯುತ್ತಿದ್ದರು. ಖವಾಸಖಾನನ ಕುರಿತೂ ಅದೇ ಭಾವನೆ ಇತ್ತು.

ಆದ್ದರಿಂದ ಎಲ್ಲರೂ ಕೂಡಿ ಒಮ್ಮತದಿಂದ ಖವಾಸಖಾನನೊಂದಿಗೆ ಪ್ರತಿಯಾಗಿ ನಡೆದುಕೊಳ್ಳಹತ್ತಿದರು. ಎಲ್ಲರೂ ಕೂಡಿ ಖವಾಸಖಾನನಿಗೆ ಪತ್ರ ಬರೆದು 'ಮುರಾರಿಯು ಬಹಳ ಬಡಬಡಿಸುತ್ತಿದ್ದಾನೆ. ಮುರಾರಿಯೊಂದಿಗೆ ಯಾರೂ ಸರಿ ಇಲ್ಲ. ಆದ್ದರಿಂದ ಆತನನ್ನು ಬಾದಶಾಹಿ ಕಾರಭಾರದಿಂದ ತೆಗೆದು ಹಾಕಿ ಕಾಶೀ ಕ್ಷೇತ್ರಕ್ಕೆ ಹೋಗಲು ನಿರೋಪ ಕೊಡಬೇಕು. ತಾವೇ ಎಲ್ಲ ಕೆಲಸಗಳನ್ನ ನೋಡಿಕೊಳ್ಳಬೇಕು. ಹೀಗೆ ಮಾಡಿದರೆ ಯಾರೂ ನಿಮ್ಮೊಂದಿಗೆ ಪ್ರತಿಯಾಗಿ ನಡೆದುಕೊಳ್ಳುವುದಿಲ್ಲ' ಎಂದು ಬರೆದರು. ಆಗ ಖವಾಸಖಾನನು ಆ ಅಮೀರ ಜನರಿಗೆ ಉತ್ತರ ಬರೆಯುತ್ತ 'ಇದೆಂಥ ಕಥೆ'? ಇಂದು ಮುರಾರಿಯನ್ನು ಒಪ್ಪುವುದಿಲ್ಲ ಎನ್ನುತ್ತೀರಿ. ನಾಳೆ ನನ್ನನ್ನೂ ಒಪ್ಪುವುದಿಲ್ಲ ಎನ್ನುತ್ತೀರಿ' ಎಂದು ಬರೆದು ಕಳಿಸಿದನು. ಅನಂತರ ಖವಾಸಖಾನನು ವಿಚಾರಿಸಿ ತನ್ನ ಕೆಲಸದ ಬಗ್ಗೆ ವಿಚಾರಿಸಲು ಶೇಖ ಮೊಹಿದ್ದೀನ ಕಾರಭಾರಿಯನ್ನು ಶಾಹಜಹಾನ ಬಾದಶಹನ ಕಡೆಗೆ ಕಳಿಸಿದನು. 'ಇಲ್ಲಿಯ ಅಮೀರ ಜನರು ನಾನಾ ತರದ ಸಂಕಟಗಳನ್ನು ಎಬ್ಬಿಸಿ ನಿಲ್ಲಿಸುತ್ತಿದ್ದಾರೆ. ಒಳಸಂಚುಗಳನ್ನೂ ಮಾಡುತ್ತಿದ್ದಾರೆ. ಆದ್ದರಿಂದ ತಮ್ಮ ಬಾದಶಾಹೀ ಸೈನ್ಯವನ್ನು ಅತಿ ಶೀಘ್ರದಲ್ಲಿ ನನ್ನ ಸಹಾಯಕ್ಕೆ ಕಳಿಸಿದರೆ ಒಳಸಂಚು ಮಾಡುವ ಜನರನ್ನು ಶಿಕ್ಷಿಸಿ ವಿಜಾಪುರವನ್ನು ತಮ್ಮ ವಶಕ್ಕೆ ಕೊಡುವೆ' ಎಂದು ಶಾಹಜಹಾನ ಬಾದಶಹನಿಗೆ ಬರೆದು ಕಳಿಸಿದನು. ಇದರಿಂದಾಗಿ ಎಲ್ಲ ಕಾರಭಾರಿಗಳು ಸರದಾರರು ಖವಾಸಖಾನನೊಂದಿಗೆ ಮತ್ತಷ್ಟು ತಿರುಗಿ ಬಿದ್ದರು. ಅಲೀ ಫರಹಾದಖಾನ, ಖೈರತಖಾನ, ಅಲೀ ಖುದಾವಂತಖಾನ, ಮಹಮ್ಮದ ಯಾಕುತಖಾನ, ರಘುಪಂಡಿತ, ಯಾಕುತಖಾನೀ, ಖೇಲೋಜೀ ಭೋಸಲೆ ಮತ್ತು ಸರ್ಜೇರಾವ ಘಾಟಗೆ ಮೊದಲಾದವರು ಸರಹದ್ದಿನಲ್ಲಿದ್ದ ಸರದಾರರೆಲ್ಲರೂ ಒಂದೆಡೆ ಸೇರಿ, ರಣದುಲ್ಲಾಖಾನನನ್ನು ಭೆಟ್ಟಿಯಾದರು. ಕಲಬುರ್ಗಿಯಲ್ಲಿ ಎಲ್ಲರೂ ಸೇರಿದರು. ಈ ಸಮಯದಲ್ಲಿ

ಇಮಾಮುಖಾನ ಹವಾಲದಾರ ಯೇತಗಿರಿಕರನು ಖವಾಸಖಾನನ ಚಾಕರಿಯನ್ನು ಬಿಟ್ಟು ಆತನ ಆಜ್ಞೆಗಳನ್ನು ಮುರಿಯ ಹತ್ತಿದನು. ಖವಾಸಖಾನನು ಇಮಾಮಖಾನನ ಶಿಕ್ಷಿಸುವ ನಟನೆಯಿಂದ ಮುರಾರಿಯನ್ನು ತನ್ನ ಹಾಗೂ ಮುರಾರಿಯ ಖಾಸಾ ಸೈನ್ಯದೊಂದಿಗೆ, ಅಂಕುಶಖಾನ, ಚಾಂದಖಾನ ನಿಜಾಮಶಾಹಿ ಮತ್ತು ದರವೇಶ ಮಹಮ್ಮದ ಮತ್ತು ಮುಸ್ತಫಾಖಾನ ನಿಜಾಮಶಾಹಿ ಅಲ್ಲದೆ ಇನ್ನು ಅನೇಕ ಅಮೀರನನ್ನು ಸುಮಾರು ೧೦ ಸಾವಿರ ಸೈನ್ಯದೊಂದಿಗೆ ಯಾದಗಿರಿಯ ಕಡೆಗೆ ಸದರೀ ಹವಾಲ್ದಾರವನ್ನು ಶಿಕ್ಷಿಸಲು ಕಳಿಸಿದನು.

### ೧೯. *ಅಮೀರ ಜನರು ಖವಾಸಖಾನನನ್ನು ಕಾರಭಾರದಿಂದ ತೆಗೆದು ಹಾಕಲು ಎಲ್ಲರೂ ಒಮ್ಮತವಾದದ್ದು :*

ಅಮೀರ ಜನರನ್ನು ಹಾಗೂ ಸೈನ್ಯವನ್ನು ಸಂಗ್ರಹಿಸುವ ಕಾರ್ಯದಿಂದ ಮುಕ್ತನಾದ ಮೇಲೆ ರಣದುಲ್ಲಾಖಾನನು, ಖವಾಸಖಾನನ ಪಾರುಪತ್ಯಕ್ಕಾಗಿ ಅವರೊಂದಿಗೆ ಕಲಬುರ್ಗಿಯಿಂದ ಹೊರಟು ವಿಜಾಪುರಕ್ಕೆ ಬಂದನು. ಮಲಿಕ ರೇಹಾನನು ಸೋಲಾಪುರದಿಂದ ಭಾರೀ ಸೈನ್ಯವನ್ನು ತೆಗೆದುಕೊಂಡು ಹೊರಟು 'ಕಮಪುರ'ದ ಹತ್ತಿರ ಸದರೀ ರಣುದುಲ್ಲಾಖಾನನ ದಂಡನ್ನು ಸೇರಿಕೊಂಡನು. ಆಗ ರಣದುಲ್ಲಾಖಾನನು ಆತನಿಗೆ ರಾಘುಪಂಡಿತನೊಂದಿಗೆ ತನ್ನ ಸೈನ್ಯದ ಕುರಿತೂ ವಿಚಾರ ಮಾಡಿ ಹೀಗೆ ನಿರ್ಧರಿಸಿ ಆಜ್ಞೆ ಮಾಡಿದನು. "ಭೀಮಾನದಿ ತುಂಬಿ ಹರಿಯುತ್ತಿದೆ. ಆದ್ದರಿಂದ ನೀನು ಮುಂದೆ ಹೋಗಿ ನದಿಯ ಆ ಬದಿಗೆ ಇಳಿಯಬೇಕು. ನಾವು ನಿಮ್ಮ ಹಿಂದೆ-ಹಿಂದೆಯೆ ಬಂದು ಮುಟ್ಟುತ್ತೇವೆ." ರಾಘುಪಂಡಿತನು ಭಾದಲವಾಡಿಯಲ್ಲಿ ಮತ್ತು ಮಲಿಕ ರೇಹಾನನು ಟಾಕಳಿ ಹತ್ತಿರ ಬಂದು ನದಿಯಲ್ಲಿ ಇಳಿದರು. ಖವಾಸಖಾನನು ರಹಸ್ಯವಾಗಿ ಮಲಿಕ ರೇಹಾನನಿಗೆ ನಿರೋಪ ಕಳಿಸುತ್ತ, "ರಣದುಲ್ಲಾಖಾನನು ಮುರಾರಿಯ ಹಗೆತನದಿಂದಾಗಿ ಸಂಕಟವನ್ನು ತಂದು ಬಾದಶಾಹಿ ಕೆಲಸದಲ್ಲಿ ಅಡಚಣೆ ಮಾಡಿದ್ದಾನೆ. ಆತ ತನ್ನ ಕರ್ಮದ ಫಲವನ್ನು ಉಣ್ಣುತ್ತಾನೆ. ನೀವು ಬಾದಶಹನ ಕಲ್ಯಾಣದ ಇಚ್ಛುಕರಾಗಿದ್ದೀರಿ. ನನ್ನ ಪರಮ ಮಿತ್ರರಾಗಿದ್ದೀರಿ. ಆದ್ದರಿಂದ ರಣದುಲ್ಲಾಖಾನನು ಹೇಳಿದಂತೆ ಮಾಡಬಾರದು" ಎಂದು ಹೇಳಿ ಕಳಿಸಿದನು. ಅದರಿಂದಾಗಿ ಮಲಿಕ ರೇಹಾನನು ಟಾಕಳಿಯಿಂದ ಮಂದ್ರೂಪದ ದಾರಿ ಹಿಡಿದು ನದೀ ದಡದ ಸೋಲಾಪುರದ ಸರಹದ್ದಿನಲ್ಲಿ ಬಂದು ಇರಹತ್ತಿದನು. ರಾಘುಪಂಡಿತನು ದೇವಗಾಂವದ ಪಾಟೀಲನನ್ನು ತನ್ನೊಂದಿಗೆ ಸೇರಿಸಿ ಕರೆದುಕೊಂಡು ಭೀಮಾ ನದಿಯಲ್ಲಿ ಇಳಿದು, ೫ ಸಾವಿರ ಸವಾರರೊಂದಿಗೆ ದೇವಗಾಂವದಿಂದ ಒಂದು ಕೋಸು ಅಂತರದಲ್ಲಿ ಹೋಗಿ ಇಳಿದನು. ಮುರಾರಿಯು ಖವಾಸಖಾನನ ಆಜ್ಞೆಯ ಮೇರೆಗೆ ಅಮೀರ ಜನರ ಸಹಿತವಾಗಿ ಟೆಲಕೀರ (ಟಿಕಾರಿ ಅಥವಾ ಹುಕ್ಕೇರಿ) ಎಂಬಲ್ಲಿ ಹೋಗಿ, ಒಂದು ತಿಂಗಳವರೆಗೆ ವ್ಯರ್ಥವಾಗಿ ಕೋಟೆಯಲ್ಲಿ ಇದ್ದುಬಿಟ್ಟನು.

ರಾಘು ಪಂಡಿತನು ದೇವಗಾಂವಕ್ಕೆ ಬಂದು ಮುಟ್ಟಿದ ವರ್ತಮಾನವು ತಿಳಿಯುತ್ತಿದ್ದಂತೆ. ಮುರಾರಿಯು 'ರಾಘೋ ಪಂಡಿತನು ಒಬ್ಬನೇ ಇದ್ದಾನೆ ಆತನೊಂದಿಗೆ ರಣದುಲ್ಲಾಖಾನನ ಸೈನ್ಯ ಇನ್ನೂ ಮುಟ್ಟಿಲ್ಲ. ಆತನನ್ನು ಹಿಡಿದು ಕೆಲಸದಿಂದ ತೆಗೆದು ಹಾಕಿ ಬಿಡಬೇಕು' ಎಂದು ಟೇಲಕೀರದಿಂದ ಎಲ್ಲ ಸೈನ್ಯವನ್ನು ತೆಗೆದುಕೊಂಡು ಹೊರಟು ಬಿಟ್ಟನು. ರಾತೋರಾತ್ರಿಯಲ್ಲಿ ನಡೆಯುತ್ತ ಒಂದೇ ರಾತ್ರಿಯಲ್ಲಿ ೩೨ ಕೋಸುಗಳಷ್ಟು ದಾರಿಯನ್ನು ೫-೬ ಬಹಳ ವೇಗದಿಂದ ಸಾಗಿ, ಸಾವಿರ ಸೈನ್ಯದೊಂದಿಗೆ ದೇವಗಾಂವಕ್ಕೆ ಬಂದು ಮುಟ್ಟಿದನು. ಹಿಂದೆ ಬರುತ್ತಿದ್ದ ಒಟ್ಟು ಸೈನ್ಯವನ್ನು ಸೇರಿಸಿ ಯುದ್ಧ ರಚನೆಯನ್ನು ಮಾಡಿ ಅನಂತರ

ಯುದ್ಧ ಮಾಡಬೇಕೆಂಬ ಮಾರ್ಗಪ್ರತೀಕ್ಷೆಯನ್ನು ಮಾಡದೆ, ಒಮ್ಮೆಲೆ ಯುದ್ಧಕ್ಕೆ ಪ್ರಾರಂಭಿಸಿದನು. ಮೊದಲನೆಯ ಹಲ್ಲೆಯಲ್ಲಿಯೆ ಮುರಾರಿಯ ಪೂರ್ಣ ಭರವಸೆಯ ಉಸಮಾನ ಶಕರಕೋಟಿ ಎಂಬವನು ಸತ್ತನು. ಮುರಾರಿಯ ಸೈನ್ಯಕ್ಕೆ ದೊಡ್ಡ ಹಿನ್ನಡೆಯಾಯಿತು. ಆ ಯುದ್ಧದಲ್ಲಿ ಬಹಳ ಜನರು ಸತ್ತರು. ರಾಘೋ ಪಂಡಿತನಿಗೆ ದೊಡ್ಡ ವಿಜಯವಾಯಿತು. ಮುರಾರಿಯು ಯುದ್ಧದಿಂದ ಓಡಿ ಹೋಗಿ ೧೫ ಸೈನಿಕರೊಂದಿಗೆ ಸಾತಾರೆಗೆ ಬಂದು ಮುಟ್ಟಿದನು. ಅಲ್ಲಿ ಮುಸ್ತಫಾಖಾನ ನಿಜಾಮಶಾಹಿಯು ಹೋಗಿ ಮುರಾರಿಯನ್ನು ಕೂಡಿಕೊಂಡನು. ಅವನನ್ನು ಕರೆದುಕೊಂಡು 'ಆರಕುಂಡಗಿ' ಗೆ ಹೋದನು. ಅಂಕುಶರಾವನು ಅಲ್ಲಿಯ ಪಾಟೀಲನ ತಲೆಯನ್ನು ಹಾರಿಸಿ ದೂದವಾಡಿಗೆ ಹೊರಟು ಹೋದನು. ಅಲ್ಲಿಂದ ಮೌಜೆ ಮುದಕಿಯಲ್ಲಿ. (ಮುದಕಿ ಗ್ರಾಮವು ರಣದುಲ್ಲಾಖಾನನ ಜಹಗೀರುಗಳಲ್ಲೊಂದಾಗಿತ್ತು) ಅಲ್ಲಿಗೆ ಹೋಗಿ ಮುಟ್ಟಿ ಆ ಗ್ರಾಮವನ್ನು ಲೂಟಿ ಮಾಡಿದನು. ಅಲ್ಲಿಂದ 'ಮಲಕಿ'ಗೆ ಬಂದನು. ೬ ದಿನ ಅಲ್ಲಿ ಕೃಷ್ಣಾತೀರದಲ್ಲಿ ಇದ್ದನು. ಕಾರಭಾರಿ ಮಂಡಳಿ ಹಾಗೂ ಆತನ ಕಲ್ಯಾಣವನ್ನು ಬಯಸುವ ಜನರು ಆತನಿಗೆ ತಿಳಿ ಹೇಳಿ, 'ಖವಾಸಖಾನನು ಜೀವಂತವಾಗಿ ನಗರದಲ್ಲಿದ್ದಾನೆ. ಆತನ ಕಡೆಗೆ ಹೋಗು ಎಲ್ಲ ರೀತಿಯಿಂದಲೂ ಅಭಯ ದೊರೆಯುತ್ತದೆ' ಎಂದು ಹೇಳಿದರು. ಆದರೆ, ಆತನ ಮೃತ್ಯು ಸಮೀಪ ಬಂದು ಮುಟ್ಟಿತ್ತು. ಮೃತ್ಯುಗ್ರಸ್ತನಾದ ಮುರಾರಿಯು ಅದಕ್ಕೆ ಒಪ್ಪಲಿಲ್ಲ. ನಾಯಕವಾಡಿ ಜನರ ಸ್ನೇಹದ ಭರವಸೆಯ ಮೇಲೆ ಧಾರವಾಡ ಬಾಗಿಲಿನಿಂದ ಹೊರಟು ಕೃಷ್ಣಾ ನದಿಯನ್ನು ಇಳಿದು ಧಾರವಾಡ ರಸ್ತೆಯನ್ನು ಹಿಡಿದನು.

ರಣದುಲ್ಲಾಖಾನನು ಮುರಾರಿಯ ಸೋಲಾದ ನಂತರ, ಎಲ್ಲ ಅಮೀರ ಜನರ ಸಹಿತವಾಗಿ ಭೀಮಾ ನದಿಯನ್ನು ಇಳಿದು ಕಮಲಾಪುರಕ್ಕೆ ಬಂದು ಮುಟ್ಟಿದನು. ಖವಾಸಖಾನನು, ಎಲ್ಲ ಅಮೀರ ಜನರು ಕೂಡಿಕೊಂಡು ಬರುತ್ತಿದ್ದಾರೆ ಮತ್ತು ಮುರಾರಿಯು ಓಡಿ ಹೋಗಿದ್ದಾನೆಂಬ ವರ್ತಮಾನವನ್ನು ಕೇಳಿ ಕೋಟೆಯ ಬಾಗಿಲನ್ನು ಮುಚ್ಚಿ, ಶತ್ರುತ್ವದ ಅಗ್ನಿಯನ್ನು ಉರಿಸಲಾರಂಭಿಸಿದನು. ರಣದುಲ್ಲಾಖಾನನು ಆ ಅಗ್ನಿಯನ್ನು ಶಾಂತ ಮಾಡಲು ಬಹಳ ಪ್ರಯತ್ನ ಪಟ್ಟನು. 'ಇಷ್ಟೊಂದು ಗರ್ವದಿಂದ ಮತ್ತು ಅವಿಚಾರದಿಂದ ವರ್ತಿಸುವುದು ಯೋಗ್ಯವಲ್ಲ. ಇದರಿಂದ ನಿನಗೆ ಉತ್ತಮ ಫಲ ದೊರೆಯಲಾರದು. ರಾಜ್ಯದ ಉಳಿದ ಕಾರಭಾರಿಗಳಂತೆ. ಕೋಟೆಯ ಹೊರಗೆ ಮನೆಕಟ್ಟಿಕೊಂಡು ಇರುವುದು ಮತ್ತು ಕಾರಭಾರ ಮಾಡುತ್ತ ಹೋಗುವುದು ನಿನಗೆ ಸರಿ ಎನಿಸುತ್ತದೆ. ಇನ್ನೊಬ್ಬರಿಗೆ ತೊಂದರೆ ಕೊಡಬೇಡ ಭಯಭೀತರನ್ನಾಗಿ ಮಾಡಬೇಡ ಅದರಿಂದ ಎಲ್ಲರಿಗೂ ಒಳ್ಳೆಯದಾಗುತ್ತದೆ' ಎಂದು ಬೋಧೆ ಮಾಡಿದನು. ಆದರೆ ಖವಾಸಖಾನನು ಈ ಮಾತುಗಳನ್ನು ಕೇಳಲಿಲ್ಲ. ಆ ಮಾತುಗಳಿಂದ ಇನ್ನಷ್ಟು ಹರಾಮಖೋರನಾಗಿ ರಾಜ್ಯದ ಕೇಡನ್ನು ಇಚ್ಛಿಸುವ ವಿಷಯದಲ್ಲಿ ಬಹಳ ಪ್ರಯತ್ನ ಮಾಡಹತ್ತಿದನು. ದಿನದಿನವೂ ಹೊಸ-ಹೊಸ ವಿಘ್ನಗಳನ್ನು ಸೃಷ್ಟಿಸಿ ಸಂಕಟಗಳನ್ನು ಎಬ್ಬಿಸಿ ನಿಲ್ಲಿಸುವುದರಲ್ಲಿ ನಿರತನಾದನು.

### *೨೦. ಬಾದಶಹನು ಸಿದ್ದೀ ರೇಹಾನ ರುಕೇಸಾನನಿಗೆ ಖವಾಸಖಾನನ ನಿರ್ಮೂಲ ಮಾಡಲು ಸೂಚನೆ :*

ಈ ಸಮಯದಲ್ಲಿ ಬಾದಶಾಹ ಗಾಜಿಯು ಅವಕಾಶ ಮಾಡಿಕೊಂಡು ತನ್ನ ಪೂರ್ಣವಿಶ್ವಾಸದ ಮತ್ತು ಏಕಾಂತ ಭರವಸೆಯ ಸಿದ್ದೀ ರೇಹಾನ ರುಕೇಸಾನನನ್ನು ಏಕಾಂತದಲ್ಲಿ ಕರೆದನು. ಅವನೊಂದಿಗೆ ಮಾತಿನಲ್ಲಿಯೆ ಸೂಚನೆ ಕೊಟ್ಟು, 'ಸಂಧಿ ಸಿಗುತ್ತಿದ್ದಂತೆಯೇ ಅದೊಂದು ಅಲಭ್ಯ ಲಾಭವೆಂದು ತಿಳಿದು

ಕೆಲಸ ಮಾಡಬೇಕು' ಎಂದು ಆಜ್ಞೆ ಮಾಡಿದನು. ಆಗ ಆ ಆಜ್ಞೆಯ ಮೇಲಿಂದಲೇ ಸಿದ್ದಿ ರೇಹಾನನು ಬಾದಶಹನ ಮನದಲ್ಲಿಯ ಭಾವವನ್ನು ತಿಳಿದುಕೊಂಡು ಬಹಳ ಸಂತೋಷ ಪಟ್ಟನು. ರಾಜ್ಯದ ಕೇಡುಬಯಸುವ ಖವಾಸಖಾನನನ್ನು ಮುಗಿಸಲು ಶಪಥ ಮಾಡಿದನು. ಇದಕ್ಕಾಗಿ ಮೊದಲು ಕರೀಮ ಶರ್ಜ್ಯಾ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದ ಮಹಾಲದಾರ ಮತ್ತು ಸರಸೀತ ವಕೀಲನ ಮಗ ಹುಸೇನಖಾನ ಇಬ್ಬರನ್ನೂ ಈ ಕೆಲಸದಲ್ಲಿ ತೊಡಗಿಸಿದನು. ಖವಾಸಖಾನನನ್ನು ಕೊಲ್ಲಲು ಅವರಿಬ್ಬರೂ ಸಂಧಿ ಸಾಧಿಸುವ ಮಾರ್ಗ ಪ್ರತೀಕ್ಷೆಯಲ್ಲಿದ್ದರು. ಅದು ಬುಧವಾರ, ಹಿಜರಿ ಸನ್ ಒಂದು ಸಾವಿರ ನಾಲ್ವತ್ತೈದು ಆಗಿತ್ತು. (ಕ್ರಿ.ಶ. ೧೬೩೫-೩೬ ದಿನ ಹಾಗೂ ತಿಂಗಳುಗಳನ್ನು ಕೊಟ್ಟಿಲ್ಲ.)

ಆ ದಿನ ಖವಾಸಖಾನನನ್ನು ಕೊಲ್ಲಲು ಸಿದ್ಧರಾಗಿ ದರಬಾರದಲ್ಲಿ ಬಂದು ಜಪ್ಪಿಸಿ ಕುಳಿತರು. ಖವಾಸಖಾನನು ಬಾದಶಹನನನ್ನು ಕಂಡು ಹೊರಗೆ ಬಂದು ತನ್ನ ಮನೆಗೆ ಹೋಗಬೇಕೆಂದುಕೊಂಡಿದ್ದನು. ಅಷ್ಟರಲ್ಲಿ ಕರೀಮ ಶರ್ಜಾನು ಸ್ವತಃ ಎದ್ದು ಬಂದು ಖವಾಸಖಾನನ ಮೈಮೇಲೆ ಬಿದ್ದನು. ತನ್ನ ಕೈಯಲ್ಲಿದ್ದ ಕಠಾರಿಯಿಂದ ಖವಾಸಖಾನನ ಕಪಟ ತುಂಬಿದ ಹೃದಯದ ಮೇಲೆ ಹೊಡೆದನು. ಇಂಥವನೊಬ್ಬ ಕಠಾರಿಯಿಂದ ತನ್ನನ್ನು ಹೊಡೆದನು ಎಂದು ಖವಾಸಖಾನನು ಗುರುತಿಸುವಷ್ಟರಲ್ಲಿ ಕರೀಮ ಶರ್ಜಾನು ಒಂದು ಕಡೆಗೆ ಓಡಿ ಹೋಗಿ ಬಿಟ್ಟನು. ಅದರಿಂದಾಗಿ ಖವಾಸಖಾನನಿಗೆ ಗುರುತಾಗಲಿಲ್ಲ. ಗಾಯದಿಂದ ನರಳುತ್ತ ಖವಾಸಖಾನನು ಹೊರಟದ್ದನ್ನು ಕಂಡು ಹುಸೇನ ಖಾನನು ಅಷ್ಟೇ ತೀವ್ರವಾಗಿ ಬಂದು ಖವಾಸಖಾನನ ಮೇಲೆ ಇನ್ನೊಂದು ಹೊಡೆತ ಕೊಟ್ಟನು. ಆದರೂ ಖವಾಸಖಾನನು ಎರಡು ಗಾಯಗಳಾಗಿದ್ದರೂ ಧೈರ್ಯದಿಂದ ಅತಿ ವೇಗದಿಂದ ಓಡಿ ಹೊರಗೆ ಹೋದನು. ಈ ಪರಿಸ್ಥಿತಿಯನ್ನು ಕಂಡ ಸಿದ್ದಿ ರೇಹಾನನು, ಇನ್ನೊಂದು ಗಳಿಗೆ ಖವಾಸಖಾನನು ಉಳಿದರೆ ಸಾವಿರ ಸಂಕಟಗಳು ಎದ್ದು ನಿಲ್ಲುತ್ತವೆ ಎಂದು ತಿಳಿದನು. ಹಾಗೆ ತಿಳಿದು ಧೈರ್ಯದಿಂದ ಪುರಕೋಟೆಯ ಮಾರ್ಗದಿಂದ ಹೊರಗೆ ಓಡಿದನು. ಹೊರಗೆ ಹೋಗಿ ಖಾಸಾ ಪಾಗೆಯ ಜನರನ್ನು (ಖಾಸಖೇಲ) ಜೊತೆಮಾಡಿಕೊಂಡು ಖವಾಸಖಾನನ ಬೆನ್ನು ಹತ್ತಿದನು. ಆತನ ಹತ್ತಿರ ಬರುವಷ್ಟರಲ್ಲಿ ಖವಾಸಖಾನನು ತನ್ನ ವಾಡೆಯಲ್ಲಿ ಹೋಗಿ ಬಾಗಿಲನ್ನು ಮುಚ್ಚಿ ಬಿಟ್ಟಿದ್ದನು. ಅಂಥ ಸಮಯದಲ್ಲಿ ಬಾದಶಾಹ ಗಾಜಿಯ ಕಡೆಯಿಂದ ಮತ್ತೆ ಆಜ್ಞೆ ಬಂದಿತು. ಆಗ ಸಿದ್ದಿ ರೇಹಾನನು ಬಾದಶಹನ ಆಜ್ಞೆಯಂತೆ, ಖವಾಸಖಾನನ ಬಾಗಿಲನ್ನು ಮುರಿದು ಆತನ ವಾಡೆಯನ್ನು ಹೊಕ್ಕನು. ಖವಾಸಖಾನನ ಶಿರವನ್ನು ಕಡಿದನು. ಖವಾಸಖಾನನ ಪರಮ ಮಿತ್ರ ಹುಸೇನಖಾನನು ಅಷ್ಟರಲ್ಲಿ ಆನೆಯ ಮೇಲೆ ಕುಳಿತು ತನ್ನ ಸೈನ್ಯದೊಂದಿಗೆ ಖಂದಕದವರೆಗೆ ಬಂದು ಮುಟ್ಟಿದ್ದನು. ಆತನನ್ನು ಧೂಳಿಪಟಮಾಡಿ ಕೊಲೆ ಮಾಡಿದರು. ಖವಾಸಖಾನನ ನಿರಂತರ ಸ್ನೇಹದಲ್ಲಿದ್ದ ಹುಸೇನಖಾನನ ತಮ್ಮ ದಾವೂದಖಾನನೆಂಬವನು ಮಾತ್ರ ಈ ಗದ್ದಲದಲ್ಲಿ ಸುರಕ್ಷಿತವಾಗಿ ಉಳಿದನು. ಬಾದಶಹನ ಆಜ್ಞೆಯಂತೆ ರಣದುಲ್ಲಾಖಾನನು ಎಲ್ಲ ಅಮೀರ ಜನರೊಂದಿಗೆ ಮಧ್ಯರಾತ್ರಿಯಲ್ಲಿ ಬಂದು, ಶಹಾಪುರದ ಹೌದಿನ ಮೇಲೆ ಇಳಿದರು. ಆಗ ಖವಾಸಖಾನನ ಹಾಗೂ ಮುಬಾರಕಖಾನನ ತಲೆಗಳನ್ನು ಕತ್ತರಿಸಿ ರಣದುಲ್ಲಾಖಾನನ ಹತ್ತಿರ ಕಳಿಸಿದರು. ಯಾಕೆಂದರೆ ಆ ದಿನಗಳಲ್ಲಿ ಮಳೆ ಬೀಳದೆ ಜನರು ಕಂಗಾಲಾಗಿದ್ದರು. ಮನುಷ್ಯರು ಮತ್ತು ದನಗಳು ಆಕಾಶದ ಕಡೆಗೆ ಮುಖಮಾಡಿ ಮಳೆಯ ಮಾರ್ಗಪ್ರತೀಕ್ಷೆ ಮಾಡುತ್ತಿದ್ದರು. ಆ ರಾತ್ರಿ ಖವಾಸಖಾನನ ಕೊಲೆಯಾಗುತ್ತಿದ್ದಂತೆ ಧಾರಾಕಾರವಾಗಿ ಮಳೆ ಸುರಿಯಿತು. ಜನರು ಒಂದೇ ದಿನ ಎರಡು ಸಂಕಟಗಳಿಂದ ಮುಕ್ತರಾದರು.

ಮಳೆಯಾದ್ದರಿಂದ ಬರದಿಂದ ಮತ್ತು ಖವಾಸಖಾನನ ಕೊಲೆಯಾದ್ದರಿಂದ ಆತನ ಪೀಡೆಯಿಂದ ಜನ ಮುಕ್ತರಾದರು. ಮರುದಿನ ಬಾದಶಹ ಗಾಜಿಯು ಪೂರ್ಣ ಮನೋರಥನಾಗಿ ಸಿಂಹಾಸನದ ಮೇಲೆ ಕುಳಿತನು. ಎಲ್ಲ ಅಮೀರರು, ವಜೀರರು ಬಂದು ಬಾದಶಹನಿಗೆ ಮುಜುರೆ ಸಲ್ಲಿಸಿದರು. ಪ್ರತಿಯೊಬ್ಬರಿಗೂ ಅವರವರ ಯೋಗ್ಯತಾನುಸಾರ ಬಾದಶಹನು ವಸ್ತ್ರಗಳನ್ನು ಕೊಟ್ಟನು. ಮಲಿಕ ರೇಹಾನನಿಗೆ ವಸ್ತ್ರದೊಂದಿಗೆ ಬಕ್ಷೀಸನ್ನೂ ಕಳಿಸಿದನು. ಮದರುಬಾ ಎಂಬ ಗ್ರಾಮವನ್ನು ಉಂಬಳಿಯಾಗಿ ಹಾಕಿ ಕೊಟ್ಟನು. ಆ ದಿನ ಸಿದ್ದಿ ರೇಹಾನ ರುಕೇಸಾನನಿಗೆ ಯಖಲಾಸಖಾನ ಎಂಬ ಬಿರುದನ್ನು ಕೊಟ್ಟು 'ವಜೀರ' ಕೆಲಸವನ್ನು ಕೊಟ್ಟನು. ಆ ಹೆಸರಿನಿಂದಲೇ ಸಿದ್ದಿ ರೇಹಾನನು ಸರ್ವರಲ್ಲೂ ಪ್ರಸಿದ್ಧನಾಗಿದ್ದಾನೆ. ಮುಲಕಿ ಕೆಲಸದ ಪದಾಧಿಕಾರವನ್ನು ನವಾಬ ಖಾನಬಾಬಾ ಎಂಬವನಿಗೆ ಕೊಡಲಾಯಿತು. ಈ ರೀತಿಯಾಗಿ ರಾಜ್ಯದ ಎಲ್ಲ ಕೆಲಸಗಳೂ ಉತ್ತಮ ರೀತಿಯಾಗಿ ನಡೆಯುವ ವ್ಯವಸ್ಥೆಯಾಯಿತು. ಖವಾಸಖಾನನು ೮ ವರುಷ ಪ್ರಧಾನ ಮಂತ್ರಿಯ (ಪೇಶವಾಯೀ) ಕೆಲಸವನ್ನು ಮಾಡಿದನು. ಆತ ಹಿಜರಿ ಸನ್ ೧೦೪೫ರಲ್ಲಿ (ಕ್ರಿ.ಶ ೧೬೩೫-೩೬) ಸತ್ತನು.

### ೨೧. ಸಿದ್ದಿ ರೇಹಾನನ ಕಾರ್ಯಾರಂಭದ ವರ್ಣನೆ :

ಸಿದ್ದಿ ರೇಹಾನನು ಹಬಶೀ ಮೂಲದವನು. ಒಬ್ಬ ವ್ಯಾಪಾರಸ್ಥನು ೭ ವರುಷದ ಈ ಹುಡುಗನನ್ನು ಹಾಗೂ ಆತನ ತಾಯಿಯನ್ನು ಮಾರಲು ನವರಸಪುರ ನಗರಕ್ಕೆ ತಂದಿದ್ದನು. ಇಬ್ರಾಹಿಮ ಆದಿಲಶಹನು ಸಣ್ಣ ವಯದ ಈ ಮಗುವನ್ನು ಬಹಳ ಪ್ರೀತಿಯಿಂದ ಖರೀದಿ ಮಾಡಿ, ಸುಲ್ತಾನ ಮಹಮ್ಮದ ರಾಜಕುಮಾರನ ಚಾಕರಿಯಲ್ಲಿ ಇಟ್ಟಿದ್ದನು. ಆತನ ತಾಯಿಯನ್ನು ಅಲೀಖಾನ ಆಸಾರೀ ಎಂಬವನು ಖರೀದಿಸಿದ್ದನು. ರಾಜಕುಮಾರ ಸುಲ್ತಾನ ಮಹಮ್ಮದ ಹಾಗೂ ಸಿದ್ದರೇಹಾನರು ಒಂದೇ ವಯದವರಾಗಿದ್ದರು. ಸಮ ವಯಸ್ಕರಾದ್ದರಿಂದ ಇಬ್ಬರಲ್ಲೂ ಸ್ನೇಹ ಬೆಳೆದಿತ್ತು. ಸಿದ್ದೀ ರೇಹಾನನು ರಾಜಕುಮಾರನೊಂದಿಗೆ ಪ್ರತಿಯೊಂದು ಆಟದಲ್ಲೂ ಜೊತೆಗಿರುತ್ತಿದ್ದನು. ಅನಂತರ ಪ್ರತಿಯೊಂದು ಕೆಲಸದಲ್ಲಿ, ಏಕಾಂತದಲ್ಲಿ, ಕಚೇರಿಯಲ್ಲಿ ಮನುಷ್ಯನ ಜೊತೆಗಿರುವ ನೆರಳಿನಂತೆ ಸುಲ್ತಾನ ಮಹಮ್ಮದನ ಜೊತೆಗೆ ಇರುತ್ತಿದ್ದನು. ರಾಜಕುಮಾರನೂ ಆತನ ಕುರಿತಾಗಿ ಬಹಳ ಮೆಹರಬಾನಗಿಯಿಂದ ಪಾಲನೆ ಮಾಡುತ್ತಿದ್ದನು. ಅದರಿಂದಾಗಿ ಸಿದ್ದಿ ರೇಹಾನನು ರಾಜಕುಮಾರನ ಪೂರ್ಣಕೃಪೆಯಿಂದ ಆತನ ಭರವಸೆಯ ವಿಶ್ವಾಸಿಕ ಮನುಷ್ಯನಾಗಿದ್ದನು. ಒಂದು ದಿನ ರಾಜಕುಮಾರನು ಸಿದ್ದಿ ರೇಹಾನನೊಂದಿಗೆ ಆಡುತ್ತಿದ್ದನಂತೆ, ಅದನ್ನು ಇಬ್ರಾಹಿಮ ಆದಿಲಶಹನು ದೂರದಿಂದ ನೋಡುತ್ತಿದ್ದ. ಆಗ ರಾಜಕುಮಾರನು ಸಿದ್ದಿ ರೇಹಾನನ ತಲೆಯ ಮೇಲಿನ ಟೊಪ್ಪಿಗೆಯನ್ನು ಕಸಿದುಕೊಂಡು ಹೌದಿನಲ್ಲಿ ಹಾಕಿಬಿಟ್ಟನು. ಆಗ ಸಿದ್ದಿ ರೇಹಾನನು 'ನನ್ನ ಟೊಪ್ಪಿಗೆಯನ್ನು ತೆಗೆದುಕೊಡು' ಎಂದು ತಗಾದೆ ಮಾಡಹತ್ತಿದನಂತೆ. ಇದರ ಬಗ್ಗೆ ಇಬ್ರಾಹಿಮ ಆದಿಲಶಹನಿಗೆ ಸಿದ್ದಿ ರೇಹಾನನು ಫಿರ್ಯಾದನ್ನೂ ಕೊಟ್ಟನು. ಆಗ ಬಾದಶಹನು ಸಿದ್ದಿ ರೇಹಾನನ ಟೊಪ್ಪಿಗೆಯನ್ನು ತರಿಸಿ ಕೊಟ್ಟನಂತೆ. ಈ ಪ್ರಕರಣವನ್ನು ಗಮನಿಸಿದ ಇಬ್ರಾಹಿಮ ಆದಿಲಶಹನು, "ಸುಲ್ತಾನ ಮಹಮ್ಮದನು ಬಾದಶಹನಾಗುತ್ತಾನೆ. ಮತ್ತು ಈ ಸಿದ್ದೀ ರೇಹಾನನು ಆತನ ಪ್ರಧಾನ ಕಾರಭಾರಿಯಾಗಿ ಪೂರ್ಣ ವಿಶ್ವಾಸಿಕನಾಗುತ್ತಾನೆ" ಎಂದು ಹೇಳಿದನೆಂದು ಕಥೆಯನ್ನು ಹೇಳುತ್ತಾರೆ. ಇದರ ತಾತ್ಪರ್ಯವೆಂದರೆ ಆತ ಬಾದಶಹನ ಪೂರ್ಣ ಭರವಸೆಯ ವ್ಯಕ್ತಿಯಾಗಿದ್ದನು.

### ೨೨. *ಮುಸ್ತಫಾಖಾನನನ್ನು ಬೆಳಗಾವಿ ಕೋಟೆಯಿಂದ ಕರೆತಂದದ್ದು :*

ಅನಂತರ ಬಾದಶಹ ಗಾಜಿಯು ಪ್ರಬಲತೆಯ ಗದ್ದುಗೆಯ ಮೇಲೆ ಕುಳಿತನು. ರಾಜ್ಯದ ಕೆಲಸಕಾರ್ಯಗಳನ್ನು ತಾನೆ ತನ್ನ ಸಮ್ಮುಖದಲ್ಲಿ ನಡೆಸಹತ್ತಿದನು. ನವಾಬ ಮುಸ್ತಫಾಖಾನನು ಖವಾಸಖಾನನ ಜುಲುಮೆಯಿಂದ ಬೆಳಗಾವಿ ಕೋಟೆಯಲ್ಲಿ ಬಂಧಿತನಾಗಿದ್ದನು. ಆ ಮುಸ್ತಫಾಖಾನನನ್ನು ಕರೆತರಲು ಸಯ್ಯದ ಜಾತಿಯಲ್ಲಿಯ ಶ್ರೇಷ್ಠನಾದ ಶಾಹ ಹಸನ ಜಾಫರಾಬಾದಿಯನ್ನು, ಕಳಿಸಿದ್ದನು. ಮುಂದಿನ ಒಂಭತ್ತು ದಿನಗಳಲ್ಲಿ ಆತನು ತುಂಬ ಆದರದಿಂದ ನವಾಬ ಮುಸ್ತಫಾಖಾನನನ್ನು ಬೆಳಗಾವಿ ಕೋಟೆಯಿಂದ ಬಿಡುಗಡೆ ಮಾಡಿಕೊಂಡು ವಿಜಾಪುರಕ್ಕೆ ಕರೆತಂದನು. ಬಾದಶಹನು ಬಾದಶಾಹೀ ಮೇಹರಬಾನಗಿಯಿಂದ ನವಾಬ ಮುಸ್ತಫಾಖಾನನನ್ನು ಬಹಳ ಸತ್ಕರಿಸಿ. ಮುಲಕೀ ಕೆಲಸವನ್ನು ಕೊಟ್ಟನು. ಅದರಿಂದಾಗಿ ನವಾಬ ಮುಸ್ತಫಾಖಾನನ ಯೋಗ್ಯತೆಯು ಮೊದಲಿನ ಪದಾಧಿಕಾರಕ್ಕಿಂತ ನೂರು ಪಟ್ಟು ಅಧಿಕವಾಗಿ ಬೆಳೆಯಿತು.

### ೨೩. *ಮುರಾರಿಯ ಕೆಲಸದ ಅಂತ್ಯ :*

ಮುರಾರಿಯ ಬಹು ದೊಡ್ಡ ಸೋಲಾಯಿತು. ನಾಯಕವಾಡಿ ಮಂಡಳಿಯ ವಿಶ್ವಾಸದಿಂದ ಧಾರವಾಡಕ್ಕೆ ಹೋಗಿದ್ದನು. ಐದುಸಾವಿರ ಸವಾರರೊಂದಿಗೆ ಧಾರವಾಡಕ್ಕೆ ಹೋಗಿ ಮುಟ್ಟಿದಾಗ ಧಾರವಾಡದ ಜನರು ಆತನನ್ನು ಕೋಟೆಯ ಒಳಗಡೆಗೆ ಬರಲು ಬಿಡಲಿಲ್ಲ. ಯುದ್ಧಕ್ಕೆ ಸಿದ್ಧರಾದರು. ಆಗ ಮುರಾರಿಯು ಬಹಳ ಬೇಡಿಕೊಂಡು ಕರಾರುಗಳಿಗೆ ಒಪ್ಪಿದ ಅನಂತರ ದಲಪತರಾವ್ ಮತ್ತು ಸುರೂಪರಾವ ಮತ್ತು ಎಲ್ಲ ನಾಯಕವಾಡಿ ಮಂಡಳಿಯು ಹೊರಗೆ ಬಂದು ಮುರಾರಿಯ ಭೆಟ್ಟಿಯಾದರು. ಆಗ ಮುರಾರಿಯು ಅವರನ್ನು ಬಂಧಿಸಿ ಮತ್ತು ಕೆಲವು ಸೈನಿಕರು ಯುದ್ಧಕ್ಕೆ ಸಿದ್ಧರಾದ ಅಪರಾಧದಿಂದಾಗಿ ಅವರನ್ನೂ ಶಿಕ್ಷಿಸಿದನು. ಮುರಾರಿಯು ನಾಲ್ಕು ದಿನ ಅಲ್ಲಿಯೇ ಇದ್ದನು. ನಾಲ್ಕನೆಯ ದಿನ ಖವಾಸಖಾನನ ಕೊಲೆಯಾದ ಸುದ್ದಿ ಬಂದಾಗ, ಆ ಸುದ್ದಿಯನ್ನು ಬಹಿರಂಗ ಪಡಿಸದೆ, ರಾತ್ರಿಯ ಸಮಯದಲ್ಲಿ ಒಂದು ಕುದುರೆಯ ಮೇಲೆ ಕುಳಿತು ಓಡಿ ಹೋಗಿ ಹಳಿಯಾಳದ ಸರಹದ್ದನ್ನು ಮುಟ್ಟಿದನು. ಅಲ್ಲಿಯ ಮಾಮಲೇದಾರನು ಅವನನ್ನು ಬಂಧಿಸಿ ವಿಜಾಪುರಕ್ಕೆ ಕಳಿಸಿದನು. ದರಬಾರದಲ್ಲಿ ಬಂದಾಗ ನಾಲಿಗೆ ಉದ್ದ ಬಿಟ್ಟು ಬಡಬಡಿಸುತ್ತ ಸಿಕ್ಕ ಹಾಗೆ ಬೈದನು. ಆದ್ದರಿಂದ ಸರಕಾರದ ಆಜ್ಞೆಯಂತೆ ಆತನ ನಾಲಿಗೆಯನ್ನು ನರಗಳ ಸಹಿತವಾಗಿ ಕಿತ್ತಿ, ಕತ್ತೆಯ ಮೇಲೆ ಕುಳ್ಳಿರಿಸಿ ನಗರದಲ್ಲಿ ಮೆರವಣಿಗೆ ಮಾಡಿದರು. ಆತನ ಶರೀರವನ್ನು ತುಂಡು ತುಂಡು ಮಾಡಿದರು. ಈ ಪ್ರಕರಣವು ಖವಾಸಖಾನನ ಕೊಲೆಯಾದ ಒಂದು ತಿಂಗಳ ಅನಂತರ ಜರುಗಿತು.

### ೨೪. *ಶಾಹಜಹಾನ ಬಾದಶಹನು ಆಗ್ರಾದಿಂದ ದೌಲತಾಬಾದಿಗೆ ಬಂದದ್ದು ಮತ್ತು ಆದಿಲಶಾಹನೊಂದಿಗೆ ನಿಜಾಮಶಹನ ರಾಜ್ಯವನ್ನು ಅರ್ಧರ್ಧ ಹಂಚಿ ಕೊಳ್ಳುವ ವಿಷಯದಲ್ಲಿ ಸ್ನೇಹಿತರಾದದ್ದು :*

ಶೇಖ ಮೋಹಿದ್ದೀನ ವಕೀಲನು ಖವಾಸಖಾನನ ವತಿಯಿಂದ ರಾಯಭಾರ ಮಾಡಲು ಆಗ್ರಾಕ್ಕೆ ಹೋಗಿದ್ದನು. ಆತನು ಶಾಹಜಹಾನ ಬಾದಶಹನ ಸೇವೆಯಲ್ಲಿ ಶ್ರೇಷ್ಠತೆಯನ್ನು ಪಡೆದು ಎಲ್ಲ ವಿಷಯಗಳನ್ನು ಸವಿಸ್ತಾರವಾಗಿ ಹೇಳಿ ದಕ್ಷಿಣ ದೇಶದ ಮೇಲೆ ಏರಿ ಹೋಗುವ ವಿಷಯದಲ್ಲಿ ಬಹಳ ಆಶಾದಾಯಕ ವಿನಂತಿಯನ್ನು ಮಾಡಿಕೊಂಡನು. ಬಾದಶಹನೂ ಅದನ್ನೇ ಬಹಳ ದಿನಗಳಿಂದ ಬಯಸುತ್ತಿದ್ದನು. ದೇವರಲ್ಲೂ

ಅದನ್ನೇ ಬೇಡಿಕೊಳ್ಳುತ್ತಿದ್ದನು. ಆದ್ದರಿಂದ ಬಹಳ ಸಂತೋಷಪಟ್ಟು ಕೆಲವೆ ದಿನಗಳಲ್ಲಿ ಭಾರೀ ಸೈನ್ಯದೊಂದಿಗೆ ದಕ್ಷಿಣ ದೇಶದತ್ತ ಹೊರಟನು. ವಸತಿಯ ಮೇಲೆ ವಸತಿಗಳನ್ನು ಹಾಕುತ್ತ ದೌಲತಾಬಾದಕ್ಕೆ ಬಂದು ಮುಟ್ಟಿ ಅಲ್ಲಿ ಬೀಡಾರ ಹೂಡಿದನು. ಅದೇ ಸಮಯದಲ್ಲಿ ಈ ಸೈನ್ಯ ದಕ್ಷಿಣದತ್ತ ಬರಲು ಕಾರಣನಾದ ಖವಾಸಖಾನನು ಕೊಲೆಯಾದನು. ಅದನ್ನು ಕೇಳಿದ ಶಾಹಜಹಾನನು ಚಿಂತೆಯಲ್ಲಿ ಬಿದ್ದನು. ಅನಂತರ ನಿಜಾಮಶಹನ ರಾಜ್ಯವನ್ನು ಹಂಚಿಕೊಳ್ಳುವ ವಿಷಯದಲ್ಲಿ ಆದಿಲಶಹನಿಂದ ತಗಾದೆಯೂ ಬಂದಿತು. ಶಾಹಜಹಾನ ಬಾದಶಹನು ತನ್ನ ಸೈನ್ಯದಲ್ಲಿಯ ಸರದಾರರನ್ನು ನಿಜಾಮಶಹನ ರಾಜ್ಯದ ಪ್ರತಿಯೊಂದು ತರಫಗಳಿಗೂ ನಿಯಮಿಸಿದನು. ಸಯ್ಯದ ಖಾನಜಹಾನನ್ನು ಸೈನ್ಯ ಸಹಿತವಾಗಿ ಪರಾಂಡೆಯ ಕಡೆಗೆ ರಣದುಲ್ಲಾಖಾನನ ಮೇಲೆ ಕಳಿಸಿದನು. ಖಾನದೌರಾನನನ್ನು ಬೇರೆ ಅಮೀರ ಜನರೊಂದಿಗೆ ಬಹಳಷ್ಟು ಸೈನ್ಯವನ್ನು ಕೊಟ್ಟು ಬೀದರ ಹಾಗೂ ಚಿಂಚೊಳಿಗಳ ಕಡೆಗೆ ಬಹಲೋಲಖಾನನ ಮೇಲೆ ನಿಯಮಿಸಿದನು. ಇಯಾತಖಾನ ಮತ್ತು ಖಾನಜಮಾರನ್ನು ಕಲ್ಹಾರ ಕಡೆಗೆ ಅಂಬರಖಾನ ಮತ್ತು ಶಾಹಾಜಿ ಭೋಸಲೆಗಳ ಮೇಲೆ ನಿಯಮಿಸಿದನು. ಹೀಗೆ ಅವರೆಲ್ಲ ತಮಗೆ ನಿಯಮಿಸಿದ ಸ್ಥಾನಗಳಿಗೆ ಸೈನ್ಯ ಸಹಿತವಾಗಿ ಹೋಗಿ ಯುದ್ಧ ಮಾಡಹತ್ತಿದರು. ಆಗ ಆದಿಲಶಹನ ಕಡೆಯ ವೀರರೂ ರುಸ್ತಮನಂತೆ ಅವರೊಂದಿಗೆ ಧೈರ್ಯದಿಂದ ಯುದ್ಧ ಮಾಡಹತ್ತಿದರು.

ಶಾಹಜಹಾನ ಬಾದಶಹನು ಹೊರಗೆ ಈ ರೀತಿಯಾಗಿ ಸೈನ್ಯ ಕಳಿಸಿ ಯುದ್ಧ ಪ್ರಾರಂಭಿಸಿದ್ದನಾದರೂ ಅಂತರ್ಯದಲ್ಲಿ ಆದಿಲಶಹನೊಂದಿಗೆ ಒಪ್ಪಂದ ಮಾರ್ಗವನ್ನು ಪ್ರತೀಕ್ಷಿಸುತ್ತಿದ್ದನು. ಆದಿಲಶಹನ ಕಡೆಯ ಮುಖ್ಯ ಕಾರಭಾರಿ ಮುಸ್ತಫಾಖಾನನಾದರೋ ಮೊದಲಿನಿಂದಲೇ ಮೊಗಲರೊಂದಿಗೆ ಒಪ್ಪಂದದಲ್ಲಿ ಮಗ್ನನಾಗಿದ್ದನು. ಅದರ ಕಾಲ ಈಗ ಕೂಡಿ ಬರುತ್ತಿದೆ ಎಂದು ತಿಳಿದನು. ಶಾಹಾ ದಾವೂದ ವಲದ ವಫಾರಖಾನ ಮತ್ತು ಶಾಹ ಅಬದುಲ ಹಸನ ಮರ್ತುಜಾ, ಮತ್ತು ಕಾಜೀ ಶೇಖರನ್ನು ಒಪ್ಪಂದಕ್ಕಾಗಿ ಶಾಹಜಹಾನ ಬಾದಶಹನನ್ನು ಕಾಣಲು ದೌಲತಾಬಾದಿಗೆ ಕಳಿಸಿದನು.[೧] ರಣುದುಲ್ಲಾ ಖಾನನಿಗೆ ಈ ಒಪ್ಪಂದ ಸರಿ ಬರುವುದಿಲ್ಲವೆಂಬುದು ಕಾಜೀ ಸಯ್ಯದನಿಗೆ ಗೊತ್ತಿತ್ತು. ರಣದುಲ್ಲಾಖಾನನ ಮನಸ್ಸು ಎಲ್ಲರೀತಿಯಿಂದಲೂ ಯುದ್ಧ ಮಾಡುವುದರಲ್ಲೆ ಇತ್ತು. ಅದಕ್ಕಾಗಿ ಒಬ್ಬನನ್ನು ರಣದುಲ್ಲಾಖಾನನ ಹತ್ತಿರ ಕಳಿಸಿ. ಈ ರೀತಿಯ ಹಟ ಬೇಡ, ಇದರಲ್ಲಿ ಯಾವ ಲಾಭವೂ ಇಲ್ಲ. ಎಲ್ಲರೊಂದಿಗೆ ಹೊಂದಿಕೊಂಡು ನೀವು ತಕ್ಷಣ ಇಲ್ಲಿಗೆ ಬಂದು ಮುಸ್ತಫಾಖಾನ ಮತ್ತು ಬಾದಶಾಹರನ್ನು ಕಾಣಬೇಕೆಂದು ನಿರೋಪ ಕಳಿಸಿದರು. ಇದನ್ನು ಕೇಳಿ ರಣದುಲ್ಲಾಖಾನನು ಮನಸ್ಸಿನಲ್ಲಿಯೇ ಪೂರ್ತಿ ವಿಚಾರಿಸಿ ತಾನೆ ಸ್ವತಃ ವಿಜಾಪುರಕ್ಕೆ ಬಂದನು. ಆಗ ಮುಸ್ತಫಾಖಾನನು ಆತನನ್ನು ಹತ್ತು-ಹದಿನೈದು ದಿನಗಳವರೆಗೆ ತನ್ನ ಮನೆಯಲ್ಲೆ ಇಟ್ಟುಕೊಂಡು ತುಂಬ ಆದರ ಮಾಡಿದನು. ಅವನಿಗೆ ಬೋಧ ಮಾಡಿ ಬುದ್ಧಿವಾದ ಹೇಳಿ ಆತನನ್ನು ತನ್ನ ಮನದ ಯೋಜನೆಗಳಿಗೆ ಒಪ್ಪಿಸಿದನು. ಅನಂತರ ಶಾಹಜಹಾನ ಬಾದಶಹ ಹಾಗೂ ಆದಿಲಶಹರ ಮಧ್ಯೆ ಕರಾರು ಒಪ್ಪಂದವನ್ನು ನಿರ್ಧರಿಸಿ ಅದರಂತೆ ಕೃಷ್ಣಾನದಿಯ ಉತ್ತರಭಾಗ ಮೊಗಲರಿಗೆಂದೂ, ದಕ್ಷಿಣ ಭಾಗ ಆದಿಲಶಹನಿಗೆಂದೂ ನಿಜಾಮಶಾಹಿ ರಾಜ್ಯವನ್ನು ಹಂಚಿಕೊಳ್ಳಲು ನಿರ್ಧರಿಸಿದರು. ಶಾಹಜಹಾನ ಬಾದಶಹನು ತುಂಬ ಸಂತೋಷಪಟ್ಟು ಈ ಕರಾರನಾಮೆಯನ್ನು ಬಂಗಾರದ ಎಲೆಗಳ ಮೇಲೆ ಬರೆಯಬೇಕೆಂದು ಆಜ್ಞೆ ಮಾಡಿದನು. ಬಹಳದಿನಗಳಿಂದ ಸೈನ್ಯ ಒಂದೇ ಸ್ಥಳದಲ್ಲಿ ಇದ್ದುದರಿಂದ

೧. ಏಪ್ರಿಲ್ -೧೬೩೫ - ಬಾದಶಾಹ ನಾಮಾ ೨. ಪುಟ ೫೩.

ಮತ್ತು ಧಾನ್ಯ ಸಂಗ್ರಹ ತೀರಿದ್ದರಿಂದ ಕರಾರುನಾಮೆ ಆದಷ್ಟು ಬೇಗ ಆಗಲೆಂದು ಪರಾಂಡೆಯ ತಹಮಾಸೀಫನನ್ನು ವಿಜಾಪುರಕ್ಕೆ ಕಳಿಸಿದರು. ಐದು ದಿನಗಳಲ್ಲಿ ಎಲ್ಲ ವಿಧಿ ವಿಧಾನಗಳು ಮುಗಿಯಬೇಕೆಂದು ಆಜ್ಞೆ ಮಾಡಿದನು. ತಹಮಾಸೀಫನು ಎರಡೂವರೆ ದಿನಗಳಲ್ಲಿ ವಿಜಾಪುರಕ್ಕೆ ಬಂದು ಮುಸ್ತಫಾಖಾನನನ್ನು ಕಂಡನು. ಆತನು ಒಪ್ಪಂದಕ್ಕೆ ಒಪ್ಪಿದ್ದೇನೆಂದು ಹೇಳಿ ಕಳಿಸಿದನು.[೨] ಶಾಹಜಹಾನ ಬಾದಶಹನಿಗೂ ದೌಲತಾಬಾದದಲ್ಲಿ ಇರುವುದು ತುಂಬ ಬೇಸರವಾಗಿತ್ತು. ಆದ್ದರಿಂದ ತಹಮಾಸೀಫನು ಬರುವ ಮೊದಲೇ ತನ್ನ ಎಲ್ಲ ಸಾಮಾನು ಸರಂಜಾಮುಗಳನ್ನು ಕಳಿಸಿ ಆತನ ಮಾರ್ಗ ಪ್ರತೀಕ್ಷೆಯಲ್ಲಿದ್ದನು. ಅಷ್ಟರಲ್ಲಿ ಐದನೆಯ ದಿನ, ಏಳನೆಯ ಅಥವಾ ಎಂಟನೆಯ ಪ್ರಹರದಲ್ಲಿ ತಿರುಗಿ ಬಂದನು. ಅದೇ ವೇಳೆಗೆ ಶಾಹಜಹಾನ ಬಾದಶಹನು ತನ್ನ ರಾಜಧಾನಿ ದಿಲ್ಲಿಗೆ ಹೊರಟು ನಿಂತಿದ್ದನು. ಆ ಕರಾರನಾಮೆಯ ದಿನವು ಹಿಜರಿ ಸನ್ ೧೦೪೫ ಜಿಲ್ಹೇಜ ತಿಂಗಳಲ್ಲಿ ಆಗಿತ್ತು.[೩] (೧೬ ಏಪ್ರಿಲ್ ದಿಂದ ೨೪ ಮೇ ೧೬೩೬) ಅನಂತರ ಮುಸ್ತಫಾಖಾನನು ಕರಾರನಾಮೆಯಲ್ಲಿ ನಿರ್ಧರಿಸಿದಂತೆ, ಕೃಷ್ಣಾ ನದಿಯ ಇತ್ತಕಡೆಯ ನಿಜಾಮಶಹನ ರಾಜ್ಯವನ್ನು ಆದಿಲಶಹನ ರಾಜ್ಯಕ್ಕೆ ಸೇರಿಸಿದನು. ಅತ್ತ ಕಡೆಯ ರಾಜ್ಯವನ್ನು ಶಾಹಜಹಾನ ಬಾದಶಹನ ರಾಜ್ಯಕ್ಕೆ ಆತನ ಅಮೀರ ಜನರು ಸೇರಿಸಿದರು. ಇತ್ತ ಖಾನಜಮಾನನನ್ನು ಶಾಹಜಹಾನ ಬಾದಶಹನು, ಶಾಹಾಜಿ ಭೋಸಲೆಯ ಮೇಲೆ ನಿಯಮಿಸಿದ್ದನಷ್ಟೆ, ಆತ ತನ್ನ ಕೈ ತೋರಿಸುತ್ತಲೆ ಇದ್ದನು. ಆತನ ಸಹಾಯಕ್ಕೆಂದು ರಣದುಲ್ಲಾಖಾನನನ್ನು ಆದಿಲಶಹನ ಕಡೆಯಿಂದ ಕಳಿಸಿದರು. ಮಲಿಕ ರೇಹಾನನ ಕಡೆಯಿಂದ ಸಿದ್ದಿ ಮರ್ಜ್ಯಾನನ್ನು ಸಹ ರುಣದುಲ್ಲಾಖಾನನ ಸಹಾಯಕ್ಕೆ ಕಳಿಸಿದನು. ಆಗ ಖಾನಜಮಾನ ಮತ್ತು ರಣದುಲ್ಲಾಖಾನರು ಮಾಹುಲದ ಕೋಟೆಯನ್ನು ಮುಟ್ಟಿ ಹಲ್ಲೆ ಮಾಡುತ್ತ ಕೋಟೆಗೆ ಮುತ್ತಿಗೆ ಹಾಕಿದರು. ಶಾಹಾಜಿ ಭೋಸಲೆ ಎಷ್ಟೇ ಪ್ರಯತ್ನ ಮಾಡಿ ಕೋಟೆಯನ್ನು ಉಳಿಸಿಕೊಳ್ಳಬೇಕೆಂದರೂ ಸಾಧ್ಯವಾಗಲಿಲ್ಲ. ನಿರುಪಾಯನಾಗಿ ಒಪ್ಪಂದಕ್ಕೆ ಮುಂದಾದನು. ರಣದುಲ್ಲಾಖಾನನ ಮುಖಾಂತರ ಒಪ್ಪಂದದ ಕರಾರುಗಳನ್ನು ನಿರ್ಧರಿಸಿದರು. ಮುರ್ತುಜಾ ನಿಜಾಮಶಾಹನನ್ನು ಖಾನಜಮಾನನ ವಶಕ್ಕೆ ಕೊಡಬೇಕು. ಮಾಹುಲದ ಕೋಟೆಯನ್ನು ಆದಿಲಶಹನ ವಶಕ್ಕೆ ಕೊಟ್ಟು ಶಾಹಜಿ ಭೋಸಲೆಯು ಸುಲ್ತಾನ ಮಹಮ್ಮದ ಆದಿಲಶಹನ ನೌಕರಿಯನ್ನು ಸೇರಿದನು.[೪] ಅನಂತರ ಖಾನ ಜಮಾನನು ಮುರ್ತಜಾ ನಿಜಾಮಶಹನನ್ನು ಕರೆದುಕೊಂಡು ದೌಲತಾಬಾದಕ್ಕೆ ಹೊರಟನು.[೫] ರಮದುಲ್ಲಾಖಾನ ಮತ್ತು ಶಾಹಾಜೀರಾಜೇ ಭೋಸಲೆಗಳು ಆದಿಲಶಾಹೀ ಬಾದಶಹನ ನೌಕರಿಯ ಮೇಲೆ ಹೊರಟರು.

---

೨. 'On the 2nd day of the arrival of your (Shahjahan's) farman which is Monday, the 25th of Zilhaj, 1044, A.H. ( 1 June 1635) the Khan (messenger) was sent back ....' etc. Extract from Mahmud Nama p. 95/ Bad Nama P. 57

೩. ಹಿಜರಿ ಸನ್ ೧೦೪೪ರ ಬದಲು ೧೦೪೫ ಎಂದು ತಪ್ಪು ಬಿದ್ದಿದೆ ಎಂದು ಕಾಣುತ್ತದೆ. ಕರಾರ ನಾಮೆಯು ೧ ಜೂನ ೧೬೩೫ ರಂದೇ ಅಂದರೆ ೧೦೪೪ರ ಜಿಲ್ಹೇಜ ತಿಂಗಳ ಕೊನೆಯಲ್ಲೆ ಆಗಿತ್ತು.

೪. "ಶಕೆ ೧೫೫೭ (೨೬ ಮಾರ್ಚ ೧೬೩೬ರ ಮೊದಲು) ಶಾಹಾಜಿ ರಾಜೆಯು ಮಾಹುಲಿಗೆ ಹೋದನು. ಅಲ್ಲಿ ರಣದುಲ್ಲಾಖಾನ ಆದಿಲಶಾಹಿ ಮತ್ತು ಖಾನಜಮಾ ಮೊಗಲ ಇವರು ಹೋಗಿ ಮುತ್ತಿಗೆ ಹಾಕಿ ನಿಜಾಮಶಹನನ್ನು ವಶಪಡಿಸಿಕೊಂಡರು. ಶಾಹಾಜಿ ರಾಜೆಯು ಆದಿಲಶಾಹಿಯ ನೌಕರನಾದನು" ಜೇಧೆ ಶಕಾವಲಿ. ಪು. ೧೭ ಮತ್ತು ಶಿವಾಶ ಪು. ೫೫.

೫. "On the 4th Jolhoja 1046 A.H (20 April 1637) The news came that Khan Zaman had died at Daulatabad" -Badshah Nama P. 61.

## ೨೫. *ರಣದುಲ್ಲಾಖಾನನ ಸೇನಾಪತ್ಯದಲ್ಲಿ ಹಿಂದು ನಗರಗಳು / ಕರ್ನಾಟಕದ ಮೇಲೆ ಮಹಮ್ಮದ ಆದಿಲಶಹನ ದಾಳಿ :*

ಧೈರ್ಯವಂತ ಸುಲ್ತಾನ ಮಹಮ್ಮದ ಆದಿಲಶಾಹ ಗಾಜಿಯು ಸಿಂಹಾಸನದ ಮೇಲೆ ಕುಳಿತಂದಿನಿಂದ ಅವನ ಮನಸ್ಸು ಅಲ್ಲಾನ ಮನೋಗತದ ಕಡೆಗೆ ಇತ್ತು. ಅಮಾರ್ಗ ಮತ್ತು ಅಧರ್ಮ ನಡತೆಯ ಬಗ್ಗೆ ಬಹಳ ಬೇಸರ ಬಂದಿತ್ತು. ಆದ್ದರಿಂದ ನಿರಂತರವಾಗಿ ಅಯೋಗ್ಯ ಪರಿಣಾಮದ ಹಿಂದು ಜನರೊಂದಿಗೆ ಯುದ್ಧ ಮಾಡಬೇಕೆಂದು ಆತ ಯೋಚಿಸುತ್ತಿದ್ದನು. ರಾಜ್ಯದ ವ್ಯವಸ್ಥೆ ತಹಬಂದಿಗೆ ಬಂದನಂತರ ಮತ್ತು ರಾಜ್ಯ ವಿಸ್ತರಣೆ ಮನಸ್ಸಿನಂತೆ ಆದನಂತರ ಯಶಸ್ವಿ ಸೈನ್ಯದ ಡಾಲನ್ನು ಮತ್ತು ವಿಜಯೀ ಸೈನ್ಯವನ್ನು ಹಿಂದುಗಳ ರಾಜ್ಯದತ್ತ ಅಂದರೆ ಕರ್ನಾಟಕದ ಮೇಲೆ ನೇಮಿಸಿ ಯುದ್ಧ ಮಾಡಿ ಫಲವನ್ನು ಪಡೆಯಬೇಕೆಂದು ಆದಿಲಶಹನು ಬಯಸುತ್ತಿದ್ದನು. ಮುಸಲ್ಮಾನರ ಷಿಯಾ ಧರ್ಮವನ್ನು ನಡೆಸುವುದು ಮತ್ತು 'ಪೈಗಂಬರ ಅಲೇಕು ಸಲ್ಲಾಮ' ಅವರ ಶ್ರೇಷ್ಠ ಧರ್ಮವನ್ನು ನಡಾವಳಿಕೆಯಲ್ಲಿ ತರಲು ಬಹಳ ಪ್ರಯತ್ನಿಸಿ ಧರ್ಮವನ್ನು ಸ್ಥಾಪಿಸಿದನು. 'ಗಾಜಿ' ಎಂದರೆ ಯುದ್ಧ ಮಾಡಿ ಪೃಥ್ವಿಯನ್ನು ವಶಪಡಿಸಿಕೊಳ್ಳುವವನು ಎಂಬುದಾಗಿ ತನ್ನ ಹೆಸರಿನ್ನಿಟ್ಟುಕೊಳ್ಳಬೇಕೆಂದು ಇಚ್ಛಿಸುತ್ತಿದ್ದನು. ತನ್ನ ದ್ರವ್ಯಭಂಡಾರವನ್ನು ಅಧಿಕಗೊಳಿಸಬೇಕು, ತನ್ನ ರಾಜ್ಯವನ್ನು ವಿಸ್ತರಿಸಬೇಕು, ಹೀಗೆ ಬಾದಶಹನ ನಡತೆಯಂತೆ ಒಳ್ಳೆಯದಾಗಿ ಇರಬೇಕು. ಆದ್ದರಿಂದ ಈಗ ನೆರೆಹೊರೆಯರೊಂದಿಗಿನ ಕೆಲಸಗಳಿಂದ ಅವಕಾಶ ಸಿಕ್ಕಿದೆ. ಮತ್ತು ಮೊಗಲ ಇತ್ಯಾದಿ ಜನರಿಂದ ಭರವಸೆ ದೊರೆತಿದೆ. ಮನಸ್ಸು ಪೂರ್ಣ ಸ್ವಸ್ಥವಾಗಿದೆ. ಅದಕ್ಕಾಗಿ ಈಗ ಬಹಳದಿನಗಳಿಂದ ಮನಸ್ಸಿನಲ್ಲಿ ಇದ್ದ ಇರಾದೆಯನ್ನು ಪೂರ್ಣಗೊಳಿಸಬೇಕು. ಸಿಪಾಹಸಾಲಾರ ರಣದುಲ್ಲಾಖಾನನನ್ನು ಸೇನಾಪತಿಯನ್ನಾಗಿ ಮಾಡಿ, ತನ್ನ ಪ್ರಧಾನಿಯನ್ನಾಗಿ ಮಾಡಿ, ಶ್ರೇಷ್ಠ ಅಮೀರ ಜನರೊಂದಿಗೆ ಮತ್ತು ಯಶಸ್ವಿ ಸೈನ್ಯವನ್ನು ಕೊಟ್ಟು ರಾಯಗಿರಿಯ ಕಡೆಗೆ ಕಳಿಸಿದನು. ಮಲಿಕ ರೇಹಾನನಿಗೆ ಕೂಡ ಆಜ್ಞೆ ಮಾಡಿ, ರಣದುಲ್ಲಾಖಾನನ ಜೊತೆಗೆ ಇದ್ದು ಈ ಕೆಲಸದಲ್ಲಿ ಎಚ್ಚರದಿಂದ ಇದ್ದು ತತ್ಪರರಾಗಿರಬೇಕು ಎಂದನು. ಹೀಗೆ ಆಜ್ಞೆ ಬಂದ ತಕ್ಷಣ ಮಲಿಕ ರೇಹಾನನು ಸಿದ್ದಿ ಅಂಬರ ಕಾಲಾನನ್ನು ಸೊಲ್ಲಾಪುರದಲ್ಲಿಟ್ಟು ತಾನು ಹತ್ಯಾರಬಂದ ನಾಲ್ಕು ಸಾವಿರ ಸ್ವಾರರ ಸಹಿತವಾಗಿ ರಣದುಲ್ಲಾಖಾನನ ಜೊತೆಗೆ ಹೊರಟನು.

ಯಶಸ್ವಿ ಸೈನ್ಯವು ರಾಯಗಿರಿಯ ಹದ್ದಿಯಲ್ಲಿ ಹೋಗಿ ಮುಟ್ಟಿದಾಗ ಹಿಂದು ಜನರ ಮನದಲ್ಲಿ ಧಕ್ಕೆ ಹಾಗೂ ಭಯಗಳು ಬಹಳ ಉಂಟಾದವು. ರಾಜಾ ವೀರಭದ್ರ ಎಂಬುವನು ಅಲ್ಲಿಯ ರಾಜನಾಗಿದ್ದನು. ಆತ ಭಯಭೀತನಾಗಿ ಯುದ್ಧ ಮಾಡುವ ಸಂಕಲ್ಪವನ್ನೆ ಬಿಟ್ಟು ಒಪ್ಪಂದ ಮಾಡಿಕೊಂಡನು.[೧] ಸೇವಕತನವನ್ನು ಒಪ್ಪಿಕೊಂಡನು. ಮಲಿಕ ರೇಹಾನನ ಮುಖಾಂತರ ಒಪ್ಪಂದದ ನಿರೋಪವನ್ನು ಕಳಿಸಿದನು. ಒಪ್ಪಂದದ ಕರಾರುಗಳನ್ನು ನಿರ್ಧರಿಸಿದರು. ಬಹಳಷ್ಟು ಖಂಡಣಿಯಾಗಿ ಕೊಡಲು ಒಪ್ಪಿಕೊಂಡನು. ಮೂವತ್ತು ಲಕ್ಷ ಹೊನ್ನುಗಳೆಂದು ನಿರ್ಧರಿಸಿ ಅದರಲ್ಲಿಯ ಹದಿನಾರು ಲಕ್ಷ ಈಗ ಮುಟ್ಟಿಸಬೇಕು. ಉಳಿದ ಹದಿನಾಲ್ಕು ಲಕ್ಷ ಹೊನ್ನುಗಳನ್ನು ಹಪ್ತಾಬಂದಿಯಂತೆ ಮೂರು ವರುಷಗಳಲ್ಲಿ ಮುಟ್ಟಿಸಬೇಕು. ನಿರ್ಧರಿಸಿದಂತೆ ಹಣ ಕೈವಶವಾಯಿತು. ಆಗ ರಣದುಲ್ಲಾಖಾನನು ಸಂತೋಷದಿಂದ ವಿಜಾಪುರಕ್ಕೆ ತಿರುಗಿ ಬಂದನು. ಹಣವು ಸರಕಾರೀ ಖಜಾನೆಗೆ ದಾಖಲಾಯಿತು. ತಾನು ನವರಸಪುರ ನಗರದಲ್ಲಿ ಇದ್ದುಕೊಂಡನು. ಮಲಿಕ ರೇಹಾನನು ಸೊಲ್ಲಾಪುರಕ್ಕೆ ಹೋಗಲು ನಿರೋಪ ಪಡೆದನು.

---

೧. ಶಕೆ ೧೫೫೮ (೧೬೩೬-೩೭ ಕ್ರಿ.ಶ) ಬಸವಾಪಟ್ಟಣವನ್ನು ಆದಿಲಶಹನು ತೆಗೆದುಕೊಂಡನು - ಜೇಧೆ ಶಕಾವಲಿ ಪು. ೧೭ ಮಹಮ್ಮದನಾಮಾ ಪು. ೯೭

ಇದಾದನಂತರ ಬಾದಶಹ ಗಾಜಿಯ ಮನಸ್ಸು ಸೊಲ್ಲಾಪುರದತ್ತ ಹೊರಳಿತು. ರಣದುಲ್ಲಾಖಾನನ ಮುಖಾಂತರ ಮಲಿಕ ರೇಹಾನನಿಗೆ ಹೇಳಿಕಳಿಸಿ ಸೊಲ್ಲಾಪುರದ ಕೋಟೆಯ ಬೀಗದ ಕೈಯನ್ನು ಇಲ್ಲಿಯ ಕೆಲಸಗಾರರ ವಶಕ್ಕೆ ಕೊಡಬೇಕು ಎಂದನು. ಹೀಗೆ ಮಾಡಿದ್ದೇ ಆದರೆ ಸರಕಾರದಿಂದ ಇನ್ನೂ ಅಧಿಕ ಪದವಿ ಪ್ರಾಪ್ತವಾಗುತ್ತದೆ ಎಂದೂ ಸೂಚಿಸಿದನು. ಆಗ ಮಲಿಕ ರೇಹಾನನು ಸರಕಾರದ ಆಜ್ಞೆಯಂತೆ, ಅದನ್ನು ಮಾನ್ಯ ಮಾಡಿ ಸೊಲ್ಲಾಪುರದ ಬೀಗದ ಕೈಯನ್ನು ತಾನೆ ಸ್ವತಃ ತನ್ನ ಕೈಯಲ್ಲಿ ತೆಗೆದುಕೊಂಡು ವಿಜಾಪುರಕ್ಕೆ ಬಂದು ಮುಟ್ಟಿದನು. ರಣದುಲ್ಲಾಖಾನನ ಮುಖಾಂತರ ಬೀಗದ ಕೈಯನ್ನು ಬಾದಶಹನಿಗೆ ಒಪ್ಪಿಸಿದನು. ಆಗ ಬಾದಶಹನು ಅತ್ಯಂತ ಮೆಹರಬಾನಗಿಯನ್ನು ಮಾಡುತ್ತ ಐದು ಲಕ್ಷ ಹೊನ್ನಿನ ಪ್ರದೇಶಗಳನ್ನು ಇನಾಮ ಹಾಕಿಕೊಟ್ಟನು. ಮಲಿಕ ರೇಹಾನನು ಸಂತೋಷದಿಂದ ಮಾರಡಿಗೆ ಹೋದನು. ಸೊಲ್ಲಾಪುರ ಕೋಟೆಯನ್ನು ಹಸನ ರೂಮೀಖಾನನ ನೇತೃತ್ವಕ್ಕೆ ಬಾದಶಹನು ಕೊಟ್ಟನು. ಈ ಸೊಲ್ಲಾಪುರ ಕೆಲಸದಿಂದ ಮುಕ್ತನಾದಮೇಲೆ ರಣುದಲ್ಲಾಖಾನನು ತನ್ನ ಜಹಗೀರಿಯಾದ ಹುಕ್ಕೇರಿ ಮತ್ತು ರಾಯಭಾಗ ಮಹಾಲಿಗೆ ಹೋದನು. ಒಪ್ಪಂದವಾದ ನಂತರ, ಎರಡು ವರುಷಗಳಲ್ಲಿ ವೀರಭದ್ರನಿಂದ ಬರಬೇಕಾದ ಖಂಡಣಿ ಬರಲಿಲ್ಲ. ಆಗ ಆದಿಲಶಾಹನು ಮತ್ತೆ ಸೈನ್ಯ ಕಳಿಸಿದನು. ಆಗ ಈ ಸಮಯದಲ್ಲಿ ಮುಸಲಮಾನ ಶೂರ ಜನರು ವೀರಭದ್ರರಾಜನ ಕೈಯಿಂದ ಯೆಕರಿ (ಇಕ್ಕೇರಿ ಹುಕ್ಕೇರಿ?) ಎಂಬ ಗ್ರಾಮವನ್ನು ಕಸಿದುಕೊಂಡರು. ಅದು ಹಿ. ಸನ್ ೧೦೪೭ (೧೬೩೭-೩೮) ಆಗಿತ್ತು. ಅದೇ ವರುಷ ಯೇಕರಿ ಗ್ರಾಮವು ಆದಿಲಶಾಹಿ ರಾಜ್ಯಕ್ಕೆ ಸೇರಿತು. ಅನಂತರ ಮತ್ತೆ ಕೆಲವು ದಿನಗಳ ಅನಂತರ ಆದಿಲಶಾಹನು ತನ್ನ ಯಶಸ್ವಿ ಸೈನ್ಯವನ್ನು ಮತ್ತೆ ಕರ್ನಾಟಕದ ಮೇಲೆ ರಣದುಲ್ಲಾಖಾನನ ಸೇನಾಪತ್ಯದಲ್ಲಿ ಎಲ್ಲ ಅಮೀರ ಜನರು ಮತ್ತು ಸರದಾರ ಮಂಡಳಿಗೆ ರಣದುಲ್ಲಾಖಾನನ ಜೊತೆಗೆ ಹೋಗಲು ಆಜ್ಞೆ ಮಾಡಿದನು. ಯಾರು ಆತನಿಗೆ ಸಹಾಯ ನೀಡುವಲ್ಲಿ ಕಿಂಚಿತ್ ಅಂತರ ಮಾಡಿದರೂ ಅವರ ಜಹಗೀರಿಯನ್ನು, ಖಜೀನೆಯನ್ನು ಜಪ್ತ ಮಾಡಲು ಮತ್ತು ಅವರನ್ನು ಶಿಕ್ಷಿಸಲು ಅಥವಾ ಕ್ಷಮೆ ನೀಡುವ ಅಧಿಕಾರವನ್ನು ರಣದುಲ್ಲಾಖಾನನಿಗೆ ಕೊಟ್ಟನು. ಈ ಸಮಯದಲ್ಲಿ ಮಲಿಕ ರೇಹಾನನು ರಣುದುಲ್ಲಾಖಾನನೊಂದಿಗೆ ಇದ್ದು ಈ ಕೆಲಸದಲ್ಲಿ ಸಹಾಯ ಮಾಡುತ್ತಿದ್ದನು.

ಅದರಂತೆ ಸಿದ್ದಿ ಅಂಬರನು ಎರಡು ಸಾವಿರ ಸ್ವಾರರೊಂದಿಗೆ ಸಿಧನೂರದ (ಸಿಂಧನೂರ?) ಸರಹದ್ದಿನಲ್ಲಿ ಇದ್ದು ರಣದುಲ್ಲಾಖಾನನ ಜೊತೆಗೆ ನಡೆದುಕೊಳ್ಳಲು ಹಟ ಮಾಡಿದ್ದನು. ಅದಕ್ಕಾಗಿ ಶೂರನಾದ ಅಫಜಲನಖಾನನ್ನು ಐದುಸಾವಿರ ಸೈನ್ಯದೊಂದಿಗೆ ಸಿದ್ದಿ ಅಂಬರನನ್ನು ಹಿಡಿದು ಬಂಧಿಸಲು ನಿಯಮಿಸಿದ್ದನು. ಅಫಜಲಖಾನನು ಸಿಧನೂರಿನ ಹದ್ದಿಯಲ್ಲಿ ಹೋಗಿ ಮುಟ್ಟಿದಾಗ ಸಿದ್ದಿ ಅಂಬರನು ನಿರುಪಾಯನಾಗಿ ತಾನೆ ಸ್ವತಃ ಕೈಯಲ್ಲಿ ಬೇಡಿಗಳನ್ನು ಹಾಕಿಕೊಂಡು ಅಫಜಲಖಾನನ ಎದುರಿಗೆ ಹೋಗಿ ಹೇಳಿದನು. 'ನನಗೆ ಬಾದಶಹನ ಆಜ್ಞೆ ಶಿರಸಾ ಮಾನ್ಯವಿದೆ' ಎಂದು ಹೇಳಿ ಅವನೊಂದಿಗೆ ಹೊರಟನು. ಈ ಮೊದಲು ಮಲಿಕ ಅಂಬರನ ವೇಳೆಯಲ್ಲಿ ಖೈರತಖಾನ ಹಾಗೂ ಅಂಬರಖಾನರು ಬಂದಿಯಾಗಿ ದೌಲತಾಬಾದಿನ ಕಾಳಾಕೋಟೆಯಲ್ಲಿ ಕೈದಿಯಾಗಿದ್ದರು. ಮಲಿಕ ರೇಹಾನನು ಆ ಕಾಳಾಕೋಟೆಯ ಮುಖ್ಯಸ್ಥನಾಗಿದ್ದಾಗ ಆತನು ಈ ಉಭಯತರನ್ನು ಸಂರಕ್ಷಿಸಿದ್ದನು. ಈ ಕಾರಣಗಳಿಂದ ಪರಸ್ಪರ ಮಿತ್ರತೆ ಇತ್ತು. ಅದು ಕಾರಣ ರಣದುಲ್ಲಾಖಾನನಿಗೆ ಹೇಳಿ ಇವರನ್ನು ಕ್ಷಮಿಸುವಲ್ಲಿ ಯಶಸ್ವಿಯಾದನು. ಸಿದ್ದಿ ಅಂಬರಖಾನನ ಕಾಲಲ್ಲಿಯ ಬೇಡಿಗಳನ್ನು ತೆಗೆದು ಆತನ ಜಹಗೀರನ್ನು ಆತನಿಗೆ ತಿರುಗಿ ಕೊಟ್ಟರು. ಅನಂತರ ರಣದುಲ್ಲಾಖಾನನು ತನ್ನ ಜೊತೆ ನಾಲವತ್ತು ಸಾವಿರ ಸೈನ್ಯವನ್ನು ತೆಗೆದುಕೊಂಡು ಹಿಂದು

ಜನರ ಪ್ರದೇಶಗಳ ಮೇಲೆ ಅಂದರೆ ಕರ್ನಾಟಕದ ಮೇಲೆ ಹೋದನು. ಪ್ರದೇಶಗಳನ್ನು ಗೆಲ್ಲ ಹತ್ತಿದನು. (ಕ್ರಿ.ಶ ೧೬೩೮-೩೯) ಈ ಕೆಲಸ ಬಹಳ ದಿನಗಳವರೆಗೆ ನಡೆಯಿತು. ಬಹಳ ಪ್ರಯತ್ನಗಳಿಂದ ಹಿಂದು ಜನರ ಎಲ್ಲ ಪ್ರದೇಶಗಳನ್ನು, ಕೋಟೆಗಳನ್ನು ಇತ್ಯಾದಿಯಾಗಿ ಕೈವಶ ಮಾಡಿಕೊಂಡು, ತನ್ನ ರಾಜ್ಯಕ್ಕೆ ಬಂದನು. ಪೈಗಂಬರರ ಪ್ರಬಲ ಧರ್ಮವನ್ನು ಪ್ರಚಾರದಲ್ಲಿ ತರುವುದು ಮತ್ತು ಮುಸಲ್ಮಾನ ಧರ್ಮವನ್ನು ಸ್ಥಾಪಿಸುವುದರಲ್ಲಿ ಪ್ರಸಿದ್ಧನಾದನು. ಹೀಗೆ ಬಹಳ ದಿನಗಳಾದ ಮೇಲೆ ಪ್ರವಾಸದಲ್ಲಿಯ ಗಾಳಿ, ನೀರುಗಳ ಬದಲಾವಣೆಯಿಂದಾಗಿ ಜನ ದನ ಕರುಗಳ ಪ್ರಕೃತಿ ಕೆಟ್ಟಿತು. ಎಲ್ಲ ದಂಡು ದಣಿದಿತ್ತು. ಆದ್ದರಿಂದ ತಿರುಗಿ ಬರಲು ಬಾದಶಹನು ಆಜ್ಞೆ ಮಾಡಿದನು. ಅನಂತರ ಕೆಲವು ದಿನಗಳ ನಂತರ ಖಾನ ಮಹಮ್ಮದ ಮತ್ತು ಮಲಿಕ ರೇಹಾನರನ್ನು ಅವರ ಸೈನ್ಯದೊಂದಿಗೆ ಗಂಜೀಕೋಟೆಯನ್ನು ವಶಪಡಿಸಿಕೊಳ್ಳಲು ಕಳಿಸಿದರು. ಅವರು ಹೋಗಿ ಆ ಮಜಬೂತಾದ ಕೋಟೆಯ ಮೇಲೆ ಹಲ್ಲೆ ಮಾಡಿ ಮುತ್ತಿಗೆ ಹಾಕಿ ಯುದ್ಧ ಪ್ರಾರಂಭಿಸಿದರು.

### ೨೬. *ಅನೇಕ ದಿನಗಳ ನಂತರ ನವಾಬ ಮುಸ್ತಫಾಖಾನನ್ನು ಕರ್ನಾಟಕದ ಕಡೆಗೆ ಕಳಿಸಿದ್ದು :*

ಅನೇಕ ದಿನಗಳ ನಂತರ ಕರ್ನಾಟಕದ ಎಲ್ಲ ರಾಜುರಗಳಲ್ಲಿ, ರಾಜಾ ರಾಯಲ ಎಂಬವನು ದೊಡ್ಡ ಶ್ರೀಮಂತ, ಹಾಗೂ ಬಹಳ ಸೈನ್ಯದ ಧಣಿಯಾಗಿದ್ದವನು ಬಹಳ ದಂಗೆ ಆರಂಭಿಸಿದ್ದಾನೆಂದು ಸುದ್ದಿ ಬಂದಿತು. ಆತನು ತನ್ನ ಹತ್ತಿರ ಬಹಳ ಸೈನ್ಯ ಹಾಗೂ ಸಂಪತ್ತು ಇದೆ ಎಂಬ ಗರ್ವದಿಂದ ತನ್ನ ತಲೆಯನ್ನು ಆಕಾಶದೆತ್ತರಕ್ಕೆ ಬೆಳೆಸಿದ್ದನು. ಯಾವ ಹಿಂದುವನ್ನಾಗಲಿ ಮುಸಲ್ಮಾನನ್ನಾಗಲಿ ತನ್ನ ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಆ ತರಫಗಳಲ್ಲಿಯ ಎಲ್ಲ ಮುಸಲ್ಮಾನ ಜನರಿಗೂ ಉಪದ್ರವವನ್ನು ಕೊಡುತ್ತಿದ್ದಾನೆಂದು ಆದಿಲಶಾಹನ ಕಿವಿಗೆ ಬಿದ್ದಿತು. ಆಗ ಬಾದಶಹನಿಗೂ ಆತನ ಎಲ್ಲ ಜನರಿಗೂ ಸಿಟ್ಟು ಬಂದಿತು. ಈ ಸೊಕ್ಕಿನ ಮನುಷ್ಯನನ್ನು ಶಿಕ್ಷಿಸಬೇಕೆಂಬ ಇರಾದೆಯಿಂದ ಎಲ್ಲ ಆಮೀರ ಜನರನ್ನು ಸೈನ್ಯವನ್ನು ಕರೆಸಿದನು. ನವಾಬ ಮುಸ್ತಫಾಖಾನನ ಸೇನಾಧಿಪತ್ಯದಲ್ಲಿ ಕರ್ನಾಟಕದ ಮೇಲೆ ದಾಳಿ ಮಾಡಲು ದಂಡನ್ನು ಕಳಿಸಿದನು.[1] ಮುಸ್ತಫಾಖಾನನು ತನಗಿಂತ ಮೊದಲು ಶಾಹಾಜಿ ರಾಜೇ ಭೋಸಲೆ ಹಾಗೂ ಅಸದಖಾನರನ್ನು ಸೈನ್ಯದೊಂದಿಗೆ ಮುಂದೆ ಕಳಿಸಿದನು. ಅನಂತರ ಮುಸ್ತಫಾಖಾನನು ತಾನು ಸ್ವತಃ ಉಳಿದ ಸೈನ್ಯದೊಂದಿಗೆ ಪರ್ವತದಂಥ ಆನೆಗಳು ಹಾಗೂ ಬಹಳಷ್ಟು ಸಾಮಾನುಸಂರಾಜಮುಗಳನ್ನು ತೆಗೆದುಕೊಂಡು ಸನ್ ೧೦೫೬ (ಕ್ರಿ.ಶ ೧೬೪೬) ಕರ್ನಾಟಕದತ್ತ ಹೊರಟನು. ಶಾಹಾಜೀರಾಜೇ ಭೋಸಲೆ ಮತ್ತು ಅಸದಖಾನರು ಮುಂದೆ ಹೋಗಿದ್ದರು.[2] ಅವರು ರಾಜಾರಾಯಲನ ಸರಹದ್ದಿನಲ್ಲಿ ಮುಟ್ಟಿದಾಗ ಅಲ್ಲಿ ದಾಮಲವಾಡ ಹಾಗೂ ಕೃಷ್ಣಾ ನಫಜೀ (?) ಎಂಬ ಇಬ್ಬರು ಕರ್ನಾಟಕದ ಶೂರರು ಇವರನ್ನು ಎದುರಿಸಿದರು. ಅವರಿಬ್ಬರೂ ರಾಜಾ ರಾಯಲನ ಕಡೆಯ ಬಹು ದೊಡ್ಡ ಕೀರ್ತಿವಂತ ಹಾಗು ನಾಮಾಂಕಿತ ಸರದಾರರಲ್ಲೊಬ್ಬರಾಗಿದ್ದರು. ಕರ್ನಾಟಕದಲ್ಲಿಯೆ ಶೂರರಾಗಿದ್ದರು. ಇಬ್ಬರ ಮಧ್ಯ ದೊಡ್ಡ ಯುದ್ಧ

1. "On the 1st day of the month of Jamadil-awwal (1056 AH - 5 June 1646) Nawab Mustaf Khan Started from Muhamdapur to conquer the countries of Karnataka and malnad..." Md Nama p. 110
2. "Nawab Mustafakhan left that place (Gadag Lakshmeshawar) on 3rd Ramzan (3 Oct 1646) and in the vicinity of that place he met Asad Khan and Shahaji Raja who were sent in advance to guard the boundries of Karnataka" - Md Nama p 111

ನಡೆಯಿತು. ಕೊನೆಗೆ ಹಿಂದುಗಳಾದ ಕರ್ನಾಟಕದ ಸೈನ್ಯವು ಮುಸಲ್ಮಾನರ ಜನರ ಮೇಲೆ ಪ್ರಬಲರಾಗಿ ಜೋರು ಮಾಡಿದರು. ಆಗ ಶಾಹಾಜೀರಾಜೇ ಭೋಸಲೆ ಮತ್ತು ಅಸದಾಖಾನರ ಸೈನ್ಯ ಸೋತಿತು. ಶಾಹಾಜಿರಾಜೇ ಭೋಸಲೆಯು ಕುಳಿತುಕೊಳ್ಳುತ್ತಿದ್ದ ಆನೆಯನ್ನು ಮತ್ತು ಸಾಕಷ್ಟು ಸಾಮಾನು ಸರಂಜಾಮುಗಳನ್ನು ಹಿಂದು ಜನರು ಲೂಟಿ ಮಾಡಿಕೊಂಡು ಹೋದರು. ಆ ಸಮಯದಲ್ಲಿ ನವಾಬ ಮುಸ್ತಫಾಖಾನನು ಏಳೆಂಟು ಮಜಲು ಹಿಂದೆ ಇದ್ದನು. ಶಾಹಾಜಿ ರಾಜೇ ಭೋಸಲೆಯ ಸೈನ್ಯದ ಸೋಲಾಗಿದೆ ಎಂದು ಮುಸ್ತಫಾಖಾನನಿಗೆ ಸುದ್ದಿ ಬಂದು ಮುಟ್ಟುತ್ತಿದ್ದಂತೆ, ಮುಸ್ತಫಾಖಾನನು ತನ್ನ ಯಶಸ್ವಿ ಸೈನ್ಯವನ್ನು ಮತ್ತು ಶಸ್ತ್ರ ಸಾಮಗ್ರಿಗಳನ್ನು ಬೆಂಗಳೂರಿಗೆ ಕಳಿಸಿ ತಾನು ಯುದ್ಧಕ್ಕಾಗಿ ಸಿದ್ಧನಾಗಿ ಅತ್ತ ಹೊರಟನು. ಹಿಂದು ಜನರ ಪ್ರಾಬಲ್ಯವಾಗಿದೆ ಎಂದು ಬಾದಶಾಹ ಗಾಜಿಗೆ ವಿನಂತಿ ಪತ್ರವನ್ನು ಕಳಿಸಿ, ಸಹಾಯಕ್ಕೆ ಸೈನ್ಯವನ್ನು ಕಳಿಸಬೇಕೆಂದೂ ಬರೆದನು. ಅದನ್ನು ಕಂಡ ಬಾದಶಹನು ತತ್‌ಕ್ಷಣ ಆಜ್ಞೆ ಹೊರಡಿಸಿ. ಗಂಜೀಕೋಟೆಯತ್ತ ಯುದ್ಧ ಮಾಡುತ್ತಿದ್ದ ಖಾನಮಹಮ್ಮದ ಹಾಗು ಮಲಿಕ ರೇಹಾನರಿಗೆ ಗುಪ್ತಚಾರರನ್ನು ಕಳಿಸಿದನು. ಗಂಜೀಕೋಟೆಯ ಯುದ್ಧವನ್ನು ನಿಲ್ಲಿಸಿ ಖಾನ ಮಹಮ್ಮದನಿಗೆ ದರಬಾರಿಗೆ ಬರಲು ಆಜ್ಞೆ ಮಾಡಿದನು. ಮಲಿಕ ರೇಹಾನ, ಅಲೀಖುದಾವಂತ ಖಾನ ಖೈರತಖಾನ ಮತ್ತು ಖಾನಮಹಮ್ಮದನ ಜೊತೆಗಿದ್ದ ಬೇರೆ ಅನೇಕ ಅಮೀರ ಜನರಿಗೆ, ಆಜ್ಞೆ ಮಾಡುತ್ತ ಅವರು ಆದಷ್ಟು ಬೇಗ ಆ ಕೋಟೆಯಿಂದ ಹೊರಟು ಮುಸ್ತಫಾಖಾನನ ಸಹಾಯಕ್ಕೆ ಹೋಗಬೇಕೆಂದು ಹೇಳಿದನು. ಅದನ್ನು ಓದಿದ ಮಲಿಕ ರೇಹಾನನು ತಿರುಗಿ ಬಂದು ವಿನಂತಿ ಪತ್ರವನ್ನು ಬರೆದು ಅದರಲ್ಲಿ "ಇತ್ತಣ ಯುದ್ಧ ತುಂಬ ದಿನಗಳಿಂದ ನಡೆದಿದೆ. ಆದ್ದರಿಂದ ಕುದುರೆ ಮುಂತಾದವುಗಳು ದಣಿದು ಕೆಲಸದ ಉಪಯೋಗಕ್ಕೆ ಬಾರದಾಗಿವೆ. ನಾನು ಕೂಡ ಪ್ರಭುಗಳ ಚರಣ ದರ್ಶನ ಮಾಡಿಕೊಂಡು ತಮ್ಮ ಆಜ್ಞೆಯಂತೆ ಅತ್ತ ಹೋಗುವೆ" ಎಂದು ಬರೆದನು. ಇಂಥ ಸಮಯದಲ್ಲಿ ಇನ್ನೊಂದು ಸುದ್ದಿ ಬಂದು, ಅದರಲ್ಲಿ ರಾಜಾರಾಯಲನು ಸ್ವತಃ ಸೈನ್ಯ ತೆಗೆದುಕೊಂಡು ಟೋಲಫಾಡಿಯಿಂದ ಮತ್ತು ಇರುವೆಗಳ ಸಾಲಿನಂತಿರುವ, ಅದಕ್ಕಿಂತ ಅಧಿಕವಾದ ಸೈನ್ಯವನ್ನು ತೆಗೆದುಕೊಂಡು ಮಾಸ್ತಿಯ ಘಟ್ಟವನ್ನು ಏರಿ ಬಂದಿದ್ದಾನೆ ಎಂದು ಬಾದಶಹನಿಗೆ ತಿಳಿಯಿತು. ಬಾದಶಹನಿಗೆ ಚಿಂತೆಯಾಯಿತು. ಮಲಿಕ ರೇಹಾನನಾದರೋ ರಾಜಧಾನಿಗೆ ಬರುವ ಕುರಿತು ವಿನಂತಿ ಪತ್ರ ಬರೆದಿದ್ದಾನೆ. ಈ ವಿನಂತಿ ಪತ್ರವನ್ನು ಈ ಸಮಯದಲ್ಲಿ ಒಪ್ಪಿಕೊಳ್ಳುವುದು ಯೋಗ್ಯವಲ್ಲ ಎಂದು ತಿಳಿದು ಮತ್ತೆ ಒಂದು ಆಜ್ಞೆಯನ್ನು ಹೊರಡಿಸಿ ಆ ಆಜ್ಞಾಪತ್ರದೊಂದಿಗೆ ತನ್ನ ಚಿತ್ರವನ್ನು ಮಲಿಕ ರೇಹಾನನಿಗೆ ಕಳಿಸಿದನು. "ಪ್ರಸಂಗ ಕಠಿಣವಾಗಿದೆ. ಕಾರ್ಯಭಾಗವು ಬಹಳ ಅವಘಡದ ಹಂತಕ್ಕೆ ಬಂದು ಮುಟ್ಟಿದೆ. ಆದ್ದರಿಂದ ನೀವು ಈ ಸಮಯದಲ್ಲಿ ರಾಜಧಾನಿಗೆ ಬರುವುದು ಯೋಗ್ಯವಲ್ಲ. ನಮ್ಮ ದರ್ಶನದ ಇಚ್ಛೆಯನ್ನು ತೋರಿಸಿದ್ದರಿಂದ ಇದರೊಂದಿಗೆ ನನ್ನ ಚಿತ್ರವನ್ನು ತೆಗೆದು ಕಳಿಸುತ್ತಿರುವೆ. ಅದನ್ನು ನೋಡಿ, ಪ್ರಭುಗಳೇ ಬಂದಿದ್ದಾರೆಂದು ತಿಳಿಯಿರಿ, ಮತ್ತು ಪ್ರತ್ಯಕ್ಷ ನಾವೇ ಬಂದು ನಿಮ್ಮೊಂದಿಗೆ ಮಾತನಾಡುತ್ತಿದ್ದೇವೆ ಎಂದು ಮನದಲ್ಲಿ ತಿಳಿದು ಅಲ್ಲಿಂದ ಅತಿ ಬೇಗ ಹೊರಡಬೇಕು. ಎರಡು ಮಜಲುಗಳನ್ನು ಒಂದೇ ಮಜಲಿನಂತೆ ನಡೆದು ನವಾಬ ಮುಸ್ತಫಾಖಾನರನ್ನು ಕೂಡಿಕೊಳ್ಳಬೇಕು" ಎಂದು ಬರೆದನು. ನವಾಬ ಮುಸ್ತಫಾಖಾನನಿಗೂ ಒಂದು ಪತ್ರವನ್ನು ಬರೆದು ಅದರಲ್ಲಿ ಮಲಿಕ ರೇಹಾನನು ಬಂದು ಅವರನ್ನು ಕೂಡಿಕೊಳ್ಳುವವರೆಗೆ ಯುದ್ಧವನ್ನು ಪ್ರಾರಂಭಿಸಬಾರದು ಎಂದು ತಿಳಿಸಿದ್ದನು. ಬಾದಶಹನ ಆಜ್ಞೆ ಬಂದು ಮುಟ್ಟುತ್ತಿದ್ದಂತೆ ಮಲಿಕ ರೇಹಾನನು, ಖೈರತಖಾನ ಮತ್ತು ಅಲಿ ಖುದಾವಂತಖಾನ ಮೊದಲಾದವರೊಂದಿಗೆ, ಕೂಚ್ ಮಾಡಿ ಆಜ್ಞೆಯಾನುಸಾರ ಎರಡು

ಮಜಲಗಳನ್ನು ಒಂದೇ ಮಜಲಿನಂತೆ ನಡೆದು, ಬೆಂಗಳೂರು ಮತ್ತು ಮಾಸ್ತಿಗಳ ಮಧ್ಯ ನವಾಬ ಮುಸ್ತಫಾಖಾನನನ್ನು ಕೂಡಿಕೊಂಡನು.

ಮುಸ್ತಫಾಖಾನನು ಅವರನ್ನೆಲ್ಲ ತುಂಬ ಆದರದಿಂದ ಬರಮಾಡಿಕೊಂಡು ಅವರವರ ಯೋಗ್ಯತಾನುಸಾರ ವಸ್ತ್ರಗಳನ್ನು, ಜಡಜವಾಹಿರಗಳನ್ನು, ಹತ್ಯಾರಗಳನ್ನು, ಪ್ರತಿಯೊಬ್ಬರಿಗೂ ನೀಡಿದನು. ಅನಂತರ ಯುದ್ಧದ ತಯಾರಿಯನ್ನು ಮಾಡಿಕೊಂಡು ರಾಜಾ ರಾಯಲನೊಂದಿಗೆ ಯುದ್ಧ ಮಾಡಲು ಹೊರಟರು. ಯೆಲೂರದ ಹತ್ತಿರ ಉಭಯ ಸೈನ್ಯಗಳು ಎದುರುಬದರಾದುವು. ಯುದ್ಧದ ದಿನ ಮಲಿಕ ರೇಹಾನನು ಬಲಬದಿಗೆ ಯೋಜನೆಹಾಕಿ, ಮಜಬೂತಾಗಿ ಮಾಡಿ ಅಬ್ದುಲ್ ಕಾದರ ಧಾಕನೊರಿಯೊಂದಿಗೆ ತನ್ನ ಖಾಸಾ ಸೈನ್ಯವನ್ನು ಕೊಟ್ಟು ಕಳಿಸಿದನು. ಅಸದಖಾನನ ಬೆನ್ನಿಗೆ ಶಾಹಾಜಿ ರಾಜೆ ಭೋಸಲೆ ಇದ್ದನು. ಮತ್ತು ಅವರಿಬ್ಬರೂ ಎಡಗಡೆಗೆ ಇದ್ದರು. ನವಾಬ ಮುಸ್ತಫಾಖಾನ ಸೈನ್ಯಕ್ಕೆ ಮತ್ತು ಖಾನನ ಪಾಗೆಗೆ ಯುದ್ಧದಲ್ಲಿ ಎಚ್ಚರಿಕೆಯಿಂದ ಇದ್ದು ಯುದ್ಧ ಮಾಡಬೇಕೆಂದು ತಾಕೀದು ಮಾಡಿದರು. ಅದರಂತೆಯೇ ಹಿಂದುಗಳ ಸೈನ್ಯ ಕೂಡ ಹೇಗೆ ಯುದ್ಧ ರಚನೆಯಾಗಿದೆಯೋ ಹಾಗೆ ಮಾಡಿ ಸಾಲುಗಳನ್ನು ಕಟ್ಟಿ ನಿಂತರು. ಯುದ್ಧ ಪ್ರಾರಂಭವಾಯಿತು. ಶಸ್ತ್ರ ಪ್ರಳಯ ಪ್ರಾರಂಭವಾಯಿತು. ಭಾರೀ ಯುದ್ಧ ನಡೆಯಿತು. ಉಭಯ ಸೈನ್ಯಗಳಲ್ಲಿಯ ಶೂರರು ಆ ರಣಭೂಮಿಯಲ್ಲಿ ಶೂರತ್ವದ ಪರಾಕ್ರಮವನ್ನು ಮಾಡ ಹತ್ತಿದರು. ಉಭಯ ಸೈನ್ಯಗಳಲ್ಲಿಯ ಜನರು ತಮ್ಮ ಗೆಳತನ, ಸ್ನೇಹಗಳನ್ನು ಹಿಂದೆ ಸರಿಸಿ ವೀರರಂತೆ ಯುದ್ಧ ಮಾಡಿದರು. ಒಮ್ಮೊಮ್ಮೆ ಹಿಂದುಗಳ ಕಡೆಯ ರಾಕ್ಷಸರಂತೆ ಇರುವ ಶೂರರು ಪಿಶಾಚಿಗಳ ಸ್ವಭಾವವನ್ನು ಆಚರಣೆ ಮಾಡುತ್ತ ಮುಸಲಮಾನರ ಸೈನ್ಯದ ಮೇಲೆ ಏರಿ ಬಂದು, ಬುದ್ಧಿ ಬಲದ ಆಟದಲ್ಲಿ ಕಾಯಿಗಳನ್ನು ಎತ್ತಿಡುವಂತೆ, ಮುಸಲ್ಮಾನರ ಕಡೆಯ ಜನರನ್ನು ಸೋಲಿಸುತ್ತಿದ್ದರು. ಒಮ್ಮೊಮ್ಮೆ ಮುಸಲಮಾನರ ಕಡೆಯ ಶೂರರು ಅತ್ಯಂತ ಕ್ರೋಧಾಯಮಾನರಾಗಿ ಶಸ್ತ್ರಗಳನ್ನೆತ್ತಿ ಹಿಂದು ಜನರ ಮೇಲೆ ಏರಿ ಹೋಗಿ ಅವರ ಸೈನ್ಯವನ್ನು ಹತ್ತಿಕ್ಕುತ್ತಿದ್ದರು. ಈ ಗದ್ದಲದಲ್ಲಿ ಹಿಡಿಹಿಡಿ ಹೊಡಿಹೊಡಿ ಎಂಬ ದನಿ ಪ್ರಳಯದಲ್ಲಿ ಕಾಲಚಕ್ರ ಕೂಡ ಚಿಂತೆಯಲ್ಲಿ ಬಿದ್ದಿತು. ಈ ಭೂಮಿ-ಆಕಾಶಗಳಲ್ಲಿ ಈ ವಿಘ್ನ ನಿವಾರಣೆಯಾಗಿ 'ಸುಖವಾಗಿರಲಿ-ಸುಖವಾಗಿರಲಿ' ಎಂಬ ಕೂಗು ಎದ್ದಿತು. ಈ ಯುದ್ಧದಲ್ಲಿ ಹಿಂದುಗಳ ಕಡೆಯ ಪರಾಕ್ರಮ, ಅತ್ಯಂತ ಶೂರ ಹಾಗೂ ಎಲ್ಲ ನಗರ ಹಾಗು ರಾಜ್ಯದಲ್ಲಿ ದಾಮುಲವಾಡನು ಪ್ರಸಿದ್ಧನಾಗಿದ್ದನು. ಅವನು ಶೂರತ್ವದಲ್ಲಿ ಮತ್ತು ಪರಾಕ್ರಮ ಮೆರೆಯುವಲ್ಲಿ ಎಲ್ಲರಿಗಿಂತ ಮುಂದೆ ಹೆಜ್ಜೆ ಇಟ್ಟು ಸೈನ್ಯವನ್ನು ಎದುರಿಸುವಲ್ಲಿ ಓಡಿ ಹೋಗಿ ಮುಸಲ್ಮಾನರ ಚದುರಂಗ ಬಲ ಮತ್ತು ನವಾಬ ಮುಸ್ತಫಾಖಾನನ ಖಾಸಾ ಸೈನ್ಯದ ಮುಂದೆ ಹೋಗಿ ಶಾಹಾಜಿ ರಾಜೇ ಭೋಸಲೆ ಮತ್ತು ಅಸದಖಾನ ಉಭಯತರ ಸೈನ್ಯದ ಮೇಲೆ ಬಿದ್ದನು. ಆ ಉಭಯತರನ್ನೂ ಬೆದರಿಸಿ ಓಡಿಸಿದನು. ಆಗ ಈ ಗದ್ದಲದಲ್ಲಿ ಅಸದಖಾನನಿಗೆ ಗಾಯವಾಗಿ ಕೆಳಗೆ ಬಿದ್ದನು. ಬಾಬಾ ಅಲೀ ಲ್ಯಾರಿ ಮತ್ತು ಖಾಜಾ ಚಂದೇವಾತಿಗಳು ಗಾಯಾಳುಗಳಾಗಿ ಕುದುರೆಯ ಮೇಲೆ ಕುಳಿತಿದ್ದರು. ಅವರು ಅಸದಖಾನನ ಹತ್ತಿರ ನಿಂತಿದ್ದರು. ಅಸದಖಾನನು ಕುದುರೆಯಿಂದ ಕೆಳಗೆ ಬಿದ್ದದ್ದನ್ನು ಕಂಡು ಬಾಬಾ ಅಲಿಯು ತಾನು ಕುದುರೆಯಿಂದ ಇಳಿದು ತನ್ನ ಕುದುರೆಯನ್ನು ಅಸದಖಾನನಿಗೆ ಕೊಡಬೇಕೆಂದು ಬಯಸಿ 'ನನ್ನ ಕುದುರೆಯನ್ನು ತೆಗೆದುಕೊಳ್ಳಿರಿ' ಎಂದು ಅಸದಖಾನನಿಗೆ ಹೇಳಿದನು. ಆದರೆ ಅಸದಖಾನನು ಒಪ್ಪಲಿಲ್ಲ. ಅಸದಖಾನನ ಕೊತವಾಲನು ಕುದುರೆಯನ್ನು ತೆಗೆದುಕೊಂಡು ಬಂದಮೇಲೆ ಅಸದಖಾನನು ತನ್ನ ಕುದುರೆಯಮೇಲೆ ಕುಳಿತನು. ಆ ಸಮಯದಲ್ಲಿ ದಾಮಲವಾಡನು ಮಹಾಪೂರ ಬಂದ ಹೊಳೆಯ ನೀರು ಉಭಯ ಕಡೆಗಳಲ್ಲಿ ಗಿಡಮರಗಳನ್ನು ಉರುಳಿಸಿ ಹರಿಯುವ ನೀರಿನಂತೆ ಗಾಬರಿ ಹುಟ್ಟಿಸಿ,

ಮದವೇರಿದ ಆನೆಯಂತೆ, ನವಾಬ ಮುಸ್ತಫಾಖಾನನ ಮೇಲೆ ಏರಿ ಬಂದನು. ದಾಮಲವಾಡನ ಪ್ರಳಯ ಭಯಂಕರ ಯುದ್ಧವನ್ನು ಕಂಡ ಮಲಿಕ ರೇಹಾನನು ಆತನ ಬೆನ್ನಹಿಂದೆ ಓಡಿ ಬಂದನು. ಮಲಿಕ ರೇಹಾನನು ಬಂದು ಮುಟ್ಟುವ ಹೊತ್ತಿಗೆ ದಾಮಲವಾಡನು ನವಾಬ ಮುಸ್ತಫಾಖಾನನ ಹತ್ತಿರ ಬಂದು ಮುಟ್ಟಿದ್ದನು. ನವಾಬ ಮುಸ್ತಫಖಾನನಾದರೋ ಎತ್ತರದ ದಿಬ್ಬದ ಮೇಲೆ ನಿಂತು ಯುದ್ಧವನ್ನು ವೀಕ್ಷಿಸುತ್ತಿದ್ದನು. ಆ ಸಮಯದಲ್ಲಿ ತಿರುಗಿ ನವಾಬನು ಕೆಳಗೆ ಇಳಿದು ಬರುವ ಇರಾದೆಯನ್ನು ಮಾಡಿದನು. ಅಷ್ಟರಲ್ಲಿ ಒಮ್ಮೆಲೆ ಮಲಿಕ ರೇಹಾನನು ದಾಮಲವಾಡನ ಹಿಂದೆ ಬೆನ್ನು ಹತ್ತಿ ಹಲ್ಲೆ ಮಾಡುತ್ತಿರುವುದು ಕಂಡಿತು. ಮಲಿಕ ರೇಹಾನನ ಡೇರೆಯ ಶಿಪಾಯಿ ತಂಬಾಜಿ ಬಂದು ನವಾಬ ಮುಸ್ತಫಾಖಾನನಿಗೆ ಹಿಂದೆ ಬರಲು ಹೇಳಿದನು. ಮಲಿಕ ರೇಹಾನನು ಹೇಗೆ ಹಲ್ಲೆ ಮಾಡುತ್ತಿದ್ದಾನೆಂಬ ಪರಾಕ್ರಮವನ್ನು ನೋಡಿರಿ ಎಂದನು. ಅದೇ ಹೊತ್ತಿಗೆ ದಾಮಲವಾಡನು ಪೂರ್ತಿ ಶಕ್ತಿಯಿಂದ ನವಾಬ ಮುಸ್ತಫಾಖಾನನ ಮೇಲೆ ಏರಿ ಬಂದು ನಿರ್ಭಯದಿಂದ ಮೇಲೆ ಹತ್ತಿ ಬರುತ್ತಿದ್ದನು. ನವಾಬ ಮುಸ್ತಫಾಖಾನನು ತಂಬಾಜಿಯ ಮಾತುಗಳನ್ನು ಕೇಳದೆ ಕೆಳಗೆ ಇಳಿದು ಬರುತ್ತಿದ್ದನು. ಆಗ ಮತ್ತೆ ತಂಬಾಜಿಯು ಕೂಗಿ 'ಕೆಳಗೆ ಇಳಿಯ ಬೇಡಿರಿ' ಎಂದು ಹೇಳುತ್ತ 'ಮತ್ತೆ ಜೋರಾಗಿ ಕೂಗುತ್ತ ನೀವು ಕೆಳಗೆ ಇಳಿಯುವುದರಿಂದ ಎಲ್ಲ ಕೆಲಸಗಳು ಕೆಡುತ್ತವೆ ಮತ್ತು ಬಾದಶಹರಿಗೆ ಅಪಕೀರ್ತಿ ಬರುತ್ತದೆ. ಆದ್ದರಿಂದ ಅಲ್ಲಾನ ಪ್ರಿತ್ಯರ್ಥವಾಗಿ ಆ ಸ್ಥಳದಿಂದ ಅಲುಗಾಡಬೇಡಿರಿ' ಎಂದು ಹೇಳಿದನು. ದನಿಯನ್ನು ಕೇಳಿದ ದಾಮಲವಾಡನು ಆನೆಯ ಮೇಲಿನಿಂದ ಹಿಂತಿರುಗಿ ನೋಡಿದಾಗ ಮಲಿಕ ರೇಹಾನನು ದೊಡ್ಡ ಮಹಾಪೂರದಂತೆ ತನ್ನ ಬೆನ್ನಹಿಂದೆ, ಬೆನ್ನು ಹತ್ತಿದ್ದಾನೆ ಎಂದು ನೋಡಿ ಹಿಂದೆ ಸರಿದನು. ನವಾಬನನ್ನು ಎದುರಿಸಲು ಹೊರಟವನು ಆ ಮಾರ್ಗವನ್ನು ಬದಲಿಸಿ ಮಲಿಕ ರೇಹಾನನನ್ನು ಎದುರಿಸಲು ಸನ್ನದ್ಧನಾದನು. ಮಲಿಕ ರೇಹಾನನ ಮೊದಲ ಹೊಡೆತಕ್ಕೆಯೇ ದಾಮಲವಾಡನು ಗಾಬರಿಯಾದನು. ಆ ಸಮಯದಲ್ಲಿ ಮಲಿಕ ರೇಹಾನನು ರುಸ್ತುಮನಂತೆ ಹಲ್ಲೆ ಮಾಡುತ್ತ ಮತ್ತು ಆಸಫದೇಯಾರನಂತೆ ಯುದ್ಧ ಪ್ರಳಯ ಮಾಡುತ್ತ ದಾಮಲವಾಡನನ್ನು ಬಾಣಗಳಿಂದ ಮತ್ತು ಭಲ್ಲೆಗಳ ಹೊಡೆತದಿಂದ ಹಣ್ಣು ಮಾಡಿ ಹಿಡಿದನು. ಆಗ ದಾಮಲವಾಡನ ಸೈನ್ಯದಲ್ಲಿ ಗಲಭೆ ಎದ್ದಿತು, ಹಿಂದುಗಳ ಕಡೆ ಸೈನ್ಯ ತುಂಬ ಗಾಬರಿಯಾಯಿತು, ಹಿಂದುಗಳು ಓಡಹತ್ತಿದರು. ಮುಸಲ್ಮಾನ ಸೈನ್ಯದ ದೊಡ್ಡ ವಿಜಯವಾಯಿತು. ಮುಸಲಮಾನರ ದೈವ ಯಶಸ್ವಿಯಾಯಿತು. ನವಾಬ ಮುಸ್ತಫಾಖಾನನು ಕೆರೆಯ ದಿಬ್ಬದ ಮೇಲೆ ನಿಂತು ಮಲಿಕ ರೇಹಾನನ ಪರಾಕ್ರಮವನ್ನು ಕಣ್ಣಾರೆ ಕಂಡನು. ಮಲಿಕ ರೇಹಾನನ ಸೈನ್ಯವು ಓಡಿಹೋಗುತ್ತಿದ್ದ ಹಿಂದುಗಳ ಸೈನ್ಯವನ್ನು ಬೆನ್ನು ಹತ್ತಿ ಅನೇಕ ಹಿಂದುಗಳನ್ನು ತಲವಾರಿನಿಂದ ಕೊಂದಿತು. ರಣಭೂಮಿಯು ಹಿಂದುಗಳ ಪ್ರೇತಗಳಿಂದ ತುಂಬಿತು. ದಾಮಲವಾಡನ ಸ್ವಂತದ ಕುಳಿತುಕೊಳ್ಳುವ ಎರಡು ಆನೆಗಳಿದ್ದುವು. ಅವುಗಳಲ್ಲಿ ಒಂದು 'ರಣಜಿತ' ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಅದನ್ನು ದಾಮಲವಾಡನ ಸಹಿತವಾಗಿ ಮತ್ತು ಆತನ ಅನೇಕ ಸೈನಿಕ ಶಸ್ತ್ರಾಸ್ತ್ರಗಳನ್ನು, ಕಿರುಕುಳ ಸಾಮಾನು ಸರಂಜಾಮುಗಳು ಮುಸಲ್ಮಾನರ ಕೈವಶವಾದುವು. ಆಗ ಅಸದಖಾನನು ಕೊಲೆಯಾದನು ಮತ್ತು ನವಾಬ ಮುಸ್ತಫಖಾನನು ಬಹಳ ಗಾಬರಿಯಾಗಿದ್ದಾನೆ. ಎಂಬ ಸುದ್ದಿ ಮಲಿಕ ರೇಹಾನನಿಗೆ ಬರುತ್ತಿದ್ದಂತೆ, ಮಲಿಕ ರೇಹಾನನು ನಾಲ್ಕು ಜನ ಸ್ವಾರರೊಂದಿಗೆ ಸೈನ್ಯದಿಂದ ಒಂದು ಕಡೆಗೆ ಹೊರಟು ನವಾಬನ ಹತ್ತಿರ ಬಂದು ಮುಟ್ಟಿದನು. ನವಾಬನು ಅತ್ಯಂತ ಆದರದಿಂದ ಮುಂದೆ ಬಂದು ಮಲಿಕ ರೇಹಾನನ ಬಲಗೈಯನ್ನು ಚುಂಬಿಸಿದನು. ನವಾಬನ ಟೊಂಕದಲ್ಲಿ ಕಟ್ಟಿದ್ದ ತಲವಾರನ್ನು, ತನ್ನ ಸ್ವಂತದ ತಲವಾರನ್ನು ನವಾಬನು ಮಲಿಕ ರೇಹಾನನ ಟೊಂಕಕ್ಕೆ ಕಟ್ಟಿದನು. ತಾನು ಕುಳಿತ ಕುದುರೆಗಳನ್ನು ಮಲಿಕ

ರೇಹಾನನಿಗೆ ಕೊಟ್ಟನು. ಹಾಗು 'ಇಂದು ನೀವು ಬಾದಶಹನ ಕೀರ್ತಿಯ ರಕ್ಷಣೆಯನ್ನು ಮಾಡಿದಿರಿ' ಎಂದು ಹೇಳುತ್ತ ನವಾಬನು 'ಶಾಹಬಾಸ-ಶಾಹಬಾಸ' ಎನ್ನುತ್ತ ವಿಜಯಪತ್ರವನ್ನು ನವಾಬನ ಹೆಸರಿನಿಂದ ಬರೆದನು.

### ೨೭. *ಒಳಸಂಚಿನಿಂದಾಗಿ ನವಾಬ ಮುಸ್ತಫಾಖಾನ ಹಾಗೂ ಮಲಿಕ ರೇಹಾನರ ಮಧ್ಯ ವಿರಸ :*

ಲೋಕ ಪ್ರಸಿದ್ಧವಾದ ವಿಷಯವೆಂದರೆ ಒಳಸಂಚುಗಾರರಿಗೆ ಜಗಳ ಹಚ್ಚುವುದು, ಪ್ರತಿಯೊಂದರಲ್ಲೂ ವಿರುದ್ಧ ಮಾಡುವುದು ವಿರಸ ಹುಟ್ಟಿಸುವುದು, ಇದು ಬಹುಪುರಾತನ ಕಾಲದಿಂದ ಬಂದುದಾಗಿದೆ. ಒಂದು ಒಳ್ಳೆಯ ಕೆಲಸ ನಡೆದಿತ್ತೆಂದರೆ, ಆ ಕೆಲಸವನ್ನು ಒಂದು ಕ್ಷಣದಲ್ಲಿ ಕೆಡಿಸಿ ಬಿಡುವುದು ಇದು ಕೂಡ ಬಹಳ ಹಳೆಯ ಕಾಲದಿಂದ ನಡೆದು ಬಂದಿದೆ. ಈ ಒಳಸಂಚುಗಾರರು ಒಳ್ಳೆಯ ನಡೆತೆಯ ಬಹಳಷ್ಟು ಜನರನ್ನು ಮುಗಿಸಿ ಬಿಡುತ್ತಾರೆ. ಮತ್ತು ಹೆಸರಾಂತ ಜನರ ಮನಸ್ಸುಗಳನ್ನು ರೆಪ್ಪೆ ಬಡಿಯುವಷ್ಟರಲ್ಲಿ ಕೆಡಿಸಿ ಬಿಡುತ್ತಾರೆ. ಗೆಳೆತನವನ್ನು ಕ್ಷಣಾರ್ಧದಲ್ಲಿ ಶತ್ರುತ್ವಕ್ಕೆ ತಿರುಗಿಸುತ್ತಾರೆ. ಇಂಥ ಜನರು ಒಂದು ರಾತ್ರಿ ನವಾಬ ಮುಸ್ತಫಾಖಾನನ ಹತ್ತಿರ ಹೋಗಿ 'ನೀವು ಈಗ ಮೊದಲಿನಂತೆ ನಿಜವಾದ ಮಾರ್ಗದಲ್ಲಿ ನಡೆಯುತ್ತಿಲ್ಲ ಎಂದು ಮಲಿಕ ರೇಹಾನನು ಹೇಳುತ್ತಿದ್ದಾನೆ' ಎಂದರು. ಮರುದಿನ ಸಬನೀಸ ಹೇಳಿದನೆಂದು ಹೇಳಿ 'ಯುದ್ಧವನ್ನು ಗೆದ್ದವನು ನಿಜವಾಗಿ ಅಸದಖಾನನು, ಮಲಿಕ ರೇಹಾನನಿಗೆ ಹೇಳಿ ಕಳಿಸುತ್ತ ಆತ ಗೆದ್ದ ಆನೆಗಳೆಲ್ಲ ಬಾದಶಹನಿಗೆ ಸೇರಿದವುಗಳು ಅವುಗಳನ್ನು ತಂದು ಸರಕಾರಕ್ಕೆ ಮುಟ್ಟಿಸಬೇಕು' ಎಂದು ಮಲಿಕ ರೇಹಾನನಿಗೆ ಹೇಳಿ ಕಳಿಸಿದನು. ಅದನ್ನು ಕೇಳಿ ಮಲಿಕ ರೇಹಾನನಿಗೆ ಬಹಳ ಕೆಡುಕೆನಿಸಿತು. ಪ್ರತಿಯಾಗಿ ಮಲಿಕ ರೇಹಾನನು ಉತ್ತರ ಕಳಿಸುತ್ತ 'ಅಸದಖಾನನ ಸುದ್ದಿ ಮತ್ತು ಯುದ್ಧದಲ್ಲಿ ನಾನು ಹೇಗೆ ಹಲ್ಲೆ ಮಾಡಿದೆನೆಂಬ ವಿಷಯ ಎಲ್ಲ ಜನರಿಗೆ ಸೂರ್ಯನಷ್ಟೆ ಪ್ರಸಿದ್ಧವಾಗಿದೆ. ಸಬನೀಸನ ಹೇಳಿಕೆಯಂತೆ, ನೀವು ಈ ತರದ ನಿರೋಪವನ್ನು ಕಳಿಸಿದ್ದೀರಿ ಎಂದು ನನಗೆ ಗೊತ್ತಾಯಿತು. ಇರಲಿ ಅದಕ್ಕೇನೂ ಚಿಂತೆಯಿಲ್ಲ. ನಾನು ತಂದ ಆನೆಗಳನ್ನು ನಿಮಗೆ ಕೊಡಲು ಸಾಧ್ಯವಿಲ್ಲ. ಬಾದಶಹರ ಹತ್ತಿರ ಬಂದು ನಜರ ಆಗಿ ನೀಡುವೆನು ಎಂದು ಉತ್ತರ ಬರೆದು ಕಳಿಸಿದನು. ಅಲ್ಲದೆ 'ಈಗ ನಾನು ನಿಮ್ಮ ಯೋಜನೆ ಯುಕ್ತಿಗಳನ್ನು ಒಪ್ಪುವುದಿಲ್ಲ, ನಿಮ್ಮೊಂದಿಗೆ ಸ್ನೇಹದಿಂದಲೂ ಇರಲಾರೆನು. ನೀವು ನಿಮ್ಮ ಸ್ವಂತದ ಆನೆಯನ್ನೇ ಕಳೆದುಕೊಂಡಿದ್ದಿರಿ ಮತ್ತು ಬಾದಶಹರ ಹೆಸರನ್ನು ನಾಶಮಾಡಿ ಅಪಕೀರ್ತಿಯನ್ನು ತಂದು ಚಿಂತೆಯ ಅರಣ್ಯದಲ್ಲಿ ದಿಕ್ಕು ತಪ್ಪಿ ತಿರುಗುತ್ತಿದ್ದಿರಿ. ನಾನು ಜಯ ದೊರಕಿಸಿ ಬಾದಶಹರ ಎಲ್ಲ ಸೇವಕರ ಮರ್ಯಾದೆಯನ್ನು ಉಳಿಸಿರುವೆ' ಎಂದೂ ಉತ್ತರ ಬರೆದು ಕಳಿಸಿದನು. ಅದನ್ನು ಓದಿದ ನವಾಬ ಮುಸ್ತಫಾಖಾನನು ಬಹಳ ಲಜ್ಜಿತನಾಗಿ ತಾನು ಇದ್ದಲ್ಲಿಯೆ ಸುಮ್ಮನೆ ಉಳಿದು ಬಿಟ್ಟನು. ತನ್ನಿಂದ ತಪ್ಪಾಗಿದೆಯೆಂದು ವಿಚಾರದಲ್ಲಿ ಬಿದ್ದು ಮಲಿಕ ರೇಹಾನನನ್ನು ರಮಿಸತೊಡಗಿದನು. ತಿರುಗಿ ವಿಶ್ವಾಸವನ್ನು ಗಳಿಸಲು ಪ್ರಯತ್ನಿಸಿದನು. ಆದರೆ ತಲವಾರ ಇಲ್ಲವೆ ಯಾವುದಾದರೊಂದು ಶಸ್ತ್ರದ ಗಾಯವಾದರೆ ಅದರಮೇಲೆ ಔಷಧೋಪಚಾರ ಹಾಗೂ ಮಲಮುಗಳ ಉಪಚಾರ ಇದೆ. ನಾಲಿಗೆ ಎಂಬ ಶಸ್ತ್ರದ ಗಾಯಕ್ಕೆ ಉಪಚಾರವೇ ಇಲ್ಲ ಎಂಬುದು ಜಗಪ್ರಸಿದ್ಧ ವಿಷಯವಾಗಿದೆ. ಉಲಕಾ ಎಂಬ ಪಕ್ಷಿ ಇದೆ. ಅದರ ಹೆಸರು ಮಾತ್ರ ಪ್ರಸಿದ್ಧವಾಗಿದೆ. ಆದರೆ ಆ ಪಕ್ಷಿ ಯಾರ ದೃಷ್ಟಿಗೂ ಬೀಳುವುದಿಲ್ಲ. ತಾತ್ಪರ್ಯವೆಂದರೆ, ವಿರಸದ ಪರದೆ ಹಾಗೂ ವೈರಭಾವನೆಯ ಮಳಮಳಿ ಉಭಯತರ ಮಧ್ಯ ಬಂದಿತ್ತು. ಬಾದಶಹ ಗಾಜೀ

ಆದಿಲಶಹನಿಗೆ ಈ ಸುದ್ದಿ ತಿಳಿದನಂತರ, ಬಾದಶಹನು ನವಾಬ ಮುಸ್ತಭಾಖಾನನಿಗೆ ಬರೆದು 'ಯುದ್ಧ ಪರಾಕ್ರಮ ಮತ್ತು ಜಯ ಯಾರು ಪಡೆದರು ಎಂಬ ವಿಷಯ ರಹಸ್ಯವಾಗಿಲ್ಲ. ಎಲ್ಲರಿಗೂ ಗೊತ್ತಿದೆ. ಮಲಿಕ ರೇಹಾನನು ತೋರಿದ ಪರಾಕ್ರಮ ಹಾಗು ಆತನ ಕೆಲಸಗಳು ಪ್ರಸಿದ್ಧವಾಗಿವೆ. ಆನೆಗಾಗಿ ಆತನ ಮನಸ್ಸನ್ನು ನೋಯಿಸುವುದು ಯೋಗ್ಯವಲ್ಲ. ಮಲಿಕ ರೇಹಾನನು ದರಬಾರಿಗೆ ಬಂದಾಗ ಆತ ಆನೆಯನ್ನೂ ತಂದು ಕೊಡುತ್ತಾನೆ. ಆತನೊಂದಿಗೆ ಸ್ನೇಹ ಬೆಳೆಸಿರಿ' ಎಂಬುದಾಗಿ ಬರೆದು ಸರಕಾರದ ವತಿಯಿಂದ ಭಾರೀ ಕಿಮ್ಮತ್ತಿನ ವಸ್ತ್ರಗಳನ್ನು, ತಲವಾರನ್ನು ಮತ್ತು ನಗದಾಗಿ ಕೂಡ ಅಮೀರ ಜನರಿಗೆ ಕಳಿಸಿದನು. ಎಲ್ಲರಿಗಿಂತ ಅಧಿಕವಾಗಿ ಮಲಿಕ ರೇಹಾನನಿಗೆ ಕಳಿಸಿದನು. ಅವನ ಮನಸ್ಸು ಖುಶಿಯಾಗುವಂತೆ ಅವನಿಗೂ ಬರೆದನು. ಇದರಿಂದಾಗಿ ನವಾಬ ಮುಸ್ತಫಾಖಾನನ ಮನಸ್ಸಿಗೆ ಬಹಳ ಕೆಡುಕೆನಿಸಿತು. ವಿಜಯ ದೊರೆತ ಅನಂತರ ಎಲ್ಲ ಅಮೀರ ಜನರು ಒಂದೆಡೆ ಸೇರಿದ್ದರು. ಅವರೆಲ್ಲ ಹೊರಟು ತಂತಮ್ಮ ಸ್ಥಳಗಳಿಗೆ ಹೋದರು. ನವಾಬ ಮುಸ್ತಫಾಖಾನನು ಚಂದಿಯ ರಾಜ್ಯವನ್ನು ಕೈವಶಪಡಿಸಿಕೊಳ್ಳಲು ತನ್ನ ಸೈನ್ಯವನ್ನು ಚಂದಿಯತ್ತ ತಿರುವಿದನು. ಮಲಿಕ ರೇಹಾನನು ಚಿತ್ರಗಲ್ ಕೋಟೆಯತ್ತ ಹೊರಟು ಬಂದನು. ಚಿತ್ರಗಲ್‌ದ ಕೋಟೆಯ ವಿಜಯದ ನಂತರ ತನ್ನ ಜಹಗೀರಿಗೆ ಹೋದನು. ಅಲ್ಲಿಗೆ ಹೋಗಿ ತನ್ನ ಇಬ್ಬರು ಹೆಣ್ಣುಮಕ್ಕಳ ಮದುವೆಯನ್ನು ಮಾಡಿದನು. ಒಬ್ಬಳನ್ನು ಬಾಂಕಾ ರೇಹಾನನಿಗೂ ಇನ್ನೊಬ್ಬಳನ್ನು ಸಿದ್ದಿ ಅಬ್ದುಲ್ ರಹಮಾನನಿಗೂ ಮದುವೆ ನಿಶ್ಚಯ ಮಾಡಿದನು. ಅದರಂತೆ ಮದುವೆಯ ಸಮಾರಂಭವೂ ನಡೆಯಿತು. ಅನಂತರ ಮಲಿಕ ರೇಹಾನನು ನವಾಬ ಮುಸ್ತಫಾಖಾನನ ಕಡೆಗೆ ಕೂಚ್ ಮಾಡಿದನು. ಚಂದಿಯ ಹತ್ತಿರ ನವಾಬನನ್ನು ಕೂಡಿಕೊಂಡು ಉಭಯತರೂ ಚಂದಿಯ ಮೇಲೆ ಹಲ್ಲೆ ಮಾಡಿದರು.

### *೨೮. ನವಾಬ ಮುಸ್ತಫಾಖಾನನು ಶಾಹಾಜೀರಾಜೇ ಭೋಸಲೆಯನ್ನು ಹಿಡಿದು ಬಂಧಿಸಿದ್ದು, ಅದರಿಂದಾಗಿ ನವಾಬನ ಬಗ್ಗೆ ಮಲಿಕ ರೇಹಾನನು ಸಂಶಯ ಪಟ್ಟು ಗಾಬರಿಯಾದದ್ದು :*

ಇದೇ ದಿನಗಳಲ್ಲಿ ಕೆಲವು ಕಾರಣಗಳಿಂದ ನವಾಬ ಮುಸ್ತಫಾಖಾನನಿಗೂ ಮತ್ತು ಶಾಹಾಜೀ ರಾಜೇ ಭೋಸಲೆ ಅವರ ಮಧ್ಯ ವಿರಸ ಉಂಟಾಗಿತ್ತು. ಶಾಹಾಜೀ ರಾಜೇ ಭೋಸಲೆಯು ನವಾಬ ಮುಸ್ತಫಾಖಾನನ ನೌಕರಿಯನ್ನು ಬಿಟ್ಟು ಶತ್ರುತ್ವ ಧಾರಣ ಮಾಡಿದನು. ಅಂದಿನಿಂದ ನವಾಬನು ಶಾಹಾಜೀ ರಾಜೇ ಭೋಸಲೆಯನ್ನು ಹಿಡಿದು ಬಂಧಿಸಬೇಕೆಂದು ಇರಾದೆ ಮಾಡಿದನು. ಒಂದು ದಿನ ಬಾಜೀರಾವ ಘೋರಪಡೆ, ಯಶವಂತರಾವ ಮತ್ತು ಅಸದಖಾನರನ್ನು ಸಿದ್ಧಮಾಡಿ ಶಾಹಾಜೀರಾಜೇ ಭೋಸಲೆಯನ್ನು ಹಿಡಿಯಲು ನಸುಕಿನಲ್ಲಿಯೇ ಕಳಿಸಿದನು. ಇಷ್ಟರಲ್ಲಿ ಶಾಹಾಜೀ ರಾಜೇ ಭೋಸಲೆಯು ಆ ರಾತ್ರಿ ಇಡಿಯಾಗಿ ವಿಲಾಸದಲ್ಲಿ ಕಳೆದಿದ್ದನು. ನಸುಕಿನಲ್ಲಿ ಹಾಸಿಗೆಯಲ್ಲಿ ಮಲಗಿ ಅದೇ ಆಗ ನಿದ್ದೆ ಹತ್ತಿತ್ತು. ಅಷ್ಟರಲ್ಲೆ ಬಾಜೀರಾವ ಘೋರಪಡೆ ಮತ್ತು ಯಶವಂತರಾವ್ ಕೂಡಿ ತನ್ನನ್ನು ಹಿಡಿಯಲು ಬಂದಿದ್ದಾರೆಂಬ ಸುದ್ದಿ ಹತ್ತಿತು. ಎಚ್ಚರದಿಂದ ಗಡಬಡಿಸಿ ಎದ್ದು ಗಾಬರಿಯಿಂದ ತನ್ನ ಡೇರೆಯಿಂದ ಹೊರ ಬಂದನು. ಕುದುರೆಯ ಮೇಲೆ ಕುಳಿತನು. ಒಬ್ಬನೇ ಎಲ್ಲಾದರೂ ಓಡಿ ಹೋಗಬೇಕೆಂದು ಹೊರಡುತ್ತಿದ್ದಂತೆ ಬಾಜೀರಾವ ಘೋರಪಡೆಯು ಆತನನ್ನು ಬೆನ್ನುಹತ್ತಿ ಹಿಡಿದನು.[೧] ನವಾಬ ಮುಸ್ತಫಾಖಾನನ ಹತ್ತಿರ ತಂದನು. ಆತನನ್ನು ಬಂಧಿಸಿ ನವಾಬನು ಸೆರೆಮನೆಯಲ್ಲಿಟ್ಟನು. ಶಾಹಾಜೀ ರಾಜೇ ಭೋಸಲೇನ ಜೊತೆಗಿದ್ದ

---

೧. "ಶಕೆ ೧೫೭೦ ಶ್ರಾವಣ ವದ್ಯ ಪ್ರತಿಪದ (೨೫ ಜುಲೈ ೧೬೪೮) ಶಾಹಾಜೀ ರಾಜೇಯನ್ನು ಮುಸ್ತಫಾಖಾನನು ಹಿಡಿದನು. ಚಂದಿಯ ಹತ್ತಿರ" ಜೇಧೆಶಕಾ ಪು-೧೬

ಮೂರು ನಾಲ್ಕು ಸಾವಿರ ಸೈನಿಕರು ಓಡಿ ಹೋದರು. ಈ ಗದ್ದಲದಲ್ಲಿ ಬಹಳಷ್ಟು ಲೂಟಿಯಾದ ಸಂಪತ್ತು ನವಾಬನ ಕೈಗೆ ಸಿಕ್ಕಿತು.

ಅನಂತರ ತುಸುವೆ ದಿನಗಳಲ್ಲಿ ಖೈರತಖಾನನು ಮರಣ ಹೊಂದಿದನು. ಅನಂತರ ನವಾಬ ಮುಸ್ತಫಾಖಾನ ಮತ್ತು ಮಲಿಕ ರೇಹಾನರ ಮಧ್ಯ ಇದ್ದ ವಿರಸದಿಂದಾಗಿ, ಮಲಿಕ ರೇಹಾನನಿಗೆ ಮುಸ್ತಫಾಖಾನನ ಭಯ ಇತ್ತು. ಆತನ ಭೆಟ್ಟಿಗೆ ಹೋದಾಗ ಮಲಿಕ ರೇಹಾನನು ತುಂಬ ಎಚ್ಚರಿಕೆಯಿಂದ ಹೋಗುತ್ತಿದ್ದನು. ಈಗ ಶಾಹಾಜೀ ರಾಜೇನನ್ನು ನವಾಬನು ಬಂಧಿಸಿದ ನಂತರ ಮಲಿಕ ರೇಹಾನನು ಮೊದಲಿನಗಿಂತ ಭಯಗೊಂಡನು. ತನ್ನ ರಕ್ಷಣೆಗಾಗಿ ಆರಿಸಿದ ಎರಡು ಸಾವಿರ ಸೈನ್ಯವನ್ನು ನೌಕರಿಗೆ ಇಟ್ಟುಕೊಂಡಿದ್ದನು. ಅಧಿಕ ಸೈನ್ಯವನ್ನು ಇಟ್ಟುಕೊಂಡಿದ್ದೇಕೆ? ಮತ್ತು ಅದರ ಕಾರಣ ಏನು? ಎಂದು ನವಾಬ ಮುಸ್ತಫಾಖಾನನು ಮಲಿಕ ರೇಹಾನನಿಗೆ ಹೇಳಿ ಕಳಿಸಿದನು. ಅದಕ್ಕೆ ಉತ್ತರವಾಗಿ ಮಲಿಕ ರೇಹಾನನು 'ನೀವು ಈ ಅರಣ್ಯದಲ್ಲಿ ಮನೆ ಮಂದಿಯಿಂದ ಮತ್ತು ಮನೆತನದಿಂದ ದೂರ ಇದ್ದು ಇಲ್ಲಿಯೇ ಉಳಿದುಕೊಂಡಿದ್ದೀರಿ. ಚಂದಿಯಂಥ ಪೂರ್ತಿ ಮಜಬೂತಾದ ನಗರ ಹಾಗೂ ಅಲ್ಲಿಯ ಮಾಲಕ ಶೂರ-ಶಕ್ತಿವಂತನಾಗಿ ಕುಳಿತಿದ್ದಾನೆ. ಈ ರಾಜ್ಯದ ರಾಜಧಾನಿ ಕರ್ನಾಟಕ ಪ್ರದೇಶವಾಗಿದೆ. ಮತ್ತು ನೀವು ಕರ್ನಾಟಕದ ಮೇಲೆ ಹಲ್ಲೆ ಮಾಡಿದ್ದೀರಿ. ಶಾಹಾಜೀ ರಾಜೇ ಭೋಸಲೆಯಂಥ ಮೋಸಗಾರನನ್ನು ಹಿಡಿದು ಸೆರೆಮನೆಯಲ್ಲಿಟ್ಟಿದ್ದೀರಿ. ಸಾಕಷ್ಟು ಶತ್ರುಗಳು ನಾಲ್ಕು ಕಡೆಗಳಿಂದಲೂ ನಿಮ್ಮನ್ನು ಕೊಲ್ಲಲು ಜಪ್ಪಿಸಿ ಕುಳಿತಿದ್ದಾರೆ. ಯಾರಿಗೆ ಗೊತ್ತು? ಒಂದು ವೇಳೆ ಕಾರ್ಯಭಾಗ ತಿರುಗಿ ಬಿದ್ದರೆ? ಮತ್ತು ಪ್ರಸಂಗ ಹೇಗೆ ಬರುತ್ತದೆ ಎಂಬುದು ತಿಳಿದಿಲ್ಲ. ಬಾದಶಹನು ನನಗೆ ಕೇಳಿದರೆ ನಾನು ಏನೆಂದು ಉತ್ತರಿಸಲಿ? ಬಾದಶಹರ ಹೆಸರನ್ನು ಸಂರಕ್ಷಿಸಲು ಮತ್ತು ನಿಮ್ಮ ರಕ್ಷಣೆಗಾಗಿ ಈ ಅಧಿಕ ಸೈನ್ಯವನ್ನು ನಾನು ಇಟ್ಟುಕೊಂಡಿದ್ದೇನೆ? ಎಂಬುದಾಗಿ ಉತ್ತರ ಕಳಿಸಿದನು. ಮಲಿಕ ರೇಹಾನನು ಎಲ್ಲ ಅಮೀರ ಜನರನ್ನು ಮತ್ತು ದಂಡಿನ ಕಾರಭಾರಿ ಮಂಡಳಿಯೊಂದಿಗೆ ಗೆಳೆತನ ಮಾಡಿಕೊಂಡು ಮತ್ತು ಬಕ್ಷೀಸುಗಳನ್ನು ಕೊಟ್ಟು, ಕೆಲವರಿಗೆ ಸಾಲ ಕೊಟ್ಟು. ಅವರ ಮೇಲೆ ಉಪಕಾರ ಮಾಡಿ ತನ್ನಂತೆ ಮಾಡಿಕೊಂಡಿದ್ದನು. ಈ ಸಮಯದಲ್ಲಿ ನವಾಬ ಮುಸ್ತಫಾಖಾನನು ಏನೆಲ್ಲ ಮಾಡಿ, ಮಲಿಕ ರೇಹಾನನನ್ನು ಶಿಕ್ಷಿಸಬೇಕೆಂದು ಬಹಳ ಪ್ರಯತ್ನ ಮಾಡಿದನು. ಆದರೆ ಅವನ ಆಟ ನಡೆಯಲಿಲ್ಲ. ಒಂದು ದಿನ ಮಲಿಕ ರೇಹಾನನು ಸಕಲ ಸಿದ್ಧತೆಗಳೊಂದಿಗೆ ರಾತ್ರಿ ಹೊರಟಿದ್ದನು. ಆಗ ನವಾಬ ಮುಸ್ತಫಾಖಾನನು ಜರೂರಿ ಕೆಲಸವಿದ್ದುದರಿಂದ ನನ್ನನ್ನು ಭೆಟ್ಟಿಯಾಗಿ ಹೋಗು ಎಂದು ಹೇಳಿ ಕಳಿಸಿದನು, ಮಲಿಕ ರೇಹಾನನು ತನ್ನ ಸೈನ್ಯವನ್ನು ಬಿಟ್ಟು ಕೆಲವು ಜನರನ್ನು ಜೊತೆಮಾಡಿಕೊಂಡು ನವಾಬ ಮುಸ್ತಫಾಖಾನನ ಹತ್ತಿರ ಬಂದನು.

ಯಶವಂತರಾವ ಮತ್ತು ಅಸದಖಾನರು ತಯಾರಿಯೊಂದಿಗೆಯೇ ಮಲಿಕ ರೇಹಾನನ ಹಿಂದೆ ಬಂದು ಮುಟ್ಟಿದರು. ಮಲಿಕ ರೇಹಾನನ ಸೈನ್ಯವು ಆತನ ಶೋಧದಲ್ಲಿ ಮತ್ತು ಎಚ್ಚರಿಕೆಯಿಂದಲೇ ಇತ್ತು. ಅವರಿಗೆ ಈ ಸುದ್ದಿ ತಿಳಿಯುತ್ತಿದ್ದಂತೆ ಮಲಿಕ ರೇಹಾನನ ದಂಡಿನಲ್ಲಿಯ ಜನರ ಗುಂಪಿಗೆ ಗುಂಪೇ ಬಹಳ ವೇಗದಿಂದ ಮಲಿಕ ರೇಹಾನನ ಹತ್ತಿರ ಬಂದು ಮುಟ್ಟಿತು. ಆಗ ನವಾಬ ಮುಸ್ತಫಖಾನನು ಬಹಳ ಗಾಬರಿಯಾದನು. ಬಹಳ ಕಕ್ಕುಲತೆಯಿಂದ ಭೋಜನದ ಸಿದ್ಧತೆಯನ್ನು ಮಾಡಿ ಊಟಕ್ಕೆ ಕರೆಯಲು ಕಳಿಸಿದನು. ಅನಂತರ ಎರಡು ದಿನಗಳಾದ ಮೇಲೆ ನವಾಬ ಮುಸ್ತಫಾಖಾನನು ಸ್ವತಃ ಒಬ್ಬನೇ ಮಲಿಕ ರೇಹಾನನ ಡೇರೆಗೆ ಬಂದು ಆತನ ಚಿತ್ತವನ್ನು ಸಮಾಧಾನ ಪಡಿಸಿದನು. ಇದನ್ನೆಲ್ಲ ಕೇಳಿದ ಬಾದಶಹನು

ನವಾಬ ಮುಸ್ತಫಾಖಾನನಿಗೆ ಬರೆದು ಮಲಿಕ ರೇಹಾನನು ದೊಡ್ಡ ಮನುಷ್ಯ, ವಜೀರ, ಸಾಕಷ್ಟು ಸೈನ್ಯವನ್ನು ಹೊಂದಿದವನಾಗಿದ್ದಾನೆ. ಸರಕಾರದ ನೌಕರನಿದ್ದು ರಾಜ್ಯದ ಕಲ್ಯಾಣವನ್ನು ಬಯಸುವವನಾಗಿದ್ದಾನೆ. ಅವನ ಮನಸ್ಸು ತಿರುಗಿದರೆ ರಾಜ್ಯಕ್ಕೆಯೇ ಹಾನಿಯಾದೀತು. ಆದ್ದರಿಂದ ಅವನನ್ನು ಸಮಾಧಾನಪಡಿಸಿ ವಿಶ್ವಾಸಕ್ಕೆ ತೆಗೆದುಕೊಂಡು ಜೊತೆಯಾಗಿರಬೇಕು. ಎಂಬುದಾಗಿ ಬರೆದು ಕಳಿಸಿದನು. ಅಲ್ಲದೆ ಮಲಿಕ ರೇಹಾನಿನಗೂ ಬರೆದು ಒಂದು ವೇಳೆ ಮುಸ್ತಫಾಖಾನನ ಮೇಲೆ ನಿನ್ನ ವಿಶ್ವಾಸವಿರದಿದ್ದರೆ ನೀನು ನಿನ್ನ ಸ್ಥಳದಲ್ಲಿ ಎಚ್ಚರಿಕೆಯಿಂದ ಸಾವಧಾನವಾಗಿ ಇರಬೇಕು. ನಾನು ನಿನ್ನೊಂದಿಗಿದ್ದೇನೆ. ಎಂಬುದಾಗಿ ಬರೆದು ತಿಳಿಸಿದನು.

### *೨೯. ಚಂದಿಯ ಮೇಲೆ ಹಲ್ಲೆ ಮಾಡುವಾಗ ಮುಸ್ತಫಾಖಾನನು ಮರಣ ಹೊಂದಿದ್ದು :*

ಈ ದಿನಗಳಲ್ಲಿ ಇನ್ನೂ ಚಂದಿಯ ಮೇಲೆ ಹಲ್ಲೆ ನಡೆದಿತ್ತು. ಹಲ್ಲೆ ಪ್ರಾರಂಭವಾಗಿ ಒಂದು ವರುಷ ಕಳೆದು ಹೋಗಿತ್ತು. ಈ ಮಧ್ಯ ನವಾಬ ಮುಸ್ತಫಾಖಾನನು ಪ್ರಾಣಾಂತಿಕ ಬೇನೆಯಿಂದ ಬಳಲ ಹತ್ತಿದನು. ಬೇನೆಯೂ ಬಹಳ ದಿನ ಮುಂದುವರಿಯಿತು. ವೈದ್ಯ ಜನರ ಔಷಧೋಪಚಾರ ಫಲ ಕೊಡುತ್ತಿರಲಿಲ್ಲ. ಆದ್ದರಿಂದ ಅಶಕ್ತನಾಗಿ ಹಾಸುಗೆಯ ಮೇಲೆಯೆ ಬಿದ್ದಿರಬೇಕಾಯಿತು. ದಿನದಿಂದ ದಿನಕ್ಕೆ ರೋಗ ಉಲ್ಬಣವಾಗಹತ್ತಿತು. ಮಲಿಕ ರೇಹಾನನು ಈ ವಿಷಯವನ್ನು ಬಾದಶಾಹ ಗಾಜೀ ಆದಿಲಶಹನಿಗೆ ತಿಳಿಸುತ್ತ, 'ನವಾಬನು ಈ ರೋಗದಿಂದ ಉಳಿಯುವ ಲಕ್ಷಣಗಳಿಲ್ಲ' ಎಂದೂ ತಿಳಿಸಿದನು. ಆದ್ದರಿಂದ ಖಾನಮೊಹಮ್ಮದನಿಗೆ ಇಲ್ಲಿಗೆ ಬಂದು ಮುಟ್ಟಲು ಆಜ್ಞೆಯಾಗಬೇಕೆಂದು ವಿನಂತಿ ಪತ್ರವನ್ನು ಬರೆದನು. ಬಾದಶಹನು ತಕ್ಷಣ ಖಾನಮೊಹಮ್ಮದನನ್ನು ಆತನ ಜೊತೆಗೆ ೭ ಸಾವಿರ ಸೈನಿಕರೊಂದಿಗೆ ನಂದಿಹಾಳದಿಂದ ನವಾಬ ಮುಸ್ತಫಾಖಾನನ ಹತ್ತಿರ ಹೋಗಿ, ಅಲ್ಲಿರುವ ಮಲಿಕ ರೇಹಾನನ್ನು ಕೂಡಿಕೊಳ್ಳಬೇಕೆಂದೂ ಮತ್ತು ಚಂದಿ ಕೋಟೆಯನ್ನು ಕೈವಶ ಮಾಡಿಕೊಳ್ಳಲು ಪ್ರಯತ್ನ ಮಾಡಬೇಕೆಂದು ಬರೆದು ಕಳಿಸಿದನು. ಅಫಜಲಖಾನನನ್ನು ಶಾಹಾಜೀ ರಾಜೇ ಭೋಸಲೆಯನ್ನು ಕರೆತರಲು ಕಳಿಸಿದನು. ಖಾಜಾಸರಾ, ಮಲಿಕ ಎತಬಾರಖಾನ ಮೊದಲಾದ ವಿಶ್ವಾಸಿಕರನ್ನು ಶಾಹಾಜಿ ರಾಜೇ ಭೋಸಲೆಯ ಮತ್ತು ಮರಣ ಹೊಂದಿದ್ದ ಖೈರತಖಾನನ ಸಂಪತ್ತನ್ನು ಜಪ್ತಿ ಮಾಡಿ ತರಲು ಕಳಿಸಿದನು. ಈ ಜನರು ಇನ್ನೂ ಮಾರ್ಗದಲ್ಲಿಯೆ ಇದ್ದರು. ಆಗ ನವಾಬ ಮುಸ್ತಫಾಖಾನನು ದಿನಾಂಕ ೩ ಜಿಲ್ಹೇಜ ತಿಂಗಳು ಗುರುವಾರದಿನ ಐದನೆಯ ತಾಸಿಗೆ, ಹಿಜರಿಸನ್೧೦೫೮ (೨ ಡಿಶಂಬರ ೧೬೪೮) ಮರಣ ಹೊಂದಿದನು. ನವಾಬ ಮುಸ್ತಫಾಖಾನನು, ಸಾಯುವ ಕಾಲಕ್ಕೆ ಮಲಿಕ ರೇಹಾನನನ್ನು ಕರೆದು ಅವನ ವಶಕ್ಕೆ ಸರಕಾರಿ ಬಾದಶಾಹಿಯ ಏನೆಲ್ಲ ಸಾಮಾನುಗಳು, ನಗದು ಹಣ ಹಾಗೂ ತನ್ನ ಖಾಸಗಿ ಸಂಪತ್ತಿನ ಲೆಕ್ಕ ಮಾಡಿ ಕೊಟ್ಟನು. ಖಾನಮಹಮ್ಮದನು ಬರುವವರೆಗೆ ಶಾಹಾಜೀ ರಾಜೇ ಭೋಸಲೆಯ ವ್ಯವಸ್ಥೆಯನ್ನು ಬಹಳ ಸಾವಧಾನದಿಂದ ಮಾಡುತ್ತ ಹೋಗಬೇಕೆಂದು ಹೇಳಿದನು. 'ಚಂದಿಯ ಮೇಲಿನ ಹಲ್ಲೆಯನ್ನು ಪೂರ್ಣ ಯತ್ನದಿಂದ ಮತ್ತು ಬಹಳ ಶಕ್ತಿಯಿಂದ ಮಾಡುತ್ತ ಹೋಗಿರಿ, ಒಂದು ಕೂದಲೆಳೆಯಷ್ಟೂ ನಿಷ್ಕಾಳಜ ಮಾಡಬೇಡಿರಿ' ಎಂದು ಹೇಳಿ ಸತ್ತನು. ನವಾಬ ಮುಸ್ತಫಾಖಾನನು ಸತ್ತನಂತರ, ಮಲಿಕ ರೇಹಾನನು ಯಶವಂತರಾಯನಿಗೆ ಮತ್ತು ಅಸದಖಾನನಿಗೆ ಪೂರ್ಣ ಭರವಸೆಯನ್ನಿತ್ತು ನವಾಬ ಮುಸ್ತಫಾಖಾನನ ಖಾಸಾ ಜನರನ್ನು ಅವರಿಬ್ಬರ ವಶಕ್ಕೆ ಕೊಟ್ಟನು. ಎರಡೂವರೆ ಸಾವಿರ ಹೊನ್ನುಗಳನ್ನು ಕೊಟ್ಟು ನವಾಬ ಮುಸ್ತಫಾಖಾನನ ಹೆಣವನ್ನು

ಬಹಳ ವೈಭವದಿಂದ ವಿಜಾಪುರಕ್ಕೆ ಕಳಿಸಿದನು. ಮಲಿಕ ಎತಬಾರಖಾನನು ಶಾಹಾಜೀ ರಾಜೇ ಭೋಸಲೆಯ ಸಾಮಾನು ಸರಂಜಾಮುಗಳನ್ನು ಜಪ್ತಿ ಮಾಡಿದ ನಂತರ ಮತ್ತು ಖೈರತಖಾನನ ಸಂಪತ್ತನ್ನೆಲ್ಲ ಜಾಮದಾರಖಾನೆಯಲ್ಲಿ ದಾಖಲು ಮಾಡಿದ ನಂತರ, ನವಾಬ ಮುಸ್ತಫಾಖಾನನ ಎಲ್ಲ ಕಾರಖಾನೆಗಳಿಗೂ ಬಾದಶಹರ ಮೊಹರುಗಳನ್ನು ಒತ್ತಿದನು. ಖಾನ ಮಹಮ್ಮದನು ಬಾದಶಹರ ಆಜ್ಞೆ ಬಂದು ಮುಟ್ಟುತ್ತಿದ್ದಂತೆ, ನಂದಿಹಾಳದಿಂದ ತನ್ನ ಸೈನ್ಯದೊಂದಿಗೆ ಹೊರಟು, ಚಂದಿಯ ಕಡೆಗೆ ಹೋಗಲು ಕೂಚ್ ಮಾಡಿದನು. ಮಲಿಕ ರೇಹಾನನು, ನವಾಬ ಮುಸ್ತಫಾಖಾನನು ಸತ್ತನಂತರ ಎಲ್ಲ ಅಮೀರ ಜನರಿಗೆ ಭರವಸೆಯನ್ನಿತ್ತು, ಚಿತ್ತ ಸಮಾಧಾನಗೊಳಿಸಿ ಮತ್ತು ಸೈನ್ಯಕ್ಕೂ ಪೂರ್ಣ ಧೈರ್ಯ ಕೊಟ್ಟು, ನಗದಾಗಿ ೨೫ ಸಾವಿರ ಹೊನ್ನುಗಳನ್ನು ಸೈನಿಕರ ತಿಂಗಳು ಬಾಕಿ ವೇತನವನ್ನು ಬಾದಶಹರ ಖಜಾನೆಯಿಂದ ಕೊಡಿಸಿದನು. ಚಂದಿಯ ಮೇಲೆ ಮೊದಲಿನಕ್ಕಿಂತ ಅಧಿಕವಾಗಿ ಮತ್ತು ಬಹಳ ಕಠಿಣ ಹಲ್ಲೆಯನ್ನು ಮಾಡಿದನು. ಅತ್ತ ಕಡೆಯ ತುಸು ಪ್ರದೇಶಗಳು ಈ ಮೊದಲು ಕುತುಬಶಾಹಿಯ ಜನರ ಖರ್ಚಿಗಾಗಿ ಬಂದಿದ್ದವಾದ್ದರಿಂದ, ಕುತುಬಶಾಹನು ಆ ಪ್ರದೇಶಗಳ ರಕ್ಷಣೆಗಾಗಿ ಮೀರ ಜುಮ್ಲಾನನ್ನು ನಿಯಮಿಸಿದ್ದನು. ಆತನು ಯೆಲೂರು ಸರಹದ್ದಿನಲ್ಲಿದ್ದ ಸಿವರಿಘಾಟ ಎಂಬ ಗ್ರಾಮದಲ್ಲಿ ಇರುತ್ತಿದ್ದನು. ಅದು ಚಂದಿಯಿಂದ ಐದು ಕೋಸಗಳ ಅಂತರದಲ್ಲಿದೆ. ಈ ಮೊದಲು ಮೀರ ಜುಮ್ಲಾನು ನವಾಬ ಮುಸ್ತಫಾಖಾನನೊಂದಿಗೆ ಬಹಳ ಸ್ನೇಹದಿಂದ ಇರುತ್ತಿದ್ದನು. ಚಂದಿಯನ್ನು ಗೆದ್ದ ಮೇಲೆ ನವಾಬ ಮುಸ್ತಫಾಖಾನನು ಚಂದಿಯಲ್ಲಿ ಹಾಗೂ ಮೀರ ಜುಮ್ಲಾನು ಗಂಜೀಕೋಟದಲ್ಲಿ ಇದ್ದು ಬಿಡಬೇಕೆಂದು ಉಭಯತರೂ ನಿರ್ಧರಿಸಿದ್ದರು.

ಉಭಯತರು ಒಬ್ಬರೊಬ್ಬರಲ್ಲಿ ಪ್ರತಿಯೊಂದು ಕೆಲಸದ ಬಗ್ಗೆ ಪರಸ್ಪರ ವಿಚಾರಿಸಿ, ಒಂದೇ ಮನದಿಂದ ಒಬ್ಬರೊಬ್ಬರಿಗೆ ಸಹಾಯ ಮಾಡಬೇಕೆಂದೂ ಠರಾವಿಸಿದ್ದರು. ಆದರೆ ನವಾಬ ಮುಸ್ತಫಾಖಾನನು ಸತ್ತನಂತರ, ಮೀರ ಜುಮ್ಲಾನ ಮನದಲ್ಲಿ ಬೇರೆಯೇ ವಿಚಾರ ಬಂದಿತು. "ಬಹು ಸೈನ್ಯದ ಸರದಾರ ನವಾಬ ಮುಸ್ತಫಾಖಾನನು ಸತ್ತ. ಆತನ ಸೈನ್ಯಕ್ಕೆ ದಿಕ್ಕಿಲ್ಲದಾಯಿತು. ಖೈರತಖಾನನೂ ಸತ್ತ ಶಾಹಾಜಿ ರಾಜೇ ಭೋಸಲೆ ಕೂಡ ಸಂಕಟದ ಪಾಶದಲ್ಲಿ ಬಿದ್ದಿದ್ದಾನೆ. ಮಲಿಕ ರೇಹಾನನೊಬ್ಬನೇ ಏನು ಮಾಡಿಯಾನು? ನಿರೋಪಾಯನಾಗಿ ಚಿಂತೆಯಲ್ಲಿ ಬಿದ್ದು ಚಂದಿಯ ಮೇಲಿನ ಹಲ್ಲೆಯನ್ನು ಬಿಟ್ಟುಕೊಟ್ಟು ತನ್ನ ಊರಿಗೆ ಹೊರಟು ಹೋಗುತ್ತಾನೆ. ಅನಂತರ ನಾನು ಚಂದಿಯನ್ನು ಕೈವಶ ಮಾಡಿಕೊಂಡು ಚಂದಿಯ ರಾಜ್ಯವನ್ನು ತೆಗೆದುಕೊಂಡು ಪ್ರಬಲನಾಗುತ್ತೇನೆ" ಎಂದು ಮನಸ್ಸಿನಲ್ಲಿ ಮಾಡಿದನು. ಈ ವಿಷಯದಲ್ಲಿ ತುಸು ಸುದ್ದಿ ಮಲಿಕ ರೇಹಾನನ ಕಿವಿಗೆ ಬಿತ್ತು. ಮಲಿಕ ರೇಹಾನನು ಮೀರ ಜುಮ್ಲಾನ ಮನದಲ್ಲಿಯ ಭಾವವನ್ನು ತಿಳಿದು ಅವನಿಗೇ ನಿರೋಪ ಹೇಳಿ ಕಳಿಸಿದನು. "ನೀನು ಇಲ್ಲಿ ಇದ್ದುದರಿಂದಲೇ ಈ ಎಲ್ಲ ಕೆಲಸಗಳು ಕೆಡಲು ಕಾರಣಗಳಾಗಿವೆ. ಕೋಟೆಯ ಒಳಬದಿಯಲ್ಲಿ ಇರುವವರಿಗೆ ನಿಮ್ಮ ಬೆಂಬಲ ಹಾಗೂ ಆಶ್ರಯವಿದೆ. ಆದ್ದರಿಂದ ಈಗ ನೀವು ಇಲ್ಲಿಂದ ಬಹುದೂರ ಹೋಗಿ ನಿಮ್ಮ ಊರಲ್ಲಿ ಇರುವುದೇ ನಿಮಗೆ ಸೂಕ್ತವೆಂದು ಕಾಣುತ್ತದೆ. ಪ್ರಧಾನಿ ಪದವಿ ನನ್ನ ಕೈಯಲ್ಲಿಲ್ಲ. ಒಂದು ವೇಳೆ, ಕೆಲಸ ಕೆಟ್ಟು, ಪ್ರಸಂಗವು ವಿಪರೀತಕ್ಕೆ ಹೋದರೆ, ನಮ್ಮ ಮೇಲೆ ಬರಬಾರದು. ನವಾಬ ಮುಸ್ತಫಾಖಾನರು ಸತ್ತರೆ ಏನಾಯಿತು? ನಾನು ಜೀವಂತ ಇದ್ದೇನಲ್ಲ. ನನ್ನ ಜೀವವಿರುವವರೆಗೂ ನಾನು ಬಾದಶಹರ ಆಜ್ಞೆಯಂತೆ ನಡೆಯುತ್ತೇನೆ ಅದರಲ್ಲಿ ಕೂದಲೆಳೆಯಷ್ಟೂ ಅಂತರ ಮಾಡುವವನಲ್ಲ" ಎಂಬುದಾಗಿ ಹೇಳಿ ಕಳಿಸಿದನು. ಮಲಿಕ ರೇಹಾನನ ದೃಢ ನಿರ್ಧಾರವನ್ನು ಕಂಡ ಮೀರ ಜುಮ್ಲಾನು ಸುಮ್ಮನಿರುವುದು ಬಿಟ್ಟು ಬೇರೆ ಉಪಾಯವೇ

ಇಲ್ಲವೆಂದು ತಿಳಿದು ಅಲ್ಲಿಂದ ಹೊರಟು ದೂರ ಹೋಗಿ, ಯೆಲೂರಿನಿಂದ ಏಳು ಕೋಸುಗಳ ಅಂತರದಲ್ಲಿರುವ 'ವಸವಾತಿ' ಎಂಬ ಊರಲ್ಲಿ ಇರಹತ್ತಿದನು. ಇದೇ ಹೊತ್ತಿಗೆ ಖಾನ ಮಹಮ್ಮದನು ತನ್ನ ಸೈನ್ಯದೊಂದಿಗೆ ಬಂದು ಸೇರಿಕೊಂಡನು. ಖಾನ ಮಹಮ್ಮದ ಹಾಗೂ ಮಲಿಕ ರೇಹಾನರು, ಚಂದಿಯ ಮೇಲಿನ ಹಲ್ಲೆಯನ್ನು ದ್ವಿಗುಣಗೊಳಿಸಿದರು. ಬರಬರುತ್ತ ಕೋಟೆಯಲ್ಲಿಯ ಸಾಮಾನುಗಳೂ ತೀರುತ್ತ ಬಂದು ಕೋಟೆಯ ಒಳಗಿನ ಜನರಿಗೆ ಬಹಳ ಕಠಿಣ ಪ್ರಸಂಗ ಬಂದಿತು.

### ೩೦. *ಚಂದೀ ಕೋಟೆಯ ಕೈವಶ ಮತ್ತು ಕರ್ನಾಟಕದ ಎಲ್ಲ ಪ್ರದೇಶಗಳು ಸುಲ್ತಾನ ಮಹಮ್ಮದನ ವಶಕ್ಕೆ :*

ಚೆಂದಿಯಲ್ಲಿ ರಾಜಾ ರೂಪಾನಾಯಕನು ಒಡೆಯನಾಗಿದ್ದು ಆಗರ್ಭ ಶ್ರೀಮಂತಿಕೆ ಇತ್ತು. ೭೦೦ ವರುಷಗಳಿಂದ ಈ ಮನೆತನದ ಪ್ರಭುತ್ವ ನಡೆದಿತ್ತು. ಅಲ್ಲಿಯವರೆಗೂ ಈ ರಾಜ್ಯಕ್ಕೆ ಯಾರಿಂದಲೂ ಉಪದ್ರವವಾಗಿರಲಿಲ್ಲ. ರಾಜ್ಯವೂ ಜನಸಮೃದ್ಧಿಯಿಂದ ಇತ್ತು. ರೂಪನಾಯಕನು ತನ್ನ ದುರ್ನಡತೆಯಿಂದಾಗಿ, ತಾರುಣ್ಯ ಹಾಗೂ ಮಧ್ಯವಯಸ್ಸನ್ನು ಹಗಲೂರಾತ್ರಿ ಐಷಾರಾಮಿನಲ್ಲಿ ಭೋಗದಲ್ಲಿ ಕಳೆದು ರಾಜ್ಯದ ವ್ಯವಸ್ಥೆ ಶಿಥಿಲವಾಗಿತ್ತು. ಅಪರಾಧಿಗಳನ್ನು ಶಿಕ್ಷಿಸುವಲ್ಲಿ ರಾಜ್ಯದ ಎಲ್ಲ ಕೆಲಸಗಳಲ್ಲಿ ನಿಷ್ಕಾಳಜಿ ಇತ್ತು. ಹೀಗಾಗಿ ಎಲ್ಲ ಜಮೇದಾರರು ಕರ್ನಾಟಕದ ಸರಹದ್ದಿನಲ್ಲಿಯ ತಾಲೂಕು-ವಿಭಾಗಗಳಲ್ಲಿ ಇರುತ್ತಿದ್ದ ಜನರು, ಬಾಂದರೆಯ ರಾಜ, ಚಂದಾವರದ ರಾಜ ಮತ್ತು ಚಂದೀಯ ರಾಜನ ಆಜ್ಞೆಯಂತೆ ನಡೆಯುವುದನ್ನು ಬಿಟ್ಟು ಈ ಹಲ್ಲೆಯ ಸಮಯದಲ್ಲಿ ಚಂದಿಯ ರಾಜನಿಗೆ ಯಾರೂ ಸಹಾಯ ಮಾಡಲಿಲ್ಲ. ಕೊನೆಗೆ ಬಹಳ ದಿನ ಹಲ್ಲೆ ಮುಂದುವರೆದು ಕೋಟೆಯಲ್ಲಿಯ ಆಹಾರ ಸಾಮಗ್ರಿಗಳೂ ಸಂಪುಷ್ಟಕ್ಕೆ ಬಂದುವು. ಈ ದಿಶೆಯಲ್ಲೂ ಯಾರಿಂದಲೂ ಸಹಾಯ ದೊರೆಯಲಿಲ್ಲ. ಆದ್ದರಿಂದ ನಿರೋಪಾಯನಾಗಿ ಚಂದಿ ಕೋಟೆಯನ್ನು ದಿನಾಂಕ ಇಪ್ಪತ್ತೆರಡು ಜಿಲ್ಹೇಜ ತಿಂಗಳು ಬುಧವಾರ ಹಿಜರಿ ಸನ್ ೧೦೫೯ ರಂದು (೧೯ ಡಿಶೆಂಬರ ೧೬೪೯) ಸುಲ್ತಾನ ಮಹಮ್ಮದ ಆದಿಲಶಾಹಿ ಬಾದಶಹ ಗಾಜಿಯ ಕಡೆಯ ಶೂರರಾದ ಮಲಿಕ ರೇಹಾನ ಮತ್ತು ಖಾನಮಹಮ್ಮದರ ವಶಕ್ಕೆ ಕೊಟ್ಟನು. ಕರ್ನಾಟಕದ ಚಂದಿಯಲ್ಲಿ ಸಾವಿರ ವರುಷಗಳಿಂದ ಹಿಂದು ಜನರ ದೇವತೆಗಳ ಪೂಜೆ ಮಾಡುವ ಪರಿಪಾಠವಿತ್ತು. ಅಲ್ಲಿ ಆದಿಲಶಾಹ ಬಾದಶಹ ಗಾಜಿಯು ಮಹಮದೀ ಧರ್ಮದ ದೀಪವನ್ನು ಹಚ್ಚಿದನು. ಚಂದಿಯ ಮೇಲಿನ ಹಲ್ಲೆ ಪ್ರಾರಂಭವಾದಂದಿನಿಂದ ವಿಜಯ ಸಾಧಿಸುವವರೆಗೆ ಭಾರೀ ಕಿಮ್ಮತ್ತಿನ ಜಡಜವಾಹಿರಗಳು ಮತ್ತು ಜಡಾವದಾರ ಹತ್ಯಾರಗಳು ಅಲ್ಲದೆ ಅನೇಕ ಉತ್ತಮ ಪದಾರ್ಥಗಳು ಶಸ್ತ್ರಾಸ್ತ್ರಗಳು, ನಗದು ಹಣ ಒಟ್ಟಾರೆ ನಾಲ್ಕು ಕೋಟಿ ಹೊನ್ನುಗಳಷ್ಟು ಸಂಪತ್ತು, ಬಾದಶಾಹ ಗಾಜಿಯ ಖಜಾನೆಗೆ ಬಂದು ಸೇರಿದುವು. ಇದು ಬಿಟ್ಟು ಲೂಟಿ ಮಾಡುವಾಗ ಆದಿಲಶಾಹಿ ಸೈನಿಕರ ಕೈಗೆ ಸಿಕ್ಕ ಸಂಪತ್ತಿನ ಲೆಕ್ಕ ಇದರಲ್ಲಿ ಸೇರಿಲ್ಲ. ಇಷ್ಟೊಂದು ಸಂಪತ್ತು ಲೂಟಿಯಾಯಿತು. ಚಂದಿಯ ಮೇಲೆ ಹಲ್ಲೆ ಮಾಡಿ ಮುಸಲ್ಮಾನರ ವಿಜಯವಾದ ನಂತರ ಅವರ ಧರ್ಮದ ಪ್ರಾಬಲ್ಯ ಹಾಗೂ ಧರ್ಮಾಚರಣೆ ಅತ್ಯಂತ ಪ್ರಬಲವಾಯಿತು. ಸಾವಕಾಶವಾಗಿ ಕರ್ನಾಟಕದಲ್ಲಿ ಮತ್ತು ಕರ್ನಾಟಕದ ಸರಹದ್ದಿನಲ್ಲಿ ಇದ್ದ ಕೋಟೆಗಳು ಹಾಗೂ ಯಾವ ಪ್ರದೇಶ ಮತ್ತು ಕೋಟೆಗಳಲ್ಲಿ ಮುಸಲ್ಮಾನ ಜನರ ನೆರಳು ಕೂಡ ಬಿದ್ದಿರಲಿಲ್ಲವೋ, ಯಾವ ಸಮಯದಲ್ಲೂ ಮುಸಲ್ಮಾನರ ಕುದುರೆಗಳ ಖುರಪುಟಗಳಿಗೆ ಕರ್ನಾಟಕದ ಸರಹದ್ದಿನ ಭೂಮಿಯ ಧೂಳು ಕೂಡ ತಾಕಿರಲಿಲ್ಲವೋ ಆ

ಕರ್ನಾಟಕದ ಎಲ್ಲ ಪ್ರದೇಶಗಳು ಬಾದಶಹ ಗಾಜಿಯ ಕೈಗೆ ಬಂದುವು. ಕರ್ನಾಟಕದಲ್ಲಿಯ ನಗರ-ನಗರಗಳಲ್ಲಿ ಮತ್ತೆಲ್ಲ ಪ್ರದೇಶಗಳಲ್ಲಿ ಬಹಳ ದೇವರ ದೇವಾಲಯಗಳಿದ್ದುವು. ಅವುಗಳನ್ನೆಲ್ಲ ಕೆಡವಿ ಆಮೂಲಾಗ್ರ ಅಗೆದು ತೆಗೆದು ಆ ಸ್ಥಳಗಳಲ್ಲಿ ಮಸೀದಿಗಳನ್ನು ಕಟ್ಟಿದರು. ಅಲ್ಲಿ ನಮಾಜ ಓದುವುದು ಮತ್ತು ಖುತಬಾ ಓದುವುದು, ಬಾಂಗ ಕೊಡುವುದೆಂದು ನಿರ್ಧರಿಸಿದರು. ನಮಾಜ ಓದಲು ಮತ್ತು ಬಾಂಗ ಕೊಡಲು ಪೈಗಂಬರರ ಧರ್ಮದ ಶಾಸ್ತ್ರಗಳ ಮತ್ತು ಮಹಮದೀ ಧರ್ಮದ ಆಜ್ಞೆಗಳು ದೊರೆತುವು.

### ೩೧. *ಹಜರತ ಶಾಹ ಹಷಮ ಆಲವೀಯವರು ಸುಲ್ತಾನ ಮಹಮ್ಮದ ಆದಿಲಶಾಹ ಬಾದಶಹ ಗಾಜಿಗೆ ಹತ್ತು ವರುಷ ಆಯುಷ್ಯ ಕಾಣಿಕೆ ನೀಡಿದ್ದು:*

ಹಜರತ ಶಾಹ ನಈಮುಲ್ಲಾಹ ಎಂಬುವನು ಕೊನೆಯ ಬಾದಶಹ ಸಿಕಂದರ ಆದಿಲಶಾಹನ ಗುರುವಾಗಿದ್ದನು. ಆತನು ಗಂಜುಲ್ 'ಅಸ್ರಾರ್' ಎಂಬ ಪುಸ್ತಕವನ್ನು ಬರೆದಿದ್ದಾನೆ. ಅದರಲ್ಲಿ ಹೀಗೆ ಹೇಳಿದೆ. ಒಂದು ದಿನ ಸಯ್ಯದರ ಸಯ್ಯದ ಔಲಿಯಾಗಳ ಜೌಲಿಯಾ ಹಜರತ ಶಾಹಾ ಹಾಷಿಮ್ ಹುಸೇನಿ ಆಲವೀ, ಅವರು ಇಲ್ಲಿಯ ಜುಮ್ಮಾ ಮಶೀದಿಯಲ್ಲಿ ಇದ್ದು ಉಪದೇಶ ಮಾಡುತ್ತಿದ್ದರು. ಅಂಥ ಸಮಯದಲ್ಲಿ ಬಾದಶಹನ ಒಬ್ಬ ಸೇವಕನು ಬಂದು ಶಾಹ ಹಾಷಿಮ ಅವರಿಗೆ ಹೀಗೆ ವಿನಂತಿ ಮಾಡಿಕೊಂಡನು. "ಎಲ್ಲ ಬಡಬಗ್ಗರ, ಫಕೀರರ ಅನ್ನದ ಧಣಿಯಾದ ಸುಲ್ತಾನ ಮಹಮ್ಮದ ಬಾದಶಹನಿಗೆ ದೊಡ್ಡ ರೋಗವಾಗಿದೆ. ವೈದ್ಯಶಾಸ್ತ್ರವನ್ನು ಬಲ್ಲ ವೈದ್ಯರು ರೋಗದ ಪರೀಕ್ಷೆ ಮಾಡಿ ಗುಣ ಮಾಡುವಲ್ಲಿ ದಣಿದು ಹೋಗಿದ್ದಾರೆ. ವೈದ್ಯರ ಉಪಾಯ ನಡೆಯದಂತಾಗಿದೆ ಆದ್ದರಿಂದ ಬಾದಶಹರು ತಮ್ಮ ಹತ್ತಿರ ಕಳಿಸಿದ್ದಾರೆ. ತಾವು ಪೂರ್ತಿ ಮನಸ್ಸಿನಿಂದ ಉಪಾಯ ಮಾಡಿದರೆ ಅವರ ರೋಗ ಪರಿಹಾರವಾದೀತೆಂದು ತಮ್ಮಲ್ಲಿ ಬೇಡಿಕೊಂಡಿದ್ದಾರೆ." ಆಗ ಹಜರತ ಶಾಹ ಹಾಷಿಮ್ ಅವರು ತಮ್ಮ ಸೇವಕನಿಗೆ ಆಜ್ಞೆ ಮಾಡಿ'ರುಮಾಲು ತಾ'ಎಂದರು. ಸೇವಕನು ರುಮಾಲನ್ನು ತಂದು ಕೊಟ್ಟ ನಂತರ ಹಜರತರು ಆಶೀರ್ವಾದದ ಮಂತ್ರವನ್ನು ಪಠಿಸಿ, ಆ ರುಮಾಲಿನ ಮೇಲೆ ಮಂತ್ರವನ್ನು ಹಾಕಿ, ಬಾದಶಹನ ಸೇವಕನಿಗೆ ಕೊಟ್ಟರು. ಬಾದಶಹರಿಗೆ ಎಲ್ಲಿ ಬೇನೆಯಾಗಿದೆಯೋ ಅಲ್ಲಿ ಈ ರುಮಾಲನ್ನು ಸುತ್ತಿ ಕಟ್ಟಿರಿ; ಗುಣವಾಗುತ್ತದೆ ಎಂದು ಹೇಳಿದರು. ಅದರಂತೆ ಮಾಡಿ ಗುಣವಾಗುವ ಸುದ್ದಿಗಾಗಿ ಕಾಯ ಹತ್ತಿದರು. ಆದರೆ ಈ ಉಪಾಯದಿಂದ ಆರೋಗ್ಯ ಸುಧಾರಿಸಲಿಲ್ಲ. ರಾಜನು ಮತ್ತೆ ಮರುದಿನ ಇನ್ನಷ್ಟು ಕಕ್ಕುಲತೆಯಿಂದ ವಿನಂತಿ ಮಾಡಿಕೊಂಡು ಹೇಳಿ ಕಳಿಸಿದನು. ಆ ಕಾಲದಲ್ಲಿ ಸಮಕಾಲೀನರಲ್ಲಿ ಶಾಹ ಹಾಷಿಮ್ ಅವರು ಬಹಳ ಯೋಗ್ಯ ಔಲಿಯಾರಾಗಿದ್ದರು. ಪ್ರತಿಯೊಬ್ಬನಿಗೂ ಗುಣ ಪಡಿಸುವ ಪವಾಡ ಪುರುಷರಾಗಿದ್ದರು. ಬಹಳ ಜನರು ಬಂದು ಅವರನ್ನು ಕಾಣುತ್ತಿದ್ದರು. ಬಾದಶಹನೂ ಅವರ ಮೇಲೆ ವಿಶ್ವಾಸವನ್ನು ಇಟ್ಟಿದ್ದನು. ಆದ್ದರಿಂದಲೇ ಬಹಳ ಬೇಡಿಕೊಂಡು ಹೇಳಿ ಕಳಿಸಿದ್ದನು "ತಮ್ಮ ಹೊರತು ನನಗೆ ಗುಣವಾಗುವ ಬೇರೆ ಉಪಾಯವನ್ನು ಕಾಣಲಾರೆ. ತಾವಲ್ಲದೆ ಬೇರೆ ಯಾರೂ ಈ ಪ್ರಾಣಾಂತಿಕ ಬೇನೆಯಿಂದ ಮುಕ್ತ ಮಾಡುವವರನ್ನು ಕಂಡಿಲ್ಲ. ಆದ್ದರಿಂದ ಅಲ್ಲಾನ ಪ್ರೀತ್ಯರ್ಥವಾಗಿ ತಾವು ಕೃಪೆ ಮಾಡಿ ಪ್ರಯತ್ನಿಸಬೇಕು. ಹೇಗೆ ಈ ಮೊದಲು ನನ್ನ ತಂದೆಯ ಮೇಲೆ ಅನುಗ್ರಹ ಮಾಡುತ್ತಿದ್ದಿರೋ ಹಾಗೆಯೇ ಇಂದೂ ಈ ಇಚ್ಛುಕನ ಮೇಲೂ ಕೃಪೆ ಮಾಡಿದರೆ, ಈ ರೋಗದಿಂದ ನಾನು ಉಳಿಯಬಹುದು. ಇಲ್ಲವಾದಲ್ಲಿ ನಾನು ಬದುಕಲಾರೆ' ಎಂದೆಲ್ಲ ಹೇಳಿ ಕಳಿಸಿದನು. ಆಗ ಹಜರತ ಶಾಹ ಅವರು ಬಾದಶಹನ ವಿನಂತಿಯನ್ನು ಮನ್ನಿಸಿ ಅಪ್ಪಣೆ

ಕೊಡಿಸಿದರು. "ನಿಜ, ಈ ಬಾದಶಹನ ತಂದೆ ಇಬ್ರಾಹಿಮ ಆದಿಲಶಹನು ಈ ಫಕೀರನಾದ ನನ್ನ ಮೇಲೆ ದೊಡ್ಡ ಉಪಕಾರವನ್ನು ಮಾಡಿದ್ದಾನೆ. ಮಕ್ಕಾ ಯಾತ್ರೆಯನ್ನು ಮಾಡಿ ತಿರುಗಿ ಬರುವಾಗ ಮಾರ್ಗದಲ್ಲಿ ನಾನು ಫಿರಂಗಿಗಳ ಸೆರೆಯಲ್ಲಿ ಬಿದ್ದಿದ್ದೆನು. ಆ ಸಮಯದಲ್ಲಿ ಇವನ ಅಪ್ಪನ ಕಡೆಯಿಂದ ಬಹಳ ಜನ ಬಂದು ನನ್ನ ಮೇಲೆ ಬಹಳ ಮೆಹರಬಾನಗಿಯನ್ನು ಮಾಡಿದ್ದಾರೆ. ಇಬ್ರಾಹಿಮ ಆದಿಲಶಹನು ನನ್ನನ್ನು ಬಂಧನದಿಂದ ಬಿಡಿಸಿದನು. ಇಂದು ಆ ಉಪಕಾರವನ್ನು ತೀರಿಸುವ ಸಮಯ ಬಂದಿದೆ. ಆದರೆ ಈ ವೇಳೆಯಲ್ಲಿ ಆ ಉಪಕಾರವನ್ನು ತೀರಿಸಲು ಜೀವಕ್ಕೆ ಜೀವ ಕೊಡದ ಹೊರತು ಕೆಲಸ ಆಗುವುದಿಲ್ಲ. ಆದ್ದರಿಂದ ಈ ಬಾದಶಹನ ಆಯುಷ್ಯದ ಕೊಡ ಪೂರ್ತಿಯಾಗಿ ತುಂಬಿ ಬಿಟ್ಟಿದೆ. ಆತನ ಹತ್ತಿರ ಮೃತ್ಯು ಬಂದು ಮುಟ್ಟಿದೆ. ಈ ಸಮಯದಲ್ಲಿ ಬೇರೆಯವರು ಜೀವ ಕೊಡದ ಹೊರತು ಬಾದಶಹನು ಬದುಕುವುದೇ ಸಾಧ್ಯವಿಲ್ಲ. ನನ್ನ ಆಯುಷ್ಯ ಇನ್ನು ಹತ್ತು ವರುಷ ಉಳಿದಿದೆ ನಾನು, ನನ್ನ ಆಯುಷ್ಯವನ್ನು ಈ ಬಾದಶಹನಿಗೆ ಬಕ್ಷೀಸಾಗಿ ಕೊಟ್ಟು ಅವನ ರೋಗವನ್ನು ತೆಗೆದುಕೊಂಡೆ' ಎಂದು ಹೇಳಿದರು. ಹೀಗೆ ಅವರ ನಾಲಿಗೆಯಿಂದ ಮುಕ್ತಾಫಲಗಳ ಮಳೆ ಬೀಳುತ್ತಿದ್ದಂತೆ, ಬಾದಶಹನ ಆರೋಗ್ಯ ಗುಣವಾಗಿ ಸರಿಯಾಗಿ ಅವನು ಗುಣಮುಖನಾದನು. ಮರುದಿನ ಬಾದಶಹನು ಹಜರತರನ್ನು ಕಂಡು ಸ್ತುತಿಸಲು ಹಜರತ ಶಾಹ ಹಾಷಿಮರ ದರ್ಶನಕ್ಕಾಗಿ ಬಂದನು, ಅಲ್ಲಿ ನೋಡಿದರೆ ಬಾದಶಹನ ರೋಗದಿಂದಲೇ ಬಳಲುತ್ತ ಬಿದ್ದಿರುವ ತನ್ನ ಪ್ರತಿಬಿಂಬವನ್ನು ಹಜರತರಲ್ಲಿ ಕಂಡನು. ಆ ರೋಗದಿಂದ ಹಜರತರಿಗೆ ತಮ್ಮ ಸ್ಥಳದಿಂದ ಅಲುಗಾಡಲು ಕೂಡ ಸಾಧ್ಯವಾಗುತ್ತಿರಲಿಲ್ಲ.

ಅದನ್ನು ಕಂಡ ಬಾದಶಹನು ಬಹಳ ದೈನ್ಯದಿಂದ ಅವರನ್ನು ವಿಚಾರಿಸುತ್ತ 'ತಮಗೆ ಹೇಗಿದೆ?' ಎಂದನು. ಹಜರತರು ಅಪ್ಪಣೆಕೊಡುತ್ತ "ಪ್ರತಿಯೊಂದು ಉಸಿರು ಮರಣದ ಸಿಹಿಯನ್ನು ಚಪ್ಪರಿಸುತ್ತಿದೆ ಎಂಬ ವಾಕ್ಯ ಸತ್ಯವಾಗಿದೆ' 'ಯಾರ ಆಯುಷ್ಯ ಮುಗಿದಿದೆಯೋ ಆ ಮನುಷ್ಯ ಒಂದಿಷ್ಟೂ ಅವಕಾಶವಿಲ್ಲದೆ, ಒಂದು ಗಳಿಗೆ ಕೂಡ ಮಾಡಲಾರ, ಬಹಳ ಬೇಗ ಮುಗಿದು ಬಿಡುತ್ತದೆ' ಎಂಬ ಅರಬ್ಬೀ ವಾಕ್ಯವಿದೆ. ಸತ್ಯವಂತರು ಸಾಧು ಜನರು ಮರಣವನ್ನು ಇಚ್ಛಿಸುತ್ತಾರೆ ಯಾಕೆಂದರೆ ಮರಣ ಹೊಂದಿದನಂತರ ದೇವರೊಂದಿಗೆ ಸೇರುತ್ತಾರೆ. ಪೈಗಂಬರರು ಆಜ್ಞೆಮಾಡಿದಂತೆ, ಆಯುಷ್ಯ ಮುಗಿದು ಮರಣ ಹೊಂದುವುದು ಎಂದರೆ ಅದೊಂದು ಸೇತುವೆ ಇದ್ದಂತೆ, ಈ ಸೇತುವೆಯ ಮೇಲಿನಿಂದ ಹೋಗುತ್ತಿದ್ದಂತೆ, ಈ ಸೇತುವೆ ಸ್ನೇಹಿತನನ್ನು ಸ್ನೇಹಿತನ ಕಡೆಗೆ ಕರೆದುಕೊಂಡು ಹೋಗಿ ಮುಟ್ಟಿಸುತ್ತದೆ. ಅರ್ಥಾತ್ ಸಾಧುಗಳ ಆಯುಷ್ಯ ಮುಗಿಯುವುದು ಎಂದರೆ ಅಲ್ಲಾನ ಭೆಟ್ಟಿಗೆ ಕಾರಣ ಎಂದಾಗುತ್ತದೆ"

"ಮೂರನೆಯ ದಿನ ಹಜರತ ಶಾಹ ಹಾಶಿಮ್ ಮರಣ ಹೊಂದಿ ದೇವರ ಭೆಟ್ಟಿಗೆ ಹೋದರು. ಶಾಹ ಹಾಶಿಮರ ಪ್ರಕೃತಿ ಚಿಂತಾಜನಕವಾದಾಗ ಸುಲ್ತಾನ ಮಹಮ್ಮದ ಬಾದಶಾಹ ಗಾಜಿಯು ಅವರ ವಾಡೆಯ ಹತ್ತಿರ ಬಂದಿದ್ದ. ಅದೇ ಸಮಯದಲ್ಲಿ ಹಜರತರು ತಮ್ಮ ಪಾಗೋಟೆಯನ್ನು ಸೇವಕನ ಕೈಯಲ್ಲಿ ಕೊಟ್ಟು "ದೇವರ ಕೃಪೆ ಇರುವ ಸುಲ್ತಾನ ಮಹಮದ ಬಾದಶಹನು ಬರುತ್ತಿದ್ದಾನೆ. ನನ್ನ ಈ ಪಾಗೋಟೆಯನ್ನು ಆತ ಬರುವ ಮಾರ್ಗದಲ್ಲಿ ಹಾಸು, ಅದರ ಮೇಲಿಂದಲೇ ಬಾದಶಹ ನಡೆದು ಬರಲಿ" ಎಂಬುದಾಗಿ ಆಜ್ಞೆ ಮಾಡಿದರು. ಆಜ್ಞೆಯಂತೆ ಆ ಸೇವಕನು ಪಾಗೋಟೆಯನ್ನು ಮಾರ್ಗದಲ್ಲಿ ಹಾಸಿದನು. ಅದು ಗೊತ್ತಾಗುತ್ತಿದ್ದತೆ ಬಾದಶಹನು ಹಜರತರ ತಲೆಯ ಪಾಗೋಟೆಯನ್ನು ಅತಿ ಗೌರವದಿಂದ ಎತ್ತಿ ತನ್ನ ತಲೆಗೆ ಸುತ್ತಿಕೊಂಡು ವಾಡೆಯಲ್ಲಿ ಬಂದನು.

### ೩೨. *ಹಜರತ ಶಾಹ ಹಾಶಿಮ್ ಅವರು ಫಿರಂಗಿಗಳ ಸೆರೆಯಲ್ಲಿ ಬಿದ್ದದ್ದು ಮತ್ತು ಇಬ್ರಾಹಿಮ ಆದಿಲಶಹನು ಹಜರಶಾಹರನ್ನು ಪೈಗಂಬರರ ರಾಯಭಾರಿಯಾಗಿ ಸ್ವಪ್ನದಲ್ಲಿ ಕಂಡದ್ದು :*

ಹಜರತ ಶಾಹ ಹಾಶಿಮರು ಮಕ್ಕಾ ಮತ್ತು ಮದೀನಾಗಳ ಯಾತ್ರೆಯನ್ನು ಮಾಡಿ ತಿರುಗಿ ದಕ್ಷಿಣ ದೇಶಕ್ಕೆ ಬರಲು ಹಡಗಿನಲ್ಲಿ ಕುಳಿತರು. ಸಮುದ್ರ ದಂಡೆಯ ಬಂದರದಲ್ಲಿ ನಿಂತಿದ್ದ ಹಡಗಿನಲ್ಲಿದ್ದ ಸಂಪತ್ತಿಗಾಗಿ ಜಗಳ ತಂಟೆಗಳು ನಡೆದಿದ್ದುವು. ಜಗಳದಿಂದಾಗಿ ಹಡಗುಗಳ ಹೋಗಬರುವುದೂ ನಿಂತಿತ್ತು. ಹಜರತ ಶಾಹ ಹಾಶಿಮರು ಕುಳಿತ ಹಡಗಿನವರಿಗೆ ಈ ಹೊರಗಿನ ಗದ್ದಲ ಮತ್ತು ಒಬ್ಬರೊಬ್ಬರ ನಡುವೆ ನಡೆದ ಯುದ್ಧದ ಸುದ್ದಿ ತಿಳಿಯದೆ ನಿರ್ಭಯದಿಂದ ಹಡಗನ್ನು ಹೊರಡಿಸಿ ಬಿಟ್ಟರು. ಅದು ಗೋವೆಯ ಬಂದರದ ಹತ್ತಿರ ಬಂದಾಗ ಗೋವೆಯ ಯಜಮಾನನು ಆ ಹಡಗನ್ನು ನಿಲ್ಲಿಸಿ ಅದರಲ್ಲಿಯ ಜನರನ್ನೆಲ್ಲ ಬಂಧಿಸಿದನು. ಇಷ್ಟರಲ್ಲಿ ವಿಜಾಪುರದಲ್ಲಿ ಇಬ್ರಾಹಿಮ ಆದಿಲಶಹನಿಗೆ ಕನಸು ಬಿತ್ತು. ಅದರಲ್ಲಿ ಪೈಗಂಬರ ಬಾದಶಹರಾದ ಮಹಮ್ಮದ ಮುಸ್ತಫಾ ಸಲೀಲ್ಲಾಹ ವಸ್ಸಲಮರು ಬಂದು "ಅರೇ ಇಬ್ರಾಹಿಮ ಆದಿಲಶಹನೆ, ನನ್ನ ಮಗ ಸಯ್ಯದ ಹಾಶಿಮನು ಫಿರಂಗಿಗಳ ಬಂಧನದಲ್ಲಿದ್ದಾನೆ. ಆತನನ್ನು ಬೇಗ ಬಿಡಿಸು" ಎಂದು ಆಜ್ಞೆ ಮಾಡಿದಂತೆ ಕನಸು ಬಿತ್ತು. ಇಬ್ರಾಹಿಮ ಆದಿಲಶಹನು ನಿದ್ರೆಯಿಂದ ಜಾಗ್ರತನಾಗಿ ಕಾರಭಾರಿ ಮಂಡಳಿಯನ್ನು ಕರೆದು ಕನಸಿನಲ್ಲಿ ನಡೆದ ಘಟನೆಯನ್ನು ಹೇಳಿದನು. ಹಜರತ ಶಾಹ ಹಾಶಿಮರನ್ನು ಬಿಡಿಸುವ ಕುರಿತು ಹೇಗೆ ಮಾಡಬೇಕು ಎಂಬುದಾಗಿ ಎಲ್ಲ ಕಾರಭಾರಿ ಮಂಡಳಿಯನ್ನು ವಿಚಾರಿಸಿದನು. ಅವರಲ್ಲಿಯ ಕೆಲವರಿಗೆ ಗೋವೆಯ ಸಂಗತಿ ಮತ್ತು ಅಲ್ಲಿ ಹಡಗಿನಲ್ಲಿಯ ಜನರನ್ನು ಗೋವೆ ಫಿರಂಗಿಗಳು ಬಂಧಿಸಿದ್ದ ವಿಷಯ ಗೊತ್ತಿತ್ತು. ಅವರಲ್ಲಿ ಶಾಹ ಹಾಶೀಮರೂ ಬಂಧಿಗಳಾಗಿರಬೇಕೆಂದು ತಿಳಿದು ಬಾದಶಹನಿಗೆ ವಿನಂತಿ ಮಾಡಿಕೊಳ್ಳುತ್ತ "ಈ ವಿಷಯದಲ್ಲಿ ಪ್ರಭುಗಳು ಗೋವೆಯ ಫಿರಂಗಿಗಳಿಗೆ ಪತ್ರಬರೆದು ಹಜರತ ಶಾಹ ಹಾಶಿಮರನ್ನು ಬಿಡುಗಡೆ ಮಾಡಬೇಕೆಂದು ಹೇಳಬೇಕು" ಎಂದು ಕಾರಭಾರಿಗಳು ಹೇಳಿದರು. ಅದರಂತೆ ಬಾದಶಹನು ಪತ್ರ ಬರೆದು ಗುಪ್ತಚಾರರೊಂದಿಗೆ ಗೋವೆಗೆ ಕಳಿಸಿದನು. ಪತ್ರವನ್ನು ಓದಿದ ಗೋವೆಯ ಮಾಲಕನು ಆಜ್ಞೆಯನ್ನು ಹೊರಡಿಸಿ ಸಯ್ಯದ ಹಾಶಿಮ ಎಂಬ ಹೆಸರಿನ ಕೈದಿಯನ್ನು ತಕ್ಷಣ ಬಿಡುಗಡೆ ಮಾಡಬೇಕೆಂದು ಸೆರೆಮನೆಯ ಅಧಿಕಾರಿಗೆ ಕಳಿಸಿಕೊಟ್ಟನು. ಆಗ ಆಜ್ಞೆಯಂತೆ, ಸೆರೆಮನೆಯ ಅಧಿಕಾರಿಯು, ಸೆರೆಮನೆಯ ಹತ್ತಿರ ಹೋಗಿ, 'ಸೈಯದ ಹಾಶಿಮ ಎಂಬ ಹೆಸರಿನ ಕೈದಿ ಯಾರಿದ್ದೀರಿ ಅವರು ಬೇಗ ಹೊರಗೆ ಬರಬೇಕು' ಎಂದು ಕೂಗಿದನು. ಆಗ ಹಜರತ ಹಾಶಿಮರು ತಾವು ಸ್ವಸ್ಥವಾಗಿ ಕುಳಿತು ಬೇರೆ ಕೈದಿಗಳಿಗೆ ಆಜ್ಞೆ ಮಾಡುತ್ತ ಎಲ್ಲರೂ "ನಾನೇ ಸಯ್ಯದ ಹಾಶಿಮ ಇದ್ದೇನೆ. ನನ್ನ ಹೆಸರು ಸಯ್ಯದ ಹಾಶಿಮ ಎಂಬುದಾಗಿದೆ ಎಂದು ಹೇಳಿ ಎಲ್ಲರೂ ಹೊರಗೆ ಹೋಗಿರಿ" ಎಂದರು. ಆಗ ಅವರು ಹೇಳಿದಂತೆ ಅನೇಕ ಕೈದಿಗಳು 'ನನ್ನ ಹೆಸರು ಹಜರತ್ ಶಾಹ ಹಾಶಿಮ' ಎಂದು ಹೇಳಿ ಸೆರೆಮನೆಯಿಂದ ಹೊರಗೆ ಬಂದರು. ಅವರನ್ನೆಲ್ಲ ಬಿಡುಗಡೆ ಮಾಡಿದರು. ಅನಂತರ ಗೋವೆಯ ಯಜಮಾನನು ಬಾದಶಹನ ಪತ್ರಕ್ಕೆ ಉತ್ತರ ಬರೆದು ಬಾದಶಹನ ಗುಪ್ತಚಾರನೊಂದಿಗೆ ತಿರುಗಿ ಕಳಿಸಿದನು. ಉತ್ತರ ಬಂದನಂತರ ಬಾದಶಹನು ಸಮಾಧಾನ ಪಟ್ಟುಕೊಂಡನು.

ಕೆಲವು ದಿನಗಳ ಅನಂತರ ಮತ್ತೆ ಬಾದಶಹನಿಗೆ ಕನಸು ಬಿದ್ದು ಅದರಲ್ಲಿ ಪುನಃ ಮಹಮ್ಮದ ಪೈಗಂಬರರು ಕನನಸಿನಲ್ಲಿ ಬಂದು, "ಅರೇ ಇಬ್ರಾಹಿಮ ಆದಿಲಶಾಹ ನಿನಗೆ ನಾನು ಆಜ್ಞೆ, ಮಾಡಿದಂತೆ ನೀನು ಏನೂ ಮಾಡಲಿಲ್ಲ ನನ್ನ ಮಗನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿಸಲಿಲ್ಲ' ಎಂದರು.

ಬಾದಶಹನು ತುಂಬ ಗಾಬರಿಯಾಗಿ ಕನಸಿನಿಂದ ಎಚ್ಚರವಾಗಿ ಮತ್ತೆ ಗೋವೆಯ ಯಜಮಾನನಿಗೆ ಪತ್ರ ಬರೆದು ತಿಳಿಸಿದನು. ಯಾವ ಸಯ್ಯದರನ್ನು ಬಿಡುಗಡೆ ಮಾಡಲು ಹೇಳಿದ್ದೆನೋ ಆ ಹಜರತ ಶಾಹ ಹಾಶೀಮರು ಇನ್ನೂ ಸೆರೆಮನೆಯಿಂದ ಬಿಡುಗಡೆಯಾಗಿಲ್ಲ. ಆದ್ದರಿಂದ ಈ ಆಜ್ಞೆ ಮುಟ್ಟಿದ ತಕ್ಷಣ ಹಜರತ ಶಾಹ ಹಾಶಿಮರನ್ನು ಬಿಡುಗಡೆ ಮಾಡಿ ನಮ್ಮ ಮೇಲೆ ಉಪಕಾರ ಮಾಡಿರಿ' ಎಂದು ಬರೆದನು. ಅದರಂತೆ ಫಿರಂಗಿಗಳು ಮತ್ತೆ ಇಪ್ಪತ್ತು-ಮೂವತ್ತು ಜನರನ್ನು 'ನಾನೇ ಹಜರತ ಹಾಶಿಮ' ಎಂಬುದಾಗಿ ಹೇಳಿದವರನ್ನು ಬಿಡುಗಡೆ ಮಾಡಿದರು ಮತ್ತು ಬಾದಶಹನಿಗೆ ಪತ್ರ ಬರೆದು 'ನಿಮ್ಮ ಆಜ್ಞೆಯಂತೆ 'ಒಬ್ಬ ಹಾಶೀಮ'ನ ಬದಲಾಗಿ ಎಷ್ಟೋ ಹಾಶಿಮರನ್ನು ಬಿಡುಗಡೆ ಮಾಡಿದ್ದೇವೆ. ಯಾರೆಲ್ಲ ತಮ್ಮ ಹೆಸರು ಶಾಹ ಹಾಶಿಮ ಎಂದು ಹೇಳಿದ್ದಾರೋ ಅವರನ್ನೆಲ್ಲ ಬಿಡುಗಡೆ ಮಾಡಿದ್ದೇವೆ. ಆದರೆ ಆಶ್ಚರ್ಯದ ಸಂಗತಿ ಎಂದರೆ. ಮತ್ತೆ-ಮತ್ತೆ ನಿಮ್ಮಿಂದ 'ಶಾಹಾ ಹಾಶೀಮರನ್ನು ಬಿಡುಗಡೆ ಮಾಡಿರಿ' ಎಂದು ಪತ್ರಗಳು ಬರುತ್ತಿವೆ. ಆದ್ದರಿಂದ ಈ ವಿಷಯದಲ್ಲಿ ಏನು ಮಾಡಬೇಕು ಎಂಬುದನ್ನು ತಿಳಿಸಿರಿ' ಎಂದು ಪತ್ರ ಬರೆದರು.

ಮೂರನೆಯ ಸಲ ಮತ್ತೆ ಪೈಗಂಬರರು ಸ್ವಪ್ನದಲ್ಲಿ ಕಾಣಿಸಿಕೊಂಡು ಈ ಸಲ ಬಾದಶಹನನ್ನು ತರಾಟೆಗೆ ತೆಗೆದುಕೊಳ್ಳುತ್ತ 'ಹುಚ್ಚ ಇನ್ನೂ ನಿನ್ನ ಭ್ರಾಂತಿ ಹೋಗಿಲ್ಲ. ನನ್ನ ಆಜ್ಞೆಯನ್ನು ಪಾಲಿಸುತ್ತಿಲ್ಲ. ಈ ಸಲ ನನ್ನ ಮಗನನ್ನು ಬಿಡುಗಡೆ ಮಾಡಿಸದಿದ್ದರೆ ನಿನ್ನ ಕರ್ಮಕ್ಕೆ ತಕ್ಕ ಪ್ರತಿಫಲ ಸಿಗುತ್ತದೆ ಜೋಕೆ!' ಎಂಬುದಾಗಿ ಆಜ್ಞೆ ಮಾಡಿದರು. ಆಗ ಬಾದಶಹನು ಅತ್ಯಂತ ಭಯಭೀತನಾಗಿ ನಿದ್ದೆಯಿಂದ ಎದ್ದು ಗಾಬರಿ ಚಿಂತೆಗಳಲ್ಲಿ ಕುಳಿತುಬಿಟ್ಟನು. ಬುದ್ಧಿವಂತ ಕಾರಭಾರಿಗಳನ್ನು ಕರೆಯಿಸಿ ಮತ್ತೆ ಹೇಗೆ ಮಾಡುವುದೆಂದು ವಿಚಾರಿಸಿದನು. ಪೈಗಂಬರರ ಆಜ್ಞೆಯಂತೆ ಎರಡು ಸಲ ಅನೇಕ ಕೈದಿಗಳನ್ನು ಹಜರತ ಶಾಹ ಹಾಶಿಮ ಎಂಬ ಹೆಸರಿನಲ್ಲಿ ಸೆರೆಮನೆಯಿಂದ ಬಿಡಿಸಿದ್ದಾಯಿತು. ಹೀಗಿದ್ದಾಗ್ಯೂ ಇನ್ನೂ ಪೈಗಂಬರರ ಆಜ್ಞೆ ಮತ್ತೆ ಮೊದಲಿನಂತೆಯೇ ಆಗುತ್ತಿದೆ. ಯಾವ ಸಯ್ಯದ ಹಾಶಿಮರನ್ನು ಬಂಧನದಿಂದ ಬಿಡುಗಡೆ ಮಾಡಬೇಕಾಗಿತ್ತೋ ಆ ಹಜರತರು ಇನ್ನೂ ಬಂಧನದಿಂದ ಹೊರಗೆ ಬಂದಿಲ್ಲ ಇದಕ್ಕೆ ಏನು ಮಾಡಬೇಕು? ಎಂಬುದಾಗಿ ವಿಚಾರಿಸಿದನು. ಆಗ ಕಾರಭಾರಿಗಳು ಬಹಳ ಹೊತ್ತು ವಿಚಾರಿಸಿ ಒಂದು ನಿರ್ಧಾರಕ್ಕೆ ಬಂದವರಂತೆ ಬಾದಶಹನಿಗೆ ವಿನಂತಿಸಿ ಕೊಂಡರು. "ಈ ವಿಷಯದಲ್ಲಿ ಬಹುಶಃ ಗೋವೆಯ ಸೆರೆಮನೆಯಲ್ಲಿದ್ದ ಎಲ್ಲ ಕೈದಿಗಳನ್ನು ಬಿಡುಗಡೆ ಮಾಡದ ಹೊರತು ಹಜರತ ಶಾಹ ಹಾಶೀಮರು ಸೆರೆಮನೆಯಿಂದ ಹೊರಗೆ ಬರಲಿಕ್ಕಿಲ್ಲ. ಆದ್ದರಿಂದ ಈಗ ಗೋವೆಯ ಸೆರೆಮನೆಯಲ್ಲಿಯ ಎಲ್ಲ ಜನರನ್ನು ಬಿಡಿಸಬೇಕು. ಬಹುಶಃ ಎಲ್ಲ ಕೈದಿಗಳ ಬಿಡುಗಡೆಗಾಗಿಯೆ ಹಜರತರು ಹೊರಗೆ ಬಂದಿಲ್ಲವೆಂದು ಕಾಣುತ್ತದೆ. ಆದ್ದರಿಂದ ಎಲ್ಲ ಕೈದಿಗಳ ಬಿಡುಗಡೆಗೆ ಪ್ರಯತ್ನಿಸುವುದೇ ಸೂಕ್ತವೆಂದು ಕಾಣುತ್ತದೆ" ಎಂದು ಕಾರಭಾರಿಗಳು ವಿನಂತಿಸಿಕೊಂಡರು. ಅದನ್ನು ಕೇಳಿದ ಇಬ್ರಾಹಿಮ ಆದಿಲಶಾಹ ಬಾದಶಹನು ಒಬ್ಬ ಒಳ್ಳೆಯ ವ್ಯಕ್ತಿಯನ್ನು ರಾಯಭಾರಿಯಾಗಿ ಗೋವೆಗೆ ಹೇಗಾದರೂ ಮಾಡಿ ಈ ಕೆಲಸವನ್ನು ಮಾಡಲೇಬೇಕೆಂದು ಎಂಬುದಾಗಿ ಅರ್ಥ ಬರುವಂತೆ ಬರೆದು ಗೋವೆಯಲ್ಲಿ ಕಪ್ತಾನನಿಗೆ ಕಳಿಸಿದನು. ಜೊತೆಗೆ 'ಈ ಕೆಲಸ ಮಾಡಿದಿರಾದರೆ, ನಿಮ್ಮ ಯಾವುದಾದರೂ ಕೆಲಸಗಳಿದ್ದರೆ ನಾವು ಮಾಡಿಕೊಡಲು ಸಿದ್ಧರಿದ್ದೇವೆ. ಆದ್ದರಿಂದ ನಿಮ್ಮ ಮನದಲ್ಲಿ ಏನಾದರೂ ಇದ್ದರೆ ಬರೆದು ತಿಳಿಸಿರಿ. ಅದನ್ನು ನಾವು ಕಾರ್ಯಗತಗೊಳಿಸುತ್ತೇವೆ. ಆದರೆ ಇಷ್ಟನ್ನು ಮಾತ್ರ ನೀವು ಮಾಡಲೇಬೇಕು. ನಿಮ್ಮ ಸೆರೆಮನೆಯಲ್ಲಿಯ ಎಲ್ಲ ಕೈದಿಗಳನ್ನು ಒಬ್ಬರನ್ನೂ ಬಿಡದಂತೆ

ಎಲ್ಲರನ್ನೂ ಈ ಪತ್ರ ಮುಟ್ಟಿದ ತಕ್ಷಣ ಬಂಧನದಿಂದ ಬಿಡುಗಡೆ ಮಾಡಬೇಕು ಮತ್ತು ಈ ಕೈದಿಗಳಲ್ಲಿಯ ಯಾರೊಬ್ಬರನ್ನು ಕೂಡ ಬಂಧನದಲ್ಲಿ ಇಡಬೇಡಿರಿ' ಎಂಬುದಾಗಿ ಆಗ್ರಹ ಮಿಶ್ರಿತ ಎಚ್ಚರಿಕೆಯ ಪತ್ರವನ್ನು ಗೋವೆಯ ಕಪ್ತಾನನಿಗೆ ಮುಟ್ಟಿಸಿದರು. ಕಪ್ತಾನನು ತಕ್ಷಣ ಸೆರೆಮನೆಯ ಬಾಗಿಲನ್ನು ತೆರೆದು ಎಲ್ಲ ಕೈದಿಗಳಿಗೂ ಹೊರಗೆ ಹೋಗಲು ಹೇಳಿದನು. ಆದರಂತೆ ಒಬ್ಬೊಬ್ಬರಾಗಿ ಎಲ್ಲ ಕೈದಿಗಳು ಹೊರಬರುತ್ತಿದ್ದಂತೆ ಕಟ್ಟ ಕಡೆಯ ಕೈದಿ ಹಜರತ ಶಾಹ ಹಾಶಿಮರು ಸೆರೆಮನೆಯಿಂದ ಹೊರಗೆ ಬಂದರು. 'ಸುಭಾನ ಅಲ್ಲಾಹ' ಎಂದರೆ ಅಲ್ಲಾನು ಪವಿತ್ರನಾಗಿದ್ದಾನೆ ಎಂದು ಅರ್ಥ. ಅರ್ಥಾತ್ ಪೈಗಂಬರರ ಮತ್ತು ಸಾಧುತ್ವದ ಉತ್ತಮ ಲಕ್ಷಣ ಹಾಗೂ ಸ್ವಭಾವಗಳನ್ನು ಅವರು ತೋರಿಸಿಕೊಟ್ಟರು. ಫಾರ್ಸೀ ಭಾಷೆಯ ಒಂದು ದ್ವಿಪದಿಯ ಅರ್ಥ ಹೀಗಿದೆ. "ಮಾನವ ಕುಲಕ್ಕೆಯೇ ಕಾಣಿಕೆ ಕೊಡುತ್ತ ಅವರಲ್ಲಿಯ ಒಬ್ಬರನ್ನೂ ಬಿಡಲಿಲ್ಲ".

೩೩. *ಸುಲ್ತಾನ ಮಹಮ್ಮದ ಆದಿಲಶಾಹ ಬಾದಶಹನು ಮುಲ್ಲಾ ಜಹೂರ ಬಿನ್ ಮುಲ್ಲಾ ಜಹೂರಿಗೆ ತನ್ನ ಕಾಲಕಿರ್ದಿಯಲ್ಲಿಯ ಇತಿಹಾಸ ಗ್ರಂಥವನ್ನು ಬರೆಯಲು ಆಜ್ಞೆ ಮಾಡಿದನು :*

ಎಲ್ಲ ಕವಿಗಳಲ್ಲಿ ಪ್ರಸಿದ್ಧನಾದ ಮುಲ್ಲಾ ಜಹುರ ಬಿನ್ ಮುಲ್ಲಾ ಜುಹೂರಿಯು ಹಿಜರಿ ಸನ್ ೧೦೫೧ ರಲ್ಲಿ (ಕ್ರಿ.ಶ. ೧೬೪೧-೪೨) ಹೀಗೆ ಬರೆದಿದ್ದಾನೆ.[೧]

ಬಾದಶಹನು, ಬುದ್ಧಿವಂತನಾದ ನವಾಬ ಖಾನಬಾಬಾನನ್ನು ಕರೆದು. ನಮ್ಮ ಕಾಲಕಿರ್ದಿಯಲ್ಲಿಯ ಎಲ್ಲ ವಿಷಯಗಳನ್ನು ಬರೆಯುವಂತೆ, ಈ ಸೇವೆಗೆ ಯೋಗ್ಯನಾದ, ತಮ್ಮ ಕುಟುಂಬದಲ್ಲಿಯ ವಿಶ್ವಾಸಾರ್ಹ ವ್ಯಕ್ತಿಯಾದ ಮುಲ್ಲಾ ಜಹೂರ ಬಿನ್ ಮುಲ್ಲಾ ಜುಹೂರಿಗೆ ಈ ಕೆಲಸವನ್ನು ವಹಿಸಿರಿ ಎಂದು ಆಜ್ಞೆ ಮಾಡಿದನು. ಅವನ ಆಜ್ಞೆಯಂತೆ ಶ್ರೀಮಂತನಾದ ಅಲೀ ನವಾಬಖಾನನು ಅವನನ್ನು ತನ್ನ ವಾಡೆಗೆ ಕರೆಯಿಸಿದನು. ದಕ್ಷಿಣದ ಬಾದಶಹರುಗಳ ಕಾಲಕಿರ್ದಿಯ ಇತಿಹಾಸವನ್ನು ರಫೀಉದ್ದೀನ ಹುಸೇನ ಶಿರಾಜೀಯು ಸುಂದರವಾಗಿ ಬರೆದಿದ್ದಾನೆ. ಆದರೆ ಸುಲ್ತಾನ ಮಹಮ್ಮದ ಆದಿಲಶಹನ ಕಾಲದ ಸವಿಸ್ತಾರ ಇತಿಹಾಸವನ್ನು ನೀನು ಬರೆಯಬೇಕೆಂದು ನವಾಬನು ಆಜ್ಞೆ ಮಾಡಿದನು. ಅದು ಹೇಗಿರಬೇಕೆಂದರೆ.

*ಕಾವ್ಯ ಬರೆಯಲು ಶ್ರೇಷ್ಠ ಯೋಗ್ಯತೆಯುಳ್ಳ ವ್ಯಕ್ತಿಯೆ*
*ಅಜ್ಞಾತವಾಗಿದ್ದ ನಿನ್ನ ಪ್ರತಿಭೆಯನ್ನು ವರ್ಣನೆಯಲ್ಲಿ ಕಾಣಿಸು ॥ ೧ ॥*

*ನಿನ್ನ ವರ್ಣನೆಯಲ್ಲಿ ಸರ್ವರ ಚಿತ್ತ ಹರಣವಾಗಬೇಕು ।*
*ಜಗದಗಲ ಮುಗಿಲಗಲ ಅದು ಪ್ರಸಿದ್ಧವಾಗಬೇಕು ॥ ೨ ॥*

*ನೀನು ಹಚ್ಚುವ ವಿಚಾರ ದೀಪದ ತೇಜದಿಂದ*
*ಇಂದಿರುವ ದೊಡ್ಡ ದೊಡ್ಡ ಬಾದಶಹರ ದರಬಾರಗಳು ಬೆಳಗಬೇಕು ॥ ೩ ॥*

---

೧. ಮಹಮ್ಮದನಾಮಾ ಪು ೧೧೯

*ದಕ್ಷಿಣದ ಬಾದಶಹನ ವರ್ಣನೆಯ ಪ್ರಾರಂಭಿಸು*
*ಆ ವರ್ಣನೆಯು ಜಗವನೆಲ್ಲ ಬೆಳಗಲಿ ॥ ೪ ॥*

*ಹಾಸು ಸಿಹಿಮಾತುಗಳ ದಸ್ತರಖಾನವನ್ನು*
*ಅದನುಂಡು ತೃಪ್ತರಾಗಲಿ ಭೂರ್ಭುವನಿ ಲೋಕದ ಜನರೆಲ್ಲ ॥ ೫ ॥*

(ದಸ್ತರಖಾನ = ಭೋಜನ ಸಮಯದಲ್ಲಿ ಮುಸಲ್ಮಾನರು ಹಾಸುವ ಶ್ವೇತ ವಸ್ತ್ರ. ಅದರ ಮೇಲೆಯೇ ಅವರು ಉಣ್ಣುತ್ತಾರೆ. ಆ ವಸ್ತ್ರಕ್ಕೆ ದಸ್ತರಖಾನ ಎಂದು ಹೆಸರು)

*ತುಂಬು ನೀ ಪಾತ್ರೆಯನು ನಿನ್ನ ಪ್ರತಿಭೆಯ ವರ್ಣನೆಗಳಿಂದ ॥*
*ಮದವೇರಲಿ ಕಾಲಚಕ್ರ ಕೂಡ ಆ ಪಾತ್ರೆಯಲ್ಲಿಯ ಮದ್ಯ ಪ್ರಾಶನದಿಂದ ॥ ೬ ॥*

ಈ ಮೊದಲು ಕೂಡ ಬಖೈರುಗಳಲ್ಲಿ ಎಲ್ಲ ಬಾದಶಹರ ವರ್ಣನೆಗಳನ್ನು ಬರೆದಿದ್ದಾರೆ. ಅವುಗಳನ್ನೆಲ್ಲ ಗಮನಿಸಿ, ಮಹಮ್ಮದ ಬಾದಶಹರ ಕಾಲವನ್ನು ಕಣ್ಣಾರೆ ಕಂಡದ್ದರಿಂದ ಅದನ್ನೆಲ್ಲ ನಾನು ಬರೆದಿರುವೆ. ಬಾದಶಹರ ದರಬಾರದಲ್ಲಿ ಇರುವ ವಿದ್ವಾಂಸರುಗಳಲ್ಲಿ ಮೊದಲು ಈ ಬಾದಶಹನ ಕಾಲಕಿರ್ದಿಯ ಎಲ್ಲ ವಿಷಯಗಳನ್ನು ಬರೆದವನು ಇಬ್ರಾಹಿಮಖಾನ ಸಂಬಗಿಯು. ಅವನು ಮಹಾಬುದ್ಧಿವಂತ, ಆತ ತನ್ನ ಒಂದೊಂದು ವರ್ಣನೆಯಲ್ಲೂ ಪ್ರತಿಭೆಯನ್ನು ತೋರಿದ್ದಾನೆ. ಕ್ಷಣಮಾತ್ರ ಕೇಳಿದರೂ ಸಾಕು ಕೇಳುಗರು ಆತನ ಪ್ರತಿಭೆಯನ್ನು ಅರ್ಥಮಾಡಿಕೊಳ್ಳಬಲ್ಲರು. ಸಣ್ಣ ಸಣ್ಣ ವಿಷಯಗಳನ್ನೂ ಆತ ಸೂಕ್ಷ್ಮವಾಗಿ ಗಮನಿಸಿ ಆತ ತನ್ನ ಗ್ರಂಥದಲ್ಲಿ ಬರೆದಿದ್ದಾನೆ. ಆತನ ಚಮತ್ಕಾರಿಕ ಲೇಖಣಿಯನ್ನು ಕಚೇರಿಯ ಎಲ್ಲ ವಿದ್ವಾಂಸರೂ ಅರ್ಥ ಮಾಡಿಕೊಳ್ಳಲು ಕಷ್ಟಪಡುತ್ತಾರೆ. ಇಬ್ರಾಹಿಮಖಾನನ ಪದ್ಯದ (ಮಿಸ್ರ) ಅರ್ಥ ಸಾಲನ್ನು ಅರ್ಥಮಾಡಿಕೊಳ್ಳಲು ತರ್ಕಿಸುವುದು ಕೂಡ ಕಷ್ಟವಾಗುತ್ತದೆ. ಆತನ ಕವಿತೆಯನ್ನು ಅರ್ಥಮಾಡಿಕೊಳ್ಳಲು ತರ್ಕಿಸುವುದೆಂದರೆ ಅದೊಂದು ದೊಡ್ಡ ಪಾಶವಾಗಿದೆ. ಆ ಪಾಶವು ಕಾಲಚಕ್ರವನ್ನೆಲ್ಲ ಸುತ್ತಿಕೊಂಡಿದೆ. ಆತನ ವರ್ಣನೆಯಲ್ಲಿ ರಾಜ್ಯದ ಹಾಗೂ ಬಾದಶಹನ ಎಲ್ಲ ವರ್ಣನೆಗಳೂ ಬಂದಿವೆ. ಕಸೀದೆ (ಪದ್ಯರೂಪೀ ಕವಿತೆಗಳಲ್ಲಿಯ ಒಂದು ಪ್ರಕಾರ) ಮತ್ತು ಗಜಲ (ಕವಿತೆಯ ಒಂದು ಪ್ರಕಾರ) ಅರ್ಥಗರ್ಭಿತ ಮತ್ತು ಬಣ್ಣ ಬಣ್ಣದ ವಿಷಯಗಳನ್ನು ಕಟ್ಟಿಹಾಕಿದ್ದಾನೆ. ಆತನ ಗ್ರಂಥದಲ್ಲಿಯ ತಪ್ಪುಗಳನ್ನು ದೋಷಗಳನ್ನು ಹುಡುಕುವುದೇ ಸಾಧ್ಯವಿಲ್ಲ. ಸಾವಿರಾರು ರಹಸ್ಯ ವಿಷಯಗಳು ಆತನ ವರ್ಣನೆಯಿಂದ ಪ್ರಸಿದ್ಧವಾಗಿವೆ. ಆತನ ವಿಚಾರಗಳ ಸುಲಕ್ಷಣ ಗುಪ್ತಚಾರನು ಅಲ್ಲಾನ ಜ್ಞಾನದ ಮನೆಯಿಂದಲೂ ಸುದ್ದಿಗಳನ್ನು ಹೆಕ್ಕಿದ್ದಾನೆ. ಅಂದರೆ ಆತನ ಕವಿತೆಗಳಲ್ಲಿ ಅಧ್ಯಾತ್ಮವಿದ್ಯೆಯೂ ಇದೆ. ಅರ್ಥದ ಮೈದಾನಿನಲ್ಲಿ ಕುದುರೆಯನ್ನು ಓಡಿಸಿದಾಗ ದಾವೆಯನ್ನು ಮಾಡುವ ಜನರು ತಮ್ಮ ತಲೆಗಳನ್ನೆ ಪಾಶದಿಂದ ಬಿಗಿದುಕೊಳ್ಳುತ್ತಾರೆ. ಸಮುದ್ರದ ತೆರೆಗಳನ್ನು ಹೊಡೆಯುತ್ತ ಹೋದಂತೆ ಭೂಮಿಯಿಂದ ಆಕಾಶದವರೆಗೂ ಮುತ್ತುಗಳೇ ಉದುರುತ್ತಿರುತ್ತವೆ. ಒಟ್ಟಾರೆಯಾಗಿ ಇಬ್ರಾಹಿಮಖಾನನು ಅಂಥ ವಿದ್ವಾಂಸನಾಗಿದ್ದನು.

### *೩೪. ಇನ್ನೊಬ್ಬ ಸಯ್ಯದ ನೂರುಲ್ಲಾಹ :*

ಅಲ್ಲಾನ ಜ್ಞಾನವನ್ನು ತಿಳಿದಿದ್ದ ಈತನು ದೊಡ್ಡ ವಿದ್ವಾಂಸನಾಗಿದ್ದನು. ಸತ್ಯವಂತನಾಗಿದ್ದು, ಇದ್ದಕ್ಕಿದ್ದ ಹಾಗೆಯೇ ವಿಷಯಗಳನ್ನು ನಮೂದಿಸುತ್ತಿದ್ದನು. ಉತ್ತಮ ಪ್ರಕಾರದ ಶಬ್ದಗಳಿಂದ ಕೂಡಿದ

ಗ್ರಂಥ ಬರೆಯುವ ವಿದ್ಯೆಯಲ್ಲಿ ಕಾಲಚಕ್ರದ ಸೆಜ್ಜೆಯ ಮೇಲೆ ಬರೆಯುತ್ತಿದ್ದನು. ಆತನ ಪ್ರಬಲ ವಿಚಾರ ವಿಸ್ತಾರಗಳಲ್ಲಿ ಅಖಂಡ ಕಾಗದದ ಮೇಲೆ ಮಜಬೂತಾಗಿ ಕಟ್ಟಿದ ಶಿಕಂದರ ಬಾದಶಹನ ಗೋಡೆಯೂ ನಾಚುತ್ತಿತ್ತು. ಆದ್ದರಿಂದ ಬಹು ಎತ್ತರವಾದ ಶರೀರದ ಮನುಷ್ಯರು ಉಳಿದೆಲ್ಲರನ್ನೂ ಭಕ್ಷಿಸುತ್ತಾರೆ. ಆ ಪ್ರಕಾರದ, ಗ್ರಂಥದಲ್ಲಿಯ ದುರ್ಗುಣಗಳನ್ನು ಮತ್ತು ತಪ್ಪುಗಳನ್ನು ಹುಡುಕುವ ವ್ಯಕ್ತಿಗಳು ಉಗುರಿನಿಂದ ಕೆರೆದು, ದೋಷಗಳಿಲ್ಲದಿದ್ದರೂ ಛಿದ್ರ ಮಾಡಬೇಡಿರಿ. ಆದ್ದರಿಂದ ಶಿಕಂದರ ಬಾದಶಹನು ಕಟ್ಟಿದ ಗಟ್ಟಿಯಾದ ಗೋಡೆಯಂತೆ, ಗ್ರಂಥದ ಹಾಳೆಗಳಲ್ಲೂ ಗಟ್ಟಿಯಾದುದನ್ನೇ ಇಟ್ಟಿದ್ದು, ಅದರಲ್ಲಿ ಯಾವುದೇ ದೋಷಗಳನ್ನು ಹೊರಿಸುವ ವ್ಯಕ್ತಿಗಳಿಗೆ ಪ್ರವೇಶ ದೊರೆಯಬಾರದು. ಇದರ ತಾತ್ಪರ್ಯವೆಂದರೆ, ಆ ಎತ್ತರ ಶರೀರದ ಮನುಷ್ಯನು ಇತರ ವ್ಯಕ್ತಿಗಳನ್ನು ಭಕ್ಷಣ ಮಾಡುವ ಉಪದ್ರವವನ್ನು ಮಾಡ ಹತ್ತಿದಾಗ ಶಿಕಂದರ ಬಾದಶಹನು ಅತಿ ದೊಡ್ಡ ಗೋಡೆಯನ್ನೆ ಕಟ್ಟಿದನು. ಅದನ್ನು ದಾಟಿ ಆ ಮನುಷ್ಯರು ಬರದಂಥ ವ್ಯವಸ್ಥೆಯನ್ನು ಇಟ್ಟನು. ಆ ಗೋಡೆಯಂತೆ ಈ ಗ್ರಂಥಕಾರನು ತನ್ನ ಗ್ರಂಥದಲ್ಲಿ ಯಾವ ತಪ್ಪುಗಳನ್ನು ಹುಡುಕುವ ವ್ಯಕ್ತಿಗೆ ಪ್ರವೇಶ ಸಿಗದಂತೆ ಶುದ್ಧ ಗ್ರಂಥವನ್ನು ಬರೆದಿದ್ದಾನೆ. ಆತನ ವಿಚಾರಗಳ ಉದಕದ ಪ್ರವಾಹದಿಂದ ಇಚ್ಛುಕರು ಬಯಸಿದ ಪುಷ್ಪಗಳನ್ನು ಅರಳಿಸಿ ಎಲ್ಲ ಮನಗಳನ್ನು ಅರಳಿಸಿದನು. ಮುದುಡಿದ ಮನಗಳು ಈ ಗ್ರಂಥವನ್ನು ನೋಡಿದರೆ ಆನಂದ ಪಡೆಯುವಂಥ ಗ್ರಂಥ ಇದಾಗಿದೆ.

## ೩೫. ಮೂರನೆಯವ ಹಕೀಮ ಆತಶಿ.

ತನ್ನ ಬೆಂಕಿಯಂಥ ನಾಲಿಗೆಯಿಂದ ವಿದ್ಯುತ್ತಿನ ಜ್ವಾಲೆಗಳನ್ನು ಚುಂಬಿಸುವಂಥ ನಾಲಿಗೆ, ವಿದ್ಯುತ್ತಿಗಿಂತ ತೀಕ್ಷ್ಣವಾದದ್ದು ಈ ಗ್ರಂಥಕಾರನ ನಾಲಿಗೆ. ಆತನ ಶ್ರೇಷ್ಠ ವಿಚಾರಗಳು ಅತಿ ಶ್ರೇಷ್ಠ ಮಟ್ಟದಲ್ಲಿವೆ. ಆತ ಬಹಳ ಶ್ರೇಷ್ಠ ಗ್ರಂಥಕಾರ, ಆತನ ವೈದ್ಯಕ್ರಿಯೆಯು ಖಾಸಾ ದೈವ ಸಾಮರ್ಥ್ಯದಿಂದ ಕೂಡಿದೆ. ಆತನು ಎಲ್ಲರನ್ನು ಆರೋಗ್ಯದಿಂದ ಇಡುವ ಲಾಭದಿಂದ ಒಂದು ಚುಕ್ಕೆಯನ್ನು ಕೂಡ ಬಿಟ್ಟಿಲ್ಲ. ಬುಆಲಿ ಎಂಬುವನು ವೈದ್ಯರ ವೈದ್ಯ, ಆತನಿಗಿಂತ ಈತ ಅಧಿಕ ಬುದ್ಧಿವಂತನಾಗಿದ್ದನು. 'ತಪಮೊಹರೆಲ ಎಂಬ ಪಿತ್ತ ಜ್ವರ ಇದೆ. ಅದು ಬಂದರೆ ಉಳಿಯುವುದೇ ಕಷ್ಟವಾಗುತ್ತದೆ ತುಂಬ ನೀರಡಿಕೆಯಾಗುತ್ತದೆ. ಆ ನೀರಡಿಕೆಯಿಂದಲೇ ಮನುಷ್ಯ ಸತ್ತು ಹೋಗುತ್ತಾನೆ. ಈ ಪ್ರಕಾರದ ಜ್ವರದಿಂದ ಬಳಲಿ ಮರಣ ಹೊಂದಿದ್ದರೂ ಆತನ ಪ್ರೇತದ ಮಾಂಸ ಮಜ್ಜನಗಳನ್ನು ಕಿಂಚಿತ್ ಅವಲೋಕನ ಮಾಡಿ ಆ ಮನುಷ್ಯನ ದಾಹವನ್ನು ಶಾಂತ ಮಾಡಿ, ಆತನನ್ನು ತಿರುಗಿ ಸಜೀವಿಯನ್ನಾಗಿ ಮಾಡುವುದು ಅತಿ ಸುಲಭದ ಕೆಲಸವೆಂದು ತಿಳಿಯುತ್ತಾನೆ. ಫಾರ್ಸೀ ಭಾಷೆಯ ದ್ವಿಪದಿಯೊಂದರ ಅರ್ಥ ಹೀಗಿದೆ "ಕವಿತೆಗಳನ್ನು ರುಚಿಸುವವ ಮತ್ತು ವೈದ್ಯ ಕ್ರಿಯೆಯನ್ನು ಮಾಡುವವರು ಆಕಾಶವೇ ತಮ್ಮ ಹಿಂದೆ ಓಡಿ ಬರುವಂತೆ ಮಾರ್ಗವನ್ನು ಗೆದ್ದರು". ಇದರಲ್ಲಿಯ ತಾತ್ಪರ್ಯವೆಂದರೆ, ಹಕೀಮ ಆತಿಶಿಯು ವೈದ್ಯ ಕ್ರಿಯೆ ಮತ್ತು ಕಾವ್ಯ ರಚನೆ ಎರಡೂ ವಿದ್ಯೆಗಳಲ್ಲೂ ಸಂಪೂರ್ಣ ಪಾರಂಗತನಾಗಿದ್ದನು.

## ೩೬. ನಾಲ್ಕನೆಯವನು ಮಿರಜಾ ಹಕೀಮ :

ಮಿರಜಾ ಹಕೀಮನು ಪ್ರತಿಯೊಂದು ವಿದ್ಯೆಯಲ್ಲೂ ನಿಪುಣ ಮತ್ತು ಎಲ್ಲರಲ್ಲೂ ಪ್ರಸಿದ್ಧನಾಗಿದ್ದನು. ಅರ್ಥ ಚಮತ್ಕಾರ ಮಾಡುವಲ್ಲಿ ಮತ್ತು ಶುದ್ಧ ರಚನೆಯಲ್ಲಿ ಅದ್ವಿತೀಯನಾಗಿದ್ದನು. ಆತನ ಹಾಗೆ ಕಾವ್ಯ

ರಚಿಸುವವರು ಯಾರೂ ಇರಲಿಲ್ಲ ಆತನ ಯೋಗ್ಯತೆಯ ಬಗ್ಗೆ ಹೇಳುವುದು ವರ್ಣನೆಗಿಂತಲೂ ಅಧಿಕವಾಗಿದೆ. ಆತನ ಅಮೃತ ಧಾರೆ ಸುರಿಸುವ ಎರಡು ಕಣ್ಣುಗಳ ಉದಕದಿಂದ ಅಮೃತ ಪ್ರಾಶನ ಮಾಡಲು ತೃಷಾಕ್ರಾಂತರಾಗಿ ಅಂದರೆ, ನೀರಡಿಕೆಯಲ್ಲಿ ಬೆರಳು ಚೀಪುವ ವ್ಯಕ್ತಿಗೆ ಚೀಪುವ ಸ್ಥಳದಲ್ಲಿ ಅಮೃತವೇ ಸುರಿಯುತ್ತದೆ. ಸಿಕಸ್ತಾ (ಫಾರ್ಸೀ ಭಾಷೆಯಲ್ಲಿ ವಕ್ರವಾಗಿ ಬರೆಯುವ ಅಕ್ಷರಗಳು) ಅಕ್ಷರಗಳನ್ನು ಬರೆಯುವಲ್ಲಿ ಲಾವಣ್ಯ ಸ್ತ್ರೀಯರ ಕಿವಿಗಳ ಮೇಲಿನ ವಕ್ರವಾಗಿ ಬಿದ್ದ ಕೂದಲಿನಂತೆ, ಆತನ ಲೆಕ್ಕಣಿಕೆಯಿಂದ ಉದುರಿ ಬೀಳುತ್ತಿರುವ ನಕ್ಷತ್ರಗಳೆಂದೇ ತಿಳಿಯಲಾಗುತ್ತಿತ್ತು. ಅದರರ್ಥ ವಕ್ರತೆಗಿಂತ ಅಧಿಕ ಶೋಭೆಯಿಂದ ಸಿಕಸ್ತ ಅಕ್ಷರಗಳನ್ನು ಬರೆಯುತ್ತಿದ್ದನು. ವಿಶ್ವವನ್ನು ತೇಜಗೊಳಿಸುವ ಸೂರ್ಯನು ತನ್ನ ತೇಜವನ್ನು ಆ ಗ್ರಂಥದ ಅಕ್ಷರಗಳ ರೇಖೆಗಳಲ್ಲಿ ಇಟ್ಟಿದ್ದಾನೆ. ಬರವಣಿಗೆ ಅಷ್ಟು ತೋಜೋವಂತವಾಗಿದೆ. ನಿರಂತರ ಭ್ರಮಣಗೊಳ್ಳುತ್ತಿರುವ ಆಕಾಶವು ನಕ್ಷತ್ರ ಗಣಗಳ ಜವಾಹಿರಖಾನೆಯನ್ನು, ಮುಕ್ತಾಫಲದಂತೆ ಬರೆಯುವ ಆತನ ಲೆಕ್ಕಣಿಕೆಯ ವಶಕ್ಕೆ ಕೊಟ್ಟಿದೆ.

### ೩೭. ಐದನೆಯವ ಮಿರಜಾ ದೌಲತಶಾಹ :

ಮಿರಜಾ ದೌಲತಶಾಹನು ಶಬ್ದ ರಚನಾ ರಾಜ್ಯದ ಬಾದಶಹನಾಗಿದ್ದನು. ಈಸಾ ಪೈಗಂಬರರು ಯಾರದೇ ಜೀವಹೋದರೂ ಅವರ ಪ್ರೇತಕ್ಕೆ ತಮ್ಮ ಮುಖದಿಂದ ಊದಿದರೆ, ಅವರ ಉಸಿರಿನಿಂದ, ಪ್ರೇತವು ಸಜೀವವಾಗುತ್ತಿತ್ತು. ಹಾಗೆ ಮಿರಜಾ ದೌಲತಶಾಹನು ಖ್ಯಾತ ಶಬ್ದಗಳಿಗೆ ಜೀವವನ್ನು ತುಂಬತ್ತಿದ್ದನು. ತನ್ನ ಸುಂದರವಾದ ಶಬ್ದಗಳನ್ನು ಕೇಳುವುದರಿಂದ ಕಾಲಚಕ್ರರೂಪದ ಮೊಗ್ಗುಗಳನ್ನು ಅರಳಿಸುತ್ತಿದ್ದನು. ಒಂದೊಂದು ಶಬ್ದಗಳಲ್ಲಿ ಅನೇಕ ಅರ್ಥಗಳನ್ನು ಕೂಡಿಸುವುದು ಆತನ ಸ್ವಭಾವವಾಗಿತ್ತು. ಆತ ಬಹು ಬುದ್ಧಿವಂತ ಗ್ರಂಥಕಾರನಾಗಿದ್ದನು.

### ೩೮. ಸುಲ್ತಾನ ಮಹಮ್ಮದ ಆದಿಲಶಹನ ಉತ್ತಮ ಲಕ್ಷಣಗಳು :

ಸುಲ್ತಾನ ಮಹಮ್ಮದ ಆದಿಲಶಹ ಬಾದಶಹನು ರೂಪದಿಂದ ಬಹಳ ಲಾವಣ್ಯವಂತನು, ಸುಲಕ್ಷಣಿಕನು, ಉತ್ತಮ ಸ್ವಭಾವದವನು, ಕ್ಷಮಾಶೀಲನು ಶ್ರೇಷ್ಠ ಐಶ್ವರ್ಯವಂತನು, ಮತ್ತು ಪ್ರಬಲ ದೈವವಾನನೂ ಆಗಿದ್ದನು. ಈ ಬಾದಶಹನ ಯಶಸ್ವೀ ಸೈನ್ಯವು ಎತ್ತ ಹೋಗುತ್ತಿತ್ತೋ, ಯಾವ ರಾಜ್ಯಗಳನ್ನು ಕೈವಶ ಮಾಡಿಕೊಳ್ಳಬೇಕೆಂದು ಧೈರ್ಯದಿಂದ ಹೋಗುತ್ತಿತ್ತೋ ಆ ವಿಷಯಗಳಲ್ಲಿ ಯಶ ಮತ್ತು ಜಯ ಆದಿಲಶಹನ ಸೈನ್ಯದ ಮುಂದೆ ಓಡಿ ಬರುತ್ತಿದ್ದುವು. ಯುದ್ಧ ಮಾಡಿ ನಿರ್ದ್ಯಾವಿ ಹಿಂದು ಜನರ ಬಹಳ ನಗರಗಳು, ಕರ್ನಾಟಕ ಮಲನಾಡು ಮತ್ತು ಯೆಲವಾಡಗಳನ್ನು ತೆಗೆದುಕೊಂಡು ವಿಜಯಿಯಾಗಿ ಅವುಗಳನ್ನೆಲ್ಲ ಮುಸಲ್ಮಾನ ರಾಜ್ಯಕ್ಕೆ ಸೇರಿಸಿದರು. ಹಿಂದುಗಳ ನಗರಗಳಲ್ಲಿಯ ಎಲ್ಲ ದೇವಾಲಯಗಳ ಸ್ಥಳದಲ್ಲಿ ಮಶೀದಿಗಳನ್ನು ಮತ್ತು ಮುಸಲಮಾನೀ ವಿದ್ಯೆಯ ಶಾಲೆಗಳನ್ನು ಕಟ್ಟಿ ಅಲ್ಲಿ ಕಾಜಿ ಮಂಡಳಿಗಳನ್ನು, ಖತೀಬ ಜನರನ್ನು ಮುಸಲ್ಮಾನೀ ಧರ್ಮದ ಶಾಸ್ತ್ರಗಳನ್ನು ಬಲ್ಲವರನ್ನು ಮತ್ತು ಎಲ್ಲೆಡೆ ಮುಸಲಮಾನೀ ಧರ್ಮದ ಹುದ್ದೆದಾರರನ್ನು ನಿಯಮಿಸಿ ಮುಸಲಮಾನೀ ಧರ್ಮವನ್ನು ಮತ್ತು ಮಹಮದಿ ಶಾಸ್ತ್ರಗಳನ್ನು ನಡಾವಳಿಕೆಯಲ್ಲಿ ತಂದನು. ಸುಲ್ತಾನ ಮಹಮದ ಆದಿಲಶಹ ಬಾದಶಹನ ರಾಜ್ಯವು ಮೊಗಲರ ರಾಜ್ಯದ ಸರಹದ್ದಿನಿಂದ ಸೇತುಬಂಧ ರಾಮೇಶ್ವರದವರೆಗೆ ಮತ್ತು ಅದರ ಅಗಲವು ಕುತುಬಶಾಹನ ಸರಹದ್ದಿನಿಂದ ನಗರ-ಬಂದರಗಳನ್ನೊಳಗೊಂಡು ಮುಸ್ತಫಾಬಾದ ದಾಭೋಳದ ಬಂದರದವರೆಗೂ,

ಅದು ಸಮುದ್ರದಂಡೆಯವರೆಗೂ ಇದೆ. ಅಲ್ಲಿಯವರೆಗೂ ಸರಹದ್ದು ಮುಟ್ಟಿತ್ತು. ರಾಜ್ಯದ ಜನವಸತಿ ರೈತರಿಂದ ತುಂಬಿಕೊಂಡಿತ್ತು. ಆತನ ಕಾಲದಲ್ಲಿ ಗೂಬೆ ಮತ್ತು ರಣಹದ್ದುಗಳಿಗೆ ಕಾಲಿಡಲು ಸ್ಥಳವಿಲ್ಲದಂತಾಗಿದ್ದುವಂತೆ, ಅಷ್ಟೊಂದು ಸುಖ ಸಂಪತ್ತಿನಿಂದ ರಾಜ್ಯವು ತುಂಬಿ ತುಳುಕುತ್ತಿತ್ತು. ಗೂಬೆ ಮತ್ತು ರಣಹದ್ದುಗಳು ಯಾರ ಮನೆಯ ಮೇಲೆ ಕುಳಿತುಕೊಳ್ಳುತ್ತವೆಯೊ ಅಲ್ಲಿ ಪ್ರಳಯವಾಗುತ್ತದೆಂಬುದು ರೂಢಿಯಲ್ಲಿದೆ. ಆ ಎರಡು ಜಾತಿಯ ಪಕ್ಷಿಗಳಿಗೆ ಆದಿಲಶಾಹನ ಸರಹದ್ದಿನಲ್ಲಿ ಉಳಿದುಕೊಳ್ಳಲು ಸ್ಥಳವೇ ಇರಲಿಲ್ಲ. ಹೀಗಾಗಿ ಆ ಪಕ್ಷಿಗಳು ಬರುತ್ತಿರಲಿಲ್ಲ. ಆದಿಲಶಹನ ಸರಹದ್ದಿನಲ್ಲಿಯ ಯಾವುದೇ ಗ್ರಾಮ, ನಗರ, ಪಟ್ಟಣಗಳಲ್ಲಿ ನೃತ್ಯಗಾಯನಗಳು, ರಾಗರಂಗಗಳು, ವಾದ್ಯಗಳು, ಸಂಗೀತದ ಆನಂದಗಳು ಇರದೇ ಇದ್ದ ಒಂದು ಸ್ಥಳಗಳೂ ಇರಲಿಲ್ಲ. ಹಗಲು ರಾತ್ರಿ ಸಂಗೀತ ವಾದ್ಯಗಳಿಂದ ತುಂಬಿರುತ್ತಿತ್ತು. ಎಲ್ಲ ಜನರೂ ಸಂತೋಷದಿಂದ ಮನೋರಥಪೂರ್ಣರಾಗಿ ಇರುತ್ತಿದ್ದರು. ಅವರಲ್ಲಿ ಆನಂದದ ಹೊರತು ಬೇರೆ ಯಾವುದೇ ಖಿನ್ನತೆ, ವಿರಸತೆಯ ಭಾವನೆಗಳು ಬರುತ್ತಿರಲಿಲ್ಲ. ಆದಿಲಶಹನ ನ್ಯಾಯದ ಮತ್ತು ತೀರ್ಪಿನ ಪ್ರಸಿದ್ಧಿ ಎಂದರೆ, ಹರಿಣಗಳ ಪಾಲನೆಯನ್ನು ಸಿಂಹಗಳಿಂದ ಮಾಡಿಸುವಂತಿತ್ತು. ಆದಿಲಶಹನ ಬಕ್ಷೀಸು ಕೊಡುವಿಕೆಯಲ್ಲಿ, ಧರ್ಮದಲ್ಲಿ 'ಕೊಡು' ಎಂಬ ಬೇಡಿಕೆಯ ನಡತೆಯನ್ನು ಅವನ ರಾಜ್ಯದಿಂದ ತೆಗೆದುಹಾಕಿತ್ತು.

ಯಾರು-ಯಾರಿಗೂ 'ನನಗೆ ಇದು ಬೇಕು' ಎಂದು ಬೇಡುತ್ತಿರಲಿಲ್ಲ. ಇಷ್ಟರವರೆಗೆ ಅವರು ಸುಖದಿಂದ ಇದ್ದರು. ಮುಸಲ್ಮಾನ ಜನರಲ್ಲಿ 'ಹಾತಮತಾಈ' (ಎಂದರೆ ಧರ್ಮವಂತ) ಮನುಷ್ಯನೊಬ್ಬನು ಆಗಿ ಹೋದನು. ಅವನಂಥ ಧಾರ್ಮಿಕರು ಯಾರೂ ಇರಲಿಲ್ಲ. ಆ ಹಾತೆಮನ ಹೆಸರು ಬಾದಶಹನ ಧರ್ಮದ ಒಬ್ಬ ವ್ಯಕ್ತಿ ದಯೆಯಲ್ಲಿ ತುಂಬ ಹೆಸರುವಾಸಿಯಾಗಿದ್ದನು. ಬಾದಶಹನ ದಯೆಯು ಆತನ ಹೆಸರನ್ನು ಮೂಲೆಗೆ ಸರಿಸಿತು. ಮಹಮದ ಆದಿಲಶಹ ಬಾದಶಹನ ಕಾಲಕಿರ್ದಿ ಎಂದರೆ. 'ಅಹಾದೇಮಹೈದಿ' ಯಂತೆ ಇತ್ತು. ಈ ವಿಷಯದಲ್ಲಿ ಇನ್ನು ಬೇಕಾದಷ್ಟು ಇದೆ. ಆ ಎಲ್ಲ ಕಥಾಭಾಗಗಳನ್ನು ಇಲ್ಲಿ ವರ್ಣಿಸಿಲ್ಲ. ಯಾಕೆಂದರೆ ಆತನ ಕಾಲದಲ್ಲಿ ಯಾರ ಮುಂದೆ ಯಾರೂ ಯಾವ ವಸ್ತುವನ್ನು ಬೇಡಲು ಕೈ ಮುಂದೆ ಮಾಡಿದ್ದನ್ನು ಯಾರೂ ನೋಡಿಲ್ಲ. ಅಂಥದೇ ಒಂದು ಕಾಲವಾಗಿತ್ತು. ದರಿದ್ರತನ, ಭಿಕ್ಷೆ ಬೇಡುವುದು ಇವುಗಳನ್ನು ಈ ಕಾಲವು ಓಡಿಸಿ ಬಿಟ್ಟಿತ್ತು. ಯಾರ ಬಾಯಿಯ ಕಡೆಗೂ ಯಾರೂ ನೋಡಿದ್ದನ್ನು ಕಾಣಲಿಲ್ಲ. ಯಾವ ವೃದ್ಧನೂ ರುಸ್ತಮನಂಥ ಶಕ್ತಿಶಾಲಿಗೆ ಬೆದರುತ್ತಿರಲಿಲ್ಲ. ಯಾರೂ ಅಶಕ್ತರ ಮೇಲೆ ಕೈ ಮಾಡುತ್ತಿರಲಿಲ್ಲ. ಯಾಕೆಂದರೆ ಅಂಥವರನ್ನು ಶಿಕ್ಷಿಸಲು ಬಾದಶಹನು ಸಿದ್ಧನಿರುವಾಗ ವೃದ್ಧರು ಬೆದರುವ ಕಾರಣವೂ ಇರಲಿಲ್ಲ. ಯಾವ ಮುಂಗಲಿಯೂ ಸರ್ಪದ ಭಯದಿಂದ ಇರುತ್ತಿರಲಿಲ್ಲ. ಮುಂಗಲಿಗಳನ್ನು ತಿನ್ನಲು ಸರ್ಪಗಳಿಗೂ ಬಾದಶಹನ ಭಯ ಇತ್ತು! ಆತನ ದಯೆ-ದಾನಗಳಿಂದಾಗಿ ವಿಜಾಪುರ ನಗರದ ಜನವಸತಿಯೂ ತುಂಬಿ ಹೋಗಿತ್ತು. ನವರಸಪುರ ಮತ್ತು ತಾಲೇವಾರಿಯ ಸರಹದ್ದಿಯಿಂದ ರಸೂಲಪುರದ ಸರಹದ್ದಿನವರೆಗೆ ಉದ್ದಕ್ಕೂ ಪೂರ್ವಪಶ್ಚಿಮಗಳವರೆಗೆ ಮತ್ತು ಇಬ್ರಾಹಿಮಪುರದಿಂದ ಬಮ್ಮನಹಳ್ಳಿವರೆಗೂ, ಅಗಲಕ್ಕೆ ದಕ್ಷಿಣೋತ್ತರವಾಗಿ ಒಂದೇ ರೀತಿಯ ಜನವಸತಿ ತುಂಬಿತ್ತು. ಎಲ್ಲರಲ್ಲಿ ಶ್ರೀಮಂತಿಕೆಯ ನಿಷ್ಕಾಳಜಿ ಎಲ್ಲಿಯವರೆಗೆ ಇತ್ತೆಂದರೆ, ಪ್ರತಿದಿನ ರಾತ್ರಿ ರೂಢಿಯಂತೆ ಒಂದು ದೊಡ್ಡ ತಟ್ಟೆಯ ತುಂಬ ಹೊನ್ನುಗಳನ್ನು, ಆಭರಣಗಳನ್ನು ಮತ್ತು ಬೆಳ್ಳಿಗಳಿಂದ ತುಂಬಿ ಬಾದಶಹನು ಮಲಗುವ ಸ್ಥಳದಲ್ಲಿ ತಲೆದಿಂಬಿನ ಹತ್ತಿರ ಇಡುವ ರೀತಿ ಇತ್ತು. ಆ ತಟ್ಟೆಯನ್ನು ನಸುಕಿನಲ್ಲಿಯೇ ಎತ್ತಿ ಬಡಬಗ್ಗರಿಗೆ ಮತ್ತು ಫಕೀರರು ಇತ್ಯಾದಿಯಾಗಿ

ಜನರಿಗೆ ತಟ್ಟೆಯಲ್ಲಿನ ದ್ರವ್ಯವನ್ನು ಕೊಡಬೇಕು. ಆದರೆ ಬಾದಶಹನ ತಲೆದಿಂಬಿನ ಹತ್ತಿರದ ಆ ದ್ರವ್ಯವನ್ನು ಯಾರೂ ತೆಗೆದುಕೊಳ್ಳಲು ಒಪ್ಪುತ್ತಿರಲಿಲ್ಲ. ಯಾರಿಗಾದರೂ ದ್ರವ್ಯವನ್ನು ಕೊಡಲು ಹೋದರೆ 'ನಿವಾಳಿಸಿ ಕೊಡುವ ಜನರಿಗೆ ಕೊಡಿರಿ ನಾವು ನಿವಾಳಿಸಿದ್ದನ್ನು ತೆಗೆದುಕೊಳ್ಳುವವರಲ್ಲ' ಎಂದು ಹೇಳುತ್ತಿದ್ದರು. ಆಗ ನಿರೋಪಾಯರಾಗಿ ಸೇವಕ ಜನರು ಈ ತಟ್ಟೆಯನ್ನು ತಮ್ಮ ಹೆಗಲಮೇಲೆ ಹೊತ್ತುಕೊಂಡು ಚಪ್ಪರಗಳಲ್ಲಿ ಇರುವ ಮದಾರಿ ಫಕೀರ ಜನರಿಗೆ ಹಂಚುತ್ತಿದ್ದರು. ಅಂಥ ಫಕೀರರು ಅರ್ಕಕಿಲ್ಲೆಯ ಆಸುಪಾಸಿನಲ್ಲಿ ಚಪ್ಪರಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಅಂಥ ಹದಿನಾಲ್ಕು ಚಪ್ಪರಗಳಿದ್ದುವು. ಫಕೀರರು ಕೂಡ ಬಾದಶಹನ ನಿವಾಳಿಕೆಯನ್ನು ತೆಗೆದುಕೊಳ್ಳಲು ಬಾದಶಹನ ವಾಡೆಯತ್ತ ಬರುತ್ತಿರಲಿಲ್ಲ. ನಗರದ ಜನರು ಈ ಫಕೀರರನ್ನು ನಿವಾಳಿಕೆ ತೆಗೆದುಕೊಳ್ಳುವ ಫಕೀರರೆಂದು ಹೆಸರಿಡುತ್ತಿದ್ದರು. ಆ ಕಾಲದಲ್ಲಿ ಯಾರಾದರೂ ಕಟ್ಟಡಗಳಿಗಾಗಿ ಒಂದಿಷ್ಟು ಭೂಮಿಯನ್ನು ಕೊಳ್ಳಬೇಕೆಂದರೆ, ಒಂದು ಗಜ (ಸುಮಾರು ಮೂರು ಅಡಿ) ಭೂಮಿಗೆ ಒಂದು ಹೊನ್ನು ಕೊಟ್ಟರೆ, ಅದೂ ತುಂಬ ಕಷ್ಟದಿಂದ ದೊರಕುತ್ತಿತ್ತು. ಬಾದಶಹನ ಕಾಲದಲ್ಲಿ ದರಿದ್ರರೆಂಬುವವರೇ ಇರಲಿಲ್ಲ. ಖೈರಾತ್, ಮೈರಾತ್ ಮತ್ತು ಮಫರೂನ ಈ ಮೂರಕ್ಕೆ ಮುಸಲ್ಮಾನರಲ್ಲಿ ಬಹಳ ಮಹತ್ವ. ಖೈರಾತ್ ಎಂದರೆ ನಗದು ಹಣ ದಾನ ಮಾಡುವುದು, ಮೈರಾತ್ ಎಂದರೆ ಬೆಂದ ಅನ್ನದಾನ ಮಫರೂನ ಎಂದರೆ, ಗಳಿಸಿದ ಹಣದಲ್ಲಿ ಪ್ರತಿಶತ ಇಂತಿಷ್ಟು ಹಣದಾನ ಮಾಡುವುದು. ಈ ಶಾಸ್ತ್ರದಂತೆ ಸುಲ್ತಾನ ಮಹಮ್ಮದನು ಧರ್ಮ ನಡೆಸುತ್ತಿದ್ದನು. ಇಷ್ಟಾಗಿಯೂ ಮೇಲ್ಖರ್ಚಿಗಾಗಿ ಉಳಿದ ಹಣದಲ್ಲಿ, ನೀರಿನಲ್ಲಿ ಮತ್ತು ಕೆಸರಿನಲ್ಲಿ ಇದ್ದ ಮಣ್ಣಿನಂತೆ ಉಳಿದೇ ಹೋದ ದ್ರವ್ಯದಿಂದ ಮಶೀದಿಗಳನ್ನು, ಧರ್ಮಶಾಲೆಗಳನ್ನು, ಗುಮ್ಮಟಗಳನ್ನು, ಸಮಾಧಿಗಳನ್ನು, ಹವೇಲಿಗಳನ್ನು ಮತ್ತು ದೊಡ್ಡ ದೊಡ್ಡ ಕಟ್ಟಡಗಳನ್ನು ಕಟ್ಟಿಸಿದನು. ಅವುಗಳಲ್ಲಿ ಅರ್ಶಮಹಲು ಮುಸಲ್ಮಾನ ಜನರ ಕ್ಷೇತ್ರವೆಂದೇ ಇಂದಿಗೂ ಪ್ರಸಿದ್ಧವಾಗಿದೆ. ಹೀಗಾಗಿ ಸುಲ್ತಾನ ಮಹಮ್ಮದ ಬಾದಶಹನ ಕಾಲದಲ್ಲಿ ದ್ರವ್ಯವು ಮಳೆಯಂತೆ ಆಕಾಶದಿಂದ ಬೀಳುತ್ತಿತ್ತೆಂದು ಅನಿಸುತ್ತದೆ.

### ೩೯. ಒಂದು ಕಥಾ ಭಾಗದ ವರ್ಣನೆ :

ಪ್ರತಿ ವರುಷ ಬರುವ ಪವಿತ್ರ ರಮಜಾನ ತಿಂಗಳಲ್ಲಿ ಕುರಾನ ಶರೀಫ ಗ್ರಂಥವನ್ನು ನೆನಪಿನಿಂದ ಪಠಿಸುವ 'ಹಾಫೀಜ' ಜನರು ಕೊಂಕಣದಿಂದ ಬಂದು ನಗರದ ಹೊರಗಿನ ಧರ್ಮಶಾಲೆಗಳಲ್ಲಿ ವಾಸಿಸುತ್ತಿದ್ದರು. ಆಗ ಮಸೀದಿಗಳಲ್ಲಿ ಇರುವ ಜನರು ಕೂಡ ಈ 'ಹಾಫೀಜ'ರಿಗೆ ತಮ್ಮ ಮಸೀದಿಗಳಲ್ಲಿ ಉಳಿದುಕೊಳ್ಳಲು ಸ್ಥಳವನ್ನು ನೀಡುತ್ತಿದ್ದರು. ಯಾರಿಗೆ ಕುರಾನ ಶರೀಪ ಕಂಠಪಾಠ ಇರಲಿಲ್ಲವೋ ಅಥವಾ ಯಾರ ಮನೆಯಲ್ಲಿ ಹಾಫಿಜರು ಇರುತ್ತಿರಲಿಲ್ಲವೋ, ಅಂಥವರು ಹಾಫೀಜ ಬಂದಾರೆಂದು ತಿಳಿದರೆ ಸಾಕು, ತಮ್ಮ ಗೌರವವನ್ನೂ ಲೆಕ್ಕಿಸದೆ ಓಡಿ ಹೋಗಿ ಅವರ ಕೈಗಳನ್ನು ಹಿಡಿದು ತಂತಮ್ಮ ಮಸೀದಿಗಳಿಗೆ ಕರೆದುಕೊಂಡು ಬರುತ್ತಿದ್ದರು. ಒಂದಿಷ್ಟು ಆಲಸ್ಯ ಮಾಡಿದರೂ ಹಾಫೀಜರು ದೊರೆಯುತ್ತಿರಲಿಲ್ಲ. ಅಂಥವರು ಖಿನ್ನರಾಗಿ ಮರಳುತ್ತಿದ್ದರು. ಒಂದು ತಿಂಗಳವರೆಗೆ ಹಾಫೀಜರನ್ನು ತಂತಮ್ಮ ಮಸೀದಿಗಳಲ್ಲಿ ಇಟ್ಟುಕೊಂಡು ಅವರಿಗೆ ಪ್ರತಿನಿತ್ಯ ನಾನಾಪ್ರಕಾರದ ಮೃಷ್ಟಾನ್ನಗಳನ್ನು- ಪಕ್ವಾನ್ನಗಳನ್ನು ಮಾಡಿ ಬಡಿಸುತ್ತಿದ್ದರು. 'ತರಹಿಬಾ' (ಎಂದರೆ ರಮಜಾನದ ರಾತ್ರಿ ನಮಾಜ ಮಾಡುವುದು) ಮಾಡುತ್ತ ಇಡೀ ರಾತ್ರಿ ಜಾಗರಣೆ ಮಾಡುತ್ತಿದ್ದರು. ರಮಜಾನ ತಿಂಗಳು ಮುಗಿಯುವ ಕೊನೆಯ ದಿನ ಇಂತಿಷ್ಟು ಎಂದು ನಗದು ಹಣ ಹಾಗೂ ಪದಾರ್ಥಗಳನ್ನು ಹಾಫೀಜರಿಗೆ ಕೊಡುತ್ತಿದ್ದರು. ಮತ್ತು ಶಹಬಾನ

ತಿಂಗಳಲ್ಲಿ ಮರುವರುಷದ 'ಶಬ್ಬೇರಾತ್' ಆದ ನಂತರ ವಿಜಾಪುರಕ್ಕೆ ಬರಲು ಹೊರಡುತ್ತಿದ್ದರು. ಕೊಂಕಣದ ಹಾಫೀಜ ಜನರ ಕುಟುಂಬ ಪೋಷಣೆಯ ಮಾರ್ಗವೇ ಇದಾಗಿತ್ತು. ಅವರು ವಿಜಾಪುರಕ್ಕೆ ಬಂದು ಅಲ್ಲಿ ದೊರೆತ ದ್ರವ್ಯದಿಂದಲೇ ತಿರುಗಿ ತಮ್ಮ ಊರಿಗೆ ಹೋಗಿ ಹನ್ನೊಂದು ತಿಂಗಳ ಸಂಸಾರಖರ್ಚನ್ನೂ ನಿಭಾಯಿಸುತ್ತಿದ್ದರು. ತಾತ್ಪರ್ಯವೆಂದರೆ, ವಿಜಾಪುರದಲ್ಲಿಯ ರಮಜಾನದ ಒಂದು ತಿಂಗಳಲ್ಲಿ ದೊರೆತ ದ್ರವ್ಯದ ಮೇಲೆಯೇ ಒಂದು ವರುಷ ಪ್ರಪಂಚ ಸಾಗುವಷ್ಟು ದ್ರವ್ಯ ಹಾಪೀಜರಿಗೂ ದೊರೆಯುತ್ತಿತ್ತು.

## ೪೦. ಸುಲ್ತಾನ ಮಹಮ್ಮದ ಬಾದಶಹನ ಪ್ರಜಾ ಪಾಲನೆ :

ಬಡವರ ಪಾಲನೆ ಮಾಡುವ ಸುಲ್ತಾನ ಮಹಮ್ಮದನ ರೈತ ಪಾಲನೆಯ ಲಕ್ಷಣಗಳ ಬಗ್ಗೆಯೂ ಒಂದು ಕಥೆ ಇದೆ. ಒಂದು ದಿನ ಬ್ರಾಹ್ಮಣನು ಅನೇಕ ರೈತರೊಂದಿಗೆ ಯಾವುದೋ ಕೆಲಸಕ್ಕಾಗಿ ಇಲಾಹಾಪುರ ಬಾಗಿಲದ ಹೊರಗೆ ಹೋದನು. ಹೊರಗೆ ಹೋಗುವ ಸಮಯದಲ್ಲಿ ಬಾಗಿಲಲ್ಲಿ ನಾಯಿಕ ಮತ್ತು ಮೆಹತರ ನಾಯಿಕವಾಡಿ ಕುಳಿತಿದ್ದರು. ಅವರಿಗೆ ಬ್ರಾಹ್ಮಣನು ಸಲಾಮು ಮಾಡಿದ. ಬ್ರಾಹ್ಮಣನ ಸಲಾಮನ್ನು ಆ ನಾಯಿಕ ಮತ್ತು ಮೆಹತರ ನಾಯಿಕವಾಡಿಗಳು ಕುಳಿತಲ್ಲಿಂದಲೇ ಸ್ವೀಕರಿಸಿದರು. ಅವರು ಎದ್ದು ನಿಂತು ಪ್ರಾಮಾಣಿಕತನದಿಂದ ಸಲಾಮುಗಳನ್ನು ಸ್ವೀಕರಿಸಲಿಲ್ಲವೆಂದು ಬ್ರಾಹ್ಮಣನ ಮನಸ್ಸು ನೊಂದಿತು. ಹಾಗೆಯೇ ಬಾಗಿಲಿಂದ ಹೊರ ಹೋದ ಅನಂತರ ಆ ಬ್ರಾಹ್ಮಣನು "ಆ ನಾಯಿಕ ಮತ್ತು ನಾಯಿಕವಾಡಿಗಳು ನನ್ನನ್ನು ಕ್ಷುಲ್ಲಕನನ್ನಾಗಿ ಕಂಡರು. ನನ್ನಲ್ಲಿ ಯೋಗ್ಯತೆಯೇ ಇಲ್ಲವೆಂದು ತಿಳಿದರು. ಪ್ರತಿನಿತ್ಯ ನನ್ನನ್ನು ಕಂಡಾಗ ಅವರು ಎದ್ದು ನಿಲ್ಲುತ್ತಿದ್ದರು. ಅದರಂತೆ ಇಂದು ನಿಲ್ಲಲಿಲ್ಲ ನಾವು ಕೂಡ ಬಾದಶಹರ ಪ್ರಜೆಗಳೇ ಆಗಿದ್ದೇವೆ. ಬಾದಶಹರು ನಮ್ಮನ್ನು ಸಮಾಧಾನದಿಂದ ಇಟ್ಟು, ನಮ್ಮ ಸುಖಸಂತೋಷಕ್ಕಾಗಿ ಬಹಳ ಪ್ರಯತ್ನ ಪಡುತ್ತಾರೆ. ಹೀಗಿದ್ದರೂ ಇವರ ದೃಷ್ಟಿಯಲ್ಲಿ ನಾವು ಕೇವಲ ಕ್ಷುಲ್ಲಕರಾಗಿ ಕಾಣುತ್ತೇವೆ. ಹೀಗಾದಲ್ಲಿ ಇನ್ನು ಮುಂದೆ ನಾವು ಎಲ್ಲರ ದೃಷ್ಟಿಯಲ್ಲೂ ಅಯೋಗ್ಯರಾಗಿ ಕೊನೆಗೆ ಬಾದಶಹನ ದೃಷ್ಟಿಯಿಂದಲೂ ಕೆಳಗೆ ಬೀಳುತ್ತೇವೆ. ಅಂದಮೇಲೆ ಇನ್ನು ಈ ನಗರದಲ್ಲಿ ಇರುವುದು ಸರಿಯಲ್ಲ ಎಂದು ಕಾಣುತ್ತದೆ. ಬೇರೆ ಕಡೆಗೆ ಹೊರಟು ಹೋಗುವುದೇ ಸರಿ, ಯಾಕೆಂದರೆ ನಶ್ವರವಾದ ದೇಹವು ಈ ಮೃತ್ಯು ಲೋಕದಲ್ಲಿ ನಾಲ್ಕುದಿನ ಇರುವುದು. ಅಲ್ಪ ಆಯುಷ್ಯದಲ್ಲೇ ಗೌರವದಿಂದ ಬಾಳುವುದು ಸರಿ. ಅವಮರ್ಯಾದೆಯಿಂದ ಬದುಕುವುದಕ್ಕಿಂತ ಮರಣವೇ ಒಳ್ಳೆಯದು" ಎಂದು ಕೊಂಡನು. ಅದರಂತೆ ಬ್ರಾಹ್ಮಣ ಹಾಗೂ ಆತನ ವಶದಲ್ಲಿದ್ದ ಜನರು ತಮ್ಮ ಜಹಗೀರಿಯನ್ನು ಬಿಟ್ಟು ಬೇರೆ ಕಡೆಗೆ ಹೋಗುವ ಇರಾದೆಯನ್ನು ನಿರ್ಧರಿಸಿ, ಅದೇ ರಾತ್ರಿ ನಗರದ ಹೊರಗೆ ಹೊರಟು ಹೋದರು. ಮರುದಿನ ಬೆಳಿಗ್ಗೆ ಮತ್ತೆಲ್ಲಾದರೂ ಹೋಗಿ ಇರುವುದೆಂದು ನಿರ್ಧರಿಸಿದರು. ತಿರುಗಿ ಮನೆಗೆ ಬರಲಿಲ್ಲ. ರಾತ್ರಿ ಗುಪ್ತಚಾರರು ಈ ವಿಷಯವನ್ನು ಬಾದಶಹನ ಕಿವಿಯ ಮೇಲೆ ಹಾಕಿದರು. ಈ ಸುದ್ದಿಯನ್ನು ಕೇಳಿದ ಬಾದಶಹನಿಗೆ ತುಂಬ ಕೆಟ್ಟೆನಿಸಿತು. ಸೊಕ್ಕಿನಿಂದ ಮೆರೆದ ನಾಯಿಕ ಮತ್ತು ನಾಯಿಕವಾಡಿಗೆ ಯೋಗ್ಯ ಶಿಕ್ಷೆ ಕೊಟ್ಟನಲ್ಲದೆ, ಮಹಾಜನ ಹಾಗೂ ಆತನ ರೈತ ಜನರಿಗೆ ತಿಳಿ ಹೇಳಲು, ದರಬಾರದಿಂದ ಖಾಸಾ ಜನರನ್ನು ಕಳಿಸಿ ಅವರ ಚಿತ್ತ ಸಮಾಧಾನ ಪಡಿಸಿದನು. ಅವರೆಲ್ಲರೂ ತಂತಮ್ಮ ಮನೆಗಳಿಗೆ ಹಿಂತಿರುಗಿ ಬಂದರು. ಆದರೆ 'ಮೊದಲು ನಾವು ಇಲ್ಲಿಯೇ ನಗರದ ಹೊರಗೆಯೇ ಇರುತ್ತೇವೆ. ನಗರದೊಳಗೆ ಬರಲು ನಮ್ಮ ಮನ ಒಪ್ಪುತ್ತಿಲ್ಲ. ಯಾವ ಬಾಗಿಲಿನಿಂದ ನಾವು ಬರುವಾಗ ನಮ್ಮನ್ನು ಕ್ಷುಲ್ಲಕತನದಿಂದ ಕಾಣಲಾಯಿತೋ ಆ ಬಾಗಿಲಲ್ಲಿ ನಾವು ತಿರುಗಿ ಕಾಲಿಡುವುದಿಲ್ಲ' ಎಂದರು. ಈ ವಿಷಯ ಬಾದಶಹನಿಗೆ ತಿಳಿಯುತ್ತಲೇ

ಬಾದಶಹನು, ನಗರದ ಗೌಂಡಿಗಳ ನಾಯಕನನ್ನು ಕರೆದು, ಕೋಟೆಯನ್ನು ಒಡೆದು ಬೇರೆಡೆ ಬಾಗಿಲು ಕಟ್ಟಲು ಆಜ್ಞೆ ಮಾಡಿದನು. ಅವರು ಇಡೀ ರಾತ್ರಿ ಹಗಲು ಕೋಟೆ ಗೋಡೆಯನ್ನು ಒಡೆದು ಬೇರೆ ಬಾಗಿಲನ್ನು ಹಚ್ಚಿದರು. ಅದೇ ಇಂದಿನ ಬಾದಶಾಹಪುರ ಬಾಗಿಲು ಅದರ ಮುಖಾಂತರ ಬ್ರಾಹ್ಮಣ ಮತ್ತು ರೈತರನ್ನು ಬಹು ಆದರದಿಂದ ನಗರಕ್ಕೆ ಬರಮಾಡಿಕೊಂಡರು. ಆ ಮುನ್ನ ನಗರಕ್ಕೆ ಆರೇ ಬಾಗಿಲುಗಳಿದ್ದುವು. ಬಾದಶಾಹಪುರದ ಬಾಗಿಲನ್ನು ಕಟ್ಟಲು ಇದುವೆ ಕಾರಣವೆಂದು ಹೇಳುತ್ತಾರೆ. ಸುಲ್ತಾನ ಮಹಮ್ಮದ ಬಾದಶಹನ ಪ್ರಜಾ ಪಾಲನೆ ಮತ್ತು ದಯಾಳುತನ ಹೀಗಿತ್ತು.

*೪೧. ಇನ್ನೊಂದು ಕಥಾಭಾಗದ ವರ್ಣನೆ :*

ಒಂದು ದಿನ ಅದೇ ಪ್ರಜೆಗಳ ಪಾಲನೆಯನ್ನು ಮಾಡುವವನೂ ಧರ್ಮನಿಷ್ಠನೂ ಆದ ಸುಲ್ತಾನ ಮಹಮ್ಮದ ಬಾದಶಹನು ತನ್ನ ಅರಮನೆಯ ಅತಿ ಎತ್ತರದ ಮಹಡಿಯ ಮೇಲೆ ನಿಂತು ನಾಲ್ಕು ಕಡೆಗೆ ನೋಡುತ್ತಿದ್ದನು. ನಗರದ ಅತಿನಿಬಿಡ ಜನವಸತಿಯ ಅವಲೋಕನವನ್ನು ಮಾಡುತ್ತಿದ್ದನು. ನಾಲ್ಕು ಕಡೆಗಳ ಜನವಸತಿಯಲ್ಲೂ ಹೊಗೆ ಎದ್ದುದನ್ನು ಬಾದಶಹನು ಕಂಡನು ಆದರೆ ನಗರದ ವಸತಿಗಳಲ್ಲಿ ಬ್ರಾಹ್ಮಣರ ಓಣಿಯಲ್ಲೂ ದೊಡ್ಡ ಜನವಸತಿ ಇತ್ತು. ಆ ಓಣಿಯಿಂದ ಹೊಗೆ ಬರುತ್ತಿರಲಿಲ್ಲ. ಅದನ್ನು ಕಂಡ ಬಾದಶಹನಿಗೆ ಬಹಳ ಆಶ್ಚರ್ಯವಾಯಿತು. ತನ್ನ ಹತ್ತಿರ ನಿಂತಿದ್ದ ಜನರೊಂದಿಗೆ ಬಾದಶಹನು ಈ ಕುರಿತು ವಿಚಾರಿಸಿದನು "ಈ ನಗರದ ನಾಲ್ಕು ಕಡೆಗಳಿಂದಲೂ ಹೊಗೆ ಬರುತ್ತಿದೆ. ಆದರೆ ಈ ಬ್ರಾಹ್ಮಣರ ಓಣಿಯಿಂದ ಮಾತ್ರ ಎಲ್ಲಿಯೂ ಅಡುಗೆ ಮನೆಯ ಹೊಗೆ ಬರುತ್ತಿಲ್ಲ. ಅದರ ಕಾರಣ ಏನು" ಎಂದು ವಿಚಾರಿಸಿದನು. ಆಗ ಸನ್ನಿಧಿಯಲ್ಲಿ ನಿಂತಿದ್ದ ಜನರು ವಿನಂತಿ ಮಾಡಿಕೊಳ್ಳುತ್ತ, "ಆ ಓಣಿಯಲ್ಲಿ ಇರುವವರೆಲ್ಲ ಬ್ರಾಹ್ಮಣರು. ಬ್ರಾಹ್ಮಣ ಜನರು ಒಂದೇ ಹೊತ್ತು ಅಡುಗೆ ಮಾಡಿ ಊಟ ಮಾಡುತ್ತಾರೆ" ಎಂದರು. ಆಗ ಮುಗ್ಧನೂ ದಯಾಳುವೂ ಬಾದಶಹನು, 'ಈ ಬ್ರಾಹ್ಮಣರು ಒಂದೇ ಹೊತ್ತು ಅಡುಗೆ ಮಾಡಿ ಒಂದೇ ಹೊತ್ತು ಊಟ ಮಾಡುವ ಕಾರಣ ಏನಿರಬಹುದು' ಎಂದು ವಿಚಾರಿಸಿ, ಬ್ರಾಹ್ಮಣ ಜನರು ಬಹಳ ದರಿದ್ರರಿರಬೇಕು. ಅವರ ಮನೆಗಳಲ್ಲಿ ಏನೊಂದು ಸಂಗ್ರಹವೂ ಇರಲಿಕ್ಕಿಲ್ಲ. ಆದ್ದರಿಂದ ಒಂದೇ ಹೊತ್ತು ಊಟ ಮಾಡುತ್ತಿರಬೇಕು ಎಂದು ತಿಳಿದು ಕಳಕಳಿಯಿಂದ ಆಜ್ಞೆ ಮಾಡಿದನು. 'ಈ ಎಲ್ಲ ಬ್ರಾಹ್ಮಣರ ಜನರ ಭೋಜನದ ನಿತ್ಯ ಖರ್ಚನ್ನು ಸರಕಾರೀ ಖಜಾನೆಯಿಂದ ನೇಮಣೂಕ ಮಾಡಬೇಕು. ಅದರಿಂದಾಗಿ ಈ ಬ್ರಾಹ್ಮಣ ಮಂಡಳಿಯ ಕುಟುಂಬವು ಸ್ವಸ್ಥವಾಗಿ ಇದ್ದರೆ ಪ್ರಪಂಚ ಸರಿಯಾಗಿ ನಡೆಯುತ್ತದೆ. ಹಾಗಾದರೆ ಪ್ರತಿನಿತ್ಯ ಎರಡು ಹೊತ್ತು ಊಟ ಮಾಡುತ್ತಾರೆ' ಎಂದು ಆಜ್ಞೆ ಮಾಡಿದನು. ಬಾದಶಹನಿಗೆ ಬ್ರಾಹ್ಮಣರ ಜಾತಿ ಬೇರೆ ಎಂಬುದೂ ಲಕ್ಷ್ಯಕ್ಕೆ ಬರಲಿಲ್ಲ. ಅವರಿಂದೇನು ಅಂಥ ದೊಡ್ಡ ಕೆಲಸವಾಗುತ್ತದೆಂದೂ ವಿಚಾರಿಸಲಿಲ್ಲ. ಕೇವಲ ಒಂದೇ ಹೊತ್ತು ಊಟ ಮಾಡುತ್ತಾರೆ ಎಂಬುದು ಒಂದು ಲಕ್ಷ್ಯದಲ್ಲಿತ್ತು. ಅವನ ಸನ್ನಿಧಿಯಲ್ಲಿದ್ದ ಜನರೂ ಈ ವಿಷಯದಲ್ಲಿ ಮನಾಯಿ ಮಾಡದವರಾಗಿದ್ದರು. ಆದರೂ ಆ ಜನರು ಒಂದು ಮಾತು ಹೇಳಿದರು. 'ಈ ಬ್ರಾಹ್ಮಣ ಜನರಿಗೆ ಇದು ನಿತ್ಯ ಸ್ವಭಾವವಾಗಿದೆ. ರಾತ್ರಿ ಅಥವಾ ಹಗಲು ಒಂದೇ ಹೊತ್ತು ಊಟ ಮಾಡುವುದು' ಎಂಬುದನ್ನು ಕೇಳಿದ ಬಾದಶಹನು ಏನೂ ಮಾತನಾಡಲಿಲ್ಲ. ಮತ್ತು ಅದೇ ದಿನ ಆಜ್ಞೆ ಮಾಡಿ ಬ್ರಾಹ್ಮಣ ಜನರಿಗೆ ಊಟದ ಖರ್ಚಿಗಾಗಿ 'ಜಾಜತಿ'ಯನ್ನು ನೇಮಣೂಕ ಮಾಡಿ ಕೊಟ್ಟನು. ತಾತ್ಪರ್ಯವೆಂದರೆ ಸುಲ್ತಾನ ಮಹಮ್ಮದನು ಈ ಪ್ರಕಾರದ ದಯಾಳುವಾಗಿದ್ದನು.

### ೪೨. ಸುಲ್ತಾನ ಮಹಮ್ಮದ ಬಾದಶಹನ ಕಾಲಕಿರ್ದಿಯಲ್ಲಿ ರಾಜ್ಯ ವ್ಯವಸ್ಥೆ :

ಸುಲ್ತಾನ ಮಹಮ್ಮದ ಆದಿಲಶಾಹ ಬಾದಶಹನ ಕಾಲಕಿರ್ದಿಯಲ್ಲಿ ಆದಿಲಶಾಹಿ ರಾಜ್ಯದ ಶಕ್ತಿಯು ಮೊದಲಿನ ಬಾದಶಹರ ಕಾಲಕ್ಕಿಂತ ನೂರುಪಟ್ಟು ಅಧಿಕವಾಗಿತ್ತು. ಮೊದಲಿನ ಬಾದಶಹರ ಕಾಲದಲ್ಲಿ, ಬಹುತೇಕ ಸಂಭಾವಿತ ಮತ್ತು ದೊಡ್ಡ ಯೋಗ್ಯತೆಯ ಅಮೀರ ಜನರು, ಶ್ರೀಮಂತರು, ಬಹಳ ಕುದುರೆ ಹಾಗೂ ಸೈನಿಕ ಆಧಾರದಿಂದ ಗರ್ವದಿಂದ ನಡೆಯತ್ತಿದ್ದರು. ಆಜ್ಞೆಯಾದರೂ ಕೂಡ ನಾನಾಪ್ರಕಾರದ ನೆಪಗಳನ್ನೊಡ್ಡಿ ವಿಜಾಪುರಕ್ಕೆ ತಿರುಗಿ ಬರುವ ವಿಷಯದಲ್ಲಿ ಎಷ್ಟೋ ಆಜ್ಞೆಗಳಾದ ನಂತರ, ನಗರದ ಹೊರಗೆ ಎರಡು-ಎರಡೂವರೆ ಕೋಸು ಅಂತರದಲ್ಲಿ ಬಂದು ಇಳಿದು, ಎರಡನೆ ದಿನದ ಚಂದ್ರನಂತೆ ಲೀನರಾಗಿ ತಲೆ ತಗ್ಗಿಸಿಕೊಂಡು, ತಂತಮ್ಮ ಪ್ರದೇಶಗಳಿಗೆ ಹೋಗಲು ಅನುಮತಿ ಪಡೆದುಕೊಂಡು ಹೋಗಿಬಿಡುತ್ತಿದ್ದರು. ಹೀಗೆ ಮೊದಲಿನ ದಿನಗಳಲ್ಲಿ ಸೊಕ್ಕಿನಿಂದ ನಡೆದುಕೊಳ್ಳುತ್ತಿದ್ದರು. ಅದೇ ಅಮೀರ ಜನರು ಈ ಸುಲ್ತಾನ ಮಹಮ್ಮದನ ಕಾಲಕಿರ್ದಿಯಲ್ಲಿ ಕಿಂಚಿತ್ ಸೂಚನೆ ಹೋದರೂ ಸಾಕು ತಕ್ಷಣ ಆಜ್ಞಾಪಾಲನೆ ಮಾಡಿ, ವಿಜಾಪುರಕ್ಕೆಯೇ ನಮಸ್ಕಾರ ಹಾಕಿ ನಗರದೊಳಗೆ ಬರುತ್ತಿದ್ದರು. ಬಾದಶಹನ ಎದುರಿಗೆ ಬಂದು ಮುಜುರೆ ಮಾಡಿ, ಬಾದಶಹನ ಚಾಕರಿಗೆ ನಿಲ್ಲುತ್ತಿದ್ದರು. ದಿಲ್ಲಿಯ ಶಾಹಜಹಾನ ಬಾದಶಹನು ಬಹಳ ದೊಡ್ಡತನ ತೋರಿಸಿ ಸುಲ್ತಾನ ಮಹಮ್ಮದನಿಗೆ ಮಾತ್ರ 'ಬಾದಶಾಹ' ಎಂದು ಪತ್ರವನ್ನು ಕಳಿಸುತ್ತಿದ್ದನು. ದಕ್ಷಿಣ ದೇಶದ ಯಾವುದೇ ಬಾದಶಹನಿಗೂ ಈ ಮೊದಲು ದಿಲ್ಲಿಯ ಬಾದಶಹನಿಂದ 'ಬಾದಶಹ' ಎಂಬ ಬಿರುದು ಬಂದಿರಲಿಲ್ಲ.

ಸುಲ್ತಾನ ಮಹಮ್ಮದನಿಗೆ ಮಾತ್ರ, ಬಾದಶಹ ಎಂಬ ಬಿರುದು ದೊರಕಿತ್ತು. ಅದರಂತೆ, ಮಕ್ಕಾ ಮುಆಜಮಾದಲ್ಲಿಯ ಶ್ರೇಷ್ಠ ಜನರು ಮತ್ತು ಅರಬ ದೇಶದ ಮಾಲೀಕ ಜನರು ಮತ್ತು ಶಾಹಾ ಸಫವೀ ಅಲ್ಲದೆ ಶಾಹಾ ಅಬ್ಬಾಸರಂಥ ದೊಡ್ಡ ದೊಡ್ಡ ಬಾದಶಹರು, ಆಗಾಗ ಬುದ್ಧಿವಂತ ರಾಯಭಾರಿಯ ಜೊತೆಗೆ ನಾನಾ ಪ್ರಕಾರದ ಉತ್ತಮ ಪದಾರ್ಥಗಳನ್ನೂ ಯೋಗ್ಯವಾದ ಕಾಣಿಕೆಗಳನ್ನೂ ಸುಲ್ತಾನ ಮಹಮ್ಮದ ಬಾದಶಹನ ಕಡೆಗೆ ಕಳಿಸಿ, ತಮ್ಮ ಸ್ನೇಹ ಇರಲಿ ಎಂದು ಬರೆದು ಕಳಿಸುತ್ತಿದ್ದರು. ಕುತುಬಶಾಹ ಹಾಗೂ ದಕ್ಷಿಣ ದೇಶದ ಎಲ್ಲ ಸರದಾರ ಜನರು ಮತ್ತು ಫಿರಂಗಿಗಳ ಸರದಾರ ಮಂಡಳಿ, ಮಲೇವಾಡ, ಮಲನಾಡ ಕರ್ನಾಟಕಗಳಲ್ಲಿಯ ಎಲ್ಲ ರಾಜರುಗಳು ಮತ್ತು ನಾಲ್ಕೂ ಕಡೆಯ ಮಹಾನ್ ಗರ್ವಿಷ್ಠ ಸರದಾರರು ಕೂಡ, ಸೇವಕತನವನ್ನು ಹೊಂದಿ ಅನೇಕ ಪ್ರಕಾರದ ಜನರುಗಳನ್ನು, ವರುಷ-ವರುಷಕ್ಕೆ ಕೊಡುವ ಖಂಡಣೆಯನ್ನು ಸುಲ್ತಾನ ಮಹಮ್ಮದ ಬಾದಶಹನಿಗೆ ಕಳಿಸಿ ಮಿತ್ರತೆ, ಸ್ನೇಹ ಹಾಗೂ ಸೇವಕತನ ಧರಿಸಿ ಆಜ್ಞಾಪಾಲನ ಮಾಡುವ ಧರ್ಮವನ್ನು ಸ್ವೀಕರಿಸಿದ್ದರು. ಸುಲ್ತಾನ ಮಹಮ್ಮದ ಬಾದಶಾಹ ಗಾಜಿಯು ತನ್ನ ಮಾಮಾ ಸೈಯದ ಅಬ್ದುಲ ರಹಿಮಾನನ ಮಗಳು ಜಾಹಾನ್ ಬೇಗಮಳ ಜೊತೆಗೆ ಮದುವೆಯಾದಾಗ, ರಾತ್ರಿಹೊತ್ತು ಗಸ್ತಿ ತಿರುಗುವ ಸಮಯದಲ್ಲಿ ಶಾಹ ಅಬ್ಬಾಸ, ಬಾದಶಹನ ರಾಯಭಾರಿಯು ಬಂದು ನಜರು ಒಪ್ಪಿಸಿದ್ದನು. ಪ್ರತಿಯೊಂದು ನಗರದಲ್ಲಿ ವಿಶ್ವವಿಜೇತ ಆದಿಲಶಹನ ತಲವಾರಿನ ಸಾಮರ್ಥ್ಯದ ಚರ್ಚೆ ನಡೆಯುತ್ತಿತ್ತು. ಅತ್ತ ಕಡೆಯ ಎಲ್ಲ ನಗರ ಮತ್ತು ಪ್ರದೇಶಗಳು ಆದಿಲಶಹನ ರಾಜ್ಯಕ್ಕೆ ಸೇರಿದ್ದುವು. ಸೊಲ್ಲಾಪುರದ ಬಹಳ ಗಟ್ಟಿಯಾದ ಕೋಟೆಯನ್ನು ಸುಲ್ತಾನ ಮಹಮ್ಮದ ಬಾದಶಹನು ಕೈವಶ ಮಾಡಿಕೊಳ್ಳಬೇಕೆಂದು ಸಂಕಲ್ಪ ಮಾಡಿದನು. ಆಗ ಆ ಕೋಟೆಯ ಕಿಲ್ಲೆದಾರನಾದ ಸಿದ್ದಿ ರೇಹಾನನು ಕಿಂಚಿತ್ತು ಅವಕಾಶ ನೀಡದೆ ತಕ್ಷಣ ಬಂದು ಸೊಲ್ಲಾಪುರ ಕೋಟೆ ಕೀಲಿಕೈಯನ್ನು ಬಾದಶಹನಿಗೆ ಒಪ್ಪಿಸಿದನು.

## ೪೩. ಇನ್ನೊಂದು ಕಥಾಭಾಗದ ವರ್ಣನೆ :

ಬೆಳದಿಂಗಳ ರಾತ್ರಿಗಳಲ್ಲಿಯ ಒಂದು ರಾತ್ರಿಯಂದು ಸುಲ್ತಾನ ಮಹಮ್ಮದ ಬಾದಶಹನು 'ಅದಾಲತ ಮಹಲ' ಎಂಬ ದೊಡ್ಡ ಮಹಲಿನ ಮಹಡಿಯ ಮೇಲೆ ಇದ್ದನು. ಆ ಮಹಡಿಯನ್ನು ಸುಂದರವಾಗಿ ಅಲಂಕರಿಸಿದ್ದರು. ಸುತ್ತೆಲ್ಲ ಶ್ವೇತವರ್ಣದ ಹೊದಿಕೆಯನ್ನು ಹೊಂದಿಸಿ, ಕೆಳಗೆ ಬಿಳಿಯ ಬಣ್ಣದ ಹಾಸನ್ನು ಹಾಸಿ, ಬೆಳದಿಂಗಳ ರಾತ್ರಿಯ ಭೋಗವಿಲಾಸದ ಸಿದ್ಧತೆಯಲ್ಲಿ ಬಹಳ ಆನಂದದಿಂದ ಇದ್ದನು. ವಜೀರರು, ಅಮೀರ ಜನರು ಇವರೆಲ್ಲ ಪ್ರತಿಯೊಬ್ಬರೂ ಶ್ವೇತವರ್ಣದ ವಸ್ತ್ರಗಳನ್ನೇ ಧರಿಸಿ ಆನಂದದಲ್ಲಿ ಪಾಲ್ಗೊಂಡಿದ್ದರು. ಭರ್ತಿ ಮಧ್ಯರಾತ್ರಿ ಪರಮ ಸಂತೋಷದ ಲಹರಿಗಳು ಬಾದಶಹನ ಸಮುದ್ರದಂಥ ಚಿತ್ತದ ಮೇಲೆ ಮತ್ತು ಎಲ್ಲರ ಚಿತ್ತಗಳಮೇಲೂ ಏಳುತ್ತಿದ್ದುವು.

ಇಂಥ ಒಂದು ಪರಮ ಸಂತೋಷದ ಸಮಯದಲ್ಲಿ ಬಾದಶಹನು ಎದ್ದು ನಿಂತು ಕಿಡಕಿಯ ಮುಖಾಂತರ ವಿಜಾಪುರ ನಗರದ ಜನವಸತಿಯ ಕಡೆಗೆ ನೋಡುತ್ತ, ನಗರದಿಂದ ಎಲ್ಲಿಂದ ಶಬ್ದ ಆಗುತ್ತದೆ ಎಂಬುದನ್ನು ಕೇಳಲು ಕಿಂಚಿತ್ ಕಿವಿಯನ್ನು ಕೊಟ್ಟನು. ಆಗ ಸಂತೋಷ ಆನಂದಗಳ ದನಿಯ ಹೊರತಾಗಿ ಅನೇಕ ವಾದ್ಯಗಳ ನಾದ ಮಾತ್ರ ಕೇಳಿಸುತ್ತಿತ್ತು. ಬೇರೆ ಯಾವ ದನಿಯೂ ಕೇಳುತ್ತಿರಲಿಲ್ಲ. ಆಗ ಬಾದಶಹನು ವಿಚಾರದಲ್ಲಿ ಬಿದ್ದು ಪುನಃ ಆನಂದದಲ್ಲಿ ಮಗ್ನನಾದನು. ಆನಂದ ವಾರ್ತೆಯ ಹೊರತು ಚಿಂತೆಯ ದನಿ ಎಲ್ಲಿಂದಲೂ ಹೊರಡದ್ದಕ್ಕೆ ಅಲ್ಲಾನ ಕೃಪೆಯನ್ನು ನೆನೆಸಿ ಆತನಿಗೆ ನಮಸ್ಕರಿಸಿದನು. ಹಳೆಯ ವಿಶ್ವಾಸಿಕ ಸೇವಕನಾದ ಅಫಜಲಖಾನನು ಸಿಂಹಾಸನದ ಸನ್ನಿಧಿಯಲ್ಲೆ ನಿಂತಿದ್ದನು. ಆತನಿಗೆ ಆಜ್ಞೆ ಮಾಡುತ್ತ 'ಈ ಪೂರ್ತಿ ನಗರ ನನಗೆ ಏನನ್ನುತ್ತದೆ?' ಎಂದು ವಿಚಾರಿಸಿದನು. ಅದಕ್ಕೆ ಅಫಜಲಖಾನನು ವಿನಂತಿ ಮಾಡಿಕೊಳ್ಳುತ್ತ 'ತಮ್ಮ ಆಯುಷ್ಯ ಹಾಗೂ ರಾಜ್ಯ ಸ್ವಸ್ಥವಾಗಿ ಇರಲು ಮತ್ತು ತಮ್ಮ ಯೋಗ್ಯತೆ ಐಶ್ವರ್ಯ ವೃದ್ಧಿಯಾಗಲು, ಈ ಎಲ್ಲ ಸಂತೋಷ ಕೂಟಗಳು, ನ್ಯಾಯ ನಿರ್ಣಯ ಮಾಡುವ, ಉತ್ತಮ ನಡತೆಯ, ಕೃಪೆ ಮಾಡುವ, ರೈತರ ಪಾಲನೆ ಮಾಡುವ ತಮ್ಮ ಸಲುವಾಗಿ ಇವೆ' ಎಂದನು. ಅದನ್ನು ಕೇಳಿ ಬಾದಶಹನು ತುಂಬ ಸಂತೋಷಪಟ್ಟನು. ತುಸು ವಿಚಾರ ಮಾಡಿ ಮತ್ತೆ ಅಫಜಲಖಾನನಿಗೆ ಆಜ್ಞೆ ಮಾಡುತ್ತ 'ಒಂದು ವೇಳೆ ನಮಗೆ ದಿಲ್ಲಿಯ ಬಾದಶಹನ ಜೊತೆಗೆ ಯುದ್ಧ ಮಾಡುವ ಪ್ರಸಂಗ ಬಂದರೆ ಅದರ ಪರಿಣಾಮ ಏನಾದೀತು' ಎಂದು ಕೇಳಿದನು. ಆಗ ಅಫಜಲಖಾನನು 'ಇಂದು ಕೇಳುತ್ತಿರುವ ಸಂತೋಷದ ದನಿಯ ಬದಲಾಗಿ ಸಂಕಟದ ಶಬ್ದಗಳನ್ನು ಕೇಳಬೇಕಾಗುತ್ತದೆ, ಸುವಾಸಿನಿಯರು ತಮ್ಮ ಕೈಯಲ್ಲಿಯ ಬಳೆಗಳನ್ನು ಒಡೆದುಕೊಳ್ಳುತ್ತಾರೆ. ಅವರ ಶೋಕದ ಶಬ್ದಗಳನ್ನು ಕೇಳಬೇಕಾಗುತ್ತದೆ. ಮನುಷ್ಯನ ಪ್ರಾಣ ಹೋದರೆ, ಆ ಪ್ರೇತದ ಜೊತೆಗೆ ಕೂಗುವ ದನಿಯನ್ನು ಕೇಳಬೇಕಾಗುತ್ತದೆ. ತಾಬೂತದ ದುಃಖದ ರೋದನವನ್ನು ಕೇಳಬೇಕಾಗುತ್ತದೆ' ಎಂದನು.

## ೪೪. ಸುಲ್ತಾನ ಮಹಮ್ಮದ ಬಾದಶಹನು ಅಫಜಲಖಾನನಿಗೆ ಈ ವಿಷಯದಲ್ಲಿ ವಿಚಾರಿಸಿದ ಕಾರಣ ಮತ್ತು ಅಫಜಲಖಾನನ ಉತ್ತರ :

ಈ ಮುನ್ನ ಒಂದು ವಾರದ ಹಿಂದೆ ದಿಲ್ಲಿಯ ಬಾದಶಹನ ರಾಯಭಾರಿಯು ಅತ್ಯಂತ ಸಿಟ್ಟು ಬರುವ ವಿಷಯಗಳಿಂದ ತುಂಬಿದ ಆಜ್ಞಾಪತ್ರವನ್ನು ತೆಗೆದುಕೊಂಡು ಬಂದಿದ್ದನು. ಸಿಟ್ಟಿನ ಕಾರಣವೆಂದರೆ

ಹಿಂದಿನ ಬಾದಶಹನ ಕಾಲದಲ್ಲಿ ಅರ್ಕಕಿಲ್ಲೆಯ ಒಳಗಡೆಗೆಯೇ ಅದಾಲತಿನ ಸ್ಥಳವಿತ್ತು. ಸುಲ್ತಾನ ಮಹಮ್ಮದ ಆದಿಲಶಹ ಬಾದಶಹನು ತನ್ನ ಕಾಲಕಿರ್ದಿಯಲ್ಲಿ ರಾಜ್ಯಾಡಳಿತದ ಆರಂಭದ ದಿನಗಳಲ್ಲಿಯೆ ದಾದ-ಫಿರ್ಯಾದುಗಳ ನ್ಯಾಯಾಲಯುದ ಸ್ಥಳವನ್ನು ಅರ್ಕ-ಕಿಲ್ಲೆಯು ಹೊರಗೆಡ ಮಾಡಿ, ನ್ಯಾಯಾಲಯಕ್ಕಾಗಿಯೇ ಕಟ್ಟಡವನ್ನು ಕಟ್ಟಿ ಅಲ್ಲಿಗೆ ನ್ಯಾಯಾಲಯವನ್ನು ಸ್ಥಳಾಂತರಿಸಿದ್ದನು.

ಅದು ದೊಡ್ಡ ಕಟ್ಟಡವಾಗಿತ್ತು. ಈ ಕಟ್ಟಡ ಕುರಿತು ಇತಿಹಾಸದ ಬಗ್ಗೆ ಒಂದು ಪರ್ಶಿಯನ್ನ ದ್ವಿಪದಿಯಲ್ಲಿ ಹೇಳಿದ್ದರ ಅರ್ಥ ಹೀಗಿದೆ. 'ಎಷ್ಟೊಂದು ಆಶ್ಚರ್ಯಜನಕವಾದ ಕಟ್ಟಡವಿದು. ಆಕಾಶದಲ್ಲಿರುವ ಶನಿ ಗ್ರಹದವರೆಗೂ ಇದರ ತಲೆ ಮುಟ್ಟಿದೆ ಆ ಕಟ್ಟಡದ ಆಶ್ರಯದಲ್ಲಿ ವಿಶ್ವವೇ ವಿಶ್ರಾಂತಿ ಪಡೆಯುತ್ತಿದೆ' ॥ ೧ ॥ ಇಂದು ಆ ಕಟ್ಟಡಕ್ಕೆ 'ಆಸಾರ ಮಹಲ' ಎಂದು ಕರೆಯುತ್ತಾರೆ ಅಲ್ಲಿ ಹಜರತ ಸೈಯದ ಮಹಮ್ಮದ ಮುಸ್ತಫಾ ರಸೂಲಲ್ಲಾಹ ಆಲೇಹೆ ವಾಲೇಹಿ ವಸ್ಸಲಮ್ ಅವರ ಕೇಶಗಳನ್ನು ಇಂದಿಗೂ ಇಟ್ಟಿದ್ದಾರೆ. ಆಸಾರ-ಮಹಲವು ವಿಶ್ವದಲ್ಲಿಯ ಎಲ್ಲ ಜನರು ಅಲ್ಲಾನ ದರ್ಶನ ಪಡೆಯುವ ಯಾತ್ರಾಸ್ಥಾನವಾಗಿದೆ. ಮೊದಲಿನ ಬಾದಶಹರ ಕಾಲಕಿರ್ದಿಯಲ್ಲಿ ಚಿತ್ತ ಸಮಾಧಾನಕ್ಕಾಗಿ ಮತ್ತು ಮನೋರಂಜನೆಗಾಗಿ ಒಂದು ವೇಳೆ ಆನೆಗಳ ಯುದ್ಧವನ್ನು ಏರ್ಪಡಿಸಿ ಅದರ ಚಮತ್ಕಾರವನ್ನು ನೋಡಿ ಸಂತೋಷ ಪಡಬೇಕೆಂದು ಬಾದಶಹನ ಮನಸ್ಸಿನಲ್ಲಿ ಬಂದರೆ, ಆಗ ಅದನ್ನು ಕೋಟೆಯ ಒಳಗೆಯೇ ಏರ್ಪಡಿಸಿ ಆ ತಮಾಷೆಯನ್ನು ನೋಡುತ್ತಿದ್ದರು. ಸುಲ್ತಾನ ಮಹಮ್ಮದ ಬಾದಶಹನು ತನ್ನ ಕಾಲಕಿರ್ದಿಯಲ್ಲಿ ಕೋಟೆ ಹೊರಗೆ ಆನೆಗಳ ಸಮರ ಸ್ಪರ್ಧೆಗಾಗಿ ಒಂದು ವಿಸ್ತೀರ್ಣವಾದ ಮೈದಾನವನ್ನೆ ಸಿದ್ಧಪಡಿಸಿದ್ದನು. ಆ ಬಯಲು 'ಶರ್ಜಬುರುಜ'ದ ಮುಂದೆ ಇದೆ. ಆ ಸ್ಥಳವನ್ನು ಆನೆಗಳ ಸಮರಕ್ಕಾಗಿ ನಿರ್ಧರಿಸಿದ್ದನು. ಆ ಬಯಲು ಇಂದು 'ವಾಲಾಟ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಸುಲ್ತಾನ ಮಹಮ್ಮದ ಬಾದಶಹನು ತನ್ನ ವಜೀರನಾದ ಖಾನಮಹಮ್ಮದನಿಗೆ, 'ಖಾನಖಾನಾ' ಎಂಬ ಬಿರುದನ್ನು ಕೊಟ್ಟಿದ್ದನು. ದಿಲ್ಲಿಯ ಬಾದಶಹನು ಶ್ರೇಷ್ಠತ್ವದಲ್ಲಿ ಮತ್ತು ದೊಡ್ಡಸ್ತಿಕೆಯಲ್ಲಿ ತನ್ನ ತಲೆಯನ್ನು ಆಕಾಶಕ್ಕೆತ್ತರಿಸಿ ನನಗಿಂತ ಬೇರೊಬ್ಬ ದೊಡ್ಡವನಿಲ್ಲ ಎಂದು ತಿಳಿದಿದ್ದನು. ತನ್ನ ಮುಂದೆ ತನಗೆ ಸರಿಸಮನಾದ ಯಾವನೂ ಈ ಜಗತ್ತಿನಲ್ಲಿ ಇಲ್ಲವೆಂದು ತಿಳಿದಿದ್ದನು. ದಕ್ಷಿಣದ ಬಾದಶಹರನ್ನು ತನ್ನ ಚಾಕರರು ಮತ್ತು ಖಂಡಣಿಯನ್ನು ಕೊಡುವವರೆಂದು ತಿಳಿದು, ಅವರನ್ನು 'ಖಾನ' ಎಂದು ಕರೆಯುತ್ತಿದ್ದನು. ಕಾಗದ ಪತ್ರಗಳಲ್ಲಿ, ಲಕೋಟೆಗಳಲ್ಲಿ, ಆಜ್ಞಾಪತ್ರಗಳಲ್ಲಿ ದಕ್ಷಿಣದ ಬಾದಶಹರನ್ನು ಉಲ್ಲೇಖಿಸಿ ಬರೆಯುವಾಗ, ಆ ಪತ್ರಗಳಲ್ಲಿ ದಕ್ಷಿಣದ ಬಾದಶಹರನ್ನು 'ಬಾದಶಹ' ಎಂದು ಸಂಬೋಧಿಸಿ ಬರೆಯುತ್ತಿರಲಿಲ್ಲ. ಹೆಸರು ಬರೆದು 'ಖಾನ' ಎಂದು ಬರೆಯುತ್ತಿದ್ದನು. ಅದೇ ಶಾಹಜಹಾನ ಬಾದಶಹನು, ಅನೇಕ ದಿನಗಳ ನಂತರ ಹಿಜರಿ ಸನ್ ೧೦೫೮ ರಲ್ಲಿ (ಕ್ರಿ.ಶ. ೧೬೪೮) ಸುಲ್ತಾನ ಮಹಮ್ಮದ ಆದಿಲಶನಿಗೆ ಬಾದಶಹನು 'ಶಾಹ' ಎಂಬ ಬಿರುದನ್ನು ಕೊಟ್ಟನು. ಯಾಕೆಂದರೆ ಸುಲ್ತಾನ ಮಹಮ್ಮದ ಬಾದಶಹನ ರಾಜ್ಯ ಬಹಳ ವಿಸ್ತಾರವಾಗಿತ್ತು. ಮತ್ತು ಆತನ ಕೀರ್ತಿ ಆಕಾಶದವರೆಗೂ ಬೆಳೆದಿತ್ತು, ಆತನ ಲಕ್ಷಣಗಳೂ ಉತ್ತಮ ಯೋಗ್ಯವಾಗಿದ್ದವು. ಆದರೆ ಸುಲ್ತಾನ ಮಹಮ್ಮದನ ಪತ್ರದಲ್ಲಿ ಹಿಂದಿನ ಕರಾರುಗಳು ಮತ್ತಿತರ ಖಂಡಣಿ ಕುರಿತಾದ ವಿಷಯಗಳ ಬದಲಾಗಿ, ಆತನ ಕೃತಘ್ನ ವಿಷಯಗಳು ಬರೆಯಲ್ಪಟ್ಟಿದ್ದುವು. ಆದ್ದರಿಂದ ಶಾಹಜಹಾನನು ಸಿಟ್ಟಾಗಿ ಪತ್ರ ಬರೆದಿದ್ದನು. ಅದರಲ್ಲಿ ಸುಲ್ತಾನ ಮಹಮ್ಮದ ಬಾದಶಹನಿಗೆ "ಬಾದಶಹರ ನಡತೆಯಲ್ಲಿ ಮೂರು ಕರ್ತವ್ಯಗಳಿವೆ. ಈ ಮೂರು ಕೆಲಸಗಳನ್ನು ನೀನು ಬಿಟ್ಟುಕೊಟ್ಟಿರುವಿ; ನಿನ್ನ ತಂದೆ, ಅಜ್ಜ ಹೇಗೆ ನಡೆಯುತ್ತಿದ್ದರೋ ಆ ಮಾರ್ಗವನ್ನೂ ಬಿಟ್ಟಿರುವಿ. ಇತ್ತಕಡೆಯ

ಸೇವೆ ಮತ್ತು ಆಜ್ಞೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ನಮ್ರತೆಯ ಮಾರ್ಗದಿಂದ ನಡೆಯಬೇಕು. ಇಲ್ಲವಾದಲ್ಲಿ ನಮ್ಮ ಸಮುದ್ರದಂಥ ಸೈನ್ಯವನ್ನು ಕಳಿಸಿ ಪ್ರಳಯವನ್ನೇ ಸೃಷ್ಟಿಸಬೇಕಾಗುತ್ತದೆ. ಇದನ್ನು ತಿಳಿದಿರಬೇಕು' ಹೀಗೆ ಶಾಹಜಹಾನ ಬಾದಶಹನು ಪತ್ರವನ್ನು ಬರೆದಿದ್ದನು. ದಿಲ್ಲಿಯ ಪತ್ರದ ಅಭಿಪ್ರಾಯ ತಿಳಿದ ನಂತರ ಸುಲ್ತಾನ ಮಹಮ್ಮದ ಬಾದಶಹನು, ತನ್ನ ವಜೀರ-ಅಮೀರ ಜನರನ್ನು ಕರೆಯಿಸಿ, ಈ ಪತ್ರದ ಉತ್ತರವನ್ನು ಹೇಗೆ ಬರೆಯಬೇಕೆಂದು ವಿಚಾರಿಸಿದನು.

ಆಗ ಅವರೆಲ್ಲ 'ಆರಂಭ ಮಾಡಿರಿ, ನಾವು ಸಿದ್ದರಾಗಿದ್ದೇವೆ' ಎಂದು ಹೇಳುವ ಬದಲಾಗಿ ಯವನ ಜನರ ರೀತಿಯಂತೆ 'ಬಿಸಮಿಲ್ಲಾ' ಎಂದು ಹೇಳಿದರು. ಮುಂದುವರಿದು ಹೇಳುತ್ತ, 'ನಾವೂ ಇದನ್ನೇ ಬಯಸುತ್ತಿದ್ದೇವೆ, ಇದೇ ದಿನದ ದಾರಿಯನ್ನು ಕಾಯುತ್ತಿದ್ದೇವೆ. ಯುದ್ಧ ಮಾಡಬೇಕೆಂಬುದೇ ನಮ್ಮ ಮನದಲ್ಲಿದೆ. ವಿಷದ ನೀರನ್ನು ಕುಡಿಸಿದ ದಕ್ಷಿಣದ ತಲವಾರಗಳು ದೆಹಲಿಯ ಉಕ್ಕಿನ ಮೇಲೆ ತಿಕ್ಕ ಬೇಕು ಎಂಬುದೇ ಮನದಲ್ಲಿದೆ. ನಮಗೂ ಕೂಡ ಸ್ವತಃ ಬಂದು ನರ್ಮದೆಯ ದಂಡೆಯ ಮೇಲೆ ಹಿಂದುಸ್ತಾನಿ ಸೈನ್ಯ ಮೊಕಾಬಿಲೆಯನ್ನು ಮಾಡಬೇಕೆಂಬ ಬಯಕೆಯಾಗಿದೆ' ಎಂದರು. ಹೀಗೆ ಎಲ್ಲರೂ ಹೇಳಿದಾಗ ಸುಲ್ತಾನ ಮಹಮ್ಮದ ಆದಿಲಶಹನು ಸೈನ್ಯದ ಹಾಗೂ ಕಾರಭಾರಿಗಳ ಮನದ ಇಂಗಿತವನ್ನು ತಿಳಿದು, ಅವರ ಸಲಹೆಯಂತೆ ಯುದ್ಧ ಮಾಡುವುದೇ ಸೂಕ್ತವೆಂದು ತಿಳಿದುಕೊಂಡನು. ಶಾಹಜಹಾನ ಬಾದಶಹನ ಪತ್ರಕ್ಕೆ ಸರಿಯಾದ ಉತ್ತರವನ್ನು ಬರೆದು, ಅದನ್ನು ತಂದ ರಾಯಭಾರಿಯ ಕೈಯಲ್ಲೆ ಕೊಟ್ಟು 'ಬೆಳದಿಂಗಳು ರಾತ್ರಿಯಲ್ಲಿ ಹವೇಲಿಯ ಮಹಡಿಯ ಮೇಲೆ ಇದ್ದ ವಿವರಗಳನ್ನು ಈ ಮೊದಲೆ ಬರೆಯಲಾಗಿದೆ. ಅಫಜಲಖಾನನು ಹೇಳಿದ್ದನ್ನು ಕೇಳಿದ ಮೇಲೆ ಆಜ್ಞೆ ಮಾಡುತ್ತ ಅವನಿಗೆ, ನೀನು ಹೇಳಿದ್ದು ಸತ್ಯ ಮತ್ತು ಸರಿಯಾಗಿದೆ ಎಂಬುದು ನಮ್ಮ ಗಮನಕ್ಕೆ ಬಂದಿದೆ. ಈಗ ನಿಮ್ಮ ಯೋಜನೆಗಳನ್ನು ಹೇಗೆ ನಿಬಾಯಿಸುತ್ತೀರಿ?' ಎಂದು ಕೇಳಿದಾಗ, ಅಫಜಲಖಾನನು ವಿನಂತಿ ಮಾಡಿಕೊಳ್ಳುತ್ತ, 'ಆದರೂ ತಾವು ಅಲ್ಲಾನ ಕೃಪೆಯಿಂದ ಮತ್ತು ಬಾದಶಾಹಿ ವೈಭವ, ಶ್ರೀಮಂತಿಕೆಗಳ ಯೋಗದಿಂದ ಸಾಮರ್ಥ್ಯ ಹಾಗೂ ಧೈರ್ಯದಿಂದಲೇ ಇರಬೇಕು. ಹಿಂದುಸ್ತಾನದ ಸೈನ್ಯ ಬರುತ್ತಿರಬೇಕು. ಅದನ್ನು ನರ್ಮದೆಯ ನೀರಿನಿಂದ ಇತ್ತ ದಾಟಿ ಬರದಂತೆ ತಡೆ ಹಿಡಿಯುವ ಸಾಮರ್ಥ್ಯ ನಮ್ಮಲ್ಲಿದೆ. ಆದರೆ ಇದು ಬಹಳ ಪ್ರಳಯವಾದ ನಂತರ ಮತ್ತು ಬಹಳ ಜನರ ಸಾವು ನೋವುಗಳ ಅನಂತರ ಆಗುತ್ತದೆ. ಯಾಕೆಂದರೆ ಸಾವಿರಾರು ಅರ್ಹ ಜನರು ಮತ್ತು ದೊಡ್ಡ ದೊಡ್ಡ ಧೀರ ಸರದಾರರು ಸಿಪಾಯಿಗಳು ಸಾಯುತ್ತಾರೆ. ಸಾಕಷ್ಟು ಹಾನಿಯಾಗುತ್ತದೆ. ಸಾವಿರಾರು ಸ್ತ್ರೀಯರು ವಿಧವೆಯರಾಗುತ್ತಾರೆ. ಲಕ್ಷಾವಧಿ ಸ್ತ್ರೀಯರ ಕೈಗಳಲ್ಲಿಯ ಕಂಕಣಗಳು-ಬಳೆಗಳು ಒಡೆಯುತ್ತವೆ. ಮನೆ-ಮನೆಗಳಲ್ಲಿ ಮನುಷ್ಯರು ಸತ್ತಾಗ, ಸತ್ತ ಮನೆಗಳಿಗೆ ಮಾತನಾಡಿಸಲು ಒಬ್ಬರೊಬ್ಬರಲ್ಲಿ ಹೋದಾಗ ಎಲ್ಲೆಡೆ ಸೂತಕವೇ ಆಗಿ ಹೋಗುತ್ತದೆ. ಒಂದುವೇಳೆ ಪ್ರಸಂಗಾನುಸಾರವಾಗಿ, ಸೇವಕತನ ಹಾಗು ಆಜ್ಞಾಧಾರತ್ವವನ್ನು ಸ್ವೀಕರಿಸಿ. ಸೈನಿಕ ರೈತರು ಸಾಯುವ ಸಂಕಟದಿಂದ ಪಾರುಮಾಡಿ, ಜೀವದಾನ ಮಾಡಿ. ಎಲ್ಲರನ್ನೂ ಉಳಿಸುವುದು ದೂರದೃಷ್ಟಿಯ ಬುದ್ಧಿವಂತರಿಗೆ ಇದು ಒಪ್ಪಲಾರದ ಮಾತೇನೂ ಅಲ್ಲ. ಹೀಗೆ ಮಾಡಿದರೆ ತಮ್ಮ ಶೂರತ್ವಕ್ಕೂ ಅವಮಾನ ಬಂದಂತಲ್ಲ. ಸ್ವಾರ-ಸಿಬ್ಬಂದಿ ಇತ್ಯಾದಿ ಸರಕಾರಿ ಸೈನ್ಯದ ನಾಶವೂ ಆಗುವುದಿಲ್ಲ. ಬಹುತೇಕ ಬುದ್ಧಿವಂತರಿಗೆ ಈ ಕೆಲಸ ಬಹಳ ಉತ್ತಮವೆಂದು ಒಪ್ಪಿಗೆಯಾಗುತ್ತದೆ' ಎಂಬುದಾಗಿ ವಿನಂತಿ ಮಾಡಿಕೊಂಡು ಹೇಳಿದನು.

ಆಗ ಆದಿಲಶಹ ಬಾದಶಹನು ಕಳಿಸಿದ ಪತ್ರವನ್ನು ಮೂರು ಮಜಲಿನ ಅಂತರದಿಂದ ತಿರುಗಿ ತರಿಸಿ ಅದನ್ನು ಹಿಂದಕ್ಕೆ ತೆಗೆದುಕೊಂಡು ಅದನ್ನು ರದ್ದು ಮಾಡಿ, ಮತ್ತೆ ಸ್ನೇಹ ಪರತೆಯ ಮಾತುಗಳಿಂದ ಬರೆದು, ಸೇವಕತನವನ್ನು ಧಾರಣ ಮಾಡಿರುವಂತೆ, ಸೇವಕತನದ ಇರಾದೆಯಿಂದ ಪತ್ರ ಬರೆದನು. ಎರಡು ಕೆಲಸಗಳನ್ನೂ ವರ್ಜ್ಯಮಾಡಿ ಅದಾಲತ ಕಟ್ಟಡ ಹಾಗೂ ಆನೆಗಳ ಸ್ಪರ್ಧಾಸಮರ ಸ್ಥಾನಗಳನ್ನು ಕೋಟೆಯ ಹೊರಗೆ ನಿರ್ಧರಿಸಿದ್ದನ್ನು ಬದಲಿಸಿ, ಕೋಟೆಯ ಒಳಗಡೆಯೇ ಅವುಗಳ ಸ್ಥಾನವನ್ನ ಸೂಚಿಸಿದನು. ತನ್ನ ಅಮೀರನಿಗೆ 'ಖಾನಖಾನ' ಬಿರುದು ಕೊಟ್ಟುದರ ಬಗ್ಗೆ ಶಾಹಜಹಾನನಿಗೆ ಬಹಳ ಸಿಟ್ಟು ಬಂದಿತ್ತು. ಅದರ ಬಗ್ಗೆ ಬರೆಯುತ್ತ 'ನಾನು ನಿಮ್ಮ ದರಬಾರದಲ್ಲಿಯ ಖಾನ ಮಂಡಳಿಗಳಲ್ಲಿಯ ಒಬ್ಬ ಖಾನ, ಈತ ನನ್ನ ಖಾನ ಆದ್ದರಿಂದ 'ಖಾನಖಾನ' ಎಂಬ ಬಿರುದನ್ನು ಕೊಟ್ಟಿರುವೆ, ಎಂದು ಬರೆದು ಕಳಿಸಿದನು.

### ೪೫. ಸಾರಾಂಶ :

ನ್ಯಾಯ ನಿರ್ಣಯಿಸುವ ಹಾಗೂ ಪ್ರಜೆಗಳ ಪಾಲನೆ ಮಾಡುವ ಸುಲ್ತಾನ ಮಹಮ್ಮದ ಬಾದಶಹನು ಯುದ್ಧ ಪ್ರಸಂಗ ಬಂದಾಗ ಅದನ್ನು ನಿವಾರಿಸಿ, ಬಹಳ ದೊಡ್ಡತನ ಸಹನಶೀಲತೆಯನ್ನು ತೋರಿದನು. ಮತ್ತು ಸೈನ್ಯವನ್ನು ರೈತಾಪಿ ಜನರನ್ನು ಸುಖಸಂತೋಷಗಳಿಂದ ಬದುಕುವಂತೆ ಮಾಡಿದನು. ೩೦ ವರುಷಗಳ ವರೆಗೆ ಇದೇ ರೀತಿಯಾಗಿ ಆತನ ಕಾಲದಲ್ಲಿ ಪೃಥ್ವಿಗೆ ಮತ್ತು ಪೃಥ್ವಿಯಲ್ಲಿ ಇರುವ ಜನರಿಗೆ ಸುಖ ಮತ್ತು ವಿಶ್ರಾಂತಿಯನ್ನು ಕೊಟ್ಟನು.

### ೪೬. ದೂರದೃಷ್ಟಿಯ ಜನರಿಗೆ ಗೊತ್ತಿದ್ದಂತೆ :

ಯೂಸುಫ ಆದಿಲಶಾಹ ಬಾದಶಹನ ರಾಜ್ಯದ ಪ್ರಾರಂಭದಿಂದ ಸಿಂಕದರ ಆದಿಲಶಹನ ದೈವದ ಸೂರ್ಯನ ಸಾಯಂಕಾಲದ ಪರ್ಯಂತ, ಕಡಿಮೆ-ಹೆಚ್ಚು ಸುಮಾರು ೨೦೦ ವರುಷಗಳಾಗಿವೆ. ಅದರಲ್ಲಿ ಇಬ್ರಾಹಿಮ ಆದಿಲಶಹ ಮತ್ತು ಸುಲ್ತಾನ ಮಹಮ್ಮದ ಆದಿಲಶಹನ ಕಾಲದ ಮಧ್ಯಭಾಗವು ಒಟ್ಟು ೮೦ ವರುಷಗಳಾಗುತ್ತವೆ. ಈ ೮೦ ವರುಷ ಪೂರ್ಣ ಸುಖದಲ್ಲಿ, ಆನಂದದಲ್ಲಿ ಮತ್ತು ಅತ್ಯಂತ ಸಂತೋಷದ ಕಾಲವಾಗಿದೆ. ರಾಜ್ಯ ಹಾಗೂ ಜನರು ಸಂಪೂರ್ಣ ಸ್ವಸ್ಥತೆಯಲ್ಲಿ ಇದ್ದರು. ಆದಿಲಶಾಹಿ ರಾಜ್ಯದ ಸೂರ್ಯನು ಯೂಸುಫ ಆದಿಲಶಾಹನ ಪೂರ್ವದಿಕ್ಕಿನಿಂದ ಉದಯಿಸಿ ದಿನದಿಂದ ದಿನಕ್ಕೆ ಅಧಿಕವಾಗಿ ಬೆಳೆಯುತ್ತ ಹೋಯಿತು. ಆ ಸೂರ್ಯನು ಈ ಇಬ್ಬರು ಬಾದಶಹರ ಕಾಲದಲ್ಲಿ, ಅಂದರೆ ಇಬ್ರಾಹಿಮ ಹಾಗೂ ಮಹಮ್ಮದ ಆದಿಲಶಾಹಿಗಳ ಕಾಲದಲ್ಲಿ ಪೂರ್ಣ ಉಚ್ಚತ್ವಕ್ಕೆ ಏರಿ, ಆಕಾಶದ ಮಧ್ಯಭಾಗಕ್ಕೆ ಬಂದು ಮುಟ್ಟಿತು. ಅನಂತರ ಆ ಸೂರ್ಯನು ಕೆಳಗೆ ಇಳಿಯಲು ಪ್ರಾರಂಭಿಸಿದನು. ಮಹಮ್ಮದ ಆದಿಲಶಹನ ಅನಂತರ ಆ ಸೂರ್ಯನು ಕೆಳಗೆ ಇಳಿಯಲು ಹತ್ತಿ, ಸಿಕಂದರ ಬಾದಶಹನ ಕಾಲದಲ್ಲಿ ಅಸ್ತಂಗತನಾದನು. ಇದರಲ್ಲಿಯ ತಾತ್ಪರ್ಯವೆಂದರೆ-ಸುಲ್ತಾನ ಮಹಮ್ಮದ ಬಾದಶಹನ ಕಾಲದ ಅನಂತರ ರಾಜ್ಯದ ವೈಭವವು ದಿನದಿಂದ ದಿನಕ್ಕೆ ಕಡಿಮೆಯಾಗಹತ್ತಿತು. ಆ ವೈಭವವು ಸಿಕಂದರ ಬಾದಶಹನ ಕಾಲದಲ್ಲಿ ಮುಳುಗಿತು. ಆದರೂ ನಾಲ್ಕು ಬಾದಶಹ ಕಾಲದಲ್ಲಿ ವೈಭವವು ಬೆಳೆಯುತ್ತ ಹೋದರೂ, ವೈರತ್ವದಿಂದಾಗಿ ಯುದ್ಧ, ಸಮರ ಪ್ರಸಂಗಗಳು ಬಂದು, ಬಹಳ ಸಂಕಟ ಹಾಗೂ ವಿಘ್ನಗಳಿಂದ ಎಲ್ಲಿಯೂ ಸಖ್ಯವಿರಲಿಲ್ಲ ಯುದ್ಧಗಳಿಂದಾಗಿ ಸಮಯವೇ ಉಳಿದಿರಲಿಲ್ಲ ಅಲೀ ಆದಿಲಶಹನ

ಕಾಲದವರೆಗೆ ತಲವಾರಗಳಿಗೆ ಮತ್ತು ಭಲ್ಲೆಗಳಿಗೆ ವಿಶ್ರಾಂತಿಯೇ ಇರಲಿಲ್ಲ. ಕುದುರೆಗಳಿಗೆ ಮತ್ತು ಶೂರರಿಗೆ ಕಿಂಚಿತ್ ಉಸಿರಾಡಿಸಲೂ ಅವಕಾಶವಿರಲಿಲ್ಲ. ಅದರಂತೆ ಕೊನೆಯ ಇಬ್ಬರ ಕಾಲವು ದಂಗೆ, ಗದ್ದಲ ಮತ್ತು ನಾನಾ ಪ್ರಕಾರದ ಒಳಸಂಚುಗಳಿಂದ ಕೂಡಿತ್ತು. ಅಲ್ಲಿ ಸುಖದ ಹೆಸರೇ ಇರಲಿಲ್ಲ. ಅಲ್ಲಿ ಏನಾದರೂ ಸುಖ, ಸ್ವಸ್ಥತೆ ರಾಜ್ಯದ ಉತ್ತಮಿಕೆ, ವಿಶ್ರಾಂತಿ, ಆನಂದ ಮತ್ತು ಸಂತೋಷಗಳು ಇದ್ದರೆ, ಈ ಮೇಲೆ ಬರೆದ ಇಬ್ಬರು ಬಾದಶಹರ ಕಾಲದ ೮೦ ವರುಷಗಳಲ್ಲಿ ಇತ್ತು.

### ೪೭. ಸುಲ್ತಾನ ಮಹಮ್ಮದ ಆದಿಲಶಹನ ಮರಣ :

ಸುಲ್ತಾನ ಮಹಮ್ಮದ ಆದಿಲಶಹನು ದಿನಾಂಕ ಇಪ್ಪತ್ತಾರು ಮೊಹರಮ್ ತಿಂಗಳ ಹಿಜರಿ ಸನ್ ೧೦೬೭ರಂದು (೪ ನವಂಬರ ೧೬೫೬ ಕ್ರಿ.ಶ) ಮರಣ ಹೊಂದಿದನು. ಸುಲ್ತಾನ ಮಹಮ್ಮದ ಆದಿಲಶಹನು ಜೀವಂತ ಇರುವಾಗಲೇ ಸ್ವತಃ ನಿಂತು ಗುಂಬಜ ಎಂದರೆ ಗುಮ್ಮಟವನ್ನು ಕಟ್ಟಿಸಿದ್ದನು. ಆ ಗುಮ್ಮಟದಲ್ಲಿಯೆ ವಿಶ್ರಾಂತಿ ಪಡೆದನು. ಆತನ ಶವವನ್ನು ಆತನೇ ಕಟ್ಟಿಸಿದ ಗುಮ್ಮಟದಲ್ಲಿಯೇ ದಫನ ಮಾಡಿದರು.

### ೪೮. ಸುಲ್ತಾನ ಮಹಮ್ಮದ ಆದಿಲಶಹ ಬಾದಶಹನು ಜೀವಂತವಿರುವಾಗಲೇ ಗುಮ್ಮಟ ಕಟ್ಟಿಸಿದ್ದನು.

ಆ ಗುಮ್ಮಟವು ಆಕಾಶದಷ್ಟು ಎತ್ತರವಾಗಿದ್ದು ಕಟ್ಟಡವು ಅತ್ಯಂತ ಡೌಲಿನಿಂದ ಕೂಡಿ ಉತ್ತಮವಾಗಿದೆ. ಅದು ದಕ್ಷಿಣದ ದೇಶ ತುಂಡಿನಲ್ಲಿಯೇ ಅತಿ ಉತ್ತಮವಾಗಿದ್ದರೆ, ಅದರಂಥ ಗುಮ್ಮಟವು ಹಿಂದುಸ್ತಾನದಲ್ಲಿಯೂ ಕೂಡ ಇಲ್ಲ. ಬಹುಶಃ ಪ್ರಪಂಚವನ್ನು ಸುತ್ತುವ ಪ್ರವಾಸ ಮಾಡುವ ಜನರು ವಿಶ್ವದ ನಾಲ್ಕು ಕಡೆಗಳಿಂದಲೂ ಬರುತ್ತಾರೆ. ಮತ್ತು ಆ ಜನ ಗುಮ್ಮಟವನ್ನು ನೋಡಿದಾಗ ಗುಮ್ಮಟದ ಎತ್ತರ ಹಾಗೂ ಉತ್ತಮ ಪ್ರಕಾರದ ಡೌಲು, ಆಶ್ಚರ್ಯಜನಕವಾದ ಕಟ್ಟುವಿಕೆಯಲ್ಲಿ ಸಂತೋಷಪಡುತ್ತಾರೆ. ಬಹಳ ಆಶ್ಚರ್ಯಗೊಂಡು ಈ ಜಗತ್ತಿನಲ್ಲಿಯೇ ಇಂಥ ಗುಮ್ಮಟವನ್ನು ಬೇರೆಲ್ಲೂ ಕಟ್ಟಲು ಸಾಧ್ಯವಿಲ್ಲವೆಂದು ನುಡಿಯುತ್ತಾರೆ. ಈ ಗುಮ್ಮಟದ ಎತ್ತರ ಮತ್ತು ಭವ್ಯತೆ, ಕಟ್ಟೋಣ ಮತ್ತು ಶೋಭೆ ನೋಡುಗರನ್ನು ಮೂಕ ವಿಸ್ಮಿತರನ್ನಾಗಿ ಮಾಡುತ್ತದೆ. ಗುಮ್ಮಟವನ್ನು ನೋಡುವ ಮನುಷ್ಯ ಒಳಗೆ ಬಂದಾಗ ಆತನ ಆಶ್ಚರ್ಯ ಇನ್ನಷ್ಟು ಅಧಿಕಗೊಳ್ಳುತ್ತ ಹೋಗುತ್ತದೆ. ಅಬಾಲ ವೃದ್ಧರಾದಿಯಾಗಿ ಎಲ್ಲ ಪ್ರತಿಯೊಬ್ಬನೂ ಇಲ್ಲಿ ಬಂದು ಕೂಗಿದರೆ, ಮಾತನಾಡಿದರೆ, ಪ್ರತಿಯಾಗಿ ಅದೇ ಕೂಗು ಶಬ್ದ ಪ್ರತಿಧ್ವನಿಯಾಗಿದ್ದನು ಕಂಡು ಕೇಳುಗನು ಆಶ್ಚರ್ಯಪಡುತ್ತಾನೆ. ಗುಮ್ಮಟದ ಬಾಗಿಲಲ್ಲಿ ಒಂದು ಕಲ್ಲನ್ನು ಸರಪಳಿಯಲ್ಲಿ ಕಟ್ಟಿ ತೂಗುಬಿಟ್ಟಿದ್ದಾರೆ. ಅದನ್ನು ವಿದ್ಯುತ್‌ಕಲ್ಲು / ಮಿಂಚಿನ ಕಲ್ಲು ಎಂದು ಕರೆಯುತ್ತಾರೆ. ಆ ಕಲ್ಲಿನ ಗುಣಧರ್ಮವೆಂದರೆ ಅದು ಮಿಂಚಿನ ಉಪದ್ರವದಿಂದ ಕಟ್ಟಡವನ್ನು ಸಂರಕ್ಷಿಸುತ್ತದೆ. ಅದರಲ್ಲಿ ಆ ಗುಣವಿದೆಯೆಂದೇ ಅದನ್ನು ಕಟ್ಟಿದ ಕಾರಣವೆಂದು ಹೇಳುತ್ತಾರೆ.

### ೪೯. ಸುಲ್ತಾನ ಮಹಮ್ಮದ ಆದಿಲಶಹನ ಮರಣದ ನಿಶ್ಚಿತ ದಿನ :

ಸುಲ್ತಾನ ಮಹಮ್ಮದ ಆದಿಲಶಹನು ಮರಣ ಹೊಂದಿದಾಗ ಆತನಿಗೆ ೪೭ ವರುಷಗಳ ವಯಸ್ಸಾಗಿತ್ತು. ಆತ ೩೧ ವರುಷ ರಾಜ್ಯವಾಳಿದನು. ಆತ ಮರಣ ಹೊಂದಿದ ದಿನವನ್ನು 'ಅಲಾಬತೆ

ಮಹಮದ ಶುದ್' ಎಂಬುದರ ಅರ್ಥ ಸುಲ್ತಾನ ಮಹಮದ ಬಾದಶಹನ ಪರಿಣಾಮ ಉತ್ತಮ ಪ್ರಕಾರದಿದ್ದು ಸ್ತುತಿ ಮಾಡಲ್ಪಟ್ಟಿದೆ. 'ಆಲಾಬತೆ ಮಹಮದ ಬಾದಶಹನ ಮಹಮುದ ಶುದ್' ಈ ಅಕ್ಷರಗಳನ್ನು ಅಬಜದದ ಲೆಕ್ಕದಿಂದ ಗುಣಿಸಿದರೆ ಹಿಜರಿ ಸನ್ ೧೦೬೭(ಕ್ರಿ.ಶ ೧೬೫೬) ಎಂದು ಹೊರಡುತ್ತದೆ. ಅಂದರೆ ಈ ವರುಷ ಬಾದಶಹನು ಸತ್ತನು[೧] ಇಬ್ರಾಹಿಮಖಾನ ಅಸದಖಾನನೂ ಇದೇ ದಿನವನ್ನು ಹೇಳಿದ್ದಾನೆ. ಫಾರ್ಸಿ ದ್ವಿಪದಿಯ ಅರ್ಥ 'ಅಲ್ಲಾನನ್ನು ಸ್ತುತಿಸಿ, ಸುಲ್ತಾನ ಮಹಮದ ಬಾದಶಹನಿಗೆ ಅಲ್ಲಾನು ಶಾಶ್ವತ ಸ್ವರ್ಗವಾಸವನ್ನು ಕೊಟ್ಟನು. ಮತ್ತು ಮಹಮದಶಾಹ ಶಾಆಲಮದೋಲಿಲ್ಲಾಹನ ಇಕೆ ಜಾವೆ ದಾನೀ ದಾದಅಲ್ಲಾಹ' ಇವಿಷ್ಟು ಅಕ್ಷರಗಳನ್ನು ಅಬಜದದ ಲೆಕ್ಕದಿಂದ ಗುಣಿಸಿದಾಗ ೧೦೬೮ ಎಂದು ಹೊರಡುತ್ತದೆ. ದಿನವನ್ನು ಸೂಚಿಸಲು ಈ ದ್ವಿಪದಿಯನ್ನು ಚೆನ್ನಾಗಿ ರಚಿಸಲಾಗಿದೆ. ೧೦೬೭ ಎಂದು ಹೊರಡಿಸಲು ಕವಿತೆಯನ್ನು ಕಟ್ಟಿ ೧೦೬೮ ಎಂದು ಹೊರಡಿಸಿದ್ದಾರೆ. ಒಂದು ವರುಷದ ಅಂತರ ಬೀಳುತ್ತದೆ. ಇದೊಂದು ದೊಡ್ಡ ತಪ್ಪು ಎಂದೇನೂ ಅಲ್ಲ.

### ೫೦. ಒಪ್ಪಂದದ ಕಾಲಾನುಕ್ರಮಣಿಕೆ :

ಸುಲ್ತಾನ ಮಹಮ್ಮದ ಬಾದಶಹನ ಕಾಲದಲ್ಲಿ ದೌಲತಖಾನ ಎಂಬವನಿದ್ದನು. ಆತನಿಗೆ ಮುಂದೆ ಖವಾಸಖಾನ ಎಂಬ ಪದವಿ ದೊರೆತಿತ್ತು. ಆ ಖವಾಸಖಾನನು ಹಿ.ಸನ್ ೧೦೩೬ರಲ್ಲಿ (ಕ್ರಿ.ಶ ೧೬೨೬-೨೭) ದೌಲತಪುರ ಎಂಬ ಊರನ್ನು ಕಟ್ಟಿದನು. ಅದು ಈಗ ರಸೂಲಪುರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಸನ್ ೧೦೩೭ರಲ್ಲಿ (ಕ್ರಿ.ಶ ೧೬೨೭-೨೮) ಪರಾಂಡೆಯ ಕೋಟೆಯು ಆಕಾ ರಿಜವಾನನಿಂದ ಆದಿಲಶಾಹಿಗಳ ಕೈವಶವಾಯಿತು. ಅದೇ ವರುಷ ಮುರಾರಿ ಪಂಡಿತನು ಬಾದಶಹನ ಆಜ್ಞೆಯಂತೆ, ಮಲಿಕ್-ಇ-ಮೈದಾನ ತೋಫನ್ನು ಪರಾಂಡೆ ಕೋಟೆಯಿಂದ ವಿಜಾಪುರಕ್ಕೆ ತಂದನು. ಸನ್ ೧೦೪೨ (ಕ್ರಿ.ಶ. ೧೬೩೨-೩೩)ರಲ್ಲಿ ಮುರಾರಿ ಪಂಡಿತನು ಗೋಗಿಯಲ್ಲಿ ಚೌಖಂಡಿಯನ್ನು ಕಟ್ಟಿದನು. ಸನ್ ೧೦೪೫ ರಲ್ಲಿ (ಕ್ರಿ.ಶ. ೧೬೩೫-೩೬) ಮಿಯಾ ನವಾಬ ಮುಸ್ತಫಾಖಾನ ಮತ್ತು ಖವಾಸಖಾನ ಇಬ್ಬರ ಮಧ್ಯ ವಿರಸ ಉಂಟಾಗಿ ಯುದ್ಧ ಮಾಡಿದರು. ಇದೇ ಶಾಹ ಬುರ್ಹಾನ ತಂದೆ ಶಾಹ ಮುರ್ತಜಾ ಮತ್ತು ಶಾಹ ಹಾಶಿಮನ 'ಹಿರಿಯ ಮಗ ಈತ ನವಾಬನ ಬದಿಗೆ ಕುಳಿತಿದ್ದನು. ಶಾಹ ಮುರ್ತುಜಾನ ದಿಂಬಿನ ಮೇಲೆ ಒಂದು ಬಾಣ ಬಂದು ನಟ್ಟಿತು. ಅದರಿಂದ ಗಾಯವಾಗಿ ಅದರಿಂದಲೇ ಆತ ಮರಣ ಹೊಂದಿನು. ಅದೇ ವರುಷ ಖವಾಸಖಾನನು ನಾನಾ ಪ್ರಕಾರದ ನೆಪಗಳನ್ನೊಡ್ಡಿ ನವಾಬ ಮುಸ್ತಫಾಖಾನನನ್ನು ಹಿಡಿದು ಬಂಧಿಸಿಟ್ಟನು. ಅದೇ ವರುಷ ಖವಾಸಖಾನನ ಕೊಲೆಯಾಯಿತು. ನವಾಬ ಮುಸ್ತಫಾಖಾನನು ಸೆರೆಮನೆಯಿಂದ ಬಿಡುಗಡೆಯಾದನು. ಶಾಹಜಹಾನ ಬಾದಶಹನು ಆಗ್ರಾದಿಂದ ದೌಲತಾಬಾದಕ್ಕೆ ಬಂದನು. ಶಾಹಜಹಾನನೂ ಮಹಮ್ಮದ ಆದಿಲಶಹನಿಗೂ ಸಖ್ಯವಾಯಿತು. ಸನ್ ೧೦೪೭ (ಕ್ರಿ.ಶ. ೧೬೩೭-೩೮)ರಲ್ಲಿ ರಾಜಕುಮಾರ ಅಲಿ ಆದಿಲಶಹನ ಜನ್ಮ. ಸನ್ ೧೦೪೮ (ಕ್ರಿ.ಶ ೧೬೩೮-೩೯)ರಲ್ಲಿ ಬೆಂಗಳೂರು ಮತ್ತು ಸಿರಾ ವಿಜಯ. ಸನ್ ೧೦೪೫ (ಕ್ರಿ.ಶ. ೧೬೩೫-೩೬)ರಲ್ಲಿ ರಣದುಲ್ಲಾಖಾನನ ಪ್ರಯತ್ನದಿಂದ ಶಿವಾಪಟ್ಟಣದ ವಿಜಯ,

---

೧. "Md Adilshah died on Tuesday, 26th Muharam 1067 (4th Nov 1656)" Tarikh Ali Adilshahi "ಮಾರ್ಗಶೀರ್ಷ ಶಕೆ ೧೫೭೮ - ಸುಲ್ತಾನ ಮಹಮ್ಮದ ಆದಿಲಶಹನು ಮರಣ ಹೊಂದಿದನು" - ಜೇಧೆ ಶಕಾವಲಿ ಪು. ೧೮ (ಆದರೆ ಮೃತ್ಯು ತಿಥಿ ಕಾರ್ತಿಕ ವದ್ಯ ೧೩ ಮಂಗಳವಾರ)

ಆದರೆ ಈ ವಿಜಯ ಸನ್ ೧೦೪೯ (ಕ್ರಿ.ಶ ೧೬೩೯-೪೦)ರಲ್ಲಿ ಆಗಿದೆ. ಸನ್ ೧೦೫೬(ಕ್ರಿ.ಶ ೧೬೪೬)ರಲ್ಲಿ ಗಗನ ಮಹಲಕ್ಕೆ ಬೆಂಕಿ ಹತ್ತಿ ಸುಟ್ಟಿತು. ಅದೇ ವರುಷ ಸುಲ್ತಾನ ಮಹಮ್ಮದ ಆದಿಲಶಹನು ದೊಡ್ಡ ಹವೇಲಿಯನ್ನು ಕಟ್ಟಿದ. ಆ ಹವೇಲಿಯಲ್ಲಿ ಬಂಗಾರದ ನೀರು ಕೊಟ್ಟು ಸಿಂಗರಿಸಿದರು. ಅಲ್ಲಿಯೇ ಪವಿತ್ರ ಪೈಗಂಬರರ ಕೇಶಗಳಿವೆ. (ಆಸಾರ ಮಹಲ) ಸನ್ ೧೦೫೮ (ಕ್ರಿ.ಶ ೧೬೪೮)ರಲ್ಲಿ ಮೊಹರಮ್ ತಿಂಗಳಲ್ಲಿ ಶಹಾನವಾಜಖಾನ ಮರಣ ಹೊಂದಿದನು. ಅದೇ ವರುಷ ರಜ್ಜ ತಿಂಗಳಲ್ಲಿ (ಜುಲೈ-ಅಗಸ್ಟ) ಶಾಹಜೀ ರಾಜೇ ಭೋಸಲೆಯನ್ನು ಬಂಧಿಸಲಾಯಿತು. ಜಲ್ಕಾದ ತಿಂಗಳಲ್ಲಿ (೨ ಡಿಶಂಬರ ೧೬೪೮) ಮುಸ್ತಫಾಖಾನನ ಮರಣ. ಜಿಲ್ಹೇಜ ತಿಂಗಳಲ್ಲಿ (೧೦ ಡಿಶಂಬರ ೧೬೪೮) ಚಂದಿ ವಿಜಯ. ಸನ್ ೧೦೬೧ (ಕ್ರಿ.ಶ ೧೬೫೦-೫೧) ರಲ್ಲಿ ಶಾಹಜಹಾನ ಬಾದಶಹನಿಂದ ಸುಲ್ತಾನ ಮಹಮ್ಮದ ಆದಿಲಶಹನಿಗೆ 'ಬಾದಶಾಹ' ಎಂಬ ಪದವಿ ಕೊಟ್ಟ ಆಜ್ಞಾಪತ್ರ ಬಂದಿತು. ಸನ್ ೧೦೬೩ (ಕ್ರಿ.ಶ ೧೬೫೨-೫೩)ರಲ್ಲಿ ಖಾನ ಮಹಮ್ಮದನ ಸಹಾಯದಿಂದ ಪಿಲಗುಂಡಿಯ (ಪೆನುಗೊಂಡೆ) ವಿಜಯ. ಸನ್ ೧೦೬೪ (ಕ್ರಿ.ಶ. ೧೬೫೩-೫೪)ರಲ್ಲಿ ಅಫಜಲ್ ಆಡಾದ ನೀರು, ಅಫಜಲ ಖಾನನ ಪ್ರಯತ್ನದಿಂದ ಬೇಗಂ ತಾಲಾಬದಿಂದ ಕೋಟೆಯ ಒಳಗೆ ಬಂದಿತು. ಅದೇ ವರುಷ ದೊಡ್ಡ ಭೂಕಂಪವಾಯಿತು. ಅದೇ ವರುಷ ಯೆಲೂರ ವಿಜಯ.

### ೫೧. ಸೈನ್ಯ ವಿವರ :

ಸ್ವಾರರು ೮೦,೦೦೦ ಸಿಬ್ಬಂದಿ ೨,೫೦,೦೦೦ ಆನೆಗಳು ೫೩೦.

### ೫೨. ವಿಜಾಪುರದಲ್ಲಿಯ ಕೈಫಿಯತ್ತುಗಳ ಕಿಂಚಿತ್ ವರ್ಣನೆ :

ಮೊದಲಿನಿಂದಲೂ ವಿಜಾಪುರವು ಕನ್ನಡದ ಪ್ರದೇಶವಾಗಿದೆ. ಇದಕ್ಕೆ ಕನ್ನಡ ಪ್ರದೇಶವೆಂದೇ ಕರೆಯುತ್ತಾರೆ. ಈ ಸರಹದ್ದಿನಲ್ಲಿ ಹುಟ್ಟಿದ ಜನರು ಶೂರರು ಮಹಾ ಪರಾಕ್ರಮಿಗಳೂ ಆಗಿರುತ್ತಾರೆ. ಈ ವಿಷಯದಲ್ಲಿ ವಿಜಾಪುರ ಭಾಗದ ನಾಲ್ಕು ದಿಕ್ಕುಗಳಲ್ಲಿಯೂ ಊರೂರುಗಲ್ಲಿ ಪರಾಕ್ರಮವು ಪ್ರಸಿದ್ಧವೇ ಆಗಿದೆ. ಇದು ವಿಶಾಲವಾದ ಪ್ರದೇಶ. ಬಹಳ ದೊಡ್ಡ ಹಾಗೂ ವಸೂಲಿಯ ವಿಜಾಪುರ ರಾಜ್ಯವು ಉತ್ತರಕ್ಕೆ (ದಕ್ಷಿಣವಾಗಬೇಕು) ಬಿದನೂರುವರೆಗೆ ಪೂರ್ವಕ್ಕೆ ಹೈದರಾಬಾದಿನ ಅರಣ್ಯದ ವರೆಗೆ ಮತ್ತು(ಪಶ್ಚಿಮಕ್ಕೆ) ಸಮುದ್ರ ದಂಡೆಯ ವರೆಗೂ ಇದೆ. ದಕ್ಷಿಣಕ್ಕೂ (ವಾಸ್ತವದಲ್ಲಿ ಉತ್ತರಕ್ಕೆ) ಕೂಡ ತುಂಬ ಉದ್ದವಾಗಿದೆ ಮತ್ತು ಸಮುದ್ರದ ಸರಹದ್ದನ್ನೊಳಗೊಂಡಿದೆ. ಅದಕ್ಕಾಗಿ ನವಖಂಡ ಪೃಥ್ವಿಯಲ್ಲಿಯ ಎಲ್ಲ ಪ್ರದೇಶಗಳಲ್ಲಿ ಮತ್ತು ಹಿಂದುಸ್ತಾನದ ಪ್ರದೇಶಗಳಲ್ಲಿ ಈ ಪ್ರದೇಶವು ಬಹಳ ವಸೂಲಿ (ಕಂದಾಯ)ಯದೆಂದೂ ಮತ್ತು ಬಹಳ ದೊಡ್ಡದೆಂದೂ ಹೇಳುತ್ತಾರೆ. ಇದರಂಥ ಇನ್ನೊಂದು ಪ್ರದೇಶವಿಲ್ಲ. ಹಿಂದುಸ್ತಾನದ ಎಲ್ಲ ಪ್ರದೇಶಗಳಲ್ಲಿ ಈ ದಕ್ಷಿಣ ದೇಶದ ತುಕಡಿಯು ಬಹಳ (ಕಂದಾಯ) ವಸೂಲಿಯದೆಂದೂ ಪ್ರಸಿದ್ಧವಾಗಿದೆ. ಸಂಪದ್ಭರಿತವೂ ಆಗಿದೆ. ವಿಜಯನಗರ ರಾಜ್ಯದ (ಕಂದಾಯ) ವಸೂಲಿ ಇಪ್ಪತ್ತುಕೋಟಿ ಹೊನ್ನು ಬರುತ್ತಿತ್ತು. ಅದಲ್ಲದೆ ಇಲ್ಲಿನ ಸುಲ್ತಾನರು ಬೇರೆ ಅನೇಕ ದಕ್ಷಿಣ ದೇಶಗಳನ್ನೂ ಗೆದ್ದು ಆ ದೇಶಗಳನ್ನು ಆಳುತ್ತಿದ್ದರು. ಎಂದು ಹೇಳಲಾಗುತ್ತದೆ. ಮೊದಲಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ನಾಣ್ಯಗಳಿಗೆ

ಈ ನಾಡಿನಲ್ಲಿ ಹೊನ್ನು, ಮೊಹರು, ಬಾವಣಿನ ಎಂಬ ಹೆಸರುಗಳು ಚಲಾವಣೆಯಲ್ಲಿದ್ದುವು, ಆಲಮ್‌ಗೀರ ಬಾದಶಹನು ಬಂದಂದಿನಿಂದ ರೂಪಾಯಿಗಳು ಚಲಾವಣೆಯಾದವು. ಆದಿಲಶಾಹಿ ರಾಜ್ಯದ ಪ್ರಾರಂಭದ ರಾಜ ಯೂಸುಫ ಬೇಗ ಸಾವಿಯು ಅರ್ಕಕಿಲ್ಲಾ ಕಟ್ಟಿ ಅಲ್ಲಿಯೇ ತನ್ನ ಸಿಂಹಾಸನಕ್ಕೆ ಸ್ಥಳ ಮಾಡಿದನು. ಅನಂತರ ಆತನ ಮೊಮ್ಮಗ ಇಬ್ರಾಹಿಮ ಆದಿಲಶಹನು (ಮೊದಲ) ಈ ಕೋಟೆಯನ್ನು ಹೊಸದಾಗಿ ಕಟ್ಟಿಸಿ, ಅದಕ್ಕೆ ಒಂದರ ಹಿಂದೊಂದರಂತೆ ಎರಡು ಕೋಟೆಗಳನ್ನು ಕಟ್ಟಿಸಿದನು. ಆತನ ಮಗ ಅಲಿ ಆದಿಲಶಹನು ನಗರದ ಸುತ್ತ ಕೋಟೆಯನ್ನು ಕಟ್ಟಿದನು. ವಿಜಾಪುರ ರಾಜ್ಯವು ಸರಕಾರ ಹಾಗೂ ೨೮೦ ಮಹಾಲುಗಳನ್ನು ಒಳಗೊಂಡಿದ್ದುವು. ಅವುಗಳಿಗೆ ಪರಗಣೆ ಎಂದೂ ಕರೆಯುತ್ತಾರೆ. ವಿಜಾಪುರ ಸಭೆಯ ಒಟ್ಟು ಕಂದಾಯ ವಸೂಲಿಯು, ಅಸಫಜಾಹೀ ದಫ್ತರಗಳಲ್ಲಿ ಬರೆದಂತೆ, ಏಳುಕೋಟಿ ಎಂಭತ್ತಾಲ್ಕು ಲಕ್ಷ ಅರವತ್ತೊಂದು ಸಾವಿರ ಏಳೂನೂರು ರೂಪಾಯಿ ಹಾಗೂ ಒಂದೂವರೆ ಆಣೆ ಇತ್ತು. ಈ ವಸೂಲಿಯ ವಿವರವು ಆಲಮ್‌ಗೀರ ಬಾದಶಹನ ಕಾಲದ್ದಾಗಿದೆ.

### *೫೩. ೧೮ ಸರಕಾರಗಳು ಮತ್ತು ಅನೇಕ ಬಂದರುಗಳು :*

ಎಲ್ಲ ಬಂದರುಗಳ ಒಟ್ಟು ಕಂದಾಯ ವಸೂಲಿಯ ವಿವರ ಹೀಗಿದೆ. ಧಾಭೋಳ ಮತ್ತು ವಿಸವೀ (ವಸಯಿ?) ಬಂದರುಗಳ ವಸೂಲಿ ೨೦೦೦ಕ್ಕೂ ಅಧಿಕ. ಖಲಹಾಟಿ ಬಂದರು ೭೦೦೦ ಚಿವಲೆ (ಚೌಲ) ಬಂದರ-೧೫೦೦೦, ಸಂಕರ ಬಂದರ ೧೦,೦೦೦, ಗೋವೆಯ ಬಂದರವು ಕೆಲವು ದಿನಗಳ ಅನಂತರ ಫಿರಂಗಿಗಳ ಕೈಗೆ ಹೋಯಿತು. ಅದರ ವಸೂಲಿ-೩೭೫೦೦, ಇಸ್ಲಾಮ ಊರ್ಫರಾಜಾಪುರ ಬಂದರ, ಸಾಷ್ಟೀ ಬಂದರ-೧೦,೦೦೦, ಖಾರೇಪಟ್ಟಣ ಬಂದರ -೨೪೦೦೦, ಹರಚಿರಿ ಬಂದರ - ೫೦೦೦, ಸಾತೋಲಿ ಬಂದರ-೩೫೦೦. ಮಹಮದಾಬಾದ ಉರ್ಫ ಸಿರ್ಧೋನ ಬಂದರ-೫೦೦೦, ಖೇಡಾ ಬಂದರ-೫೦೦೦, ಈ ರೀತಿಯಾಗಿ ಈ ಬಂದರುಗಳಿಂದ ವಸೂಲಿ ಬರುತ್ತಿತ್ತು.

### *೫೪. ಕರ್ನಾಟಕದಿಂದ ಬರುತ್ತಿದ್ದ ನಜರ (ಕಾಣಿಕೆ) ವಿವರ :*

ಮೇಲೆ ಕಾಣಿಸಿದ ಸಂದಾಯವಾಗುವ ಹಣದ ಹೊರತಾಗಿ ಒಟ್ಟು ಸಂದಾಯವಾಗುತ್ತಿದ್ದುದು ೫೨೫೬೧೬೪೯, ಐದು ಕೋಟಿ ಇಪ್ಪತ್ತೈದು ಲಕ್ಷ ಅರವತ್ತೊಂದು ಸಾವಿರ ಆರುನೂರು ನಾಲ್ವತ್ತೊಂಭತ್ತು ರೂಪಾಯಿಗಳ ವಿವರ ಹೀಗಿದೆ. ಜಮೇದಾರ ಶ್ರೀರಂಗಪಟ್ಟಣ -೩೫೮೫೧೩೬೧||| . ಖೇರೀಜ ಜಮೇದಾರ ೧೦೨೬೩೬೩೫||= ಜಮೇದಾರ ಸಂಧ್ಯಾ ೭೨೦೮೭೧ - ಜಮೇದಾರ ದುರ್ಗ - ೧೧೨೫೦೦೦. ಜಮೇದಾರ ಜರಿಮುಲ್ಲಾ ಜರಮಲ್ಲೈ ೯೩೭೫೦. ಜಮೇದಾರ ತೇರೀಖಂಡಾ - ೧೭೨೫೦೦. ಜಮೇದಾರ ರತ್ನಾಗಿರಿ - ೯೩೭೫೭. ಜಮೇದಾರ ಸರಹಾರೀ - ೭೫೦೦೦. ಜಮೇದಾರ ಪಾವಗಡ - ೧೨೩೭೫೦ ಜಮೇದಾರ ಮಾಂಗಪಾಲಾ -೧೫೦೦೦. ಜಮೇದಾರ ಜಗಪಾಲಾ -೧೯೨೫೦೦. ಜಮೇದಾರ ಕೋಟೆಖಡಾ -೭೫೦೦೦. ಜಮೇದಾರ ಮನೋರಿ - ೫೬೪೦. ಜಮೇದಾರ ಕಲವಾಡೀ -೩೭೫೦೦. ಖೇರೀಜ ಜಮೇದಾರ - ೯೩೦೦೦. ಜಮೇದಾರ ಹಾನಹಾಲೀ - ೧೦೨೯೦೬೦. ಜಮೇದಾರ ಆನೇಗೊಂದಿ - ೧೭೩೫೫೦ ಜಮೇದಾರ ಲೋಕೋರಿ -೨೨೫೦೦೦. ಜಮೇದಾರ ಗಂಗಾಗಿರೀ - ೧೯೧೧೬೫. ಜಮೇದಾರ ಬಳ್ಳಾರಿ -೮೬೨೫೦. ಜಮೇದಾರ ಕೋರೀಕೋಟಾ -೧೮೭೫೦೦ ಜಮೇದಾರ ಸಬರಗಡ -೩೭೫೦೦.

*೫೫. ಸುಲ್ತಾನ ಮಹಮದ ಆದಿಲಶಾಹನು ತನ್ನ ರಾಜ್ಯದ ಆಡಳಿತಕ್ಕಾಗಿ 'ದಸ್ತುರುಲ ಆಮಲ' ಎಂಬ ಅನೇಕ ಶಾಸನಗಳನ್ನು ಮಾಡಿದ್ದನು. ಅವುಗಳ ವಿವರ ಹೀಗಿದೆ :*

೧. ಬಾದಶಹನಲ್ಲಿ ಇರಲೇ ಬೇಕಾದ ಲಕ್ಷಣಗಳು, ಬಾದಶಹನಿಗೆ ನ್ಯಾಯ ನಿರ್ಣಯ ಮಾಡುವುದೇ ಅಲಂಕಾರ ಹಾಗೂ ಭೂಷಣಗಳೆಂದು ತಿಳಿದು, ತನ್ನೆಲ್ಲ ಬುದ್ಧಿ-ಧೈರ್ಯಗಳನ್ನು ನ್ಯಾಯ ನಿರ್ಣಯಿಸುವುದರಲ್ಲಿ ಖರ್ಚು ಮಾಡಬೇಕು. ಯಾಕೆಂದರೆ ಫಾರ್ಸೀಯಲ್ಲಿ ಹೀಗೆ ಹೇಳಲಾಗಿದೆ "ಸಂಪೂರ್ಣ ಆಯುಷ್ಯದಲ್ಲಿ ಒಂದು ಘಟಿಕಾ ನ್ಯಾಯ ನೀಡಿದರೆ, ೧೦೦ ವರುಷ ವೈರಾಗ್ಯ ಧಾರಣ ಮಾಡಿ ಅಲ್ಲಾನ ಸೇವೆ ಮಾಡಿದ್ದಕ್ಕಿಂತ ಅಧಿಕ ಫಲವಿದೆ". ಇದರಲ್ಲಿಯ ಭಾವಾರ್ಥವೆಂದರೆ, ಒಂದು ಘಟಕಾ ನ್ಯಾಯ ನಿರ್ಣಯಿಸುವುದರಿಂದ ನೂರು ವರುಷಗಳ ತಪಶ್ಚರ್ಯಕ್ಕೆ ಅಧಿಕವಿದೆ. ಬಾದಶಹನು ಸ್ವತಃ ರಾಜ್ಯದ ಆಡಳಿತ ಮತ್ತು ರೈತಾಪಿ ಜನರನ್ನು ಲಕ್ಷ್ಯದಲ್ಲಿಟ್ಟುಕೊಂಡು, ನ್ಯಾಯ ನೀಡುವಲ್ಲಿ ಕಿಂಚಿತ್ತೂ ಅಂತರ ಬೀಳದಂತೆ ನಡೆಯಬೇಕು, ಯಾಕೆಂದರೆ ರಾಜ್ಯ ಸುಖ ಸೌಖ್ಯದಲ್ಲೇ ರಾಜ್ಯದ ವ್ಯವಸ್ಥೆ ಹಾಗೂ ಖಜಾನೆಯ ಸೌಖ್ಯ ಅಡಗಿದೆ. ಬಾದಶಹನು ಶಕ್ತಿ ಇರುವವರೆಗೆ ಸೈನ್ಯವನ್ನು ಸಂಗ್ರಹಿಸುತ್ತಲೇ ಇರಬೇಕು. ಸೈನಿಕರನ್ನು ಸೇರಿಸಿಕೊಳ್ಳುವಾಗ ಅವರು ಶೂರರು, ಯಶಸ್ವಿಗಳು ಹಾಗೂ ಹೆಸರಾಂತರಾದವರನ್ನು ನೋಡಿ ನೌಕರಿಗೆ ಇಟ್ಟುಕೊಳ್ಳಬೇಕು. ಮಂತ್ರಿಗಳನ್ನು ನೇಮಿಸುವಾಗ ಆತನು ಬುದ್ಧಿವಂತನು, ಉತ್ತಮ ವಿಚಾರವಂತನು, ಯುಕ್ತಿವಂತನು, ಪ್ರಾಮಾಣಿಕನು, ಸ್ವಾಮಿ ನಿಷ್ಠನು ಇರುವುದನ್ನು ಪರೀಕ್ಷೆ ಮಾಡಿ, ಆತನಿಗೆ ಪದವಿಯನ್ನು ಕೊಡಬೇಕು. ಯುಕ್ತಿಯ ಪ್ರಸಂಗಗಳಲ್ಲಿ ಆತನ ಸಲಹೆಯನ್ನು ಕೇಳುವಲ್ಲಿ, ಸೈನಿಕರ ಸೈನ್ಯದ ಸುದ್ದಿಗಳನ್ನು ಪಡೆಯುವಲ್ಲಿ, 'ನೀವೆಲ್ಲ ಹೇಗಿದ್ದೀರಿ?' ಎಂದು ಸಿಪಾಯಿಗಳನ್ನು ವಿಚಾರಿಸುವಲ್ಲಿ, ಅವರಿಗೆ ಬೇಕಾಗುವ ಸಾಮಗ್ರಿಗಳ ವ್ಯವಸ್ಥೆ ಮಾಡುವಲ್ಲಿ, ಸಿದ್ಧವಾಗಿಡುವಲ್ಲಿ, ಆತ ಬಹಳ-ಬಹಳ ಪ್ರಯತ್ನ ಮಾಡುತ್ತಿರಬೇಕು. ಸೈನ್ಯದ ಮೇಲೆ ಎರಡು ರೀತಿಯ ಭರವಸೆಗಳನ್ನಿಡಬೇಕು. ಒಂದು ಮಂತ್ರಿಗಳನ್ನು ಮತ್ತು ಅಮೀರರನ್ನು ನಿಯಮಿಸುವಾಗ ಮೇಲೆ ಹೇಳಿದಂತೆ ಪರೀಕ್ಷೆ ಮಾಡಿ ನೇಮಿಸಬೇಕು. ಎರಡನೆಯದು, ಸರಲಷ್ಕರ ಹಾಗೂ ಸೇನಾಪತಿಗಳನ್ನು ನಿಯಮಿಸುವುದು, ಯಾಕೆಂದರೆ, ಮಂತ್ರಿಗಳು ಮತ್ತು ಅಮೀರರು ಈ ಉಭಯ ಹೆಸರುಗಳ ಪದಾಧಿಕಾರದಲ್ಲಿ ಬಹಳಷ್ಟು ಜನ ಸೇರುವುದಿಲ್ಲ. ಸರಲಷ್ಕರ ಸೇನಾಖಾಸಖೇಲ ಈ ಹೆಸರುಗಳಿಂದ ಎಲ್ಲರೂ ಸೇರುತ್ತಾರೆ.

೨. ರಾಜ್ಯ, ಕೋಟೆ, ಪ್ರದೇಶಗಳ ವ್ಯವಸ್ಥೆ ಸರಿ ಇದ್ದು ಸೈನ್ಯ ತಯಾರಿಯಾದ ನಂತರ ಶತ್ರುವಿನ ಪಾರುಪತ್ಯಕ್ಕಾಗಿ ಧೈರ್ಯ ಮಾಡಬೇಕು.

೩. ಆಜ್ಞಾಪಾಲನೆ ಮಾಡದ ಜಮೇದಾರರನ್ನು, ತಮ್ಮಲ್ಲಿ ಬಹಳ ಸೈನ್ಯವಿದೆಯೆಂದು ತಿಳಿದು ಧಣಿಯ ಆಜ್ಞೆಗಳನ್ನು ಕೇಳದವರನ್ನು ಬಹಳ ಚಮತ್ಕಾರಿಕ ಯುಕ್ತಿಯಿಂದ ಆ ಎಲ್ಲ ಕೃತಘ್ನರನ್ನು ಒಮ್ಮೆಲೇ ಹಿಡಿದು ಮೂಲವನ್ನೆ ಕಿತ್ತಿ ನಿರ್ಮೂಲ ಮಾಡಬೇಕು. ಒಂದು ವೇಳೆ ಸರಕಾರಕ್ಕೆ ಖಾತ್ರಿಯಾಗಿ ಮುಂದೆ ಅವರು ಉತ್ತಮ ರೀತಿಯಾಗಿ ಇರುತ್ತಾರೆ ಎಂದು ಅನಿಸಿದರೆ, ಅವರನ್ನು ಜಮೇದಾರರಂತೆ, ಸೇವಕತನದ ಕೆಲಸವನ್ನು ಕೊಟ್ಟು ಅಂಕಿತದಲ್ಲಿ ಇಟ್ಟುಕೊಳ್ಳಬೇಕು.

೪. ರಾಜ್ಯದಲ್ಲಿಯ ಎಲ್ಲ ಕೃತಘ್ನರನ್ನು ಶಿಕ್ಷಿಸಿ, ಕೃತಘ್ನತೆಯಿಂದ ಸ್ವಚ್ಛ ಹಾಗೂ ನಿರ್ಮಲವಾಗಿದೆ ಎಂದು ಕಂಡು ಬಂದಮೇಲೆ, ತನ್ನ ರಾಜ್ಯದಲ್ಲಿ ಯಾರೂ ರಾಜನ ವಿರುದ್ಧ ಮೋಸ-ಕುತಂತ್ರಗಳಲ್ಲಿ

ನಿರತರಾಗಿಲ್ಲವೆಂದು ಖಾತ್ರಿಯಾದ ಮೇಲೆ, ರಾಜ್ಯದ ತರಫ-ತರಫಗಳ ಆಸುಪಾಸಿನಲ್ಲಿ ಇರುವ ಶತ್ರುಗಳ ಪಾರುಪತ್ಯಕ್ಕಾಗಿ ಹೊರಡಲು ಪ್ರಾರಂಭಿಸಬೇಕು. ಸೊಕ್ಕಿನ ಜನರ ಪಾರುಪತ್ಯ ಮಾಡಿ ಪ್ರದೇಶಗಳನ್ನು ಗೆಲ್ಲುತ್ತ ಹೋಗಬೇಕು. ರಾಜ್ಯ ವಿಸ್ತರಣೆಯೇ ಬಾದಶಹನ ಕರ್ತವ್ಯವಾಗಿದೆ.

೫. ಯಾವ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಲಾಗುತ್ತದೆಯೋ ಆ ಪ್ರದೇಶಗಳಲ್ಲಿಯ ಶಿಪಾಯಿಗಳು ಮತ್ತು ಸರದಾರರ ನಡತೆ ಹೇಗಿದೆ ಎಂಬುದನ್ನು ಗುರುತಿಸಬೇಕು. ಅವರನ್ನೆಲ್ಲ ತನ್ನಂತೆ ಮಾಡಿಕೊಂಡು, ಯಾರನ್ನು ಹೇಗೆ ಎಲ್ಲಿ ಇಡಬೇಕೋ ಹಾಗೆ ಆ ಜನರನ್ನು ಇಡಬೇಕು. ಅವರಿಗೆ ಸಂಬಳ ಇಲ್ಲವೆ ಜಹಗೀರಿಯನ್ನು ಕೊಡುವುದಾದಲ್ಲಿ, ಅವರನ್ನು ಬೇರೆ ಸ್ಥಳಗಳಲ್ಲಿ ಇಟ್ಟು ಕೊಡಬೇಕು ಮತ್ತು ಅವರುಗಳಲ್ಲಿಯ ಆ ಪ್ರದೇಶದ ಸರದಾರ ಇಲ್ಲವೆ ಕಾರಭಾರಿ ಮುಂತಾದ ಒಬ್ಬನೂ ಭೂಗತ ಇಲ್ಲವೆ ದೇಶಾಂತರ ಹೋಗಗೊಡಬಾರದು. ಯಾರನ್ನೂ ನಿರುದ್ಯೋಗಿಯನ್ನಾಗಿ ಸುಮ್ಮನೆ ಇಟ್ಟಿರಬಾರದು. ಯಾಕೆಂದರೆ ರಾಜ್ಯದಲ್ಲಿಯ ಒಳಸಂಚು ಹಾಗು ಕುತಂತ್ರಗಳಿಗೆ ಕಾರಣಗಳು ಇದರಲ್ಲಿಯೇ ಇವೆ.

೬. ಪ್ರಜೆಗಳನ್ನು ಪೂರ್ಣ ಸುಖಿಯಾಗಿಟ್ಟು ಬಹಳ ಕೃಪೆಯಿಂದ ಮತ್ತು ದಯದಿಂದ ಪಾಲನ ಮಾಡಬೇಕು.

೭. ತನ್ನ ರಾಜ್ಯದ ಒಟ್ಟಂದದ ದೊಡ್ಡ ಉದ್ಯೋಗಗಳಲ್ಲಿ ಮುಸಲ್ಮಾನ ಜಾತಿಯ ಮಾಮಲೇದಾರ (ಅಧಿಕಾರಿ)ನನ್ನು ಮತ್ತು ಹಿಂದು ಜಾತಿಯ ಕಾರಕೂನನನ್ನು ಇಡಬೇಕು. ಬ್ರಾಹ್ಮಣ ಜನರಿಗೆ ಮತ್ತು ಹಿಂದುಗಳಿಗೆ ಅಧಿಕಾರದ ಕೆಲಸಗಳನ್ನು ಕೊಡಬಾರದು. ಯಾಕೆಂದರೆ ಜಗತ್ತಿನ ಮತ್ತು ಧರ್ಮಾಚರಣೆಯ ನಾಶ ಇದರಲ್ಲಿಯೇ ಇದೆ.

೮. ಪ್ರದೇಶದ ವಾರಸುದಾರರಲ್ಲಿಯ ಯಾರನ್ನೂ ಆ ಪ್ರದೇಶದಲ್ಲಿಯೇ ಇಡಬಾರದು. ಅವರನ್ನು ಬೇರೆ ಸ್ಥಳಗಳಲ್ಲಿ ಇಟ್ಟು ಉತ್ತಮ ಪ್ರಕಾರದ ಉದ್ಯೋಗ ನೀಡಿ, ಸಂರಕ್ಷಣೆ ಮಾಡುತ್ತ ಆತನ ಕುಶಲೋಪರಿಯನ್ನು ಕೇಳುತ್ತಿರಬೇಕು. ಆ ಜನರಿಗೆ, ತಾವು ಮೊದಲು ಹೇಗಿದ್ದೆವು? ಎಂಬ ಪೂರ್ವಸ್ಥಿತಿ ಹಾಗೂ ತನ್ನ ಪ್ರದೇಶ ಎಷ್ಟಿತ್ತು ಎಂಬ ಬಗ್ಗೆ ಆತನಿಗೆ ನೆನಪಾಗದಂತೆ ಆತನನ್ನು ಪೋಷಿಸಬೇಕು.

೯. ಹಾಪಸೀ ಜಾತಿಯ ಮತ್ತು ತುರ್ಕೀ ಜಾತಿಯ ಬಹಳಷ್ಟು ಜನರನ್ನು ಸೇರಿಸಿ, ಅವರ ಬುದ್ಧಿ ಯೋಗ್ಯತೆ ಸಹನಶೀಲತೆಗಳನ್ನು ಗುರುತಿಸಿ, ಅದರಂತೆ ಅವರನ್ನು ಹುಜೂರ (ಬಾದಶಹನ ಖಾಸಾ ಸಿಬ್ಬಂದಿ) ಕೆಲಸಕ್ಕೆ ನಿಯಮಿಸಬೇಕು.

೧೦. ಎಲ್ಲ ಕೆಲಸಗಳಲ್ಲಿ, ಸುಳ್ಳು ಹೇಳುವವ, ದುರ್ನಡತೆಯ, ಸ್ವಾಮಿ ನಿಷ್ಠೆ ಇಲ್ಲದವ, ಕೃತಘ್ನ, ಸುಳ್ಳನ್ನೆ ಬಯಸುವವ, ಕೆಟ್ಟ ಸ್ವಭಾವದ, ಗರ್ವಿಷ್ಠ, ಕಳ್ಳ ಮತ್ತು ಕುತಂತ್ರಗಳನ್ನು ಮಾಡುವ ಜನರಿಂದ ದೂರ ಇರಬೇಕು. ಈ ಜನರಿಗೆ ಎಂದಿಗೂ ಆಶ್ರಯ ಕೊಡಬಾರದು. ಸರಕಾರೀ ಕಟ್ಟಡಗಳಲ್ಲಿ ಮತ್ತು ಕೆಲಸ ಕಾರ್ಯಗಳಲ್ಲಿ ಈ ಜನರಿಗೆ ಪ್ರವೇಶ ನೀಡಬಾರದು.

೧೧. ಯಾರಾದರೂ ಬಂದು 'ಶ್ರೀಮಂತನನ್ನು ಹಿಡಿದುಕೊಡುತ್ತೇನೆ ಮತ್ತು ಆತನ ಹತ್ತಿರ ಇದ್ದ ಸಂಪತ್ತನ್ನು ನಾನು ತಂದುಕೊಡುತ್ತೇನೆ' ಎಂದು ಬಂದರೆ, ಆತನನ್ನು ಧಿಕ್ಕರಿಸಿ ದರಬಾರದಿಂದ ಹೊರಗೆ ಹಾಕಬೇಕು. ಅದರಿಂದಾಗಿ ಕುತಂತ್ರಗಳಿಗೆ ಆಸ್ಪದವಿಲ್ಲದಂತಾಗುತ್ತದೆ. ನ್ಯಾಯ ನಿರ್ಣಯ ಹಾಗೂ ಪ್ರಜಾ ಪಾಲನೆ ಮಾಡುವ ಕೀರ್ತಿಗೆ ಭಾಜನನಾಗುತ್ತಾನೆ.

೧೨. ಚಾಡಿಕೋರರ ಮಾತುಗಳನ್ನು ಕೇಳಿ, ಅವುಗಳ ಬಗ್ಗೆ ಖಾತ್ರಿ ಮಾಡಿಕೊಳ್ಳುವವರೆಗೆ ಸಿಟ್ಟಿಗೆ ಬರಬಾರದು. ಅವರ ಮಾತುಗಳನ್ನು ಸತ್ಯವೆಂದು ತಿಳಿಯಬಾರದು. ಒಂದು ವೇಳೆ ಅವರ ಮಾತುಗಳಂತೆ ನಿಜವೆಂದು ಕಂಡುಬಂದರೆ, ಕುರಾನ ಶರೀಫದಲ್ಲಿ ಹೇಳಿದಂತೆ ಮಾಡಿ, ಆತನ ಮಾಲಮತ್ತಾ ಮತ್ತು ಪದಾರ್ಥಗಳ ಕಡೆಗೆ ಆಶೆಯ ಕಣ್ಣುಗಳಿಂದ ನೋಡಬಾರದು. ದ್ರವ್ಯಹರಣ ಮಾಡಬಾರದು.

೧೩. ವಾದಿ-ಪ್ರತಿವಾದಿಗಳ ವಿಚಾರಣೆ ಮಾಡಿ ಒಂದು ವೇಳೆ ವಾದಿ ಸುಳ್ಳು ಎಂದಾದರೆ, ಪ್ರತಿವಾದಿಗೆ ಬಹಳ ಭರವಸೆಯನ್ನು ಕೊಡಿರಿ ಮತ್ತು ವಾದಿಗೆ ದರಬಾರದಲ್ಲಿಯೆ ಶಿಕ್ಷೆಯನ್ನು ಕೊಟ್ಟು ಅವನ ಮರ್ಯಾದೆಯನ್ನು ಕಳೆದು ಹೊರಗೆ ಹಾಕಿರಿ. ಮತ್ತೊಮ್ಮೆ ಆತ ಈ ರೀತಿ ಮಾಡದಂತೆ ಆತನ ಮಾನವನ್ನು ಕಳೆಯಿರಿ.

೧೪. ಕಿಲ್ಲೆ ಮತ್ತು ಕೋಟೆಗಳಲ್ಲಿ ಹಳೆಯ ಒಳ್ಳೆಯ ನಡತೆಯ ನೌಕರರನ್ನು ನಿಯಮಿಸಬೇಕು. ಪ್ರತಿಯೊಂದು ದುರ್ಗದಲ್ಲಿ ಮೂರು-ಮೂರು ಕೆಲಸಗಾರರಗಿಂತ ಅಧಿಕವಾಗಿ ನಿಯಮಿಸಬಾರದು. ಒಬ್ಬ ಕಿಲ್ಲೇದಾರ ಅಥವಾ ದುರ್ಗಾಧಿಪತಿ ಎರಡನೆಯವನು ವಿಶೇಷ ಸೇನೆಯ ಮೇಲಿನ ಅಧಿಕಾರಿ, ಮೂರನೆಯವನು 'ಅಮೀನ' ರಹಸ್ಯ ಸುದ್ದಿಗಳನ್ನು ಬರೆಯುವವನು. ಹೀಗೆ ಮೂರಕ್ಕಿಂತ ಅಧಿಕ ಪ್ರಧಾನ ಅಧಿಕಾರಿಗಳನ್ನು ಇಡಬಾರದು. ಕೆಲವು ದಿನಗಳಾದ ಮೇಲೆ ಆ ಅಧಿಕಾರಗಳನ್ನು ಬೇರೆ ಸ್ಥಳಗಳಿಗೆ, ಮತ್ತು ಬೇರೆ ಸ್ಥಳಗಳಲ್ಲಿಯ ಅಧಿಕಾರಿಗಳನ್ನು ಇತ್ತ ಕಡೆಗೆ ನೇಮಿಸುತ್ತಿರಬೇಕು. ಅಂದರೆ ವರ್ಗಾ ಮಾಡಬೇಕು. ಯಾವ ದುರ್ಗದ ವಶದಲ್ಲಿ ಬಹಳಷ್ಟು ಪ್ರದೇಶಗಳು ಕಾನೂನು ಸುವ್ಯವಸ್ಥೆಗಳನ್ನೊಳಪಟ್ಟು ಇರುವವೋ ಅಂಥ ಕೋಟೆಗೆ ಒಬ್ಬ ಮಾಮಲೇದಾರನನ್ನು ನಿಯಮಿಸಿ, ಆತನ ಮುಖಾಂತರ ಪ್ರದೇಶದ ಎಲ್ಲ ಕೆಲಸಗಳನ್ನು ವಹಿವಾಟಿನಲ್ಲಿ ಇಡಬೇಕು.

೧೫. ಕಾಜಿ, ಖತೀಬ ಮತ್ತು ಶಾಸ್ತ್ರಾರ್ಥಗಳನ್ನು ಬಲ್ಲವರನ್ನು ಆಯಾ ನಗರ ಪಟ್ಟಣಗಳಿಗೆ ಅನುಗುಣವಾಗಿ ನೇಮಿಸಿ ಕುರಾನ ಶರೀಫ ಶಾಸ್ತ್ರಾರ್ಥಗಳನ್ನು ಪ್ರಕಟಿಸುವಲ್ಲಿ, ಧರ್ಮಾಚಾರಗಳ ಧ್ವಜವನ್ನು ಎತ್ತರವಾಗಿ ಎತ್ತಿ ಹಿಡಿಯುವಲ್ಲಿ, ನ್ಯಾಯದಿಂದ ನಡೆಯುವುದನ್ನು ಜೀವಂತವಾಗಿಡಲು, ಬಲಾತ್ಕಾರ ಮತ್ತು ಅತ್ಯಾಚಾರಗಳನ್ನು ಕಾನೂನು ಮುಖಾಂತರ ಎಚ್ಚರಿಕೆಯಲ್ಲಿ ಇಡುವಲ್ಲಿ, ಶಾಸ್ತ್ರಾರ್ಥಗಳನ್ನು ವಿಚಾರಿಸಲು ಬರುವವರಿಗೆ ಅದನ್ನು ತಿಳಿ ಹೇಳುವಲ್ಲಿ ಮತ್ತು ಯಾರ ಮೇಲೆ ಬಲಾತ್ಕಾರವಾಗಿದೆಯೋ ಆತನಿಗೆ ಎಲ್ಲಿಯೂ ನ್ಯಾಯ ದೊರೆತಿರದಿದ್ದರೆ ಆತನ ಫಿರ್ಯಾದನ್ನು ಕೇಳಿ ಕುರಾನ ಶರೀಫದಲ್ಲಿ ಹೇಳಿದಂತೆ ಅಧಿಕಾರ ಚಲಾಯಿಸಬೇಕು.

೧೬. ಪ್ರತಿಯೊಂದು ಸ್ಥಾನ ಅಥವಾ ಯಾವುದೇ ಸ್ಥಳ, ಯಾರ ವಶದಲ್ಲಿ ಬಹಳ ಪ್ರದೇಶವಿದೆಯೋ, ಆ ಸ್ಥಳಗಳನ್ನು ಸುಭೆಗಳಿಗೆ ಒಳಪಡಿಸಬೇಕು. ಸಣ್ಣ ಸಣ್ಣ ಪರಗಣೆ ಮತ್ತು ಗ್ರಾಮ, ಹಳ್ಳಿ ಇತ್ಯಾದಿಗಳು ಸುಭೆಯ ವಶದಲ್ಲಿ ಇರುವಂಥವುಗಳನ್ನು ಜಹಾಗೀರಿಯಲ್ಲಿ ಕೊಡಬೇಕು. ಕಸಬಾದಲ್ಲಿಯ ದೊಡ್ಡ ದೊಡ್ಡ ಊರು ಮತ್ತು ಹೆಸರಾಂತ ಸ್ಥಳಗಳು ಕೋಟೆಗೆ ಬೇಕಾದದ್ದರಿಂದ, ಅವುಗಳನ್ನು ರಾಜ್ಯಕ್ಕೆ ಇಟ್ಟುಕೊಂಡು ಉಳಿದ ಸಣ್ಣ ಸಣ್ಣ ಊರುಗಳನ್ನು ಜಾಹಗೀರದಾರರಿಗೆ, ಇನಾಮದಾರರಿಗೆ ಕೊಡಬೇಕು.

೧೭. ಜಹಾಗೀರದಾರರ ಹೊರತಾಗಿ ಏನೆಲ್ಲ ದ್ರವ್ಯ ವಸೂಲಾಗಿ ಬರುತ್ತದೆಯೋ ಅದು ಸರಕಾರೀ ಖಜಾನೆಯದ್ದಾಗಿದೆ. ಸರಕಾರವು ಅದನ್ನು ತೆಗೆದುಕೊಂಡು ಹೋಗುವವರೆಗೆ ಅಲ್ಲಿಯವರೆಗೆ ಮಹಾಲದಲ್ಲಿಯೇ ಜಮೆಯಾಗಿರಬೇಕು.

೧೮. ರೂಪಾಯಿ ಹಾಗೂ ನಾಣ್ಯಗಳನ್ನು ವರ್ತುಳದ ಆಕಾರದಲ್ಲಿ ಮತ್ತು ಭಾರದಲ್ಲಿ ಪರೀಕ್ಷೆ ಮಾಡಿದರೆ, ರಾಜಧಾನಿಯಾದ ವಿಜಾಪುರದಲ್ಲಿಯ ನಾಣ್ಯಗಳಂತೆ ಮತ್ತು ರೂಪಾಯಿಗಳಂತೆಯೇ ಇರಬೇಕು. ಅದರಲ್ಲಿ ಒಂದು ಗುಂಜಿ ತೂಕಕೂಡ ಅಂತರವಿರಬಾರದು. ಅಂಥ ಸ್ಥಳವನ್ನು ನೋಡಿಯೇ ಟಂಕಸಾಲೆಯನ್ನು ಮಾಡಬೇಕು.

೧೯. ವ್ಯಾಪಾರಸ್ಥರು ತೂಕ ಮಾಡುವ ಕಲ್ಲುಗಳು, ಧಾನ್ಯ ಅಳೆಯುವ ಮಾಪುಗಳು, ವಿಜಾಪುರದಲ್ಲಿ ಇದ್ದಂಥ ತೂಕ ಹಾಗೂ ಅಳತೆಯ ಪ್ರಮಾಣದಲ್ಲಿಯೇ ಇರಬೇಕು. ಒಂದು ವೇಳೆ ಆ ಪ್ರದೇಶದಲ್ಲಿ ಆಗಲೇ ಅಲ್ಲಿಯ ನಡಾವಳಿಕೆಯಂತೆ ಇದ್ದರೆ ಇರಲಿ. ಇದ್ದ ನಡಾವಳಿಕೆಯನ್ನೆ ನಡೆಸಿರಿ. ಆದರೆ ಒಂದು ಅಧಿಕಾರದಲ್ಲಿ ಒಂದು ಪ್ರಕಾರದ ಹೊಸ ತೂಕ ಮತ್ತು ಅಳತೆಗಳು, ಬೇರೆ ಅಧಿಕಾರದಲ್ಲಿ ಇನ್ನೊಂದು ಪ್ರಕಾರದ ತೂಕ ಮತ್ತು ಅಳತೆಗಳನ್ನು ಎಲ್ಲಿಯೂ ವಹಿವಾಟಿನಲ್ಲಿ ಇಡಬಾರದು.

೨೦. ಪ್ರತಿ ಶುಕ್ರವಾರ ಕಾಜಿ ಶಾಸ್ತ್ರಾರ್ಥಗಳನ್ನು ಹೇಳುವ ಧರ್ಮಶಾಸ್ತ್ರಿಗಳು ಮತ್ತು ಎಲ್ಲ ಮುಸಲ್ಮಾನ ಜನರು ತಪ್ಪದೆ ಜುಮ್ಮಾ ಮಶೀದಿಗೆ ಬಂದು ಶುಕ್ರವಾರದ ನಮಾಜ ಮತ್ತು ಖುತಬಾ ಓದಬೇಕು. ಆದರ ಪ್ರಕಾರ ಯಾವುದೇ ಮುಸಲ್ಮಾನನು ಹಾಜರಾಗದಿದ್ದರೆ, ಅವನಿಗೆ ಶಾಸ್ತ್ರಗಳಲ್ಲಿ ಹೇಳಿದಂತೆ ತಾಕೀದು ಮಾಡಿ ಪ್ರಯತ್ನ ಮಾಡಬೇಕು.

೨೧. ಮುಸಲ್ಮಾನರನ್ನು ಮತ್ತು ಮುಸಲ್ಮಾನರ ಕಾಯ್ದೆಗಳಲ್ಲಿ ಯಾವುದೇ ವಿಧರ್ಮಿ ಮನುಷ್ಯ ಅಂದರೆ ಯಾವುದೇ ಹಿಂದು ಪ್ರಬಲನಾಗಿದ್ದರೂ ಆ ಹಿಂದುವಿನೊಂದಿಗೆ ಒಬ್ಬ ಬಡ ಮುಸಲ್ಮಾನನಿದ್ದರೆ ಆ ಮುಸಲ್ಮಾನನ ಸರಿಸಮನಾಗಿ ನಿಲ್ಲುವ ಸಾಮರ್ಥ್ಯ ಇರದಂತೆ ಮುಸಲ್ಮಾನ ಧರ್ಮವನ್ನು ಪ್ರಬಲವಾಗಿಯೇ ಇಡಬೇಕು.

೨೨. ಒಂದುವೇಳೆ ಮುಸಲ್ಮಾನನು ತಪ್ಪು ತಿಳುವಳಿಕೆಯಿಂದ ಹಿಂದುನನ್ನು ನಾಶಮಾಡಬೇಕೆಂಬ, ಹಿಂದುವಿನನ್ನು ಕೆಡವಬೇಕೆಂದು ಇರಾದೆಯನ್ನು ಮಾಡಿದ್ದರೆ, ಅಥವಾ 'ಹಿಂದು ಬೇಡ' ಎಂದು ಮುಸಲ್ಮಾನನು ಬಯಸಿದರೆ, ಆ ಮುಸಲ್ಮಾನನನ್ನು ಯುಕ್ತಿಯಿಂದ ತಾಕೀದು ಮಾಡಬೇಕು. 'ಸದ್ಯ ಈ ವೇಳೆಯಲ್ಲಿಯೇ ಹೀಗೆ ಮಾಡಬೇಡ ಮುಂದೆ ನೋಡಲು ಬಂದೀತು. ಸದ್ಯ ಸಮಯ ತಪ್ಪಿಸು' ಎಂದು ಅವನಿಗೆ ಬೋಧ ಮಾಡಬೇಕು. ಆದರೆ ಹಿಂದೂನ ಸಂರಕ್ಷಣೆ ಮಾಡುವ ವಿಷಯದಲ್ಲಿ ಹಿಂದುವಿನ ಪಕ್ಷ ಹಿಡಿದು ಮುಸಲ್ಮಾನನಿಗೆ ಉಪದ್ರವಕೊಡಬಾರದು. ಮುಸಲ್ಮಾನನಿಗೆ ದುಃಖ ಕೊಡಬಾರದು. ಹೋಳಿ, ದೀಪಾವಳಿ ಮತ್ತು ದಸರಾ ಇತ್ಯಾದಿ ಹಿಂದುಗಳ ಹಬ್ಬಗಳು ಬರುತ್ತವೆ. ಮತ್ತು ಆ ಹಬ್ಬಗಳನ್ನು ಹಿಂದುಗಳು ಬಹಿರಂಗವಾಗಿಯೇ ಆಚರಿಸುತ್ತಾರೆ. ಹಬ್ಬಗಳನ್ನು ಹಾಗೆ ಬಹಿರಂಗವಾಗಿ ಮಾಡದಂತೆ ಮನಾಯಿ ಮಾಡಿ, ಅವುಗಳನ್ನು ಅವರು ಗುಪ್ತವಾಗಿ ಮಾಡಿದರೆ ಅದಕ್ಕೆ ಅಡ್ಡಿ ಮಾಡಬಾರದು. 'ಮಾಹೆ ತಸಬಾ' ಎಂದರೆ ರಮಜಾನ ಶರೀಫ ತಿಂಗಳಲ್ಲಿ ಬಾಜಾರದಲ್ಲಿ ಮತ್ತು ರಸ್ತೆಯ ಮೇಲೆ ಯಾರಾದರೂ ಏನನ್ನಾದರೂ ತಿನ್ನುವ ಪದಾರ್ಥಗಳನ್ನು, ಫಲ ಇತ್ಯಾದಿಗಳನ್ನು ಮಾರಲು ಇಟ್ಟರೆ, ಆ ವ್ಯಾಪಾರಸ್ಥನಿಂದ ದಂಡವನ್ನು ತೆಗೆದುಕೊಳ್ಳಲು ಧರ್ಮಶಾಸ್ತ್ರಜ್ಞರು ವಿಚಾರಿಸಿ ತಾಕೀದು ಮಾಡುವುದಕ್ಕೆ 'ಮಾಹೆ ತಸಬಾ' ಎಂಬುದಾಗಿ ಹೆಸರು. ಆ 'ಮಾಹೆ ತಸಬಾ'ಎಂದರೆ ಧರ್ಮಶಾಸ್ತ್ರ ಬಲ್ಲ ಜನರ ಮನೆಯಲ್ಲಿ ಏನು ನಡೆಯುತ್ತದೆ, ಈ ವಿಷಯಕ್ಕೆ ಕಾರಣ ಏನು? ಇದರಲ್ಲಿಯ ಭಾವವೆಂದರೆ-ಹಿಂದು ಜನರು ತಂತಮ್ಮ ಮನೆಗಳಲ್ಲಿ

ಬೇಕಾದದ್ದನ್ನು ಮಾಡಿದರೂ ಅವರಿಗೆ ಅಡ್ಡಿ ಪಡಿಸಬಾರದು ಆದರೆ ಬಹಿರಂಗವಾಗಿ ಮಾಡ ಹತ್ತಿದರೆ ಅಡ್ಡಿ ಪಡಿಸಬೇಕು.

೨೩. ಜುಮ್ಮಾಮಸೀದಿ, ಆಸಾರ ಮಹಲ, ಬಾದಶಾಹ ಮೊದಲಾದವರ ವಾಡೆಗಳಲ್ಲಿ ಔಲಿಯಾ ಇತ್ಯಾದಿ ಸಿದ್ಧಪುರುಷರ ಸ್ಥಳಗಳಲ್ಲಿ ಮತ್ತು ಉಳಿದ ಅನೇಕ ಮಸೀದಿಗಳಲ್ಲಿ ಮೊದಲಿನಿಂದ ನಡೆದುಕೊಂಡು ಬಂದ ಅನ್ನ ಛತ್ರಗಳು, ಅದಕ್ಕಾಗಿ ಕೊಟ್ಟ ಇನಾಮಭೂಮಿ, ದಿನಖರ್ಚಿಗಾಗಿ ನಿಯಮಿಸಿದವುಗಳನ್ನು ಹಾಗೆಯೇ ಮುಂದುವರಿಸಿಕೊಂಡು ಬರಬೇಕು. ಅವುಗಳು ನಡೆದುಕೊಳ್ಳುವಂತೆ ಪ್ರಯತ್ನಿಸಬೇಕು. ಪ್ರತಿಯೊಂದು ಗಳಿಗೆಯಲ್ಲೂ ಅವುಗಳ ಬಗ್ಗೆ ಸುದ್ದಿಯನ್ನು ತಿಳಿದುಕೊಳ್ಳುತ್ತ ಅನ್ನ ನೀರುಗಳ ವಿಷಯದಲ್ಲಿ ಸಂಪೂರ್ಣ ವ್ಯವಸ್ಥೆ ಮಾಡುವಲ್ಲಿ ಎಚ್ಚರ ವಹಿಸಬೇಕು. ಅಲ್ಲಾನನ್ನು ಭಜಿಸುವ ಮುಸಲ್ಮಾನ ಜಾತಿಯ ಸಾಧು ಮತ್ತು ಫಕೀರರುಗಳಿಗೆ ಅನ್ನ ಮುಟ್ಟುತ್ತಿರಬೇಕು. ಅನ್ನೋದಕಗಳಲ್ಲಿ ಯಾರೂ ಕೈಹಾಕಿ ಗಡಬಿಡಿ ಮಾಡಬಾರದು. ಆ ಅನ್ನಕ್ಕೆ ನಾಯಿ ಮತ್ತು ಬೆಕ್ಕುಗಳು ಬಾಯಿ ಹಾಕದಂತೆ ನೋಡಿಕೊಳ್ಳಬೇಕು. ಹೀಗೆ ಸರಿಯಾದ ವ್ಯವಸ್ಥೆಯನ್ನು ಮಾಡಬೇಕು. ಫಕೀರರು, ಮುಸಲ್ಮಾನ ಜಾತಿಯ ಯಾಚಕರು, ಔಲಿಯಾಗಳಿಗೆ ಅನ್ನ ಮತ್ತು ಉದಕಗಳನ್ನು ಸರಿಯಾಗಿ ಹಂಚಬೇಕು, ಅದರಲ್ಲಿ ಒಂದು ಕಾಳು ಕೂಡ ವ್ಯರ್ಥವಾಗಗೊಡಬಾರದು.

೨೪. ಆಸಾರ ಶರೀಫದ ಮಹಲಿನಲ್ಲಿ ಎರಡು ಬರವಣಿಗೆಯ ವಿದ್ಯಾಶಾಲೆಗಳನ್ನು ಪ್ರಾರಂಭಿಸಬೇಕು. 'ಹದೀಸ' ಅಂದರೆ ಪೈಗಂಬರರು ಹೇಳಿದ ವಾಕ್ಯಗಳಲ್ಲಿ ಫೀಹ ಅಂದರೆ.............ರ ವಿದ್ಯೆಯ ಮತ್ತು ಕುರಾನ ಶರೀಫದ ಪಾಠ ಹೇಳುವುದನ್ನು ಪ್ರಾರಂಭಿಸಬೇಕು. ವಿದ್ಯೆಯನ್ನು ಕಲಿಯುವ ಮಕ್ಕಳಿಗೆ ಆಸಾರ ಮಹಲಿನ ವಿದ್ಯಾಶಾಲೆಯಲ್ಲಿ ತಿನ್ನುಣ್ಣುವ ಸವಲತ್ತುಗಳನ್ನು ಒದಗಿಸಬೇಕು.

೨೫. ಜುಮ್ಮಾ ಮಸೀದಿಯಲ್ಲಿ ಮಕ್ಕಳಿಗೆ ಧೂಳಾಕ್ಷರಗಳನ್ನು ಕಲಿಸುವ ಶಾಲೆಯಲ್ಲಿ ಇಬ್ಬರು ಪಂತೋಜಿಗಳನ್ನು, ಅರಬ್ಬೀ ವಿದ್ಯೆ ಮತ್ತು ಮುಸಲ್ಮಾನ ಧರ್ಮದ ಕುರಾನ ಶರೀಫ, ಮಜಾನಿ ಮತ್ತು ಮಂತಿಕ ಇತ್ಯಾದಿ ವಿದ್ಯೆಗಳನ್ನು ಕಲಿಸಲು ಇಬ್ಬರು ವಸ್ತಾದರನ್ನು, ಹಾಗೂ ಫಾರ್ಸೀ ವಿದ್ಯೆಯನ್ನು ಕಲಿಸಲು ಒಬ್ಬ ವಸ್ತಾದರನನ್ನು ನಿಯಮಿಸಿಕೊಟ್ಟು ವಿದ್ಯಾಭ್ಯಾಸವನ್ನು ಮಾಡಿಸಬೇಕು. ವಿದ್ಯೆ ಕಲಿಯುವ ಹುಡುಗರಲ್ಲಿ ಯಾರಾದರೂ 'ನಾದಾನ' ಎಂದರೆ ಕಡು ಬಡವರಿಗೆ, ಅವರಿಗೆ ಅನ್ನ ನೀರುಗಳ ವ್ಯವಸ್ಥೆ ಮಾಡಿ ಅವುಗಳು ಅವರಿಗೆ ಮುಟ್ಟಿದ ಬಗ್ಗೆ ಖಾತ್ರಿ ಮಾಡಿಕೊಳ್ಳುತ್ತಿರಬೇಕು. ಶಾಲೆಗಳನ್ನು ಮತ್ತು ಅನ್ನಛತ್ರಗಳನ್ನು ನಡೆಸುವ ವಿಷಯದಲ್ಲಿ ಬಹಳ ಪ್ರಯತ್ನ ಮಾಡಬೇಕು ಅವುಗಳು ಎಂದೂ ಮುಚ್ಚಿಕೊಳ್ಳದಂತೆ ನೋಡಿಕೊಳ್ಳಬೇಕು.

೨೬. ವಿಜಾಪುರದಲ್ಲಿಯ ಮಸೀದಿಗಳಿಗಿದ್ದ ಹಳೆಯ ಸನದು, ಆಜ್ಞೆ, ಇನಾಮ ಜಮೀನು ಮತ್ತು ನಿತ್ಯಖರ್ಚು ಇತ್ಯಾದಿಗಳನ್ನು ಮತ್ತೆ ಊರ್ಜಿತಗೊಳಿಸಿ ಮಶೀದಿಗಳನ್ನು ಬಹಳ ವ್ಯವಸ್ಥಿತವಾಗಿ ಇಟ್ಟುಕೊಳ್ಳುವಂತೆ ತಾಕೀದು ಮಾಡಬೇಕು.

೨೭. ಮಸೀದಿಗಳ ದೀಪ, ಎಣ್ಣೆಗಳಿಗೆ ಮಂಜೂರಿ ಇರದಿದ್ದರೆ ಆ ಮಸೀದಿ ಬಗ್ಗೆ ಪಾವಶೇರ ಎಣ್ಣೆ ಮತ್ತು ನಾಲ್ಕು ಛಗಣೆಗಳನ್ನು ಅಂದರೆ ಪೈಯ ಆರು ಛಗಣೆಗಳು, ಅದರಲ್ಲಿ ಅಂತರವಾಗದಂತೆ ಕೊಡುತ್ತ ಹೋಗಬೇಕು.

೨೮. ನೂರು ಮಸೀದಿಗಳ ಮೇಲೆ ಒಬ್ಬ ದರೋಗಾನನ್ನು ಅಂದರೆ ಪ್ರಧಾನ ಅಧಿಕಾರಿಯನ್ನು ನಿಯಮಿಸಿ, ನೀರು ಮತ್ತು ಹಾಸಿಗೆಗೆ, ಕಸ ತೆಗೆಯುವ ವ್ಯವಸ್ಥೆ ಇಡಬೇಕು.

೨೯. ನಗರದಲ್ಲಿ ಬಾದಶಹನ ಆಜ್ಞೆ ಇಲ್ಲದೆ ಯಾವ ಸ್ಥಳದಲ್ಲೂ ಮತ್ತು ಎಲ್ಲಿಯೂ ಯಾರೂ ಮಸೀದಿಗಳನ್ನು ಕಟ್ಟಬಾರದೆಂದು ತಾಕೀದು ಮಾಡಬೇಕು. ಯಾಕೆಂದರೆ ಪರಲೋಕದಲ್ಲಿಯ ಪುಣ್ಯಕ್ಕಾಗಿ ಮಸೀದಿಗಳನ್ನು ಕಟ್ಟುತ್ತಾರೆ ಮತ್ತು ಆ ವ್ಯವಸ್ಥೆ ಹಾಗು ಉಸ್ತುವಾರಿಯನ್ನು ಇಡಲಾರದೆ ಮಸೀದಿಯನ್ನು ಕಟ್ಟುವುದರಿಂದ ಪುಣ್ಯಕ್ಕಿಂತ ಪಾಪವೇ ಅಧಿಕವಾಗಿ ಪ್ರಾಪ್ತವಾಗುತ್ತದೆ. ಒಂದು ವೇಳೆ ಪುಣ್ಯ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂದರೆ, ಅವರು ಧರ್ಮಶಾಲೆ, ಸೇತುವೆ, ಬಾವಿ ಮತ್ತು ನೀರಿನ ಸಂಗ್ರಹಕ್ಕಾಗಿ ಹೌಜು ಇತ್ಯಾದಿಗಳನ್ನು ಎಲ್ಲಿ ಬೇಕಾಗಿದೆಯೋ ಆ ಸ್ಥಳಗಳಲ್ಲಿ ನಿರ್ಭಯವಾಗಿ ಕಟ್ಟಬೇಕು.

೩೦. ಯಾರಿಗೆ ಯಾವ ಸ್ಥಳದಲ್ಲಿ ಮಸೀದಿಯ ಪುನರ್ನಿರ್ಮಾಣ ಮಾಡುವುದು ಅವಶ್ಯವೆಂದು ತಿಳಿದರೆ, ಅವರು ಆ ಸ್ಥಳದಲ್ಲಿ ಬಾದಶಹನಿಗೆ ವಿಷಯ ತಿಳಿಸಿ ಮಸೀದಿಯನ್ನು ಕಟ್ಟಿ, ಆ ಕಟ್ಟಡಕ್ಕಾಗಿ ಸುಲ್ತಾನ ಮಹಮ್ಮದ ಬಾದಶಹರ ಸರಕಾರದಿಂದ ನೇಮಣೂಕಿಯನ್ನು ಮತ್ತು ನಿತ್ಯಖರ್ಚನ್ನು ಮಂಜೂರಿ ಮಾಡಿಸಿಕೊಳ್ಳಬೇಕು. ಈ ಕುರಿತು ನಗರಾಧಿಕಾರಿಗಳು ಮತ್ತು ವ್ಯವಸ್ಥಾ ಅಧಿಕಾರಿಗಳು ಈ ಕೆಲಸದಲ್ಲಿ ಆಗಾಗ ಸುದ್ದಿಗಳನ್ನು ಪಡೆದು ಎಚ್ಚರದಿಂದ ಇರಬೇಕು. ಒಟ್ಟಾರೆ ಮಸೀದಿಯ ಕೆಲಸದಲ್ಲಿ ಮತ್ತು ವ್ಯವಸ್ಥೆಯಲ್ಲಿ ಅಂತರ ಬೀಳಬಾರದು.

೩೧. ರಮಜಾನ ಶುಭ ತಿಂಗಳಲ್ಲಿ ಎಲ್ಲ ಮಸೀದಿಗಳಲ್ಲಿ ಹಾಸಲು ಜಮಖಾನೆಗಳು, ನೀರಿನ ಕೊಡಗಳು, ಸುಣ್ಣ ಸಾರಿಸುವುದು, ಮತ್ತು ಮಸೀದಿಗಳಲ್ಲಿ ಸೇರಬಹುದಾದ ಜನರ ಪ್ರಮಾಣದಲ್ಲಿ ದಿನಖರ್ಚನ್ನು ನೇಮಣೂಕಿ ಮಾಡಿಕೊಡಬೇಕು. ದೊಡ್ಡ ದೊಡ್ಡ ಮಸೀದಿಗಳಲ್ಲಿ ಮತ್ತು ದೊಡ್ಡ ದೊಡ್ಡ ಹೆಸರಾಂತ ಕುರಾನ ಶರೀಫವನ್ನು ಮುಖೋದ್ಗತ ಪಠಿಸುವ ಹಾಫೀಜರು ಮತ್ತು ಹಾಫೀಜರು ಕುರಾನ ಶರೀಫ ಪಠಿಸುವಾಗ ಆ ಸಮಯದಲ್ಲಿ ಅವರ ತಪ್ಪುತಡೆಗಳ ಮೇಲೆ ದೃಷ್ಟಿ ಇಟ್ಟು, ಕಿವಿಗೊಟ್ಟು ಕೇಳುತ್ತ ಕುಳಿತ ಸಾಮಆಗಳನ್ನು ನಿಯಮಿಸಿ, ದಿನಖರ್ಚು ಇತ್ಯಾದಿಗಳನ್ನು ಸರಕಾರದಿಂದ ಮುಟ್ಟಿಸಬೇಕು. ನಮಾಜ ತರಾವಿಹ (ರಮಜಾನ ತಿಂಗಳಲ್ಲಿ ಪ್ರತಿ ರಾತ್ರಿ ನಮಾಜ) ಓದುವವರು ಅವರಿಂದ ನಿಮಾಜನನ್ನು ಓದಿಸುತ್ತ ಹೋಗಬೇಕು.

೩೨. ರಮಜಾನ ತಿಂಗಳಲ್ಲಿ ರಾತ್ರಿ ನಮಾಜ ಓದಲು, ತೇಜಸ್ವಿಗಳನ್ನು ಶಾಸ್ತ್ರಾರ್ಥ ಮತ್ತು ರಸುಲಿಲ್ಲಾಹ ಪೈಗಂಬರ ಅವರ ಸುನ್ನಿ ಧರ್ಮಧ್ವಜ, ಎತ್ತರಿಸಿ, ಕಾಜಿ ಮತ್ತು ಮುಫ್ತಿ ಅಂದರೆ ಕುರಾನ ಶರೀಫದ ಶಾಸ್ತ್ರಾರ್ಥಗಳನ್ನು ಹೇಳುವವರು ಮತ್ತು ಷಯೂಖದ ಶರೀಯತ್ ಮತ್ತು ಬಾದಶಾಹ, ಕುರಾನ ಶರೀಫದ ಶಾಸ್ತ್ರಾರ್ಥಗಳಿಂದ ಆಜ್ಞೆ ಮಾಡುವ ಮಂಡಳಿಯ ಆದೇಶದ ಮೇರೆಗೆ ನಡೆಯಬೇಕು. ಮನಹೀ ಅಂದರೆ ಹಾಡುವುದು, ಚೇಷ್ಟೆ ಮಾಡುವುದು, ಹರಟೆ ಕೊಚ್ಚುವುದು, ತಮಾಷೆ ಇತ್ಯಾದಿ ಪಾತಕದ ಕೆಲಸಗಳು, ಶಾಸ್ತ್ರದಲ್ಲಿ ವರ್ಜ್ಯವಾದಂಥವುಗಳು ಮುಸಕರಾತ, ಅಂದರೆ ದಾರು, ಅಫಿಮು, ಭಾಂಗ ಇತ್ಯಾದಿ ಮದ ಏರುವ ಅಮಲಿನ ಪದಾರ್ಥಗಳಲ್ಲದೆ ಇನ್ನೂ ಅನೇಕ ಶಾಸ್ತ್ರಗಳಲ್ಲಿ ಸೇವನೆ ಮಾಡಬಾರದು ಎಂದು ಹೇಳಿದ ಅಪವಿತ್ರ ಪದಾರ್ಥಗಳನ್ನು ದೂರಮಾಡಿ, ಅಂಥ ಪದಾರ್ಥಗಳನ್ನು ಸೇವನೆ ಮಾಡಿದವರಿಗೆ, ಮತ್ತೆ ಪುನಃ ಅಂಥ ಕಾರ್ಯಗಳಿಗೆ ಕೈ ಹಾಕದಂಥ ಶಿಕ್ಷೆ ಕೊಡಬೇಕು.

೩೩. ಎಲ್ಲ ಜನರ ಯೋಗ್ಯತೆಯನ್ನು ಅರ್ಥ ಮಾಡಿಕೊಳ್ಳುವುದು ಮತ್ತು ನಮಾಜ, ರೋಜಾ ಮತ್ತು ಕುರಾನ ಶರೀಫದ ಶಾಸ್ತ್ರಾರ್ಥಗಳನ್ನು ಅವಶ್ಯವಿದ್ದ ಮಟ್ಟಿಗೆ ಪ್ರಸಿದ್ಧಿ ಮಾಡುವಂತೆ ಕಟ್ಟಪ್ಪಣೆ ಮಾಡಿ ಪ್ರತಿಯೊಂದು ಕೆಲಸದಲ್ಲೂ ಯಾರೂ ಕೆಡಿಸಬಾರದು ಮತ್ತು ಪುಣ್ಯ-ಪಾಪಗಳ ಸಂಬಂಧವನ್ನು ಹಚ್ಚಬಾರದು.

೩೪. ದೊಡ್ಡವರ, ಸಾಧುಗಳ ಸಮಾಧಿಯ ಮೇಲಿನ ವಸ್ತ್ರಗಳಿಗೆ ಜಾಲರಿಯನ್ನು ಹಚ್ಚುತ್ತಾರೆ. ಅದಕ್ಕೆ 'ಗಲಾಫ' ಎಂದು ಹೆಸರು. ಅವುಗಳಿಗೆ ಮೊದಲಿನಂತೆ ನೇಮಣೂಕಿ, ನಖ್ತ, ಖರ್ಚು ಇತ್ಯಾದಿಗಳನ್ನು ಪೂರ್ವಾಪರ ವಹಿವಾಟಿನಂತೆ ಚಾಲನೆಯಲ್ಲಿಟ್ಟು ಉರುಸು ಸಮಾರಂಭವನ್ನು ಯೋಗ್ಯ ರೀತಿಯಿಂದ ಮಾಡಿಸಬೇಕು.

೩೫. ತಕೆ(ಗಾದಿ)ಯಲ್ಲಿ ಕುಳಿತುಕೊಳ್ಳುವ ಫಕೀರರಿಗೂ ಸಹ ನೇಮಣೂಕಿ, ದಿನಖರ್ಚು ಇತ್ಯಾದಿ ಮತ್ತು ಇನಾಮುಗಳನ್ನು ಕೊಟ್ಟು, ಆ ಫಕೀರರಿಗೂ ಸಹಾಯ ಮಾಡಬೇಕು. ದಾರಿಹೋಕರಿಗೂ ಸಹಾಯ ಮಾಡುತ್ತ ಅವರ ಸರಬರಾಜಿನ ವ್ಯವಸ್ಥೆಯನ್ನು ಮಾಡಬೇಕು.

೩೬. ಎಲ್ಲ ಮಸೀದಿಗಳಲ್ಲಿ ಮತ್ತು ರಾಜ್ಯದಲ್ಲಿ ಎಲ್ಲೆಲ್ಲಿ ಅವಶ್ಯಕತೆ ಇದೆಯೋ ಅಲ್ಲೆಲ್ಲ ಅರವಟ್ಟಿಗೆಗಳನ್ನು ನಿರ್ಮಿಸಬೇಕು. ಅಲ್ಲಿ ನೀರಿನ ವ್ಯವಸ್ಥೆಯೊಂದಿಗೆ ಶೌಚಾಲಯಗಳನ್ನೂ ತಾಕೀದು ಮಾಡಿ ಕಟ್ಟಿಸಬೇಕು. ಅನ್ನಸತ್ರ ಹಾಗು ಅರವಟ್ಟಿಗೆಗಳನ್ನಿಟ್ಟು ವಿದ್ಯಾಶಾಲೆಗಳನ್ನು ನಡೆಸಬೇಕು.

೩೭. ಜುಮ್ಮಾ ಮಸೀದಿಯಲ್ಲಿಯ ಅನ್ನಛತ್ರದಲ್ಲಿ ಮುಸಲ್ಮಾನ ಜನರಿಗೆ ರೊಟ್ಟಿ ಮತ್ತು ಬೆಂದ ಅನ್ನವನ್ನು ಇಡಬೇಕು. ಹಿಂದು ಜನರಿಗೆ ಊಟದ ಅವಶ್ಯಕತೆ ಇದ್ದರೆ, ಅವರು ಮುಸಲ್ಮಾನರ ಅನ್ನವನ್ನು ಉಣ್ಣುವುದಿಲ್ಲವಾದ್ದರಿಂದ, ಅವರಿಗೆ ಒಂದು ವೇಳೆಗಾಗಿ ಹಿಟ್ಟು ಕೊಡಬೇಕು, ದಾರಿಹೋಕ ಹಿಂದುಗಳಿಗೆ ಮೊದಲ ದಿನ ಪ್ರತಿಯೊಬ್ಬನಿಗೆ ಐದು ಚಿಪಟಿ ಹಿಟ್ಟು, ಒಂದು ಚಿಪಟಿ ಬೇಳೆ ಮತ್ತು ನಾಲ್ಕು ಟಾಕ (ಚಮಚ?) ತುಪ್ಪದೊಂದಿಗೆ ಒಟ್ಟಿನ ಮಸಾಲೆ ಖರ್ಚಿಗಾಗಿ ಮೂರು ಪೈಸೆ ರೋಖ ಈ ಪ್ರಮಾಣದಲ್ಲಿ ಅಂತರ ಬೀಳದಂತೆ ಕೊಡುತ್ತ ಹೋಗಬೇಕು.

೩೮. ಯಾತ್ರಿಕರು ಬರಹೋಗುವ ಮಾರ್ಗದಲ್ಲಿ ಪ್ರತಿಯೊಬ್ಬನಿಗೂ ಉಪದ್ರವವಾಗದಂತೆ ವ್ಯವಸ್ಥೆ ಇರಬೇಕು. ಕಳ್ಳರನ್ನು ಶೋಧಿಸಿ ಹಿಡಿದು ಕಾಯ್ದೆ ಪ್ರಮಾಣದಂತೆ ಸ್ವತಃ ಅವರನ್ನು ವಿಚಾರಿಸಿ ಖರೆ-ಖೊಟ್ಟಿಗೆ ಹಚ್ಚಿ ನಿಜವಾದ ಸಂಗತಿಯನ್ನು ತಿಳಿಯಬೇಕು.

೩೯. ಕೈಗೆ ಹತ್ತಿದ ಲೂಟಿಯಾದ ಸಂಪತ್ತಿನಲ್ಲಿ ಮತ್ತು ಖಜಾನೆಯಲ್ಲಿ ಜಮೆಯಾದ ಲೂಟಿ ಸಂಪತ್ತಿನಲ್ಲಿ ಜಕಾತ ಅಂದರೆ ಶೇಕಡಾ ಎರಡೂವರೆ ರೂಪಾಯಿಯಂತೆ, ಧರ್ಮಾದಾಯ ಮತ್ತು ಖಮಸ ಅಂದರೆ ಶೇಕಡಾ ಐದು ರೂಪಾಯಿ ಪೈಗಂಬರರ ಹೆಸರಿನಲ್ಲಿ ಹಿಸೆಯನ್ನು ತೆಗೆದಿಟ್ಟು, ಆ ದ್ರವ್ಯವನ್ನು ಫಕೀರ ಜನರು, ಔಲಿಯಾ ಇತ್ಯಾದಿ ಜನರಿಗೆ ಧರ್ಮ ಮಾಡಬೇಕು. ಇದಲ್ಲದೆ ಮತ್ತೆ ಬೇರೆ ಏನಾದರೂ ದೊರೆತರೆ, ಅದನ್ನು ಜುಮ್ಮಾ ಮಸೀದಿ ಇಲ್ಲವೆ ಆಸಾರ ಮಹಲಿನಲ್ಲಿ ಬೇರೆ-ಬೇರೆಯಾಗಿ ಇಟ್ಟು ಕುರಾನ ಶರೀಫದಲ್ಲಿ ಹೇಳಿದಂತೆ ಅದನ್ನು ಖರ್ಚು ಮಾಡಬೇಕು. ಈ ಕೆಲಸಕ್ಕೂ ಅಲಾಹಿದಾ ಅಧಿಕಾರಿಗಳನ್ನು ನಿಯಮಿಸಬೇಕು.

೪೦. ಪ್ರತಿಯೊಬ್ಬ ಫಕೀರ ಮತ್ತು ಬಡಬಗ್ಗರಿಗೆ ಕುರಾನ ಶರೀಫದಲ್ಲಿ ಹೇಳಿದಂತೆ ತಪ್ಪದೆ ಅನ್ನೋದಕವನ್ನು ಸರಕಾರದಿಂದ ಮುಟ್ಟಿಸುತ್ತ ಹೋಗಬೇಕು. ದೇವರನ್ನು ಭಜಿಸುವ ಜನರಿಗೆ ಜಹಗೀರು

ಇಲ್ಲವೆ ಇನಾಮ, ಇಲ್ಲವೆ ದಿನಖರ್ಚು, ಧರ್ಮ, ದಾನ ಮಾಡಿ ನಿತ್ಯದ ಭೋಜನ ವಿಷಯದಲ್ಲಿ ಸಹಾಯ ಮಾಡಬೇಕು. ಕುರಾನ ಶರೀಫದ ಅರ್ಥಕ್ಕೆ ಬಾಧೆ ಬರುವಂಥ ಯಾವುದನ್ನೂ ಮಾಡಬಾರದು.

೪೧. ಪ್ರಧಾನ ಅಧಿಕಾರಿಯು ಕಾನೂನುಗಳನ್ನು ಬಲ್ಲವನು, ಒಳ್ಳೆಯ ವಿಚಾರವಂತನು, ಸಂಪೂರ್ಣ ವಿಶ್ವಾಸಿಕನಾಗಿದ್ದರೆ ಆತನನ್ನು ಕೆಲಸದಿಂದ ಬದಲಿಸದೆ ಅಲ್ಲಿಯೇ ಮುಂದುವರಿಸಬೇಕು. ಒಳ್ಳೆಯ ಕೆಲಸ ಬಲ್ಲವನಾಗಿದ್ದರೆ ಆತನಿಗೆ ಅಧಿಕಾರ ಕೊಟ್ಟು, ಇಬ್ಬರು ಕಾಜಿಗಳನ್ನು, ಇಬ್ಬರು ಮುತ್ಸಿಗಳನ್ನು, ಇಬ್ಬರು ಧರ್ಮಶಾಸ್ತ್ರಿಗಳು (ಶೇಖರಶೇಖರು) ಮತ್ತು ಇಬ್ಬರು 'ಸದರ'ರನ್ನು, ಅಂದರೆ (ಎಲ್ಲ ಕೆಲಸಗಾರರು ಆತನನ್ನು ಕೇಳಿ ಕೆಲಸ ಮಾಡುವಂತೆ, ಆತನ ಆದೇಶವಿಲ್ಲದೆ ಏನೊಂದೂ ಮಾಡಬಾರದು ಅಂಥ ಮುಖ್ಯಕಾರಭಾರಿಗೆ 'ಸದರ' ಎಂದು ಹೆಸರು.) ಒಬ್ಬ ಅಮೀನ, ಒಬ್ಬ ಕೊತವಾಲ ಮತ್ತು ಒಬ್ಬ ಸರದಾರನನ್ನು ಕಾಯಮಾಗಿ ಇಡಬೇಕು. ಈ ಜನರ ನೇಮಣೂಕಿ, ಅವರ ಯೋಗ್ಯತಾನುಸಾರದ ಸಂಬಳ ಮಂಜೂರು ಮಾಡಿ, ಎಲ್ಲ ಊರುಗಳನ್ನು ಮತ್ತು ಮೊಕಾಸಾಗಳನ್ನು ಮಹಾಲ ಕಡೆಗೆ ಜೋಡಿಸಬೇಕು. ಕೋಟೆಯ ಕಡೆಯ ಅಧಿಕಾರಿಗೆ ೫೦೦ ಸವಾರರನ್ನು ಕೊಡಬೇಕು. ಅಂದರೆ ಕೋಟೆಯ ಬಾಗಿಲಿನ ವ್ಯವಸ್ಥೆಗಾಗಿ ಮತ್ತು ಎಲ್ಲೆಲ್ಲಿ ಅವಶ್ಯಕತೆ ಇದೆಯೋ ಅಲ್ಲಿಯ ಕೋಟೆಯ ಅಧಿಕಾರಿಯು ತನ್ನ ಖಾಸಾ ಸೈನ್ಯವನ್ನು ತೆಗೆದುಕೊಂಡು ವ್ಯವಸ್ಥೆ ಇಡಬೇಕು ಮತ್ತು ಸೇವೆಯ ಹುದ್ದೆಯಲ್ಲಿ ಎಂದಿನಂತೆ ನಡೆಯಬೇಕು.

೪೨. ೫೦೦೦ ಸಿಬ್ಬಂದಿ ಜನರು ಯೋಧರು ಅವರಲ್ಲಿ ಕೇವಲ ೨೦೦ ಬರ್ಕಂದಾಜರು (ಬಂದೂಕುಧಾರಿಗಳು) ಒಂದು ಹಿಸೆ 'ವಿಟಾ' ಹೊಡೆಯುವವರು ಅಂದರೆ ಚೌಕೋನಿ ಇಟ್ಟಿಗೆಗೆ ಒಂದು ಬದಿಗೆ ಹಿಡಿಯಲು ಹಿಡಿಕೆ ಇರುತ್ತದೆ. ಉಳಿದ ಮೂರು ಬದಿಗಳೂ ಚೂಪಾಗಿರುತ್ತವೆ, ಆ ಇಟ್ಟಿಗೆಯನ್ನು ಬೀಸಿ ಹೊಡೆದರೆ ಎಲ್ಲಿ ತಾಗುತ್ತದೆಯೋ ಅಲ್ಲಿ ದೇಹ ತುಂಡು-ತುಂಡಾಗಿ ಬಿಡುತ್ತದೆ. ಅದು ಶಿರದ ಗುರಿಯಾಗಿದ್ದರೆ, ತಲೆ ಕತ್ತರಿಸಿ ಬೀಳುತ್ತದೆ. ಅವರಿಗೆ 'ಇಟ್ಟಿಗೆ ಹೊಡೆಯುವವರು' ಎಂದು ಹೆಸರು. ಇನ್ನೂ ಒಂದು ಅರ್ಥದಲ್ಲಿ 'ವಿಟಾ' ಎಂಬ ಹೆಸರಿನ ಭಲ್ಲೆಯಂಥ ಶಸ್ತ್ರವೂ ಇರುತ್ತದೆ. ಉದ್ದವಾದ ಕೋಲಿಗೆ ತಲವಾರಿನಂಥ ಹಲಗೆ ಇರುತ್ತದೆ. ಅದಕ್ಕೂ 'ವಿಟಾ' ಎಂದು ಹೆಸರು. ಅಂಥ ಶಸ್ತ್ರದಿಂದ ಹೊಡೆಯುವವರು ಒಟ್ಟು ಒಂದು ಹಿಸೆ ಇರಬೇಕು. ಇದಕ್ಕಿಂತ ಅಧಿಕವಾಗಿಯಾಗಲಿ, ಕಡಿಮೆಯಾಗಲಿ ಇರಬಾರದು. ಇದಲ್ಲದೆ ಬೇರೆ ಚಾಕರ ಜನರು ಅವಶ್ಯ ಇದ್ದರೆ ಅವರಿಗೆ ಪೂರ್ವದತ್ ದಸ್ತೂರಿನಂತೆ ಕಾಯಮಾಗಿ ಇಡಬೇಕು.

೪೩. ಗೋಲಂದಾಜ ಮೊದಲಾದ ತೋಫಿನ ಕಡೆಯ ಅಧಿಕಾರಿಗಳು, ಬಾಣ ಬಿಡುವ ಚಾಕರರು ಇಂಥವರನ್ನು ಇನ್ನೊಬ್ಬರು ಅಂಥವರು ದೊರೆಯುವುದು ಕಠಿಣ ಎಂಬ ಅದ್ವಿತೀಯರನ್ನು ಆರಿಸಿ ನೇಮಣೂಕಿ ಮಾಡಬೇಕು.

೪೪. ಯೋಧರು, ಸಿಬ್ಬಂದಿ ಜನರನ್ನು ಉಪಯೋಗ ಬೀಳುವಂಥವರು ನಗರದಲ್ಲಿರಬೇಕು.

೪೫. ಎಲ್ಲ ಬಾಗಿಲುಗಳಲ್ಲಿ ಸತ್ಯವಾದ ವಿಷಯಗಳನ್ನು ಬರೆಯುವವರು, ಸುದ್ದಿ ಹೇಳುವವರನ್ನು ಕೆಳಗೆ, ಒಳಗೆ ಮತ್ತು ಮೇಲೆ ಹೀಗೆ ಅಲ್ಲಲ್ಲಿ ಎಚ್ಚರಿಕೆಯಿಂದ ನೇಮಿಸಬೇಕು. ಪ್ರಸಂಗ ಬಂದಾಗ ಅವರು ತಕ್ಷಣ ಎಲ್ಲರೂ ಹಾಜರಾಗಿ, ಬಾಗಿಲ ಮೇಲಿನ ಮುಖ್ಯ ಅಧಿಕಾರಿಯ ಸೂಚನೆಯ ಹೊರತಾಗಿ ಯಾರನ್ನೂ ಹೊರಗಿನಿಂದ ಒಳಗೆ ಮತ್ತು ಒಳಗಿನಿಂದ ಹೊರಗೆ ಹೆಜ್ಜೆ ಇಡಗೊಡಬಾರದು. ಹೊಸಬನು ಈತ ಯಾರು ಎಲ್ಲಿಂದ ಬಂದ ಎಂಬ ಬಗ್ಗೆ ಪೂರ್ತಿ ವಿಚಾರಮಾಡದೆ ಅವನನ್ನು ಒಳಗೆ ಬರಗೊಡಬಾರದು.

೪೬. ಟಂಕಸಾಲಿಯ ಮುಖ್ಯಾಧಿಕಾರಿ ಮತ್ತು ಅಮಲದಾರರನ್ನು ನೇಮಿಸಿ, ಬಂಗಾರದ, ಬೆಳ್ಳಿಯ ಹಾಗೂ ತಾಮ್ರದ ಟಂಕಸಾಲೆಯನ್ನು ಪ್ರಾರಂಭಿಸಬೇಕು. ಪುತ್ಥಳಿ, ಹೊನ್ನು ಇತ್ಯಾದಿಗಳನ್ನು ಬಂಗಾರದಲ್ಲಿ ಮತ್ತು ರೂಪಾಯಿ, ಖುರ್ದಾಗಳನ್ನು ತಯಾರಿಸುವ ಟಂಕಸಾಲೆಗಳನ್ನು ಪ್ರಾರಂಭಿಸಬೇಕು. ಬಂಗಾರದ ಒಂದು ಹೊನ್ನು ಮತ್ತು ಅರ್ಧಹೊನ್ನು ಈ ಪ್ರಮಾಣದಲ್ಲಿ, ಬೆಳ್ಳಿಯ ಒಂದು ರೂಪಾಯಿ, ಅದ್ದೇಲಿ, ಪಾವಲಿ ಈ ಪ್ರಮಾಣದಲ್ಲಿ, ತಾಮ್ರದ ಆರು ಪೈಸೆಗಳ ಒಂದು ಪೈಸೆ, ಮೂರು ಪೈಸೆಗಳ ಒಂದು ಪೈಸೆ. ಎರಡು ಪೈಸೆಗಳ ಒಂದು ಪೈಸೆ ಮತ್ತು ಒಂದು ಪೈಸೆ ಹೀಗೆ. ಈ ಪ್ರಮಾಣದಲ್ಲಿ (ನಾಣ್ಯಗಳನ್ನು) ತಯಾರಿಸಬೇಕು. ಪ್ರತಿಯೊಂದು ವಸ್ತುಗಳು ಸರಿಯಾಗಿ ಮತ್ತು ಒಂದೇ ರೀತಿಯಾಗಿ ಇರುವಂತೆ ತಯಾರಿಸಲು ಆದೇಶ ನೀಡಬೇಕು. ನೋಡಿದವರೆಲ್ಲ 'ಇದೆಂಥ ಚಮತ್ಕಾರ! ಒಂದೇ ರೀತಿಯಾಗಿದೆ' ಎಂಬಂತೆ ಇರಬೇಕು. ಒಂದು ಸಣ್ಣದು, ಇನ್ನೊಂದು ದೊಡ್ಡದು ಹೀಗೆ ಆಗಿರಬಾರದು ಹೀಗೆ ತಯಾರಿಸಿದ ಮೇಲೆ ಟಂಕಸಾಲೆಯಲ್ಲಿ ಅದರ ಮೇಲೆ ಸಿಕ್ಕಾ ಒತ್ತಬೇಕು. ಪ್ರತಿಯೊಂದು ಧಾತುಗಳು ಕೂಡದಂತೆ ಶುದ್ಧವಾದ ಧಾತುವನ್ನು ಉಪಯೋಗಿಸುವಲ್ಲಿ ಎಚ್ಚರಿಕೆ ವಹಿಸಿ, ಧಾತುಗಳನ್ನು ಮಿಶ್ರಣ ಮಾಡದಂತೆ ಮತ್ತು ಟಂಕಸಾಲೆಯ ಅಧಿಕಾರಿಗಳಲ್ಲಿ ಗಲಿಬಿಲಿ ಮಾಡುವವರಿಗೆ ಯೋಗ್ಯ ಶಿಕ್ಷೆಯನ್ನು ಕೊಡಬೇಕು.

೪೭. ಧಾನ್ಯ ಸಂಗ್ರಹ ಹಾಗು ಅವುಗಳ ಧಾರಣೆಗಳಲ್ಲಿ ಸೋವಿ ಇವುಗಳ ಬಗ್ಗೆ ಪ್ರಯತ್ನಿಸಬೇಕು. ನಗರದ ಹೊರ ಒಳಗೆ ಉತ್ಪನ್ನವಾದಷ್ಟೂ ಇವುಗಳಿಗೆ ಅನುಕೂಲ.

೪೮. ಬಾದಶಾಹೀ ಬಾಗಿಲಿನಿಂದ ಬಜಾರದ ರಸ್ತೆ ಪ್ರತಿ ಬಾಗಿಲುಗಳ ವರೆಗೆ ಎರಡೂ ಬದಿಗೆ ರಸ್ತೆಯನ್ನು ಸ್ವಚ್ಛವಾಗಿಡಬೇಕು. ಇಬ್ಬದಿಗೂ ವ್ಯಾಪಾರಸ್ಥರು ಅಂಗಡಿಗಳನ್ನು ಹಾಕಬೇಕು. ಹಾಗೆ ಗಲ್ಲಿ-ಓಣಿಗಳಲ್ಲೂ ಒಬ್ಬಿಬ್ಬರು ಅಂಗಡಿಗಳನ್ನು ಇಟ್ಟರೆ ಚಿಂತೆ ಇಲ್ಲ.

೪೯. ರಸ್ತೆಯ ಇಬ್ಬದಿಗಳಲ್ಲಿ ಎಲ್ಲ ತರಹದ ಪದಾರ್ಥಗಳ ಅಂಗಡಿಗಳನ್ನು ಹಾಕಿದರೆ ಪ್ರತಿಯೊಂದು ಪದಾರ್ಥ ದೂರ ಹೋಗದಂತೆ ಸಿಗುತ್ತದೆ. ರಸ್ತೆಯ ಮಧ್ಯದಲ್ಲಿ ಚಪ್ಪರ ಇಲ್ಲವೆ ಮಳಿಗೆಗಳನ್ನು ಹಾಕಿ ಅಂಗಡಿ ಇಡಗೊಡಬಾರದು. ರಸ್ತೆಯ ಎರಡೂ ಬದಿಗಳನ್ನು ಬಿಟ್ಟು ಮಧ್ಯ ಹಾಕಬಾರದು.

೫೦. ವಣಿಕರು, ಎಣ್ಣೆ ಮಾರುವವರು, ವ್ಯಾಪಾರಸ್ಥರು, ಸಿಬ್ಬಂದಿಗಳು, ಜಿನಗಾರರು, ಸಣ್ಣ ಡೇರೆಗಳನ್ನು ಹೊಲಿಯುವವರು, ತಂಬೂಗಳನ್ನು ಹೊಲೆಯುವವರು, ಹಾಗೂ ಅಡುಗೆಯವರು ಹೀಗೆ ಪ್ರತಿಯೊಬ್ಬರೂ ಒಂದೇ ಸಾಲಿನಲ್ಲಿ ಅಂಗಡಿಗಳನ್ನಿಡಬೇಕು. ದೊಡ್ಡ ದೊಡ್ಡ ರಸ್ತೆಗಳ ಎರಡೂ ಬದಿಗೆ ಭರ್ತಿ ವಸಾಹತನ್ನು ನಿರ್ಮಿಸಿದ ನಂತರ ಓಣಿ-ಓಣಿಗಳಲ್ಲೂ ಸದರೀ ಅಂಗಡಿಗಳ ವ್ಯವಸ್ಥೆ ಮಾಡಬೇಕು.

೫೧. ಧಾನ್ಯಗಳನ್ನು ಮಾರುವ ಜನರನ್ನು ನಾಲ್ಕು ಕಡೆಗಳಿಂದ, ತರಫ-ತರಫಗಳಿಂದ ಕರೆತಂದು ನಗರದಲ್ಲಿ ಇಡಬೇಕು. ಮಾರಾಟದ ಅವಸರ ಮಾಡದೆ ಎಲ್ಲ ಕಾಲ-ದಿನಗಳಲ್ಲೂ ಪ್ರತಿಯೊಂದು ಪದಾರ್ಥಗಳು ದೊರೆಯುವಂತೆ ವ್ಯವಸ್ಥೆ ಮಾಡಬೇಕು. ಧಾನ್ಯ ಸಂಗ್ರಹ ಸಾಕಷ್ಟಿದ್ದರೆ ರಾಜ್ಯದ ಜನರ ಹಾಗೂ ಶಿಪಾಯಿಗಳ ಸಂತೋಷಕ್ಕೆ ಕಾರಣವಾಗುತ್ತದೆ.

೫೨. ನಗರ ಹಾಗೂ ಬಾಜಾರದ ಸುರಕ್ಷಿತೆಯ ವ್ಯವಸ್ಥೆಯನ್ನಿಡುವ ರಾತ್ರಿ ಹಗಲು ಕಾಯುವ ಕೊತವಾಲನನ್ನು ಇಡಬೇಕು. ಕಳ್ಳಕಾಕರರು ಒಂದು ವೇಳೆ ಬಲಾತ್ಕಾರದಿಂದ ಲೂಟಿ ಮಾಡಿ ತೆಗೆದುಕೊಂಡು

ಹೋಗುವ ಜನರು, ಕಿಸೆಗಳ್ಳರು ಅವರುಗಳ ಮೇಲೆ ಎಚ್ಚರಿಕೆಯಿಂದ ಇದ್ದು ಹಿಡಿಯುವ ವ್ಯವಸ್ಥೆಮಾಡಬೇಕು. ಎಲ್ಲಾದರೂ ಒಂದು ವೇಳೆ ಸಣ್ಣ ಅಥವಾ ದೊಡ್ಡ ಕಳ್ಳತನವಾದರೆ, ತಕ್ಷಣ ಶೋಧಿಸಿ ಕಳ್ಳರನ್ನು ಹಿಡಿದು ಕುರಾನ ಶರೀಫದಲ್ಲಿ ಹೇಳಿದಂತೆ ರಾಜನು ತೀರ್ಪು ನೀಡಬೇಕು.

೫೩. ಶ್ರೇಷ್ಠ ಯೋಗ್ಯ ರಾಜಕುಮಾರರು, ಅಮೀರ ಜನರು ಮತ್ತು ದೊಡ್ಡ ದೊಡ್ಡ ವಜೀರರು ತಮ್ಮ ಖಾಸಗೀ ಶಿಷ್ಯಗಣ ಹಾಗೂ ಖರೀದಿಸಿದ ಚಾಕರರಿಗೆ ಎಚ್ಚರಿಕೆಕೊಟ್ಟು ಅವರು ಪ್ರಜೆಗಳನ್ನು ಬಲಾತ್ಕರಿಸದಂತೆ ತಾಕೀದು ಮಾಡಬೇಕು. ಒಂದು ವೇಳೆ ಬಲಾತ್ಕಾರ ನಡೆದದ್ದು ಕಂಡು ಬಂದರೆ, ಅವರ ಬಗ್ಗೆ ನ್ಯಾಯ ನಿರ್ಣಯ ತೆಗೆದುಕೊಳ್ಳಲು ಅವರ ಒಡೆಯರೇ ಆಗಿದ್ದರೂ ಅವರು ಕುರಾನ ಶರೀಫದಲ್ಲಿ ಹೇಳಿದಂತೆ ನ್ಯಾಯ ನಿರ್ಣಯಮಾಡಿ ಅವರನ್ನು ಶಿಕ್ಷಿಸಬೇಕು.

೫೪. ಪ್ರಜೆಗಳ ಮೇಲೆ ವಿನಾಕಾಕರಣ ದೋಷ ಹೊರಿಸಿ, ದೋಷದ ಬದಲಾಗಿ ದಂಡ ವಸೂಲಿ ಅಥವಾ ಲೂಟಿ ಮಾಡುವುದು ರಾಜ್ಯವನ್ನು ಮುಳುಗಿಸುವ ಪ್ರಥಮ ಹಂತವಾಗಿದ್ದು ಐಶ್ವರ್ಯನಾಶದ ಕಾರಣವೂ ಆಗಿದೆ.

೫೫. ಶಕ್ತಿ ಇರುವವರೆಗೆ ಸಂರಕ್ಷಣೆಯ ಪ್ರಯತ್ನ ಮಾಡಬೇಕು. ಪ್ರಜೆಗಳ ರಕ್ಷಣೆ ಮಾಡಬೇಕು.

೫೬. ದೊಡ್ಡ ದೊಡ್ಡ ರಸ್ತೆಗಳಲ್ಲಿ, ರಾಜಮಾರ್ಗದಲ್ಲಿ, ಗಲ್ಲಿಗಳು ಬಾಜಾರ ಇಲ್ಲೆಲ್ಲ ರಸ್ತೆಗಳನ್ನು ಸ್ವಚ್ಛ-ನಿರ್ಮಲವಾಗಿ ಇಡುವಂತೆ, ಕಿಂಚಿತ್ತೂ ಕಸ ಬೀಳದಂತೆ ತಾಕೀದು ಮಾಡಬೇಕು. ಬಾಜಾರದಲ್ಲಿ ಎಲ್ಲಿಯೂ ಯಾವುದೇ ಅಂಗಡಿಯಲ್ಲಿ ಇಂಥದೊಂದು ವಸ್ತು ಇಲ್ಲ ಎನ್ನಬಾರದು. ಹಾಗಾವರೆ ಅದರ ಹೊಣೆ. ಸದರೀ ವ್ಯವಸ್ಥೆಯ ಅಧಿಕಾರಿಯದು. ಅದಕ್ಕಾಗಿ ಅವನ ಸಂಬಳದಲ್ಲಿ ಕಡಿತ ಹಾಗೂ ಬಾಜಾರ ಜನರಿಂದ ದೋಷ ಪಡೆಯಲು ಕಾರಣವಾಗುತ್ತದೆ.

೫೭. ಕುರಾನ ಶರೀಫದ ಆದೇಶದಂತೆ, ಮತ್ತು ದೇವರ ಆಜ್ಞೆಯ ಮೇರೆಗೆ, ಒಟ್ಟಾರೆ ಸುಖಪುರುಷರಿಂದ ಮತ್ತು ದೇವರ ಪೂಜೆ ಮಾಡುವ ಹಿಂದು ಜನರಿಂದ, ಕೆಟ್ಟ ಕೆಲಸ ಅಂದರೆ ನಾಚ, ತಮಾಶಾ ಮತ್ತು ಮದ್ಯಪಾನ ಇತ್ಯಾದಿ ಕೆಟ್ಟ ಕೆಲಸ ಮಾಡುವರಿಂದ, ಠರಾವಿಸಿದ ಪ್ರಮಾಣದಂತೆ ಖಂಡಣಿ ತೆಗೆದುಕೊಳ್ಳಲು ಮುಸಲ್ಮಾನರ ಸರಹದ್ದಿನಲ್ಲಿರುವ ಒಟ್ಟು ರಾಜ್ಯದಲ್ಲಿಯ ಮುಖ್ಯಾಧಿಕಾರಿಗಳಿಗೆ ಮಾಮಲೇದಾರರಿಗೆ, ಆಜ್ಞೆಯನ್ನು ಕಳಿಸಬೇಕು. ರಾಜ್ಯದಲ್ಲಿಯ ಹಿಂದು ಜನರಿಂಡ ಕುಗಾನ ಶರೀಫದ ಆದೇಶದಂತೆ ಹೇಗೆ ವಿಜಾಪುರದಲ್ಲಿಯ ಹಿಂದು ಜನರಿಂದ, ತಪ್ಪುದಾರಿಯ ನಡತೆಯಾದರೆ ತೆಗೆದುಕೊಳ್ಳುವ ಖಂಡಣೆ, ಕೆಳಗೆ ಬರೆದ ಪ್ರಮಾಣದಲ್ಲಿ ತೆಗೆದುಕೊಳ್ಳುತ್ತ ಹೋಗಬೇಕು.

೫೮. ಯಾವ ಹಿಂದು ಶ್ರೀಮಂತನಿದ್ದು, ವ್ಯಾಪಾರ ಅಥವಾ ಯಾವ ಕಸಬನ್ನೂ ಮಾಡದೆ ಒಂದು ವರ್ಷ ಅಥವಾ ಅದಕ್ಕಿಂತ ಅಧಿಕವಾಗಿ ತನ್ನ ಪ್ರಪಂಚವನ್ನು ನಿರ್ವಹಿಸಲು ಶಕ್ತನಿರುವನೋ, ಆ ಹಿಂದುವಿನಿಂದ ಪ್ರತಿ ತಿಂಗಳು ಒಂದು ತೊಲೆ ಮತ್ತೆ ನಾಲ್ಕು ಮುಕ್ಕಾಲೂ ಗುಂಜಿ ಬೆಳ್ಳಿ ತೆಗೆದುಕೊಳ್ಳಬೇಕು.

೫೯. ಯಾವ ಹಿಂದು ಸರಾಸರಿ ಸಂಪತ್ತಿನವನಿದ್ದು ಏನಾದರೊಂದು ವ್ಯಾಪಾರ ಮಾಡದೆ ಪ್ರಪಂಚ ನಿರ್ವಾಹ ಮಾಡಲು ಶಕ್ಯನಿರದಿದ್ದರೆ, ಅವನಿಂದ ಅರ್ಧ ತೊಲೆ ಹಾಗು ನಾಲ್ಕೂ ಮುಕ್ಕಾಲರ ಅರ್ಧ ಗುಂಜ ತೂಕದ ಬೆಳ್ಳಿಯನ್ನು ಪ್ರತಿ ತಿಂಗಳೂ ತೆಗೆದುಕೊಳ್ಳುತ್ತ ಹೋಗಬೇಕು.

೬೦. ಯಾವ ಹಿಂದುವಿನ ಹತ್ತಿರ ಏನೂ ಧನ ಸಂಗ್ರಹವಿಲ್ಲ ಮತ್ತು ಏನಾದರೊಂದು ಕಸಬು ಇಲ್ಲವೆ ವ್ಯಾಪಾರ ಮಾಡಿ ಪ್ರಪಂಚ ನಿರ್ವಹಣೆ ಮಾಡುತ್ತಾನೊ ಮತ್ತು ಆತನ ಊಟದ ಖರ್ಚು ಮತ್ತು ಹೆಂಡಿರು ಮಕ್ಕಳ ಖರ್ಚನ್ನು ನೋಡಿಕೊಂಡು ಉಳಿಸಿದ ಹಣದಲ್ಲಿ ಖಂಡಣೆ ತೆಗೆದುಕೊಳ್ಳುವಂತೆ ಕಂಡರೆ, ಅವನಿಂದ ಒಂದುನಾಲ್ಕಾಂಶ ತೊಲೆ ಹಾಗು ನಾಲ್ಕೂಮುಕ್ಕಾಲರ ನಾಲ್ಕರಲ್ಲಿಯ ಒಂದು ಭಾಗ ತೂಕದ ಗುಂಜಿಯಂತೆ ಪ್ರತಿ ತಿಂಗಳೂ ತೆಗೆದುಕೊಳ್ಳಬೇಕು. ಯಾರಿಂದ ಖಂಡಣೆ ತೆಗೆದುಕೊಳ್ಳಬಾರದೋ ಅವರ ವಿವರ :-

೬೧. ಹೆಂಡಿರು, ಮಕ್ಕಳು, ೧೫ ವರುಷದ ಒಳಗಿನವರು, ಮಾರಾಟದಲ್ಲಿ ತೆಗೆದುಕೊಂಡ ಚಾಕರರು, ದಾರಿಹೋಕರು, ಯಾರು ಯಾರಿಂದಲೂ ಕೊಡತೆಗೆದುಕೊಳ್ಳುವಂತಿರದವರು, ಕುರುಡರು, ಆರು ತಿಂಗಳು, ವರುಷಕ್ಕಿಂತ ಅಧಿಕವಾಗಿ ಬೇನೆ ಬಿದ್ದ ರೋಗಿಗಳು, ಖಂಡಣೆ ಕೊಡಬೇಕಾದ ಹಿಂದು ಕೊಡುವ ಮೊದಲೆ ಮರಣ ಹೊಂದಿದವರು, ಅರ್ಧಾಂಗ ವಾಯು ಪೀಡಿತರು, ಅತಿವೃದ್ಧ ಹಿಂದುಗಳು, ಹಿಂದು ಜಾತಿಯ ಫಕೀರರು, ವೈರಾಗಿಗಳು, ಏನೊಂದು ವ್ಯಾಪಾರ ಮಾಡದ, ದ್ರವ್ಯ ಸಂಚಯಮಾಡದ ಹಿಂದುಗಳು, ಖಂಡಣೆ ಕೊಡಬೇಕಾದ ಹಿಂದು ಆ ಮೊದಲೆ ಮುಸಲ್ಮಾನನಾದರೆ, ಮತ್ತು ಆ ಮುಸಲ್ಮಾನನು ಕುರಾನ ಶರೀಫದ ವಾಕ್ಯಕ್ಕೆ ತಪ್ಪಿ ಏನಾದರೂ ಅಂದರೆ, ಆ ತುಸು ಅಪರಾಧದಿಂದಾಗಿ ಅವನಿಂದ- ಹೀಗೆ ಇವರಾರಿಂದಲೂ ಎಂದಿಗೂ ಖಂಡಣೆ ತೆಗೆದುಕೊಳ್ಳಬಾರದು.

೬೨. ಶ್ರೀಮಂತ ಹಿಂದುವಿನಿಂದ, ಆ ಕಾನೂನಿನಂತೆ ಮತ್ತು ಸದಾ ದರಿದ್ರ ಹಿಂದುವಿನಿಂದ ಆ ಕಾನೂನಿನ ಪ್ರಮಾಣದಲ್ಲಿ ಖಂಡಣೆ ತೆಗೆದುಕೊಳ್ಳಬೇಕು.

೬೩. ಆರು ತಿಂಗಳು ಶ್ರೀಮಂತ ಇನ್ನಾರು ತಿಂಗಳು ದರಿದ್ರನಂತೆ ದಿನ ಕಳೆಯುವ ಹಿಂದುವಿನಿಂದ ಮಧ್ಯಮ ಪ್ರಕಾರದ ಖಂಡಣೆ.

೬೪. ಭಟ್ಟ ಮಂಡಳಿ ಮತ್ತು ಜಂಗಮ ಜನರು ಎಲ್ಲರಿಂದಲೂ ಉಪಾಧ್ಯಾಯ ತನದ ವ್ಯಾಪಾರ ಮಾಡುತ್ತಾರೆ ಮತ್ತು ಖಂಡಣೆ ಕೊಡಲು ಹಕ್ಕುದಾರರಾಗಿದ್ದಾರೆ. ಆದ್ದರಿಂದ ಅವರಿಂದ ಖಂಡಣೆ ತೆಗೆದುಕೊಳ್ಳಬೇಕು.

೬೫. ಅದರಂತೆ ಯಾವ ಕಸಬು ಇಲ್ಲವೆ ವ್ಯಾಪಾರ ಮಾಡದೆ ಸಂಪತ್ತನ್ನು ಸಂಗ್ರಹಿಸಿ ಸಮರ್ಥನಾಗಿದ್ದರೆ, ಆತನಿಂದ ದ್ರವ್ಯ ಹರಣ ಮಾಡುವಲ್ಲಿ ಎಂಥ ಯುಕ್ತಿ ಬೇಕೋ ಹಾಗೆ ಮಾಡಿ ಆ ಹಿಂದು ಎಷ್ಟು ಖಂಡಣೆಯನ್ನು ಕೊಡಲು ಶಕ್ಯವಿದೆಯೋ ಅಷ್ಟನ್ನು ತೆಗೆದುಕೊಳ್ಳಬೇಕು.

೬೬. ಖಂಡಣೆ ಕೊಡಬೇಕಾದವನು ಸ್ವತಃ ಬಂದು ತನ್ನ ಕೈಯಿಂದ ತಂದು ಖಂಡಣೆಯನ್ನು ಕೊಡಬೇಕು. ತನ್ನ ಕಡೆಯ ಯಾವುದೇ ಮುಖ್ತ್ಯಾರಿಯಿಂದ ಕಳಿಸಿಕೊಡಬಾರದು. ಖಂಡಣೆ ತೆಗೆದುಕೊಳ್ಳುವವನು ಕುಳಿತಿರಬೇಕು. ಕೊಡುವವನು ಎದ್ದು ನಿಂತು ಕೊಡಬೇಕು.

೬೭. ಖಂಡಣೆಯಾಗಿ ಬಂದದ್ದನ್ನು ಖಜಾನೆಯಲ್ಲಿ ದಾಖಲಿಸಿ ಕುರಾನ ಶರೀಫದಲ್ಲಿ ಬರೆದಂತೆ ಖರ್ಚುಮಾಡಬೇಕು.

೬೮. ಒಂದು ವೇಳೆ ಅಮೀರ ಜನರಿಗೆ, ವಜೀರ ಮಂಡಳಿಗೆ ಒಳ್ಳೆಯ ನಡೆತೆಯ ಜನರಿಗೆ ಜಹಗೀರು ಕೊಡಬೇಕೆಂದು ಮನಸ್ಸು ಮಾಡಿದರೆ, ಆ ಜಹಗೀರು ಕೊಡುವ ಊರಿನ ಮೂರು ವರುಷದ ವಸೂಲಿಯನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು, ಅದರಲ್ಲಿ ಯಾವ ವರುಷ ಅಧಿಕ ವಸೂಲಿಯಾಗಿರುತ್ತದೆಯೋ ಅದನ್ನು ಕಾಯಮ ಮಾಡಿ, ಪ್ರತಿವರುಷ ೧೦೦ ಕೊಡುವ ಯೋಗ್ಯತೆ ಇದ್ದರೆ ೧೫೦೦೦ದ ಜಹಗೀರು ಕೊಡಬೇಕು. ಈ ಲೆಕ್ಕದಲ್ಲಿ ಜಹಗೀರು ಹಾಕಿಕೊಡಬೇಕು. ಜಹಗೀರು ಊರಿನ ಮೇಲೆ ಒಂದುವೇಳೆ, ಸಂಕಟ ಬಂದರೆ ಆ ಊರಿನ ವಸೂಲಿಯಲ್ಲಿ ಸೂಟ ಬಿಡುವುದು, ಹೆಚ್ಚು-ಕಡಿಮೆ ಮಾಡುವುದನ್ನು ವಜೀರ ಜನರು ನೋಡಿಕೊಳ್ಳಬೇಕು. ಸಣ್ಣ ವಜೀರನಿರಲಿ, ದೊಡ್ಡ ವಜೀರನಿರಲಿ ಒಂದೇ ರೀತಿಯ ಜಹಗೀರನ್ನು ಹಾಕಿಕೊಡಬೇಕು. ಮೊದಲು ವಜೀರರಿಗೆ ಜಹಗೀರು ಹಾಕಿಕೊಟ್ಟು ಅನಂತರ ಅವರಿಂದ ಚಾಕರಿಗಾಗಿ ಕುದುರೆಗಳನ್ನು ತರಬೇಕು. ಆ ಪ್ರತಿಯೊಂದು ವಜೀರರ ಕುದುರೆಯ ಮೇಲೆ ಸರಕಾರಿ ಜಿಹ್ನೆಯ ಡಾಗನ್ನು ಕೊಡಬಾರದು. ಅನಂತರ ಅಮೀರ ಜನರ ಶಿಪಾಯಿಗಳ ಹಾಜರಿ ತೆಗೆದುಕೊಳ್ಳಬೇಕು. ಎಣಿಸಬೇಕು. ಒಂದುವೇಳೆ ವಜೀರನು ಅಲ್ಲಿಯೇ ಇದ್ದರೆ ಅವನನ್ನು ಕರೆದು ಅವನಿಂದ ಹಾಜರಿ ಮತ್ತು ಎಣಿಕೆ ಮಾಡಿಸಬೇಕು. ಅದರಲ್ಲೇನಾದರೂ ಅಂತರ ಬಂದರೆ ವಿಚಾರಣೆ ಮಾಡಬೇಕು. ಕಾರಣ ಕೇಳಬೇಕು. ಅದು ಅಷ್ಟೊಂದು ಗಂಭೀರವಾಗಿರದಿದ್ದರೆ ಅಷ್ಟಕ್ಕೆ ಬಿಡಬೇಕು. ಎಚ್ಚರಿಕೆಯ ಅವಶ್ಯಕತೆ ಇದ್ದರೆ ಎಚ್ಚರಿಕೆ ಕೊಡಬೇಕು.

೬೯. ವಜೀರರ ಸೈನ್ಯ ತಮ್ಮ ಸರಹದ್ದಿನಲ್ಲಿಯೇ ಇದ್ದರೆ ಆ ಸೈನ್ಯದ ಹಾಜರಿಯನ್ನು ಅಲ್ಲಿಯೇ ತೆಗೆದುಕೊಂಡು ಆ ಹಾಜರೀ ಪತ್ರವನ್ನು ತೆಗೆದುಕೊಂಡು ಬರಬೇಕು. ಅನಂತರ ಆ ಸೈನ್ಯವನ್ನು ತರಿಸಿ ಸರಕಾರದಿಂದ ಹಾಜರಿ ತೆಗೆದುಕೊಳ್ಳಬೇಕು. ಅದರಲ್ಲಿ ಏನಾದರೂ ಅಂತರ ಬಂದರೆ, ಅದರ ಕಾರಣ ಕೇಳಬೇಕು. ವಜೀರರ ಕುದುರೆಗಳ ಮೇಲೆ ಬಾದಶಾಹಿ ನಿಶಾನೆಯ ಡಾಗದ ಕಾರಣವಿಲ್ಲ.

೭೦. ಒಂದು ವೇಳೆ ಡಾಗ ಕೊಟ್ಟ ಕುದುರೆ ಇದ್ದರೆ ಮತ್ತು ಅದು ಪುನಃ ಚಾಕರಿಗೆ ಬಂದರೆ, ಡಾಗ ನಿಶಾನೆಯ ಒಡೆಯನು ತನ್ನ ನಿಶಾನೆಯ ಸ್ಥಳವನ್ನು ಪುನಃ ಹೊಸದಾಗಿ ಅದೇ ಡಾಗದ ಮೇಲೆ ಡಾಗ ಹಾಕಬೇಕು.

೭೧. ಸರಕಾರೀ ನಿಶಾನೆಯ ಡಾಗ ಇದ್ದ ಕುದುರೆಯು ಬೇರೆ ಸರಕಾರದಲ್ಲಿ ಹೋದರೆ, ಆ ಸರಕಾರವು ಆ ಕುದುರೆಯ ಮೇಲೆ ತನ್ನ ನಿಶಾನೆಯ ಡಾಗನ್ನು ಕೊಡಬಾರದು, ಧಣಿಯು ತನ್ನ ಶಿಪಾಯಿ ಜನರನ್ನು ಮತ್ತು ಕುದುರೆಗಳನ್ನು ಖಾತ್ರಿ ಪಡಿಸಿಕೊಂಡು ತಂದು ಅವರ ಹೆಸರನ್ನು ಬರೆಯಬೇಕು ಕುದುರೆಯ ಮೇಲೆ ಡಾಗ ಹಾಕಬೇಕು. ಅನಂತರ ತೆಗೆದು ಹಾಕುವ ಕಾರಣ ಬರಬಾರದು. ಶಿಪಾಯಿಗಳು ಎಷ್ಟು ಹಳೆಯ ಹಾಗೂ ಮೊದಲಿನಿಂದ ಇರುತ್ತಾರೋ ಅಷ್ಟು ಉತ್ತಮ. ಹಳೆಯ ವಿಶ್ವಾಸಿ ಚಾಕರಿದ್ದರೆ ಆಪ್ತರಿದ್ದ ಹಾಗೆ ಇರುತ್ತಾರೆ.

೭೨. ಬಾದಶಾಹೀ ಸರಕಾರದಲ್ಲಿ ಪ್ರತಿಯೊಂದು ಪ್ರಕಾರದ ಮತ್ತು ಗುಣದ ಅಲ್ಲದೆ ವಿದ್ಯಾವಂತರಾದ ನಾಲ್ಕು-ನಾಲ್ಕು ಜ್ಞಾನಿಗಳನ್ನು ನಿಯಮಿಸಿ, ಅವರ ಯೋಗ್ಯತಾನುಸಾರವಾಗಿ ದಿನಖರ್ಚು ಹಾಗೂ ತೈನಾತಿಯನ್ನು ನೇಮಣೂಕಿ ಮಾಡಿ, ಅವರನ್ನು ವಸ್ತಾದರೆಂದು ಇಡಬೇಕು. ಬಾದಶಾಹಿ ಸರಕಾರದಲ್ಲಿ ಎಷ್ಟು ವಿದ್ವಾಂಸರು ಮತ್ತು ಯೋಗ್ಯ ಜನರು ಸೇರುತ್ತಾರೋ ಮತ್ತು ಪ್ರಸಿದ್ಧರಾಗುತ್ತಾರೋ ಅಷ್ಟು ಬಾದಶಹನ ಶೋಭೆಗೆ ಮತ್ತು ಯೋಗ್ಯತೆಗೆ ಕಾರಣವಾಗುತ್ತದೆ.

೭೩. ಈ ವಿದ್ವಾಂಸರನ್ನು ಸರಕಾರೀ ಲೆಕ್ಕದಲ್ಲಿ ಸೇರಿಸಿ ಇಟ್ಟುಕೊಳ್ಳಬೇಕು. ಅವರಿಂದ ಯಾವ ನಿಯಮಿತ ಸೇವೆಯನ್ನು ತೆಗೆದುಕೊಳ್ಳಬೇಕೋ ಅಷ್ಟನ್ನೇ ತೆಗೆದುಕೊಳ್ಳಬೇಕು. ಅವರಲ್ಲಿಯ ಕೆಲ ಅತ್ಯಂತ ದೊಡ್ಡ ವಿದ್ವಾಂಸರನ್ನು ಚಾಕರಿಯಿಂದ ಮಾಫ ಕೂಡ ಮಾಡಬೇಕು. ಕೆಲವರ ಚಾಕರಿಯನ್ನು ಯಾವಕಾಲಕ್ಕೂ ಮಾಫ ಮಾಡಬಾರದು.

೭೪. ಸರ್ವಕಾಲದಲ್ಲೂ ಸರಕಾರಿ ಅಧಿಕಾರಿಗಳಿರುತ್ತಾರೆ. ಅವರು ಪ್ರತಿಯೊಬ್ಬ ದೊಡ್ಡ ದೊಡ್ಡ ವ್ಯಕ್ತಿಗಳ ಹಾಜರಿ ಇತ್ಯಾದಿಗಳನ್ನು ಬರೆದಿಡುತ್ತಿರಬೇಕು. ಯಾವ ಕಾರಣಕ್ಕಾಗಿ ಗೈರಹಾಜರಿದ್ದಾರೆಂಬುದನ್ನು ತಿಳಿಯಬೇಕು. ಒಂದು ವೇಳೆ ಯಾರಾದರೂ ಯಾವಾಗಲೂ ಗೈರಹಾಜರಾಗಿದ್ದರೆ ಅವರ ಬಗ್ಗೆ ಬರೆದು ಆ ದಿನಗಳ ಸಂಬಳವನ್ನು ಸರಕಾರದಿದ ವಜಾ ಮಾಡಿ ಕೊಡಬೇಕು.

೭೫. ಸರಕಾರದಲ್ಲಿಯ ವಿದ್ವಾಂಸರ ದಿನಖರ್ಚು ಇತ್ಯಾದಿಗಳನ್ನು ಬೇರೆಯೇ ತೆಗೆದು ಇಡಬೇಕು ಎಲ್ಲದರಲ್ಲಿ ಕೂಡಿಸಬಾರದು. ಆದರೆ ಊರಿನ ಜಮಾಬಂದಿಯ ಸಂಬಳವನ್ನು ಪ್ರತಿಯೊಬ್ಬ ಹಕೀಮನ ಮುಖಾಂತರ ತಿಳಿದುಕೊಂಡು ಲೆಕ್ಕ ಮಾಡಬೇಕು.

೭೬. ಬಾದಶಹನು ಹೇಗಿರಬೇಕೆಂದರೆ, ತನ್ನ ಅಧಿಕಾರದಲ್ಲಿ ಕೆಲಸದ ಕಾರಭಾರದಲ್ಲಿ ಅಫರಾತಫರಾ (ಹೆಚ್ಚು ಕಡಿಮೆ) ಆಗಬಾರದು. ಇಂಥ ಕೆಲಸಗಳಲ್ಲಿ ಬಾದಶಹನಿಗೆ ಪ್ರೀತಿ ಇರಬಾರದು. ಬಾದಶಹನು ತನ್ನ ಸಮಯದ ಮೂರು ಭಾಗಗಳನ್ನು ಮಾಡಿಕೊಳ್ಳಬೇಕು. ಬೆಳಗಿನಿಂದ ಮೂರುಗಂಟೆ ವಿದ್ವಾಂಸರು, ಗುಣವಂತರು, ಕವಿಗಳು ಜೊತೆಗೆ ಇದ್ದು ರಾಜ್ಯದ, ಸಂಪತ್ತಿನ ನಾನಾ ಪ್ರಕಾರದ ಸುದ್ದಿಗಳನ್ನು ಅನೇಕ ಪ್ರಕರಣಗಳನ್ನು, ಪ್ರಶ್ನೋತ್ತರಗಳನ್ನು ಹೇಗೆ ತೆಗೆದುಕೊಳ್ಳಬೇಕು ಎಂಬ ವಿಷಯದಲ್ಲಿ ತಿಳಿದುಕೊಂಡು ತಿಳುವಳಿಕೆಯುಳ್ಳವನಾಗಬೇಕು. ನಾಲ್ಕನೆಯ ಗಂಟೆಯಿಂದ ಆರನೆಯ ಗಂಟೆಯವರೆಗೆ ಬಹಿರಂಗವಾಗಿ ದರಬಾರದಲ್ಲಿ ಕುಳಿತು ದೊಡ್ಡ ದೊಡ್ಡ ಕಾರಭಾರಿಗಳು, ಸೇನಾಪತಿಗಳು ಇವರಿಂದ ಮುಜುರೆ ತೆಗೆದುಕೊಳ್ಳಬೇಕು. ಆ ಸಮಯದಲ್ಲಿ ಯಾರಿಗೂ ಮುಜುರೆ ಮಾಡಲು ಮನ್ನಾ ಇರಬಾರದು.

೭೭. ಏಳನೆಯ ಗಂಟೆಯಿಂದ ಒಂಭತ್ತನೆಯ ಗಂಟೆಯವರೆಗೆ ಏಕಾಂತದಲ್ಲಿ ಏನೆಲ್ಲ ಕೆಲಸ ಮಾಡಬೇಕೋ ಅದನ್ನು ಮಾಡಬೇಕು.

೭೮. ೯ನೇ ಗಂಟೆಯಿಂದ ಒಂದು ಪ್ರಹರ ರಾತ್ರಿವರೆಗೆ ಕೂಡ ಏಕಾಂತ ಸ್ಥಳದಲ್ಲಿ ಕುಳಿತು ರಾಜಧಾನಿಯ ಕೆಲಸ ಮಾಡಬೇಕು. 'ಹಯಾಮ' ಅಂದರೆ ೫ ಗಂಟೆ ರಾತ್ರಿಯ ನಂತರದ ನಮಾಜ ಓದಿದ ನಂತರ ಬೇಕಾದ ಕೆಲಸ ಮಾಡಬಹುದು. ನಿತ್ಯ ಈ ಕಾನೂನಿನಂತೆ ದಿನದ ವೇಳೆ ಕಳೆದು, ಒಂದೇ ಒಂದು ದಿನ ಅಥವಾ ಗಳಿಗೆ ಕೂಡ ಕಾನೂನು ಬಿಟ್ಟು ನಡೆಯಬಾರದು. ಹಬ್ಬದ ದಿನಗಳಲ್ಲಿ ಶಬ್ಬೇರಾತ್ ಅಂದರೆ ಶಬಾನ ತಿಂಗಳಲ್ಲಿ ೧೩ನೇ ದಿನ ರಾತ್ರಿ ಅಂಗಡಿ ಮುಂಗಟ್ಟುಗಳಲ್ಲಿ, ಅಲ್ಲಲ್ಲಿ ಬಾಜಾರ ಮತ್ತು ಸರಕಾರಿ ಕಟ್ಟಡಗಳ ಮೇಲೆ ಅಲಂಕರಣೆ ಮಾಡಬೇಕು.

೭೯. ನಮರೋಜದ ಹಬ್ಬದಲ್ಲಿಯ ೯ ದಿನಗಳವರೆಗೆ ಬಹಳ ಶ್ರಮವಹಿಸಿ ಅಲಂಕಾರ ಮಾಡಬೇಕು. ಮುಖದಿನದಂದು (ಜನ್ಮದಿನ) ಎಲ್ಲ ಅಮೀರ ಜನರು, ಕಾರಭಾರಿ ಮಂಡಳಿ, ಕಾಮದಾರರು, ವಕೀಲರು ಮತ್ತು ಸಣ್ಣ ದೊಡ್ಡ ಬಾಜಾರ ಜನರು ಮುಂತಾದವರಲ್ಲದೆ ಯಾರೇ ಮುಜರಾ ಸಲ್ಲಿಸಲು ಬಂದರೆ ಅವರಿಗೆಲ್ಲ ಅನುಮತಿ ಇರಬೇಕು. ಪ್ರತಿಯೊಬ್ಬ ಚಾಕರ ಜನರು ಮತ್ತು ಬಾದಶಹರ ಪುತ್ರರು

(ವಜೀಫಾ) ಅವರಿಗೆಲ್ಲ ಪ್ರತಿ ತಿಂಗಳು ಸಂಬಳವಿರುತ್ತದೆ. ಅವರು ಕೂಡ ಮುಜುರೆ ಸಲ್ಲಿಸಿ ಅವರವರ ಯೋಗ್ಯತಾನುಸಾರ ಕಾಣಿಕೆಗಳನ್ನು ಸಲ್ಲಿಸಬೇಕು.

೮೦. ೯ ದಿನಗಳ ಹಬ್ಬದ ಎಲ್ಲ ದಿನಗಳಲ್ಲೂ ಬಾದಶಹನ ರಾಣಿಯರು ಬರುವ ತೋಟಗಳನ್ನು ಇಂದ್ರಭುವನದಂತೆ ಸಿಂಗರಿಸಬೇಕು. ಅಲ್ಲಿಯ ಅಂಗಡಿಗಳಿಗೆ ಪರದೆಯನ್ನು ಬಿಟ್ಟು ಲಾವಣ್ಯ ಸ್ತ್ರೀಯರು ಕುಳಿತುಕೊಳ್ಳಲು ಸ್ಥಳವನ್ನು ಬಹಳ ಅಲಂಕಾರ ಮಾಡಬೇಕು. ಎಲ್ಲೆಡೆ ಸಿಂಗರಿಸಿದ ನಂತರ ಹಬ್ಬದ ದಿನಗಳಲ್ಲಿ ಬಾದಶಹನು ಒಂದು ಸಲ ಬಂದು ಅಲಂಕರಣೆಯನ್ನು ನೋಡಬೇಕು.

೮೧. ಬಾದಶಹನು ಕೂಡ ಪ್ರತಿಯೊಬ್ಬ ಅಮೀರ ಜನರನ್ನು ಮತ್ತು ರಾಜ್ಯದ ಅಧಿಕಾರಿ ವರ್ಗವನ್ನು 'ನೌರೋಜ' ಹಬ್ಬದ ದಿನಗಳಲ್ಲಿ ಅವರವರ ಯೋಗ್ಯತಾನುಸಾರ ವಸ್ತ್ರಗಳನ್ನು ಕೊಟ್ಟು, ಸ್ತ್ರೀಯರ ಸಹಿತವಾಗಿ ಗೌರವಿಸಬೇಕು.

೮೨. ತನ್ನ ತಂದೆ ಸತ್ತ ತಿಂಗಳಲ್ಲಿ ಪ್ರತಿ ವರಷ ಆ ತಿಂಗಳು ಪೂರ್ತಿ ಮತ್ತು ಹಜರತ ಸುಲ್ತಾನ ಆವಲಿ ಅವರ ೧೧ ದಿನಗಳ ಮೊಹರಮದ ತಾಬೂತಗಳ ೧೦ ದಿನ ಆಸಾರ ಮಹಲದಲ್ಲಿ ಮೇಜವಾನಿಯಂತೆ ಒಳ್ಳೆಯ ಅಕ್ಕಿಯ ಅನ್ನ ಮತ್ತು ಹಲವಾ, ಜಕೇರತ ಹಲೀಲ ಎಂಬ ನಮಾಜದ ಪ್ರಕಾರದ ನಮಾಜ ಓದಿಸುವುದು, ದಾನಧರ್ಮ ನೀಡಿ ಮುಸಲ್ಮಾನ ಜಾತಿಯ ಫಕೀರರು ಮತ್ತು ವಿದ್ಯಾಭ್ಯಾಸ ಮಾಡುತ್ತಿರುವ ಮಕ್ಕಳು, ವಿದ್ವಾಂಸರು, ಕಾಜಿ ಮಂಡಳಿ, ಧರ್ಮ ಶಾಸ್ತ್ರಿಗಳು, ಕಾರಭಾರಿಮಂಡಳಿ, ಕಾಮದಾರರು ಇವರಿಗೆಲ್ಲ ಒಂದೊಂದು ದಿನ ಆಮಂತ್ರಣ ನೀಡಿ ಊಟ ಹಾಕಬೇಕು. ಬಂದವರನ್ನು ಸಂತೋಷ ಪಡಿಸಬೇಕು.

೮೩. ಗುರುವಾರ ಹಾಗೂ ಹನ್ನೊಂದು ಹನ್ನೆರಡನೆಯ ದಿನದಂದು ನಿತ್ಯದಕ್ಕಿಂತ ಅಧಿಕ ಅನ್ನದಾನ ಸಮಾರಂಭವನ್ನು ಏರ್ಪಡಿಸಿ ಬಾದಶಹನು ಸ್ವತಃ ಊಟಕ್ಕಾಗಿ ಅಲ್ಲಿಗೆ ಬಂದು ಪಂಕ್ತಿ ಭೋಜನ ಮಾಡಬೇಕು.

೮೪. ಆಸಾರ ಮಹಲದಲ್ಲಿ ಯಾವುದೇ ಪಾಪಕರ್ಮಗಳನ್ನು, ಕುರಾನ ಶರೀಫದಲ್ಲಿ ವರ್ಜ್ಯವಾದ ಕರ್ಮಗಳನ್ನು ಮಾಡಬಾರದು. ನೌರೋಜದ ಸಮಾರಂಭದಲ್ಲಿ ತಾನೇ ಸ್ವತಃ ಮುಖ್ತ್ಯಾರನಾಗಿರುತ್ತಾನೆ. ಪ್ರತಿಯೊಂದು ಬೆಳದಿಂಗಳು ರಾತ್ರಿಯಲ್ಲಿ ಎಲ್ಲರಿಗೂ ಬರಹೋಗಲು ಮುಕ್ತವಾಗಿಟ್ಟು, ಎಲ್ಲರೂ ಬಂದು ಬಾದಶಹನಿಗೆ ಮುಜುರೆ ಸಲ್ಲಿಸಬೇಕು. ಬಾದಶಹನು ಈ ಎಲ್ಲರ ಮುಜುರೆಗಳನ್ನು ಸ್ವೀಕರಿಸಲು ಮೂರು ತಾಸು ರಾತ್ರಿವರೆಗೆ ಕುಳಿತುಕೊಳ್ಳಬೇಕು. ಈ ದಾದ ಮಹಲಿನಲ್ಲಿ ಕುಳಿತು ಅಮೀರ ಜನರ ಹಾಗೂ ವಜೀರ ಮಂಡಳಿಗಳ ಮುಜುರೆ ತೆಗೆದುಕೊಳ್ಳಬೇಕು.

೮೫. ದರಬಾರದ ಸ್ಥಳವನ್ನು ವಿಶಾಲವಾಗಿಟ್ಟು ಆ ಸ್ಥಳದಲ್ಲಿ ಬಹಳ ಸಂತೋಷದಿಂದ ಪೂರ್ವದ ಕಡೆಗೆ ಮುಖಮಾಡಿ ಕುಳಿತು ಕೊಳ್ಳಬೇಕು. ದರಬಾರದ ಬದಿಗೆ ಗೋಡೆಗೆ ಸರಿಯಾಗಿ ಸ್ವಚ್ಛ ಹಾಗೂ ಉತ್ತಮ ಪ್ರಕಾರದ ಮಸೀದಿಯನ್ನು ಕಟ್ಟಿಸಬೇಕು ಮತ್ತು ಮಸೀದಿಯ ಮೂರು ಬದಿಗೂ ಎಲ್ಲ ಜನರಿಗೆ ಕುಳಿತುಕೊಳ್ಳಲು ದೊಡ್ಡ ದೊಡ್ಡ ಸೋಫಾಗಳನ್ನು ಕಟ್ಟಬೇಕು. ಆ ಕಟ್ಟಡಕ್ಕೆ ಜಮಾತಖಾನಾ ಎಂದು ಹೆಸರು. ಅದನ್ನು ಬಹಳ ಶ್ರಮದಿಂದ ಎರಡು ಮಜಲುಗಳ ಅತಿ ಉತ್ತಮವಾದ ಕಟ್ಟಡವನ್ನು ಕಟ್ಟಬೇಕು.

೮೬. ಮಸೀದಿಗಳ ಮುಂದಿನ ಮೈದಾನದಲ್ಲಿ ದೊಡ್ಡದಾದ ಪುಷ್ಕರಣಿಯನ್ನು ಕಟ್ಟಿ ಸರ್ವಕಾಲದಲ್ಲಿ ಪೂರ್ಣವಾಗಿ ನೀರು ತುಂಬಿರಬೇಕು. ಮಸೀದಿಗಳಲ್ಲಿ ಒಬ್ಬ ನಮಾಜ ಓದುವವನನ್ನು ನಿಯಮಿಸಬೇಕು, ಅನ್ನಛತ್ರದಲ್ಲಿಯ ಅನ್ನ ಸ್ವಚ್ಛವಾಗಿರಬೇಕು. ಅರವಟ್ಟಿಗೆಯ ನೀರು ಕುಡಿಯಲು ಹಿಂದು-ಮುಸಲ್ಮಾನರಿಗೆ ಪ್ರತ್ಯೇಕ ಪಾತ್ರೆಗಳನ್ನು ಇಡಬೇಕು. ಜಮಾತಖಾನೆಯಲ್ಲಿ ಪಾಠ ಹೇಳಲು ವಿದ್ವಾಂಸರಿರಬೇಕು.

೮೭. ದರಬಾರದ ಗೋಡೆಗೆ ಹೊಂದಿ ಜಮಾತಖಾನೆ ಇರುತ್ತದೆ. ಅದರಲ್ಲಿ ಜನರು ಕುಳಿತು ಕೊಳ್ಳಲು ಮತ್ತು ದರಬಾರಿನ ಪಹರೆಗಾರರಿಗೆ ಕುಳಿತುಕೊಳ್ಳಲು ಅತಿ ಸುಂದರ ಮತ್ತು ಉತ್ತಮವಾಗಿ ಕಟ್ಟಿ, ದರಬಾರಿನ ಮೈದಾನದ ಬದಿಗಳಲ್ಲಿ ದೊಡ್ಡ ದೊಡ್ಡ ಅಂಗಡಿಗಳನ್ನು ಸ್ವಚ್ಛವಾಗಿ ಇಡಬೇಕು.

೮೮. ಬಾಜಾರುಗಳಲ್ಲಿ ಅಂಗಡಿಗೆ ಸ್ಥಳಗಳನ್ನು ಕೊಡುವಾಗ ನಾನಾಪ್ರಕಾರದ ಅನುಭವವಿದ್ದ, ಸಾಕಷ್ಟು ಶ್ರೀಮಂತರಿದ್ದ ಜನರಿಗೆ ಕೊಡಬೇಕು. ಒಳ್ಳೆಯ ಖಾದ್ಯ ಪದಾರ್ಥಗಳನ್ನು ತಯಾರಿಸುವವರಿಗೆ, ಜಾಣರಾದ ಬಾಗವಾನರಿಗೆ ಸ್ಥಳಗಳನ್ನು ಕೊಟ್ಟು ಬಜಾರನ್ನು ವೃದ್ಧಿಪಡಿಸಲು ಪ್ರಯತ್ನಿಸಬೇಕು. ಪ್ರತಿಯೊಂದು ಅಂಗಡಿಗಳು ಎರಡು ಮಜಲಿನವಾಗಿರಬೇಕು. ಮತ್ತು ಪ್ರತಿಯೊಂದು ಪದಾರ್ಥಗಳನ್ನು ಅಲ್ಲಿಯೇ ತಂದು ಮಾರಬೇಕು. ಒಂದೊಂದು ಸ್ಥಳದಲ್ಲಿ ಒಂದೇ ಬಗೆಯ ಪದಾರ್ಥಗಳು ಸಿಗುವಂತೆ ನೋಡಿಕೊಳ್ಳಬೇಕು. ಅದನ್ನು ಬೇರೆ ಕಡೆಗೆ ಮಾರಬಾರದು.

೮೯. ದರಬಾರದ ಎದುರಿನ ಮೈದಾನದ ಜಾಗೆಯಲ್ಲಿ ಎರಡೂ ಬದಿಯ ಅಂಗಡಿಗಳ ಮಧ್ಯಭಾಗದಲ್ಲಿ ನಾಲ್ಕು ಕಡೆಗೂ ಅಳೆದು ಆ ಮೈದಾನದ ಮಧ್ಯಭಾಗದಲ್ಲಿ ಒಂದು ದೊಡ್ಡ ಪುಷ್ಕರಣಿಯನ್ನು ಕಟ್ಟಿ ಅದನ್ನು ಸರ್ವಕಾಲ ನೀರಿನಿಂದ ತುಂಬಿರಬೇಕು. ಅದರಿಂದ ನಾಲ್ಕು ಬದಿಗಳಿಗೂ ಇರುವ ಜನರು ಬೇಕಾದಾಗ ನೀರು ಪಡೆಯುವರು. ಪುಷ್ಕರಣಿಯ ಸುತ್ತಲೂ ಮತ್ತು ಅಂಗಡಿಗಳ ಎದುರಿಗೆ ದಟ್ಟ ನೆರಳು ಬೀಳುವಂಥ ಗಿಡಗಳನ್ನು ಹಚ್ಚಬೇಕು. ಆ ಗಿಡಗಳು ತುಂಬ ಅಗಲವಾಗಿ ಬೆಳೆದು ಅಂಗಡಿಯ ಶೋಭೆಯನ್ನು ಕೆಡಿಸದಂತೆ ಇರಬೇಕು. ಆ ಗಿಡಗಳನ್ನು ನೋಡಿ ಹಚ್ಚಬೇಕು ಮತ್ತು ಯಾವಾಗಲೂ ಕೊತವಾಲ ಮತ್ತು ಬಾಜಾರದ ಜನರು ಬಾಗಿಲ ಮುಂದಿನ ಭೂಮಿಯನ್ನು ಶುದ್ಧವಾಗಿ ಇಟ್ಟು ಆ ಸ್ಥಳವನ್ನು ಮೇಲಿಂದ ಮೇಲೆ ಕಸಗುಡಿಸಿ ಅಲ್ಲಿ ಒಂದು ಕಡ್ಡಿ ಕೂಡ ಬೀಳದಂತೆ ನೋಡಿಕೊಳ್ಳಬೇಕು. ಅಂಗಡಿಗಳ ಮುಂದಿನ ಭೂಮಿಯನ್ನು ಸಾರಿಸಿ, ಥಳಿ ಹೊಡೆದು ಬಾಜಾರದ ಶೋಭೆಯನ್ನು ವೃದ್ಧಿಸಬೇಕು. ಆ ಕಾಲದ ಜನರು ಅದರ ದೃಷ್ಟಾಂತವನ್ನು ಕೊಡುವಂತಿರಬೇಕು. ಮಹಡಿಗಳಿಗೆ ದೊಡ್ಡ ದೊಡ್ಡ ಕಿಡಕಿಗಳನ್ನು ಬಿಟ್ಟು ಬಾದಶಹನಿಗೆ ಅಲ್ಲಿ ಕುಳಿತು ಕೊಳ್ಳಲು ಸ್ಥಳ ಮಾಡಬೇಕು. ಅಲ್ಲಿಂದ ನೋಡಿದರೆ ಬಾದಶಹನಿಗೆ ಪೂರ್ತಿ ಬಜಾರ ಮತ್ತು ಮೈದಾನವು ದೃಷ್ಟಿಗೆ ಬೀಳಬೇಕು. ದರಬಾರದ ಬಾಗಿಲ ಮೇಲೆ ತಾಸ (ವಾದ್ಯ)ನ್ನು ಇಡಬೇಕು. ದರಬಾರನ್ನು ಬಣ್ಣದ ನಕ್ಷೆಗಳಿಂದ ಅಲಂಕರಿಸಬೇಕು. ಹಾಗೆಯೇ ಅಂಗಡಿ ಮುಂಗಟ್ಟುಗಳಿಗೂ ಬಣ್ಣ ಬಳಿಯಬೇಕು. ಸುಂದರವಾಗಿ ಸೋನೇರಿ ಬಣ್ಣದಿಂದ ಕುರಾನ ಗ್ರಂಥದ ಶಾಸ್ತ್ರ ವಾಕ್ಯಗಳನ್ನು ಬರೆಯಬೇಕು.

೯೦. ಹತ್ತಿ ಬಟ್ಟೆಯ ಪೇಟೆಯನ್ನು ದರಬಾರದ ಬದಿಗೆಯೇ ಮಾಡಬೇಕು.

೯೧. ಬೋಹರಾ ಜಾತಿಯ ವ್ಯಾಪಾರಸ್ಥರಿಗೆ ಶಹಾಪುರ ಬಿಟ್ಟು ಬೇರೆ ಕಡೆಗೆ ಅಂಗಡಿಗಳನ್ನು ಹಾಕಗೊಡಬಾರದು. ಬೋಹರಿಗಳ ಅಂಗಡಿಗಳ ಹಿಂದೆ ಸೌದಾಗರ ಜನರಿಗೆ ಸ್ಥಳ ಕೊಟ್ಟು ಅಂಗಡಿ ಹಾಕಿಸಬೇಕು.

೯೨. ಈ ಬಾಜಾರುಗಳಲ್ಲಿಯ ಜನರ ಮೇಲೆ ಜುಲುಮ-ಜಬರದಸ್ತಿ ಮಾಡದೆ ಬಾಜಾರ ಜನರನ್ನು ಸಂತೋಷದಿಂದ ಇಡಬೇಕು. ಹಬಶೀ ಜಾತಿಯ, ತುರ್ಕೀ, ಹಿಂದು ಜಾತಿಯ ಚಾಕರ ಜನರು ಮತ್ತು ಖೋಜಾಗಳನ್ನು ಸೇರಿಸಿ ಪ್ರತಿಯೊಂದು ನಾಲ್ಕು ಜಾತಿಯ ಚಾಕರ ಜನರ ಮೇಲೆ ಜಾಣರಾದ, ಅನುಭವಿ, ಬುದ್ಧಿವಂತ ನಾಲ್ಕು ಹವಾಲದಾರರನ್ನು, ನಾಲ್ಕು ಪ್ರತಿಯ ಚಾಕರ ಜನರ ಹೆಸರುಗಳನ್ನು ಬರೆಯಲು ನಿಯಮಿಸಿ ಪ್ರತಿಯೊಂದು ಪ್ರತಿಗೆ ಒಬ್ಬೊಬ್ಬ ಪಂತೋಜಿಯನ್ನು, ಮಕ್ಕಳಿಗೆ ವಿದ್ಯೆ ಕಲಿಸುವ, ಮತ್ತು ಪರ್ಶಿಯನ್ ಬರೆಯಲು ಓದಲು ಕಲಿಸುವ ಪಂತೋಜಿ ಮತ್ತು ತೀರಂದಾಜ, ಬಂದೂಕು ಭರ್ಲೆ ಹೊಡೆಯುವವರು, ಕುಸ್ತಿಯ ಡಾವ ಪೇಚುಗಳನ್ನು ಕಲಿಸುವ ಪಹಿಲವಾನರನ್ನು ಆ ಹವಾಲದಾರನ ವಶಕ್ಕೆ ಕೊಡಬೇಕು. ಅದಕ್ಕೆ ಬೇಕಾಗುವ ಖರ್ಚನ್ನು ಸರಕಾರದಿಂದ ತೆಗೆದುಕೊಳ್ಳಬೇಕು. ಅವರಿಂದ ಚಾಕರರ ಸಂಪೂರ್ಣ ಅಭ್ಯಾಸ ಮಾಡಿಸಬೇಕು.

೯೩. ವಿದ್ಯಾಭ್ಯಾಸ ಮಾಡುವ ಮಕ್ಕಳು ಸಣ್ಣ ವಯಸ್ಸಿನವರಿರುವವರೆಗೆ ಅವರಿಗೆ ಅನ್ನ ವಸ್ತ್ರಗಳನ್ನು ಬೇಕಿರುವಷ್ಟು ಸರಕಾರದಿಂದಲೇ ಕೊಡಬೇಕು. ಅವರ ವಿದ್ಯಾಭ್ಯಾಸದ ಪ್ರಮಾಣದಂತೆ ಕೆಲವು ನೇಮಣೂಕಗಳನ್ನು ಮಾಡಿ ಕೊಡಬೇಕು.

೯೪. ಸದರೀ ಮಕ್ಕಳು ದೊಡ್ಡವರಾದಾಗ ಅವರ ಮದುವೆ ಮಾಡಿಕೊಟ್ಟು ಅವರಿಗೆ ನಿತ್ಯಖರ್ಚು ಇತ್ಯಾದಿಗಳನ್ನು ಮಂಜೂರು ಮಾಡಿ ಕುಳಿತುಕೊಳ್ಳಲು ಕುದುರೆಯನ್ನು ಕೊಡಬೇಕು. ಅನಂತರ ಯೋಗ್ಯತೆಯ ಪ್ರಕಾರ ಬೇರೆ ಕಡೆಗೆ ನೌಕರಿಯ ಮೇಲೆ ನಿಯಮಿಸಬೇಕು.

೯೫. ಸದರೀ ಚಾಕರ ಜನರು ತಂತಮ್ಮ ಕೆಲಸದಲ್ಲಿ ಜಾಣರೂ ಎಚ್ಚರಿಕೆಯವರೂ ಆಗಿರಬೇಕು. ಕಳ್ಳತನ ಮತ್ತು ಕೃತಘ್ನತೆ ಇರಬಾರದು. ಹಾಗೆ ಮಾಡಿದರೆ ಅವರನ್ನು ಕೆಲಸದಿಂದ ತೆಗೆದುಹಾಕಬೇಕು. ಮತ್ತು ಕುರಾನ ಶರೀಫದಲ್ಲಿ ಹೇಳಿದಂತೆ ಶಿಕ್ಷೆ ಕೊಡಬೇಕು. ಅಂಥವರನ್ನು ಬಹಳ ದೂರ ಹೋಗಗೊಡಬಾರದು. ಯಾಕೆಂದರೆ ದೂರ ಹೋಗಿ ಒಳಸಂಚು, ಕುತಂತ್ರಗಳನ್ನು ಮಾಡುತ್ತಾರೆ.

೯೬. ಸರಕಾರದಲ್ಲಿರುವ ಚಾಕರ ಜನರು ಜಾಗ್ರತರಾಗಿದ್ದು, ಸರ್ಕಾರದ ಸವಾರಿ ಹೊರಟಾಗ ತಂತಮ್ಮ ಹವಾಲದಾರರ ಜೊತೆಗೆ ನಿಂತು, ಸಾಮಾನು ಸರಂಜಾಮುಗಳನ್ನು ಕಟ್ಟಿಕೊಂಡು ಸಿದ್ಧರಾಗಿ ಬಾದಶಹನ ಹಿಂದೆ ನಡೆಯಬೇಕು. ಶಸ್ತ್ರಗಳ ನೈಪುಣ್ಯತೆಯನ್ನು ತೋರಿಸಬೇಕು. ಎಡಬಲದಲ್ಲಿ ಕುದುರೆಯ ಸೈನ್ಯ (ಪಾಗಾ) ನಡೆಯಬೇಕು. ದಾರಿಯಲ್ಲಿ ಆ ಕುದುರೆಗಳು ಲದ್ದಿಯನ್ನು, ಕಡಲೆ, ಹುಲ್ಲು ಇತ್ಯಾದಿ ತಿಂದುಳಿದು ಬಿದ್ದುದನ್ನು ಮಾರಿ ಅದರ ಜಮಾಖರ್ಚು ಇಡಲು ಇಬ್ಬಿಬ್ಬರು ಕೆಲಸಗಾರರನ್ನು ನಿಯಮಿಸಬೇಕು. ಒಂದು ಕುದುರೆಗೆ ಒಬ್ಬ ಮೇಲ್ವಿಚಾರಕನನ್ನು (ಮೋತದಾರನನ್ನು) ಮತ್ತು ಎರಡು ಕುದುರೆಗಳಿಗೆ ಇಬ್ಬರು ಮೇಲ್ವಿಚಾರಕರನ್ನು ನೇಮಿಸಿ ಕಾರಖಾನೆಯ ಸಂಪೂರ್ಣ ಸಾಮಾನು ಸರಂಜಾಮುಗಳನ್ನು ತಯಾರಿಯಲ್ಲಿಡಬೇಕು. ಸೈನ್ಯದ ಕುದುರೆಗಳಿಗೆ ಸರಕಾರಿ ನಿಶಾನೆಯ ಡಾಗು ಇರಬೇಕು. ಪ್ರತಿಯೊಂದು ಕುದುರೆಯ ದಿನದ ಖರ್ಚನ್ನು ನಿರ್ಧರಿಸಬೇಕು. ಯಾವುದಾದರೂ ಕುದುರೆ ಮದವೇರಿದ್ದು ಕಂಡು ಬಂದರೆ, ಅದನ್ನು ಸೈನ್ಯದಿಂದ ತೆಗೆಯಬೇಕು, ಕುದುರೆ, ಆನೆ ಮತ್ತು ಒಂಟೆಗಳ ಸೈನ್ಯದಲ್ಲಿ ಬಹಳ ಕಳ್ಳತನವಾಗುತ್ತದೆ. ಎಚ್ಚರಿಕೆಯಿಂದಿದ್ದು ಕಳ್ಳತನವಾಗದಂತೆ ನೋಡಿಕೊಳ್ಳಬೇಕು. ತಟ್ಟು ಕುದುರೆಗಳು (ಕುದುರೆ ಜಾತಿ) ವಯಸ್ಸಾದರೆ, ದರ್ಬಲವಾದರೆ, ಅವುಗಳನ್ನು ಪಾಗೆಯಲ್ಲಿ ಇಡಬಾರದು. ಚಾಬೂಕು

ಸವಾರರು ಮತ್ತು ಅಶ್ವವೈದ್ಯರು ಪಾಗೆಯನ್ನು ಬಹಳ ಮುತುವರ್ಜಿಯಿಂದ ನೋಡಿಕೊಳ್ಳಬೇಕು. ಕುದುರೆಗಳ ಲದ್ದಿ ಇತ್ಯಾದಿಗಳನ್ನು ಸಂಗ್ರಹಿಸಿ ಮಾರಲು ಮೊಗಲ, ಪಠಾಣ ಕೆಲಸಗಾರರಿರಬೇಕು. ಸೈನ್ಯದಲ್ಲಿ ಶಸ್ತ್ರ ವಿದ್ಯೆ ಬಲ್ಲಿದರಾದ ಸೇವಕರನ್ನು ನೇಮಿಸಬೇಕು. ಇಂಥ ಎಲ್ಲ ಸೇವಕರ ಮೇಲೆ ಒಬ್ಬ ಹವಾಲದಾರನಿರಬೇಕು. ತೀರಂದಾಜ, ಬರಕಂದಾಜ ಮತ್ತು ಭಾತೀಕರಿಗಳ ಮೇಲೆ ಮೂವರು ಹವಾಲದಾರರನ್ನು ನೇಮಿಸಬೇಕು. ಕೆಟ್ಟ ಚಟದ ಕುದುರೆಗಳನ್ನು ಎಂದೂ ಸರಕಾರದಲ್ಲಿ ಇಡಬಾರದು :

***ರೂಢಿಯಲ್ಲಿದ್ದ ಶಾಸನ ಸಮಾಪ್ತಿ***

ಬುಸ್ತಾನ : ಏಳು

# ಎರಡನೆಯ ಅಲಿ ಆದಿಲಶಾಹ

## ೧. *ಎರಡನೆಯ ಅಲೀ ಆದಿಲಶಹ ಬಿನ್ ಸುಲ್ತಾನ ಮಹಮ್ಮದ ಆದಿಲಶಹ :*

ಆದಿಲಶಾಹಿ ಬಾದಶಹರುಗಳಲ್ಲಿಯೇ ಶ್ರೇಷ್ಠನಾದ ಸುಲ್ತಾನ ಮಹಮ್ಮದ ಆದಿಲಶಹನಿಗೆ ಅಲ್ಲಾನು ಎಲ್ಲವನ್ನೂ ಕೊಟ್ಟಿದ್ದನು. ಕೊರತೆಯೆಂಬುದು ಇರಲಿಲ್ಲ. ಒಳ್ಳೆಯ ನಡತೆ, ಲಕ್ಷಣ, ದಾನಧರ್ಮ, ಶೌರ್ಯ, ನ್ಯಾಯನಿರ್ಣಯ, ದೂರದೃಷ್ಟಿ, ಎಲ್ಲ ಬಗೆಯ ಜ್ಞಾನ, ಪ್ರಜೆಗಳ ಪಾಲನೆ ಬಡಬಗ್ಗರ ಬಗ್ಗೆ ಪ್ರೀತಿ ಸತ್ಯಪರಿಪಾಲನೆ ದೇವರ ಬಗ್ಗೆ ಭಯ ಪಾಪಕರ್ಮವಿದೂರತ್ವ, ಸ್ವಧರ್ಮಾಚರಣೆಯಲ್ಲಿ ಪೂರ್ಣವಿಶ್ವಾಸ, ಮುಸಲ್ಮಾನ ಧರ್ಮವನ್ನು ಪ್ರಬಲವಾಗಿಡುವಿಕೆ, ಇತ್ಯಾದಿ ಸಂಪೂರ್ಣ ಲಕ್ಷಣಗಳು ಸಮಕಾಲೀನ ಬಾದಶಹರಿಗಿಂತ ಮಹಮ್ಮದ ಆದಿಲಶಹನಲ್ಲಿ ಸಮೃದ್ಧವಾಗಿದ್ದವು. ಆದರೆ ಆತನ ಮನದಲ್ಲಿ ಒಂದು ಕೊರತೆ ಉಳಿದಿತ್ತು. ಸಿಂಹಾಸನಕ್ಕೆ ಮತ್ತು ಕಿರೀಟಕ್ಕೆ ಶೋಭಿಸುವ ಮತ್ತು ರಾಜ್ಯದ ಸರ್ವಭಾರವನ್ನು ಹೊರುವ ಮಗನೊಬ್ಬನು ಹುಟ್ಟಿ, ತನ್ನ ಬಳಿಕ ಸಿಂಹಾಸನದ ಧಣಿಯಾಗಬೇಕು ಎಂಬ ಇಚ್ಛೆ ಅಧಿಕವಾಗಿದ್ದಿತ್ತು. ಆದ್ದರಿಂದ ಹಗಿಲಿರುಳು ದೈನ್ಯದಿಂದ ಅಲ್ಲಾನನ್ನು ಪ್ರಾರ್ಥಿಸುತ್ತಿದ್ದನು. ಅಲ್ಲಾನ ಕೃಪೆಯಿಂದ ಆತನ ಮನೋರಥ ಪೂರ್ಣಗೊಂಡಿತು. ಮಗ ಹುಟ್ಟಿದನು.

## ೨. *ಅಲೀ ಆದಿಲಶಹನ ಜನನ :*

ಉತ್ತಮ ಮುಹೂರ್ತದಲ್ಲಿ ಅಂದರೆ, ದಿನಾಂಕ ೧೬ ರಬಿಲಾಖರ ಹಿಜರಿ ಸನ್ ೧೦೪೮ರಂದು (೧೬ ಆಗಸ್ಟ ೧೬೩೮) ಪುತ್ರ ಜನನವಾಯಿತು. ಇದರಿಂದ ಬಾದಶಹನ ವೈಭವ ಇನ್ನಷ್ಟು ತೇಜಸ್ವಿಯಾಯಿತು. ಪೃಥ್ವಿಗೂ ಮತ್ತು ಪೃಥ್ವಿಯಲ್ಲಿ ಇರುವವರಿಗೂ ಬಹಳ ಸುಖ ಸಂತೋಷಗಳು ಉಂಟಾದುವು. ಬಾದಶಹನು ಅತ್ಯಂತ ಸಂತೋಷದಿಂದ ಅಲ್ಲಾನನ್ನು ಸ್ತುತಿಸಿದನು. ಅಲ್ಲಾನು ಈ ಪುತ್ರಲಾಭವನ್ನು ಕೊಟ್ಟದ್ದರಿಂದ ಸಮುದ್ರದಂತೆ ವಿಶಾಲವಾದ ತನ್ನ ಉದಾರ ಕೈಯಿಂದ ಖಜಾನೆಯ ಕೀಲಿಯನ್ನು ತೆರೆದು ಮುಕ್ತ ಮಾಡಿದನು. ಆಬಾಲ ವೃದ್ಧರಾದಿಯಾಗಿ ಎಲ್ಲರಿಗೂ ಕೈತುಂಬ ಹಣ ಕೊಟ್ಟನು. ಇನ್ನೊಮ್ಮೆ ತಮ್ಮ ಜೀವನದಲ್ಲಿ ಕೈ ಚಾಚದಂತೆ ದರಿದ್ರರಿಂಗೆ ಹಣ ಕೊಟ್ಟನು.

### ೩. ಮಗನ ಪಾಲನೆಯನ್ನು ಹಾಜೀ ಬಡೀಸಾಹೇಬಾ (ಕುತುಬಶಾಹನ ಮಗಳು) ವಹಿಸಿದ್ದು :

ಮಹಾ ಪತಿವ್ರತೆ, ಶುದ್ಧ ಆಚಾರವಂತೆ, ಹಾಜೀ ಬಡೇಸಾಹಿಬಾ, ಕೈಲಾಸವಾಸೀ ಸುಲ್ತಾನ ಮಹಮ್ಮದ ಕುತುಬಶಾಹನ ಮಗಳು. ಸುಲ್ತಾನ ಮಹಮ್ಮದ ಆದಿಲಶಹನ ಮಹಲಿನಲ್ಲಿಯೇ ಇರುತ್ತಿದ್ದ ಇವಳು ಅವನಿಗೆ ವಿನಂತಿಸಿಕೊಂಡು, ಆ ಮಗುವಿನ ಪಾಲನೆಯ ಕೆಲಸವನ್ನು ವಹಿಸಿಕೊಂಡು, ಆನಂದ ಮಹಲಿನಲ್ಲಿ ಇರಹತ್ತಿದಳು. ತನ್ನ ಜೀವಕ್ಕಿಂತ ಅಧಿಕವಾದ ಹಾಗು ತನಗೆ ಜಗತ್ತಿನ ರಾಜ್ಯವೇ ಸಿಕ್ಕುದಕ್ಕಿಂತ ಅಧಿಕಾವಾದ ಆನಂದವೇ ಈ ಮಗು ಎಂದು ತಿಳಿದು ಪಾಲನೆ ಮಾಡುತ್ತಿದ್ದಳು. ಈ ಮಗು ತನ್ನ ಜೀವ ಎಂದು ತಿಳಿದಿದ್ದಳು. ಖಾನಗೀ ಆಕಾ ಎಂಬ ಕವಿಯೊಬ್ಬ ರಾಜಸನ್ನಿಧಿಯ ಚಾಕರಿಯಲ್ಲಿದ್ದನು. ಆತ ಈ ಮಗುವಿನ ಜನ್ಮ ಹಾಗು ಲಕ್ಷಣಗಳನ್ನು ತನ್ನ ಕವಿತೆಯೊಂದರಲ್ಲಿ ಬರೆದು ಬಾದಶಹನಿಗೆ ಅರ್ಪಿಸಿದ್ದನು. ಅದರ ಅರ್ಥ ಹೀಗಿದೆ : "ನ್ಯಾಯನಿರ್ಣಯದ ಬಾದಶಾಹ, ಎಲ್ಲ ಬಾದಶಹರ ಬಾದಶಹ, ಆ ಬಾದಶಹನ ಸೇವೆ ಕಾಲಚಕ್ರವೂ ಕೂಡ ಬಂದಿದೆ ॥೧॥ ನ್ಯಾಯನಿರ್ಣಯ ರೂಪೀ ತೋಟದಲ್ಲಿ ಅರಳಿದ ಪುಷ್ಪ ಮತ್ತು ಬಾದಶಹರ ಬಾದಶಹ ರೂಪೀ ವೃಕ್ಷದಲ್ಲಿ ಈ ಪುಷ್ಪ ಅರಳಿದೆ. ಅಲ್ಲಾನು ತನ್ನ ಕೃಪೆಯಿಂದ ಈ ಮಗವನ್ನು ಬಕ್ಷೀಸಾಗಿ ಕೊಟ್ಟಿದ್ದಾನೆ ॥೨॥ ಒಂಬತ್ತನೆಯ ಆಕಾಶದಲ್ಲಿರುವ ಪೈಗಂಬರರು ಬಹಳ ಆನಂದ, ಸಂತೋಷಗಳಿಂದ ರಾಜಕುಮಾರನ ಜನನವನ್ನು 'ಕೌಲಾಬೇಷ' ಮತ್ತು 'ಕತರಸೀದ' ಎಂಬ ಅಕ್ಷರಗಳಲ್ಲಿ ವರ್ಣಿಸಿದರು ॥೩॥ ಕೊನೆಯ ಎರಡು ಶಬ್ದಗಳನ್ನು 'ಅಬಜದ'ದ ಲೆಕ್ಕದಿಂದ ಗುಣಿಸಿದರೆ ರಾಜಕುಮಾರನ ಜನ್ಮ ಹಿ. ಸನ್ ೧೦೪೮ ಎಂದಾಗುತ್ತಿದೆ - ಹೀಗೆ ಕವಿತೆ ರಚಿಸಿ ಅರ್ಪಿಸಿದಾಗ ಆತನು ಇಚ್ಛಿಸಿದಷ್ಟು ದ್ರವ್ಯವನ್ನು ಬಾದಶಹನು ಬಕ್ಷೀಸಾಗಿ ಕೊಟ್ಟನು.

### ೪. ರಾಜಕುಮಾರನ ವಿದ್ಯಾಭ್ಯಾಸದ ಮುಹೂರ್ತ ಮತ್ತು ಬಿಸ್ಮಿಲ್ಲಾಖಾನೀ ಸಮಾರಂಭ :

ಮಗನಿಗೆ ನಾಲ್ಕು ತಿಂಗಳು ನಾಲ್ಕು ದಿನಗಳು ತುಂಬಿದವು ಪೈಗಂಬರ ಧರ್ಮದಂತೆ ಬಾದಶಹನು ಅತ್ಯಂತ ವೈಭವದ ಸಮಾರಂಭವನ್ನೇರ್ಪಡಿಸಿದ. ದಿನಾಂಕ ೨೦ ಸಾಬಾನ ತಿಂಗಳ ಶುಕ್ರವಾರ ಸನ್ ೧೦೫೨ ರಂದು (೪, ನವಂಬರ ೧೬೪೨) ಸಹಸ್ರಾವಧಿ ಆನಂದದಿಂದ ರಾಜಕುಮಾರನನ್ನು ವಿದ್ಯಾಶಾಲೆಗೆ ಸೇರಿಸುವ ಮುನ್ನ ಅವನಿಂದ 'ಬಿಸಮಿಲ್ಲಾ' ಎಂದು ಓದಿಸಿದರು. ಆ ಮಗುವಿಗೆ ಗೌರವದ ಮಾರ್ಗಗಳನ್ನು ಕಲಿಸುವ, ಬುದ್ಧಿವಂತ, ಸಲ್ಲಕ್ಷಣ, ಸನ್ನಡತೆಯ ಪಂತೋಜಿಯನ್ನು ನಿಯಮಿಸಿದರು. ಅಹೋರಾತ್ರಿ ಅಭ್ಯಾಸ ಮಾಡಿ ತುಸುವೇ ದಿನಗಳಲ್ಲಿ ಆ ಮಗು ಓದು, ಬರಹ, ಬಾದಶಾಹೀ ಗೌರವ, ಕುಸ್ತಿ ವಿದ್ಯೆ, ಕುದುರೆ ಸವಾರಿ, ತಲವಾರ, ಭಲ್ಲೆ, ಬಾಣ ಬಿಡುವ ವಿದ್ಯೆ, ಬಾದಶಹನಿಗೆ ತಕ್ಕ ವಿದ್ಯೆಗಳಲ್ಲಿ ಪಾರಂಗತನಾದನು.

### ೫. ರಾಜಕುಮಾರನ 'ಸುಂತಿ' ಸಮಾರಂಭ :

ರಾಜಕುಮಾರನಿಗೆ ಏಳು ವರುಷಗಳು ತುಂಬಿದವು. ಇಬ್ರಾಹೀಮ ಹಾಲಿಲ್ಲುಲ್ಲಾಹನು 'ಸುಂತಿ' ಮಾಡುವುದನ್ನು ನಿರ್ಧರಿಸಿದನು. ಬಹಳ ವೈಭವದ ಸಮಾರಂಭವನ್ನು ಏರ್ಪಡಿಸಿ ಶುಕ್ರವಾರದ ರಾತ್ರಿ ದಿನಾಂಕ ೬ ರಜಬ ತಿಂಗಳು ಸನ್ ೧೦೫೪ ರಂದು (೩೦, ಅಗಸ್ಟ ೧೬೪೪) ನಗರದಲ್ಲೆಲ್ಲ ವೈಭವದಿಂದ ಸುಂತಿ ಸಮಾರಂಭದ ಮೆರವಣಿಗೆ ಜರುಗಿಸಿದರು.

## ೬. ಅಲೀ ಆದಿಲಶಹನು ಸಿಂಹಾಸನ ಏರಿದ್ದು :

ಸುಲ್ತಾನ ಮಹಮ್ಮದನು ಸತ್ತಮೇಲೆ ಹಾಜೀ ಬಡೇಸಾಹೇಬಾ ಮತ್ತು ಕಾರಭಾರಿ ಖಾನ ಮಹಮ್ಮದ ವಜೀರ ಮಮಲಕತಮದಾರ, ಸಂಪೂರ್ಣ ಕಾರಭಾರಿಗಳು, ಕಾಮದಾರರು ಸುಪ್ರಸಿದ್ಧ ಜ್ಯೋತಿಷಿ ತೆಗೆದ ಮುಹೂರ್ತದಂದು, ದಿನಾಂಕ ೨೬ ತಿಂಗಳು ಮೊಹರಮ್, ಮಂಗಳವಾರ ಒಂಬತ್ತು ಘಟಿಕಾ ಸಮಯಕ್ಕೆ (೪, ನವಂಬರ ೧೬೫೬) ೧೬ ವರುಷದ ಸುದೈವಿ ಅಲೀ ಆದಿಲಶಹನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಆಗ ಒಬ್ಬ ಆಶುಕವಿ ತಕ್ಷಣ ಒಂದು ಕವಿತೆಯನ್ನು ಬರೆದು ಸಿಂಹಾಸನಾರೋಹಣವನ್ನು ವರ್ಣಿಸಿದ್ದಾನೆ. ಅದರ ಅರ್ಥ ಹೀಗಿದೆ. "ದಕ್ಷಿಣದ ಬಾದಶಹ ಸಿಂಹಾಸನದ ಮೇಲೆ ಕುಳಿತನು. ಆ ವರುಷವನ್ನು ತಿಳಿಸಲು ಅಲ್ಲಾನ ದೂತರು ಪ್ರಾತಃಕಾಲದಲ್ಲಿ ಬಂದು ದೀರ್ಘಸ್ವರಗಳಿಂದ ಹೇಳಿದರು ॥೧॥ ಈ ಹೇಳಿಕೆಯಲ್ಲಿ ಕೊನೆಯ ಅಕ್ಷರಗಳು ಇಲ್ಲ. ಸುಲ್ತಾನ ಮಹಮ್ಮದ ಬಾದಶಾಹನ ಸ್ಥಳದಲ್ಲಿ ಅಲೀ ಆದಿಲಶಹನು ಕುಳಿತಿದ್ದಾನೆ ॥೨॥ 'ಜ್ಯಾಜಷೀನೆ ಮಹಮದಸ್ತ ಆಲೀ' ಈ ಅಕ್ಷರಗಳಲ್ಲಿ ಕೊನೆಯ 'ಯೆ' ಈ ಅಕ್ಷರವನ್ನು ಬಿಟ್ಟು ಉಳಿದ ಅಕ್ಷರಗಳನ್ನು ಅಬಜದದ ಲೆಕ್ಕದಲ್ಲಿ ಗುಣಿಸಿದರೆ ೧೦೬೭ ಎಂದಾಗುತ್ತದೆ. ಈ ವರುಷ ಸಿಂಹಾಸನದ ಮೇಲೆ ಕುಳಿತನು. ಅಬದುಲ್‌ನಬೀ ದಬೀರ ಕೂಡ ಅಲೀ ಆದಿಲಶಹನು ಸಿಂಹಾಸನದ ಮೇಲೆ ಕುಳಿತದ್ದು ಇದೇ ದಿನವೆಂದು ಫಾರ್ಸಿಯಲ್ಲಿ ಹೀಗೆ ಬರೆದಿದ್ದಾನೆ. "ಸುಲ್ತಾನ ಮಹಮ್ಮದ ಬಾದಶಹನ ನಂತರ ಅಲೀ ಆದಿಲಶಹನು ರಾಜ್ಯ ಭಾರವನ್ನು ನಡೆಸಿದನು. ಅದು 'ಜೋಬತೇ ಶಾಹೀಜದ: ಬಾಆದೇ ಮಹಮ್ಮದ ಆಲೀ" ಈ ಅಕ್ಷರಗಳ ಸಂಖ್ಯೆ. ೧೦೬೮ ಎಂದಾಗುತ್ತದೆ. ಕವಿತೆಯನ್ನು ಚೆನ್ನಾಗಿ ಬರೆದಿದ್ದಾನೆ. ಇಲ್ಲಿ ಒಂದು ವರುಷದ ಅಂತರ ಬರುತ್ತದೆ. ಅದೇನೂ ದೊಡ್ಡ ತಪ್ಪಲ್ಲ. ಮುಕ್ಲ ಮಹಮ್ಮದ ಕುಲೀ ಕೂಡ ಕವಿತೆ ಬರೆದಿದ್ದಾನೆ. 'ಅಲ್ಲಾನ ಉಪಕಾರವಿದೆ. ಯಾಕೆಂದರೆ ಅಲ್ಲಾ ಈ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಆ ಬಾದಶಹನ ತೇಜದಿಂದ ಸೂರ್ಯ, ಪೃಥ್ವಿಗಳು ತೇಜವಾದುವು ॥೧॥ ಎಲ್ಲ ಬಾದಶಹರುಗಳಲ್ಲಿ ಅಲೀ ಆದಿಲಶಹನ ದೊಡ್ಡಸ್ತಿಕೆ ಶೋಭಿಸುತ್ತದೆ. ಯಾಕೆಂದರೆ ಸುಲ್ತಾನ ಮಹಮ್ಮದ ಬಾದಶಹನ ರಾಜ್ಯಕ್ಕೆ ಅಲೀ ಆದಿಲಶಾಹನಂಥ ಧಣಿ ಸಿಕ್ಕನು ॥೨॥ ಅಲೀ ಆದಿಲಶಹನು ಸಿಂಹಾಸನದ ಮೇಲೆ ಕುಳಿತ ದಿನವನ್ನು ತಿಳಿಸುವ ಕಾವ್ಯವನ್ನು ಬರೆಯಲು ವಿಚಾರಿಸಿದೆ. ಆಗ ಪೈಗಂಬರರು ನನಗೆ, ಸುಲ್ತಾನ ಮಹಮ್ಮದನು ಸತ್ತನಂತರ ಅಲೀ ಆದಿಲಶಹನು ಒಡೆಯನಾದನು ಎಂದು ಹೇಳಿದರು 'ಅಮೀರುಲ್ ಮೊಮಿನೀನ ಮತ್ತು ಆದಶಾನ ಮಹಮದ ಬುದ ಆಲೀ' ಈ ಅಕ್ಷರಗಳನ್ನು ಗುಣಿಸಿದಾಗ ೧೦೬೮ ಎಂದು ಬರುತ್ತದೆ. ಆದರೆ ಇಲ್ಲಿಯೂ ೧ ವರುಷದ ಅಂತರ ಬರುತ್ತದೆ. ಇದೇನು ಅಂಥ ತಪ್ಪಲ್ಲ. ಒಟ್ಟು ನಾನಾ ಪ್ರಕಾರದ ಕವಿತೆಗಳನ್ನು ಬರೆದು ತಂದ ಕವಿಗಳಿಗೆ ಬಹಳಷ್ಟು ಬಕ್ಷೀಸು-ಇನಾಮುಗಳನ್ನು ಕೊಟ್ಟರು. ಅಲೀ ಆದಿಲಶಹನು ಪಟ್ಟಕ್ಕೆ ಬಂದ ಹೊಸದರಲ್ಲಿ ರಾಜ್ಯದ ವ್ಯವಸ್ಥೆಯ ಕೆಲಸವು ಮಮಲಕತ ಮದಾರ ಖಾನ ಮಹಮ್ಮದನ ವಿಚಾರದಂತೆ ನಡೆಯುತ್ತಿತ್ತು. ಖಾನ ಮಹಮ್ಮದನಿಗೆ 'ಖಾನಖಾನಾ' ಎಂಬ ಬಿರುದು ಸಿಕ್ಕಿತ್ತು. ಆತ ಸತ್ತನಂತರ ರಾಜ್ಯದ ವ್ಯವಸ್ಥೆಯನ್ನು, ಮಹಾಲೀ ಮುಲಕೀ ಸಹಿತ ಕಾರಭಾರವು ಮಮಲಕತ ಮದಾರ ಇಬ್ರಾಹಿಮಖಾನನಿಗೆ ಬಂದಿತು. ಬಾದಶಹನ ತಾಯಿ ಬಡೇಸಾಹಿಬಾ ಮಕ್ಕಾಕ್ಕೆ ಹೊರಟಳು. ಅವಳ ಜೊತೆಗೆ ಇಬ್ರಾಹಿಮಖಾನನೂ ಹೊರಟನು. ಆಗ ಆತನ ಮಗ ಅಬದುಲ್ ಮಹಮ್ಮದನ ಕಡೆಗೆ ರಾಜ್ಯದ ಮುಖ್ಯ ಪ್ರಧಾನಿಯ ಹುದ್ದೆ ಬಂದಿತು. ಆತನು ಅಲೀ ಆದಿಲಶಹನ ಕಾಲಕಿರ್ದಿಯಲ್ಲಿ ಪೂರ್ತಿಯಾಗಿ ಮುಖ್ಯಸ್ಥನಾಗಿದ್ದು ಬಹಳ ಉತ್ತಮ ರೀತಿಯಿಂದ ಆಡಳಿತ ನಡೆಸಿದನು.




ಅಲಿ ಆದಿಲ್‌ಶಾಹ II

### ೭. *ಆಲೀ ಆದಿಲಶಹನು ಪಟ್ಟಕ್ಕೆ ಕುಳಿತ ಮೊದಲ ವರುಷವೇ ಮೊಗಲರ ಪ್ರಾಬಲ್ಯದಿಂದ ಬೀದರ, ಕಲ್ಯಾಣ ಕೋಟೆಗಳು ಕೈ-ಬಿಟ್ಟದ್ದು :*

ಈ ಮೊದಲಿನ ಕಥಾಭಾಗದಿಂದ ತಿಳಿದಂತೆ, ತೈಮೂರ ಬಾದಶಹನ ಸಂತತಿಗೆ (ಮೊಗಲರಿಗೆ) ದಕ್ಷಿಣದ ರಾಜ್ಯಗಳನ್ನು ಕೈವಶ ಮಾಡಿಕೊಳ್ಳುವ ಇರಾದೆ ಇತ್ತು, ಅಕಬರ ಬಾದಶಹನಿಗಂತೂ ಈ ವಿಷಯದಲ್ಲಿ ಪೂರ್ತಿ ಆಶೆ ಇತ್ತು. ಅವನ ಸಂತತಿ ಕೂಡ ದಕ್ಷಿಣದ ರಾಜ್ಯಗಳನ್ನು ತೆಗೆದುಕೊಳ್ಳಲು ಬಹಳ ಹಲ್ಲೆಗಳನ್ನು, ಮೇಲಿಂದ ಮೇಲೆ ಗದ್ದಲವನ್ನೂ ಮಾಡಿದ್ದರು. ಯುಕ್ತಿಗಳಿಂದ ದಕ್ಷಿಣದ ಕೆಲವು ಪ್ರದೇಶಗಳನ್ನು ಕೈವಶ ಮಾಡಿಕೊಂಡರು. ಮೊದಲು ಖಾನದೇಶ, ನಂತರ ವರಾಡ ಪ್ರದೇಶಗಳನ್ನು ಕೈವಶ ಮಾಡಿಕೊಂಡರು. ಕೊನೆಗೆ ನಿಜಾಮಶಹನ ರಾಜ್ಯದ ಮೇಲೂ ಏರಿ ಬಂದು ಯುದ್ಧಮಾಡಿದರು. ಶಾಹಜಹಾನ ಬಾದಶಹನು ಸುಲ್ತಾನ ಮಹಮ್ಮದ ಆದಿಲಶಹನೊಂದಿಗೆ ನಿಜಾಮಶಾಹನ ಅರ್ಧರ್ಧ ರಾಜ್ಯವನ್ನು ಹಂಚಿಕೊಳ್ಳುವ ಯುಕ್ತಿ ಮಾಡಿದನು. ಉಭಯತರ ಮಧ್ಯ ಕರಾರ ಪತ್ರವೂ ಆಯಿತು. ಅದರ ಪ್ರಕಾರ ನಿಜಾಮಶಾಹನ ಅರ್ಧರಾಜ್ಯ ಮೊಗಲರ ಕೈಸೇರಿತು. ಇನ್ನರ್ಧ ಆದಿಲಶಾಹಿಗಳ ಕೈಯಲ್ಲಿ ಉಳಿಯಿತು. ಸುಲ್ತಾನ ಮಹಮದ ಬಾದಶಹನು ಸತ್ತ ನಂತರ ಶಾಹಜಹಾನ ಬಾದಶಹನು ಜೀವಂತ ಇರಲಿಕ್ಕಾಗಿಯೂ ಆತನ ಮಗ ಔರಂಗಜೇಬನು ಆ ಕರಾರು ಪತ್ರವನ್ನು ಲೆಕ್ಕಿಸದೆ ಆದಿಲಶಹನ ರಾಜ್ಯದ ಮೇಲೆ ತನ್ನ ಸೈನ್ಯದೊಂದಿಗೆ ಏರಿ ಬಂದನು. ಬೀದರ ಕೋಟೆಯ ಮೇಲೆ ಹಲ್ಲೆ ಪ್ರಾರಂಭಿಸಿದನು.[೧] ಅಲೀ ಆದಿಲಶಹನು ಪಟ್ಟಕ್ಕೆ ಬಂದ ಮೊದಲ ವರುಷವೇ ಇನ್ನೂ ರಾಜ್ಯ ವ್ಯವಸ್ಥೆ ಪೂರ್ತಿ ಅವನ ಹಿಡಿತದಲ್ಲಿ ಬಂದಿರಲಿಲ್ಲ. ಆದರೂ ಅಫಜಲಖಾನ ಮತ್ತು ಮಲಿಕರೇಹಾನರ ನೇತೃತ್ವದಲ್ಲಿ ಅನೇಕ ಅಮೀರ ಜನರೊಂದಿಗೆ ಸೈನ್ಯವನ್ನು ಕೊಟ್ಟು ಬೀದರ ಹಲ್ಲೆಯನ್ನು ಎದುರಿಸಲು ಕಳಿಸಿದನು. ಮಲಿಕ ಮರ್ಜಾನನು ಆದಿಲಶಾಹನ ಕಡೆಯ ಬೀದರ ಕೋಟೆಯ ಮುಖ್ಯಸ್ಥನಾಗಿದ್ದನು. ಆತ ಮೊಗಲರೊಂದಿಗೆ ಯುದ್ಧ ಮಾಡುತ್ತ ಆರು ತಿಂಗಳು ಉರುಳಿಸಿನು. ಕೊನೆಗೆ ದಿನಾಂಕ ೨೫ ಜಮಾದಿಲಾವಲ, ಮಂಗಳವಾರ ೧೦೬೭ರಂದು (೩೧ ಮಾರ್ಚ ೧೬೫೭) ಬೀದರ ಔರಂಗಜೇಬನ ಕೈಗೆ ಹೋಯಿತು. ಉಭಯಪಂಗಡಗಳಲ್ಲಿ ಬಹಳ ಜನರು ಸತ್ತರು, ಲೂಟಿಯೂ ಆಯಿತು. ಒಮ್ಮೊಮ್ಮೆ ಆದಿಲಶಾಹಿಗಳ ಕೈಮೇಲಾದರೆ ಇನ್ನೊಮ್ಮೆ ಔರಂಗಜೇಬ ಬಾದಶಹನ ಕೈ ಮೇಲಾಗುತ್ತಿತ್ತು. ಅನಂತರ ಔರಂಗಜೇಬ ಬಾದಶಹನು, ೨೮, ರಜಬದಂದು (೩ ಮೇ, ೧೬೫೭) ಕಲ್ಯಾಣ ಕೋಟೆಯ ಮೇಲೆ ದಾಳಿಯನ್ನು ಪ್ರಾರಂಭಿಸಿದನು. ೩ ತಿಂಗಳುಗಳ ನಂತರ ದಿನಾಂಕ ೨೭, ಸವಾಲ (೨೯ ಜುಲೈ, ೧೬೫೭)ದಂದು ಆ ಕೋಟೆಯನ್ನೂ ಕೈವಶಮಾಡಿಕೊಂಡನು.[೨]

---

೧. ಚೈತ್ರ ವದ್ಯ ೧೧, ರವಿವಾರ ಘಟಿಕಾ-೮ ಶಕೆ, ೧೫೭೬ (೨೯, ಮಾರ್ಚ ೧೬೫೭) ಔರಂಗಜೇಬನು ಆದಿಲಶಾಹನಿಂದ ಬೀದರವನ್ನು ಕಿತ್ತುಕೊಳ್ಳಲು ಬೀದರಕ್ಕೆ ಬಂದನು. ಆಷಾಢ ಶುದ್ಧ ೩ ಗುರುವಾರ ಶಕೆ ೧೫೭೯ (೪, ಜೂನ್ ೧೬೫೭) ಬೀದರವನ್ನು ತೆಗೆದುಕೊಂಡನು-ಜೇಧೆ ಶಕಾವಲಿ ಪು ೧೮. 12th Rubi-us-sani, Julus 30 (18th January 1657) Aurangzeb left for the capture of Bedar, reached Chandor about 1st February 1657, 23rd Jamadusani Julus-31 (29th March 1657) ascended the fort and about 23rd April the fort fell to Mogal-Amal-i-Salih. ED VII P 124-126.

2. On the 23rd of Rajab, Julus 31 (28 April 1657) Aurangzeb marched against Kalyani, on 29th (4 May 1657) reached that place, anon the 1st Zilquada 1068 A.H (31 July 1657) the keys of the fortress were given up to the Prince=Am‥l-i-Salih ED VII P 127-128.

ಅದಾದ ತುಸು ದಿನಗಳಲ್ಲೆ ಶಿವಾಜಿ ಭೋಸಲೆ ಜುನ್ನರನಗರವನ್ನು ಲೂಟಿ ಮಾಡಿ ನಾಶಮಾಡಿದನು.[೭]

### ೮. *ಖಾನಖಾನಾ ಖಾನ ಮಹಮ್ಮದನ ಕೊಲೆಯ ಕಾರಣ :*

ಕೆಲವು ದಿನಗಳಲ್ಲಿ ದಿಲ್ಲಿ ಬಾದಶಹನು ಆದಿಲಶಹನ ರಾಜ್ಯದ ಮೇಲೆ ಏರಿ ಬಂದು ಹಲ್ಲೆ ಮಾಡುತ್ತ ಲೂಟಿಯನ್ನು ಮಾಡುತ್ತಿದ್ದನು. ತನ್ನ ರಾಜ್ಯದ ಸಂರಕ್ಷಣೆಗಾಗಿ ಮತ್ತು ಶತ್ರುಗಳನ್ನು ಎದುರಿಸಲು ಆದಿಲಶಹಹನು ಖಾನಖಾನಾ ಖಾನ ಮಹಮ್ಮದನನ್ನು ಅನೇಕ ಅಮೀರ ಜನರು, ಬಹಳ ಸೈನ್ಯ ಮತ್ತು ಸಾಮಾನು ಸರಂಜಾಮುಗಳೊಂದಿಗೆ ಕಳಿಸಿದನು. ಖಾನಖಾನಾ ಖಾನ ಮಹಮ್ಮದನು ಸೈನ್ಯದೊಂದಿಗೆ ಸರಹದ್ದಿಗೆ ಹೋಗಿ ತನ್ನ ರಾಜ್ಯ ಮತ್ತು ತನ್ನ ಸರಹದ್ದಿನ ಸಂರಕ್ಷಣೆಯನ್ನು ಬಹಳ ವ್ಯವಸ್ಥಿತವಾಗಿ ಇಟ್ಟಿದ್ದನು. ಸಂಧಿ-ಅವಕಾಶಗಳಿಗಾಗಿ ಕಾಯುತ್ತಲಿದ್ದನು. ಅಂಥ ಸಮಯದಲ್ಲಿ ಒಂದು ದಿನ "ದಿಲ್ಲಿ ಸೈನ್ಯ ಎರಡು-ಮೂರು ಮಜಲಿನಲ್ಲಿ ಬಂದು ಗುಡ್ಡಗಾಡು ಪ್ರದೇಶದಲ್ಲಿ ಇಳಿದು, ಮುನ್ನುಗ್ಗುವ ಇರಾದೆಯನ್ನು ಇಟ್ಟುಕೊಂಡಿದೆ" ಎಂದು ಗುಪ್ತಚಾರರು ಬಂದು ಹೇಳಿದರು. ಇದನ್ನು ಕೇಳುತ್ತಲೇ ಖಾನಖಾನಾ ಮಹಮ್ಮದನು ಸೈನ್ಯವನ್ನು ಸಿದ್ಧಪಡಿಸಿಕೊಂಡು ಮುಂದೆ ಹೊರಟನು. ಒಂದು ರಾತ್ರಿಯಲ್ಲಿ ದಿಲ್ಲಿ ಸೈನ್ಯದ ಸಮೀಪ ಹೋಗಿ[೧] ಶತ್ರುವಿನ ಸೈನ್ಯ ಮುಂದೆ ಬರದಂತೆ ದಾರಿಗಟ್ಟಿದನು. ಇನ್ನೊಂದು ಬದಿಯಿಂದ ಪರ್ವತ, ಗಿಡಮರಗಳ ಪೊದರು, ಕೊರಕಲುಗಳ ಮೂಲಕ ಹೊರಗೆ ಹೋಗುವ ಮಾರ್ಗವನ್ನೂ ಬಂದಮಾಡಿದನು. ವೈರಿ ಸೈನ್ಯದಲ್ಲಿ ತಿನ್ನುಣ್ಣುವ ಆಹಾರ ಸಾಮಗ್ರಿ ತೀರಿತು. ಹೊರಗಿನಿಂದ ಆಹಾರ ಸಾಮಗ್ರಿ ಬಂದು ಮುಟ್ಟುವ ಆಶೆಯೂ ತೀರಿತು. ತನ್ನ ಸೈನ್ಯದ ಇಂಥ ಪ್ರಸಂಗವನ್ನು ನೋಡಿ ಔರಂಗಜೇಬ ಚಿಂತೆಯಲ್ಲಿ ಬಿದ್ದನು. ಖಾನಖಾನಾ ಖಾನ ಮಹಮ್ಮದನಿಗೆ ಹೀಗೆ ಪತ್ರ ಬರೆದನು. "ಈ ಸಮಯದಲ್ಲಿ ನಮ್ಮ ಶ್ರೇಷ್ಠ ಮನೆತನದ ಕೀರ್ತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಸ್ನೇಹ ಮಾರ್ಗವನ್ನು ಸ್ವೀಕರಿಸಿದರೆ, ನಮ್ಮನ್ನು ಹೊರಗೆ ಹೋಗಲು ಮಾರ್ಗ ಬಿಟ್ಟರೆ, ಆದಿಲಶಾಹಿ ರಾಜ್ಯದಲ್ಲಿ ನೀವು ಮುಖ್ತ್ಯಾರರಾಗಿರುವವರೆಗೆ ನಿಮ್ಮ ವಂಶದವರು ಈ ಅಧಿಕಾರದಲ್ಲಿ ಇರುವವರೆಗೆ ನಾವು ಸ್ನೇಹದಿಂದ ನಡೆದುಕೊಳ್ಳುತ್ತೇವೆ. ಅನಂತರ ಹಿಂದುಸ್ತಾನದ ಬಾದಶಹರುಗಳಲ್ಲಿ ನಾವು ಯಾರೂ ವಿಜಾಪುರದತ್ತ ಕೆಟ್ಟ ದೃಷ್ಟಿಯಿಂದ ನೋಡುವುದಿಲ್ಲ ಎಂದು ಕರಾರು ಪತ್ರ ಬರೆದುಕೊಡುತ್ತೇವೆ" ಎಂದು ಬರೆದಿದ್ದನು. ಖಾನಖಾನಾ ಖಾನ ಮಹಮ್ಮದನು ಆಸಾರದ ಪ್ರಾರ್ಥನೆ ಮಾಡಿ, ಎರಡನೆಯ ಪ್ರಾರ್ಥನೆಯನ್ನು ಓದಲು ಆಸನದ ಮೇಲೆ ಕುಳಿತಿದ್ದಾಗ, ಗುಪ್ತಚಾರನು ಈ ವಿಷಯವನ್ನು ಆತನಿಗೆ ಹೇಳಿ ಆ ಪತ್ರವನ್ನು ಕೈಗೆಕೊಟ್ಟನು. ಅದನ್ನು ಓದಿದ ನಂತರ ಖಾನಖಾನಾ ಖಾನ ಮಹಮ್ಮದನು 'ಈ ಕಾಗದವು ನನ್ನ ಮರಣದ ನಿರೋಪವನ್ನು ತಂದಿದೆ' ಎಂದು ನುಡಿದನು. ಅನಂತರ ಬಹಳ ವಿಚಾರಮಾಡಿ ಆ ಪತ್ರದ ಹಿಂದುಗಡೆಯೇ 'ನಾಳೆ ಬೆಳಗ್ಗೆ ಉದಯ ಕಾಲದಲ್ಲಿ ನಿಮ್ಮ ಸೈನ್ಯವನ್ನು ಸಿದ್ಧಮಾಡಿಕೊಂಡು, ನಮ್ಮ ಸೈನ್ಯದೊಳಗಿನಿಂದಲೇ ನೀವು ಸುರಕ್ಷಿತವಾಗಿ ಹೊರಟು ಹೋಗಬೇಕು.' ಎಂದು ಬರೆದನು. ಆದರಂತೆ ಔರಂಗಜೇಬನು ಅದೇ ರಾತ್ರಿ ಸೈನ್ಯವನ್ನು ಸಿದ್ಧಪಡಿಸಿಕೊಂಡು ಖಾನಖಾನಾ

---

೭. ಜ್ಯೇಷ್ಠ ಮಾಸದಲ್ಲಿ ಶಕೆ ೧೫೭೯ (ಮೇ ೧೬೫೭) ಅಹಮದನಗರದಲ್ಲಿ ನೌಸಿರಖಾನನೊಂದಿಗೆ ರಾಜಶ್ರೀ ಶಿವಾಜೀ ರಾಜೇ ಭೋಸಲೆ ಯುದ್ಧ ಮಾಡಿದರು-ಜೇಧಶಕ ಪು. ೧೮

1. On the 8th of Rajab, Julus-31 (13 April 1657) Jan Muhammad and Afzal and Rustam etc. made their appearance near the Royal army-Amal-i-salih ED VII P 127

ಖಾನ ಮಹಮ್ಮದನ ಸೈನ್ಯದ ಸಮೀಪ ಬಂದನು. ಆಗ ಖಾನಖಾನಾ ಖಾನ ಮಹಮ್ಮದನ ಸೈನಿಕರು ಏನೊಂದೂ ಗದ್ದಲ ಮಾಡದೆ, ನಿಂತಲ್ಲಿಯೇ ನಿಂತು, ಔರಂಗಜೇಬ ಬಾದಶಹನಿಗೆ ಸೈನ್ಯಸಹಿತ ಹೊರಟು ಹೋಗಲು ದಾರಿ ಬಿಟ್ಟರು. ಸೆರೆಮನೆಯಿಂದ ಬಿಡುಗಡೆಯಾದವರಂತೆ, ಪಂಜರದ ಪಕ್ಷಿ ಬಿಡುಗಡೆಯಾದಂತೆ ತ್ವರಿತವಾಗಿ ಸೈನ್ಯ ಔರಂಗಜೇಬ ಬಾದಶಹನ ಜೊತೆಗೆ ಹೊರಗೆ ಬಂದಿತು. ಖಾನಖಾನಾ ಖಾನ ಮಹಮ್ಮದನ ಸರದಾರರೂ ಅಮೀರ ಜನರೂ ಔರಂಗಜೇಬ ಬಾದಶಹನು ಖಾನ ಮಹಮ್ಮದನ ಸೈನ್ಯದ ಮೇಲೆ ಮುತ್ತಿಗೆ ಹಾಕಿ ಓಡಿ ಹೋಗಿದ್ದಾರೆಂದು ತಿಳಿದುಕೊಂಡು, ತ್ವರಿತವಾಗಿ ಖಾನ ಮಹಮ್ಮದನ ಹತ್ತಿರ ಬಂದು, “ಇನ್ನೂ ಕೆಲಸ ನಮ್ಮ ಕೈಬಿಟ್ಟು ಹೋಗಿಲ್ಲ ಅಂದರೆ ಔರಂಗಜೇಬ ಬಾದಶಹನು ಬಹಳ ದೂರವೇನೂ ಹೋಗಿಲ್ಲ. ತಕ್ಷಣ ನಾವು ಬೆನ್ನುಹತ್ತಿ ಆತನನ್ನು ಹಿಡಿದು ತರುತ್ತೇವೆ. ಇಂಥ ಸಂಧಿ ಮತ್ತೆ ನಮಗೆ ಸಿಗುವುದಿಲ್ಲ” ಎಂಬುದಾಗಿ ಹೇಳಿದರು. ಆಗ ಖಾನ ಮಹಮ್ಮದನು ‘ಈಗಂತೂ ಕೈಬಿಟ್ಟು ಹೋಗಿದೆ, ಹೋಗಲಿ ಬಿಡಿ ಅವನನ್ನು ಬಿಟ್ಟುಬಿಡಿರಿ. ಔರಂಗಜೇಬ ಬಾದಶಹನ ಮೇಲೆ ಇದಿಷ್ಟು ಉಪಕಾರದ ಭಾರವಿರಲಿ. ಈ ನಿಮ್ಮ ಉಪಕಾರವು ದಿಲ್ಲಿ ಬಾದಶಹರ ಮೇಲೆ ಬಹಳ ವರುಷ ಇರುತ್ತದೆ. ಇದರಿಂದಾಗಿ ನಿಮ್ಮ ಕೀರ್ತಿ ಬಹಳ ದಿನ ಉಳಿಯುತ್ತದೆ” ಎಂಬುದಾಗಿ ಉತ್ತರ ಕೊಟ್ಟನು. ಈ ಉತ್ತರ ಕೇಳಿ ಎಲ್ಲರೂ ಸ್ತಬ್ದರಾಗಿ ನಿಂತರಾದರೂ ಅಫಜಲಖಾನನು ಮಾತ್ರ ಖಾನ ಮಹಮ್ಮದನ ಮುಂದೆ ಬಂದು “ಇಂಥ ದಿನ ಮತ್ತೆ ಬರಲಾರದು ಮತ್ತು ಇಂಥ ಅವಕಾಶ ಮತ್ತೆ ಕೈಗೆ ಬರಲಾರದು. ತೈಮೂರ ಬಾದಶಹನ ವಂಶದಲ್ಲಿ ಯಾವ ಬಾದಶಹನ ಬಗ್ಗೆ ಸಂಶಯ ಪಡಬಹುದೋ ಅದೇ ಬಾದಶಹ ಈತನಾಗಿದ್ದಾನೆ. ಈತನನ್ನು ಹಿಡಿದು ತಂದರೆ. ಮತ್ತೆ ಯಾರೂ ದಿಲ್ಲಿಯ ಜನ ದಕ್ಷಿಣ ದೇಶದ ಕಡೆಗೆ ಬರಲಾರರು. ನಮ್ಮ ಹೆಸರನ್ನೂ ತೆಗೆಯಲಾರರು. ಆದ್ದರಿಂದ ಈ ರಾಜಕುಮಾರನನ್ನು ಹಿಡಿದು ತರೋಣ” ಎಂದು ಹೇಳಿದನು. ಆಗ ಖಾನ ಮಹಮ್ಮದನು ‘ನಿಜ, ನೀನು ಹೇಳದುದು ಸತ್ಯವಾಗಿಯೇ ಇದೆ. ಯಾಕೆಂದರೆ ನೀನು ಉತ್ತಮ ವಿಚಾರಗಳ ಮೇಲೆಯೇ ದೃಷ್ಟಿಯನ್ನಿಟ್ಟಿರುವೆ. ಇದರಲ್ಲಿ ಸಂಶಯವೇ ಇಲ್ಲ. ಆದರೆ ಈ ರಾಜಕುಮಾರನು ದಿಲ್ಲಿಯ ಬಾದಶಹ ಮತ್ತು ಹಿಂದುಸ್ತಾನದ ಧಣಿಯಾಗಿದ್ದಾನೆ. ಆತನನ್ನು ಹಿಡಿದು ತಂದು ನಾಶಪಡಿಸಿದರೆ ದೊಡ್ಡ ಅನರ್ಥದ ಸಮುದ್ರವೇ ಉಕ್ಕೇರುತ್ತದೆ. ದಕ್ಷಿಣ ದೇಶದಲ್ಲಿ ಬಹಳ ಪ್ರಳಯವಾಗುತ್ತದೆ ಎಂದು ನನಗನಿಸುತ್ತದೆ. ಈ ರಾಜಕುಮಾರನನ್ನು ಕೆಣಕುವುದೆಂದರೆ ಆಕಾಶವೇ ಹರಿದು ಬಿದ್ದಂತಾದೀತು ಆದುದೆಲ್ಲ ಸರಿಯಾಗಿದೆ ಹೋದವ ಹೋಗಲಿ” ಎಂದು ಹೇಳಿದನು. ಆಗ ಅಫಜಲಖಾನನು ಧೈರ್ಯದಿಂದ ಮುಂದೆ ಬಂದು ‘ಅಹೋ ಖಾನ ಮಹಮ್ಮದರೇ ಈ ವಿಷಯ ಇಷ್ಟಕ್ಕೇ ಉಳಿಯುತ್ತದೆಂದು ನೀವು ತಿಳಿಯಬೇಡಿರಿ. ನಾನು ಹೆಸರಿನಿಂದ ಅಫಜಲಖಾನನಿದ್ದೇನೆ. ಆಕಾಶ ಹರಿದು ಬಿದ್ದರೂ ನನ್ನ ಕೈಯಿಂದ ಅದನ್ನು ಎತ್ತಿ ಹಿಡಿಯುತ್ತೇನೆ” ಎಂದು ಹೇಳುತ್ತ, ದಿಲ್ಲಿ ಬಾದಶಹನನ್ನು ಹಿಡಿದು ತರುವ ವಿಷಯದಲ್ಲಿ ಬಹಳ ಆಗ್ರಹ ಮಾಡಹತ್ತಿದನು. ಖಾನ ಮಹಮ್ಮದನು ಆತನ ಆಗ್ರಹವನ್ನು ಮುರಿಯಲು ಪ್ರಯತ್ನಿಸುತ್ತಿದ್ದನು. ಮತ್ತು ಬಗೆ-ಬಗೆಯ ನೆಪಗಳನ್ನೊಡ್ಡಿ ಈ ವಿಷಯವನ್ನು ಇಲ್ಲಿಯೇ ಮುರಿಯಹತ್ತಿದನು. ಅನಂತರ ಅಫಜಲಖಾನನು, ಖಾನ ಮಹಮ್ಮದನು ಹೀಗೆ ಮಾಡುವುದರಲ್ಲಿಯ ಉದ್ದೇಶವನ್ನು ಲಕ್ಷ್ಯಕ್ಕೆ ತಂದು, ನಿರ್ಭಯನಾಗಿ ಎರಡು ಮೂರು ಬಹು ಕೆಟ್ಟ ಶಬ್ದಗಳನ್ನು ಉಪಯೋಗಿಸಿ ಮಾತನಾಡಿದನು. ಹಾಗೆಯೇ ಎದ್ದು ನಿಂತು, ನೌಬತ್ತನ್ನು ಬಾರಿಸಿ ಕೂಚ್ ಮಾಡಿ ವಿಜಾಪುರ ದಾರಿ ಹಿಡಿದನು. ದಾರಿಯನ್ನು ಅತಿ ಬೇಗ ನಡೆದು ವಿಜಾಪುರವನ್ನು ಮುಟ್ಟುವ ಹೊತ್ತಿಗೆ ಅವನ ಪಿತ್ತ

ನೆತ್ತಿಗೇರಿತ್ತು. ತನ್ನ ಎರಡೂ ಕೈಗಳಲ್ಲಿ ಪಟ್ಟಾ ಎಂಬ ಹತ್ಯಾರನ್ನು ಎತ್ತಿ ಹಿಡಿದುಕೊಂಡು, ದರಬಾರದೊಳಗೇ ನಡೆದುಬಂದನು. ಅಲ್ಲಿಯ ಜನರು ಬಾದಶಹನಿಗೆ ಈ ವಿಷಯ ತಿಳಿಸಿದರು. ಅದನ್ನು ಕೇಳಿದ ಬಾದಶಹನು "ಆತ ಹೇಗೆ ಬರುತ್ತಿದ್ದಾನೋ ಹಾಗೆಯೇ ಒಳಗೆ ಬರಲಿ" ಎಂದನು. ಅಷ್ಟು ಹೊತ್ತಿಗೆ ಅಫಜಲಖಾನನು ಸಿಂಹಾಸನದ ಹತ್ತಿರವೇ ಬಂದನು. ತನ್ನ ಎರಡೂ ಕೈಗಳಲ್ಲಿದ್ದ ಹತ್ಯಾರಗಳನ್ನು ತೆಗೆದು ಭೂಮಿಯ ಮೇಲೆ ಅಪ್ಪಳಿಸುತ್ತ 'ಖುದಾವಂದರೇ, ತಮ್ಮ ಚಾಕರ ಅಂದರೆ ಮಹಮ್ಮದ ಖಾನರು ತಮ್ಮ ರಾಜ್ಯವನ್ನು ಹಾಳು ಮಾಡಿದರು" ಎಂದನು, ಸವಿವರ ವಿಷಯನ್ನು ಕೇಳಿ ತಿಳಿದ ನಂತರ ಬಾದಶಹನಿಗೆ ತುಂಬ ಕೆಡುಕೆನಿಸಿತು. ಖಾನ ಮಹಮ್ಮದನ ಮೇಲೆ ಎಲ್ಲಿಲ್ಲದ ಸಿಟ್ಟು ಬಂದಿತು. ಆತನಿಗೆ ತಕ್ಷಣ ಸೈನ್ಯ ಸಮೇತವಾಗಿ ಹಿಂತಿರುಗಿ ಬರಲು ಆಜ್ಞೆಯನ್ನು ಕಳಿಸಿದನು. ಪತ್ರ ಬಂದ ದಿನವೇ ಖಾನ ಮಹಮ್ಮದನು ದೂರದ ವಿಚಾರ ಮಾಡಿ ತನ್ನ ಕೆಲಸದ ಪರಿಣಾಮವನ್ನು ಊಹಿಸಿದನು. ತನ್ನ ಮರಣದ ಬಗ್ಗೆ ಉದಾರನಾದನು. ಆಜ್ಞಾಪತ್ರ ಬಂದು ಮುಟ್ಟುತ್ತಿದ್ದಂತೆಯೇ ಆಯುಷ್ಯದ ದಿನಗಳು ಮುಗಿದುವು ಎಂದು ತಿಳಿದು ಸಾವಕಾಶ ಬರುತ್ತಿದ್ದನು. ಒಂದು ದಿನ ಕೂಚ್ ಮಾಡಿದರೆ, ಎರಡು ಮೂರು ದಿನ ಮುಕ್ಕಾಮ ಮಾಡುತ್ತಿದ್ದನು. ಕೆಲವು ದಿನಗಳ ನಂತರ ವಿಜಾಪುರಕ್ಕೆ ಬಂದು ಮುಟ್ಟಿದನು. ವಿಜಾಪುರ ನಗರದಲ್ಲಿ ಬಂದ ದಿನ ಮಕ್ಕಾ ಬಾಗಿಲಲ್ಲಿ ಇಬ್ಬರು ಮೊಗಲರು ಕೈಯಲ್ಲಿ ದೊಡ್ಡದೊಡ್ಡ ಚೂಪಾದ ಹತ್ಯಾರಗಳನ್ನು ಹಿಡಿದುಕೊಂಡು ಎರಡೂ ಬದಿಗೂ ನಿಂತಿದ್ದರು. ಖಾನ ಮಹಮ್ಮದನ ಪಲ್ಲಕ್ಕಿ ಬಾಗಿಲಲ್ಲಿ ಬರುತ್ತಿದ್ದಂತೆಯೇ ಸರಿಯಾಗಿ ಇಬ್ಬರು ಮೊಗಲರು ಎರಡೂ ಬದಿಯಿಂದ ಓಡಿ ಬಂದು, ಹತ್ಯಾರಗಳಿಂದ ಖಾನ ಮಹಮ್ಮದನನ್ನು ಕಡಿದು ತುಂಡು ತುಂಡು ಮಾಡಿದರು.[೧]

### *೬. ಒಂದು ಕಥಾನಕದ ವರ್ಣನೆ :*

ತುಂಡು-ತುಂಡಾದ ಖಾನ ಮಹಮ್ಮದನ ಶವವನ್ನು ಭೂಮಿಯಲ್ಲಿ ದಫನ ಮಾಡಿದ ರಾತ್ರಿ ಖಾನ ಮಹಮ್ಮದನು ಆತನ ಹತ್ತಿರದ ಸಂಬಂಧಿಕನಿಗೆ ಕನಸಿನಲ್ಲಿ ಬಂದು 'ನನ್ನ ಕಿರುಬೆರಳು ನನ್ನ ಶವದೊಂದಿಗೆ ಭೂಮಿಯಲ್ಲಿ ಹುಗಿದಿಲ್ಲ. ನನ್ನ ಮೇಲೆ ತಲವಾರದಿಂದ ಹೊಡೆದ ಬಾಗಿಲು ಹತ್ತಿರ ತುಂಡಾದ ನನ್ನ ಬೆರಳು ಬಿದ್ದಿದೆ. ಅದನ್ನು ತಂದು ನನ್ನ ಶವದೊಂದಿಗೆ ಹುಗಿಯಿರಿ" ಎಂದು ಹೇಳಿದಂತಾಯಿತು. ಎಚ್ಚರಗೊಂಡ ಆ ಮನುಷ್ಯ ಬಾಗಿಲ ಬಳಿ ಬಂದು ಹುಡಕಿದ. ಸಿಕ್ಕ ಆ ಬೆರಳನ್ನು ಎತ್ತಿಕೊಂಡು ಹೋಗಿ ಖಾನ ಮಹಮ್ಮದನ ಗೋರಿಯ ಹತ್ತಿರ ಅದನ್ನೂ ಹುಗಿದ ಮುಂದೆ ವಿಜಾಪುರ ಬಾದಶಹನು ದಿಲ್ಲಿ ಬಾದಶಹನಿಗೆ ವಾರ್ಷಿಕ ಖಂಡಣಿ ಕಳಿಸಿದ. ಆಗ ದಿಲ್ಲಿ ಬಾದಶಹನು ವಿಜಾಪುರದ ಬಾದಶಹನಿಗೆ ಆಜ್ಞಾ ಪತ್ರವನ್ನು ಕಳಿಸಿ, " ಈ ವರುಷ ಖಂಡಣಿ ಹಣವನ್ನು ನಮಗೆ ಕಳಿಸುವ ಬದಲು ಆ ಹಣವನ್ನು ಖಾನ ಮಹಮ್ಮದನ ಗೋರಿ ಕಟ್ಟಡಕ್ಕಾಗಿ ಖರ್ಚು ಮಾಡಬೇಕು" ಎಂದು ತಿಳಿಸಿದನು. ಹೀಗೆ ಆಜ್ಞಾ ಪತ್ರವನ್ನು ಕಳಿಸಿದ್ದರಿಂದ ಖಾನ ಮಹಮ್ಮದನ ಸಮಾಧಿ ಕಟ್ಟಡವು ಬಹಳ ದೊಡ್ಡ ಪ್ರಮಾಣದ್ದಾಯಿತು.

---

೧. ಶಕೆ. ೧೫೭೮ ಕಾರ್ತೀಕ ಶುದ್ಧ ಪೌರ್ಣಿಮೆ (೧೦ ನವಂಬರ ೧೬೫೭)ರಂದು ಖಾನ ಮಹಮ್ಮದನನ್ನು ಬಡೇ ಸಾಹೀಬಾಳು ಕೊಲ್ಲಿಸಿದಳು-ಜೇಧೆ ಶಕಾವಲಿ ಪು.೧೮.

## ೧೦. *ಶಿವಾಜೇ ವಲ್ಲದ ಶಾಹಜೇ ಭೋಸಲೆಯು ತನ್ನ ಧಣಿಯ ವಿರುದ್ಧ ಬಂಡು ಮತ್ತು ಬಲಾತ್ಕಾರ ಮಾಡಲು ಪ್ರಾರಂಭಿಸಿದ್ದು :*

ಕೊಂಕಣ ಪ್ರದೇಶವು ವಿಸ್ತೀರ್ಣವಾಗಿದ್ದು, ಬಹಳ ವಸೂಲಿಗಳಿಸಿ ಕೊಡುವದಾಗಿದೆ ಎಂಬುದು ಎಲ್ಲರಿಗೂ ಗೊತ್ತಿದೆ. ಅವುಗಳಲ್ಲಿ ಚೌಲ ಬಂದರ ಹಾಗೂ ಸುಕೇಲೆ ಬಂದರ ಸಾಷ್ಟಿ ಬಂದರು ಮೊದಲಾದವು ಕೊಂಕಣ ಪ್ರದೇಶಗಳಲ್ಲಿ ಗುಡ್ಡಗಾಡು ಭೂಮಿ, ಕೊರಕಲು ಸ್ಥಳಗಳಲ್ಲಿ ಗಟ್ಟಿಯಾದವುಗಳಾಗಿವೆ. ಅವು ಮತ್ತು ಇನ್ನು ಅನೇಕ ಪ್ರದೇಶಗಳು ದಟ್ಟ ಅರಣ್ಯದವುಗಳಾಗಿವೆ. ಆ ಅರಣ್ಯಗಳಲ್ಲಿ ತೆಂಗು ಹಾಗೂ ಮೆಣಸುಗಳನ್ನು ಬಹಳ ಬೆಳೆಯುತ್ತಾರೆ. ಅಲ್ಲಲ್ಲಿ ತೆಂಗಿನ ಬನಗಳೇ ಕಾಣುತ್ತವೆ. ಮೊದಮೊದಲು ಇದರ ಒಂದಿಷ್ಟು ಭಾಗ ವಿಜಾಪುರದ ವಶದಲ್ಲಿದ್ದಿತು. ಉಳಿದ ಬಹುಭಾಗ ನಿಜಾಮಶಾಹನ ಕಡೆಗೆ ಇತ್ತು. ನಿಜಾಮಶಹನ ರಾಜ್ಯವನ್ನು ಗೆದ್ದು, ಶಾಹಜಹಾನ ಬಾದಶಹ ಹಾಗೂ ಮಹಮ್ಮದ ಆದಿಲಶಹರು, ಇದನ್ನು ಅರ್ಧರ್ಧ ಹಂಚಿಕೊಂಡರು. ಆಗ ನಿಜಾಮಶಹನ ಕಡೆಗಿದ್ದ ಕೊಂಕಣದ ಭಾಗವೆಲ್ಲ ಆದಿಲಶಹನ ಪಾಲಿಗೆ ಬಂದಿತು. ಅವನು ಆ ಎಲ್ಲ ಪ್ರದೇಶದ ಉಸ್ತುವಾರಿಯನ್ನು ಮುಲ್ಲಾ ಅಹಮದನ ಕಡೆಗೆ ಕೊಟ್ಟನು. ಆದರೆ ಅವುಗಳಲ್ಲಿಯ ಎರಡು ಮಹಾಲಗಳನ್ನು, ಒಂದು ಪುಣೆ ಇನ್ನೊಂದು ಸುಪೆ ಇವುಗಳನ್ನು ಶಾಹಜೀ ಭೋಸಲೆಗೆ ಜಹಾಗೀರಿ ಹಾಕಿಕೊಡಲಾಗಿದ್ದಿತು. ಶಾಹಜೀ ಭೋಸಲೆ ಅಲ್ಲಿ ಜಮಾದಾರನ ನಡತೆಯಂತೆ ಪ್ರದೇಶವನ್ನು ನೋಡಿಕೊಳ್ಳುತ್ತ, ಸುಲ್ತಾನ ಮಹಮ್ಮದ ಆದಿಲಶಹನ ಆಜ್ಞೆಯಂತೆ ನಡೆಯುತ್ತಿದ್ದನು.[೧] ಅನಂತರ ಮಹಮ್ಮದ ಆದಿಲಶಹನು ಕರ್ನಾಟಕ ಪ್ರದೇಶವನ್ನು ಕೈವಶಪಡಿಸಿಕೊಳ್ಳಲು ಸೈನ್ಯವನ್ನು ಕೊಟ್ಟು ದೊಡ್ಡ ದೊಡ್ಡ ಸರದಾರರೊಂದಿಗೆ ಶಾಹಾಜಿಯನ್ನೂ ಕಳಿಸಿಕೊಟ್ಟನು. ಈ ಶಾಹಾಜಿಯ ಮಗ ಶಿವಾ ತನ್ನ ತಂದೆಯ ವತಿಯಿಂದ ಆ ಎರಡು ಮಹಾಲುಗಳ (ಪುಣೆ ಮತ್ತು ಸುಫೆ) ಆಡಳಿತವನ್ನು ನಡೆಸುತ್ತಿದ್ದನು.[೨] ಸುಲ್ತಾನ ಮಹಮ್ಮದನ ಅನಾರೋಗ್ಯ ಬಹಳ ದಿನ ಮುಂದುವರೆದಾಗ ವಿಜಾಪುರದಲ್ಲಿ ಗದ್ದಲ ನಡೆಯಿತು. ಆ ಸಮಯದಲ್ಲಿ ಕೊಂಕಣ ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದ ಮುಲ್ಲಾ ಅಹಮದನನ್ನು ಬಾದಶಹನು ವಿಜಾಪುರಕ್ಕೆ ಕರೆಯಿಸಿಕೊಂಡಾಗ ಕೊಂಕಣ ಪ್ರದೇಶವು ಖಾಲಿ ಬಿದ್ದು ಅದನ್ನು ನೋಡಿಕೊಳ್ಳುವವರೆ ಇಲ್ಲವಾದರು. ಶಿವಾ ಭೋಸಲಾನು ಬಹಳ ಪುಂಡ, ಅಮರ್ಯಾದೆಯ ಮುಠ್ಠಾಳನಾಗಿದ್ದನು. ಆತ ಈ ಅವಕಾಶವನ್ನು ಬಳಸಿ, ಇಂಥ ವೇಳೆ ಮತ್ತೆ ಬರಲಾರದೆಂದು ತಿಳಿದು ಆ ಪ್ರದೇಶದಲ್ಲಿ ಬಹಳ ದಂಗೆ ಮಾಡಹತ್ತಿದನು ಬಹಳ ಸೊಕ್ಕಿನಿಂದ ಶೀಘ್ರದಲ್ಲಿ ಬಂಡು ಖೋರರನ್ನು ಹಾಗು ಕುತಂತ್ರಿಗಳನ್ನು ಒಂದೆಡೆ ಸೇರಿಸಿದನು. ಅವರೆಲ್ಲ ಆತನ ಕುಟುಂಬದವರು ಮತ್ತು ಆಪ್ತರೇ ಆಗಿದ್ದರು. ಅವರೆಲ್ಲ ಕೂಡಿಕೊಂಡು ನಾನಾ ಪ್ರಕಾರದ ಗುಂಡಾಗಿರಿಯನ್ನು ಮಾಡಿ ಮೊದಲು ಜುನ್ನರದ ಕೋಟೆಯನ್ನು ಕೈವಶ ಮಾಡಿಕೊಂಡರು.[೩] ಉಳಿದವುಗಳಲ್ಲಿ ಖಾಲಿ ಇದ್ದ ಕೋಟೆಗಳಲ್ಲಿಯ ಕೆಲವನ್ನೂ

---

೧. ವಜೀರ ಅಥವ ಸೇನಾಪತಿ ಎಂಬುದಾಗಿ ಇಲ್ಲವೆ 'ಫರ್ಜಂದ' ಎಂದು ಶಾಹಾಜಿಯು ಆದಿಲಶಾಹನ ಸೇನಾಪತಿಗೆ ಸಹಾಯ ಮಾಡುತ್ತಿದ್ದನು – ಜೇಧೆಶ ಪು.೪೦

೨. ಶಕೆ ೧೫೭೭ ಪೌಷ ಶುದ್ಧ ಚತುರ್ದಶಿಯಂದು (೩೧ ಡಿಶಂಬರ ೧೬೫೫) ಶಿವಾಜಿಯು ಜಾವಳಿಯನ್ನು ತೆಗೆದುಕೊಂಡನು. ಶಕೆ ೧೫೭೮ ಆಶ್ವೀನ ವದ್ಯದಲ್ಲಿ (ಅಕ್ಟೋಬರ ೧೬೫೬) ಸುಪೆಯನ್ನು ತೆಗೆದುಕೊಂಡನು – ಜೇಧೆ ಶಕಾವಲಿ ಪುಟ. ೧೮.

೩. ಶಕೆ ೧೫೭೯ ವೈಶಾಖ ಮಾಸದಲ್ಲಿ (ಮೇ ೧೬೫೭) ಶಿವಾಜಿಯು ಜುನ್ನರವನ್ನು ಲೂಟ ಮಾಡಿದನು – ಜೇಧೆ ಶಕಾವಲಿ ಪುಟ. ೧೮

ವಶ ಪಡಿಸಿಕೊಂಡರು. ಅದೇ ಸಮಯದಲ್ಲಿ ಸುಲ್ತಾನ ಮಹಮ್ಮದ ಆದಿಲಶಹನು ಸತ್ತನು. ಈ ಅತ್ಯಂತ ಶೋಕದ ಸುದ್ದಿ ಶಿವಾನಿಗೆ ತಿಳಿಯಿತು. ಇದು ಪೂರ್ತಿ ದುಃಖದ್ದಾಗಿದ್ದರೂ ಆ ಕೃತಘ್ನನಾದ ಬಂಡುಖೋರ ಶಿವಾನಿಗೆ ಇದು ಬಹಳ ಖುಷಿಯನ್ನುಂಟುಮಾಡಿತು. ಆಗ ಇನ್ನಷ್ಟು ಆನಂದ ಪಟ್ಟು ತನ್ನ ದಾಂಡಿಗತನವನ್ನು ಇನ್ನೂ ಅಧಿಕಗೊಳಿಸಿದನು ಮತ್ತು ಅಮರ್ಯಾದೆಯ ಹೆಜ್ಜೆಯನ್ನು ಇನ್ನಷ್ಟು ಅಧಿಕ ಮುಂದಿಟ್ಟನು. ಅಲ್ಲಿಯ ಎಲ್ಲ ಕೋಟೆಗಳನ್ನು ಮತ್ತು ಕೊಂಕಣದ ಎಲ್ಲ ಪ್ರದೇಶಗಳನ್ನು ಕೈವಶಮಾಡಿಕೊಂಡನು.[೪] ತನ್ನ ಧಣಿಯ ವಿರುದ್ಧ ಇನ್ನೂ ವಿಶೇಷ ನಡೆಯಹತ್ತಿದನು. ಅಲಿ ಆದಿಲಶಹನ ಆಜ್ಞೆಗಳನ್ನು ಕೇಳುತ್ತಲೇ ಇರಲಿಲ್ಲ. ಅವನ ಆಜ್ಞೆಯಂತೆ ನಡೆಯುವುದನ್ನು ಬಿಟ್ಟನು. ಮೊದಲಿನ ಹಾಗೂ ಈಗಿನ ಎಲ್ಲ ಕೂಡಿ ನಾಲ್ವತ್ತು ಕೋಟೆಗಳನ್ನು, ಸಾಮಾನು ಸರಂಜಾಮುಗಳು ತುಂಬಿದ, ಎಲ್ಲ ಕೋಟೆಗಳಲ್ಲಿ ಅತ್ಯಂತ ಸಮೃದ್ಧವಾದ ರಾಹೇರ (ರಾಯಗಡ) ಕೋಟೆಯನ್ನು ಕೂಡ ಶಿವಾ ಭೋಸಲೆ ಕೈವಶ ಮಾಡಿಕೊಂಡನು.[೫]

### ೧೧. *ಅಲೀ ಆದಿಲಶಹ ಬಾದಶಹನು ಶಿವಾನನ್ನು ಶಿಕ್ಷಿಸಲು ಅಫಜಲಖಾನನನ್ನು ಕಳಿಸಿದ್ದು ಮತ್ತು ಶಿವಾನು ಅಫಜಲಖಾನನನ್ನು ಮೋಸದಿಂದ ಕೊಂದದ್ದು :*

ಶಿವಾ ಭೋಸಲೆಗೆ ಬಹಳ ಗರ್ವ ಬಂದಿತ್ತು. ದಿನದಿಂದ ದಿನಕ್ಕೆ ಅಧಿಕಾಧಿಕ ದಾಂಡಗಾಯಿತನವನ್ನು ಮಾಡಹತ್ತಿದ್ದನು. ಇನ್ನೂ ಸಡಿಲು ಬಿಟ್ಟರೆ, ನಿಷ್ಕಾಳಜಿ ಮಾಡಿದರೆ ಬಾದಶಹನಾದ ತನಗೆ ನ್ಯಾಯ ಸಮ್ಮತವಲ್ಲವೆಂದು ಅಲಿ ಆದಿಲಶಹ ತಿಳಿದನು. ಶಿವಾನನ್ನು ಶಿಕ್ಷಿಸದೆ ಬಿಟ್ಟರೆ ಅದು ರಾಜ್ಯ ಮುಳುಗಲು ಕಾರಣವಾಗಬಹುದೆಂದೂ ಅನಿಸಿತು. ಶಿವಾನ ಬಂಡಾಯದ ಅಗ್ನಿಯನ್ನು ಶಾಂತಗೊಳಿಸುವ ಸಮಯ ಬಂದಿದೆ. ಆತನ ಗರ್ವವನ್ನು ದೂರ ಮಾಡಲೇಬೇಕು ಎಂಬುದಾಗಿ ತಿಳಿದು, ಮಹಾ ಪರಾಕ್ರಮಿ, ದಕ್ಷಿಣದ ಶೂರರಲ್ಲಿ ಅಪ್ರತಿಮ ಧೈರ್ಯವಂತನಾದ ಮತ್ತು ಆತನೊಬ್ಬನಿಗೆ ಮಾತ್ರ ಶಿವಾ ಅಂಜಿ ನಡೆಯುತ್ತಿದ್ದ ಅಫಜಲಖಾನನನ್ನು ಹತ್ತು ಸಾವಿರ ಸ್ವಾರರೊಂದಿಗೆ ಆ ಕೃತಘ್ನನನ್ನು ಶಿಕ್ಷಿಸಲು ಕಳಿಸಿಕೊಟ್ಟನು. ಅಫಜಲಖಾನನು ಅಲ್ಲಿಗೆ ಹೋಗಿ, ಶತ್ರುವಿನ ಸೈನ್ಯವನ್ನು ಹಿಮ್ಮೆಟ್ಟಿಸಿ, ಶಿವಾನು ಬಲಾತ್ಕಾರದಿಂದ ತೆಗೆದುಕೊಂಡ ಪ್ರದೇಶಗಳನ್ನು ಆತನ ಕೈಯಿಂದ ಬಿಡಿಸಿಕೊಳ್ಳಲು ಪ್ರಾರಂಭಿಸಿದನು. ಅಫಜಲಖಾನನ ಎದುರು ತನ್ನ ಶಕ್ತಿ ನಡೆಯಲಾರದೆಂದು ಮತ್ತು ಆತನ ಮುಂದೆ ಎದ್ದು ನಿಲ್ಲುವುದು ಸಾಧ್ಯವಿಲ್ಲವೆಂದು ಶಿವಾನಿಗೆ ಮನವರಿಕೆಯಾಯಿತು. ಆಗ ಆತನು ತನ್ನ ಸೈನಿಕಮಾರ್ಗ ಮತ್ತು ಶೌರ್ಯ ಮಾರ್ಗಗಳನ್ನು ಬಿಟ್ಟು ಓಡತೊಡಗಿದನು. ಹಾಗೂ ಅತ್ಯಂತ ದೀನನಾಗಿ ಸ್ನೇಹ ಬೆಳೆಸುವ ಮಾತನಾಡಹತ್ತಿದನು. ಅತಿ ನಮ್ರತೆಯಿಂದ ವಿನಂತಿ ಪತ್ರವನ್ನು ಬರೆದು, ನಿಷ್ಕಪಟ ಮನದ ಹಾಗೂ ಮುಗ್ಧ ಮನದ ಅಫಜಲಖಾನನಿಗೆ ಕಳಿಸಿದನು. 'ನನ್ನಿಂದಾದ ಅಪರಾಧವನ್ನು ಕ್ಷಮಿಸಬೇಕು. ನಾನು ಬಾದಶಹರ ಚಾಕರಿಯನ್ನೇ ಮಾಡುವೆ, ಮತ್ತು ಅವರ ಆಜ್ಞೆಯಂತೆ ನಡೆಯುತ್ತ ಪುನಃ ದಾಂಡಗಾಯಿಯನ್ನು ಮಾಡುವುದಿಲ್ಲ' ಎಂದು ಅದರಲ್ಲಿ

---

೪. ಶಕೆ ೧೫೭೯ ಆಶ್ವಿನ ವದ್ಯ ೧೨ (೨೭ ಜುಲೈ ೧೬೫೭) ಕಲ್ಯಾಣ, ಭಿವಂಡಿ, ರಾಜೆಯವರು ತೆಗೆದುಕೊಂಡರು-ಜೇಧೆ ಶಕಾವಲಿ ಪು.೧೮

೫. ಶಕೆ ೧೫೮೦ ಚೈತ್ರ ವದ್ಯ ೩ (ಏಪ್ರಿಲ ೧೬೫೮) ಶಿವಾಜಿ ರಾಜೆಯು ರಾಯರಿಗೆ, ಬಂದರು, ವೈಶಾಖ ಮಾಸದಲ್ಲಿ (ಏಪ್ರಿಲ್-ಮೇ ೧೬೫೮) ರಾಜಶ್ರೀ ಶಿವಾಜೀ ರಾಜೆಯವರು ರಾಯರಿಯನ್ನು ತೆಗೆದುಕೊಂಡರು. ಜೇಧೆ ಶಕಾವಲಿ ಪು.೧೮.

ಬರೆದನು. ಅಫಜಲಖಾನನು ಸ್ವಚ್ಛಮನದ ಶೂರನಾಗಿದ್ದನು. ಆದ್ದರಿಂದ ಆ ಕುತಂತ್ರಿಯ ತಂತ್ರಗಳು ಅವನ ಲಕ್ಷ್ಯಕ್ಕೆ ಬರಲಿಲ್ಲ. ಶಿವಾಜಿಯ ಸಿಹಿ ಮಾತುಗಳಿಂದ ಮೋಸ ಹೋದನು. ಅವನ ಮಾತುಗಳಿಗೆ ಒಪ್ಪಿ ಗೆಳೆತನ ಮಾಡಿದನು. ಅನಂತರ ಶಿವಾನು ಅಫಜಲಖಾನನ ಡೇರೆಗೆ ಬಂದು ಅತಿ ನಮ್ರತೆಯಿಂದ ಆತನನ್ನು ಭೆಟ್ಟಿಯಾದನು. ಮನದಲ್ಲಿದ್ದ ಮೋಸವನ್ನು ಹೊರಹಾಕದೆ ಅಫಜಲಖಾನನೊಂದಿಗೆ ವಿನಯವನ್ನು ವ್ಯಕ್ತಪಡಿಸುತ್ತ 'ತಮಗೆ ಮೇಜವಾನಿಯನ್ನು ಕೊಡಬೇಕೆಂದಿರುವೆ ತಾವು ದಯವಿಟ್ಟು ಪೇಠಾ ಜಾವಳಿಯಲ್ಲಿಯ ಪ್ರತಾಪಗಡಕ್ಕೆ ಬರಬೇಕು' ಎಂದು ಆಮಂತ್ರಣ ನೀಡಿದನು. ಆ ದಿನಗಳಲ್ಲಿ ಶಿವಾಜಿಯು ಪ್ರತಾಪಗಡದಲ್ಲಿ ಇರುತ್ತಿದ್ದನು. ಅಫಜಲಖಾನನು ಜಾತಿಯಿಂದ ಮುಸಲ್ಮಾನನು, ಸ್ವಚ್ಛ ಮನದ ಮುಗ್ಧನು ಆದ್ದರಿಂದ ಶಿವಾಜಿಯನ್ನು ತನ್ನವನೆಂದೇ ತಿಳಿದು ಮತ್ತು ಶಿವಾಜಿಯ ಮನದಲ್ಲಿ ಕಪಟವೇನೂ ಇರದೆಂದು ಭಾವಿಸಿ, ತನ್ನೆಲ್ಲ ಸೈನ್ಯವನ್ನು ಕೋಟೆಯ ಹೊರಗೆಯೇ ಇಟ್ಟು, ಹನ್ನೆರಡು ಜನ ಚಾಕರರೊಂದಿಗೆ ಕೋಟೆಯ ಮೇಲೆ ಹೋದನು. ಆ ಠಕ್ಕ ಮತ್ತು ಕಪಟಿ ಶಿವಾನು ಶತ್ರುವನ್ನು ಕೊಲ್ಲಬೇಕೆಂದು ಸಿದ್ಧನಾಗಿ ಹಾಗೆ ವ್ಯವಸ್ಥೆ ಮಾಡಿದ್ದನು. ಅಫಜಲಖಾನನ ಜೊತೆಗೆ ಯಾವ ಸವಾರರೂ, ಸಿಬ್ಬಂದಿಗಳೂ ಇಲ್ಲ, ಆತನೊಬ್ಬನೇ ನಿಷ್ಕಾಳಜಿಯಿಂದ ಬಂದಿದ್ದಾನೆ ಎಂದು ತಿಳಿಯುತ್ತಲೇ, ಅವನ ಮೇಲೆ ಏರಿಹೋಗಿ ತಲವಾರಿನಿಂದ ಹೊಡೆದು ಕೊಂದು ಬಿಟ್ಟನು. ಅಫಜಲಖಾನನು ಕೋಟೆಯ ಮೇಲೆ ಬರುತ್ತಲೇ ಕೋಟೆಯ ಬಾಗಿಲನ್ನು ಮುಚ್ಚಬೇಕೆಂದು ಬಾಗಿಲದ ಪಹರೆದಾರರಿಗೆ ಮೊದಲೇ ಸೂಚನೆ ಕೊಟ್ಟಿದ್ದನು. ಆ ಸೂಚನೆಯಂತೆ ಬಾಗಿಲನ್ನು ಮುಚ್ಚಲಾಗಿತ್ತು. ಅಫಜಲಖಾನನ ಸೈನ್ಯವೆಲ್ಲ ಕೋಟೆಯ ಕೆಳಗಡಯೇ ಇತ್ತು. ತನ್ನ ಧಣಿಯ ಕೊಲೆಯಾಗಿದೆ ಎಂದು ತಿಳಿದ ತಕ್ಷಣ ಒಬ್ಬರ ಹಿಂದೆ ಒಬ್ಬರಂತೆ ಆ ಸೈನ್ಯ ಓಡಿ ಹೋಯಿತು. ಈ ಪ್ರಕರಣವು ಸನ್ ೧೦೭೦ (ಕ್ರಿ.ಶ. ೧೬೫೯)ರಲ್ಲಿ ಘಟಿಸಿತು.[೧]

### ೧೨. *ಆಲೀ ಆದಿಲಶಹನು ಶಿವಾನನ್ನು ಶಿಕ್ಷಿಸಲು ಮತ್ತೆ ಸಿದ್ದೀ ಜವಾಹರ (ಜೋಹಾರ)ನನ್ನು ಕಳಿಸಿದ್ದು :*

ಈ ಸುದ್ದಿ ತಿಳಿಯುತ್ತಲೇ ಅಲೀ ಆದಿಲಶಹನು ಅತ್ಯಂತ ಸಿಟ್ಟಾದನು. ಪ್ರಾಮಾಣಿಕ ನೌಕರನಾಗಿದ್ದ ಮತ್ತು ರಾಜ್ಯದ ಕಲ್ಯಾಣವನ್ನು ಬಯಸುತ್ತಿದ್ದ ಅಫಜಲಖಾನನನ್ನು ಮೋಸದಿಂದ ಕೊಂದನೆಂಬುದನ್ನು ಕೇಳಿ ಬಹಳ ಶೋಕಪಟ್ಟನು. ಧಣಿಯ ವಿರುದ್ಧ ಎದ್ದುನಿಂತ, ಕೃತಘ್ನ, ಬಂಡುಖೋರ ಶಿವಾಜಿಯ ಮೇಲೆ ಬಹಳ ಸಿಟ್ಟಾದನು. ಈ ವಿಷಯದಲ್ಲಿ ಶಿವಾನ ವಿರುದ್ಧ ಸೇಡು ತೀರಿಸಿ ಕೊಳ್ಳಬೇಕೆಂಬ ಇರಾದೆಯನ್ನು ಮಾಡಿದನು. ತನ್ನ ಸೇವಕರಲ್ಲಿ ಧೈರ್ಯವಂತನೊಬ್ಬನನ್ನು ಇದಕ್ಕಾಗಿ ನಿಯಮಿಸಬೇಕೆಂದು ನಿರ್ಧರಿಸಿದನು. ಬಾದಶಹನು ಹೀಗೆ ಯೋಜಿಸುತ್ತಿದ್ದಂತೆ, ಅದೇ ಸಮಯದಲ್ಲಿ 'ಮಹಮದಪುರ ಕರನಾಲ' (ಕರ್ನೂಲ)ದಲ್ಲಿರುತ್ತಿದ್ದ, ತುಂಬ ಕೃತಘ್ನನಾಗಿದ್ದ ಸಿದ್ದಿ ಜೋಹಾರನು ಬಾದಶಹನಿಗೆ ಒಂದು ವಿನಂತಿ ಪತ್ರವನ್ನು ಬರೆದು 'ನಾನು ತಮ್ಮ ಉಪ್ಪನ್ನು ತಿಂದು ಬೆಳೆದಿದ್ದೇನೆ. ಬಹಳ ಹಳೆಯ ಚಾಕರನಿದ್ದೇನೆ. ಆದರೂ ಕೆಟ್ಟ ನಡತೆಯ ಜನರ ಮತ್ತು ಕುತಂತ್ರಿಗಳ ಕಲಿಕೆಯ ಮಾತುಗಳಿಂದ ನಾನು ಇಂದಿನವರೆಗೂ

---

೧. ಶಕೆ ೧೫೮೧ ಮಾರ್ಗಶೀರ್ಷ ಶುದ್ಧ ೭ ಸಪ್ತಮಿ ಗುರುವಾರ ಎಂಟನೆಯ ತಾಸಿಗೆ (೧೦, ನವಂಬರ ೧೬೫೯) ಅಫಜಲಖಾನನು ಪ್ರತಾಪಗಢದ ಮೇಲೆ ಭೆಟ್ಟಿಗೆ ಬಂದಿದ್ದನು. ಅಲ್ಲಿ ಅವನನ್ನು ಕೊಲ್ಲಲಾಯಿತು – ಜೇಧೆಶಕಾವಲಿ ಪು.೨೦.

ತಪ್ಪು ನಡೆದುಕೊಂಡಿದ್ದೇನೆ. ನಾನು ತಮ್ಮೊಂದಿಗೆ ಹೇಗೆ ನಡೆದುಕೊಳ್ಳಬೇಕಾಗಿತ್ತೋ ಹಾಗೆ ನಡೆದುಕೊಂಡಿಲ್ಲ. ಆದರೆ ಇಂದು ಪಶ್ಚಾತ್ತಾಪವಾಗಿದೆ. ನನ್ನನ್ನು ಕ್ಷಮಿಸಬೇಕು. ನನ್ನ ಹಣೆಯ ಮೇಲಿದ್ದ ಕೃತಘ್ನತೆಯ ಕಲೆಯನ್ನು ಅಳಿಸಿಕೊಳ್ಳಬೇಕೆಂದಿದ್ದೇನೆ. ತಮ್ಮ ಆಜ್ಞೆಯಾದರೆ ಸಮಕ್ಷಮ ತಲೆಯನ್ನೇ ಕಾಲು ಮಾಡಿಕೊಂಡು ಬಂದು ತಮ್ಮ ಸೇವೆಗೆ ಹಾಜರಾಗುವೆ. ತಮ್ಮ ಚಾಕರಿಯನ್ನು ಮಾಡಿಕೊಂಡು ಉಳಿದ ಆಯುಷ್ಯವನ್ನು ಸರಕಾರದ ಸೇವೆಯಲ್ಲಿ ಖರ್ಚುಮಾಡುವೆ. ರಾಜ್ಯದ ಕಲ್ಯಾಣಕ್ಕಾಗಿ ಆಜೀವ ಪರ್ಯಂತ ದುಡಿಯುವೆ. ಬೇಕಿದ್ದರೆ ಒಂದು ದೊಡ್ಡ ಯುದ್ಧ ಪ್ರಸಂಗದಲ್ಲಿ ನನ್ನನ್ನು ನಿಯಮಿಸಿರಿ. ನಾನು ಆ ಸ್ವಾಮಿಸೇವೆಯ ಕೆಲಸದಲ್ಲಿ ಪ್ರಾಣಾರ್ಪಣೆ ಹೇಗೆ ಮಾಡಬಹುದೆಂಬುದನ್ನು ಮಾಡಿ ತೋರಿಸುವೆ. ಸರಕಾರದಲ್ಲಿ ಎಲ್ಲ ಸೇವಕರೂ ಇದ್ದಾರೆ, ಅವರಲ್ಲಿ ನಾನು ಹೊಸಗೌರವದ ವೇತನವನ್ನು ಪಡೆದುಕೊಳ್ಳುವೆ' ಎಂದು ಬೇಡಿಕೊಂಡಿದ್ದನು. ಆ ಪತ್ರವನ್ನು ಬಾದಶಹನು ಓದಿ ನೋಡಿದನು. ಪತ್ರದಲ್ಲಿಯ ಅಭಿಪ್ರಾಯವನ್ನು ತಿಳಿದುಕೊಂಡು ಹೀಗೆ ಉತ್ತರ ಬರೆದನು. 'ನಮ್ಮ ಮೇಲೆ ಅಲ್ಲಾನ ಕೃಪೆ ಇದೆ. ಇನ್ನೊಬ್ಬರು ಯಾರಾದರೂ ನಮಗೆ ಸಹಾಯ ಮಾಡಿದರೆ ಮಾತ್ರ ನಮ್ಮ ಕೆಲಸ ಆಗುತ್ತದೆಂದೇನೂ ಇಲ್ಲ. ನಮ್ಮ ಮನಸ್ಸು ಯಾವಾಗಲೂ ಕ್ಷಮಾಶೀಲವಾಗಿದೆ. ಕೇವಲ ಇನ್ನೊಬ್ಬರ ಅನ್ಯಾಯದ ಮೇಲೆಯೇ ನಮ್ಮ ದೃಷ್ಟಿ ಇರುವುದಿಲ್ಲ. ಹೀಗೆ ಫಾರ್ಸಿ ವಾಕ್ಯವೂ ಒಂದಿದೆ. ಅದರ ಅರ್ಥ ಹೀಗಿದೆ : 'ಅಪರಾಧಮಾಡಿದ್ದರೂ ಅದಕ್ಕೆ ಕ್ಷಮೆ ಬೇಡಿ ಪ್ರಭುವಿನ ಹತ್ತಿರ ಬಂದರೆ ಸಾಕು, ಆ ಎಲ್ಲ ಅನ್ಯಾಯಗಳನ್ನು ಕ್ಷಮಿಸಿದ್ದಾರೆಂದೇ ತಿಳಿಯಬೇಕು" ಇನ್ನೊಂದು ಅರಬ್ಬೀ ವಾಕ್ಯದ ಅರ್ಥ ಹೀಗಿದೆ : "ಅಪರಾಧ ಘಟಿಸಿದ್ದರೂ ಪೂರ್ತಿ ಪಶ್ಚಾತ್ತಾಪ ಪಟ್ಟರೆ ಅಪರಾಧ ಮಾಡಿಯೇ ಇಲ್ಲವೆಂಬ ರೀತಿಯಲ್ಲಿ ಅಲ್ಲಾ ಕ್ಷಮಿಸುತ್ತಾನೆ". ಒಂದು ವೇಳೆ ನೀನು ದಾರಿಗೆ ಬಂದಿದ್ದರೆ, ಇತ್ತ ಕಡೆಯಿಂದಲೂ ನಿನ್ನ ಬಗ್ಗೆ ಕಲ್ಯಾಣವಾಗಬೇಕೆಂಬುದರಲ್ಲಿ ಯಾವ ಆತಂಕವೂ ಇರುವುದಿಲ್ಲ. ಆದ್ದರಿಂದ ಮನದಲ್ಲಿ ಯಾವ ಸಂಶಯವನ್ನೂ ಹಿಡಿಯದೆ ನೀನು ಪ್ರಭುಗಳ ಹತ್ತಿರ ಬರಬೇಕು. ಈ ಸರಕಾರದಿಂದ ನೀನು ನಿನ್ನ ಕಲ್ಯಾಣವನ್ನು ಮಾಡಿಕೊಳ್ಳು. ಪಾರ್ಸಿ ವಾಕ್ಯದ ಅರ್ಥ ಹೇಳುವಂತೆ, "ಬಾ, ಹೊರಟು ಬಾ ಹೇಗಿದ್ದೀಯೋ ಹಾಗೇ ಬಾ. ಒಂದು ವೇಳೆ ಹಿಂದೂ ಅಥವ ಗಬ್ರನಾಗಿದ್ದರೂ ಬಾ. ಗಬ್ರ ಎಂದರೆ ಪಾರಸಿಕರಲ್ಲಿಯ ಒಂದು ಜಾತಿ. ಆ ಜಾತಿಯ ಜನರು ಅಗ್ನಿಪೂಜೆಯನ್ನು ಮಾಡುತ್ತಾರೆ. ಅವರ ಮನೆಯಲ್ಲಿ ಅಗ್ನಿಹೋತ್ರವಿರುತ್ತದೆ. ಅಂಥವನಿದ್ದರೂ ಬಾ. ಅಲ್ಲದೆ "ಈ ನಮ್ಮ ರಾಜ್ಯದಲ್ಲಿ ಯಾರೂ ನಿರಾಶರಾಗಿ ಹೋಗಬೇಕಾಗಿಲ್ಲ. ನೂರು ಸಲ ಅಪರಾಧ ಮಾಡಿದ್ದರೂ ಬಾ". ಇದರಲ್ಲಿಯ ತಾತ್ಪರ್ಯವೆಂದರೆ, "ಈ ಆಜ್ಞೆ ಮುಟ್ಟಿದ ತಕ್ಷಣ ಹೇಗಿದ್ದೀಯೋ ಹಾಗೇ ಹೊರಟು ಬಂದು ಪ್ರಭುಗಳ ಹತ್ತಿರ ಹಾಜರಾಗಬೇಕು" ಎಂದು ಬರೆದು ಕಳಿಸಿದನು.

ಬಾದಶಹನ ಆಜ್ಞಾ ಪತ್ರ ಮುಟ್ಟುತ್ತಿದ್ದಂತೆ ಸಿದ್ದಿ ಜೋಹಾರನು ಅತಿ ಸಂತೋಷದಿಂದ, ಕರ್ನೂಲಿನಿಂದ ಹೊರಟು ವಿಜಾಪುರಕ್ಕೆ ಬಂದು ಬಾದಶಹನನ್ನು ಕಂಡನು. ಬಹಳ ಬಕ್ಷೀಸು ಇನಾಮುಗಳನ್ನು ಬಾದಶಹನಿಂದ ಸ್ವೀಕರಿಸಿದನು. ಬಾದಶಹನು ಅವನ ಹಿಂದಿನ ಎಲ್ಲ ಅಪರಾಧಗಳನ್ನು ಕ್ಷಮಿಸಿದನು. ಅನಂತರ ಬಾದಶಹನು ಆಜ್ಞೆ ಮಾಡುತ್ತ "ಶಿವಾ ದುರ್ನಡತೆಯಿಂದ ಧಣಿಯ ವಿರುದ್ಧ ಎದ್ದು ನಿಂತು, ಅಮರ್ಯಾದೆಯಿಂದ ನಡೆಯುವ ಧ್ವಜವನ್ನೇ ಹಾರಿಸಿದ್ದಾನೆ. ಆದ್ದರಿಂದ ಅವನನ್ನು ಪೂರ್ತಿಯಾಗಿ ಶಿಕ್ಷಿಸಲು ಯಾರನ್ನಾದರೂ ಕಳಿಸಬೇಕೆಂದು ಬಯಕೆಯಾಗಿದೆ. ನಮ್ಮ ಎಲ್ಲ ಚಾಕರ ಜನರೂ 'ನಾನು-ಹೋಗುತ್ತೇನೆ, ನಾನು ಹೋಗುತ್ತೇನೆ. ನನ್ನಿಂದಲೇ ಈ ಕೆಲಸ ಆಗಬೇಕೆಂದು ಬಯಸುತ್ತಿದ್ದಾರೆ'

ಆದರೆ ನಮ್ಮ ಇಚ್ಛೆ ನಿನ್ನಿಂದ ಈ ಕೆಲಸ ಆಗಬೇಕೆಂದು ಇದೆ. ಶಿವಾನ ಪಾರುಪತ್ಯ ಮಾಡುವ ಕೆಲಸವನ್ನು ನೀನು ಮಾಡಿ ತೋರಿಸು. ಈ ಕೆಲಸವನ್ನು ಮಾಡಿ ತೋರಿಸಿದೆಯಾದರೆ ನಿನ್ನ ಹಣೆಯ ಮೇಲಿರುವ ಅಪಕೀರ್ತಿಯ ಮತ್ತು ಕೃತಘ್ನತೆಯ ಕಲೆ ದೂರವಾಗುತ್ತದೆ" ಎಂದು ಆಜ್ಞೆ ಮಾಡಿದನು. ನಂತರ ಸಿದ್ದಿ ಜೋಹಾರನಿಗೆ ವಸ್ತ್ರಗಳನ್ನು ನೀಡಿ 'ಸಲಾಬತಖಾನ' ಎಂಬ ಬಿರುದನ್ನು ಕೊಟ್ಟು ಶಿವಾನನ್ನು ಶಿಕ್ಷಿಸಲು ಕಳಿಸಿದನು. ಸಿದ್ದಿ ಜೋಹಾರ ಸಲಾಬತಖಾನನು ಬಾದಶಹನ ಆಜ್ಞೆಯಂತೆ ಶತ್ರುವಿನ ಪಾರುಪತ್ಯ ಮಾಡಲು ಮತ್ತು ಕೋಟೆಯನ್ನು ತೆಗೆದುಕೊಳ್ಳಲು ಸೈನ್ಯವನ್ನು ಸಿದ್ಧ ಪಡಿಸಿಕೊಂಡು ಕೆಲವು ದಿನಗಳಲ್ಲಿ ಅಲ್ಲಿಗೆ ಹೋಗಿ ಮುಟ್ಟಿದವನು.[೧] ತನ್ನ ಕುದುರೆಗಳ ದೊಡ್ಡ ಹೆಜ್ಜೆಗಳ ಸಪ್ಪಳದಿಂದ ಮತ್ತು ಶಸ್ತ್ರಗಳ ಖಡಖಡಾಟದಿಂದ ಶಿವಾಜಿಯನ್ನು ಗಾಬರಿಗೊಳಿಸಿದನು. ಶಿವಾಜಿಯ ಸೈನ್ಯವು ಸಲಾಬತಖಾನನ ಸೈನ್ಯದ ಮುಂದೆ ನಿಲ್ಲಿದೆ ಗಾಬರಿಯಾಗಿ ಓಡಿ ಹೋಗಹತ್ತಿತು. ಶಿವಾಜಿಯ ಕಡೆಯ ಶೂರ ಮಂಡಳಿಯು ಒಂದೊಂದು ಕಡೆಗೆ ಓಡಿ ಹೋಗುತ್ತ ಚೆಲ್ಲಾಪಿಲ್ಲಿಯಾಯಿತು. ಆ ಜನರು ಪರ್ವತದ ಗುಹೆಗಳಲ್ಲಿ, ಅರಣ್ಯಗಳಲ್ಲಿ ಹೊಕ್ಕರು. ದುರ್ನಡತೆಯಿಂದ ನಡೆಯುತ್ತಿದ್ದ ಶಿವಾನು ಈ ತನ್ನ ಸ್ಥಿತಿಯನ್ನು ನೋಡಿ, ಇನ್ನು ಸಲಾಬತಖಾನನ ಮುಂದೆ ತನಗೆ ನಿಲ್ಲುವ ಸಾಮರ್ಥ್ಯವಿಲ್ಲವೆಂದು ತಿಳಿದನು. ಪನ್ಹಾಳ ಕೋಟೆಯ ನಾಯಿಕವಾಡಿಗಳ ಸ್ನೇಹವನ್ನು ಮಾಡಿಕೊಂಡು ಮತ್ತು ಆ ನಾಯಿಕವಾಡಿ ಜನರಿಗೆ ಬಕ್ಷೀಸಿನ ಆಶೆ ತೋರಿಸಿ ತನ್ನಂತೆ ಮಾಡಿಕೊಂಡು, ಅಲ್ಲಿಯೇ ಆಶ್ರಯ ಪಡೆದು ಇರಹತ್ತಿದನು. ಕೋಟೆಯ ಸಮರ್ಥ ಆಶ್ರಯ ದೊರೆತ ಮೇಲೆ ನಿರ್ಭಯನಾಗಿ ಕೋಟೆಯ ಮೇಲಿನಿಂದ ತೋಫುಗಳನ್ನು ಮತ್ತು ಬಂದೂಕುಗಳನ್ನು ಹಾರಿಸಿ ಯುದ್ಧ ಪ್ರಾರಂಭಿಸಿದನು. ಪನ್ಹಾಳ ಕೋಟೆ ಎಲ್ಲ ಕೋಟೆಗಳಿಗಿಂತ ಮಜಬೂತಾಗಿದ್ದು ಹೆಸರುವಾಸಿಯೂ ಆಗಿದೆ. ಯಾರ ಹಲ್ಲೆಯೂ ಆ ಕೋಟೆಯ ಮೇಲೆ ವಿಜಯ ಸಾಧಿಸಿಲ್ಲ. ಆ ಕೋಟೆಯ ಮೇಲೆ ಯಾರ ಸೈನ್ಯವೂ ಫಲ ಪಡೆದಿಲ್ಲ.

### *೧೩. ಸಲಾಬತಖಾನನ ಪನ್ಹಾಳಕೋಟೆಯ ಹಲ್ಲೆ ಮತ್ತು ಪುನಃ ಶಿವಾನು ತನ್ನ ಠಕ್ಕ ವಿದ್ಯೆಯಿಂದ ಸಲಾಬತಖಾನನನ್ನು ತನ್ನ ಕಡೆ ಬರಮಾಡಿಕೊಂಡದ್ದು :*

ಶಿವಾನು ಒಂದೇ ಸ್ಥಳದಲ್ಲಿ ನಿಂತು ಯುದ್ಧ ಮಾಡುವುದಿಲ್ಲವೆಂದು ಸಲಾಬತಖಾನನಿಗೆ ಕಂಡು ಬಂದಿತು. ಕೋತಿಗಳ ಹಾಗೆ, ಪಕ್ಷಿಗಳ ಹಾಗೆ ಗಿಡದಿಂದ ಗಿಡಕ್ಕೆ ಜಗಿಯುತ್ತಾನೆ. ಇಲ್ಲಿಂದ ಅಲ್ಲಿಗೆ ಓಡಿಹೋಗುತ್ತಾನೆ. ಒಂದು ಕೋಟೆಯನ್ನು ಬಿಟ್ಟು ಇನ್ನೊಂದು ಕೋಟೆಯನ್ನು ಹತ್ತಿ, ಅಲ್ಲಿ ಆಶ್ರಯ ಪಡೆಯುತ್ತಾನೆ. ಆದುದರಿಂದ ಆತ ಓಡಿ ಹೋಗುವ ಮಾರ್ಗವನ್ನೇ ಮುಚ್ಚಬೇಕೆಂಬ ವಿಚಾರದಲ್ಲಿ ಸಲಾಬತಖಾನನಿದ್ದನು. ಅಷ್ಟರಲ್ಲಿ ಆತ ಪನ್ಹಾಳ ಕೋಟೆಯ ನಾಯಕವಾಡಿ ಜನರೊಂದಿಗೆ ಸ್ನೇಹ ಬೆಳಸಿ, ಅಲ್ಲಿ ಗಟ್ಟಿಮುಟ್ಟಾಗಿ ಕುಳಿತು ಬಿಟ್ಟಿರುವುದು ಸಲಾಬತಖಾನನಿಗೆ ಗೊತ್ತಾಯಿತು. ಆಗ ಸಲಾಬತಖಾನನು ಅತಿ ಶೀಘ್ರದಲ್ಲಿ ಪನ್ಹಾಳ ಕೋಟೆಯ ಮೇಲೆ ಹಲ್ಲೆ ಮಾಡಿದನು. ಲೋಹಾರನ ಗಿರ್ಕಿಯ ಹಾಗೆ ಆ ಕೋಟೆಯನ್ನು ಸುತ್ತುವ ಬರು-ಹೋಗುವ ಮಾರ್ಗವನ್ನು ಮುಚ್ಚಿ ಕೋಟೆಯನ್ನು ಹತ್ತುವ ಪ್ರಯತ್ನ

---

೧. ಶಕೆ ೧೫೮೨ ಚೈತ್ರ ಶುದ್ಧ ೧ (೨, ಮಾರ್ಚ ೧೬೬೦) ರಾಜಶ್ರೀ ಶಿವಾಜೀ ರಾಜೆ ತಿರುಗಿ ಪನ್ಹಾಳಾ ಕೋಟೆಗೆ ಬಂದನು. ಅನಂತರ ಸಿದ್ದಿ ಜೋಹಾರನು ಪನ್ಹಾಳಾ ಕೋಟೆಗೆ ಮುತ್ತಿಗೆ ಹಾಕಿದನು. ಜೇಧೆ ಪು.೨೧

ಮಾಡಹತ್ತಿದನು. ಶಿವಾನಿಗೆ ಕಠಿಣ ಪ್ರಸಂಗ ಬಂದಿತೆಂಬುದು ತಿಳಿಯಿತು. ನಾನಾ ಪ್ರಕಾರದ ಠಕ್ಕು ವಿದ್ಯೆಗಳಿಂದ ಆಟವಾಡುವ ಶಿವಾ, ಅದನ್ನು ಇಲ್ಲಿಯೂ ಪ್ರಾರಂಭಿಸಿದನು. ಇಬ್ಬರೂ ಪರಸ್ಪರ ಗೆಳೆಯರಾಗಿ ಇರೋಣ ಎಂಬ ಭಾವನೆಯನ್ನು ತೋರಿಸಿ, ಕಕ್ಕುಲತೆಯ ಪತ್ರವನ್ನು ಬರೆದು ಸಲಾಬತಖಾನನಿಗೆ ಕಳಿಸಿದನು. ಆ ಪತ್ರದಲ್ಲಿಯ ವಿಷಯದ ಸಾರಾಂಶವೆಂದರೆ "ನಾನು ನಿನ್ನ ಮಿತ್ರನಾಗಿದ್ದೇನೆ. ನನ್ನ ಮೇಲೆ ಮೆಹರಬಾನಗಿ ಮಾಡಬೇಕು. ನನ್ನ ಪೂರ್ತಿ ಇಚ್ಛೆಯೇ ಇದಾಗಿದೆ. ಈ ವಿಷಯದಲ್ಲಿ ವಿಸ್ತಾರವಾಗಿ ಎಷ್ಟಂತ ಬರೆಯುವುದು? ನನ್ನ ಮನಸ್ಸಿನ ಇಚ್ಛೆಯ ಹಾಗೆ ತಾವು ದೈವಯೋಗದಿಂದ ಈ ಪ್ರದೇಶದಲ್ಲಿ ಬಂದಿರುವಿರಿ. ಇದೊಂದು ದೊಡ್ಡ ಲಾಭವೇ ಆಗಿದೆ. ಆದ್ದರಿಂದ ನಾನು ತಮ್ಮೆದುರಿಗೆ ಓಡಿ ಬಂದು, ದರ್ಶನ ಪಡೆದು, ತಮ್ಮ ಕೃಪಾ ಉದ್ಯಾನದಲ್ಲಿಯ ಮನೋರಥ ಪುಷ್ಪಗಳನ್ನು ಪಡೆಯಬೇಕೆಂದು ನನ್ನ ಮನಸ್ಸು ಹವಣಿಸುತ್ತಿದೆ. ಆದರೆ ನನ್ನ ಕಾಲಲ್ಲಿ ತಮ್ಮ ಭಯದ ಬೇಡಿಗಳು ಇಷ್ಟೊಂದು ಗಟ್ಟಿಯಾಗಿ ಬಿದ್ದಿವೆಯಲ್ಲ ತಮ್ಮ ಭಯದಿಂದ ನಡೆದು, ತುಸು ಕೂಡ ಅಲುಗಾಡುವ ಸಾಮರ್ಥ್ಯ ನನಗಿಲ್ಲ. ಆದ್ದರಿಂದ ತಮ್ಮ ಭೆಟ್ಟಿಯ ಲಾಭ ನನಗೆ ಆಗಿಲ್ಲ. ಒಂದು ವೇಳೆ ಕೃಪೆ ಮಾಡಿ ನನ್ನ ಅಪರಾಧವನ್ನು ಕ್ಷಮಿಸಿದರೆ, ನನಗೆ ತಮ್ಮ ಹೊರತು ಬೇರೆ ಯಾರ ಆಧಾರ, ಆಶ್ರಯವೂ ಇಲ್ಲವಾಗಿ ನಿರ್ಮಲ ಮನಸ್ಸಿನಿಂದ, ಪೂರ್ಣ ಸಂತೋಷದಿಂದ ತಮ್ಮ ಹತ್ತಿರ ಬರಲು ನನಗೆ ಅನುಮತಿ ನೀಡಿದರೆ, ಎರಡು ಮೂರು ಜನರೊಂದಿಗೆ ತಮ್ಮ ಸೇವೆಯಲ್ಲಿ ಹಾಜರಾಗುವ ಇಚ್ಛೆ ನನಗಿದೆ. ಆಗ ಮನದಲ್ಲಿಯ ಎಲ್ಲ ವಿಷಯಗಳನ್ನು ತಮ್ಮ ಮುಂದೆ ತೋಡಿಕೊಳ್ಳುವೆ" ಎಂಬುದಾಗಿ ಪತ್ರ ಬರೆದನು.

ಸಲಾಬತಖಾನನಾದರೋ ಮೂಲತಃ ನೀಚ ಉತ್ಪತ್ತಿಯ ಮತ್ತು ಸಡಿಲು ಮನಸ್ಸಿನ ವ್ಯಕ್ತಿಯಾಗಿದ್ದನು. ಆದ್ದರಿಂದ ಬಾದಶಹನೊಂದಿಗೆ ಯಾವ ಕರಾರನ್ನು ಮಾಡಿ ಶಿವಾಜಿಯ ಮೇಲೆ ಏರಿ ಬಂದಿರುವೆನೆಂಬುದರ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ಸ್ನೇಹದ ಪತ್ರ ಶಿವಾಜಿಯಿಂದ ಬಂದುದನ್ನು ಗಮನಿಸಿ ಮನಸ್ಸಿನಲ್ಲಿ ತುಂಬ ಸಂತೋಷಪಟ್ಟನು. ತನ್ನ ಧಣಿ ಏನು ಬೋಧನೆ ಮಾಡಿದ್ದಾನೆ ಮತ್ತು ಯಾವ ರೀತಿಯ ತಾಕೀದನ್ನು ಮಾಡಿದ್ದಾನೆ ಎಂಬ ಮಾತುಗಳನ್ನು ಮರೆತು ಬಿಟ್ಟನು. ಅರಬ್ಬಿಯಲ್ಲಿ ಒಂದು ಮಾತಿದೆ 'ಪ್ರತಿಯೊಂದು ಪದಾರ್ಥವು ತನ್ನ ಜಾತಿಯ ಪದಾರ್ಥದಲ್ಲಿ ಕೂಡಿಕೊಂಡು ಅದರಂತೆಯೇ ವಿಚಾರಿಸುತ್ತದೆ'. ಅದರಂತೆ ಸಲಾಬತಖಾನನು ಶಿವಾಜಿಯೊಂದಿಗೆ ಮನಃಪೂರ್ವಕ ಕೂಡಿಕೊಂಡನು. ಶಿವಾಜಿಯ ಪತ್ರಕ್ಕೆ ಉತ್ತರ ಬರೆದು "ಬಾಹ್ಯದಲ್ಲಿ ಬಾದಶಹನ ಆಜ್ಞೆಯನ್ನು ಮನ್ನಿಸಿ. ನಿಮ್ಮನ್ನು ನಾಶಮಾಡಿ ಪೂರ್ತಿ ಶಿಕ್ಷಿಸಬೇಕೆಂದೇ ಇಲ್ಲಿಗೆ ಬಂದಿದ್ದೇನೆ. ಆದರೆ ನನ್ನ ಮನದಲ್ಲಿ ನಿಮ್ಮನ್ನು ಶಿಕ್ಷಿಸಬೇಕೆಂಬುದಿಲ್ಲ. ಒಂದು ವೇಳೆ ನೀವು ಗೆಳೆತನಮಾಡಿ, ನಾವಿಬ್ಬರೂ ಪರಸ್ಪರ ಸ್ನೇಹದಿಂದ ಇರುವುದೆಂದೇ ಕರಾರನ್ನು ಗಟ್ಟಿ ಮಾಡಿದರೆ ಉತ್ತಮ. ಆ ಕರಾರಿನಂತೆ ಪ್ರತಿಯೊಂದು ಕೆಲಸದಲ್ಲಿ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಯಾವೊಂದೂ ಭೇದ ಮಾಡದೆ ನಡೆದುಕೊಳ್ಳುತ್ತೇನೆ. ನಿಮ್ಮ ಕೆಲಸಗಳಿಗೆ ಸಲಹೆ ಕೊಡುವಲ್ಲಿ ಮತ್ತು ನಿಮ್ಮ ಮನಸ್ಸಿನ ಇಚ್ಛೆ ಪೂರೈಸುವಲ್ಲಿ ನನ್ನ ಶಕ್ತಿ ಇರುವವರೆಗೂ ನಿಮಗೆ ಧಕ್ಕೆಯಾಗದಂತೆ ಮಾಡುವೆ, ನಿಮ್ಮ ಮೇಲೆ ಎಂದೂ ಸಂಕಟ ಬರದಂತೆ ನೋಡಿಕೊಳ್ಳುವೆ. ನನ್ನ ಮನದಲ್ಲೂ ನಿಮ್ಮ ಭೆಟ್ಟಿಯಾಗಬೇಕೆಂದು ನಖಶಿಖಾಂತ ಬಯಕೆ ಇದೆ. ನಮ್ಮ ನಿಮ್ಮ ಸಮಕ್ಷಮ ಮಾತುಕತೆಯಾಗಲಿ ಎಂದು ನನಗೂ ಬಹಳ ಇಚ್ಛೆ ಇದೆ. ನೀವು ನಮ್ಮ ಡೇರೆಗೆ ಬರಬೇಕು" ಎಂಬುದಾಗಿ ಉತ್ತರ ಬರೆದು ಕಳಿಸಿದನು. ಶಿವಾ ಈ ಉತ್ತರವನ್ನು ಓದಿ ನೋಡಿ, ತುಂಬ ಸಂತೋಷ ಪಟ್ಟನು. ಹಾಗೂ ತನ್ನ ಆಟದ ಮಂತ್ರ ಸಲಾಬತಖಾನನಿಗೆ ನಟ್ಟಿದೆ,

ಶತ್ರುವಿನ ಬೇಟೆ ಬಲೆಯಲ್ಲಿ ಬಿದ್ದಿದೆ ಎಂದುಕೊಂಡನು. ಮರುದಿನ ಮಧ್ಯರಾತ್ರಿಯಾದನಂತರ ಇಬ್ಬರು ಮೂವರು ತನ್ನ ಖಾಸಾ ಮಂಡಳಿಯವರನ್ನು ಕರೆದುಕೊಂಡು ಕೋಟೆಯಿಂದ ಕೆಳಗೆ ಇಳಿದು ಸಲಾಬತಖಾನನ ಭೆಟ್ಟಿಯಾದನು. ಸಲಾಬತಖಾನನೂ ಶಿವಾಜಿಯನ್ನು ತುಂಬ ಆದರದಿಂದ ಬರಮಾಡಿಕೊಂಡನು. ಬಹಳ ಸಂತೋಷದಿಂದ, ನಿರ್ಮಳ ಮನಸ್ಸಿನಿಂದ ಸಭೆ ಮಾಡಿದನು. ಉಭಯತರೂ ಸ್ನೇಹದಿಂದ ಕುಳಿತರು. ಪರಸ್ಪರರು ಒಬ್ಬರೊಬ್ಬರ ಪಕ್ಷ ಹಿಡಿದು ಅತಿ ಸ್ನೇಹದಿಂದ ವರ್ತಿಸುವಂತೆ ಕರಾರು ಪತ್ರ, ಪ್ರತಿಜ್ಞೆ ಹಾಗೂ ತಾಕೀದುಗಳನ್ನು ಬಹಳ ಗಟ್ಟಿಯಾಗಿ ನಿರ್ಧರಿಸಿದರು. ಶಿವಾನು ಅದೇ ರಾತ್ರಿ ಅಲ್ಲಿಂದ ಹೊರಟು ತಿರುಗಿ ಪನ್ಹಾಳ ಕೋಟೆಯ ಮೇಲೆ ಹತ್ತಿ ಬಂದನು. ಗುಪ್ತಚಾರರಿಗೆ ಈ ವಿಷಯ ಗೊತ್ತಾಯಿತು. ಅವರಿಂದ ಈ ಸುದ್ದಿ ತಿಳಿಯುತ್ತಲೆ ಆದಿಲಶಹ ಬಹಳ ಚಿಂತಿತನಾಗಿ ಅತ್ಯಂತ ಕ್ರೋಧಾಯಮಾನನಾದನು. ಈ ಕೃತಘ್ನತೆಯ ಬಗ್ಗೆ ಮತ್ತು ಧಣಿಯ ವಿರುದ್ಧ ನಿಂತ ಬಗ್ಗೆ ಬಹಳ ಸಿಟ್ಟಾಗಿ ತಾನೇ ಸ್ವತಃ ಆ ಉಭಯತರ ವಿರುದ್ಧ ಸೇಡು ತೀರಿಸಿಕೊಳ್ಳುವ ಇರಾದೆಯನ್ನು ಮಾಡಿ, 'ನಾವು ಸ್ವತಃ ಅವರನ್ನು ಶಿಕ್ಷಿಸಲು ಹೊರಡದ ಹೊರತು ಈ ಉಭಯತರು ಹೊತ್ತಿಸಿದ ಬಂಡಾಯದ ಬೆಂಕಿ ಶಾಂತವಾಗುವುದಿಲ್ಲ. ನಾವು ಸ್ವತಃ ಹೋಗದ ಹೊರತು ಈ ಬಂಡು ನಿಲ್ಲುವುದಿಲ್ಲ' ಎಂದು ಆಜ್ಞೆ ಹೊರಡಿಸಿದನು.

### ೧೫. *ಪನ್ಹಾಳ ಕೋಟೆಯನ್ನು ತೆಗೆದುಕೊಳ್ಳಲು ಮಿರಜದ ವರೆಗೆ ಅಲಿ ಆದಿಲಶಹನ ಆಗಮನ ಮತ್ತು ಪನ್ಹಾಳ ವಿಜಯ :*

ಅಲೀ ಆದಿಲಶಹನು ಅಲ್ಲಾನ ಕೃಪೆಯಿಂದ ಮತ್ತು ತನ್ನ ಉತ್ತಮ ದೈವದ ಮೇಲೆ ಭರವಸೆಯನ್ನಿಟ್ಟು ತಕ್ಷಣ ಹತ್ತಿರವಿದ್ದ ಸೈನ್ಯವನ್ನು ತೆಗೆದುಕೊಂಡು ಅಮೀರ ಜನರೊಂದಿಗೆ ವಿಜಾಪುರದಿಂದ ಪನ್ಹಾಳದ ಕಡೆಗೆ ನಡೆದನು. ಕೆಲವು ಮಜಲುಗಳ ಬಳಿಕ ಅಲೀ ಆದಿಲಶಹನ ಸ್ವಾರಿ ಮಿರಜಕ್ಕೆ ಬಂದು ಮುಟ್ಟಿತು. ಈ ಸುದ್ದಿ ತಿಳಿಯುತ್ತಿದ್ದಂತೆ ಉಭಯ ಕೃತಘ್ನರಲ್ಲಿ ಮತ್ತು ಅವರ ಕಾರಭಾರಿ ಮಂಡಳಿಯಲ್ಲಿ ಗಾಬರಿ ಹುಟ್ಟಿತು. ಉಭಯತರೂ ಸೇರಿ ಹೂಡಿದ್ದ ಯುಕ್ತಿ ಒಮ್ಮಿಂದೊಮ್ಮೆಲೇ ನಿಂತಂತಾಯಿತು. ಅವರಿಬ್ಬರೂ ಭಯಭೀತರಾದರು. ಅಲೀ ಆದಿಲಶಹನ ಯಶಸ್ವೀ ಸೈನ್ಯವು ಮಿರಜದಿಂದ ಮುಂದೆ ಸಾಗುತ್ತ ಪನ್ಹಾಳದ ಅರ್ಧದಾರಿಗೆ ಬಂದು ಮುಟ್ಟುತ್ತಿದ್ದಂತೆಯೇ ಆ ಕೆಟ್ಟ ಮನುಷ್ಯ ಶಿವಾನು ದುರ್ಗಮವಾದ ಪನ್ಹಾಳದ ಕೋಟೆಯನ್ನು ಮತ್ತು ಕೃತಘ್ನ ಸಿದ್ದಿ ಜೋಹಾರನ ಬೆಂಬಲವನ್ನು ನಂಬಿ ಅಲ್ಲಿಯವರೆಗೂ ಪನ್ಹಾಳದಲ್ಲಿಯೇ ಇರುತ್ತಿದ್ದವನು, ತನ್ನಲ್ಲಿ ಲಬಾಡಗಿರಿ ಮತ್ತು ನಾನಾ ಪ್ರಕಾರದ ಠಕ್ಕು ವಿದ್ಯೆಗಳ ಹೊರತು ಯಾವ ಪರಾಕ್ರಮವೂ ಇರದ್ದರಿಂದ ಅಲೀ ಆದಿಲಶಹನ ಸ್ವಾರಿ ಖುದ್ದಾಗಿ ಬರುತ್ತಿರುವ ಸುದ್ದಿಯನ್ನು ಕೇಳುತ್ತಲೇ, ಅತ್ಯಂತ ಭಯಭೀತನಾದನು. ಆದಿಲಶಹನ ಎದುರಿಗೆ ಯುದ್ಧಕ್ಕೆ ನಿಲ್ಲುವ ಧೈರ್ಯ ಸಾಲದಾಯಿತು, ಆಗ ಆತನು ಪನ್ಹಾಳ ಕೋಟೆಯನ್ನು ಬಿಟ್ಟು ಕೆಲವು ಸಹಾಯಕರೊಂದಿಗೆ ಗುಡ್ಡಗಳ ಮೂಲಕ ಓಡಿಹೋದನು.[೧] ಹೀಗೆ ಯಾವ ಅಡ್ಡಿ ಆತಂಕಗಳಿಲ್ಲದೆ ಪನ್ಹಾಳ ಕೋಟೆ ಅಲೀ ಆದಿಲಶಹನ ಕೈವಶವಾಯಿತು. ಮಿಯಾನುಸ್ರತಿಯು ಪನ್ಹಾಳ ಕೋಟೆಯ ವಿಜಯದ ದಿನಾಂಕವನ್ನು ಹಿಂದುಸ್ಥಾನಿ ಭಾಷೆಯ ಅರ್ಧ ದೋಹಾದಲ್ಲಿ, ವರ್ಣನೆ ಮಾಡಿದ್ದಾನೆ, ಆ ಅರ್ಧ ದೋಹಾ :

---

೧. ಶಕೆ ೧೫೮೨ ಆಷಾಢ ವದ್ಯ ೯೧ (೧೧ ಜುಲೈ ೧೬೬೦) ಪನ್ಹಾಳಾದಿಂದ ರಾಜಶ್ರೀ ಸ್ವಾಮಿಯು ಇಳಿದು ಖೇಳವಣೆಗೆ ಹೋದರು.-ಜೇಧೆ ಶಕಾವಲಿ ಪುಟ. ೨೧

*'ಅಲೀನೇ ಪಲಮೆ ಪನಾಳಾ ಕಿಲಿಯಾ ಸಲಾಬತ ಸೋ'*

ಅದರ ಅರ್ಥ ಅಲೀ ಆದಿಲಶಹನು ಪನ್ಹಾಳಾ ಕೋಟೆಯನ್ನು ಒಂದು ಕ್ಷಣದಲ್ಲಿ ಧೈರ್ಯದಿಂದ ತೆಗೆದುಕೊಂಡನು. ಸದರೀ ದೋಹಾದ ಅಕ್ಷರಗಳನ್ನು ಅಬಜದದ ಲೆಕ್ಕದಿಂದ ಗುಣಿಸಿದರೆ ೧೦೭೦ (ಕ್ರಿ.ಶ. ೧೬೫೯-೬೦) ಹಿಜರಿ ಸನ್ ಎಂದಾಗುತ್ತದೆ. ಅಂದರೆ ಈ ವರುಷ ಆದಿಲಶಹನು ಪನ್ಹಾಳಾ ಕೋಟೆಯನ್ನು ತೆಗೆದುಕೊಂಡನು.[೨] ಈ ವಿಜಯದ ನಂತರ ಅಲಿ ಆದಿಲಶಹನು ಅತಿ ಸಂತೋಷಪಟ್ಟು ಅಲ್ಲಾನನ್ನು ಸ್ತುತಿಸಿದನು. ಗುಡ್ಡಗಾಡುಗಳಲ್ಲಿ ಸುತ್ತಿ, ಕೊರಕಲುಗಳಲ್ಲಿ ಓಡಾಡಿ, ಮುಖತಪ್ಪಿಸಿ ಕುಳಿತ ಶಿವಾಜಿಯನ್ನು ತನ್ನ ಯಶಸ್ವಿ ಸೈನ್ಯವು ಹಿಡಿದು ಸಮೂಲ ನಾಶ ಮಾಡಬೇಕೆಂದು ಅಲಿ ಆದಿಲಶಹನು ಯೋಚಿಸಿದನು. ಆದರೆ ಮರುಕ್ಷಣ 'ಗುಡ್ಡ ಕೊರೆದು ಇಲಿಯನ್ನು ತೆಗೆದಂತೆ' ಎಂಬ ಮಾತು ನೆನಪಾಗಿ ಅದರಲ್ಲಿ ಅಂಥ ದೊಡ್ಡ ಪರಾಕ್ರಮವೇನು ಇಲ್ಲ ಎಂದು ಮನದಲ್ಲಿ ತಂದುಕೊಂಡನು. ಮತ್ತೊಮ್ಮೆ ಯಾವಾಗಲಾದರೂ ನೋಡಲು ಬರುತ್ತದೆ ಎಂದು ನಿರ್ಧರಿಸಿ, ಸಧ್ಯ ಈ ಕೆಲಸವನ್ನು ಕೈಬಿಡೋಣ ಎಂದುಕೊಂಡು, ಮುರ್ತಜಾಬಾದದಿಂದ ಅಂದರೆ ಮಿರಜದಿಂದ, ಅಲೀ ಆದಿಲಶಹನ ಸವಾರಿ ತಿರುಗಿ ಹೊರಟಿತು. ಅತಿ ಆನಂದದಿಂದ ಮತ್ತು ಬಹಳ ಯಶಸ್ವಿಯಾಗಿ ಬಂದು, ವಿಜಾಪುರದಲ್ಲಿರುವವರಿಗೆ ಆನಂದವನ್ನುಂಟು ಮಾಡಿದನು.

*೧೫. ಸಿದ್ದಿ ಜೋಹಾರ ಸಲಾಬತಖಾನನು ತನ್ನ ಧಣಿಯ ವಿರುದ್ಧ ಕೃತಘ್ನತೆ ತೋರಿಸಿದ್ದು :*

ಬಾದಶಹರು ರಾಜ್ಯಗಳನ್ನು ಸೋಲುವುದು-ಗೆಲ್ಲುವುದು ಇದು ಪುರಾತನಕಾಲದಿಂದ ನಡೆದುಕೊಂಡು ಬಂದ ರೂಢಿಯೇ ಆಗಿದೆ. ಕೃತಘ್ನರು, ದುಷ್ಟರು ಮತ್ತು ಸೊಕ್ಕಿನವರನ್ನು ಶಿಕ್ಷಿಸುವುದರಲ್ಲಿ ಬಾದಶಹನ ಎಲ್ಲ ಸ್ಥೈರ್ಯ-ಧೈರ್ಯಗಳೂ ಖರ್ಚಾಗುತ್ತವೆ. ಮಲೆನಾಡಿನಲ್ಲಿಯ ಜಮೇದಾರ ಜನರು ದಾರಿಬಿಟ್ಟು ನಡೆಯುತ್ತಿದ್ದಾರೆಂದು ಆಗಾಗ ಅಲೀ ಆದಿಲಶಹನ ಕಿವಿಗೆ ಸುದ್ದಿ ಬೀಳುತ್ತಿತ್ತು. ಅವರು ಪ್ರತಿ ವರ್ಷ ಸರಕಾರಕ್ಕೆ ಕೊಡುತ್ತಿದ್ದ ಖಂಡಣೆಯನ್ನು ನಿಲ್ಲಿಸಿ ಬಿಟ್ಟಿದ್ದರು. ಆದ್ದರಿಂದ ಆ ಸರಹದ್ದಿನಲ್ಲಿ ಹೋಗಬೇಕೆಂದು ಅಲಿ ಆದಿಲಶಹನು ಸಂಕಲ್ಪ ಮಾಡಿದನು. ಅವರನ್ನು ಶಿಕ್ಷಿಸಲು ಸಾಮಾನು, ಸರಂಜಾಮುಗಳನ್ನು ಸಿದ್ಧಪಡಿಸಿಕೊಂಡು ತನ್ನ ಯಶಸ್ವೀ ಸೈನ್ಯವನ್ನು ಒಂದೆಡೆ ಸೇರಿಸಿದನು. ಈ ಸಮಯದಲ್ಲಿ ಸಿದ್ದಿ ಜೋಹಾರ ಸಲಾಬತಖಾನನ ಪ್ರಾಮಾಣಿಕತೆ ಮತ್ತು ಕರಾರುಗಳನ್ನು ಮುರಿದು ನಡೆಯುವ ಚಿಹ್ನೆಗಳು ಪ್ರಕಟವಾಗಹತ್ತಿದುವು. ಬಾದಶಹನು ಸಿದ್ದಿ ಜೋಹಾರನ ಮೇಲೆ ಕೃಪೆ ಮಾಡಿ ಆತನ ಯೋಗ್ಯತೆಯನ್ನು ಅಧಿಕಗೊಳಿಸಿದ್ದರೂ ಅವನು ಬಹಳ ಸೊಕ್ಕು ಮತ್ತು ಅಭಿಮಾನದಿಂದ ನಡೆಯಹತ್ತಿದನು. ಆದಿಲಶಹನ ಚಾಕರಿಯಲ್ಲಿ ನಡೆಯುವ ಮಾರ್ಗವನ್ನು ಬಿಟ್ಟುಕೊಟ್ಟು ಅಪ್ರಾಮಾಣಿಕನಾಗಿ ಮತ್ತು ಧಣಿಯ ವಿರುದ್ಧದ ಮಾರ್ಗದಿಂದ ನಡೆಯಹತ್ತಿದನು. ಇಂಥ ಸಮಯದಲ್ಲೆ ಇಬ್ರಾಹಿಮ ಖಾನ ಮೌಲವೀ ಮುಲ್ಲಾ ಅಹಮ್ಮದ, ನವಾಬ ಅಬ್ದುಲ್ ರಹೀಮ ಬಹಲೋಲಖಾನ ಇವರು ಕರ್ನಾಟಕದ ಮೋಹಿಮಿನಿಂದ ತಿರುಗಿ ಬರುತ್ತ ಅಲಿ ಆದಿಲಶಹನ ದರ್ಶನ ಪಡೆಯಲು ಹೊರಟರು. ಆ ಸಮಯದಲ್ಲಿ ನೀಚ ಉತ್ಪತ್ತಿಯ ಮತ್ತು ಚಿಲ್ಲರೆ ಯೋಗ್ಯತೆಯ ಸಿದ್ದಿ ಜೋಹಾರನು ಐದು ಸಾವಿರ ಸ್ವಾರರೊಂದಿಗೆ ಈ ಮಂಡಳಿಯ ಮೇಲೆ ಏರಿ ಹೋಗಬೇಕೆಂದು ಮನಸ್ಸು ಮಾಡಿದನು. ಸಿದ್ದಿ ಜೋಹಾರನನ್ನು ಮತ್ತು ಆತನ ಸೈನ್ಯವನ್ನು ಶಿಕ್ಷಿಸಿ

---

೨. ಶಕೆ ೧೫೮೨ ಭಾದ್ರಪದ ವದ್ಯ ತ್ರಯೋದಶಿ (೨೨ ಸಪ್ಟಂಬರ ೧೬೬೦) ಪನ್ಹಾಳಾ ಸಲಾಬತಖಾನನಿಗೆ ಕೊಟ್ಟಿತು.-ಜೋಧೆ ಶಕಾವಲಿ ಪು. ೨೧.

ನಾಶಮಾಡುವ ಸಾಮರ್ಥ್ಯ ಇತ್ತಾದರೂ, ಈ ವಿಷಯದಲ್ಲಿ ಬಾದಶಹನ ಮನದಲ್ಲಿ ಹೇಗಿದೆ ಎಂಬುದು ಇವರಿಗೆ ತಿಳಿದಿರಲಿಲ್ಲ, ಆದ್ದರಿಂದ ಸಿದ್ದಿ ಜೋಹಾರನಲ್ಲಿ ಯಾವ ಯೋಗ್ಯತೆಯೂ ಇಲ್ಲ ಮತ್ತು ಯಾವ ಸಾಮರ್ಥ್ಯವೂ ಇಲ್ಲ ಎಂಬುದನ್ನು ಆತನಿಗೆ ಸಖತ್ತಾಗಿ ತಿಳಿಸಿ, ಆ ಜನರು ಅಲ್ಲಿಂದ ಅತಿ ಶೀಘ್ರದಲ್ಲಿ ಹೊರಟು, ದೊಡ್ಡ ಹಲ್ಲೆ ಮಾಡಿ ವಿಜಾಪುರಕ್ಕೆ ಬಂದು ಬಾದಶಹನ ಕೃಪೆಗೆ ಪಾತ್ರರಾದರು. ಸಿದ್ದಿ ಜೋಹಾರನು ಐದು ಸಾವಿರ ಸ್ವಾರರೊಂದಿಗೆ ಏರಿ ಬಂದಿದ್ದನೆಂಬ ಸುದ್ದಿ ಕೇಳಿ ಬಾದಶಹನು ಕೋಪಗೊಂಡನು. ಆತನ ಮನೆತನವನ್ನೇ ಪೂರ್ತಿ ಮುಳುಗಿಸಿ ಬಿಡಬೇಕೆಂಬಷ್ಟು ಕ್ರೋಧಾಯಮಾನನಾದನು, ಆದರೆ ಆದಿಲಶಹನಿಗೆ ದಯೆ ಹಾಗೂ ದೂರದೃಷ್ಟಿಗಳು ಅಲ್ಲಾನ ದೇಣಗೆಗಳಾಗಿದ್ದುವು. ಆದ್ದರಿಂದ ಅವಸರ ಮಾಡದೆ, ಆತನ ಕಲ್ಯಾಣದ ಬಗ್ಗೆಯೇ ಬಾದಶಹನು ಚಿಂತಿಸಿದನು. ನಾನಾ ಪ್ರಕಾರದ ಬೋಧ ಮತ್ತು ನೀತಿಗಳನ್ನು ಹೇಳಿ ಸಲಾಬತಖಾನನನ್ನು ದಾರಿಗೆ ತರಬೇಕು. ಹಗ್ಗ ಹರಿದು ಓಡಿ ಹೋಗುವ ಒಂಟೆಯಂತೆ, ಸಲಾಬತಖಾನನು ಉತ್ತಮ ಮಾರ್ಗವನ್ನು ಬಿಟ್ಟು ದುರ್ದೈವಿತನದ ಮಾರ್ಗವನ್ನು ಸ್ವೀಕರಿಸಿದ್ದಾನೆ. ಆತನಿಗೆ ಉಪಯೋಗವಾಗುವಂಥ ನೀತಿಮಾತುಗಳನ್ನು ಹೇಳಿ ಒಳ್ಳೆಯ ಮಾರ್ಗವನ್ನು ಹಿಡಿಸಬೇಕು ಎಂದು ಆಜ್ಞಾಪಿಸಿದನು.

### ೧೬. *ಅಲೀ ಆದಿಲಶಹನು, ಇಬ್ರಾಹಿಮಖಾನ, ಮುಲ್ಲಾ ಅಹಮದ ಮತ್ತು ಶಾಹ ಅಬದುಲ್ ಹಸನರನ್ನು ಸಲಾಬತಖಾನನಿಗೆ ಉಪದೇಶಿಸಲು ಕಳಿಸಿದ್ದು :*

ನೀತಿ ಹಾಗೂ ಬೋಧಯುಕ್ತವಾದ ಒಂದು ಆಜ್ಞಾಪತ್ರವನ್ನು ಬರೆದು, ಅದರಲ್ಲಿ 'ಇತ್ತಕಡೆಯ ಆಜ್ಞೆಯಂತೆ ನಡೆದರೆ ಬಹಳ ಪ್ರಯೋಜನವಾಗುತ್ತದೆ. ದಾಂಡಗಾಯಿಯಿಂದ ಅಪ್ರಾಮಾಣಿಕತೆಯಿಂದ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ' ಎಂಬಿತ್ಯಾದಿಯಾಗಿ ಬರೆದು ಇಬ್ರಾಹಿಮ ಖಾನ, ಮುಲ್ಲಾ ಅಹಮದ ಮತ್ತು ಶಾಹ ಅಬ್ದುಲ ಹಸನ್ನರ ಜೊತೆಗೆ ಕೊಟ್ಟು ಕಳಿಸಿದನು. ಅವರು ಸಲಾಬತಖಾನನ ಹತ್ತಿರ ಹೋಗಿ ನಾನಾ ರೀತಿಯಲ್ಲಿ ಅವನಿಗೆ ತಿಳಿಸಿ ಹೇಳಿದರು. 'ಒಳ್ಳೆಯ ನಡೆತೆಯಿಂದ, ನಡೆದದ್ದೇ ಆದರೆ ಬಾದಶಹರು ನಿನಗೆ ಬಹಳ ಕಲ್ಯಾಣ ಮಾಡುತ್ತಾರೆ ಮತ್ತು ಅವರ ಆಜ್ಞೆಯನ್ನು ಮುರಿದರೆ ನಿನ್ನನ್ನು ಶಿಕ್ಷಿಸಬೇಕಾಗುತ್ತದೆ' ಎಂದು ಎರಡೂ ಭಾವಗಳನ್ನು ಸೂಚಿಸಿದರು. ಸಲಾಬತಖಾನನ ಕಿವಿಯಲ್ಲಿ ಭ್ರಾಂತಿ ಸೇರಿಕೊಂಡಿತ್ತು. ಅಂದರೆ ಅಧಿಕ ಮದವೇರಿದವನಾಗಿದ್ದನು. ಆದ್ದರಿಂದ ಬಾದಶಹನ ನೀತಿ ಮತ್ತು ಬೋಧನೆಗಳು ಅವನ ಮನದಲ್ಲಿ ಪ್ರವೇಶ ಮಾಡಲಿಲ್ಲ. ಅಮಾರ್ಗ ವರ್ತನೆಯನ್ನು ಬಿಟ್ಟು ದಾರಿಗೆ ಬರುವುದಾಗಲಿಲ್ಲ. ಹೀಗಾಗಿ ಕಾರಭಾರಿಗಳು ಪಾತರಗಿತ್ತಿಯಂಥ ಸ್ವಭಾವದ ಈತ ಕೈಗೆ ಸಿಗುವುದಿಲ್ಲ ಎಂದು ತಿಳಿದುಕೊಂಡರು. ಏನು ಮಾಡಿದರೂ ಸಲಾಬತಖಾನನನ್ನು ದಾರಿಗೆ ತರುವುದು ಸಾಧ್ಯವಾಗದು ಎಂದು ಕೊಂಡರು. ಆಗ ಅವರು ಆತನಿಗೆ ಹೇಳುತ್ತ 'ಬಾದಶಹರ ಮನಸ್ಸಿನಲ್ಲಿ ನಿನ್ನ ಬಗ್ಗೆ ಬಹಳ ದಯೆ ಇದೆ. ನಿನ್ನಿಂದ ಎಷ್ಟೇ ಅಪರಾಧಗಳು ಘಟಿಸಿದ್ದರೂ ಅವುಗಳ ಮೇಲೆ ದೃಷ್ಟಿಯನ್ನಿಡದೆ. ಬಾದಶಹರ ಅಂತಃಕರುಣದಲ್ಲಿ ನಿನ್ನ ವಿಷಯವಾಗಿ ಕೃಪೆಯ ಹೊರತಾಗಿ. ಇನ್ನೊಂದು ಭಾವನೆಯೇ ಇಲ್ಲ. ನಿನ್ನ ಮೇಲೆ ಇದ್ದಷ್ಟು ಕೃಪೆ ಬೇರೆ ಇನ್ನಾರ ಮೇಲೂ ಇಲ್ಲ. ನಿನ್ನ ಮನಸ್ಸನ್ನು ಸಮಾಧಾನಪಡಿಸಲು ಬಾದಶಹರು ಖುದ್ದಾಗಿ ವಿಜಾಪುರದಿಂದ ಹೊರಟು ಕೃಷ್ಣಾತೀರದ ಚುಮಲಕ ಎಂಬ ಹಳ್ಳಿಗೆ ಬರುತ್ತಿದ್ದಾರೆ. ಅವರು ಬರುವವರೆಗೂ ಪಾತರಗಿತ್ತಿಯ ಹಾಗೆ ಮತ್ತು ಹರಿಣಗಳ ಹಾಗೆ ನೀನು ಇಲ್ಲಿಂದ ಓಡಿ ಹೋಗಬೇಡ'. ಹೀಗೆ ಅನೇಕ ರೀತಿಯಾಗಿ ಹೇಳಿ ಕಾರಭಾರಿಗಳು ತಿರುಗಿ ಬಂದರು. ಎಲ್ಲ ವಿಷಯವನ್ನು ಬಾದಶಹನಿಗೆ ತಿಳಿಸುತ್ತ 'ಉಸುಕಿನಲ್ಲಿ

ಹೊಳೆಯುತ್ತಿರುವ ಧೂಳೀಕಣವನ್ನು ಪಾಲಿಸುವಲ್ಲಿ ಸೂರ್ಯನಿಗೆ ಎಳ್ಳಷ್ಟೂ ಬೇಸರವಿಲ್ಲ, ತನ್ನ ಮೈಮೇಲೆ ನೀರಿನ ಎಷ್ಟೇ ಹನಿಗಳು ಬಿದ್ದರೂ ಸಮುದ್ರಕ್ಕೆ ಅದರಿಂದ ಯಾವ ತೊಂದರೆ ಇರುವುದಿಲ್ಲ. ಸರಕಾರದ ಸ್ವಾರಿಯು ಹೋಗುವುದೆಂದು ಮೊದಲೇ ನಿರ್ಧರಿಸಿದ್ದೀರಿ. ಸ್ವಾರಿ ಅತ್ತ ಕಡೆ ಹೋಗಲಿ, ಅಂದರೆ ಪಾತರಗಿತ್ತಿಯ ಹಾಗೆ ಹಾರಿ ಹೋಗುವ ಸಲಾಬತಖಾನನ್ನು ಏನಾದರೂ ಮಾಡಿ ಕೈಗೆ ತೆಗೆದುಕೊಳ್ಳಿರಿ. ಅನಂತರ ಮುಂದೆ ಮನದಲ್ಲಿ ಹೇಗೆ ಬರುತ್ತದೋ ಹಾಗೆ ಮಾಡಿರಿ, ಎಂಬುದಾಗಿ ವಿನಂತಿ ಮಾಡಿಕೊಂಡರು. ಬಾದಶಹನು ಆ ಬುದ್ಧಿವಂತ ಕಾರಭಾರಿಗಳ ಸಲಹೆಯನ್ನು ಒಪ್ಪಿ ವಿಜಾಪುರದಿಂದ ಚುಮಲಕ ಕಡೆಗೆ ಹೊರಟನು.

### *೧೭. ಸಲಾಬತಖಾನನ ಕಡೆಯಿಂದ ಶಾರ್ಜಾಖಾನ ಮತ್ತು ಸಿದ್ದಿ ಮಸೂದರು ಅಭಯ ಕೇಳಲು ಬಾದಶಹನ ಕಡೆಗೆ ಬಂದದ್ದು :*

ಇಂಥ ಸಮಯದಲ್ಲಿ ಸಲಾಬತಖಾನನ ಅಳಿಯ ಸಿದ್ದಿ ಮಸೂದ ಮತ್ತು ಶಾರ್ಜಾಖಾನರಿಬ್ಬರೂ ಬಾದಶಹನ ಹತ್ತಿರ ಹಾಜರಾಗಿ, ಬಾದಶಹನಿಗೆ ಮುಜುರೆ ಮಾಡಿದರು. ವಿನಂತಿ ಮಾಡಿಕೊಳ್ಳುತ್ತ, 'ಸಿದ್ದಿ ಜೋಹಾರ ಸಲಾಬತಖಾನನು ಸರಕಾರದ ಸೇವಕರಲ್ಲಿ ಒಬ್ಬನಾಗಿದ್ದಾನೆ. ಈ ಸರಕಾರವು ಅತ್ಯಂತ ಕೃಪೆಯಿಂದ ಪಾಲನೆ ಮಾಡಿದ ಮನುಷ್ಯರಲ್ಲಿ ಇವನೊಬ್ಬನಾಗಿದ್ದಾನೆ, ಸರಕಾರದ ಚಾಕರಿ ಮಾಡುವಲ್ಲಿ ಸಲಾಬತಖಾನನ ಮನದಲ್ಲಿ ಬೇರೆ ಏನೂ ಇಲ್ಲ. ಸರಕಾರದ ಕಲ್ಯಾಣ ಬಯಸುವುದನ್ನು ಬಿಟ್ಟು ಬೇರೆ ಯಾವ ಇಚ್ಛೆಯೂ ಅವನ ಮನದಲ್ಲಿಲ್ಲ. ಖಾವಂದರ ಹತ್ತಿರ ಬಂದು ಪ್ರಭುಗಳ ಚರಣಾರವಿಂದಗಳಲ್ಲಿ ತಲೆಯನ್ನಿಡಲು ಅವನಿಗೆ ತುಂಬ ಆಶೆ ಇದೆ. ಸಲಾಬತಖಾನನ ವಿನಂತಿಯೆಂದರೆ, ಬಾದಶಹರ ಆಜ್ಞೆಗಳಲ್ಲಿ ಮತ್ತು ಕರಾರುಗಳಲ್ಲಿ ಅಂತರ ಎಂದೂ ಬರಬಾರದು, ಇದು ಸತ್ಯ. ಆದರೆ ಹಲವಾರು ಮೂರ್ಖರು ಮತ್ತು ಗೈರ ನಡತೆಯ ಜನರು ಸಲಾಬತಖಾನನ ಮನದಲ್ಲಿ ಭಾರೀ ಸಂಶಯವನ್ನು ತಂದು ಮತ್ತು ಭಯ ಹುಟ್ಟಿಸಿ ಅವನು ಸರಿ ದಾರಿಯಲ್ಲಿ ನಡೆಯಲು ಕೊಡಲಿಲ್ಲ, ಆದ್ದರಿಂದ ನಮ್ಮ ವಿನಂತಿಯೆಂದರೆ, ಒಂದು ಹೊಸ ಅಭಯ ಪತ್ರವನ್ನು ಆ ಭಯಭೀತನಾದ ಸಲಾಬತಖಾನನ ಜೀವಕ್ಕೆ ಮತ್ತು ಗೌರವಕ್ಕೆ ಧಕ್ಕೆಯಾಗದ ಹಾಗೆ ಸರಕಾರವು ಕೃಪೆ ಮಾಡಿಕೊಟ್ಟರೆ, ಆ ಅಭಯಪತ್ರದ ಮೇಲೆ ಪೂರ್ಣ ಭರವಸೆಯನ್ನಿಟ್ಟು ಆತ ತಲೆಯಿಂದ ನಡೆದು ತಮ್ಮ ಹತ್ತಿರ ಬಂದು ಕಾಲುಗಳ ಮೇಲೆ ಬೀಳುತ್ತಾನೆ' ಎಂದು ಆ ಉಭಯತರು ವಿನಂತಿ ಮಾಡಿಕೊಂಡರು. ಬಾದಶಹನಿಗೆ ಆ ಸಮಯದಲ್ಲಿ ಸಲಾಬತಖಾನನ ಚಿತ್ತ ಸಮಾಧಾನ ಮಾಡುವುದು ಮತ್ತು ಪ್ರತಿ ಯುಕ್ತಿಗಳಿಂದ ಅವನನ್ನು ತನ್ನ ಕೈಗೆ ತರುವುದು ಹೊರತಾಗಿ ಬೇರೆ ಯಾವ ಕಾರಣಗಳೂ ಇರಲಿಲ್ಲ. ಆದ್ದರಿಂದ ಅವರ ವಿನಂತಿಯನ್ನು ಒಪ್ಪಿಕೊಂಡು ಪುನಃ ಅಭಯ ಪತ್ರವನ್ನು ಬರೆದು ಕೊಟ್ಟು ಸಿದ್ದಿ ಮಸೂದನನ್ನು ಕಳಿಸಿದನು. ಸಿದ್ದಿ ಮಸೂದನು ಆ ಅಭಯ ಪತ್ರವನ್ನು ಸಲಾಬತಖಾನನಿಗೆ ಕೊಟ್ಟು ಆತನ ಮನದಲ್ಲಿದ್ದ ಭಯವನ್ನು ನಿವಾರಿಸಿ ಪೂರ್ಣ ಭರವಸೆಯನ್ನು ಕೊಟ್ಟನು.

### *೧೮. ಸಿದ್ದಿ ಜೋಹಾರ ಸಲಾಬತಖಾನನು 'ಮುಚಲಕೆ' ಗ್ರಾಮದಲ್ಲಿ ಬಾದಶಹನನ್ನು ಭೆಟ್ಟಿಯಾದದ್ದು :*

ಮರುದಿನ ಸಲಾಬತಖಾನನು ತನ್ನ ಸ್ವಾರ ಸಿಬ್ಬಂದಿ ಸಹಿತವಾಗಿ ಹೊರಟು ಬಾದಶಹನ ಹತ್ತಿರ ಬಂದು ದರ್ಶನ ಪಡೆದನು. ಬಾದಶಹನ ಕಾಲುಗಳಿಗೆ ತಲೆಯನ್ನು ಹಚ್ಚಿದನು. ಆಗ ಅವನನ್ನು ಬಹುವಾಗಿ

ಸಂತೈಸುತ್ತ ಆತನ ಮೇಲೆ ಕೃಪೆ ಮಾಡಿ ಬಾದಶಹನು ತನ್ನ ಮೈಮೇಲಿನ ವಸ್ತ್ರಗಳನ್ನು, ಜೆಹಗಾ, ಶಿರಪೇಚಗಳನ್ನು ಕೊಡುತ್ತ ಆತನಿಗೆ ಮುಲಕೀ ಪದವಿಯನ್ನೂ ನೀಡಿದನು. ಸಲಾಬತಖಾನನಿಗೆ ಸಮಾಧಾನವಾದ ಮೇಲೆ ಆತನಿಗೆ ಆಜ್ಞೆ ಮಾಡುತ್ತ "ಮುಸಲ್ಮಾನೀ ಪ್ರಬಲ ಧರ್ಮದ ಧ್ವಜವನ್ನು ಎತ್ತರಿಸಿ ನಿಲ್ಲಿಸಬೇಕು. ಪೈಗಂಬರರು ಶಾಸ್ತ್ರಗಳಲ್ಲಿ ನಿರ್ಧರಿಸಿದಂತೆ, ಆಚರಣೆಯಲ್ಲಿ ತರಬೇಕೆಂಬುದು ನಮ್ಮ ಮನಸ್ಸಿನಲ್ಲಿ ಬಂದಿದೆ. ಹಿಂದೂ ಜನರು ಬಹಳ ಕೆಟ್ಟವರಾಗಿದ್ದಾರೆ. ಆದ್ದರಿಂದ ಅವರೊಂದಿಗೆ ಯುದ್ಧ ಮಾಡುವುದು, ಹಿಂದು ಧರ್ಮದ ಧ್ವಜವನ್ನು ಬೀಳಿಸುವುದು ಮತ್ತು ಹಿಂದುಗಳನ್ನು ಹೊರಗೆ ಹಾಕುವುದು. ಯಾಕೆಂದರೆ ಹಿಂದುಗಳ ಕೈಯಲ್ಲಿ ಬಹಳ ವಿಸ್ತೀರ್ಣವಾದ ಪ್ರದೇಶ ಮತ್ತು ಸಂಪತ್ತು ಇದೆ. ಬಹಳ ಸಾಮಾನು ಸರಂಜಾಮುಗಳು ಸಂಗ್ರಹವಾಗಿವೆ. ಅವರೊಂದಿಗೆ ಯುದ್ಧ ಮಾಡಿ ಆ ಎಲ್ಲವನ್ನು ಹರಣ ಮಾಡುವ ನಮ್ಮ ಸಂಕಲ್ಪ ಖಚಿತವಾಗಿದೆ. ಆದ್ದರಿಂದ ಎಲ್ಲ ಖಾಸಾ ಸರದಾರರಲ್ಲಿ ಮುಖ್ಯ ಸರದಾರನಾಗಿರುವ ನವಾಬ ಅಬುದುಲ ರಹೀಮ ಬಹಲೋಲಖಾನನನ್ನು, ಅನೇಕ ಅಮೀರ ಜನರು ಮತ್ತು ನಮ್ಮ ಯಶಸ್ವೀ ಸೈನ್ಯವನ್ನು ಕೊಟ್ಟು ಕರ್ನಾಟಕದ ಮೇಲೆ ನಿಯಮಿಸಿದ್ದೇವೆ. ಆದ್ದರಿಂದ ನೀವೂ ಬಹಲೋಲಖಾನನ ಜೊತೆಗೆ ಹೋಗಿ ಕರ್ನಾಟಕದ ಮೇಲೆ ಯುದ್ಧಮಾಡಿದರೆ ಪರಲೋಕದಲ್ಲಿ ಸುದೈವದ ಪ್ರಾಪ್ತಿ ಮತ್ತು ಈ ಲೋಕದಲ್ಲಿ ವೈಭವ ಮತ್ತು ಕೀರ್ತಿಗಳಿಗೆ ಭಾಜನರಾಗುವಿರಿ. ಹೀಗೆ ಮಾಡಿ ಬಾದಶಹರ ಸೇವೆಯಲ್ಲಿ ದೊಡ್ಡತನವನ್ನು ಪಡೆಯುವುದು ಈ ಪೃಥ್ವಿಯಲ್ಲಿಯ ಸರ್ವ ಸಹಾಯಕ್ಕೆ ಬಂದು ಯುದ್ಧದ ಶ್ರೇಷ್ಠ ಫಲವನ್ನು ಪಡೆದುಕೊಳ್ಳುತ್ತೇವೆ" ಎಂಬುದಾಗಿ ಆಜ್ಞೆ ಮಾಡಿದನು. ಸಿದ್ದಿ ಜೋಹಾರ ಸಲಾಬತಖಾನನು ಹುಟ್ಟಿನಿಂದಲೇ ಕಪಟಿ ಮತ್ತು ಬಹಳ ದುಷ್ಟನಿದ್ದನು. ಆದ್ದರಿಂದ ಏನಕೇನ ಪ್ರಕಾರಗಳಿಂದ ಜೀವ ಉಳಿಯಿತು ಮತ್ತು ಮರ್ಯಾದೆಯೂ ಉಳಿಯಿತು, ಇದುವೆ ಅಲಭ್ಯ ಲಾಭವೆಂದು ತಿಳಿದನು. ಬಾದಶಹನ ಆಜ್ಞೆಯಾದಾಗ ಅದನ್ನು ಮನಃಪೂರ್ವಕವಾಗಿ ಒಪ್ಪದೆ. ಸುಮ್ಮನೆ ಬಾಯಿಯಿಂದ 'ಹೂ' ಗುಟ್ಟಿ ಅತಿ ಶೀಘ್ರವಾಗಿ ತಿರುಗಿ ಹೋಗಲು ನಿರೋಪ ಕೇಳಿ ಹೊರಟು ಬಿಟ್ಟನು. ಅನಂತರ ಬಾದಶಹನು ಅಲ್ಲಿಯೇ ಕೃಷ್ಣಾತೀರದಲ್ಲಿ ಹುಲಿಬೇಟೆಯಾಡಲು ಕೆಲವು ದಿನಗಳವರೆಗೆ ಇದ್ದು, ಸಂತೋಷ ಪಟ್ಟು ನೀರನ್ನು ದಾಟಿ ಹೋದನು. ಆ ಸಮಯದಲ್ಲಿ ಕೆಲವು ಸೇವಕ ಜನರು ವಿನಂತಿ ಮಾಡಿಕೊಳ್ಳುತ್ತ 'ತೊರಗಲ್ಲ ಕೋಟೆಯು ಬಾದಶಹರ ಕೋಟೆಗಳಲ್ಲಿಯೇ ಹೆಸರಾಂತವಾದುದ್ದು. ಬಹಳ ಮಜಬೂತಾಗಿದ್ದು ಎಲ್ಲೆಡೆ ಪ್ರಸಿದ್ಧವಾಗಿದೆ. ಇಲ್ಲಿಂದ ಎರಡೇ ಮಜಲಿನ ಕಡೆಗೆ ಹೋದರೆ ತುಂಬ ಒಳ್ಳೆಯದು. ಕೋಟೆಯ ಮಜಬೂತಿಯನ್ನೂ ನೋಡಿದಂತಾಗುತ್ತದೆ, ಸಂತೋಷವಾಗುತ್ತದೆ. ಅಲ್ಲಿಯ ಕೋಟೆಯ ಮುಖ್ಯಸ್ಥನು ಕುತಂತ್ರಿಯಾಗಿದ್ದು ಗೈರನಡತೆಯಲ್ಲಿ ಸಾಗುತ್ತಿದ್ದಾನೆಂದು ಕೇಳಿಬರುತ್ತಿದೆ. ಆತನನ್ನು ಹಿಡಿದು ಅವನ ಪಾರುಪತ್ಯವನ್ನೂ ಮಾಡಿದಂತಾಗುತ್ತದೆ' ಎಂದು ವಿನಂತಿಸಿಕೊಂಡರು.

### ೧೯. ಅಲೀ ಆದಿಲಶಹನು ತೊರಗಲ್ಲ ಕೋಟೆಯ ಕಡೆಗೆ ನಡೆದದ್ದು ಮತ್ತು ಅಲ್ಲಿಯ ಅಧಿಕಾರಿಯು ಧಣಿಯ ವಿರುದ್ಧ ನಿಂತದ್ದು :

ಬಾದಶಹನು ಅವರ ವಿನಂತಿಗೆ ಒಪ್ಪಿ, "ಸೈನ್ಯ ಸಾಮಾನು ಸರಂಜಾಮು ಸಹಿತ ತೊರಗಲ್ಲ ಕೋಟೆಯ ಕಡೆಗೆ ನಡೆಯಲಿ" ಎಂದು ಆಜ್ಞೆ ಮಾಡಿದನು. ತೊರಗಲ್ಲ ಕೋಟೆಯ ಮೇಲೆ ಸಿದ್ದಿ ಯಾಕುತನೆಂಬ ಬಾದಶಾಹಿ ಚಾಕರನೊಬ್ಬನು ಹವಾಲದಾರನಾಗಿದ್ದನು. ಬಾದಶಹನೇ ಅವನ ಪಾಲನೆಯನ್ನು ಮಾಡಿದ್ದನು. ಅವನ ಯೋಗ್ಯತೆಯನ್ನು-ಗೌರವವನ್ನು ಬೆಳೆಸಿದ್ದನು, ಬಾದಶಹನು ಬರುವ ಸುದ್ದಿ ಸಿದ್ದಿ

ಯಾಕೂತನಿಗೆ ತಿಳಿದಾಗ, ತಾನು ಬಾದಶಹನ ವಿರುದ್ಧ ಕೆಲಸಗಳನ್ನು ಮಾಡಿದ್ದರಿಂದ ಭಯಭೀತನಾದನು. ಒಂದು ವೇಳೆ ಬಾದಶಹರ ಸವಾರಿ ಇತ್ತ ಕಡೆಗೆ ಬಂದೇ ಬಿಟ್ಟರೆ ತನ್ನ ಕೆಟ್ಟ ಕೆಲಸಗಳೆಲ್ಲ ಹೊರಬೀಳುತ್ತವೆ. ಬಾದಶಹನಿಗೆ ಎಲ್ಲ ವಿಷಯ ತಿಳಿದುಬಿಡುತ್ತದೆ. ಅನಂತರ ಬಾದಶಹ ನನ್ನ ಮೇಲೆ ಬಹಳೇ ಸಿಟ್ಟುಗೊಳ್ಳುತ್ತಾನೆ ಎಂದು ಮನದಲ್ಲಿ ಭೀತಿಗೊಂಡನು. ಆ ಮೂರ್ಖ ಸಿದ್ದಿ ಯಾಕೂತನ ಹತ್ತಿರದ ಒಬ್ಬನು ಸುಳ್ಳು ಸುದ್ದಿಯೊಂದನ್ನು "ಬಾದಶಹನು ಕೋಟೆಯನ್ನು ನಿನ್ನಿಂದ ಬಿಡಿಸಿ ಬಹಲೋಲಖಾನನಿಗೆ ಕೊಡಬೇಕೆಂಬ ಇರಾದೆಯಿಂದ ಬರುತ್ತಿದ್ದಾನೆ" ಎಂದು ಅವನ ಕಿವಿಯಲ್ಲಿ ತುಂಬಿದನು. ಆ ನೀಚ ಯಾಕೂತನು ಇದರ ಸತ್ಯಾಸತ್ಯೆಯನ್ನು ಒರೆಗೆ ಹಚ್ಚದೆ ಒಂದು ಹಸಿ ಯುಕ್ತಿಯನ್ನು ಮಾಡಿದನು. ಗುಪ್ತನಾಗಿ ಧಣಿಯ ವಿರುದ್ಧ ಮಾಡುತ್ತಿದ್ದುದನ್ನು ಈಗ ಬಹಿರಂಗಗೊಳಿಸಿದನು. ಬಾದಶಹನ ಸೈನ್ಯವನ್ನು ಇತ್ತ ಬರಗೊಡಬಾರದೆಂದು ಮನಸ್ಸುಮಾಡಿದನು. ಹೀಗೆ ನಿರ್ಧರಿಸಿ ಬಂದೂಕು ಗುಂಡಿನ ಮಳೆಗರೆದು ಕೋಟೆಯ ಹತ್ತಿರ ಬರುತ್ತಿದ್ದ ಬಾದಶಹನ ಡೇರೆ, ಸಾಮಾನು, ಸರಂಜಾಮು ಪರಿವಾರಗಳನ್ನು ಹಿಂತಿರುಗಿಸಿದನು. ಈ ಸುದ್ದಿ ತಿಳಿಯುತ್ತಿದ್ದಂತೆ, ಬಾದಶಹನ ಕೋಪಸಮುದ್ರ ಉಕ್ಕಿ ಹರಿಯಿತು. ಅದೇ ಸಿಟ್ಟಿನ ಭರದಲ್ಲಿ "ನಮ್ಮ ಕಡೆಯ ಶೂರ ಮಂಡಳಿಯು ಒಮ್ಮೆಲೇ ಕೋಟೆಯ ಮೇಲೆ ಹಲ್ಲೆ ಮಾಡಬೇಕು ಮತ್ತು ಸದರೀ ಕೋಟೆಯನ್ನು ಕೆಡವಿ ನೆಲಸಮ ಮಾಡಿಬಿಡಬೇಕು. ಕೋಟೆಯಲ್ಲಿಯ ಎಲ್ಲ ಕೃತಘ್ನರನ್ನು ತಲವಾರಿನಿಂದ ಕತ್ತರಿಸಿ ಅವರ ದೇಹದ ಮಾಂಸವನ್ನು ಕಾಗೆ ಹದ್ದುಗಳಿಗೆ ಹಾಕಬೇಕು" ಎಂದು ಆಜ್ಞೆ ಮಾಡಿದನು. ಆಗ ಕಾರಭಾರಿ ಮಂಡಳಿಯಲ್ಲಿಯ ಕೆಲವರು ಧೈರ್ಯತಂದುಕೊಂಡು ಬಾದಶಹನಿಗೆ ಹೀಗೆ ವಿನಂತಿ ಮಾಡಿಕೊಂಡರು. "ತಮ್ಮ ಕೃಪೆ, ಬೆಂಬಲಗಳ ಆಧಾರದಿಂದ ತಮ್ಮ ಸೇವಕರು ಕಣ್ಣು ರೆಪ್ಪೆ ಬಡಿಯುವಷ್ಟರಲ್ಲಿ ಕೋಟೆಯನ್ನು ಅದು ಇತ್ತೋ ಇಲ್ಲವೋ ಎಂಬಂತೆ ನೆಲಸಮ ಮಾಡಬಲ್ಲರು. ಹೀಗಾದರೆ ಕೋಟೆಯ ವೈಭವವೇ ಇಲ್ಲದಂತಾಗಿಬಿಡುತ್ತದೆ. ಹೀಗೆ ಮಾಡುವಾಗ ಯಾರಿಂದಲಾದರೂ ಅಪರಾಧ ಘಟಿಸಿದರೆ ಅವರು ಸರಕಾರದ ಕೋಪಕ್ಕೆ ಗುರಿಯಾಗಿ ಮರಣವನ್ನೇ ಹೊಂದುತ್ತಾರೆ. ಆದ್ದರಿಂದ ಕೋಟೆಯ ಮೇಲಿನ ಹಲ್ಲೆಯನ್ನು ಕಾಯಮ್ ಆಗಿ ಇಟ್ಟು ಅದನ್ನು ಹತ್ತುವ ಪ್ರಯತ್ನ ಮಾಡೋಣ. ಕೆಲವು ದಿನಗಳವರೆಗೆ ಯುದ್ಧ ನಡೆದರೂ ಚಿಂತೆ ಇಲ್ಲ. ಸಾವಾಕಾಶವಾಗಿ ಕೋಟೆಯನ್ನು ಗೆಲ್ಲೋಣ. ಆಗ ಎಲ್ಲ ಕೋಟೆಗಳಿಗೂ ಭರವಸೆ ಹುಟ್ಟುತ್ತದೆ. ಮತ್ತು ಬಾದಶಹರ ಕೀರ್ತಿಗೂ ಧಕ್ಕೆ ತಗುಲಲಾರದು" ಬಾದಶಹನು ಈ ವಿಚಾರಗಳಿಗೆ ಒಪ್ಪಿ ಕೋಟೆಯ ಮೇಲಿನ ಹಲ್ಲೆಯನ್ನು ಮುಂದುವರಿಸಲು ಆದೇಶ ನೀಡಿದನು. ಬಾದಶಹನ ಆಜ್ಞೆಯಂತೆ ನಿರಂತರ ಹಲ್ಲೆ ಮುಂದುವರೆದಾಗ ಆ ಹಬಶೀ ಜಾತಿಯ ಕೃತಘ್ನ ಸಿದ್ದಿ ಯಾಕೂತನು ಅಗೌರವ ತೋರಿಸಿ ಆದಿಲಶಹನ ಸೈನ್ಯದೊಂದಿಗೆ ಯುದ್ಧ ಮಾಡಲು ಸಿದ್ಧನಾದನು. ಮತ್ತು ಕೋಟೆಯ ಮೇಲಿನಿಂದ ತೋಫುಗಳನ್ನು ಹಾಗೂ ಬಂದೂಕುಗಳ ಗುಂಡುಗಳನ್ನು ಹಾರಿಸಲು ಪ್ರಾರಂಭಿಸಿದನು. ಕೆಲವು ದುಷ್ಟ ಜನರು ಕೋಟೆಯಿಂದ ಹೊರಗೆ ಬಂದು ದಾಂಡಗಾಯಿಯಿಂದ ಬಾದಶಹನ ಸೈನ್ಯವನ್ನು ಎದುರಿಸುತ್ತಿದ್ದರು ಮತ್ತು ಆದಿಲಶಾಹಿ ವೀರರ ತಲವಾರಗಳಿಂದ ಮತ್ತು ಬಾಣಗಳಿಂದ ಮರಣ ಹೊಂದುತ್ತಿದ್ದರು.

### *೨೦. ಸಿದ್ದಿ ಜೋಹಾರ ಸಲಾಬತಖಾನನಿಂದ ಸಿದ್ದಿ ಯಾಕೂತನಿಗೆ ಗುಪ್ತವಾಗಿ ಯುದ್ಧ ಸಾಮಗ್ರಿಗಳ ಸರಬರಾಜು :*

ಇದೇ ಸಮಯದಲ್ಲಿ ಗುಪ್ತಚಾರರು ಬಂದು ಬಾದಶಹನಿಗೆ ಒಂದು ಹೊಸ ಸುದ್ದಿಯನ್ನು

ಮುಟ್ಟಿಸಿದರು. 'ಕೃತಘ್ನ ಸಿದ್ದಿ ಜೋಹಾರ ಸಲಾಬತಖಾನನು ಬಾದಶಹನ ಎಲ್ಲ ಉಪಕಾರಗಳನ್ನು ಮರೆತು ಮತ್ತು ಮೊದಲಿನಂತೆ ಗೈರನಡತೆಯನ್ನೇ ಮುಂದುವರಿಸಿದ್ದಾನೆ. ಹರಪನಹಳ್ಳಿ ಜಿಲ್ಲೆಯಲ್ಲಿ ಮುಕ್ಕಾಮು ಮಾಡಿ. ತೊರಗಲ್ಲ ಕೋಟೆಯಲ್ಲಿ ಇರುವವರೊಂದಿಗೆ ಸಖ್ಯ ಬೆಳೆಸಿದ್ದಾನೆ. ಆ ಕೋಟೆಯ ಜನರಿಗೆ ಸಹಾಯಮಾಡಲು ಬಹಳ ಪ್ರಯತ್ನ ಮಾಡುತ್ತಿದ್ದಾನೆ. ಜರೂರಿಯ ಸಾಮಾನುಗಳನ್ನು, ಮದ್ದು ಗುಂಡುಗಳನ್ನು ಮತ್ತು ಅತ್ಯಂತ ಅವಶ್ಯವಿದ್ದ ಪದಾರ್ಥಗಳನ್ನು ರಹಸ್ಯವಾಗಿ ಕೋಟೆಯಲ್ಲಿ ಮುಟ್ಟಿಸುತ್ತಿದ್ದಾನೆ' ಎಂದು ಹೇಳಿದರು. ಅದನ್ನು ಕೇಳಿದ ಬಾದಶಹನಿಗೆ ಈ ಹಿಂದೆ ಸಿಟ್ಟು ಬಂದಾಗ ಅದನ್ನು ಕ್ಷಮೆಯಲ್ಲಿ ಪರಿವರ್ತಿಸಿದ್ದನು. ಆದರೆ ಇಂದಿನ ಸುದ್ದಿಯನ್ನು ಕೇಳಿದಾಗ ಎರಡು ಪಟ್ಟು ಸಿಟ್ಟುಬಂದಿತು. ಈ ರೀತಿ ಗೈರನಡತೆಯನ್ನು ಮುಂದುವರಿಸಿದರೆ ನಿನ್ನನ್ನು ನಾಶಮಾಡುವುದಾಗಿ' ಅತ್ಯಂತ ಸಿಟ್ಟಿನ ಆದೇಶವನ್ನು ಸಲಾಬತಖಾನನಿಗೆ ಕಳಿಸಿದನು. ಅಷ್ಟೊಂದು ಕಠಿಣ ಆಜ್ಞೆಯನ್ನೂ ಸಲಾಬತಖಾನನು ಹುಡುಗಾಟಿಕೆ ಎಂದು ತಿಳಿದನು. ಕಿಂಚಿತ್ತು ಭಯ ಪಡಲಿಲ್ಲ. ತನ್ನ ಧಣಿಯಾಗಿರುವ ಆದಿಲಶಹನೊಂದಿಗೆ ಸಖ್ಯದಿಂದಿರಬೇಕೆಂಬ ವಿಚಾರ ಕೂದಲೆಳೆಯಷ್ಟೂ ಆತನ ಮನದಲ್ಲಿ ಬರಲಿಲ್ಲ. ತನ್ನ ಮೊದಲಿನ ಕೆಟ್ಟ ಮತ್ತು ಕೃತಘ್ನ ನಡತೆಯನ್ನೇ ಮುಂದುವರೆಸಿದನು. ಇದನ್ನು ತಿಳಿದ ಬಾದಶಹನು ತನ್ನ ಬುದ್ಧಿವಂತ ಪ್ರಧಾನಿ ಅಬ್ದುಲ್ ಮಹಮ್ಮದನ ಜೊತೆಗೆ ಈ ವಿಷಯದಲ್ಲಿ ಹೇಗೆ ಮಾಡುವುದೆಂದು ವಿಚಾರಿಸಿದನು. ಆಗ ಆ ಪ್ರಾಮಾಣಿಕ ಅಬ್ದುಲ್ ಮಹಮ್ಮದನು, ಸಲಾಬತಖಾನನಿಗೆ ಬೇಕಾದಷ್ಟು ಸವಲತ್ತುಗಳನ್ನು ನೀಡಿ, ಹಲವಾರು ಅವಕಾಶಗಳನ್ನು ಕೊಟ್ಟರೂ ಅವನು ತನ್ನ ನಡತೆಯನ್ನು ಬದಲಿಸುತ್ತಿಲ್ಲ. ಆದ್ದರಿಂದ ಆತನನ್ನು ಹಿಡಿದು ನಾಶಮಾಡದ ಹೊರತು ಈ ಬಂಡು ನಿಲ್ಲಲಾರದು ಎಂದು ಸಲಹೆ ಕೊಟ್ಟನು.

### ೨೧. ಸಲಾಬತಖಾನನನ್ನು ನಾಶಮಾಡುವ ಇರಾದೆಯಿಂದ ಅಲೀ ಆದಿಲಶಹನು ಕರ್ನೂಲ ಕಡೆಗೆ ಪ್ರಯಾಣ ಬೆಳೆಸಿದ್ದು :

ಬಾದಶಹನು ಬುದ್ಧಿವಂತ ವಜೀರನ ಮಾತುಗಳನ್ನು ಕೇಳಿ, ಆತನ ಯುಕ್ತಿಯನ್ನು ಮನದಲ್ಲಿ ತುಂಬಿಕೊಂಡು "ನೀನು ಹೇಳಿದ್ದು ಸತ್ಯವಾಗಿದೆ. ಇದನ್ನು ಬಿಟ್ಟು ಬೇರೆ ದಾರಿಯೇ ಇಲ್ಲ"ವೆಂದು ಹೇಳಿ, "ತೊರಗಲ್ಲ ಮೇಲಿನ ಹಲ್ಲೆಯನ್ನು ನಿಲ್ಲಿಸಿ, ಕರ್ನೂಲ ಕಡೆಗೆ ಸೈನ್ಯದ ಢಾಲನ್ನು ಎತ್ತಬೇಕು" ಎಂದು ಆಜ್ಞೆ ಮಾಡಿದನು. ಬಾದಶಹನ ಸವಾರಿ ಇತ್ತ ಕಡೆ ಬರುತ್ತಿದೆ ಎಂದು ಸಲಾಬತಖಾನನಿಗೆ ತಿಳಿದಾಗ ಭಯಗೊಂಡು ಹರಪನಹಳ್ಳಿಯಿಂದ ಕೂಚ್‌ಮಾಡಿ ಹೊರಟನು. ಬಾದಶಹನು ಬರುವ ಮಾರ್ಗದಲ್ಲಿಯ ಮುದಗಲ್ಲ ಕೋಟೆಯ ಕಿಲ್ಲೇದಾರನಿಗೆ ಸಲಾಬತಖಾನನು ಮೂರ್ಖತನದ ಪತ್ರವನ್ನು ಬರೆದು, 'ಎಚ್ಚರಿಕೆ, ಗಾಬರಿಯಾಗಬೇಡ, ಧೈರ್ಯ ಬಿಡಬೇಡ, ತೊರಗಲ್ಲ ಕೋಟೆಯ ಮೇಲಿನ ಕಿಲ್ಲೇದಾರ ಸಿದ್ದಿಯಾಕೂತನು ಧೈರ್ಯದಿಂದ ತನ್ನ ಸ್ಥಳದಲ್ಲಿ ಸ್ಥಿರವಾಗಿ ಉಳಿದನು. ನೀನೂ ಹಾಗೆಯೇ ಮಾಡು. ಬಾದಶಹನ ಸೈನ್ಯವನ್ನು ಕೋಟೆಯ ಆಸುಪಾಸಿನಲ್ಲೂ ಬರಲು ಬಿಡಬೇಡ. ನಾನು ನಿನ್ನ ಬೆನ್ನ ಹಿಂದೆ ಪ್ರತಿಯೊಂದು ರೀತಿಯಲ್ಲಿ ಸಹಾಯ ಮಾಡಲು ಸಿದ್ಧನಾಗಿರುವೆ, ನಾನೂ ಬಂದು ಮುಟ್ಟುತ್ತೇನೆ. ಒಂದು ವೇಳೆ ನನ್ನ ಆಜ್ಞೆಯನ್ನು ಮುರಿದು ನೀನು ಬೇರೆ ಕೆಲಸ ಮಾಡಿದರೆ ನಿನ್ನನ್ನು ಶಿಕ್ಷಿಸುತ್ತೇನೆ, ನಿನಗೆ ಬಹಳ ತೊಂದರೆ ಕೊಡುತ್ತೇನೆ' ಎಂಬುದಾಗಿ ಮುದಗಲ್ಲ ಕಿಲ್ಲೇದಾರನಿಗೆ ಪತ್ರಬರೆದು ಕಳಿಸಿದನು.

ಮುದಗಲ್ಲ ಕೋಟೆಯ ಕಿಲ್ಲೇದಾರನು ಜನ್ಮತಃ ಒಳ್ಳೆಯ ಮನುಷ್ಯ, ಪ್ರಾಮಾಣಿಕನಾಗಿದ್ದನು.ಉಪ್ಪು ತಿಂದ ಧಣಿಯನ್ನು ಎಂದೂ ಮರೆಯಲಾರದ, ಉತ್ತಮ ನಡತೆಯ ಮನುಷ್ಯನಾಗಿದ್ದನು. ಮೂಲತಃ

ಬಾದಶಹನ ಚಾಕರ ಜನರಲ್ಲಿಯ ಒಬ್ಬನಾಗಿದ್ದನು. ಆದ್ದರಿಂದ ಸಲಾಬತಖಾನನ ಪತ್ರವಲ್ಲಿಯ ವಿಷಯವನ್ನು ಕಿಂಚಿತ್ತೂ ಮನದಲ್ಲಿ ತರಲಿಲ್ಲ. ಆ ಮೂರ್ಖನ ಮಾತು ಒಂಟೆಯ ಗೋಣಿನಂತೆ, ಅಂದರೆ ಒಂಟೆಯು ಎದ್ದು ನಿಂತು ಗೋಣನ್ನು ಹೊರಳಿಸುತ್ತದೆ. ಆಗ ಅದರ ಗೋಣು ಭೂಮಿಯ ಕಡೆಗೂ ಇರುವುದಿಲ್ಲ. ಆಕಾಶದ ಕಡೆಗೂ ಇರುವುದಿಲ್ಲ. ಅದರ ಹಾಗೆ ಸಲಾಬತಖಾನನ ಮಾತುಗಳು ವ್ಯರ್ಥ ಎಂದು ತಿಳಿದು, ಆ ಕಿಲ್ಲೇದಾರನು ಪ್ರಾಮಾಣಿಕತೆಯಿಂದ ಸುಮ್ಮನಿದ್ದು ಬಿಟ್ಟನು, ಬಾದಶಹನ ಸೈನ್ಯವು ಕೋಟೆಯ ಸಮೀಪ ಬಂದು ಮುಟ್ಟಿತು. ಆಗ ಕಿಲ್ಲೇದಾರನು ತನ್ನ ತಲೆಯನ್ನೆ ಕಾಲುಮಾಡಿಕೊಂಡು, ಬಾದಶಹನನ್ನು ಎದುರುಗೊಂಡನು. ಆತನ ಚರಣಗಳ ಮೇಲೆ ತಲೆಯನ್ನಿಟ್ಟು ಕೋಟೆಯ ಬೀಗದ ಕೈಗಳನ್ನು ಬಾದಶಹನ ಸಿಂಹಾಸನದ ಸನ್ನಿಧಿಯಲ್ಲಿ ನಿಂತಿದ್ದ ಸೇವಕನ ಕೈಯಲ್ಲಿ ಕೊಟ್ಟನು. ಆಗ ಬಾದಶಹನು ಅತ್ಯಂತ ಕೃಪೆತೋರಿ, ಆತನಿಗೆ ವಸ್ತ್ರಗಳೇ ಇತ್ಯಾದಿ ಅನೇಕ ಬಕ್ಷೀಸುಗಳನ್ನು ಕೊಟ್ಟನು. ಬಾದಶಹನು ತನ್ನ ಕಲ್ಯಾಣಪ್ರದ ಚರಣಗಳಿಂದ ಆ ಕೋಟೆಗೆ ಸ್ವರ್ಗದ ಹಾಗೆ ಶೋಭೆ ತಂದನು. ಅಂದರೆ ಬಾದಶಹನು ಆ ಕೋಟೆಯ ಮೇಲೆ ಹತ್ತಿಹೋದನು. ಎರಡು ಮೂರು ದಿನ ಆ ಕೋಟೆಯಲ್ಲಿ ಮುಕ್ಕಾಮು ಮಾಡಿದನು. ಅನಂತರ ಅಧಿಕ ಭಾರದ ಸಾಮಾನು ಸರಂಜಾಮುಗಳನ್ನು ಆ ಕೋಟೆಯಲ್ಲಿಯೇ ಇಟ್ಟು, ಶತ್ರುವಿನ ಪಾರುಪತ್ಯಗೆ ಬೇಕಾಗುವ ಸಾಮಾನುಗಳನ್ನು ತೆಗೆದುಕೊಂಡನು. ತನ್ನ ದಂಡಿನ ಯಶಸ್ವೀ ಧಾಲನ್ನು ಎತ್ತಿ, ಅಲ್ಲಿಂದ ಕೂಚ್ ಮಾಡಿದನು. ಒಂದೆರಡು ಮಜಲು ಹೋದನಂತರ 'ಭಂಜಾರ' ಕೋಟೆಯನ್ನು ಮುಟ್ಟಿದನು. ಆಗ, ಕೃತಘ್ನ ಸಲಾಬತಖಾನನು ಕೆಳಗೆ ಇಳಿದು ಬಂದು ಯುದ್ಧ ಕೈಕೊಳ್ಳುವ ಇರಾದೆ ಮಾಡಿದ್ದಾನೆಂಬ ಸುದ್ದಿ ತಿಳಿಯಿತು.

### *೨೨. ಭಂಜೋರ ಕೋಟೆಯ ಸಮೀಪ ಅಲೀ ಆದಿಲಶಹನಿಗೂ ಸಲಾಬತಖಾನನಿಗೂ ಯುದ್ಧ, ಸಲಾಬತಖಾನನ ಸೋಲು :*

ಅಲೀ ಆದಿಲಶಹನ ಕಡೆಗೆ ಅಲ್ಲಾನ ಸಹಾಯ ಮತ್ತು ಯಶ ಇತ್ತು. ಆ ಆಧಾರದಮೇಲೆ ಧೈರ್ಯದಿಂದ ಸಲಾಬತಖಾನನ್ನು ನಾಶ ಮಾಡಲು ಹೊರಟಿದ್ದನು. ತನ್ನ ಸೈನ್ಯದಲ್ಲಿ ಯುದ್ಧವ್ಯೂಹವನ್ನು ಅತಿ ಉತ್ತಮ ರೀತಿಯಿಂದ ರಚಿಸಿದ್ದನು. ಯುದ್ಧದ ಮುಂದಿನ ಬದಿಯಲ್ಲಿ ಮಮಲಕತಮದಾರ ಅಬ್ದುಲ ಮಹಮ್ಮದ ಮತ್ತು ನವಾಬ ಬಹಲೋಲಖಾನ ಉಭಯತರು ನಿಂತಿದ್ದರು. ಸೈನ್ಯದ ಬಲ ಬದಿಯಲ್ಲಿ ಮುಲ್ಲಾ ಅಹಮದ ಮತ್ತು ಶಾರ್ಜಾಖಾನ ನಿಂತಿದ್ದರು. ಎಡಬದಿಗೆ ಖವಾಸಖಾನ ಮತ್ತು ಯಖಲಾಸಖಾನ ನಿಂತಿದ್ದರು. ಸೈನ್ಯದ ಮಧ್ಯ ಭಾಗದಲ್ಲಿ ಬಾದಶಹನ ಸ್ವಾರಿ ನಿಂತಿತ್ತು. ಬಾದಶಹನ ಹಿಂದೆ ಅಜೀಜಖಾನ ಇತ್ಯಾದಿ ಕೆಲವು ಸರದಾರರು ನೋಡಿಕೊಳ್ಳುತ್ತಿದ್ದರು. ಸಲಾಬತಖಾನ ಕೂಡ ಬಾದಶಹನ ಸೈನ್ಯದ ಎದುರಿಗೆ ತನ್ನ ಸೈನ್ಯವನ್ನು ನಿಲ್ಲಿಸಿದ್ದನು. ತನ್ನ ಕೃತಘ್ನತೆಯನ್ನು ಧಣಿಯ ವಿರುದ್ಧ ತೋರಿಸಲು ಪ್ರಾರಂಭಿಸಿದನು. ಉಪ್ಪು ತಿಂದ ಮನೆಗೆ ಎರಡು ಬಗೆಯುವ ನಡತೆಯನ್ನೇ ಸ್ವೀಕರಿಸಿ ತನ್ನ ಧಣಿಯ ಸಮ್ಮುಖದಲ್ಲೆ ನಿಂತು ಯುದ್ಧ ಮಾಡಲು ಹೆಜ್ಜೆಯನ್ನು ಮುಂದಿಟ್ಟನು.

ಉಭಯ ಸೈನ್ಯದಲ್ಲೂ ಶಸ್ತ್ರಾಗ್ನಿಗಳು ಪ್ರದೀಪ್ತವಾದುವು. ಪರಸ್ಪರ ಯುದ್ಧಶಸ್ತ್ರಗಳನ್ನು ಪ್ರಯೋಗಿಸತೊಡಗಿದರು. ಆ ಶಸ್ತ್ರಗಳ ಅಬ್ಬರದಿಂದ ಎದೆ ಗುಂಡಿಗಳು ಹಾರುತ್ತಿದ್ದುವು. ಉಭಯ ಕಡೆಯ ಶೂರರ ಅಂತಃಕರಣದಲ್ಲಿ ಕಪಟತನ ಬೆಳೆಯಿತು. ಅದರಿಂದಾಗಿ ಭಾರೀ ಪ್ರಳಯವಾಗುವ ಪ್ರಸಂಗ ಪ್ರಾಪ್ತವಾಯಿತು. ಬಹಳಷ್ಟು ಜನರು ಆ ಯುದ್ಧದಲ್ಲಿ ಸಾಯತೊಡಗಿದರು. ಆಗ ಉಭಯ

ಸೈನ್ಯಗಳ ವೀರರು ರಣಭೂಮಿಯಲ್ಲಿ ಶೂರತನದಿಂದ ಯುದ್ಧ ಪ್ರಾರಂಭಿಸಿದರು. ಶಸ್ತ್ರಗಳು ತುಂಬ ಹಸಿದಿದ್ದುವು ಹಾಗು ನೀರಡಿಸಿದ್ದುವು. ಅವುಗಳನ್ನು ಶತ್ರು ಜನರ ಮಾಂಸಗಳಿಂದ ತೃಪ್ತಿಪಡಿಸಿದರು. ಆ ಎಲ್ಲ ರಣಭೂಮಿ ತಾಮ್ರವರ್ಣದ ಹೂದೋಟದಂತೆ ಕೆಂಪಾಯಿತು. ಭೂಮಿಯ ಮೇಲೆ ಸತ್ತವರ ಪ್ರೇತಗಳ ರಾಶಿ ಬಿದ್ದಿತು. ಓಡಿ-ಓಡಿ ಹೊಡಿ-ಹೊಡಿ ಎಂಬ ಕೂಗಿನ ಮಧ್ಯ ಅಬ್ದುಲ ಮಹಮ್ಮದ ಮತ್ತು ಬಹಲೋಲಖಾನರ ಗುಂಪು ವಿದ್ಯುತ್ತಿನಂತೆ ಶೀಘ್ರದಲ್ಲಿ ಕುದುರೆಗಳನ್ನು ಓಡಿಸುತ್ತ, ಶತ್ರುವಾದ ಸಲಾಬತಖಾನನ ಸೈನ್ಯದ ಮೇಲೆ ಏರಿ ಬಂದರು. ಅದರಂತೆ ಮುಲ್ಲಾ ಅಹಮ್ಮದ ಮತ್ತು ಶರ್ಜಾಖಾನರು ಸಲಾಬತಖಾನನ ಎಡಗಡೆಗೆ ನಿಂತವರು ಮತ್ತೆ ಕೆಲವು ಸರದಾರರೊಂದಿಗೆ ಗದ್ದಲಹಾಕಿ ಅವರ ಬೆವರು ಇಳಿಸಿದರು. ಆ ಗದ್ದಲದಲ್ಲಿ ಒಮ್ಮೆಂದೊಮ್ಮೆಲೇ ಸಲಾಬತಖಾನನ ಸೈನ್ಯದಲ್ಲಿ ಹಾಹಾಕಾರ ಎದ್ದಿತು. ಬಾದಶಹನ ಒಟ್ಟು ಸೈನ್ಯ ಮೇಲೆ ಬಿದ್ದಾಗ ಸಲಾಬತಖಾನನ ಸೈನ್ಯಕ್ಕೆ ಓಡಿಹೋಗುವುದರ ಹೊರತು ಬೇರೆ ದಾರಿಯೇ ಉಳಿಯಲಿಲ್ಲ. ಸಲಾಬತಖಾನನ ಅನೇಕ ಜನರು ತಲವಾರಿನಿಂದ ಗಾಯಗೊಂಡು ಸತ್ತಿದ್ದರು. ಕೆಲವು ಜನ ಗಾಯಾಳುಗಳಾಗಿದ್ದರೆ ಇನ್ನು ಕೆಲವರು ಅರೆಸತ್ತವರಾಗಿದ್ದರು. ಅವರು ಒಬ್ಬರ ಬೆನ್ನು ಹಿಂದೆ ಒಬ್ಬರು ಒಂದೆ ಸಮನೆ ಓಡಿ ಹೋದರು. ಆ ಗದ್ದಲದಲ್ಲಿ ಮತ್ತು ಆನೆ ಕುದುರೆಗಳ ಧಕ್ಕೆಯಲ್ಲಿ ಸಿದ್ದಿಜೋಹಾರ ಸಲಾಬತಖಾನನು ಪೆಟ್ಟು ತಿಂದು ಕುದುರೆಯ ಮೇಲಿಂದ ಕೆಳಗೆ ಬಿದ್ದನು. ಹತ್ತಿರದ ಒಬ್ಬ ಸಿಪಾಯಿಯ ಕುದುರೆಯ ಮೇಲೆ ಕುಳಿತು ತನ್ನ ಹತ್ತಿರ ಇರುವ ಜನರೊಂದಿಗೆ ಓಡಿ ಹೋದನು. ಮರಣ ಸಂಕಟದಿಂದ ಪ್ರಾಣವನ್ನು ಉಳಿಸಿಕೊಂಡನು. ಅಲ್ಲಾನ ಸಹಾಯ ಮತ್ತು ಸುದೈವವು ಆದಿಲಶಾಹ ಬಾದಶಹನ ಕಡೆಗೆ ಇತ್ತು. ಅದ್ದರಿಂದ ಆದಿಲ ಶಹನ ಗೆಲುವಾಯಿತು. ಆದಿಲಶಾಹನ ಅಕಲ್ಯಾಣವನ್ನು ಇಚ್ಛಿಸುವ ಸಲಾಬತಖಾನನಿಗೆ ಸೋಲಾಯಿತು.[1]

ಆದಿಲಶಹ ಬಾದಶಹನಿಗೆ ಅತಿ ಆನಂದವಾಗಿ ಅಲ್ಲಾನನ್ನು ಸ್ತುತಿಸಿದನು. ಯುದ್ಧದಲ್ಲಿ ತುಂಬ ಧಕ್ಕೆ ತಿಂದು ದಣಿದಿದ್ದ ಸಿದ್ದಿ ಜೋಹಾರನು ಸೋತು ಓಡಿ ಹೋಗಿ ರಾಯಚೂರು, ಕೋಟೆಯಲ್ಲಿ ವಿಶ್ರಾಂತಿ ಪಡೆದನು. ಯುದ್ಧದ ಸೋಲಿನಿಂದ ತುಂಬ ಮನನೊಂದು ಸಂತಾಪ ಜ್ವರದಿಂದ ಬಳಲಿದನು. ಆದಿಲಶಹನ ಕಡೆಯ ಜನರು ಅಲ್ಲಿಯೂ ಬೆನ್ನು ಹತ್ತಲು ಅಲ್ಲಿಂದಲೂ ಓಡಿ ಹೋಗಿ ಮಹಮದ ನೂರ ಕರ್ನೂಲಿಗೆ ಹೋದನು. ಅಲ್ಲಿ ತನ್ನ ಇರುವಿಕೆಯ ವ್ಯವಸ್ಥೆ ಮಾಡಿ, ರೋಗಕ್ಕೆ ಉಪಚಾರ ಪಡೆಯಹತ್ತಿದನು.

### ೨೩. *ಅಲೀ ಆದಿಲಶಹನು ರಾಯಚೂರು ಕೋಟೆಯನ್ನು ಗೆದ್ದದ್ದು ಮತ್ತು ಖುಸ್ರೋನನ್ನು ಕಿಲ್ಲೇದಾರ ಕೆಲಸದ ಮೇಲೆ ನೇಮಿಸಿದ್ದು :*

ಬಾದಶಹನ ಸವಾರಿಯು ಯಶಸ್ವಿಯಾಗಿ ಅತಿ ಸಂತೋಷದಿಂದ ರಾಯಚೂರು ಕೋಟೆಗೆ ಬಂದು ಮುಟ್ಟಿತು. ಅಲ್ಲಿ ಕಿಲ್ಲೇದಾರನಾಗಿದ್ದ ಸಿದ್ದಿ ಜೋಹಾರನ ಕಡೆಯ ಹವಾಲದಾರನು ಬಾದಶಹನ ಸೈನ್ಯದೊಂದಿಗೆ ಯುದ್ಧ ಮಾಡಲು ಸಿದ್ಧನಾದನು. ಹವಾಲದಾರನ ಕೈಕೆಳಗಿನ ಸರದಾರ ಮಂಡಳಿ ಮತ್ತು ಸಿಬ್ಬಂದಿಯವರು ಬಹಳ ಪ್ರಾಮಾಣಿಕರಾಗಿದ್ದರು. ಅವರು ಹವಾಲದಾರನ ಸೊಕ್ಕು ಹಾಗು ಕೃತಘ್ನತೆಯನ್ನು

---

೧. ಶಕೆ ೧೫೮೩ (ಕ್ರಿ.ಶ.೧೬೬೧-೬೨) ಸಿದ್ದಿ ಜೋಹಾರ ಸಲಾಬತಖಾನನು ಅಲೀ ಆದಿಲಶಹನೊಂದಿಗೆ ಸ್ವತಃ ಯುದ್ಧ ಮಾಡಿ ಸೋತನು. ಆತ ಓಡಿ 'ಕೊಳೊಸಿ'ಗೆ (ಕನಕವಲಿ-ಕರ್ನೂಲು) ಹೋದನು ಮತ್ತು ಎರಡು ತಿಂಗಳಲ್ಲಿ ಸತ್ತನು-ಜೇಧೆ ಶಕಾವಲಿ ಪುಟ-೨೨

ಅರಿತು ಅತ್ಯಂತ ಸಿಟ್ಟಿನಿಂದ ಒಮ್ಮೆಲೇ ಆತನ ಆಜ್ಞೆಗಳನ್ನು ಧಿಕ್ಕರಿಸಿದರು ಹಾಗೂ ಆತನ ಚಾಕರಿಯನ್ನೂ ಬಿಟ್ಟುಬಿಟ್ಟರು. ಅವಕಾಶ ಮಾಡಿಕೊಂಡು ಸಂಧಿಯನ್ನು ಸಾಧಿಸಿ, ಹವಾಲದಾರನನ್ನು ಬಂಧಿಸಿದರು. ಮತ್ತು ಸದರೀ ಕೋಟೆಯ ಬೀಗದ ಕೈಯನ್ನು ತೆಗೆದುಕೊಂಡು ಓಡುತ್ತ ಬಂದು, ಬಾದಶಹನ ಕೃಪೆಗೆ ಪಾತ್ರರಾದರು, ಬಕ್ಷೀಸು ಮತ್ತು ಇನಾಮುಗಳನ್ನು ಪಡೆದರು. ಅನಂತರ ಬಾದಶಹನ ಸವಾರಿ ಆ ಕೋಟೆಯ ಮೇಲೆ ಏರಿ ಹೋಗಿ, ಆಕಾ ಖುಸ್ರೋ ಎಂಬ ಸಣ್ಣ ವಯಸ್ಸಿನ, ಪೂರ್ಣ ವಿಶ್ವಾಸದ ಸರಕಾರೀ ಚಾಕರನನ್ನು ಆ ಕೋಟೆಗೆ ಕಿಲ್ಲೇದಾರನೆಂದು ನೇಮಿಸಿದನು. ಅಲ್ಲಿಂದ ಕುತಂತ್ರಗಳನ್ನು ಮತ್ತು ಗೈರನಡತೆಯ ಶತ್ರುಗಳನ್ನು ನಿರ್ಮೂಲ ಮಾಡುವ ಇರಾದೆಯಿಂದ ದಂಡಿನ ಥಾಲವನ್ನು ಎತ್ತಿ ಬಾದಶಾಹಿಯ ಸವಾರಿ ಮುಂದೆ ಹೊರಟಿತು. ತುಂಗಭದ್ರೆಯ ದಂಡೆಯ ಮೇಲೆ ಬಿಡಾರವನ್ನು ಹೂಡಿ, ಬಾದಶಹನು ಅಲ್ಲಿ ಇಳಿದುಕೊಂಡನು. ಅನೇಕ ಪರಾಕ್ರಮಿ ಸರದಾರ ಮಂಡಳಿಗೆ ಮುಸಾಖಾನ ಪಠಾಣ, ಮತ್ತು ಜೇಹಜಾರರಾವ (ಜುಂಜಾರರಾವ) ಮುಂತಾದ ದೊಡ್ಡ ದೊಡ್ಡ ಸರದಾರರಿಗೆ ಬಾದಶಹನು ಆಜ್ಞೆ ಮಾಡುತ್ತ, "ನೀವು ತುಂಗಭದ್ರೆಯನ್ನು ದಾಟಿ ಆ ದಂಡೆಗೆ ಹೋಗಬೇಕು. ಒಂದು ವೇಳೆ ಯಾರಾದರೂ ನಿರ್ದೈವಿಗಳು, ಕೆಟ್ಟ ನಡೆತೆಯವರು ನಿಮ್ಮನ್ನು ಎದುರಿಸಿ ಯುದ್ಧ ಮಾಡಲು ಬಂದರೆ, ಮೊಲವೇ ಅಡುಗೆಯ ಮನೆಯಲ್ಲಿ ಬಂದಂತೆ, ಬೇಟೆಯೇ ನಡೆದು ಬಂದಿದೆ ಎಂದು ತಿಳಿದು ಅವರನ್ನು ತಕ್ಷಣ ತಲವಾರಿನಿಂದ ತುಂಡರಿಸಿರಿ. ಶತ್ರುವಿನ ಕಡೆಯ ಉತ್ತಮ ದೈವಹೊಂದಿದವರು, ಒಳ್ಳೆಯ ನಡತೆಯವರು, ಬಾದಶಾಹಿಯ ಚಾಕರಿಯನ್ನು ಒಪ್ಪಿ ಬಾದಶಹರ ಆದೇಶಗಳಂತೆ ನಡೆಯುತ್ತೇನೆ ಎಂದು ಶರಣು ಬಂದವರು ಮತ್ತು ಇಂದಿನವರೆಗೆ ಅಗೌರವ ತೋರಿಸಿ ನಡೆದ ನನ್ನ ಸರ್ವ ಅಪರಾಧಗಳನ್ನು ಕ್ಷಮೆ ಮಾಡಿರಿ ಎಂದು ಕಾಲಿಗೆ ಬಿದ್ದು ಕರಾರು ಪತ್ರ ಬರೆದುಕೊಟ್ಟವರು ಇಂಥವರಿಗೆ ಅಭಯ ನೀಡಿ, ಅವರ ಜೀವಕ್ಕೆ ಮತ್ತು ಮಾಲಮತ್ತೆಗೆ ಧಕ್ಕೆ ಮಾಡಬೇಡಿರಿ, ಅವರಿಗೆ ಯಾವ ಚಿಂತೆಯೂ ಆಗದಂತೆ, ನೋಡಿಕೊಳ್ಳಿರಿ ಅವರನ್ನು ಯಾವುದೇ ರೀತಿಯಿಂದ ಪೀಡಿಸಬೇಡಿರಿ" ಎಂದು ಆಜ್ಞೆ ಮಾಡಿದನು. ಅವನ ಆಜ್ಞೆಯನ್ನು ಶಿರಸಾವಹಿಸಿ ಸರದಾರರು ತುಂಗಭದ್ರೆಯನ್ನು ದಾಟಲು ನೀರಿನಲ್ಲಿ ಇಳಿದರು.

*೨೪. ಮೂಸಾಖಾನ ಮತ್ತು ಜವಾಹರರಾವ ಉಭಯತರ ಮೇಲೆ ಸಿದ್ದಿ ಮಾಸೂದನು, ರಾತ್ರಿ ಹೊತ್ತು ಮುತ್ತಿಗೆ ಹಾಕಿದ್ದು ಮತ್ತು ಸಿದ್ದಿ ಮಾಸೂದನ ಸೋಲು. ಈ ಘಟನೆ ನಡೆಯುತ್ತಿದ್ದಂತೆ ಸಿದ್ದಿ ಜೋಹಾರ ಸಲಾಬತಖಾನನ ಮರಣ :*

ಸಿದ್ದಿ ಮಾಸೂದನು ಸಲಾಬತಖಾನನ ಅಳಿಯ. ಅವನನ್ನು ಸಲಾಬತಖಾನನೇ ತಯಾರು ಮಾಡಿದ್ದನು. ಆದಿಲಶಾಸಿಯ ತುಸು ಸೈನ್ಯ ನದಿಯನ್ನು ಇಳಿದು ಇತ್ತ ಕಡೆ ಬಂದಿದೆ ಎಂದು ಆತನಿಗೆ ತಿಳಿಯಿತು. ಅದರ ಮೇಲೆ ಹಲ್ಲೆ ಮಾಡಿ ನದಿಯ ಅತ್ತಕಡೆಯೇ ಹೊರಹಾಕಬೇಕು ಎಂದು, ಸೊಕ್ಕಿನಿಂದ ರಾತ್ರಿ ಹೊತ್ತು ಮುತ್ತಿಗೆ ಹಾಕಲು ಇರಾದೆ ಮಾಡಿದನು. ಮೂರು ನಾಲ್ಕು ಸಾವಿರ ಹತ್ಯಾರ ಬಂದ ಯೋಧರೊಂದಿಗೆ ರಾತ್ರಿ ಹೊತ್ತು ಆದಿಲಶಾಹಿಯ ಗುಂಪಿನ ಮೇಲೆ ಸಿದ್ದಿ ಮಾಸೂದನು ಏರಿ ಬಂದನು. ಮೂಸಾಖಾನ ಮತ್ತು ಜವಾಹರ ರಾವ ಅವರುಗಳಿಗೆ ಈ ಸುದ್ದಿ ಕಿವಿಗೆ ಬಿದ್ದಿತ್ತು. ಆದ್ದರಿಂದ ಅವರು ತಮ್ಮ ಸ್ಥಳಗಳಲ್ಲಿ ಎಚ್ಚರಿಕೆಯಿಂದ ಇದ್ದು, ಮುತ್ತಿಗೆ ಯಾವಾಗ ಬಂದೀತು ಎಂಬ ಮಾರ್ಗಪ್ರತೀಕ್ಷೆಯಲ್ಲಿಯೇ ಇದ್ದರು. ಅಷ್ಟರಲ್ಲಿ ಸಿದ್ದಿ ಮಾಸೂದನು ನಿರ್ಭಯದಿಂದ ಮಂಡಳಿಯ ಮೇಲೆ ಏರಿ ಬಂದನು. ಆದಿಲಶಹನ

ಕಡೆಯ, ಶೂರ ಮಂಡಳಿಯು ತಲವಾರ ಹೊಡೆತದ ದೊಡ್ಡ ಪ್ರಳಯವನ್ನೇ ಉಕ್ಕಿಸಿದರು ಮತ್ತು ಬಾಣಗಳ ಸುರಿಮಳೆಯನ್ನೆ ಸುರಿದರು. ಬಾಣ-ತಲವಾರುಗಳ ಹೊಡೆತದಿಂದ ಒಂದು ಕ್ಷಣದಲ್ಲಿ ಸಿದ್ದಿ ಮಾಸೂದನ ಗುಂಪನ್ನು ಗಾಬರಿಗೊಳಿಸಿದರು. ಸಿದ್ದಿ ಮಾಸೂದನ ಬಹಳ ಜನರು ಕೊಲೆಯಾದರು. ಬಹುತೇಕ ಧೂಳಿದಶವಾದರು. ಉಳಿದ ಕೆಲವು ಜನರೊಂದಿಗೆ ಸಿದ್ದಿ ಮಾಸೂದನು ಓಡಿ ಹೋಗಿ ಪ್ರಾಣವನ್ನು ಉಳಿಸಿಕೊಂಡನು. ಈ ಮೊದಲೇ ಸೋತು ಅಪಮಾನಿತನಾಗಿದ್ದ ಸಲಾಬತಖಾನನು ಬೇನೆಯಿಂದ ಹಾಸಿಗೆಯಲ್ಲಿ ಮಲಗಿಯೇ ಇದ್ದನು. ಹೀಗಿರುವಾಗ ಈಗ ತನ್ನ ಅಳಿಯನೂ ಸೋತನೆಂಬ ಸುದ್ದಿ ಕೇಳಿದನು. ಆಗ ಸಲಾಬತಖಾನನ ಬೇನೆ ಹತ್ತು ಪಟ್ಟು ಅಧಿಕವಾಯಿತು. ರೋಗವು ಉಲ್ಬಣಿಸುತ್ತಲೇ ಹೋಯಿತು. ತುಸು ದಿನಗಳಲ್ಲಿ ಮರಣ ಹೊಂದಿದನು. ಆತ ಸತ್ತ ನಂತರ ಅವರ ಮಗ ಅಬ್ದುಲ್ ಅಜೀಜ ಮತ್ತು ಅಳಿಯ ಸಿದ್ದಿ ಮಸೂದರು ಎಚ್ಚರಗೊಂಡರು. ಸಲಾಬತಖಾನನ ಶಿಕ್ಷೆಯನ್ನು ನೋಡಿ ತಮಗೂ ಇದೇ ಗತಿಯೆಂದು ತಿಳಿದುಕೊಂಡರು. ತಮ್ಮ ಗರ್ವ, ಸ್ವಾಭಿಮಾನಗಳನ್ನು ಬಿಟ್ಟು ಪ್ರಧಾನ ಮಂತ್ರಿ ಅಬದುಲ ಮಹಮ್ಮದ ಬಹಲೋಲಖಾನನ ಹತ್ತಿರ ಒಂದು ವಿನಂತಿ ಪತ್ರವನ್ನು ಕಳಿಸುತ್ತ, ಅದರಲ್ಲಿ "ನಮ್ಮ ತಂದೆ ಕೆಟ್ಟ ಜನರ ಕಲಿಕೆಯಿಂದ ಗೈರನಡತೆಯನ್ನು ಮಾಡಿ ಸತ್ತನು. ಅಪಕೀರ್ತಿಯನ್ನು ಪಡೆದನು. ಆದ್ದಿರಿಂದ ಅಲ್ಲಾನು ಆತನ ಅಯೋಗ್ಯ ನಡತೆಯ ಸೇಡನ್ನು ತೀರಿಸಿಕೊಂಡನು. ಆತನ ಕರ್ಮದಂತೆ ಫಲವನ್ನೂ ಕೊಟ್ಟನು. ಈಗ ನಮಗೆ ತಮ್ಮ ಹೊರತು ಬೇರೆ ಯಾವ ಆಧಾರವೂ ಇಲ್ಲ. ತಾವು ಎಲ್ಲರ ಆಧಾರವಾಗಿದ್ದೀರಿ. ಆದ್ದರಿಂದ ನಾವು ತಮ್ಮ ಆಶ್ರಯವನ್ನು ಬಿಟ್ಟು ಎಲ್ಲಿ ಹೋಗಬೇಕು? ನಾನು ತಪ್ಪಿರುವೆ, ನನ್ನ ತಪ್ಪುಗಳನ್ನು ಮನ್ನಿಸಿರಿ ಎಂದು ಯಾರಾದರೂ ವಿನಂತಿಸಿಕೊಂಡರೆ ಆದಿಲಶಾಹಿ ದರಬಾರದಲ್ಲಿ ಕ್ಷಮೆ ದೊರಕುತ್ತದೆ. ಆದ್ದರಿಂದ ನಮ್ಮನ್ನು ಕ್ಷಮಿಸಿ ಅಭಯ ಪತ್ರ ನೀಡಿದರೆ ನಾವು ತಲೆಯಿಂದ ಬಂದು ತಮ್ಮ ಚರಣಗಳ ಮೇಲೆ ತಲೆಯನ್ನು ಇಡುತ್ತೇವೆ" ಎಂದು ಬರೆದರು.

### *೨೫. ಅಬ್ದುಲ ಮಹಮ್ಮದ ಬಹಲೋಲಖಾನನ ಮಧ್ಯಸ್ಥಿಕೆಯಿಂದ ಅಬ್ದುಲ ಅಜೀಜ ಮತ್ತು ಸಿದ್ದಿ ಮಸೂದರನ್ನು ಅಲೀ ಆದಿಲಶಾಹನು, ಕ್ಷಮಿಸಿದ್ದು :*

ಅಲೀ ಆದಿಲಶಹನು ಸಂತೋಷದಲ್ಲಿರುವ ಸಮಯವನ್ನು ನೋಡಿ ಮಮಲಕತ ಮದಾರ ನವಾಬ ಬಹಲೋಲಖಾನನು ಹೀಗೆ ವಿನಂತಿಸಿಕೊಂಡನು. "ಸಲಾಬತಖಾನನು ಮೂರ್ಖ ಮತ್ತು ಕೆಟ್ಟ ಜನರ ಸಹವಾಸದಿಂದ, ಅವರ ಕಲಿಕೆಯಿಂದ ತಪ್ಪು ದಾರಿ ಹಿಡಿದು ಧಣಿಗಳ ವಿರುದ್ಧ ಕೆಲಸ ಮಾಡಿದನು. ಆ ಕೆಟ್ಟ ಕೆಲಸಗಳ ಫಲವನ್ನೂ ಆತ ಪಡೆದನು. ಆತನ ಹೆಂಡತಿ ಮಕ್ಕಳಿಂದ ಯಾವ ಅಪರಾಧವೂ ಆಗಿಲ್ಲ. ಒಳ್ಳೆಯ ನಡತೆಯವರಾಗಿದ್ದಾರೆ. ಬಾದಶಹರು ಅವರ ಮೇಲೆ ಕೃಪೆ ಮಾಡಬೇಕೆಂದು ಅವರು ಬಯಸುತ್ತಿದ್ದಾರೆ. ದೊಡ್ಡ ದೊಡ್ಡ ಬಾದಶಹರು ಅಪರಾಧ ಗೈದವರನ್ನು ಶಿಕ್ಷಿಸಿ ಅವರ ಕುಟುಂಬದವರ ಮೇಲೆ ಕೃಪೆ ಮಾಡಿದ ಉದಾಹರಣೆಗಳಿವೆ. ಒಂದು ವೇಳೆ ಆ ನಿರಾಶ್ರಿತ ಕುಟುಂಬದ ಮೇಲೆ ಬಾದಶಹರ ಕೃಪೆಯಾದರೆ ಅದರಲ್ಲಿ ಖಾವಂದರ ದೊಡ್ಡತನವಿದೆ ಮತ್ತು ಬಹಳ ಕೀರ್ತಿಯೂ ಬರುತ್ತದೆ." ಅವನ ಮಾತನ್ನು ಕೇಳಿದ ಬಾದಶಹನಿಗೆ, ಈ ಉಭಯತರ ವಿನಂತಿಯನ್ನು ಒಪ್ಪಿಕೊಳ್ಳದ ಹೊರತು ಬೇರೆ ಯಾವ ಉಪಾಯವೂ ಇಲ್ಲವೆಂಬುದು ತಿಳಿಯಿತು. ಆಗ ಅವರ ವಿನಂತಿಯನ್ನು ಮಾನ್ಯ ಮಾಡಿ ಸಲಾಬತಖಾನನ ಕುಟುಂಬದ ಮೇಲಿನ ಸಿಟ್ಟನ್ನು ಬಿಟ್ಟುಕೊಟ್ಟನು. ಅವರು ಇಲ್ಲಿಗೆ ಬರಬೇಕೆಂದು ಆಜ್ಞೆ

ಮಾಡಿದನು. ಅವರ ಜೀವಕ್ಕೆ ಮತ್ತು ಗೌರವಕ್ಕೆ ಚ್ಯುತಿ ಇಲ್ಲವೆಂದು ಕೃಪೆಮಾಡಿ ಅಭಯ ಪತ್ರವನ್ನೂ ಕೊಟ್ಟನು. ಮರುದಿನ ಸಲಾಬತಖಾನನ ಮಗ ಅಬದುಲ ಅಜೀಜ ಮತ್ತು ಅಳಿಯ ಸಿದ್ದಿ ಮಸೂದರು ಬಾದಶಹನ ಹತ್ತಿರ ಬಂದು ಮಮಲಕತ ಮದಾರ ನವಾಬ ಬಹಲೋಲಖಾನನ ವಶೀಲಿಯಿಂದ ಬಾದಶಹನ ಭಟ್ಟಿಯಾದರು. ಉಭಯತರೂ ಬಾದಶಹನ ಚರಣಗಳ ಮೇಲೆ ತಲೆಯನ್ನಿಟ್ಟರು. ಬಡವರ ಪಾಲನೆ ಮಾಡುವ ಮತ್ತು ದೀನರ ಯೋಗ್ಯತೆಯನ್ನು ವೃದ್ಧಿಪಡಿಸುವ ಅಲೀ ಆದಿಲಶಹ ಬಾದಶಹನು ಉಭಯತರ ಮೇಲೆ ಕೃಪೆ ಮಾಡಿ ಇಬ್ಬರಿಗೂ ವಸ್ತ್ರಗಳನ್ನು ಕೊಟ್ಟು ಅವರ ತಂದೆಯ ಅಧಿಕಾರವನ್ನೇ ಮುಂದುವರಿಸಿದನು. ಅನಂತರ ಉಭಯತರು ಸಂತೋಷದಿಂದ ತಮ್ಮ ಸ್ಥಳಗಳಿಗೆ ತಿರುಗಿ ಹೋಗಲು ನಿರೋಪವನ್ನು ಪಡೆದರು.

### ೨೬. ಒಂದು ವಿಷಯ :

ಸಿದ್ದಿ ಜೋಹಾರ ಸಲಾಬತಖಾನನು ಮೂಲತಃ ಆದಿಲಶಾಹಿಯ ಮಲಿಕ ಅಬದುಲ ವಾಹಬ ಬಿನ್ ಮಲಿಕ ರೇಹಾನನು ಖರೀದಿಸಿದ ಚಾಕರನಾಗಿದ್ದನು. ಮಲಿಕ ಅಬ್ದುಲನು ಸತ್ತಾಗ ಸಿದ್ದಿ ಜೋಹಾರನು ಆತನ ಮಗ ಮಲಿಕ ರೇಹಾನನನ್ನು ಬಂಧಿಸಿ ತಾನೇ ಮಹಮದನೂರ ಕರ್ನೂಲದ ಸ್ಥಳದಲ್ಲಿ ಕಾಯಮ್ ಆಗಿ ಇದ್ದನು. ಕರ್ನೂಲದ ಧಣಿ ತಾನೆ ಮತ್ತು ಯುವರಾಜ ಪಟ್ಟ ತನ್ನದೆಂದು ಹೇಳಿಕೊಂಡನು. ದೊಡ್ಡ ಅಮೀರ ಪದವಿಯನ್ನೂ ಪಡೆದಿದ್ದನು. ಸಿದ್ದಿ ಮಸೂದನೂ ಮಲಿಕ ವಾಹಬನ ಚಾಕರನಾಗಿದ್ದನು. ಆತನನ್ನು ಸಿದ್ದಿ ಜೋಹಾರನು ಅಳಿಯನನ್ನಾಗಿ ಮಾಡಿಕೊಂಡು ಪಾಲನೆ ಮಾಡಿದನು. ಸಿದ್ದಿ ಜೋಹಾರನಿಗೆ ಸಲಾಬತಖಾನನೆಂಬ ಪದವಿ ದೊರೆತು ಆತ ಬಾದಶಹನ ಆಜ್ಞೆಯಂತೆ ಪನ್ಹಾಳ ಕೋಟೆಯ ಮೇಲೆ ಹಲ್ಲೆ ಮಾಡಿದ್ದನು ಮತ್ತು ಕೋಟೆಗೆ ಮುತ್ತಿಗೆಯನ್ನೂ ಹಾಕಿದ್ದನು. ಶಿವಾಜಿಯೊಂದಿಗೆ ಮಾಡುತ್ತಿದ್ದ ಯುದ್ಧದಲ್ಲಿ ಒಳ್ಳೆಯ ಪರಾಕ್ರಮ ತೋರಿಸಿ ಸಿದ್ದಿ ಮಾಸೂದನು ಖಾನ ಎಂಬ ಪದವಿಯನ್ನೂ ದೊರಕಿಸಿದ್ದನು.

### ೨೭. ಅಲೀ ಆದಿಲಶಹ ಬಾದಶಹನು ಮಲೆನಾಡು, ಸೋಂದಾ ಮತ್ತು ಬೆದನೂರುವರೆಗೆ ಸೈನ್ಯ ತೆಗೆದುಕೊಂಡು ಹೋಗಿ ಹಿಂದುಗಳ ಪಾರುಪತ್ಯ ಮಾಡಿದ್ದು :

ಮಲೆನಾಡಿನಲ್ಲಿಯ ಜಮೇದಾರ ಮಂಡಳಿಯಲ್ಲಿ ರಾಜಾ ಭದ್ರಪ್ಪನಾಯಕನೆಂಬವನು ಅಲ್ಲಿಯ ಎಲ್ಲ ರಾಜರಲ್ಲಿ ದೊಡ್ಡವನಾಗಿದ್ದನು. ಅವನ ಹತ್ತಿರ ಬಹಳ ಸ್ವಾರಸಿಬ್ಬಂದಿ ಸಾಕಷ್ಟು ಪ್ರದೇಶಗಳು ಮತ್ತು ಪುಷ್ಕಳವಾದ ಸಂಪತ್ತು ಇತ್ತು. ಆದರಿಂದಾಗಿ ರಾಜಾ ಭದ್ರಪ್ಪನಾಯಕನಿಗೆ ಬಹಳೇ ಸೊಕ್ಕು ಬಂದಿತ್ತು. ಆ ರಾಜನು ಬೆದನೂರು ಎಂಬಲ್ಲಿ ಇದ್ದು ಪ್ರಬಲನಾಗಿದ್ದನು. ಅದು ಹಲವಾರು ಪ್ರದೇಶಗಳನ್ನೊಳಗೊಂಡು, ಬಹಳ ವಸೂಲಿಯ ದೇಶವಾಗಿತ್ತು. ಆದ್ದರಿಂದ ಆತನ ಪಾರಪತ್ಯವನ್ನು ಮಾಡುವ ಇರಾದೆಯನ್ನು ಅಲೀ ಆದಿಲಶಹನು ಈ ಮೊದಲೇ ನಿರ್ಧರಿಸಿದ್ದನು. ಆದರೆ ಈ ಮೊದಲು ವಿವರಿಸಿದ ಸಲಾಬತಖಾನನ ಯುದ್ಧ ಸಂಭವಿಸಿತು. ಈಗ ಸಿದ್ದಿ ಜೋಹಾರ ಸಲಾಬತಖಾನನ ಯುದ್ಧದಿಂದಲೂ ಪುರಸತ್ತಾದ ಮೇಲೆ ಬಹಳ ಸಂತೋಷದಿಂದ ಬಾದಶಹನು ರಾಯಚೂರಿನಿಂದ ವಿಜಾಪುರಕ್ಕೆ ಬಂದನು. ವಿಜಾಪುರದಲ್ಲಿ ಕೆಲವುದಿನ ಆನಂದದಿಂದ ಮತ್ತು ಸುಖದಿಂದ ಕಳೆದು ರಾಜಧಾನಿಯ ಕಾರಭಾರವನ್ನು ನಡೆಸಿದನು.

ಭದ್ರಪ್ಪ ನಾಯಕನು ಬಹಳೇ ಸೊಕ್ಕಿನಿಂದ-ದಾಂಡಗಾಯಿತನವನ್ನು ಆರಂಭಿಸಿದ್ದಾನೆಂದು ಮೇಲಿಂದ ಮೇಲೆ ಸುದ್ದಿ ಬರತೊಡಗಿತು. ಭದ್ರಪ್ಪ ನಾಯಕನು ಕರಾರಿನಂತೆ ಕೊಡಬೇಕಾದ ಖಂಡನಿಯನ್ನೂ

ಕೊಡದೆ ಲೂಟಿ ಮಾಡಲು ಪ್ರಾರಂಭಿಸಿದ್ದನು. ಅಲೀ ಆದಿಲಶಹನ ಇಲಾಖೆಯಲ್ಲಿಯ ಎಷ್ಟೋ ಕೋಟೆಗಳನ್ನು ಮತ್ತು ಹತ್ತಿರ ಹತ್ತಿರದ ಊರುಗಳನ್ನು ಭದ್ರಪ್ಪ ನಾಯಕನು ತನ್ನ ಕೈವಶ ಮಾಡಿಕೊಳ್ಳಹತ್ತಿದನು.

ಧರ್ಮ ಸ್ಥಾಪನೆಯನ್ನು ಮಾಡುವುದು, ಕುರಾನ ಷರೀಫದ ಶಾಸ್ತ್ರಾರ್ಥದಂತೆ ಆಡಳಿತ ನಡೆಸುವುದು, ಮುಸಲಮಾನರಿಗೆ ಆಶ್ರಯ ನೀಡುವುದು ಮತ್ತು ಹಿಂದುಗಳ ಪಾರುಪತ್ಯ ಮಾಡುವುದು ಇವುಗಳೇ ಬಾದಶಹನಿಗೆ ಯೋಗ್ಯವಾದವುಗಳು ಮತ್ತು ಬಾದಶಹನು ಅವುಗಳನ್ನು ಮಾಡಬೇಕು. ಆದ್ದರಿಂದ 'ನೀವು ಹೀಗೆ ವರ್ತಿಸಲು ಶಾಸ್ತ್ರಾರ್ಥಗಳ ಆಧಾರವಿದೆಯೇ ಹೇಳಿರಿ?' ಎಂದು ಶಾಸ್ತ್ರರ್ಥದ ವಾದಗಳನ್ನು ಮೊದಲು ಮಂಡಿಸಬೇಕು. ಯಾಕೆಂದರೆ, ಮೊದಲು ಹಿಂದುಗಳ ಶಾಸ್ತ್ರಾರ್ಥಗಳನ್ನು ವಿಚಾರಿಸಬೇಕು. 'ನೀವು ದೇವರ ಪೂಜೆಗಳನ್ನು ಇತ್ಯಾದಿ ಮಾಡುತ್ತಿರುವುದಕ್ಕೆ ಶಾಸ್ತ್ರರ್ಥಗಳ ಆಧಾರ, ಪ್ರಮಾಣಗಳು ಇದ್ದರೆ ಹೇಳಿರಿ' ಎಂದು ಕೇಳಬೇಕು. ಶಾಸ್ತ್ರಗಳ ಆಧಾರಗಳನ್ನು ಹೇಳದಿದ್ದರೆ 'ಅವರನ್ನು ಯುದ್ಧಮಾಡಿ ಶಿಕ್ಷಿಸಬೇಕು' ಎಂದು ಅಲ್ಲಾನು ಕುರಾನ ಷರೀಫದ ಗ್ರಂಥದಲ್ಲಿ ಆಜ್ಞೆಮಾಡಿದ್ದಾನೆ.

ಅಲ್ಲಾನ ಆಜ್ಞೆಯಂತೆ, ಶಾಸ್ತ್ರಗಳವಾದ ಮಂಡಿಸಲು ಮೌಲವಿ ಮುಲ್ಲಾ ಖುರ್‌ಮನನ್ನು ಭದ್ರಪ್ಪ ನಾಯಿಕನಿಗೆ ಎಚ್ಚರ ನೀಡಲು ಮಲನಾಡಿಗೆ ಕಳಿಸಲಾಯಿತು. ಆಗ ಮುಲ್ಲಾ ಖುರ್ರಮ್‌ನು ಬಹಳ ರೀತಿಯಿಂದ ಹಿಂದೂ ಧರ್ಮದಿಂದ ನಡೆಯಬೇಡಿರೆಂದು ಒಳ್ಳೆಯ ರೀತಿಯಿಂದ ನೀತಿ-ಬೋಧೆ ಹೇಳಿದನು. ಮುಸಲಮಾನಿ ಧರ್ಮದ ಮಾರ್ಗವನ್ನು ತೋರಿಸಿದನು. ಆದರೆ ಆ ಭದ್ರಪ್ಪನಾಯಕನು ಮದ್ಯ ಕುಡಿದು ಮದವೇರಿದಹಾಗೆ, ಈ ನೀತಿ ಬೋಧೆಗಳಿಂದ ದಾರಿಗೆ ಬರಲಿಲ್ಲ. ಮುಲ್ಲಾ ಖುರ್ರಮನ ಉತ್ತಮ ಹೇಳಿಕೆಗಳನ್ನು ಒಪ್ಪಲಿಲ್ಲ. ತನ್ನ ಪುರಾತನ ಕೆಟ್ಟ ನಡತೆಯನ್ನೆ ಮುಂದುವರೆಸಿದನು. ಆಗ ಮುಲ್ಲಾ ಖುರ್ರಮನು ನಿರಾಶನಾಗಿ ಅಲ್ಲಿಂದ ತಿರುಗಿ ಹೊರಟು ಆದಿಲಶಹನ ಹತ್ತಿರ ಬಂದು ನಡೆದ ವಿಷಯಗಳನ್ನು ಸವಿಸ್ತರವಾಗಿ ವಿನಂತಿಮಾಡಿಕೊಂಡನು. ಶಾಸ್ತ್ರರ್ಥಗಳನ್ನು ಹೇಳಿ, ನಾನಾ ಪ್ರಕಾರದ ನೀತಿ ಬೋಧನೆಗಳನ್ನು ಮಾಡಿದರೂ ಕೂಡ ಭದ್ರಪ್ಪ ನಾಯಕನು ತನ್ನ ಹಿಂದು ಧರ್ಮವನ್ನೇ ಅವಲಂಬಿಸಿದನು. ಆದ್ದರಿಂದ ಆ ಹಿಂದುವಿನೊಂದಿಗೆ ಯುದ್ಧ ಮಾಡಲು ಮತ್ತು ಹಿಂದುಗಳ ಪ್ರದೇಶಗಳನ್ನು ತೆಗೆದುಕೊಳ್ಳಲು ಅಲೀ ಆದಿಲಶಹನು ಸಿದ್ಧನಾದನು.

ಮೊದಲು ಸಯ್ಯದ ಆಲಿಯಾಸ (ಇಲಿಯಾಸ) ಷಾರ್ಜಾಖಾನನೊಂದಿಗೆ ಕೆಲವು ಸರದಾರ ಮಂಡಳಿಗಳನ್ನು ಕೊಟ್ಟು ಆ ಮೂರ್ಖನ ಪಾರುಪತ್ಯ ಮಾಡಲು ಮುಂದೆ ಕಳಿಸಿದನು. ಕೆಲವು ದಿನಗಳ ಅನಂತರ ಬಾದಶಹನೂ ಕೂಡ ಅಲ್ಲಾನ ಮೇಲೆ ಭರವಸೆಯನ್ನಿಟ್ಟು ಸ್ವತಃ ತನ್ನ ಯಶಸ್ವಿ ಸೈನ್ಯದೊಂದಿಗೆ ದಿನಾಂಕ ೧ ಸಾಬಾನ ಸನ್ ೧೦೭೨ರಂದು (೨ ಮಾರ್ಚ ೧೬೬೩) ವಿಜಾಪುರದಿಂದ ಹೊರಟನು. ಕೆಲವು ಮಜಲುಗಳ ನಂತರ ಬಂಕಾಪುರ ಕೋಟೆಗೆ ಹೋಗಿ ಆ ಕೋಟೆಯನ್ನು ವಶಪಡಿಸಿಕೊಂಡು ಅಲ್ಲಿಯೇ ಕೆಲವು ದಿನ ಇದ್ದನು. ಬಳಿಕ ಕರ್ನಾಟಕದ ಮೇಲೆ ಏರಿ ಹೋಗಿದ್ದ ನವಾಬ ಅಬ್ದುಲ ರಹೀಮ ಬಹಲೋಲಖಾನಿಗೆ ತಿರುಗಿ ಬರಲು ಆಜ್ಞೆಯನ್ನು ಕಳಿಸಿದನು. ಆಜ್ಞೆ ದೊರೆತ ತಕ್ಷಣ ಬಹಲೋಲಖಾನನು, ಆ ಯುದ್ಧವನ್ನು ನೋಡಿಕೊಳ್ಳಲು ತನ್ನ ಕಡೆಯ ಕಾಮದಾರರನ್ನು ನೇಮಿಸಿ, ಶಹಾಜಿ ಭೋಸಲೆ ಮುಂತಾದವರೊಂದಿಗೆ ಅತಿ ತ್ವರಿತವಾಗಿ ಬಾದಶಹನ ಕಡೆಗೆ ಹೊರಟನು. ಕೆಲವು ಮಜಲುಗಳು ನಡೆದ ನಂತರ ತುಂಗಭದ್ರೆಯ ದಂಡೆಯ ಮೇಲೆ ಅವರೆಲ್ಲ ಬಾದಶಹನನ್ನು ಭೆಟ್ಟಿಯಾದರು. ಅನಂತರ ಬಾದಶಹನು

ನವಾಬ ಬಹಲೋಲಖಾನ ಮುಂತಾದವರೊಂದಿಗೆ ಬೆದನೂರ ಕಡೆಗೆ ಹೊರಟನು. ಮಮಲಕತಮದಾರ ಅಬ್ದುಲ ಮಹಮ್ಮದ, ಮುಲ್ಲಾ ಅಹಮ್ಮದ, ಸಯ್ಯದ ಖಾನಜಮಾನ ಮತ್ತು ಮುಜಫರಖಾನ ಮುಂತಾದವರನ್ನು ಬೇರೆ ದಾರಿಯಿಂದ ಯಾರಿಗೂ ಗೊತ್ತಾಗದಂತೆ ಬೆದನೂರು ಕಡೆಗೆ ಕಳಿಸಿದನು.

### *೨೮. ಷರ್ಜಾಖಾನನು ಮುಂದೆ ಹೋಗಿ ಹಿಂದುಗಳ ಕೋಟೆಗಳನ್ನು ಮತ್ತು ಅನೇಕ ಸ್ಥಳಗಳನ್ನು ತೆಗೆದುಕೊಂಡು ಸೋಂದಾದವರೆಗೆ ಮುಟ್ಟಿದ್ದು :*

ರಣಭೂಮಿಯ ಹುಲಿಯಾದ ಷರ್ಜಾಖಾನನು ಬಾದಶಹನಿಗಿಂತ ಮೊದಲೇ ಮಲೆನಾಡಿಗೆ ಬಂದಿದ್ದನು. ಜಬ್ಯಾ ಎಂಬ ಕೋಟೆಯ ಮೇಲೆ ಬಹಳಷ್ಟು ಸಾಮಾನು ಸರಂಜಾಮುಗಳನ್ನು ಮತ್ತು ಮದ್ದು ಗುಂಡುಗಳನ್ನು ಸಂಗ್ರಹಿಸಿ ಹಿಂದುಗಳು ಯುದ್ಧಕ್ಕೆ ಸಿದ್ಧರಾಗಿದ್ದರು. ಮೊದಲು ಷರ್ಜಾಖಾನನು ಈ ಕೋಟೆಯ ಹತ್ತಿರ ಬಂದು ಎದುರಿಸಲು ಸಿದ್ಧನಾದನು. ಆಗ ಹಿಂದುಗಳ ಸೈನ್ಯ ಒಮ್ಮಿಂದೊಮ್ಮೆಲೇ ಬಾದಶಹನ ಸೈನ್ಯದ ಮೇಲೆ ಬಿದ್ದಿತು. ಬಹಳ ಕಟುವಾಗಿ ಹೊಡೆದಾಡುತ್ತ ಮುಸಲ್ಮಾನೀ ಸೈನ್ಯದೊಳಗೇ ಬಂದರು. ಷರ್ಜಾಖಾನನು ರಣಭೂಮಿಯ ಸಿಂಹವೇ ಆಗಿದ್ದನು. ಆತ ರುಸ್ತುಮನಂತೆ ರಣಭೂಮಿಯಲ್ಲಿ ಹೆಜ್ಜೆಯನ್ನು ಮುಂದಿಟ್ಟು ಮತ್ತು ಅಲ್ಲಾನ ಕೃಪೆಯ ಸಹಾಯವನ್ನು ಬೆನ್ನಿಗೆ ಕಟ್ಟಿಕೊಂಡು ಯುದ್ಧದ ಫಲವನ್ನು ಪಡೆಯುತ್ತಿದ್ದನು. ರಣಭೂಮಿಯಲ್ಲಿ ಮರಣ ಹೊಂದಿದರೆ ಪರಲೋಕದಲ್ಲಿ ಸ್ವರ್ಗ ಪ್ರಾಪ್ತಿಯಾಗಿ ಬಹಳ ಸತ್ಕಾರಗೊಳ್ಳುತ್ತಾನೆ. ಜೀವಂತವಾಗಿದ್ದು ಯಶಸ್ವಿಯಾದರೆ ಈ ಲೋಕದಲ್ಲಿಯೇ ಕೀರ್ತಿ ಮತ್ತು ಸಂಪತ್ತು ಪ್ರಾಪ್ತವಾಗತ್ತದೆ ಎಂದು ನಂಬಿದ್ದನು.

ಅರಬ್ಬೀ ಭಾಷೆಯ ಒಂದು ವಾಕ್ಯದ ಅರ್ಥ ಹೀಗಿದೆ 'ಅಲ್ಲಾನು ಸಹಾಯ ಮಾಡಿದರೆ ಯಶ ತ್ವರಿತವಾಗಿ ಬರುತ್ತದೆ'. ಈ ಯಶ ಮುಸಲ್ಮಾನಿ ಸೈನ್ಯದ ಕಡೆಗೆ ಇತ್ತು. ಅದ್ದರಿಂದ ಆದಿಲಶಾಹನ ಕಡೆಯ ಸೈನ್ಯಕ್ಕೆ ಯಶ ದೊರೆಯಿತು. ಆ ಕೆಟ್ಟ ಜನರ ಗುಂಪಿನ ಮೇಲೆ ಅಂದರೆ ಹಿಂದುಗಳ ಸೈನ್ಯದ ಮೇಲೆ ಹಲ್ಲೆಮಾಡಿ ಬಹಳ ಹಿಂದುಗಳನ್ನು ಕೊಲೆ ಮಾಡಿ ಭೂಮಿಗೆ ಬೀಳಿಸಿದರು. ಆ ಶಸ್ತ್ರ ಪ್ರಳಯದೊಳಗಿನಿಂದ ಜೀವ ಉಳಿಸಿಕೊಂಡ ಕೆಲವು ಹಿಂದುಗಳು ರಣಭೂಮಿಯನ್ನು ಬಿಟ್ಟು ಓಡಿದರು. ಆ ಕೋಟೆ ಆದಿಲಶಹನ ಸೈನ್ಯದ ಕೈವಶವಾಯಿತು.

### *೨೯. ಸೋಂದಾ ವಿಜಯ :*

ಷರ್ಜಾಖಾನನು ಅಲ್ಲಿಂದ ಮುಂದೆ ನಡೆದು ಒಂದೊಂದೇ ಕೋಟೆಗಳನ್ನು ಮತ್ತು ಹಿಂದುಗಳ ಎಷ್ಟೋ ಸ್ಥಳಗಳನ್ನು ಬಲಾತ್ಕಾರದಿಂದ ಮತ್ತು ಯುದ್ಧ ಮೂಲಕ ತೆಗೆದುಕೊಂಡು, ಆದಿಲಶಾಹಿ ರಾಜ್ಯಕ್ಕೆ ಸೇರಿಸಿದನು. ಅದರಂತೆ ತುಂಬ ಸುಖಸಮೃದ್ಧವೂ ಬಹಳ ಕರ ಗಳಿಸಿಕೊಡುವುದೂ ಆಗಿದ್ದ ಸೋಂದಾ ಪ್ರದೇಶದವರೆಗೂ ಹೋಗಿ ಮುಟ್ಟಿದನು. ಆ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಲು ಬಹಳ ಪ್ರಯತ್ನಮಾಡಿದನು. ಅಲ್ಲಾನ ಕೃಪೆಯಿಂದ ಅದನ್ನು ಕೂಡ ಗೆದ್ದನು. ಬಾದಶಾಹಿ ಸೈನ್ಯ ಸೋಂದೆಯ ಹತ್ತಿರ ಬಂದು ಮುಟ್ಟಿತು. ಅಲಿ ಆದಿಲಶಹನು ಬಹಳ ಸಂತೋಷದಿಂದ ಅಲ್ಲಿ ಕೆಲವು ದಿನಗಳವರೆಗೆ ವಿಶ್ರಾಂತಿ ಪಡೆದನು. ಅಲ್ಲಿಯ ನೀರು, ವಾತಾವರಣ ಒಪ್ಪಿಗೆಯಾಗಿ ಬಹಳ ಸಂತೋಷ ಪಟ್ಟನು. ಶಿಪಾಯಿಗಳಿಗೂ ಸೈನ್ಯಕ್ಕೂ ವಿಶ್ರಾಂತಿ ದೊರೆಯಿತು. ಅನಂತರ ಮಮಲಕತ ಮದಾರ ಅಬ್ದುಲ ಮಹಮ್ಮದ,

ಮುಲ್ಲಾ ಅಹಮ್ಮದ, ಷರ್ಜಾಖಾನ ಮತ್ತು ಸಯ್ಯದ ಖಾನಜಮಾನ ಮುಂತಾದವರಿಗೆ ಆಜ್ಞೆ ಮಾಡುತ್ತ, "ಆಕಾಶದ ಸಹಕಾರ ಮತ್ತು ಅಲ್ಲಾನ ಸಹಾಯ ನಮ್ಮ ಕಡೆಗೆ ಪ್ರತಿಯೊಂದು ಕೆಲಸದಲ್ಲಿ ಇದೆ. ಇದು ಸತ್ಯವೆಂದು ತಿಳಿದು ರುಸ್ತಮನಂತೆ ಹಲ್ಲೆ ಮಾಡಿ ಹಿಂದುಗಳ ಸ್ಥಳವಾದ ಬಿದನೂರನ್ನು ಹಸ್ತಗತ ಮಾಡಿಕೊಳ್ಳಬೇಕು. ಯಾಕೆಂದರೆ, ಬಿದನೂರಿನಲ್ಲಿಯ ರಾಜ, ಭದ್ರಪ್ಪ ನಾಯಕನು ಬಹಳ ಸಂಪತ್ತು ಮತ್ತು ಸ್ವಾರ ಸಿಬ್ಬಂದಿಗಳನ್ನು ಸಂಗ್ರಹಿಸಿ ರಾಜ್ಯವಾಳುತ್ತಿದ್ದಾನೆ. ಆ ಪ್ರದೇಶವನ್ನು ಕೈವಶಮಾಡಿಕೊಂಡು ಗೆಲ್ಲಬೇಕು" ಎಂದು ಆಜ್ಞೆ ಮಾಡಿದನು.

### ೩೦. *ಆದಿಲಶಹನ ಸೈನ್ಯವು ಬಿದನೂರನ್ನು ಗೆದ್ದದ್ದು :*

ಮಹಾಶೂರರು, ಯುದ್ಧ ಸರದಾರರು, ಆನೆಯ ಬಲದವರು ಬಾದಶಹನ ಆಜ್ಞೆಯ ಮೇರೆಗೆ ಬಿದನೂರನ್ನು ಕೈವಶ ಮಾಡಿಕೊಳ್ಳಲು ಅತಿ ತ್ವರೆಯಿಂದ ಹೊರಟು ಹೋದರು, ಆಗ ರಾಜಾ ಭದ್ರಪ್ಪ ನಾಯಕನು, ಆದಿಲ ಶಾಹಿ ಕಡೆಯ ಸೈನ್ಯದ ಮುಂದೆ ತನಗೆ ನಿಲ್ಲುವುದು ಸಾಮರ್ಥ್ಯವಿಲ್ಲವೆಂದು ತಿಳಿದು ಬಿದನೂರಿನಿಂದ ಹೊರಟು ಕೊಯಲದುರ್ಗ ಕೋಟೆಯ ಮಾರ್ಗವನ್ನು ಹಿಡಿದನು. ಯಾಕೆಂದರೆ ಕೋಯಲದುರ್ಗದ (ಕವಲೇದುರ್ಗ) ಕೋಟೆಯು ತುಂಬ ಗಟ್ಟಿಯಾಗಿದ್ದು ದೊಡ್ಡದೂ ಆಗಿದೆ, ಅಲ್ಲಿಯ ಬಂದೋಬಸ್ತನ್ನು ತಿಳಿದು ಆ ಕೋಟೆಯಲ್ಲಿ ಆಶ್ರಯ ಪಡೆದನು. ಆದಿಲಶಾಹಿ ಕಡೆಯ ಸೈನ್ಯವು ಮಹಾನ್ ಯಶಸ್ವಿಯಾಗಿತ್ತು. ಬಿದನೂರಿಗೆ ಹೋಗಿ ತಮ್ಮ ಪರಾಕ್ರಮದಿಂದ ವಿಜಯ ಸಾಧಿಸಿದರು. ಆಗ ಬಾದಶಹನು ಸ್ವತಃ ಬಿದನೂರಿಗೆ ಹೋಗಿ, ಅಲ್ಲಿಯ ಜನರಿಗೆ ಬಹಳ ಸತ್ಕಾರಮಾಡಿದನು. ಬಿದನೂರಿನಲ್ಲಿಯ ನೀರು ಹಾಗು ವಾತಾವರಣವೂ ಆತನಿಗೆ ಖುಶಿ ನೀಡಿತು. ಅಲ್ಲಿಯೂ ಕೆಲವು ದಿನಗಳವರೆಗೆ ಇದ್ದು ಸಂತೋಷ ಪಟ್ಟನು. ಅನಂತರ ಬಾದಶಹನು ತನ್ನ ಸರದಾರ ಮಂಡಳಿಗೆ "ಹೀಗೆಯೇ ಮುಂದೆ ನಡೆದು ಕೋಯಲದುರ್ಗದ ಮೇಲೆ ಹಲ್ಲೆ ಮಾಡಬೇಕು. ಸೊಕ್ಕಿನ ಭದ್ರಪ್ಪ ನಾಯಕ ಆ ಕೋಟೆಯಲ್ಲಿ ಆಶ್ರಯಪಡೆದು ನಿರ್ಭಯನಾಗಿದ್ದಾನೆ. ಆದ್ದರಿಂದ ಆ ಕೋಟೆಯ ಮೇಲೆ ರುಸ್ತುಮನ ಹಾಗೆ ಹಲ್ಲೆ ಮಾಡಿ ಗೆಲ್ಲಬೇಕು. ಆ ಮಹಾಗರ್ವಿಷ್ಠ ಭದ್ರಪ್ಪ ನಾಯಕನನ್ನು ಹಿಡಿದು ತನ್ನಿರಿ" ಎಂದು ಆಜ್ಞೆ ಮಾಡಿದನು. ಆದಿಲಶಾಹನ ಕಡೆಯ ಸಿಂಹ ಸದೃಶ ಪರಾಕ್ರಮಿಗಳಾದ ಶೂರರು, ಹೊಸ ಮದುವಣಗಿತ್ತಿಯ ಕೋಣೆಯನ್ನು ಹೋಗುವ ಹೊಸ ಅಳಿಯನಂತೆ, ಅಥವ ಹಸಿದ ಹುಲಿಯು ಚಿಗರೆ ಮೊದಲಾದ ಪ್ರಾಣಿಗಳ ಮೇಲೆ ಸಿಟ್ಟಿನಿಂದ ತಕ್ಷಣ ಓಡುವಂತೆ ಆ ಶೂರರು ಕೋಲಯದುರ್ಗದ ಕೋಟೆಗೆ ಓಡಿದರು. ಕೋಟೆಯನ್ನು ವಶಪಡಿಸಿಕೊಳ್ಳಲು ಹಲ್ಲೆ ಮಾಡಹತ್ತಿದರು. ಈ ಸುದ್ದಿ ತಿಳಿಯುತ್ತಿದ್ದಂತೆ ಭದ್ರಪ್ಪ ನಾಯಕನ ಸರದಾರ ಮಂಡಳಿ ಗಲಿಬಿಲಿಗೊಂಡಿತು. ಅವರೆಲ್ಲರ ಸೊಕ್ಕು ಒಮ್ಮೆಲೆ ಇಳಿಯಿತು. ನಿರುಪಾಯದಿಂದ ಶರಣು ಬರುವುದರ ಹೊರತು ಬೇರೆ ದಾರಿಯೇ ಇಲ್ಲದಂತಾಯಿತು.

ಹೀಗಾಗಿ ಅವರು ಅತಿ ನಮ್ರರಾಗಿ ನವಾಬ ಅಬ್ದುಲ ರಹೀಮ ಬಹಲೋಲಖಾನನ ವಶೀಲಯಿಂದ ನಾಯಕನ ಪರವಾಗಿ ಒಂದು ವಿನಂತಿ ಪತ್ರ ಬರೆದರು. 'ನನ್ನಿಂದ ಬಹಳ ಅಪರಾಧವಾಗಿದೆ, ನಾನು ತುಂಬ ಅಗೌರವದಿಂದ ನಡೆದುಕೊಂಡಿರುವೆ ನನ್ನ ಎಲ್ಲ ಅಪರಾಧಗಳನ್ನು ಕ್ಷಮಿಸಬೇಕು. ನಾನು ಬಾದಶಹರ ಚಾಕರಿಯನ್ನು ಮಾಡಿಕೊಂಡಿರುವೆ. ಅವರ ಆಜ್ಞೆಯಂತೆಯೇ ನಡೆಯುತ್ತೇನೆ. ಪ್ರತಿವರುಷ ಬಾದಶಹರಿಗೆ ಖಂಡಣೆಯನ್ನು ಕೊಡುತ್ತ ಹೋಗುವೆ. ಅದಕ್ಕೆ ಯಾವ ಅಡ್ಡಿಯನ್ನೂ ಮಾಡುವುದಿಲ್ಲ. ನನ್ನ ಜೀವಕ್ಕೆ

ಮತ್ತು ಸಂಪತ್ತಿಗೆ ಧಕ್ಕೆ ಮಾಡಬೇಡಿರಿ. ನನಗಿರುವ ರಾಜ್ಯವನ್ನು ನನಗೇಬಿಟ್ಟು ಕೊಡಿರಿ' ಎಂಬೆಲ್ಲ ವಿಷಯಗಳನ್ನೊಳಗೊಂಡು ಬರೆದ ವಿನಂತಿ ಪತ್ರವನ್ನು ನವಾಬ ಬಹಲೋಲಖಾನನು ಬಾದಶಹನಿಗೆ ಕೊಟ್ಟು ಭದ್ರಪ್ಪ ನಾಯಕನನ್ನು ಕ್ಷಮಿಸಬೇಕೆಂದು ವಿನಂತಿ ಮಾಡಿಕೊಂಡನು. "ಭದ್ರಪ್ಪ ನಾಯಕನು ದೀನನಾಗಿ ಬರೆದ ಪತ್ರದ ವಿನಂತಿ ಕಲಮುಗಳನ್ನು ಸರಕಾರವು ಒಪ್ಪಿ, ಆತನ ಸರ್ವ ಅಪರಾಧಗಳನ್ನು ಕ್ಷಮಿಸಬೇಕು" ಎಂದು ಒತ್ತಾಯಪೂರ್ವಕ ವಿನಂತಿ ಮಾಡಿಕೊಂಡನು. ಆಗ ಬಾದಶಹನು ಭದ್ರಪ್ಪ ನಾಯಕನಿಗೆ ಕೊಡಬೇಕಂದಿದ್ದ ಶಿಕ್ಷೆಯನ್ನು ಹಾಗೂ ಸೇಡುತೀರಿಸಿಕೊಳ್ಳಬೇಕೆಂಬ ನಿರ್ಧಾರವನ್ನು ಬಿಟ್ಟು ಕ್ಷಮೆಮಾಡಿದನು. ಪೈಗಂಬರರ ಆದೇಶಗಳಂತೆ ಮತ್ತು ಕುರಾನ್ ಷರೀಫದ ಶಾಸ್ತ್ರಾರ್ಥಗಳ ನಡತೆಯಂತೆ, ಪ್ರತಿವರ್ಷ ಕೊಡಲು ಒಪ್ಪಿದ ಖಂಡಣಿಯ ಕರಾರನ್ನು ಒಪ್ಪಿ ಭದ್ರಪ್ಪನಾಯಕನ ಜೀವಕ್ಕೆ, ಸಂಪತ್ತಿಗೆ, ಗೌರವಕ್ಕೆ ಮತ್ತು ರಾಜ್ಯಕ್ಕೆ ಉಪದ್ರವ ಆಗಲಾರದೆಂದು ಅಭಯ ಕೊಟ್ಟನು. ಭದ್ರಪ್ಪ ನಾಯಕನಿಗೆ ಆಜ್ಞಾ ಪತ್ರವನ್ನು ಬರೆದು, "ನಿನ್ನನ್ನು ಸಂಪೂರ್ಣ ನಾಶಮಾಡಬೇಕೆಂಬಂಥ ಅಪರಾಧಗಳು, ಅಗೌರವಗಳು ಮೂರ್ಖನಾದ ನಿನ್ನಿಂದ ಘಟಿಸಿವೆ. ಆದರೆ ನಿನ್ನ ದೈವ ಚೆನ್ನಾಗಿದೆ. ಆದ್ದರಿಂದ ನೀನು ಬೇಗ ಭ್ರಾಂತಿಯನ್ನು ಬಿಟ್ಟು ಎಚ್ಚರನಾಗಿರುವಿ. ಕೆಟ್ಟ ನಡತೆಯನ್ನು ಬಿಟ್ಟು ಒಳ್ಳೆಯ ದಾರಿಯಲ್ಲಿ ಪುನಃ ಬಂದಿರುವಿ ನಮ್ಮ ಆಜ್ಞೆಯಂತೆ ನಡೆದು ಚಾಕರಿ ಮಾಡುತ್ತೇನೆಂದು ಒಪ್ಪಿಕೊಂಡಿರುವಿ. ನವಾಬ ಬಹಲೋಲಖಾನರು ನಮ್ಮ ಹಿರಿಯ ವಿಶ್ವಾಸಿಕ ಸರದಾರರು ಅವರ ವಿನಂತಿಯನ್ನು ನಾವು ಎಂದೂ ತಿರಸ್ಕರಿಸಿಲ್ಲ. ಅಂಥವರು ನಿನ್ನ ಮೇಲಿನ ನಮ್ಮ ಸಿಟ್ಟನ್ನು ಬಿಡಬೇಕು, ನಿನ್ನೊಂದಿಗೆ ಸೇಡು ತೀರಿಸಿಕೊಳ್ಳಬಾರದು, ನಿನ್ನ ಸರ್ವ ಅಪರಾಧಗಳನ್ನು ಕ್ಷಮಿಸಬೇಕು ಎಂದು ನಿನ್ನ ವಿಷಯದಲ್ಲಿ ಪ್ರಯತ್ನಪೂರ್ವಕವಾಗಿ ಮಧ್ಯಸ್ಥಿಕೆ ವಹಿಸಿದರು. ಬಹಲೋಲಖಾನನ ಮನೋರಥವನ್ನು ಪೂರೈಸುವುದು ಮತ್ತು ಅವರು ಹೇಳಿದ್ದನ್ನು ಒಪ್ಪುವುದು ನಮಗೆ ಬಹು ಪ್ರಿಯವಾದ ಕೆಲಸ. ಆದ್ದರಿಂದ ನಿರುಪಾಯನಾಗಿ ನೀನು ಹಿಂದೆ ಮಾಡಿದ ಎಲ್ಲ ಅಪರಾಧಗಳನ್ನು ನಾವು ಕ್ಷಮಿಸಿದ್ದೇವೆ. ನೀನು ಮತ್ತೆ ಎಂದೂ ದುರ್ಮಾರ್ಗದಿಂದ ನಡೆಯಬಾರದು. ಎಲ್ಲ ಕಾಲದಲ್ಲಿ ನಮ್ಮ ಚಾಕರಿಯ ಹೊರತಾಗಿ ಮತ್ತು ನಮ್ಮ ಆಜ್ಞೆಯ ಹೊರತಾಗಿ ಬೇರೆ ಯಾವ ಕೆಲಸವನ್ನೂ ಮಾಡಬಾರದು. ಕರಾರಿನಂತೆ ಖಂಡಣಿಯನ್ನು ಅತಿ ಬೇಗ ಕಳಿಸಬೇಕು. ಪ್ರತಿವರುಷ ತಪ್ಪದೆ ಯಾವ ಕಾರಣಗಳನ್ನೂ ಹೇಳದೆ, ಗದ್ದಲ ಮಾಡದೆ, ಸರಕಾರದಲ್ಲಿ ತುಂಬುತ್ತ ಹೋಗಬೇಕು" ಎಂಬ ಆಜ್ಞಾಪತ್ರವನ್ನು ಭದ್ರಪ್ಪ ನಾಯಕನಿಗೆ ಮುಟ್ಟಿಸಿದನು.

ಭದ್ರಪ್ಪ ನಾಯಕನು ಅತಿ ಸಂತೋಷದಿಂದ ಬಾದಶಹನ ಸೇವೆಯಲ್ಲಿ ಸಿದ್ಧನಾಗಿ ಭಾರೀ ಕಿಮ್ಮತ್ತಿನ ಮುತ್ತು ರತ್ನಗಳನ್ನು ಅತಿ ಉತ್ತಮ ಪದಾರ್ಥಗಳನ್ನು ಬಾದಶಹನಿಗೆ ಕಳಿಸಿದನು. ಅನಂತರ ಆದಿಲ ಶಹ ಬಾದಶಹನು ಅತಿ ಸಂತೋಷಪಟ್ಟು ಬಹಳ ಯಶಸ್ವಿಯಾಗಿ ಅಲ್ಲಿಂದ ತಿರುಗಿ ಹೊರಟು ದಿನಾಂಕ ೧ ಜಮಾದಿಲಾವಲ (೨೧, ನವಂಬರ ೧೬೬೩)ದಂದು ವಿಜಾಪುರವನ್ನು ಮುಟ್ಟಿದನು.

### *೩೧. ದಕ್ಷಿಣದ ರಾಜ್ಯಗಳು ಮುಳುಗಲು ಮತ್ತು ಮೊಗಲರ ಕೈಗೆ ಹೋದ ಕಾರಣಗಳು :*

ದಿಲ್ಲಿಯಲ್ಲಿ ತೈಮೂರ ವಂಶದ ಬಾದಶಹರಿಗೆ (ಮೊಗಲರಿಗೆ) ದಕ್ಷಿಣ ದೇಶವನ್ನು ಕೈವಶಮಾಡಿಕೊಳ್ಳಬೇಕೆಂಬ ಬಯಕೆ ಬಹಳ ದಿನಗಳಿಂದ ಇತ್ತು. ಈ ವಿಷಯದಲ್ಲಿ ಅವರು ಬಹಳ ಪ್ರಯತ್ನವನ್ನೂ ಮಾಡಿದರು. ಅಕಬರ ಬಾದಶಹ ಮತ್ತು ಆತನ ಉತ್ತರಕಾಲೀನರು ಈ ಕೆಲಸದಲ್ಲಿ

ತಮ್ಮೆಲ್ಲ ಶಕ್ತಿ-ಯುಕ್ತಿಗಳನ್ನು ಖರ್ಚುಮಾಡಿದರು. ಕೆಲವು ದಿನಗಳಲ್ಲಿ ಯುಕ್ತಿಯಿಂದ ದಕ್ಷಿಣದ ಕೆಲವು ಪ್ರದೇಶಗಳನ್ನು ವಶ ಮಾಡಿಕೊಂಡರು. ಅವುಗಳಲ್ಲಿ ಖಾನದೇಶ ಮತ್ತು ವರಾಡಗಳ ಪ್ರದೇಶಗಳು ಸೇರಿದ್ದುವು. ಶಾಹಜಹಾನ ಬಾದಶಹನ ಕಾಲದಲ್ಲಿ ನಿಜಾಮ ಶಹನ ರಾಜ್ಯವನ್ನು ತೆಗೆದುಕೊಳ್ಳಲು ಯುದ್ಧ ನಡೆಯಿತು. ಅಷ್ಟರಲ್ಲಿ ಬಿಜಾಪುರದ ಸುಲ್ತಾನ ಮಹಮ್ಮದ ಬಾದಶಹ ಮತ್ತು ಶಾಹಜಹಾನ ಬಾದಶಹ ಉಭಯತರೂ ನಿಜಾಮಶಹನ ರಾಜ್ಯವನ್ನು ಅರ್ಧರ್ಧ ಹಂಚಿಕೊಂಡು ತಂತಮ್ಮಲ್ಲಿ ಯುದ್ಧ ಮಾಡದೆ, ಸ್ನೇಹದಿಂದ ಇರಬೇಕೆಂದು ಬಂಗಾರದ ಪತ್ರದ ಮೇಲೆ ಕರಾರು ಬರೆದು ಉಭಯ ಬಾದಶಹರೂ ಮೊಹರನ್ನು ಒತ್ತಿದ್ದರು. ಈ ಕರಾರು ಬಹಳ ದಿನಗಳ ವರೆಗೆ ನಡೆಯಿತು. ಈ ಸಮಯದಲ್ಲಿ ಉಭಯತರ ಮಧ್ಯ ಯುದ್ಧ ನಡೆಯಲಿಲ್ಲ. ಎರಡನೆಯ ಅಲಿ ಆದಿಲಶಹನ ಕಾಲಕಿರ್ದಿಯಲ್ಲಿ ಪುನಃ ಯುದ್ಧ ಪ್ರಸಂಗಗಳು ಉದ್ಭವಿಸಿದುವು, ಇಬ್ಬರ ಮಧ್ಯ ದ್ವೇಷ ಅಸೂಯೆಗಳು ಬಹಿರಂಗಗೊಂಡವು. ಇದಕ್ಕೆ ಮೂಲ ಕಾರಣಕರ್ತ ಶಿವಾಜಿ ಭೋಸಲೆಯಾಗಿದ್ದನು. ಶಿವಾಜಿಯಿಂದಲೇ ವಿರಸ ಉಂಟಾಗಿತ್ತು. ಶಿವಾಜಿಯ ತಂದೆ ಶಾಹಜಿ ಭೋಸಲೆ ಮೊದಲಿನಿಂದಲೂ ಕುತಂತ್ರಗಳನ್ನು ಮಾಡಿ ಸಂಕಟಗಳನ್ನು ನಿರ್ಮಾಣ ಮಾಡುವ ಬಂಡು ಖೋರರಲ್ಲಿ ಒಬ್ಬನಾಗಿದ್ದನು. ಹೀಗಿದ್ದೂ ಅವನಲ್ಲಿ ಬಹಳ ನಮ್ರತೆ ಇತ್ತು ಧಣಿಯೊಂದಿಗೆ ನಡೆದುಕೊಳ್ಳುವ ವಿಷಯದಲ್ಲಿ ಗೌರವದಿಂದ ಇರುತ್ತಿದ್ದನು. ಧಣಿಯ ಉಪ್ಪು ತಿಂದದ್ದನ್ನು ಸ್ಮರಿಸುತ್ತಿದ್ದನು. ಮತ್ತು ಧಣಿ ಎಂಬುದನ್ನು ಮನ್ನಿಸುತ್ತಿದ್ದನು. ಇವುಗಳಿಂದಾಗಿ ಸುರಕ್ಷಿತವಾಗಿ ಶಾಹಜೀಯು ತನ್ನ ಆಯುಷ್ಯವನ್ನು ಕಳೆದನು.[೧] ಶಾಹಜಿಯ ಹಿರಿಯ ಮಗ ಸಂಭಾಜಿ ಕೂಡ ಮಹಾ ಸೊಕ್ಕಿನವನಾಗಿದ್ದನು. ಆದರೆ ಧಣಿಯನ್ನು ಮನ್ನಿಸುತ್ತಿದ್ದನು. ಆತನ ತಮ್ಮ ಶಿವಾ ಒಳಸಂಚು-ಕುತಂತ್ರಗಳನ್ನು ಮಾಡಿ ಅಪಕೀರ್ತಿಗೆ ಪಾತ್ರನಾಗಿದ್ದನು. ಹಾಗೆ ಬಂಡು ಕುತಂತ್ರ ಇತ್ಯಾದಿಗಳನ್ನು ಮಾಡಿ ಅವನ ಅಣ್ಣ ಸಂಭಾಜಿ ಕೆಟ್ಟ ಹೆಸರನ್ನು ಪಡೆಯಲಿಲ್ಲ.

ಆದಿಲಶಾಹೀ ರಾಜ್ಯದಲ್ಲಿ ಬೆಂಕಿ ಹಚ್ಚಿದವನು, ಶಿವಾ ಒಬ್ಬನೆ, ಮೊಗಲರು ಮತ್ತು ಆದಿಲಶಾಹಿಗಳ ಮಧ್ಯ ಯುದ್ಧ ಮಾಡಹಚ್ಚಿದವನೂ ಶಿವಾ. ಶಿವಾಜಿಯು ಇರುತ್ತಿರುವ ಸ್ಥಳ ಪರ್ವತಗಳಲ್ಲಿಯ ದಟ್ಟ ಅರಣ್ಯ ಪ್ರದೇಶದಲ್ಲಿ ಗಿಡ-ಕಂಟಿಗಳಿಂದ ಕೂಡಿತ್ತು. ಅಲ್ಲಿಯ ಕೋಟೆಗಳನ್ನು ಆಶ್ರಯಿಸಿಯೇ ಅತ್ಯಂತ ದಾಂಡಗಾಯಿತನವನ್ನು ಮಾಡುತ್ತಿದ್ದನು. ಎರಡೂ ಬದಿಗೂ ಅಂದರೆ ದಿಲ್ಲಿ ಹಾಗೂ ಬಿಜಾಪುರಗಳ ಕಡೆಗೆ ತೊಂದರೆ ಕೊಡುತ್ತಿದ್ದನು. ಕಳ್ಳರ ಸ್ವಭಾವದವನಾಗಿದ್ದನು. ತನ್ನ ಪಿಶಾಚಿಯಂಥ ಸೈನ್ಯ ತೆಗೆದುಕೊಂಡು ಕೆಲವೊಮ್ಮೆ ದಿಲ್ಲಿಯವರೆಗೂ ಓಡುತ್ತಿದ್ದನು. ದಿಲ್ಲಿಯ ಸರಹದ್ದಿನಲ್ಲಿಯ ಪ್ರದೇಶಗಳನ್ನು ಹಾಳು ಮಾಡುತ್ತಿದ್ದನು. ಕೆಲವೊಮ್ಮೆ ವಿಜಾಪುರ ಪ್ರದೇಶಗಳ ಮೇಲೆ ಬಂದು. ಗ್ರಾಮ, ಊರು, ನಗರ ಪ್ರದೇಶಗಳನ್ನು, ಬಹಳ ವಸೂಲಿಯ ಪ್ರದೇಶಗಳನ್ನು ಲೂಟಿಮಾಡುತ್ತ ಚಂದಿ ಮತ್ತು ಕಂಚಿಯ ವರೆಗೂ ಓಡಿ ಮುತ್ತಿಗೆ ಹಾಕುತ್ತಿದ್ದನು. ಶಿವಾನ ದಂಗೆಯಿಂದ, ಲೂಟಿಯಿಂದ, ದಿಲ್ಲಿಯ ಔರಂಗಜೇಬ ಬಾದಶಹ ಮತ್ತು ಆದಿಲಶಾಹ ಬಾದಶಹ ಇಬ್ಬರೂ ದಣಿದಿದ್ದರು. ಉಭಯತರೂ ಶಿವಾನನ್ನು ದಾರಿಗೆ ತರಬೇಕೆಂದು ಬಹಳ ಪ್ರಯತ್ನ ಮಾಡುತ್ತಿದ್ದರು. ಆದರೆ ಒಂದೂ ಉಪಯೋಗವಾಗಲಿಲ್ಲ. ಕೊನೆಗೆ ಆ ದುಷ್ಟನ, ನಿರ್ದೈವಿ ಪುರುಷನ, ಹದ್ದಿನ ಹೆಜ್ಜೆಯ ಶಿವಾನಿಂದ ಸಾವಕಾಶವಾಗಿ ದಕ್ಷಿಣದ ಪ್ರದೇಶಗಳು ಒಂದೊಂದೇ ಮೊಗಲರ ವಶವಾದುವು.

---

೧. ಶಕೆ ೧೫೮೫ ಶುದ್ಧ ಷಷ್ಠಿ ಶನಿವಾರ (೨೩ ಜಾನೇವಾರಿ ೧೬೬೪) ಶಾಹಜೀ ರಾಜೇ ಪರಲೋಕವಾಸಿಗಳಾದರು – ಜೇಧೆ ಶಕಾವಲಿ ಪುಟ ೨೨.

### ೩೨. *ಶಿವಾನ ಬಂಡುಖೋರತನದಿಂದಾಗಿ ದಿಲ್ಲಿ ಬಾದಶಹನು ಆದಿಲಶಹನ ರಾಜ್ಯದ ಮೇಲೆ ಆಕ್ರಮಣ ಮಾಡಿದ್ದು :*

ಅಲೀ ಆದಿಲಶಹನು ಕೆಲವು ದಿನ ಬಂಕಾಪುರದ ಕೋಟೆಯಲ್ಲಿದ್ದು ಹಿಂದುಗಳೊಂದಿಗೆ ಯುದ್ಧ ಮಾಡುತ್ತ ಕರ್ನಾಟಕ ಮತ್ತು ಮಲೆನಾಡುಗಳಲ್ಲಿರುವಾಗ ಆತನ ಎಲ್ಲ ಸೈನ್ಯವೂ ಅಲ್ಲಿಯೇ ಇತ್ತು. ಆ ಸಮಯವನ್ನು ನೋಡಿ ಶಿವಾ ಗುಡ್ಡದಿಂದ ಹೊರಬಂದನು. ನಾಲ್ಕೂಕಡೆಗೆ ದೃಷ್ಟಿ ಹಾಯಿಸಿ ನೋಡಿದನು. ತನ್ನ ಭೋಜನಕ್ಕೆ ಮೊದಲ ತುತ್ತು ಶಾಯಸ್ತಖಾನನೇ ಸೂಕ್ತವೆಂದು ಯೋಜಿಸಿದನು. ಶಾಯಸ್ತಖಾನನು ಔರಂಗಜೇಬನ ಆದೇಶದಂತೆ ದಕ್ಷಿಣ ದೇಶಗಳ ಜಿಲ್ಲೆಗಳ ಮೇಲೆ ನಿಯಮಿಸಲ್ಪಟ್ಟ ಸೇನಾ ಸರದಾರನಾಗಿದ್ದನು. ಶಿವಾನ ಕುತಂತ್ರ ಗೊತ್ತಿಲ್ಲದೆ ಆತ ತನ್ನ ಸೈನ್ಯದೊಂದಿಗೆ ಶಿವಾನ ಸರಹದ್ದಿನ ಹತ್ತಿರ ಬಂದು ಇಳಿದಿದ್ದನು ಆಗ ಶಿವಾ ತನ್ನ ರಾಕ್ಷಸ ಸೈನ್ಯ ತೆಗೆದುಕೊಂಡು ದೂರದ ದಾರಿಯವರೆಗೆ ಬಂದು ರಾತ್ರಿ ಹೊತ್ತು ಆತನ ದಂಡನ್ನು ಮುತ್ತಿದನು. ಆತನ ಸೈನ್ಯವನ್ನೆಲ್ಲ ಲೂಟಿ ಮಾಡಿ, ಎಲ್ಲ ಸಾಮಾನು ಸರಂಜಾಮುಗಳನ್ನಲ್ಲದೆ ಶಾಯಸ್ತಖಾನನ ನಗದು ಮತ್ತು ಖಾಸಾ ಸಂಪತ್ತನ್ನೂ ಲೂಟಿ ಮಾಡಿದನು. ಶಾಯಸ್ತಖಾನನು ಗಾಯಹೊಂದಿ ಬಿದ್ದನು.[1] ಭಯಂಕರ ವರ್ತಮಾನವು ದಿಲ್ಲಿಯ ಬಾದಶಹ ಔರಂಗಜೇಬನಿಗೆ ಗೊತ್ತಾಯಿತು. ಆತ ಅತ್ಯಂತ ಸಿಟ್ಟಾಗಿ ಶಿವಾನ ವಿರುದ್ಧ ಸೇಡು ತೀರಿಸಿಕೊಳ್ಳಲು ಜಸವಂತಸಿಂಗ ಎಂಬ ಸರದಾರನೊಂದಿಗೆ ಭಾರೀ ಸೈನ್ಯವನ್ನು ಕೊಟ್ಟು ಕಳಿಸಿದನು. ಆತ ಅಲ್ಲಿಂದ ಹೊರಟು ಶಿವಾನ ಸರಹದ್ದನ್ನು ಪ್ರವೇಶಿಸಿ ಆತನ ಒಂದು ಕೋಟೆ (ಸಿಂಹಗಡ)ಯ ಹತ್ತಿರ ಬಂದು ಇಳಿದನು.[2] ಹಲ್ಲೆ ಮಾಡಿ ಆ ಕೋಟೆಯನ್ನು ಸುತ್ತುವರೆದನು. ಪಿಶಾಚಿಯಂಥ ಶಿವಾನು ತನ್ನ ಕಳ್ಳ ಜನರನ್ನು ಜಸವಂತ ಸಿಂಗನನ್ನು ಎದುರಿಸಲು ಬಿಟ್ಟು, ತಾನು ಸೈನ್ಯದೊಂದಿಗೆ ಸುರತ ಬಂದರಕ್ಕೆ ಬಂದನು.

ಭರ್ತಿ ಜನವಸತಿಯ ಸುರತದಂಥ ಬಂದರ ಈ ವಿಶ್ವದಲ್ಲಿಯೇ ಇರಲಿಲ್ಲ. ಅಂಥ ಚೆನ್ನಾದ ಬಂದರಕ್ಕೆ ಹೋಗಿ ಹಲ್ಲೆ ಮಾಡಿದನು. ವೇಷ ಮರೆಸಿಕೊಂಡು ಬಂದರದಲ್ಲಿ ಒಳಹೊಕ್ಕು ಅಲ್ಲಿಯ ಎಲ್ಲ ಮಾಲಮತ್ತೆಯನ್ನು, ಬೆಳ್ಳಿ ಬಂಗಾರವನ್ನು ಲೂಟಿ ಮಾಡಿ, ಸ್ವಚ್ಛವಾಗಿ ಕಸಗುಡಿಸುವಂತೆ ಬಂದರದ ಸಂಪತ್ತನ್ನೆಲ್ಲ ಕೊಳ್ಳೆಹೊಡೆದನು.[3] ಅದೇ ವೇಗದಿಂದ ಪುನಃ ತಾನಿರುವ ಸ್ಥಳಕ್ಕೆ ಬಂದು ಮುಟ್ಟಿದನು.[4]

---

೧. ಶಕೆ ೧೫೮೫ ಚೈತ್ರ ಶುದ್ಧ ೮ ರವಿವಾರ (೫ ಏಪ್ರಿಲ ೧೬೬೩) ಶಾಯಸ್ತಖಾನನ ಮೇಲೆ ಪುಣೆಯಲ್ಲಿ ಶಿವಾಜಿ ರಾಜರು ಸ್ವತಃ ಹೋಗಿ ಮುತ್ತಿಗೆ ಹಾಕಿದರು. ಶಾಯಸ್ತಖಾನನ ಕೈ ಮುರಿಯಿತು. ಆನಂತರ ಓಡಿ ಹೋದನು. ಆತನ ಮಗ ಅಬ್ದುಲ ಫತೇ ಕೊಲೆಯಾದನು. ಲಾಲ ಮಹಲಿನಲ್ಲಿ ಹೊಕ್ಕನು. ಜೇಧೆ ಶಕಾ ಪುಟ ೨೨ ಅಲ್ಲದೆ ಕಾಫೀಖಾನ E.D.VII – ಪು ೨೬೯.೨೧
Shastakhan left Aurangabad by the end of January 1660, reached Shevgaon on 3rd March and via Supa arrived in Poona, Shivapur camp. The assault on him took place in Ramjan (April-1663) K.K.MAC-MSS

೨. ಶಕೆ ೧೫೮೫ ಮಾರ್ಗಶೀರ್ಷ (ನವ-ಡಿಶೆ ೧೬೬೩) ಜಸವಂತಸಿಂಗ ಕೌಧಾಣೆಯ ಕೆಳಗೆ ಬಂದು ಮುತ್ತಿದ-ಜೇಧೆ ಪು.೨೨

೩. ಶಕೆ ೧೫೮೫ ಮಾರ್ಗಶೀರ್ಷ ವದ್ಯ ೨. (೬, ಡಿಶೆಂಬರ ೧೬೬೩) ಸುರತಕ್ಕೆ ಹೋದನು-ಶಿದಶ-ಶಿಚಪ್ರ ಪುಟ.೫೧ ಪೌಷ ವದ್ಯ ೪ (೬ ಜಾನೇವಾರಿ ೧೬೬೪) ಸುರತ ಲೂಟ-ಜೇಧೆ ಶಕಾವಲಿ ಪುಟ ೨೨

೪. ಶಕೆ ೧೫೮೫ ಮಾಘ ವದ್ಯ ೪ ಭೃಗುವಾರ (೫ ಫೆಬ್ರುವರಿ ೧೬೬೪) ರಾಜರು ತಿರುಗಿ ರಾಯಗಡಕ್ಕೆ ಬಂದರು. ಜೇಧೆ ಪು.೨೨

ಹೀಗೆ ಆಗಾಗ ಹೋಗಿ ಬರುವ ವಿಷಯ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಆದರೆ ಶಿವಾ ಬಂದು ಲೂಟಿ ಮಾಡಿ ತಿರುಗಿ ಹೋದನಂತರ ಅಲ್ಲಿಯ ಎಲ್ಲ ಜನರೂ ಆಶ್ಚರ್ಯಚಕಿತರಾಗುತ್ತಿದ್ದರು. ಸುರತದ ಲೂಟಿಯ ನಂತರ ತಿರುಗಿ ಬಂದು ಜಸವಂತಸಿಂಗ ನೊಂದಿಗೆ ಯುದ್ಧ ಮಾಡುತ್ತಿದ್ದನು. ತನ್ನ ಗದ್ದಲ ಮತ್ತು ಕುತಂತ್ರಗಳಿಂದ ಜಸವಂತಸಿಂಗನನ್ನೂ ಹಣ್ಣು ಮಾಡಿದನು.[೫]

ಈ ವರ್ತಮಾನವು ಔರಂಗಜೇಬನಿಗೆ ತಿಳಿದಾಗ ಆತ ಅತ್ಯಂತ ಸಿಟ್ಟಿಗೆದ್ದು, ಸಂತಾಪ ಭರದಲ್ಲಿ ತನ್ನ ಐಷಾರಾಮ ಭೋಗವನ್ನು ಕೂಡ ಬಿಡುವಂತಾಯಿತು. ಶಿವಾನ ಸೇಡು ತೀರಿಸಿಕೊಳ್ಳುವ ಚಿಂತೆ ಮಾಡಹತ್ತಿದನು. ಇದಕ್ಕೆ ತಕ್ಕ ಉಪಾಯವೆಂದರೆ ಆದಿಲಶಹನ ಸಹಾಯವೆಂದು ಮನಗಂಡು, ಹಾಗೆ ನಿರ್ಧರಿಸಿದನು.

### ೩೩. ಶಿವಾನನ್ನು ಶಿಕ್ಷಿಸಲು ದಿಲ್ಲಿ ಬಾದಶಹನು ಆದಿಲಶಹನಿಂದ ಸಹಾಯ ಯಾಚನೆ :

ಅನಂತರ ಬುದ್ಧಿವಂತ ವಕೀಲನ ಮುಖಾಂತರ ಆದಿಲಶಹನ ಕಡೆಗೆ ನಿರೋಪ ಕಳಿಸಿಲಾಯಿತು. 'ಈ ಹಿಂದೂ ತುಂಬ ಕೆಟ್ಟವನಾಗಿದ್ದು, ಜೀವ ತೆಗೆಯಲು ಅರ್ಹನಾಗಿರುವ ಶಿವಾನು ಕುತಂತ್ರ ಇತ್ಯಾದಿಗಳಿಂದ ಬಂಡು ಹೂಡಿದ್ದಾನೆ. ಮುಸಲ್ಮಾನರಿಗೆ ತುಂಬ ತೊಂದರೆ ಕೊಡುತ್ತಿದ್ದಾನೆ. ಎಲ್ಲ ಜನರೂ ಅಲ್ಲಾನ ಪ್ರಜೆಗಳಾಗಿದ್ದು ಅವರಿಗೂ ಕೂಡ ಬಹಳ ದುಃಖನೀಡಿ ಉಪದ್ರವ ಕೊಡಲು ಕಿಂಚಿತ್ತೂ ಅನುಮಾನಿಸುತ್ತಿಲ್ಲ. ಇನ್ನು ಮುಂದೆ ಶಿವಾನ ಪಾರುಪತ್ಯದಲ್ಲಿ ಸಡಿಲುಬಿಡುವುದು ರಾಜ್ಯವನ್ನೇ ಮುಳುಗಿಸುವ ಕಾರಣವಾದೀತು. ಆದ್ದರಿಂದ ಎಲ್ಲ ಮುಸಲ್ಮಾನರಿಗೂ ಮತ್ತು ಬಾದಶಹರಿಗೂ ಶಿವಾನ ಪಾರುಪತ್ಯ ಮಾಡುವ ಕಾಲ ಒದಗಿಬಂದಿದೆ. ಈ ವಿಷಯದಲ್ಲಿ ಎಲ್ಲರೂ ಕೂದಲೆಳೆಯಷ್ಟು ಸಡಿಲು ಬಿಡದೆ ಆತನ ಪಾರುಪತ್ಯ ಮಾಡುವಲ್ಲಿ ಪ್ರಯತ್ನ ಮಾಡಬೇಕು ಶಿವಾನ ಒಳಸಂಚುಗಳನ್ನು, ಬಂಡಾಯಗಳನ್ನು ಮೂಲದಲ್ಲಿಯೇ ಕತ್ತರಿಸಿ ನಿರ್ಮೂಲ ಮಾಡಲು ಬಹಳ ಶ್ರಮವಹಿಸಬೇಕು. ಇದಕ್ಕಾಗಿ ನಮ್ಮ ಮನಸ್ಸಿನಲ್ಲಿ ಹೀಗಿದೆ; ಆ ಕೆಟ್ಟ ಶಿವಾನನ್ನು ಕೊಲ್ಲಲು ಇತ್ತಕಡೆಯಿಂದ ಶೂರ ಮತ್ತು ಯಶಸ್ವಿ ಸೈನಿಕರನ್ನು ಕಳಿಸುತ್ತಿದ್ದು, ತಮ್ಮ ಕಡೆಯಿಂದಲೂ ಕಳಿಸಬೇಕು. ಅಂದರೆ ಎರಡೂ ಬದಿಗಳಿಂದಲೂ ಮನುಷ್ಯರನ್ನು ಕಚ್ಚುವ ಆ ಸರ್ಪ ಅಂದರೆ ಶಿವಾನನ್ನು ಹಿಡಿದು, ಬಾದಶಹರ ಕ್ರೋಧರೂಪ ಬಂಡೆಗಳಿಂದ ಆ ಹಾವಿನ ತಲೆಯನ್ನು ಜಜ್ಜಿ ಒಗೆಯಬೇಕು. ಅರ್ಥಾತ್ ಶಿವಾನನ್ನು ಕೊಲ್ಲಬೇಕು. ಆತನ ದುರ್ನಡತೆಯ ಸೇಡನ್ನು ತೀರಿಸಿಕೊಳ್ಳಬೇಕು. ಕುತಂತ್ರಗಳ ಮುಳ್ಳಾಗಿರುವ ಶಿವಾನನ್ನು ಮಾರ್ಗ ಮಧ್ಯದಿಂದ ಕಿತ್ತಿ ಒಗೆದರೆ ನಾವು ಮತ್ತು ನೀವು ಉಭಯ ಬಾದಶಹರಲ್ಲಿ ವೈರತ್ವ ಉಳಿಯುವುದಿಲ್ಲ' ಎಂಬುದಾಗಿ ನಿರೋಪವನ್ನು ಹೇಳಿ ಕಳಿಸಲಾಯಿತು. ಈ ನಿರೋಪವನ್ನು ಕೇಳಿದ ಅಲೀ ಆದಿಲಶಹನು ದಿಲ್ಲಿ ಬಾದಶಹನ ಹೇಳಿಕೆಯನ್ನು ಒಪ್ಪಿ, ಬಂದಿದ್ದ ವಕೀಲನನ್ನು ಬಹಳ ಸತ್ಕರಿಸಿ ತಿರುಗಿ ಕಳಿಸಿದನು. ಆದಿಲಶಹನು ಸಹಾಯಕ್ಕೆ ಒಪ್ಪಿದ್ದನ್ನು ಕೇಳಿ ದಿಲ್ಲಿ

---

೫. ಶಕೆ ೧೫೬೬, ಚೈತ್ರ ವದ್ಯ ೧೩ (೧೪ ಏಪ್ರಿಲ್, ೧೬೪೪) ಸಿಂಹಗಡದಲ್ಲಿ ಸುಲತಾನ ಕೋಬಾ ಕೊಲೆಯಾದನು- ಜೇಷ್ಠಶುದ್ಧ ೬ (೨೦ ಮೇ, ೧೬೬೪) ಸಿಂಹಗಡದ ಕೆಳಗೆ ಇಳಿದರು. ಜ್ಯೇಷ್ಠ ಶುದ್ಧ ೧೪, ಸೋಮವಾರ (೧ ಶನಿವಾರ, ೨೮ ಮೇ, ೧೬೬೪) ಜಸವಂತ ಸಿಂಗನು ಕೊಂಡಾಣದ ಮುತ್ತಿಗೆಯನ್ನು ತೆಗೆದನು. ಜ್ಯೇಷ್ಠ ವದ್ಯ ೧ (ಸೋಮವಾರ ೩೦, ಮೇ ೧೬೬೪) ಶಿವಾಜೀರಾಜರು ಸಿಂಹಗಡವನ್ನು ನೋಡಲು ಹೋದರು-ಜೇಧೆ ಶಕಾವಲಿ ಪುಟ ೨೩. On 13th May 1665 Jaswant Singh returned to Delhi and had audience - MiA - P. 32

ಬಾದಶಹನೂ ತುಂಬ ಸಂತೋಷಪಟ್ಟು ಈ ಕೆಲಸಕ್ಕಾಗಿ ಹೆಸರಾಂತ ಸರದಾರ ರಾಜಾ ಜಯಸಿಂಗನನ್ನು ಅವನೊಂದಿಗೆ ಬಹಳಷ್ಟು ಮೊಗಲರು, ಪಠಾಣರು ರಜಪೂತರು ಮತ್ತು ಮುಸಲ್ಮಾನ ಸೈನಿಕರನ್ನು ಮತ್ತು ಯುದ್ಧ ಸಾಮಗ್ರಿಗಳನ್ನು ಕೊಟ್ಟು ಕಳಿಸಿದನು.[೧]

### ೩೪. *ಶಿವಾನ ಪಾರುಪತ್ಯಕ್ಕಾಗಿ ಅಲೀ ಆದಿಲಶಹನು ಖವಾಸಖಾನನನ್ನು ದಿಲ್ಲಿಯ ಬಾದಶಹನಿಗೆ ಸಹಾಯಮಾಡಲು ಕಳಿಸಿದ್ದು :*

ಔರಂಗಜೇಬನಿಗೆ ಸಹಾಯ ಮಾಡಲು ಒಪ್ಪಿ ವಕೀಲನ ಮೂಲಕ ನಿರೋಪ ಕೊಟ್ಟು ಕಳಿಸಿದನು. ಸೈನ್ಯ ಹಾಗೂ ಯುದ್ಧ ಸಾಮಗ್ರಿಗಳನ್ನು ಸಿದ್ಧಪಡಿಸಿ, ಹೆಸರಾಂತ ಅಮೀರ ಜನರನ್ನು ಮತ್ತು ಸರದಾರರನ್ನು ಸೇರಿಸಿ ಹೀಗೆ ಆಜ್ಞೆ ಮಾಡಿದನು. 'ಕೊಲ್ಲಲೂ ಲಾಯಕನಾದ ಶಿವಾನ ಪಾರುಪತ್ಯಕ್ಕೆ ದಿಲ್ಲೀ ಬಾದಶಹನಿಗೆ ಸಹಾಯಮಾಡಲು ನಿಮ್ಮಲ್ಲಿಯ ಯಾವ ಸರದಾರನನ್ನು ಕಳಿಸಬಹುದು? ಅಂಥವರು ಯಾರಿದ್ದಾರೆ? ಈ ಕೆಲಸದಲ್ಲಿ ಧೈರ್ಯಬೇಕು. ಉತ್ತಮ ರೀತಿಯಲ್ಲಿ ಕೆಲಸವನ್ನು ಕೊನೆಗಾಣಿಸಬೇಕು. ನಮಗೆ ಒಪ್ಪಿಗೆಯಾಗಿ, ಆತನ ಪರಾಕ್ರಮದ ಕೀರ್ತಿ ದಿಲ್ಲಿಯವರೆಗೂ ಹೋಗಬೇಕು. ಅಂಥವರು ಯಾರಿದ್ದಾರೆ? ಎಂದು ಕೇಳಿದನು. ಆಗ ಮಹಾ ಪರಾಕ್ರಮಿಯಾದ ಖವಾಸಖಾನನು ಎದ್ದು ನಿಂತು, ಪ್ರತಿಜ್ಞಾಪೂರ್ವಕವಾಗಿ ವೀಳ್ಯವನ್ನು ಎತ್ತಿ ಹೇಳಿದನು. 'ಇಂದಿನ ಸೇವೆ ನನ್ನದಿದೆ. ನಾನು ಮನಸಾರೆ ಒಪ್ಪುತ್ತೇನೆ. ಈ ಕೆಲಸವನ್ನು ನಾನು ತುಂಬ ವಿಶ್ವಾಸದಿಂದ ಕೊನೆಗಾಣಿಸಬಲ್ಲೆ. ಸ್ವಾಮಿ ಸೇವೆಗಾಗಿ ನನ್ನ ಪ್ರಾಣವನ್ನು ಪಣಕ್ಕಿಡಬೇಕೆಂದು ನನ್ನ ಮನದಲ್ಲಿದೆ' ಎಂದು ಹೇಳಿ ಮತ್ತೆ ಹೀಗೆ ವಿನಂತಿ ಮಾಡಿಕೊಂಡನು. 'ಬಾದಶಹರ ಆಜ್ಞೆಯಂತೆ, ನಡೆದು, ಈ ಕೆಲಸವನ್ನು ಕೊನೆಗಾಣಿಸಲು ನಾನು ದಿಲ್ಲಿಯ ಸೇನೆಯ ಮಾರ್ಗಪ್ರತೀಕ್ಷೆ ಮಾಡುವ ಕಾರಣವಿಲ್ಲ. ಇನ್ನೊಬ್ಬರ ಸಹಾಯದಿಂದ ಕೆಲಸ ಮಾಡುವವ ಅವನೆಂಥ ಮನುಷ್ಯ? ಅದರಲ್ಲಿ ಯಾವ ಪರಾಕ್ರಮವೂ ಇಲ್ಲ. ಇನ್ನೊಬ್ಬರ ಸಹಾಯದಿಂದ ಕೆಲಸ ಮಾಡುವ ಪರಾಕ್ರಮೀ ವ್ಯಕ್ತಿಯನ್ನು ಯಾರೂ ಹೊಗಳಲಾರರು. ನಾನು ಸಣ್ಣವನಿದ್ದಾಗಿನಿಂದ ಇಂದಿನವರೆಗೂ ಬಾದಶಹರ ಉಪ್ಪನ್ನು ತಿಂದು ಬೆಳೆದುದು ನಿಜವಿದ್ದರೆ ಆ ಉಪ್ಪಿನ ಸಾಮರ್ಥ್ಯದಿಂದ ನಾನು ಹೋರಾಡಿ ತೋರಿಸುವೆನು. ಸೂರ್ಯನೇ ಒಂದು ವೇಳೆ ಶತ್ರುವಾಗಿ ಆಕಾಶದಲ್ಲಿದ್ದರೂ ಆತನನ್ನು ತಲವಾರಿನಿಂದ ತುಂಡರಿಸಬಲ್ಲೆ. ಆತನ ಧೈರ್ಯವನ್ನು ಮುರಿಯ ಬಲ್ಲೆ' ಎಂದು ಹೇಳಿ ಯುದ್ಧಕ್ಕೆ ಹೋಗಲು ಆದಿಲಶಹನಿಂದ ಆಜ್ಞೆ ಬೇಡಿದನು. ಬಾದಶಹನು ಆತನನ್ನು ಬಹಳ ಸಂತೋಷಪಡಿಸಿ ತನ್ನ ಸ್ವಂತ ತಲವಾರನ್ನು ಕೊಟ್ಟನು. ಖವಾಸಖಾನನನ್ನು ಅಲ್ಲಾನ ಕೃಪೆಗೆ ಒಪ್ಪಿಸಿ ಆತನಿಗೆ ಯುದ್ಧಕ್ಕೆ ಹೋಗಲು ನಿರೋಪ ಕೊಟ್ಟನು. ಖವಾಸಖಾನನು ಬಾದಶಹನ ಆಜ್ಞೆಯನ್ನು ಸ್ವೀಕರಿಸಿ ಹೊರಟನು. ಪ್ರತಿದಿನ ಕೂಚ ಮಾಡಿ ಮಜಲುಗಳಲ್ಲಿ ದಾರಿ ಸವೆಸಿ ಶಿವಾನ ಸರಹದ್ದನ್ನು ಮುಟ್ಟಿದನು. ಖವಾಸಖಾನನು ಬಂದ ಸುದ್ದಿ ತಿಳಿಯುತ್ತಲೇ ಶಿವಾನು ಅಲ್ಲಿಯ "ಹುಲಿ ಮಾರ್ಗವನ್ನು" ಬಂದ ಮಾಡುವ ವಿಚಾರದಲ್ಲಿ ಬಿದ್ದನು. ಆ ಮಾರ್ಗ ಬಹಳ ಇಕ್ಕಟ್ಟಾಗಿದ್ದು ಗಿಡಗಂಟೆಗಳಿಂದ ಕಠಿಣವಾಗಿತ್ತು. ಅದರ ಹೊರತು, ಆ ಪರ್ವತದಲ್ಲಿ ಬೇರೆ ದಾರಿಯೇ ಇರಲಿಲ್ಲ. ಆದಾಗ್ಯೂ ಖವಾಸಖಾನನು, ಬಹಳ ಅವಸರದಿಂದ ಸೈನ್ಯದೊಂದಿಗೆ ಆ ಮಾರ್ಗದಿಂದಲೇ ಘಟ್ಟದ ಮೇಲೆ ಏರಿ ಬಂದನು. ಈ ಸುದ್ದಿ

---

೧. ಶಕೆ ೧೫೮೭ ವೈಶಾಖ ಮಾಸ (ಏಪ್ರಿಲ ೧೬೬೫) ಜಯಸಿಂಗ ಮತ್ತು ದಲೇಲಖಾನನು ಬಂದು ಪುರಂದರವನ್ನು ಮುತ್ತಿಗೆ ಹಾಕಿದರು. ಆಷಾಢ ಶುದ್ಧ ೧೦ (೧೨, ಜೂನ, ೧೬೬೫) ರಾಜಶ್ರೀ ಬಂದು ಜಯಸಿಂಗನನ್ನು ಭೆಟ್ಟಿಯಾಗಿ ಚರ್ಚಿಸಿದರು - ಜೇಧೆ ಶಕಾ ಪುಟ 23 MIA-P33

ತಿಳಿದು, ಶಿವಾನು ಸಂತೋಷದಿಂದ ಚಪ್ಪಾಳೆ ತಟ್ಟಿ, ಕ್ರೋಧದಿಂದ ತನ್ನ ಕೈಬೆರಳುಗಳನ್ನು ಕಡಿದುಕೊಂಡನು. ಮತ್ತೆ ಶುದ್ಧಿಯ ಮೇಲೆ ಬಂದು, ದಿಲ್ಲಿಯ ಸೈನ್ಯ ಬರಲು ಇನ್ನೂ ಅವಕಾಶವಿದೆ. ಮೊದಲು ಒಬ್ಬನೊಂದಿಗೇ ಯುದ್ಧ ಮಾಡುತ್ತೇನೆ. ಆದಿಲಶಾಹನ ಕಡೆ ತುಸುವೇ ಸೈನ್ಯವಿದೆ. ಇದನ್ನು ನಾನು ಒಂದೇ ದಾಳಿಯಲ್ಲಿ ಹತ್ತಿಕ್ಕ ಬಲ್ಲೆ. ಈ ಸೈನ್ಯವನ್ನು ಹತ್ತಿಕ್ಕಿ ಬಿಡುಗಡೆಯಾದರೆ, ದಿಲ್ಲಿಯ ಕಡೆಯಿಂದ ಭಾರೀ ಸೈನ್ಯ ಬರುತ್ತದೆ. ಒಂದು ಕ್ಷಣದಲ್ಲಿ ಅದನ್ನು ಸೋಲಿಸುವೆ' ಎಂಬುದಾಗಿ ಹೇಳಿ, ತನ್ನ ಪಿಶಾಚಿಗಳಂತಿದ್ದ ಒಟ್ಟು ಸೈನ್ಯವನ್ನು ಮತ್ತು ಯುದ್ಧ ಸಾಮಗ್ರಿಗಳನ್ನು, ದಿಲ್ಲಿಯ ಸೈನ್ಯಕ್ಕಾಗಿ ಕಾದಿಟ್ಟಿದ್ದ ಸೈನ್ಯವನ್ನು ತೆಗೆದುಕೊಂಡು, ಖವಾಸಖಾನನ ಮೇಲೆ ರಾತ್ರಿ ಮುತ್ತಿಗೆ ಹಾಕಿದನು. ರಾತ್ರಿ ಮುತ್ತಿಗೆ ವಿಷಯ ಖವಾಸಖಾನನಿಗೆ ತಿಳಿದಿರಲಿಲ್ಲ. ಶಿವಾ ಉಳಿದುಕೊಂಡಿದ್ದ ಪರ್ವತದಲ್ಲಿಯ ಸ್ಥಳವೂ ಗೊತ್ತಿರಲಿಲ್ಲ. 'ಶಿವಾ ಎಲ್ಲಿದ್ದಾನೆ?' ಎಂಬ ಶೋಧದಲ್ಲಿ ಖವಾಸಖಾನನಿದ್ದನು. 'ಯಾವ ಯೋಜನೆಗಳನ್ನು ಹಾಕಬಹುದು' ಎಂಬ ವಿಚಾರದಲ್ಲಿದ್ದನು. ಅಷ್ಟರಲ್ಲಿ ಒಮ್ಮಿಂದೊಮ್ಮೆಲೇ ಶಿವಾನು ತನ್ನೆಲ್ಲ ಸೈನ್ಯವನ್ನು ತೆಗೆದುಕೊಂಡು ಖವಾಸಖಾನನ ಸೈನ್ಯದ ಮೇಲೆ ಹಲ್ಲೆ ಮಾಡಿದನು. ಖವಾಸಖಾನನ ಸೈನ್ಯ ಕಂಬಾರನ ತಿದಿಯಲ್ಲಿ ಸಿಕ್ಕಂತೆ ಸಿಕ್ಕಿಕೊಂಡಿತು. ಖವಾಸಖಾನನು ಇಳಿದುಕೊಂಡಿದ್ದ ಪರ್ವತದ ಅವಘಡ ಪ್ರದೇಶದಲ್ಲಿ ಇನ್ನೊಬ್ಬರು ಬಂದು ಸೇರಿಕೊಳ್ಳುವಷ್ಟೂ ಸ್ಥಳವಿರಲಿಲ್ಲ. ಎಡಬಲದಲ್ಲಿ ಅಲುಗಾಡಲೂ ಸ್ಥಳವಿರಲಿಲ್ಲ. ಆದರಿಂದಾಗಿ ಖವಾಸಖಾನನ ಸೈನ್ಯ ಬಹಳ ಬೆದರಿತು. 'ಈ ಸ್ಥಳದಲ್ಲಿ ನಾವು ನಮ್ಮ ಶೌರ್ಯವನ್ನು ಹೇಗೆ ತೋರಿಸಬಲ್ಲೆವು. ಶತ್ರು ಶಿವಾನೊಂದಿಗೆ ಹೇಗೆ ಯುದ್ಧ ಮಾಡಬಲ್ಲೆವು?' ಎಂದು ಮಾತನಾಡಿಕೊಂಡರು.

### ೩೫. *ಖವಾಸಖಾನನು ತನ್ನ ಸೈನ್ಯವನ್ನು ಹುರಿದುಂಬಿಸಿ, ಶಿವಾನನ್ನು ಸೋಲಿಸಿ ಆದಿಲಶಹನಿಗೆ ವಿಜಯ ತಂದದ್ದು :*

ತನ್ನ ಸೈನ್ಯವು ಭಯಭೀತವಾಗಿದೆ ಎಂದು ತಿಳಿದ ಖವಾಸಖಾನನು, ಸೈನ್ಯದಲ್ಲಿಯ ಪ್ರಧಾನ ಸರದಾರರನ್ನು ತನ್ನ ಹತ್ತಿರ ಕರೆಯಿಸಿಕೊಂಡನು. ಅವರಿಗೆ ಗಾಬರಿಯಾಗಬಾರದೆಂದೂ ಧೈರ್ಯ ಬಿಡಬಾರದೆಂದೂ ಹೇಳಿದನು. ನಮ್ಮ ಗುಂಪು ಸಣ್ಣದಿದೆ, ಶತ್ರುವಿನ ಗುಂಪು ದೊಡ್ಡದಿದೆ ಎಂಬುದರ ಮೇಲೆ ದೃಷ್ಟಿಯಿಡಬೇಡಿರಿ. ನಮ್ಮ ಸೈನ್ಯ ಸಣ್ಣದಿದ್ದರೂ ಕುರಿಗಳ ಮಧ್ಯದ ತೋಳವಿದ್ದಂತೆ, ಇಲಿಗಳ ಮಧ್ಯದ ಬೆಕ್ಕಿನಂತೆ ಶತ್ರುವಿನ ಭಾರೀ ಸೈನ್ಯಕ್ಕೆ ನಮ್ಮ ಸಣ್ಣ ಸೈನ್ಯ ಸಾಕು-ಎಂದು ತಿಳಿಯಬೇಕು. ಶತ್ರುವು ಏರಿ ಬಂದು ಈ ಭಯಂಕರ ಅರಣ್ಯದಲ್ಲಿ ಮತ್ತು ಬೆಟ್ಟಗಳ ಕೊರಕಲಿನಲ್ಲಿ ನಮ್ಮನ್ನು ಸುತ್ತುವರಿದಿದ್ದಾನೆ. ಕಿಂಚಿತ್ ಅಲುಗಾಡಲೂ ಕೂಡ ಸ್ಥಳವಿಲ್ಲ ನಿಜ. ಆದರೂ ಅಲ್ಲಾನ ಕೃಪೆ ಹಾಗೂ ಬಾದಶಹರ ಭಾಗ್ಯದ ಮೇಲೆ ಭರವಸೆಯನ್ನಿಟ್ಟು ಇಲ್ಲಿಯೇ ಡೇರೆಗಳನ್ನು ಹಾಕಿ ಸ್ಥಿರವಾಗಿ ನಿಂತುಬಿಡೋಣ. ಪರಾಕ್ರಮ ತೋರಿಸಿ ಶತ್ರುವಿನ ತಲೆಗಳನ್ನು ಉರುಳಿಸೋಣ. 'ನಾನು ಶಾಯಸ್ತಖಾನನಲ್ಲ. ಶಿವಾನು ಪ್ರತಿಯೊಬ್ಬರನ್ನೂ ಮೋಸ ಮಾಡಿದ್ದಾನೆ. ಈಗ ಆ ಎಲ್ಲರ ಬದಲಾಗಿ ನಾನು ಸೇಡು ತೀರಿಸಿಕೊಳ್ಳುವೆ. ಶಿವಾನ ಗರ್ವವನ್ನು ಮುರಿದು ಅವನು ಇಲ್ಲದಂತೆ ಮಾಡುವೆನು. ನೀವು ನಿಮ್ಮನಿಮ್ಮ ಧೈರ್ಯದ ಮೇಲೆ ಸ್ಥಿರವಾಗಿ ಯುದ್ಧಕ್ಕೆ ಸಿದ್ಧರಾಗಿರಿ. ಏನಾಗುತ್ತದೆ. ಎಂಬುದನ್ನು ನೋಡೋಣ. ಶಿವಾನ ಕೈಯಿಂದ ಗೆಲುವಿನ ವಿಜಯ ಮಾಲೆಯನ್ನು ಹೇಗೆ ತರುತ್ತೇನೆ ಎಂಬ ಚಮತ್ಕಾರವನ್ನು ಅವಲೋಕಿಸಿರಿ' ಎಂದೆಲ್ಲ ಖವಾಸಖಾನನು ತನ್ನ ಸೈನ್ಯಕ್ಕೆ ಹೇಳುತ್ತಿದ್ದಂತೆಯೇ ಶತ್ರು ಸೈನ್ಯದಿಂದ ಬಂದೂಕುಗಳ ಹಾಗೂ ತೋಫುಗಳ ಶಬ್ದ ಕೇಳಿ ಬರಹತ್ತಿತು. ತೋಫಿನ ಗುಂಡುಗಳು ಖವಾಸಖಾನನ ಸೈನ್ಯದಲ್ಲಿ ಬಂದು ಬೀಳಹತ್ತಿದವು. ಆಗ ಖವಾಸಖಾನನು

'ಏಳಿರಿ ಧೈರ್ಯ ಹಿಡಿಯಿರಿ. ಇಂದಿನ ದಿನ ಪರಾಕ್ರಮದ್ದಾಗಿದೆ' ಎಂದು ಹೇಳಿ, ಯುದ್ಧಕ್ಕೆ ಸಿದ್ಧನಾಗಿ, ಶಿಪಾಯಿಗಳನ್ನು ಸವಾರರನ್ನು ಕಾಲ್ಬಲಗಳನ್ನು ಯುದ್ಧ ನಿಯಮದಂತೆ ನಿಲ್ಲಿಸಿದನು. ಪ್ರತಿಯೊಬ್ಬರಿಗೂ ಪೂರ್ಣ ಭರವಸೆ, ಶಕ್ತಿಗಳನ್ನು ನೀಡಿ ಸ್ವತಃ ಅವರ ಬೆನ್ನು ಚಪ್ಪರಿಸಲು ನಿಂತನು.

ಖವಾಸಖಾನನ ಕಡೆಯ ಶೂರರು, ಗವಿಯಿಂದ ಹೊರಬಿದ್ದ ಸಿಂಹಗಳಂತೆ, ಆ ಅವಘಡ ಸ್ಥಳಗಳಿಂದ ಎದ್ದು ನಿಂತರು ಮತ್ತು ಕಬ್ಬಿಣದ ಸರಪಳಿಗಳನ್ನು ಕತ್ತರಿಸುವ ಹರಿತವಾದ ತಲವಾರುಗಳನ್ನು ಎತ್ತಿ ರಣಭೂಮಿಯಲ್ಲಿ ಪರಾಕ್ರಮ ತೋರಿಸಹತ್ತಿದರು. ಆಗ ಆ ಪಿಶಾಚಿ ಸ್ವಭಾವದ ಮರಾಠಿ ಜನರು ನೂರು-ಇನ್ನೂರು ಗುಂಪುಗಳಲ್ಲಿ ಎದೆ ತೆರೆದು ಅಗಲ ಮಾಡಿಕೊಳ್ಳುತ್ತ ಭಲ್ಲೆಗಳನ್ನು ಕೈಯಲ್ಲಿ ಹಿಡಿದುಕೊಂಡು ಖವಾಸಖಾನನ ಸೈನ್ಯದ ಕುದುರೆಗಳ ಮೇಲೆ ಓಡಿ ಬಂದು ಬಿದ್ದರು. ಕಂಡಲ್ಲಿ ತುಂಡರಿಸಹತ್ತಿದರು. ಖವಾಸಖಾನನ ಸೈನ್ಯವು ಎದ್ದು ನಿಂತು ಸರಿಯಾದ ರೀತಿಯಲ್ಲಿ ತಕ್ಕುದಾದ ಉತ್ತರ ಕೊಟ್ಟರು. ರಕ್ತದ ಹೊಳೆಯನ್ನೇ ಹರಿಸಿದರು. ಯುದ್ಧದ ಅಗ್ನಿಯಿಂದ ರಣಭೂಮಿ ಅಗ್ನಿಕುಂಡದಂತೆ ಕಾಣಹತ್ತಿತು. ಆ ರಣಭೂಮಿಯ ಮೇಲೆ ಪಕ್ಷಿಗಳು ಕೂಡ ಹಾರಾಡುವುದನ್ನು ನಿಲ್ಲಿಸಿದುವು. ಅದು ಶೂರರ ರಕ್ತದಿಂದ ಕೆಂಪು ಹೂಗಳ ಹೊಲದಂತೆ ಆರಕ್ತವಾಯಿತು. ಶಿವಾನ ಸೈನ್ಯದ ಹಲ್ಲೆಯಿಂದ ಖವಾಸಖಾನನ ಕಡೆಯ ದೊಡ್ಡ-ದೊಡ್ಡ ಪರಾಕ್ರಮಿಗಳು ಕೊಲೆಯಾದರು. ಸಿದ್ದಿ ಸರವರ ಎಂಬ ಹಬಶೀ ಜಾತಿಯ ಹೆಸರಾಂತ ಸರದಾರ, ಶಾಹ ಹಜರತ ಮತ್ತು ಶೇಖ ಮಿರಾ ಅಲ್ಲದೆ ಅನೇಕ ದೊಡ್ಡ ದೊಡ್ಡ ಶೂರರು, ವಿಶ್ವಾಸಿಗರು ಯುದ್ಧದಲ್ಲಿ ವೀರಸ್ವರ್ಗ ಪಡೆದರು.

ಹಿಂದುಗಳ ಸೈನ್ಯ ಮುಸಲ್ಮಾನೀ ಸೈನ್ಯದ ಮೇಲೆ ಪ್ರಬಲವಾಗುವ ಕಾಲ ಸನ್ನಿಹಿತವಾಗಿತ್ತು. ಅಷ್ಟರಲ್ಲಿ ಒಮ್ಮಿಂದೊಮ್ಮೆಲೆ ಮಹಾಪರಾಕ್ರಮಿ ಖವಾಸಖಾನನು ತಲವಾರನ್ನು ಹಿರಿದು, ನಿಂತ ಸ್ಥಳದಿಂದ ಮುಂದೆ ಬಂದು ಸಾಲುಗಟ್ಟಿ ನಿಂತಿದ್ದ ಶಿವಾನ ಸೈನ್ಯದ ಮೇಲೆ ಹಲ್ಲೆ ಮಾಡಿದನು. ತಮ್ಮ ಸರದಾರ ಖವಾಸಖಾನನು ಮುನ್ನುಗ್ಗಿ ತಲವಾರನ್ನು ತಿರುವುತ್ತ ಭಲ್ಲೆಗಳಿಗೆ ತನ್ನ ಹೃದಯವನ್ನು ಅರ್ಪಣೆ ಮಾಡುತ್ತಿದ್ದುದನ್ನು ಮುಸಲ್ಮಾನ ಸೈನಿಕರು ನೋಡಿ, ಒಮ್ಮೆಲೇ ಎಲ್ಲರೂ ಒಂದಾಗಿ, ಜೀವದ ಆಶೆಯನ್ನು ಬಿಟ್ಟು ಶತ್ರುವಿನ ಸೈನ್ಯದ ಮೇಲೆ ಏರಿ ಬಂದು ಬಿದ್ದರು. 'ಹಿಡಿ-ಹಿಡಿ' 'ಹೊಡೆ-ಹೊಡೆ' ಎಂಬ ಭಯಂಕರ ದನಿಯು ಆಕಾಶದುದ್ದಕಕೂ ವ್ಯಾಪಿಸಿತು. ಶತ್ರುಗಳ ರಕ್ತದಿಂದ ರಣಭೂಮಿಯು ತಾಮ್ರವರ್ಣದ್ದಾಯಿತು. ಜನರ ಪ್ರೇತಗಳ ರಾಶಿಯೇ ಬಿದ್ದಿತು.

ಹಿಂದುಗಳ ಕಡೆಯ ಸೈನ್ಯವು ಹಣ್ಣಿಗೆ ಬಂದು ದಣಿಯಿತು. ಅವರು ರಣಭೂಮಿಯಿಂದ ಕಾಲು ಕಿತ್ತಿದ್ದರು. ಹಿಂದುಗಳಿಗೆ ಅಪಯಶವಾಯಿತು. ತನ್ನ ಸೈನ್ಯದ ಈ ದೆಶೆಯನ್ನು ನೋಡಿ ಶಿವಾನು ತಲೆಗೆ ಅಪಕೀರ್ತಿಯ ಧ್ವಜವನ್ನು ಹೊತ್ತು ಆ ರಣಭೂಮಿಯಿಂದ ಓಡಿ ಹೋದನು. ಖವಾಸಖಾನನಿಗೆ ವಿಜಯವಾಯಿತು.

### ೩೬. *ಖವಾಸಖಾನನು ಶಿವಾನನ್ನು ಸೋಲಿಸಿದ ಬಳಿಕ ದಿಲ್ಲಿಯಿಂದ ರಾಜಾ ಜಯಸಿಂಗನು ಬಂದದ್ದು :*

ದಿಲ್ಲಿಯ ಬಾದಶಹನ ಆಜ್ಞೆಯಂತೆ, ಶಿವಾನ ಪಾರುಪತ್ಯಕ್ಕೆ ರಾಜಾ ಜಯಸಿಂಗನು ನಿಯಮಿಸಲ್ಪಟ್ಟಿದ್ದನು. ಆತ ಬಹಳ ಸೈನ್ಯವನ್ನು ಅಷ್ಟೇ ಪ್ರಮಾಣದ ಯುದ್ಧ ಸಾಮಗ್ರಿಗಳನ್ನು ತೆಗೆದುಕೊಂಡು

ದಕ್ಷಿಣ ದೇಶಗಳ ಮೇಲೆ ಏರಿ ಹೊರಟನು.[೧] ಖವಾಸಖಾನನು ದಿಲ್ಲಿಯ ಸೈನ್ಯವು ಬರುವ ದಾಹಿಯನ್ನು ಕಾಯದೆ, ಆದಿಲಶಹನ ಆಜ್ಞೆಯ ಮೇರೆಗೆ ಬಂಡುಖೋರ, ಕುತಂತ್ರಿ ಶಿವಾನ ಮೇಲೆ ದಾಳಿ ಮಾಡಿ ಆತನ ಸೊಂಟವನ್ನೆ ಮುರಿದಿದ್ದನು. ಆತನ ರೆಕ್ಕೆಗಳನ್ನು ಕಿತ್ತಿ ಒಗೆದಿದ್ದನು. ರಾಜಾ ಜಯಸಿಂಗನು ಶಿವಾನ ಇಲಾಖೆಯಲ್ಲಿ ಬಂದಾಗ, ಶಿವಾನು ಗಿರಿದುರ್ಗಗಳಲ್ಲಿಯೆ ಅತಿ ದೊಡ್ಡ ಮತ್ತು ಗಟ್ಟಿ ಮುಟ್ಟಾಗಿದ್ದ ಪುರಂದರ ಕೋಟೆಯಲ್ಲಿ ಆಶ್ರಯ ಪಡೆದಿದ್ದನು. ಅದನ್ನು ಆತ ಈ ಮೊದಲು ನೂರಾರು ಪ್ರಯತ್ನಗಳಿಂದ ಸಾವಿರಾರು ಹುನ್ನಾರಗಳಿಂದ ಅಲ್ಲಿದ್ದ ಒಬ್ಬ ಗರ್ವಿಷ್ಟ 'ಮವಾಶ' ನಿಂದ ಕೈವಶಮಾಡಿಕೊಂಡು ತನ್ನ ಆಶ್ರಯಕ್ಕಾಗಿ ಬಳಸಿಕೊಂಡಿದ್ದನು.

ಪುರಂದರ ಕೋಟೆಗೆ ಲಗ್ಗೆ ಹಾಕಬೇಕೆಂಬ ಇರಾದೆಯಿಂದ ರಾಜಾ ಜಯಸಿಂಗನು ಏರಿ ಬಂದನು. ಇಲ್ಲಿ ಶಿವಾನಿಗೆ ಯಾರಿಂದಲೂ ಸಹಾಯ ಬರುವುದಿಲ್ಲವೆಂಬುದು ರಾಜಾ ಜಯಸಿಂಗನಿಗೆ ಖಾತ್ರಿಯಾಗಿತ್ತು. ಅದರಿಂದಾಗಿ ನಿರ್ಭಯನಾಗಿ ಆ ಕೋಟೆಯನ್ನು ಮುತ್ತಿದನು.[೨] ಕೋಟೆಯು ಜನರನ್ನು ಹಣ್ಣುಗಾಯಿ-ನೀರುಗಾಯಿ ಮಾಡಿದನು. ಆದರೂ ಶಿವಾ ಕೋಟೆಯ ಹೊರಗೇ ಇದ್ದನು. ಆತನನ್ನು ಖವಾಸಖಾನನು ಕೋಟೆಯ ಸಹಾಯಕ್ಕಾಗಿ ಹೆಜ್ಜೆಯನ್ನು ಮುಂದಿಡದಷ್ಟು ಹಣ್ಣು ಮಾಡಿದ್ದನು. ಆದ್ದರಿಂದ ಶಿವಾನು ನಿರುಪಾಯನಾಗಿದ್ದನು. 'ತನ್ನ ಧಣಿಯೊಂದಿಗೆ, ಅಂದರೆ ಆದಿಲಶಾಹನೊಂದಿಗೆ ತುಂಬ ಅಮರ್ಯಾದೆಯಿಂದ, ವಿಶ್ವಾಸಘಾತುಕನಾಗಿ ನಡೆದುಕೊಂಡೆ, ಬಾದಶಹನ ಆಜ್ಞೆಯನ್ನು ಧಿಕ್ಕರಿಸಿ ತುಂಬ ಅಡ್ಡ ದಾರಿಯನ್ನು ಹಿಡಿದೆನು. ಈಗ ಒಪ್ಪಂದದ ನನ್ನ ವಿನಂತಿಯನ್ನು ಆದಿಲಶಹನು ಒಪ್ಪುವ ಸ್ಥಿತಿಯಲ್ಲಿಲ್ಲ. ಆ ದಾರಿ ಮುಚ್ಚಿದೆ' ಎಂದು ಶಿವಾನು ಮನದಲ್ಲಿಯೇ ವಿಚಾರಿಸಿದನು. ಇತ್ತ ಮಹಾಪ್ರಬಲನಾದ ದಿಲ್ಲಿಯ ಬಾದಶಹನ ಜೊತೆಗೆ ವೈರತ್ವದಿಂದ ನಡೆದುಕೊಂಡದ್ದರಿಂದ 'ಆತನೂ ಬಾಗಿಲಲ್ಲಿ ಬಂದು ನಿಂತಿದ್ದಾನೆ. ಈಗ ನಮ್ಮ ಮನೆ ಮಠಗಳೆಲ್ಲವು ದಿಲ್ಲಿಯವರ ಕೈಗೆ ಹೋಗುವುದರಲ್ಲಿ ಸಂಶಯವೇ ಇಲ್ಲ. ದಿಲ್ಲಿಯ ಜನರು ಇಲ್ಲಿಗೆ ಬಂದು ಸಮ್ಮನೆ ಕೂಡುವವರಲ್ಲ. ಬಹಳ ಮಾಡಿ ನನ್ನ ಜೀವವನ್ನು ತೆಗೆದುಕೊಳ್ಳುತ್ತಾರೆ. ನನ್ನನ್ನು ಜೀವಂತವಾಗಿ ಇಡಲು ನಾನೇನು ತುಸುವೆ ಅವರಿಗೆ ಅನ್ಯಾಯ ಮಾಡಿಲ್ಲವಲ್ಲ! ಆದ್ದರಿಂದ ಈ ಸಂಕಟ ನನ್ನ ಉಡಿಯಲ್ಲಿ ಬಂದು ಬಿದ್ದು ನನ್ನ ಪ್ರಾಣಕ್ಕೆ ಮುಟ್ಟಿದೆ. ಈಗ ಏನಾದರೂ ಉಪಾಯವನ್ನು ಮಾಡಲೇಬೇಕು. ಮನೆ-ಮಾರುಗಳು ಹೋದರೂ ಹೋಗಲಿ, ನನ್ನ ಜೀವ ಸುರಕ್ಷಿತವಾಗಿ ಉಳಿಯಬೇಕು. ನನ್ನ ಪ್ರಾಣ ಸುರಕ್ಷಿತವಾಗಿದ್ದರೆ ಇಂಥ ಕೋಟೆಗಳನ್ನು ಇಂಥ ಸ್ಥಳಗಳನ್ನು ಮತ್ತೆ ಗೆಲ್ಲಬಹುದು.' 'ಶಿರ ಸಲಾಮತ ತರ ಪಗಡಿ ಪಚಾಸ' ಎಂಬ ಮಾತಿನಂತೆ 'ತಲೆಯೊಂದು ಉಳಿದರೆ ಐವತ್ತು ಕಿರೀಟಗಳು' ಎಂಬುದಾಗಿ ತಿಳಿದು ತನ್ನ ಠಕ್ಕ ವಿದ್ಯೆಯ ಬಲೆಯನ್ನು ಬೀಸಿದನು.

---

೧. ಶಕೆ ೧೫೮೬ ಕಾರ್ತೀಕ ತಿಂಗಳಲ್ಲಿ (ಆಕ್ಟೋಬರ-ನವಂಬರ ೧೬೬೪) ಆದಿಲಶಾಹ ಮತ್ತು ರಾಜಶ್ರೀ ಸ್ವಾಮಿಯ ಸಂಬಂಧ ಕೆಟ್ಟು ಖವಾಸಖಾನನು ಕೂಡಲಕ್ಕೆ ಬಂದನು. ರಾಜಶ್ರೀ ಸ್ವಾಮಿಯು ಸೈನ್ಯ ಸಹಿತವಾಗಿ ಹೋಗಿ ಘೋರಪಡೆಯನ್ನು ಕೊಂದರು. ಖವಾಸಖಾನನ ಜೊತೆಗೆ ಯುದ್ಧ ಮಾಡಿದರು. ಆತ ಓಡಿ ಘಟ್ಟದಮೇಲೆ ಹೋದನು – ಜೇಧೆ ಶಕಾವಲಿ ಪುಟ ೨೩.
Jaising arrived at Aurangabad in Saban 1075 (6, Feb to 6, Mar 1665) Kafi Khan, MaC MSS P.182.

೨. ಶಕೆ ೧೫೮೭ ವೈಶಾಖ (ಏಪ್ರಿಲ್ ೧೬೬೫) ರಾಜಾ ಜಯಸಿಂಗ ಮತ್ತು ದಿಲೇರಖಾನರು ಪುರಂದರವನ್ನು ಮುತ್ತಿದರು – ಜೇಧೆ ಶಕಾ ಪು. ೨೩.

ರಾಜಾ ಜಯಸಿಂಗನೊಂದಿಗೆ ಸಖ್ಯತನ ಮಾಡಿಕೊಳ್ಳಲು ಪ್ರಾರಂಭಿಸಿದನು. ನಾನಾ ಪ್ರಕಾರದ ಠಕ್ಕ ವಿದ್ಯೆಗಳ ಆಟಗಳನ್ನು ರಾಜಾ ಜಯಸಿಂಗನ ಮೇಲೆ ಆಡ ಹತ್ತಿದನು. ಮೊದಲು ರಾಜಾಜಯಸಿಂಗನಿಗೆ ನಿರೋಪವನ್ನು ಕಳಿಸುತ್ತ 'ದಿಲ್ಲಿಯ ಬಾದಶಹರುಗಳು ದಕ್ಷಿಣ ದೇಶಗಳನ್ನು ಕೈವಶಮಾಡಿಕೊಳ್ಳಲು ಇಂದಿನವರೆಗೂ ಶ್ರಮ ಪಟ್ಟಿದ್ದಾರೆ. ಮೇಲಿಂದ ಮೇಲೆ ಲಕ್ಷಾವಧಿ ಸೈನ್ಯವನ್ನು ತಂದರೂ ದಕ್ಷಿಣ ದೇಶವು ಹಸ್ತಗತವಾಗಿಲ್ಲ. ದಿಲ್ಲಿಯವರ ಮನೋರಥ ಪೂರ್ಣವಾಗಿಲ್ಲ. ಸೈನ್ಯವನ್ನು ತೆಗೆದುಕೊಂಡು ದಿಲ್ಲಿಯಿಂದ ದಕ್ಷಿಣ ದೇಶದ ಮೇಲೆ ಬಂದ ಸರದಾರರ ಕೆಲಸ ಕೈಗೂಡದೆ, ಖಿನ್ನರಾಗಿ, ಅಪಯಶರಾಗಿ ಹಿಂತಿರುಗಿದ್ದಾರೆ. ಒಂದು ವೇಳೆ ಮಹಾರಾಜರಾದ ತಾವು, ಸೇವಕನಾದ ನನ್ನನ್ನು ತಮ್ಮ ಮಿತ್ರನೆಂದು ತಿಳಿದು, ತಮ್ಮ ಕೃಪೆಯ ಹಸ್ತವನ್ನು ನನ್ನ ಮಸ್ತಕದ ಮೇಲೆ ಇಟ್ಟಿರಾದರೆ, ನಾನು ಸುಲಭವಾಗಿ ದಕ್ಷಿಣದ ಎಲ್ಲ ರಾಜ್ಯಗಳನ್ನು ಔರಂಗಜೇಬನ ಕೈಗೆ ತಂದು ಒಪ್ಪಿಸುವೆ. ದಕ್ಷಿಣದ ಎಷ್ಟೋ ದೊಡ್ಡ ಮಜಬೂತಾದ ಕೋಟೆಗಳು ಈಗಾಗಲೇ ನನ್ನ ಕೈಯಲ್ಲಿವೆ ಅವುಗಳೆಲ್ಲವನ್ನೂ ತಮ್ಮ ವಶಕ್ಕೆ ಒಪ್ಪಿಸುವೆ' ಎಂಬುದಾಗಿ ನಿರೋಪ ಕಳಿಸುತ್ತ ತನ್ನ ವಶದಲ್ಲಿದ್ದ ಎಲ್ಲ ಕೋಟೆಗಳ ಬೀಗದ ಕೈಗಳನ್ನು ರಾಜಾ ಜಯಸಿಂಗನ ಹತ್ತಿರ ಕಳಿಸಿಕೊಟ್ಟನು. ರಾಜಾ ಜಯಸಿಂಗನಿಗೆ ಸ್ವರ್ಗವೇ ದೊರೆತಂತಾಯಿತು. ಆತನಿಗೆ ಗೊತ್ತಿತ್ತು. ಶಿವಾ ಈ ಪ್ರದೇಶವನ್ನೆಲ್ಲ ಬಲ್ಲವನು. ಅವನಿಂದ ಇಷ್ಟೆಲ್ಲ ಕೆಲಸಗಳು ಆಗುವ ಸಾಧ್ಯತೆಯೂ ಇಲ್ಲದಿಲ್ಲ ಎಂದು ಭಾವಿಸಿ ಶಿವಾನೊಂದಿಗೆ ಕೈ ಜೋಡಿಸಲು ಮುಂದಾದನು. ಇಬ್ಬರೂ ಒಂದಾದರು. ಇಬ್ಬರೂ ಅಡ್ಡದಾರಿಗಳನ್ನು ಹಿಡಿದ ಬಂಡುಖೋರರೇ ಆಗಿದ್ದು ಪರಸ್ಪರರು ಮಿತ್ರತ್ವದ ಒಪ್ಪಂದ ಪತ್ರವನ್ನು ಬರೆದು ನಿರ್ಧರಿಸಿಕೊಂಡರು. ಅದರಂತೆ ಮೊದಲು ಇಬ್ಬರೂ ಜೊತೆಯಾಗಿ ಆದಿಲಶಹನ ರಾಜ್ಯದ ಮೇಲೆ ಆಕ್ರಮಣ ಮಾಡಿ ಆತನ ಎಲ್ಲ ಪ್ರದೇಶಗಳನ್ನು ಲೂಟಿ ಮಾಡಬೇಕು. ಕೈಗೆ ಸಿಕ್ಕದ್ದನ್ನೆಲ್ಲವನ್ನು ಇಬ್ಬರೂ ಹಂಚಿಕೊಳ್ಳಬೇಕು ಎಂದು ನಿರ್ಧರಿಸಿದರು. ಹೀಗೆ ವಂಶಪರಂಪರ್ಯ ವಿಶ್ವಾಸ ಘಾತುಕ ವಂಶದಲ್ಲಿ ಹುಟ್ಟಿದ ಶಿವಾನು ತನ್ನ ಧಣಿಯ ಮನೆಯನ್ನೇ ಮುಳುಗಿಸಲು ಮುಂದಾದನು. ಅದರಂಥ ಘೋರ ಪಾಪ ಇನ್ನೊಂದಿಲ್ಲ ಎಂಬುದು ಗೊತ್ತಿದ್ದರೂ, ಧಣಿಯ ಅನ್ನವನ್ನು ಸ್ಮರಿಸದೆ, ಅವನ ನೀತಿ ಬೋಧೆಯನ್ನೂ ಮನದಲ್ಲಿ ತರಲಿಲ್ಲ.

### ೩೭. *ಶಿವಾ ಮತ್ತು ರಾಜಾ ಜಯಸಿಂಗ ಒಂದಾಗಿ ತನ್ನ ರಾಜ್ಯವನ್ನು ಲೂಟಿ ಮಾಡಲು ಬರುತ್ತಿರುವ ವಿಷಯ ಅಲಿ ಆದಿಲಶಹನಿಗೆ ತಿಳಿದದ್ದು :*

ಶಿವಾ ಹಾಗೂ ರಾಜಾ ಜಯಸಿಂಗ ಇಬ್ಬರೂ ಒಂದಾಗಿ ಆದಿಲಶಹನ ರಾಜ್ಯದ ಮೇಲೆ ಏರಿ ಬಂದು ಲೂಟಿ ಮಾಡುತ್ತಾರೆಂಬ ಸುದ್ದಿಗಳನ್ನು ಗುಪ್ತಚಾರರು ಬರೆದು ಆದಿಲಶಹನಿಗೆ ತಿಳಿಸಿದರು.[೧] ನೆರೆಯಲ್ಲಿದ್ದ ಶತ್ರು ಶಿವಾ ಈಗ ಹೊರಗಿನ ಶತ್ರು ಜಯಸಿಂಗನೊಂದಿಗೆ ಕೂಡಿದ್ದಾನೆಂದು ತಿಳಿದು ಬಾದಶಹನು ತುಂಬ ಚಿಂತೆಯಲ್ಲಿ ಬಿದ್ದನು. ಮನೆಯಲ್ಲಿಯ ಕಳ್ಳ ತುಂಬ ದಂಗೆ ಮಾಡುತ್ತಿದ್ದಾನೆ.

---

೧. ಶಕೆ ೧೫೮೭ ಆದಿಲಶಾಹ ಮತ್ತು ಮೊಗಲರ ಒಪ್ಪಂದ ಮುರಿದು ಜಯಸಿಂಗ ಮತ್ತು ರಾಜಶ್ರೀ ಶಿವಾಜಿ ರಾಜೆ ಮತ್ತು ದಲೇರಖಾನರು ವಿಜಾಪುರದ ಮೇಲೆ ಮಾರ್ಗಶೀರ್ಷ ಮಾಸದಲ್ಲಿ (ಡಿಶೆಂಬರ ೧೬೬೫) ಏರಿ ಹೋದರು. ಅಲ್ಲಿ ಆದಿಲಶಾಹಿ ಸೈನ್ಯವು ಸರ್ಜಾಖಾನ ಮುಂತಾದವರು ಬಂದು ಯುದ್ಧ ಮಾಡಿದರು. ಅನಂತರ ಒಳಗಿಂದೊಳಗೆ ಹಣಕೊಟ್ಟು ವಿಜಾಪುರದವರು ಮೊಗಲರೊಂದಿಗೆ ಒಂದಾದರು. ರಾಜಶ್ರೀ ಶಿವಾಜಿ ರಾಜೇ ಅವರು ಜಯಸಿಂಗನಿಂದ ನಿರೋಪಪಡೆದು ರಾಜಗಡಕ್ಕೆ ಬಂದರು-ಜೇಧೆಶಕಾ ಪು.೨೩

ಅಪರಿಚಿತ ಕಳ್ಳ ಜಯಸಿಂಗನ ದಂಗೆಯು ಹತ್ತರಲ್ಲಿಯ ಒಂದು ಪಾಲೂ ಅಲ್ಲ. ಆದ್ದರಿಂದ ಅಲೀ ಆದಿಲಶಹನು ಬಹಳ ವಿಚಾರಮಾಡಿ, ರಾಜಾ ಜಯಸಿಂಗನೊಂದಿಗೆ ಮಿತ್ರತ್ವ ಕೆಡಿಸಿಕೊಳ್ಳಬಾರದೆಂದು ನಿರ್ಧರಿಸಿದನು. ಮುಲ್ಲಾ ಖುರ್ರಮನನ್ನು ಆವನ ಬೆನ್ನ ಹಿಂದೆಯೇ ಮುಲ್ಲಾ ಅಹಮದನನ್ನೂ ಕಳಸಿ ಶಿವಾನಿಗೆ ಉಪದೇಶ ಮಾಡಿದನು. ಅವರಿಬ್ಬರೂ ಬಂದು ನಾನಾ ವಿಧವಾಗಿ ಶಿವಾನಿಗೆ ನೀತಿ ಬೋಧೆ ಮಾಡಿದರು. ಆದರೆ ಆ ಅಯೋಗ್ಯ ಮನುಷ್ಯ ತನ್ನ ಸೊಕ್ಕಿನಲ್ಲಿಯೇ ಮದವೇರಿದವನಾಗಿದ್ದು ತನ್ನ ಹತ್ತಿರ ಇರುವ ಎಂಬತ್ತು ಸಾವಿರಕ್ಕಿಂತ ಅಧಿಕವಾದ ಸ್ವಾರ ಸಿಬ್ಬಂದಿಗಳಿಂದಾಗಿ ತನ್ನ ಹೊರತು ಬೇರೆ ಯಾರೂ ದೊಡ್ಡವರಲ್ಲ ಎಂಬುದಾಗಿ ತಿಳಿದಿದ್ದನು. ಹೀಗಾಗಿ ತನ್ನ ಮಾರ್ಗದಿಂದ ಕೂದಲೆಳೆಯಷ್ಟು ಹಿಂದೆ ಸರಿಯಲಿಲ್ಲ. ಅವರಿಬ್ಬರ ಮಾತುಗಳನ್ನು ಒಪ್ಪಲೂ ಇಲ್ಲ. ತಾನು ನಿರ್ಧರಿಸಿದಂತೆ ಆದಿಲಶಾಹಿಯ ರಾಜ್ಯದ ಮೇಲೆ ಏರಿ ಹೋಗುವುದನ್ನು ನಿರ್ಧರಿಸಿದನು.

ವಿಜಾಪುರ ರಾಜ್ಯದ ಕಲ್ಯಾಣವನ್ನು ಇಚ್ಛಿಸುವ ಅವರಿಬ್ಬರೂ ನಿರಾಶರಾಗಿ ಆದಿಲಶಾಹನಿಗೆ ಹೀಗೆ ಪತ್ರ ಬರೆದರು. 'ಈ ವಿಶ್ವಾಸಘಾತುಕ, ಸೊಕ್ಕಿನ ಮನುಷ್ಯನಿಗೆ ನೀತಿ ಬೋಧೆ ನಾಟುವುದಿಲ್ಲ. ಈತನನ್ನು ಸಖ್ಯ-ಸ್ನೇಹಗಳಿಂದ ದಾರಿಗೆ ತರುವುದು ಸಾಧ್ಯವಿಲ್ಲ. ಉಳಿದ ಒಂದೇ ಉಪಾಯವೆಂದರೆ ಈತನ ಪಾರುಪತ್ಯಕ್ಕೆ ಒಬ್ಬ ಮಹಾಶೂರನನ್ನು ನೇಮಿಸಿ ಆತನ ತಲೆಯನ್ನು ಹಾರಿಸುವುದು ಅದರ ಹೊರತು ಬೇರೆ ದಾರಿಯೇ ಇಲ್ಲ. ನಮ್ಮ ಸೈನ್ಯದ ಕುದುರೆಗಳ ಕಾಲುಗಳಲ್ಲಿ ಶಿವಾನ ಶರೀರದ ತುಂಡುಗಳನ್ನು ಹರವಿ ಆ ಮಾಂಸವನ್ನು ಹಾವಿಗೆ ಮುಂಗಲಿಗಳಿಗೆ ತಿನ್ನಿಸಬೇಕು' ಎಂಬ ವಿಷಯವನ್ನೊಳಗೊಂಡ ಪತ್ರವನ್ನು ಕಳಿಸಿದರು. ಅದನ್ನು ಕಂಡ ಅಲಿ ಆದಿಲಶಹನು ಅತ್ಯಂತ ಕ್ರುದ್ಧನಾಗಿ ತನ್ನ ಖಾಸಾ ಮಮಲಕತಮದಾರ ಅಬ್ದುಲ ಮಹಮ್ಮದನನ್ನು ಏಕಾಂತದಲ್ಲಿ ಕರೆಯಿಸಿ ವಿಚಾರಿಸಿದನು. ಆ ಬುದ್ಧಿವಂತ ವಜೀರನು ಕೂಡ ಆ ಉಭಯತರ ವಿಚಾರಗಳನ್ನು ಒಪ್ಪಿದನು. 'ನೀತಿ-ಬೋಧೆ, ಹೇಳಿ-ಕೇಳುವುದರಿಂದ ದಾರಿ ನಡೆಯದು. ಆತನ ನಾಶವೇ ಅಂತಿಮ ಉಪಾಯವೆಂದು' ಹೇಳಿದನು. ಹಿಂದೆ ಫರೋನ ಎಂಬ ಮಹಾ ಗರ್ವಿಷ್ಠ ಬಾದಶಹನೊಬ್ಬನಿದ್ದನು. ತಾನೇ ದೇವರೆಂದು ತಿಳಿದುಕೊಂಡಿದ್ದನು. ದೇವರು ಆತನಿಗೆ ತಕ್ಕುದಾದ ಶಾಸ್ತಿಯನ್ನು ಮಾಡಿದನು. ಆ ಗರ್ವಿಷ್ಠ ಬಾದಶಹನಂತೆಯೇ ಶಿವಾನು ಕೂಡ ಸೊಕ್ಕಿನಿಂದ ಮೆರೆಯುತ್ತಿದ್ದಾನೆ. 'ತಾವು ಪ್ರೀತಿಯಿಂದ ಆತನನ್ನು ಪಾಲಿಸಿದುದನ್ನಾಗಲೀ ತಮ್ಮ ಉಪಕಾರವನ್ನಾಗಲೀ ಆತ ಸ್ಮರಿಸುತ್ತಿಲ್ಲ. ಆತ ತನ್ನ ಧಣಿಯ ಎಚ್ಚರಿಕೆಗಳನ್ನು ತಿಳುವಳಿಕೆಗಳನ್ನು ಗಮನಿಸುತ್ತಿಲ್ಲ. ಕೇವಲ ಸೊಕ್ಕಿನಿಂದ ಸೊಂಟ ಬಿಗಿದುಕೊಂಡಿದ್ದಾನೆ. ಆತನ ಸೊಕ್ಕಿಗೆ ಉಪಾಯವೆಂದರೆ, ನಮ್ಮ ಯಶಸ್ವೀ ಸೈನ್ಯವನ್ನು ಕಳಿಸಿ ಶಿಕ್ಷಿಸುವುದೇ ಆಗಿದೆ. ಅಲ್ಲಾನ ದಯಯಿಂದ ನಮ್ಮ ಸೈನಿಕರು ಒಂದೇ ಒಂದು ಹೊಡೆತದಿಂದ ಆತನನ್ನು ಶಿಕ್ಷಿಸುತ್ತಾರೆ. ನಮ್ಮ ಶೂರ ಮಂಡಳಿಯ ಕಪಾಳ ಮೋಕ್ಷದಿಂದ ಮಾತ್ರ ಆ ಕತ್ತೆಯಂಥ, ವ್ಯಕ್ತಿಗೆ ಸೊಕ್ಕು ತಕ್ಷಣ ಇಳಿಯುತ್ತದೆ' ಎಂದು ಹೇಳಿದನು.

### ೩೮. *ಅಲೀ ಆದಿಲಶಹನು ರಾಜಾ ಜಯಸಿಂಗನೊಂದಿಗೆ ಯುದ್ಧಮಾಡುವುದೆಂದು ನಿರ್ಧರಿಸಿ ತನ್ನ ಕೋಟೆಯನ್ನು ಗಟ್ಟಿಮಾಡಿಕೊಂಡದ್ದು :*

ಆನಂತರ ಅಲೀ ಆದಿಲಶಹನು ರಾಜಾ ಜಯಸಿಂಗನೊಂದಿಗೆ ಯುದ್ಧ ಮಾಡುವುದೆಂದು ನಿರ್ಧರಿಸಿ, ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಲು ಪ್ರಾರಂಭಿಸಿದನು. ವಿವಿಧ ಭಾಗಗಳಲ್ಲಿ,

ಗ್ರಾಮ-ಗ್ರಾಮಾಂತರಗಳಲ್ಲಿ ರಾಜ್ಯದ ಅವಿಚ್ಛಿನ್ನ ಭಕ್ತರಾಗಿದ್ದ ಅಮೀರ ಜನರು ಮತ್ತು ಸರದಾರರು ಬಂದು ಸೇರಲು ಆಜ್ಞಾ ಪತ್ರಗಳನ್ನು ಕಳುಹಿಸಿದನು. ಮಲೆನಾಡು, ಕರ್ನಾಟಕಗಳಲ್ಲಿದ್ದ ಜಮೇದಾರರು ತಂತಮ್ಮ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಅವರೆಲ್ಲರನ್ನೂ ರಾಜಧಾನಿಗೆ ಬರಲು ಆಜ್ಞೆಯನ್ನು ಕಳುಹಿಸಿದನು. ಅದರಂತೆ ಅವರೆಲ್ಲರೂ ತಂತಮ್ಮ ಸೈನ್ಯ ಸಹಿತವಾಗಿ ರಾಜಧಾನಿಗೆ ಬಂದರು. ಅಲಿ ಆದಿಲಶಹನು ಬಹಳ ಎಚ್ಚರಿಕೆಯನ್ನು ವಹಿಸಿದ್ದನು. ಯಾಕೆಂದರೆ ರಾಜ್ಯದಲ್ಲಿ ಎಚ್ಚರಿಕೆಯಿಂದಿರುವುದೇ ಬುದ್ಧಿವಂತನ ಲಕ್ಷಣವಾಗಿದೆ. ಶತ್ರುವಾದ ರಾಜಾ ಜಯಸಿಂಗನು ಕೋಟೆಯ ಹತ್ತಿರವೇ ಬಂದು ಮುಟ್ಟಿದ್ದಾನೆ. ಒಂದು ವೇಳೆ ಯುದ್ಧಕ್ಕೆ ಪ್ರಾರಂಭವಾದರೆ, ನಗರದ ಸುತ್ತಮುತ್ತಲಿನ ತೋಟ- ಪಟ್ಟಿಗಳು, ಕೋಟೆಯ ಹೊರಗಿನ ಶಹಪುರ ಇತ್ಯಾದಿ ಊರುಗಳು ಶತ್ರುವಿಗೆ ಇಳಿದುಕೊಳ್ಳಲು, ವಿಶ್ರಾಂತಿ ಪಡೆಯಲು ಸ್ಥಳಗಳಾಗುತ್ತವೆ. ಕೆರೆ, ಕಟ್ಟೆಗಳು, ನೀರಿನ ಸಂಗ್ರಹ ನಲ್ಲಿಗಳಿಂದ ನಗರದಲ್ಲಿ ನೀರಿನ ಅತ್ಯಂತ ಸವಲತ್ತು ಇದೆ. ಆ ನಲ್ಲಿಗಳನ್ನು, ಪುಷ್ಕರಣಿಗಳನ್ನು ನೋಡಿದರೆ ಕಾಶ್ಮೀರ ಎಂಬ ನಗರದ ಸ್ಮರಣೆಯಾಗುವಷ್ಟು ಉತ್ತಮವಿದೆ. ಅವು ಶತ್ರುವಿಗೆ ಇಳಿದುಕೊಳ್ಳಲು ಮತ್ತು ವಿಶ್ರಮಿಸಲು ಯೋಗ್ಯ ಸ್ಥಳಗಳಾಗಿ ಬಿಡುತ್ತವೆ. ಆದ್ದರಿಂದ ಮಿರ್ಜಾ ಯೂಸುಫನನ್ನು ಕರೆದು ಆತನಿಗೆ ಆಜ್ಞೆ ಮಾಡುತ್ತ ಎಲ್ಲ ಕೆರೆಗಳನ್ನು, ಕಟ್ಟೆಗಳನ್ನು, ಪುಷ್ಕರಣಿಗಳನ್ನು ಒಡೆದು ಅದರಲ್ಲಿ ಒಂದು ಹನಿ ನೀರು ಇಲ್ಲದಂತೆ ಮಾಡಬೇಕೆಂದು ಆಜ್ಞಾಪಿಸಿದನು. ತೋಟ ಪಟ್ಟಿಗಳನ್ನು, ಊರುಗಳನ್ನು ಮುರಿದು ಹಾಳು ಬೀಳುವಂತೆ ಮಾಡಲು ಆಜ್ಞಾಪಿಸಿದನು. ಹದ್ದಿನಂತಿರುವ ರಾಜಾ ಜಯಸಿಂಗ ಮತ್ತು ಗೂಗೆಯಂತಿರುವ ಶಿವಾನಿಗೆ, ಕುಳಿತುಕೊಳ್ಳಲು ಒಂದು ಮರ ಕೂಡ ಕಂಡಿರಬಾರದು, ವಿಶ್ರಮಿಸಲು ಒಂದು ಕಟ್ಟೆ, ಗೋಡೆ ಕೂಡ ದೊರಕಿರಬಾರದು ಹಾಗೆ ಎಲ್ಲವನ್ನೂ ನಾಶ ಮಾಡಬೇಕು. ಬಾವಿ ಹಾಗೂ ಕಂದಕದ ನೀರಿನಲ್ಲಿ ವಿವಿಧ ಪ್ರಕಾರದ ವಿಷವನ್ನು ಬೆರೆಸಬೇಕು. ಕಾಶ್ಮೀರದಂತೆ ಸ್ವರ್ಗ ಸದೃಶವಾದ ಸ್ಥಳವನ್ನು ಜಯಸಿಂಗ ಹಾಗೂ ಶಿವಾನಿಗೆ ನಿಲ್ಲಲು ಸ್ಥಳ ದೊರೆಯದಂತೆ ನಾಶಮಾಡಬೇಕು ಎಂದು ಆಜ್ಞಾಪಿಸಿದನು. ಅದರಂತೆ ಖವಾಸಖಾನನನ್ನು ಕರೆದು ಕೋಟೆಯ ಬುರುಜಗಳನ್ನು ಗೋಡೆಗಳನ್ನು, ಗಟ್ಟಿಯಾಗಿ ಕಟ್ಟಲು ಆಜ್ಞಾಪಿಸಿದನು ಮತ್ತು ಅವುಗಳ ಮೇಲೆ ಯುದ್ಧ ಸಾಮಗ್ರಿಗಳನ್ನು, ಹತ್ಯಾರ ಬಂದೂಕು, ತೋಫುಗಳನ್ನು ಸಂಗ್ರಹಿಸಲು ಶಾಹ ಹಜರತನನ್ನು ನಿಯಮಿಸಿದನು. ತುಸುವೆ ಅವಕಾಶದಲ್ಲಿ ಖವಾಸಖಾನನು ಕೋಟೆಯನ್ನು ಪೂರ್ತಿ ಗಟ್ಟಿಯಾಗಿರುವಂತೆ ನೋಡಿಕೊಂಡನು. ಅವನ ಆ ಯತ್ನದಿಂದ ಕೋಟೆಯು ಆಕಾಶದೆತ್ತರಕ್ಕೆ ಬೆಳೆದು ಶೋಭಿಸಿತು.

*೩೯. ಅಲೀ ಆದಿಲಶಹನು ರಾಜಾ ಜಯಸಿಂಗನ ಮೇಲೆ ಸೈನ್ಯ ಕಳಿಸಿದ್ದು ಮತ್ತು ಷರ್ಜಾಖಾನನು ಸರಫರಾಜಖಾನನ್ನು ಕೊಂದದ್ದು :*

ಅನಂತರ ಹೆಸರಾಂತ ವಜೀರರು, ಅಮೀರ ಜನರು ಕಾರ್ಯಭಾರ ಮಾಡಿದ ಮಮಲಕತ ಮದಾರರಾದ, ಅಬ್ದುಲ್ ಮಹಮ್ಮದ, ಅಬುಲ್ ಕರೀಮ, ಬಹಲೋಲಖಾನ, ಮಹಮ್ಮದ ಯಖಲಾಸಖಾನ, ಷರ್ಜಾಖಾನ, ರುಸ್ತುಮ ಜಮಾನ, ಸಿದ್ದೀ ಮಸೂದ, ಸಿದ್ದೀ ಅಬ್ದುಲ್ ಅಜೀಜ, ಶಾಹಜೀ ರಾಜೇನ ಮಗ ಯೇಕೋಜಿ ರಾಜೇ ಮತ್ತು ಬೇರೆ ಅನೇಕ ಯಶಸ್ವೀ ಅಮೀರ ಜನರು ಮತ್ತು ಮಹಾಶೂರ ಜಮೇದಾರರು-ಇವರೆಲ್ಲರೊಂದಿಗೆ ದೊಡ್ಡ ಸೈನ್ಯವನ್ನು ಕೊಟ್ಟು ಶತ್ರುವಿನ ಪಾರುಪತ್ಯಕ್ಕಾಗಿ ಕಳಿಸಲಾಯಿತು. ತೋಟದ ಶತ್ರು ಎಂದರೆ ಶಿವಾ, ಜಯಸಿಂಗ ರಾಯನ ಹತ್ತಿರ ಹೋಗಿ ಸೇರಿಕೊಂಡಿದ್ದನು. ಆ ಭರವಸೆಯಿಂದ ರಾಜಾ ಜಯಸಿಂಗನಿಗೆ ಇಮ್ಮಡಿ ಬಲ ಬಂದಿತ್ತು. ಹೀಗಾಗಿ ಏನೊಂದನ್ನೂ ವಿಚಾರ

ಮಾಡದೆ, ಆದಿಲಶಹನ ಸರಹದ್ದಿನಲ್ಲಿಯ ಪ್ರದೇಶಗಳಲ್ಲಿ ಹೆಜ್ಜೆಗಳನ್ನಿಟ್ಟು ಲೂಟಿ ಮಾಡಹತ್ತಿದ್ದನು. ಅನೇಕ ಮಹಾಲಗಳು, ದೊಡ್ಡ-ದೊಡ್ಡ ಊರುಗಳು ಜಯಸಿಂಗನ ಕೈಗೆ ಹತ್ತಿದ್ದವು. ಅವುಗಳಲ್ಲೊಂದು, ಮಂಗಳವೇಢೆ ಎಂಬ ಊರು ಕೈವಶವಾಗಿತ್ತು. ಆ ಮಂಗಳವೇಢೆಯಲ್ಲಿ ಸರ್ಫರಾಜಖಾನ ಹೆಸರಿನ ತನ್ನ ಸರದಾರನನ್ನು, ಅವನ ಜೊತೆಗೆ ಹತ್ಯಾರಬಂದ ಐದು ಸಾವಿರ ಸವಾರರನ್ನು ನೇಮಿಸಿ, ಎಚ್ಚರಿಕೆಯಿಂದ ಇರಲು ಹೇಳಿದನು.

ಆ ಕೋಟೆಯಲ್ಲಿ ಬಹಳಷ್ಟು ಯುದ್ಧ ಸಾಮಗ್ರಿಗಳನ್ನು ಮತ್ತು ಇತರ ಪದಾರ್ಥಗಳನ್ನು ಬಹಳ ವ್ಯವಸ್ಥಿತವಾಗಿ ಇಟ್ಟಿದ್ದಾರೆಂದು ಷರ್ಜಾಖಾನನಿಗೆ ಸುದ್ದಿ ದಾರಿಯಲ್ಲಿಯೇ ಗೊತ್ತಾಗಿತ್ತು. ಆಗ ಆತನು ತನ್ನ ಸೈನ್ಯವನ್ನು ತೆಗೆದುಕೊಂಡು ಸರ್ಫರಾಜಖಾನನ ಮೇಲೆ ಏರಿ ಹೊರಟನು. ಷರ್ಜಾಖಾನನು ತೀರ ಹತ್ತಿರ ಬಂದು, ಸರ್ಫರಾಜಖಾನನಿಗೆ ಒಂದು ನಿರೋಪವನ್ನು ಹೇಳಿ ಕಳಿಸಿದನು. "ಆದಿಲಶಾಹೀ ಬಾದಶಹರ ಸ್ಥಳವನ್ನು ನಿನ್ನ ಚಿಕ್ಕಮ್ಮನ ಮನೆಯೆಂದು ತಿಳಿದು ಸ್ವಸ್ಥವಾಗಿ ಕುಳಿತಿದ್ದೀಯಾ? ಯುದ್ಧಕ್ಕೆ ಸಿದ್ಧನಾಗು ಯಾಕೆಂದರೆ, ಈಗ ಷರ್ಜಾಖಾನನು ನಿನ್ನ ತಲೆಯಮೇಲೆ ಬಂದು ಕುಳಿತಿದ್ದಾನೆ" ಸರ್ಫರಾಜಖಾನನು ಈ ಸುದ್ದಿಯನ್ನು ಕೇಳುತ್ತಲೇ, ತನ್ನ ಸೈನ್ಯಸಹಿತ ಸಿದ್ಧನಾಗಿ ಷರ್ಜಾಖಾನನನ್ನು ಎದುರಿಸಲು ಹೊರಟು ಬಂದನು. ಆದಿಲಶಾಹನ ಕಡೆಯ ದಂಡಿನಲ್ಲಿ ಮತ್ತು ದಿಲ್ಲಿಯ ಕಡೆಯ ಸೈನ್ಯದಲ್ಲಿ ಬಹುದೊಡ್ಡ ಯುದ್ಧವಾಯಿತು. ಅಂಥ ಯುದ್ಧವನ್ನು ಮೃತ್ಯುಲೋಕ ಹಾಗೂ ಸ್ವರ್ಗಲೋಕದಲ್ಲಿಯ ಜನರು ಕೂಡ ಕಣ್ತೆರೆದು ನೋಡಿದರು, ಮತ್ತು 'ಶಾಭಾಸ-ಶಾಭಾಸ' ಎಂಬುದಾಗಿ ಉಭಯ ಜನರಲ್ಲೂ ದನಿ ಎದ್ದಿತು. ಫಾರ್ಸೀ ಬೈತ (ದ್ವಿಪದಿ)ದ ಅರ್ಥದಂತೆ, 'ಆಕಾಶವು ಶಾಭಾಸ ಎಂದಿತು, ಆಕಾಶದಲ್ಲಿ ಇರುವ ದೇವಮಾನವರು 'ವಾಹವಾ' ಎಂದರು. ಷರ್ಜಾಖಾನ ಪರಾಕ್ರಮದಿಂದ ಮತ್ತು ಅವನ ಕಡೆಯ ಶೂರರ ಗಜ ಶಕ್ತಿಯಿಂದ ಸರ್ಫರಾಜಖಾನನ ಧೈರ್ಯ ಉಡುಗಿತು, ಸೈನ್ಯ ಚದರಿತು. ಷರ್ಜಾಖಾನನ ಶೂರರ ತಲವಾರುಗಳ ಗಾಯದಿಂದ ಸೈನಿಕರು ರಕ್ತದ ಮಡುವಿನಲ್ಲಿ ಹೊರಳಾಡಹತ್ತಿದರು. ಗಾಯವಾಗದೆ ಉಳಿದವರು ರಣಭೂಮಿಯನ್ನು ಬಿಟ್ಟು ಓಡಿಹೋದರು. ಸರ್ಫರಾಜಖಾನನು ತನ್ನ ಮಗ ಮತ್ತು ಅಳಿಯ ಸಹಿತವಾಗಿ ಯುದ್ಧದಲ್ಲಿ ಹತರಾದರು. ಷರ್ಜಾಖಾನನು ಆ ಕೋಟೆಯನ್ನು ಪಡೆದು ತಿರುಗಿ ಬಾದಶಹನ ಹೆಸರಿಗೇ ಸೇರಿಸಿದನು. ಅದೇ ಸಮಯದಲ್ಲಿ ಅಬ್ದುಲ್ ಮಹಮ್ಮದ ಮತ್ತು ಮಹಮ್ಮದ ಯಖಲಾಸಖಾನ ಇಬ್ಬರ ಪತ್ರ ಬಂದಿತು. "ಜಯಸಿಂಗನು ಈ ಮೂರು ದಿನಗಳಲ್ಲಿ ಬಹುದೊಡ್ಡ ಯುದ್ಧವನ್ನು ಮಾಡಬೇಕೆಂದು ಕರಾರು ಹಾಕಿದ್ದಾನೆ. ಆದ್ದರಿಂದ ನೀನು ತಕ್ಷಣ ಬಂದು ಸೇನೆಯಲ್ಲಿ ಸೇರಿಕೊಳ್ಳಬೇಕು" ಎಂದು ಬರೆದದ್ದನ್ನು ಕಂಡು ಷರ್ಜಾಖಾನನು ತಕ್ಷಣ ಮಂಗಳವೇಢೆಯಿಂದ ಹೊರಟು ಸೈನ್ಯದಲ್ಲಿ ಬಂದು ಸೇರಿಕೊಂಡನು. ಆ ಸಮಯದಲ್ಲಿ ಶತ್ರು ಸೈನ್ಯವನ್ನೆದುರಿಸಲು ಆದಿಲಶಾಹನ ಸೈನ್ಯವು ಯುದ್ಧಕ್ಕೆ ಸನ್ನದ್ಧವಾಗಿತ್ತು.

### ೪೦. *ಆದಿಲಶಹನ ಶೂರ ಮಂಡಳಿಯು ಜಯಸಿಂಗನೊಂದಿಗೆ ಯುದ್ಧ ಮಾಡಿದ್ದು ಮತ್ತು ಜಯಸಿಂಗನು ಒಂದು ಸಲ ಹಿಂದೆ ಸರಿದದ್ದು :*

ರಾಜಾ ಜಯಸಿಂಗನು ನೀಚ ಮನುಷ್ಯನಾಗಿದ್ದನು. ಆತನಿಗೆ ತುಂಬ ಗರ್ವ ಬಂದಿತ್ತು. ಆತ ತನ್ನ ಸೈನ್ಯವನ್ನು ಸಾಲುಗಳಲ್ಲಿ ವಿಭಜಿಸಿ. ಅದರ ಅಭೇದ್ಯ ಕೋಟೆಯನ್ನೇ ಕಟ್ಟಿದ್ದನು. ಸೈನ್ಯದ ಎಡಕ್ಕೆ, ಬಲಕ್ಕೆ, ಹಿಂದೆ, ಮುಂದೆ ಮತ್ತು ಮಧ್ಯಭಾಗದಲ್ಲಿ ಸಮರ್ಥ ವ್ಯವಸ್ಥೆಯನ್ನು ಮಾಡಿ ಯುದ್ಧಕ್ಕೆ ಸಿದ್ಧನಾದನು.

ಮೊದಲು ಜಯಸಿಂಗನ ಕಡೆಯ ಸೈನಿಕರೇ ಮುಂದೆ ಹೆಜ್ಜೆ ಇಟ್ಟು ರಣಭೂಮಿಯಲ್ಲಿ ಹಲ್ಲೆಯನ್ನು ಪ್ರಾರಂಭಿಸಿದರು. ಆ ಜನರಿಗೆ ತಾವು ಬಹಳ ಪ್ರಬಲರು, ಶಕ್ತಿವಂತರು. ನಮಗೆ ಯಾರ ಸಹಾಯದ ಅಗತ್ಯವೂ ಇಲ್ಲವೆಂದು ತಿಳಿದು ರಣಭೂಮಿಯನ್ನು ತಲವಾರಗಳಿಂದ, ಢಾಲುಗಳಿಂದ, ಚಿಲಖತ್ತುಗಳಿಂದ ತುಂಬಿ ಬಿಟ್ಟಿದ್ದರು. ಆದಿಲಶಾಹೀ ಕಡೆಯ ಶಿಪಾಯಿ ಜನರು ಇಂಥ ಯುದ್ಧದ ದಿನವನ್ನು ಬಹಳ ದಿನಗಳಿಂದ ಆಸ್ಥಾಪೂರ್ವಕವಾಗಿ ಎದುರು ನೋಡುತ್ತಿದ್ದರು. ಹಸಿದ ಹುಲಿ ಹರಿಣಗಳನ್ನು ಕಂಡ ತಕ್ಷಣ ಜಗಿದು ಹಿಡಿಯುವಂತೆ ಆದಿಲಶಾಹಿ ಶಿಪಾಯಿಗಳು ತಮ್ಮ ವಿದ್ಯುತ್ ವೇಗದ ಕುದುರೆಗಳನ್ನು ಶತ್ರುಗಳ ಗುಂಪಿನ ಮೇಲೆ ಹರಿಬಿಟ್ಟರು. ಕತ್ತಿ, ಭಲ್ಲೆ ಮತ್ತು ಬಿಲ್ಲು-ಬಾಣಗಳಿಂದ ಶತ್ರುಗಳ ಸೈನ್ಯವನ್ನು ಕತ್ತರಿಸತೊಡಗಿದರು. ರೆಪ್ಪೆ ಬಡಿಯುವುಷ್ಟರಲ್ಲಿ ಆ ರಣಭೂಮಿಯಲ್ಲಿ ಪ್ರಾರಂಭವಾದ ಪ್ರಳಯದ ಅಗ್ನಿಯಿಂದಾಗಿ ಹಾರುವ ಹಕ್ಕಿಗಳು ಮತ್ತು ಅರಣ್ಯದಲ್ಲಿಯ ಪಶುಗಳು ವಿಶ್ರಾಂತಿಗಾಗಿ-ಸುಖಕ್ಕಾಗಿ ರಣಭೂಮಿಯನ್ನು ತೊರೆದು ಬೇರೊಂದು ಕಡೆಗೆ ಹೋದುವು. ಯುದ್ಧ ಪ್ರಳಯದಿಂದಾಗಿ ನಾಲ್ಕು ದಿಕ್ಕುಗಳಲ್ಲೂ ಓಡಿರಿ-ಓಡಿರಿ ಎಂಬ ಒಂದೇ ಒಂದು ಕೂಗು ಎದ್ದಿತು. ರಾಜಾ ಜಯಸಿಂಗನ ಕಡೆಯ ಶೂರ ಮಂಡಳಿಯು ಶೌರ್ಯದಿಂದ ಕತ್ತಿಯನ್ನು ಆದಿಲಶಾಹಿ ಸೈನ್ಯದ ಮೇಲೆ ಬೀಸುವಲ್ಲಿ ಎಳ್ಳು ಕಾಳಿನಷ್ಟು ಅಂತರ ಮಾಡಲಿಲ್ಲ. ಆಗ ಆದಿಲಶಾಹಿ ಕಡೆಯ ದಕ್ಷಿಣದ ಶೂರ ಮಂಡಳಿಯು ಶತ್ರುಸೈನ್ಯ ತನ್ನೆದುರಿಗೆ ನಿಲ್ಲುವ ಧೈರ್ಯ ಮಾಡದಂತೆ ಯುದ್ಧವನ್ನು ಮುನ್ನಡೆಸಿದರು. ಆಗ ರಾಜಾ ಜಯಸಿಂಗನ ಕಡೆಯ ಸೈನ್ಯವು ಧೈರ್ಯಗುಂದಿ ಹಿಂದೆ ಸರಿಯಹತ್ತಿತು. ಯುದ್ಧ ಪ್ರಳಯದ ಅಗ್ನಿ ಜ್ವಾಲೆಯ ಮುಂದೆ ನಿಲ್ಲಲಾಗದೆ, ಹೊರಟು ಹೋದರು. ಆದಿಲಶಾಹಿ ಸರದಾರ ಅಬ್ದುಲ ಮಹಮ್ಮದನು 'ತಮ್ಮ ಈ ಮೊದಲ ಯಶವು ಉತ್ತಮ ಶಕುನವಾಗಿದೆಯೆಂದು' ಉಳಿದ ಸರದಾರರಿಗೆ ಹೇಳಿದನು. 'ಆದ್ದರಿಂದ ಇಂದು ಇಷ್ಟಕ್ಕೆ ಯುದ್ಧವನ್ನು ನಿಲ್ಲಿಸಿ ನಮ್ಮ-ನಮ್ಮ ಸ್ಥಳಗಳಿಗೆ ಹೋಗಿ ಬಿಡೋಣ. ಮೊಗಲರ ಸೈನ್ಯದ ಹಲ್ಲುಗಳಿಗೆ ಇಂದು ನಮ್ಮ ಕತ್ತಿಗಳಿಂದ ಸಾಕಷ್ಟು ಪೆಟ್ಟುಕೊಟ್ಟಿದ್ದೇವೆ, ಹೀಗಿರುವಾಗ ಮತ್ತೆ ನಮ್ಮಕಡೆಗೆ ಮುಖ ಮಾಡಿ ಎದ್ದು ನಿಂತರೆ ಅಲ್ಲಾನ ದಯದಿಂದ ಅವರ ಹಲ್ಲುಗಳನ್ನು ಬೇರು ಸಹಿತವಾಗಿ ಕಿತ್ತಿ ಹಾಕಿಬಿಡೋಣ' ಎಂದು ಹೇಳಿ ತಂತಮ್ಮ ಬೀಡಾರಗಳಿಗೆ ಬಂದರು, ಬಹಳ ಸಂತೋಷದಿಂದ ವಿಶ್ರಾಂತಿ ಪಡೆದರು.

### *೪೧. ಅಲೀ ಆದಿಲಶಹನ ಕಡೆಯ ಶೂರ ಮಂಡಳಿಯು ರಾಜಾ ಜಯಸಿಂಗನೊಂದಿಗೆ ಎರಡನೆಯ ಯುದ್ಧವನ್ನು ಮಾಡಿದ್ದು. ಮತ್ತು ಮಹಮ್ಮದ ಯಖಲಾಸಖಾನನ ಪರಾಕ್ರಮದಿಂದ ರಾಜಾ ಜಯಸಿಂಗನು ಸೋತದ್ದು :*

ದೈವೇಚ್ಛೆಯಂತೆ, ದುರ್ವ್ಯಿ ಮತ್ತು ಅಯೋಗ್ಯ ನಡತೆಯ ರಾಜಾ ಜಯಸಿಂಗನ ವೈಭವವು ಮುಳುಗಿ ನಾಶವಾಗುವುದರಲ್ಲಿತ್ತು. ಅವನು ತುಂಬ ಸೊಕ್ಕಿನವನಾಗಿದ್ದನು. ಆದ್ದರಿಂದ ಒಂದು ಸಲ ಸೋಲಾಗಿದ್ದರೂ ಜಯಸಿಂಗನಿಗೆ ತನ್ನ ಮೂರ್ಖತನದ ಅರಿವಾಗಲಿಲ್ಲ. ಮತ್ತೆ ಕೆಟ್ಟುದನ್ನೇ ವಿಚಾರಿಸಹತ್ತಿದನು. ಬುದ್ಧವಂತ ಜನರು ಆತನಿಗೆ ಈ ದುರ್ಮಾರ್ಗ ಬೇಡವೆಂದು ಎಷ್ಟೇ ನೀತಿ ಬೋಧೆಯನ್ನು ಮಾಡಿದರೂ ಯಾರ ಮಾತನ್ನೂ ಕೇಳದೆ ತನ್ನ ಮನಬಂದಂತೆ ಮಾಡತೊಡಗಿದನು. ಯುದ್ಧಕ್ಕೆ ಸಿದ್ಧನಾಗಿ ನಿಂತನು. ಈ ಸುದ್ದಿ ತಿಳಿಯುತ್ತಲೇ ಆದಿಲಶಹನ ಕಡೆಯ ಸರದಾರರು ಶತ್ರುವಿನ ಪಾರುಪತ್ಯಕ್ಕೆ ಸಿದ್ಧರಾಗಿ ಯುದ್ಧಕ್ಕೆ ಬಂದರು. ರಾಜಾ ಜಯಸಿಂಗನ ಸೈನ್ಯವು ಪೂರ್ಣ ಪ್ರಮಾಣದ ಯುದ್ದಸಾಮಾಗ್ರಿಗಳಿಂದ ಸಿದ್ಧವಾಯಿತು

ಅಷ್ಟರಲ್ಲಿ ಆದಿಲಶಾಹಿ ಕಡೆಯ ಸೈನ್ಯ ಯುದ್ಧಕ್ಕೆ ಸಿದ್ಧವಾಗಿ ಜಯಸಿಂಗನ ಸೈನ್ಯದ ಎದುರಿಗೆಯೇ ಬಂದಿತು. ಅಲೀ ಆದಿಲಶಹನ ಕಡೆಯ ಅಮೀರ ಜನರು ತಮ್ಮ ಸೈನ್ಯದ ಎಡ ಮತ್ತು ಬಲ ಬದಿಗಳಲ್ಲಿ, ಹಿಂದೆ, ಮುಂದೆ ಮತ್ತು ಮಧ್ಯಭಾಗದಲ್ಲಿ ಸಮರ್ಥ ವ್ಯವಸ್ಥೆ ಮಾಡಿದ್ದರು. ಇಬ್ಬದಿಯ ಶೂರರು ರಣಭೂಮಿಯಲ್ಲಿ ಬಂದು ಶಸ್ತ್ರಗಳನ್ನು ಉಪಯೋಗಿಸುತ್ತ ಹಿಡಿ-ಹಿಡಿ, ಹೊಡಿ-ಹೊಡಿ ಎಂಬ ದನಿಯೊಂದಿಗೆ ಮುರಿ-ಮುರಿ, ತೆಗೆದುಕೋ-ತೆಗೆದುಕೋ ಎಂಬ ಕೂಗುಗಳೊಂದಿಗೆ ಏರಿಬಂದು ಆನೆ ಬಲದ, ಸಿಂಹಬಲದ ಮಹಾಯೋಧರು, ಉಭಯ ಕಡೆಗಳಲ್ಲೂ ಯುದ್ಧ ಪರಾಕ್ರಮವನ್ನು ಮೆರೆದು ಮರಣ ಹೊಂದಿದರು.

ಯುದ್ಧದ ಬಹು ಮುಖ್ಯ ಸಂದರ್ಭದಲ್ಲಿ ಮಹಾ ಶೂರ ಮಹಮ್ಮದ ಯಖಲಾಸಖಾನನು ತನ್ನ ಹತ್ಯಾರಬಂದ ಐದು ಸಾವಿರ ಸವಾರರೊಂದಿಗೆ ಸಿಡಿದುಹೊರಟು, ವಿದ್ಯುತ್ ವೇಗದಲ್ಲಿ, ಅಗ್ನಿಮಳೆಯನ್ನು ಸುರಿಸುತ್ತ ಜಯಸಿಂಗನ ಸೈನ್ಯದ ಮೇಲೆಯೇ ಬಿದ್ದನು. ಕತ್ತಿಗಳಿಂದ ಶತ್ರುಗಳನ್ನು ಸಂಹಾರ ಮಾಡತೊಡಗಿದನು. ಆದರೂ ಜಯಸಿಂಗನ ಕಡೆಯ ಅರ್ಜುನನಂತೆ ಯುದ್ಧ ಪರಾಕ್ರಮ ಮೆರೆಯುವ ರಜಪೂತ ಜನರು, 'ಪಿನನ' ಎಂಬ ಮಹಾಶೂರ ಬಾದಶಹನಂತೆ ಶೌರ್ಯ ಮೆರೆದ ಪಠಾಣ ಜನರು ರಣಭೂಮಿಯಲ್ಲಿ ಪರಾಕ್ರಮವನ್ನು ತೋರಿಸಿದರು. ಕತ್ತಿಗಳಿಂದ, ಭಲ್ಲೆಗಳಿಂದ ಬಹು ದೊಡ್ಡ ಶಸ್ತ್ರ ಪ್ರಳಯವನ್ನೇ ಮಾಡಿದರು. ಬಾಣಗಳ ಸುರಿಮಳೆಯನ್ನು ಸುರಿಸಿದಾಗ ಅದು ಮರಣ ಪ್ರಳಯವನ್ನೇ ಸೃಷ್ಟಿಸಿತು. ಸಂಕಟದ ಸಮುದ್ರ ಉಕ್ಕಿಹರಿಯಿತು. ಆದಿಲಶಾಹನ ಕಡೆಯ ಸರದಾರರು, ಸಿಂಹಗಳಂತೆ ಪರಾಕ್ರಮ ಮೆರೆಯುವ ಜಯಸಿಂಗನ ಸೈನ್ಯವನ್ನು ಧೈರ್ಯದಿಂದ ಎದುರಿಸಿ, ತಮ್ಮ ಶಸ್ತ್ರಗಳಿಂದ ಮತ್ತು ತೋಫುಗಳಿಂದ ದಿಲ್ಲೀ ಸೈನ್ಯವನ್ನು ಗಾಬರಿಗೊಳಿಸಿದರು. ಆದಿಲಶಾಹನ ಕಡೆಯ ಪ್ರತಿಯೊಬ್ಬ ಶೂರನೂ ಕತ್ತಿ ಮತ್ತು ಭಲ್ಲೆಗಳ ವರಸೆಯಲ್ಲಿ ಉಸ್ತಾದರಾಗಿದ್ದರು. ಮತ್ತು ಸಂಪೂರ್ಣ ಧೈರ್ಯವಂತರಿದ್ದರು. ಅವರು ಜಯಸಿಂಗನ ಸೈನ್ಯವನ್ನು ಗುಂಪುಗುಂಪಾಗಿ ಕೊಂದರು, ಅದರಲ್ಲಿ ಬಹಳಷ್ಟು ಜನ ರಜಪೂತರು, ಪಠಾಣರು ಹತರಾದರು, ಜಯಸಿಂಗನ ಸೈನ್ಯದಲ್ಲಿ ಉಳಿದ ಸೈನಿಕರು ಭಯಭೀತರಾಗಿ ಓಡಹತ್ತಿದರು. ಬಹು ದೊಡ್ಡ ಸೋಲಾಯಿತು. ಜಯಸಿಂಗನಿಗೆ ಬಹುದೊಡ್ಡ ಅಪಯಶಸ್ಸಾಗಿ, ರಣಭೂಮಿಯನ್ನು ಬಿಟ್ಟು ಓಡಿ ಹೋದನು. ಆ ದಿನದ ಯಶಸ್ಸಿನ ಪತ್ರವನ್ನು ಯಖಲಾಸಖಾನನ ಹೆಸರಿನಲ್ಲಿ ಬರೆಯಲಾಯಿತು. ಅಂದರೆ, ಇಂದಿನ ವಿಜಯವನ್ನು ಯಖಲಾಸಖಾನನು ತಂದನೆಂದು ಬರೆದು ಆದಿಲಶಹನಿಗೆ ಕಳಿಸಲಾಯಿತು.

### *೪೨. ಸಯ್ಯದ ಅಲೀ ಯಾರಖಾನ ಊರ್ಫ ಪರ್ಜಾಖಾನನು ದಿಲ್ಲಿ ಕಡೆಯ ಸಲಾಬತಖಾನನ ಮೇಲೆ ಹಲ್ಲೆ ಮಾಡಿದ್ದು :*

ಅದೇ ಸಮಯದಲ್ಲಿ ಗುಪ್ತಚಾರರು ಆದಿಲಶಾಹನ ಕಡೆಯ ಸರದಾರ ಮಂಡಳಿಗೆ ಸುದ್ದಿಗಳನ್ನು ಕಳುಹಿಸುತ್ತ, ದಿಲ್ಲಿ ಕಡೆಯ ಸಲಾಬತಖಾನನೆಂಬ ವೀರನು ಐದು ಸಾವಿರ ಸವಾರರೊಂದಿಗೆ ಹೊರಟಿದ್ದಾನೆ. ಯುದ್ಧ ಸಾಮಗ್ರಿಗಳೂ ಸಾಕಷ್ಟಿದ್ದು, ಹುಲ್ಲು, ಕಟ್ಟಿಗೆ ಮತ್ತು ಮದ್ದುಗುಂಡುಗಳನ್ನೂ ಸಾಕಷ್ಟು ಪ್ರಮಾಣದಲ್ಲಿ ಜಯಸಿಂಗನ ಸೈನ್ಯಕ್ಕೆ ತರುತ್ತಿದ್ದಾನೆ. ಆ ಸಲಾಬತಖಾನನು ಇಲ್ಲಿಂದ ಐದು ಮಜಲು ದೂರದಲ್ಲಿದ್ದಾನೆ ಎಂದು ತಿಳಿಸಿದರು. ಆ ಸುದ್ದಿಯನ್ನು ಕೇಳುತ್ತಲೇ ಆದಿಲಶಾಹನ ಬುದ್ಧಿವಂತ ಮಂಡಳಿಯು ತಂತಮ್ಮಲ್ಲಿಯೇ ವಿಚಾರಮಾಡಿ, ಆ ಶೂರನು ಈ ಪ್ರಮಾಣದ ಯುದ್ಧ ಸಾಮಗ್ರಿಗಳೊಂದಿಗೆ ರಾಜಾ ಜಯಸಿಂಗನನ್ನು ಕೂಡಿಕೊಂಡರೆ, ಜಯಸಿಂಗನು ಮೊದಲಿನಕ್ಕಿಂತ ಹತ್ತು ಪಟ್ಟು ಅಧಿಕ ಬಲಶಾಲಿಯಾಗಿ, ಇನ್ನಷ್ಟು

ಸಂಕಟವನ್ನು ಒಡ್ಡುತ್ತಾನೆ. ಅನಂತರ ಅದನ್ನು ಎದುರಿಸುವುದು ನಮಗೆ ದುಸ್ತರವಾಗುತ್ತದೆ. ಆದ್ದರಿಂದ ಸಲಾಬತಖಾನನು ಜಯಸಿಂಗನನ್ನು ಬಂದು ಕೂಡುವ ಮೊದಲೇ ಆತನನ್ನು ಹಿಂದಕ್ಕೆ ಕಳಿಸುವುದೇ ಸೂಕ್ತವೆಂದು ತಿಳಿದರು. ಹಾಗೆಂದೇ ನಿರ್ಧರಿಸಿ ಯಾರ ಕತ್ತಿಯ ಹೊಡೆತದಿಂದ ಹುಲಿಯ ಹೃದಯವೂ ನೀರಾಗುತ್ತಿದ್ದಿತೋ ಯಾರನ್ನು ಕಂಡರೆ ಶೂರ ಮಂಡಳಿಗಳ ಹೃದಯ ಬಡಿತಕ್ಕೊಳಗಾಗುತ್ತಿದ್ದಿತೋ, ಆ ಷರ್ಜಾಖಾನನಿಗೆ ಈ ಕೆಲಸವನ್ನು ವಹಿಸಿದರು. ಇದು ತನ್ನ ಎರಡನೆಯ ಬೇಟೆ ಎಂದು ತಿಳಿದು, ಒಬ್ಬಂಟಿಗನಾಗಿ ಬರುತ್ತಿದ್ದ ಸಲಾಬತಖಾನನನ್ನು ಎದುರಿಸಲು ಷರ್ಜಾಖಾನನು ಹೊರಟನು. ಐದು ದಿನಗಳ ಮಜಲಿನ ದಾರಿಯನ್ನು ಎರಡು ದಿನಗಳಲ್ಲಿ ಸವೆಸಿ ಸಲಾಬತಖಾನನ ಎದುರಿಗೆ ಬಂದು ನಿಂತನು. ಆತನನ್ನು ಯುದ್ಧಕ್ಕೆ ಆಹ್ವಾನಿಸಿದನು. ದಿಲ್ಲಿ ಕಡೆಯ ಹೆಸರಾಂತ ವೀರ ಸಲಾಬತಖಾನನು, ತಾನು ತಂದ ಯುದ್ಧ ಸಾಮಗ್ರಿಗಳನ್ನು ಒಂದೆಡೆ ಇಟ್ಟು, ರುಸ್ತುಮನಂತೆ ಧೈರ್ಯದಿಂದ ಷರ್ಜಾಖಾನನನ್ನು ಎದುರಿಸಲು ಸಿದ್ಧನಾದನು. ಆತನ ಸೈನ್ಯದಲ್ಲಿಯ ಬಿಲ್ಲುಗಾರರು ಬಹು ದೊಡ್ಡ ಗುರಿಕಾರರಾಗಿದ್ದರು. ಅವರು ಗುರಿ ಇಟ್ಟು ಹೊಡೆದ ಬಾಣಗಳು ಮೈಮೇಲಿನ ಚಿಲಖತ್ತನ್ನು ಮುರಿದು ಶರೀರದಲ್ಲಿ ಪಾರಾಗಿ, ಸವಾರನ ಕುದುರೆಯ ಶರೀರದಲ್ಲಿ ಪಾರಾಗುತ್ತಿತ್ತು. ಅಂತಹ ಮಂಡಳಿಯನ್ನು ಸಲಾಬತಖಾನನು ಪರ್ವತದಂತೆ ನಿಲ್ಲಿಸಿ ಯುದ್ಧಕ್ಕೆ ಪ್ರಾರಂಭಿಸಿದನು. ಆಲೀ ಆದಿಲಶಹನ ಶೂರ ಮಂಡಳಿ ಹಾಗೂ ದಿಲ್ಲಿ ಸೈನ್ಯದ ಮಧ್ಯ ದೊಡ್ಡ ಶಸ್ತ್ರ ಪ್ರಳಯವೇ ಆಯಿತು. ಪರಸ್ಪರ ಕತ್ತಿಗಳನ್ನು ತಿರುವಿದರು. ಸಂಗ್ರಾಮದ ಪ್ರಳಯ ಸಮುದ್ರವು ಉಕ್ಕಿ ಹರಿಯಿತು. ಕತ್ತಿಗಳ ಖಣಖಣಾಟದ ದನಿಯು ಭೂವ್ಯೋಮಗಳನ್ನು ವ್ಯಾಪಿಸಿತು. ಯಮದೂತರು ಮರಣದ ಪಾತ್ರೆಯನ್ನು ತುಂಬಿ ಎಲ್ಲರಿಗೂ ಕುಡಿಸಲು ರಣಭೂಮಿಯಲ್ಲೆ ನಿಂತರು. ಮೇಲಿನ ಆಕಾಶವು ಸಹಸ್ರಾವಧಿ ಇಚ್ಛೆಯಿಂದ ಆ ಯುದ್ಧ ಪ್ರಸಂಗವನ್ನು ನೋಡಿ ದಣಿದು ನಿಂತಿತು. ಆಗ ಉಭಯ ಪಕ್ಷಗಳಲ್ಲಿಯ ಬಹು ಜನರು ಹತರಾದರು. ಸಲಾಬತಖಾನನು ಕುದುರೆಯಿಂದ ಭೂಮಿಯ ಮೇಲೆ ಬಿದ್ದು ಅಲ್ಲಿಂದಲೇ ಬಿಲ್ಲನ್ನು ಜಗ್ಗಿ ಬಾಣಗಳನ್ನು ಬಿಡಹತ್ತಿದನು. ಆತನ ಮಿತ್ರರು ಕೂಡ ಇನ್ನೊಬ್ಬ ಸಲಾಬತಖಾನನಂತೆ ಪರಾಕ್ರಮಿಗಳೇ ಆಗಿದ್ದರು. ಅವರು ತಂತಮ್ಮ ಕುದುರೆಗಳಿಂದ ಇಳಿದು ಸಲಾಬತಖಾನನಂತೆ ಬಾಣ ಬಿಡುವುದರಲ್ಲಿ ಮಗ್ನರಾದರು. ಆಗ ಹುಲಿಯಂತೆ ಪರಾಕ್ರಮ ತೋರುವ ಷರ್ಜಾಖಾನನು ಸಲಾಬತಖಾನನ ಈ ದೆಶೆಯನ್ನು ನೋಡಿದನು. ಸಲಾಬತಖಾನನ ಮಂಡಳಿ ಕುದುರೆಗಳನ್ನು ಬಿಟ್ಟು, ಬಾಣ ಬಿಡುವುದರಲ್ಲಿ ಮಗ್ನರಾದುದನ್ನು ಕಂಡು, ಷರ್ಜಾಖಾನನು ಹೃದಯವನ್ನೇ ಢಾಲನ್ನಾಗಿ ಮಾಡಿ, ಬಾಣ ಹೊಡೆಯುತ್ತ-ಹೊಡೆಯುತ್ತ ಮುಂದೆ ಬರಹತ್ತಿದನು. ಶತ್ರುವಿನ ಕಡೆಯಿಂದ ಬಂದ ಬಾಣಗಳನ್ನು ಷರ್ಜಾಖಾನನು ತುಂಡರಿಸುತ್ತ ತಾನು ಬಾಣಗಳನ್ನು ಬಿಡುತ್ತಿದ್ದನು. ಬಾಣ ಹೊಡೆಯುತ್ತ ಹೊಡೆಯುತ್ತ ಮುಂದೆ-ಮುಂದೆ ಬರುತ್ತ ಸಲಾಬತಖಾನನ ಎದುರಿಗೆ ಬಂದು ಮುಟ್ಟಿದನು. ಇನ್ನು ಬಿಲ್ಲು ಬಾಣಗಳ ಅವಶ್ಯಕತೆ ಇಲ್ಲವೆಂದು ತಿಳಿದ ಸಲಾಬತಖಾನನು ಬಿಲ್ಲನ್ನು ಒಗೆದು ಕತ್ತಿಯನ್ನು ಕೈಯಲ್ಲಿ ಹಿಡಿದನು. ಆಗ ಉಭಯ ಕಡೆಗಳಲ್ಲೂ ಕತ್ತಿಯುದ್ಧ ಪ್ರಾರಂಭವಾಯಿತು. ಕತ್ತಿಯ ಹೊಡೆತಗಳೂ ಉಪಯೋಗಕ್ಕೆ ಬಾರದಂತಾದಾಗ ಪರಸ್ಪರರು ಕಠಾರಿ ಹಾಗು 'ಪೇಶಕಬಾಜ'ಗಳ ಹೊಡೆತಗಳನ್ನು ಪ್ರಾರಂಭಿಸಿದರು. ಪರಸ್ಪರ ಕಠಾರಿಗಳಿಂದ ಹೋರಾಡಿದರು. ಕೊನೆಗೆ ಕಠಾರಿಯ ಹೊಡೆತಗಳಿಗೂ ಸಮಯ ಇರದಿದ್ದಾಗ ಪರಸ್ಪರ ಮುಷ್ಠಿ ಯುದ್ಧವನ್ನು ಪ್ರಾರಂಭಿಸಿದರು. ಉಭಯತರ ಯುದ್ಧ ಪರಾಕ್ರಮ ಇಹಪರಲೋಕಗಳಲ್ಲಿ ಪ್ರಸಿದ್ಧವಾಯಿತು. ಕೊನೆಯಲ್ಲಿ ಷರ್ಜಾಖಾನನ ಕೈ-ಮೇಲಾಯಿತು. ಸಲಾಬತಖಾನನು ಕೊಲೆಯಾದನು. ಸಲಾಬತಖಾನನು ತಂದ ಬಹು ದೊಡ್ಡ ಯುದ್ಧ ಸಾಮಗ್ರಿಗಳ ಸಂಗ್ರಹ ಷರ್ಜಾಖಾನನ

ಕೈವಶವಾಯಿತು. ಷರ್ಜಾಖಾನನ ಯುದ್ಧಪರಾಕ್ರಮವು ದಿಲ್ಲಿ ದಂಡಿನಲ್ಲಿ ಬಹು ದೊಡ್ಡ ಆಘಾತವನ್ನುಂಟು ಮಾಡಿತು.

### ೪೩. *ಸುಲ್ತಾನ ಅಬ್ದುಲ್ಲಾ ಕುತುಬಶಾಹನು ಆದಿಲಶಹನ ಸಹಾಯಕ್ಕಾಗಿ, ನೇಕನಾಮಖಾನ ಸರದಾರನೊಂದಿಗೆ ಭಾರೀ ಸೈನ್ಯವನ್ನು ಕೊಟ್ಟು ಕಳಿಸಿದ್ದು :*

ಈ ಸಮಯದಲ್ಲಿ ಮಮಲಕತಮದಾರ ಮದಾರುಲ್‌ಮಹಮ್ ಅಬ್ದುಲ್ ಮಹಮ್ಮದನ ಮುಖಾಂತರ ಸುಲ್ತಾನ ಅಬ್ದುಲ್ಲಾ ಕುತುಬಶಾಹನಿಂದ ಸಹಾಯ ಹಸ್ತದ ಪತ್ರವು ಅಲೀ ಆದಿಲಶಹನಿಗೆ ಬಂದು ಮುಟ್ಟಿತು. ಅದರಲ್ಲಿ "ದುರ್ನಡತೆಯ ರಾಜಾ ಜಯಸಿಂಗನು ಬಹಳ ಸೈನ್ಯದೊಂದಿಗೆ ತಮ್ಮ ಸರಹದ್ದಿನಲ್ಲಿ ಬಂದು ಗುಂಡಾಗಿರಿಯನ್ನು ಮಾಡುತ್ತಿದ್ದಾನೆಂದು ತಿಳಿದು ಬಂದಿದೆ. ಮೊದಲಿನಿಂದಲೂ ನಮ್ಮ ಎರಡೂ ರಾಜ್ಯಗಳು ಪರಸ್ಪರ ಸ್ನೇಹದಲ್ಲಿದ್ದು ಈಗ ನಿಮಗೆ ಸಂಕಟ ಬಂದಾಗ ನಾವು ಸಹಾಯ ಹಸ್ತವನ್ನು ನೀಡಬೇಕೆಂದು ಯೋಚಿಸಿದ್ದೇವೆ. ತಮ್ಮ ಉತ್ತರ ಬಂದ ತಕ್ಷಣ ಮುಂದಿನ ಕಾರ್ಯಕೈಗೊಳ್ಳುತ್ತೇವೆ"ಎಂದು ಬರೆದಿತ್ತು. ಪ್ರತಿಯಾಗಿ ಅಲೀ ಆದಿಲಶಹನು, "ನಮ್ಮಿಬ್ಬರ ರಾಜ್ಯಗಳು ಪರಸ್ಪರ ಅನ್ಯೋನ್ಯವಾಗಿದ್ದೂ, ಜಯಸಿಂಗನು ದಾಳಿ ಮಾಡಿದ್ದಾನೆ. ಅವನನ್ನು ಎದುರಿಸುವಲ್ಲಿ ನಮ್ಮ ಸೈನ್ಯವು ಒಟ್ಟಾರೆ ಯಶಸ್ವಿಯಾಗಿದೆ. ಜಯಸಿಂಗನು ಸೋಲಿನ ದವಡೆಯಲ್ಲಿ ಸಿಕ್ಕಿದ್ದಾನೆ. ಪ್ರಸ್ತುತ ಸಂದರ್ಭದಲ್ಲಿ ವಿಶೇಷ ಸಹಾಯದ ಅಗತ್ಯವೇನೂ ಇಲ್ಲ. ಆದರೆ ತಮ್ಮ ಮನದಲ್ಲಿ ಪೂರ್ವದ ನಮ್ಮ ಸಖ್ಯವನ್ನು ಜೀವಂತವಾಗಿಡಬೇಕೆಂದು ಬಯಸಿದ್ದೀರಿ. ಆದ್ದರಿಂದ 'ಬಿಸ್ಮಿಲ್ಲಾಹ' ಅಂದರೆ ಬಹಳ ಒಳ್ಳೆಯ ವಿಚಾರ" ಎಂದು ಮುಂತಾಗಿ ಬರೆದು ಕಳಿಸಿದನು.

ಅಲೀ ಆದಿಲಶಹನ ಉತ್ತರವನ್ನು ಕಂಡು ಆತನ ಅಭಿಪ್ರಾಯವನ್ನು ಗ್ರಹಿಸಿ, ಸುಲ್ತಾನ ಅಬ್ದುಲ್ಲಾ ಕುತುಬಶಾಹನು ಆಯ್ದ ಹನ್ನೆರಡು ಸಾವಿರ ಸವಾರರನ್ನು ನಾಲ್ವತ್ತು ಸಾವಿರ ಸಿಬ್ಬಂದಿಯನ್ನು ಉಳಿದೆಲ್ಲ ಯುದ್ಧ ಸಾಮಗ್ರಿಗಳೊಂದಿಗೆ ಹೆಸರಾಂತ ಸರದಾರ ನೇಕನಾಮಖಾನನೊಂದಿಗೆ ಕೊಟ್ಟು ಕಳಿಸಿದನು. ಅಲೀ ಆದಿಲಶಹನು ಅವನನ್ನು ಎದುರುಗೊಂಡು ಆದರದಿಂದ ಬರಮಾಡಿಕೊಳ್ಳಲು ಮಮಲಕತಮದಾರ ಅಬ್ದುಲ ಮಹ್ಮದನನ್ನು ಕಳಿಸಿಕೊಟ್ಟನು. ಅವನು ದೊಡ್ಡ ದೊಡ್ಡ ಸರದಾರರೊಂದಿಗೆ ನೇಕನಾಮ ಖಾನನ್ನು ಎದುರುಗೊಳ್ಳಲು ಹೊರಟನು, ಉಭಯ ಪಕ್ಷಗಳು ಭೆಟ್ಟಿಯಾಗಲು ಮಧ್ಯದಲ್ಲಿ ಅಲಂಕೃತಗೊಂಡ ಬಿಡಾರಗಳು, ಸಿದ್ಧವಾಗಿದ್ದುವು. ಅಲ್ಲಿ ಅವರು ಭೆಟ್ಟಿಯಾಗಿ ಉಭಯ ಕುಶಲೋಪರಿ ಮಾತನಾಡಿದರು. ಅನಂತರ ಮಮಲಕತಮದಾರ ಅಬ್ದುಲ ಮಹಮ್ಮದನು ನೇಕನಾಮಖಾನನನ್ನು ಮತ್ತು ಅವನ ಸರದಾರ ಮಂಡಳಿಯನ್ನು ಭಾರೀ ಕಿಮ್ಮತ್ತಿನ ಪೋಷಾಕು, ಮುತ್ತು ರತ್ನಗಳನ್ನು ಕೊಟ್ಟು ಸತ್ಕರಿಸಿದನು. ಅಲ್ಲಿಂದ ಹೊರಟು ನಗರಕ್ಕೆ ಬಂದರು. ಬಿಜಾಪುರ ನಗರದ ಹತ್ತಿರ ಬಂದಾಗ ಅಲೀ ಆದಿಲಶಹ ಬಾದಶಹನು ತಮ್ಮಿಬ್ಬರ ಭೆಟ್ಟಿಗಾಗಿ ಬಹುದೊಡ್ಡದಾದ ಅಲೀ ಬುರುಜದ ಮೇಲೆ ವಿಶೇಷ ಅಲಂಕಾರ ಮಾಡಿ, ಉಭಯತರ ಸಮಾಗಮ ಸಮಾರಂಭವನ್ನು ಎಲ್ಲರೂ ನೋಡುವಂತೆ ಯೋಜಿಸಿದ್ದನು. ಬಾದಶಹನ ಸ್ವಾರಿ ಅಲ್ಲಿ ಕುಳಿತುಕೊಂಡಿತು. 'ಕಿಸರ' ಎಂಬ ಒಬ್ಬ ದೊಡ್ಡ ಬಾದಶಹನಾಗಿ ಹೋದನು. ಆತ ಕಟ್ಟಿದಂಥ ದೊಡ್ಡ ಮಹಲನ್ನು ಬೇರೆ ಯಾರೂ ಕಟ್ಟಿರಲಿಲ್ಲ. ಆ ಕಿಸರ ಬಾದಶಹನಂತೆಯೇ ಪರವೀಜ ಎಂಬ ಇನ್ನೊಬ್ಬ ದೊಡ್ಡ ಬಾದಶಹನಾಗಿ ಹೋಗಿದ್ದಾನೆ. ಆ ಪರವೀಜನೂ ತನ್ನ ವಾಡೆಯನ್ನು ಚಮತ್ಕಾರಿಕ ರೀತಿಯಲ್ಲಿ ಅಲಂಕಾಲ ಮಾಡಿದ್ದನು. ಅವನಂತೆ ಇನ್ನೊಬ್ಬ ಅಲಂಕಾರ ಮಾಡಿರಲಿಲ್ಲ. ಅವನಂತೆ ಅಲೀ

ಆದಿಲಶಹನು ಸ್ವತಃ ಗೋಪುರದ ಮೇಲೆ ಕುಳಿತು ಅಲೀ ಬುರುಜನ್ನು ಶೋಭಾಯಮಾನಗೊಳಿಸಿದನು.

ಅಲೀ ಆದಿಲಶಹನ ಕಡೆಯ ಸೈನ್ಯ ಮತ್ತು ಕುತುಬ ಶಾಹನ ಕಡೆಯ ಸೈನ್ಯ ಹೀಗೆ ಎರಡೂ ಸೈನ್ಯಗಳು ಬಾದಶಹನ ದೃಷ್ಟಿಯ ಎದುರಿಗೆ ಬಂದು, ಅಲೀ ಆದಿಲಶಹನಿಗೆ ಮುಜುರೆ ಸಲ್ಲಿಸಿದುವು. ಅಲೀ ಆದಿಲಶಹನು ಸಮುದ್ರದೋಪಾದಿಯಲ್ಲಿ ನಿಂತ ಎರಡೂ ಸೈನ್ಯವನ್ನು ನೋಡಿ, ಎಲ್ಲರ ಮುಜುರೆ ಸ್ವೀಕರಿಸಿ ಬಹಳ ಸಂತೋಷ ಪಟ್ಟನು. ಅಬದುಲ್ ಮಹಮ್ಮದನಿಗೆ ಆಜ್ಞೆ ಮಾಡುತ್ತ ನೇಕನಾಮ ಖಾನನನ್ನು ಸರಕಾರೀ ವಾಡೆಯಲ್ಲಿ ಕರೆತಂದು ಮುಜರೆ ಮಾಡಿಸಬೇಕೆಂದು ಹೇಳಿದನು. ಅದರಂತೆ ಅಬದುಲ್ ಮಹಮ್ಮದನು ನೇಕನಾಮಖಾನನನ್ನು ಮತ್ತು ಅವನೊಂದಿಗೆ ಬಂದಿದ್ದ ಸರದಾರ ಮಂಡಳಿಯನ್ನು ಅರಮನೆಯ ಆವರಣದಲ್ಲಿ ಕರೆತಂದು ಮುಜುರೆ ಮಾಡಿಸಿದನು. ಆಗ ಆಲೀ ಆದಿಲಶಹ ಬಾದಶಹನು ಅವರಿಗೆಲ್ಲ ಭಾರೀ ಕಿಮ್ಮತ್ತಿನ ವಸ್ತ್ರಗಳನ್ನು ಕೊಟ್ಟು ಕಳಿಸಿದನು. 'ನೀವು ಅಬ್ದುಲ್ ಮಹಮ್ಮದನೊಂದಿಗೆ ಶತ್ರುವಿನ ಪಾರುಪತ್ಯ ಮಾಡಲು ಹೋಗಿ ಶತ್ರುವನ್ನು ಶಿಕ್ಷಿಸಬೇಕು' ಎಂದು ಆಜ್ಞೆ ಮಾಡಿದನು.

### ೪೪. *ಅಲೀ ಆದಿಲಶಹನು ತನ್ನ ಸೈನ್ಯ ಮತ್ತು ಕುತುಬಶಾಹನ ಸೈನ್ಯವನ್ನು ಮಿರಜಾರಾಜನನ್ನು ಅಂದರೆ ಜಯಸಿಂಗನನ್ನು ಶಿಕ್ಷಿಸಲು ನಿಯಮಿಸಿದ್ದು :*

ಮಮಲಕತಮದಾರ ಅಬದುಲ್ ಮಹಮ್ಮದನು ಮತ್ತೆ ಇನ್ನೊಮ್ಮೆ ಶತ್ರುವನ್ನು ಶಿಕ್ಷಿಸಲು ನೇಕನಾಮಖಾನನನೊಂದಿಗೆ ಹೋಗಿ ಶತ್ರುವಿನ ನಿರ್ಮೂಲ ನಾಶಮಾಡಲು ದಂಡಿನ ಥಾಲನ್ನು ಎತ್ತಿ ಹಿಡಿದನು. ನೇಕನಾಮಖಾನನು ತನ್ನ ಜೊತೆಗೆ ಬಂದಿದ್ದ ಸರದಾರ ಮಂಡಳಿಯನ್ನು ಮತ್ತು ತನ್ನ ಸೈನ್ಯವನ್ನು ಜೊತೆ ಮಾಡಿಕೊಂಡು ಒಂದು ಬೇರೆ ದಾರಿಯಿಂದ ಶತ್ರುವಿನ ಮೇಲೆ ಏರಿ ಹೊರಟನು. ಅಬದುಲ ಮಹಮದನು ಖವಾಸಖಾನ ಷರ್ಜಾಖಾನ ಅಬದುಲ ಖಾನ ಮತ್ತು ಯೇಕೋಜಿರಾಜೆ ಮೊದಲಾದ ಎಲ್ಲ ಅಮೀರಜನರನ್ನು, ತನ್ನ ಯಶಸ್ವೀ ಸೈನ್ಯವನ್ನು ತೆಗೆದುಕೊಂಡು ಇನ್ನೊಂದು ದಾರಿಯಿಂದ ಶತ್ರುವಿನ ಮೇಲೆ ಹೋದನು. ಉಭಯ ಬಾದಶಹರ ಸೈನ್ಯಗಳೆಂದರೆ ಎರಡು ಸಮುದ್ರಗಳೆಂದು ಕಂಡುವು. ಅವುಗಳ ತೆರೆಗಳು ಶತ್ರುಸಮುದಾಯವನ್ನು ಮುಳುಗಿಸಲು ಹೊರಟಂತೆ ಉಭಯ ಸೈನ್ಯ ಸಮುದ್ರಗಳು ಉಕ್ಕಿ ಹರಿದುವು.

ರಾಜಾಜಯಸಿಂಗನ ಹತ್ತಿರವೂ ಸೈನ್ಯ ಸಂಗ್ರಹ ಸಾಕಷ್ಟಿತ್ತು. ಮಾತುಗಳಲ್ಲಿ ಕೇಳಿ ಬಂದಂತೆ ಎಂಭತ್ತು ಸಾವಿರ ಸ್ವಾರರು ಮತ್ತು ಒಂದು ಲಕ್ಷ ಸಿಬ್ಬಂದಿಯು ಅವನ ಹತ್ತಿರ ಇತ್ತು. ಅದೇ ಸೊಕ್ಕಿನಿಂದ ರಾಜಾಜಯಸಿಂಗನು ಮತ್ತೆ ಬಿಜಾಪುರವನ್ನು ಕೈವಶಮಾಡಿಕೊಳ್ಳಲು ಆದಿಲಶಹನ ಸರಹದ್ದಿನಲ್ಲಿ ಬಂದಿದ್ದನು. ಆದರೆ ಆದಿಲಶಹನ ಶೂರರ ಕತ್ತಿಯ ಅಲಗಿನ ಭಯದಿಂದಾಗಿ ಜಯಸಿಂಗನಿಗೆ ಬಿಜಾಪುರ ಶಹರದ ಮೇಲೆ ಏರಿ ಬರುವ ಧೈರ್ಯವಾಗಿರಲಿಲ್ಲ. ಅದರಿಂದಾಗಿ ಖಿನ್ನನಾಗಿ ಮನೋರಥ ಪೂರ್ಣನಾಗದೆ ಹಿಂತಿರುಗಿದ್ದನು. ತನ್ನ ಸರಹದ್ದಿಗೆ ಹೋಗಿ ಚಿಂತೆಯಲ್ಲಿ ಬಿದ್ದಿದ್ದನು. ಅಪಯಶಸ್ಸಿನೊಂದಿಗೆ ತನ್ನ ದೇಶಕ್ಕೂ ತಿರುಗಿ ಹೋಗಲೊಲ್ಲ, ಇತ್ತ ಆದಿಲಶಹನ ಕಡೆಯ ಶತ್ರು ಸೈನ್ಯವನ್ನು ಎದುರಿಸುವ ಧೈರ್ಯವೂ ಬರಲೊಲ್ಲದು. 'ನೀನು ಯುದ್ಧ ಮಾಡಿ ಗೆಲುವು ಸಾಧಿಸದಿದ್ದರೆ ನಿನ್ನನ್ನು ಶಿಕ್ಷಿಸಲಾಗುತ್ತದೆ' ಎಂದು ತನ್ನ ಧಣಿ ಔರಂಗಜೇಬನಿಂದ ಮತ್ತೆ-ಮತ್ತೆ ಆಜ್ಞೆಗಳು ಬರುತ್ತಲೇ ಇದ್ದುವು. ಯಾಕೆಂದರೆ, ಇಷ್ಟೊಂದು ಸೈನ್ಯ ಮತ್ತು ಯುದ್ಧ ಸಾಮಗ್ರಿಗಳನ್ನು ತೆಗೆದುಕೊಂಡು ಬಹಳ ಧೈರ್ಯದಿಂದ ಹೋದವನು ಅಲ್ಲಿ ಏನು ಮಾಡಿದ?

ನಮ್ಮ ಬಾದಶಾಹೀ ಕೀರ್ತಿಗೆ ಮತ್ತು ನಮ್ಮ ಹೆಸರಿಗೆ ಅಪವಾದ ತಂದನು. ತಲೆ ಎತ್ತದಂತೆ ಮಾಡಿದನು, ಈಗ ಯಾವ ಮುಖದಿಂದ ನಮ್ಮೆದುರಿಗೆ ಬಂದು ಕೃಪೆ ಪಾತ್ರನಾಗುವಿ?' ಎಂಬೆಲ್ಲ ವಿಷಯವನ್ನೊಳಗೊಂಡ ಆಜ್ಞಾ ಪತ್ರಗಳು ಬರುತ್ತಿದ್ದುವು. ಜಯಸಿಂಗನು ಉಭಯ ಸಂಕಟದಲ್ಲಿ ಬಿದ್ದನು. ವಿಶ್ರಾಂತಿಯನ್ನೂ ಪಡೆಯಲಾರ, ಓಡಿಯೂ ಹೋಗಲಾರ, ಇಂಥ ಚಿಂತೆಯಲ್ಲಿ ಜಯಸಿಂಗ ಮುಳುಗಿದನು.

ಅದೇ ಹೊತ್ತಿಗೆ ಅಬ್ದುಲ್ ಮಹಮ್ಮದನು ತನ್ನ ಜಗಪ್ರಳಯ ಸೈನ್ಯದೊಂದಿಗೆ ದಿಲ್ಲಿಯ ಸರಹದ್ದಿನ ಹತ್ತಿರ ಬಂದನು. ಆದಿಲಶಾಹಿ ಸೈನ್ಯವನ್ನು ಮೂರು ವಿಭಾಗಗಳಲ್ಲಿ ವಿಭಜಿಸಲಾಗಿತ್ತು. ಒಂದು ಭಾಗವನ್ನು ಷರ್ಜಾಖಾನ ಮತ್ತು ಖವಾಸಖಾನರಿಗೆ ನಿಯಮಿಸಲಾಗಿತ್ತು. ಇನ್ನೊಂದು ಭಾಗವನ್ನು ಬಹಲೋಲಖಾನ ಮತ್ತು ಬೇರೆ ಅನೇಕ ಅಮೀರ ಜನರಲ್ಲಿ ನಿಯಮಿಸಲಾಗಿತ್ತು ಮತ್ತು ಅವರಿಗೆ ಕಟ್ಟೆಚ್ಚರಿಕೆ ಕೊಡುತ್ತ, ಯಾವ ದಿಶೆಯಿಂದ ಶತ್ರುವಿನ ಸೈನ್ಯ ಬರುತ್ತದೆ ಎಂದು ಕಂಡು ಬರುತ್ತದೆಯೋ ಆ ದಿಶೆಯಲ್ಲಿ ಸೈನ್ಯವು ಏರಿ ಹೋಗಬೇಕು, ಅವರ ಮೇಲೆ ಹಲ್ಲೆ ಮಾಡಬೇಕು ಎಂದು ಆಜ್ಞೆ ನೀಡಿ ಎರಡು ಭಾಗಗಳನ್ನಾಗಿ ಮಾಡಲಾಗಿತ್ತು. ಇನ್ನುಳಿದ ಸೈನ್ಯವನ್ನು ಅಬ್ದುಲ ಮಹಮ್ಮದನು ತನ್ನ ಹತ್ತಿರವೇ ಇಟ್ಟುಕೊಂಡಿದ್ದನು. ಇದಕ್ಕೆ ಕಾರಣ ಯಾವ ಬದಿಗೆ ಸಹಾಯದ ಅವಶ್ಯಕತೆ ಬೀಳುವುದೋ ಅತ್ತ ಸಹಾಯ ಮಾಡಬೇಕು ಎಂಬುದಾಗಿತ್ತು. ಅದರಂತೆಯೇ ನೇಕನಾಮಖಾನನೂ ತನ್ನ ಅಮೀರ ಜನರನ್ನು ವಿಭಾಗಮಾಡಿ ಇವರುಗಳಲ್ಲಿ ಹಂಚಿದನು. ಪ್ರತಿಯೊಬ್ಬರೂ ಶತ್ರುವನ್ನು ಶಿಕ್ಷಿಸಲು ಕಟಿಬದ್ಧರಾದರು.

ರಾಜಾ ಜಯಸಿಂಗನಿಗೆ 'ಮಿರಜಾ ರಾಜಾ' ಎಂಬ ಬಿರುದನ್ನು ಕೊಡಲಾಗಿತ್ತು. ಅದೇ ಮಿರಜಾರಾಜನು ಈ ಮೊದಲು ಬಿಜಾಪುರ ನಗರದವರೆಗೂ ಬಂದು ಆದಿಲಶಾಹಿಗಳ ಕತ್ತಿಯ ರುಚಿಯನ್ನು ಕಂಡು ಹಿಂತಿರುಗಿದ್ದನು. ಆ ಭಯ ಜಯಸಿಂಗನಿಂದ ಇನ್ನೂ ಮರೆಯಾಗಿರಲಿಲ್ಲ. ಇನ್ನೊಂದು ಸಂಕಟವೆಂದರೆ ಜಯಸಿಂಗನ ದಂಡಿನಲ್ಲಿಯ ಆಹಾರ ಸಾಮಗ್ರಿಗಳು ಮುಗಿಯುತ್ತ ಬಂದಿದ್ದುವು. ಅದರಿಂದಾಗಿ ಅವನ ಧೈರ್ಯ ಉಡುಗಿತ್ತು. ಈಗಂತೂ ಕುತುಬಶಾಹನ ಸೈನ್ಯವು ಆದಿಲಶಹನ ಸಹಾಯಕ್ಕೆ ಬಂದಿದೆ ಎಂಬ ಸುದ್ದಿಯನ್ನು ಕೇಳಿ, ರಾಜಾ ಜಯಸಿಂಗನ ಸೈನ್ಯವು ಮೊದಲೇ ಅರ್ಧ ಭಯಭೀತವಾಗಿದ್ದು ಈಗ ನೂರು ಪಟ್ಟು ಭಯಭೀತವಾಯಿತು. ಯುದ್ಧಮಾಡುವ ಧೈರ್ಯ ಸಾಲದಾಯಿತು. ಈಗ ಆದಿಲಶಹನ ಸೈನ್ಯ ಹತ್ತಿರದಲ್ಲೆ ಬಂದಿದೆ. ಆದರೂ ಮಿರಜಾರಾಜನು ಸ್ತಬ್ದನಾಗಿ ಸುಮ್ಮನೆ ಕುಳಿತು ಬಿಟ್ಟಿದ್ದನು. ಜಯಸಿಂಗನ ಕಡೆಯ ಒಬ್ಬ ಶಿಪಾಯಿಯೂ ಯುದ್ಧ ಸಿದ್ದನಾಗಿ ರಣಭೂಮಿಯಲ್ಲಿ ಬಂದು ನಿಲ್ಲುವ ಧೈರ್ಯ ಮಾಡಲಿಲ್ಲ.

### ೪೫. *ಷರ್ಜಾಖಾನ ಮತ್ತು ಖವಾಸಖಾನರು ಜಯಸಿಂಗನ ಕಡೆಯ ಪಠಾಣ ಮತ್ತು ರಜಪೂತರೊಂದಿಗೆ ಯುದ್ಧ ಮಾಡಿದ್ದು :*

ಮಹಾ ಪರಾಕ್ರಮಿ ಷರ್ಜಾಖಾನ ಮತ್ತು ಖವಾಸಖಾನರ ಉಭಯತರು ಮಾತನಾಡಿಕೊಳ್ಳುತ್ತ, "ಶತ್ರುವು ದಣಿದು ಸುಮ್ಮನೆ ಕುಳಿತಿದ್ದಾನೆ ಯುದ್ಧ ಭೂಮಿಯತ್ತ ಮುಖ ತೋರಿಸುತ್ತಿಲ್ಲ. ಆದ್ದರಿಂದ ಅವರು ಯುದ್ಧಕ್ಕೆ ಬರುವಂತೆ ಏನಾದರೊಂದು ಉಪಾಯ ಮಾಡಬೇಕು, ಅವರನ್ನು ಒತ್ತಾಯ ಪೂರ್ವಕವಾಗಿ ರಣಭೂಮಿಗೆ ಜಗ್ಗಬೇಕು. ಹೇಗಾದರೂ ಮಾಡಿ ಬೇಟೆಯನ್ನು ಬಲೆಯಲ್ಲಿ ಕೆಡವಬೇಕು. ಕಣ್ಣು ಮುಚ್ಚಿ ಕುಳಿತ ಮೊಲದಂತೆ ಜಯಸಿಂಗನು ಕುಳಿತಿದ್ದಾನೆ. ಆದ್ದರಿಂದ ಅವನನ್ನು ಎಬ್ಬಿಸಬೇಕು. ಬಲಾತ್ಕಾರದಿಂದ

ಯುದ್ಧಕ್ಕೆ ಬರುವಂತೆ ಮಾಡಬೇಕು" ಎಂಬ ನಿರ್ಧಾರದಿಂದ ಇಬ್ಬರೂ ಯುದ್ಧಕ್ಕೆ ಸಿದ್ಧರಾಗಿ ಕುದುರೆಗಳನ್ನು ಏರಿದರು. ಜಯಸಿಂಗನತ್ತ ಎರಡು-ಮೂರು ಮಜಲುಗಳಷ್ಟು ದಾರಿಯನ್ನು ನಡೆದರು. ಅಲ್ಲೊಂದು ಕಠಿಣ ಮಾರ್ಗ ಎದುರಾಯಿತು. ಗುಡ್ಡದಲ್ಲಿಯ ತಗ್ಗು-ದಿನ್ನೆಗಳು, ಕೊರಕಲುಗಳು ಗಿಡಗಂಟೆಗಳು, ದಟ್ಟ ಅರಣ್ಯ. ಹೀಗೆ ಕಠಿಣ ಮಾರ್ಗದಲ್ಲಿ ಮುಂದೆ ನಡೆಯುವುದೇ ಅಸಾಧ್ಯವೆನಿಸಿತು. ಆಗ ಷರ್ಜಾಖಾನನು ಒಂದೆಡೆ ಬೇರೆ ದಾರಿ ಹಿಡಿದನು. ಖವಾಸಖಾನನು ಇನ್ನೊಂದು ದಾರಿಯಲ್ಲಿ ನಡೆದನು.

ಇಷ್ಟರಲ್ಲಿ ದಾರಿ ಮಧ್ಯದಲ್ಲಿ ಷರ್ಜಾಖಾನನಿಗೆ ಗುಪ್ತಚಾರರು ಬಂದು 'ರಾಜಾ ಜಯಸಿಂಗನ ಸೈನ್ಯದಲ್ಲಿಯ ಆಹಾರ ಸಾಮಗ್ರಿ ತೀರಿದೆ, ಹುಲ್ಲು ಕಡ್ಡಿಗಳು ಕೂಡ ಇಲ್ಲ, ಒಟ್ಟಾರೆ ಸಾಮಗ್ರಿಗಳು ತೀರಿದ್ದರಿಂದ ಜಯಸಿಂಗನ ಸೈನ್ಯ ಅತಿ ಕಷ್ಟದಲ್ಲಿ ಇದೆ. ಈ ಹನ್ನೆರಡು ಸಾವಿರ ಆಯ್ದ ಸವಾರರಲ್ಲಿ ಅರ್ಧ ಮಹಾಶೂರರಾದ ಪಠಾಣರಿದ್ದು, ಅವರು ಕತ್ತಿ ಹೊಡೆತ ಹಾಗು ಬಿಲ್ಲುಗಾರಿಕೆಯಲ್ಲಿ ನಿಷ್ಣಾತರು. ಇನ್ನರ್ಧ ರಜಪೂತ, ಮರಾಠಾ ಸೈನ್ಯವಿದ್ದು ಅವರು ಕತ್ತಿವರಸೆ ಹಾಗು ಭಲ್ಲೆಗಳನ್ನು ಹೊಡೆಯವುದರಲ್ಲಿ ನಿಷ್ಣಾತರು. ಇಷ್ಟು ಜನರು ಉಳಿದಿದ್ದ ಯುದ್ಧಸಾಮಗ್ರಿ ಮದ್ದುಗುಂಡುಗಳನ್ನು, ತೋಫುಗಳನ್ನು ಸಾಕಷ್ಟು ಪ್ರಮಾಣದಲ್ಲಿ ತೆಗೆದುಕೊಂಡು ಯುದ್ಧಕ್ಕಾಗಿ ಹೊರಟಿದ್ದು, ಅವರು ಬರುವ ದಾರಿ ಇಲ್ಲಿಂದ ಸಮೀಪವಿದೆ" ಎಂದು ಸುದ್ದಿ ತಂದರು. ಸಂತೋಷದ ಸುದ್ದಿಯನ್ನು ಕೇಳಿದ ಷರ್ಜಾಖಾನನು ಅತ್ಯಂತ ಆನಂದದಿಂದ ಎದೆ ಉಬ್ಬಿಸಿ ತನ್ನ ಜೊತೆಯ ಶೂರ ಮಂಡಳಿಗೆ ಹೇಳಿದನು. "ಇವರು ಹುಲಿಯಂತೆ ಬೇಟೆಯಾಡಲು ಬರುತ್ತಿದ್ದಾರೆ. ನಾವು ಬೇಟೆಯನ್ನು ಹಿಡಿಯಲೆಂದೇ ಹೊರಟಿದ್ದೇವೆ. ಅನೇಕ ಮಜಲುಗಳನ್ನು ದಾಟಿ ಇಲ್ಲಿಯವರೆಗೂ ಬಂದಿದ್ದಾಗಿದೆ ಆ ಬೇಟೆಯೇ ನಮ್ಮ ದಾರಿಯಲ್ಲಿ ಮುಂದೆ ಬರುತ್ತಿದೆ. ಇಂದು ಆ ಬೇಟೆಯನ್ನು ಬಹಳ ಪ್ರಯತ್ನ ಮಾಡಿ ಬಲೆಯಲ್ಲಿ ಕೆಡವಲೇಬೇಕು. ಯಾಕೆಂದರೆ, ಇದರಿಂದ ಅಂಥ ದೊಡ್ಡ ಬೇಟೆಯನ್ನು ಹಿಡಿದ ಕೀರ್ತಿಯು ದಿಲ್ಲಿಯ ವರೆಗೂ ಹೋಗುತ್ತದೆ ಮತ್ತು ದಿಲ್ಲಿಯ ಸೈನ್ಯಕ್ಕೆ ದೊಡ್ಡ ಆಘಾತವಾಗುತ್ತದೆ." ಅವನ ಮಾತುಗಳಿಂದ ಉಬ್ಬಿದ ಶೂರ ಮಂಡಳಿಯು ಕುದುರೆಗಳನ್ನೇರಿ ಅತಿ ಅವಸರದಲ್ಲಿ ನಡೆದರು.

ಅತ್ಯಂತ ಆಸ್ಥೆಯಿಂದ ಒಂದು ಅರಣ್ಯವನ್ನು ಹೊಕ್ಕರು. ಕಂಟಿಗಳ ದಟ್ಟ ಗಿಡಗಳ ಮಧ್ಯವಾರಾಗಿ ಬಯಲು ಪ್ರದೇಶದ ದಾರಿಯಲ್ಲಿ ಬರುತ್ತಿದ್ದಂತೆ, ಮುಂದೆ ಒಮ್ಮೆಲೆ ಸೈನ್ಯವು ಬರುತ್ತಿದ್ದುದನ್ನು ನೋಡಿದರು. ಅವರೆಲ್ಲ ಪಠಾಣ ಜಾತಿಯವರಾಗಿದ್ದರು. ಅವರು ಬಹಳ ಗದ್ದಲ ಮಾಡುತ್ತ ಬರುತ್ತಿದ್ದರು. ಯುದ್ಧ ಸಾಮಗ್ರಿಗಳೊಂದಿಗೆ ಯುದ್ಧಕ್ಕ ಸಿದ್ಧರಾಗಿಯೇ ಇದ್ದರು. ಷರ್ಜಾಖಾನನು ತನ್ನ ಶೂರ ಮಂಡಳಿಗೆ ಎಚ್ಚರಿಕೆಯನ್ನು ಕೊಟ್ಟು ಮೈದಾನದಲ್ಲಿ ಇಳಿದನು. ಶತ್ರುವನ್ನು ಎದುರಿಸಲು ಬಾಣಗಳನ್ನು, ಬಂದೂಕಿನ ಗುಂಡುಗಳನ್ನು ಹೊಡೆಯಲು ಪ್ರಾರಂಭಿಸಿದನು. ಆಗ ಅತ್ತ ಕಡೆಯಿಂದಲೂ ಬಾಣಗಳು, ಗುಂಡುಗಳು ಬರಲು ಪ್ರಾರಂಭವಾದುವು. ಯುದ್ಧ ಪ್ರಳಯದ ಅಗ್ನಿಯು ಹೊತ್ತಿಕೊಂಡಿತು. ಷರ್ಜಾಖಾನನು ಕಿಂಚಿತ್ ಮುಂದೆ ನಡೆದುಹೋದನು. ಆಗ ಬಾಣಗಳ-ಗುಂಡುಗಳ ವೃಷ್ಟಿಯಾಯಿತು. ಷರ್ಜಾಖಾನನು ಅವುಗಳನ್ನೆಲ್ಲ ದಾಟಿ ಮಧ್ಯದ ಕಟ್ಟಿಗೆಯನ್ನು ಮುರಿದು ಅತ್ಯಂತ ಸಮೀಪ ಹೋಗಿ ಮುಟ್ಟಿದನು. ಉಭಯ ಪಕ್ಷಗಳಲ್ಲಿಯ ನಾಮಾಂಕಿತ ಶೂರ ಮಂಡಳಿಯು ಘನ ಘೋರ ಕಾಳಗದಲ್ಲಿ ತೊಡಗಿದ್ದರು. ಕ್ಷಣ ಮಾತ್ರದಲ್ಲಿ ಆ ರಣಭೂಮಿಯಲ್ಲಿ ಮಹಾಪ್ರಳಯದ ಸಮಯ ಬಂತೆಂಬಂತೆ ಇಡೀ ಜಗವೇ ಮುಳುಗಿ ಹೋಗುವಂಥ ಸಮಯ ಪ್ರತ್ಯಕ್ಷವಾಗಿ ಬಂದಿತು.

ಆ ಯುದ್ಧದಲ್ಲಿ ಕೊಲೆಯಾದ ಮನುಷ್ಯರ ರಕ್ತದಿಂದ ರಣಭೂಮಿಯು ತಾಮ್ರವರ್ಣದ ಬೆಳೆಯ ಹೊಲದಂತೆ ಕೆಂಪಗಾಯಿತು. ಆ ರಣಭೂಮಿಯಲ್ಲಿ ಕುದುರೆಗಳ ಖುರಪುಟಗಳು ಮತ್ತು ಕಾಲ್ಬಲದ ಕಾಲುಗಳು ಮೆಹಂದಿ ಬಣ್ಣದಿಂದ ಸಿಂಗರಿಸಿದಂತೆ ಕಂಡವು. ಸತ್ತ ಜನರ ಹೆಣಗಳ ರಾಶಿ, ಪರ್ವತದಂತೆ ಬಿದ್ದಿತು. ಆದಿಲಶಹನ ಕಡೆಯ ಶೂರಮಂಡಳಿಯು ರಣಭೂಮಿಯಲ್ಲಿ ಕತ್ತಿಗಳ ಹಾಗೂ ಬಾಣಗಳ ಪ್ರಶ್ನೋತ್ತರಗಳನ್ನು ಧೈರ್ಯದಿಂದ ಎದುರಿಸಿದರು. ಶತ್ರುವು ಬಾಣ ಬಿಟ್ಟರೆ ಅದನ್ನು ಆದಿಲಶಹನ ಕಡೆಯ ಶೂರರು ಕತ್ತಿಗಳಿಂದ ಎದುರಿಸುತ್ತಿದ್ದರು, ಶತ್ರುಗಳು ಕತ್ತಿಗಳನ್ನೆತ್ತಿ ಬಂದರೆ ಅವನ್ನು ಬಾಣಗಳಿಂದ ಎದುರಿಸುತ್ತಿದ್ದರು. ಶತ್ರುಕಡೆಯವರು ಕತ್ತಿಯ ಒಂದು ಹೊಡತಕ್ಕೆ ಪ್ರತಿಯಾಗಿ ಆದಿಲಶಾಹಿ ಶೂರರು ಎರಡು ಮೂರು ಕತ್ತಿಗಳ ಹೊಡೆತವನ್ನು ಕೊಡುತ್ತಿದ್ದರು. ಆದಿಲಶಹನ ಕಡೆಯ ಶೂರರ ಕತ್ತಿಯ ಹೊಡೆತಕ್ಕೆ ಕುದುರೆಯ ಮೇಲಿನ ಸವಾರ ಮತ್ತು ಆತನ ಕುದುರೆ ತುಂಡರಿಸಿ ಭೂಮಿಗೆ ಬೀಳುತ್ತಿದ್ದವು. ಶತ್ರುಗಳ ಕಡೆಯ ಕೆಲವು ಜನರು ಆದಿಲಶಹನ ಕಡೆಯ ಶೂರರ ಕತ್ತಿಗಳ ಹೊಡೆತದಿಂದ ರಕ್ತದ ಮಡುವಿನಲ್ಲಿ ಉರುಳಾಡುತ್ತ ಬಿದ್ದರು. ಮತ್ತೆ ಅವರ ಕತ್ತಿಗಳ ಹೊಡೆತದ ಮುಂದೆ ಎದ್ದು ನಿಲ್ಲುವ ಸಾಮರ್ಥ್ಯ ಇಲ್ಲದಾಗುತ್ತಿತ್ತು. ಆಗ ಜಯಸಿಂಗನ ಕಡೆಯ ಸೈನ್ಯವು ರಣಭೂಮಿಯಿಂದ ಮುಖ ತಿರುವಿ ಹಿಂದಕ್ಕೆ ಸರಿಯಿತು, ಓಡಹತ್ತಿದರು. ಷರ್ಜಾಖಾನನೊಬ್ಬನೇ ದಿಲ್ಲಿಯವರನ್ನು ಕೊನೆಗಾಣಿಸಿದ್ದನು.

ಅಷ್ಟರಲ್ಲಿ ಖವಾಸಖಾನನಿಗೆ ಈ ಸುದ್ದಿ ಹತ್ತಿ, ಆತ ತಕ್ಷಣ ಹೊರಟು ಷರ್ಜಾಖಾನನ ಸಹಾಯಕ್ಕೆ ಬಂದನು. ಉಭಯತರು ಕೂಡಿ ರಣಭೂಮಿಯಲ್ಲಿ ಹಲ್ಲೆ ಮಾಡಿದರು. ಯುದ್ಧದಿಂದ ಮುಕ್ತರಾಗಿ ಉಭಯತರೂ ಮುಂದೆ ಬಂದರು. ಆಗ ಇನ್ನೊಂದು ಸೈನ್ಯವು ಹಿಂದಿನಿಂದ ಬರುತ್ತಿದ್ದುದು ಕಾಣತೊಡಗಿತು. ಆ ಸೈನ್ಯದಲ್ಲಿಯ ಎಲ್ಲರೂ ಮರಾಠಾ ಹಾಗೂ ರಜಪೂತರಾಗಿದ್ದರು. ಮರಾಠಾ ಹಾಗೂ ರಜಪೂತರು ಮಹಾ ಪರಾಕ್ರಮಿಗಳಾಗಿದ್ದು ಯುದ್ಧದಲ್ಲಿ ಇನ್ನೊಬ್ಬರ ಸಹಾಯವನ್ನು ಇಚ್ಛಿಸುತ್ತಿರಲಿಲ್ಲ. ಆ ಮರಾಠಾ ಹಾಗೂ ಹಿಂದುಗಳ ಸೈನ್ಯದಲ್ಲಿಯ ಪ್ರತಿಯೊಬ್ಬನೂ ತನ್ನನ್ನು ಅರ್ಜುನನಂತೆ, ಲಕ್ಷ್ಮಣನಂತೆ, ತಿಳಿಯುತ್ತಿದ್ದನು. ಆ ಗುಂಪಿನಲ್ಲಿಯ ಸರದಾರರು ಬಹುತೇಕ ಪಾಂಚಹಜಾರಿ ಮತ್ತು ಸಹಾಹಜಾರಿ ಪದವಿಯಲ್ಲೆ ಇದ್ದವರಾಗಿದ್ದರು (ಐದು/ಆರು ಸಾವಿರ ಕುದುರೆಗಳ ಸರದಾರರು) ಅವರುಗಳಲ್ಲಿ ಇಬ್ಬರು ಹೆಸರಾಂತ ಸರದಾರರಾಗಿದ್ದರು. ಒಬ್ಬನ ಹೆಸರು ಜಾಧವರಾವ ಎಂದು ಇನ್ನೊಬ್ಬ ಕೇಸರಿಸಿಂಗ, ಇಬ್ಬರೂ ಪರಾಕ್ರಮಿಗಳಾಗಿದ್ದರು. ಜಯಸಿಂಗನ ಸೈನ್ಯದಲ್ಲಿಯೆ ಇವರಿಬ್ಬರು ಹೆಸರಾಂತ ಸರದಾರರಾಗಿದ್ದರು. ಷರ್ಜಾಖಾನ ಮತ್ತು ಖವಾಸಖಾನರು ಈ ಸಿಂಹದಂಥ, ರುಸ್ತುಮನಂಥ ಶತ್ರುಗಳ ಎದುರಿಗೆ ನಿಂತಿದ್ದರು. ಅವರು ತೋಫುಗಳನ್ನು ಹಾರಿಸುತ್ತಿದ್ದಂತೆ ಇವರು ಕೂಡ ಇದ್ದಷ್ಟು ಮದ್ದುಗುಂಡನ್ನೆಲ್ಲ ಒಮ್ಮೆಲೆ ಹಾರಿಸಿದರು. ಒಂದು ಕ್ಷಣದಲ್ಲಿ ಮಹಾಪ್ರಳಯವನ್ನೇ ಸೃಷ್ಟಿಸಿದರು. ತೋಫುಗಳ, ಮದ್ದುಗುಂಡುಗಳ ಹೊಗೆಯಿಂದ ಭೂವ್ಯೋಮಗಳು ಒಂದಾದುವು. ಆ ರಣಭೂಮಿಯು ನಿಬಿಡ ಅಂಧಃಕಾರದಲ್ಲಿ ಮುಳುಗಿ ರಾತ್ರಿಯಂತೆ ಕಗ್ಗತ್ತಲೆಯಾಯಿತು. ಆ ಕತ್ತಲೆಯಲ್ಲಿ ಅಣ್ಣತಮ್ಮಂದಿರು, ಮಿತ್ರರು ಕೂಡ ಒಬ್ಬರನ್ನೊಬ್ಬರು ಗುರುತಿಸದಂತಾದರು. ಅಂಥ ಹೊಗೆಯ ಗದ್ದಲದಲ್ಲಿ ರಣಭೂಮಿಯಲ್ಲಿ ವ್ಯಾಘ್ರನಂತೆ. ಪರಾಕ್ರಮ ತೋರಿಸುವ ಷರ್ಜಾಖಾನ ಮತ್ತು ಖವಾಸಖಾನರು ಶೂರತ್ವರೂಪೀ ಸಮುದ್ರದಲ್ಲಿ ತಂತಮ್ಮ ಸರದಾರ ಮಂಡಳಿ ಸಹಿತವಾಗಿ, ತಮ್ಮ ಕುದುರೆಗಳನ್ನು ಜಗಿಸಿ, ಕಣ್ಣುರೆಪ್ಪೆ ಬಡಿಯುವಷ್ಟರಲ್ಲಿ ತೋಫುಗಳಿಗೆ ಮುತ್ತಿಗೆ ಹಾಕಿ ಕೈವಶಮಾಡಿಕೊಂಡು ಬಿಟ್ಟರು. ತೋಫಖಾನೆಯನ್ನು ಹಿಂದೆ ಬಿಟ್ಟು ಕೈಯಲ್ಲಿ ವಿದ್ಯುದಲಗಿನ

ಅತಿ ಸೂಕ್ಷ್ಮಧಾರೆಯ ಕತ್ತಿಗಳನ್ನು ಹಿಡಿದು ಶತ್ರುಗಳನ್ನು ಎದುರಿಸುತ್ತ ನಿಂತರು. ಉಭಯ ಕಡೆಗಳಲ್ಲೂ ಆ ರಣಭೂಮಿಯಲ್ಲಿ ಘನ ಘೋರ ಕಾಳಗ ನಡೆಯಿತು. ಒಬ್ಬರೊಬ್ಬರಿಗೆ ಸರಿದೊರೆಯಾಗಿ ನಿಂತು ಯುದ್ಧ ಮಾಡಿದರು.

'ಪೇಜನ' ಎಂಬ ಮಹಾಶೂರ ಬಾದಶಹನಾಗಿ ಹೋದನು. ಆತನ ಯುದ್ಧವಾಗಲೀ ಮತ್ತು ಅರ್ಜುನ ಎಂಬವನು ಹಿಂದೂ ಜನರಲ್ಲಿ ಆಗಿ ಹೋಗಿದ್ದಾನೆ. ಆತ ಬಹು ದಾರುಣ ಯುದ್ಧವನ್ನು ಮಾಡಿದವನು. ಆತನಂತೆ ಯಾರೂ ಯುದ್ಧವನ್ನೇ ಮಾಡಿಲ್ಲ, ಆ ಅರ್ಜುನ ಮತ್ತು ಪೇಜನ ಬಾದಶಹರ ಯುದ್ಧಗಳು ಈ ಯುದ್ಧದಿಂದ ಕಳಾಹೀನವಾದುವು. ಅವರ ಯುದ್ಧಗಳು ಈ ಯುದ್ಧದ ಎದುರು ಏನೂ ಅಲ್ಲ - ಎಂಬಂತೆ ಯದ್ಧವಾಯಿತು. ಉಭಯ ಪಕ್ಷಗಳಲ್ಲಿಯ ಎಲ್ಲರ ಕತ್ತಿ, ಕಟ್ಯಾರಗಳಿಗೆ ರಕ್ತ ಸ್ಪರ್ಶವಾಯಿತು. ಒಂದೂ ಶುದ್ಧವಾಗಿ ಉಳಿಯಲಿಲ್ಲ. ಕುದುರೆ ಹಾಗೂ ಕುದರೆಯ ಮೇಲಿನ ಸವಾರ ಇಬ್ಬರೂ ರಕ್ತದಿಂದ ಕೆಂಪಗಾದರು. ರಕ್ತವರ್ಣದಿಂದ ವಿಜೃಂಭಿಸಿದರು. ಭಲ್ಲೆ ಹೊಡೆಯುವ ಮರಾಠಾ ಮಂಡಳಿ ಮತ್ತು ರಜಪೂತ ಜನರು ಶತ್ರುವಧೆ ಮಾಡುವ ವಿಷಯದಲ್ಲಿ ಶೌರ್ಯ ಧ್ವಜವನ್ನೇ ನಿಲ್ಲಿಸುತ್ತಿದ್ದರು. ತಮ್ಮಂಥ ಪರಾಕ್ರಮಿ ಪುರುಷರು ಯಾರೂ ಇಲ್ಲವೆಂದೇ ತಿಳಿಯುತ್ತಿದ್ದರು. ಅವರು ಯುದ್ಧ ಪರಾಕ್ರಮ ತೋರಿಸುವಲ್ಲಿ ಕೂದಲೆಳೆಯಷ್ಟು ಕೂಡ ಅಂತರ ಮಾಡುತ್ತಿರಲಿಲ್ಲ. ಯುದ್ಧ ವಿಷಯದಲ್ಲಿ ಅತಿ ಪ್ರಯತ್ನ ಮಾಡುತ್ತ ಮತ್ತು ಅತ್ಯಂತ ಪರಿಶ್ರಮದಿಂದ ತಮ್ಮ ಪರಾಕ್ರಮವನ್ನು ಮೆರೆದರು. ಆದರೆ ಅಲ್ಲಾನ ಕೃಪೆ ಮತ್ತು ಬಾದಶಹರ ಸಹಾಯ ಆದಿಲಶಹನ ಕಡೆಗಿತ್ತು. ಆದ್ದರಿಂದ ಆದಿಲಶಾಹನ ಕಡೆಯ ಶೂರ ಮಂಡಳಿಯು ಮತ್ತು ಬಾದಶಹನ ಉಪ್ಪನ್ನು ತಿಂದು ಬೆಳೆದ ವಿಶ್ವಾಸಿಕ ಜನರು ಆ ಭಯಂಕರ ರಣಭೂಮಿಯಲ್ಲಿ ಅತ್ಯಂತ ಪರಾಕ್ರಮದಿಂದ ಹೋರಾಡಿ ಶತ್ರುವನ್ನು ಹಣ್ಣು ಮಾಡಿ ತಮ್ಮ ಪ್ರಾಬಲ್ಯವನ್ನು ಮೆರೆದರು. ರಜಪೂತ ಮತ್ತು ಮರಾಠ ಜನರ ಅನೇಕ ಹೆಸರಾಂತ ಸರದಾರರು ಕತ್ತಿಯ ಗಾಯದಿಂದ ಕುದುರೆಯ ಜೀನದ ಆಧಾರ ತಪ್ಪಿ ಭೂಮಿಗೆ ಬಿದ್ದು ಹೊರಳಾಡಿದರು. ಅದರಂತೆ ಮಹಾ ಶೂರ, ಹೆಸರಾಂತ ಜಾಧವರಾವ್ ಮತ್ತು ಕೇಶರಸಿಂಗರು ಆದಿಲಶಹನ ಕಡೆಯ ಶೂರರ ಕತ್ತಿಗಳ ಗಾಯದಿಂದ ಮರಣಹೊಂದಿದರು.

ಷರ್ಜಾಖಾನ ಮತ್ತು ಖವಾಸಖಾನ ಉಭಯತರು ರಾಜ್ಯದ ಕಲ್ಯಾಣವನ್ನೆ ಬಯಸುವವರು. ಅವರ ಮನೋರಥವು ಈಡೇರಿತು. ಬಹುದೊಡ್ಡ ವಿಜಯಸಾಧಿಸಿ ಅತ್ಯಂತ ಸಂತೋಷದಿಂದ ತಮ್ಮ ಬಿಡಾರಗಳಿಗೆ ಬಂದರು. ಇದು ಗೊತ್ತಾದನಂತರ ರಾಜಾ ಜಯಸಿಂಗ ಹಾಗೂ ಆತನ ಸೈನ್ಯವು ಅತ್ಯಂತ ಚಿಂತೆಯಲ್ಲಿ ಬಿದ್ದುವು. ಜಯಸಿಂಗನಿಗೂ ಮತ್ತು ಆತನ ಸೈನ್ಯಕ್ಕೂ ಎಷ್ಟೊಂದು ಚಿಂತೆಯಾಯಿತೆಂಬುದನ್ನು ಸವಿಸ್ತಾರವಾಗಿ ಬರೆಯಲು ಸಾಧ್ಯವಿಲ್ಲ. ಯುದ್ಧ ಸುದ್ದಿಗಳ ಗುಪ್ತಚಾರರು ಪ್ರತಿ ಕ್ಷಣದ ವಿಷಯಗಳನ್ನು ತಕ್ಷಣ ಅಲೀ ಆದಿಲಶಹನಿಗೆ ತಿಳಿಸುತ್ತಿದ್ದರು. ಅವುಗಳಲ್ಲಿ ಈ ವಿಜಯದ ಸುದ್ದಿಯು ಆದಿಲಶಹನಿಗೆ ತಿಳಿಯಿತು. ಅರಬ್ಬೀ ವಾಕ್ಯದಲ್ಲಿ ಹೇಳಿದಂತೆ 'ಅಲ್ಲಾ ಬಯಸಿದರೆ ರಾಜ್ಯವನ್ನು ಕೊಡುತ್ತಾನೆ. ಬೇಕೆಂದರೆ ಕಸಿದುಕೊಳ್ಳುತ್ತಾನೆ. ಮತ್ತು ಆತ ಬಯಸಿದರೆ ಯೋಗ್ಯತೆಗೂ ಏರಿಸುತ್ತಾನೆ. ಬೇಡೆಂದರೆ ಆತನ ಮರ್ಯಾದೆಯನ್ನೂ ಕಳೆಯುತ್ತಾನೆ" ಅಂಥ ಅಲ್ಲಾನನ್ನು ಸ್ತುತಿಸುತ್ತ ಅಲೀ ಆದಿಲಶಹನು ಭೂಮಿಯ ಮೇಲೆ ಮಸ್ತಕವನ್ನಿಟ್ಟು ಅವನಿಗೆ ನಮಸ್ಕಾರಮಾಡಿ ಅತ್ಯಂತ ಸಂತೋಷಪಟ್ಟನು.

## ೪೬. ಬಹಲೋಲಖಾನ ಮತ್ತು ಬೇರೆ ಅನೇಕ ಅಮೀರಜನರು ಜಯಸಿಂಗನ ಸೈನ್ಯದೊಂದಿಗೆ ಯುದ್ಧ ಮಾಡಿದ್ದು :

ಈ ಸಮಯದಲ್ಲಿ ರಾಜಾ ಜಯಸಿಂಗನು ತನ್ನ ಮನೋರಥ ಪೂರ್ಣವಾಗದೆ ಆದಿಲಶಾಹೀ ಸರಹದ್ದಿನಿಂದ ತನ್ನ ಸರಹದ್ದಿಗೆ ತಿರುಗಿ ಹೋಗಿ ಅವಕಾಶಕ್ಕಾಗಿ ಮಾರ್ಗ ಪ್ರತೀಕ್ಷೆಯನ್ನು ಮಾಡುತ್ತ ಕುಳಿತಿದ್ದನು. ಆದರೆ ಆತನ ಇಚ್ಛೆ ಪೂರ್ತಿಯಾಗುತ್ತಿರಲಿಲ್ಲ. ಆದ್ದರಿಂದ ಅತಿ ಖಿನ್ನತೆಯಿಂದ ಉದಾಸೀನನಾಗಿ ದಿನಗಳನ್ನು ಕಳೆಯುತ್ತಿದ್ದನು. ಒಂದು ದಿನ ಆದಿಲಶಾಹ ಬಾದಶಹನ ಕಡೆಯ ಶೂರ ಮಂಡಳಿಯು ತಂತಮ್ಮಲ್ಲಿ ಯುಕ್ತಿಯನ್ನು ಮಾಡಿ ಮಮಲಕತಮದಾರನಿಗೆ ತಮ್ಮ ಯುಕ್ತಿಯನ್ನು ತಿಳಿಸಿದರು. 'ಜಯಸಿಂಗನು ಅಜಗರ ಹಾವಿನಂತೆ ತಮ್ಮ ಸರಹದ್ದಿನಿಂದ ಹೋಗಿ ಬಿದ್ದುಕೊಂಡು ನಮ್ಮ ಜನರನ್ನು ಸುಮ್ಮನೆ ಗಾಬರಿಯಲ್ಲಿ ಕೆಡವಿದ್ದಾನೆ. ಯುದ್ಧಕ್ಕೂ ನಿಲ್ಲುತ್ತಿಲ್ಲ ತನ್ನ ರಾಜ್ಯಕ್ಕೂ ಹೊರಟುಹೋಗಲೊಲ್ಲ. ಇನ್ನು ನಾವು ಎಷ್ಟು ದಿನವೆಂದು ದಾರಿ ನೋಡಬೇಕು? ದೈವದ ಕೃಪೆಯಿಂದ ನಮಗೆ ಹೀಗೆ ಅನಿಸುತ್ತಿದೆ ಫಾರ್ಸೀ ಬೈತದ ಅರ್ಥದಂತೆ, 'ಒಂದು ವೇಳೆ ಆತ ನಿನ್ನೆಡೆ ಬರದಿದ್ದರೆ, ಒಂದು ಸಲ ನೀನೇ ಅವನತ್ತ ಹೋಗು. ಏನೊಂದು ಸಂಶಯವನ್ನೂ ಮನದಲ್ಲಿ ತರಬೇಡ. ಅಲ್ಲಾನ ಕೃಪೆಯಿಂದ ಯಶಸ್ವಿಯಾಗುವುದನ್ನು ನೋಡು' ಎಂದರು. ಮಮಲಕತಮದಾರನಿಗೆ ಅವರ ಯುಕ್ತಿ ಸರಿ ಎನಿಸಿತು. ಯುದ್ಧ ಸಿದ್ಧತೆಯನ್ನು ಮಾಡಿದನು. ತನ್ನ ಸರದಾರ ಮಂಡಳಿಗೂ ಸೈನಿಕರಿಗೂ ಸಾಕಷ್ಟು ಇನಾಮುಗಳನ್ನು ಕೊಟ್ಟನು. ಯುದ್ಧ ಸಾಮಗ್ರಿಗಳನ್ನೂ ಶಿಪಾಯಿಗಳಿಗೆ ಕೊಟ್ಟನು.

ನಿರ್ಧರಿಸಿದ ದಿನದಂದು ಆದಿಲಶಾಹಿ ಮತ್ತು ಕುತುಬಶಾಹಿ ಸೈನ್ಯವು ಶತ್ರುವಿನ ಮೇಲೆ ಏರಿ ಹೊರಟಿತು. ಷರ್ಜಾಖಾನ ಮತ್ತು ಖವಾಸಖಾನ ಉಭಯತರು ಪರಸ್ಪರರಲ್ಲಿ ಸಹೋದರ ಭಾವನೆಯನ್ನು ಹೊಂದಿದ್ದರು. ಇಬ್ಬರೂ ಖಾಸಾ ಅಣ್ಣ-ತಮಂದಿರಂತೆ ನಡೆದುಕೊಳ್ಳುತ್ತಿದ್ದರು. ಇವರು ತಮ್ಮ ಸೈನ್ಯ ಹಾಗೂ ಉಳಿದ ಅನೇಕ ಸರದಾರ ಮಂಡಳಿಯೊಂದಿಗೆ ಬೇರೊಂದು ದಾರಿಯಿಂದ ಹೊರಟರು. ಬಹಲೋಲಖಾನನು ಉಳಿದ ಸೈನ್ಯವನ್ನು ತೆಗೆದುಕೊಂಡು ಒಂದು ದಾರಿಯಿಂದ ಹೊರಟನು. ನೇಕನಾಮಖಾನನೂ ಕೂಡ ತನ್ನ ಗುಂಪಿನೊಂದಿಗೆ ಶತ್ರುವನ್ನು ಶಿಕ್ಷಿಸಲು ಹೊರಟನು. ಮೊದಲು ಬಹಲೋಲಖಾನನು ಸೈನ್ಯದ ಮಧ್ಯಭಾಗದಲ್ಲಿದ್ದನು. ಆ ಸೈನ್ಯದಿಂದ ಮುಂದೆ ಸರಿದು ಶತ್ರುವಿನ ಮೇಲೆ ಏರಿ ಹೋದನು. ಪೂರ್ಣ ಧೈರ್ಯದೊಂದಿಗೆ ಯುದ್ಧ ಪ್ರಾರಂಭಿಸಿದನು. ಯುದ್ಧ ಪ್ರಳಯದ ಅಗ್ನಿಯನ್ನು ಹೊತ್ತಿಸಿದನು. ಆಗ ಶತ್ರುವಾದ ಜಯಸಿಂಗನು ಬಹಲೋಲಖಾನನ ಯುದ್ಧವನ್ನು ಪೂರ್ಣಧೈರ್ಯದಿಂದ ಎದುರಿಸಲು ಸಿದ್ಧನಾದನು. ಆದಿಲಶಹನ ಕಡೆಯ ದಕ್ಷಿಣದ ಜನರು ಮತ್ತು ದಿಲ್ಲಿಕಡೆಯ ಹಿಂದುಸ್ತಾನಿ ಜನರು ತಂತಮ್ಮ ಧಣಿಗಳ ಹೆಸರು ಮತ್ತು ಕೀರ್ತಿಯನ್ನು ರಕ್ಷಿಸಲು ಬಹಳ ಶ್ರಮವಹಿಸಿ ಯತ್ನ ಮಾಡಹತ್ತಿದರು. ಉಭಯ ಪಕ್ಷಗಳ ಶೂರರು ಯುದ್ಧ ಪರಾಕ್ರಮ ಮೆರೆದರು. ಕೊನೆಯಲ್ಲಿ ಬಹಾದ್ದೂರನಾದ ಬಹಲೋಲಖಾನನು ತನ್ನ ತುಸುವೇ ಗುಂಪಿನೊಂದಿಗೆ ಶತ್ರುವಿನ ಮೇಲೆ ರುಸ್ತುಮನಂತೆ ಹಲ್ಲೆಮಾಡಿ ಅರ್ಧ ಕೊಂದನು. ಬಹಲೋಲಖಾನನ ಹತ್ತಿರ ತುಸುವೆ ಸೈನ್ಯವಿದೆಯೆಂದು ತಿಳಿದ ಶತ್ರುವಿನ ಕಡೆಯ ಬಹು ಗುಂಪಿನ ಸೈನ್ಯ ಪ್ರಬಲವಾಗಲು ಹವಣಿಸಿತು. ಬಹಲೋಲಖಾನನು ಹುಲಿಯಂತೆ ಸಿಂಹದಂತೆ ಓಡಿ, ಹಲ್ಲೆಮಾಡಿ ಶತ್ರು ಸೈನ್ಯವನ್ನು ಹಿಂದೆ ಬಹು ದೂರ ಸರಿಸುತ್ತಿದ್ದನು. ಹೀಗೆ ಮೇಲಿಂದ ಮೇಲೆ

ಆದಿಲಶಾಹಿ ಸೈನ್ಯದಿಂದ ಹೊಡೆತ ತಿಂದ ಶತ್ರುವಿನ ಸೈನ್ಯವು ದಣಿದು, ಬೇಸರಪಟ್ಟು ಯುದ್ಧವನ್ನು ಎದುರಿಸದೆ, ಸುಮ್ಮನೆ ಕುಳಿತುಬಿಟ್ಟಿತು. ಬಹಲೋಲಖಾನನು ಯಶಸ್ವಿಯಾಗಿ ತಿರುಗಿ ಬಂದನು.

ಷರ್ಜಾಖಾನ ಮತ್ತು ಖವಾಸಖಾನರು ಯಾವ ದಾರಿಯಿಂದ ಹೋಗಿದ್ದರೋ, ಅವರು ತಮ್ಮ ಖಾಸಾ ಸೈನ್ಯದ ಮೇಲೆ ದೃಷ್ಟಿಯನ್ನಿಟ್ಟು ಎದುರಿಸಲು ಸಿದ್ಧರಾಗಿ ಯುದ್ಧ ಪ್ರಾರಂಭಕ್ಕಾಗಿ ಕಾಯುತ್ತಿದ್ದರು. ಶತ್ರುವು ರಣಭೂಮಿಯಲ್ಲಿ ಬರುವ ದಾರಿ ಕಾಯುತ್ತಿದ್ದರು. ಶತ್ರುವಾದರೋ ತನ್ನ ಸ್ಥಳದಿಂದ ಕದಲುತ್ತಲೇ ಇರಲಿಲ್ಲ, ದಾರಿ ಕಾಯ್ದು-ಕಾಯ್ದು ದಣಿದರು. ಕೊನೆಗೆ ಷರ್ಜಾಖಾನ ಮತ್ತು ಖವಾಸಖಾನರು ತಂತಮ್ಮಲ್ಲಿ ಮಾತನಾಡಿಕೊಳ್ಳುತ್ತ, "ಶತ್ರುವಾದರೋ ಸ್ಥಳದಿಂದ ಕದಲುತ್ತಲಿಲ್ಲ, ಆದ್ದರಿಂದ ನಾವೇ ಅವನ ಮೇಲೆ ಏರಿ ಹೋಗೋಣ. ಬಲಾತ್ಕಾರದಿಂದ ಶತ್ರುವನ್ನು ರಣಭೂಮಿಗೆ ಕರೆತಂದು, ಇಂದು ಯುದ್ಧ ಮಾಡದೆ ಹೋದರೆ ನಮಗೆ ಬೇರೆ ದಾರಿ ಇಲ್ಲ. ಇಲ್ಲವಾದಲ್ಲಿ ಯುದ್ಧ ಮಾಡದೆ ರಿಕ್ತ ಹಸ್ತದಿಂದ ಹಾಗೆಯೇ ತಿರುಗಿ ಹೋಗಬೇಕಾಗುತ್ತದೆ. ನಾವಾದರೋ ಇಂದು ಯುದ್ಧ ಮಾಡದೆ ಹಾಗೆಯೇ ತಿರುಗಿ ಹೋಗುವುದಿಲ್ಲವೆಂದು ನಿರ್ಧರಿಸಿದ್ದೇವೆ" ಎಂದರು. ಅನಂತರ ಕುದುರೆ ಸವಾರರ ಜೊತೆಗೆ ಓಡುತ್ತ ಶತ್ರುವಿನ ತೀರ ಹತ್ತಿರ ಬಂದು ಮುಟ್ಟಿದರು. ಹೀಗೆ ಮಾಡಿದಾಗಲೂ ಜಯಸಿಂಗನು ತನ್ನ ಸ್ಥಳದಿಂದ ಏಳಲಿಲ್ಲ. ಕಿಂಚಿತ್ತೂ ಕದಲಲಿಲ್ಲ. ನಿರುಪಾಯರಾಗಿ ಉಭಯತರು ಮಾತನಾಡಿಕೊಳ್ಳುತ್ತ, "ಶತ್ರುವು ಸ್ಥಳದಲ್ಲೇ ಬೇರು ಬಿಟ್ಟಿದ್ದಾನೆ. ಯುದ್ಧಕ್ಕೆ ಏಳುತ್ತಲೇ ಇಲ್ಲ. ಭೂಮಿಯ ಮೇಲೆ ಹಟ ಹಿಡಿದು ಕುಳಿತ ಮನುಷ್ಯನ ಮೇಲೆ ಕತ್ತಿ ಹಿರಿದು ಹೊರಡುವುದೆಂದರೆ, ಯುದ್ಧ ಪರಾಕ್ರಮರಿಗೆ, ಮುಟ್ಟಾದ ಹೆಣ್ಣಿನ ಸಂಗ ಮಾಡಿದಂತೆ ನಿಷಿದ್ಧವಾಗಿದೆ ಅದು ಶೂರರಿಗೆ ಶೋಭಿಸುವುದಿಲ್ಲ" ಎಂಬುದಾಗಿ ಮಾತನಾಡಿಕೊಂಡು ಯುದ್ಧಮಾಡದೆ, ಕತ್ತಿ ಹಿರಿಯದೆ ತಮ್ಮ ಬಿಡಾರಗಳಿಗೆ ಹಿಂತಿರುಗಿದರು.

ತಿರುಗಿ ಹೋಗುವಾಗ ಬಯಲು ಪ್ರದೇಶ ಸಿಕ್ಕಾಗ ಇಬ್ಬರೂ ಸರದಾರರು ಜೊತೆಯಾಗಿಯೇ ನಡೆಯುತ್ತಿದ್ದರು ತಗ್ಗು ದಿನ್ನೆಗಳು ಗಿಡಗಂಟಿಗಳು, ದಟ್ಟ ಅರಣ್ಯ ಬಂದಾಗ ಇಬ್ಬರ ದಾರಿ ಬೇರೆಯಾಗುತ್ತಿತ್ತು. ಅನಿತರಲ್ಲಿ ಒಂದು ದೊಡ್ಡ ಅವಘಡದ ದಾರಿ ಬಂದಿತು. ಆಗ ಖವಾಸಖಾನನು ತನ್ನ ಸೈನ್ಯವನ್ನು ಒಂದು ದಾರಿಯಿಂದ ನಡೆಸಿದನು. ಷರ್ಜಾಖಾನನು ಇನ್ನೊಂದು ದಾರಿಯನ್ನು ಹಿಡಿದನು. ಇಷ್ಟರಲ್ಲಿ ಒಮ್ಮಿಂದೊಮ್ಮೆಲೆ ಒಂದು ಸಣ್ಣ ಗುಂಪು, ಶತ್ರುವಿನ ಸೈನ್ಯದಿಂದ ಸಿಡಿದು ಯಾರ ಹತ್ತಿರವೋ ಹೊರಟಂತಿತ್ತು.

ಷರ್ಜಾಖಾನನ ಕಿರಿಯ ಮಗ ಸೈಯದ ಹಬೀಬ ಎಂಬವನಿದ್ದನು. ಆ ಸೈಯದ ಹಬೀಬನ ದೃಷ್ಟಿ ಆ ಗುಂಪಿನತ್ತ ಹೋಯಿತು. ಅಂದು ಆತನು ತುಂಬ ಆಸ್ಥೆಯಿಂದ ಯುದ್ಧ ನೋಡಬೇಕೆಂದು ಷರ್ಜಾಖಾನನೊಂದಿಗೆ ಹೊರಟಿದ್ದನು. ಸಿಂಹದ ಮರಿಯೇ ಆಗಿದ್ದನು. ಆತನನ್ನು 'ಶೇರಬಚ್ಚಾ' (ಸಿಂಹದ ಮರಿ) ಎಂದೇ ಕರೆಯುತ್ತಿದ್ದರು. ಚಿಕ್ಕವನಾಗಿದ್ದರೂ ಆತನಿಗೆ ಕತ್ತಿವರಸೆಯಲ್ಲಿ ತುಂಬ ಆಸ್ಥೆ ಇತ್ತು. ಆ ಗುಂಪನ್ನು ಕಂಡತಕ್ಷಣ ಅದರ ಮೇಲೆ ಏರಿ ಹೋಗಬೇಕೆಂದು ಬಯಕೆಯಾಯಿತು. ಮನದಲ್ಲಿ ಬರುತ್ತಿದ್ದಂತೆಯೇ ತಾನೊಬ್ಬನೇ ಆ ಗುಂಪಿನತ್ತ ಓಡಿ ತನ್ನ ಮನದ ಇಚ್ಛೆಯನ್ನು ಪೂರ್ತಿಗೊಳಿಸಿಕೊಳ್ಳಬೇಕು ಮತ್ತು ತನ್ನ ಕತ್ತಿಯು ಶೂರರ ರಕ್ತ ಪ್ರಾಶನ ಮಾಡಲು ಬಾಯಾರಿಕೆಯಿಂದ ಹಾತೊರೆಯುತ್ತಿದೆ. ಅದರ ಬಾಯಾರಿಕೆಯನ್ನು ಶೂರರ ರಕ್ತ ಕುಡಿಸಿ ತೃಪ್ತಿ ಮಾಡಬೇಕೆಂದುಕೊಂಡು ಯಾರಿಗೂ ತಿಳಿಸದೆ, ಒಬ್ಬಂಟಿಗನಾಗಿ ಕುದುರೆಯನ್ನು ಓಡಿಸಿದನು. ಆ ಪಿಶಾಚಿಯಂಥ ಗುಂಪಿನ ಮೇಲೆ ಬಿದ್ದನು. ಆಗ ಆ ಗುಂಪಿನಲ್ಲಿಯ ಎಡ ಬಲದಲ್ಲಿ ಅನೇಕ ಜನ ಕಾಲ್ಬಳದವರು ಮತ್ತು ಸ್ವಾರರು ಕೊಲೆಯಾದರು.

ಅಷ್ಟರಲ್ಲಿ ಆ ಗುಂಪು ಷರ್ಜಾಖಾನನ ಮಗನ ಸುತ್ತಲೂ ಮುತ್ತಿಗೆ ಹಾಕಿತು. ಚಂದ್ರನ ಸುತ್ತಲೂ ಕಂಕಣ ಬಿದ್ದಂತೆ ಮಧ್ಯಭಾಗದಲ್ಲಿ ಸೈಯದ ಹಬೀಬನನ್ನು ಸುತ್ತುವರಿದರು ಇಂಥ ಅವಸ್ಥೆಯಲ್ಲಿ ಅವನು ಕೂಗು ಹಾಕಿದ ಕೂಗು ಷರ್ಜಾಖಾನನ ಕಿವಿಗೆ ತಲುಪಿತು. ಆ ದನಿಯನ್ನು ಕೇಳಿದ ಷರ್ಜಾಖಾನನು ಗಾಬರಿಯಾಗಿ ತನ್ನ ಮಗ ಶತ್ರುವಿನ ಕೈಗೆ ಸಿಕ್ಕಿ ಬಿಟ್ಟಿದ್ದಾನೆ ಎಂದು ತಿಳಿದನು. ದನಿಯ ದಾರಿಯನ್ನು ಹಿಡಿದು ತನ್ನ ಕುದುರೆಯನ್ನು ಅತ್ತ ಓಡಿಸಿದನು. ರೆಪ್ಪೆ ಬಡಿಯುವಷ್ಟರಲ್ಲಿ ಶತ್ರುವಿನ ಗುಂಪಿನ ಮೇಲೆ ಹಲ್ಲೆಮಾಡಿ ತನ್ನ ಮಗನ ಸುತ್ತಲೂ ಹಾಕಿದ ಮುತ್ತಿಗೆಯನ್ನು ಮುರಿದನು. ಸಿಂಹವನ್ನು ನೋಡಿದ ಕುರಿಗಳು ಓಡಿ ಹೋಗುವಂತೆ, ಆ ಜನರನ್ನು ಷರ್ಜಾಖಾನನು ಓಡಿಸಿದನು. ಮಗನನ್ನು ಸಂಕಟದಿಂದ ಮುಕ್ತಮಾಡಿ ಜೊತೆಗೆ ಕರೆದುಕೊಂಡು ತನ್ನ ಸೈನ್ಯದತ್ತ ಮರಳಿದನು. ಮನಸ್ಸು ತುಂಬ ಸಂತೋಷಗೊಂಡಿತ್ತು. ಆ ದಿನ ಕಲ್ಯಾಣಪ್ರದವಾಗಿತ್ತು. ಆದರೆ ಕಾಲವು ಬಹಳ ನಿರ್ದಯವಾಗಿದೆ. ಕ್ಷಣದಲ್ಲಿ ಏನಾದೀತೆಂಬುದನ್ನು ತಿಳಿಯದೇ ಭ್ರಾಂತತನದಲ್ಲಿ ಸಂತೋಷಪಟ್ಟಿದ್ದನು. ಕಾಲಚಕ್ರವು ಈ ಗಳಿಗೆಯಲ್ಲಿ ಕ್ಷಮಿಸಿದೆ. ಮತ್ತೆ ಮರು ಗಳಿಗೆಯಲ್ಲಿ ಏನು ಮಾಡುತ್ತದೆ ಎಂಬುದು ತಿಳಿಯಲಿಲ್ಲ.

### ೪೭. *ದೈವೇಚ್ಛೆಯಂತೆ ಷರ್ಜಾಖಾನನು ಮರಣ ಹೊಂದಿದ್ದು :*

ಕಾಲಚಕ್ರವು ರಹಸ್ಯವಾಗಿ ಪರದೆಯ ಹಿಂದೆ ಅನೇಕ ಪ್ರಕಾರದ ಆಟಗಳನ್ನು ಹೂಡಿರುತ್ತದೆ. ಅದನ್ನು ಯಾರೂ ತಿಳಿಯಲು ಸಾಧ್ಯವಿಲ್ಲ. ದೊಡ್ಡ ದೊಡ್ಡ ಬುದ್ಧಿವಂತರು ಕೂಡ ಕಾಲಚಕ್ರದ ಆಟವನ್ನು ಮತ್ತು ಅದರ ರಹಸ್ಯವನ್ನು ತರ್ಕಿಸಿ ಗುರುತಿಸುವಲ್ಲಿ ದಂಗಾಗಿ ಹೋಗಿದ್ದಾರೆ. ಒಂದು ಕ್ಷಣದಲ್ಲಿ ಆನಂದಕ್ಕೆ ಚಿಂತೆಯ ಜೊತೆಮಾಡುವ ಕೆಲಸ ಕಾಲಚಕ್ರಕ್ಕೆ ಬಹು ಸುಲಭವಾಗಿದೆ. ರೆಪ್ಪೆ ಬಡಿಯುವಷ್ಟರಲ್ಲಿ ಮಹಾ ಸಂತೋಷವನ್ನು ಆಕುಂಚಿತಗೊಳಿಸಿ, ಚಿಂತೆಯ ಗಂಟನ್ನು ಹಾಕುವುದು ಕಾಲಚಕ್ರಕ್ಕೆ ಅತಿ ಸುಲಭವಾದ ಕೆಲಸವಾಗಿದೆ. ಇಷ್ಟೆಲ್ಲ ಸವಿಸ್ತಾರವಾಗಿ ಮತ್ತು ವರ್ಣನೆ ಮಾಡುವ ಉದ್ದೇಶವೆಂದರೆ, ಷರ್ಜಾಖಾನನು ಮಹಾಪರಾಕ್ರಮಿ ಇದ್ದರೂ ಒಂದು ಗಳಿಗೆಯಲ್ಲಿ ಮರಣ ಹೊಂದಿದನು ಎಂಬುದರ ಸೂಚನೆಯಾಗಿದೆ. ಆ ವಿಷಯದ ವಿವರ ಹೀಗಿದೆ.

ಶತ್ರುವಿನ ಗುಂಪಿನಲ್ಲಿ ಸಿಕ್ಕಿದ್ದ ತನ್ನ ಮಗನನ್ನು ಬಿಡಿಸಿಕೊಂಡು ತನ್ನ ಸೈನ್ಯವನ್ನು ಸೇರಲು ಹೊರಟಾಗ ದಾರಿಯಲ್ಲಿ ತುಂಬ ಆನಂದಪಟ್ಟನು. ತಾನು, ತನ್ನ ಮಗ ಇಬ್ಬರೂ ಸುರಕ್ಷಿತವಾಗಿ ಪಾರಾದ ಆನಂದದಲ್ಲಿ ದಾರಿಯನ್ನು ಸವೆಸುತ್ತಿದ್ದನು. ಅಷ್ಟರಲ್ಲಿ ಒಮ್ಮೆಲೆ ಕಾರಣವಿಲ್ಲದೆ ಷರ್ಜಾಖಾನನು ಕುದುರೆಯ ಮೇಲಿನಿಂದ ಕೆಳಗೆ ಬಿದ್ದುಬಿಟ್ಟನು. ಹಾಗೆ ಆಗಲು ಕಾರಣವೇನೆಂದು ನೋಡುವಷ್ಟರಲ್ಲೇ ಷರ್ಜಾಖಾನನ ಪ್ರಾಣ ಹಾರಿ ಹೋಗಿತ್ತು. ಎಲ್ಲ ಮಂಡಳಿಯೂ ಒಮ್ಮೆಲೆ ಇದು ಹೀಗೇಕೆ? ಏನಾಯಿತೆಂದು ಆಶ್ಚರ್ಯಪಟ್ಟು ಚಿಂತೆಯಲ್ಲಿ ಬಿದ್ದರು. ಪ್ರತಿಯೊಬ್ಬನ ಮುಖದಿಂದಲೂ ಈ ಶಬ್ದ ಹೊರಬಿತ್ತು - 'ಗಾಯವೂ ಕಾಣಲಿಲ್ಲ ಮತ್ತು ಅವನನ್ನು ಕೊಂದ ಮನುಷ್ಯನೂ ಕಾಣಲಿಲ್ಲ ಮೃತ್ಯು ಹೇಗೆ ಎಲ್ಲಿಂದ ಬಂದಿತು?' ಎಂಬುದಾಗಿ ಎಲ್ಲೆಡೆ ಮಾತನಾಡಿಕೊಂಡರು.

ಅದಕ್ಕೆ ಬುದ್ಧಿವಂತರು ಉತ್ತರ ಕೊಡುತ್ತ -'ಅಲ್ಲಾನ ಕಾರ್ಯಚರಣೆಯಲ್ಲಿ ಆಶ್ಚರ್ಯವೇನೂ ಇಲ್ಲ. ಮತ್ತು ಅದು ಅವಘಡವೂ ಅಲ್ಲ' ಎಂಬುದಾಗಿ ನುಡಿದರು. ಇಂಥ ಆಶ್ಚರ್ಯಪ್ರದ ಕೆಲಸಗಳನ್ನು ಅಲ್ಲಾ ಎಲ್ಲರಮೇಲೂ ಮಾಡುತ್ತಾನೆ. ಯಾಕೆಂದರೆ, ದೈವೇಚ್ಛೆಯನ್ನು ಯಾರೂ ಮುರಿಯಲಾರರು ಮತ್ತು

ಹಿಂದೆ ತೆಗೆದುಕೊಳ್ಳಲೂ ಆಗದು. ಆ ದೈವದ ಆಜ್ಞೆಯಿಂದ ಮನುಷ್ಯನ ಪ್ರಾಣ ಹೋಗಲು ಶಸ್ತ್ರಗಳ ಗಾಯ ಮುಂತಾಗಿ ಏನೊಂದು ಹೇಳಿ ಪ್ರಯೋಜನವಿಲ್ಲ. ದೈವದ ಆಜ್ಞೆಯಾದರೆ ದೊಡ್ಡ ಚಿಂತೆ ಮತ್ತು ದುಃಖಗಳು ಒಂದೇ ಒಂದು ಗಳಿಗೆಯಲ್ಲಿ ಪರಿಹಾರವಾಗಿ ಬಹಳ ಆನಂದ ಪ್ರಾಪ್ತವಾಗುತ್ತದೆ. ಅದರಂತೆ ಬಹಳ ಆನಂದದಲ್ಲಿ ಮತ್ತು ದೊಡ್ಡ ಸುಖದಲ್ಲಿ ಇರುತ್ತಿದ್ದರೆ ಒಂದು ಕ್ಷಣದಲಲ್ಲಿ ಅವು ಇಲ್ಲವಾಗಿ ಅವರನ್ನು ದೇವರು ಕಷ್ಟದಲ್ಲಿ ಬೀಳಿಸುತ್ತಾನೆ. ಆದ್ದರಿಂದ ಯಾವ ರೀತಿಯಿಂದಲೂ ಅಲ್ಲಾನ ಮನೋಗತವನ್ನು ತಿಳಿಯುವುದು ಯಾರಿಗೂ ಸಾಧ್ಯವಿಲ್ಲ. ಆದರೆ ಜ್ಞಾನವಂತ ವ್ಯಕ್ತಿಯು, ಅಂದರೆ ಮಹಾ ಸಾಧುಗಳ ಸೇವೆಯಲ್ಲಿಯೇ ಅವರು ಪ್ರಾಣವನ್ನು ತೆತ್ತಿರುತ್ತಾರೆ. ಯಾಕೆಂದರೆ ಅಲ್ಲಾನ ಸೇವೆಯನ್ನು ಮಾಡಿ ಪೂರ್ಣ ಜ್ಞಾನವನ್ನು ಪಡೆದವರ ಸೇವೆಯಲ್ಲಿ ಜೀವ ಸವೆಸಿ, ಅವರ ಕೃಪೆಯನ್ನು ಸಂಪಾದಿಸುವುದು ದೊಡ್ಡ ಕೆಲಸ. ಆದ್ದರಿಂದ ಅಂಥ ಸಿದ್ಧ ಪುರುಷರಿಗೆ ಮತ್ತು ಅವರ ಸೇವೆ ಮಾಡಿದವರಿಗೆ ಮಾತ್ರ ದೇವರ ಮನೋಗತ, ಮತ್ತು ಅವನ ರಹಸ್ಯಗಳು ತಿಳಿದಿರುತ್ತವೆ. ಕೆಟ್ಟತನದಿಂದ ಮತ್ತು ಬೇಸರದಿಂದ ಮರಣ ಬರುವುದು ಶತ್ರುವಿಗೆ ಸಂತೋಷದ ಕಾರಣವಾಗಿದೆ. ಈಗ ಅಂಥ ಪ್ರಸಂಗವು ಪ್ರಾಪ್ತವಾಗಿದೆ, ಇರಲಿ.

ತಾತ್ಪರ್ಯವೆಂದರ, ಷರ್ಜಾಖಾನನು ಮರಣ ಹೊಂದಿದನು. ಈ ಘಟನೆಯಿಂದ ಶೂರ ಮಂಡಳಿಯ ಮತ್ತು ಪರಾಕ್ರಮೀ ಪುರುಷರ ಮನೆ ಮನೆಗಳಲ್ಲೂ ಚಿಂತೆಯಾಯಿತು. ದೊಡ್ಡ-ದೊಡ್ಡ ಕೀರ್ತಿವಂತರು, ಹೆಸರಾಂತ ವ್ಯಕ್ತಿಗಳ ಮನೆಗಳಲ್ಲಿ ಬಹು ದೊಡ್ಡ ಶೋಕ ಪ್ರಾಪ್ತವಾಯಿತು. ತಮಗೆ ಇನ್ನಾರೂ ಗತಿಯಿಲ್ಲವೆಂದು ಅವರು ಅಳಹತ್ತಿದರು. ಪರಾಕ್ರಮಕ್ಕೆ ವೈಧವ್ಯ ಪ್ರಾಪ್ತವಾಯಿತು. ಶೂರ ಮಂಡಳಿಯು ತಮ್ಮ ಕತ್ತಿಗಳನ್ನು, ಗುರಾಣಿಗಳನ್ನು ಒಂದೆಡೆ ಮೂಲೆಯಲ್ಲಿ ಒಗೆದು ದೊಡ್ಡ ದನಿಯಲ್ಲಿ ಅಳಹತ್ತಿದರು.

ಖವಾಸಖಾನನಿಗೆ ಮರಣದ ಸುದ್ದಿ ತಿಳಿಯುತ್ತಿದ್ದಂತೆ ದೊಡ್ಡ ದನಿಯಲ್ಲಿ ಅಳುತ್ತ ಓಡಿ ಬಂದನು. ಅನಂತರ ಸಾವರಿಸಿಕೊಂಡು ಆತನ ಅಂತ್ಯಕ್ರಿಯೆಗೆ ಸಿದ್ಧಪಡಿಸತೊಡಗಿದನು. ಷರ್ಜಾಖಾನನ ಇಬ್ಬರು ಮಕ್ಕಳಿಗೂ ಸಾಂತ್ವನ ಹೇಳಿದನು. ಈ ಅತ್ಯಂತ ಶೋಕದ ಸುದ್ದಿ ಬಡವರ ಬಂಧು ಆದಿಲಶಹ ಬಾದಶಹನಿಗೂ ತಿಳಿಯಿತು. ಆತನೂ ವಿಶ್ವಾಸಿಕ ನೌಕರನನ್ನು ಕಳೆದುಕೊಂಡ ಬಗ್ಗೆ ಅತ್ಯಂತ ಶೋಕಿಸಿದನು. ತನ್ನೆಲ್ಲ ಐಷಾರಾಮಗಳನ್ನು ಮರೆತನು. ಆತನ ಇಬ್ಬರು ಮಕ್ಕಳಾದ ಸಯ್ಯದ ಮಖದೂಮ ಮತ್ತು ಸಯ್ಯದ ಹಬೀಬರನ್ನು ಹತ್ತಿರ ಕರೆದು ಅವರಿಗೆ ಅವರ ತಂದೆಯ 'ಷರ್ಜಾಖಾನ' ಎಂಬ ಬಿರುದನ್ನು ಕೊಟ್ಟು ತಂದೆಯ ಎಲ್ಲ ಪದಾಧಿಕಾರಗಳನ್ನೂ ಉಭಯ ಮಕ್ಕಳಿಗೆ ದಯಪಾಲಿಸಿದನು.

### ೪೮. *ಆದಿಲಶಹನ ಅಮೀರಜನರು ಜಯಸಿಂಗನೊಂದಿಗೆ ಯುದ್ಧ ಮಾಡಿದ್ದು. ಬಹಲೋಲಖಾನ ಮತ್ತು ಖವಾಸಖಾನರು ಜಯಸಿಂಗನ ಮೇಲೆ ಗದ್ದಲ ಮಾಡಿದ್ದು. ರಾಜಾ ಜಯಸಿಂಗನ ಸೋಲು, ಮತ್ತೆ ಯುದ್ಧಕ್ಕೆ ನಿಲ್ಲದೆ ತನ್ನ ರಾಜ್ಯಕ್ಕೆ ತಿರುಗಿದ್ದು :*

ಆದಿಲಶಹನ ಕಡೆಯ ಶೂರರು ಮೇಲಿಂದ ಮೇಲೆ ಜಯಸಿಂಗನನ್ನು ಸೋಲಿಸಿದ್ದರಿಂದ ಆತ ದಣಿದು ಓಡಿಹೋಗುವ ವಿಚಾರದಲ್ಲಿದ್ದನು. ಆದರೆ ಔರಂಗಜೇಬ ಬಾದಶಹನ ಕಡೆಯಿಂದ ಆಗಾಗ ಒಂದರ ಹಿಂದೊಂದರಂತೆ ಧಕ್ಕೆಯ ಪತ್ರಗಳು ಬರುತ್ತಿದ್ದುವು. ಅದರಲ್ಲಿ 'ನೀನು ಯುದ್ಧ ಮಾಡದೆ, ಹೋದ ಕೆಲಸವನ್ನು ಮಾಡದೆ, ಅಪಯಶನಾಗಿ ತಿರುಗಿ ಬಂದರೆ ನಿನ್ನನ್ನು ಶಿಕ್ಷಿಸಲಾಗುತ್ತದೆ' ಎಂದೆಲ್ಲ

ಇರುತ್ತಿತ್ತು ಇದರಿಂದ ಬಹಳ ಚಿಂತೆಯಲ್ಲಿ ಮುಳುಗಿದ ಕಾರಣ ಆದಿಲಶಹನ ಕಡೆಯ ಶೂರರಮೇಲೆ ಏರಿ ಹೋಗುವ ಧೈರ್ಯವೂ ಉಳಿಯಲಿ. ನಿರುಪಾಯನಾಗಿ ತನ್ನ ಸರಹದ್ದಿಗೆ ಹೋಗಿ ಬಹಳ ಗಾಬರಿಯಿಂದ ದಿನಗಳನ್ನು ನೂಕುತ್ತಿದ್ದನು. ಅಂಥ ಸಮಯದಲ್ಲಿ ಪ್ರಾರಬ್ಧಯೋಗದಿಂದ ಷರ್ಜಾಖಾನನು ಮರಣ ಹೊಂದಿದ ಸುದ್ದಿ ತಿಳಿಯಿತು. ಇದರಿಂದಾಗಿ ಜಯಸಿಂಗನಿಗೆ ಹೊಸ ಜೀವ ಬಂದಂತಾಯಿತು. ಒಂದಿಷ್ಟು ಧೈರ್ಯ ಬಂದಿತು. ಜಯಸಿಂಗನ ಮನೋರಥ ಪೂರ್ಣವಾಗಲು ಬಿಡದಿದ್ದ ಷರ್ಜಾಖಾನನು ಮರಣ ಹೊಂದಿದ್ದನು. ಇದೀಗ ತನ್ನ ಇಚ್ಛೆ ಪೂರ್ತಿಯಾಗುತ್ತದೆ. ಸುಲಭದಲ್ಲಿ ದಕ್ಷಿಣದ ಪ್ರದೇಶಗಳನ್ನು ಹಸ್ತಗತ ಮಾಡಿಕೊಳ್ಳಬಹುದು ಎಂಬುದಾಗಿ ತಿಳಿದನು. ಆದರೆ ಆ ಮೂರ್ಖನಿಗೆ, ಒಬ್ಬ ಸಿಂಹಸದೃಶ ಶೂರ ಸತ್ತರೇನಾಯಿತು? ಸಿಂಹದಂತೆ ಪರಾಕ್ರಮ ತೋರುವ, ಇನ್ನೆಷ್ಟೋ ಶೂರ ಶಿಪಾಯಿಗಳು ಈ ರಣಭೂಮಿಯಲ್ಲಿ ಇದ್ದಾರೆಂಬುದು ಆತನ ಲಕ್ಷ್ಯಕ್ಕೆ ಬರಲಿಲ್ಲ.

ಜಯಸಿಂಗನ ಮನದಲ್ಲಿ ಮತ್ತೆ ದುರ್ಬುದ್ಧಿ ಮೂಡಿತು. ತನ್ನ ಕಡೆಯ ಕೆಲವು ಶೂರರನ್ನು ಸೇರಿಸಿ ಅವರನ್ನು ಮೋಸಗೊಳಿಸಿ ಆದಿಲಶಹನ ಸೈನ್ಯದ ಮೇಲೆ ಕಳಿಸಿದನು. ಯುದ್ಧದಲ್ಲಿ ಚೆನ್ನಾಗಿ ಪರಾಕ್ರಮ ತೋರಿರೆಂದು ಹೊಗಳಿ ಅವರಿಗೆ ಬಹಳ ಬಕ್ಷೀಸನ್ನು ಕೊಡುವುದಾಗಿ - ಕೊಡಿಸುವುದಾಗಿ ಆಶೆ ತೋರಿಸಿದನು. ದಿಲ್ಲಿಯಲ್ಲಿಯ ಅಮೀರ ಜನರಲ್ಲಿ ನಾವೇ ಶೂರರೆಂದು ಬಾದಶಹರು ನಮ್ಮನ್ನು ಆಯ್ಕೆ ಮಾಡಿ ಈ ಯುದ್ಧಕ್ಕೆ ಕಳಿಸಿದ್ದಾರೆ. ಒಂದು ವೇಳೆ ಗೆಲ್ಲದೆ ತಿರುಗಿ ಹೋದೆವಾದರೆ, ಮುಖ ತೋರಿಸುವುದಾದರೂ ಹೇಗೆ? ಹಲವಾರು ಸಲ ಇಲ್ಲಿ ಸೋತಿದ್ದೇವೆ. ಆದರೂ ಈಗ ವೇಳೆ ಬಂದಿದೆ, ಚೆನ್ನಾಗಿ ಯುದ್ಧ ಮಾಡೋಣ. ನಮ್ಮ ಮನೋರಥ ಪೂರ್ಣವಾಗುತ್ತದೆ. ರಣಭೂಮಿಯ ಸಿಂಹನೆಂದೇ ಖ್ಯಾತಿಗಳಿಸಿದ್ದ ಷರ್ಜಾಖಾನನು ಮರಣ ಹೊಂದಿದ್ದಾನೆ. ಈಗ ನೀವು ಧೈರ್ಯದಿಂದ ಇರಬೇಕು. ದೈವ ಬಲದಿಂದ ನಮಗೇ ಯಶ ದೊರೆಯುತ್ತದೆ - ಎಂಬುದಾಗಿ ಹೇಳಿದನು. ಅದಕ್ಕೆ ಪ್ರತಿಯಾಗಿ ಅಮೀರರು, ಸರದಾರರು "ಶತ್ರು ಸೈನ್ಯ ನಮ್ಮನ್ನು ಸೋಲಿಸಿದೆ, ಆಹಾರ ಸಾಮಗ್ರಿ ತೀರಿದೆ. ಕುದುರೆ ಸವಾರರು ಸಹಿತ ಸಾಮರ್ಥ್ಯ ಕಳೆದುಕೊಂಡಿದ್ದಾರೆ. ಕುದುರೆಗಳೂ ದಣಿದಿವೆ. ಹೀಗಿರುವಾಗ ನಮಗೆ ಆದಿಲಶಾಹನ ಶೂರರನ್ನು ಎದುರಿಸುವ ಸಾಮರ್ಥ್ಯವೆಲ್ಲಿದೆ? ಇಷ್ಟು ಸಾಕು, ನಮ್ಮ ಮೇಲೆ ತಮ್ಮ ಕೃಪೆ ಇರಲಿ. ಜೀವ ಉಳಿಸಿಕೊಂಡು ನಮ್ಮ ಸ್ಥಳದಲ್ಲಿ ಇರೋಣ. ಒಂದು ವೇಳೆ ನಿರ್ದಯಿಗಳಾಗಿ ನಮ್ಮ ಬೆನ್ನು ಬಿಡದಿದ್ದರೆ. ನಮ್ಮ ಜೀವಗಳೂ ಉಳಿಯಲಾರವು. ಹತ್ತಿರವಿದ್ದ ಸಂಪತ್ತು ಉಳಿಯಲಾರದು. ಆದಿಲಶಹನ ಶೂರರು ನಮ್ಮನ್ನು ಕೊಂದು, ನಮ್ಮಲ್ಲಿದ್ದುದೆಲ್ಲವನ್ನೂ ಲೂಟಿ ಮಾಡಿಬಿಡುತ್ತಾರೆ. ನಿಮ್ಮ ಈ ಅರ್ಧಯುಕ್ತಿ ಆದಿಲಶಾಹಿಗಳ ಸೈನ್ಯಕ್ಕೆ ತಿಳಿದರೆ ಅವರು ಒಂದ ಕ್ಷಣದಲ್ಲಿ ಬಂದು ನಮ್ಮನ್ನು ಮುತ್ತಿ ಬಿಟ್ಟಾರು, ಧಾನ್ಯ ನೀರು ದೊರೆಯುವ ಬಾಗಿಲನ್ನೂ ಮುಚ್ಚಿ ಬಿಡುತ್ತಾರೆ. ಅನಂತರ ನಾವು ಹಸಿವು-ನೀರಡಿಕೆಗಳಿಂದ ಜೀವ ಬಿಡಬೇಕಾದೀತು ಅಥವ ಆದಿಲಶಾಹಿ ಜನರು ನಮ್ಮ ಮೇಲೆ ಕಳ್ಳರನ್ನು ಮತ್ತು ಮಾಂಗರಾಮೋಸಿಗಳನ್ನು ಬಿಟ್ಟು ನಮ್ಮ ಪಗಡಿಗಳನ್ನೇ ಕಿತ್ತಿಯಾರು. ಕುದುರೆಗಳನ್ನು, ಅವುಗಳ ಮೇಲಿನ ಸವಾರರನ್ನು ಬತ್ತಲೆ ಮಾಡಿ ಈ ದಕ್ಷಿಣ ದೇಶದ ಅರಣ್ಯದಲ್ಲಿ ತಿರುಗಬೇಕಾದೀತು. ಹಿಂದುಸ್ತಾನದ ಮುಖ ಕೂಡ ಕನಸಿನಲ್ಲೂ ದೃಷ್ಟಿಗೆ ಬೀಳಲಾರದು. ಇದೀಗ ಈ ವಿಚಾರ ಬಿಟ್ಟು ನಮ್ಮ-ನಮ್ಮ ರಾಜ್ಯಗಳಿಗೆ ಹೋಗುವುದೇ ಸೂಕ್ತವೆಂದು ಕಾಣುತ್ತದೆ. ನಮ್ಮ ಹೆಂಡಿರು ಮಕ್ಕಳ ಭೆಟ್ಟಿ ನಮ್ಮ ದೈವದಲ್ಲಿದ್ದರೆ ಈ ಸಂಕಟದ ಬಾವಿಯಲ್ಲಿ ನಾವು ಬೀಳಲಾರೆವು" ಎಂಬುದಾಗಿ ಹೇಳಿದರು. ಆದರೆ ಅವರ ಮಾತನ್ನು ಜಯಸಿಂಗನು ಕೇಳಲಿಲ್ಲ. ಯುದ್ಧ ಮಾಡುವುದೆಂದೇ

ಇರಾದೆಯನ್ನು ಮುಂದಿಟ್ಟನು. ಅದೇ ಮಾತಿನ ಮೇಲೆ ಹಟ ಹಿಡಿದನು ಮತ್ತು ಯುದ್ಧದ ಸಿದ್ಧತೆಯನ್ನು ಮಾಡಿ, ಶಿಪಾಯಿಜನರಿಗೆ ಸಾಕಷ್ಟು ಬಕ್ಷೀಸು ಮತ್ತು ವಸ್ತ್ರಗಳನ್ನು ಕೊಟ್ಟು ತನ್ನ ಸೈನ್ಯದಲ್ಲಿಯ ಸರದಾರ ಮಂಡಳಿಯನ್ನು ಹುರಿದುಂಬಿಸಿ ಯುದ್ಧಕ್ಕೆ ಸಿದ್ಧಗೊಳಿಸಿದನು.

ಈ ಸುದ್ದಿ ಆದಿಲಶಹನ ಕಡೆಯ ಸರದಾರರಿಗೆ ತಿಳಿಯಿತು. ಮಮಲಕತಮದಾರ ಅಬ್ದುಲ್ ಮಹಮ್ಮದನು ಅತ್ಯಂತ ಶೀಘ್ರದಲ್ಲಿ ಯುದ್ಧದ ಸಾಮಾನು-ಸರಂಜಾಮುಗಳ ಸಿದ್ಧತೆಯನ್ನು ಮಾಡಿದನು. ತನ್ನ ಸೈನ್ಯವನ್ನು ಯುದ್ಧಕ್ಕೆ ಸಿದ್ಧ ಪಡಿಸಿದನು. ಆದಿಲಶಾಹನ ಸೈನ್ಯವನ್ನು ಎರಡು ಭಾಗಗಳನ್ನಾಗಿ ಮಾಡಿ ಅರ್ಧ ಸೈನ್ಯವನ್ನು ಬಹಲೋಲಖಾನನ ವಶಕ್ಕೆ ಇನ್ನರ್ಧ ಸೈನ್ಯವನ್ನು ಖವಾಸಖಾನನ ವಶಕ್ಕೆ ಕೊಟ್ಟು ಯುದ್ಧದ ಢಾಲನ್ನು ಎತ್ತಿದನು. ನೇಕನಾಮಖಾನನು ಕೂಡ ತನ್ನೆಲ್ಲ ಸೈನ್ಯವನ್ನು ತೆಗೆದುಕೊಂಡು ಶತ್ರುವನ್ನು ಶಿಕ್ಷಿಸಲು ಹೊರಟನು. ಮಜಲುಗಳನ್ನು ಸವೆಸಿ ಶತ್ರುವನ್ನು ಹೋಗಿ ಮುಟ್ಟಿದರು. ಬಹಲೋಲಖಾನನು ಮುಂದೆ ಸಾಗಿ ಶತ್ರುವಿನ ತೀರ ಸಮೀಪ ಹೋದನು. ಆಗ ಜಯಸಿಂಗನು ತುಂಬ ಧೈರ್ಯಮಾಡಿ ತನ್ನ ತೋಪುಖಾನೆಯನ್ನು ಮುಂದೆ ನಡೆಸುತ್ತ ಬಹಲೋಲಖಾನನ ಸೈನ್ಯದ ಮೇಲೆಯೇ ಬಂದು ಬಿದ್ದನು. ತೋಪುಗಳನ್ನು ಹಾರಿಸಲು ಆದೇಶಿಸಿದನು. ಎಡ-ಬಲದ ಸವಾರರು-ಸಿಬ್ಬಂದಿಗಳು ಬಹಲೋಲಖಾನನ ಸೈನ್ಯದ ಮೇಲೆ ಬಿದ್ದರು. ಒಂದೇ ಒಂದುಗಳಿಗೆಯಲ್ಲಿ ಪೃಥ್ವಿ ಪ್ರಳಯದ ಸಮಯವನ್ನೇ ಸೃಷ್ಟಿಸಿ ರಣಭೂಮಿಯನ್ನು ಯಮಲೋಕದ ಮೈದಾನವನ್ನಾಗಿ ಮಾಡಿದರು. ಮೊಗಲ, ಪಠಾಣ, ಮರಾಠ ಮತ್ತು ರಜಪೂತ ಮೊದಲಾದವರು ಜಯಸಿಂಗ ರಾಜನ ಕಲಿಕೆಯಿಂದ ಮತ್ತು ಜಯಸಿಂಗನು ತೋರಿಸಿದ ಆಶೆಯಿಂದ ಬಹಳ ಧೈರ್ಯ ಮಾಡಿ ಆ ಭಯಂಕರ ರಣಭೂಮಿಯಲ್ಲಿ ಯುದ್ಧ ಪರಾಕ್ರಮ ತೋರಿಸುವಲ್ಲಿ ಶ್ರಮಪಟ್ಟರು.

ಆದರೆ ಆದಿಲಶಾಹನ ಕಡೆಯ ಬಹಲೋಲಖಾನನ ಖಾಸ ಶೂರ ಮಂಡಳಿಯು ಯುದ್ಧ ಭೂಮಿಯಲ್ಲಿ ಸ್ಥಿರವಾಗಿ ನಿಂತು, ತಮ್ಮ ಕತ್ತಿಗಳಿಂದ ಬಹಳಷ್ಟು ಮೊಗಲ ಮತ್ತು ರಜಪೂತ ಜನರನ್ನು ಕೊಂದರು. ಆಗ ಸರದಾರರ ಸರದಾರ, ಶೂರರ ಶೂರ ಖವಾಸಖಾನನು ತನ್ನ ಗುಂಪಿನೊಂದಿಗೆ ಸೈನ್ಯದಿಂದ ಸಿಡಿದು ನಿಂತು, ಶತ್ರುವಿನೊಂದಿಗೆ ಯಾವ ರೀತಿ ಯುದ್ಧ ಮಾಡಬೇಕೆಂಬ ವಿಚಾರದಲ್ಲಿದ್ದನು. ಅಷ್ಟರಲ್ಲಿ ಒಮ್ಮೆಲೆ "ದಿಲ್ಲಿ ಕಡೆಯ ಮೊಗಲ ಜನರು ಬಹಳ ಸೈನ್ಯದೊಂದಿಗೆ, ಏರಿಬರುತ್ತಿದ್ದು ಭಾರೀ ತೋಫಖಾನೆಯನ್ನು ತೆಗೆದುಕೊಂಡು ಬಹಲೋಲಖಾನನ ಮೇಲೆ ಹಲ್ಲೆ ಮಾಡಲಿದೆ" ಎಂಬ ಸುದ್ದಿ ಬಂದು ಮುಟ್ಟಿತು. ಅತನ್ನು ಕೇಳಿದ ಖವಾಸಖಾನನು ಬಹಲೋಲಖಾನನು ದಿಲ್ಲೀ ಸೈನ್ಯದ ಬಾಯಲ್ಲಿ ನಿಂತಿದ್ದು, ನಾನು ಆ ಸೈನ್ಯದ ಹಿಂದಿನಿಂದ ಹೋದರೆ ಚೆನ್ನಾಗುವುದು. ಆಗ ಅಜಗರದಂತಿರುವ ಜಯಸಿಂಗನ ತಲೆಯನ್ನು ತರಿದು ಬಿಡಬಹುದು - ಎಂಬುದಾಗಿ ಹೇಳಿ, ತನ್ನ ಸೈನ್ಯವನ್ನು ವಿದ್ಯುದ್ವೇಗದಲ್ಲಿ ದಿಲ್ಲೀ ಸೈನ್ಯದ ಬೆನ್ನುಹಿಂದೆ ನಿಲ್ಲಿಸಿದನು. ಹಿಂದಿನಿಂದಲೇ ಹಲ್ಲೆ ಮಾಡುತ್ತ ಮೊಗಲ ಸೈನ್ಯವನ್ನು ಗಾಬರಿಗೊಳಿಸಿದನು. ದಿಲ್ಲೀ ಸೈನ್ಯದಲ್ಲಿಯ ಸಾವಿರಾರು ಜನ ಸವಾರರು ಮತ್ತು ಸಿಬ್ಬಂದಿಯನ್ನು ಕೊಲೆ ಮಾಡಿ ರಕ್ತದ ಮಡುವಿನಲ್ಲಿ ಅದ್ದಿದನು. ಇದರಿಂದ ಜಯಸಿಂಗನು ತುಂಬ ಭಯಭೀತನಾದನು. ಇನ್ನು ತನ್ನ ಜೀವ ಉಳಿಯುವುದಿಲ್ಲವೆಂದು ಮನಗಂಡನು. ಓಡಿ ಹೋಗಲೂ ಬಿಡುಗಡೆ ಇರಲಿಲ್ಲ. ಹೀಗೆ ದಕ್ಷಿಣದ ಸರದಾರರಾದ ಬಹಲೋಲಖಾನ ಮತ್ತು ಖವಾಸಖಾನರು ಎರಡೂ ಬದಿಗಳಿಂದ ದಿಲ್ಲೀ ಸೈನ್ಯವನ್ನು ಮಧ್ಯದಲ್ಲಿ ಹಿಡಿದರು. ಖವಾಸಖಾನನು ಜಯಸಿಂಗನ ಸುಳಿವನ್ನು ಶೋಧಿಸುತ್ತ ನೇರವಾಗಿ ಅವನ

ಮೇಲೆಯೇ ಏರಿ ಹೊರಟನು. ಜಯಸಿಂಗನು ತುಂಬ ಗಾಬರಿಯಾಗಿ ತಲೆಯ ಮೇಲಿನ ಶಿರಪೇಚನ್ನೂ ಲಕ್ಷಿಸದೆ, ತನ್ನ ಸೈನ್ಯದ ಆಶೆಯನ್ನೂ ಬಿಟ್ಟು ಹೇಗೆ ನಿಂತಿದ್ದನೋ ಹಾಗೆಯೇ ತನ್ನ ಕುದುರೆ ಹತ್ತಿ ಓಡಿಹೋದನು. ತನ್ನ ಸರದಾರ ಜಯಸಿಂಗನು ತನ್ನ ಸೈನ್ಯವನ್ನು ಬಿಟ್ಟು ಓಡಿ ಹೋಗುತ್ತಿದ್ದುದನ್ನು ಆತನ ಸೈನ್ಯವೇ ನೋಡಿತು. ತನ್ನ ಧಣಿಯಂತೆ ಅವರೂ ಓಡಿ ಹೋಗತೊಡಗಿದರು. ಆ ರಣಭೂಮಿಯಲ್ಲಿ ಪ್ರೇತಗಳನ್ನು ಬಿಟ್ಟು ಇನ್ನೇನೂ ಕಾಣುತ್ತಿರಲಿಲ್ಲ. ಆದಿಲಶಾಹನ ಕಡೆಯ ಸೈನ್ಯವು ದೇವರ ಕೃಪೆಯಿಂದ ವಿಜಯಿಗಳಾಗಿ ಹಿಂತಿರುಗಿದರು.

ಆದಿಲಶಾಹೀ ಬಾದಶಹನು ವಿಜಯದ ಸುದ್ದಿಯನ್ನು ಕೇಳಿ ತುಂಬ ಸಂತೋಷಪಟ್ಟು, ದೇವರಿಗೆ ವಂದಿಸಿದನು. ತನ್ನ ಖಜಾನೆಯ ಬೀಗವನ್ನು ತೆರೆದು ರೋಖ ಹಣ ಮತ್ತು ಬಂಗಾರವನ್ನು ಅಲ್ಲಾನನ್ನು ಸ್ತುತಿಸುವ ಸಾಧು ಸಂತರಿಗೆ ವೃಷ್ಟಿಯಂತೆ ವಿತರಿಸಿದನು. ದರಿದ್ರ ಜನರನ್ನು ದಾರಿದ್ರ್ಯದಿಂದ ಮುಕ್ತಗೊಳಿಸಿದನು. ವಿಜಯಕ್ಕೆ ಕಾರಣರಾದ ಸೈನಿಕರಿಗೂ, ಸರದಾರರಿಗೂ ಭಾರೀ ಕಿಮ್ಮತ್ತಿನ ವಸ್ತ್ರಗಳನ್ನು, ರೋಖ ಹಣವನ್ನು, ಆಭರಣಗಳನ್ನೂ, ಮುತ್ತು ರತ್ನಗಳನ್ನು ಅಗಣಿತವಾಗಿ ಕೊಟ್ಟು ಸತ್ಕರಿಸಿದನು. ದಕ್ಷಿಣ ದೇಶವನ್ನು ಕೈವಶಮಾಡಿಕೊಳ್ಳಲು ವಿಪುಲ ಸೈನ್ಯದೊಂದಿಗೆ ಬಂದ ಜಯಸಿಂಗನೊಂದಿಗಿನ ಯುದ್ಧ ಮುಗಿಯಲು, ಒಂದು ವರುಷಕ್ಕಿಂತ ಹೆಚ್ಚು ದಿನಗಳೇ ಹಿಡಿದುವು. ಸನ್ ೧೦೭೫ (ಕ್ರಿ.ಶ. ೧೬೬೪-೬೫)ನೆಯ ವರುಷ ರಾಜಾ ಜಯಸಿಂಗನು ಹಿಂದುಸ್ತಾನದಿಂದ ದಕ್ಷಿಣ ದೇಶಕ್ಕೆ ಬಂದನು. ಸನ್ ೧೦೭೭ರಲ್ಲಿ (ಕ್ರಿ.ಶ. ೧೬೬೬-೬೭) ಆತ ಅಪಯಶನಾಗಿ, ಅತಿ ಖಿನ್ನತೆಯಿಂದ ತುಂಬ ನಷ್ಟ ಅನುಭವಿಸಿ ತಿರುಗಿ ಹೋದನು.[೧]

*೪೯. ಈ ಮುನ್ನ ರಾಜಾ ಜಯಸಿಂಗನು, ಶಿವಾಜಿ ಭೋಸಲೆಯನ್ನು ಆಲಮಗೀರ ಬಾದಶಹನ ಕಡೆಗೆ ದಿಲ್ಲಿಗೆ ಕಳಿಸಿದ್ದು, ಶಿವಾಜಿ ತನ್ನ ಮಗ ಸಂಭಾಜಿಯೊಂದಿಗೆ ಹೋದ ಸಂದರ್ಭದಲ್ಲಿ ಬಾದಶಹನ ಕೃಪೆಯಿಂದ ಆತನಿಗೆ 'ಪಾಂಚಹಜಾರಿ' (ಐದು ಸಾವಿರ) ಎಂಬ ಪದವಿ ಪ್ರಾಪ್ತಿ. ಶಿವಾಜಿ ತನ್ನ ಮಗನೊಂದಿಗೆ ದಿಲ್ಲಿಯಿಂದ ತಿರುಗಿ ತನ್ನ ರಾಜ್ಯಕ್ಕೆ ಬಂದದ್ದು :*

ಶಿವಾಜಿ ಭೋಸಲೆಯು ಕುತಂತ್ರಗಳ ಖಣಿಯಾಗಿದ್ದನು, ದುರ್ನಡತೆಗಳ ಉತ್ಪತ್ತಿ ಸ್ಥಳವಾಗಿದ್ದನು. ಆದಿಲಶಹನೊಂದಿಗೆ, ವಿಶ್ವಾಸಘಾತುಕತನ ಮಾಡಿದ್ದನು. ರಾಜಾ ಜಯಸಿಂಗನೊಂದಿಗೆ ಸ್ನೇಹ ಬೆಳೆಸಿ, ದೊಡ್ಡ-ದೊಡ್ಡ ಮಜಬೂತದ ಕೋಟೆಗಳನ್ನು ಜಯಸಿಂಗನ ವಶಕ್ಕೆ ಕೊಟ್ಟಿದ್ದನು. ಅವನಿಗೆ ನಾನಾ ಪ್ರಕಾರದ ಕೆಟ್ಟ ಯುಕ್ತಿಗಳನ್ನು ಸೂಚಿಸಿ ಮತ್ತು ಅನೇಕ ತರದ ಆಶೆ ತೋರಿಸಿ ಆದಿಲಶಹನ ರಾಜ್ಯವನ್ನು ಕೈವಶ ಮಾಡಿಕೊಳ್ಳುವ ವಿಷಯದಲ್ಲಿ ಜಯಸಿಂಗನನ್ನು ಸಿದ್ಧಮಾಡಿದ್ದನು. ಯುದ್ಧ ಪ್ರಳಯದ ಅಗ್ನಿಯನ್ನು ಎರಡೂ ರಾಜ್ಯಗಳ ರಾಜಧಾನಿಗಳಾದ ದಿಲ್ಲಿ ಮತ್ತು ಬಿಜಾಪುರಗಳಲ್ಲಿ ಹೊತ್ತಿಸಿದನು. ಇಬ್ಬರ ಮಧ್ಯ ಯುದ್ಧವನ್ನು ಹಚ್ಚಿದುದನ್ನು ಮೊದಲೇ ವರ್ಣಿಸಲಾಗಿದೆ. ಅನೇಕ ಯುದ್ಧಗಳಲ್ಲಿ ಶಿವಾಜಿಯು ಜಯಸಿಂಗನ

---

1. "On Saturday the 20th January 1666, he (Raja Jayasingh) crossed the river Bhima, Dianat Rai, the trusted servant of Adil Khan, brought a message to the Raja, begging pardon and professing submission, with some jewelled ware. As the rainy season arrived, and the Raja got a letter from the emperor ordering him to pass the monsoon at Aurangabad he gave up the campaign and retruned" MiA P.39.

"Raja Jaising was coming from Aurangabad to the court when on arrival there he died on 28th Muharram (10th July 1667)"-MiA P.47 (This date is apparently incorrect. Jaising died on 28th August 1667)

ಜೊತೆ ಸೇರಿ ಆದಿಲಶಹನ ಮೇಲೆ ಯುದ್ಧ ಮಾಡಿ, ಅವನಂತೆ ತಾನೂ ಹೊಡೆತ ತಿಂದು ಒಂದೆಡೆ ಹೋಗಿ ಕುಳಿತಿದ್ದನು. ಆ ಮೊದಲೇ ಜಯಸಿಂಗನು, ಶಿವಾಜಿಗೆ ಬಾದಶಹನ ಚಾಕರನಾಗಿ ಔರಂಗಜೇಬನಿಂದ ಸಹಾಹಜಾರೀ (ಆರುಸಾವಿರ) ಪದವಿಯನ್ನು ಕೊಡಿಸುವುದಾಗಿ ಹೇಳಿದ್ದನು. ಅದರಂತೆ ಶಿವಾಜಿಯನ್ನು ಹೊಗಳಿ. ಬಾದಶಹನಿಗೆ ವಿನಂತಿ ಪತ್ರವನ್ನೂ ಬರೆದಿದ್ದನು. ''ಶಿವಾಜಿಯು ಕೆಲಸಕ್ಕೆ ಉಪಯೋಗಿಯಾಗಿದ್ದಾನೆ. ಶಿವಾಜಿ ಎಂದರೆ ದಕ್ಷಿಣದೇಶದ ಕೀಲಿ ಇದ್ದ ಹಾಗೆ. ಆತ ತಮ್ಮ ಸೇವೆಯಲ್ಲಿ ಹಾಜರಾದರೆ, ದಕ್ಷಿಣದ ಎಲ್ಲ ರಾಜ್ಯಗಳೂ ಇಂದೇ ಕೈವಶವಾದಂತೆ ಎಂದು ತಿಳಿಯಿರಿ. ಈ ಮನುಷ್ಯ ಬಾದಶಹರ ಕೃಪೆಗೆ ಪಾತ್ರನಾಗುವಂಥವನಿದ್ದು, ಈತನ ಮೇಲೆ ದಯೆ ತೋರಿಸಬೇಕು" ಎಂಬುದಾಗಿ ಬರೆದಿದ್ದನು.

ಶಿವಾಜಿಯನ್ನು ಆತನ ಮಗ ಸಂಭಾಜಿಯೊಂದಿಗೆ ಔರಂಗಜೇಬ ಬಾದಶಹನ ಕಡೆಗೆ ಕಳಿಸಿದ್ದನು.[೧] ಶಿವಾನು ತನ್ನ ಮಗನೊಂದಿಗೆ ದಿಲ್ಲಿಗೆ ಹೋಗಿ ಔರಂಗಜೇಬ ಬಾದಶಹನನ್ನು ಭೆಟ್ಟಿಯಾದನು.[೨] ಬಾದಶಹನು ಬಹಳ ದಯೆತೋರಿ ಆತನಿಗೂ ಮತ್ತು ಮಗನಿಗೂ, 'ಪಾಂಚಹಜಾರೀ' ಎಂಬ ಪದವಿಯನ್ನು ನೀಡಿದನು. ಆದರೆ ಮೊದಲ ಭೆಟ್ಟಿಯ ಸಮಯದಲ್ಲಿ ಶಿವಾನು ಅಮೀರಜನರೊಂದಿಗೆ ಸರಿದೊರೆಯಾಗಿ ಬಾದಶಹನ ಮುಂದೆ ನಿಂತಾಗ ಅವನಿಗೆ ಕುಳಿತುಕೊಳ್ಳಲು ಆಜ್ಞೆ ನೀಡಲಿಲ್ಲ. ಶಿವಾನಿಗೆ ತುಂಬ ಸ್ವಾಭಿಮಾನ ಗರ್ವವಿತ್ತು. ಆದ್ದರಿಂದ ಅವನಿಗೆ ತುಂಬ ಕೆಡುಕೆನಿಸಿ, ಪ್ರಕೃತಿ ಸರಿ ಇಲ್ಲ ಎಂಬ ನೆಪಹೇಳಿ ಬಾದಶಹನ ಎದುರಿಗೆ ನಿಲ್ಲಲೇ ಇಲ್ಲ. ಔರಂಗಜೇಬ ಬಾದಶಹನು ತುಂಬ ಬುದ್ಧಿವಂತನಿದ್ದನು. ಶಿವಾನ ದುಷ್ಟ ಸಂಕಲ್ಪ ಮತ್ತು ಮೋಸವನ್ನು ಗುರುತಿಸಿ ಆತನನ್ನು ಮತ್ತು ಆತನ ಮಗನನ್ನು ನಜರಬಂದೀ ಕೈದಿನಲ್ಲಿಟ್ಟನು. ಆಗ ಶಿವಾನು ಜಯಸಿಂಗನಿಗೆ ಪತ್ರ ಬರೆದು, ಬಾದಶಹನು ತನ್ನನ್ನು ನಜರಬಂದೀ ಪಹರೆಯಲ್ಲಿಟ್ಟಿದ್ದನ್ನು ತಿಳಿಸಿದನು. ಅದಕ್ಕೆ ಪ್ರತಿಯಾಗಿ ಜಯಸಿಂಗನು ಮತ್ತೆ ಶಿವಾನನ್ನು ಹೊಗಳಿ ಬಾದಶಹನಿಗೆ ಪತ್ರ ಬರೆದನು. "ಆತನ ಅನ್ಯಾಯವನ್ನು ಕ್ಷಮಿಸಬೇಕು, ದಯೆ ಇರಲಿ, ಆತನನ್ನೂ, ಆತನ ಮಗನನ್ನೂ ನಜರಬಂದಿ ಸೆರೆಯಿಂದ ಮುಕ್ತ ಮಾಡಬೇಕು" ಎಂದು ವಿನಂತಿಸಿಕೊಂಡಿದ್ದನು. ಅನಂತರ ಬಾದಶಹನು ಶಿವಾನನ್ನು ಬಿಡುಗಡೆ ಮಾಡಿದನು.

ಬಿಡುಗಡೆಯಾಗುತ್ತಿದ್ದಂತೆಯೇ ಅವಕಾಶಕ್ಕಾಗಿ ಕಾಯುತ್ತಿದ್ದ ಅವನು ತನ್ನ ಮಗನೊಂದಿಗೆ ದಿಲ್ಲಿಯಿಂದ ಓಡಿದನು.[೩] ಆ ಸಮಯದಲ್ಲಿ ರಾಜಾ ಜಯಸಿಂಗನು ಆದಿಲಶಾಹಿಗಳ ಕೈಯಲ್ಲಿ ಸೋತು ಹಿಂತಿರುಗಿದ್ದನು.

---

೧. ಶಕೆ ೧೫೮೭ ಫಾಲ್ಗುಣ ಶುದ್ಧ ನವಮಿ ಸೋಮವಾರ (೫, ಮಾರ್ಚ ೧೬೬೬)ದಂದು ರಾಜಶ್ರೀ ಶಿವಾಜೀ ರಾಜರು ಮತ್ತು ರಾಜಶ್ರೀ ಸಂಭಾಜೀರಾಜರು ಔರಂಗಜೇಬನ ಭೆಟ್ಟಿಗೆಹೋದರು - ಜೇಧೇ ಶ-ಪು.೨೩

೨. ಶಕೆ ೧೫೮೮ ಜ್ಯೇಷ್ಠ ಶುದ್ಧ ದ್ವಿತೀಯಾ (೧೨ ಮೇ ೧೬೬೬)ದಂದು ರಾಜಶ್ರೀ ಶಿವಾಜೀ ರಾಜೇ ಅವರು ಆಗ್ರಾಕ್ಕೆ ಹೋಗಿ ಔರಂಗಜೇಬನ ಭೆಟ್ಟಿ ಮಾಡಿದರು. ತೊಂದರೆಯಾದೀತೆಂದು ರಾಜಶ್ರೀ ಅವರಿಗೆ ಪಹರೆ ಒದಗಿಸಲಾಯಿತು - ಜೇಧೆ ಶಕಾ ಪು.೨೮.

೩. ಶಕೆ ೧೫೮೮ ಶ್ರಾವಣ ವದ್ಯ ದ್ವಾದಶೀ (೧೭ ಆಗಸ್ಟ ೧೬೬೬)ಯಂದು ಆಗ್ರಾದಿಂದ ಪೆಟ್ಟಿಗೆಯಲ್ಲಿ ಕುಳಿತು ಓಡಿಹೋದರು. ಅಲ್ಲಿಂದ ರಾಜಶ್ರೀಯು ಸಂಭಾಜಿಯೊಂದಿಗೆ. ಮಾರ್ಗಶೀರ್ಷ ಶುದ್ಧ ಪಂಚಮಿಯಂದು (೨೦ ನವಂಬರ ೧೬೬೬) ರಾಯಗಡಕ್ಕೆ ಬಂದರು - ಜೇಧೆ ಶಕಾವಲೀ ಪುಟ ೨೩-೨೮
This artful cheat (Shivaji) feeling sickness fled with his son on Sunday the 19th August 1666/27 Safar 1077 A.H. - MiA -P.37
The difference is due to the local people giving date of their detection i.e. next day after evening.

ಅವನ ಸ್ಥಾನದಲ್ಲಿ ಔರಂಗಜೇಬ ಬಾದಶಹನು ಬಹಾದ್ದುರಖಾನನೆಂಬ ಹೆಸರಾಂತ ಶೂರನನ್ನು ನೇಮಿಸಿ ದಕ್ಷಿಣ ದೇಶಗಳಿಗೆ ಕಳಿಸಿದ್ದನು. ಶಿವಾನು ತಿರುಗಿ ತನ್ನ ರಾಜ್ಯಕ್ಕೆ ಬಂದು ಮೊದಲಿನಂತೆ ಕುತಂತ್ರ, ಮೋಸಗಳನ್ನು ಮಾಡುತ್ತ ಬಂಡು ಹೂಡಿದನು. ಮೊಗಲರ ಕೈಗೆ ಹೋದ ಕೋಟೆಗಳನ್ನು ತಿರುಗಿ ತನ್ನ ಕೈವಶ ಮಾಡಿಕೊಂಡನು. ಮತ್ತೆ ಹೊಸ ಬಲದೊಂದಿಗೆ ಪ್ರಬಲನಾದನು. ಮೊದಲು ಮೊಗಲರ ಸಖ್ಯದಿಂದ ಅರಳೆಯನ್ನು ದಾರವನ್ನಾಗಿ ಹೊಸೆದು, ಅನಂತರ ಆ ದಾರವನ್ನು ಬಿಡಿಸಿ ತಿರುಗಿ ಅರಳೆಯನ್ನಾಗಿ ಮಾಡಿದನು.

### ೫೦. ಅಲೀ ಆದಿಲಶಾಹ ಬಾದಶಹನ ಉತ್ತಮ ಲಕ್ಷಣಗಳ ಸಂಕ್ಷಿಪ್ತ ವರ್ಣನೆ :

ಅಲೀ ಆದಿಲಶಹನು ನ್ಯಾಯ ನೀಡುವವನು, ಪ್ರಜೆಗಳ ಪಾಲನೆ ಮಾಡುವವನು, ಸೈನಿಕರನ್ನು ಸಂರಕ್ಷಿಸುವವನು, ವಿದ್ವಾಂಸರನ್ನು ಸಜ್ಜನರ ಯೋಗ್ಯತೆಯನ್ನು ತಿಳಿದುಕೊಳ್ಳುವವನು ಮತ್ತು ಸುದೈವಿಯೂ ಆಗಿದ್ದನು. ದೈವಕೃಪೆ ಮತ್ತು ಸಹಾಯ ನಿರಂತರವಾಗಿ ಅವನೆಡೆಗಿತ್ತು. ಈ ಯೋಗದಿಂದಾಗಿಯೇ ರಾಜ್ಯದ ಅಕಲ್ಯಾಣ ಬಯಸುವ ಶತ್ರುಗಳನ್ನು ಶಿಕ್ಷಿಸಿ ನಿರಂತರ ಯಶಸ್ವಿಯಾಗುತ್ತಿದ್ದನು. ಅತ್ಯಂತ ಶೂರನಾದ ಜಯಸಿಂಗನು ಭಾರೀ ಸೈನ್ಯದೊಂದಿಗೆ ದಕ್ಷಿಣ ದೇಶಗಳನ್ನು ಕೈವಶ ಮಾಡಿಕೊಳ್ಳಲು ಬಂದರೂ, ಕೊನೆಗೆ ಆದಿಲಶಾಹನ ದೈವದ ಉತ್ಕರ್ಷದಿಂದ ಯುದ್ಧದಲ್ಲಿ ಬಹಳ ನಷ್ಟವನ್ನು ಅನುಭವಿಸಿ ಹಿಂತಿರುಗಬೇಕಾಯಿತು. ಪರಾಕ್ರಮ ಮತ್ತು ಧರ್ಮದಿಂದ ನಡೆಯುವುದು ಇತ್ಯಾದಿ ಉತ್ತಮ ಲಕ್ಷಣಗಳು ಮನುಷ್ಯನಲ್ಲಿ ಇರಬೇಕಾದಷ್ಟೂ ಅಲೀ ಆದಿಲಶಹನಲ್ಲಿದ್ದುವು. ಅವನ ಜೀವನ ಬಹು ವರ್ಣಮಯವಾಗಿತ್ತು. ದೊಡ್ಡತನ ತುಂಬ ಎತ್ತರವಾಗಿತ್ತು. ತಿನ್ನುಣ್ಣುವ, ಕುಡಿಯುವ ಕೆಲಸಗಳೆಲ್ಲ ನೇಮದಿಂದ ನಡೆಸುತ್ತಿದ್ದನು. ಸಂತೋಷದಿಂದ ಇದ್ದಾಗ ಕವಿತೆಗಳನ್ನು ಬರೆಯುತ್ತಿದ್ದನು. ಅವು ತುಂಬ ವರ್ಣಮಯವಾಗಿಯೂ, ಸುಂದರ ಶಬ್ದಗಳಿಂದ ಕೂಡಿದುವೂ ಆಗಿರುತ್ತಿದ್ದುವು. ಪ್ರತಿಶಬ್ದದಲ್ಲೂ ಚಮತ್ಕಾರಿಕ ಅರ್ಥ ವಿರುತ್ತಿತ್ತು. ಅದನ್ನು ಹುಡುಕುವವರಿಗೆ, ಆದಿಲಶಾಹನ ವರ್ಣಮಯ ಕಛೇರಿಯಲ್ಲಿ ತುಂಬ ಗೌರವವಿತ್ತು. ಅಲೀ ಆದಿಲಶಹನ ಕಾಲದಲ್ಲಿ ಪಾರಸೀ ಭಾಷೆಯಲ್ಲಿ ಭಾಷಣಮಾಡುವ ಜನರು ತುಂಬ ಇದ್ದರು. ಆದರೆ ಅಲೀ ಆದಿಲಶಹನಿಗೆ ದಕ್ಷಿಣೀಭಾಷೆಯ ಮೇಲೆ ಪೂರ್ಣ ಆಸ್ಥೆ ಇತ್ತು. ಆದ್ದರಿಂದ ಆತ ಹಿಂದುಸ್ಥಾನೀ ಬಾಷೆಯಲ್ಲಿಯೇ ಮಾತನಾಡುತ್ತಿದ್ದನು. ಅದರಿಂದಾಗಿ ಹಿಂದುಸ್ಥಾನೀ ಭಾಷೆಯಲ್ಲಿ ಬರೆಯುವ ಕವಿಗಳೂ ಬಿಜಾಪುರದಲ್ಲಿ ಬಹಳ ಜನರು ಬಂದು ನಿಂತಿದ್ದರು. ಮನೆ-ಮನೆಗಳಲ್ಲೂ ಕವಿತೆ ರಚಿಸುವವರು. ಚಮತ್ಕಾರಿಕ ಮಾತನಾಡುವ ಕೂಟವನ್ನು ಎಲ್ಲರೂ ಪ್ರಾರಂಭಿಸಿದರು. ಆ ಮಂಡಳಿಯಲ್ಲಿ ಒಬ್ಬ ಮಿಯಾನುಸ್ರತೀ ಎಂಬ ಕವಿ ಇದ್ದನು.

ಮಿಯಾ ನುಸ್ರತಿ ತನ್ನ ಯಶಸ್ವೀ ಜೀವನದಿಂದ, ದೈವಬಲದಿಂದ ಮತ್ತು ಬುದ್ಧಿವಂತಿಕೆಯ ಯೋಗದಿಂದ ಕತ್ತಿಯಂಥ ತನ್ನ ನಾಲಿಗೆಯನ್ನು ಉಪಯೋಗಿಸಿ ಶಬ್ದ ಪಾಂಡಿತ್ಯದ ರಾಜ್ಯವನ್ನೇ ಸೃಷ್ಟಿಸಿ, ವಿಜಯಿಯಾಗಿ, ಕಾವ್ಯರಾಜ್ಯದ ಅಧಿಪತಿಯಾಗಿದ್ದನು. ಆತನ ಕಾವ್ಯ, ಕಾವ್ಯದಲ್ಲಿಯ ಅರ್ಥ ಮತ್ತು ಶಬ್ದರಚನೆ ಎಲ್ಲರಿಗೂ ಒಪ್ಪಿಗೆಯಾಗಿ ಸಮಕಾಲೀನ ಕವಿಗಳಲ್ಲಿ ಮಾನ್ಯನಾಗಿದ್ದನು. ಮಿಯಾನುಸ್ರತಿಯು ಎರಡು ಕಾವ್ಯಗಳನ್ನು ರಚಿಸಿದ್ದಾನೆ. ಒಂದು 'ಗುಲ್ಶನೆ-ಇಶ್ಕ' ಎಂಬ ಕಾವ್ಯವಿದೆ. ಆ ಕಾವ್ಯದಲ್ಲಿ ಮನೋಹರ ಕುಂವರ ಮತ್ತು ಮದನ ಮಾಲತಿಯ ವಿಷಯ ಭಾವವನ್ನು ವರ್ಣಿಸಲಾಗಿದೆ. ಇನ್ನೊಂದು ಗ್ರಂಥ 'ಅಲೀನಾಮಾ' ಎಂಬುದಾಗಿ ಬರೆದಿದ್ದಾನೆ. ಆ ಗ್ರಂಥದಲ್ಲಿ ಅಲೀ ಆದಿಲಶಹ ಬಾದಶಹನ ಕಾಲದಲ್ಲಿ ಘಟಿಸಿದ ಸಂಗತಿಗಳನ್ನು ಕಾಲಾನುಕ್ರಮದಲ್ಲಿ ವರ್ಣಿಸಿದ್ದಾನೆ. ಇಂದಿನ ಡಾಂಭಿಕ ಜನರ ಮುಂದೆ ಆತ

ಬಳಸಿದ ಭಾಷೆ ಅಯೋಗ್ಯ ಹಾಗೂ ಚಿಲ್ಲರೆ ಎಂದು ಕಂಡರೂ, ಆ ಮೊದಲನೆ ಕವಿಗಳಿಗಿಂತ ಉತ್ತಮ ಪ್ರಕಾರದ ಶಬ್ದರಚನೆಗಳಿಂದ ಈತ ಗ್ರಂಥವನ್ನು ಬರೆದಿದ್ದಾನೆ. ಕಾವ್ಯದ ರುಚಿ ಗೊತ್ತಿದ್ದವರು ಮತ್ತು ವಿದ್ವಾಂಸರು ಅದನ್ನು ಅರ್ಥಮಾಡಿಕೊಂಡು ಮಾನ್ಯಮಾಡಿದ್ದಾರೆ. ಅವರು ಕವಿಯನ್ನು ಬಹುವಾಗಿ ಹೊಗಳಿದ್ದಾರೆ. ಮಿಯಾ ನುಸ್ರತಿಯ ಹಿಂದುಸ್ಥಾನೀ ಕವಿತೆಗಳ ಯೋಗ್ಯತೆಯನ್ನು ಸುಪ್ರಸಿದ್ಧ ಕವಿ 'ಖಾಕ' ನ ಕವಿತೆಗಳಿಗೆ ಹೋಲಿಸಿದ್ದಾರೆ. ನಿರ್ಮತ್ಸರತೆಯಿಂದ ಎಲ್ಲ ಕವಿಗಳೂ ಮಿಯಾ ನುಸ್ರತಿಯ ಕವಿತೆಗಳನ್ನು ಮಾನ್ಯ ಮಾಡಿದ್ದಾರೆ. ಅವುಗಳಲ್ಲಿಯ ಯೋಗ್ಯತೆಯನ್ನು ಗುರುತಿಸಿ ನಿಜವಾದ ನ್ಯಾಯವನ್ನು ನೀಡಿದ್ದಾರೆ. ಆದ್ದರಿಂದ ಅವರ ಮೇಲೆ ದೇವರ ಕೃಪೆ ಇರಲಿ. ನ್ಯಾಯ ಗೊತ್ತಿಲ್ಲದವರು, ಕಪಟಿಗಳು, ಮೂರ್ಖರು ಮತ್ತು ಇನ್ನೊಬ್ಬರ ತಪ್ಪುಗಳನ್ನೇ ಹುಡುಕುವ ಅನೇಕ ಜನರೂ ಇಂದಿನ ದಿನಗಳಲ್ಲಿದ್ದಾರೆ. ಅವರು ಯಾವಾಗಲೂ ತಮ್ಮ ಮೂರ್ಖತನದ ಆಕುಂಚಿತ ಸ್ಥಳದ ಸೆರೆಮನೆಯಲ್ಲಿ ಕೈದಿಗಳಾಗಿದ್ದಾರೆ. ಮಿಯಾ ನುಸ್ರತಿಯು ಇಂಥ ದ್ವೇಷಿ ಜನರ ಅನ್ಯಾಯವನ್ನು ಮತ್ತು ಇನ್ನೊಬ್ಬರ ಗುಣಗಳ ದೋಷಗಳನ್ನು ಹುಡುಕುವ ಜನರನ್ನೂ ವರ್ಣಿಸಿದ್ದಾನೆ. ಈ ಮಂಡಳಿಯು ಎಲ್ಲೆಲ್ಲಿ ಕಾವ್ಯದೋಷಗಳನ್ನು ಎತ್ತಿದ್ದಾರೆಯೋ ಅಲ್ಲಲ್ಲಿ ಆತ ಉತ್ತರವನ್ನೂ ಕೊಟ್ಟಿದ್ದಾನೆ.

*೫೧. ಮಿಯಾ ನುಸ್ರತಿಯ ಕೆಲವು ಉರ್ದು ಕವಿತೆಗಳು :*

*ಖರೀದಾರಕೋ ಖೂರ್ಬ ಸೌದೊಂ ಸೋ ಕಾಮ*
*ನ ದುಕಾನಕಾ ದೇಖಸಾ ಸಕ್ ಪೋವಾಮ್ ॥೧॥*

ವಸ್ತುವನ್ನು ಖರೀದಿಸಲು ಬಂದ ವ್ಯಕ್ತಿ, ಅಂಗಡಿಕಾರನ ಅಂಗಡಿ ಹೇಗಿದೆ, ವಸ್ತುಗಳನ್ನು ಹೇಗೆ ಹೊಂದಿಸಿದ್ದಾನೆ ಮತ್ತು ಕಟ್ಟಡ ಹೇಗಿದೆ ಎಂಬುದನ್ನು ನೋಡುವ ಕಾರಣವಿಲ್ಲ.

*ಮಜಾಮಿನ್ ಸೋಜ್ಯಾ ಬಜ್ಯಾ ಬಾಬ ಬೋಲ*
*ದಿಖಾಯಾ ಸಕತ ಫೈಜ ಕಾಹಕ್ ಕ ಖೋಲ ॥೨॥*

ಎಲ್ಲೆಲ್ಲಿ ನೀನು ವರ್ಣಿಸಬೇಕಾಗಿದೆಯೋ ಅಲ್ಲಿ ಉತ್ತಮ ಪ್ರಕಾರದ ಅರ್ಥವನ್ನು ತುಂಬಿ ಕವಿತೆಗಳನ್ನು ರಚಿಸು. ಅಂಥ ಶಕ್ತಿಯನ್ನು ದೇವರು ನಿನಗೆ ದಯಪಾಲಿಸಿದ್ದಾನೆ.

*ಯಕ ಯಕ ಫನ್ ಮೆ ಕೈಬ ಹರಕೆ ಕರಕೆ ಛಂದ*
*ಖಬೀಸಾಂ ಕೆಜ ಬಾಂಕೋಕೆ ತಾಹುಬಂದ ॥೩॥*

ಒಂದೊಂದು ವಿದ್ಯೆಯಲ್ಲಿ ಅನೇಕ ತರಹದ ಛಂದಗಳನ್ನು ವರ್ಣಿಸಿ, ಕಪಟ ವ್ಯಕ್ತಿಯ ನಾಲಿಗೆಯನ್ನು ಕಟ್ಟಿ ಹಾಕುವೆ.

*ಕತಾಹು ಸುಖನ್ ಸುಖ್ ತೇಸರಬೇಂ ಗುಮಾನ*
*ಕೇಷೋ ಷಾಹನಾಮಾ ದಕನಕಾ ಹೈ ಜಾನ್ ॥೪॥*

ಬಹಳ ವಿಸ್ತರಿಸದೆ, ಅಲ್ಪ ವಿಸ್ತಾರದಲ್ಲಿ ಸಂಶಯಾತೀತ ವರ್ಣನೆ ಮಾಡುವೆ. ಯಾಕೆಂದರೆ ಈ ಷಾಹನಾಮಾ ದಕ್ಷಿಣದ ಜೀವವೇ ಆಗಿದೆ.

*ಹಕೀಕತ್‌ಮೆ ಜೋ ಹೋವೆಂ ಕುತ ನಜರ*
*ಜಬಾನಪರ ರಖೆ ಆಯ ಬುಸಟ ಸಬಹುನರ ॥ ೫ ॥*

ಸತ್ಯವನ್ನು ಹೇಳುವುದಾದರೆ, ಮೂಲತಃ ಕಪಟಿಯಾಗಿದ್ದು ಇನ್ನೊಬ್ಬರ ತಪ್ಪುಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಕುಳಿತ ವ್ಯಕ್ತಿ ತನ್ನೆಲ್ಲ ಉತ್ತಮ ಗುಣಗಳನ್ನು ಪರಿತ್ಯಜಿಸಿ ಮುಖದಿಂದ ದುರ್ಗುಣಗಳನ್ನೇ ವರ್ಣಿಸುತ್ತಾನೆ.

*ಕೇಹರಯಕ ಜವಾನ ಹಜರತೆ ಗೈಬದಾನ್*
*ಸಿಕಾಯಾ ಸಬ್ ಯಾದಸೆ ಸೋ ನಿಹಾನ್ ॥ ೬ ॥*

ಅಲ್ಲಾನು ಪ್ರತಿಯೊಂದು ರಹಸ್ಯ ಭೇದಗಳನ್ನು ತನ್ನ ಬಾಯಿಂದಲೇ ಆದಮ್ ಪೈಗಂಬರರಿಗೆ ಕಲಿಸಿಕೊಟ್ಟಿದ್ದಾನೆ.

*ಹಯೇತಿಸ್ಥೆ ಜೋ ನಸ್ಲ ಆದಮ ಕೆ ಅಸ್ಲ*
*ಕಲಾಮಾನ ಉಸ್ಸೆ ಹುಯೆ ಫಸ್ಲ ಫಸ್ಲ ॥ ೭ ॥*

ಎಲ್ಲರೂ ಆದಮ ಪೈಗಂಬರನಿಂದ ಹುಟ್ಟಿದವರು. ಆದ್ದರಿಂದ ಅವರ ಮೇಲೆ ಆದಮ ಪೈಗಂಬರರ ಮಾತುಗಳ ಪ್ರಭಾವವೇ ಆಗಿದೆ. ಅರ್ಥಾತ್ ಎಲ್ಲರಿಗೂ ಆದಮ ಪೈಗಂಬರರು ಕಲಿಸಿದ್ದಾರೆ.

*ಇನೋ ಮೆ ತೆ ಜ್ಯೊಪಿ ಅರಕೆ ವೊಸ್ತಾದ*
*ರಹ್ಯಾ ಇಸ ಜಬಾನ್ ಮೆ ವಹೀ ಪಿಅರಯಾದ್ ॥ ೮ ॥*

ಕವಿತೆ ರಚಿಸುವ ಸಾಮರ್ಥ್ಯವಿದ್ದ ಜನರಲ್ಲಿ ಅವರ ಕವಿತೆಗಳು ನಾಲಗೆಯ ಮೇಲೆ ಪಾಠವಾಗಿರುತ್ತವೆ.

*ಸುಖ ನ ಬಿನ ಜಾಕತಕೆ ನೋದ ಖಖೋಲ*
*ಕೆ ಖುಷವಾಸೊ ಕದ್ರಪಾತೋ ಹೆ ಫುಲ ॥ ೯ ॥*

ಮುಖದಿಂದ ಬರುವ ಶಬ್ದಗಳಲ್ಲಿ ಯಾವ ಅರ್ಥಚಮತ್ಕಾರವೂ ಇರದಿದ್ದರೆ, ಅಂಥ ಶಬ್ದಗಳನ್ನು ಉಚ್ಚರಿಸಬೇಡ ಯಾಕೆಂದರೆ ಸುಗಂಧವಿರದ ಪುಷ್ಪಗಳನ್ನು ಯಾರೂ ವಿಚಾರಿಸುವುದಿಲ್ಲ. ಸುಗಂಧದಿಂದ ಪುಷ್ಪಗಳಿಗೆ ಯೋಗ್ಯತೆ ಬರುತ್ತದೆ.

*ನ ಕಹತಾ ಹು ಮೈ ಬೇವಕೂಫೋಂಕಿ ಬಾತ*
*ನ ಪರಕಮಹೊ ನಾಲೆ ತೋ ಹಾಸದ ನೇಹಾತ ॥ ೧೦ ॥*

ನಾನು ಮೂರ್ಖರ ವಿಷಯವನ್ನು ಹೇಳುತ್ತಿಲ್ಲ. ಮತ್ಸರದಿಂದ ನನ್ನ ಕವಿತೆಗಳನ್ನು ಓದದಿದ್ದರೆ, ಆ ವ್ಯಕ್ತಿಗಳ ಅವಶ್ಯಕತೆಯೂ ನನಗಿಲ್ಲ.

*ವಲೀ ಜ್ಯೋ ಸುಖನದಾನೆಹೆ ಸಾಹೇಬ ತಮೀಜ*
*ಕೇರೀಜ ಇಸಹುನರ ಕೊ ರಖೇನಿತ ಅಜೀಜ ॥ ೧೧ ॥*

ಆದರೆ, ಶಬ್ದಗಳ ಯೋಗ್ಯತೆಯನ್ನು ಗುರುತಿಸುವ ವಿದ್ವಾಂಸರು, ಈ ಕವಿತೆಗಳ ಯೋಗ್ಯತೆಯನ್ನು ಗುರುತಿಸಿ ನಿತ್ಯ ಪ್ರೀತಿಸುತ್ತಾರೆ.

೫೨. ಮಿಯಾ ನುಸ್ರತಿಯ ಮತ್ತಿತರ ದೈವಸ್ತುತಿ ಕವಿತೆಗಳು :

*ನ ಜೋಮೆ ಆರಿಫ ನಜರಬಾಜಕೊ ।*
*ದಿಸೆ ಹರತರಫ ತೆರೆ ಕುದ್ರತ ಕಾಮ ॥೧೨॥*

ಬ್ರಹ್ಮಜ್ಞಾನ ತಿಳಿದ ವ್ಯಕ್ತಿಗಳ ದೃಷ್ಟಿಯಲ್ಲಿ, ನಾಲ್ದೆಶೆಗಳಲ್ಲೂ, ವ್ಯಾಪಿಸಿರುವ ನಿನ್ನ ಸಾಮರ್ಥ್ಯದ ರೂಪ ಕಾಣುತ್ತದೆ.

*ಸಕತ ತುಜ ಹೈದರ ಯಾ ಕೊಮಟೀಮೆ ದಾಬ ।*
*ಪವನ ಪರಬನಾನಾ ಗಗನಕಹುಬಾಬ ॥೧೩॥*

ಹೇ ದೇವಾ, ನಿನಗೆ ಸಮುದ್ರವನ್ನು ಹತ್ತಿಕ್ಕಿ ಮಣ್ಣಿನಲ್ಲಿ ಸೇರಿಸುವ ಶಕ್ತಿ ಇದೆ. ವಾಯುವಿನ ಮೇಲೆ ಆಕಾಶವನ್ನು ನೀರಿನ ಗುಳ್ಳೆಯನ್ನಾಗಿ ಮಾಡುವ ಶಕ್ತಿ ಇದೆ.

*ಸವೋಂಕಾ ಸಮಝುಥಕ್ಕರ ಹ್ಯಾ ಹೈ ಯಹಾ ।*
*ಕೆಯಕ ಬುಡಬುಡೇಮ ಬಸಾಯಾ ಜಹಾನ್ ॥೧೪॥*

ಇಲ್ಲಿ ಎಲ್ಲರ ಜ್ಞಾನವೂ ದಣಿದು ನಿಂತಿದೆ. ಯಾಕೆಂದರೆ ಒಂದು ನೀರಿನ ಗುಳ್ಳೆಯಲ್ಲಿ ಎಲ್ಲವೂ ಕುಳಿತುಬಿಟ್ಟಿದೆ.

೫೩. ಮಿಯಾ ನುಸ್ರತಿಯ ಪೈಗಂಬರರ ಸ್ತವನ

*ದಿಖತ ಮುಖ ಪೋಹಜರತಕೊ ಅಥ ಆವೋತಾಬ ।*
*ಲಗ್ಯಾ ಡುಬನೆ ಚಷ್ಮಯೆ ಆಫತಾಬ? ॥೧೫॥*

ಹಜರತ ಪೈಗಂಬರರ ಮುಖದ ಶೋಭೆ ಮತ್ತು ತೇಜವನ್ನು ಅವಲೋಕನ ಮಾಡುತ್ತಿರುವಂತೆ ಸೂರ್ಯನ ತೇಜವು ಕಡಿಮೆಯಾಗತೊಡಗಿತು.

*ಮಸಿ ಹಾ ಕೆ ಘರಕಾ ಚಿರಾಗ ಉಸ ಪಛಾನ ।*
*ಫೇರ ಉಸ್ಕಾ ಉಸೀಪರ ರಖ್ಯಾ ಬಾದವಾನ್ ॥೧೬॥*

ಹಜರತ ಪೈಗಂಬರರು ದೇವರ ಮನೆಯ ದೀಪವಾಗಿದ್ದಾರೆಂದೇ ಅವರ ಹೆಸರು ಹಾಗಿದೆ ಮತ್ತೆ ಅವರನ್ನು ಅವರ ಹತ್ತಿರವೇ ಇಟ್ಟರು.

೫೪. ಮಿಯಾ ನುಸ್ರತಿ ಹಾಗೂ ಬಾದಶಹರ ಕವಿತಾ ಬಂಧ

ಒಂದು ದಿನ ಬಾದಶಹನು ತನ್ನ ಖಾಸಾ ಮಹಲಿನಲ್ಲಿ ಕುಳಿತಿದ್ದನು. ಅಲ್ಲಿಯ ಕಾರಂಜಿಗಳಲ್ಲಿ ನೀರು ಪುಟಿಯುತ್ತಿತ್ತು. ಹನಿಗಳು ಗಿಡದಲ್ಲಿಯ ಮುತ್ತಿನಂತೆ ಎದ್ದು ಬೀಳುತ್ತಿದ್ದುವು. ಮುತ್ತುಗಳೇ ಬೀಳುತ್ತವೆಂದು ಭಾಸವಾಗುತ್ತಿತ್ತು. ಅದನ್ನು ಕಂಡ ಬಾದಶಹನ ಮುಖದಿಂದ ಒಂದು ಸಾಲು ಕವಿತೆ ಹೊರಬಂದಿತು.

*ಕವಿತೆಯ ಒಂದು ಸಾಲು - 'ಉಡತಾ ಹೈ ಯೌಂ ಫವಾರಾ ಪಾನೀ ಭವರ್‍ಯಾನೀ ಚಲ ಹೈ'*

(ಕಾರಂಜಿಯಿಂದ ಪುಟಿಯುತ್ತಿದ್ದ ನೀರು ಹೇಗೆ ಚಮತ್ಕಾರಿಕವಾಗಿ ಕಾಣುತ್ತದೆ ಮತ್ತು ನಿರ್ಮಲವಾಗಿದೆ)

*೫೫. ಮಿಯಾ ನುಸ್ರತಿ ಅದಕ್ಕೆ ಇನ್ನೊಂದು ಸಾಲನ್ನು ಜೋಡಿಸಿದ :*

*ತುಝು ಪಾಹಪರ ಉಡಾನೆ ಮೋತ್ಯೋಂಕಾ ಮೋರಚಲ ಹೈ* ॥೧೭॥

ನೀನು ಬಾದಶಹ, ಆದ್ದರಿಂದ ನಿನ್ನ ಮೇಲೆ ಸುರಿಸಲು ಮುತ್ತುಗಳ ಸಾಲಿಗೆ ಸಾಲೇ ಬಂದು ನಿಂತಿವೆ.

*೫೬. ಮಿಯಾ ನುಸ್ರತಿ ವರ್ಣಿಸಿದ ಆದಿಲಶಹನ ಕುದುರೆ*

*ನರಹೆರ ಖುಷ ಕಾನ ವಷಸಂಗಮೆ ಬಹಾಲು* ।
*ಅಗರ ಮನಮೆ ಚ್ಯಾಬೂಕಕಾ ಗುಜರೆ ಖಿಯಾಲೂ* ॥೧೮॥

ಅಲೀ ಆದಿಲಶಹನ ಕುದುರೆ ವೇಗಿಯಾಗಿದೆ. ಆ ಕುದುರೆ ಚಾಬೂಕಿನಿಂದ ಹೊಡೆಯಬೇಕೆಂದು ಮನದಲ್ಲಿ ಬಂದರೆ ಸಾಕು, ಸವಾರನ ಮನದಲ್ಲಿಯ ಭಾವವನ್ನು ಗುರುತಿಸಿ, ಅದು ಭೂಮಿಯ ಮೇಲೆ ಹೆಜ್ಜೆಗಳನ್ನಿಡದೆ ವೇಗವಾಗಿ ಓಡುತ್ತದೆ.

*ವಸಲ್ ಹೋ ಕಹ್ಯೆ ಸೋ ನ ಹುಯೆ ಲಗ್ ಅಲಿಫ್* ।
*ಕರೆತಯ ಜಮೀನ್ ತಾಮ್ ಜ್ಯಾನೆಮೆ ಝೂಲ್* ॥೧೯॥

(ಫಾರಸೀ ಭಾಷೆಯ ಮೊದಲ ಅಕ್ಷರ) ಅಲೀಫ್ ಉಚ್ಚಾರವನ್ನು ಸವಾರ ಪೂರ್ತಿಗೊಳಿಸುವ ಮುನ್ನ ಆ ಕುದುರೆ ಜಗಿದು ಪೃಥ್ವಿಯನ್ನೇ ಆಕ್ರಮಣ ಮಾಡುತ್ತದೆ. ಪೃಥ್ವಿಯನ್ನೇ ಸುತ್ತುತ್ತದೆ.

*೫೭. ಅಲೀ ಆದಿಲಶಹನ ತಲವಾರ ಮತ್ತು ಕುದುರೆಯ ವರ್ಣನೆ :*

*ಪವನ್ ಕಿ ಜ್ಯಾಲಗ ಪೊಹಂಚ ಹೈ ವಾಲಗ ಪೊಹಂಚ ರಹ್ಯಾ ಹೈ ತುರಂಗ ತೇರಾ* ।
*ಸುರಜಕಿ ಜ್ಯಾ ಲಗ ಝುಲಕ ಹೈ ವಾಲ ಗಝುಲ ಕರ ಹ್ಯಾ ಫಿರಂಗ ತೇರಾ* ॥೨೦॥

ಎಲ್ಲಿಯವರೆಗೆ ವಾಯುಗತಿ ಮುಟ್ಟಿದೆಯೋ ಅಲ್ಲಿಯವರೆಗೂ ನಿನ್ನ ಕುದುರೆ ಹೋಗಿ ಮುಟ್ಟಿದೆ. ಸೂರ್ಯನ ತೇಜವನ್ನು ನಿನ್ನ ಕತ್ತಿಯ ತೇಜ ಮುಟ್ಟಿದೆ.

*೫೮. ಇಲ್ಲಿಗೆ ಉರ್ದು ಭಾಷೆಯ ಕವಿತೆಗಳ ರಚನೆ ಸಮಾನವಾಯಿತು.*

ಅಂದು ಹಿಂದುಸ್ತಾನಿ ಕವಿತೆ ಬರೆಯುವವರಲ್ಲಿ ಮಿಯಾ ಹಷಮಿ ಎಂಬ ಕವಿ ಇದ್ದನು. ಅವನು ಹಜರತ ಪೀರ ದಸ್ತಗೀರ ಶಾಹ ಹಷಮ ಅವರ ಪ್ರಸಾದದಿಂದ ಸಮಕಾಲೀನ ಕವಿಗಳಲ್ಲಿ ಶ್ರೇಷ್ಠನಾಗಿದ್ದನು 'ಯುಸುಫ ನಿಲೀಖಾ' ಮತ್ತು 'ಆಷಕ ಮಾಷುಕೀ' ಎಂಬ ಎರಡು ಕಾವ್ಯಗಳನ್ನು ಅವನು ಹಿಂದುಸ್ತಾನಿ

ಭಾಷೆಯಲ್ಲಿ ಬರೆದಿದ್ದಾನೆ. ಉತ್ತಮ ಅರ್ಥ ಚಮತ್ಕಾರಗಳ ಗಜಲುಗಳನ್ನು ರಚಿಸಿದ್ದಾನೆ. ಅವುಗಳನ್ನು ಎಲ್ಲ ವಿದ್ವಾಂಸರೂ ಒಪ್ಪಿದ್ದಾರೆ. ಆ ಗ್ರಂಥಗಳಲ್ಲಿ ಕಾವ್ಯ ಸುಂದರವಾಗಿ ಮೂಡಿದೆ. ಅನಂತರ ಅವುಗಳನ್ನು ಮೀರಿಸುವ ಇನ್ನೊಂದು ಗ್ರಂಥ ಬರಲಿಲ್ಲ. ವಾಸ್ತವದಲ್ಲಿ ಮಿಯಾ ಹಾಷಮಿ ಕವಿಯು ಹುಟ್ಟು ಕರುಡನಾಗಿದ್ದನು. ಆದರೆ ಬುದ್ಧಿ ನೇತ್ರದಿಂದ ಕಣ್ಣಿದ್ದವನಾಗಿದ್ದನು. ಸಿದ್ದೀ ಮಾಸೂದ ಖಾನನು ಮಿಯಾ ಹಾಷಮಿಯ ಮಿತ್ರನಾಗಿದ್ದನು. ಒಂದು ದಿನ ಸಿದ್ದಿ ಮಸೂದಖಾನ ಮಹಲಿನಲ್ಲಿ ತನ್ನ ಸ್ತ್ರೀಯರೊಂದಿಗೆ ಕುಳಿತಿದ್ದನು. ಆ ಸಮಯದಲ್ಲಿ ಮಿಯಾ ಹಾಷಮಿಯನ್ನು ಕರೆಸಿದನು. ಆಗ ಸಿದ್ದಿ ಮಾಸೂದಖಾನನ ಸ್ತ್ರೀಯರು, ಮಿಯಾ ಹಾಷಮಿಯು ಹುಟ್ಟು ಕರುಡನಾಗಿದ್ದರಿಂದ ಎದ್ದು ಹೋಗದೆ ಕುಳಿತಲ್ಲಿಯೇ ಕುಳಿತರು. ಮಿಯಾ ಹಾಷಮಿಯು ಮಹಲಿನಲ್ಲಿ ಬಂದನು ಮತ್ತು ಕಾಲಿಡುತ್ತಿದ್ದಂತೆ ಕವಿತೆಗಳನ್ನು ಅನ್ನಲು ಪ್ರಾರಂಭಿಸಿದನು. ಆ ಕವಿತೆಗಳ ಗಜಲಿನಲ್ಲಿ, ಸಿದ್ದಿ ಮಾಸೂದಖಾನನ ಸ್ತ್ರೀಯರು ಆ ಮಹಲಿನಲ್ಲಿ ಕುಳಿತದ್ದು ಮತ್ತು ಅವರು ತೊಟ್ಟ ಬಟ್ಟೆಗಳ ಬಣ್ಣ, ಅಲಂಕಾರ ಭೂಷಣ ಇತ್ಯಾದಿಗಳು ಅವರ ರೂಪ ನಡಿಗೆ, ಇತ್ಯಾದಿಗಳನ್ನು ಎಳ್ಳುಕಾಳಿನಷ್ಟೂ ತಪ್ಪದೆ, ಯಥಾವತ್ತಾಗಿ ವರ್ಣನೆ ಮಾಡಿದನು. ಸಿದ್ದಿ ಮಾಸೂದಖಾನನ ಸ್ತ್ರೀಯರು ಅಚ್ಚರಿ ಪಟ್ಟು ಆತನ ಅಂಧತ್ವದಲ್ಲಿ ಸಂಶಯಪಟ್ಟರು. ಹಾಗೂ ಅತಿ ಲಜ್ಜಿತರಾಗಿ ಒಮ್ಮೆಲೆ ಪರದೆಯ ಹಿಂದೆ ಹೋಗಿ ಕುಳಿತರು. ಇದನ್ನು ಹೇಳುವ ತಾತ್ಪರ್ಯವೆಂದರೆ, ಮಿಯಾ ಹಾಷಮೀಯು ಕುರುಡನಾಗಿದ್ದರೂ ಇಷ್ಟೊಂದು ಬುದ್ಧಿವಂತನಾಗಿದ್ದನು.

ಸಮಕಾಲೀನ ಕವಿಗಳಲ್ಲಿ ಮಿರ್ಜಾ ಮರ್ಸಿಯಾಖಾನನೂ ಒಬ್ಬನಾಗಿದ್ದನು. ಆತ ತನ್ನ ನಾಲಿಗೆಯನ್ನು ಅಲ್ಲಾನ ಸ್ತುತಿ ಮಾಡುವಲ್ಲಿ, ಪೈಗಂಬರರನ್ನು ಹೊಗಳುವಲ್ಲಿ, ಪವಿತ್ರ ಇಮಾಮರನ್ನು ವರ್ಣಿಸುವಲ್ಲಿ, ಕರ್ಬಲಾದಲ್ಲಿ ಕೊಲೆಯಾದ ಹಸನ-ಹುಸೇನರ ವರ್ಣನೆ ಮಾಡುವಲ್ಲಿ ಯಶಸ್ವಿಯಾಗಿದ್ದಾನೆ. ತಪ್ಪಿ ಕೂಡ ಆತ ಈ ಜಗದಲ್ಲಿ ಇರುವ ಬಾದಶಹರನ್ನಾಗಲೀ, ಫಕೀರರು ಇತ್ಯಾದಿ ಮನುಷ್ಯರನ್ನಾಗಲೀ ಹೊಗಳಿಲ್ಲ. ಆತನ ಕವಿತೆಗಳು ಸಮಕಾಲೀನ ಸರ್ವರಿಗೂ ಮಾನ್ಯವಾಗಿದ್ದುವು ಮತ್ತು ಜಗತ್ತಿನ ಎಲ್ಲ ನಗರಗಳಲ್ಲೂ ಪ್ರಸಿದ್ಧವಾಗಿದ್ದುವು. ಅಲೀ ಆದಿಲಶಹನು ಆತನನ್ನು ತನ್ನ ಆಸ್ಥಾನಕ್ಕೆ ಕರೆಸಿದನು. ಆತನಿಗೆ ಬಹಳಷ್ಟು ಬಕ್ಷೀಸುಗಳನ್ನು ಕೊಟ್ಟನು. ಕೆಲವು ಬಾದಶಹರ ವರ್ಣನೆ ಮಾಡಲು ಬಹಳ ಆಗ್ರಹ ಮಾಡಲಾಯಿತು. ಆಗ ಮಿರ್ಜಾ ಮರ್ಸಿಯಾಖಾನನು, ನಾನು ನನ್ನ ನಾಲಗೆಯನ್ನು ಅಲ್ಲಾನ ಹಾಗೂ ಪೈಗಂಬರರ ಸ್ತುತಿಗೆ ಅರ್ಪಿಸಿಕೊಂಡಿದ್ದೇನೆ. ಈಗ ನನ್ನ ನಾಲಗೆ ನನ್ನ ಅಂಕಿತದಲ್ಲಿಲ್ಲ ಎಂದು ಹೇಳಿದನು. ಅದನ್ನು ಕೇಳಿದ ಬಾದಶಹನು ಈ ವಿಷಯದಲ್ಲಿ ತುಂಬ ಆಗ್ರಹ ಮಾಡಿದನು. ಕೊನೆಗೆ ನಿರುಪಾಯನಾಗಿ ಮಿರ್ಜಾ ಮರ್ಸಿಯಾಖಾನನು ಒಂದೆರಡು ಕವಿತೆಗಳನ್ನು ಬರೆದು ಕೊನೆಯಲ್ಲಿ ತನ್ನ ಅಂಕಿತದ ಬದಲಾಗಿ ಅಲೀ ಆದಿಲಶಹನ ಹೆಸರನ್ನೇ ಹಾಕಿದನು. ಆ ಕವಿತೆಗಳಲ್ಲಿ ಅಲಿ ಆದಿಲಶಹನ ವರ್ಣನೆಯನ್ನೇ ದ್ವಂದ್ವಾರ್ಥದಲ್ಲಿ ಮಾಡಿದ್ದನು. ಈ ಕವಿಯ ಇನ್ನೊಂದು ಸ್ವಭಾವವೆಂದರೆ, ಸತ್ತವರ ಬಗ್ಗೆ ಬರೆಯುತ್ತಿದ್ದನು. ಶೋಕ ಗೀತೆಗಳನ್ನು ಬರೆದಿದ್ದಾನೆ.

ಒಂದು ರಾತ್ರಿ ಮರ್ಸಿಯಾಖಾನನ ಕಛೇರಿಯಲ್ಲಿ ಎಲ್ಲ ಜನರು ಸೇರಿದ್ದರು. ಅಲ್ಲಿ ಶೋಕಗೀತೆಗಳನ್ನೇ ಓದುತ್ತಿದ್ದರು. ಅದನ್ನು ಕೇಳಿದ ಜನರು ಅತ್ಯಂತವಾಗಿ ಶೋಕಿಸುತ್ತಿದ್ದರು. ಅಷ್ಟರಲ್ಲಿ 'ಹಮಿಸ್ತಾ' ಅಂದರೆ ದ್ವಿಪದಿಯ ಒಂದು ಸಾಲು ಅವನ ಮುಖದಿಂದ ಹೊರಬಿದ್ದಿತ್ತು. "ದಿಲಾಹ್ಯಾಂಕಾ ಆಮರಾರ ಕರ ರಷೋ ಸೀನೇತ ಬಲಾಮ್ಯಾನೆ". ಇದರ ಅರ್ಥ ಹೀಗಿದೆ : "ಹೃದಯ ತಟ್ಟೆಯಲ್ಲಿ ದಾಳಿಂಬಗಳನ್ನು

ಇಡಿರಿ ಅಂದರೆ ಶೋಕವನ್ನು ಸಹಿಸಿರಿ" ಹಾಗೆ ಅನ್ನುತ್ತಿದ್ದಂತೆಯೇ ಎಲ್ಲರ ಶೋಕವೂ ನಿಂತಿತು. ಇನ್ನೊಂದು ಸಾಲು ಹೊಳೆಯಲೇ ಇಲ್ಲ. ಆಗ ಮಿರ್ಜಾನಿಗೆ ಅದರಿಂದ ತುಂಬ ಕೆಡುಕೆನಿಸಿತು. ಹಾಗೆ ಖಿನ್ನನಾಗಿ ತೂಕಡಿಸುತ್ತಿದ್ದಾಗ ಅವನ ನಿದ್ರೆಯಲ್ಲಿ ಹಜರತ ರಸೂಲಿಲ್ಲಾಹ ಆಲಹೆ ವಸ್ಸಲಮ್‌ರು ಬಂದು ಆಜ್ಞೆ ಮಾಡುತ್ತ ಹೀಗೆ ಇನ್ನೊಂದು ಸಾಲನ್ನು ಓದು ಎಂದರು. ಆ ಸಾಲು ಹೀಗಿದೆ. 'ನಬೀ ಆವೆಂಗೆ ಮಹಷರಕೊಯೊಂತೋಹೆ ಫಾಕರ ಲಿಜ್ಯಾ ನಾಹೆ' ಅದರ ಅರ್ಥ ಅಂತ್ಯಕಾಲದ ಪ್ರಳಯ ಸಮಯದಲ್ಲಿ ಪೈಗಂಬರರು ಬರುತ್ತಾರೆ. ಆಗ ಈ ಉತ್ತಮ ಪದಾರ್ಥಗಳನ್ನು ತೆಗೆದುಕೊಂಡು ಕಾಣಿಕೆಯಾಗಿ ಕೊಡಲು ಹೋಗಬೇಕಾಗುತ್ತದೆ'. ಎಂಬುದಾಗಿ ಸೂಚಿಸಿದರು. ಆಗ ಮಿರ್ಜಾನು ಕಿಂಚಿತ್ ಎಚ್ಚತ್ತು ಆ ದ್ವಿಪದಿಯನ್ನು ಪೂರ್ತಿಗೊಳಿಸಿದನು.

ಅವನ ಬಗ್ಗೆ ಇನ್ನೊಂದು ಕಥೆಯೂ ಇದೆ. ಮಿರ್ಜಾನ ಮರಣವು ಮೊಹರಮದ ಹತ್ತನೆಯ ದಿನವಾಯಿತು. ಮೊಹರಮದ ಕೊನೆಯ ದಿನ ಮಿರ್ಜಾನು ರಾತ್ರಿ ಇಡೀ ಕವಿತೆಗಳನ್ನು ರಚಿಸುವಲ್ಲಿ ಕಳೆದು ಪ್ರಾತಃಕಾಲದಲ್ಲಿ ಶೌಚಕ್ಕಾಗಿ ಮತ್ತು ಕೈ-ಕಾಲು ತೊಳೆಯಲು ಹೊರಗೆ ಹೋದನು. ಆಗ ಒಬ್ಬ ಶತ್ರು ವಿನಾಕಾರಣ ಮಿರ್ಜಾನನ್ನು ಹೊಡೆಯಲು ಅವಕಾಶಕ್ಕಾಗಿ ಕಾಯುತ್ತಿದ್ದನು. ಇದುವೇ ಸುಸಂಧಿ ಎಂದು ತಿಳಿದು ತನ್ನ ಕಿರುಗತ್ತಿಯಿಂದ ಮಿರ್ಜಾದ ಹೊಟ್ಟೆಯನ್ನು ಇರಿದನು. ತಕ್ಷಣ ಮಿರ್ಜಾ ಸತ್ತನು.

ಪ್ರಾತಃಕಾಲದಲ್ಲಿ ದಕ್ಷಿಣ ದೇಶದ ಜನರ ರೂಢಿಯಂತೆ ಎಲ್ಲ ಮೊಹರಮದ ತಾಬೂತಗಳನ್ನು ಪಂಜಾಗಳನ್ನು ಮನೆಮನೆಗಳಿಂದ ಹೊರಗೆ ತೆಗೆದುಕೊಂಡು ನೀರಿಗೆ ಒಯ್ಯುತ್ತಿದ್ದರು. ಆ ಸಮಯದಲ್ಲಿ ಅಲೀ ಆದಿಲಶಹನು ನಗರದಲ್ಲಿಯ ಎಲ್ಲರಿಗೂ "ಎಲ್ಲ ತಾಬೂತಗಳನ್ನು-ಪಂಜೆಗಳನ್ನು ಫತ್ತೇ ದರವಾಜದ ಮುಖಾಂತರವೇ ತರಬೇಕೆಂದು" ಆಜ್ಞೆ ನೀಡಿದನು. ಅದರಂತೆ ಎಲ್ಲರೂ ಅದೇ ಬಾಗಿಲಿನಿಂದ ತಾಬೂತಗಳನ್ನು-ಪಂಜೆಗಳನ್ನು ತಂದರು. ಎಲ್ಲ ತಾಬೂತ-ಪಂಜೆಗಳು ಹೋದ ನಂತರ ಕೊನೆಯ ತಾಬೂತದ ಹಿಂದೆ ಮಿರ್ಜಾನ ಹೆಣವನ್ನು ತಂದರು. ಮಿರ್ಜಾನ ಶಿಷ್ಯ ಮಂಡಳಿ, ಆತನ ಹೆಣದ ಮುಂದೆ ಶೋಕಗೀತೆಗಳನ್ನು ಹಾಡುತ್ತಿದ್ದರು. ಆತನ ಹೆಣದ ಸುತ್ತಲಿನ ಜನಸಮೂಹಕ್ಕೆ ಅಂತವೇ ಇರಲಿಲ್ಲ. ಆತನ ಹೆಣವನ್ನು ಹಜರತ ಶಾಹ ಮುರ್ತಜಾ ಕಾದರಿ ಅವರ ಸಮಾಧಿಯ ಹತ್ತಿರ ದಫನ ಮಾಡಲಾಯಿತು.

ಇವರಲ್ಲದೆ ಅನೇಕ ಜನ ಹಿಂದುಸ್ತಾನಿ ಕವಿತೆಗಳನ್ನು ಬರೆಯುವ ಕವಿಗಳಿದ್ದರು. ಅವರೆಲ್ಲರ ಕವಿತೆಗಳೂ ಆ ಕಾಲದಲ್ಲಿ ಪ್ರಸಿದ್ಧವಾಗಿದ್ದುವು. ಶಾಹ ಅಬುಲ್ ಮಾನೀ, ಮುಲ್ಲಾ ಅಬ್ದುಲ ರಿಜಾಹಿಯಾ, ಆವೀಸ, ಅಬ್ದುಲ ಕಾದರ ನವರಸೀ, ಅಬ್ದುಲ್ ಲತೀಫ ಮತ್ತು ಅಬ್ದುಲ ನಬೀ ಮುಂತಾದ ಮಹಾ ಕವಿಗಳಿದ್ದರು. ಅವರಲ್ಲದೆ ಇರಾಣ ದೇಶದ, ಅಲಮ್ ದೇಶದ ಕವಿಗಳೂ ಇದ್ದರು.

### ೪೯. ಅಲೀ ಆದಿಲಶಹ ಮರಣ ಹೊಂದಿದ ಕಾರಣ :

ಅಲೀ ಆದಿಲಶಹನು ವಿಷಯಭೋಗದಲ್ಲಿ ಮತ್ತು ಸ್ತ್ರೀಯರ ವಿಲಾಸಸುಖದಲ್ಲಿ ನಿರಂತರ ವೇಳೆ ಕಳೆಯುತ್ತಿದ್ದನು. ಶೃಂಗಾರ ವಿಷಯಗಳಲ್ಲಿ ತುಂಬ ಆಸ್ಥೆ ಇದ್ದಿತು. ವಿಷಯ ಭೋಗದಲ್ಲಿ ಬಹಳ ಪ್ರಯತ್ನಮಾಡಿ ಭೋಗಿಸುತ್ತಿದ್ದನು. ಒಂದು ದಿನ ಉಷ್ಣ ಔಷಧವನ್ನು ಮತ್ತು ಸ್ತಂಭನ ಅಂದರೆ ವೀರ್ಯ ನಿಲ್ಲುವ

ಔಷಧವನ್ನು ಸೇವಿಸಿ, ರಾತ್ರಿ ಬಹಳ ಹೊತ್ತು ಸ್ತ್ರೀ ಭೋಗ ಮಾಡಿದನು. ವಿಷಯ ಭೋಗಿಸಿ ಔಷಧದಿಂದ ತುಂಬ ದಾಹವಾಯಿತು. ಆಗ ಮೇಲಿಂದ ಮೇಲೆ ತಣ್ಣೀರನ್ನು ಕುಡಿದನು. ನಸುಕಿನಲ್ಲಿ ದಿನಾಂಕ ನಾಲ್ಕು ತಿಂಗಳು ರಬಿಲಾವಲದಂದು (೨೦, ಜೂನ ೧೬೭೨) ಮುಜಫರಖಾನನು ಬಿದನೂರಿನ ಕಾಳಗದಲ್ಲಿ ವಿಜಯಿಯಾಗಿ ಹಿಂತಿರುಗಿದ್ದನು. ಅವನನ್ನು ಎದುರುಗೊಳ್ಳಲು ಹೋಗಬೇಕೆಂದು ಖದೀಜಾಪುರದವರೆಗೆ ಬಾದಶಹನ ಸವಾರಿಯು ಬಂದಿತ್ತು. ದಾರಿಯಲ್ಲಿ ತುಂಬ ಗಾಳಿ ಬಡಿದು ಬಾದಶಹನು ತುಂಬ ಸುಸ್ತಾಗಿ ಬಹುಬೇಗ ಹಿಂತಿರುಗಿದನು. ಅರಮನೆಯನ್ನು ಮುಟ್ಟುತ್ತಿದ್ದಂತೆ, ದಿನದ ಸುಮಾರು ಆರನೆಯ ಗಂಟೆಯಲ್ಲಿ ಬಾದಶಹನಿಗೆ ಪಾರ್ಶ್ವವಾಯುಬಡಿದು ಅರ್ಧ ಶರೀರ ನಿಷ್ಕ್ರಿಯವಾಯಿತು. ಮುಂದಿನ ಒಂದೂವರೆ ದಿನ ಕಾಲ ಬಾದಶಹನಿಗೆ ಎಚ್ಚರವೇ ಇರಲಿಲ್ಲ. ಅನಂತರ ಮೂರನೆಯ ದಿನ ಬಾದಶಹನು ಕಿಂಚಿತ್ ಎಚ್ಚರವಾದನು. ಆತನ ಅರ್ಧ ಶರೀರ ಬಿದ್ದು ಹೋಗಿತ್ತು.

ಅಬ್ದುಲ್ ಮಹಮ್ಮದ ಮತ್ತು ಖವಾಸಖಾನರಿಗೆ ಈ ವಿಷಯ ತಿಳಿಯುತ್ತಿದ್ದಂತೆ, ಆ ಉಭಯತರೂ ತಂತಮ್ಮ ಮನೆಗಳಿಂದ ಓಡಿಬಂದು ಬಾದಶಹನನ್ನು ನೋಡಿದರು. ಅತಿ ಚಿಂತಿತರಾದರು. ಮುಜಫರಖಾನ, ಮಿರ್ಜಾ ಯೂಸುಫ, ಅಲೀ ಮುಹೀಬತಖಾನ, ಧರ್ಮಾಜಿ ಪಂಡಿತ, ದಬೀರ ಹಿಂದು ಅವರುಗಳು ಬಾದಶಹನಿಗೆ ತೀರ ಹತ್ತಿರದವರಾಗಿದ್ದು, ಏಕಾಂತ ಮಿತ್ರರಾಗಿದ್ದರು, ಧರ್ಮಾಜಿ ಪಂಡಿತನಂತೂ ಬಾದಶಹನ ಸೇವೆಯಲ್ಲೆ ತತ್ಪರನಾಗಿದ್ದನು. ಆತ ಅರಮನೆಯ ದೊಡ್ಡ ಬಾಗಿಲನ್ನು ಮುಚ್ಚಿ, ಹೋಗಿ-ಬರಲು ಕಿರಿಬಾಗಿಲನ್ನು ತೆರೆದಿಟ್ಟನು. ಹಕೀಮ ಶಮಸುದ್ದೀನ ಖಾನ ಮತ್ತೆ ಹಲವು ಜನರು ಬಂದು ಔಷಧ ಕೊಡುವಲ್ಲಿ ಮಗ್ನರಾದರು. ಮೂರು ನಾಲ್ಕು ದಿನಗಳಾದ ಮೇಲೆ ಬಾದಶಹನು ಮೊದಲಿನಂತೆ ಶುದ್ಧಿಯ ಮೇಲೆ ಬಂದನು. ಆದರೂ ಆರೋಗ್ಯ ಸುಧಾರಿಸಿರಲಿಲ್ಲ. ರೋಗವು ದಿನದಿಂದದಿನಕ್ಕೆ ವೃದ್ಧಿಸುತ್ತಲೇ ಇತ್ತು. ಅಂಥ ಪರಿಸ್ಥಿತಿಯಲ್ಲೆ ಅಲ್ಲಿಂದಲ್ಲಿಯೇ ಸರಿಯಾದ ಆದೇಶಗಳನ್ನು ನೀಡುತ್ತ ರಾಜ್ಯದ ಕೆಲಸಗಳನ್ನು ನಡೆಸುತ್ತಿದ್ದನು. ಅಬ್ದುಲ್ ಮಹಮ್ಮದ ಮತ್ತು ಖವಾಸಖಾನರು ಬಂದು ಹೋಗುತ್ತಿದ್ದನು. ದಿಯಾನತರಾವ ಮತ್ತು ಮಿಯಾ ಅಬ್ದುಲ್‌ರು ಮೊದಲಿನಂತೆಯೇ, ಬಾದಶಹನ ಹತ್ತಿರ ಬಂದು ಹೋಗುತ್ತಿದ್ದರು. ರಾಜ್ಯಕಾರಭಾರ ಎಂದಿನಂತೆ ನಡೆಯಹತ್ತಿತು.

ಅಬ್ದುಲ್ ಮಹಮ್ಮದನು ತುಂಬ ಪ್ರಭಾವಶಾಲಿ ಹಾಗೂ ಪ್ರಬಲನಾಗಿದ್ದನು. ಆದ್ದರಿಂದ ಯಾರೂ ಆತನಿಗೆ ಏನು? ಯಾಕೆ? ಎಂದು ಕೇಳುವ ಶಕ್ತಿ ಇರಲಿಲ್ಲ. ಬಾದಶಹನು ಜೀವಂತ ಇರುವವರೆಗೆ ಒಟ್ಟಾರೆ ಕಾರಭಾರಿ ಮಂಡಳಿಯಲ್ಲಿ ಒಡಕುಂಟಾಗಿರಲಿಲ್ಲ. ದಿಯಾನತರಾಯನು ಒಳಗೂ-ಹೊರಗೂ ಅಬ್ದುಲ್ ಮಹಮ್ಮದನೊಂದಿಗೆ ಪೂರ್ಣ ಒಮ್ಮತ್ತ ಮತ್ತು ಸ್ನೇಹದಿಂದ ಇದ್ದನು. ಮಿರ್ಜಾ ಯೂಸುಫಖಾನನು ಖವಾಸಖಾನನ ಪಕ್ಷಪಾತ ಮಾಡುತ್ತಿದ್ದನು. ಧರ್ಮಾಜಿ ಪಂಡಿತನು ಅಬ್ದುಲ ಮಹಮ್ಮದ ಮತ್ತು ದಿಯಾನತರಾಯನೊಂದಿಗೆ ಸರಿ ಇರಲಿಲ್ಲ. ಧರ್ಮಾಜಿ ಪಂಡಿತನು ತನ್ನ ಬಿಡುಗಡೆಗಾಗಿ ಮುಜಫರಖಾನನೊಂದಿಗೆ ತುಂಬ ಯತ್ನಿಸಿದನು. ಖವಾಸಖಾನ ಹಾಗೂ ಮುಜಫರಖಾನ ಉಭಯತರು ರಾಜಧಾನಿಯ ಕೆಲಸಕಾರ್ಯಗಳು ಸುರಕ್ಷಿತವಾಗಿ ನಡೆಯಬಾರದೆಂದು ಬಯಸುತ್ತಿದ್ದರು ಎಂಬುದು ಅಲೀ ಆದಿಲಶಹ ಬಾದಶಹನಿಗೆ ತಿಳಿದಿತ್ತು.

ಅಬ್ದುಲ ಮಹಮ್ಮದನು ಹನ್ನೆರಡು ವರುಷ ರಾಜ್ಯದ ಸೂತ್ರಗಳನ್ನು ಹಿಡಿದು ರಾಜಧಾನಿಯ ಎಲ್ಲ ಹಿರಿ-ಕಿರಿ ಕೆಲಸಗಳನ್ನು ಬಲ್ಲವನಾಗಿದ್ದನು. ಶಿವಾಜೀ ಭೋಸಲೆ, ಅಬ್ದುಲ್ ಕರಿಮ ಮತ್ತಿತರ

ಅನೇಕ ಕಾರಭಾರಿಗಳು ಅಬ್ದುಲ ಮಹಮ್ಮದನ ಆದೇಶದಂತೆ ನಡೆದು ಆತನ ಅಂಕಿತದಲ್ಲಿದ್ದರು. ಅವರೆಲ್ಲರೂ ಶ್ರೇಷ್ಠ ಯೋಗ್ಯತಾವಾನ ರಾಜಕುಮಾರನನ್ನು ಅಬ್ದುಲ್ ಮಹಮ್ಮದನ ವಶದಲ್ಲಿ ಕೊಟ್ಟು ರಾಜಧಾನಿಯ ಎಲ್ಲ ಕೆಲಸಗಳೂ ಸುಸೂತ್ರವಾಗಿ ಅವನ ಮುಖ್ತ್ಯಾರಿಯಲ್ಲೇ ನಡೆಯಬೇಕೆಂದು ಬಯಸಿದ್ದರು. ಬಾದಶಹನು ಜೀವಂತನಿರುವಾಗಲೇ ರಾಜಕುಮಾರನನ್ನು ಸಿಂಹಾಸನದ ಮೇಲೆ ಕೂಡಿಸಬೇಕೆಂಬುದು ಅವರ ಇಚ್ಛೆಯಾಗಿತ್ತು. ಆದರೆ ಅಬ್ದುಲ್ ಮಹಮ್ಮದನಿಗೆ ಒಂದು ಸಂಶಯಕಾಡುತ್ತಿತ್ತು. ಈ ಮೊದಲು ಆದಿಲಶಾಹೀ ರಾಜ್ಯದಲ್ಲಿ ಹೊಸ ಬಾದಶಹನನ್ನು ಸಿಂಹಾಸನದ ಮೇಲೆ ಕೂಡಿಸಿ ರಾಜಧಾನಿಯ ಸೂತ್ರಗಳನ್ನು ಹಿಡಿದು ಕೆಲಸಸಾಗಿಸಿದ ಯಾವುದೇ ಕಾರಭಾರಿ ಅತಿ ಬೇಗ ಮರಣ ಹೊಂದುತ್ತಿದ್ದನು. ಆದ್ದರಿಂದ ಅಬ್ದುಲ್ ಮಹಮ್ಮದನ ತಾಯಿಯು ಆತನಿಗೆ 'ನೀನು ಈ ಕೆಲಸದಲ್ಲಿ ಬೀಳಬೇಡ, ನೀನು ಸಿಂಹಾಸನದ ಮೇಲೆ ಕೂಡಿಸಬೇಡ' ಎಂದು ಅಡ್ಡಿ ಮಾಡುತ್ತಿದ್ದಳು. ಮತ್ತು ಈ ವಿಷಯದಲ್ಲಿ ಆಣೆಯನ್ನೂ ಹಾಕಿದ್ದಳು. 'ಒಂದು ವೇಳೆ ನೀನು ಈ ಕೆಲಸದಲ್ಲಿ ಬಿದ್ದರೆ ನಾನು ನಿನಗೆ ನನ್ನ ತಾಯಿ ಹಾಲಿನ ಬಕ್ಷೀಸನ್ನು ಕೊಡುವುದಿಲ್ಲ' ಎಂದಿದ್ದಳು.

ಹಾಲಿನ ಬಕ್ಷೀಸು ಮುಸಲಮಾನ ಜನರ ಒಂದು ಆಚರಣೆ. ತಾಯಿಯಾದವಳು ತನ್ನ ಮಗನಿಗೆ ಚಿಕ್ಕಂದಿನಿಂದಲೂ ಹಾಲನ್ನು ಕೊಟ್ಟು ಬೆಳೆಸಿರುತ್ತಾಳೆ. ಆ ಉಪಕಾರ ಮಗನಿಂದ ಯಾವತ್ತೂ ತೀರಿಸುವ ಹಾಗಿರುವುದಿಲ್ಲ. ಆದ್ದರಿಂದ ಮಗನು ದೊಡ್ಡವನಾದಮೇಲೆ, ಹಾಲಿನ ಉಪಕಾರಕ್ಕೆ ತಾಯಿಗೆ ನಮಸ್ಕಾರ ಮಾಡಿ ಕ್ಷಮೆಯನ್ನು ಬೇಡಬೇಕಾಗುತ್ತದೆ. ಅದಕ್ಕೆ ತಾಯಿಯು "ನಾನು ನಿನಗೆ ನನ್ನ ಹಾಲನ್ನು ಬಕ್ಷೀಸಾಗಿ ಕೊಟ್ಟಿದ್ದೇನೆ" ಎಂದು ಹೇಳಿದಾಗ ಮಾತ್ರ ಆ ಮಗ ಅವಳ ಉಪಕಾರದಿಂದ ಬಿಡುಗಡೆಯಾಗುತ್ತಾನೆಂದು ರೂಢಿಯಲ್ಲಿದೆ. ಈ ಶಾಸ್ತ್ರಾರ್ಥ ರೀತಿಯಿಂದ, ಅಬ್ದುಲ ಮಹಮ್ಮದನ ತಾಯಿ ತನ್ನ ಮಗನಿಗೆ ಮೇಲಿನಂತೆ ಹೇಳಿದ್ದಳು. ಹೀಗಾಗಿ, ಬಾದಶಹನನ್ನು ಸಿಂಹಾಸನದ ಮೇಲೆ ಕೂಡಿಸುವವನು ಬೇಗ ಸಾಯುತ್ತಾನೆ ಎಂಬ ನಂಬಿಕೆ, ತಾಯಿ ಇಟ್ಟಿದ್ದ ಬಕ್ಷೀಸಿನ ಆಣೆ ಹೀಗೆ ಅಬ್ದುಲ ಮಹಮ್ಮದನು ಈ ಎರಡು ಕಾರಣಗಳಿಂದ ಯುವರಾಜನನ್ನು ಸಿಂಹಾಸನರೋಹಣ ಮಾಡಿಸಲು ಮನಸ್ಸನ್ನು ಹಾಕಿರಲಿಲ್ಲ.

ಒಂದು ದಿನ ಅಲೀ ಆದಿಲಶಹನು ಅಬ್ದುಲ ಮಹಮ್ಮದನಿಗೆ ಆಜ್ಞೆ ಮಾಡುತ್ತ 'ನಾನು ಇನ್ನು ಈ ರೋಗದಿಂದ ಮುಕ್ತನಾಗುವುದಿಲ್ಲವೆಂದು ಕಾಣುತ್ತದೆ. ದಿಲ್ಲಿಯ ಮೊಗಲರು ಸನ್ನಿಧಿಯಲ್ಲೇ ಇದ್ದಾರೆ. ಶಿವಾ ಭೋಸಲೆಯಂಥ ಶತ್ರುಗಳು ಜಪ್ಪಿಸಿ ಕುಳಿತಿದ್ದಾರೆ. ನಾನು ಸತ್ತನಂತರ ಏನಾದೀತು? ಯಾವ ಸಂಕಟ ಎದುರಾದೀತು? ಎಂಬುದನ್ನು ದೇವರೇ ಬಲ್ಲ. ಆದ್ದರಿಂದ ಈಗ ನೀವು ರಾಜಕುಮಾರನನ್ನು ನನ್ನ ಕಣ್ಣೆದುರಿಗೇ ಸಿಂಹಾಸನದ ಮೇಲೆ ಕುಳ್ಳರಿಸಿದರೆ ಸರಿ ಎಂದು ಕಾಣುತ್ತದೆ. ಮತ್ತು ರಾಜ್ಯದ ಸೂತ್ರಗಳನ್ನೆಲ್ಲ ನಿಮ್ಮ ಕೈಯಲ್ಲೇ ಇಟ್ಟುಕೊಂಡು ಈ ರಾಜ್ಯವನ್ನು ಸಂರಕ್ಷಿಸಿರಿ. ಹೀಗೆ ಮಾಡುವುದರಿಂದ ನನ್ನ ಮರಣದ ಬಳಿಕ ಯುದ್ಧ ಮಾಡುವ ಮತ್ತು ನಿಮ್ಮನ್ನು ಎದುರಿಸುವ ಸಾಮರ್ಥ್ಯ ಯಾವ ಶತ್ರುವಿನಲ್ಲೂ ಉಳಿಯುವುದಿಲ್ಲ". ಎಂದು ಹೇಳಿದನು. ಆದರೆ ಅಬ್ದುಲ ಮಹಮ್ಮದನು ಆಗಲಿ, ಆಗಲಿ ಎನ್ನುತ್ತ, ಮುಂದೆ ಹಾಕುತ್ತ ಬಾದಶಹನ ಆಜ್ಞೆಯನ್ನು ಅನುಷ್ಠಾನಗೊಳಿಸಲಿಲ್ಲ. ದಿಯಾನತರಾವ ಮತ್ತು ರಾಜ್ಯದ ಕಲ್ಯಾಣವನ್ನು ಬಯಸುವ ಬೇರೆ ಅನೇಕ ಕಾರಭಾರಿ ಮಂಡಳಿಯು ಅಬ್ದುಲ ಮಹಮ್ಮದನಿಗೆ ಸಾಕಷ್ಟು ತಿಳಿಸಿ ಹೇಳಿದರು. "ತಾವು ಜೀವಂತ ಇರುವಾಗಲೇ ರಾಜಕುಮಾರನನ್ನು ರಾಜ್ಯದ ಕಾರಭಾರವನ್ನು ನಿಮ್ಮ ಕೈಯಲ್ಲೇ ಕೊಡಬೇಕೆಂಬುದು ಬಾದಶಹರ ಮನದಲ್ಲಿದೆ. ಆದ್ದರಿಂದ ನೀವು ಏನೊಂದೂ ಭಯ ಪಡದೆ, ಈ ಕೆಲಸದಲ್ಲಿಂದ ಮನಸ್ಸನ್ನು ತೆಗೆಯಬೇಡಿರಿ. ಇಲ್ಲವಾದಲ್ಲಿ ಪ್ರಸಂಗವು ವಿಪರೀತಕ್ಕೆ ಹೋಗುತ್ತದೆ.

ನಿಮ್ಮನ್ನು ಯಾರೂ ಕೆಲಸದ ಮೇಲೆ ಇರಗೊಡುವುದಿಲ್ಲ" ಎಂದು ಹೇಳಿದರು. ಆದರೆ ಅಬ್ದುಲ ಮಹಮ್ಮದ ಕಿವಿಯಲ್ಲಿ ಹಾಕಿ ಕೊಳ್ಳಲಿಲ್ಲ. ಈ ಮಾತುಗಳಿಂದ ಕಾರಭಾರಿ ಮಂಡಳಿಯು ಒಪ್ಪಲಿಲ್ಲ. ಅದರಿಂದಾಗಿ ಬಾದಶಹನಿಗೆ ತುಂಬ ಚಿಂತೆಯಾಯಿತು ಮತ್ತು ಮನಸ್ಸಿಗೆ ತುಂಬ ಕೆಡುಕೆನಿಸಿತು. ಆದರೆ ಬಾದಶಹನು ಬೇನೆಯಿಂದ ತುಂಬ ಹಣ್ಣಾಗಿ ದಣಿದಿದ್ದನು. ಅದರಿಂದಾಗಿ ಈ ವಿಷಯದಲ್ಲಿ ವ್ಯವಸ್ಥೆಯನ್ನು ಮಾಡಲು ಸಾಧ್ಯವಾಗಲಿಲ್ಲ.

ಅಬ್ದುಲ ಮಹಮ್ಮದನ ದೈವವೂ ತಿರುಗಿತ್ತು. ಆತನ ವೈಭವ-ಅಧಿಕಾರ ಹೋಗುವ ಕಾಲವೂ ಬಂದಿತ್ತು. ಆದ್ದರಿಂದಲೇ ಬಾದಶಹನ ಆಜ್ಞೆಯನ್ನು ಧಿಕ್ಕರಿಸಿದನು. ಮತ್ತೇನೋ ಯೋಜನೆಯನ್ನು ಹಾಕತೊಡಗಿದ್ದನು. ಅದೇ ಬಾದಶಹನು ಸ್ವತಃ ಬೇರೊಂದನ್ನು ನಿರ್ಧರಿಸಿದನು. ಖವಾಸಖಾನನು ರಾಜಕುಮಾರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಆತನೇ ರಾಜ್ಯದ ಸೂತ್ರಗಳನ್ನು ವಹಿಸಿಕೊಳ್ಳಬೇಕೆಂದು ಮನದಲ್ಲಿ ನಿಶ್ಚಯಿಸಿದನು. ಅದರಂತೆ, ಖವಾಸಖಾನನು ಶಹಾದುರ್ಗ, ಕಲಬುರ್ಗಿ ಮತ್ತು ಸಕರದಾದ ಕೋಟೆಗಳನ್ನು ತನ್ನಲ್ಲಿಟ್ಟುಕೊಂಡು ಮೊಗಲರ ಮೇಲೆ ಹಲ್ಲೆ ಮಾಡಬೇಕು. ಅಬ್ದುಲ ಕರೀಮ ಮತ್ತು ಬಹಲೋಲಖಾನರ ಹತ್ತಿರ ಮಿರಜದ ಕೋಟೆ ಮೊದಲೇ ಇತ್ತು. ಪನ್ಹಾಳದ ಕೋಟೆಯನ್ನು ಈ ಉಭಯತರ ವಶಕ್ಕೆ ಕೊಟ್ಟು ಆ ಇಬ್ಬರನ್ನೂ ಶಿವಾಜಿಯನ್ನು ಶಿಕ್ಷಿಸಲು ನೇಮಿಸಬೇಕು. ಮುಜಫರಖಾನನನ್ನು ಬಿದನೂರಿನ ಕಡೆಗೆ ಕಳಿಸಬೇಕು. ಈ ಎಲ್ಲರೂ ಖವಾಸಖಾನನ ಆಜ್ಞೆಯಂತೆ ನಡೆದುಕೊಳ್ಳಬೇಕು ಎಂದು ಆಜ್ಞೆಮಾಡಿದನು.

ಖವಾಸಖಾನನು ಈ ಆಜ್ಞೆಯನ್ನು ದೇವರ ಆಜ್ಞೆಯೆಂದೇ ತಿಳಿದು ಒಪ್ಪಿಕೊಂಡನು. ಉಳಿದೆಲ್ಲ ಸದರೀ ಮಂಡಳಿಯು ಪರಸ್ಪರರು ಚರ್ಚಿಸಿ ಖವಾಸಖಾನನ ಹೇಳಿಕೆಯಂತೆ ನಡೆಯಲು ನಿಶ್ಚಯಿಸಿದರು. ಬಾದಶಹ ಸತ್ತನಂತರ ಮರುದಿನ ಈ ಕರಾರುಗಳನ್ನು ಕ್ರಿಯೆಯಲ್ಲಿ ತರಬೇಕೆಂದು ನಿರ್ಧರಿಸಿದರು. ಬಾದಶಹನ ಬೇನೆ ಇನ್ನೂ ಅಧಿಕವಾಗುತ್ತಲೇ ಹೋಯಿತು. ಅವನ ಶರೀರದ ಚಲನವಲನವೇ ನಿಂತಿತು. ಔಷಧ ಉಪಾಯಗಳು ಯಾವುದೂ ನಾಟಲಿಲ್ಲವಾಯಿತು. ಅಬ್ದುಲ ಮಹಮ್ಮದನಿಗೆ ಮನಸ್ಸಿಲ್ಲ ಎಂಬುದನ್ನು ತಿಳಿದು ದಿಯಾನತರಾಯನು ನಿರಪಾಯನಾಗಿ, ನಿರಾಶನಾಗಿ ಯಾರದಾದರೂ ಆಶ್ರಯ, ಆಧಾರ ಬೇಕೇ ಬೇಕೆಂದು ತಿಳಿದು ಖವಾಸಖಾನನೊಂದಿಗೆ ಸಖ್ಯತನವನ್ನು ಬೆಳೆಸಿಕೊಂಡನು. ಧರ್ಮಾಜಿ ಪಂಡಿತನು ಮುಜಫರಖಾನನೊಂದಿಗೆ ಸೇರಿಕೊಂಡನು. ಇವರೆಲ್ಲ ತಮ್ಮ ಕೆಲಸಗಳ ವಿಷಯದಲ್ಲಿ ಯತ್ನಮಾಡುತ್ತಿದ್ದರು. ಆದರೆ ದಿಯಾನತರಾವ ಮತ್ತು ಅಬ್ದುಲಮಹಮ್ಮದರು ಅವರು ಸರ್ವಪ್ರಯತ್ನಗಳನ್ನೆಲ್ಲ ವಿಫಲಗೊಳಿಸಿ ಮುಜಫರಖಾನನನ್ನು ಪ್ರಬಲನಾಗಗೊಡಲಿಲ್ಲ. ಬಾದಶಹನ ಕಿವಿ ತುಂಬಿ ಆ ಮುಜಫರ ಖಾನನನ್ನು ರಾಜಧಾನಿಯಿಂದ ದೂರ ಇರುವಂತೆ, ಬಿದನೂರಿನತ್ತ ಕಂದಾಯ ವಸೂಲಿಗಾಗಿ ಮತ್ತು ವ್ಯವಸ್ಥೆಗಾಗಿ ಕಳಿಸುವಲ್ಲಿ ಸಫಲರಾದರು. ಅದೇ ಸಮಯದಲ್ಲಿ ಬಾದಶಹನ ಬೇನೆ ಕಿಂಚಿತ್ ತಿರುಗಿತು. ಆಗ ಧರ್ಮಾಜಿ ಪಂಡಿತನು. ಬಾದಶಹನಿಗೆ ಹೇಳಿ. ಮುಜಫರಖಾನನನ್ನು ಯಾದವಾಡದಿಂದ ತಿರುಗಿ ರಾಜಧಾನಿಗೆ ಕರೆಯಿಸಿಕೊಂಡನು. ಆಗ ಮುಜಫರಖಾನನು ತನ್ನ ಸೈನ್ಯವನ್ನು ಯಾದವಾಡದಲ್ಲಿಟ್ಟು ಹೊರಟು ಅದೇ ರಾತ್ರಿ ಬಾದಶಹನನ್ನು ಕಂಡು ಅವನ ಸೇವೆಯಲ್ಲಿದ್ದನು.

ಖವಾಸಖಾನನು ತನ್ನೊಂದಿಗೆ ಬಹಳಷ್ಟು ಜನರನ್ನು ಕರೆದುಕೊಂಡು ಒಳಗೆ ಬಂದಾಗ ಮುಜಫರಖಾನನು ಅವನಿಗೆ ಒಳಗೆ ಬರಲು ಅಡ್ಡಿ ಮಾಡಿದನು. 'ನಿನ್ನೊಂದಿಗಿರುವ ಜನರನ್ನು ಹೊರಗಿಟ್ಟು

ನೀನೊಬ್ಬನೆ ಒಳಗೆ ಬಾ' ಎಂದು ಎಚ್ಚರಿಕೆ ಕೊಟ್ಟದ್ದರಿಂದ ಖವಾಸಖಾನನಿಗೆ ತುಂಬ ಕೆಡುಕೆನಿಸಿತು. ಆತ ಖಿನ್ನನಾದನು.

ಮುಜಫರಖಾನನು ಮಲಿಕ ಮುಜವರನನ ಮುಖಾಂತರ 'ಖವಾಸಖಾನನು ಒಳ್ಳೆಯ ಮನುಷ್ಯನಲ್ಲ'. ಆತ ದ್ವೇಷ ಸಾಧಿಸುತ್ತಿದ್ದಾನೆಂದು ಚಾಡಿ ಹೇಳಿ, ವಿಷಯವನ್ನು ಅಬ್ದುಲ ಮಹಮ್ಮದನಿಗೆ ಹೇಳಿ ಕಳಿಸಿದನು. ಪ್ರತಿಯಾಗಿ ಅಬ್ದುಲ ಮಹಮ್ಮದನು ಮುಜಫರಖಾನನಿಗೆ ನಿರೋಪ ಕಳಿಸುತ್ತ 'ಖವಾಸಖಾನನು ಪ್ರಧಾನ ವಜೀರನಾಗಿದ್ದಾನೆ. ಆತನ ಕೈಯಲ್ಲೆ ಎಲ್ಲ ಅಧಿಕಾರವಿದೆ. ಖವಾಸಖಾನನ ತಂದೆಯೂ ಬಾದಶಹರ ಸೇವೆಯಲ್ಲಿ ಜೀವ ಸವೆಸಿದ್ದಾನೆ. ಈಗ ಖವಾಸಖಾನನು ಬಯಸಿದ್ದನ್ನು ಮಾಡಲಿ. ನೀವು ಮತ್ತು ನಾವುಗಳು ವಜೀರರಾಗಿದ್ದೇವೆ. ಆದರೆ, ಖವಾಸಖಾನನ ಆಜ್ಞೆಯಲ್ಲಿ ಮತ್ತು ಅವರ ಅಂಕಿತದಲ್ಲಿ ಇರೋಣ. ಖವಾಸಖಾನನು ಆದೇಶಿಸಿದಂತೆ ನಡೆದುಕೊಳ್ಳಬೇಕು' ಎಂಬುದಾಗಿ ತಿಳಿಸಿದನು. ಕೊನೆಗೆ ಮುಜಫರಖಾನನನ್ನು ಮತ್ತು ಆತನ ಸೈನ್ಯವನ್ನು ಯಾದವಾಡದಿಂದ ತೆಗೆದನು.

ಮಿರ್ಜಾ ಯೂಸುಫಖಾನನು, ಬಾದಶಹನ ಪ್ರಕೃತಿ ಕೆಟ್ಟಂದಿನಿಂದ ಆತನ ಅಂತ್ಯಕಾಲದವರೆಗೂ ಒಂದು ಕ್ಷಣವೂ ಬಿಟ್ಟಗಲದೆ ಅವನ ಚಾಕರಿಯಲ್ಲಿ ಇದ್ದನು. ತನ್ನ ಸೇವೆಯಲ್ಲಿ ಅಂತರವನ್ನು ಮಾಡಲಿಲ್ಲ. ಪ್ರತಿಯೊಂದು ಮಾರ್ಗದಿಂದ ಖವಾಸಖಾನನೊಂದಿಗೆ ಮಿತ್ರತ್ವವನ್ನಿಟ್ಟುಕೊಂಡು ಖವಾಸಖಾನನ ಕಲ್ಯಾಣದ ವಿಷಯದಲ್ಲೆ ಪ್ರಯತ್ನಿಸುತ್ತಿದ್ದನು. ಬಾದಶಹನ ಸಾಯುವ ಹದಿನೈದು ದಿನಗಳ ಮೊದಲು ಅವನು ಬೇಶುದ್ದನಾಗಿದ್ದಾಗ ಅವನ ಸೇವೆಯನ್ನು ಮಿರ್ಜಾ ಯುಸುಫಖಾನನು ಬಹಳ ಜಾಣತನದಿಂದ, ಖವಾಸಖಾನನನ್ನು ವಿಚಾರಿಸಿ, ಅವನು ಹೇಳಿದಂತೆ ಮಾಡುತ್ತಿದ್ದನು. ಖವಾಸಖಾನನ ಅನುಮತಿ ಇಲ್ಲದೆ ಮತ್ತು ಆತನನ್ನು ವಿಚಾರಿಸದೆ ಒಂದನ್ನೂ ಮಾಡುತ್ತಿರಲಿಲ್ಲ. ಬಾದಶಹನ ಅಂತ್ಯಕಾಲದ ಸಮಯ ಬಂದಿತು, ಖವಾಸಖಾನನು, ಮಿರ್ಜಾ ಯೂಸುಫಖಾನನ ಸಲಹೆಯಂತೆ, ಮತ್ತು ಆತನ ವಿಚಾರದಿಂದ ಬಾದಶಹನ ಮಹಲಿನಲ್ಲಿ ಕಟ್ಟೆಚ್ಚರ ವಹಿಸಿ, ಮಹಲಿನ ಒಳಗೆ, ಬಾಗಿಲಲ್ಲಿ ಮತ್ತು ಕೋಟೆಯ ಮೇಲೆ ವ್ಯವಸ್ಥೆ ಮಾಡಿದನು. ರವಿವಾರ ದಿನಾಂಕ ೧೩ ಸಾಬಾನ ತಿಂಗಳು ಹಿಜರಿ ಸನ್ ೧೦೮೩ ರಂದು (೨೪ ನವಂಬರ ೧೬೭೨) ಐದನೆಯ ತಾಸಿನಲ್ಲಿ ಅಲಿ ಆದಿಲಶಹನು ಸಿಂಹಾಸನವನ್ನು ಪರಿತ್ಯಜಿಸಿ, ತಾಬೂತದ ಸಿಂಹಾಸನವನ್ನು ಸ್ವೀಕರಿಸಿ, ಮರಣಹೊಂದಿದನು.

ಕಾಜಿ ನೂರುಲ್ಲಾಹ, ಷಾಹಾ ಇಬ್ರಾಹೀಮ, ಅಲೀ ಮುಹೀಬಖಾನ, ಮಿರ್ಜಾ ಮತ್ತುಲ್ಲಾಹ, ಮಲಿಕ ಮಾಸೂದ, ಮಲಿಕ ಆಲದ ದಬೀರ ಮತ್ತು ಮೀರ ಅಲೀರಾಜಾ ಮೊದಲಾದ ವಿದ್ವಾಂಸರು ಬಾದಶಹನ ಶವಕ್ಕೆ ಸ್ನಾನಮಾಡಿಸುವಲ್ಲಿ ಮತ್ತು ಕಫನದ ವಸ್ತ್ರಗಳನ್ನು ಉಡಿಸುವಲ್ಲಿ ಸಹಾಯಮಾಡಿ ಅಂತ್ಯ ಯಾತ್ರೆಗೆ ಸಿದ್ಧಪಡಿಸಿದರು. ಪಾದಶಾಹಪೇಟೆಯಲ್ಲಿ ಅಲೀಆದಿಲಶಹನು ಸ್ವತಃ ಗುಮ್ಮಟವನ್ನು ಕಟ್ಟಿಸಿದ್ದನು. ಅದರ ಕೆಲಸ ಅರ್ಧಕ್ಕೆ ನಿಂತಿತ್ತು. ಅದೇ ಕಟ್ಟಡದಲ್ಲಿ ಅಲೀ ಆದಿಲಶಹನ ಶವವನ್ನು ದಫನ ಮಾಡಲಾಯಿತು.

ಅಲಿ ಆದಿಲಶಹನಿಗೆ ೩೫ ವರುಷಗಳಾಗಿದ್ದುವು. ಆತ ಹದಿನಾರು ವರುಷ, ಏಳು ತಿಂಗಳು ರಾಜ್ಯವಾಳಿದನು. ವಿದ್ವಾಂಸರು ಅಲೀ ಆದಿಲಶಹನ ಮರಣದ ವಿಷಯವನ್ನು ವರ್ಣಿಸಿ ಕವಿತೆಗಳನ್ನು ರಚಿಸಿದ್ದಾರೆ. ಆ ಪಾರಸೀ ದ್ವಿಪದಿಗಳ ಅರ್ಥ ಹೀಗಿದೆ : "ಅಲೀ ಆದಿಲಶಹನು ಧರ್ಮಸ್ಥಾಪಕನಾಗಿದ್ದನು

ಮತ್ತು ಬಹಳ ನ್ಯಾಯವಂತ ಬಾದಶಹನಾಗಿದ್ದನು. ಆತನು ಈ ಪೃಥ್ವಿಯಲ್ಲಿ ಬಾದಶಹೀ ಸಿಂಹಾಸನವನ್ನು ಪರಿತ್ಯಾಗ ಮಾಡಿ ಸ್ವರ್ಗ ಸಿಂಹಾಸನದ ಮೇಲೆ ಆರೂಢನಾದನು ॥ ೧ ॥ ಅಲೀ ಆದಿಲಶಹನ ವಿಯೋಗದ ಅಗ್ನಿಯಿಂದ ಮುಸಲ್ಮಾನ ಜನರ ಚಿತ್ತಗಳು ಮತ್ತು ಜೀವಗಳು ಬೆಂದವು: ಸ್ತ್ರೀಯರ ಮತ್ತು ಪುರುಷರ ಮುಖದಲ್ಲಿಯ ನಾಲಗೆಗಳು ಅಗ್ನಿ ಜ್ವಾಲೆಯಂತಾದುವು ॥ ೨ ॥ ಅಲೀ ಆದಿಲಶಹನು ಸ್ವರ್ಗ ಭೂಮಿಯಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದನು. ಅರ್ಥಾತ್ ಮರಣಹೊಂದಿದನು 'ಬಾದಷ ಹೆದಿನ ಆಲಿಕರ್ದ ವತನ ದರಜೀ ಜಾನ್" ಇಷ್ಟು ಅಕ್ಷರಗಳನ್ನು ಅಬಜದದ ಲೆಕ್ಕದಿಂದ ಗುಣಿಸಿದಾಗ ಒಂದು ಸಾವಿರದ ಎಂಭತ್ತೂರು ಎಂದು ಬರುತ್ತದೆ. ಹಿಜರಿ ಸನ್ ೧೦೮೩ರಲ್ಲಿ ಅಲೀ ಆದಿಲಶಹನು ಮರಣ ಹೊಂದಿದನು. (ಕ್ರಿ.ಶ. ೧೬೭೨).

## ೬೦. *ಕಾಲಾನುಕ್ರಮಣಿಕೆ*

ಅಲೀ ಆದಿಲಶಹನು ಸಿಂಹಾಸನದ ಮೇಲೆ ಕುಳಿತ ವರುಷವೇ ಹಸನೀ ಮಹಲನ್ನು ಕಟ್ಟಿದನು. ಸನ್ ೧೦೬೮ (ಕ್ರಿ.ಶ. ೧೬೫೭-೫೮)ರಲ್ಲಿ ಮಸೀದಿಯನ್ನು ಕಟ್ಟಿದನು. ಸನ್ ೧೦೬೯ (೧೬೫೮-೫೯) ಅಲೀ ಮಹಲನ್ನು ಕಟ್ಟಿದನು. ಅದೇ ವರುಷ ಮುಲ್ಲಾ ಅಹಮದನ ಯತ್ನದಿಂದ ಚಂದಾವರದ ವಿಜಯ. ಸನ್ ೧೦೭೨ (ಕ್ರಿ.ಶ. ೧೬೬೦-೬೧) ಪನ್ಹಾಳ ಕೋಟೆಯನ್ನು ಶಿವಾ ಭೋಸಲೆನಿಂದ ಹಸ್ತಗತ. ಅದೇ ವರುಷ ಪರಾಂಡಾ ಕೋಟೆ ಮೊಗಲರ ಕೈಗೆ ಹೋಯಿತು. ಅದೇ ವರುಷ ಬಡೇಸಾಹೇಬ, ಬಾದಶಹನ ತಾಯಿಯ ಮಕ್ಕಾಯಾತ್ರೆ. ಸನ್೧೦೭೨ (ಕ್ರಿ.ಶ. ೧೬೬೧-೬೨) ರಾಯಚೂರು, ಆದೋನಿ, ಮಹಮದನೂರ (ಕರ್ನೂಲ) ಇತ್ಯಾದಿಗಳು, ಸಿದ್ದೀ ಜೋಹಾರನಿಗೆ ಸೋಲುಂಟಾಗಿ, ಆತ ಸತ್ತನಂತರ ಬಾದಶಹನ ರಾಜ್ಯಕ್ಕೆ ಸೇರಿದುವು. ಅದೇ ವರುಷ ಅರ್ಶ ಮಹಲನ್ನು ಕಟ್ಟಿತು. ಸನ್ ೧೦೭೩ (ಕ್ರಿ.ಶ. ೧೬೬೨-೬೩)ರಲ್ಲಿ ಶಾಹಪೇಟೆ ಕಟ್ಟಿತು. ಅದೇ ವರುಷ ರಾಜಕುಮಾರಿ ಬಾದಶಾಹಾ ಬೀಬಿ ಜನನ, ಅದೇ ವರುಷ ಬಾದಶಹನ ಮಲೆನಾಡ ಚೈತ್ರಯಾತ್ರೆ. ಸನ್೧೦೭೪ರಲ್ಲಿ (ಕ್ರಿ.ಶ. ೧೬೭೩) ತಿರುಗಿ ಬಂದ. ಸನ್ ೧೦೭೫ (ಕ್ರಿ.ಶ ೧೬೬೪-೬೫) ಹುಸೇನ ಶಾಹಜಾದಾನ ಜನನ. ಅದೇ ವರುಷ ಅಬ್ದುಲ ರಹೀಮ ಬಹಲೋಲಖಾನನ ಮರಣ. ಸನ್ ೧೦೭೯ ರಬೀಲಾವಲ, ೨೫ (೯ ಜಾನೇವಾರಿ ೧೬೫೯) ರಾಜಕುಮಾರ ಸಿಕಂದರನ ಜನನ. ಸನ್ ೧೦೮೦ (ಕ್ರಿ.ಶ. ೧೬೬೯-೭೦) ಯಖಲಾಸಖಾನನ ಮರಣ. ಸನ್ ೧೦೮೧ (ಕ್ರಿ.ಶ. ೧೬೭೦-೭೧) ಇಬ್ರಾಹಿಮಖಾನನ ಮರಣ.

ಬುಸ್ತಾನ : ಎಂಟು

# ಸಿಕಂದರ ಆದಿಲಶಾಹ

## ೧. *ಸುಲ್ತಾನ ಸಿಕಂದರ ಬಿನ್ ಅಲೀ ಆದಿಲಶಹನ ವರ್ಣನೆ ಮತ್ತು ಆದಿಲಶಾಹೀ ಕಾಲದ ಅಂತ್ಯ :*

ಅಬ್ದುಲನು ಕರಾರು ಮಾಡಿದಂತೆ, ಖವಾಸಖಾನನು ಐದು ವರುಷದ ರಾಜಕುಮಾರ ಸಿಕಂದರನನ್ನು, ಅಲೀ ಆದಿಲಶಹನು ಮರಣ ಹೊಂದಿದ ದಿನವೇ, ಏಳನೆಯ ಗಂಟೆಗೆ, ದಿನಾಂಕ ೧೩, ತಿಂಗಳು ಸಾಬಾನ ಸನ್ ೧೦೮೩ (೨೪ ನವಂಬರ ೧೬೭೨) ರಂದು ವಿಜಾಪುರದಲ್ಲಿ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಆತನ ಮೇಲೆ ಛತ್ರಿ ಚಾಮರಗಳನ್ನು ಹಿಡಿಯಿಲಾಯಿತು. ಖವಾಸಖಾನನು ರಾಜ್ಯದ ಸೂತ್ರಗಳನ್ನು ತನ್ನ ಕೈಯಲ್ಲಿಯೇ ಇಟ್ಟುಕೊಂಡು ಕಾರಭಾರವನ್ನು ನಡೆಸಿದನು. ಮರುದಿನ, ಕರಾರಿನಲ್ಲಿ ನಿರ್ಧರಿಸಿದಂತೆ, ನಡೆದುಕೊಳ್ಳಲು ಅಬ್ದುಲ ಮಹಮ್ಮದನು ಖವಾಸಖಾನನಿಗೆ ಹೇಳಿಕಳಿಸಿದನು. ಪ್ರತಿಯಾಗಿ ಖವಾಸಖಾನನು ಕರಾರುಗಳನ್ನು, ಪ್ರತಿಜ್ಞೆಗಳನ್ನು ಗಾಳಿಗೆ ತೂರಿ ಅಬ್ದುಲ ಮಹಮ್ಮದನಿಗೆ ಪತ್ರ ಬರೆದು ಉತ್ತರ ಕೊಟ್ಟನು. ಅದರಲ್ಲಿ 'ಬಾದಶಹನು ತುಂಬ ಚಿಕ್ಕ ಮಗುವಾಗಿದ್ದಾನೆ. ಅರಮನೆ ಕೋಟೆಯನ್ನು, ನನ್ನ ಕೈಯಿಂದ ಬಿಟ್ಟು ಬಿಡಲು ಹೇಗೆ ಸಾಧ್ಯ? ಒಂದೆರೆಡು ವರುಷ ಸಹಿಸಿಕೊಳ್ಳಿರಿ', ಎಂಬುದಾಗಿ ಬರೆದಿದ್ದನು. ಅದನ್ನು ಕೇಳಿದ ಅಬ್ದುಲ ಮಹಮ್ಮದನು ಖಿನ್ನನಾದನು. ಅದರ ಮರುದಿನ ಖವಾಸಖಾನನು ಅಬ್ದುಲ ಮಹಮ್ಮದನ ಮನೆಗೆ ಬಂದು ಅವನ ಮನಸ್ಸನ್ನು ಸಮಾಧಾನಗೊಳಿಸಿದನು. ಬಹಳ ಭರವಸೆಗಳನ್ನೂ ನೀಡಿದನು. ಆದರೆ ಅಬ್ದುಲ ಮಹಮದನ ಮನದ ಖಿನ್ನತೆ ಖವಾಸಖಾನನ ನಾಟಕೀಯ ಸಮಾಧಾನದ ಮಾತುಗಳಿಂದ ದೂರವಾಗಲಿಲ್ಲ. ಮನಸ್ಸಿಗೆ ಸಮಾಧಾನವಾಗಲಿಲ್ಲ. ಅನಂತರ ಕೆಲವು ದಿನ ಆತನು ತನ್ನ ಮನೆಯಲ್ಲಿ ಸುಮ್ಮನೆ ಕುಳಿತುಬಿಟ್ಟನು. ಆದರೂ ತನ್ನ ಕೆಲಸದ ಬಗ್ಗೆ ವಿಚಾರಿಸಲು ಪ್ರಯತ್ನಿಸಿದನು. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಅದರಿಂದಾಗಿ ಆತನ ಮನಸ್ಸಿನ ಮೇಲೆ ಇನ್ನಷ್ಟು ಆಘಾತವಾಯಿತು. ರಾಜಧಾನಿಯಲ್ಲಿ ಹೊಸ-ಹೊಸ ಕಾರಭಾರಿಗಳು, ಎಂದೂ ಕಾರಭಾರ ಮಾಡದವರೇ ಬಹಳಷ್ಟು ಜನ ಸೇರಿದ್ದರು. ಅವರಿಂದ ನಡೆಯುತ್ತಿದ್ದ ಕಾರ್ಯಗಳು ಅನುಭವಸ್ಥ ಅಬ್ದುಲ್ ಮಹಮ್ಮದನಿಗೆ ಸರಿ ಎನಿಸುತ್ತಿರಲಿಲ್ಲ. ಅದರಿಂದಾಗಿ ಅವನಿಗೆ ತುಂಬ ಕೆಡುಕೆನಿಸುತ್ತಿತ್ತು. ತನ್ನ ಧಣಿಯ ರಾಜ್ಯ ಕೆಡುತ್ತಿದೆ. ಅದು ಸುರಕ್ಷಿತವಾಗಿರಬೇಕು ಎಂದು ಹಗಲು ರಾತ್ರಿ ಚಿಂತಿಸುತ್ತ ಅದೇ ವಿಚಾರದಲ್ಲಿ ಇರುತ್ತಿದ್ದನು. ಕೊನೆಗೆ ಮನೆಯಲ್ಲಿ ಸುಮ್ಮನೆ ಬಿದ್ದುಕೊಂಡು ಇರಲಾರದೆ ಹೊರಬಿದ್ದನು. ಒಂದು

ಹೇಳಿಕೆಯಂತೆ, ತಾನೆ ಕಣ್ಣಾರೆ ಕಾಣದ ಹೊರತು ಆ ಕೆಲಸ ಒಪ್ಪಿಗೆಯಾಗುವುದಿಲ್ಲ. ನಿಜ, ದೈವೇಚ್ಛೆ ಆದಿಲಶಾಹಿ ರಾಜ್ಯವನ್ನು ಮುಳುಗಿಸುವುದೇ ಆಗಿದ್ದು ಅದು ಅಲ್ಲಾನ ಮನದಲ್ಲಿ ಬಂದಿತ್ತು. ತನ್ನ ಸಂಕಲ್ಪವನ್ನು ಈಡೇರಿಸಿ ಕೊಳ್ಳಲು ಅಲ್ಲಾನು ಪದಾರ್ಥಗಳನ್ನು ಸಂಗ್ರಹಿಸುತ್ತಿರುತ್ತಾನೆ. ಈ ಮಾತಿನ ತಾತ್ಪರ್ಯವೆಂದರೆ, ಆದಿಲಶಾಹೀ ರಾಜ್ಯವನ್ನು ಮುಳುಗಿಸಬೇಕೆಂದು ಅಲ್ಲಾನು ಸಂಕಲ್ಪಿಸಿದಾಗ ಆತ ಎಲ್ಲ ಕಾರ್ಯಕಾರಣಗಳನ್ನು ಮುಳುಗಿಸಲು ಎಂದೇ ನಿರ್ಮಾಣಗೊಳಿಸಿದನು. ರಾಜ್ಯ ನಾಶದತ್ತ ಹೋಗಲು ಇದುವೇ ಪ್ರಥಮ ಕಾರಣವಾಯಿತು. ಬುದ್ಧಿವಂತ, ಅನುಭವಿ ಅಬ್ದುಲ ಮಹಮ್ಮದನು ರಾಜ್ಯದ ಕೇವಲ ಆಧಾರಸ್ಥಂಬನಾಗಿದ್ದನು. ಆತನ ಉತ್ತಮ ವಿಚಾರಗಳು ಮತ್ತು ಆತ ರಾಜ್ಯ ನಡೆಸುವ ರೀತಿ ನೀತಿಗಳು ರಾಜ್ಯವನ್ನು ನಿರಂತರ ಅಭ್ಯುದಯದತ್ತ ತೆಗೆದುಕೊಂಡು ಹೋಗುತ್ತಿತ್ತೆಂಬುದರಲ್ಲಿ ಬಾದಶಹನಿಗೂ, ಉಳಿದ ಅನೇಕ ಜನರಿಗೂ ಪೂರ್ಣ ಭರವಸೆ ಇತ್ತು. ಅಂಥ ಯೋಗ್ಯತೆಯ ಅಬ್ದುಲ ಮಹಮ್ಮದನು ತನ್ನ ಕೆಲಸದಿಂದ ಮನಸ್ಸನ್ನು ತೆಗೆದು ಬೇರೆಯೇ ಆದನು. ಆದರಿಂದ ರಾಜ್ಯದ ಸೂತ್ರಗಳು, ಎಂದೂ ಕಾರಭಾರು-ಕೆಲಸ ಮಾಡದ, ಅನನುಭವಿ ಹುಡುಗನ ಕೈಗೆ ಬಂದಿದ್ದುವು. ಅಲ್ಲಾನ ಮನದಲ್ಲಿ ರಾಜ್ಯ ಮುಳುಗಿಸುವ ಸಂಕಲ್ಪ ಬಂದರೆ, ಆತ ಇಂಥ ಮೂರ್ಖರ ಕೈಯಲ್ಲಿ ರಾಜ್ಯ ಸೂತ್ರಗಳನ್ನು ಕೊಡುತ್ತಾನೆ ಎಂಬುದಾಗಿ ಹೇಳುತ್ತಾರೆ. ಇರಲಿ ಐದು ವರುಷದ ಬಾದಶಹ ಸಿಂಹಾಸನದಲ್ಲಿ, ರಾಜ್ಯ ಸೂತ್ರಗಳು ಮೂರ್ಖರ ಕೈಯಲ್ಲಿ. ಆದ್ದರಿಂದ ಬಾದಶಹನ ರಾಜಧಾನಿಯಲ್ಲಿಯ ಎಲ್ಲ ಕಾರಭಾರಿ ಮಂಡಳಿಯು ಒಡೆದು ಹೋಯಿತು. ಮತ್ತು ರಾಜಧಾನಿಯಲ್ಲಿಯ ಒಪ್ಪಂದದ ಕೆಲಸದ ವ್ಯವಸ್ಥೆಯು ಹಾರಿ ಹೋಯಿತು. ಅಲ್ಲಲ್ಲಿಯ ಶತ್ರುಗಳು ಅವಕಾಶಕ್ಕಾಗಿ ಕಾದು ಕುಳಿತರು. ಮತ್ತು ಅವರು ಆದಿಲಶಾಹಿ ರಾಜ್ಯವನ್ನು ಕಬಳಿಸಬೇಕೆಂಬ ಆಶೆಯನ್ನು ಹಿಡಿದು ಕುಳಿತಿದ್ದರು. ಅವರ ಮನೋರಥ ಪೂರ್ಣವಾಗುವ ಸಮಯ ಸನ್ನಿಹಿತವಾಯಿತು. ಆದುದರಿಂದ ನಾಲ್ಕು ಕಡೆಗಳಿಂದಲೂ ಸಂಕಟ ಮತ್ತು ವಿಘ್ನಗಳು ಎದ್ದು ನಿಂತುವು.

ಎಲ್ಲ ಶತ್ರುಗಳಲ್ಲಿಯ ಮೊದಲ ಶತ್ರು ಶಿವಾ ಭೋಸಲೆಯಾಗಿದ್ದನು. ಅಲಿ ಆದಿಲಶಹನು ಸತ್ತನಂತರ ಅವನ ಬಲ ಅಧಿಕವಾಯಿತು. ಆದ್ದರಿಂದ ಅತ್ಯಂತ ಉನ್ಮತ್ತನಾಗಿ ಬಾದಶಹನ ಅನೇಕ ಸ್ಥಳಗಳನ್ನು, ಕೋಟೆಗಳನ್ನು ಮತ್ತು ಮೊಗಲರ ವಶದಲ್ಲಿದ್ದ ಅನೇಕ ಪ್ರದೇಶಗಳನ್ನು ಹಸ್ತಗತ ಮಾಡಿಕೊಂಡು ಪ್ರಬಲನಾಗಿದ್ದನು.[1] ಅಲೀ ಆದಿಲಶಹನ ಆಸ್ಥಾನದಲ್ಲಿ ವೀರ, ಬುದ್ಧಿವಂತ ಒಬ್ಬನೂ ಈಗ ಉಳಿದಿಲ್ಲ ಎಂಬುದನ್ನು ಶಿವಾಜಿಯು ಅರಿತುಕೊಂಡು ಮತ್ತಷ್ಟು ಉತ್ತೇಜಿತನಾದನು. ಅವಕಾಶಕ್ಕಾಗಿ ಕಾಯ್ದು, ತನ್ನ ಸ್ಥಳದಿಂದ ಹೊರಬಿದ್ದು ಮತ್ತೆ ಮೊದಲಿನ ದಂಗೆ-ಲೂಟಿಗಳನ್ನು ಪ್ರಾರಂಭಿಸಿದನು. ಮೊದಲು ಪನ್ಹಾಳಾ

---

೧. ಶಕೆ ೧೫೮೬ ವೈಶಾಖ ಮಾಸದಲ್ಲಿ (ಏಪ್ರಿಲ-ಮೇ ೧೬೬೪) ಬಹಲೋಲಖಾನ ಮತ್ತು ರಾಜಶ್ರೀ ಯಕೋಜಿ ರಾಜೆ ರಾಂಗಣೆಯನ್ನು ಮುತ್ತಿದರು. ರಾಜಶ್ರೀಯು ಮುತ್ತಿಗೆಯನ್ನು ಹೊಡೆದು ಹಾಕಿದನು. ಅನಂತರ ಭಾದ್ರಪದಮಾಸದಲ್ಲಿ (ಅಗಸ್ಟ ಸಪ್ಟಂಬರ ೧೬೬೪) ಆದಿಲಶಾಹ ಮತ್ತು ರಾಜಶ್ರೀ ಶಿವಾಜಿಯ ಒಪ್ಪಂದವಾಯಿತು. ಶಕ ೧೫೯೪ ಮಾರ್ಗಶೀರ್ಷ (ನವ-ಡಿಸೆಂಬರ ೧೬೭೨) ಅಲೀ ಆದಿಲಶಹ ಮರಣ ಹೊಂದಿದನು. ಆತನ ಮಗ ಸಿಕಂದರನು ಗದ್ದುಗೆ ಏರಿದನು. ಖವಾಸಖಾನನು ಕಾರಭಾರಿಯಾದನು. ರಾಜಶ್ರೀ ಮತ್ತು ಆದಿಲಶಹನ ಒಪ್ಪಂದ ಮುರಿಯಿತು. ಬಾಬಾಜೀ ನಾಯಿಕ ಪುಂಡೆ, ವಿಜಾಪುರ ವಕೀಲನಾಗಿದ್ದನು. ಆತನನ್ನು ಹಿಂತಿರುಗಿ ಕರೆಯಿಸಿಕೊಂಡರು - ಜೇಧೆ ಶಕಾವಲಿ ಪು.೨೪/೨೬.



ಸಿಕಂದರ ಆದಿಲಶಾಹ

ಕೋಟೆಯನ್ನು ಅಲ್ಲಿಯ ಜನರೊಂದಿಗೆ ಸಖ್ಯತನ ಬೆಳೆಸಿ-ಹಸ್ತಗತ ಮಾಡಿಕೊಂಡನು.[೧] ದಿನಾಂಕ ೨೬, ಜಿಲ್ಕಾದದ ದಿನದಂದು (೬, ಮಾರ್ಚ ೧೬೭೩), ಸಿಕಂದರನು ಸಿಂಹಾಸನವನ್ನೇರಿದ ವರುಷವೇ ಶಿವಾನು ಆದಿಲಶಹನ ಪ್ರದೇಶಗಳನ್ನು ಕಿತ್ತಿಕೊಳ್ಳಲು ಪ್ರತಿಯೊಂದು ಭಾಗಕ್ಕೂ ತನ್ನ ಸೈನ್ಯವನ್ನು ಕಳಿಸಿದನು. ಕೆಲವು ದಿನಗಳ ಅನಂತರ ತಾನೇ ಸ್ವತಃ ಹೊರಟನು.

### ೨. *ಖವಾಸಖಾನನು ಶಿವಾಜಿಯನ್ನು ಶಿಕ್ಷಿಸಲು ಬಹಲೋಲಖಾನನನ್ನು ಕಳಿಸಿದ್ದು ಮತ್ತು ಉಮರಾಣಿಯಲ್ಲಿ ಯುದ್ಧ :*

ಹೊತ್ತಿದ ವಿಘ್ನದ ಬೆಂಕಿಯನ್ನು ಆರಿಸಲು, ಖವಾಸಖಾನನು ವಿಚಾರಮಾಡಿ ಶಿವಾನನ್ನು ಶಿಕ್ಷಿಸಲು ಅಬ್ದುಲ ಕರೀಮ ಬಹಲೋಲಖಾನನನ್ನು ನಿಯಮಿಸಿದನು. ಪನ್ಹಾಳದ ಹತ್ತಿರ ಹೋಗಿ, ತನ್ನ ಯಶಸ್ವೀ ಸೈನ್ಯವನ್ನು ನಿಲ್ಲಿಸಿ ಶಿವಾನ ಕಡೆಯ ಜನರು ಹೋಗ ಬರುವ ದಾರಿಯನ್ನು ಮುಚ್ಚಬೇಕೆಂದು ತಾಕೀದು ಮಾಡಿದನು. ಅವನ ಆದೇಶವನ್ನು ಪಡೆದು ಅಬ್ದುಲ ಕರೀಮ ಬಹಲೋಲಖಾನನು ಉಮರಾಣಿಯ ಹತ್ತಿರ ಹೋಗಿ ಮುಟ್ಟಿದನು. ಆಗ ಶಿವಾಜಿಯ ಸುಮಾರು ಹತ್ತು-ಹದಿನೈದು ಸಾವಿರ ಹತ್ಯಾರಬಂದ ಮತ್ತು ಭಲ್ಲೆ ಹೊಡೆಯುವ ಸವಾರ ಯೋಧರು ತಮ್ಮ ಸಾಮಾನು ಸರಂಜಾಮುಗಳೊಂದಿಗೆ ಸಿದ್ಧರಾಗಿಯೇ ಬಂದಿದ್ದರು. ಅಬ್ದುಲ ಕರೀಮ ಬಹಲೋಲಖಾನನ ಮೇಲೆ ಏರಿಬಂದು, ನಾಲ್ಕು ದಿಕ್ಕುಗಳಿಂದಲೂ ಆತನನ್ನು ಮತ್ತು ಆತನ ಸೈನ್ಯವನ್ನು ಸುತ್ತುವರಿದರು. ಮತ್ತು ಬಾಣಗಳನ್ನು, ಬಂದೂಕಿನ ಗುಂಡುಗಳನ್ನು ಬಿಟ್ಟು ತೋಫುಹಾರಿಸಿ ಯುದ್ಧ ಪ್ರಾರಂಭಿಸಿದರು. ಹೀಗೆ ಶಿವಾಜಿಯ ಸೈನ್ಯವು ಸುತ್ತುವರಿಯುತ್ತಿದ್ದಂತೆ, ಅಬ್ದುಲ ಕರೀಮ ಬಹಲೋಲಖಾನನು, ನಿಂತಲ್ಲಿಂದಲೇ ಧೈರ್ಯದಿಂದ ಎದುರಿಸಿದನು, ಶೂರತ್ವವನ್ನು ಮೆರೆದನು, ಕತ್ತಿಗಳನ್ನು ತಿರುವಿದನು. ಬಹಲೋಲಖಾನನ ದಂಡಿನಲ್ಲಿ ಬಾಣಗಳ ರಾಶಿ ಸತತವಾಗಿ ಬೀಳುತ್ತಿದ್ದಂತೆಯೇ ಶಿವಾಜಿಯ ಕಡೆಯ ಸೈನ್ಯದ ತಲೆಗಳು ಉರುಳಿ ಶವಗಳ ಹಾಸಿಗೆಯಾಯಿತು. ತುಂಡಾದ ಭಲ್ಲೆಗಳಿಂದ ಅದು ಬಿದಿರು ಗಳಗಳ ಹೊಲದಂತೆ ಕಾಣಹತ್ತಿತು. ಶಿವಾಜಿಯ ಕಡೆಯ ಬಹಳ ಜನರು ಕೊಲೆಯಾದರು. ಇತ್ತ ಕಡೆ, ಬಹಲೋಲಖಾನನ ಕಡೆಗೂ ಅನೇಕ ಶೂರರು ಬಿದ್ದರು. ಶಾಹ ಮಹಮ್ಮದ ಕಾಕಡ ಮತ್ತು ಮುಲ್ಲಾ ಉಸ್ಮಾನ್ ಬಿನ್ ಮುಲ್ಲಾ ಮನ್ಸೂರ ಇಬ್ಬರು ಮುಖ್ಯಕಾರಭಾರಿಗಳು ಹತರಾದರು. ತನ್ನ ಸೈನ್ಯ ತುಸುವೆ ಇದ್ದು ಶತ್ರುವಿನ ಸೈನ್ಯ ದೊಡ್ಡದಾಗಿದ್ದುದರಿಂದ ಎರಡನೆಯ ಪ್ರಹರದಿಂದ ರಾತ್ರಿಯಾಗುವವರೆಗೂ ಬಹಲೋಲಖಾನನು ಆ ರಣಭೂಮಿಯಲ್ಲಿ ಸ್ಥಿರವಾಗಿ ನಿಂತು ಒಂದೇ ರೀತಿಯಲ್ಲಿ ಕತ್ತಿಯನ್ನು ತಿರುವುತ್ತಿದ್ದನು. ರಾತ್ರಿಯಾಗುತ್ತಿದ್ದಂತೆ ಶಿವಾಜಿಯ ಸೈನ್ಯ ಓಡಿ ಹೋಯಿತು.

ಎದುರಿಗಿದ್ದ ಶತ್ರುಗಳು ಮುಖತಿರುವಿದ್ದನ್ನು ಕಂಡ ಬಹಲೋಲಖಾನನು, ತನ್ನ ಕಡೆಯ ಸೈನ್ಯದಲ್ಲೂ ಬಹಳ ಜನರು ಕೊಲೆಯಾದದ್ದನ್ನು ಮತ್ತು ಅನೇಕ ಜನರು ಗಾಯಾಳುಗಳಾಗಿ ದಣಿದದ್ದನ್ನು ಗಮನಿಸಿ ಅಲ್ಲಿಂದ ತಿಕೋಟಾಕ್ಕೆ ಬಂದನು. ಅಲ್ಲಿ ಬಿಜಾಪುರದಿಂದ ಬಹಲೋಲಖಾನನಿಗೆ ಹೊಸ ಸಹಾಯ

---

೧. ಶಕೆ ೧೫೯೪ ಫಾಲ್ಗುಣ ವದ್ಯ ೧೩ (೬, ಮಾರ್ಚ ೧೬೭೩) ಪನ್ಹಾಳಗಡ ಅಣ್ಣಾಜಿ ಪಂತನನ್ನು ಭೇದ ಮಾಡಿ ಕೊಂಡಾಲೆ ಫರ್ಜಂದ ಜೊತೆಗೆ ಜನರನ್ನು ಕೊಟ್ಟು ತೆಗೆದುಕೊಂಡನು. ೬೦ ಜನರನ್ನು ಕಳಿಸಿತು. ಅವರು ಪನಾಳವನ್ನು ತೆಗೆದುಕೊಂಡರು. ಶಕೆ ೧೫೯೫ ಚೈತ್ರಶುದ್ಧ ಪ್ರತಿಪದಾ (೮, ಮಾರ್ಚ, ೧೬೭೩) ರಾಜಶ್ರೀ ರಾಯಿರಿಯಿಂದ ಪನಾಳಕೆ ಹೋದರು- ಜೇಧೆ ಶಕಾ ಪುಟ ೨೬.

ಬಂದು ಮುಟ್ಟಿತು. ಆ ಸೈನ್ಯದೊಂದಿಗೆ ಹೊಸ ಬಲ ಬಂದು ಬಹಲೋಲಖಾನನು ತಿಕೋಟಾದಿಂದ ಹೊರಟು ಶತ್ರುವಿನ ಮೇಲೆ ಕೂಚ್ ಮಾಡಿ, ಶಿವಾಜಿಯ ಸೈನ್ಯದ ಮೇಲೆ ಏರಿ ಹೋದನು. ಮತ್ತು ದೊಡ್ಡ ಯುದ್ಧವೇ ಆಯಿತು. ಬಹಲೋಲಖಾನನಿಗೆ ವಿಜಯ ಸಿಕ್ಕಿತು. ಈ ಸುದ್ದಿಯನ್ನು ಕೇಳಿದ ಶಿವಾಜಿಗೆ ಸಂತಾಪವಾಯಿತು. ಪಶ್ಚಾತ್ತಾಪಪಟ್ಟು ತನ್ನ ಬೆರಳುಗಳನ್ನು ಕಟ-ಕಟ ಕಚ್ಚಿಕೊಂಡನು. ತನ್ನ ಸರದಾರರ ಮೇಲೆ ಸಿಟ್ಟಿನಿಂದ ಹರಿಹಾಯ್ದನು. ನಿಮಗೆ ಹೀಗೆ ಮಾಡುವುದಿದ್ದರೆ, ಬಹಲೋಲಖಾನನ ಮೈಮೇಲೆ ನಾಲ್ಕೂ ಕಡೆಗಳಿಂದ ಯಾತಕ್ಕಾದರೂ ಏರಿ ಹೋದಿರಿ? ಬಹಲೋಲಖಾನನ ಸೈನ್ಯದಲ್ಲಿಯ ಅನೇಕ ಜನರು ಕೊಲೆಯಾದರು, ಗಾಯಗೊಂಡು, ಬಹಲೋಲಖಾನನು ತನ್ನ ತುಸುವೇ ಗುಂಪಿನೊಂದಿಗೆ ತಿಕೋಟಾಕ್ಕೆ ಹೊರಟು ಹೋಗಿದ್ದನು. ಹೀಗಿದ್ದೂ ಇಷ್ಟೊಂದು ದೊಡ್ಡ ಸೈನ್ಯವಿದ್ದ ನೀವು ಬಹಲೋಲಖಾನನ ಗುಂಪನ್ನು ಮತ್ತೆ ಬೆನ್ನು ಹತ್ತಿ ಅವರೊಂದಿಗೆ ಯಾಕೆ ಯುದ್ಧ ಮಾಡಲಿಲ್ಲ? ಸುತ್ತುವರಿದು ಬಹಲೋಲಖಾನನನ್ನು ಯಾಕೆ ಸೆರೆ ಹಿಡಿಯಲಿಲ್ಲ?" ಎಂದು ಕೇಳುತ್ತ ಶಿವಾಜಿ ಅತ್ಯಂತ ಕ್ರೋಧಾಯಮಾನನಾಗಿ, ಜೀವಂತವಾಗಿ ಉಳಿದು ಗಾಯಾಳುಗಳಾಗಿ, ಅರ್ಧಸತ್ತವರಾಗಿ ಬಂದವರನ್ನು ಒಂದು ಮನೆಯಲ್ಲಿ ಹಾಕಿ, ಸುಟ್ಟು ಬಿಟ್ಟನು. 'ವಿಜಯಿಗಳಾಗದೆ, ಅಪಯಶರಾಗಿ ತಿರುಗಿ ಬಂದಿರಿ, ಎನ್ನುತ್ತಿದ್ದನು. ಮಿಯಾ ನುಸ್ರತಿಯು ಸಿಕಂದರ ಬಾದಶಹನ ಕುರಿತು ಹಿಂದುಸ್ತಾನಿಯಲ್ಲಿ ಅಂದರೆ ಉರ್ದು ಭಾಷೆಯಲ್ಲಿ ಒಂದು ಕಾವ್ಯವನ್ನು ರಚಿಸಿದ್ದಾನೆ. ಅದರಲ್ಲಿ ಉಮರಾಣಿ ಯುದ್ಧದ ಬಗ್ಗೆ ಬರೆದಿದ್ದಾನೆ. ಆ ಯುದ್ಧದಲ್ಲಿ ಅಬ್ದುಲ ಕರೀಮ ಬಹಲೋಲಖಾನನ ಯುದ್ಧ ಪರಾಕ್ರಮವನ್ನು ಮಿಯಾ ನುಸ್ರತಿಯು ತನ್ನ ಪ್ರೌಢ ಬರವಣಿಗೆಯಲ್ಲಿ ಸುಂದರವಾಗಿ ನಮೂದಿಸಿದ್ದಾನೆ. ಕಾವ್ಯದ ರುಚಿಯನ್ನು ತಿಳಿದ ನಿರ್ಮತ್ಸರ ಜನರು ಮತ್ತು ಕಾವ್ಯದ ಅರ್ಥದ ಯೋಗ್ಯತೆಯನ್ನು ಗುರುತಿಸುವ ವ್ಯಕ್ತಿಗಳು ಅದನ್ನು ಕಂಡು ಶಾಬಾಸ 'ವಾಹವಾ' ಎಂಬ ಮುತ್ತುಗಳನ್ನೇ ಉದುರಿಸುತ್ತಾರೆ.❖

### ೩. *ಖವಾಸಖಾನನು ಹಕೀಮ ಷಮಸಾನ ವಶೀಲಿಯಿಂದ ಸಖ್ಯಮಾಡಿದ್ದು :*

ತೈಮೂರ ಬಾದಶಹನ ವಂಶದಲ್ಲಿ ಅಕಬರಶಾಹ ಬಾದಶಹನಿಂದ ಔರಂಗಜೇಬ ಬಾದಶಹನ ವರೆಗೆ ದಕ್ಷಿಣ ದೇಶಗಳನ್ನು ಕೈವಶ ಮಾಡಿಕೊಳ್ಳಲು ನಿರಂತರವಾಗಿ ಆಸ್ಥಾಪೂರ್ವಕ ಪ್ರಯತ್ನವನ್ನು ಮಾಡುತ್ತಲೇ ಇದ್ದರು. ಮೇಲಿಂದ ಮೇಲೆ ಸೈನ್ಯವನ್ನು ತೆಗೆದುಕೊಂಡು ಏರಿಬಂದು ಮತ್ತೆ ಮತ್ತೆ ಹಲ್ಲೆಗಳನ್ನು ಮಾಡುತ್ತ ಇದ್ದರು. ಈ ಸಂದರ್ಭಗಳಲ್ಲಿ ಪ್ರಾಣಾಪಾಯದ ಸಂಕಟವನ್ನು ಅನುಭವಿಸುತ್ತ ಬಹಳ ದುಃಖ ಪಡುತ್ತಿದ್ದರು. ಅನೇಕ ಮೊಗಲ ರಾಜಕುಮಾರರು, ಸರದಾರ ಜನರು, ಈ ಕೆಲಸಕ್ಕಾಗಿ ಪ್ರಯತ್ನಪಟ್ಟರೂ ಯಶಸ್ಸು ಸಿಗಲಿಲ್ಲ. ಅದರ ಕಾರಣವೆಂದರೆ, ವಿಜಾಪುರದಲ್ಲಿಯ ದೊಡ್ಡ ದೊಡ್ಡ ಸುದೈವಿ ಬಾದಶಹರು ಧರ್ಮದಿಂದ ಇದ್ದರು. ಬುದ್ಧಿವಂತ ಮಂತ್ರಿಗಳ ಬಲದಿಂದ ಮತ್ತು ಮಹಾ ಪರಾಕ್ರಮಿ ಅಮೀರರ ಶೌರ್ಯದಿಂದ ಆ ಬಾದಶಹರು ಪೃಥ್ವಿಯನ್ನು ಸಂರಕ್ಷಿಸುತ್ತಿದ್ದರು. ಪೃಥ್ವಿಯ ಆಧಿಪತ್ಯವನ್ನು ಭೋಗಿಸುತ್ತಿದ್ದರು. ಬಹು ದೊಡ್ಡ ಪ್ರಬಲ ಶತ್ರುಗಳು ಈ ಬಾದಶಹರ ಮೇಲೆ ಏರಿ ಬಂದಾಗಲೆಲ್ಲ ಆದಿಲಶಹನ ಕಡೆಯ ಶೂರರು ತಮ್ಮ ಬುದ್ಧಿ ಬಲದಿಂದ ಮತ್ತು ಶೌರ್ಯದಿಂದ ಆ ಶತ್ರುಗಳನ್ನು ಹಿಮ್ಮೆಟ್ಟಿಸುತ್ತಿದ್ದರು. ಅವರು

---

❖ ಕಾವ್ಯದ ಹೆಸರು ತಾರೀಖೆ ಇಸ್ಕಂದರಿ. ಐದು ಆಧಾಯಗಳಲ್ಲಿ ೨೨೮ ದ್ವಿಪದಿಗಳ ದಖನೆ ಉರ್ದು ಕಾವ್ಯ ಪ್ರಕಟವಾಗಿದೆ - ಅನುವಾದಕ.

ಕಷ್ಟ-ನಷ್ಟಗಳನ್ನು ಅನುಭವಿಸುತ್ತ ಹಿಂತಿರುಗುತ್ತಿದ್ದರು. ಈಗ ಬಾದಶಹ ಕೇವಲ ಸಣ್ಣವಯದ ಅಜ್ಞಾನಿ, ಮೂರ್ಖ, ಆತನಿಗೆ ಮಿತ್ರುರಾರು, ಶತ್ರುಗಳಾರು ಎಂಬುದನ್ನು ಗುರುತಿಸಲು ಕೂಡ ಸಾಧ್ಯವಿರಲಿಲ್ಲ. ಲಾಭ ಅಂದರೆ ಯಾತಕ್ಕೆನ್ನುತ್ತಾರೆ? ಹಾನಿ ಎಂದರೆ ಏನು? ಎಂಬುದನ್ನು ಕೂಡ ತಿಳಿಯುತ್ತಿರಲಿಲ್ಲ. ಅಂಥ ಮೂರ್ಖ ಬಾದಶಹ ಸಿಂಹಾಸನದ ಮೇಲೆ ಕುಳಿತಿದ್ದನು. ಮತ್ತು ಬಹಳ ಕಾರ್ಯಕಾರಣಗಳನ್ನು ಮಾಡಿ, ಕೆಲಸದ ಅನುಭವವನ್ನು ಪಡೆದವರು, ರಾಜ್ಯ ಉಳಿಯಬೇಕು ಎಂಬ ಬಯಕೆಯ ಬುದ್ಧಿವಂತರು ದರಬಾರಿನಲ್ಲಿ ಉಳಿದಿರಲಿಲ್ಲ. ಆದ್ದರಿಂದ ಅವಕಾಶಕ್ಕಾಗಿ ಕಾಯುತ್ತ ಕುಳಿತಿದ್ದ ಶತ್ರು ಜನರಿಗೆ ವ್ಯಾಪಾರದ ದಿನ ಪ್ರಾಪ್ತವಾಗಿತ್ತು. ಮನೋರಥ ಪೂರ್ಣಗೊಳ್ಳುವ ವೇಳೆ ಕೂಡಿಬಂದು ಮತ್ತೆ ಅವರು ಪ್ರಬಲರಾದರು. ತಮ್ಮ ಕಾರ್ಯಸಾಧನೆಗಾಗಿ ಪ್ರವೃತ್ತರಾದರು.

ತಾತ್ಪರ್ಯವೆಂದರೆ, ಅಲ್ಲಾನ ಮನೋಗತವೂ ಇದೇ ತೆರನಾಗಿತ್ತು. ಮತ್ತು ಈ ರಾಜ್ಯವನ್ನು ಅಂತ್ಯಗೊಳಿಸುವ-ಮುಳುಗಿಸುವ ವಿಷಯದಲ್ಲಿ ಅಲ್ಲಾನು ಸಂಕಲ್ಪವನ್ನು ಮಾಡಿದ್ದನು ಆದ್ದರಿಂದ ಕುರಾನಿನಲ್ಲಿಯ ಆಯತದಂತೆ, "ಅಲ್ಲಾನು ಯಾವ ಆದೇಶವನ್ನಿತ್ತಿದ್ದಾನೆಯೋ ಆ ಆದೇಶ ನಿಸ್ಸಂಶಯವಾಗಿ ಸಿದ್ಧಿಯಾಗುತ್ತದೆ" ಈ ವಾಕ್ಯದಲ್ಲಿಯ ತಾತ್ಪರ್ಯವೆಂದರೆ ಅಲ್ಲಾನ ಮನದಲ್ಲಿ ಈ ವಿಜಾಪುರ ರಾಜ್ಯವನ್ನು ಮುಳುಗಿಸಬೇಕೆಂದು ಬಂದಿತು. ಅದರಂತೆ ಸಿದ್ಧಿಯೂ ಆಯಿತು. ಆದಿಲಶಹನ ಕಡೆಯ ಕಾರಭಾರಿ ಮಂಡಳಿಯು ರಾಜ್ಯ ಸಂರಕ್ಷಣೆ ಮಾಡಲು ಯಾವ ಯಾವ ವಿಚಾರಗಳನ್ನು ಮಾಡುತ್ತಿದ್ದಾರೋ ಆ ವಿಚಾರಗಳಲ್ಲಿ ಸಂಕಟ ವಿಘ್ನಗಳ ಹೊರತಾಗಿ ಬೇರೇನೂ ದೊರೆಯುತ್ತಿರಲಿಲ್ಲ.

ಬಹಾದೂರಖಾನನೆಂಬ ಒಬ್ಬ ಬುದ್ಧಿವಂತ ಸಂಭಾವಿತ ವ್ಯಕ್ತಿ ಇದ್ದನು. ಆತ ಔರಂಗಜೇಬ ಬಾದಶಹನ ಆಸ್ಥಾನದಲ್ಲಿಯ ಶ್ರೇಷ್ಠ ವ್ಯಕ್ತಿಯಾಗಿದ್ದನು. ರಾಜಾ ಜಯಸಿಂಗನನ್ನು ಹಿಂತಿರುಗಿ ಕರೆಯಿಸಿ ಕೊಂಡಾಗ ಔರಂಗಜೇಬ ಬಾದಶಹನು ಬಹಾದೂರಖಾನನಿಗೆ 'ಖಾನ ಜಮಾನ' ಎಂಬ ಪದವಿಯನ್ನಿತ್ತು ಆತನನ್ನು ದಕ್ಷಿಣದೇಶಗಳ ಮೇಲೆ ಕಳಿಸಿದ್ದನು. ವಿಜಾಪುರದ ಇಂದಿನ ಪರಿಸ್ಥಿತಿಯನ್ನು ಗಮಿನಿಸಿದ ಔರಂಗಜೇಬ ಬಾದಶಹನು ವಿಜಾಪುರವನ್ನು ತೆಗೆದುಕೊಳ್ಳುವ ಬಗ್ಗೆ ಮತ್ತೆ ಹೊಸ ಆದೇಶವನ್ನು ಖಾನ ಜಮಾನನಿಗೆ ಕಳಿಸಿದ್ದನು. ಆತನ ಆದೇಶದಂತೆ ಖಾನ ಜಮಾನನು ದೌಲತ್ತಾಬಾದದಿಂದ ಹೊರಟು ಪೇಡಗಾಂವದ ಹತ್ತಿರ ಬಹಾದ್ದೂರಗಡ ಎಂಬಲ್ಲಿಗೆ ಬಂದು ಇಳಿದುಕೊಂಡನು. ಮತ್ತು ಯುದ್ಧಮಾಡುವ ಪ್ರಯತ್ನದಲ್ಲಿ ಬಿದ್ದನು. ಅದರಂತೆ ಇನ್ನೊಬ್ಬ ಜಾಣ, ಮಲಿಕ ಬರ್ಖುರದಾರನೂ ಔರಂಗಜೇಬನ ಆಜ್ಞೆಯ ಮೇಲೆ 'ಮುಕೀಮಿ' ಕೆಲಸದ ಮೇಲೆ ನವರಸಪುರದಲ್ಲಿದ್ದು ವಿಜಾಪುರದ ಜನರನ್ನು ತನ್ನತ್ತ ಸೆಳೆಯಲು ದಿನ ರಾತ್ರಿ ಪ್ರಯತ್ನಿಸುತ್ತಿದ್ದನು.

ಖವಾಸಖಾನನು, ಮೊಗಲರ ರಾಯಭಾರಿಕೆಯನ್ನು ಹಿರಿಯ ಮುತ್ಸದ್ದಿ, ಬುದ್ಧಿವಂತ ಹಕೀಮ ಷಮ್ಸುದ್ದೀನನಿಗೆ ವಹಿಸಿದ್ದನು. ತನ್ನ ಜಾಣ್ಮೆಯಿಂದ ಆದಿಲಶಾಹ ಮತ್ತು ಮೊಗಲರ ಮಧ್ಯ ಸಖ್ಯ ಬೆಳಸಬೇಕು. ಹಾಗೆ ಮಾಡಿದರೆ ಆದಿಲಶಹನ ರಾಜ್ಯವು ಶತ್ರುಭಯದಿಂದ ಸುರಕ್ಷಿತವಾಗಿರುತ್ತದೆ ಎಂಬುದಾಗಿ ಹೇಳಿದ್ದನು. ಆಗ ಹಕೀಮ ಷಮಸುದ್ದೀನನು ತನ್ನ ಬುದ್ಧಿವಂತಿಕೆಯನ್ನು ಉಪಯೋಗಿಸಿ, ನವಾಬ ಬಹಾದೂರ ಖಾನನ ವಿಶ್ವಾಸಿಕ ಸರದಾರ ಮಹಮ್ಮದ ಅಮೀನ ಕಾಶ್ಮೀರಿಯನ್ನು ತನ್ನ ಕಡೆಗೆ ತೆಗದುಕೊಂಡು ಆತನೊಂದಿಗೆ ಸ್ನೇಹ ಬೆಳಸಿ, ಆತನ ವಶೀಲಿಯಿಂದ ನವಾಬ ಬಹಾದ್ದೂರ ಖಾನನೊಂದಿಗೆ ಸ್ನೇಹದ ಪ್ರಥಮ

ಹೆಜ್ಜೆಯನ್ನಿಟ್ಟನು. ಯುಕ್ತಾ ಯುಕ್ತಿಗಳಿಂದ ನವಾಬ ಬಹಾದ್ದೂರಖಾನ ಮತ್ತು ಖವಾಸಖಾನರ ಮಧ್ಯ ಗಟ್ಟಿಯಾದ ಸ್ನೇಹ ಬೆಳಸಿದನು. ಉಭಯತರೂ ಮಿತ್ರರಾದರು. ಅವರ ಸ್ನೇಹದ ಒಪ್ಪಂದದಂತೆ ಆದಿಲಶಾಹಿ ರಾಜಕುಮಾರಿ ಶಹರಬಾನು ಬೇಗಮ ಊರ್ಫ ಶಾಹಾ ಬೀಬಿಯ ಮದುವೆಯನ್ನು ಮೊಗಲ ರಾಜ ಕುಮಾರರಲ್ಲಿಯ ಒಬ್ಬನೊಂದಿಗೆ ಮಾಡಬೇಕು ಮತ್ತು ಉದ್ದಂಡನಾಗಿ ಅಗೌರವದಿಂದ ನಡೆದುಕೊಳ್ಳುತ್ತಿರುವ ಶಿವಾನನ್ನು ಶಿಕ್ಷಿಸಲು ಖವಾಸಖಾನನು ಸ್ವತಃ ಹೊರಡಬೇಕು ಎಂದು ನಿರ್ಧರಿಸಲಾಗಿತ್ತು. ಪ್ರತಿಯಾಗಿ ಔರಂಗಜೇಬ ಬಾದಶಹನು ಆದಿಲಶಹನಿಂದ ಪ್ರತಿವರುಷ ಪಡೆಯುತ್ತಿದ್ದ ನಜರಾಣೆಯನ್ನು ಮಾಫಮಾಡಬೇಕು, ಸಿಕಂದರನಿಗೆ 'ಶಾಹ' ಎಂಬ ಪದವಿಯನ್ನು ನೀಡಬೇಕು. ಈ ಒಪ್ಪಂದದ ಕರಾರುಗಳನ್ನು ನಿರ್ಧರಿಸುವಲ್ಲಿ ಉಭಯಕಡೆಗಳಲ್ಲೂ ಖಾಜಾ ಅಮೀನನು ಅನೇಕ ಸಲ ಬಂದು ಹೋದನು. ಉಭಯತರೂ ಈ ಕರಾರುಗಳಿಗೆ ಒಪ್ಪಿ ಪ್ರತಿಜ್ಞೆ ಮಾಡುವುದಾಯಿತು.

ನವಾಬ ಬಹಾದ್ದೂರಖಾನನು ಔರಂಗಜೇಬ ಬಾದಶಹನಿಗೆ ವಿನಂತಿ ಪತ್ರವನ್ನು ಬರೆಯುತ್ತ ಈ ಸಂಕಲ್ಪವನ್ನು ಸಿದ್ಧಿಗೊಳಿಸುವಲ್ಲಿ ಬಹಳ ಪ್ರಯತ್ನಿಸಿದನು. ವಿನಂತಿ ಪತ್ರದಲ್ಲಿ ಬರೆದ ಕರಾರುಗಳನ್ನೆಲ್ಲ ಔರಂಗಜೇಬ ಬಾದಶಹನು ಒಪ್ಪಿಕೊಂಡನು. ಸೊಕ್ಕಿನಿಂದ ಮೆರೆಯುತ್ತಿದ್ದ ಶಿವಾಜಿಯನ್ನು ನಿರ್ಮೂಲ ನಾಶಮಾಡಲು ಪ್ರತಿವರುಷದ ಕಪ್ಪ-ಕಾಣಿಕೆಯನ್ನೂ ಮಾಫ ಮಾಡಿದನಲ್ಲದೆ ಔರಂಗಜೇಬ ಬಾದಶಹನು ಕೃಪೆಮಾಡಿ ಖವಾಸಖಾನನಿಗೆ 'ನವಾನಸಖಾನ' ಎಂಬುದಾಗಿ ಪದವಿಯನ್ನಿತ್ತು ತನ್ನ ಮೈಮೇಲಿನ ಖಾಸ್ ಪೋಷಾಕಿನ ವಸ್ತ್ರಗಳನ್ನು ಕಳಿಸಿಕೊಟ್ಟನು. ಅದು ನಿಜವಾಗಿಯೂ ಒಳ್ಳೆಯ ದಿನವಾಗಿತ್ತು. ರಾಜ್ಯದ ಅಧಿಕ ವ್ಯವಸ್ಥೆಯಾಗಿತ್ತು. ರಾಜ್ಯದ ಕಲ್ಯಾಣದಲ್ಲಿ ಅತ್ಯಂತ ಆಶಾದಾಯಕವಾದ ದಿನವಾಗಿತ್ತು. ಆದರೆ ಅದೇ ಸಮಯದಲ್ಲಿ ಒಮ್ಮೆಲೇ ಕುರಾನದಲ್ಲಿಯ ಆಯತ ಹೇಳುವಂತೆ, 'ದೈವ ತಿರುಗಿದಾಗ ದುರ್ದೈವದ ವೇಳೆ ಬರುತ್ತದೆ ಆಗ ಎಲ್ಲ ವಿಚಾರಗಳೂ ನಿಷ್ಫಲವಾಗುತ್ತವೆ" ಎಂಬ ಹಾಗೆ ಕಾರ್ಯಭಾವವು ವಿಪರೀತವಾಯಿತು. ಕುತಂತ್ರ-ಒಳಸಂಚು ಮಾಡುವ ಜನರು, ಪ್ರತಿಯೊಂದು ಕೆಲಸದಲ್ಲೂ ಕಲ್ಲು ಹಾಕುವ ಜನರು ಪ್ರಯತ್ನ ಪಟ್ಟು ಹಕೀಮ ಷಮಸಾನ ಮಧ್ಯ ವಿರಸ ತಂದರು.

### ೪. *ಒಳಸಂಚುಗಾರರು ಯುಕ್ತಿಯಿಂದ ಹಕೀಮ ಷಮಸಾನನ್ನು ಕೆಡಿಸಿದ್ದು :*

ಹಕೀಮ ಷಮಸಾನ ಪ್ರಯತ್ನ ಮತ್ತು ಪ್ರಭಾವಗಳಿಂದಾಗಿ ಖವಾಸಖಾನನ ಎಲ್ಲ ಕೆಲಸಗಳೂ ಸಿದ್ಧಿಗೊಳ್ಳುತ್ತಿರುವುದು ಅವನ ಪ್ರತಿಸ್ಪರ್ಧಿಗಳಿಗೆ, ದ್ವೇಷಿಗಳಿಗೆ ನುಂಗಲಾರದ ತುತ್ತಾಯಿತು. ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ಕುತಂತ್ರಿಗಳು ತಂತಮ್ಮಲ್ಲಿ ವಿಚಾರ ಮಾಡುತ್ತ ಈ ಎಲ್ಲ ಕೆಲಸಗಳು ಹಕೀಮ ಷಮಸಾನ ಪ್ರಭಾವದಿಂದಲೇ ಆಗುತ್ತಿವೆ. ಆದ್ದರಿಂದ ಇದನ್ನು ಹೇಗಾದರೂ ಮಾಡಿ ಕೆಡಿಸಬೇಕು ಎಂದು ಚರ್ಚೆ ಮಾಡಿದರು. ಹಕೀಮ ಷಮಸಾನ ಸಹೋದರ ಮಿರ್ಜಾ ಬಾಕರ ಎಂಬವನಿದ್ದನು. ಆತನನ್ನು ಕಂಡು ಅವನ ತಲೆಯಲ್ಲಿ ನಾನಾ ಪ್ರಕಾರದ ದುರ್ಬುದ್ಧಿಗಳನ್ನು ತುಂಬಿದರು. ಮಿರ್ಜಾ ಬಾಕರನನ್ನು ಹಕೀಮ ಷಮಸಾನು ಖವಾಸಖಾನನ ಹತ್ತಿರ ಇಟ್ಟು, ಆತನ ಮುಖಾಂತರವೇ ಪತ್ರವ್ಯವಹಾರವನ್ನು ಮಾಡುತ್ತಿದ್ದನು. ಹೇಳುವುದು ಕೇಳುವುದನ್ನು ಕೂಡ ಅವನ ಮುಖಾಂತರವೇ ಮಾಡುತ್ತಿದ್ದನು. ಈ ದಿನಗಳಲ್ಲಿ ಮಿರ್ಜಾ ಬಾಕರನು ಕೆಲಸದ ನಿಮಿತ್ತ ವಿಜಾಪುರಕ್ಕೆ ಬಂದಿದ್ದನು. ಅದೇ ಸಮಯ ನೋಡಿ ಕುತಂತ್ರಿಗಳು ಮಿರ್ಜಾ ಬಾಕರನನ್ನು ತಿರುವಿದರು. ಅವನಿಗೆ ಕಲಿಸಿ ಅವನ ಬಾಯಿಂದಲೇ ತನ್ನ ಸಹೋದರ

ಹಕೀಮ ಷಮಸಾನ ಬಗ್ಗೆ ಖವಾಸಖಾನನಿಗೆ ಚಾಡಿ ಹೇಳಿಸುವಲ್ಲಿ ಯಶಸ್ವಿಯಾದರು. ಖವಾಸಖಾನನು ಮೂಲತಃ ಚಿಲ್ಲರೆ ಬುದ್ಧಿಯವನಾಗಿದ್ದನು. ಮಿರ್ಜಾ ಬಾಕರನು ಹೇಳುತ್ತಿರುವುದು ನಿಜವೋ ಸುಳ್ಳೋ ಎಂಬುದನ್ನು ನೋಡದೆ ಹಕೀಮ ಷಮಸಾನ ಬಗ್ಗೆ ಸಂಶಯ ತಾಳಿದನು. ಅವನನ್ನು ಲಕ್ಷಿಸದೆ, ಮಿರ್ಜಾ ಬಾಕರನ ಮುಖಾಂತರವೇ ತನ್ನ ಕೆಲಸಗಳನ್ನು ಮಾಡಲು ಪ್ರಾರಂಭಿಸಿದನು. ಈ ಮಧ್ಯೆ ಇನ್ನೊಂದು ಹೊಸ ವಿಘ್ನ ಎದ್ದು ನಿಂತಿತು. ಖವಾಸಖಾನನಿಗೂ ಪಠಾಣರಿಗೂ ದ್ವೇಷವಿತ್ತು. ಅವರು ತಮ್ಮ ಸಂಬಳ ಏರಿಸುವ ಬಗ್ಗೆ ತಗಾದೆ ಮಾಡುತ್ತಿದ್ದರು. ಅದು ಅಧಿಕವಾದಾಗ ಇದನ್ನೆಲ್ಲ ನವಾಬ ಬಹಾದ್ದೂರಖಾನನ ಪ್ರಭಾವದಿಂದ ಹಕೀಮ ಷಮಸಾನೇ ಎಬ್ಬಿಸಿದ್ದಾನೆಂದು ತಿಳಿದನು. ಪಠಾಣರನ್ನು ನಿರ್ಮೂಲ ಮಾಡಬೇಕೆಂದು ನಿರ್ಧರಿಸಿದನು. ಕುತಂತ್ರಿಗಳಿಗೆ ಇದು ವರದಾನವಾಗಿ ಅದಕ್ಕೆ ಇನ್ನಷ್ಟು ಹುಲ್ಲು ಹಾಕಿ ಖವಾಸಖಾನನ ಮನಸ್ಸು ಕೆಡುವಂತೆ, ಹಕೀಮ ಷಮಸಾ ಮತ್ತು ಮಿರ್ಜಾ ಬಾಕರರು ಸಂಬಂಧಿಕರಾದ್ದರಿಂದ, ಬಾಕರನಿಗೆ ಈ ವಿಷಯ ತಿಳಿದರೆ ಅದು ಪಠಾಣರಿಗೂ ಗೊತ್ತಾಗಿ ಕಾರ್ಯಭಾವ ವಿಪರೀತವಾಗಿ ಭಯಂಕರ ಪ್ರಸಂಗ ಉದ್ಭವಿಸುತ್ತದೆ ಎಂಬುದಾಗಿ ಅವನ ಮನದಲ್ಲಿ ತುಂಬಿದರು. ಆ ಮೂರ್ಖ ಹುಚ್ಚ, ಅವಿಚಾರಿ ಖವಾಸಖಾನನು ಇದು ಸತ್ಯವೇ ಎಂಬುದನ್ನು ವಿಚಾರಿಸದೆ ಮೋಸಗಾರರಿಗೆ ಬಲಿಯಾದನು.

ಮೀರ ಬಾಕರನನ್ನೂ ಹಕೀಮ ಷಮಸಾನಂತೆ ಕೆಲಸದಿಂದ ತೆಗೆದು ಹಾಕಿದನು. ಅವನ ಸ್ಥಳದಲ್ಲಿ ಶಾಮರಾವನನ್ನು ತೆಗೆದುಕೊಂಡನು. ಭೆಟ್ಟಿಯ ಕರಾರುಗಳನ್ನು ನಿರ್ಧರಿಸಲು ಮತ್ತು ಪಠಾಣ ಜನರನ್ನು ನಿರ್ಮೂಲ ನಾಶ ಮಾಡುವ ಬಗ್ಗೆ ನವಾಬ ಬಹಾದ್ದೂರಖಾನನ ಕಡೆಗೆ ಕಳಿಸಿದನು. ಹೀಗೆ ಖವಾಸಖಾನನು ಗಳಿಗೆ-ಗಳಿಗೆಗೆ ಚಂಚಲನಾಗುತ್ತಿದ್ದನು. ಸ್ಥಿರವಾಗಿ ಇರುತ್ತಿರಲಿಲ್ಲ. ಮೇಲಿಂದಮೇಲೆ ಬಣ್ಣ ಬದಲಿಸುತ್ತಿದ್ದನು. ಆತ ಮೊದಲಿನಂತೆ ಇಲ್ಲ ಎಂಬುದು ಬಹಾದ್ದೂರಖಾನನಿಗೆ ತಿಳಿಯಿತು. ಹಕೀಮ ಷಮಸಾನ ಯೋಗ್ಯತೆ ಹಾಗೂ ಶಾಮರಾವನ ಯೋಗ್ಯತೆಗಳಲ್ಲಿ ಬಹಳ ಅಂತರವಿದ್ದು ಭೂಮಿ ಆಕಾಶದಷ್ಟು ಅಂತರವಿದ್ದುದನ್ನು ಕಂಡು ನವಾಬ ಬಹಾದ್ದೂರಖಾನನು ಶಾಮರಾವನ ಮಾತುಗಳಿಗೆ ಲಕ್ಷ ಕೊಡುತ್ತಿರಲಿಲ್ಲ. ಆತ ಏನನ್ನಾದರೂ ಹೇಳಲು ಬಂದರೆ ಅದನ್ನು ಕಿವಿಯಲ್ಲಿ ಹಾಕಿಕೊಳ್ಳುತ್ತಲೇ ಇರಲಿಲ್ಲ.

### ೫. ಶಿವಾಜಿಯು ನವಾಬ ಬಹಾದ್ದೂರಖಾನನಿಗೆ ಮೋಸ ಮಾಡಿದ್ದು :

ಕರ್ಮಧರ್ಮ ಸಂಯೋಗದಿಂದ ಅದೇ ದಿನಗಳಲ್ಲಿ ಶಿವಾಜಿಯು ಪಾಚಮಹಲನ್ನು ಕೈವಶಮಾಡಿಕೊಳ್ಳಲು ತನ್ನ ಸೈನ್ಯವನ್ನು ಕಳಿಸಿ ಕೊಟ್ಟನು. ಕೆಲವು ದಿನಗಳ ಅನಂತರ ಶಿವಾಜಿಯೂ ಸ್ವತಃ ತನ್ನ ಸೈನ್ಯ ಹೋದತ್ತ ಹೋಗಿ ಘೋಂಡಾದ ಪ್ರದೇಶಗಳಲ್ಲಿ ಹಲ್ಲೆ ಮಾಡಿದನು. ಜೊತೆಗೆ, ತಾನಿರದಾಗ ಬಹದ್ದೂರಖಾನನು ಸಂಧಿ ಸಾಧಿಸಿ ಅತ್ತಕಡೆಯಿಂದ ತನ್ನ ಪ್ರದೇಶಗಳ ಮೇಲೆ ಆಕ್ರಮಣ ಮಾಡಬಹುದೆಂದು ತಿಳಿದು, ಆತನೊಂದಿಗೆ ಸ್ನೇಹ ಬೆಳೆಸುವ ನಾಟಕ ಪ್ರಾರಂಭಿಸಿದನು. ಒಪ್ಪಂದದ ಕರಾರುಗಳನ್ನು ನಿರ್ಧರಿಸತೊಡಗಿದನು. 'ಒಂದು ವೇಳೆ ತಾವು ನನ್ನ ಕಡೆಯಿಂದ ಆದ ಅಪರಾಧಗಳಿಗೆ ಔರಂಜೇಬ ಬಾದಶಹರಿಂದ ಕ್ಷಮೆ ದೊರಕಿಸಿ ಕೊಡುವಲ್ಲಿ ಮತ್ತು ದಕ್ಷಿಣ ದೇಶಗಳ ದೇಶಮುಖಿಯನ್ನು ನಮಗೆ ಕೊಡಿಸುವಲ್ಲಿ ಮತ್ತು ಈ ಮೊದಲು ಮಗನಿಗೆ ಕೊಟ್ಟ ಪದವಿಯನ್ನು ಸ್ಥಿರವಾಗಿಸಿದರೆ, ಆ ರೀತಿ ಆಜ್ಞಾಪತ್ರವನ್ನು ತಂದರೆ, ನನ್ನ ವಶದಲ್ಲಿದ್ದ ಬಾದಶಹರ ಎಲ್ಲ ಕೋಟೆಗಳನ್ನು ಮತ್ತು ರಾಜಾ ಜಯಸಿಂಗನ ಕಾಲದಲ್ಲಿ ಕೊಟ್ಟ ಕೋಟೆಗಳನ್ನೆಲ್ಲ ತಿರುಗಿ ಬಾದಶಹರಿಗೆ ಕೊಟ್ಟು ನಮ್ಮ ಮಗನನ್ನು ಬಾದಶಹರ ಸೇವೆಗೆ

ಕಳಿಸುವೆನು, ನಾನು ಕೂಡ ಬಾದಶಹರ ಸೇವೆಯಲ್ಲಿ ನಿರಂತರವಾಗಿ ಇರುವೆನು. ಪ್ರಾಣದ ಮೇಲೆ ಸಂಕಟ ಬಂದರೂ ಬಾದಶಹರ ಸೇವೆಯಲ್ಲಿ ಅಂತರ ಮಾಡಲಾರೆನು' ಎಂದು ಹೇಳಿ ಕಳಿಸಿದನು. ಅದನ್ನು ಕಂಡ ಬಹಾದ್ದೂರ ಖಾನನು, 'ಯಾವ ಆಶೆಯಿಂದ ನಾನು ಬಂದಿದ್ದೇನೋ ಅದು, ಒಂದೂ ಪ್ರಯತ್ನವಿಲ್ಲದೆ ಕರಜೋಡಿಸಿಕೊಂಡು ಮುಂದೆ ಬಂದಿದೆ' ಎಂದು ತಿಳಿದು ಶಿವಾಜಿಯ ಕರಾರುಗಳಿಗೆ ಒಪ್ಪಿ ಔರಂಗಜೇಬ ಬಾದಶಹನಿಂದ ವ್ಯವಸ್ಥಿತವಾದ ಆಜ್ಞಾಪತ್ರವನ್ನು ತರಿಸಿದನು. ಹೀಗೆ ಮಹಾಮೋಸಗಾರ ಶಿವಾಜಿಯು ನವಾಬ ಬಹಾದ್ದೂರಖಾನನ್ನು ತನ್ನ ಬಲೆಯಲ್ಲಿ ಕೆಡವಿ ತನ್ನಂತೆ ಮಾಡಿಕೊಂಡನು. ಈ ಸೇವೆಗಾಗಿ ಔರಂಗಜೇಬ ಬಾದಶಹನು ಬಹಾದ್ದೂರಖಾನನ ಮೇಲೆ ಅಧಿಕಾಧಿಕ ಖುಶಿಯಾಗಿ, ಬಹಾದ್ದೂರಖಾನನು ಶಿವಾಜಿಗೆ ಕೊಡಬೇಕೆಂದು ಬಯಸಿದ 'ನಫರಜಂಗ ಕಾಮಿಲತಾಷ' ಎಂಬ ಬಿರುದನ್ನು ಕೊಟ್ಟನು. ಬಾದಶಹನು ಈ ರೀತಿಯ ಆಜ್ಞಾಪತ್ರವನ್ನು ವಸ್ತ್ರ ಸಹಿತವಾಗಿ ತನ್ನ ವಿಶ್ವಾಸಿಕರಲ್ಲೊಬ್ಬನಾದ ಬಹಾದ್ದೂರಖಾನ ಸಯೀದಖಾನ ಎಂಬವನ ಜೊತೆಗೆ ಶಿವಾಜಿಗೆ ಕಳಿಸಿ ಕೊಟ್ಟನು. ತನ್ನ ಮತ್ತು ಔರಂಗಬೇಜ ಬಾದಶಹನ ಮಧ್ಯದ ಒಪ್ಪಂದದಿಂದಾಗಿ, ಶಿರಾಜಿಯು ತನ್ನ ಪ್ರದೇಶಗಳ ಮೇಲಿನ ಆತಂಕಗಳಿಂದ ನಿರ್ಭಯನಾಗಿದ್ದನು. ಸ್ವಸ್ಥ ಚಿತ್ತದಿಂದ ಕೋಟೆಯನ್ನು ಗೆಲ್ಲುವ ಪ್ರಯತ್ನದಲ್ಲಿದ್ದನು. ದಿನಾಂಕ ೧೫, ತಿಂಗಳು ಸಫರ, ಹಿಜರಿಸನ್ ೧೦೮೬ (೧೫ ಜೂನ ೧೬೭೫) ರಂದು ಫೋಂಡಾ ಕೋಟೆಯನ್ನು ಮತ್ತು ಅದರ ಅಂಕಿತದಲ್ಲಿದ್ದ ಮಹಲುಗಳನ್ನು ಶಿವಾಜಿಯು ಕೈವಶ ಮಾಡಿಕೊಂಡನು.[೧] ೧೫ ಲಕ್ಷ ಹೊನ್ನುಗಳ ಪದಾರ್ಥಗಳನ್ನು ಬಹಾದೂರ ಖಾನನ ದಂಡಿನಿಂದ ಖರೀದಿ ಮಾಡಿಸಿದನು. ಅಲ್ಲದೆ ಬೇರೆ ತನ್ನೆಲ್ಲ ಕಾರ್ಯಭಾರಗಳನ್ನು ಶಿವಾಜಿಯು ತನ್ನ ಮನೋಗತದಂತೆ ಮಾಡಿಕೊಂಡನು.

ಅನಂತರ ಶಿವಾಜಿಯು ಮತ್ತೆ ತನ್ನ ವಿಶ್ವಾಸಘಾತುಕ -ಕೃತಘ್ನ ಪ್ರವೃತ್ತಿಯನ್ನು ಪ್ರಾರಂಭಿಸಿದನು. ಸೈಯದಖಾನನನ್ನು ಕರೆದು ಹೇಳಿದನು. 'ಬಹಾದ್ದೂರಖಾನ ಯಾರು? ಅದ್ಯಾವ ವಸ್ತು? ಅವನನ್ನು ಯಾರು ಕೇಳಬೇಕು? ಅವನಲ್ಲಿ ಅಂಥ ಯಾವ ಯೋಗ್ಯತೆ ಇದೆಯೆಂದು ನಮ್ಮಂಥ ಶ್ರೀಮಂತರು ಅವನೊಂದಿಗೆ ಸಖ್ಯತೆಯನ್ನು ಬೆಳೆಸಬೇಕು? ಮತ್ತು ಅವನ ಪ್ರಭಾವದಿಂದ ನಮ್ಮೆಲ್ಲ ಕೆಲಸಗಳನ್ನು ಮಾಡಿಸಿಕೊಳ್ಳಬೇಕು? ಅಂಥ ಯೋಗ್ಯತೆ ಅವನಲ್ಲೇನಿದೆ? ಹಾಗೆ ಅವನು ತಿಳಿದಿದ್ದರೆ ಅದು ತಪ್ಪು ಅವನಿಗೆ ಏನೂ ತಿಳಿಯುವುದಿಲ್ಲ' ಎಂದೆಲ್ಲ ಹೇಳುತ್ತ ಸಯೀದಖಾನನಿಗೆ "ನನ್ನಿಂದ ಯಾವ ಆಶೆಯನ್ನೂ ಹಿಡಿಯಬೇಡ ಮತ್ತು ಭ್ರಮೆಯಲ್ಲಿ ಇರಬೇಡ ಎಂದು ಬಹಾದ್ದೂರಖಾನನಿಗೆ ಹೋಗಿ ಹೇಳು" ಎಂಬುದಾಗಿ ತಿಳಿಸಿದನು. ಆಗ ಸಯೀದಖಾನನು ಶಿವಾಜಿಯ ಮೋಸಗಾರಿಕೆ ಹಾಗೂ ಠಕ್ಕತನದಿಂದಾಗಿ ಚಿಂತಿತನಾಗಿ, ನಿರುಪಾಯನಾಗಿ ತಿರುಗಿ ಬಂದನು. ಬಹಾದ್ದೂರಖಾನನಿಗೆ ಸವಿಸ್ತಾರವಾಗಿ ಎಲ್ಲವನ್ನೂ ತಿಳಿಸಿದನು. ಅದನ್ನು ಕೇಳಿದ ನವಾಬ ಬಹಾದ್ದೂರಖಾನನು ಶಿವಾಜಿಯ ಮೋಸದಿಂದ ಕೆಂಡಾಮಂಡಲನಾದನು. ಏನು ಮಾಡಬೇಕೆಂದು ವಿಚಾರಿಸಹತ್ತಿದನು. ಒಂದು ವೇಳೆ ಔರಂಗಜೇಬ ಬಾದಶಹನಿಗೆ ಈ ವಿಷಯ

---

೧. ಶಕೆ ೧೫೯೬ ಫಾಲ್ಗುಣ ವದ್ಯ ೫ ಯಂದು ( ೬. ಮಾರ್ಚ ೧೬೭೫) ರಾಜಶ್ರೀ ಸವಾರಿಮಾಡಿ ಚೈತ್ರ ವದ್ಯ ೫ (೪ ಎಪ್ರಿಲ್ ೧೬೭೫) ರಂದು ಫೋಂಡಾ ಮುತ್ತಿಗೆ ಹಾಕಿದರು. ಶಕೆ ೧೫೯೭ ವೈಶಾಖ ಶುದ್ಧ ೩ (೧೭, ಎಪ್ರಿಲ ೧೬೭೫) ರಂದು ರಾಜಶ್ರೀ ಸ್ವಾಮಿಗಳು ಫೋಂಡಾ ಕೋಟೆಯನ್ನು ಸುರಂಗ ಹಚ್ಚಿ ಹಾರಿಸಿದರು. ಜೇಷ್ಠ ಮಾಸದಲ್ಲಿ (ಮೇ ಜೂನ್ ೧೬೭೫) ಕಡವಾಡಿ ಶಿವೇಶ್ವರ ಮತ್ತು ಅಂಕೋಲೆ ವಶ ಮಾಡಿಕೊಂಡರು. ರಾಯಗಡಕ್ಕೆ ಹೋದರು-ಜೇಧೇ ಶಕಾ ಪುಟ -೨೭

ತಿಳಿದರೆ, ಈ ಅಪರಾಧಕ್ಕಾಗಿ, ಮೂರ್ಖತನಕ್ಕಾಗಿ ಬಾದಶಹನು ನನ್ನನ್ನೆ ಹಿಡಿಯುತ್ತಾನೆ ಎಂದುಕೊಂಡು ಇಂಥ ಪರಿಸ್ಥಿತಿಯಲ್ಲಿ ಏನಾದರೂ ಮಾಡಿ ಖವಾಸಖಾನನ್ನೆ ಭೆಟ್ಟಿಯಾಗಿ ಶಿವಾಜಿಯನ್ನು ಶಿಕ್ಷಿಸುವ ಕೆಲಸ ಮಾಡುವುದೇ ಸೂಕ್ತ ಅದರಿಂದ ನನ್ನ ನೌಕರಿಯೂ ಉಳಿಯುತ್ತದೆ ಎಂದು ತಿಳಿದನು.

### ೬. *ಖವಾಸಖಾನ-ಬಹಾದ್ದೂರಖಾನರ ಭೆಟ್ಟಿ ಮತ್ತು ಮನದಲ್ಲಿಯ ಕಾರ್ಯಸಿದ್ಧಿಗಾಗಿ ಪ್ರಯತ್ನ :*

ಈ ಮೊದಲು ಬಹಾದ್ದೂರಖಾನನು ತನ್ನೊಂದಿಗೆ ಸರಿಯಾಗಿ ಮಾತನಾಡುತ್ತಿಲ್ಲವೆಂದು ಶಾಮರಾವನು ಮನನೊಂದಿದ್ದನು. ಅದೇ ಶಾಮರಾವನನ್ನು ಕರೆಯಿಸಿಕೊಂಡು, ಖವಾಸಖಾನನೊಂದಿಗೆ ಒಪ್ಪಂದ ಮಾಡಿಕೊಳ್ಳಲು ಮಾತನಾಡಿದನು. ಇದುವೆ ಒಳ್ಳೆಯ ಸುಸಂಧಿ ಎಂದು ತಿಳಿದ ಶಾಮರಾವನು ಪಠಾಣ ಜನರ ಉದ್ದಂಡತನ ಹಾಗೂ ಖವಾಸಖಾನನ ಮನದಲ್ಲಿಯ ಇರಾದೆಯನ್ನು ನವಾಬ ಬಹಾದ್ದೂರ ಖಾನನಿಗೆ ಹೇಳಿದನು. ಹಾಗೂ ಒಂದು ನಿರ್ಧಾರಕ್ಕೆ ಬಂದು ನವಾಬನ ದಂಡಿನಲ್ಲಿದ್ದ ವಕೀಲ ಖಿಜರಖಾನನ್ನು ದಂಡಿನಿಂದ ತೆಗೆಯಬಾರದು. ಆದಿಲಶಾಹೀ ಕಡೆಯ ಪಠಾಣರ ವಿನಂತಿ ಪತ್ರಗಳನ್ನಾಗಲೀ ಅವರ ವಕೀಲನನ್ನಾಗಲೀ ಕಾಣಬಾರದು ಹೀಗೆ ಮಾಡುವುದಲ್ಲದೆ, ಖವಾಸಖಾನನ ಕನ್ಯೆಯನ್ನು ಬಹಾದ್ದೂರಖಾನನ ಮಗನಿಗೆ ತೆಗೆದುಕೊಳ್ಳಬೇಕೆಂದು ನಿರ್ಧರಿಸಿದರು. ಶಾಮರಾವ ತಿರುಗಿ ಬಂದನು. ನಡೆದ ಸಂಗತಿಗಳ ವಿವರಗಳನ್ನೆಲ್ಲ ಖವಾಸಖಾನನಿಗೆ ತಿಳಿಸಿದನು. ಈ ಮೊದಲು ಬಹಾದ್ದೂರ ಖಾನನ ಹತ್ತಿರ ಶಾಮರಾವನ ಪ್ರವೇಶ ಇಲ್ಲದ್ದು ತನ್ನ ಕೆಲಸಗಳು ನಡೆಯದಿದ್ದುದರ ಬಗ್ಗೆ ಚಿಂತೆಗೀಡಾಗಿ ಗಾಬರಿಯಾಗಿದ್ದ ಖವಾಸಖಾನನು, ಈಗಿನ ಸುದ್ದಿಯನ್ನು ಕೇಳಿ ತುಂಬ ಸಂತೋಷಪಟ್ಟನು. ಮತ್ತು ನವಾಬ ಬಹಾದ್ದೂರಖಾನನ್ನು ಭೆಟ್ಟಿಯಾಗುವ ಸಿದ್ದತೆಗಳನ್ನು ಮಾಡಿ ಕೊಳ್ಳಹತ್ತಿದನು. ಒಂದು ಪತ್ರವನ್ನು ಬರೆದು, ಅದರಲ್ಲಿ ಭೀಮಾನದಿಯ ತೀರದಲ್ಲಿ ಭೆಟ್ಟಿಯಾಗುವುದೆಂದು ನಿರ್ಧರಿಸಿ, ಅದರಂತೆ ಅಲ್ಲಿಗೆ ಬರಲು ಬರೆದು ಕಳಿಸಿದನು.

ನವಾಬ ಬಹಾದ್ದೂರಖಾನನು ಅದನ್ನು ಕಂಡಕೂಡಲೆ ತಕ್ಷಣ ಪೇಡಗಾವದಿಂದ ಹೊರಟನು. 'ನವಾಬನು ಬರುವ ಮೊದಲೇ ನಾವೂ ಬರಹತ್ತಿದ್ದೇವೆ' ಎಂದು ಹೇಳಲು ಖಾಜಾ ಮಹಮ್ಮದ ಅಮೀನನನ್ನು ಮುಂದೆ ಕಳಿಸಿದನು. ಖಾಜಾ ಅಮೀನನು ತಿರುಗಿ ಬಂದು ಮುಟ್ಟುವ ಮೊದಲೇ ಮಂಗಳವಾರ ದಿನಾಂಕ ೧೦, ತಿಂಗಳು ರಜಬ ಹಿಜರಿ ಸನ್ ೧೦೮೬ (೨೧ ಸಪ್ಟೆಂಬರ ೧೬೭೫) ರಂದು ಖವಾಸಖಾನನು ನವಾಬನ ಭೆಟ್ಟಿಗಾಗಿ ವಿಜಾಪುರ ಕೋಟೆಯಿಂದ ಹೊರಟನು. ಖಾಜಾ ಅಮೀನನು ಖವಾಸಖಾನನಿಗೆ ದಾರಿಯಲ್ಲೇ ಭೆಟ್ಟಿಯಾದನು. ನವಾಬನ ಪತ್ರವನ್ನು ಆತನಿಗೆ ಕೊಟ್ಟನು. ಅದನ್ನು ಓದಿ ಖವಾಸಖಾನನು ಮುಂದೆ ಹೊರಟನು. ಕೆಲವು ದಿನಗಳ ಅನಂತರ ಭೀಮಾ ನದಿಯ ದಂಡೆಗೆ ಬಂದು ಮುಟ್ಟಿದನು. ದಿನಾಂಕ ೭ ತಿಂಗಳು ಸಾಬಾನ (೧೭ ಅಕ್ಟೋಬರ ೧೬೭೫) ರಂದು ಖವಾಸಖಾನನು ನವಾಬ ಬಹಾದ್ದೂರಖಾನನ್ನು ಭೆಟ್ಟಿಯಾದನು. ಉಭಯತರು ಮಾತನಾಡಿಕೊಂಡರು. ತಂತಮ್ಮ ಕಾರ್ಯಸಿದ್ಧಿಗಳ ಬಗ್ಗೆ ಚರ್ಚೆ ಮಾಡಿದರು. ಅನಂತರ ಮರುದಿನ ದಿನಾಂಕ ೮ ಸಾಬಾನದಂದು (೧೮ ಅಕ್ಟೋಬರ) ಖವಾಸಖಾನನು ವಿಜಾಪುರಕ್ಕೆ ಬಂದನು.

೭. *ನವಾಬ ಅಬ್ದುಲ ಕರೀಮನು, ಖವಾಸಖಾನನ್ನು ಬಂಧಿಸಿ ಬಂಕಾಪುರದಲ್ಲಿ ಇಟ್ಟದ್ದು:*

ನವಾಬ ಅಬ್ದುಲಕರೀಮ ಬಹಲೋಲಖಾನನು 'ಸರಲಷ್ಕರಿ' ಸೈನ್ಯದ ಧಣಿಯಾಗಿದ್ದನು. ಸಾಕಷ್ಟು ಶ್ರೀಮಂತ ಅಷ್ಟೇ ಸಂಭಾವಿತನೂ ಆಗಿದ್ದನು. ಆದ್ದರಿಂದ ಆತ ಖವಾಸಖಾನನ ಕೈಕೆಳಗೆ ದುಡಿಯುವುದನ್ನು ಬಿಟ್ಟು ದ್ವೇಷ ಸಾಧಿಸುತ್ತಿದ್ದನು. ತನ್ನ ಜಹಗೀರಿಯ ಬಗ್ಗೆ ಖವಾಸಖಾನನ ಜೊತೆಗೆ ಜಗಳ ತೆಗೆದು ಹೇಗಾದರೂ ಮಾಡಿ ಖವಾಸಖಾನನ್ನು ಕೆಲಸದಿಂದ ತೆಗೆಯುವ ಪ್ರಯತ್ನದಲ್ಲಿದ್ದನು. ಅನೇಕ ಪ್ರಕಾರದ ಯುಕ್ತಿ-ಪ್ರಯುಕ್ತಿಗಳಲ್ಲಿ ತೊಡಗಿದ್ದನು. ಈಗಲಂತೂ ಖವಾಸಖಾನನಿಗೆ ಬಹಾದ್ದೂರಖಾನನ ಬೆಂಬಲ ದೊರೆತಿತ್ತು. ಅದರಿಂದಾಗಿ ಖವಾಸಖಾನನೂ, ಅಬ್ದುಲಕರೀಮನನ್ನು ನಾಶ ಮಾಡುವ ವಿಷಯದಲ್ಲಿ ಮನದಲ್ಲೇ ಯೋಜನೆಗಳನ್ನು ಹಾಕುತ್ತಿದ್ದನು. ಹೀಗೆ ಉಭಯತರಲ್ಲಿಯ ದ್ವೇಷಾಗ್ನಿ ಸಾವಕಾಶವಾಗಿ ಪ್ರಜ್ವಲವಾಗತೊಡಗಿತು.

ಅಬ್ದುಲಕರೀಮ ಬಹಲೋಲಖಾನನು ಆಂತರ್ಯದಲ್ಲಿ ಖವಾಸಖಾನನ ಬಗ್ಗೆ ದ್ವೇಷ ಸಾಧಿಸುತ್ತಿದ್ದರೂ ಹೊರಗೆ ಅದನ್ನು ತೋರಗೊಡದೆ ಬಹಳ ಸ್ನೇಹವನ್ನೇ ತೋರುತ್ತಿದ್ದನು. ಒಂದು ದಿನ ಖವಾಸಖಾನನನ್ನು ಊಟಕ್ಕೆ ಕರೆದನು. ಇದು ಕಾಲಚಕ್ರವು ಕ್ಷಣದಲ್ಲಿ ಏನು ಮಾಡಬಹುದೆಂಬುದರ ದ್ಯೋತಕ. ಕಾಲಚಕ್ರದ ಆಟವನ್ನು ಗಮನಿಸದೆ, ಕುರಾನ ಷರೀಫದ ಆಯತದಲ್ಲಿ ಹೇಳಿದಂತೆ, 'ಯಾರ ಮೇಲೂ ವಿಶ್ವಾಸವಿಡಬಾರದು-ಆತನಿಗೇ ಜಾಣನೆನ್ನುತ್ತಾರೆ' ಎಂಬ ವಾಕ್ಯವನ್ನು ಗಮನಿಸದೆ, ಬಹಲೋಲಖಾನನ ಭೋಜನದ ಆಮಂತ್ರಣವನ್ನು ಶುಭಸೂಚಕವೆಂದು ತಿಳಿದು, ದಿನಾಂಕ ೩, ರಮಜಾನ ಗುರುವಾರದಂದು (೧೧, ನವಂಬರ ೧೬೭೫) ಮನದಲ್ಲಿ ಏನೊಂದನ್ನು ಸಂಶಯ ತಾಳದೆ, ನಿರ್ಭಯನಾಗಿ ಬಹಲೋಲಖಾನನ ವಾಡೆಗೆ ಬಂದನು. ಬಹಲೋಲಖಾನನು ತನ್ನ ಸೈನ್ಯಕ್ಕೆ ಸೂಚನೆಯನ್ನು ಕೊಟ್ಟೇ ಇಟ್ಟಿದ್ದನು. ಅಲ್ಲದೆ ಸಭೆಯಲ್ಲಿಯ ಕೆಲ ಕೆಲವು ಆಯ್ದು ಜನರಿಗೆ ಮತ್ತು ಕೆಲಸಕಾರ್ಯಗಳನ್ನು ಮಾಡಿದ ಜಾಣ ಜನರಿಗೆ ಗುಪ್ತವಾಗಿ ಹೇಳಿಯೂ ಇಟ್ಟಿದ್ದನು. ಖವಾಸಖಾನನು ಬರುತ್ತಿದ್ದಂತೆ ತಕ್ಷಣ ಅವನನ್ನು ಹಿಡಿದು ಬಂಧಿಸಿ ಬಿಟ್ಟನು. ಮತ್ತು ಬಂಕಾಪುರದ ಕೋಟೆಗೆ ಕಳಿಸಿದನು.[೧]

ಬಹಲೋಲಖಾನನ ಪ್ರಭಾವ ಬಹಳ ಇದ್ದುದರಿಂದ ಖವಾಸಖಾನನ ಕಡೆಯ ಜನರ ಆಟ ಏನೊಂದು ನಡೆಯಲಿಲ್ಲ. ಮರುದಿನ ರಮಜಾನದ ನಾಲ್ಕನೆಯ ದಿನ (೧೨, ನವಂಬರ ೧೬೭೫) ವಾಗಿತ್ತು. ಆದ್ದರಿಂದ ಆ ದಿನ ಅಬ್ದುಲ ಕರೀಮ ಬಹಲೋಲಖಾನನು ಕೋಟೆಯ ಒಳಗಡೆಗೆ ಬಂದು ಹಾಜರಾಗಿ ರಾಜ್ಯದ ಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಸಿಕಂದರ ಬಾದಶಹನ ರಾಜ್ಯದ ಮುಖ್ತಾರಿ ತಾನೆ ಆದನು. ಪಠಾಣ ಜನರನ್ನು ಮತ್ತು ತನ್ನ ಖಾಸಾ ಜನರನ್ನು ಕೆಲಸದ ಮೇಲೆ ತೆಗೆದುಕೊಂಡು, ಆ ಜನರಿಗೆ ಪೂರ್ಣ ಅಧಿಕಾರ-ಭರವಸೆಗಳನ್ನು ಕೊಟ್ಟು ಕೆಲಸ ನಡೆಸಿದನು.

ಖವಾಸಖಾನನ ಖಾಸಾ ಜನರು ದಕ್ಷಿಣದವರಾಗಿದ್ದು ಮತ್ತು ಬೇರೆ ಕೆಲವು ಜನರೂ ಇದ್ದರು. ಅವರನ್ನು ಸಾವಕಾಶವಾಗಿ ಒಬ್ಬೊಬ್ಬರನ್ನಾಗಿ ಕೆಲಸದಿಂದ ತೆಗೆದು ಹಾಕಿ ನಗರದಿಂದಲೇ ಹೊರಗೆ ಹಾಕಲು ಪ್ರಾರಂಭಿಸಿದನು, ಖಿಜರಖಾನನ್ನು ತನ್ನ ಪೂರ್ಣವಿಶ್ವಾಸಕ್ಕೆ ತೆಗೆದುಕೊಂಡು ಮುಖ್ಯ ಅಧಿಕಾರಿಯನ್ನಾಗಿ ಮಾಡಿ ಆತನನ್ನು ರಾಜ್ಯದ ವ್ಯವಸ್ಥೆಗಾಗಿ ಸೈನ್ಯ ಸಹಿತವಾಗಿ ಕಳಿಸಿಕೊಟ್ಟನು. ಇದು

೧. ಶಕೆ ೧೫೯೭ - ಭ. ೩ ರಮಜಾನ (೧೧.ನವಾಬ ೧೬೭೫) ಬಹಲೋಲಖಾನನು ಖವಾಸಖಾನನನ್ನು ಬಂಧಿಸಿದನು. ತಾನೆ ಕಾರಭಾರಿಯಾದನು. ಜೇಧೆ ಶಕಾವಲಿ ಪುಟ -೨೭.

ಬಂಡು ಏಳಲು ಕಾಣವಾಯಿತು. ಬಾದಶಹನ ನೌಕರರವರ್ಗದವರು, ದಕ್ಷಿಣೀ ಜನರು ಉದಾಸರಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ಖಾಲೀ ಕುಳಿತು ಯೋಜನೆಗಳನ್ನು ಹಾಕಹತ್ತಿದರು.

ಸಿಕಂದರ ಬಾದಶಹನ ಕಾಲದಲ್ಲಿ ಖವಾಸಖಾನನ ಪ್ರಧಾನಮಂತ್ರಿ ಪದವಿ ಕೇವಲ ಮೂರು ವರ್ಷದ್ದಾಗಿತ್ತು. ಆ ಮೂರು ವರುಷಗಳಲ್ಲಿ ಖವಾಸಖಾನನು ಕೇವಲ ಆನಂದದಿಂದ ಕುಳಿತುಕೊಂಡಿದ್ದರಿಂದ, ಮತ್ತು ಆತನಿಗೆ ಕಾಲಚಕ್ರಆಟದ ಅನುಭವದ ಮಾಹಿತಿಯೇ ಇರದಿದ್ದರಿಂದ ರಾಜ್ಯದ ಕೆಲಸಗಳನ್ನು ಸುರಳೀತವಾಗಿ ನಡೆಸುವುದು ಆತನಿಂದ ಸಾಧ್ಯವಾಗಲಿಲ್ಲ. ಬಹಳ ವಿನಾಶದತ್ತ ನಡೆದಿತ್ತು. ಹಬೀಬ ಸುಲ್ತಾನಾ ಎಂಬ ಖವಾಸಖಾನನ ಸ್ತ್ರೀಯು ಮುಲ್ಕೀ ಮತ್ತು ಮಹಾಲೀ ಕೆಲಸಗಳನ್ನು ನಡೆಸುತ್ತಿದ್ದಳು. ರಾಜ್ಯದ ವ್ಯವಸ್ಥೆಯನ್ನು ಚೆನ್ನಾಗಿ ಇಟ್ಟಿದ್ದಳು. ಪೂರ್ಣ ವಿಚಾರದಿಂದ ಕೆಲಸ ನಡೆಸುತ್ತಿದ್ದಳು. ಅವಳು ತುಂಬ ಬುದ್ಧಿವಂತಳು-ತಿಳುವಳಿಕೆ ಉಳ್ಳವಳು ಆಗಿದ್ದರೂ ಕೂಡ, ಅವಳು ಹೆಣ್ಣು ಮಗಳಾಗಿದ್ದಳಷ್ಟೆ. ಬಾದಶಹನ ದರಬಾರದಲ್ಲಿಯ ಎಲ್ಲ ಜನರು ಮತ್ತು ಹಳೆಯ ನೌಕರ ವರ್ಗದವರು, ಹೆಣ್ಣು ಮಗಳ ಕಾರಭಾರದಿಂದ ಉದಾಸರಾಗಿದ್ದರು. ತೊಂದರೆಗೊಳಗಾಗಿದ್ದರು. ಸಾಕಷ್ಟು ಜನ ಭಿಕಾರಿಗಳಾಗಿದ್ದರು. ಎಷ್ಟೋ ಜನ ಉಪವಾಸದಿಂದ ಸಾಯುತ್ತಿದ್ದರು. ಖವಾಸಖಾನನು ಈ ಜನರ ಅವಸ್ಥೆಯನ್ನು ನೋಡದೆ, ಕಿಂಚಿತ್ತೂ ಲಕ್ಷ್ಯಕೊಡದೆ ಸ್ವಸ್ಥನಾಗಿ ತನ್ನದೇ ಆದ ಖಯಾಲಿಯಲ್ಲಿ, ಖುಶಿಯಲ್ಲಿ ಮಗ್ನನಾಗಿರುತ್ತಿದ್ದನು.

### ೮. *ರಾಜ್ಯದ ವ್ಯವಸ್ಥೆಗಾಗಿ ಹೊರಟ ಖಿಜರಖಾನನಿಗೆ ದಾರಿಯಲ್ಲಿ ಶೇಖಮಿನಹಾನನು ಭೆಟ್ಟಿಯಾದದ್ದು :*

ಖಿಜರಖಾನನು ಬಹಳ ಸಾಮಾನು ಸರಂಜಾಮುಗಳೊಂದಿಗೆ ಸೈನ್ಯವನ್ನು ಸಿದ್ಧ ಪಡಿಸಿಕೊಂಡು, ರಾಜ್ಯ ಮತ್ತು ಕೋಟೆಗಳ ವ್ಯವಸ್ಥೆಗಾಗಿ ನಗರದಿಂದ ಹೊರಗೆ ಹೊರಟನು. ಮೊದಲು ಶಾಹದುರ್ಗದ ಕೋಟೆಗೆ ಬಂದು ಮುಟ್ಟಿದನು. ಅದು ತುಂಬ ವ್ಯವಸ್ಥಿತವಾಗಿ, ಗಟ್ಟಿಯಾಗಿಯೇ ಇದ್ದುದನ್ನು ಕಂಡು, ಅಲ್ಲಿಯ ಹಳೆಯ ಮನುಷ್ಯನನ್ನು ತೆಗೆದುಹಾಕಿ ತನ್ನ ಕಡೆಯ ವಿಶ್ವಾಸಿಕನೊಬ್ಬನನ್ನು ಕೋಟೆಯ ಮೇಲಿನ ಅಧಿಕಾರಿಯನ್ನಾಗಿ ನಿಯಮಿಸಿದನು. ತನ್ನ ಹೆಂಡಿರು ಮಕ್ಕಳು, ಸಂಪತ್ತು-ಸಾಮಾನುಗಳನ್ನು ಆ ಕೋಟೆಯಲ್ಲಿಟ್ಟು ಸ್ವಸ್ಥನಾಗಿ ಮುಂದೆ ನಡೆದನು. ಬೆಳಗಾವಿಗೆ ಹೊರಟನು. ಸಾಂಗೋಲಾ ಮತ್ತು ಫೇರಡಿಯ ಮಾರ್ಗ ಮಧ್ಯದಲ್ಲಿ ಶೇಖ ಮಿನಹಾನನು ಖಿಜರಖಾನನನ್ನು ಭೆಟ್ಟಿಯಾದನು. ಶೇಖ ಮಿನಹಾನ ಜುನೇದಿಯು ದಖಣಿಯಾಗಿದ್ದು, ಇದೇ ಪಠಾಣ ಜನರಿಂದ ತೊಂದರೆಗೊಳಗಾದ ಜನರಲ್ಲಿಯ ಒಬ್ಬ ಚಿಂತಾಗ್ರಸ್ತ ವ್ಯಕ್ತಿಯಾಗಿದ್ದನು.

ಶೇಖ ಮಿಹಾನನ ಮನಸ್ಸು ತುಂಬ ಘಾಸಿಯಾಗಿತ್ತು. ಖವಾಸಖಾನನನ್ನು ಕೊಲೆ ಮಾಡಬೇಕು. ಆತನನ್ನು ಜೀವ ಸಹಿತವಾಗಿ ಕೊಲ್ಲಬೇಕು ಎಂಬುದು ಖಿಜರಖಾನನ ಮನದಲ್ಲಿತ್ತು. ಆದ್ದರಿಂದ ಶೇಖಮಿನಹಾನನ ಮನದಲ್ಲಿ ಖಿಜರಖಾನನನ್ನು ಕೊಲ್ಲುವುದಾಗಿತ್ತು. ಆತ ತನ್ನೆಲ್ಲ ವಿಶ್ವಾಸಿಕರು, ಮಿತ್ರರನ್ನು ಕೂಡಿ ಹಾಕಿ ಅವರಿಗೆ ಸವಿಸ್ತಾರವಾಗಿ ಹೇಳಿದ್ದನು. ಪಠಾಣರ ವರ್ತನೆ ಎಲ್ಲರಿಗೂ ಗೊತ್ತಿದೆ. ಈಗಲಂತೂ ನಾವು ನಿರಾಶ್ರಿತರಾಗಿದ್ದೇವೆ. ಆಶ್ರಯ ಹರಿದು ಬಿಟ್ಟಿದೆ. ನಾವು ಚಿಂತಾಗ್ರಸ್ತರೂ ಅಪೂರ್ಣ ಮನೋರಥಿಗಳೂ ಆಗಿದ್ದೇವೆ. ಪಠಾಣ ಜನರು ಬಹಳೇ ದಂಗೆಯನ್ನು ಪ್ರಾರಂಭಿಸಿದ್ದಾರೆ. ಅವರಿಗೆ ಬಹಳೇ ಸೊಕ್ಕು ಬಂದಿದೆ. ಬಹುಶಃ ನಾಳೆ ಅವರ ದಂಗೆಯಿಂದಾಗಿ ನಾವು ತಲೆ ಎತ್ತಿ ನಿಲ್ಲಲೂ ಸಾಧ್ಯವಾಗಲಿಕ್ಕಿಲ್ಲ. ಇಂದೇ

ನಮ್ಮ ಆಯುಷ್ಯ ಮುಗಿಯಿತೆಂದೇ ತಿಳಿದಿದ್ದೇವೆ. ಪ್ರಾಣಕ್ಕೂ, ನಮ್ಮ ಕುಲಕ್ಕೂ ಸಂಚಕಾರ ಬಂದಿದೆ ಎಂದೇ ಅನಿಸುತ್ತದೆ. ಈ ಖಿಜೀರ ಪನ್ನೀಸ, ಅಂದರೆ ಅದರಲ್ಲಿಯ ಖಿಜರ ಇದು ಹೆಸರಾಗಿದ್ದು ಪನ್ನೀಸ ಪಠಾಣರಲ್ಲಿಯು ಅಡ್ಡ ಹೆಸರಾಗಿದೆ. ಈ ಖಿಜೀರಪನ್ನೀಸನನ್ನು ತೆಗೆದು ಹಾಕಿ, ಅಂದರೆ ಕೊಂದು-ಹಾಕಿದೆವೆಂದರೆ ಅಬ್ದುಲ ಕರೀಮ ಬಹುಲೋಲಖಾನನನ್ನು ನೋಡಿಕೊಳ್ಳಲು ಅಷ್ಟು ಕಷ್ಟವಾಗುವುದಿಲ್ಲ. ಆತನ ಪರಿಸರದಲ್ಲಿ ಈ ಖಿಜರನೊಬ್ಬನೇ ಭಾರೀ ಆಸಾಮಿಯಾಗಿದ್ದಾನೆ. ಈತನೊಬ್ಬನನ್ನು ಮುಗಿಸಿದರೆ ಅವರಲ್ಲಿ ಬೇರೊಬ್ಬರು ಯಾರೂ ನಮ್ಮ ಸರಿಸಮನಾಗಿ ನಿಲ್ಲುವ ಧೈರ್ಯ ಮಾಡಲಾರರು ಎಂದು ಶೇಖ ಮಿನಹಾನನು ಮಿತ್ರರ ಸಲಹೆಯನ್ನು ಕೇಳಿದನು. ಅದಕ್ಕೆ ಪ್ರತಿಯೊಬ್ಬರೂ ಪ್ರತಿಕ್ರಿಯಿಸುತ್ತ 'ನಿಮ್ಮ ಮನದಲ್ಲಿದ್ದುದೇ ನಮ್ಮ ಮನದಲ್ಲಿದೆ. ಅದು ನಮಗೆ ಒಪ್ಪಿಗೆ. ಎಲ್ಲಿ ನೀವು ಹೆಜ್ಜೆ ಇಡುವಿರೋ ಅಲ್ಲಿ ನಮ್ಮ ತಲೆಯನ್ನು ನಿವಾಳಿಸಿ ಒಗೆಯುತ್ತೇವೆ', ಎಂದರು. ಅನಂತರ ಎಲ್ಲರೂ ನಿರ್ಧರಿಸಿ ಅವಕಾಶಕ್ಕಾಗಿ ಮಾರ್ಗ ಪ್ರತೀಕ್ಷೆ ಮಾಡತೊಡಗಿದ್ದರು. ಆ ಸುಸಂಧಿ ಈಗ ಬಂದಿತ್ತು. ಖಿಜರಖಾನನಿಗೂ ಶೇಖ ಮಿನಹಾನನಿಗೂ ಭೆಟ್ಟಿಯಾಯಿತು.

## *೯. ಶೇಖ ಮಿನಹಾನನು ಖಿಜರಖಾನನನ್ನು ಕೊಂದದ್ದು ಮತ್ತು ಅದರ ಬೆನ್ನ ಹಿಂದೆಯೆ ಬಹಲೋಲಖಾನನು ಖವಾಸಖಾನನನ್ನು ಕೊಂದದ್ದು:*

ಶೇಖ ಮಿನಹಾನನು ದಖಣೆಯ ಹೆಸರಾಂತ ವ್ಯಕ್ತಿ. ತನ್ನ ಕುಟುಂಬದ ಎಲ್ಲರನ್ನೂ ಕರೆದುಕೊಂಡು ಬಂದದ್ದನ್ನು ಕಂಡ ಖಿಜರಖಾನನು ಅವನನ್ನು ಆದರಿಸಿ ಅವನ ಚಿತ್ತ ಸಮಾಧಾನ ಮಾಡುವುದು ಸೂಕ್ತವೆಂದು ಕೊಂಡನು. ಅವನನ್ನು ಊಟಕ್ಕೆ ಆಮಂತ್ರಿಸಬೇಕು ಎಂದು ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡು ಫತೇಜಂಗಾಖಾನ ಎಂಬುವನನ್ನು ಆತನ ಕಡೆಗೆ ಕರೆಯಲು ಕಳಿಸಿದನು. ಶೇಖಮೀನಹಾನನೂ ಈ ಅವಕಾಶಕ್ಕಾಗಿಯೇ ಕಾಯುತ್ತ ಕುಳಿತಿದ್ದನು. ಆಮಂತ್ರಣ ಬಂದ ತಕ್ಷಣ ತನ್ನ ಕಡೆಯ ಆಯ್ದ ಇನ್ನೂರು ತರುಣ ಹತ್ಯಾರಬಂದ ಜನರನ್ನು ಕರೆದುಕೊಂಡು ಖಿಜರಖಾನನ ಡೇರೆಯತ್ತ ಹೊರಟನು. ಡೇರೆಯ ಹತ್ತಿರ ಬರುತ್ತಿದ್ದಂತೆ ಖಿಜರಖಾನನು ಆತನನ್ನು ಎದುರುಗೊಳ್ಳಲು ತನ್ನ ಡೇರೆಯಿಂದ ತುಸು ಮುಂದೆ ಬಂದನು. ರೂಢಿಯಂತೆ ಕೈ ಕೈ ಜೋಡಿಸಲು ಖಿಜರಖಾನನು ತನ್ನ ಕೈಯನ್ನು ಮುಂದೆ ಮಾಡಿದನು. ಆಗ ಸಿಂಹ-ಆನೆಗಳ ಬಲದ ಶೇಖ ಮೀನಹಾನನೂ ಖಿಜರಖಾನನ್ನು ಕೈಜೋಡಿಸಲು ಮುಂದೆ ಮಾಡುತ್ತಿದ್ದಂತೆ, ಅವನ ಎರಡೂ ಕೈಗಳನ್ನು ತನ್ನ ಒಂದೇ ಕೈಯಲ್ಲಿ ಗಟ್ಟಿಯಾಗಿ ಹಿಡಿದು, ಇನ್ನೊಂದು ಕೈಯಿಂದ ಕಠಾರಿಯನ್ನು ಹಿರಿದು ಜೋರಾಗಿ ಖಿಜರಖಾನನ ಹೊಟ್ಟೆಯಲ್ಲಿ ಇರಿದನು. ಆ ಹೊಡೆತದಿಂದ ಖಿಜರಖಾನನ ಹೊಟ್ಟೆಯಿಂದ ಕರುಳುಗಳೆಲ್ಲ ಹೊರಬಿದ್ದುವು. ಶೇಖ ಮೀನಹಾನನ ಜೊತೆಗೆ ಬಂದ ಉಳಿದೆಲ್ಲ ಜನರೂ ತಂತಮ್ಮ ಕತ್ತಿಗಳನ್ನು ಹಿರಿದು ಪಠಾಣ ಜನರನ್ನು ಇರಿಯ ಹತ್ತಿದರು. ಖಿಜರಖಾನನ ಜೊತೆಗೆ ಸುಮಾರು ಒಂದು ನೂರು ಜನ ಸತ್ತು ಬಿದ್ದರು. ಖಿಜರಖಾನನ ಉಳಿದೆಲ್ಲ ಜನರು ಎಡ-ಬಲ ಕಡೆಯಿಂದ ಓಡಿ ಹೋದರು. ಖಿಜರಖಾನನ ಹತ್ತಿರ ಆರು ಸಾವಿರ-ಪಠಾಣರ ಸೈನ್ಯವಿತ್ತು. ಅವರೆಲ್ಲ ಅತ್ಯಂತ ಭಯಭೀತರಾಗಿ ಓಡಿ ಹೋದರು. ಅಬ್ದುಲ ಮಹಮ್ಮದನು, ಅಬ್ದುಲ ಕರೀಮ ಬಹಲೋಲಖಾನನ ಅತ್ಯಂತ ಹತ್ತಿರದ ಆಪ್ತನಾಗಿದ್ದನು. ಆತ ಕೂಡ ಈ ಗದ್ದಲದಲ್ಲಿ ಒಬ್ಬ ಸ್ವಾರನನ್ನು ಕರೆದು, ಶೇಖ ಮೀನಹಾನನು ಖಿಜರಖಾನನನ್ನು ಕೊಲೆ ಮಾಡಿದ ವಿಷಯವನ್ನು ಅಬ್ದುಲ ಕರೀಮ ಬಹಲೋಲಖಾನನಿಗೆ ತಿಳಿಸಲು

ತಕ್ಷಣ ಓಡಿಸಿದನು. ಅಬ್ದುಲ ಕರೀಮ ಬಹಲೋಲಖಾನನಿಗೆ ಈ ಪ್ರಾಣಘಾತುಕ ಭಯಂಕರ ವಿಷಯ ತಿಳಿದಾಗ ಆತನ ಕಣ್ಣುಗಳಲ್ಲಿ ನೀರು ತುಂಬಿ, ದರಬಾರದಿಂದ ಎದ್ದು ಮನೆಗೆ ಬಂದು ಬಿಟ್ಟನು. ಮತ್ತು ಅತ್ಯಂತ ಚಿಂತಿತನಾಗಿ ದುಃಖಿತಪ್ತನಾಗಿ ಕುಳಿತನು. ತನ್ನ ಉಳಿವಿಗಾಗಿ ಸಾವಧನಾಗಿ, ತನ್ನ ಅತ್ಯಂತ ಆಪ್ತರ ಹೊರತಾಗಿ ಯಾರನ್ನೂ ತನ್ನ ಸುತ್ತಮುತ್ತ ಕೂಡ ಬರಗೊಡುತ್ತಿರಲಿಲ್ಲ. ದರಬಾರಿನಲ್ಲೂ ಈ ಬಗ್ಗೆ ಬಹಳ ಎಚ್ಚರಿಕೆ ವಹಿಸುತ್ತಿದ್ದನು. ಮತ್ತು ಈ ದಖಣೀ ಜನರು ಖಿಜರಖಾನನನ್ನು ಕೊಂದಷ್ಟಕ್ಕೆ ಸುಮ್ಮನೆ ಕೂಡುವವರಲ್ಲ. ಇಷ್ಟಕ್ಕೆ ಇದು ಮುಗಿಯಿತೆಂತಲೂ ಅಲ್ಲ. ಇನ್ನು ಮುಂದೆಯೂ ಮತ್ತೇನಾದರೂ ಯೋಜನೆಯ ಹೆಜ್ಜೆಗಳನ್ನು ಇಡುತ್ತಾರೆ. ಒಂದು ವೇಳೆ ಖವಾಸಖಾನನನ್ನು ಬಂಧನದಿಂದ ಬಿಡುಗಡೆ ಮಾಡಬೇಕೆಂದೇ ಟೊಂಕಕಟ್ಟಿ ಅತ್ತ ಹೋದರೆ ಅದನ್ನು ಹೇಗೆ ನಿವಾರಿಸುವುದು ಎಂದು ವಿಚಾರಿಸಿದನು. ಅದಕ್ಕೆ ಅವನ ಸುತ್ತಲಿದ್ದ ಕುತಂತ್ರಿಗಳು ದುಷ್ಟಕೂಟದವರು, ಎಲ್ಲರೂ ಕೂಡಿಯೇ 'ಖವಾಸಖಾನನು ಜೀವಂತವಾಗಿರುವುದು ಬಹಳ ಸಂಕಟದ ವಿಷಯ' ಎಂದರು. 'ಆದ್ದರಿಂದ ಖವಾಸಖಾನನನ್ನು ಕೊಲ್ಲಬೇಕು. ಅದರ ಹೊರತು ಬೇರೆ ಉತ್ತಮ ದಾರಿಯೇ ಇಲ್ಲ' ಎಂದು ಹೇಳಿದರು. ಅದುವೆ ಸರಿಯೆಂದು ತಿಳಿದ ಅಬ್ದುಲಕರೀಮನು ಗುಪ್ತಚಾರರನ್ನು ಕಳಿಸಿ ಬಂಕಾಪುರದ ಹವಾಲ್ದಾರನಿಗೆ ಎಚ್ಚರಿಕೆಯೊಂದಿಗೆ ಪತ್ರ ಬರೆದನು. ಅದರಲ್ಲಿ 'ಈ ಕಾಗದ ಮುಟ್ಟುತ್ತಿದ್ದಂತೆ, ಕಿಂಚಿತ್ತೂ ಅವಕಾಶ ಮಾಡದೆ ಖವಾಸಖಾನನನ್ನು ತಕ್ಷಣ ಕೊಂದು ಬಿಡಬೇಕು' ಎಂದು ಬರೆದಿದ್ದನು. ಅದರಂತೆ ಹವಾಲದಾರನು ಖವಾಸಖಾನನನ್ನು ಸೆರೆಮನೆಯಲ್ಲೇ ಕೊಂದು ಹಾಕಿದನು. ಮತ್ತು ಹೆಣವನ್ನು ಅಬ್ದುಲ ಕರೀಮ ಬಹಲೋಲಖಾನನ ಹತ್ತಿರ ವಿಜಾಪುರಕ್ಕೆ ಕಳಿಸಿದನು. ದಿನಾಂಕ ೨೦, ಜಲಕಾದ, ಬುಧವಾರ ಸನ್ ೧೦೮೬ ರಂದು (೨೬, ಜಾನೇವಾರಿ ೧೬೭೬) ಖವಾಸಖಾನನ ಹೆಣವು ವಿಜಾಪುರಕ್ಕೆ ಬಂದು ಮುಟ್ಟಿತು. ಆ ಹೆಣವನ್ನು ಖವಾಸಖಾನನ ತಂದೆಯ ಸಮಾಧಿಯ ಹತ್ತಿರವೇ ಹುಗಿದರು. ಅಲ್ಲದೆ ಹೀಗೆಯೂ ಹೇಳಲಾಗುತ್ತದೆ.

ಖವಾಸಖಾನನ ಕೊಲೆಯಾಗಿ ಇಂದಿಗೆ ಎಂಟು ದಿನಗಳಾದುವು. ಶೇಖ ಮೀನಹಾನನ ಕೈಯಿಂದ ಖಿಜರ ಖಾನನು ಕೊಲೆಯಾದದ್ದು ದಿನಾಂಕ ೯, ಅದೇ ತಿಂಗಳು (೧೨,ಜನವರಿ ೧೬೭೬) ಮತ್ತು ಅದೇ ತಿಂಗಳು ೨೭ರಂದು (೨೩, ಜನವರಿ ೧೬೭೬) ಖಿಜರಖಾನನ ಕಕ್ಕನ ಮಗ ಜಮಾಲಖಾನನು ದರಬಾರದಲ್ಲಿ ಬಂದನು. ಜಲ್ಹೇಜ ತಿಂಗಳ ಮೊದಲ ದಿನದಂದು (೬, ಫೆಬ್ರುವರಿ ೧೬೭೬) ಶೇಖ ಮೀನಹಾನನನ್ನು ಹಿಡಿಯಲು ವಸ್ತ್ರ ಪಡೆದು ಹೊರಟನು. ಅದೇ ತಿಂಗಳು ೮ನೆಯ ದಿನದಂದು (೧೩, ಫೆಬ್ರವರಿ ೧೬೭೬) ನವಾಬ ಅಬ್ದುಲ ಕರೀಮ ಬಹಲೋಲಖಾನನು ಕೂಡ ಸ್ವತಃ ಶೇಖ ಮೀನಹಾನನೊಂದಿಗೆ ಸೇಡು ತೀರಿಸಿಕೊಳ್ಳಲು ವಿಜಾಪುರದಿಂದ ಹೊರಟನು.

### *೧೦. ಅಬ್ದುಲಕರೀಮ ಬಹಲೋಲಖಾನ ಹಾಗೂ ಬಾದಶಾಹೀ ಮಂಡಳಿಯ ಅನೇಕ ಜನರ ಮಧ್ಯ ವಿರಸ ದ್ವೇಷ, ರಾಜ್ಯದ ಒಟ್ಟು ಕೆಲಸದ ಹಾನಿ :*

ಆನಂತರ ಸರ್ವಾಧಿಕಾರಿಯಾದ ಅಬ್ದುಲಕರೀಮ ಬಹಲೋಲಖಾನನು ತನ್ನ ಆಪ್ತರಲ್ಲಿಯ ಜನರನ್ನು ಕೆಲಸದ ಮೇಲೆ ತೆಗೆದುಕೊಳ್ಳುವ ವಿಚಾರ ಮಾಡಿದನು. ಎಲ್ಲೆಡೆ ಪಠಾಣ ಜನರನ್ನೇ ಪಾಲನೆ ಮಾಡಲು ನೇಮಿಸಿದನು. ತನ್ನ ಆಪ್ತರಲ್ಲಿಯ ಜನರನ್ನು ಹತ್ತಿರ ಕರೆಯಿಸಿಕೊಂಡು ತುಂಬ ವಸೂಲಾಗುವ ಪರಗಣೆಗಳನ್ನು ಮಹಾಲುಗಳನ್ನು ತಮ್ಮ ಜನರಿಗೆ ಜಹಗೀರಾಗಿ ಹಾಕಿಕೊಟ್ಟು ಎಲ್ಲ ಅಧಿಕಾರಗಳನ್ನು

ಕೊಡಲು ಪ್ರಾರಂಭಿಸಿದನು. ದಖಣಿ ಜನರನ್ನು, ಬೇರೆ ಸರದಾರ ಮಂಡಳಿಯನ್ನು ಕೆಲಸದಿಂದ ತೆಗೆದು ಹಾಕುತ್ತ, ಅವರ ಜಹಗೀರುಗಳನ್ನು ಕತ್ತರಿಸಲು ಪ್ರಾರಂಭಿಸಿದನು. ಆದರಿಂದಾಗಿ ಅನೇಕ ಸರದಾರರು ನಿರುಪಾಯರಾಗಿ ಬಹಳ ಸಂಕಟ ಅನುಭವಿಸಬೇಕಾಯಿತು.

ಸೈಯದ ಮಖದೂಮ ಷರ್ಜಾಖಾನನು ಕೂಡ ಬಹಳ ತೊಂದರೆ ಅನುಭವಿಸುತ್ತ ಮನದಲ್ಲೇ ಹೊಂಚು ಹಾಕಹತ್ತಿದನು. ದಿನದಿಂದ ದಿನಕ್ಕೆ ಉಭಯತರಲ್ಲಿಯ ವಿರಸ ಬಹಿರಂಗಕ್ಕೆ ಬರತೊಡಗಿತು. ದಿನಾಂಕ ೧೬, ಮೊಹರಮ್ ತಿಂಗಳಲ್ಲಿ (೨೧, ಮಾರ್ಚ ೧೬೭೬) ರಣಭೂಮಿಯ ಹತ್ತಿರ ಉಭಯತರ ಕಡೆಯ ಜನರ ಮಧ್ಯ ದೊಡ್ಡ ಯುದ್ಧವೇ ಆಯಿತು. ಅದರಲ್ಲಿ ಬಹಳಷ್ಟು ಜನ ಪಠಾಣರು, ದಖಣಿಗಳು ಸತ್ತರು. ಸೈಯದ ಅಶರಫ ಮತ್ತು ಕಾಸಮಕೋಡ ಇಬ್ಬರೂ ಇದೇ ಯುದ್ಧದಲ್ಲಿ ಸತ್ತರು. ಷರ್ಜಾಖಾನನು, ನವಾಬ ಬಹಾದ್ದೂರಖಾನನ ಜೊತೆ ಒಪ್ಪಂದ ಮಾಡಿಕೊಳ್ಳಬೇಕೆಂದು ಬಯಸಿದನು. ಮತ್ತು ಈ ಸಂಕಟ ನಿವಾರಣೆಯ ಕುರಿತು ಆತನ ಸಲಹೆಯನ್ನು ಕೇಳಿದನು. ಖರ್ಚಿಗೆ ಇದ್ದದ್ದು ಅದು ಕೂಡ ತೀರಿ ಹೋಯಿತು. ಆದ್ದರಿಂದ ಷರ್ಜಾಖಾನನು ವಿಚಾರಮಾಡಿ ಇನ್ನು ಕೈಯಲ್ಲಿದ್ದ ಸೈನ್ಯವೂ ಹೋಗುತ್ತದೆ ಎಂದು ತಿಳಿದು ಬಹಾದ್ದೂರಖಾನನ ಕಡೆಗೆ ಹೋದನು. ಸಂದಲಾಪುರದ ಹತ್ತಿರ ಬಹಾದೂರಖಾನನ್ನು ಭೆಟ್ಟಿಯಾದನು.

ನವಾಬ ಬಹಾದೂರಖಾನನು ಷರ್ಜಾಖಾನನನ್ನು ಬಹಳ ಆದರ ಸತ್ಕಾರಗಳಿಂದ ಬರಮಾಡಿಕೊಂಡನು. ತಾನು ಕುಳಿತ ಆಸನ ಸಹಿತವಾಗಿ ೧೫ ಸಾವಿರ ನಗದು ಹಣವನ್ನು ಕೊಟ್ಟನು. ಅಬ್ದುಲಕರೀಮ ಬಹಲೋಲಖಾನನ ಅಗೌರವದ ನಡತೆ ಹಾಗೂ ಸೊಕ್ಕಿನ ಕುರಿತು ಚರ್ಚಿಸಿದರು. ಹಾಗೂ ಆತ ವಿಜಾಪುರದ ಪ್ರಧಾನ ಪದವಿಯನ್ನು ಬಿಡಬೇಕು. ಅದನ್ನು ದಖಣೀ ಜನರಿಗೆ ಕೊಟ್ಟು ಅಬ್ದುಲಕರೀಮ ಬಹಲೋಲಖಾನನು ಮತ್ತೆ ಬೇರೆ ಅಮೀರ ಜನರಂತೆ ಇರಬೇಕೆಂದು ಕರಾರುಗಳನ್ನು ಹಾಕಿದರು. ಆದರೆ ಇದು ಕರೀಮ ಬಹಲೋಲಖಾನನಿಗೆ ಒಪ್ಪಿಗೆ ಇರಲಿಲ್ಲ. ಆದ್ದರಿಂದ ಒಪ್ಪಂದವಾಗುವ ಸಾಧ್ಯತೆಗಳಿರಲಿಲ್ಲ. ಕೊನೆಗೆ ನವಾಬ ಬಹಾದ್ದೂರ ಖಾನನೊಂದಿಗೆ ಅಬ್ದುಲಕರೀಮ ಬಹಲೋಲಖಾನನೂ ದಟ್ಟ ಸಂಬಂಧ ಬೆಳೆಸತೊಡಗಿದನು. ಉಭಯತರೂ ಆಗಾಗ ಭೆಟ್ಟಿಯಾಗುವುದು ಪ್ರಾರಂಭವಾಯಿತು,

ದಿನಾಂಕ ೨೮ ರಬೀಲಾವಲ ದಿನ (೧ ಜೂನ ೧೬೭೬) ದಿಲ್ಲಿಯ ಸರದಾರರಲ್ಲೊಬ್ಬನಾದ ಕುತುಬುದ್ದೀನಖಾನನು ಮತ್ತು ಅರಬಸ್ತಾನದ ಕಾರಭಾರಿ ಮಂಡಳಿಯ ಇಸ್ಲಾಮಖಾನ ರೂಮಿ ಉಭಯತರನ್ನು ತಂತಮ್ಮ ಭಾರೀ ಸೈನ್ಯದೊಂದಿಗೆ, ಆದಿಲಶಹನ ರಾಜ್ಯದಲ್ಲಿ ಪ್ರವೇಶಿಸಲು ಕಳಿಸಲಾಯಿತು. ಆ ಸೈನ್ಯ ನಗರದ ಹತ್ತಿರ ಬಂದು ದಂಗೆ ಮಾಡಹತ್ತಿತು. ಅಬ್ದುಲಕರೀಮ ಬಹಲೋಲಖಾನನಿಗೆ ಮೊಗಲರ ದಂಗೆ ಸಹಿಸದಾಯಿತು. ಅವರನ್ನು ಶಿಕ್ಷಿಸಲು ತಾನೇ ಸ್ವತಃ ವಿಜಾಪುರದಿಂದ ಹೊರಟು ಇಲಿಯಾಬಾದದ ಹತ್ತಿರ ಉಭಯತರು ಸಂಧಿಸಿದಾಗ ದೊಡ್ಡ ಯುದ್ಧವೇ ನಡೆಯಿತು. ಉಭಯತರ ಕಡೆಯ ಅನೇಕ ಜನರು ಸತ್ತರು. ಗಾಯಗೊಂಡರು.

ಇಸಲಾಮಖಾನನು ಆ ದಿನ ಆನೆಯ ಮೇಲೆ ಕುಳಿತಿದ್ದನು. ಅಷ್ಟರಲ್ಲಿ ಕರ್ಮ ಧರ್ಮ ಸಂಯೋಗದಿಂದ ಯುದ್ಧ ಪ್ರಸಂಗದ ಗದ್ದಲದಲ್ಲಿ ಆನೆಯು ಓಡುತ್ತ ಹೊರಟು, ತನ್ನ ಮಾವುತನನ್ನೂ ಲೆಕ್ಕಿಸದೆ ಇಸ್ಲಾಮಖಾನನನ್ನು ಆತನ ಮಗ ಸಹಿತವಾಗಿ ಅಬ್ದುಲಕರೀಮ ಬಹಲೋಖಾನನ ಸೈನ್ಯದಲ್ಲಿ ತಂದು ಮುಟ್ಟಿಸಿತು. ಆಗ ಅಬ್ದುಲ ಕರೀಮಖಾನನ ಸೈನಿಕರು ಅದರಮೇಲೆ ಹಲ್ಲೆ ಮಾಡಿ ಆನೆಯನ್ನು

ಸುತ್ತುವರಿದರು. ಹಗ್ಗವನ್ನು ಕತ್ತರಿಸಿ ಅಂಬಾರಿಯನ್ನು ನೆಲದಮೇಲೆ ಬೀಳಿಸಿಗರು. ಮತ್ತು ಇಸ್ಲಾಮಖಾನನನ್ನೂ ಆತನ ಮಗನನ್ನು ಕೊಲೆಮಾಡಿದರು. ಆದಿನ ಅಬ್ದುಲಕರೀಮ ಬಹಲೋಲ ಖಾನನ ವಿಜಯವಾಯಿತು.[೧]

ಇಸ್ಲಾಮಖಾನನು ರೂಮದ ಬಾದಶಾಹನ ಕಡೆಯಿಂದ ಬಸರಾದಲ್ಲಿ ಬಹಳ ದಿನ ಇದ್ದನು. ಕೊನೆಗೆ ಒಮ್ಮಿಂದೊಮ್ಮೆಲೇ ಉಂಟಾದ ವಿಘ್ನದಿಂದಾಗಿ, ಅವನ ದುರ್ದೈವ, ಆತನನ್ನು ಅರಬಸ್ಥಾನದದಿಂದ ಹಿಂದುಸ್ಥಾನಕ್ಕೆ ತಂದಿತ್ತು. ಆಗ ಔರಂಗಜೇಬ ಬಾದಶಹನು ಇಸ್ಲಾಮಖಾನನಿಗೆ ಬಹು ದೊಡ್ಡ ಹುದ್ದೆಯನ್ನು ಕೊಟ್ಟು 'ಸಹಾಹಜಾರೀ' ಎಂಬ ಪದವಿಯನ್ನು ಕೊಟ್ಟಿದ್ದನು. ಮತ್ತು ಯುದ್ದದಲ್ಲಿ ಬಹಾದ್ದೂರ ಖಾನನ ಸಹಾಯಕ್ಕಾಗಿ ನೇಮಕಗೊಂಡು ಮೊಗಲ ಸೈನ್ಯದೊಂದಿಗೆ ದಕ್ಷಿಣ ದೇಶಕ್ಕೆ ಬಂದಿದ್ದನು.

ಸಾರಾಂಶವೆಂದರೆ ಆದಿಲಶಾಹೀ ವೈಭವ ಮುಳುಗುವ ಸಮಯ ಸನ್ನಿಹಿತವಾಗಿತ್ತು. ಆದ್ದರಿಂದ ಯುದ್ಧಗಳು ಪ್ರಾರಂಭವಾಗಿದ್ದವು. ಆದಿಲಶಾಹೀ ರಾಜ್ಯದ ಒಟ್ಟಾರೆ ಕಾರಭಾರಿಗಳು ಪರಸ್ಪರ-ವಿರಸ ವೈಷಮ್ಯಗಳನ್ನು ತಾಳಿದ್ದರಿಂದ, ಗಡಿಗಳಲ್ಲಿ ಮಹಾಪ್ರಬಲರಾದ ಶತ್ರುಗಳು, ಬಂದು ನೆರೆಯಲ್ಲೇ ಇಳಿದು ಅವಕಾಶಕ್ಕಾಗಿ ಕಾಯುತ್ತಿದ್ದರು. ದಿಲ್ಲೀ ಶತ್ರುಗಳೊಂದಿಗೆ ಶಿವಾ ಕೂಡ ಪ್ರತಿನಿತ್ಯ ಏನಾದರೊಂದು ಹೊಸ ವಿಘ್ನವನ್ನು, ಸಂಕಟವನ್ನು ಎಬ್ಬಿಸಿ ನಿಲ್ಲುತ್ತಿದ್ದನು. ಇಂಥ ಸಮಯದಲ್ಲಿ ನಾಲ್ಕು ಕಡೆಗಳಿಂದಲೂ, ಸಂಕಟ ದಂಗೆಗಳು ಉಂಟಾಗಿ ರಾಜಧಾನಿಯಲ್ಲೂ ನಾನಾಪ್ರಕಾರದ ಸಂಕಟಗಳು ಉತ್ಪನ್ನವಾಗಿದ್ದವು. ಅದರಿಂದಾಗಿ ಶಿವಾ, ಇದೇ ಸುಸಂಧಿ ಎಂದು ತಿಳಿದು, ಆದಿಲಶಾಹಿ ಪ್ರದೇಶಗಳನ್ನು ಆಕ್ರಮಿಸುವಲ್ಲಿ, ಲೂಟಿ ಮಾಡುವ ವಿಷಯದಲ್ಲಿ ಕಿಂಚಿತ್ತೂ ಹಿಂದೆ ಬೀಳಲಿಲ್ಲ. ಪ್ರತಿಯೊಂದು ಮಹಾಲುಗಳನ್ನು, ಪರಗಣೆಗಳನ್ನು ಜಗಳವಿಲ್ಲದೆ ತೆಗೆದುಕೊಂಡು ಆ ಸ್ಥಳಗಳಲ್ಲಿ ತಾನೆ ಒಡೆಯನಾಗುತ್ತಿದ್ದನು.

ರಾಜ್ಯದ ಸಂರಕ್ಷಣೆ ಹಾಗೂ ವ್ಯವಸ್ಥೆಗಾಗಿ ಹುಸೇನಖಾನ ಎಂಬುವನನ್ನು ನೇಮಿಸಲಾಗಿತ್ತು. ಆತ ತನ್ನ ಕೆಲಸದಲ್ಲಿ ತುಂಬ ಯತ್ನ ಮಾಡುತ್ತಿದ್ದನು. ಶಿವಾನು ಆತನನ್ನು ಮೋಸದಿಂದ ಹಿಡಿದು, ಬಂಧಿಸಿದನು. ಆದರೂ ಬಹಾದ್ದೂರ ಖಾನನು ದಕ್ಷಿಣೀ ಜನರ ಸಂರಕ್ಷಣೆಯನ್ನು ಮಾಡಬೇಕೆಂದು ಬಯಸುತ್ತಿದ್ದನು. ಅಬ್ದುಲಕರೀಮ ಬಹಲೋಲಖಾನನ್ನು ನಾಶಮಾಡಬೇಕೆಂದೂ ಇಚ್ಛಿಸುತ್ತಿದ್ದನು. ಆದರೆ ದಿಲ್ಲಿ ಕಡೆಯ ಹೆಸರಾಂತ ಅಮೀರರಲ್ಲೊಬ್ಬನಾದ ದಿಲೇರಖಾನನು ಅಬ್ದುರಕರೀಮನ ಪಕ್ಷ ಪಾತಿಯಾಗಿದ್ದನು. ಮತ್ತು ಆತ ಹೇಳಿದ್ದನ್ನೇ ಮಾಡುವುದರಲ್ಲಿ ತಮ್ಮ ಬಲವಿದೆ ಎಂದು ತಿಳಿದು ರಹಸ್ಯವಾಗಿ ಮತ್ತು ಬಹಿರಂಗವಾಗಿ ಅಬ್ದುಲಕರೀಮನ ಕೆಲಸಗಳು ಸರಾಗವಾಗಿ ನಡೆಯಲು ಯತ್ನಿಸುತ್ತಿದ್ದನು. ಅವನ ಇಚ್ಛೆಯಂತೆ ಕೆಲಸ ಪೂರ್ತಿಮಾಡುತ್ತಿದ್ದನು. ದಿನರಾತ್ರಿಯೆಲ್ಲ ಅಬ್ದುಲ ಕರೀಮನ ಕಾರ್ಯ ಸಿದ್ದಿಗಾಗಿಯೇ ಪ್ರಯತ್ನಿಸುತ್ತ ಔರಂಗಜೇಬ ಬಾದಶಹನಿಗೆ ವಿನಂತಿ ಪತ್ರ ಬರೆದು ಅಬ್ದುಲಕರೀಮನು ಸ್ವತಃ ತನ್ನ ಅಪರಾಧಗಳನ್ನು ಕ್ಷಮಿಸಬೇಕೆಂದು ಇಚ್ಛಿಸುತ್ತಿದ್ದಾನೆ. ಮತ್ತು ಶಿವಾಜಿಯನ್ನು ಶಿಕ್ಷಿಸಬೇಕೆಂದು ಪಣ ತೊಟ್ಟು ಆತನನ್ನು ನಾಶಮಾಡಬೇಕೆಂದು ಆತನ ಮನಸ್ಸಿನಲ್ಲಿದೆ ಎಂಬುದಾಗಿ ತಿಳಿಸಿದನು. ಆ ಪತ್ರವು ಬಾದಶಹನನ್ನು ಖುಶಿಗೊಳಿಸಿತು.

ದಿಲೇರಖಾನನ ವಧ್ಯಸ್ಥಿಕೆಯಿಂದ ಅಬ್ದುಲಕರೀಮ ಬಹಲೋಲಖಾನನ ಕಡೆಗೆ ಮುಖ್ಯ ಕೆಲಸವನ್ನು ವಹಿಸಬೇಕೆಂದೂ ಬಾದಶಹನ ಮನಸ್ಸಿನಲ್ಲಿ ಕಿಂಚಿತ್ ಬಂದಿತು. ಮತ್ತು ಅದಕ್ಕೆ ಒಪ್ಪಿಗೆ ಕೊಟ್ಟನು. ಆದರೆ

೧. ಶಕೆ ೧೫೯೮ ಜೇಷ್ಠ ವದ್ಯ ೬೦ (೧ ಜೂನ ೧೬೭೬) ಬಹಾದ್ದೂರಖಾನನೊಂದಿಗೆ ಬಹಲೋಲಖಾನನ 'ಹಲಗಿ'ಯಲ್ಲಿ ಯುದ್ಧ. ಮೊಗಲರ ಇಸ್ಲಾಮಖಾನ ರೂಮಿ ಬಿದ್ದನು. ಬಹಲೋಲಖಾನನ ಜಯ-ಜೇಧೆ ಶಕಾವಲಿ ಪುಟ೨೮.

ದಕ್ಷಿಣದ ಜನರ ಮತ್ತು ಬಹಾದ್ದೂರ ಖಾನನ ಒಪ್ಪಿಗೆ ಇದಕ್ಕೆ ಇರಲಿಲ್ಲ. ಅಬ್ದುಲ ಕರೀಮ ಬಹಲೋಲಖಾನನನ್ನು ತೆಗೆಯಬೇಕು ಮತ್ತು ಅವನನ್ನು ನಿರ್ಮೂಲ ನಾಶಮಾಡಬೇಕು - ಇದರ ಹೊರತು ಬೇರಾವುದಕ್ಕೆ ಅವರು ಇಚ್ಛಿಸುತ್ತಿರಲಿಲ್ಲ. ಅದೇ ದಿನಗಳಲ್ಲಿ ಅಬ್ದುಲಕರೀಮಖಾನನ ಪ್ರಧಾನಗಿರಿಯಲ್ಲಿ ನಾನಾ ಪ್ರಕಾರದ ಸಂಕಟಗಳು ಎದ್ದು ನಿಂತು ಆದಿಲಶಹನ ಬಹಳ ಪ್ರದೇಶಗಳು ಶಿವಾನ ಕೈಗೆ ಹಾಗೂ ಮೊಗಲರ ಕೈಗೆ ಹೋದವು.

ಆಹಸನಬಾದದ ಕೋಟೆಯು ದಿನಾಂಕ ೧೬, ಜಮಾದಿಲಾವಲ್ ಸನ್ ೧೦೮೮ (೭, ಜುಲೈ ೧೬೭೭) ರಂದು ಮೊಗಲರ ಕೈಗೆ ಹೋಯಿತು. ಮತ್ತು ದಿನಾಂಕ ೧೨ ಜಮಾದಿಲಾವರ ದಂದು (೨ ಅಗಸ್ಟ ೧೬೭೭) ಶಹಾದುರ್ಗದ ಕೋಟೆಯೂ ಮೊಗಲರ ಕೈಗೆ ಹೋಯಿತು.[೨] ಮತ್ತು ಅದೇ ವರುಷ ರಜಬ ತಿಂಗಳಲ್ಲಿ (ಅಗಸ್ಟ-ಸಪ್ಟೆಂಬರ ೧೬೭೭) ನವಾಬ ಬಹಾದೂರಖಾನನಿಗೆ ಔರಂಗಜೇಬ ಬಾದಶಹನಿಂದ ಕರೆ ಬಂದಿತು.[೩] ಬಹಾದೂರಖಾನನು ದಿಲ್ಲಿಗೆ ಹೊರಟು ಹೋದನಂತರ ಬಾದಶಹನ ಆದೇಶದಂತೆ ದಿಲೇರಖಾನನು ದಕ್ಷಿಣದೇಶದ ಮತ್ತು ಆದಿಲಶಹನ ಪ್ರದೇಶಗಳನ್ನು ತೆಗೆದುಕೊಳ್ಳುವ ಕೆಲಸಕ್ಕೆ ನೇಮಕನಾದನು.

### ೧೧. *ರಾಜ್ಯದ ಹಾನಿಗಾಗಿ ಮಾಸೂದಖಾನನ ಚಿಂತೆ, ರಾಜ್ಯದ ವ್ಯವಸ್ಥೆಗಾಗಿ ತಾನಾ ಶಾಹನೊಂದಿಗೆ ಈ ವಿಷಯದಲ್ಲಿ ವಿನಂತಿ ಮತ್ತು ತಾನಾಶಾಹನು ಅಬ್ದುಲನ್ನು ಕರೆಸಿದ್ದು.*

ಸಿದ್ದೀ ಜೋಹಾರ ಸಲಾಬತಖಾನನ ಅಳಿಯ ಸಿದ್ದೀ ಮಾಸೂದ ಖಾನನು ಸಲಾಬತಖಾನನ ಸ್ಥಳದಲ್ಲಿ ಆದೋನಿಯ ಜಹಗೀರನ್ನು ನೋಡಿಕೊಳ್ಳುತ್ತಿದ್ದನು. ತನ್ನ ಧಣಿ ಆದಿಲಶಹನ ರಾಜ್ಯ ಹಾಳಾಗುತ್ತಿದ್ದುದನ್ನು ಮತ್ತು ಪಠಾಣ ಜನರ ಪ್ರಾಬಲ್ಯ, ಅದರೊಂದಿಗೆ ಸಿಕಂದರ ಬಾದಶಹನ ಹತ್ತಿರ ಯಾವ ಅಧಿಕಾರವೂ ಉಳಿದಿಲ್ಲವೆಂಬುದನ್ನು ತಿಳಿದು ಆತ ಮನದಲ್ಲಿಯೇ ಉರಿಯುತ್ತಿದ್ದನು. ರಾಜ್ಯದ ವಿಷಯದಲ್ಲಿ ಆತನಿಗೆ ಬಹಳ ಕಳಕಳಿ ಇತ್ತು. ಕೊನೆಗೆ, ಧಣಿ ಉಪ್ಪನ್ನು ತಿಂದ ಕೃತಜ್ಞತೆಗಾಗಿ ತನ್ನ ಸೇವಕತನವನ್ನು ಸಿದ್ಧಮಾಡಿ ತೋರಿಸುವ ಕಾಲ ಬಂದಿತು. ಇಂಥ ಸಂಪೂರ್ಣ ದಂಗೆಯ ಸಮಯದಲ್ಲಿ ತಾನು ಒಂದು ಕಡೆಗೆ ಕುಳಿತುಕೊಳ್ಳುವುದು ಮತ್ತು ರಾಜ್ಯದ ವ್ಯವಸ್ಥೆಯನ್ನು ಮಾಡುವುದನ್ನು ಬಿಟ್ಟು ತನ್ನ ಜಾಗದಿಂದ ಕದಲದೇ ಇರುವುದು ಅಯೋಗ್ಯತನವೆಂದು ತಿಳಿದನು. ಎಲ್ಲ ಕೆಲಸಗಳನ್ನು ಬಿಟ್ಟು ರಾಜ್ಯದ ವ್ಯವಸ್ಥೆ ವಿಚಾರಿಸಹತ್ತಿದನು. ಅದಕ್ಕಾಗಿ ಟೊಂಕ ಕಟ್ಟಿ ಪಠಾಣರ ವಿರುದ್ಧ ತೊಂದರೆಗೀಡಾದ ಜನರನ್ನೆಲ್ಲ ಕಲೆಹಾಕಿದನು.

---

೨. ಶಕೆ ೧೫೯೯ ಆಷಾಢ ( ಜುಲೈ ೧೬೭೭) ದಲ್ಲಿ ಬಹಾದೂರಖಾನನು ಆದಿಲಶಾಹನ ' ಲಾಲದರಗಾ' ಕೋಟೆಯನ್ನು ತೆಗೆದುಕೊಂಡನು. ಶ್ರಾವಣ (ಅಗಸ್ಟ) ದಲ್ಲಿ ರಣಮಸ್ತಖಾನನಿಂದ ನಳದುರ್ಗವನ್ನು ತೆಗೆದು ಕೊಂಡನು. ಜೇಧೆ ಶಕಾಪುಟ ೨೮-೨೯. A Letter came from KhanJahan Bahdur to say that on Monday the 14th May 1677 ( 21st Rabilaval 1088AH) Naladurg. had been captured by the imperialists - MiA P. 99.

೩. ಶಕೆ ೧೫೯೯. ಭಾದ್ರಪದ (ಸಪ್ಟೆಂಬರ . ೧೬೭೭) ದಲ್ಲಿ ಬಹಾದೂರಖಾನನನ್ನು ತೆಗೆದು ದಿಲೇರಖಾನನು ಸುಬೇದಾರನಾದನು. ಜೇಧೆ ಶಕಾ ಪುಟ ೨೮. After 15th August 1677 Khan Jahan Bahadur was summoned to the court and that Diler Khan was ordered to keep watch till the arrival of Another Subedar - MiA p-99

ಸಯ್ಯದ ಮಖದೂಮ ಷರ್ಜಾಖಾನ ಮೊದಲಾದ ಅವನಂಥ ಜನರನ್ನು ಸೇರಿಸಿ, ಕುತುಬಶಾಹನಾದ ಅಬ್ದುಲ ಹಸನ ತಾನಾಶಾಹನ ದರಬಾರಿಗೆ ಹೋಗಿ ವಿನಂತಿ ಮಾಡಿಕೊಂಡನು. "ಇಂಥ ಸಂಕಟ ಎದುರಾಗಿದೆ, ಇದರಲ್ಲಿ ಹೇಗೆ ಮಾಡಬೇಕು? ಎಂಬುದಾಗಿ ಸಲಹೆ ಕೇಳಿದನು. 'ಆದಿಲಶಾಹಿ ರಾಜ್ಯತುಂಬ ಹಾಳಾಗುತ್ತಿದ್ದು ಅದರ ಬಗ್ಗೆ ವಿಚಾರಿಸಬೇಕೆಂದು ' ತಾನಾಶಾಹನನ್ನು ಕೇಳಿದನು. ಮೊದಲಿನಿಂದಲೂ ಆದಿಲಶಾಹಿ ಹಾಗೂ ಕುತುಬ ಶಾಹಿಗಳ ಮಧ್ಯ ಪರಸ್ಪರ ಸಹಾಯ ಮಾಡುವ ಸಂಪ್ರದಾಯ ಇದ್ದೇ ಇತ್ತು. ನಿಜವಾಗಿ ನೋಡಿದರೆ ಎರಡೂ ರಾಜ್ಯಗಳಲ್ಲಿ ಭಿನ್ನತೆ ಏನೂ ಇರದೆ ಒಂದೇ ರೀತಿಯಾಗಿದ್ದುವು, ಅಂತೆಯೇ ಕುತುಬಶಾಹನು ಈ ವಿಷಯದಲ್ಲಿ ಚಿಂತಿಸಹತ್ತಿದನು. ಆದಿಲಶಾಹೀ ರಾಜ್ಯದ ಸೂತ್ರಗಳು ಪಠಾಣರ ಕೈಯಲ್ಲಿದ್ದುದನ್ನು ಮನಗಂಡ ತಾನಾಶಾಹನು ಅವುಗಳನ್ನು ಅವರಿಂದ ಕಸಿದು ಬೇರೆ ಪ್ರಾಮಾಣಿಕರಿಗೆ ಅಥವಾ ಧಣಿಯ ಸೇವಕನಾದ ಮತ್ತು ಧಣಿಯ ಉಪ್ಪನ್ನೇ ತಿಂದು ಬೆಳೆದ, ರಾಜ್ಯದ ಕಲ್ಯಾಣ ಬಯಸುವ ಮಾಸೂದಖಾನನಿಗೆ ಕೊಡಿಸುವುದು ಸಾಧ್ಯವಾಗಲಿಕ್ಕಿಲ್ಲ. ಆದರೆ ಅದರ ಹೊರತು ಈ ರಾಜ್ಯದ ವ್ಯವಸ್ಥೆ ಆಗುವುದಿಲ್ಲ ಎಂಬುದು ಗೊತ್ತಿತ್ತು. ಆದ್ದರಿಂದ ಅಬ್ದುಲ ಕರೀಮ ಬಹಲೋಲ ಖಾನನನ್ನು ಕರೆಸಲು ಕೆಲವು ದೊಡ್ಡ ದೊಡ್ಡ ಕಾರಭಾರಿಗಳ ಜೊತೆ ಒಂದು ಆಜ್ಞಾಪತ್ರವನ್ನು ಬರೆದು ಅವನ ಹತ್ತಿರ ಕಳಿಸಿದನು. ಮತ್ತು ಅಬ್ದುಲ ಕರೀಮನನ್ನು ಕುತುಬಶಾಹನು ತನ್ನ ಹತ್ತಿರ ಕರೆಯಿಸಿಕೊಂಡನು.

ಅಬ್ದುಲ ಕರೀಮನಾದರೂ ತನ್ನ ರಾಜ್ಯದ ಸ್ಥಿತಿಗಾಗಿ ಚಿಂತಿತನಾಗಿದ್ದನು. ಕುತುಬಶಾಹನ ಆದೇಶ ಬರುತ್ತಿದ್ದಂತೆಯೇ, ಜಮಶೀದಖಾನನನ್ನು ತನ್ನ ಕೆಲಸ ನೋಡಿಕೊಳ್ಳಲು ಹೇಳಿ ಹೈದರಾಬಾದಿಗೆ ಬಂದನು. ಕುತುಬಶಾಹನು ಆತನನ್ನು ಬಹು ಆದರ ಸತ್ಕಾರಗಳೊಂದಿಗೆ ಕರೆದು, ಆತನಿಗೆಯೇ ದೊಡ್ಡಸ್ತಿಕೆಯನ್ನು ಕೊಟ್ಟು, ನಾನಾ ಪ್ರಕಾರದ ನೀತಿ ಬೋಧೆಯನ್ನು ಮಾಡಿ ಕಲ್ಯಾಣದ ದಾರಿಯನ್ನು ತೋರಿಸಿದನು. ಮತ್ತು ಆಜ್ಞೆ ಮಾಡುತ್ತ ತಂತಮ್ಮಲ್ಲಿಯ ವಿರಸ-ಜಗಳವನ್ನು ಮರೆತು. ಯಜಮಾನನ ರಾಜ್ಯ ಸಂರಕ್ಷಣೆ ಮಾಡುವ ಪೂರ್ಣಯತ್ನಮಾಡಬೇಕು. ಹೊರಗಿನ ಶತ್ರುಗಳ ಕೈ ಈ ರಾಜ್ಯದ ಮೇಲೆ ಪ್ರಬಲವಾಗದಂತೆ ನೋಡಿಕೊಳ್ಳಬೇಕು. ಇಲ್ಲವಾದಲ್ಲಿ ಎಲ್ಲರಿಗೂ ಗೊತ್ತಿರುವಂತೆ ನಿಮ್ಮ-ನಿಮ್ಮಲ್ಲಿಯ ಜಗಳದಿಂದ ಶತ್ರುವಿಗೆ ಲಾಭವಾಗಿ ಆತ ರಾಜ್ಯವನ್ನು ತೆಗೆದುಕೊಳ್ಳುತ್ತಾನೆ. ಅನಂತರ ಪಶ್ಚಾತ್ತಾಪದ ಹೊರತು ಬೇರೆ ಏನೂ ನಿಮ್ಮ ಕೈಯಲ್ಲಿ ಉಳಿಯವುದಿಲ್ಲ. ಅದು ಆದಿಲಶಹನ ಸೇವಕರಿಗೆ ನಿರಂತರ ಅಪಕೀರ್ತಿ. ಈಗಾಗಲೇ ದುರಸ್ತಿ ಮಾಡದಷ್ಟು ಆದಿಲಶಾಹಿ ರಾಜ್ಯದ ಆಡಳಿತ ಕೆಟ್ಟಿದೆ. ಅದು ಕೇವಲ ನಿಮ್ಮ-ನಿಮ್ಮಗಳ ಜಗಳದಿಂದ. ಆದ್ದರಿಂದ ನೀವು ಕೆಲವು ದಿನ ಕಾರಭಾರವನ್ನು ಬಿಟ್ಟು ಸುಮ್ಮನೆ ಕುಳಿತುಕೊಳ್ಳಬೇಕು. ಮುಖ್ತ್ಯಾರರಾಗಿ ಇರಬಹುದು. ಆದರೆ ವಿಜಾಪುರದಲ್ಲಿ ಮುಲಕೀ ಕೆಲಸಗಳನ್ನು, ಸಿದ್ದೀ ಮಾಸೂದನ ವಶಕ್ಕೆ ಕೊಡಿರಿ. ನೀವು ಆತನಿಗೆ ಸಹಾಯ ಮಾಡಿರಿ. ಸ್ನೇಹದಿಂದ ಇದ್ದು ಧಣಿಯ ರಾಜ್ಯವನ್ನು ಕಾಪಾಡಿಕೊಂಡು ಹೋಗುವ ವ್ಯವಸ್ಥೆ ಮಾಡಿರಿ. ಎಂದು ಹೇಳಿದನು.

### ೧೨. *ಕುತುಬಶಾಹನ ಬೋಧನೆಗೆ ಅಬ್ದುಲಕರೀಮ ಬಹಲೋಲಖಾನನ ಒಪ್ಪಿಗೆ. ಮುಖ್ತ್ಯಾರಿ ಕಾರಭಾರ ಬಿಟ್ಟದ್ದು ಮಾಸೂದಖಾನನಿಗೆ ಕೋಟೆಯನ್ನು ತಿರುಗಿ ಒಪ್ಪಿಸಿದ್ದು.*

ಕುತುಬಶಾಹನ ಆಜ್ಞೆಯಂತೆ ನವಾಬ ಅಬ್ದುಲ ಕರೀಮಖಾನನು ತನ್ನ ಜಬರದಸ್ತಿಯ ಮತ್ತು ಉಪದ್ರವಗಳ ಕೆಲಸಗಳನ್ನು ಬಿಟ್ಟು, ಅವನು ಹೇಳಿದ್ದಕ್ಕೆ ಒಪ್ಪಿದನು. ವಿಜಾಪುರದ ಪ್ರಮುಖ ಕೆಲಸಗಳನ್ನು

ಕೂಡ ಬಿಡಲು ಒಪ್ಪಿಕೊಂಡನು. ಆದರೆ ಶಿಪಾಯಿ ಜನರ ಬಗ್ಗೆ ತೆಗೆದುಕೊಳ್ಳಬೇಕಾದ ಜವಾಬ್ದಾರಿಗಾಗಿ ತುಸು ತಗಾದೆ ಇದ್ದಿತು. ಅವರಿಗೆ ಕೊಡಬೇಕಾದ ಸಂಬಳವನ್ನು ನೋಡಿದರೆ, ಆರು ಲಕ್ಷ ಹೊನ್ನುಗಳಷ್ಟು ಬಾಕಿ ಇದ್ದಿತು. ಅದನ್ನು ಕೊಡದ ಹೊರತು ವಿಜಾಪುರದ ಕೋಟೆಯನ್ನು ಬಿಡಲು ಹೇಗೆ ಕೇಳಬೇಕು, ಎಂದು ಕುತುಬಶಾಹನಲ್ಲಿಯೆ ವಿನಂತಿಸಿಕೊಂಡನು. ಇಷ್ಟೊಂದು ಹಣವನ್ನು ಕೊಡುವುದು ಮಾಸೂದಖಾನನಿಂದಲೂ ಸಾಧ್ಯವಿಲ್ಲವೆಂಬುದು ಕುತುಬಶಾಹನಿಗೆ ತಿಳಿದಿತ್ತು. ಯಾಕೆಂದರೆ ಅವನಲ್ಲಿ ಆ ಸಾಮರ್ಥ್ಯವಿರಲಿಲ್ಲ. ಆದ್ದರಿಂದ ಈ ಕೆಲಸದಲ್ಲಿ ತಾನು ಕೈ ಹಾಕಿದ್ದರಿಂದ ತಾನೇ ಇದನ್ನು ಪೂರ್ತಿಗೊಳಿಸಬೇಕಾದದ್ದು ಯೋಗ್ಯವಾಗಿದೆ. ಇಲ್ಲವಾದಲ್ಲಿ ಎಲ್ಲ ಸಣ್ಣದೊಡ್ಡವರಲ್ಲಿ ನಗೆಚಾಟಿಕೆಯಾಗುತ್ತದೆ ಎಂದು ಕುತುಬಶಾಹನಿಗೆ ಮನದಟ್ಟಾಯಿತು. ಅಲ್ಲದೆ ಆ ದಿನಗಳಲ್ಲಿ ಕುತುಬಶಾಹನಿಗೆ ಇನ್ನೊಂದು ಕಾರಣವೂ ಇತ್ತು. ಅದು ತುಂಬ ಜರೂರಿಯೂ ಆಗಿತ್ತು. ಅದು ಮೊಗಲರೊಂದಿಗೆ ಸಖ್ಯತನ ಬೆಳೆಸಬೇಕಾಗಿತ್ತು. ಅಬ್ದುಲಕರೀಮ ಬಹಲೋಲಖಾನನಿಗೂ, ದಿಲೇರಖಾನನಿಗೂ ತುಂಬ ಸ್ನೇಹವಿದೆಯೆಂಬುದು ಕುತುಬಶಾಹನಿಗೆ ಗೊತ್ತಾಗಿತ್ತು. ಅವನ ವಶೀಲಿಯಿಂದ ಈ ಕೆಲಸ ಸುಲಭವಾಗುತ್ತದೆ. ಆದ್ದರಿಂದ ಈ ಎಲ್ಲ ಕೆಲಸಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಶಿಪಾಯಿಗಳಿಗೆ ಕೊಡಬೇಕಾದ ಒಟ್ಟು ಹಣವನ್ನು ದೃಷ್ಟಿಯಲ್ಲಿಟ್ಟುಕೊಂಡು ಶಿಪಾಯಿಗಳಿಗೆ ಕೊಡಬೇಕಾದ ಒಟ್ಟು ಹಣದ ಜವಾಬ್ದಾರಿಯನ್ನು ತಾನೇ ತೆಗೆದುಕೊಂಡನು. ಅದರಂತೆ ತನ್ನ ಖಜಾನೆಯಿಂದ ಆರು ಲಕ್ಷ ಹೊನ್ನುಗಳನ್ನು ಮಾಸೂದಖಾನನ ಸಹಾಯಕ್ಕಾಗಿ, ಅಬ್ದುಲಕರೀಮನಿಗೆ ಕೊಟ್ಟರೆ, ವಿಜಾಪುರದ 'ಮಮಲಕತ ಮದಾರ' ಅಂದರೆ ಮುಖ್ಯ ಕಾರಭಾರೀತನವನ್ನು ಆತ ಮಾಸೂದಖಾನನ ವಶಕ್ಕೆ ಕೊಡುತ್ತಾನೆ. ಆದ್ದರಿಂದ ಈ ಜಾಮೀನನ್ನು ಕೊಟ್ಟು ಅಬ್ದಲ ಕರೀಮಬಹಲೋಲಖಾನ ಹಾಗೂ ಮಾಸೂದಖಾನರ ಮಧ್ಯ ಒಪ್ಪಂದವಾದನಂತರ ತನ್ನ ಮತ್ತು ದಿಲೇರಖಾನನ ಮಧ್ಯ ಒಪ್ಪಂದ ಮಾಡಿಸಬೇಕೆಂಬ ಕರಾರನ್ನು ಹಾಕಿದನು.

### ೧೩. *ಕುತುಬಶಾಹನ ಮಧ್ಯಸ್ಥಿಕೆಯಿಂದ ಮಾಸೂದಖಾನ ಮತ್ತು ಅಬ್ದುಲ ಕರೀಮಖಾನರ ಒಪ್ಪಂದವಾದದ್ದು :*

ಮಾಸೂದಖಾನ ಮತ್ತು ಅಬ್ದುಲ ಕರೀಮಖಾನರ ಒಪ್ಪಂದವು ಈ ಕೆಳಗಿನ ಐದು ಕರಾರುಗಳಿಗೆ ಒಳಪಟ್ಟಿತು. ಅಬ್ದುಲ ಕರೀಮನು ತನ್ನ ಸೈನ್ಯವನ್ನು ಬರತರ್ಫ ಮಾಡಬೇಕು. ಸೈನ್ಯಕ್ಕೆ ಕೊಡಬೇಕಾದ ಆರು ಲಕ್ಷ ಹೊನ್ನುಗಳನ್ನು ಸಿದ್ದೀಮಾಸೂದಖಾನನಿಂದ ಪಡೆದು ವಿಜಾಪುರ ಕೋಟೆಯನ್ನು ಆತನ ವಶಕ್ಕೆ ಕೊಡಬೇಕು. ವಿಜಾಪುರ ಕೋಟೆ ವಶವಾದ ನಂತರ ಮಾಸೂದ ಖಾನನು, ಕುತುಬಶಾಹಿಯಲ್ಲಿ ಬುದ್ಧಿವಂತರೂ, ಬಹಳ ಪ್ರಸಿದ್ಧರೂ ಆಗಿದ್ದ ಅಕ್ಕಣ್ಣಾ, ಮಾದಣ್ಣಾ, ಎಂಬ ಇಬ್ಬರು ಖಾಸಾ ಅಣ್ಣತಮ್ಮಂದಿರಲ್ಲಿ ಅಕ್ಕಣ್ಣನನ್ನು ಸಿಕಂದರ ಬಾದಶಹನಲ್ಲಿ ನೌಕರಿಗೆ ತೆಗೆದುಕೊಳ್ಳಬೇಕು. ಮಾಸೂದಖಾನನು ತಾನು ಸ್ವತಃ ವಿಜಾಪುರ ಕೋಟೆಯ ಹೊರಗಿನ ಎಲ್ಲ ಪ್ರದೇಶಗಳ ವ್ಯವಸ್ಥೆ ಮಾಡಬೇಕು. ಶಿವಾಜಿ ಮತ್ತು ಇತರ ಕುತಂತ್ರಿಗಳನ್ನು ಸದೆ ಬಡೆಯುವ ಪಣ ತೊಡಬೇಕು. ಔರಂಗಜೇಬ ಬಾದಶಹನ ಸರದಾರರೊಂದಿಗೆ ಮತ್ತು ಸೈನ್ಯದೊಂದಿಗೆ ಸ್ನೇಹದಿಂದ ಇದ್ದು, ಸಿಕಂದರ ಬಾದಶಹನ ರಾಜ್ಯ ಸ್ಥಿರವಾಗಿ ಉಳಿಯುವಂತೆ ಯತ್ನ ಮಾಡಬೇಕು. ಹೀಗೆ ಕರಾರುಗಳನ್ನು ಬರೆದು ಉಭಯತರು ಪ್ರತಿಜ್ಞಾಪೂರ್ವಕವಾಗ ಕರಾರುಗಳ ಮೇಲೆ ತಂತಮ್ಮ ಸಹಿಗಳನ್ನು ಮಾಡಿ ಮೊಹರುಗಳನ್ನು ಒತ್ತಿದರು.

ಈ ಒಪ್ಪಂದವಾದ ನಂತರ ಅದರ ಬೆನ್ನ ಹಿಂದೆಯೇ ಅಬ್ದುಲ ಕರೀಮನ ಮಧ್ಯಸ್ಥಿಕೆಯಿಂದ ಕುತುಬಶಾಹ ಮತ್ತು ದಿಲೇರಖಾನರ ಮಧ್ಯವೂ ಉಭಯತರ ಮನಸ್ಸಿನಂತೆ ಪ್ರತಿಜ್ಞಾಪೂರ್ವಕ ಒಪ್ಪಂದವೂ ಆಯಿತು. ಅನಂತರ ಕುತುಬಶಾಹನ ಮನಸ್ಸು ಪ್ರಸನ್ನವಾಗಿ ದಿಲೇರಖಾನನಿಗೆ ತಿರುಗಿ ಹೋಗಲು ನಿರೋಪ ಕೊಟ್ಟನು. ಅನಂತರ ಕುತುಬಶಾಹನು ಆರು ಲಕ್ಷ ಹೊನ್ನುಗಳ ಚೀಟಿಯನ್ನು ಬರೆದು ಅದರ ಮೇಲೆ ತನ್ನ ಮೊಹರನ್ನು ಹಾಕಿ ಅಬ್ದುಲ ಕರೀಮನಿಗೆ ಕೊಟ್ಟನು. ಅಬ್ದುಲ ಕರೀಮಖಾನನು ಆ ಚೀಟಿಯನ್ನು ಮಾಸೂದಖಾನನಿಗೆ ಕೊಟ್ಟು, ವಿಜಾಪುರದ ಕೋಟೆಯನ್ನು ವಶಕ್ಕೆ ತೆಗೆದುಕೊಳ್ಳುವ ಮೊದಲು ಕುತುಬಶಾಹನಿಂದ ಈ ಆರುಲಕ್ಷ ಹೊನ್ನುಗಳನ್ನು ನನಗೆ ಪಾವತಿ ಮಾಡು ಎಂದು ಹೇಳಿ, ಉಭಯತರು ಕುತುಬಶಾಹನಿಂದ ನಿರೋಪ ಪಡೆದು ವಿಜಾಪುರದತ್ತ ಹೊರಟರು. ಕುತುಬಶಾಹನ ಸೈನ್ಯದಲ್ಲಿದ್ದ ಮಹಮ್ಮದ ಇಬ್ರಾಹೀಮ ಮೀರ ಬಕ್ಷಿಯು ಬಾದಶಹನ ಆಜ್ಞೆಯಂತೆ ತನ್ನ ಮಗ ಮಿರ್ಜಾ ಸಂಜರನನ್ನು ಮೂರು-ನಾಲ್ಕು ಸಾವಿರ ಸವಾರರೊಂದಿಗೆ ಮಾಸೂದ ಖಾನನ ಜೊತೆಗೆ ವಿಜಾಪುರಕ್ಕೆ ಹೋಗಿ ಅವನನ್ನು ಮುಟ್ಟಿಸಿ ತಿರುಗಿ ಬರಲು ಕಳಿಸಿದನು.

### ೧೪. *ಮಾಸೂದಖಾನನು ದಿಲೇರಖಾನನೊಂದಿಗೆ ಮಾಡಿದ ಒಪ್ಪಂದ :*

ಮಾಸೂದಖಾನ ಮತ್ತು ಕರೀಮಖಾನರು ಕೂಡಿಕೊಂಡು ಕಲಬುರ್ಗಿಗೆ ಬಂದು ಮುಟ್ಟುವ ಹೊತ್ತಿಗೆ ಉಭಯತರಿಗೆ ಮತ್ತೆ ದಿಲೇರಖಾನನ ಭೆಟ್ಟಿಯಾಯಿತು. ಕರಾರಿನಂತೆ, ಮಾಸೂದಖಾನನು ಸಿಕಂದರ ಬಾದಶಹನ ಪೇಶ್ವಾರ ಮತ್ತು ಮದಾರಲ ಮಹಾಮ ಎಂದರೆ, ಮುಖ್ಯ ಕಾರಭಾರಿಯಾಗಿ ರಾಜ್ಯದ ವ್ಯವಸ್ಥೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಅನಂತರ, ಬಂಡುಕೋರರ ದಂಗೆಯನ್ನು ನಿಲ್ಲಿಸುವಲ್ಲಿ ಯತ್ನ ಮಾಡುತ್ತ, ಔರಂಗಜೇಬ ಬಾದಶಹನ ಚಾಕರಿಯಲ್ಲಿ ಮತ್ತು ಆಜ್ಞೆಗಳಲ್ಲಿ ತತ್ಪರರಾಗಿರಬೇಕು. ಶಿವಾಜಿಯೊಂದಿಗೆ ಕಿಂಚಿತ್ತೂ ಗೆಳೆತನವನ್ನು ಇಟ್ಟುಕೊಳ್ಳದೆ, ಅವನ ಕೈಗೆ ಹೋದ ಆದಿಲಶಹನ ಪ್ರದೇಶಗಳನ್ನು ಬಿಡಿಸಿ ಕೊಳ್ಳಲು ದಿಲೇರಖಾನನ ಸೈನ್ಯಕ್ಕೆ ಸಹಾಯ ಮಾಡುತ್ತ ಹೋಗಬೇಕು. ಸುಲ್ತಾನ ಸಿಕಂದರ ಬಾದಶಹನ ಅಕ್ಕ ಪಾದಶಾಹಾ ಬೀಬಿಯ ಮದುವೆಯನ್ನು ರಾಜಕುಮಾರ ಮಹಮ್ಮದ ಅಜಮಶಾಹನೊಂದಿಗೆ ಮಾಡಲು ಖವಾಸಖಾನನು ಈ ಮೊದಲೆ ನಿರ್ಧರಿಸಿದಂತೆ ಮದುವೆ ಮಾಡಿಕೊಟ್ಟು, ಬಾದಶಾಹಾ ಬೀಬಿಯನ್ನು ದಿಲ್ಲಿಗೆ ಕಳಿಸಬೇಕು. ದಿಲೇರಖಾನನ ಸಾಲದ ಜವಾಬ್ದಾರಿಯನ್ನು ಹೊತ್ತಿದ್ದಂತೆ ಅದನ್ನು ಹಪ್ತೆಬಂದಿಯಂತೆ ತುಂಬಬೇಕು. ಔರಂಗಜೇಬ ಬಾದಶಹ ಮತ್ತು ದಿಲೇಖಾನರ ಆಜ್ಞೆಗಳಲ್ಲಿ ಕೂದಲೆಳೆಯಷ್ಟೂ ಬದಲಾಯಿಸಬಾರದು, ಕುತುಬಶಾಹನ ಮುಖ್ಯ ವಕೀಲನಾದ ಅಕ್ಕಣ್ಣನನ್ನು ಸಿಕಂದರ ಬಾದಶಹನ ಹತ್ತಿರ ಮುಖ್ತಾರಿ ಕೆಲಸದ ಮೇಲೆ ಇಟ್ಟಿದ್ದು, ಆತನ ಯುಕ್ತಿಯಂತೆ ಆತ ಹೇಳಿದಂತೆ ನಡೆದುಕೊಳ್ಳಬೇಕು. ಈ ರೀತಿಯಾಗಿ ಒಪ್ಪಂದವಾಗಿ ಕರಾರನಾಮೆಯನ್ನು ಮಾಡಿ ದಿಲೇರಖಾನನು ತನ್ನ ಪ್ರದೇಶಕ್ಕೆ ಹೋದನು.

### ೧೫. *ದಾರಿಯಲ್ಲೇ ಅಬ್ದುಲಕರೀಮ ಬಹಲೋಲಖಾನನು ಮರಣ ಹೊಂದಿದ್ದು :*

ಮಾಸೂದಖಾನ ಮತ್ತು ಅಬ್ದುಲ ಕರೀಮ ಬಹಲೋಖಾನರು ಕಲಬುರ್ಗಿಯಿಂದ ಹೊರಟಾಗ ತುಂಬ ಪ್ರಸನ್ನರಾಗಿದ್ದರು. ಇನ್ನು ರಾಜ್ಯದ ಒಳ್ಳೆಯ ದಿನಗಳು ಬಂದುವು. ನಮಗೂ ಒಳ್ಳೆಯದಾಗುತ್ತದೆ

ಎಂದು ಆನಂದದಿಂದ ಹೊರಟಿದ್ದರು. ಆದರೆ ರಾತ್ರಿ ಎಂಬ ತುಂಬು ಗರ್ಭಿಣಿಯ ಉದರದಲ್ಲಿ ಏನಿದೆ? ಎಂಬುದು ಅವರಿಗೆ ಗೊತ್ತಿರಲಿಲ್ಲ. ಬೆಳಗಾಗುವುದರಲ್ಲಿ ಯಾವರೀತಿಯ ಮಗು ಹುಟ್ಟೀತೆಂಬುದು ಅವರ ಲಕ್ಷ್ಯದಲ್ಲಿ ಬಂದಿರಲಿಲ್ಲ. ಈ ನಿರ್ಣಯ ಕಾಲಚಕ್ರವು ಯಾವ ತರದ ಸಂಕಟದ ಆಟವನ್ನು ಹೂಡಬಹುದು. ಸಧ್ಯ ಮನಃತೃಪ್ತಿಯಾಗಿದ್ದರೂ, ಬೆಳಗಾಗುವುದರಲ್ಲಿ ಯಾವ ರೀತಿಯ ನಿರಾಶೆ ಚಿಂತೆಗಳಲ್ಲಿ ಬದಲಾಗಬಹುದೆಂಬುದು ತಿಳಿಯಲಿಲ್ಲ. ಕಲಬುರ್ಗಿಯಿಂದ ಹೊರಟು ಮುಕ್ಕಾಮು ಮಾಡುತ್ತ ಹೀರಾಪುರಕ್ಕೆ ಬಂದಿದ್ದರು. ಆಗ ಒಮ್ಮಿಂದೊಮ್ಮೆಲೆ ಪ್ರಾರಬ್ಧ ಯೋಗದಿಂದ ಅಬ್ದುಲ ಕರೀಮಖಾನನ ಆರೋಗ್ಯ ಕೆಟ್ಟಿತು. ಒಮ್ಮೆಲೆ ತುಂಬ ದಣಿದಂತೆ ಕಂಡನು. ಆತನ ಆಯುಷ್ಯವೇ ಮುಗಿದಿತ್ತು. ಆದ್ದರಿಂದ ಯಾವ ರೀತಿಯ ಔಷದೋಪಚಾರವೂ ಫಲ ನೀಡಲಿಲ್ಲ. ಕೊನೆಗೆ ದಿನಾಂಕ ೮, ಜಲಕಾದ ದಂದು (೨೩, ದಿಶೆಂಬರ ೧೬೭೭) ಅಬ್ದುಲ ಕರೀಮಖಾನನು ಮರಣ ಹೊಂದಿದನು.[೧] ಮಸೂದಖಾನನಿಗೆ ತುಂಬ ಚಿಂತೆಯಾಯಿತು ಅಬ್ದುಲಕರೀಮಖಾನನ ಸಖ್ಯದ ಆನಂದದ ಕ್ಷಣದ ಬೆನ್ನಲ್ಲಿಯೇ ದುಃಖದಲ್ಲಿ ಪರ್ಯವಸಾನವಾಗಿತ್ತು. ಯಾಕೆಂದರೆ ಉಭಯತರೂ ರಾಜ್ಯದ ಕೆಲಸಗಳ ಅಭಿವೃದ್ಧಿಗಾಗಿ ಸಾವಿರಾರು ಯೋಜನೆಗಳನ್ನು ಹಾಕಿಕೊಂಡಿದ್ದರು. ಅವುಗಳೆಲ್ಲ ಕುಸಿದು ಈ ರೀತಿಯ ಘಟನೆ ಸಂಭವಿಸಿತ್ತು ಇರಲಿ.

ಅಬ್ದುಲ ಕರೀಮಖಾನನ ಮರಣದ ಶೋಕವನ್ನು ಸಹಿಸಿಕೊಂಡು, ಆತನ ಶವಕ್ಕೆ ಸ್ನಾನಮಾಡಿಸಿ ಕಫನ ಮಾಡಿ ಅದನ್ನು ಹುಗಿದನು. ಆತನ ಮಗನಿಗೆ ಸಾಂತ್ವನ ಹೇಳಿದನು. ಎರಡು ಮೂರು ದಿನಗಳನ್ನು ಇದರಲ್ಲಿಯೇ ಕಳೆದು ದಿನಾಂಕ ೧೧ ಜಿಲಕಾದ (೨೬ ದಿಶೆಂಬರ ೧೬೭೭) ದಂದು ಅಬ್ದುಲಕರೀಮನ ಹೆಂಡಿರು ಮಕ್ಕಳನ್ನು ಕಾಣಲು ಹೀರಾಪುರದಿಂದ ಕೂಚಮಾಡಿ ವಿಜಾಪುರಕ್ಕೆ ಹೊರಟನು. ದಾರಿಯಲ್ಲಿದ್ದಾಗ ಜಮಶೀದಖಾನನ ಪತ್ರ ಮಾಸೂದಖಾನನಿಗೆ ಬಂದು ಮುಟ್ಟಿತು. ಅದರಲ್ಲಿ ಅವನು ಹೀಗೆ ಬರೆದಿದ್ದನು. 'ನಾನು ಅಬ್ದುಲಕರೀಮನ ಆಜ್ಞೆಯಂತೆ ವಿಜಾಪುರದ ಪ್ರಧಾನ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದೇನೆ. ಮತ್ತು ನಾನು ಏನೆಲ್ಲ ಮಾಡಿರುವೇನೋ ಅದನ್ನು ಅಬ್ದುಲ ಕರೀಮನ ಆದೇಶದಂತೆಯೇ ಮಾಡಿದ್ದೇನೆ. ಈಗ ಅಬ್ದುಲ ಕರೀಮಖಾನನು ಮರಣಹೊಂದಿದ್ದಾನೆ. ನೀವು ಕೋಟೆಯನ್ನು ವಶಕ್ಕೆ ತೆಗೆದುಕೊಳ್ಳಲು ವಿಜಾಪುರಕ್ಕೆ ಬರುತ್ತಿದ್ದೀರಿ. ಆದ್ದರಿಂದ ಮೊದಲು ಈ ಎರಡು ಕೆಲಸಗಳ ಬಗ್ಗೆ ನಿರ್ಧಾರವಾಗಬೇಕು. ಮೊದಲನೆಯ ಕೆಲಸವೆಂದರೆ ಇಲ್ಲಿ ನಡೆದ ಯಾವುದೇ ಕೆಲಸದ ಬಗ್ಗೆ ನನ್ನನ್ನು ವಿಚಾರಣೆಗೆ ಗುರಿ ಮಾಡುವುದಿಲ್ಲವೆಂದು ಶಪಥ ಮಾಡಬೇಕು. ಯಾಕೆಂದರೆ, ಏನು ಆಗಿದೆಯೋ ಅದನ್ನೆಲ್ಲ ಅಬ್ದುಲಕರೀಮ ಖಾನನ ಆದೇಶದಂತೆಯೇ ಮಾಡಿದೆ. ಎರಡನೆಯ ಕೆಲಸವೆಂದರೆ, ಒಪ್ಪಂದದ ಕರಾರಿನಂತೆ ಆರು ಲಕ್ಷ ಹೊನ್ನುಗಳನ್ನು ಈಗಲೇ ನನ್ನ ವಶಕ್ಕೆ ಕೊಡಬೇಕು. ಅಂದರೆ ಕೋಟೆಯನ್ನು ವಶಕ್ಕೆ ಕೊಟ್ಟನಂತರ ಯಾವ ವಾದ-ವಿವಾದಕ್ಕೂ ಕಾರಣ ಉಳಿಯುವುದಿಲ್ಲ. ಈ ಎರಡು ಕೆಲಸಗಳು ಪೂರ್ತಿಯಾಗದ ಹೊರತು ನೀವು ಇತ್ತ ಕಡೆಗೆ ಬರಲು ಒಂದು ಹೆಜ್ಜೆ ಮುಂದಿಟ್ಟರೆ ಯುದ್ಧವೇ ಅನಿವಾರ್ಯವಾಗುತ್ತದೆ" ಹೀಗೆ ಪತ್ರ ಬಂದಿತು.

---

೧. ಶಕೆ ೧೫೯೯ ಪುಷ್ಯ (ಡಿಶಂಬರ ೧೬೭೭ ಜನವರಿ ೨೮) ಬಹಲೋಲಖಾನನು ಪರಲೋಕವಾಸಿ. ವಿಜಾಪುರವು ಮಾಸೂದ ಖಾನನ ವಶಕ್ಕೆ - ಜೇಧೆ ಶಕಾವಲಿ ಪುಟ ೨೯.

ಮಾಸೂದಖಾನನು ಈ ಎಲ್ಲ ವಿಷಯಗಳನ್ನು, ಅಬ್ದುಲ ಕರೀಮಖಾನನು ಮರಣ ಹೊಂದಿದ್ದು, ಮತ್ತು ವಿಜಾಪುರ ಕೋಟೆಯನ್ನು ವಶಕ್ಕೆ ಕೊಡುವ ಬಗ್ಗೆ ಜಮಶೀದಖಾನನು ಅಡ್ಡಿ ಮಾಡುತ್ತಿದ್ದದು ಮತ್ತು ಸೈನ್ಯಕ್ಕೆ ನಿರೋಪ ಕೊಡುವ ವಿಷಯದಲ್ಲಿ ವೃದ್ಧಿಯಾದ ಅವರ ಸಂಬಳವನ್ನು ಈಗಲೇ ನಗದಾಗಿ ಜಮಶೀದಖಾನನು ಕೊಡಲು ಕೇಳಿದ್ದು ಇತ್ಯಾದಿ ವಿಷಯಗಳನ್ನು ಸವಿಸ್ತಾರವಾಗಿ ಬರೆದು ಆರು ಲಕ್ಷ ಹೊನ್ನುಗಳನ್ನು ಕಳಿಸಬೇಕೆಂದು ಕುತುಬಶಾಹನಿಗೆ ಕಳಿಸಿದನು. ಕರಾರಿನಂತೆ ಆರು ಲಕ್ಷ ಹೊನ್ನನ್ನು ಕಳಿಸಲು ಕುತಬಶಾಹನು ಅನುಮಾನಿಸಿದನು. ಕಳಿಸುವುದರ ಬದಲಾಗಿ ಸಿಟ್ಟಿಗೆ ಬಂದನು. ಆಗ ಮಾಸೂದಖಾನನು ಬಹಳ ಚಿಂತಾಗ್ರಸ್ತನಾಗಿ, ಅದರ ವಿಚಾರದಲ್ಲಿಯೇ ಅನೇಕ ದಿನಗಳ ವರೆಗೆ ಭೀಮಾ ನದಿಯ ದಂಡೆಯ ಮೇಲೆ ಉಳಿದನು, ಹತ್ತಿರದಲ್ಲಿ ತಾಂಬೆ ಎಂಬ ಗ್ರಾಮವಿದೆ, ಅಲ್ಲಿ ಮುಕ್ಕಾಮು ಮಾಡಿ ವೆಂಕಟಾದ್ರಿಯನ್ನು ಜಮಷೀದಖಾನನ ಕಡೆಗೆ ಕಳಿಸಿದನು. ಬಹಳ ಚರ್ಚೆಮಾಡಿ ಜಮಷೀದಖಾನನಿಗೆ ತಿಳುವಳಿಕೆ ಹೇಳಿದನು. ವೆಂಕಟಾದ್ರಿಯು ಅವನಿಗೆ ಅನೇಕರೀತಿಯಿಂದ ತಿಳಿ ಹೇಳಿದನು. ಯಾರನ್ನು ಕೆಲಸದಿಂದ ತೆಗೆಯಬೇಕಾಗಿದೆಯೋ ಅವರ ಬಗ್ಗೆ ಜವಾಬ್ದಾರಿಯನ್ನು ತೆಗೆದುಕೊಂಡು ಅವರಿಗೆ ತುಸು ಹಣವನ್ನು ನಗದಾಗಿ ಕೊಟ್ಟನು. ಇನ್ನು ಕೆಲವರ ಬಗ್ಗೆ ಸೌದಾಗರರ ಮೇಲೆ ಕೊಟ್ಟನು. ಉಳಿದದ್ದನ್ನು ವಿಜಾಪುರಕ್ಕೆ ಬಂದನಂತರ ಕೊಡುವುದಾಗಿ ಸಮಯ ನಿರ್ಧರಿಸಿದನು. ಪ್ರತಿಯೊಂದು ವಿಷಯದಲ್ಲೂ ಜಮಷೀದಖಾನನ್ನು ಒಪ್ಪಿಸಿದನು. ಮತ್ತು ವಿಜಾಪುರಕ್ಕೆ ಬಂದನಂತರ ಯಾವ ಕೆಲಸಕಾರ್ಯಗಳ ಬಗ್ಗೆಯೂ ಆತನನ್ನು ವಿಚಾರಣೆಗೆ ಗುರಿ ಮಾಡುವುದಿಲ್ಲವೆಂದೂ ಪ್ರತಿಜ್ಞೆಮಾಡಿದನು.

### ೧೬. *ವಿಜಾಪುರ ಕೋಟೆಯಲ್ಲಿ ಮಾಸೂದಖಾನನ ದಾಖಲು :*

ದಿನಾಂಕ ೫ ಮೊಹರಮ ಸನ್ ೧೦೮೯ (೧೭ ಫೆಬ್ರವರಿ ೧೬೭೮) ರಂದು ವೆಂಕಟಾದ್ರಿಯು, ಮಾಸೂದಖಾನನ ಜಹಗೀರಿಯಲ್ಲಿಯ ಅತ್ಯಂತ ಶ್ರೇಷ್ಠ, ಹೆಸರಾದ ವ್ಯಕ್ತಿ ಮುರಾರಿಯನ್ನು ವಿಜಾಪುರಕ್ಕೆ ಕರೆತಂದನು ಅದೇ ದಿನ ಜಮಷೀದಖಾನನು ವಿಜಾಪುರದಿಂದ ಹೊರಟು ಅಬ್ದುಲ ಕರೀಮಖಾನನ ವಾಡೆಯಲ್ಲಿ ಬಂದು ಇಳಿದನು. ದಿನಾಂಕ ೯, ಗುರುವಾರ (೨೧, ಫೆಬ್ರವರಿ ೧೬೭೮) ರಂದು ಮಾಸೂದಖಾನನು ಸ್ವತಃ ಬಂದು ವಿಜಾಪುರದ ಕೋಟೆಯಲ್ಲಿ ದಾಖಲಾದನು. ಎರಡು ಮೂರು ದಿನಗಳ ಅನಂತರ ಜಮಷೀದಖಾನನ ವಿರಸದಿಂದಾಗಿ ಆಲಮೇಲದಲ್ಲಿಯೇ ಉಳಿದ ಕುತುಬಶಹನ ಸೈನ್ಯವನ್ನು, ವಿಜಾಪುರದಿಂದ ನಿರೋಪ ಕಳಿಸಿ ಹೈದರಾಬಾದಿಗೆ ಮುನ್ನಡೆಸಲಾಯಿತು. ಅನಂತರ ಮಾಸೂದಖಾನನು ಮೇಲಿಂದ ಮೇಲೆ ಕುತುಬಶಾಹನಿಗೆ ಪತ್ರ ಬರೆದು ಕರಾರಿನಂತೆ ಹಣ ಕಳಿಸಲು ವಿನಂತಿಸಿಕೊಳ್ಳುತ್ತಿದ್ದನು. ಆದರೆ ಕುತುಬಶಾಹನು ಅದಕ್ಕೆ ಮನ್ನಣೆ ನೀಡುತ್ತಿರಲಿಲ್ಲ ಮತ್ತು ಕಳಿಸುವುದನ್ನು ಮುಂದೆ ಹಾಕುತ್ತಿದ್ದನು. ನಾನಾ ಪ್ರಕಾರದ ನೆಪಗಳನ್ನು ಮುಂದೆ ಮಾಡಿ ಕೊಡುವ ಬಗ್ಗ-ಕಳಿಸುವ ಬಗ್ಗೆ ಅನುಮಾನ ಮಾಡುತ್ತಲೇ ಇದ್ದನು. ಅದರಿಂದಾಗಿ ಕುತುಬಶಾಹ ಮತ್ತು ಮಾಸೂದಖಾನನ ಮಧ್ಯ ಬಹಳೇ ವಿರಸಉಂಟಾಯಿತು.

### ೧೭. *ಕುತುಬಶಾಹನು ಕರಾರಿನಂತೆ ಹಣವನ್ನು ಕಳಿಸಲಿಲ್ಲವಾದ್ದರಿಂದ, ಮಸೂದಖಾನನ ಕಾಲದಲ್ಲಿ ರಾಜ್ಯ ಹಿನ್ನಡೆಯಲು ಕಾರಣ, ಆದರಿಂದಾಗಿ ಪಠಾಣರ ದಂಗೆ :*

ಸಿದ್ದೀ ಮಾಸೂದನು ಬಂದಿದ್ದರಿಂದ ರಾಜ್ಯದ ಕೆಲಸಗಳಲ್ಲಿ ತುಸು ಸುಧಾರಣೆಯಾಗ ಹತ್ತಿತ್ತು. ಇನ್ನು ನಮ್ಮ ದಿನಗಳು ಚೆನ್ನಾಗಿರುತ್ತವೆ ಎಂದು ಎಲ್ಲರೂ ಭಾವಿಸಿದರು. ಆದರೆ ಮತ್ತೆ ನಿರಾಶೆಯಿಂದ

ವಿರಸದ ಚಿಹ್ನೆಗಳು ಕಾಣಹತ್ತಿದವು. ನಿರೋಪ ಕೊಟ್ಟು ಕಳಿಸಬೇಕಾದ ಪಠಾಣ ಜನರು ತಮಗೆ ಬರಬೇಕಾದ ಹಣಕ್ಕಾಗಿ ಮಾಸೂದಖಾನನಿಗೆ ಕಿರುಕುಳ ಕೊಡಹತ್ತಿದರು. ಮತ್ತು ಅಬ್ದುಲಕರೀಮ ಬಹಲೋಲಖಾನನ ಕಡೆಯ ಜನರು ಕೂಡ ಅದೇ ಕಾರಣದಿಂದ ಉಪದ್ರವ ಕೊಡುತ್ತಿದ್ದರು ಅದರ ವಿಸ್ತಾರವನ್ನು ಬರೆದರೆ ಮುಗಿಯುವಂಥದ್ದಲ್ಲ. ಅಷ್ಟೊಂದು ಉಪದ್ರವ ಕೊಡುತ್ತಿದ್ದರು. ಜಮಷೀದಖಾನನಿಗೆ ಮತ್ತು ಅಬ್ದುಲ ಕರೀಮಖಾನನ ಮಕ್ಕಳಿಗೆ ನಾನಾ ಪ್ರಕಾರದ ದುಷ್ಟ ಮಾತುಗಳನ್ನಾಡಿ, ತಮ್ಮ ವಸೂಲಿಯನ್ನು ಮಾಡಿಕೊಳ್ಳುತ್ತಿದ್ದರು. ನವಾಬ ಅಬ್ದುಲ ಕರೀಮಖಾನನ ಜಮಾದಾರಖಾನೆ, ತೋಫಖಾನೆ ಮತ್ತು ಬೇರೆ ಅನೇಕ ಸಮುದಾಯಗಳ ಪಠಾಣ ಜನರು ಕೈಗೆ ಸಿಕ್ಕದ್ದನ್ನು ತೆಗದುಕೊಳ್ಳುತ್ತಿದ್ದರು. ಎಲ್ಲಿಯವರೆಗೆ ಎಂದರೆ ಅಬ್ದುಲ ಕರೀಮಖಾನನ ವಾಡೆಯಲ್ಲಿಯ ಅಡುಗೆ ಮನೆಯಲ್ಲಿಯ ಪಾತ್ರೆಗಳನ್ನು ಕೂಡ ಬಿಡಲಿಲ್ಲ. ಪಠಾಣರು ಇಷ್ಟೊಂದು ಗದ್ದಲ ಹಾಕಿದರು. ಜಮಷೀದಖಾನನ ಮಕ್ಕಳಿಗೆ ಮತ್ತು ಜಮಷೀದಖಾನನ ತಾಯಿ, ಅಕ್ಕತಂಗಿಯರು, ಹತ್ತಿರದವರು, ತೋಫಖಾನೆ ಕಡೆಯ ಹವಾಲದಾರರ ಸಂಬಂಧಿಕರು ಮೊದಲಾದವರನ್ನು ಅಬ್ದುಲಖಾನನ ಜನರು ಯಾರ್‍ಯಾರಿದ್ದರೊ ಅವರನ್ನು ಹಿಡಿದು ಬಂಧಿಸಿ, ಹಗ್ಗದಿಂದ ಕಟ್ಟಿ ದಿನನಿತ್ಯ ನೀರಿನಲ್ಲಿ ಮುಳುಗಿಸುತ್ತಿದ್ದರು. ಮತ್ತು ಸುಡುವ ಬಂಡೆಗಲ್ಲುಗಳ ಮೇಲೆ ಕುಳ್ಳಿರಿಸಿ ಬರಬೇಕಾದದ್ದನ್ನು ವಸೂಲು ಮಾಡುತ್ತಿದ್ದರು. ಇಷ್ಟಕ್ಕೆ ಬಿಡದೆ ನಗರದಲ್ಲಿಯ ಸುಖಪುರುಷರು ನಾಲ್ಕೂಕಡೆಯಿಂದ ಬರುವ ವ್ಯಾಪಾರಸ್ಥರು ಮತ್ತು ನಗರದಲ್ಲಿ ಸಂಶಯ ಬಂದ ದುಡ್ಡಿದ್ದ ಜನರು ಇವರನ್ನು ಹಿಡಿದು, ಹೊಡೆದು ಬಡಿದು ಜಬರದಸ್ತಿಯಿಂದ ಅವರಿಗೆ ನಾನಾಪ್ರಕಾರದ ತೊಂದರೆಯನ್ನು ಕೊಡುತ್ತಿದ್ದರು. ಜನರಹಿತ ಮನೆಗಳು ಇವರ ಉಪದ್ರವದಿಂದಲೇ ಮನೆಬಿಟ್ಟು ಹೋದವರಿಗೆ ಸಂಬಂಧಿಸಿದುವೆಂದು ತಟ್ಟನೇ ಹೇಳಬಹುದು. ಆ ಮನೆಗಳ ಕಟ್ಟಿಗೆಗಳನ್ನು ತೆಗೆದು ಕಪ್ಪುಮಣ್ಣಿನ ದರದಲ್ಲಿ ಮಾರುತ್ತಿದ್ದರು.

ಒಂದು ದಿನ ಹಕೀಮ ಷಮಸುದ್ದೀನಖಾನನು ಮಲಿಕ ಬರಖುರದಾರ ಎಂಬ ಮೊಗಲನ ಮನೆಯಿಂದ ಬರುತ್ತಿದ್ದನು. ಆಗ ಪಠಾಣ ಜನರು ಅವನ ಮೇಲೆ ಓಡಿ ಹೋಗಿ, ಗಚ್ಚಿ ಬಾಗಿಲದ ಹತ್ತಿರ ಹಕೀಮ ಷಮಸುದ್ದೀನನ ಅಣ್ಣನನ್ನು ಮತ್ತು ಅಳಿಯನನ್ನು ಕೊಲೆ ಮಾಡಿ, ಹಕೀಮ ಷಮಸುದ್ದೀನನ್ನು ಪಲ್ಲಕ್ಕಿಯಿಂದ ಕೆಳಗೆ ಬೀಳಿಸಿ ಅವನನ್ನು, ಅವನ ಮಗನನ್ನು, ಇನ್ನೊಬ್ಬ ಅಳಿಯನನ್ನು ಇತರ ಸಂಬಂಧಿಕರನ್ನು ಸಹಿತ ಬಂಧಿಸಿ ಅವರನ್ನು ದರ-ದರ ಎಳೆಯುತ್ತ ಅಬ್ದುಲ ಕರೀಮಖಾನನ ವಾಡೆಗೆ ತಂದು ಬಂಧಿಸಿಟ್ಟರು. ಮಾಸೂದಖಾನನ ಶಹಪೂರ ಬಾಗಿಲಿನ ಹತ್ತಿರದ ಗೋಪುರವನ್ನು ಹತ್ತಿ, ಪಠಾಣ ಜನರನ್ನು ಶಿಕ್ಷಿಸಲು ಸೈನ್ಯವನ್ನು ಕಳಿಸಬೇಕೆಂದು ಬಯಸಿದ್ದನು. ಆದರೆ ಆ ಪಠಾಣ ಜನರು ನಿರೋಪ ಕಳಿಸಿ ಒಂದು ವೇಳೆ ನಮ್ಮ ಮೇಲೆ ಸೈನ್ಯವನ್ನು ಕಳಿಸಿದರೆ, ಮೊದಲು ಹಕೀಮ ಷಮಸುದ್ದೀನನನ್ನು ಮತ್ತು ಆತನ ಜನರನ್ನೆಲ್ಲ ಕೊಲೆ ಮಾಡುತ್ತೇವೆ. ಅನಂತರ ನಾವು ಸಾಯುತ್ತೇವೆ ಎಂದರು. ಮಲಿಕ ಬರಖುರದಾರನು ಹಕೀಮ ಷಮಸುದ್ದೀನನ್ನು ಬಿಡಿಸಿಕೊಳ್ಳಲು ಬಹಳ ಪ್ರಯತ್ನಪಟ್ಟನು. ಆದರೆ, ಒಂದೂ ಉಪಯೋಗವಾಗಲಿಲ್ಲ. ಪಠಾಣ ಜನರು ಹಕೀಮ ಷಮಸುದ್ದೀನನ್ನು ಪ್ರತಿನಿತ್ಯ ತಣ್ಣಗಿನ ನೀರಿನಲ್ಲಿ ಕುಳ್ಳರಿಸಿ ಅವನನ್ನು ಮುಳುಗಿಸುತ್ತ ತಮ್ಮ ಸಂಬಳವನ್ನು ಕೇಳುತ್ತಿದ್ದರು.

*೧೮. ನವಾಬ ಅಬ್ದುಲ ಕರೀಮ ಬಹಲೋಲಖಾನನ ಮಗನಿಗೆ ಪಠಾಣರು ಹಿಂಸಿಸಿದ್ದು ಮತ್ತು ಅವರನ್ನು ಶಿಕ್ಷಿಸಲು ಮಾಸೂದಖಾನನು ಸೈನ್ಯ ಕಳಿಸಿದ್ದು:*

ಒಂದು ದಿನ ಪಠಾಣ ಜನರು ಬಹಳ ಅಯೋಗ್ಯರೀತಿಯಿಂದ ನಡೆದುಕೊಂಡು

ಅಬ್ದುಲ ಕರೀಮಖಾನನ ಹೆಂಡತಿಯ ಮೇಲೆ ಜಬರದಸ್ತಿ ಮಾಡಿ, ಆತನ ಮಗ ಅಬ್ದುಲ ರಾವುಫ ಎಂಬವನನ್ನು ಹಿಡಿದರು. ಮುಳ್ಳಿನ ಹಾಸಿಗೆಯನ್ನು ಮಾಡಿ ಅದರ ಮೇಲೆ ಹಿಡಿದು ಕೂಡಿಸುವುದೇ ಮೊದಲಾದ ಹಿಂಸೆಯನ್ನು ನೀಡ ಹತ್ತಿದರು. ಮಾಸೂದಖಾನನು ಶಾಹಪುರ ಬಾಗಿಲಿನಮೇಲೆ ಏರಿ ಮಲ್ಹಾರಿ ಪಂಡಿತ ಮತ್ತು ಹಸನಖಾನ ರೋಹಿಲಾ, ಅಬ್ದುಲ ಕರೀಮಖಾನ ದಾವೂದಜೀ ಅವರನ್ನು ಪಠಾಣರೊಂದಿಗೆ ಚರ್ಚೆಗಾಗಿ ಅಬ್ದುಲಕರೀಮಖಾನನ ವಾಡೆಗೆ ಕಳಿಸಿದನು. ಮಲ್ಹಾರಿ ಪಂಡಿತನು ಅಲ್ಲಿಗೆ ಹೋಗಿ ಪಠಾಣರ ಲೆಕ್ಕಪತ್ರವನ್ನು ಮಾಡಹತ್ತಿದನು. ಮಲ್ಹಾರಿ ಪಂಡಿತ ಮತ್ತು ಪಠಾಣರ ಮಧ್ಯದ ಚರ್ಚೆ ತುಂಬ ಹೊತ್ತು ನಡೆಯಿತು. ಕೊನೆಗೆ ಪಠಾಣ ಜನರು ಬಹಳೇ ಅಯೋಗ್ಯರಾಗಿ ನಡೆದುಕೊಂಡು ಮಲ್ಹಾರಿ ಪಂಡಿತನಿಗೆ ಬಹಳೇ ಹೊಡೆದು ಬಡಿದು ಬಂಧನದಲ್ಲಿಟ್ಟರು. ಹಸನಖಾನ ಮತ್ತು ದಾವೂದಜೀಗಳು ಈ ಗದ್ದಲದಿಂದ ಪಾರಾಗಿ ಹೊರಗೆ ಬಂದರು. ಮತ್ತು ಮಾಸೂದಖಾನನಿಗೆ ನಿರೋಪ ಕಳಿಸಿ ಪಠಾಣ ಜನರ ಅಯೋಗ್ಯ ವರ್ತನೆ, ಗೂಂಡಾಗಿರಿ ಮತ್ತು ಮಲ್ಹಾರಿ ಪಂಡಿತನನ್ನು ಬಂಧಿಸಿದ್ದು ತಿಳಿಸಿ ಇದಕ್ಕೊಂದು ಸರಿಯಾದ ಮಾರ್ಗವನ್ನು ಹುಡುಕಬೇಕೆಂದರು. ಅದನ್ನು ಕೇಳಿ ಮಾಸೂದಖಾನನು ವೆಂಕಟಾದ್ರಿವನ್ನು ಷರ್ಜಾಖಾನನ ಜೊತೆಗೆ ಸೈನ್ಯವನ್ನು ಕೊಟ್ಟು ಪಠಾಣರನ್ನು ಶಿಕ್ಷಿಸಲು ಕಳಿಸಿದನು. ಅವರಿಬ್ಬರೂ ಹೋಗಿ ಅಬ್ದುಲ ಕರೀಮಖಾನನ ವಾಡೆಯನ್ನು ಸುತ್ತುವರೆದು ವಾಡೆಯ ಮೇಲೆ ಹಲ್ಲೆ ಮಾಡಿದರು.

ದಿನಾಂಕ ೨ ರಬೀಲಾವಲದ ಆರನೆಯ ಗಂಟೆಯಿಂದ ೩ನೇ ದಿನದ ಒಂಭತ್ತನೆಯ ಗಂಟೆಯ ವರೆಗೂ (೧೪/೧೫ ಎಪ್ರಿಲ್ ೧೬೭೮) ಬಿಟ್ಟೂಬಿಡದೆ ಹಲ್ಲೆ ನಡೆಯಿತು. ಉಭಯ ಪಕ್ಷಗಳಲ್ಲೂ ದೊಡ್ಡ ಯುದ್ಧವಾಯಿತು. ಪಠಾಣ ಜನರಲ್ಲಿಯ ೧೫, ೧೬ ಜನ ಕೊಲೆಯಾದರು. ಈ ಕಡೆಯ ೨೨ ಜನ ಕೊಲೆಯಾದರು. ಮತ್ತು ಬಹಳಷ್ಟು ಜನ ಗಾಯಾಳುಗಳಾದರು. ಆಗ ಪಠಾಣ ಜನರು ಹಣ್ಣಿಗೆ ಬಂದು ಒಪ್ಪಂದದ ದಾರಿಗೆ ಬಂದರು.

ಹಸನಖಾನ ರೋಹಿಲಾ ಮತ್ತು ಅಬ್ದುಲ ಕರೀಮಖಾನ ದಾವೂದಜೀಯನ್ನು ಮಾತುಕತೆಗೆ ಕರೆದರು. ಕರಾರುಗಳನ್ನು ಚರ್ಚಿಸುವಾಗ ಪಠಾಣ ಜನರಿಗೆ ಕೊಡಬೇಕಾದ ದಿನಭತ್ಯೆ ಸಂಬಳ ಲೆಕ್ಕ ಹಾಕಿ ಇನ್ನೂ ಒಂದು ಲಕ್ಷ ಅರವತ್ತು ಸಾವಿರ ಹೊನ್ನು ಬಾಕಿ ಉಳಿದಿದ್ದಿತು. ಅದರಲ್ಲಿ ದಿಲೇರಖಾನನು ೩೦ ಸಾವಿರ ಹೊನ್ನುಗಳನ್ನು ಕೊಟ್ಟಿದ್ದಾನೆ. ಉಳಿದದ್ದನ್ನು ಮಾಸೂದಖಾನನು ತನ್ನ ಹತ್ತಿರ ಇದ್ದ ಹಣದಲ್ಲಿ ಕೊಟ್ಟು ಅಬ್ದುಲಕರೀಮಖಾನನ ಮಗ ಮೊದಲಾದವರನ್ನು ಬಿಡಿಸಿಕೊಳ್ಳಬೇಕು ಎಂದು ನಿರ್ಧರಿಸಲಾಯಿತು. ಆದರೆ ಇದಕ್ಕೆ ವೆಂಕಟಾದ್ರಿಯು ಒಪ್ಪಲಿಲ್ಲ. ಆಗ ಮತ್ತೆ ಚರ್ಚೆಮಾಡಿ ಇದರಲ್ಲಿಯ ಪ್ರತಿಶತ ೪೦ ರಷ್ಟನ್ನು ಕೊಡುವುದೆಂದು ನಿರ್ಧರಿಸಿದರು. ಅದಕ್ಕೂ ವೆಂಕಟಾದ್ರಿಯು ಒಪ್ಪದೆ ಹೆಚ್ಚಾನು ಹೆಚ್ಚೆಂದರೆ ಪ್ರತಿಶತ ೫ರಷ್ಟು ಹೊನ್ನನ್ನು ಕೊಡಬಹುದು. ಅದೂ ನಿಮ್ಮ ಭಿಡೆ-ಒತ್ತಾಯಕ್ಕಾಗಿ ಕೊಡಲು ಒಪ್ಪಬಹುದು. ಇಲ್ಲವಾದರೆ ಪಠಾಣರನ್ನು ಹೊಡೆ-ಹೊಡೆದು ಹೊರಗೆ ಹಾಕುತ್ತೇವೆ ಎಂದನು. ಒಟ್ಟಿನಲ್ಲಿ ಈ ರೀತಿಯ ಬಹಳ ಮಾತುಕತೆಗಳಾದವು. ಮತ್ತು ನಾನಾ ರೀತಿಯ ಚರ್ಚೆಯ ಪ್ರತಿಫಲವಾಗಿ ಪಠಾಣರಿಗೆ ತಿಳಿಹೇಳಿ, ಅವರ ವಶದಲ್ಲಿದ್ದ ಕರೀಮಖಾನನ ಮಗ ಅಬ್ದುಲರಾವುಫ, ಮಲ್ಹಾರಿ ಪಂಡಿತ, ಹಕೀಮ ಷಮಸುದ್ದೀನ ಮತ್ತು ಅವನ ಜನರನ್ನು ಬಿಡಿಸಿಕೊಂಡು ಹಸನಖಾನನು ಅಬ್ದುಲಕರೀಮ ಖಾನನ ಮಗನನ್ನು ಮತ್ತು ಮಲ್ಹಾರಿ ಪಂಡಿತನನ್ನು ವೆಂಕಟಾದ್ರಿಗೆ ಭೆಟ್ಟಿ ಮಾಡಿಸಿ ಖಿಜರಖಾನನ ವಾಡೆಯಲ್ಲಿ ತಂದಿಟ್ಟರು.

ಈ ಗದ್ದಲದಲ್ಲಿ ಮಾಸೂದಖಾನನ ಕಡೆಯ ಕೋಟೆಯ ಒಳಗಡೆ ವ್ಯವಸ್ಥೆ-ಕೆಲಸಕಾರ್ಯಗಳು ನಡೆಯಲಿಲ್ಲ. ಆದ್ದರಿಂದ ನಗರದ ಬಾಗಿಲನ್ನು ಮುಚ್ಚಿ ನಿರುಪಾಯವಾಗಿ ವೇಳೆ ಕಳೆಯುತ್ತಿದ್ದರು.

### ೧೯. ಚಿಂತೋ ಚಿಮಣಾಜಿ ಎಂಬ ಬಹುದೊಡ್ಡ ಕುತಂತ್ರ ಬ್ರಾಹ್ಮಣನಿಂದ ನಗರದ ಜನತೆಯ ಮೇಲೆ ಬಲಾತ್ಕಾರ ಅವ್ಯವಸ್ಥೆ :

ಅಲ್ಲಾನ ಸಾಮರ್ಥ್ಯವು ಬಹಳ ಚಮತ್ಕಾರಿಕ ಕೆಲಸವನ್ನು ಮಾಡುತ್ತಿರುತ್ತದೆ. ಯಾಕೆಂದರೆ, ವಿಜಾಪುರ ನಗರದ ಕೋಟೆಯ ಒಳಗೆ ಇರುತ್ತಿದ್ದ ಜನರು ಪಠಾಣ ಜನರ ಉಪದ್ರವಗಳಿಂದ ಪಾರಾಗಿ ಕೋಟೆಯ ಆಶ್ರಯದಲ್ಲಿ ಸುಖದಿಂದ ಇರಲು ಸಾಧ್ಯವಾಗಿತ್ತು. ನಿರ್ದಯಿ ಕಾಲಚಕ್ರದ ಮನದಲ್ಲಿ ಇದು ಕೂಡ ಸಹನವಾಗಲಿಲ್ಲ. ಆ ಕೋಟೆಯಲ್ಲಿನ ಜನರು ಸುಖದಿಂದ ಕೆಲವು ದಿನ ಕಳೆಯುವುದೂ ಅದಕ್ಕೆ ಬೇಕಾಗಿರಲಿಲ್ಲ. ಅದು ಆ ಜನರ ಮೇಲೂ ಅನೇಕ ಪ್ರಕಾರದ ಸಂಕಟ ತಂದಿತು. ಮಾಸೂದಖಾನನ ಹತ್ತಿರ ಹಣವಿರಲಿಲ್ಲ. ಖಾಸಗೀ ಸೈನ್ಯದ, ತರಬೇತಿದಾರರ, ಮತ್ತು ಬಾದಶಾಹಿ ಮಹಲಿನಲ್ಲಿಯ ಜನರ ದಿನಭತ್ಯೆಯನ್ನು ಕೊಟ್ಟು ಬರಲೂ ಕೈಯಲ್ಲಿರಲಿಲ್ಲ. ಅದರಿಂದ ಮಾಸೂದಖಾನನು ನಿರುಪಾಯನಾಗಿ ಗಾಬರಿಯಿಂದ ಚಿಂತಾಗ್ರಸ್ತನಾಗಿದ್ದನು.

ಬ್ರಾಹ್ಮಣನಾದ ಚಿಂತೋ ಚಿಮಣಾಜಿ ಎಂಬ ದುಷ್ಟನು ದೇವರ ಭಯವೂ ಇಲ್ಲದವನು, ಕುಲಘಾತುಕನು ಮನೆಮುಳುಗಿಸುವವನು, ವೆಂಕಟಾದ್ರಿಯ ಜೊತೆಗೆ ಸಖ್ಯ ಮಾಡಿಕೊಂಡು ಮಾಸೂದಖಾನನ ಭೆಟ್ಟಿಯಾದನು. ನಗರದಲ್ಲಿಯ ಎಲ್ಲ ಜನರಿಗೂ ತೊಂದರೆ ಕೊಡುವ ಕೆಲಸವನ್ನು ವಹಿಸಿಕೊಂಡನು. ಪ್ರತಿಯೊಬ್ಬ ಮನುಷ್ಯನಿಂದ ಹಣ ತೆಗೆದುಕೊಳ್ಳುವ, ಬಲಾತ್ಕಾರ ಮಾಡುವ ರೂಢಿ ಪ್ರಸಿದ್ಧವೇ ಆಗಿದೆ. ಆ ರೂಢಿಯಂತೆ, ಎಲ್ಲರಿಗೂ ತೊಂದರೆ ಕೊಡ ಹತ್ತಿದ್ದನು. ಮೊದಲು ಹಸನಖಾನ ಪೀಲಂಗದಾರ, ಅಂದರೆ ಸಾಕಿದ ಸಿಂಹಗಳನ್ನು ನೋಡಿಕೊಳ್ಳುವ ಕೆಲಸದವನು, ಮಿರ್ಜಾ ಮಾತುಲ್ಲಾ, ಮೀರ ಅಬ್ದುಲ ಕಾಸಮ ತಂದೆ ಖಾನ ಮಹಮ್ಮದ ಕರೀಮ, ಧರ್ಮಾಜಿ ಪಂಡಿತ ಮತ್ತು ಭವಾನಿ ಸಿಂಪಿಯ ಮಗ ಈ ಎಲ್ಲರನ್ನೂ ಹಿಡಿದು ಅವರನ್ನು ಹೊಡೆದು ಬಡಿದು ಅವರ ಶಕ್ತಿ ಮೀರಿ ಹಣವನ್ನು ಕೊಡುವಂತೆ ಕೋರಿದನು. ಆರು ಬಜಾರುಗಳಲ್ಲಿಯ ಗಾಣಿಗರು(ತೇಲಿ) ಮತ್ತು ಧಾನ್ಯ ವರ್ತಕರು ಈ ಎಲ್ಲ ಸಣ್ಣ ಪುಟ್ಟ ವ್ಯಾಪಾರ ಮಾಡುವ ಜನರ ಮೇಲೆ ಬಹಳ ಹಣದ ಕರವನ್ನು ಕೂಡಿಸಿದನು. ಹೀಗೆಯೇ ಎಲ್ಲ ಮುಸಲ್ಮಾನ ಜನರು ಮತ್ತು ಹಿಂದುಗಳು, ಸೌದಾಗರರು ಮತ್ತು ಎಲ್ಲ ಜನರನ್ನು ಸಂಕಟದಲ್ಲಿ ಕೆಡವಿ ಬಲಾತ್ಕಾರದಿಂದ ಹಣವನ್ನು ಹರಣ ಮಾಡಹತ್ತಿದನು.

ಅವನ ಬಲಾತ್ಕಾರದ ಕೈ ಎಷ್ಟರವರೆಗೆ ಮುಂದಿತ್ತೆಂದರೆ, ದಾರಿಯಲ್ಲಿ ಹೊರಟ ಹೆಣ್ಣು, ಗಂಡುಗಳು, ಅವರು ರಸ್ತೆಯಲ್ಲಿ ಬಜಾರದಲ್ಲಿ ಭೆಟ್ಟಿಯಾದರೆ ಸಾಕು, ಅವರ ಮೈಮೇಲಿನ ತುಸುವೆ ವಸ್ತ್ರಗಳು ಅಥವಾ ಅವರ ಹತ್ತಿರ ತುಸು ಸಾಮಾನುಗಳು ಇದ್ದುದು ಕಂಡರೆ ಸಾಕು, ಏನಾದರೊಂದು ನೆಪದಿಂದ ಅವರನ್ನು ಹಿಡಿಯುತ್ತಿದ್ದನು. ಅವರಿಂದ ಏನಾದರೂ ತೆಗೆದುಕೊಳ್ಳದ ಹೊರತು ಆ ಜನರು ಇವನ ಕೈಯಿಂದ ಪಾರಾಗುವುದು ಸಾಧ್ಯವಿರಲಿಲ್ಲ. ಬಹುತೇಕ ಜನರು ಈ ಜಬರದಸ್ತ ಬ್ರಾಹ್ಮಣನ ಉಪದ್ರವದಿಂದ ಮತ್ತು ಅವನು ಕೇಳಿದಷ್ಟು ಹಣವನ್ನು ಕೊಡುವ ಶಕ್ತಿ ಇಲ್ಲದ್ದರಿಂದ ಅತಿ ಚಿಂತಾಗ್ರಸ್ತರಾಗಿ ತಮ್ಮ ಜೀವನಾಧಾರದ ಮೇಲೆ ನೀರು ಬಿಟ್ಟರು. ಅರ್ಥಾತ್ ಮನೆ-ಮಾರು ಬಿಟ್ಟು ಹೊರಟು ಹೋದರು.

ಸಣ್ಣ ಪುಟ್ಟ ವ್ಯಾಪಾರ ಮಾಡುತ್ತಿದ್ದ ಹಸನಖಾನ ಚಿತೇವಾನ ಮತ್ತು ಹಕೀಮ ಷಮಸುದ್ದೀನಖಾನ ಇವರಿಂದಲೂ ಇದೇ ರೀತಿಯಿಂದ ೭೫ ಸಾವಿರ ಹೊನ್ನುಗಳನ್ನು ತೆಗೆದುಕೊಂಡನು. ಈ ಬಲಾತ್ಕಾರ, ಬೇದಾದತನವು ಎಲ್ಲಿಯವರೆಗೆ ಹೋಗಿ ಮುಟ್ಟಿತೆಂದರೆ, ಒಬ್ಬ ಬ್ರಾಹ್ಮಣನು ಒಂದು ಹೊನ್ನು ಮೌಲ್ಯದ ಮಾವಿನ ಹಣ್ಣುಗಳನ್ನು ಖರೀದಿಸಿ ಮನೆಗೆ ತರುತ್ತಿದ್ದನು. ಆ ಬ್ರಾಹ್ಮಣನನ್ನು ಚಿಂತೋ ಚಿಮಣಾಜಿಕಡೆಯ ಜನರು ದಾರಿಯಲ್ಲೇ ಹಿಡಿದು ಕರೆದುಕೊಂಡು ಹೋದರು. 'ನೀನು ಮನೆಯಲ್ಲಿ ಒಬ್ಬನೇ ದರಿದ್ರ ಬ್ರಾಹ್ಮಣನಾಗಿಯೂ ಇಷ್ಟೊಂದು ಹಣ್ಣುಗಳನ್ನು ಖರೀದಿ ಮಾಡಿದ ಕಾರಣವೇನು? ಇವುಗಳನ್ನು ಯಾರಿಗೆ ಕೊಡುತ್ತೀ? ಎಲ್ಲಿದ್ದಾರೆ? ಎಂದೆಲ್ಲ ಕೇಳಿ, ಆತನ ಈ ಅಪರಾಧಕ್ಕಾಗಿ ಅವನಿಂದ ಐವತ್ತು ಹೊನ್ನುಗಳನ್ನು ತೆಗೆದುಕೊಂಡು ಬಿಡುಗಡೆ ಮಾಡಿದರು. ಇನ್ನೊಬ್ಬ ಗೃಹಸ್ಥ ಎರಡು ಹೂನ್ನುಗಳ ಜೋಳವನ್ನು ಖರೀದಿಸಿ ತನ್ನ ಮನೆಗೆ ತೆಗೆದುಕೊಂಡು ಹೋಗುತ್ತಿದ್ದನು. ಅವನನ್ನೂ ಹಿಡಿದರು. ಅವನಿಗೆ 'ನಿನ್ನ ಮನೆಯಲ್ಲಿ ಎರಡು ಇಲ್ಲವೆ ಮೂರು ಸೇರಿಗಿಂತ ಅಧಿಕ ಖರ್ಚು ಇರಲಿಕ್ಕಿಲ್ಲ. ಇಷ್ಟಿದ್ದು ಅನೇಕ ಪಲ್ಲ ಜೋಳವನ್ನು ಏಕೆ ಖರೀದಿಸಿದಿ? ಎಂದು ಹೇಳಿ ಆತನ ಅಪರಾಧಕ್ಕಾಗಿ ಆರು ಹೊನ್ನುಗಳನ್ನು ತೆಗೆದುಕೊಂಡರು.

ಚಿಂತೋ ಚಿಮಣಾಜಿಯ ಜನ ಇಷ್ಟೊಂದು ಬಲಾತ್ಕಾರ, ಅನ್ಯಾಯ ಮಾಡುತ್ತಿದ್ದರೆ ಬೇರೆ ಕಡೆಗೆ ಸೈನ್ಯದಲ್ಲಿಯ ಜನರು ಮತ್ತು ಬೇರೆ ಅನೇಕ ಧೂರ್ತ ಜನರು ನಾಲ್ಕೂ ನಿಟ್ಟನಿಂದ ಬಲಾತ್ಕಾರ ಮಾಡುವ ಮುಖ್ತಾರಿಯನ್ನೆ ಹಿಡಿದಿದ್ದರು. ಅವರೆಲ್ಲ ತಂತಮ್ಮ ದಿನಗೂಲಿಗಾಗಿ ಯಾರ ಹತ್ತಿರ ಹಣ ಇದೆಯೆಂದು ಸಂಶಯಬಂದರೆ ಸಾಕು ಅವರನ್ನು ಹಿಡಿದು ಬಡಿಗೆಗಳಿಂದ ಹೊಡೆದು ಅವರಿಂದ ಹಣ ಕಿತ್ತುತ್ತಿದ್ದರು. ಬಹಳ ಚಮತ್ಕಾರಿಕ ಸಮಯ ಬಂದಿತ್ತು. ಯಾಕೆಂದರೆ ನಗರದ ಹೊರಗೆ ಪಠಾಣರ ಗದ್ದಲ ಆ ರೀತಿಯಾಗಿ ನಡೆದಿದ್ದರೆ, ಕೋಟೆಯ ಒಳಗಡೆಗೆ ಚಿಂತೋ ಚಿಮಣಾಜಿಯ ಬಲಾತ್ಕಾರ, ಆತನ ಜನರ ಅನ್ಯಾಯ ಇವುಗಳೆಲ್ಲ ಕೂಡಿ ಜನರ ಮೇಲೆ ಬಹು ದೊಡ್ಡ ಆಪತ್ತು, ದೇವರ ಶಾಪ ಹಾಗೂ ಬಾದಶಾಹಿ ಬಲಾತ್ಕಾರದ ಮಳೆ ಬೀಳುತ್ತಿತ್ತು. ಸಾಕಷ್ಟು ಜನರು, ಯಾರಲ್ಲಿ ಶಕ್ತಿ ಇತ್ತೋ ಅವರು ತಮ್ಮ ಹೆಂಡಿರು-ಮಕ್ಕಳನ್ನು, ಮನೆಯ ಸಾಮಾನುಗಳನ್ನು ತೆಗೆದುಕೊಂಡು ಪರ ಊರಿಗೆ ಹೊರಟು ಹೋದರು. ಇನ್ನು ಕೆಲವು ಜನರು ಹೆಂಡಿರು ಮಕ್ಕಳು ಮನೆ ಮಾರುಗಳನ್ನು ಬಿಟ್ಟು ಹೋದರು. ಈ ದಂಗೆ ಮತ್ತು ಗದ್ದಲದಲ್ಲಿ ವಿಜಾಪುರದ ಅರ್ಧ ಜನವಸತಿ ಎದ್ದು ಹೋಗಿ ಅರ್ಧ ಊರು ಖಾಲಿ ಬಿತ್ತು.

ಒಂದು ಹೇಳಿಕೆಯ ಪ್ರಕಾರ ಸನ್ ೧೧೭೦ ಅಂದರೆ ಕ್ರಿ.ಶ. ೧೭೫೭ರಲ್ಲಿ ಜರತಾರಿ ರೇಶ್ಮಿಯ ನೇಕಾರ ಜಾತಿಯವನು ಕರ್ನಾಟಕದಿಂದ ತಿರುಗುತ್ತ ಇಲ್ಲಿಗೆ ಬಂದಿದ್ದನು. ಆತನಿಗೆ 'ನೀನು ಯಾವ ಜಾತಿಯವನು? ಮತ್ತು ಯಾವ ಕುಲದವನು' ಎಂದು ಕೇಳಿದಾಗ ಆತ ಹೇಳಿದ "ನಾನು ಮೂಲದಲ್ಲಿ ಪೂರ್ವಾರ್ಜಿತ ಹಕ್ಕಿನಿಂದ ವಿಜಾಪುರದವನು. ವಿಜಾಪುರದಲ್ಲಿ ಬಲಾತ್ಕಾರ ಮತ್ತು ಅನ್ಯಾಯಗಳು ಬಹಳ ನಡೆದಾಗ ನನ್ನ ಅಜ್ಜನು ವಿಜಾಪುರವನ್ನು ಬಿಟ್ಟು ಹೋಗಿ ಕರ್ನಾಟಕದಲ್ಲಿ ಬಂದು ಇದ್ದನು. ಹೀಗೆಂದು ನಾನು ನನ್ನ ಅಜ್ಜನ ಬಾಯಿಂದ ಕೇಳಿದ್ದೆ. 'ಆ ದಿನಗಳಲ್ಲಿ ಬಲಾತ್ಕಾರ ಮತ್ತು ಅನ್ಯಾಯಗಳು ಎಷ್ಟರಮಟ್ಟಿಗೆ ನಡೆಯುತ್ತಿತ್ತೆಂದರೆ ನಾನು ಮೇಲಿಂದ ಮೇಲೆ ಹಲವಾರು ಸಲ ಅಪರಾಧಕ್ಕಾಗಿ ಖಂಡಣೆಯನ್ನು ಕೊಡುತ್ತ ದಣಿದು ಹೋದೆ. ನನ್ನ ಜೀವಕ್ಕೇ ಆಪತ್ತು ಬಂದಿತು. ಕೊನೆಗೆ ಒಂದು ದಿನ ಆ ಜನರು ನನ್ನಿಂದ ಏಳನೆಯ ಸಲ ವಸೂಲು ಮಾಡಿದ ದಿನ ನಾನು ವಿಜಾಪುರ ಬಿಟ್ಟು, ನನ್ನ ಮನೆ-ಮಾರನ್ನೆಲ್ಲ ಬಿಟ್ಟು ಮುಸಾಫಿರನಾಗಿ ಹೊರಟು ಬಂದು ಬಿಟ್ಟೆ.' ಎಂದು ನನ್ನ ಅಜ್ಜ ಹೇಳುತ್ತಿದ್ದನು. ಅಲ್ಲದೆ ನನ್ನ ಅಜ್ಜನಿಂದ

ಕೇಳಿದಂತೆ. ವಿಜಾಪುರದಲ್ಲಿ ಜರತಾರೀರೇಶ್ಮಿ ನೇಕಾರರಿಕೆಯ ಏಳುನೂರು ಕಾರಖಾನೆಗಳಿದ್ದವೆಂದೂ, ಆತ ಅವುಗಳಲ್ಲೊಂದರಲ್ಲಿ ಮುಖ್ಯ ಕೆಲಸಗಾರನಾಗಿದ್ದನೆಂದೂ ಕೇಳಿದ್ದೆ".

## ೨೦. ಮಾಸೂದಖಾನ ಮತ್ತು ಷರ್ಜಾಖಾನನ ಮಧ್ಯ ವಿರಸ :

ಈ ಸಂಕಟಗಳು ಇನ್ನೂ ಪೂರ್ತಿಯಾಗಿ ಶಾಂತವಾಗಿರಲಿಲ್ಲ. ಅಂಥದ್ದರಲ್ಲಿಯೇ ಅಡ್ಡದಾರಿಯ ಕಾಲಚಕ್ರವು ಈ ನಗರದ ಬಡಬಗ್ಗರ ಮೇಲೆ ಇನ್ನೊಂದು ಸಂಕಟವನ್ನು ಜಗ್ಗಿ ತಂದಿತು. ಮೀಯಾ ಮಾಸೂದಖಾನ ಮತ್ತು ಸಯ್ಯದಮಖದುಮ ಷರ್ಜಾಖಾನರ ಮಧ್ಯೆ ವಿರಸ ಹುಟ್ಟಿತು. ಆಗ ಒಳಸಂಚುಗಾರರು, ಕೆಲಸಕೆಡಿಸುವವರು ಈ ಉಭಯತರ ಮಧ್ಯದ ವಿರಸ ಮತ್ತು ಶತ್ರುತ್ವದ ಅಗ್ನಿಯನ್ನು ಇನ್ನಷ್ಟು ಪುಟಗೊಳಿಸುತ್ತಿದ್ದರು. ಷರ್ಜಾಖಾನನು ಮಾಸೂದಖಾನನ ಮೇಲೆ ಕತ್ತಿ ಮಸೆಯ ಹತ್ತಿದನು. ಸೈನ್ಯ ಸಂಗ್ರಹಿಸಿ ಭೀಮೆಯ ಆ ಬದಿಯ ಪ್ರದೇಶವನ್ನು ವಶಪಡಿಸಿಕೊಂಡನು. ಮತ್ತಷ್ಟು ಸೈನ್ಯವನ್ನು ತೆಗೆದುಕೊಂಡು ವಿಜಾಪುರಕ್ಕೆ ಬಂದನು. ಬಾದಶಹನ ನೌಕರಿಯಲ್ಲಿಯ ಜನ ಮತ್ತು ನಿರುದ್ಯೋಗಿ ಜನರನ್ನು ತನ್ನತ್ತ ಸೆಳೆದು ಅವರಿಗೆ ಬಹಳ ಆಶೆ ತೋರಿಸಿ, ಶಿವಾಜಿಯೊಂದಿಗಿನ ಸ್ನೇಹದ ಬೆದರಿಕೆ ಹಾಕಿದನು. ಯೋಗ್ಯ-ಅಯೋಗ್ಯ ಎರಡೂ ರೀತಿಯ ಕೆಲಸಗಳನ್ನು ಮಾಡಹತ್ತಿದನು. ವೆಂಕಟಾದ್ರಿ ಮತ್ತು ಮುರಾರಿ ಉಭಯತರನ್ನು ಹಿಡಿದು ಬಂಧಿಸಬೇಕು ಇಲ್ಲವೆ ಅವರನ್ನು ಕೊಲ್ಲಬೇಕು ಎಂಬ ವಿಚಾರದ ಬೆನ್ನು ಹತ್ತಿದನು. ಈ ಮಧ್ಯ ಷರ್ಜಾಖಾನನ ವಿಶ್ವಾಸಿಕ ಮೀರೀಶಾಹನು ಉಭಯತರ ಒಳಿತಿಗಾಗಿ ಮಾಸೂದ ಖಾನ ಹಾಗೂ ಷರ್ಜಾಖಾನನ ಮಧ್ಯ ಒಪ್ಪಂದ ಮಾಡಿಸಿದನು. ಮಾಸೂದಖಾನನೂ ತನ್ನ ವೈರಭಾವವನ್ನು ಬಿಟ್ಟು, ಷರ್ಜಾಖಾನನು ಬಯಸಿದ ಇಲಾಖೆಗಳ ಮೊಕಾಸಾ ಜಹಗೀರಿಯನ್ನು ಬಾದಶಹನ ಆಜ್ಞೆಮೂಲಕ ಕೊಡಿಸಿದನು. ಆದರೆ ಕುತಂತ್ರಗಳು ಹಾಗೂ ಕೆಟ್ಟದ್ದನ್ನೇ ಮಾಡುವ ಜನರು ಷರ್ಜಾಖಾನನ ಹತ್ತಿರ ಇದ್ದರು. ಅವರು ಮೀರೀಶಾಹನ ಮೇಲಿನ ಹಗೆತನದಿಂದ ಹೊಸ ಸಂಕಟವನ್ನು ಎಬ್ಬಿಸಿ, ಷರ್ಜಾಖಾನ ಮತ್ತು ಮಾಸೂದಖಾನರ ಮಧ್ಯದ ಒಪ್ಪಂದವನ್ನು ಮುರಿದು ಬಿಟ್ಟರು. ಹೀಗೆ ಮೀರೀಶಾಹನ ಮಧ್ಯಸ್ಥಿಕೆಯಿಂದ ಉಭಯತರ ಮಧ್ಯ ಆದ ಒಪ್ಪಂದಗಳು ಆ ದುಷ್ಟಕೂಟದಿಂದ ಮೂರು ಸಲ ಮುರಿದು ಬಿದ್ದವು.

ಇದರಿಂದ ಮಾಸೂದಖಾನನು ತುಂಬ ಬೇಸತ್ತನು. ನಾಲ್ಕು ನಿಟ್ಟಿನಿಂದಲೂ ಬರುವ ಸಂಕಟಗಳಿಂದ ತೊಂದರೆಗೀಡಾದನು. ಬಹಳ ಪ್ರಯತ್ನ ಮಾಡಿ ಒಂದು ಸಂಕಟವನ್ನು ನಿವಾರಿಸುವಷ್ಟರಲ್ಲಿ ಇನ್ನೊಂದು ಎದ್ದು ನಿಲ್ಲುತ್ತಿತ್ತು. ಅಜೀಜ ಅಂಬರಖಾನ ಎಂಬವನು ಎರಡು-ಮೂರು ಸಾವಿರ ಸೈನ್ಯವನ್ನು ಸಂಗ್ರಹಿಸಿ ಸಿಂಧನೂರಿನಲ್ಲಿ ಬಹುದೊಡ್ಡ ದಂಗೆಯ ಧ್ವಜವನ್ನೇ ನೆಟ್ಟನು. ಸಿಂಧನೂರಿನ ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡನು. ಬಹುತೇಕವಾಗಿ ಮಾಸೂದಖಾನನ ಇಲಾಖೆಯ ವರೆಗೂ ಹೋಗಿ ಅಲ್ಲಿ ದಂಗೆಯನ್ನು ಪ್ರಾರಂಭಿಸಿದನು. ಆ ಮಹಾ ಸಂಕಟದ ಸಮಯದಲ್ಲಿ ಶಿವಾಜಿಯು ತನ್ನ ದುರ್ನಡತೆಯಿಂದ ತೊಂದರೆಗಳನ್ನು ಎಬ್ಬಿಸಿದ ಮತ್ತು ಏನೆಲ್ಲ ದುಷ್ಕರ್ಮಗಳನ್ನು ಮಾಡಿದ. ವಿಜಾಪುರ ನಗರದ ಸುತ್ತಮುತ್ತಲಿನ ಬೀಳಗಿ, ಜಮಖಂಡಿ ಮತ್ತು ಯಾದವಾಡದ ವರೆಗೂ ಅಲ್ಲಿಯ ಎಲ್ಲ ಮಹಾಲುಗಳಲ್ಲಿ ತನ್ನ ಠಾಣೆಗಳನ್ನು ಹಾಕಿ ಮಹಾಲೋಮಹಲುಗಳ ವಸೂಲಿಯನ್ನು ಮಾಡುತ್ತಿದ್ದನು. ಆದೋನಿಯ ಪ್ರದೇಶಗಳಿಗೆ ಸೈನ್ಯವನ್ನು ಕಳಿಸಿ ಅಲ್ಲಿಯ ಎಲ್ಲ ಪ್ರದೇಶಗಳಲ್ಲಿ ಲೂಟಿ ಮಾಡಹತ್ತಿದನು. ಆದಿಲಶಾಹನ ಗಡಿಗಳಲ್ಲಿ ನಾಲ್ಕು ನಿಟ್ಟಿನಲ್ಲೂ ದಂಗೆ ಮತ್ತು ಗದ್ದಲಗಳನ್ನು ಎಬ್ಬಿಸಿದನು.

ಆನಂದ ಮತ್ತು ಧರ್ಮಾಜಿ ಇವರು ನಗರದಲ್ಲಿದ್ದಾಗ ಅನೇಕ ಜನರು ಈ ಉಭಯತರನ್ನು ರಹಸ್ಯವಾಗಿ ಭೆಟ್ಟಿಯಾಗಿ ಮಾಸೂದಖಾನ ಮತ್ತು ವೆಂಕಟಾದ್ರಿಯನ್ನು ಮುಗಿಸಬೇಕೆಂದು ಹೊಂಚು ಹಾಕಿದರು. ಸುದ್ದಿ ಹತ್ತಿದ ವೆಂಕಟಾದ್ರಿಯು ಎಚ್ಚರಿಕೆ ವಹಿಸಿ ಈ ವಿಷಯವನ್ನು ಮಾಸೂದಖಾನನಿಗೆ ತಿಳಿಸಿದನು. ಆಗ ಮಾಸೂದಖಾನನು ತಕ್ಷಣ ಜಾಗೃತನಾಗಿ ಕಾರ್ಯಪ್ರವೃತ್ತನಾಗಿ ಅವರನ್ನೆಲ್ಲ ಹಿಡಿದು ಸೆರೆಮನೆಗೆ ಅಟ್ಟಿದನು.

ಸಿದ್ಧಿ ನುಸ್ರತುಲ್ಮುಲ್ಕ ಸುಂದರನು ಮಾಸೂದಖಾನನ ಹೆಂಡತಿ ಮಕ್ಕಳನ್ನು, ಮನೆಯವರನ್ನು, ಖಜೀನೆ ಮತ್ತು ಸಾಮಾನು ಸರಂಜಾಮು ಸಹಿತವಾಗಿ ಆದೋನಿಯಿಂದ ವಿಜಾಪುರಕ್ಕೆ ತರುತ್ತಿದ್ದನು. ದಾರಿಯಲ್ಲಿ ರಾಯಚೂರಿಗೆ ಬಂದಾಗ ಅಲ್ಲಿಯ ಕಿಲ್ಲೇದಾರ ಆಕಾ ಖುಸ್ರೋನು ನುಸ್ರತುಲ್ಮುಲ್ಕನನ್ನು ಕೊಂದು ಮಾಸೂದಖಾನನ ಮನೆಮಂದಿ ಹಾಗೂ ಖಜೀನೆ ಸಹಿತವಾಗಿ ರಾಯಚೂರು ಕೋಟೆಯಲ್ಲಿಟ್ಟನು. ಈ ಮೊದಲೆ ಮಾಸೂದಖಾನನ ಮನಸ್ಸಿನಮೇಲೆ ಅನೇಕ ಚಿಂತೆಗಳ ಭಾರ ಬಿದ್ದಿತ್ತು. ಎಲ್ಲ ಚಿಂತೆ ದುಃಖಗಳ ಭಾರಕ್ಕಿಂತ ಹೆಂಡಿರು ಮಕ್ಕಳ ಬಂಧನದ ಅಧಿಕ ಭಾರವಾದ ದುಃಖದ ಅಗ್ನಿಕುಂಡವೇ ಬಂದು ಬಿದ್ದಿತು.

### *೨೧. ಆಕಾ ಖುಸ್ರೋನ ಬಂಧನದಿಂದ ತನ್ನ ಹೆಂಡಿರು ಮಕ್ಕಳನ್ನು ಬಿಡಿಸಿಕೊಳ್ಳಲು ಮಾಸೂದಖಾನನು ಬಾದಶಾಹ ಬೀಬಿಗೆ ಫಿರ್ಯಾದಿ ಕೊಟ್ಟದ್ದು. ಮತ್ತು ಅವಳು ತಾವೂಸಮಾಳನ್ನು ರಾಯಚೂರಿಗೆ ಕಳಿಸಿದ್ದು :*

ಆಕಾ ಖುಸ್ರೋನು ಮಾಸೂದಖಾನನ ಹೆಂಡತಿ ಮಕ್ಕಳನ್ನು ಸಾಮಾನು ಸರಂಜಾಮು ಸಹಿತವಾಗಿ ದಾರಿಯಲ್ಲೇ ಹಿಡಿದು ರಾಯಚೂರಿನ ಕೋಟೆಯಲ್ಲಿ ಬಂಧಿಸಿಟ್ಟನು. ಈ ಸುದ್ದಿ ತಿಳಿದನಂತರ ಮಾಸೂದಖಾನನು ಮೂರ್ಛೆ ಬಿದ್ದುಬಿಟ್ಟನು. ತುಂಬ ಗಾಬರಿಯಿಂದ ಶಕ್ತಿಹೀನನಾದನು. ತನ್ನ ಹೆಂಡತಿ ಮಕ್ಕಳನ್ನು ಬಿಡಿಸಿಕೊಳ್ಳಲು ಏನೆಲ್ಲ ಉಪಾಯ, ವಿಚಾರಗಳನ್ನು ಮಾಡಿದರೂ ಉಪಯೋಗವಾಗುವುದಿಲ್ಲ ಎಂಬುದನ್ನು ತಿಳಿದನು. ಯಾವ ಯುಕ್ತಿಯೂ ನಡೆಯಲಾರದೆಂದು ಕಂಡ ಮಾಸೂದಖಾನನು ತಕ್ಷಣ ಸಿಕಂದರ ಬಾದಶಹನ ಅಕ್ಕ ಸುಲ್ತಾನಾ ಶಹರಬಾನು ಊರ್ಫ ಶಾಹಾ ಬೀಬಿಯನ್ನು ಕಾಣಲು ಅವಳ ವಾಡೆಗೆ ಹೋದನು. ಬಾದಶಾಹಾ ಬೀಬಿ ಹೆಣ್ಣುಮಗಳಾಗಿದ್ದರೂ ಬಹಳ ಬುದ್ಧಿವಂತಳೂ, ಧೀರಳೂ ಆಗಿದ್ದಳು. ಬಾದಶಹನ ಎಲ್ಲ ಸೇವಕ ಜನರು ಕಾರಭಾರಿ ಮಂಡಳಿ ಮತ್ತು ವಾಡೆಯಲ್ಲಿಯ ಎಲ್ಲ ಜನರೂ ಬಾದಶಹ ಬೀಬಿಯನ್ನು ಗೌರವಿಸುತ್ತಿದ್ದರು. ಅವಳ ಚಾಕರಿಯಲ್ಲಿದ್ದು, ಆದೇಶಗಳನ್ನು ಗೌರವದಿಂದ ಪಾಲಿಸುತ್ತಿದ್ದರು.

ಅವಳ ವಾಡೆಯ ಬಾಗಿಲಲ್ಲಿ ಹೋಗಿ ಮಾಸೂದಖಾನನು ಫಿರ್ಯಾದನ್ನು ಕೊಡುತ್ತ ಬಹಳ ಕಳಕಳಿಯಿಂದ ದೀನನಾಗಿ ವಿಷಯವನ್ನು ತಿಳಿಸಿದನು. "ಈ ಸೇವಕನಾದ ನಾನು ಮನೆಮಾರು ಬಿಟ್ಟು ಬಂದಂದಿನಿಂದ ನಿಮ್ಮ ಸೇವೆಯಲ್ಲೆ ದಾಖಲಾಗಿದ್ದೇನೆ. ಅಂದಿನಿಂದ ಒಂದು ದಿನವೂ ಕೂಡ ಸುಖ-ವಾಗಿ ರುಚಿಮಾಡಿ ಅನ್ನವನ್ನು ಉಂಡಿಲ್ಲ. ಸುಖದಿಂದ ನೀರನ್ನು ಕೂಡ ಕುಡಿದಿಲ್ಲ, ಒಂದು ಗಳಿಗೆ ಅಥವಾ ಪಳಕೂಡ ಸ್ವಸ್ಥವಾಗಿ ಕುಳಿತಿಲ್ಲ. ನಿದ್ರೆ ಮಾಡಿಲ್ಲ. ದಿನರಾತ್ರಿಯೆಲ್ಲ ಗಾಬರಿಯಿಂದ, ಸಂಕಟದಲ್ಲೇ ಕಳೆದಿದ್ದೇನೆ. ಆ ಸಂಕಟದಲ್ಲಿ ಹೊಟ್ಟೆಗಾಗಿ ತುತ್ತು ಅನ್ನ, ತೊಡಲು ವಸ್ತ್ರ ಕೂಡ ಸಿಗದಂತಾಗಿದೆ.

ಸೈನಿಕರು-ಸಿಪಾಯಿಗಳ ದಿನಗೂಲಿಯನ್ನು ಕೊಟ್ಟು ಮುಕ್ತನಾಗಬೇಕೆಂದರೂ ನನ್ನ ಕೈಯಲ್ಲಿ ಹಣವಿಲ್ಲ. ಈ ನಾಲ್ಕು ನಿಟ್ಟಿನಿಂದಲೂ ಎದ್ದಿರುವ ಸಂಕಟದಿಂದ ಪಾರಾಗಲು ಸಹಾಯ ಪಡೆದು ಮುಕ್ತನಾಗಬೇಕೆಂದರೆ ಅಂಥ ಮಿತ್ರರಾಗಲೀ ಸಹಾಯ ಮಾಡುವವರಾಗಲಿ ನನಗೆ ಯಾರೂ ಇಲ್ಲ. ದಿನರಾತ್ರಿಯೆಲ್ಲ ದಂಗೆಗಳಿಂದ ಸಂಕಟಗಳಿಂದ ಕೂಡಿ ಎರಡು ದಿನ ಪುರಸತ್ತು ಕೂಡ ದೊರೆತಿಲ್ಲ. ಶಿವಾಜಿಯ ಆದಿಲಶಾಹಿ ರಾಜ್ಯವನ್ನು ನುಂಗಲು ಕುಳಿತಿದ್ದಾನೆ. ಸರಕಾರದಲ್ಲಿಯ ಪ್ರಾಮಾಣಿಕ ಕೆಲಸಗಾರರು ಕೂಡ ದಾಯಾದಿಗಳಂತೆ ಕಚ್ಚಾಡುತ್ತಿದ್ದಾರೆ. ನಿತ್ಯ ಹೊಸ ಸಂಕಟಗಳನ್ನು ಎಬ್ಬಿಸುತ್ತಿದ್ದಾರೆ. ಆದ್ದರಿಂದ ದಿನವೂ ಬೆಳಗಿನಿಂದ ಸಾಯಂಕಾಲದವರೆಗೆ ಮತ್ತು ಸಾಯಂಕಾಲದಿಂದ ಬೆಳಗಿನ ವರೆಗೆ ನಾನು ಸಂಕಟ ಮತ್ತು ಚಿಂತೆಯಲ್ಲಿ ಮುಳುಗಿದ್ದು ಕ್ಷಣಮಾತ್ರದ ವಿಶ್ರಾಂತಿಯ ಸ್ಮರಣೆ ಇಲ್ಲ. ಹೀಗಿರುವಾಗ ನನ್ನಿಂದಾದ ಯಾವ ಅಪರಾಧಕ್ಕಾಗಿ ನನ್ನ ಹೆಂಡಿರು ಮಕ್ಕಳು ಬಂಧಿತರಾಗಿದ್ದಾರೆ? ಅದರಿಂದಾಗಿ ನನ್ನ ಮರ್ಯಾದೆ ಹೋಯಿತು. ನಿರಂತರ ತಿರುಗುತ್ತಿರುವ ಕಾಲಚಕ್ರವು ನನ್ನ ಮೇಲೆ ದ್ವೇಷ ಸಾಧಿಸಿ ಮತ್ತು ಹಗೆತನದಿಂದ ತಿರುಗಿ ಬಿದ್ದು ನಾನಾ ಪ್ರಕಾರದ ಸಂಕಟಗಳನ್ನು ಮತ್ತು ತರತರದ ವಿಘ್ನಗಳನ್ನು ಎಬ್ಬಿಸಿ ನಿಲ್ಲಿಸಿದೆ. ಪ್ರತಿಕ್ಷಣ ಇವು ನನ್ನ ಜೀವನಾಡಿಗಳನ್ನು ಛೇಡಿಸುತ್ತಿವೆ. ಇಂಥ ಅವಮಾರ್ಯಾದೆಯಿಂದ, ಹೇಡಿತನದಿಂದ ಬಾಳುವುದಕ್ಕಿಂತ ಸಾಯುವುದೇ ಲೇಸು ಎನಿಸುತ್ತಿದೆ. ಖಾವಂದರಾದ ತಾವು ಈ ಸೇವಕನ ಸಂಕಟದ ಅವಸ್ಥೆಯ ಮೇಲೆ ಕೃಪೆ ದೋರಿ, ನನ್ನ ಪ್ರಾಣ ಉಳಿಸುವ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು ಮತ್ತು ನನ್ನ ಹೆಂಡಿರು ಮಕ್ಕಳ ಬಿಡುಗಡೆ ಯಾಗುವಂತೆ ತಾವು ಏನಾದರೊಂದು ಯುಕ್ತಿ ಮಾಡಬೇಕು. ಯಾರಾದರೂ ವಿಶ್ವಾಸಿಗಳಾದ ಹಿರಿಯರನ್ನು ತಮ್ಮ ಕಡೆಯಿಂದ ರಾಯಚೂರಿಗೆ ಕಳಿಸಿ ಅಲ್ಲಿಯ ಕಿಲ್ಲೇದಾರನ ಕೈಯಿಂದ ನನ್ನ ಹೆಂಡಿರು ಮಕ್ಕಳು, ಸಾಮಾನು ಸರಂಜಾಮು, ಸಂಪತ್ತನ್ನು ಬಿಡಿಸಿಕೊಂಡರೆ, ನನ್ನ ಜೀವ ಉಳಿಯುತ್ತದೆ ಮತ್ತು ಕೆಲವು ದಿನ ಸಂಸಾರ ಮಾಡುವೆ. ಈ ಕೃಪೆಗೆ ಮತ್ತು ಉಪಕಾರಕ್ಕೆ ನಾನು ಜೀವವಿರುವವರೆಗೂ ತಮ್ಮ ಚಾಕರಿಯಲ್ಲೇ ಇರುವೆನು. ಮತ್ತು ತಮ್ಮ ಸೇವೆಯಲ್ಲೆ ಜೀವ ಕೊಡುವೆನು. ಇಲ್ಲವಾದಲ್ಲಿ ನಾನು ಸಾಯುವುದೆಂದೇ ನಿರ್ಧರಿಸಿಕೊಂಡು ಬಂದಿದ್ದೇನೆ" ಎಂದು ವಿನಂತಿ ಮಾಡಿಕೊಂಡನು.

ಆಗ ಬಾದಶಾಹಾ ಬೀಬಿಯು ತನ್ನ ಪ್ರಾಮಾಣಿಕ ಸೇವಕನ ಮತ್ತು ತನ್ನ ಉಪ್ಪಿನಿಂದಲೇ ಬೆಳೆದ ಸೇವಕನ ದುಃಖವನ್ನು ಮನದಲ್ಲಿ ತಂದುಕೊಂಡು ಅದರ ಬಗ್ಗೆ ವಿಚಾರ ಮಾಡಿದಳು. ಮತ್ತು ಮಹಲಿನಲ್ಲಿದ್ದ ಬಹಳ ಬುದ್ಧಿವಂತಳೂ, ತಿಳುವಳಿಕೆ ಉಳ್ಳವಳೂ ಆದ ಹಿರಿಯ ಸೇವಕಿ ತಾವೂಸಮಾ ಎಂಬವಳನ್ನು ಕರೆದು ಆಜ್ಞಾ ಪತ್ರವನ್ನು ಆಕಾ ಖುಸ್ರೋನ ಹೆಸರಿನಲ್ಲಿ ಬರೆದುಕೊಟ್ಟು ಅವಳನ್ನು ರಾಯಚೂರಿಗೆ ಕಳಿಸಿದಳು. ಅಫಜಲಖಾನನ ಅಳಿಯ ಸಿದ್ದೀ ಆಲಮ್ ಮತ್ತು ವಾಡೆಯಲ್ಲಿ ಪರದೆಯ ಮೇಲಿನ ಕೆಲಸಗಾರ ಸಿದ್ದೀ ಯಾಕೂತ, ಮತ್ತು ಸಯ್ಯದ ದಹುರುಸ ಎಂಬವರನ್ನು ತಾವೂಸಮಾಳ ಜೊತೆ ಮಾಡಿ ಕಳಿಸಿದಳು. ಒಂದು ವೇಳೆ ಆಕಾ ಖುಸ್ರೋನು ಮಾಸೂದಖಾನನ ಹೆಂಡಿರು ಮಕ್ಕಳನ್ನು ಬಿಡಲು ತಯಾರಾಗದಿದ್ದರೆ, ನಿಮಗೆ ತಿಳಿದಂತೆ ಎಲ್ಲ ರೀತಿಯಿಂದಲೂ ಅವನಿಗೆ ತಿಳುವಳಿಕೆ ಹೇಳಿ ಕೆಲಸ ಮಾಡಬೇಕು. ಅದರಿಂದಲೂ ಕೆಲಸವಾಗದಿದ್ದರೆ ರಾಯಚೂರಿನ ಇಲಾಖೆಯಲ್ಲಿ ಎಷ್ಟೆಲ್ಲ ಪ್ರದೇಶಗಳಿವೆಯೋ ಅವುಗಳಲ್ಲಿ ಕಡೇಚೂರ, ಇಸಲಪುರ, ಇನವಾಲಪೂರ ಈ ನಾಲ್ಕು ಮಹಲುಗಳನ್ನು ಬಿಟ್ಟು, ಉಳಿದ ಎಲ್ಲ ಪ್ರದೇಶಗಳನ್ನು ಅವನ ವಶಕ್ಕೆ ಕೊಟ್ಟು, ಮಾಸೂದಖಾನನ ಹೆಂಡಿರು ಮಕ್ಕಳನ್ನು, ಮಾಲಮತ್ತೆ ಇತ್ಯಾದಿಗಳನ್ನು ಅವನ ಕೈಯಿಂದ ಬಿಡಿಸಿಕೊಂಡು ಬರಬೇಕು ಎಂದು ತಾಕೀದು ಮಾಡಿ ಹೇಳಿದಳು. ಅಲ್ಲದೆ ಬಾದಶಾಹಾ ಬೀಬಿಯು ಈ ವಿಷಯದಲ್ಲಿ ಷರ್ಜಾಖಾನ ಮತ್ತು ಸರ್ಫರಾಜಖಾನ ಕರ್ನೂಲಿಯಂಥ

ಕಾರಭಾರಿ ಮಂಡಳಿಗೂ ಆಜ್ಞೆ ಮಾಡಿದಳು. ಮತ್ತು ಅಬುಲಹಸನ ಕುತುಬಶಾಹನಿಗೂ ಪತ್ರ ಬರೆದು ಕಳಿಸಿದಳು.

ತಾವೂಸಮಾ ರಾಯಚೂರಿಗೆ ಹೋಗಿ ಮುಟ್ಟಿದಳು. ಅವಳ ಬೆನ್ನಹಿಂದೆಯೇ ಮೀರೀಶಾಹ ಷರ್ಜಾಖಾನರ ಕಡೆಯಿಂದ ಆನಂದರಾವ, ಸರ್ಫರಾಜಖಾನ, ಧರ್ಮಾಜಿ ಪಂಡಿತರು ಮತ್ತು ಕುತುಬಶಾಹನ ಕಡೆಯಿಂದ ಶ್ರೀನಿವಾಸರಾವ ಬಂದರು. ಇವರೆಲ್ಲರ ಬಹು ಚರ್ಚೆ ಮತ್ತು ಮಧ್ಯಸ್ಥಿಕೆಯಿಂದ ಆಕಾ ಖುಸ್ರೋನು ಮಾಸೂದಖಾನನ ಹೆಂಡತಿ ಮಕ್ಕಳನ್ನು, ಅವನ ಸಾಮಾನು ಸರಂಜಾಮು ಮತ್ತು ಮಾಲಮತ್ತೆಯನ್ನು ಕಿಂಚಿತ್ತನ್ನೂ ಇಟ್ಟುಕೊಳ್ಳದೆ ತಾವೂಸಮಾಳ ಜೊತೆಗೆ ಕೊಟ್ಟು ಕಳಿಸಿದನು. ಅವಳು ಅವರೊಂದಿಗೆ ಸುರಕ್ಷಿತವಾಗಿ ವಿಜಾಪುರಕ್ಕೆ ಬಂದು ಮುರಾರಿಬಾಗದಲ್ಲಿ ಬಂದು ಇಳಿದಳು. ಮರುದಿನ ಮಾಸೂದಖಾನನು ಸ್ವಾರ ಸಿಬ್ಬಂದಿಯನ್ನು ತಗೆದುಕೊಂಡು ಬಹಳ ವೈಭವದಿಂದ ಮುರಾರಿಬಾಗದವರೆಗೂ ಹೋಗಿ ತನ್ನ ಮನೆಯಮಂದಿಯನ್ನು ಮತ್ತು ತನ್ನ ಜನರನ್ನು ಸಾಮಾನು ಸರಂಜಾಮುಗಳೊಂದಿಗೆ ಕೋಟೆಯ ಒಳಗಡೆಗೆ ತಂದನು.

### *೨೨. ಮಾಸೂದಖಾನನು ಶಿವಾಜಿಯೊಂದಿಗೆ ಒಪ್ಪಂದ ಮಾಡಿಕೊಂಡಿದ್ದರಿಂದ ಮಾಸೂದಖಾನ ಮತ್ತು ಮೊಗಲರ ಮಧ್ಯ ವೈರತ್ವ :*

ಶಿವಾಜಿಯ ಗದ್ದಲ-ಗುಂಡಾಗಿರಿ ಬಹಳ ಆಗಿದ್ದಿತು. ಆದಿಲಶಾಹಿಯ ಇಡೀ ರಾಜ್ಯದ ತುಂಬ ಅವನ ದಂಗೆ-ಧಾಂದಲೆ ಇತ್ತು. ರಾಜ್ಯದ ಎಲ್ಲ ಬಡಬಗ್ಗರು ಮತ್ತು ಪ್ರಜೆಗಳಿಗೆ ಶಿವಾಜಿಯ ಪಿಶಾಚಿಯಂಥ ನಡತೆಯಿಂದ ಮತ್ತು ಅಯೋಗ್ಯ ವರ್ತನೆಯಿಂದ ಅನ್ನ-ನೀರು ನಿದ್ರೆಗಳಿಂದ ಕೂಡ ವಂಚಿತರಾಗಿದ್ದರು. ಶಿವಾಜಿಯ ಭಯದಿಂದ ಮತ್ತು ವರ್ಚಸ್ಸಿನಿಂದ ಈ ಭೂಮಿ ಕೂಡ ನಡುಗುತ್ತಿತ್ತು ಎಂದು ಅನಿಸುತ್ತಿತ್ತು. ಅವನ ದಂಗೆ-ಗುಂಡಾಗಿರಿಯು ಕಡಿಮೆಯಾಗದೆ ದಿನದಿಂದ ದಿನಕ್ಕೆ ಅಧಿಕವಾಗುತ್ತಲೆ ನಡೆದಿತ್ತು. ಜೊತೆಗೆ ಸಯ್ಯದ ಮಖದೂಮ ಷರ್ಜಾಖಾನ ಮೊದಲಾದ ದುಷ್ಟ ಜನರಿಂದ ಮಾಸೂದಖಾನನು ನಾಲ್ಕು ದಿಕ್ಕುಗಳಿಂದಲೂ ಸಂಕಟವನ್ನು ಎದುರಿಸುತ್ತ ಹುಚ್ಚನಂತಾಗಿದ್ದನು. ಧೈರ್ಯದಿಂದ ಎದುರಿಸುವುದಾಗಲೀ, ಸುಮ್ಮನೆ ಕೂಡುವುದಾಗಲೀ ಆಗುತ್ತಿರಲಿಲ್ಲ. ಉಪಾಯಗಳೆಲ್ಲ ನಿಷ್ಫಲವಾದವು. ಯಾವುದೋ ಒಂದು ಒಳ್ಳೆಯ ವಿಚಾರವೆಂದು ಪ್ರಾರಂಭಿಸಿದರೆ ಅದರಿಂದ ಕೆಟ್ಟ ಫಲವೇ ಪ್ರಾಪ್ತವಾಗುತ್ತಿತ್ತು. ಆದ್ದರಿಂದ ಮಾಸೂದಖಾನನು ನಿರುಪಾಯನಾಗಿ ಬಹಳೇ ಗಾಬರಿಯಾಗಿ ಮೊಗಲರೊಂದಿಗೆ ಮಾಡಿಕೊಂಡ ಕರಾರುಗಳನ್ನೆಲ್ಲ ಮರೆತು ಶಿವಾಜಿಯೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂದು ಹವಣಿಸಿದನು.

ದಿಲೇರಖಾನನಿಗೆ ಈ ವಿಷಯ ತಿಳಿದು ಈ ಒಪ್ಪಂದ ಯೋಗ್ಯವಲ್ಲವೆಂದು ಬಹಳೇ ತಿಳಿಹೇಳಿದನು. 'ಇದರಿಂದ ನಿನಗೆ ತುಂಬ ಕೆಟ್ಟದಾಗುತ್ತದೆ. ಯಾಕೆ ಧೈರ್ಯಗುಂದಿ ಈ ದಾರಿ ತುಳಿಯುತ್ತೀ? ಧೈರ್ಯದಿಂದ ಇರು ಧೈರ್ಯ ಬಿಡಬೇಡ, ಬಾದಶಹರ ಸಂಪೂರ್ಣ ಸೈನ್ಯವು ನಿನ್ನ ಸಹಾಯಕ್ಕಾಗಿ ಜೀವವನ್ನೇ ಅರ್ಪಿಸಲು ಸಿದ್ಧವಾಗಿದೆ. ಆದ್ದರಿಂದ ಈಗ ಆದಿಲಶಾಹಿಯ ಯಶಸ್ವೀ ಸೈನ್ಯದ ಆಧಾರದಿಂದ ಬೇರೆ ಬೇರೆ ತರಫಗಳಲ್ಲಿಯ ಶತ್ರುಗಳನ್ನು ಎದುರಿಸಲು ಬರುತ್ತದೆ ಮತ್ತು ಬಲಾತ್ಕಾರದಿಂದ ಶಿವಾಜಿಯ ಕೈಗೆ ಹೋದ ಪ್ರದೇಶಗಳನ್ನೆಲ್ಲ ಬಿಡಿಸಿಕೊಳ್ಳಬೇಕು, ಎಂದು ಮುಂತಾಗಿ ಮಲಿಕ ಬರಖುರದಾರ ಕಾಶ್ಮೀರಿ ಕೂಡ ಹೇಳಿದನು.

ಶಿವಾಜಿಯೊಂದಿಗಿನ ಸಖ್ಯದಿಂದ ಏನೆಲ್ಲ ಕೆಟ್ಟ ಪರಿಣಾಮ ಘಾತುಕತನವಾಗುತ್ತದೆಂಬುದನ್ನು ಮಾಸೂದಖಾನನ ಮನಸ್ಸಿಗೆ ತಟ್ಟುವಂತೆ ಹೇಳಿ ಅವನೊಂದಿಗೆ ಸಖ್ಯ ಬೇಡವೆಂದು ಅಡ್ಡಿ ಮಾಡಿದನು. ಆದರೆ ನಾಲ್ಕು ನಿಟ್ಟುಗಳಿಂದಲೂ ತುಂಬ ತೊಂದರೆಗಳು ಎದುರಾಗಿದ್ದುವು. ಆದರಿಂದಾಗಿ ಗಾಬರಿಯಾದ ಮಾಸೂದಖಾನನಿಗೆ ಯಾರ ನೀತಿ ಬೋಧೆಗಳೂ ನಾಟಲಿಲ್ಲ. ಯಾರ ಮಾತನ್ನು ಕೇಳಲಿಲ್ಲ. ಶಿವಾಜಿಯೊಂದಿಗೆ ಒಪ್ಪಂದಕ್ಕೆ ಮುಂದಾಗಿ ಅವನಿಗೆ ಪತ್ರಗಳನ್ನು ನಿರೋಪಗಳನ್ನು ಕಳಿಸಲು ಪ್ರಾರಂಭಿಸಿದನು.

ಶಿವಾಜಿಗೆ ಬರೆಯುತ್ತ 'ನಿಮಗೂ ಮತ್ತು ನಮಗೂ ಅತ್ಯಂತ ಹತ್ತಿರದ ಸಂಬಂದವಿದೆ. ನಮ್ಮ-ನಿಮ್ಮ ಗಡಿಗಳು ತೀರ ಹತ್ತಿರ ಇವೆ. ಮತ್ತು ನಾವಿಬ್ಬರೂ ರಾಜ್ಯದ ಒಂದೇ ತಟ್ಟೆಯಲ್ಲಿ ಉಣ್ಣುವವರಿದ್ದೇವೆ. ಈ ರಾಜ್ಯದ ವೈಭವ ಸುರಕ್ಷಿತವಾಗಿ ಇರುವ ವಿಷಯದಲ್ಲಿ ಇಬ್ಬರಲ್ಲೂ ಒಂದೇ ತೆರನಾದ ಚಿಂತೆ ಇದೆ. ಆದಿಲಶಾಹನ ರಾಜ್ಯವನ್ನು ಮುಳುಗಿಸುವ ವಿಷಯದಲ್ಲಿ ಶತ್ರುವು ಟೊಂಕ ಕಟ್ಟಿ ಹಗಲು ರಾತ್ರಿ ಪ್ರಯತ್ನಿಸುತ್ತಿದ್ದಾನೆ. ಇದರ ಬಗ್ಗೆ ನಾವಿಬ್ಬರೂ ವಿಚಾರಿಸಬೇಕಾಗಿದೆ. ಇದು ಇಬ್ಬರಿಗೂ ಜರೂರಾಗಿದೆ. ನಮ್ಮಿಬ್ಬರ ಮಧ್ಯದ ಅಪರಿಚಿತನದ ಮಾಲೆಯನ್ನು ದೂರ ಮಾಡಿ ಪರಸ್ಪರರು ಒಂದಾಗಿ ನಮ್ಮ ಪ್ರದೇಶಗಳ ಮೇಲೆ ಆಕ್ರಮಣ ಮಾಡುತ್ತಿರುವ ಹೊರ ಶತ್ರುಗಳನ್ನು ಹೊರಗೆ ಹಾಕಬೇಕಾಗಿದೆ' ಎಂದು ಹೇಳಿ ಕಳಿಸಿದನು. ಮುತ್ಸಾಳತನ ಸ್ವಭಾವದ ಶಿವಾಜಿಗೆ ಈ ನಿರೋಪವು ತನ್ನ ಮನಸ್ಸಿನಂತಿದೆ ಎಂದು ತಿಳಿದು ಅದನ್ನು ಒಪ್ಪಿದನು ಮತ್ತು ಶಪಥಪೂರ್ವಕವಾಗಿ ಮಾಸೂದಖಾನನನ್ನು ಮೋಸಗೊಳಿಸಿದನು. ಆತನಿಗೆ ತುಂಬ ಆಸೆ ತೋರಿಸಿದನು.

ಆದರಿಂದಾಗಿ ಮಾಸೂದಖಾನ ಮತ್ತು ದಿಲೇರಖಾನರ ಮಧ್ಯ ಬಹಳೇ ವಿರಸ ಉಂಟಾಯಿತು. ಮತ್ತೆ ಕುತಂತ್ರ ಹಾಗೂ ಕೆಡಿಸುವ ಕೆಲಸ ಪ್ರಾರಂಭವಾದುವು. ಮಾಸೂದಖಾನನ ಬದಲಾದ ವರ್ತನೆಯಿಂದ ಮೊಗಲರು, ತಮ್ಮ ಒಪ್ಪಂದದ ಕರಾರುಗಳ ವಿರುದ್ಧವಾಗಿ ನಡೆಯುತ್ತಿದ್ದಾನೆಂದು ತಿಳಿದು ವಿಜಾಪುರವನ್ನು ತೆಗೆದುಕೊಳ್ಳುವ ವಿಚಾರ ಮಾಡತೊಡಗಿದರು. ವಿಜಾಪುರವನ್ನು ತೆಗೆದುಕೊಳ್ಳಬೇಕೆಂಬ ಸಂಕಲ್ಪವು ಮೊಗಲರಲ್ಲಿ ಬಹಳ ದಿನಗಳಿಂದ ಇದ್ದಿತು. ಆದರೆ ಉಭಯತರಲ್ಲಿ ಒಪ್ಪಂದ ವಾದದ್ದರಿಂದ ಸುಮ್ಮನಿದ್ದರು. ಈಗ ಮತ್ತೆ ಅವರು ಮೊದಲಿನ ಸ್ಥಿತಿಗೆ ಒಂದು ವೈರತ್ವವನ್ನೇ ಸಾಧಿಸಹತ್ತಿದರು. ವಿಜಾಪುರ ಮತ್ತು ಅದರ ವಶದಲ್ಲಿದ್ದ ಒಟ್ಟು ರಾಜ್ಯವನ್ನು ತೆಗೆದುಕೊಳ್ಳುವ ಇರಾದೆಯಿಂದ ಕೆಲಸ ಮಾಡಹತ್ತಿದರು.

### *೨೩. ಮೊಗಲರು ಮೋಸದಿಂದ ವಿಜಾಪುರ ಸೈನ್ಯವನ್ನು ಸೋಲಿಸಿದ್ದು ಮತ್ತು ಅಲ್ಲಿಯ ಕಾರಭಾರಿಮಂಡಳಿಯನ್ನು ಮರುಳುಮಾಡಿ ತಮ್ಮತ್ತ ಸೆಳೆದದ್ದು :*

ವಿಜಾಪುರದಲ್ಲಿಯ ಸೈನ್ಯವನ್ನು ಮತ್ತು ಸಿಪಾಯಿ ಜನರ ಗುಂಪನ್ನು ಸೋಲಿಸಬೇಕೆಂದು ಮೊಗಲರು ವಿಚಾರಿಸಿದರು. ಅಬ್ದುಲ ಕರೀಮ ಬಹಲೋಲಖಾನನ ಬಂಧು, ಮಗ, ಸರದಾರರು ಮತ್ತು ಬೇರೆ ಅನೇಕ ಅಮೀರ ಜನರು ರಾಜ್ಯದ ಕಲ್ಯಾಣವನ್ನು ಬಯಸುತ್ತಿದ್ದರು. ಅವರಿಗೆ ಏನೂ ಕೆಲಸವಿಲ್ಲದಿದ್ದರೂ ಇದೇ ಮಾರ್ಗಪ್ರತೀಕ್ಷೆಯನ್ನು ಮಾಡುತ್ತ ಬಹಳ ಕಷ್ಟದಲ್ಲಿ ದಿನಗಳನ್ನು ನೂಕುತ್ತಿದ್ದರು. ದಾರಿದ್ರ್ಯ ಸಂಕಟ, ತಿನ್ನುಣ್ಣಲು ಏನೂ ಇರದ್ದರಿಂದ ಉಪವಾಸದಿಂದ ಶಕ್ತಿ ಹೀನರಾಗಿದ್ದರು. ಒಳ್ಳೆಯ ದಿನಗಳ ಲಕ್ಷಣಗಳೇ ಕಾಣುತ್ತಿರಲಿಲ್ಲ. ಆದ್ದರಿಂದ ಪ್ರತಿಯೊಬ್ಬರೂ ಯಾರಹತ್ತಿರವಾದರೂ ಹೊರಟು ಹೋಗಬೇಕೆಂದು

ನಿಶ್ಚಯಮಾಡಿದ್ದರು. ಇಂಥ ಸಮಯದಲ್ಲಿ ಮಲಿಕ ಬರಖುರದಾರನು ಸವಿಸ್ತಾರವಾಗಿ ಇಲ್ಲಿಯ ಪರಿಸ್ಥಿತಿಯನ್ನು ಬರೆದು ಔರಂಗಜೇಬ ಬಾದಶಹನ ಕಡೆಗೆ ಕಳಿಸಿದನು. ಆ ವಿನಂತಿ ಪತ್ರದಲ್ಲಿ "ಅಬ್ದುಲ ಕರೀಮ ಬಹುಲೋಲಖಾನನು ಕೆಲಸಕ್ಕೆ ಉಪಯೋಗ ಬೀಳುವಂಥ ಸೈನ್ಯವನ್ನು ಸಂಗ್ರಹಿಸಿದ್ದಾನೆ. ಮತ್ತು ಇದೇ ಸೈನ್ಯದ ಬಲದಿಂದಲೇ ಶಿವಾಜಿಯೊಂದಿಗೆ ಯುದ್ಧ ಮಾಡುತ್ತಿದ್ದನು. ಸಾಕಷ್ಟು ಸಲ ಶಿವಾನನ್ನು ಸೋಲಿಸಿ ಅವನ ಮೇಲೆ ಪ್ರಬಲನಾಗುತ್ತಿದ್ದನು. ಈಗ ನಿರುದ್ಯೋಗಿಗಳಾಗಿ ಪ್ರತಿಯೊಬ್ಬನೂ ಬೇರೆ-ಬೇರೆ ಸ್ಥಳಿಗಳಿಗೆ ಹೊರಟು ಹೋಗುವ ಇರಾದೆಯನ್ನು ಮಾಡಿದ್ದಾರೆ. ಮತ್ತು ಈ ಸೈನ್ಯ ಎತ್ತ ಹೋಗುತ್ತದೆಯೋ ಅಲ್ಲಿಯ ತಕ್ಕಡಿ ಭಾರೀ ತೂಕದ್ದಾಗುತ್ತದೆ. ಈ ಸೈನ್ಯ ಯಾರಿಗೆ ಸಹಾಯ ಮಾಡುತ್ತದೆಯೋ ಅವರು ಗೆಲ್ಲುತ್ತಾರೆ, ಅಂಥ ಸೈನ್ಯವಿದೆ. ಆದ್ದರಿಂದ ಈಗ ಯುಕ್ತಿಯಿಂದ ಈ ಜನರನ್ನು ಬಾದಶಹರ ಕಡೆಗೆ ಒಲಿಸಿಕೊಳ್ಳಬೇಕು. ಅಂದರೆ ಬಾದಶಹರ ನೌಕರಿಯ ಮೇಲೆ ತೆಗೆದುಕೊಂಡು ಅವರ ಕಡೆಯಿಂದ ಶಿವಾನ ಬೆನ್ನು ಮತ್ತು ಸೊಂಟವನ್ನು ಮುರಿದು ಹಾಕಬೇಕು" ಹೀಗೆ ಪತ್ರದಲ್ಲಿ ಬರೆದಿದ್ದನು.

ಔರಂಗಜೇಬ ಬಾದಶಹನು ಪತ್ರದ ಅಭಿಪ್ರಾಯವನ್ನು ಗಮನಿಸಿದನು. ಮಲಿಕ ಬರಖುರದಾರನ ಯುಕ್ತಿಗೆ ಒಪ್ಪಿ ಈ ಸೈನ್ಯವನ್ನು ಬಾದಶಾಹೀ ನೌಕರಿಯ ಮೇಲೆ ತೆಗೆದುಕೊಳ್ಳಬೇಕೆಂದು ದಿಲೇರ ಖಾನನಿಗೂ ಮತ್ತು ಮಲಿಕ ಬರಖುರದಾರ ಉಭಯತರಿಗೂ ಆಜ್ಞಾಪತ್ರವನ್ನು ಬರೆದು ಕಳಿಸಿದನು. ಆಗ ಮಲಿಕ ಬರಖುರದಾರ ಒಬ್ಬೊಬ್ಬ ವ್ಯಕ್ತಿಗೂ ಭರವಸೆಯನ್ನು ಕೊಟ್ಟು ಮತ್ತು ಅವರಿಗೆ ಖರ್ಚಿಗೆ ಕೊಟ್ಟು ವಿಜಾಪುರದಿಂದ ದಿಲೇರಖಾನನ ಕಡೆಗೆ ಕಳಿಸುತ್ತಿದ್ದನು. ಆ ಪ್ರತಿಯೊಬ್ಬರಿಗೂ ಬಕ್ಷೀಸನ್ನು ಕೊಟ್ಟು ಅವರೊಂದಿಗೆ ರುಚಿ-ರುಚಿಯಾಗಿ ಮಾತನಾಡಿ, ಅವರ ಚಿತ್ತ ಸಮಾಧಾನ ಪಡಿಸುತ್ತ ಅವರ ದಿನಗೂಲಿಯನ್ನು ನಿರ್ಧರಿಸಿ, ನೌಕರಿಯ ಮೇಲೆ ತೆಗೆದುಕೊಳ್ಳಲು ಪ್ರಾರಂಭಿಸಿದರು.

ಅಬ್ದುಲ ಗಫೂರ, ಅಬ್ದುಲಶಕೂರ, ಅಬ್ದುಲ ಜಲೀಲ, ಅಬ್ದುಲ ನಬೀ, ಅಬ್ದುಲ ಸಲಾಮ ಮತ್ತು ಅಬ್ದುಲ ಕರೀಮಖಾನನ ಐದು ಅಣ್ಣ ತಮ್ಮಂದಿರು, ಅಬ್ದುಲ ಮಜೀಜ ಅಬ್ದುಲ ಗಿಯಾಸ, ಮತ್ತು ಅಬ್ದುಲ ಹಕೀಮರು ಇವರೆಲ್ಲ ಅಬ್ದುಲ ಕರೀಮಬಹಲೋಲಖಾನನ ಕಕ್ಕನ ಮಕ್ಕಳು, ಶಾಹಬಾಜ ಖಾನನ ನಡುವಿನ ಮಗ ಹಾಫೀಜ ಮಹಮ್ಮದ, ಮಹಮ್ಮದಖಾನನ ಇಬ್ಬರೂ ಮಕ್ಕಳು ಮತ್ತು ಆತನ ಮಾವನ ಮಗ, ಮತ್ತು ಬಹಾದ್ದೂರಖಾನ ಅಲ್ಲದೆ ನಿಶಾನೆಕಡೆಯ ಜನರು, ಮತ್ತು ಅಬ್ದುಲ ಜಲೀಲ ತಂದೆ ಮುಲ್ಲಾ ಮನಸೂರ ಸೈಯದ ಬಾಯಜೀದ, ಅಬ್ದುಲ ಕರೀಮಖಾನನ ಸರದಾರ ಸೈಯದ ಮೀರಾನ, ಅಬ್ದುಲ ಕರೀಮಖಾನ ಯೇಲೂರ, ಖಲಜನಮಲಿಕ, ಬಡೇಶಾಹ ಸಿಯಾಹಛತ್ರಿ, ಲಷ್ಕರೀಮಾಯೀ ಮತ್ತಲ್ಲದೆ ಅನೇಕ ಹೆಸರಾಂತ ಜನರು, ಅವರ ಹೆಸರನ್ನು ಬರೆವುದಾದರೆ ಗ್ರಂಥವು ಬಹಳ ವಿಸ್ತಾರವಾಗುತ್ತದೆ. ಆದ್ದರಿಂದ ಅಷ್ಟೆಲ್ಲ ಹೆಸರುಗಳನ್ನು ಬರೆದಿಲ್ಲ. ಇವರೆಲ್ಲ ಒಬ್ಬರ ಹಿಂದೆ ಒಬ್ಬರಂತೆ ದಿಲೇರಖಾನನ ಹತ್ತಿರ ಹೋಗಿ ಪ್ರತಿಯೊಬ್ಬರೂ ತಂತಮ್ಮ ಯೋಗ್ಯತಾನುಸಾರ ಪದಾಧಿಕಾರಗಳನ್ನು ಬಿರುದುಗಳನ್ನು ಪಡೆದರು. ದಾರಿದ್ರ್ಯದ ಪೀಡೆಯನ್ನು ಸಂತೋಷ ಹಾಗೂ ಶ್ರೀಮಂತಿಕೆಯಲ್ಲಿ ಬದಲಿಸಿದರು.

### ೨೪. ಶಿವಾಜಿಯ ಮಗ ಸಂಭಾಜಿಯು ದಿಲೇರಖಾನನ ಹತ್ತಿರ ಬಂದದ್ದು :

ಅದೇ ದಿನಗಳಲ್ಲಿ ಶಿವಾಜಿಯ ಮಗ ಸಂಭಾಜಿ ಕೂಡ ದಿಲೇರಖಾನನ್ನು ಭೆಟ್ಟಿಯಾದನು. ಅದು

ದಿಲೇರಖಾನನ ಯೋಗ್ಯತೆಗೂ ಮತ್ತು ದೊಡ್ಡಸ್ತಿಕೆಗೂ ಕಾರಣವಾಯಿತು. ಸಂಭಾಜಿಯು ದಿಲೇರಖಾನನ ಹತ್ತಿರ ಹೋದದ್ದರ ವಿವರ ಹೀಗಿದೆ. ಶಿವಾಜಿಯು ಸಂಭಾಜಿಯ ಅನೇಕ ಕೆಲಸಗಳಬಗ್ಗೆ ತೊಂದರೆಪಟ್ಟು ಬೇಸತ್ತಿದ್ದನು. ಈ ದಿನಗಳಲ್ಲಿ ಶಹರನವೀಸ ಅಂದರೆ ಆದೇಶಗಳನ್ನು ಬರೆಯುವ ಕೆಲಸದ ಮೇಲೆ ಒಬ್ಬನಿದ್ದನು. ಆತನ ಮಗಳಮೇಲೆ ಸಂಭಾಜಿ ತುಂಬ ಆಕರ್ಷಿತನಾಗಿದ್ದನು. ಇದರಿಂದಾಗಿ ಶಿವಾಜಿಯು ಮಗನ ಬಗ್ಗೆ ತುಂಬ ಬೇಸತ್ತಿದ್ದನು. ಅವನೊಬ್ಬ ಕೇವಲ ಶತ್ರುವಿನಂತೆಯೇ ಆಗಿದ್ದನು. ಮತ್ತು ಅವನನ್ನು ಕೊಂದು ಬಿಡಬೇಕೆಂದು ಇಲ್ಲವೆ ಬಂಧಿಸಬೇಕೆಂದು ಯೋಚಿಸುತ್ತಿದ್ದನು. ಅದನ್ನು ತಿಳಿದ ಸಂಭಾಜಿಯು ಸಂಶಯಿತನಾಗಿ ದಿಲೇರಖಾನನ ಕಡೆಗೆ ಹೊರಟು ಹೋಗಿ ಬಿಡಬೇಕೆಂದು ನಿಶ್ಚಯಿಸಿದನು. ತಾನು ಖುದ್ದಾಗಿ ಹೋಗುವ ಮೊದಲು ಒಂದು ಪತ್ರವನ್ನು ಬರೆದು 'ನಾನು ಬರುತ್ತೇನೆ' ಎಂದು ಹೇಳಿ ಕಳಿಸಿದನು. ಅನಂತರ ಅದರ ಬೆನ್ನಹಿಂದೆಯೇ ದಿಲೇರಖಾನನ ಕಡೆಗೆ ಹೊರಟುಬಿಟ್ಟನು. ಸಂಭಾಜಿಯು ತನ್ನ ಆಶ್ರಯದಲ್ಲಿ ಬರುತ್ತಿದ್ದಾನೆಂದು ತಿಳಿದು ದಿಲೇರಖಾನನು ಬಹಳ ಸಂತೋಷಪಟ್ಟು ಅವನು ಬರುವ ದಾರಿಯನ್ನು ಕಾಯುತ್ತ ಕುಳಿತನು. ಈ ವಿಷಯ ಶಿವಾಜಿಗೆ ತಿಳಿಯುವ ಹೊತ್ತಿಗೆ ಆತ ಹೊರಟು ಬಿಟ್ಟಿದ್ದ.[೧]

ಅವನನ್ನು ದಾರಿಯಲ್ಲಿ ಹಿಡಿದು ಇತ್ತ ಕರೆತರಬೇಕೆಂದು ಅವನ ಬೆನ್ನ ಹಿಂದೆ ಶಿವಾಜಿ ಸೈನ್ಯವನ್ನು ಓಡಿಸಿದನು. ಈ ಸುದ್ದಿ ದಿಲೇರಖಾನನಿಗೂ ತಿಳಿಯಿತು. ಆಗ ಆತನು ಯಖಲಾಸಖಾನನ ಜೊತೆಗೆ ಮೂರು ಸಾವಿರ ಸವಾರರನ್ನು ಕೊಟ್ಟು ಸಂಭಾಜಿಯನ್ನು ಕರೆತರಲು ಕಳಿಸಿದನು. ಸೂಪಾದ ಇತ್ತಕಡೆಗೆ ನಾಲ್ಕು ಕೋಸುಗಳ ಅಂತರದಲ್ಲಿ ಸಂಭಾಜೀಗೂ-ಯಖಲಾಸಖಾನನಿಗೂ ಭೆಟ್ಟಿಯಾಯಿತು. ಸಂಭಾಜಿಯ ಜೊತೆಗೆ ಮೂರುನೂರಕ್ಕಿಂತ ಅಧಿಕ ಸೈನ್ಯವಿರಲಿಲ್ಲ. ಯಖಲಾಸನೊಂದಿಗೆ ಬಂದ ಸೈನ್ಯ ಸೇರಿಕೊಂಡಿತು. ಅದನ್ನು ಕಂಡ ಶಿವಾಜಿಯ ಸೈನ್ಯವು ಸಂಭಾಜಿಯನ್ನು ಹಿಡಿಯದೆ ದಾರಿಯಲ್ಲೇ ಹಿಂತಿರುಗಿತು. ಸಂಭಾಜಿ ಮುಂದೆ ಹೊರಟನು. ದಿಲೇರಖಾನನು ಓಡಿ ಬಂದು ಅತ್ಯಂತ ಆದರದಿಂದ ಸಂಭಾಜಿಯನ್ನು ಬರಮಾಡಿಕೊಂಡು ಸತ್ಕರಿಸಿದನು. ಸಂಭಾಜಿಗೆ ಕೊಡಲೆಂದು ಔರಂಗಜೇಬ ಬಾದಶಹನಿಂದ ಒಂದು ಆನೆ, ಮೂರು ಕುದುರೆ ಮತ್ತು ವಸ್ತ್ರ, ಶಸ್ತ್ರಗಳು ಭೌಘಡಾದೊಂದಿಗೆ 'ಸಾತಹಜಾರಿ' ಪದವಿಯನ್ನು ನೀಡುವ ಆಜ್ಞಾಪತ್ರ ಬಂದಿತು. ಅದನ್ನೆಲ್ಲ ದಿಲೇರಖಾನನು ಸಂಭಾಜಿಗೆ ಕೊಟ್ಟನು. ಸಂಭಾಜಿಯ ಬರುವಿಕೆಯಿಂದ ಅರ್ಧ ದಕ್ಷಿಣ ದೇಶವನ್ನೇ ಗೆದ್ದ ಸಂತೋಷ ದಿಲೇರಖಾನನಿಗಾಗಿತ್ತು.

### ೨೫. *ಮಾಸೂದಖಾನನ ಸಹಾಯಕ್ಕೆ ಶಿವಾಜಿಯು ತನ್ನ ಸೈನ್ಯ ಕಳಿಸಿದ್ದು :*

ತನ್ನ ಕಡೆಯ ಸೈನ್ಯ ಕಡಿಮೆ, ಶತ್ರುವಿನಕಡೆಯ ಸೈನ್ಯ ದೊಡ್ಡದು ಮತ್ತಲ್ಲದೆ ಅದು ದಿನದಿಂದ ದಿನಕ್ಕೆ ದೊಡ್ಡದಾಗುತ್ತಲೇ ಹೋಗುತ್ತಿತ್ತು. ಮನೆಯ ಜನರೇ ಆದ ಸಯ್ಯದ ಮಖದೂಮ ಷರ್ಜಾಖಾನ ಮೊದಲಾದವರು ದ್ವೇಷ ಸಾಧಿಸುತ್ತ ತುಂಬ ದಂಗೆ ಹಾಗು ಗದ್ದಲ ಮಾಡುತ್ತಿದ್ದರು. ಅದರಿಂದ ಮಾಸೂದಖಾನನು ತುಂಬ ಗಾಬರಿಯಾಗಿ ಅತಿ ಚಿಂತಾಗ್ರಸ್ತನಾದನು. ಈ ಮೊದಲೇ ಶಿವಾಜಿಯೊಂದಿಗೆ ಗೆಳೆತನ ಮಾಡಿಕೊಂಡಿದ್ದರಿಂದ ಮಾಸೂದಖಾನನು ಶಿವಾಜಿಗೆ ಬರೆದು ಕಳಿಸಿ ಶತ್ರುವನ್ನು ಎದುರಿಸಲು

---

೧. ಶಕೆ ೧೬೦೦ ಪೌಷ ಶುದ್ಧ ೧೦ (೧೩, ಡಿಶಂಬರ ೧೬೭೮) ಸಂಭಾಜಿಯು ಪಾರಚಿ ಮೂಲಕ ಪಾಳೀಗಡದ ಮೇಲಿನಿಂದ ಓಡಿ ಮೊಗಲಾಯಿಯಲ್ಲಿ ದಿಲೇರಖಾನನ ಹತ್ತಿರ ಹೋದನು. ಆತನು ಅವನಿಗೆ ಹಪ್ತಹಜಾರೀ ಪದವಿಯನ್ನು ಕೊಟ್ಟು ಸನ್ಮಾನ ಮಾಡಿದನು.-ಜೇಧೆ ಶಕಾವಲೀ ಪುಟ -೨೮

ಸೈನ್ಯದ ಸಹಾಯ ಕೋರಿದನು. 'ಇಲ್ಲವಾದರೆ ಶತ್ರುಗಳು ಕೋಟೆಯನ್ನು ವಶಮಾಡಿಕೊಳ್ಳುತ್ತಾರೆಂಬ ಭಯವಿದೆ' ಎಂದು ಬರೆದನು.[೧] ಶಿವಾಜಿಯು ಆರೇಳು ಸಾವಿರ ಹತ್ಯಾರಬಂದ ಸವಾರರನ್ನು ವಿಜಾಪುರದ ರಕ್ಷಣೆಗಾಗಿ ಕಳಿಸಿದನು. ಅವರಿಗೆ ತುಂಬ ಎಚ್ಚರಿಕೆಯಿಂದ ಕೋಟೆಯಲ್ಲಿರಬೇಕೆಂದು ತಾಕೀದು ಮಾಡಿದ್ದನು. 'ಇಷ್ಟಾದರೆ ಶತ್ರುವನ್ನು ನಾನು ನೋಡಿಕೊಳ್ಳುವೆ' ಎಂದು ಹೇಳಿದನು. ಮಾಸೂದಖಾನನಿಗೆ ಭರವಸೆ ಬಂದು ಸಮಾಧಾನ ಪಟ್ಟನು. ಶಿವಾಜಿಯ ಸರದಾರರಿಗೆ ಸೈನ್ಯಕ್ಕೆ ಆಟಂಗಿ (ಅಸಂಗಿ?)ಯ ನದಿಯ ಹತ್ತಿರ ಇಳಿದುಕೊಳ್ಳಲು ಮಾಸೂದಖಾನನು ಹೇಳಿದ್ದನು. ಆದರೆ ಅವರೆಲ್ಲ ಸೈನ್ಯ ಸಹಿತವಾಗಿ ನಗರದ ಸಮೀಪ ಬಂದು ಖಾನಾಪುರ ಮತ್ತು ಖುಸ್ರೋಪುರದ ಹತ್ತಿರ ಇಳಿದು ಡೇರೆಗಳನ್ನು ಹಾಕಿಕೊಂಡು ಇರಹತ್ತಿದರು. ಅವರಿಗೂ ಮಾಸೂದಖಾನನಿಗೂ ಮಾತುಗಳೂ ನಡೆದಿದ್ದುವು. ಅವರ ಅಭಿಪ್ರಾಯದಲ್ಲಿ ಕೋಟೆಯ ಒಂದು ಬಾಗಿಲನ್ನು ಮತ್ತು ಒಂದು ಬುರುಜನ್ನು ತಮ್ಮ ವಶಕ್ಕೆ ಕೊಟ್ಟರೆ ಮಾತ್ರ ತಾವು ವಿಜಾಪುರ ಕೋಟೆಯ ಸಂರಕ್ಷಣೆ ಮಾಡುವುದಾಗಿ ಹೇಳುತ್ತಿದ್ದರು. ಮಾಸೂದಖಾನನ ಅವರ ಮಾತನ್ನು ಒಪ್ಪಲಿಲ್ಲ. ಆ ಸೈನ್ಯದಲ್ಲಿಯ ಸರದಾರ ಜನರು ತಂತಮ್ಮ ಜನರಸಹಿತವಾಗಿ ಕೋಟೆಯ ಒಳಗೆ ಬರಬೇಕೆಂದು ಬಯಸುತ್ತಿದ್ದರು. ಮಾಸೂದಖಾನನು ಆ ಜನರು ಒಳಗೆ ಬರುವುದಕ್ಕೆ ಅಡ್ಡಿ ಪಡಿಸಿ ಕೆಲವು ಜನ ಸಂಭಾವಿತರನ್ನು ತುಸು ಚಾಕರರೊಂದಿಗೆ ಒಳಗೆ ಬರಲು ಅನುಮತಿ ಕೊಡುತ್ತಿದ್ದನು. ಕೋಟೆಯ ಒಳಗೆ ಬಹಳ ಜನ ಬರಬೇಕೆಂದರೆ ಬರಗೊಡುತ್ತಿರಲಿಲ್ಲ. ಅನಂತರ ಆ ಜನರು ಖುಸ್ರೋಪುರ ಮತ್ತು ಖಾನಪುರದಿಂದ ಎದ್ದು ಕೋಟೆಯ ಹತ್ತಿರದ ಜೋರಾಪುರದ ಮೈದಾನದಲ್ಲಿ ಬಂದು ಇಳಿದರು. ಈ ಕಾರಣದಿಂದ ಮಾಸೂದಖಾನನಿಗೆ ಅಧಿಕ ಸಂಶಯ ಬಂದಿತು. ಸದರೀ ಸರದಾರ ಜನರು ಮಾಸೂದಖಾನನಿಗೆ ಹೇಳಿ ಕಳಿಸುತ್ತ 'ಬಾದಶಹರನ್ನು, ನಿಮ್ಮನ್ನು ಕಾಣಲು ಬಂದು ಹೋಗಬೇಕಾದರೆ ಬಾಗಿಲಲ್ಲಿಯ ಜನರು ಅಡ್ಡಿ ಪಡಿಸುತ್ತಿದ್ದಾರೆ' ಕೆಲವು ಜನರನ್ನು ಒಳಗೆ ಬಿಡುತ್ತಾರೆ, ಇನ್ನು ಕೆಲವರನ್ನು ಬಿಡುವುದಿಲ್ಲ. ನಮ್ಮ- ನಿಮ್ಮ ಮಧ್ಯ ಪರದೆ ಇರುವ ವರೆಗೆ ನಾನಾ ಪ್ರಕಾರದ ಸಂಶಯ ಬರುತ್ತದೆ. ಆಗ ಸಂರಕ್ಷಣೆಯ ಕೆಲಸ ನಮ್ಮಿಂದ ಹೇಗೆ ಆದೀತು? ನಮಗೆ ಕೋಟೆಯ ಒಳಗಡೆ ಒಂದು ನಿಶ್ಚಿತ ಸ್ಥಳವನ್ನು ಗೊತ್ತು ಮಾಡಬೇಕು. ಅಂದರೆ ನಾವು ನಮ್ಮ ಸಾಮಾನು ಸರಂಜಾಮುಗಳೊಂದಿಗೆ ಅಲ್ಲಿಗೆ ಬರುತ್ತೇವೆ' ಎಂದು ಹೇಳಿದರು. ಅದಕ್ಕೆ ಪ್ರತಿಯಾಗಿ ಮಾಸೂದಖಾನನು, 'ನಾನು ಮೊದಲೇ ಹೇಳಿದ ಹಾಗೆ ನೀವೆಲ್ಲ ಆಟಂಗಿಯಲ್ಲಿ ಸೈನ್ಯ ಸಹಿತವಾಗಿ ಇರಬೇಕೆಂದು ಹೇಳಿದ್ದರೂ ನೀವು ಹೀಗೆ ಮಾತನಾಡುವುದು ಯೋಗ್ಯವಲ್ಲ. ಆದ್ದರಿಂದ ನೀವು ಆಟಂಗಿ ನದಿಯ ಮೇಲೆ ಇದ್ದು ಶತ್ರುವನ್ನು ಎದುರಿಸುವ ವಿಚಾರ ಮಾಡುವುದೇ ಸೂಕ್ತವೆನಿಸುತ್ತದೆ' ಎಂದು ಹೇಳಿ ಅವರ ಮಾತನ್ನು ಒಪ್ಪಲಿಲ್ಲ.

### ೨೬. *ಶಿವಾಜಿಯ ಜನ ದಂಗೆ ಮಾಡಿದ್ದು ಮತ್ತೆ ಮಾಸೂದಖಾನ ಹಾಗೂ ಶಿವಾಜಿ ಮಧ್ಯ ವಿರಸ :*

ಹೀಗೆ ಹೇಳಲಾಗುತ್ತಿದೆ -ಒಂದು ದಿನ ಶಿವಾಜಿಯ ಕಡೆಯ ಜನರು ಗೋಣಿಯ ಚೀಲಗಳಲ್ಲಿ ಧಾನ್ಯಗಳನ್ನು ತುಂಬಿ ಮಾರಾಟ ಮಾಡಲು ಎತ್ತಿನ ಮೇಲೆ ವಿಜಾಪುರ ನಗರಕ್ಕೆ ತರುತ್ತಿದ್ದರು. ಅವುಗಳಲ್ಲಿಯ

---

೧. ಶಕೆ ೧೬೦೧ ಭಾದ್ರಪದ ಶುದ್ಧ (೨೬, ಆಗಸ್ಟ್ ೧೬೭೯) ರಂದು ಶಾಮಜೀ ನಾಯಕನನ್ನು ವಿಜಾಪುರಕ್ಕೆ ಕಳಿಸಿದರು. ಆಶ್ವೀನ ಮಾಸದಲ್ಲಿ (ಸೆಪ್ಟೆಂಬರ/ಅಕ್ಟೋಬರ ೧೬೭೯) ದಿಲೇರಖಾನನು ವಿಜಾಪುರವನ್ನು ಮುತ್ತಿದನು. ಕಾರ್ತಿಕಮಾಸದಲ್ಲಿ (ಅಕ್ಟೋಬರ/ನವಂಬರ ೧೬೭೬) ಆದಿಲಶಹನಿಗೂ ಶಿವಾಜಿರಾಜೆಗೂ ಒಪ್ಪಂದವಾಯಿತು- ಜೇಧೆ ಶಕಾ ಪುಟ-೩೦.

ಅನೇಕ ಎತ್ತುಗಳ ಮೇಲಿನ ಗೋಣಿ ಚೀಲಗಳಲ್ಲಿ ತಲವಾರಗಳನ್ನು ಮುಚ್ಚಿ ಹಾಕಿ ಪ್ರತಿಯೊಂದು ಎತ್ತಿನ ಹಿಂದೆ ಒಬ್ಬೊಬ್ಬ ಸಿಪಾಯಿಯು ಮಾರುವೇಷದಲ್ಲಿ ಹೋಗುತ್ತಿದ್ದನು. ಮತ್ತು ಕೋಟೆಯ ಒಳಗಡೆ ಬರುತ್ತಿದ್ದನು. ಆಗ ಬಾಗಿಲಲ್ಲಿಯ ಪಹರೆಗಾರರು ಎತ್ತಿನ ಹಿಂದೆ ಬರುವ ಜನರ ವೇಷಗಳನ್ನು ಕಂಡು ಸಂಶಯ ಬಂದು ಗೋಣಿ ಚೀಲಗಳಲ್ಲಿ ಮೊಳೆಗಳನ್ನು ಡಬ್ಬಣಗಳನ್ನು ಚುಚ್ಚಹತ್ತಿದರು. ಹಲವಾರು ಗೋಣಿಚೀಲಗಳಲ್ಲಿ ಡಬ್ಬಣವಾಗಲೀ, ಮೊಳೆಯಾಗಲೀ ಸೇರುತ್ತಲೇ ಇರಲಿಲ್ಲ. ಆಗ ಅವುಗಳನ್ನು ಬಿಚ್ಚಿ ನೋಡಿದಾಗ ಅವುಗಳ ಜೋಳದಲ್ಲಿ ರಹಸ್ಯವಾಗಿ ಕತ್ತಿಗಳನ್ನು ತುರುಕಿದ್ದರು. ಆಗ ಎಲ್ಲ ಗೋಣಿ ಚೀಲಗಳನ್ನು ಬಿಚ್ಚಿ ಮುಚ್ಚಿಟ್ಟ ಶಸ್ತ್ರಗಳನ್ನು ವಶಪಡಿಸಿಕೊಂಡು, ಎತ್ತುಗಳನ್ನು ಎತ್ತಿನ ಹಿಂದೆ ಬರುತ್ತಿದ್ದ ಜನರನ್ನು ಹೊಡೆದು ಹೊರಗೆ ಹಾಕಿದರು. ಮಾಸೂದಖಾನನ ಜನರು ಬಹಳ ಜಾಣರೂ ಎಚ್ಚರಿಕೆಯಿಂದಲೂ ಇರುತ್ತಾರೆಂಬುದು ಶಿವಾನ ಸರದಾರಿರಿಗೆ ತಿಳಿಯಿತು. ಮತ್ತು ಲಜ್ಜಿತರಾಗಿ, 'ಒಂದು ವೇಳೆ ಮೊಗಲರು ಬೆನ್ನು ಹತ್ತಿದರೆ ನೀವು ನಮ್ಮನ್ನು ಕೋಟೆಯ ಒಳಗೆ ಬಿಡುವುದಿಲ್ಲವೆಂಬುದು ಖಾತ್ರಿಯಾಯಿತು. ಆಗ ನಮಗೆ ಯಾರ ಆಧಾರವೂ ಇಲ್ಲ ಹೀಗೆಯೇ ನಿರಾಶ್ರಿತರಾಗಿ ಸಾಯಬೇಕಾಗುತ್ತದೆ' ಎಂದು ಹೇಳಿದರು. ಆದರೆ ಮಾಸೂದಖಾನನು ಈ ಮಾತುಗಳನ್ನೆಲ್ಲಿ ಕೇಳುತ್ತಾನೆ'.

ಶಿವಾಜಿಯು ಅವಕಾಶ ಸಿಕ್ಕರೆ ಸಾಕು ಘಾತಮಾಡುತ್ತಿದ್ದನು. ಮೋಸದ ಆಟದಲ್ಲಿಯೇ ಅವನ ಜೀವನವೆಲ್ಲವೂ ಕಳೆದಿತ್ತು. ಸುಮ್ಮನೆ ಬಹಿರಂಗದಲ್ಲಿ ಮಾಸೂದಖಾನನೊಂದಿಗೆ ಸ್ನೇಹ ತೋರಿದರೂ ಒಳಗೊಳಗೆ ದ್ವೇಷವನ್ನು ಸಾಧಿಸುತ್ತಿದ್ದನು. ಮಾಸೂದಖಾನನು ಶಿವಾಜಿಯ ಭಯದಿಂದಾಗಿ ಬಹಳ ಎಚ್ಚರಿಕೆಯಿಂದಲೆ ವರ್ತಿಸುತ್ತಿದ್ದನು. ಕೊನೆಗೆ ಅನೇಕ ಕಾರಣಗಳಿಂದಾಗಿ ಉಭಯತರ ಮಧ್ಯ ಮತ್ತೆ ಹಗೆತನ ವೃದ್ಧಿಯಾಯಿತು. ಅದು ಒಬ್ಬರೊಬ್ಬರಲ್ಲಿ ಸಂಪೂರ್ಣ ಪರಿಚಯವೇ ಇಲ್ಲದಂತೆ ವೈರತ್ವ ಹುಟ್ಟಿಕೊಂಡಿತು. ಶಿವಾಜಿಯು ಹುಟ್ಟಿನಿಂದಲೇ ಬಂಡುಖೋರನಾಗಿದ್ದನು, ಕುತಂತ್ರಿಯೂ ನಡತೆಗೆಟ್ಟವನೂ ಆಗಿದ್ದನು. ಮುತ್ತಿಗೆ ಹಾಕಿ ಲೂಟಿ ಮಾಡುವುದು, ತುಂಬಿದ ಹಳ್ಳಿಯನ್ನು ಲೂಟಿ ಮಾಡಿ ಹಾಳು ಕೆಡುವುದು ಇವು ಅವನ ಜನ್ಮಾದಾರಭ್ಯದ ಸ್ವಭಾವವಗಳೆ ಆಗಿದ್ದುವು. ಆದ್ದರಿಂದ ಶಿವಾಜಿಯು ಮತ್ತೆ ಇದನ್ನು ಪ್ರಾರಂಭಿಸಿ ಆದಿಲಶಾಹಿಯ ಪ್ರದೇಶಗಳಲ್ಲಿ ದೊಡ್ಡ ದಂಗೆಯನ್ನೇ ನಡೆಸಿದನು. ಶಿವಾನ ಸೈನ್ಯವು ವಿಜಾಪುರದ ಹತ್ತಿರವೇ ಬಂದು ದೌಲತಪುರ, ಖುಸ್ರೋಪುರಗಳನ್ನು ಲೂಟಿಮಾಡಿ ಅಲ್ಲಿಯ ಶ್ರೀಮಂತ ವ್ಯಾಪಾರಸ್ಥರನ್ನು ಸುಲಿಗೆ ಮಾಡಿ ಅವರನ್ನು ಬಂಧಿಸಿ ಕೈದಿನಲ್ಲಿಟ್ಟರು. ಜೋಹರಾಪುರದ ಮೇಲೆ ದಾಳಿ ಮಾಡಿದರು. ಮತ್ತು ಶೇಖ ಅಹಮ್ಮದ ಖವಾಸಖಾನಿಯ ವಾಡೆಯ ಹತ್ತಿರ ಅಲೀ ರಜಾನನ್ನು ಕೊಲೆ ಮಾಡಿದರು. ಸಿದ್ದೀ ಯಾಕುತ ಖೈರತಖಾನೀಯನ್ನು ಗಾಯಗೊಳಿಸಿದರು. ಇಬ್ರಾಹಿಮ ಜಗದ್ಗುರುನ ವಾಡೆಯ ಹತ್ತಿರ ಆ ಜನ ಬಂದು ಮುಟ್ಟಿದರು. ಅಷ್ಟರಲ್ಲಿ ಕರ್ಮಧರ್ಮ ಸಂಯೋಗದಿಂದ ಕೋಟೆಯ ಮೇಲಿನ ತೋಫುಗಳನ್ನು ಹಾರಿಸಹತ್ತಿದರು. ಆ ತೋಫಿನ ಗುಂಡುಗಳಿಂದ ಶಿವಾನ ಸೈನ್ಯವು ನಾಶವಾಗಿ, ಓಡಿ ಹೋಯಿತು.

### ೨೨. *ಮಾಸೂದಖಾನನು ಮತ್ತೆ ಮೊಗಲರೊಂದಿಗೆ ಸಖ್ಯ ದಿಲೇರಖಾನನು ತನ್ನ ಸೈನ್ಯವನ್ನು ಆತನ ಸಹಾಯಕ್ಕೆ ಕಳಿಸಿದ್ದು :*

ಶಿವಾಜಿಯ ದಂಗೆಗಳಿಂದ - ಲೂಟಿಗಳಿಂದ ಮಾಸೂದಖಾನನು ಮತ್ತೆ ಗಾಬರಿಯಿಂದ ಭಯಭೀತನಾಗಿ ತನ್ನ ಕೆಲಸದ ಉಪಾಯವು ದಿಲೇರಖಾನನ ಸಖ್ಯದಲ್ಲಿಯೇ ಇದೆಯೆಂದು ತಿಳಿದು

ಅವನೊಂದಿಗೆ ಸ್ನೇಹ ಬೆಳೆಸಿದನು. ಮಾಸೂದಖಾನನ ವಕೀಲನು ದಿಲೇರಖಾನನ ಹತ್ತಿರ ಇದ್ದನು. ಅವನ ಮುಖಾಂತರ ಸ್ನೇಹಕ್ಕಾಗಿ ನಿರೋಪ ಕಳಿಸಿದನು. ಒಪ್ಪಂದದ ಕರಾರುಗಳನ್ನು ಈ ಮೊದಲೇ ಕಲಬುರ್ಗಿಯಲ್ಲಿ ನಿರ್ಧರಿಸಲಾಗಿತ್ತು. ಅದರಂತೆಯೇ ಮತ್ತೆ ಕರಾರನಾಮೆಯನ್ನು ಸಿದ್ಧಪಡಿಸಿ ಶಿವಾಜಿಯನ್ನು ಶಿಕ್ಷಿಸಲು ದಿಲೇರಖಾನನಿಂದ ಸಹಾಯವನ್ನು ಯಾಚಿಸಿದನು. ದಿಲೇರಖಾನನಿಗೆ ಮಾಸೂದಖಾನನೊಂದಿಗಿನ ಒಪ್ಪಂದಕ್ಕೆ ಸಮ್ಮತಿಯೇ ಇತ್ತು. ಓಡಿ ಹೋದ ಬೇಟೆಯನ್ನು ಹಿಡಿದು ಮತ್ತೆ ಬಲೆಯಲ್ಲಿ ಕೆಡುಹುವುದು ಉಳಿದೆಲ್ಲ ಕೆಲಸಗಳಿಗಿಂತ ಜರೂರಿಯಾದ ಕೆಲಸವೆಂದೇ ಆತ ತಿಳಿದಿದ್ದನು. ತನ್ನೊಂದಿಗೆ ವಿರಸಗೊಂಡು ಹೋದ ಮಾಸೂದಖಾನನ್ನು ಮತ್ತೆ ತನ್ನ ಕೈಗೆ ತೆಗೆದುಕೊಳ್ಳುವ ಕೆಲಸವನ್ನು ಮೊದಲು ಮಾಡಬೇಕೆಂದಿದ್ದನು. ಈ ಕಾರಣಗಳಿಂದಾಗಿ ಮಾಸೂದಖಾನನ ನಿರೋಪಕ್ಕೆ ಒಪ್ಪಿಗೆ ಕೊಟ್ಟನು. ಮೊದಲಿನಂತೆಯೇ ಮತ್ತೆ ಹೊಸದಾಗಿ ಬಹಳ ಗಟ್ಟಿಮುಟ್ಟಾದ ಕರಾರುಗಳನ್ನು ನಿರ್ಧರಿಸಿ ದಿಲೇರಖಾನನು ತನ್ನ ಸೈನ್ಯವನ್ನು ತನ್ನ ಇಬ್ಬರು ಮೂವರು ಸರದಾರರೊಂದಿಗೆ ಮಾಸೂದಖಾನನ ಸಹಾಯಕ್ಕೆ ಕಳಿಸಿದನು.[೧]

ನೇಮಕಗೊಂಡ ಸರದಾರರು ವಿಜಾಪುರದ ಹತ್ತಿರ ಹೋಗಿ ಮುಟ್ಟಿದಾಗ ಮಾಸೂದಖಾನನು ತಾನೇಸ್ವತಃ ದಿಲೇರಖಾನನ ಸರದಾರರ ಎದುರಿಗೆ ಹೋಗಿ 'ಜೇಬೀನ' ಹತ್ತಿರ ಕರೆತಂದು ಅಲ್ಲಿಂದ ಆ ಸರದಾರ ಜನರನ್ನು ಬಾದಶಾಹೀ ದರಬಾರದಲ್ಲಿ ಮುಜುರೆ ಮಾಡಿಸಿ ಅವರು ತಿರುಗಿ ಹೋಗಲು ನಿರೋಪ ಕೊಟ್ಟನು. ಒಂದು ವಾರದ ಅನಂತರ ಅದೇ ಸರದಾರ ಮಂಡಳಿಯನ್ನು ಕೋಟೆಯ ಒಳಗಡೆ ಕರೆಯಿಸಿ ಬಾದಾಶಾಹೀ ದರಬಾರದಲ್ಲಿ ಕರೆತಂದು ಬಾದಶಹನಿಗೆ ಅವರಿಂದ ಮುಜುರೆ ಮಾಡಿಸಿದನು. ಮತ್ತು ಪ್ರತಿಯೊಬ್ಬರಿಗೂ ಬಾದಶಹನ ಕಡೆಯಿಂದ ವಸ್ತ್ರಗಳನ್ನು ಕೊಡಿಸಿ ನಿರೋಪ ಕೊಟ್ಟನು. ಮೂರನೆಯ ದಿನ ಆಜ್ಞೆಮಾಡಿ ಶತ್ರುಗಳ ಮೇಲೆ ಏರಿ ಹೋಗಬೇಕು ಮತ್ತು ತನ್ನ ಸೈನ್ಯವನ್ನೂ ವೆಂಕಟಾದ್ರಿ ಮತ್ತು ಬೇರೆ ಸರದಾರರೊಂದಿಗೆ ಕೊಟ್ಟು, ಅವರ ಜೊತೆಗೆ ಕಳಿಸಿದನು. ಆಗ ದೆಹಲಿ ಕಡೆಯ ಸೈನ್ಯವು ಕೂಚಮಾಡಿ ಮೋಜೆ ತಿಕೋಟಾದಲ್ಲಿ ಮುಕ್ಕಾಮ ಮಾಡಿತು. ಅಲ್ಲಿ ಗುಪ್ತಚಾರರು "ಶಿವಾಜಿಯು ಏಳೆಂಟು ಸಾವಿರ ಸವಾರರು, ಭಲ್ಲೆಕಾರರು, ಕತ್ತಿವರೆಸಗಾರರು, ಮೊದಲಾದ ಹತ್ಯಾರಬಂದ ಜನರೊಂದಿಗೆ ಪೂರ್ಣ ಸಿದ್ಧತೆಯಿಂದ ಸಾಂಗೋಲಾದಲ್ಲಿ ಬಂದು ಇಳಿದಿದ್ದಾನೆ. ಮತ್ತು ಮೊಗಲರ ಸೈನ್ಯ ಹಾಗೂ ಆದಿಲಶಾಹಿ ಸೈನ್ಯದ ಮೇಲೆ ರಾತ್ರಿ ಮುತ್ತಿಗೆ ಹಾಕಬೇಕೆಂಬುದು ಅವನ ಇರಾದೆಯಾಗಿದೆ" ಎಂಬುದಾಗಿ ಸುದ್ದಿ ತಂದರು.

ಮಾಸೂದಖಾನನು ಸಯ್ಯದ ಮಖದೂಮನಿಗೆ ತಾಕೀದು ಮಾಡಿ 'ನೀವು ತಕ್ಷಣ ಕುದುರೆಸವಾರರಾಗಿ ಇತ್ತಕಡೆಯ ಸೈನ್ಯವನ್ನು ಸೇರಬೇಕು' ಎಂದು ಹೇಳಿದನು. ಅದೇ ದಿನ ಸಯ್ಯದ ಮಖದೂಮನು ಹೆಂಡತಿಯೊಂದಿಗೆ ಹೊರಟು ಷರ್ಜಾಪುರದಲ್ಲಿ ಬಂದು ಇಳಿದನು. ನಸುಕಿನಲ್ಲಿ ಮತ್ತೆ ಮಸೂದಖಾನನು ಸಯ್ಯದ ಮಖದೂಮನಿಗೆ ನಿರೋಪ ಕಳಿಸಿದನು. 'ನೀವು ಅತ್ಯಂತ ಶೀಘ್ರವಾಗಿ ಬಂದು ಸೈನ್ಯವನ್ನು ಕೂಡಿಕೊಳ್ಳಬೇಕೆಂದು ಹೇಳಿ ತಿಳಿಸಿದನು. ಹೀಗೆ ಹೇಳಿಕಳಿಸಿದರೂ ಸಯ್ಯದ ಮಖದೂಮನು 'ಆಗಲಿ,

---

೧. ಶಕೆ ೧೬೦೧ ಮಾಘಮಾಸ (ಜನವರಿ/ಫೆಬ್ರುವರಿ ೧೬೮೦) ಆದಿಲಶಾಹ- ಮೊಗಲರ ಒಪ್ಪಂದ. ವಿಜಾಪುರದ ಮುತ್ತಿಗೆ ತೆರೆಯಿತು. ಶಕೆ ೧೬೦೨ ಶ್ರಾವಣ ಮಾಸ (ಜುಲೈ/ಆಗಸ್ಟ ೧೬೮೦) ಬಹಾದೂರಖಾನನು ಸುಬೇದಾರನಾಗಿ ಬಂದನು. ಜೇಧೆ ಶಕಾವಲಿ ಪುಟ ೩೦. On the first March 1680 Khan Jahan Bahadur Zafar Jung kokaltash khan became Subedar of the Deccan vice the eldest prince -MI A p.11

ಆಗಲಿ' ಎನ್ನುತ್ತ ಬಂದು ಸೇರಲೇ ಇಲ್ಲ. ಪ್ರತಿಯಾಗಿ ಮಾಸೂದಖಾನನಿಗೆ ಹೇಳಿ ಕಳಿಸುತ್ತ 'ನಮ್ಮ ಕಡೆಯ ಸೈನಿಕರಿಗೆ ಖರ್ಚಿಗಾಗಿ ಏನೂ ಇಲ್ಲ. ನೀವು ಪೇಶಗೀಯಾಗಿ ಹದಿನೈದು ಸಾವಿರ ಹೊನ್ನುಗಳನ್ನು ಕೊಡುವುದಾಗಿ ಒಪ್ಪಿ ನಾಲ್ಕು ಸಾವಿರ ಹೊನ್ನುಗಳನ್ನು ಕೊಟ್ಟಿದ್ದೀರಿ. ಉಳಿದದ್ದನ್ನು ಹಿಂದಕ್ಕೆಯೇ ಹಾಕಿದಿರಿ. ಮತ್ತು ದಿಲೇರಖಾನನ ಕಡೆಯಿಂದ ಸೈನ್ಯದ ಹೆಸರಿನಲ್ಲಿ ತೆಗೆದುಕೊಂಡದ್ದರಲ್ಲಿ ಒಂದು ದಮಡಿಯನ್ನೂ ನನಗೆ ಕೊಟ್ಟಿಲ್ಲ. ಇಂಥದ್ದರಲ್ಲಿ ನಾನು ಹೇಗೆ ಹೋಗಬೇಕು? ಆದ್ದರಿಂದ ಕೊಡಬೇಕಾದದ್ದನ್ನು ಕಳಿಸಿಕೊಡಿರಿ. ಅದನ್ನು ಸೈನ್ಯದಲ್ಲಿ ಹಂಚಿಕೊಟ್ಟು ಹೊರಟು ಬರುತ್ತೇನೆ' ಎಂದು ಹೇಳಿ ಕಳಿಸಿದನು. ಆಗ ಮಾಸೂದಖಾನನು ಉತ್ತರ ಕಳಿಸುತ್ತ "ನೀವು ಜಾತಿಯಿಂದ ಮುಸಲ್ಮಾನರು, ಒಳ್ಳೆಯ ಮನುಷ್ಯ, ನಿಜವಾದ ಸೈನಿಕರಾಗಿದ್ದು ಹೆಸರಾಂತ ಸರದಾರರೂ ಆಗಿದ್ದೀರಿ. ಇಂಥ ಸಮಯದಲ್ಲಿ ಹೀಗೆ ಅಡ್ಡಿ ಮಾಡಿದರೆ, ಮತ್ತು ಹೀಗೆ ಮಾತನಾಡಿದರೆ, ಅದು ನಿಮ್ಮ ಯೋಗ್ಯತೆಗೆ ಶೋಭಿಸುವುದಿಲ್ಲ. ನಾನು ನಿಮ್ಮೊಂದಿಗೆ ಕರಾರು ಮಾಡಿದಂತೆ ನಿಮಗೆ ಮಹಾಲ ಮತ್ತು ಜಹಾಗೀರುಗಳನ್ನು ಮೊಕಾಸೆಯಾಗಿ ಕೊಟ್ಟಿರುವೆ. ನನ್ನ ಮೇಲೆ ಯಾವ ಶಬ್ದವೂ ಉಳಿದಿಲ್ಲ. ಇಂಥ ಸಂದಿಗ್ಧ ಸಮಯದಲ್ಲಿ ಹಿಂದೆ ಸರಿಯುವುದು ಮತ್ತು ನಮ್ಮ ಹತ್ತಿರ ಯಾವ ಸಾಮಾನು ಸರಂಜಾಮುಗಳೂ ಇಲ್ಲವೆಂದು ನಾಟಕವಾಡುವುದು ಶೂರರ ಲಕ್ಷಣವಲ್ಲ" ಎಂದು ಉತ್ತರ ಬರೆದು ಕಳಿಸಿದನು. ಅದಕ್ಕೆ ಮತ್ತೆ ಸಯ್ಯದ ಮಖದುಮನು ಉತ್ತರ ಕಳಿಸುತ್ತ 'ನಾನು ಜಾತಿಯಿಂದ ಮುಸಲ್ಮಾನ, ನಿಷ್ಕಪಟ ಮನದವನು. ಮತ್ತು ಅದರಲ್ಲಿ ಪವಿತ್ರ ವಿಶ್ವಾಸವಿಟ್ಟವನು. ನಾನು ನಿಮ್ಮೊಂದಿಗೆ ನಿರ್ಧರಿಸಿದ ಕರಾರಿನಂತೆ ಸುಮ್ಮನೆ ಸ್ವೀಕರಿಸಿ ಕುಳಿತಿರುವೆ. ನೀವು ಕೃತಘ್ನರಿದ್ದೀರಿ. ನಿಮ್ಮಲ್ಲಿ ಪ್ರಾಮಾಣಿಕತೆ ಇಲ್ಲ. ಮೊದಲು ತೈಗಡದ ಕೋಟೆಯನ್ನು ನನಗೆ ಕೊಡುವುದಾಗಿ ಕರಾರು ಮಾಡಿ ಮತ್ತೆ ಕೊಡಲು ಅನುಮಾನ ಮಾಡಿದಿರಿ. ಕರಾರಿನಂತೆ ನಡೆದುಕೊಳ್ಳಲಿಲ್ಲ. ನನಗೆ ನೀವು ಕೊಟ್ಟ ಜಮಾಬಂದಿಯ ಪಾಲಿನಲ್ಲಿ ಅರ್ಧಕೂಡ ನನ್ನ ಕೈಗೆ ಬರುತ್ತಿಲ್ಲ. ನನ್ನ ಕಡೆಯ ಜನರನ್ನು ಮೋಸಗೊಳಿಸಿ, ಅವರಿಗೆ ನಾನಾ ಪ್ರಕಾರದ ದುರ್ಬುದ್ಧಿಗಳನ್ನು ಕಲಿಸಿ, ನೀವು ನಿಮ್ಮ ಕಡೆಗೆ ಮಾಡಿಕೊಂಡಿರಿ ಮತ್ತು ಲಾರಖಾನ ಝುಂಡೇವಾಲಾನನ್ನು ಚಾಕರಿಯ ಮೇಲೆ ಇಟ್ಟಿದ್ದೀರಿ ಇರಲಿ ಚಿಂತೆ ಇಲ್ಲ. ನಾನೂ ಕೂಡ ಹೆಸರಿನಿಂದ ಷರ್ಜಾಖಾನನಿದ್ದೇನೆ. ಈ ಷರ್ಜಾಖಾನನು ಒಂದು ವೇಳೆ ಜೀವಂತವಾಗಿ ಉಳಿದರೆ ಹೃದಯ ಬೇಧಿಸುವ ಕತ್ತಿಗಳಿಂದ ಶತ್ರುಗಳ ರುಂಡಗಳನ್ನು ಹಾರಿಸುವೆ" ಎಂದು ಬರೆದು ಕಳಿಸಿದನು.

### *೨೮. ಶಿವಾಜಿಯನ್ನು ಶಿಕ್ಷಿಸಲು ಮಾಸೂದಖಾನನ ಜೊತೆಗೆ ಹೋಗಲು ಷರ್ಜಾಖಾನನ ನಿರಾಕರಣೆ ಉಭಯತರಲ್ಲಿ ವಿರಸ :*

ಸಯ್ಯದ ಮಖದೂಮ ಮಾಸೂದಖಾನನ ಚಾಕರಿಯನ್ನು ಮಾಡಲಿಲ್ಲ. ಮಾಸೂದಖಾನನ ಸೈನ್ಯವನ್ನು ಹೋಗಿ ಸೇರಲಿಲ್ಲ. ಆದರಿಂದ ಉಭಯತರಲ್ಲಿ ಬಹಳೇ ವಿರಸ ಉಂಟಾಯಿತು. ಆಗ ಮಾಸೂದಖಾನನು ಈ ವಿಷಯದಲ್ಲಿ ಸಯ್ಯದ ಮಖದೂಮನೊಂದಿಗೆ ಮಾತನಾಡುವುದನ್ನಾಗಲೀ ಮುಂದಿನ ಪ್ರಯತ್ನವನ್ನಾಗಲೀ ತಾನು ಮಾಡುವುದನ್ನೇ ಬಿಟ್ಟನು. ಆದರೆ ಅವನನ್ನು ಪ್ರಚೋದಿಸಿ, ಅವನ ಮನಸ್ಸಿನಲ್ಲಿಯ ವಿರಸವನ್ನು ತೆಗೆದು ತನ್ನ ಸೈನ್ಯದ ಜೊತೆಗೆ ಕರೆದುಕೊಂಡು ಹೋಗಲು, ತನ್ನ ಸೈನ್ಯದಲ್ಲಿಯ ವೆಂಕಟಾದ್ರಿಯನ್ನು ಒಬ್ಬನನ್ನೇ ಕರೆದು ತಂದನು. ಇಂಥ ಸಮಯದಲ್ಲಿ ಕರ್ಮಧರ್ಮ ಸಂಯೋಗದಿಂದ ಬೇರೊಂದೇ ಉಪಾಯಕಂಡಿತು. ಅಬ್ದುಲಖಾನ ಕಿಲ್ಲೇದಾರ ಯೇಲೂರು ಈತ ಶಿವಾಜಿಯೊಂದಿಗೆ ಬಹುದೊಡ್ಡ ಯುದ್ಧವನ್ನು ಮಾಡಿದ ಅನಂತರ ಮತ್ತು ಶಿವಾನ ಕಡೆಯ ಜನರ

ಕೋಟೆಗಳ ಮೇಲೆ ಏಳೆಂಟು ತಿಂಗಳ ಹಲ್ಲೆಯಿಂದ ಉಭಯತರೂ ಜೇರಿಗೆ ಬಂದು ಶಿವಾನಿಂದ ಐವತ್ತು ಸಾವಿರ ಹೊನ್ನುಗಳನ್ನು ಪಡೆದು ವಿಜಾಪುರದ ಕೋಟೆಯನ್ನು ಶಿವಾನ ವಶಕ್ಕೆ ಕೊಟ್ಟು ತಾನು ಹೆಂಡಿರುಮಕ್ಕಳು, ತನ್ನ ಸಾಮಾನುಸರಂಜಾಮುಗಳೊಂದಿಗೆ ವಿಜಾಪುರದಿಂದ ಹೊರಗೆ ಬಂದು, ಜೋರಾಪುರದಲ್ಲಿ ಇರಹತ್ತಿದ್ದನು.

ಶಿವಾನು ನಗರದ ಸಮೀಪ ಬಂದು ಲೂಟಿ ಮಾಡುತ್ತಿರುವಾಗ ಮಾಸೂದಖಾನನು ಅಬ್ದುಲ್ಲಾಖಾನನನ್ನು ಕೋಟೆಯ ಒಳಗಡೆ ಕರೆಸಿದ್ದನು. ಅನಂತರ ಅವನ ಮೇಲೆ ಅಪರಾಧ ಹೊರಿಸಿ ಅವನನ್ನು ಹಿಡಿದಿದ್ದನು. ಬಾದಶಹರ ಕೋಟೆಯನ್ನು ಶತ್ರುಗಳಿಗೆ ಮಾರಿ ತೆಗೆದುಕೊಂಡ ಹಣ ಸರಕಾರದ್ದಾಗಿದೆ. ಅದನ್ನು ಕೊಡಬೇಕು. ಎಂಬುದಾಗಿ ಅವನಿಗೆ ಎಚ್ಚರಿಕೆ ನೀಡಿ, ಆತನ ಮೇಲಿನ ಅಪರಾಧವನ್ನು ಶಾಬೀತು ಮಾಡಿದನು. ಆಗ ಅಬ್ದುಲಖಾನನು ನಿರುಪಾಯವಾಗಿ ಷರ್ಜಾಖಾನನ ಕಡೆಗೆ ಹೋಗಿ ಸೇರಿದ್ದನು. ಮತ್ತು ಹತ್ತು ಸಾವಿರ ಹೊನ್ನುಗಳನ್ನು ಷರ್ಜಾಖಾನನಿಗೆ ಕೊಟ್ಟು ಆಶ್ರಯದಲ್ಲಿ ಬಿದ್ದನು. ಮಾಸೂದಖಾನನು ಕೂಡ ಒಳ್ಳೆಯ ಬೇಟೆ ಸಿಕ್ಕಿತೆಂದು ತಿಳಿದು ಅವನಿಂದ ಐವತ್ತುಸಾವಿರ ಹೊನ್ನುಗಳನ್ನು ತಿರುಗಿ ತೆಗೆದುಕೊಳ್ಳಬೇಕೆಂದು ಬಯಸಿದ್ದನು. ಆ ಬೇಟೆ ಕೈಯಿಂದ ಜಾರಿ ಹೋದುದಕ್ಕೆ ಖಿನ್ನರಾಗಿ ಸಯ್ಯದ ಮಖದೂಮನ ಕಡೆಯಿಂದ ಅವನನ್ನು ಕರೆಯಿಸಿದನು. ಆದರೆ ಆತ ತುಂಬ ಹಟ ಹಿಡಿದನು. ಈ ವರ್ತನೆಯಿಂದ ಮಾಸೂದಖಾನನ ಮತ್ತು ಸಯ್ಯದ ಮಖದೂಮರ ಮಧ್ಯ ಬಹಳೇ ವಿರಸ ಉಂಟಾಗಿ ವೈರತ್ವಕ್ಕೆ ತಿರುಗಿತು. ಸಂಕಟಗಳೂ ಅಧಿಕವಾದುವು. ಆಗ ಮೀರೀಶಾಹನು ಸಂಕಟಗಳನ್ನು ನಂದಿಸುವುದಕ್ಕಾಗಿ ಬಹಳ ಪ್ರಯತ್ನ ಪಟ್ಟನು. ಆದರೆ ಸಯ್ಯದ ಮಖದೂಮನ ಹತ್ತಿರ ಕುಳಿತುಕೊಳ್ಳುವ ಜನರು ಈ ವೈರತ್ವ ಮುರಿದು ಸ್ನೇಹಕ್ಕೆ ಪರಿವರ್ತಿಸಲು ಬಿಡಲಿಲ್ಲ. ಗಳಿಗೆ-ಗಳಿಗೆಗೆ ಇನ್ನಷ್ಟು ಅಧಿಕವಾದ ಜಗಳ-ವಿರಸ, ನಾನಾಪ್ರಕಾರದ ಒಳಸಂಚುಗಳು ಆಗುವಂತೆ ಘಟನೆಗಳು ನಿರ್ಮಾಣವಾದವು.

### *೨೯. ದಿಲೇರಖಾನನು ಭೂಪಾಳಗಡ ಕೋಟೆಯನ್ನು ಕೆಡವಿ ನಾಶಮಾಡಿದ್ದು :*

ಶಿವಾಜಿಯು ಮಾಂಜರಿಯ ಹತ್ತಿರದ ಪರ್ವತಗಳಲ್ಲಿ ಒಂದು ಕೋಟೆಯನ್ನು ಗಟ್ಟಿಯಾಗಿ ಕಟ್ಟಿ ಆ ಕೋಟೆಗೆ ಭೂಪಾಳಗಡ ಎಂದು ಹೆಸರಿಟ್ಟು ತನ್ನ ಆಶ್ರಯಕ್ಕೆ ಆಧಾರ ಮಾಡಿಕೊಂಡಿದ್ದನು. ತನ್ನ ಸಾಮಾನು ಸರಂಜಾಮುಗಳನ್ನು ಮಾಲಮತ್ತೆ ಇತ್ಯಾದಿಗಳನ್ನು ಆ ಕೋಟೆಯಲ್ಲಿಯೇ ಇಟ್ಟಿದ್ದನು. ಆ ಸಮಯದಲ್ಲೆ ಶಿವಾಜಿಗೆ ಮೊಗಲರೊಂದಿಗೆ ಯುದ್ಧಮಾಡುವ ಪ್ರಸಂಗ ಬಂದಿತು. ಆದ್ದರಿಂದ ಆ ಕೋಟೆಯಲ್ಲಿ ಅನುಭವಿಕ ಯೋಧರನ್ನು ಇಟ್ಟು ವ್ಯವಸ್ಥೆಮಾಡಿದನು. ಮೊಗಲರ ಸೈನ್ಯ ಬರುತ್ತಿದೆಯೆಂದು ನಾಲ್ಕು ನಿಟ್ಟುಗಳಿಂದಲೂ ಸುದ್ದಿ ಬಂದಿತು. ಆ ಭಯದಿಂದ ತರಫ-ತರಫಗಳಿಂದಲೂ, ಕಸಬೆಗಳಿಂದಲೂ, ಊರೂರುಗಳಿಂದ ಎಲ್ಲ ಜನರು ತಂತಮ್ಮ ಹೆಂಡಿರು ಮಕ್ಕಳು, ಸಾಮಾನು, ಸರಂಜಾಮು, ಮಾಲ ಮತ್ತೆಯೊಂದಿಗೆ ಬಂದು ಕೋಟೆಯನ್ನೆ ಆಶ್ರಯ ಮಾಡಿಕೊಂಡು ಅಲ್ಲಿಗೆ ಬಂದು ಇದ್ದರು.

ಈ ಸುದ್ದಿ ದಿಲೇರಖಾನನಿಗೆ ತಿಳಿದು ಆತ ಆ ಕೋಟೆಯನ್ನು ವಶಪಡಿಸಿಕೊಳ್ಳಲು ಹೊರಟನು. ಬೆಳಗಿನ ಸಮಯಕ್ಕೆ ಕೋಟೆಯಮೇಲೆ ಹಲ್ಲೆ ಮಾಡಿದನು. ದಿನದ ಎರಡು ಪ್ರಹರಗಳ ಪರ್ಯಂತ ದೊಡ್ಡ ಯುದ್ಧವೇ ಆಯಿತು. ಉಭಯ ಕಡೆಗಳಲ್ಲಿ ಬಹಳ ಜನರು ನಾಶವಾದರು. ಹಣದ ರಾಶಿಯನ್ನು ಕಂಡ ದರಿದ್ರನೊಬ್ಬ ಅದನ್ನು ಪಡೆಯಲು ತನ್ನ ಜೀವವನ್ನೆ ಪಣವಾಗಿಡುವಂತೆ ದಿಲೇರಖಾನನು

ಆ ಕೋಟೆಯ ಬೆನ್ನು ಹತ್ತಿ ಹಲ್ಲೆ ಮಾಡಿದನು. ಅದೇ ದಿನ ಆ ಕೋಟೆಯನ್ನು ವಶಪಡಿಸಿಕೊಂಡನು.[೧] ಮತ್ತು ಅಲ್ಲಿದ್ದ ಎಲ್ಲರ ಸಂಪತ್ತನ್ನು ಹರಣ ಮಾಡಿದನು. ಜನರನ್ನೆಲ್ಲ ಬಂಧಿಸಿದನು. ಬಂಧಿತರಾಗಿದ್ದ ಶಿವಾನ ಕಡೆಯ ಏಳೂನೂರು ಜನರ ಒಂದೊಂದು ಕೈಯನ್ನು ಕಡಿದು ಅವರನ್ನೆಲ್ಲ ಬಂಧ ಮುಕ್ತ ಮಾಡಿದನು. ಆ ಗದ್ದಲದಲ್ಲಿ ಬಹಳಷ್ಟು ಜನರು ಸತ್ತರು. ಕೋಟೆಯ ಸಂರಕ್ಷಣೆಗೆ ಈ ಮೊದಲು ಶಿವಾನು ಹದಿನಾರು ಸಾವಿರ ಸ್ವಾರರನ್ನು ಕಳಿಸಿದ್ದನು. ಆ ಸೈನ್ಯ ಬಂದು ಮುಟ್ಟುವ ಮೊದಲೇ ಕೋಟೆಯು ಮೊಗಲರ ಕೈಗೆ ಬಂದಿತು.

ಅನಂತರ ಶಿವಾನ ಕಡೆಯ ಸೈನ್ಯವು ಯುದ್ಧ ರಚನೆ ಮಾಡಿ ಮೊಗಲರ ಸೈನ್ಯವನ್ನು ನಾಲ್ಕು ಕಡೆಗಳಿಂದಲೂ ಸುತ್ತುವರಿಯಿತು. ಇಷ್ಟರಲ್ಲಿ ಒಮ್ಮಿಂದೊಮ್ಮಲೇ ಶಿವಾನ ಕಡೆಯ ಸೈನಿಕರಿಗೆ ಒಂದು ಸುದ್ದಿ ತಿಳಿಯಿತು. ಈರಿಚಖಾನ ಮತ್ತು ಬಜಾಜೀರಾವ ಕೂಡಿಕೊಂಡು ಪರಾಂಡಾ ಕಡೆಯಿಂದ ಬರುತ್ತಿದ್ದು, ಅವರು ದಿಲೇರಖಾನನ ಸೈನ್ಯಕ್ಕಾಗಿ ಆಹಾರ ಸಂಗ್ರಹವನ್ನು ತರುತ್ತಿದ್ದಾರೆಂದು ತಿಳಿಯಿತು. ಅದನ್ನು ಕೇಳಿದಕೂಡಲೆ ಶಿವಾಜಿಕಡೆಯ ಸೈನ್ಯವು ಈರಿಚಖಾನನ ಮೇಲೆ ಏರಿ ಬಂದಿತು. ಆಗ ದಿಲೇರಖಾನನು ಈರಿಚಖಾನನ ಸಹಾಯಕ್ಕಾಗಿ ಒಂದೂವರೆ ಸಾವಿರ ಸೈನ್ಯಕೊಟ್ಟು ಇಖಲಾಸಖಾನನನ್ನು ಕಳಿಸಿದನು. ಕೋಟೆಯಿಂದ ಆರು ಕೋಸುಗಳ ಅಂತರದಲ್ಲಿ ಉಭಯ ಬಣಗಳಲ್ಲಿ ದೊಡ್ಡ ಯುದ್ಧವೇ ಆಯಿತು. ಇಖಲಾಸಖಾನನ ಸೈನ್ಯ ಸ್ವಲ್ಪ ಇದೆಯೆಂದು ತಿಳಿದ ಶಿವಾನ ಕಡೆಯ ಸೈನ್ಯವು ಅವರನ್ನು ಎಲ್ಲ ದಿಕ್ಕುಗಳಿಂದಲೂ ಸುತ್ತುವರಿಯಿತು.

ಇಖಲಾಸಖಾನನು ಒಂದು ಗ್ರಾಮದ ಆಶ್ರಯ ಪಡೆದು ಯುದ್ಧವನ್ನು ಎದುರಿಸಿದನು. ದಿನದ ಮೂರನೆಯ ತಾಸಿನಿಂದ ಒಂಭತ್ತನೆಯ ತಾಸಿನವರೆಗೆ ನಿರಂತರ ಯುದ್ಧ ನಡೆಯಿತು. ಶಿವಾನ ಜನರು ನಾಲ್ಕು ನಿಟ್ಟಿನಿಂದಲೂ ಹಲ್ಲೆ ಮಾಡುತ್ತಿದ್ದರು. ಇಖಲಾಸಖಾನನು ಆ ಗ್ರಾಮದಿಂದಲೇ ಗೋಡೆಗಳ ಮೇಲಿಂದ ತೋಫುಗಳನ್ನು ಹಾರಿಸುತ್ತಿದ್ದನು. ಪ್ರತಿ ಹಲ್ಲೆಯಲ್ಲಿ ಶಿವಾನ ಕಡೆಯ ಬಹಳ ಜನರು ಸಾಯುತ್ತಿದ್ದರು. ಸುಮಾರು ಸಾವಿರ ಜನ ಸತ್ತರು. ದಿಲೇರಖಾನನಿಗೆ ಸುದ್ದಿ ತಿಳಿಯುತ್ತಿದ್ದಂತೆ ತಕ್ಷಣ ಸರ್ಫರಾಜಖಾನ ಮತ್ತು ಲತೀಫಶಾಹರ ಜೊತೆಗೆ ಸೈನ್ಯವನ್ನು ಕೊಟ್ಟು ಇಖಲಾಸಖಾನನ ಸಹಾಯಕ್ಕೆ ಕಳಿಸಿಕೊಟ್ಟನು. ಅದರ ಬೆನ್ನಹಿಂದೆಯೇ ತಾನು ಸ್ವತಃ ಸೈನ್ಯ ತೆಗೆದುಕೊಂಡು ವೇಗದಿಂದ ಇಖಲಾಸಖಾನನ ಕಡೆಗೆ ಹೊರಟನು. ಹತ್ತಿರ ಹೋಗುತ್ತಿದ್ದಂತೆ ಶಿವಾನ ಸೈನ್ಯವು ಅವನನ್ನು ಕಂಡು ಓಡಿ ಹೋಯಿತು. ಒಂದೆರಡು ಕೋಸುಗಳ ವರೆಗೆ ದಿಲೇರಖಾನನು ಅವರ ಬೆನ್ನು ಹತ್ತಿ ತಿರುಗಿದನು. ಮತ್ತೆ ಭೂಪಾಲಗಡದ ಮೇಲೆ ಏರಿ ಬಂದು ಆ ಕೋಟೆಯನ್ನು ನೆಲಸಮ ಮಾಡಿದನು.

### *೩೦. ಕರಾರಿನಂತೆ ನಡೆಯದ್ದರಿಂದ ಮಾಸೂದಖಾನನಿಗೆ ದಿಲೇರಖಾನನ ಬೆದರಿಕೆ :*

ಅನಂತರ ದಿಲೇರಖಾನನು ಮಾಸೂದಖಾನನಿಗೆ ಒಂದು ಬೆದರಿಕೆಯ ಪತ್ರ ಬರೆದು ಕಳಿಸಿದನು. ಅವನಿಗೆ ಅಂಜಿಕೆ ಹಾಕುತ್ತ, 'ನಿನ್ನ ಮಾತು ಮತ್ತು ವರ್ತನೆಗಳೆಲ್ಲ ಮೋಸದ್ದಾಗಿಯೆಂದು ನಮಗೆ ಪೂರ್ತಿಯಾಗಿ ತಿಳಿದಿದೆ. ನಿನ್ನ ಮನದಲ್ಲಿಯ ಇರಾದೆ ಕೂಡ ವಂಚನೆಯ ಹೊರತಾಗಿ ಬೇರೇನೂ ಇರಲಿಕ್ಕಿಲ್ಲ. ಗುಪ್ತವಾಗಿ

೧. ಶಕೆ ೧೬೦೧ ವೈಶಾಖ ಶುದ್ಧ ೨ ಗುರುವಾರ (೩ ಎಪ್ರಿಲ್, ೧೬೭೯) ದಂದು ದಿಲೇರಖಾನನು ಭೂಪಾಲಗಡವನ್ನು ತೆಗೆದುಕೊಂಡನು-ಜೇಧೆ ಶಕಾ ಪುಟ-೨೯

ಶಿವಾನೊಂದಿಗೆ ಸಖ್ಯವನ್ನಿಟ್ಟುಕೊಂಡು ನಮಗೆ ಮೋಸಮಾಡಲು ಬರುತ್ತಿದ್ದೀರಿ. ಇಲ್ಲದಿದ್ದರೆ ಕರಾರಿನಲ್ಲಿ ಒಪ್ಪಿದಂತೆ ಮಾಡದಿರಲು ಏನು ಕಾರಣಗಳಿವೆ. ಇಂದಿನವರೆಗೂ ಕರಾರುಗಳನ್ನು ಪೂರ್ತಿಗೊಳಿಸುವುದು ನಿನ್ನಂದಾಗಿಲ್ಲ' ಎಂಬುದಾಗಿ ಬರೆದು ಕಳಿಸಿದನು. ನಿರೋಪ ಕಳಿಸಿದ ಬೆನ್ನಲ್ಲಿಯೇ ಎರಡು ಮೂರು ದಿನಗಳಲ್ಲಿ ದಿಲೇರಖಾನನು ಕೂಚ ಮಾಡಿ ವಿಜಾಪುರ ನಗರದ ಹತ್ತಿರ ಹತ್ತು ಕೋಸುಗಳ ಅಂತರದಲ್ಲಿ ಹಲಸಂಗಿಯಲ್ಲಿ ಬಂದು ಇಳಿದನು. ಆಗ ಮಾಸೂದಖಾನನು ಬಹಳ ಗಾಬರಿಯಾಗಿ ತನ್ನ ಅವಸ್ಥೆಯ ವಿಷಯ ವಿವರಗಳನ್ನು ದಿಲೇರಖಾನನಿಗೆ ಹೀಗೆ ಜಾಹೀರು ಮಾಡಿದನು. "ನಾವು ತಮ್ಮೊಂದಿಗೆ ಮಾಡಿಕೊಂಡ ಕರಾರುಗಳನ್ನು ಬಿಟ್ಟು ವರ್ತಿಸುವುದು. ನಮ್ಮಿಂದ ಎಂದೂ ಸಾಧ್ಯವಿಲ್ಲ. ಕರಾರಿನಂತೆ ಸ್ವಲ್ಪ ದಿನಗಳಲ್ಲಿ ಬಾದಶಾಹ ಬೀಬಿಯನ್ನು ತಮ್ಮ ಹತ್ತಿರ ಕಳಿಸಿಕೊಡಲಾಗುತ್ತದೆ. ಮತ್ತು ನಾನು ನನ್ನ ಮಗನನ್ನು ಸೈನ್ಯಸಹಿತವಾಗಿ ತಮ್ಮ ಸಹಾಯಕ್ಕಾಗಿ ಕಳಿಸುವೆ. ತಡವಾದುದಕ್ಕೆ ಕಾರಣವೆಂದರೆ ಸಯ್ಯದ ಮಖದೂಮನ ಸೊಕ್ಕಿನ ಅರಿವು ತಮಗಿದೆ. ಅವನು ದಾರಿಗೇ ಬರುತ್ತಿಲ್ಲ. ಅದಕ್ಕಾಗಿ ತಡವಾಗಿದೆ. ಅವನನ್ನು ದಾರಿಗೆ ತಂದು ಎಲ್ಲ ಕೆಲಸಗಳನ್ನು ಪೂರ್ತಿ ಮಾಡಿಕೊಡುವೆ. ಈ ಬಗ್ಗೆ ನೀವು ಸ್ವಸ್ಥವಾಗಿರಬೇಕು. ಆದರೆ ನೀವು ಭೀಮಾ ನದಿಯ ಕಡೆಗೆ ಹೋಗಬೇಕು. ಯಾಕೆಂದರೆ ಪ್ರದೇಶಗಳೆಲ್ಲ ಕೆಡುತ್ತಲಿವೆ" ಆಗ ದಿಲೇರಖಾನನು ಹಲಸಂಗಿಯ ಮುಕ್ಕಾಮಿನಿಂದ ಕೂಚ್ ಮಾಡಿ ಭೀಮಾನದಿಯ ಧೋಲಗೀರ (ಧೂಳಖೇಡ?) ಮತ್ತು ಟಾಕಳಿಯ ಕಡೆಗೆ ಹೋದನು.

### ೩೧. ಮಾಸೂದಖಾನ ಮತ್ತು ಷರ್ಜಾಖಾನರ ಮಧ್ಯ ತೀವ್ರ ವಿರಸ:

ಆದೇ ದಿನಗಳಲ್ಲಿ ಮಾಸೂದಖಾನ ಮತ್ತು ಸಯ್ಯದ ಮಖದೂಮ (ಷರ್ಜಾಖಾನ) ಉಭಯತರ ಮಧ್ಯ ಅನೇಕ ಕೆಲಸಗಳಿಂದಾಗಿ ತುಂಬ ವಿರಸವಾಯಿತು. ಬಹಳ ದ್ವೇಷವೇ ಉತ್ಪನ್ನವಾಯಿತು. ಇಬ್ಬರ ಕಡೆಗಳಿಂದಲೂ ವಿರಸದ ಅಗ್ನಿ ಹೊತ್ತಿಕೊಂಡಿತ್ತು. ಮಾಸೂದಖಾನನ ಎಲ್ಲ ಕೆಲಸಗಳನ್ನು ಕೆಡಿಸಿ ದಿನರಾತ್ರಿಯಲ್ಲಿ ದಂಗೆ ಹಾಕುತ್ತಿದ್ದನು. ಪ್ರತಿದಿನ ಯುದ್ಧಕ್ಕೆ ಸಿದ್ಧನಾಗಿ ಸಯ್ಯದ ಮಖದೂಮನು ತನ್ನ ಜಾಗೆಯಲ್ಲಿ ಕುಳಿತಿರುತ್ತಿದ್ದನು. ಬಹಲೋಲಪುರ ಮತ್ತು ಮೆಹೆದಿವಾಡಾಗಳಲ್ಲಿಯ ಬಾಜಾರುಗಳಲ್ಲಿ ಆತನ ಸೈನಿಕರು ರಸ್ತೆ ಇಬ್ಬದಿಗಳಲ್ಲಿ ಕುದುರೆಯಮೇಲೆ ಶಸ್ತ್ರಗಳನ್ನಿಟ್ಟುಕೊಂಡೇ ಹಗಲುರಾತ್ರಿ ಕುಳಿತಿರುತ್ತಿದ್ದರು. ಆಗ ಮಾಸೂದಖಾನನು ನಿರುಪಾಯನಾಗಿ ಸಯ್ಯದ ಮಖದೂಮನನ್ನು ಶಿಕ್ಷಿಸಲು ದಿಲೇರಖಾನನಿಂದ ಸಹಾಯ ಯಾಚಿಸಿದನು. ಆದಿಲಶಾಹಿ ರಾಜ್ಯದಲ್ಲಿ ಮೊಗಲರಿಂದ ಕುತಂತ್ರಗಳು, ದಂಗೆಗಳು ಆಗಲು ಇವೇ ಕಾರಣಗಳಾಗಿವೆ. ದಿಲೇರಖಾನನು ಎರಡು ಮೂರು ಸಾವಿರ ಸ್ವಾರರನ್ನು, ಬಾದಶಾಹೀ ತೋಫ ಖಾನೆಯನ್ನು ಇಖ್ತಿಯಾರಖಾನ ಊರ್ಫ ಅಬ್ದುಲ ರೇಯಾನ ಮತ್ತು ಅಬ್ದುಲ ಗಫೂರ, ವಜೀರ ಬೇಗ, ಶೇಖ ಮಹಮ್ಮದ ಜುನೇದಿ ಇವರುಗಳೊಂದಿಗೆ ಕೊಟ್ಟು ಸಯ್ಯದ ಮಖದೂಮನನ್ನು ಶಿಕ್ಷಿಸಲು ಕಳಿಸಿದನು. ಆಗ ದಿಲೇರಖಾನನ ಕಡೆಯ ಸದರೀ ಸರದಾರರು, ರಂಗಾರಿಯ ಹೌದಿನ ಹತ್ತಿರ ಬಂದು ನೀರಿನಲ್ಲಿ ಇಳಿದನು.

ಮಾಸೂದಖಾನನು ಅತ್ಯಂತ ಕ್ರೋಧದಿಂದ ಸಯ್ಯದ ಮಖದೂಮನೊಬ್ಬನನ್ನೇ ಶಿಕ್ಷಿಸುವ ಇರಾದೆ ಮಾಡಿದನು. ವೆಂಕಟಾದ್ರಿಯೂ ಸೈನ್ಯ ಸಹಿತವಾಗಿ ಮಕ್ಕಾ ದರವಾಜಾದಿಂದ ಹೊರಟು ಇಬ್ರಾಹಿಮ ಬಾದಶಹನ ಬಾಗಿಲ ಬಳಿ ಬಂದು ನಿಂತನು. ಕೋಟೆಯ ಮೇಲಿನ ತೋಫುಗಳನ್ನು ಸಯ್ಯದ ಮಖದೂಮನ ಕಡೆಗೆ ಗುರಿಯಾಗಿಟ್ಟುಕೊಂಡು ಸಿದ್ಧತೆಯಲ್ಲಿದ್ದರು. ಎಲ್ಲ ಜನರಿಗೂ 'ಯಾರು ಸಯ್ಯದ ಮಖದೂಮನ

ಕಡೆಯ ಜನರಿಂದ ಲೂಟಿ ಮಾಡುತ್ತಾರೋ ಅದು ಅವನಿಗೆ ದೊರೆಯುತ್ತದೆ' ಎಂದು ಆಜ್ಞೆ ಮಾಡಿದನು. ಲೂಟಿ ಮಾಡುವ ಜನರಿಗೆ ಇದೊಂದು ಸಂತೋಷದ ಸುದ್ದಿಯಾಯಿತು. ಎಲ್ಲ ಮಂಡಳಿಗಳು ಸೇರಿ ಲೂಟಿ ಮಾಡಲು ಸಯ್ಯದ ಮಖದೂಮನ ಮೇಲೆ ಏರಿ ಹೋದನು. ಆಗ ಷರ್ಜಾಪುರದಲ್ಲಿ ಸಯ್ಯದ ಮಖದೂಮನ ಸೈನ್ಯವು ಸಿದ್ಧವಾಗಿಯೇ ನಿಂತಿತ್ತು. ಸಯ್ಯದ ಮಖದೂಮನ ಸೈನ್ಯವು ಲೂಟಿ ಮಾಡುವ ಜನರನ್ನು ಹಿಡಿದು ಅವರ ಮೂಗನ್ನು ಕತ್ತರಿಸಿತೊಡಗಿದರು. ಹಿಂದೆ ಬರುತ್ತಿದ್ದ ಲೂಟಿಗಾರರ, ಅವಸ್ಥೆಯನ್ನು ಕಂಡು ತಮ್ಮ ಮೂಗನ್ನು ಸುರಕ್ಷಿತವಾಗಿ ಇಟ್ಟುಕೊಳ್ಳ ಬಯಸಿ ಮುಂದೆ ಹೆಜ್ಜೆ ಇಡಲಿಲ್ಲ. ವೆಂಕಟಾದ್ರಿಯು ಇತ್ತ ಕಡೆಯಿಂದ, ಮೊಗಲರು ಅತ್ತಕಡೆಯಿಂದ ಬಂದು ಮಧ್ಯದಲ್ಲಿ ಸಯ್ಯದ ಮಖದೂಮನನ್ನು ಹಿಡಿದು ಚೆನ್ನಾಗಿ ಶಿಕ್ಷಿಸಬೇಕೆಂದು ನಿಶ್ಚಯಿಸಿದ್ದರು. ಮೊಗಲ ಕಡೆಯ ಸೈನಿಕರು ಸಿದ್ಧರಾಗಿ ನಿಂತು ಯುದ್ಧ ಪ್ರಾರಂಭವಾದರೆ ತಮ್ಮ ಕುದುರೆಗಳನ್ನು ಓಡಿಸುವುದೆಂದು ನಿರ್ಧರಿಸಿದ್ದರು. ಸಯ್ಯದ ಮಖದೂಮನೂ ಸಿದ್ಧನಾಗಿಯೇ ತನ್ನ ಸ್ಥಳದಲ್ಲಿ ಜೀವದ ಆಶೆಯನ್ನು ಬಿಟ್ಟು ಕುಳಿತಿದ್ದನು. ಯಾರೂ ಯುದ್ಧವನ್ನೇ ಪ್ರಾರಂಭಿಸಲೊಲ್ಲರು. ಬ್ರಾಹ್ಮಣನಾದ ವೆಂಕಟಾದ್ರಿಗೆ ಸಯ್ಯದ ಮಖದೂಮನನ್ನು ಶಿಕ್ಷಿಸುವ ಸಂಧಿಯೇ ದೊರೆಯಲಿಲ್ಲ. ಎಲ್ಲರೂ ತಂತಮ್ಮ ಸ್ಥಳಗಳಲ್ಲಿ ಸುಮ್ಮನೆ ನಿಂತುಬಿಟ್ಟಿದ್ದರು. ಮತ್ತು ಯುದ್ಧವಾಗಲೀ ಗದ್ದಲವಾಗಲೀ ಆಗಲೇ ಇಲ್ಲ.

### ೩೨. *ಮಾಸೂದಖಾನನ ಬಗ್ಗೆ ಚಾಡಿ ಹೇಳಲು ಷರ್ಜಾಖಾನನು ದಿಲೇರಖಾನನ ಹತ್ತಿರ ಹೋದದ್ದು:*

**ಮಾ**ಸೂದಖಾನನು ತನ್ನ ಮೇಲೆ ಎಲ್ಲ ರೀತಿಯಿಂದ ಒತ್ತಡ ತಂದು, ಮೊಗಲರೊಂದಿಗೆ ಕೂಡಿ ತನ್ನನ್ನು ಸಂಪೂರ್ಣ ನಾಶಮಾಡಬೇಕೆಂದಿದ್ದಾನೆಂದು ತಿಳಿದ ಸಯ್ಯದ ಮಖದೂಮನು ತುಂಬ ಚಿಂತೆಯಲ್ಲಿ ಬಿದ್ದನು. ಮಲಿಕ ಬರಖುರದಾರನೊಡನೆ ಸ್ನೇಹ ಬೆಳೆಸಿದನು. ಮಾಸೂದಖಾನನ ಹಿಂಸೆಗೆ ಬೇಸತ್ತು ಆತ ದಿಲೇಖಾನನ ಹತ್ತಿರ ಹೋಗಬೇಕೆಂದೂ, ತನ್ನ ಮಗನನ್ನು ಪಾದಶಾಹಿ ಚಾಕರಿಯಲ್ಲಿಡಬೇಕೆಂದೂ ಬರಖುರದಾರನಿಗೆ ಹೇಳಿದನು. ಅನಂತರ ತನ್ನ ಮತ್ತು ಮಾಸೂದಖಾನನ ನ್ಯಾಯವನ್ನು ಕೇಳಿ ದಿಲೇರಖಾನನು ಆಜ್ಞೆ ಮಾಡಲಿ, ನಮ್ಮಿಬ್ಬರ ಮಧ್ಯೆ ಒಪ್ಪಂದ ಮಾಡಲಿ. ಮೊಗಲ ಜನ ತುಂಬ ಮೋಸಗಾರರಿದ್ದರು. ಅಷ್ಟೆಲ್ಲ ಕುತಂತ್ರ ಮೋಸಗಳು ಈತನಿಗೆ ಗೊತ್ತಿರಲಿಲ್ಲ. ದಿಲೇರಖಾನನ ವಕೀಲನಾದ ಆಷಕ ಮಹಮ್ಮದನು ಸಯ್ಯದ ಮಖಮುದೂಮನಿಗೆ ಹೇಳಿದನು. "ನೀವು ದಿಲೇರಖಾನನ ಕಡೆಗೆ ಹೋಗುವ ಯುಕ್ತಿ ಮಾಡಿದ್ದು ನಿಮ್ಮ ಬುದ್ಧಿ ಚೆನ್ನಾಗಿದೆ. ಮತ್ತು ಈ ವಿಷಯ ಕಲ್ಯಾಣದಾಯಕವಾಗಿದೆ. ಆದರೆ ನಿಮ್ಮ ಮನದಲ್ಲಿ ಮೋಸ-ಕಪಟಗಳಿಲ್ಲದಿದ್ದರೆ, ನೀವು ಮೊದಲು ನಿಮ್ಮ ಹೆಂಡಿರು ಮಕ್ಕಳನ್ನು ನಮ್ಮ ದಂಡಿನಲ್ಲಿ ಕಳಿಸಬೇಕು. ಆಗ ನಿಮ್ಮ ಮನದಲ್ಲಿ ಬೇರೇನೂ ಇಲ್ಲವೆಂದು ನಮಗೆ ಪೂರ್ಣ ವಿಶ್ವಾಸವಾಗುತ್ತದೆ. ಹಾಗೆ ನೀವು ಕಳಿಸಿದನಂತರ, ನೀವು ಸ್ವತಃ ಒಬ್ಬರೇ ಜೊತೆಗೆ ಯಾರನ್ನೂ ಕರೆತರದೆ ಬರಬೇಕು. ನಮ್ಮ ಸೈನ್ಯದೊಂದಿಗೆ ದಿಲೇರಖಾನನ ಹತ್ತಿರ ಹೋಗಬೇಕು". ಹೀಗೆಲ್ಲ ಹೇಳಿದನು.

ಆಗ ಆ ದಕ್ಷಿಣದ ಭೋಳೆ ಮನುಷ್ಯ, ಸಯ್ಯದ ಮಖದೂಮನು ಏನೊಂದು ವಿಚಾರಿಸದೆ ತನ್ನ ಹೆಂಡಿರು ಮಕ್ಕಳನ್ನು ಮಧ್ಯರಾತ್ರಿಯಲ್ಲಿ ಇಖ್ತಿಯಾರಖಾನನ ಹತ್ತಿರ ಕಳಿಸಿ ಕೊಟ್ಟನು. ಆಗ ಮಲಿಕ ಬರಖುರದಾರ ಮತ್ತು ಆರ್ಷಮಹಮ್ಮದರು ಮಾಸೂದಖಾನನಿಗೆ ನಿರೋಪ ಕಳಿಸಿ, ಸಯ್ಯದ ಮಖದೂಮನು

ದಿಲೇರಖಾನನ ಹತ್ತಿರ ಬಂದು, "ದಂಗೆಯನ್ನು ಮುಗಿಸಿಬಿಡಬೇಕೆಂದು ಆತನ ಮನಸ್ಸಿನಲ್ಲಿದೆ ಎಂದು ಹೇಳುತ್ತಿದ್ದಾನೆ. ಆದ್ದರಿಂದ ಇನ್ನು ಆತನ ಬೆನ್ನು ಹತ್ತಬೇಡಿ, ನೀನೇ ಆತನ ದುಃಖಕ್ಕೆ ಕಾರಣನಾಗಬೇಡ" ಎಂದು ಹೇಳಿ ಕಳಿಸಿದನು. ನಸುಕಿನಲ್ಲಿ ಸಯ್ಯದ ಮಖದೂಮನು ಇಖ್ತಿಯಾರಖಾನನ ಕಡೆಗೆ ಹೋದನು. ಮತ್ತು ಮೊಗಲರ ಜೊತೆಗೆ ಧೋಲಕೀರಗೆ (ಧೂಳಖೇಡಕ್ಕೆ) ಹೊರಟನು. ಅಲ್ಲಿಗೆ ಮುಟ್ಟಿದಾಗ ದಿಲೇರಖಾನನು ಅವನನ್ನು ಎದುರುಗೊಳ್ಳಲು ಭೀಮಾನದಿಯ ಈಚಿನ ದಡಕ್ಕೆ ಬಂದನು. ಬಹಳ ಸತ್ಕಾರಮಾಡಿ ಆದರದಿಂದ ತನ್ನ ದಂಡಿನ ಪಾಳೆಯಕ್ಕೆ ಕರೆದುಕೊಂಡು ಹೋದನು. ಹಿಂದೆ ತನ್ನ ಸೈನ್ಯವನ್ನು ಇಳಿಸಿದನು. ಆತನ ಹೆಂಡಿತರು ಮಕ್ಕಳನ್ನು ಬೇರೆಯಾಗಿ ತನ್ನ ಸೈನ್ಯದಲ್ಲಿ ಸುರಕ್ಷಿತವಾಗಿ ಇಡಲು ವ್ಯವಸ್ಥೆ ಮಾಡಿದನು. ಸಯ್ಯದ ಮಖದೂಮನು ತನ್ನ ಹೆಂಡಿರುಗಳಲ್ಲಿ ಇಬ್ಬರು ಮೂವರು ಹೆಂಡಿರನ್ನು ತನ್ನೊಂದಿಗೆ ಕರೆತಂದಿದ್ದನು. ಆಗ ವಕೀಲರು ಬಂದು ಆ ಹೆಂಡಿರನ್ನೂ ಅವನ ಡೇರೆಯಿಂದ ತಿರುಗಿ ಕರೆಸಿದರು. ಅವನ ಜನರನ್ನು ಮತ್ತು ಹೆಂಡಿರು ಮಕ್ಕಳನ್ನು ದಂಡಿನಲ್ಲಿ ಇಡುವುದು ಸರಿಯಲ್ಲವೆಂದು ತಿಳಿದು ಸರಬರಾಹಖಾನನ ಜೊತೆ ಮಾಡಿ ಅವರನ್ನೆಲ್ಲ ಬಾಳಾಪುರಕ್ಕೆ ಕಳಿಸಿದನು. ಇದನ್ನು ಕಂಡು, ಈ ವರ್ತನೆಗೆ ಸಯ್ಯದ ಮಖದೂಮನು, ಅವರ ರಕ್ಕತನ ಮತ್ತು ದಗಲಬಾಜಿಯನ್ನು ಗುರುತಿಸಿದನು. ಮತ್ತು ಸಾವಧನಾದನು.

ಆದರೆ ಕೆಲಸ ಕೈ ಮೀರಿತ್ತು. ಆದ್ದರಿಂದ ಏನೂ ಉಪಾಯವಿಲ್ಲವೆಂದು ಕಂಡು ದಿಲೇರಖಾನನಿಗೆ ಹೇಳಿ ಕಳಿಸಿದನು. ನಾವು ಮತ್ತು ಮಾಸೂದಖಾನನು ಉಭಯತರು ಅಣ್ಣ ತಮ್ಮಂದಿರಂತಿದ್ದೇವೆ. ಹೀಗಿದ್ದೂ ನಮ್ಮಿಬ್ಬರ ಮಧ್ಯ ಜಗಳವಾಯಿತು. ಆದ್ದರಿಂದ ನಾನು ತಮ್ಮ ಹತ್ತಿರ ಬಂದಿದ್ದೇನೆ. ನೀವು ಅಣ್ಣತಮ್ಮಂದಿರಲ್ಲಿ ಸಖ್ಯತನ ಬೆಳೆಸಬೇಕೆಂದು ಬಂದಿದ್ದೇನೆ. ಅದರಂತೆ ನಡೆಯಿರಿ. ಅದು ಬಿಟ್ಟು ಬೇರೆ ವರ್ತನೆ, ಅನ್ಯಾಯಮಾಡುವ ಮಾರ್ಗ ನಿಮಗೆ ಶೋಭಿಸುವುದಿಲ್ಲ. ಸುಳ್ಳು ಹೇಳಿ, ಕರಾರು ಬಿಟ್ಟು ನಡೆವುದು ನಿಮಗೆ ಸರಿಕಾಣುವುದಿಲ್ಲ. ಕರಾರಿನಂತೆ ನಾನು ನನ್ನ ಮಗನನ್ನು ಬಾದಶಹರ ಚಾಕರಿಯಲ್ಲಿ ಇಡುತ್ತೇನೆ. ನಿರಂತರವಾಗಿ ತಮ್ಮ ಮಿತ್ರತ್ವ ಮತ್ತು ಸಖ್ಯತೆಯನ್ನು ಧಾರಣಮಾಡಿಕೊಂಡು ಇರುವೆನು. ಆದರೆ ನ್ಯಾಯದಿಂದ ಮತ್ತು ಸತ್ಯಮಾರ್ಗದಿಂದ ನನ್ನ ಮತ್ತು ಮಾಸೂದಖಾನರ ಮಧ್ಯ ತಾವು ಸಖ್ಯತನ ಮಾಡಿಸಬೇಕು. ಅದರ ಹೊತರು ನನ್ನ ಮನದಲ್ಲಿ ಬೇರೇನೂ ಇಲ್ಲ. ಇನ್ನೊಂದು ವಿಚಾರವಿದ್ದರೆ ದೇವರ ಆಣೆಯಾಗಿದೆ. ನಾನು ಈ ಜಗದಲ್ಲಿಯ ಕೆಲಸಕಾರ್ಯಗಳನ್ನು ಬಿಟ್ಟು ಮಕ್ಕೆಗೆ ಹೊರಟು ಹೋಗುವೆ' ಎಂಬುದಾಗಿ ದಿಲೇರಖಾನನಿಗೆ ಹೇಳಿದಾಗ ದಿಲೇರಖಾನನು ಅವನ ಮಾತುಗಳನ್ನು ಕೇಳಿ ಆತನು ಸಯ್ಯದ ಮಖದೂಮನ ಡೇರೆಗೆ ರಹಸ್ಯವಾಗಿ ಬಂದು ಸಮಾಧಾನ ಹೇಳಿದನು. ಆತನ ಮಗ ಸಯ್ಯದ ಅಹಮ್ಮದ್ ಊರ್ಫ ಕಾಲೇಖಾನನಿಗೆ 'ಸಹಾಹಜಾರಿ' ಎಂಬ ಪದವಿಯನ್ನು ಔರಂಗಜೇಬ ಬಾದಶಹನ ಕಡೆಯಿಂದ ತರಿಸಿ ಕೊಟ್ಟನು. ತುಸುವೇ ದಿನಗಳ ನಂತರ ಮೊಗಲ ರಾಜಕುಮಾರನ ಆಜ್ಞೆಯ ಮೇರೆಗೆ ಸಯ್ಯದ ಮಖದೂಮನ ಹೆಂಡಿರುಮಕ್ಕಳು ಮತ್ತು ಆತನ ಜನರನ್ನು ಅವನೊಂದಿಗೆ ಔರಂಗಾಬಾದಿಗೆ ಕಳಿಸಿದನು.

### ೩೩. *ಮಾಸೂದಖಾನನು ತನ್ನ ಸೈನ್ಯವನ್ನು ದಿಲೇರಖಾನನ ಮೇಲೆ ಕಳಿಸಿದ್ದು, ದಿಲೇರಖಾನನು ಆ ಸೈನ್ಯವನ್ನು ಸೋಲಿಸಿದ್ದು:*

ಸಯ್ಯದ ಮಖದೂಮನು ಮೊಗಲರೊಂದಿಗೆ ಸಖ್ಯ ಮಾಡಿಕೊಂಡು ತಾನು ದಿಲೇರಖಾನನ

ಹತ್ತಿರ ಬಂದನು. ಆದರಿಂದ ಮಾಸೂದಖಾನನಿಗೆ ಚಿಂತೆಯಾಗಿ ಗಾಬರಿಯಾದನು. ಪ್ರಸಂಗ ವಿಪರೀತಕ್ಕಿಟ್ಟುಕೊಂಡು ಶತ್ರುಗಳ ಮನೋರಥ ಪೂರ್ಣವಾಗಬಹುದು ಎಂದು ತಿಳಿದು, ತಕ್ಷಣ ತನ್ನ ಮಗ ಸಿದ್ದೀ ದರವೇಶನನ್ನು ವಿಜಾಪುರದಲ್ಲಿ ಉಳಿದಿದ್ದ ಐದುಸಾವಿರ ಸೈನ್ಯ ಸಾಮಾನು ಸರಂಜಾಮು ಸಹಿತವಾಗಿ ವೆಂಕಟಾದ್ರಿಯನ್ನು ಜೊತೆಮಾಡಿ ದಿಲೇರಖಾನನ ಹತ್ತಿರ ಕಳಿಸಿದನು. ಅವರಿಬ್ಬರೂ ಸೈನ್ಯ ಸಹಿತವಾಗಿ ಧೋಲಕಿರೆಗೆ (ಧೂಳಖೇಡ) ಹೋಗಿ ದಿಲೇರಖಾನನ ಚಾಕರಿಯಲ್ಲಿ ಇದ್ದರು. ದಿಲ್ಲಿ ಜನರ ಕೆಲಸದ ಮುಖ್ಯ ಉದ್ದೇಶ ಸಂಪೂರ್ಣ ಠಕ್ಕ ವಿದ್ಯೆಯ ಮೇಲೆ ಮತ್ತು ದಗಲಬಾಜಿ ಮಾಡುವುದರ ಮೇಲೆಯೇ ಅವಲಂಬಿಸಿತ್ತು. ಆದ್ದರಿಂದ ಪ್ರತಿಯೊಬ್ಬರ ಮನೆಯನ್ನು ಲೂಟಿ ಮಾಡಲಾಗುತ್ತಿತ್ತು. ವಿಜಾಪುರದ ಮುಖ್ಯ ಕಾರಭಾರಿ ಮಂಡಳಿ ಮತ್ತು ಮರ್ಯಾದಸ್ಥ ಗೌರವಾನ್ವಿತ ವ್ಯಕ್ತಿಗಳೆಲ್ಲರೂ ತನ್ನತ್ತ ಬಂದು ಸೇರಿದ್ದನ್ನು ದಿಲೇರಖಾನನು ಗುರುತಿಸಿದ್ದನು.

ಈಗ ವಿಜಾಪುರದಲ್ಲಿ ಯಾರೂ ಉಳಿದಿರಲಿಲ್ಲ ಇದ್ದರೂ ಜಾಣ ಕೆಲಸಗಾರರು ಯಾರೂ ಇಲ್ಲವೆಂದು ತಿಳಿದು, ದಿಲೇರಖಾನನ ಮನದಲ್ಲಿ ದುಷ್ಟ ಸಂಕಲ್ಪ ಹೀಗೆ ಬಂದಿತು. "ವಿಜಾಪುರದ ಈ ಎಲ್ಲ ಕಾರಭಾರಿ ಮಂಡಳಿಯನ್ನು ಯುಕ್ತಿಯಿಂದ, ಧೈರ್ಯಮಾಡಿ ಹಿಡಿದು ಸೆರೆಮನೆಯಲ್ಲಿ ಹಾಕಬೇಕು. ಮತ್ತು ವಿಜಾಪುರದ ಮೇಲೆ ಹೋಗಿ ಕೋಟೆಯನ್ನು ವಶಪಡಿಸಿಕೊಳ್ಳಬೇಕು" ಆದರೆ ಅದಿನ್ನೂ ಪೂರ್ತಿ ನಿರ್ಧಾರವಾಗಿರಲಿಲ್ಲ ಅಷ್ಟರಲ್ಲಿ ತುಸು ಸುದ್ದಿ ಒಡೆದು ಬಹಿರಂಗವಾಯಿತು. ದಖಣೆ ಜನರು ಅಂದರೆ ವಿಜಾಪುರದಲ್ಲಿ ಇರುತ್ತಿದ್ದ ಮಂಡಳಿಯು ದಿಲೇರಖಾನನ ಈ ಭಾವನೆಯನ್ನು ತಿಳಿದು ಎಚ್ಚರಿಕೆ ವಹಿಸಿದರು.

ಆದರಂತೆ ಒಂದು ದಿನ, ಸಯ್ಯದಮಖದೂಮ ಷರ್ಜಾಖಾನನು ತನ್ನ ಕಡೆಯ ಅನೇಕ ಖಾಸಾ ಮಂಡಳಿಯನ್ನು ತೆಗೆದುಕೊಂಡು ಕುದುರೆಯ ಮೇಲೆ ಕುಳಿತು ಬೇಟೆಯಾಡಲು ಕಾಡಿಗೆ ಹೊರಟನು. ಅವನ ಬೆನ್ನ ಹಿಂದೆಯೇ ಮೊಗಲರ ಪಹರೆದಾರರು ಬಂದರು. ಅದನ್ನು ತಿಳಿದ ಷರ್ಜಾಖಾನನು ಕಾಡಿಗೆ ಹೋಗದೆ ಹಿಂತಿರುಗಿದನು. ತನ್ನ ಮನೆಯಲ್ಲಿ ಯುದ್ಧ ಘೋಷಣೆಯನ್ನು ಮಾಡಿ ತನ್ನ ಸೈನ್ಯದೊಂದಿಗೆ ಸಿದ್ಧನಾದನು. ಮತ್ತು ದಿಲೇರಖಾನನಿಗೆ ನಿರೋಪವನ್ನು ಕಳಿಸುತ್ತ, " ನಮ್ಮ ಬೆನ್ನಹಿಂದೆ ನೀವು ಪಹರೆದಾರರನ್ನು ಕಳಿಸುವ ಕಾರಣ ಏನು? ನಿಮ್ಮ ಮನದಲ್ಲಿ ಯುದ್ಧ ಮಾಡಬೇಕೆಂಬ ಬಯಕೆಯಾಗಿದ್ದರೆ 'ಬಿಸ್ಮಿಲ್ಲಾಹ' ಅಂದರೆ ನಾವು ಸಿದ್ಧರಾಗಿದ್ದೇವೆ. ನೀವು ದಖಣ ಮತ್ತು ಹಿಂದುಸ್ತಾನಿ ಎರಡೂ ದೇಶಗಳ ಸೈನ್ಯವನ್ನು ತೆಗೆದುಕೊಂಡು ನನ್ನ ಮೇಲೆ ಏರಿ ಬನ್ನಿರಿ. ಅದರಲ್ಲೇನೂ ಸಂಶಯ ಬೇಡ. ನಾನು ಯುದ್ಧಕ್ಕೆ ತಕ್ಷಣ -ಈಗಿಂದೀಗಲೇ ಸಿದ್ಧನಾಗಿ ಕುಳಿತಿರುವೆ. ತುಸುವೆ ಸೈನ್ಯದೊಂದಿಗೆ ನಿಮ್ಮ ಜೊತೆ ಹೇಗೆ ಯುದ್ಧ ಮಾಡುವೆ. ಹೇಗೆ ಉತ್ತರ ಕೊಡುವೆ ಎಂಬುದನ್ನು ನೋಡಿರಿ" ಎಂದು ತಿಳಿಸಿದನು.

ಆಗ ದಿಲೇರಖಾನನು ಮನದಲ್ಲಿಯೇ ನೊಂದು, ಆತನ ವಿಷಯವಾಗಿ ತನ್ನ ಮನದಲ್ಲಿಯ ಭಾವನೆಗಳನ್ನು ಬಿಟ್ಟನು. ಈ ದಖಣೆ ಜನರನ್ನು ಈ ರೀತಿ ಹಿಡಿಯುವುದು ಸಾಧ್ಯವಿಲ್ಲವೆಂದೂ ತಿಳಿದು, ಅದರ ಆಶೆಯನ್ನು ಬಿಟ್ಟು ಬೇರೆ ತರದ ವಿಚಾರ ಮಾಡ ಹತ್ತಿದನು. ಅಂತಃಕರಣ ತೋರುವುದು, ಕಕ್ಕುಲತೆ ಮಾಡುವುದು ಗೆಳೆತನದ ಭಾವನೆಯನ್ನು ತೋರಿಸುವ ಮಾರ್ಗವನ್ನು ಹಿಡಿದನು. ಠಕ್ಕ ವಿದ್ಯೆಯ ಪಾಶವನ್ನು ಪಸರಿಸಿ ಷರ್ಜಾಖಾನನಿಗೆ ಭರವಸೆಯನ್ನು ಕೊಡುವುದು. ಅವರನ್ನು ಸಮಾಧಾನ ಮಾಡುವ ವಿಚಾರಗಳಿಂದ ಆ ದಕ್ಷಿಣದ ಜನರನ್ನು ವಂಚಿಸಿ ತನ್ನತ್ತ ಸೆಳೆದುಕೊಳ್ಳಲು ಪ್ರಯತ್ನಿಸ ಹತ್ತಿದನು.

## ೩೪. ದಿಲೇರಖಾನನು ಭೋಳೆತನದ ಮಾರ್ಗ ಹಿಡಿದದ್ದು, ಆದರಿಂದ ವಿಜಾಪುರದ ಜನರನ್ನು ವಂಚಿಸಿದ್ದು :

ವಿಜಾಪುರವನ್ನು ಕೈವಶ ಮಾಡಿಕೊಳ್ಳುವ ಆಶೆ ಮತ್ತು ಆಸ್ಥೆಗಳು ದಿಲಾವರಖಾನನ ನಖಶಿಖಾಂತ ತುಂಬಿಕೊಂಡಿದ್ದುವು. ಅನಂತರ ಆತ ಮೋಸ-ವಂಚನೆಗಳಿಂದ, ಲಬಾಡಗಿರಿಯಿಂದ ಜನರನ್ನು ತಿರುಗಿಸುವ ಕೆಲಸದಲ್ಲಿ ಹಗಲು-ರಾತ್ರಿ ನಿರತನಾಗಿದ್ದನು. ಸಯ್ಯದ ಮಖದೂಮನು ಬಂದುದರಿಂದ ಆತನ ಎದುರಿಗೆ ದಿಲೇರಖಾನನು ಅತಿ ಆನಂದ-ಸಂತೋಷಗಳ ಭಾವವನ್ನು, ಪ್ರದರ್ಶಿಸುತ್ತಿದ್ದನು. 'ನೀವು ಬಂದದ್ದರಿಂದ ನಮಗೆ ತುಂಬ ಸಂತೋಷವಾಗಿದೆ' ಎಂದು ಸುಳ್ಳು ಹೇಳುತ್ತಿದ್ದನು. ಆತನ ಸುಳ್ಳು ಸಂತೋಷದಿಂದ ಸಯ್ಯದ ಮಖದೂಮನು ಉಬ್ಬಿಹೋದನು. ಆದರಿಂದ ದಿಲೇರಖಾನನ ಮನೋರಥವು ಪೂರ್ಣವಾಗುವ ಶುಭ ಚಿಹ್ನೆಗಳು ದಿನದಿಂದ ದಿನಕ್ಕೆ ಅಧಿಕವಾಗತೊಡಗಿದುವು. ತಾತ್ಪರ್ಯವೆಂದರೆ, ವಿಜಾಪುರ ರಾಜ್ಯದ ವಿನಾಶ. ವಿಜಾಪುರದ ಎಲ್ಲ ಸೈನ್ಯವು ಓಡಿ ಹೋಗಿತ್ತು. ವಿಜಾಪುರದ ಒಟ್ಟು ಕಾರಭಾರಿ ಮಂಡಳಿಯಲ್ಲಿ ಪರಸ್ಪರ ವಿರಸ ಉಂಟಾಗಿ ವೈರತ್ವಕ್ಕೆ ತಿರುಗಿತ್ತು. ಅವರೆಲ್ಲ ದಿಲೇರಖಾನನ ಹತ್ತಿರ ಬಂದು ಹಾಜರಾಗುತ್ತಿದ್ದರು. ವಿಜಾಪುರ ರಾಜ್ಯದ ಆಧಾರಸ್ತಂಭವಾಗಿದ್ದ ಸಯ್ಯದ ಮಖದೂಮ ಷರ್ಜಾಖಾನನು ಆಗಲೇ ದಿಲೇರಖಾನನ ಹತ್ತಿರ ಬಂದಿದ್ದನು. ಈ ಕಾರಣದಿಂದಲೇ ಆತ ತುಂಬ ಆಸ್ಥೆಯಿಂದ ಉಳಿದ ಸೈನ್ಯವನ್ನು ತಿರುಗಿಸುವುದನ್ನು ಪ್ರಾರಂಭಿಸಿದ್ದನು.

ವೆಂಕಟಾದ್ರಿಯು ಮಾಸೂದಖಾನನ ಮುಖ್ಯಕಾರಭಾರಿಯಾಗಿದ್ದನು. ಆ ವೆಂಕಟಾದ್ರಿಗೂ ತುಂಬ ಭರವಸೆಯನ್ನಿತ್ತು ಮೋಸದಿಂದ ಆತನ ಮನಸ್ಸನ್ನು ತಿರುಗಿಸುವ ಉದ್ಯೋಗದಲ್ಲಿದ್ದನು. ಅವನೊಂದಿಗೆ ಕರಾರು ಮಾಡಿಕೊಳ್ಳುತ್ತ ನಮಗೆ ಸಯ್ಯದ ಮಖದೂಮ ಷರ್ಜಾಖಾನರ ಜಹಗೀರಿಯ ಬಗ್ಗೆ ಸಂಬಂಧವೇ ಇಲ್ಲ. ನೀವು ಬಲ್ಲಿರಿ. ಮಲಿಕ ಬಲ್ಲ. ನೀವು ಮಾಡಿಕೊಂಡ ಉಳಿದ ಕರಾರುಗಳಾದ, ಬಾದಶಾಹ ಬೀಬಿಯನ್ನು ಬಾದಶಹರ ಹತ್ತಿರ ಕಳಿಸುವುದು, ಮತ್ತು ನಿರಂತರವಾಗಿ ಬಾದಶಹರ ಚಾಕರಿಯಲ್ಲಿ ಮತ್ತು ಆಜ್ಞೆಯಲ್ಲಿರುವುದು. ಬಂಡುಖೋರ ಶಿವಾನೊಂದಿಗೆ ಎಂದೂ ಎಳ್ಳಷ್ಟು ಒಪ್ಪಂದ ಮಾಡಿಕೊಳ್ಳದಂತೆ ಮಾಡಿದ ಕರಾರನ್ನು ನಡೆಸಿಕೊಡುವುದು. ಇವುಗಳನ್ನು ಬಿಟ್ಟು ನಮಗೆ ಬೇರೆ ಯಾವ ಒಂದೇ ಒಂದು ಆಶೆ ಇಲ್ಲ. ಅದು ಬಿಟ್ಟು ನಾವು ಏನನ್ನೂ ಬೇಡುವುದಿಲ್ಲ. ಹೀಗೆ ಮರಳು ಮಾಡುವ ಮಾತುಗಳನ್ನಾಡುತ್ತಿದ್ದನು. ಹಕ್ಕಿಗಳಿಗೆ ಕಾಳುಗಳನ್ನು ಚೆಲ್ಲಿ ಬಲೆಯಲ್ಲಿ ಹಿಡಿಯುವಂತೆ ದಿಲ್ಲಿ ಬಾದಶಹನ ದಿಲೇರಖಾನನು ದಕ್ಷಿಣದ ಜನರನ್ನು ಹಿಡಿಯುವ ಬಲೆಯನ್ನು ಬೀಸಿದ್ದನು.

ವೆಂಕಟಾದ್ರಿಯು ದಿಲಾವರಖಾನನ್ನು ಭೆಟ್ಟಿಯಾಗಲು ಬರುತ್ತಿದ್ದನು. ಆಗ ದಿಲೇರಖಾನನು ಕಚೇರಿಯಲ್ಲಿ ಸುಂದರವಾದ ರತ್ನ ಗಂಬಳಿಗಳನ್ನು ಹಾಸಿ ಬರಮಾಡಿಕೊಳ್ಳುತ್ತಿದ್ದನು. ಅವನೊಂದಿಗೆ ಸಿಹಿಯಾಗಿ ಮಾತನಾಡುತ್ತ ಸಂಪರ್ಕವನ್ನಿಟ್ಟುಕೊಳ್ಳುತ್ತಿದ್ದನು. ವೆಂಕಟಾದ್ರಿಗೆ ಖರ್ಚಿಗೆ ಬೇಕಾದಾಗಲೆಲ್ಲ ಸಹಾಯ ಮಾಡುತ್ತಿದ್ದನು. ಸುಮಾರು ಒಂದು ಲಕ್ಷದವರೆಗೂ ವೆಂಕಟಾದ್ರಿಗೆ ಖರ್ಚಿಗೆ ಕೊಟ್ಟಿದ್ದನು.

ಆದರಂತೆಯೇ ಷರ್ಜಾಖಾನನು ಬಂದಾಗ ಕೂಡ ಐವತ್ತು ಸಾವಿರ ರೂಪಾಯಿಗಳನ್ನು ನಗದಾಗಿ ಆತನ ಖರ್ಚಿಗಾಗಿ ಕೊಟ್ಟಿದ್ದನು. ಅದಲ್ಲದೆ, ಪ್ರತಿನಿತ್ಯ ನಸುಕಿನಲ್ಲಿ ಒಂದು ಸಾವಿರ ಸಂಬಳವನ್ನು ಪಾವತಿಮಾಡುತ್ತಿದ್ದನು. ಷರ್ಜಾಖಾನನೊಂದಿಗೆ ಬಹಳ ಆರ್ಜವದೊಂದಿಗೆ ಮತ್ತು ಆದರ ಸತ್ಕಾರಗಳಿಂದ

ನಡೆದುಕೊಳ್ಳುತ್ತ ಪ್ರತಿನಿತ್ಯ ಅತ್ಯಂತ ಯತ್ನ ಪೂರ್ವಕವಾಗಿ, ಆತನನ್ನು ತನ್ನ ಹಿಡಿತದಲ್ಲಿ ತರುತ್ತಿದ್ದನು. ಬಾಳಾಪುರ ಪರಗಣೆಯನ್ನು ಷರ್ಜಾಖಾನನ ಮಗನಿಗೆ ಜಹಗೀರನ್ನು ಹಾಕಿಕೊಟ್ಟನು. ಆತನ ಜಾಮೀನುದಾರನೂ ತಾನೆಯೇ ಆದನು. ಸಯ್ಯದ ಮಖದೂಮ ಷರ್ಜಾಖಾನನ ಜಹಗೀರು ಧೂಳಖೇಡ ಮತ್ತು ದಿಲೇರಖಾನನ ವಶದಲ್ಲಿದ್ದ ಅನೇಕ ಜಹಗೀರುಗಳೆಲ್ಲ ಸಯ್ಯದ ಮಖದೂಮ ಷರ್ಜಾಖಾನನ ಕಡೆಯ ಜನರ ಕೈಯಲ್ಲಿದ್ದುವು. ಉಳಿದ ಒಂದರೆಡು ಪರಗಣೆಗಳು ಸಯ್ಯದ ಮಖದೂಮನ ಕೈಯಲ್ಲಿರದಿದ್ದುವುಗಳು ಮಾಸೂದಖಾನನು ತೆಗೆದುಕೊಂಡಿದ್ದನು. ದಿಲಾವರಖಾನನು ವೆಂಕಟಾದ್ರಿಯೊಂದಿಗೆ ಮಾಡಿಕೊಂಡ ಕರಾರಿನಂತೆ ಸಯ್ಯದ ಮಖದೂಮನ ಜಹಗೀರುಗಳ ಸಂಬಂಧವಿರಲಿಲ್ಲ. 'ನೀವು ಬಲ್ಲಿರಿ ನಿಮ್ಮ ಜಹಗೀರು ಬಲ್ಲಿರಿ' ಎಂಬುದಾಗಿಯೇ ಕರಾರಾಗಿತ್ತು. ಅದರಂತೆ ಸಯ್ಯದ ಮಖದೂಮನು ತನ್ನ ಜಹಗೀರುಗಳಮೇಲೆ ಮಾಲಿಕನಾದಿದ್ದನು. ಈ ಬಗ್ಗೆ ಉಭಯತರಲ್ಲಿ ಮಾತುಕತೆಗಳಾದಾಗ ದಿಲೇರಖಾನನು ವೆಂಕಟಾದ್ರಿಗೆ ತಿಳುವಳಿಕೆ ಹೇಳುತ್ತ ಸಯ್ಯದ ಮಖದೂಮನ ಹತ್ತಿರ ಇದ್ದ ಪರಗಣೆಗಳ ಬದಲಾಗಿ ಕಪ್ಪನ್ನು ಕೊಡಲಾಗುವುದು ಎನ್ನುತ್ತಿದ್ದನು.

ತಾತ್ಪರ್ಯವೆಂದರೆ, ಈ ರೀತಿ ದಿಲೇರಖಾನನು ಉಭಯತರಲ್ಲಿ ಭಿನ್ನತೆಯನ್ನಿಟ್ಟು ಇಬ್ಬರನ್ನೂ ವಂಚಿಸುತ್ತಿದ್ದನು. ಸಯ್ಯದ ಮಖದೂಮನು ಕುದುರೆಯ ಮೇಲೆ ಕುಳಿತುಕೊಂಡೇ ದಿಲೇರಖಾನನ ಹತ್ತಿರ ಭೆಟ್ಟಿಗೆ ಬರುತ್ತಿದ್ದನು. ಆತ ತಿರುಗಿ ಹೊರಟಾಗ ಆತನ ಕುದುರೆಯನ್ನು ತರಿಸಿ 'ನೀವು ಕುಳಿತುಕೊಳ್ಳಿ' ಎಂದು ಹೇಳಿ ತನ್ನೆದುರಿಗೇ ಆತನನ್ನು ಕುದುರೆಯ ಮೇಲೆ ಕುಳ್ಳರಿಸುತ್ತಿದ್ದನು. ಕಚೇರಿಯಲ್ಲಿ ತನ್ನ ಹತ್ತಿರವೇ ಆತನಿಗೆ ಕುಳಿತುಕೊಳ್ಳಲು ಸ್ಥಳವನ್ನು ನೀಡುತ್ತಿದ್ದನು. ಒಮ್ಮೊಮ್ಮೆ ಸಯ್ಯದ ಮಖದೂಮ ಬಂದನೆಂದರೆ, ತಾನು ಕುಳಿತ ಆಸನದ ಮೇಲೆಯೇ ಕುಳಿತುಕೊಳ್ಳಲು ಹೇಳಿ ಆಸನದ ಮೂಲೆಯೊಂದರಲ್ಲಿ ತಾನು ಕೂಡುತ್ತಿದ್ದ. ಸಯ್ಯದ ಮಖದೂಮನು ದಿಲೇರಖಾನನ ಭೆಟ್ಟಿಗೆ ಹೊರಟನೆಂದರೆ ಜೊತೆಗೆ ಆತನ ಜನರೂ ಹೊರಡುತ್ತಿದ್ದರು. ಸಯ್ಯದ ಮಖದೂಮನಿಗೆ ನಿರೋಪ ಕೊಟ್ಟನಂತರ ದಿಲೇರಖಾನನು, ಸಯ್ಯದ ಮಖದೂಮನ ಜೊತೆಗೆ ಬಂದ ಜನರಿಗೆ ಕೆಳಗೆ ಕುಳ್ಳಿರಿಸಿ ಮಾತನಾಡಿಸುತ್ತಿದ್ದನು. 'ನೀವು ಊಟ ಮಾಡಿರಿ' ಎಂದು ಹೇಳುತ್ತ ಬಹಳ ಆಗ್ರಹದಿಂದ ಅವರಿಗೆ ಊಟಕ್ಕೆ ಹಾಕುತ್ತಿದ್ದನು. ಪ್ರತಿಯೊಬ್ಬರೊಂದಿಗೆ ಮಾತನಾಡುತ್ತ ನಾನಾ ಪ್ರಕಾರದ ವಿಷಯಗಳನ್ನು ಕತೆಗಳನ್ನು ಹೇಳುತ್ತ, ಅವರನ್ನು ಬಹಳ ಹೊಗಳುತ್ತಿದ್ದನು. ಪ್ರತಿಯೊಬ್ಬರ ತಲವಾರುಗಳನ್ನು ಹಿರಿದು ನೋಡಿ, ಪ್ರತಿಯೊಂದು ತಲವಾರನ್ನೂ ಹೊಗಳುತ್ತಿದ್ದನು. ಒಂದೊಂದು ತಲವಾರಗಳನ್ನೂ ನೋಡಲು ಕೈಯಲ್ಲಿ ತೆಗೆದುಕೊಳ್ಳುತ್ತಿದ್ದನು. ಒಮ್ಮೊಮ್ಮೆ ದಿಲೇರಖಾನನು ತನ್ನ ವತಿಯಿಂದ ಯಾರಿಗಾದರೂ ಥಾಲುಗಳನ್ನೊ ಮತ್ತಾರಿಗೋ ತಲವಾರುಗಳನ್ನು ಇನ್ನಾರಿಗೋ ಕಠಾರಿ ಬಿಲ್ಲುಗಳನ್ನು ಮತ್ತೆ ಬೇರೆ ವಸ್ತುಗಳನ್ನು ಕೊಡುತ್ತಿದ್ದನು. ಬಹುತೇಕ ಜನರಿಗೆ ಪದಾಧಿಕಾರಿಗಳನ್ನು ಕೊಟ್ಟಿದ್ದನು.

ಅವರೆಲ್ಲ ಬೇಡಿದಾಗ ಯಾವ ಅನುಮಾನವಿಲ್ಲದೆಯೂ ಖರ್ಚಿಗೆ ಕೊಡುತ್ತಿದ್ದನು. ಸಯ್ಯದ ಮಖದೂಮನೂ ಬೇಡಿದಾಗಲೆಲ್ಲ ಬೇಡಿದನ್ನು ಕೊಡುತ್ತಿದ್ದನು. ಆತ ಹೇಳಿದ್ದನ್ನು ದಿಲೇರಖಾನನು ಕೇಳುತ್ತಿದ್ದನು. ಹೀಗೆ ಆ ಎಲ್ಲರಮೇಲೆ ಅನುಗ್ರಹ ಮಾಡಿ ಅವರನ್ನು ಸಂರಕ್ಷಣೆ ಮಾಡುತ್ತಿದ್ದನು. ಅವರನ್ನೆಲ್ಲ ಖುಶಿಯಲ್ಲಿಡುತ್ತಿದ್ದನು.

ಆದರಿಂದಾಗಿಯೇ ಈ ದಕ್ಷಿಣದ ಜನರು ಅವನಲ್ಲಿಗೆ ಹೋಗಿ ಸೇರುತ್ತಿದ್ದರು. ಅವರನ್ನು ಸಂತೋಷ ಪಡಿಸುತ್ತ ದಿಲೇರಖಾನನು ಅವರೆಲ್ಲ ತನ್ನ ಹಿಡಿತದಲ್ಲಿ ಬರುವಂತೆ ಮಾಡುತ್ತಿದ್ದನು. ವಿಜಾಪುರದಲ್ಲಿಯ ದುಃಖದಾರಿದ್ರ್ಯ ಪೀಡೆಯಿಂದ ಬಿಡುಗಡೆ ಹೊಂದಿ ದಿಲೇರಖಾನನ ಹತ್ತಿರ ಹೋಗಿ ಸುಖದಲ್ಲಿ ಬೀಳುತ್ತಿದ್ದರು. ದೊಡ್ಡ ದೊಡ್ಡ ಪದವಿ, ಅಧಿಕಾರಗಳನ್ನು ದೊರಕಿಸಿಕೊಳ್ಳುತ್ತಿದ್ದರು. ಈ ಎಲ್ಲ ಜನರು ತಂತಮ್ಮ ಕೆಲಸಗಳ ಪರಿಣಾಮಗಳನ್ನು ಮರೆತು ದಿಲೇರಖಾನನ ಹಿಡಿತದಲ್ಲಿ ಹೋಗುತ್ತಿದ್ದರು. ತಾವಷ್ಟೇ ಅಲ್ಲದೆ ವಿಜಾಪುರದಲ್ಲಿದ್ದ ತಮ್ಮ ಪರಿಚಿತದ, ಸಂಬಂಧಿಕ ಜನರನ್ನೆಲ್ಲ ತಂದು ದಿಲೇರಖಾನನ ಹತ್ತಿರ ಚಾಕರಿಗೆ ಇಡುತ್ತಿದ್ದರು. ದಿಲೇರಖಾನನು ತೋರಿಸುವ ಈ ಎಲ್ಲ ಸ್ನೇಹದ ಭಾವ ಬರೀ ನಾಟಕ ಮೋಸ ಎಂಬುದು ಅವರೆಲ್ಲ ಮನಸ್ಸಿನಲ್ಲಿ ಬರುತ್ತಲೇ ಇರಲಿಲ್ಲ. ಚೆಲ್ಲಿದ ಕಾಳುಗಳ ಆಶೆಯಿಂದ ಬಲೆಯಲ್ಲಿ ಬೀಳುವ ಪಕ್ಷಿಗಳಂತೆ ಈ ವಿಜಾಪುರದ ಜನರು ದಿಲೇರಖಾನನು ಬೀಸಿದ ಸ್ನೇಹದ ಹಾಗೂ ಹಣದಾಸೆಯ ಬಲೆಯಲ್ಲಿ ಬೀಳುತ್ತಿದ್ದರು.

ವೆಂಕಟಾದ್ರಿಯೊಂದಿಗೂ ಇದೇರೀತಿಯ ಸ್ನೇಹ ಆದರ ಸತ್ಕಾರಗಳನ್ನು ತೋರಿಸಿ ಅವನನ್ನೂ ಖುಶಿಯಲ್ಲಿಟ್ಟಿದ್ದನು. ಸಿದ್ದಿದರವೇಶ, ಅಬ್ದುಲರಾವುಫ, ಸಿದ್ದಿ ಜೋಹಾರ, ಸಿದ್ದಿ ಯಾಕೂತ ಹಸನಖಾನ ರೋಹಿಲಾ, ಮಿಯಾಖಾನ ತುರಾನ, ಇತ್ಯಾದಿ ಕಾರಭಾರಿ ಜನರನ್ನೆಲ್ಲ ಇದೇ ರೀತಿ ಬಲೆಯಲ್ಲಿ ಕೆಡವಿದ್ದನು. ವೆಂಕಟಾದ್ರಿ ಮತ್ತು ದಿಲೇರಖಾನರ ಮಧ್ಯ ಒಂದೇ ಜೀವ ಎರಡು ದೇಹಗಳು ಎಂಬಷ್ಟರ ಮಟ್ಟಿಗೆ ಸ್ನೇಹವನ್ನು ಬೆಳೆಸಿದ್ದನು. ವೆಂಕಟಾದ್ರಿಯ ಯಾವ ಮಾತನ್ನೂ ತೆಗೆದು ಹಾಕುತ್ತಿರಲಿಲ್ಲ. ಖೈರತಖಾನನು ವಿಜಾಪುರದಲ್ಲಿರುತ್ತಿದ್ದನು. ಆತನನ್ನೂ ತನ್ನ ಬಲೆಯಲ್ಲಿ ಕೆಡವಿಕೊಂಡು ತನ್ನಂತೆ ಮಾಡಿಕೊಂಡಿದ್ದನು. ಅವನಿಗೆ 'ಪಾಂಚ ಹಜಾರಿ' ಪದವಿ ನೀಡುವುದಾಗಿ ಕರಾರುಮಾಡಿ, ಆತನ ದಿನಖರ್ಚಿಗಾಗಿ ಬಾರ್ಶಿ ಗ್ರಾಮವನ್ನು ಇನಾಮು ಹಾಕಿಕೊಟ್ಟನು. ಹೀಗಾಗಿ ಆತನೂ ದಿಲೇರಖಾನನ ಕಡೆಗೆಯೇ ಚಾಕರಿಗೆ ಬಂದು ಇದ್ದುಬಿಡಬೇಕೆಂದನು. ಆದರೆ ಮಾಸೂದಖಾನನು ಅವನನ್ನು ಬಿಡಲಿಲ್ಲ. ಅವನನ್ನು ಸಮಾಧಾನ ಪಡಿಸಿ ಖರ್ಚಿಗೆ ಕೊಟ್ಟು ತನ್ನ ಹತ್ತಿರವೇ ಇಟ್ಟುಕೊಂಡನು. ಹೀಗೆ ಸುಮಾರು ಹತ್ತುಸಾವಿರ ಜನ ವಿಜಾಪುರದ ಸ್ವಾರರು, ಮುಸಲ್ಮಾನರು, ದಕ್ಷಿಣೀ ಜನರು, ಪಠಾಣರು, ಮರಾಠರು ಚಾಕರರಾಗಿ ದಿಲೇರಖಾನನ ಹತ್ತಿರ ಸೇರಿದ್ದರು. ಮೂರುನಾಲ್ಕು ಸಾವಿರದಷ್ಟು ಮಾತ್ರ ಹಸಿದ ಜನ ಮಾಸೂದಖಾನನ ಹತ್ತಿರ ಉಳಿದಿದ್ದರು.

### ೩೫. ಮಾಸೂದಖಾನನು ಬಾದಶಾಹ ಬೀಬಿಯನ್ನು ದಿಲ್ಲಿಗೆ ಕಳಿಸಿದ್ದು ಮತ್ತು ಮಾಸೂದಖಾನ ಹಾಗೂ ರಾಜಕುಮಾರ ಮಹಮ್ಮದ ಆಜಮಶಾಹರ ಮಧ್ಯ ಸಖ್ಯವಾದದ್ದು :

ಕರಾರನಾಮೆಯಲ್ಲಿ ಠರಾವಿಸಿದಂತೆ, ಆದಿಲಶಾಹಿ ಜನರ ಕಡೆಯಿಂದ ನಡೆದುಕೊಳ್ಳುವುದು ಆಗುತ್ತಿರಲಿಲ್ಲ ದಿನಗಳು ಉರುಳುತ್ತಿದ್ದುದರಿಂದ ಬೆದರಿಕೆ ಕೂಡಿದ ಆಜ್ಞಾಪತ್ರಗಳು ಔರಂಗಜೇಬ ಬಾದಶಹನಿಂದ ದಿಲೇರಖಾನನಿಗೆ ಬರುತ್ತಿದ್ದವು. ಆಗ ದಿಲೇರಖಾನನ ಈ ವಿಷಯದಲ್ಲಿ ವೆಂಕಟಾದ್ರಿಗೆ ಬಹಳ ಉಪದ್ರವ ಕೊಟ್ಟನು. ಕರಾರಿನಂತೆ ನಡೆದುಕೊಳ್ಳಲು ಅವಸರ ಪಡಿಸಹತ್ತಿದನು. ಬಹಳ ಬೆದರಿಕೆ ಹಾಕಿದನು. ಆಗ ವೆಂಕಟಾದ್ರಿಯು ದಿಲೇರಖಾನನಿಗೆ ಭರವಸೆ ಕೊಡುತ್ತ, ಬಾದಶಾಹಾ ಬೀಬಿಯನ್ನು ಕಳಿಸುವ ಜವಾಬ್ದಾರಿಯನ್ನು ತಾನೇ ಹೊತ್ತು, ಅವನಿಂದ ನಿರೋಪ ಪಡೆದು ಹೊರಟನು. ಬಾದಶಾಹ ಬೀಬಿಯನ್ನು ಕರೆತರಲು ದಿಲೇರಖಾನನು ಮಲಿಕಬೇಗ ಖೋಜ್ಯಾ ಬಾದಶಹನ ಕಡೆಯ ಚಾಕರ ಮತ್ತು

‘ಉಡದಾ ಬೆಗಿನೀ’ (ಬಾದಶಹರ ಖಾಸಾಸ್ತ್ರೀಯರ ಹತ್ತಿರ ಚಾಕರಿ ಮಾಡುವ ಸ್ತ್ರೀಯರಿಗೆ ಪುರುಷವೇಷ ತೊಡಿಸಿ ಸಿಪಾಯಿಗಳನ್ನು ಇಟ್ಟಿರುತ್ತಾರೆ. ಅವರಿಗೆ ‘ಉಡದಾಬೇಗಿನೀ’ ಎಂದು ಕರೆಯುತ್ತಾರೆ) ಜನರನ್ನು ವೆಂಕಟಾದ್ರಿಯ ಜೊತೆಗೆ ಕಳಿಸಿದನು.

ವೆಂಕಟಾದ್ರಿಯು ವಿಜಾಪುರಕ್ಕೆ ಬಂದು ಬಾದಶಾಹಾ ಬೀಬಿಯನ್ನು ಕಳಿಸುವ ವಿಷಯದಲ್ಲಿ ಮಾಸೂದಖಾನನಿಗೆ ಎಲ್ಲ ವಿಷಯವನ್ನು ಸವಿಸ್ತಾರವಾಗಿ ಬೆದರಿಕೆಯೊಂದಿಗೆ ತಿಳಿಸಿಹೇಳಿದನು. ಮಾಸೂದಖಾನನೂ ಸ್ವತಃ ಇದನ್ನೇ ಬಯಸುತ್ತಿದ್ದನು. ಆ ವಿಷಯದಲ್ಲಿ ಮಾಸೂದಖಾನನು ಹಲವಾರು ಸಲ ಮೊಗಲರೊಂದಿಗೆ ಕರಾರು ಮಾಡಿಕೊಂಡಿದ್ದನು. ಇನ್ನೊಂದು ಕಾರಣವೆಂದರೆ, ಬಾದಶಾಹ ಬೀಬಿಯು ಇಲ್ಲಿಯೇ ಇದ್ದರೆ ಏನಾಗಬಹುದೆಂಬ ಭಯವೂ ಕಾರಣವಾಗಿತ್ತು. ಬಾದಶಾಹಾ ಬೀಬಿಯು ಹೋಗುವುದರಿಂದ ತಮ್ಮ ಕಲ್ಯಾಣ ಮತ್ತು ಸುರಕ್ಷಿತತನ ಇದೆ ಎಂದು ತಿಳಿದಿದ್ದನು.

ಬಾದಶಾಹ ಬೀಬಿಯು ಸ್ತ್ರೀಯಾಗಿದ್ದರೂ ಪ್ರೌಢಳಾಗಿದ್ದು ಬುದ್ಧಿವಂತಳೂ ಆಗಿದ್ದಳು. ೧೫-೧೬ ವರುಷ ವಯದವಳಾಗಿದ್ದಳು. ಅವಳು ರಾಜ್ಯದ ಕೆಲಸಗಳಲ್ಲಿ ಬಹಳ ಯುಕ್ತಿವಂತಳೂ ಆಗಿದ್ದಳು. ರಾಜ್ಯ ನಡೆಸುವ ಕಲೆಯನ್ನು ಅರಿತವಳಾಗಿದ್ದಳು. ಬಹಳ ಚೆನ್ನಾಗಿ ನಿರ್ವಹಿಸುತ್ತಿದ್ದಳು. ದಾಯಾಗಳು, ಖೋಜೆಗಳು ಅವಳ ಆಜ್ಞೆಯನ್ನೆಂದೂ ಮೀರುತ್ತಿರಲಿಲ್ಲ. ಉಳಿದೆಲ್ಲ ಹಿರಿಕಿರಿಯ ಹಳೆ-ಹೊಸ ಕೆಲಸಗಾರರು ಅವಳ ಆಜ್ಞೆಯನ್ನು ಶಿರಸಾವಹಿಸಿ ಮಾಡುತ್ತಿದ್ದರು. ಅಂತೆಯೇ ಮಾಸೂದಖಾನನು ಅವಳನ್ನು ದಿಲ್ಲಿಗೆ ಕಳಿಸುವ ಪ್ರಯತ್ನ ಮಾಡಿದಾಗಲೆಲ್ಲ ಅವಳು ಅದಕ್ಕೆ ಒಪ್ಪುತ್ತಿರಲಿಲ್ಲ. ಅವನ ತಜವೀಜಗಳನ್ನು ಕಬೂಲು ಮಾಡುತ್ತಿರಲಿಲ್ಲ. ಆದ್ದರಿಂದ ಮಾಸೂದಖಾನನು ನಿರುಪಾಯನಾಗಿ ಬಾದಶಹಾ ಬೀಬಿಯ ಮಹಲಿನಲ್ಲಿಯ ದಾಯಾ ಮತ್ತು ಹತ್ತಿರದಲ್ಲಿದ್ದ ಸೇವಕ ಜನರ ವಶೀಲಿಯನ್ನೂ ಬಳಸಿದನು. ತಾವುಸಮಾ ಎಂಬವಳು ಬಾದಶಾಹಾ ಬೀಬಿಯ ಮುಖ್ಯ ದಾಯಿ ಮತ್ತು ಸರಖೇಲಳೂ (ಮುಖ್ಯಸೇವಿಕೆ) ಆಗಿದ್ದಳು. ಬಾದಶಾಹ ಬೀಬಿಯು ಅವಳ ಮಾತುಗಳನ್ನು ಬಹುತೇಕ ಒಪ್ಪಿಕೊಳ್ಳುತ್ತಿದ್ದಳು. ಅವಳನ್ನು ಮತ್ತು ಮಹಾಲದಲ್ಲಿಯ ಬೇರೆ ಚಾಕರ ಜನರನ್ನು ಈ ಕೆಲಸಕ್ಕಾಗಿ ಬಳಸಲಾಯಿತು. ಈ ಚಾಕರ ಜನರ ವಶೀಲಿಯಿಂದ ಬಾದಶಾಹ ಬೀಬಿಯ ಮನದಲ್ಲಿ ವಿಷಯವನ್ನು ಬಿಂಬಿಸಲಾಗುತ್ತಿತ್ತು “ನೀವು ಹೋಗುವುದರಿಂದ ರಾಜ್ಯದ ಕಲ್ಯಾಣವಿದೆ. ಯಾಕೆಂದರೆ ನೀವು ದಿಲ್ಲಿಗೆ ಹೋಗುವುದು ನಿಮ್ಮ ತಮ್ಮನ ರಾಜ್ಯದ ಉಳಿವಿಗೆ ಕಾರಣವಾಗುತ್ತದೆ. ಹೋಗದಿದ್ದರೆ ರಾಜ್ಯ ಕೈ ತಪ್ಪಿ ಹೋಗುತ್ತದೆ. ಎಲ್ಲ ಕೆಲಸಗಳೂ ಕೆಡುತ್ತವೆ” ಈ ರೀತಿಯಾಗಿ ಹೇಳಿ ಎಲ್ಲ ಸೇವಕರೂ ಬಹಳ ಪ್ರಯತ್ನ ಮಾಡುತ್ತಿದ್ದರು. ಬಾದಶಾಹ ಬೀಬಿಯು ಅದನ್ನೆಲ್ಲ ಕೇಳಿ ಕೇಳಿ ಬೇಸತ್ತು ದಿಲ್ಲಿಗೆ ಹೋಗಲು ಸಮ್ಮತಿಸಿದಳು. ಈ ಕಾರಣಗಳಿಂದಲೇ ಅವಳು ದಿಲ್ಲಿಗೆ ಹೋಗುವುದಕ್ಕೆ ಬಹಳ ದಿನಗಳು ಹಿಡಿದುವು.

ಇತ್ತ ದಿಲೇರಖಾನನು ಬಹಳ ಸಿಟ್ಟಿಗೆ ಬಂದು ವೆಂಕಟಾದ್ರಿಗೆ ಬಹಳ ಬೆದರಿಕೆ ಹಾಕಿ ತಾಕೀದು ಮಾಡಿ ಪತ್ರ ಕಳಿಸುತ್ತಿದ್ದನು. ಮಾಸೂದಖಾನನಿಗೂ ಎಚ್ಚರಿಕೆಯ ಮೇಲೆ ಎಚ್ಚರಿಕೆ ಕೊಟ್ಟು ದಿಲ್ಲಿಯಿಂದ ಪತ್ರಗಳನ್ನು ಕಳಿಸಲಾಗುತ್ತಿತ್ತು. ಆಗ ಮಾಸೂದಖಾನನು ಅನಿವಾರ್ಯವಾಗಿ ಬಾದಶಾಹ ಬೀಬಿಯನ್ನು ಕಳಿಸಲು ಖರ್ಚಿಗಾಗಿ, ಬಹಳ ಅಡಚಣೆ ಇದೆಯೆಂದು ನೆಪಗಳನ್ನೊಡ್ಡಿ ಕಳಿಸಲು ಸಾಮಾನು ಸರಂಜಾಮಗಳ ಸಿದ್ಧತೆಯ ಹೆಸರಿನಲ್ಲಿ ದಿಲೇರಖಾನನಿಂದ ಸಾಲ ಕೇಳುವ ರೀತಿಯಲ್ಲಿ ಹಣ ತರಿಸುತ್ತಿದ್ದನು. ದಿನಾಂಕ ೨ ಜಮಾದಿಲಾಖರ ಸನ್ ೧೦೮೦ ರಂದು (೧, ಜುಲೈ ೧೬೭೯) ರಾಜಕುಮಾರಿ ಬಾದಶಾಹ

ಬೀಬಿಯನ್ನು ಹೇಗೋ ಮಾಡಿ ಅರಮನೆಯಿಂದ ಹೊರತಂದು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮಕ್ಕಾ ದರವಾಜಾದ ಹೊರಗೆ ತಂದು ಇಳಿಸಿದರು. ಅರಮನೆಯ ಸ್ತ್ರೀಯರು, ದಾಯಿಗಳು, ಕುಣಬಿಗಳು, ಹಳೆಯ ಖೋಜೆಗಳು, ಚಾಕರರು ಮತ್ತು ಅನೇಕ ವಿಶ್ವಾಸಿಕ ಅಮೀರ ಜನರನ್ನು ರಾಜಕುಮಾರಿಯ ಜೊತೆಗೆ ಕಳಿಸಿದರು. ಬಾದಶಾಹೀ ವೈಭವದಿಂದ ದಿನಾಂಕ ೫ ಜಮಾದಿಲಾಖರ (೪ ಜುಲೈ ೧೬೭೯) ರಂದು ವೆಂಕಟಾದ್ರಿಯ ಜೊತೆಗೆ ಅವಳನ್ನು ದಂಡಿನ ಕಡೆಗೆ ಕಳಿಸಲಾಯಿತು.

ದಿನಾಂಕ ೨೦ ಜಮಾದಿಲಾಖರ (೧೯, ಜುಲೈ ೧೬೭೯)ರಂದು ಧೂಳಖೇಡಕ್ಕೆ ಹೋಗಿ ಮುಟ್ಟಿದರು. ಆಗ ದಿಲೇರಖಾನನು ಎದುರಿಗೆ ಬಂದನು. ಮೇಜವಾನಿಯ ಸಾಮಾನುಗಳನ್ನು ಕಳಿಸಿದನು. ದಿನಾಂಕ ೨೨, ಜಮಾದಿಲಾಖರ (೨೧, ಜುಲೈ ೧೬೭೯)ರಂದು ಭೀಮಾನದಿಯನ್ನು ದಾಟಿ ಅತ್ತ ಹೋದರು. ಟಾಕಳಿ ಮುಕ್ಕಾಮಿಗೆ ಹೋಗಿ ದಂಡಿನಲ್ಲಿ ಇರಹತ್ತಿದರು. ಆಗ ದಿಲೇರಖಾನನು ದಂಡಿನಲ್ಲಿಯ ಎಲ್ಲ ಅಮೀರ ಜನರಿಗೂ ಹುದ್ದೇದಾರರು, ಬಾದಶಾಹೀ ಮುತ್ಸದ್ದಿಗಳಿಗೂ ಆದೇಶ ನೀಡಿ, ಎಲ್ಲರೂ ತಂತಮ್ಮ ಯೋಗ್ಯತಾನುಸಾರ ನಜರ ಮತ್ತು ನಜರಾಣೆಗಳನ್ನು, ನಗದಿಯಾಗಿಯೂ, ವಸ್ತ್ರ ರೂಪದಲ್ಲೂ ಕೊಟ್ಟು ಮುಜುರೆ ಸಲ್ಲಿಸಬೇಕೆಂದು ಹೇಳಿದನು. ತಾನು ಕೂಡ ಸ್ವತಃ ಆ ದಿನ ಬಾದಶಾಹೀ ಡೌಲಿನಲ್ಲಿ ಮೇಜವಾನಿ ಮಾಡಿ ಮರುದಿನ ಬೆಳಿಗ್ಗೆ ಬಾದಶಾಹ ಬೀಬಿಯ ದರಬಾರಿಗೆ ಹೋಗಿ ಒಂದು ಸಾವಿರ ರೂಪಾಯಿಗಳನ್ನು ನಜರಾಗಿ ಕೊಟ್ಟು ಮುಜುರೆ ಸಲ್ಲಿಸಿದನು.

ಉಳಿದ ಜನರೂ ನಜರ ಸಲ್ಲಿಸಿದರು. ಇದರಿಂದಾಗಿ ಬಾದಶಹಾ ಬೀಬಿಗೆ ನಜರ ರೂಪದಲ್ಲಿ, ಬಹಳಷ್ಟು ಹಣ ದೊರೆಯಿತು. ಪ್ರತಿನಿತ್ಯ ಭೋಜನದ ಸಾಮಾನುಗಳೂ ಸರಕಾರದಿಂದಲೇ ಹೋಗುತ್ತಿದ್ದುವು. ಒಂಭತ್ತು ದಿನಗಳ ವರೆಗೆ ಅವಳ ಸವಾರಿಯನ್ನು ದಂಡಿನಲ್ಲಿ ಇಟ್ಟು, ದಿನಾಂಕ ೪ ರಜಬ (೧, ಅಗಸ್ಟ ೧೬೭೯) ದಂದು ದಿಲ್ಲಿ ಕಡೆಗೆ ಕಳಿಸಿದರು. ತಮ್ಮೆಲ್ಲ ಗಡಿ ಪ್ರದೇಶಗಳ ಮಾಮಲೇದಾರ ಮೊದಲಾದ ಜನರಿಗೆ, ಕಿಲ್ಲೆದಾರರಿಗೆ, ಜಲ್ಲೇದಾರರಿಗೆ, ಫೌಜದಾರ ಇತ್ಯಾದಿಗಳಿಗೆ ಆಜ್ಞೆಮಾಡಿ ಪ್ರತಿಯೊಬ್ಬರೂ ರಾಜಕುಮಾರಿ ಬಾದಶಾಹ ಬೀಬಿಯ ಪಲ್ಲಕಿಯನ್ನು ಎದುರುಗೊಂಡು, ನಜರು ಸಲ್ಲಿಸಿ, ಮೇಜವಾನಿ ಮಾಡಿ, ತಂತಮ್ಮ-ಸರಹದ್ದುಗಳಿಂದ ಇನ್ನೊಂದು ಸರಹದ್ದಿಗೆ ಕಳಿಸಬೇಕೆಂದು ಆಜ್ಞಾಪತ್ರ ಕಳಿಸಿದನು.

ಪಾದಶಾಹಾ ಬೀಬಿಯ ಸವಾರಿ ಶಾಹಗಡಕ್ಕೆ ಬಂದು ಮುಟ್ಟಿತು. ಆಗ ರಾಜಕುಮಾರ ಸುಲ್ತಾನ ಮುಅಜಮನು ಔರಂಗಾಬಾದಿನಲ್ಲಿ ಇರುತ್ತಿದ್ದನು. ಆತ ಎದುರಿಗೆ ಬಂದು ರಾಜಕುಮಾರಿಯ ಸವಾರಿಯನ್ನು ಔರಂಗಾಬಾದಿಗೆ ತಂದನು. ವೈಭವದ ಮೇಜವಾನಿ ಆಯಿತು. ಬಾದಶಾಹೀ ವೈಭವದಂತೆಯೇ ಮುತ್ತು ರತ್ನ, ವಸ್ತ್ರಾದಿಗಳನ್ನು ಕೊಟ್ಟನು. ಎಂಟು ದಿನಗಳ ನಂತರ ಸವಾರಿಯು ಅಲ್ಲಿಂದ ಮುಂದೆ ನಡೆಯಿತು. ಹೀಗೆಯೇ ಪ್ರತಿ ಮಜಲಿನಲ್ಲಿ ನಜರು ಮತ್ತು ಮೇಜವಾನಿಗಳನ್ನು ಪಡೆಯುತ್ತ, ಮುಕ್ಕಾಮುಗಳನ್ನು ಮಾಡುತ್ತ-ಮಾಡುತ್ತ ಮೂರು ತಿಂಗಳುಗಳ ಅನಂತರ ಸವಾರಿಯು ದಿಲ್ಲಿಗೆ ಹೋಗಿ ಮುಟ್ಟಿತು.[೧]

ಆ ಸಮಯದಲ್ಲಿ, ಬಾದಶಹ ಮತ್ತು ರಾಜಕುಮಾರ ಉಭಯತರೂ ರಾಣಾನನ್ನು ಶಿಕ್ಷಿಸಲು ಹೋಗಿದ್ದರು. ಅದರಿಂದಾಗಿ ರಾಜಕುಮಾರಿಯ ಮದುವೆ ಸಮಾರಂಭಕ್ಕೆ ತಡವಾಯಿತು. ಬಾದಶಹನಿಗೆ

1. On Thursday, the 4th March 1680/ 12 safar, 23rd Julus, Hakim Shamsa who had reached the court with the daughter of Adilkhan Bijapur; received a special robe a horse with gold saz an elephant the rank of 3 Hazari (1000 Tr), the title of Shamsuddin Khan and posing under Khan Jahan Bahadur - MiA. p. 117.

ತನ್ನ ಕೆಲಸದಿಂದ ಪುರಸತ್ತು ದೊರೆತ ಮೇಲೆ ಮದುವೆಯ ಕಡೆಗೆ ಲಕ್ಷ್ಯ ಹಾಕಿದನು. ಅನಂತರ ಮದುವೆ ಸಮಾರಂಭದ ಸಾಮಾನುಗಳನ್ನು ಅತಿ ಉತ್ತಮವಾಗಿ ಸಂಗ್ರಹಿಸಬೇಕೆಂದು ಬಾದಶಹನು ಎಲ್ಲರಿಗೂ ಆಜ್ಞೆಮಾಡಿದನು. ತುಸುವೆ ದಿನಗಳಲ್ಲಿ ಅವರೆಲ್ಲರೂ ಸಿದ್ಧತೆಯನ್ನು ಮಾಡಿದರು. ಬಹಳ ವೈಭವದಿಂದ ಮದುವೆ ಸಮಾರಂಭದ ಸಭೆಯನ್ನು ಶೃಂಗರಿಸಿದರು. ಬಹಳ ಉತ್ತಮವಾಗಿ, ಕಲ್ಯಾಣಪ್ರದಯೋಗದಲ್ಲಿ, ಸಾವಿರಪಟ್ಟು ಸಂತೋಷಗಳಿಂದ ಮತ್ತು ಯಶಸ್ವಿಯಾಗಿ ದಿನಾಂಕ ೧೨ ರಜಬ ಸನ್ ೧೦೯೦ (೧೦೯೨ ಬೇಕು) ರಂದು (೯ ಅಗಸ್ಟ ೧೬೭೯?- ೨೦ ಜುಲೈ ೧೬೮೧ ಎಂದಾಗಬೇಕು) ಶಾಹ ಮಹಮ್ಮದ ಅಜಮಶಾಹನೊಂದಿಗೆ ಅಲೀ ಆದಿಲಶಹನ ಮಗಳು ಪಾದಶಾಹ ಬೀಬಿಯ ಮದುವೆ ಆಯಿತು.[2]

## ೩೬. *ಬಾದಶಾಹಾ ಬೀಬಿ ಹೋದ ನಂತರ ಮತ್ತೆ ಮಾಸೂದಖಾನನ ಮತ್ತು ದಿಲೇರಖಾನರ ಮಧ್ಯ ವಿರಸ. ಮಾಸೂದಖಾನನು ವೆಂಕಟಾದ್ರಿಯನ್ನು ಬಂಧಿಸಿದ್ದು.*

ಬಾದಶಾಹಾ ಬೀಬಿಯು ದಿಲ್ಲಿಗೆ ಹೋದ ನಂತರ, ಔರಂಗಜೇಬ ಬಾದಶಹನಿಗೆ ದಿಲೇರಖಾನನ ಚಾಕರಿ ಮನಸ್ಸಿಗೆ ಬಂದಿತು. ದಿಲೇರಖಾನನ ಮನಸ್ಸಿನಂತೆಯೇ ಕೆಲಸಗಳು ನಡೆದುವು. ಮನಸ್ಸು ಸ್ವಸ್ಥವಾಯಿತು. ಆಗ ದಿಲೇರಖಾನನು ಮತ್ತೆ ತನ್ನ ದಗಲಬಾಜಿತನ ಮತ್ತು ಮೋಸ ಮಾಡುವುದಕ್ಕೆ ಪ್ರಾರಂಭಿಸಲು ಯೋಚಿಸಿದನು. ಇನ್ನು ಹೊಸದೊಂದು ಮೋಸದ ಆಟವನ್ನು ಹೂಡಬೇಕು ಎಂದು ಬಯಸಿ ವೆಂಕಟಾದ್ರಿಯೊಂದಿಗೆ ಹೀಗೆ ಚರ್ಚಿಸಿದನು. "ಮಾಸೂದಖಾನನು ವಿಜಾಪುರದ ಕೋಟೆಯನ್ನು ಹಕೀಮ ಷಮಸುದ್ದೀನನ ವಶಕ್ಕೆ ಕೊಡಬೇಕು. ಸಿಕಂದರ ಬಾದಶಹನು ಪ್ರೌಢನೂ, ದೊಡ್ಡವನೂ ಆಗುವ ವರೆಗೆ ವಿಜಾಪುರ ರಾಜ್ಯದ ಕಾರಭಾರವನ್ನು ಹಕೀಮ ಷಮಸುದ್ದೀನನು ಮಾಡುತ್ತ, ರಾಜ್ಯದ ಸೂತ್ರಗಳನ್ನು ನಡೆಸುತ್ತ ಹೋಗಬೇಕು, ಮತ್ತು ಆತನ ಸಹಾಯಕ್ಕೆ ಮೂರುಸಾವಿರ ಬಂದೂಕ ಧಾರಿಗಳನ್ನು ಕೊಡಬೇಕು. ಎಖಲಾಸಖಾನನ್ನೂ ಮೂರು ಸಾವಿರ ಸ್ವಾರರೊಂದಿಗೆ ಹಕೀಮ ಷಮಸುದ್ದೀನನ ಸಹಾಯಕ್ಕೆ ನೇಮಿಸಬೇಕು. ಎಖಲಾಸಖಾನನು, ಬಹಲೋಲಖಾನನ ವಾಡೆಯಲ್ಲಿ ಇದ್ದು ವಿಜಾಪುರ ಕೋಟೆಯ ಹಾಗೂ ವಿಜಾಪುರದ ವಶದಲ್ಲಿದ್ದ ಸುತ್ತಮುತ್ತಲಿನ ಪ್ರದೇಶಗಳನ್ನು ಸಂರಕ್ಷಣ ಮಾಡುತ್ತ ಹೋಗಬೇಕು. ಮಲಿಕ ಬರಖುರದಾರನು ಔರಂಗಜೇಬ ಬಾದಶಹನ ವತಿಯಿಂದ ನೋಡಿಕೊಳ್ಳಲು ಯಾವಾಗಲೂ ನವರಸಪುರ ಇಲ್ಲವೆ ಶಾಹಪುರದಲ್ಲಿ ಇರುತ್ತಿದ್ದವನು, ವಿಜಾಪುರ ನಗರದಲ್ಲೇ ಇರಬೇಕು. ಆದಿಲಶಾಹೀ ಸೈನ್ಯವು ದಿಲ್ಲಿ ಬಾದಶಹನ ಸೈನ್ಯದ ಸಹಾಯಕ್ಕೆ ಹೋಗಿ, ಶಿವಾನನ್ನು ಶಿಕ್ಷಿಸಲು, ಮಿರಜ ಮತ್ತು ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಳ್ಳಬೇಕು. ಶಿವಾನಕೈಗೆ ಹೋದ ಪ್ರದೇಶಗಳನ್ನು ಬಿಡಿಸಿಕೊಳ್ಳಬೇಕು. ತಾನು ದಕ್ಷಿಣದ ಹತ್ತು ಹನ್ನೆರಡು ಸಾವಿರ ಸವಾರರನ್ನು ಹೊಸದಾಗಿ ಚಾಕರಿಯ ಮೇಲೆ ಇಟ್ಟದ್ದನ್ನು ಆದಿಲಶಾಹಿ ಜನರ ಸಹಾಯಕ್ಕೆ ಕೊಡಬೇಕು" ಎಂದು ಕರಾರು ಮಾಡಿದನು.

ಹಕೀಮ ಷಮಸುದ್ದೀನನಿಗೆ ವಿಜಾಪುರದಲ್ಲಿ ರಾಜ್ಯ ಕಾರಭಾರ ಮಾಡಬೇಕೆಂಬ ಹಂಬಲ ಬಹಳ ದಿನಗಳಿಂದ ಇತ್ತು, ಆದರೆ ಕೈಗೂಡಿರಲಿಲ್ಲ. ಮೊಗಲರೊಂದಿಗೆ ಕೂಡಿ, ಅವರ ವಶೀಲಿಯಿಂದ, ಮಾಸೂದಖಾನನನ್ನು ತೆಗೆದು, ತಾನು ಆ ಕೆಲಸಕ್ಕೆ ವಿಜಾಪುರದಲ್ಲಿ ದಾಖಲಾಗಬೇಕು ಎಂದು

---

2. On Tuesday 19th July 1681/ 13 Rajab 24 Julus, Siddi Yahya brought to the harem Shahrabanu, the daughter of Adilshah Bijapari. She was married to Md-Azam on the 26th July 1681/20th Rajab - MIA P.129.

ಹಂಬಲಿಸುತ್ತಿದ್ದನು. ಮಾಸೂದಖಾನನನ್ನು ತೆಗೆಯಲು ದಿಲೇರಖಾನನಿಗೆ ಆಗಾಗ ಸೂಚಿಸುತ್ತಿದ್ದನು. ಮತ್ತು ಬಹಳೇ ಪ್ರಯತ್ನ ಮಾಡುತ್ತಿದ್ದನು. ಅದಕ್ಕೆ ದಿಲೇರಖಾನನು ಹಕೀಮ ಷಮಸುದ್ದೀನನೊಂದಿಗೆ ಕರಾರುಮಾಡಿ 'ಮಾಸೂದಖಾನನನ್ನು ಆದೋನಿಗೆ ಕಳಿಸಿ, ನಿಮ್ಮನ್ನು ವಿಜಾಪುರದಲ್ಲಿ ಮುಖ್ಯಸ್ಥನನ್ನಾಗಿ ನೇಮಿಸಿ, ಸಯ್ಯದ ಮಖದೂಮರನ್ನು ಹೊಸದಾಗಿ ಇಟ್ಟ ಚಾಕರರ ಸೈನ್ಯದೊಂದಿಗೆ ನಿಮ್ಮ ಸಹಾಯಕ್ಕೆ ಕೊಡುವೆ' ಎಂದು ಹೇಳಿ. ವೆಂಕಟಾದ್ರಿಗೆ ಕರಾರು ಮಾಡಿ (ದಿನಾಂಕ ೨೯, ಜಮಾದಿಲಾಖರ (೨೮ ಜುಲೈ ೧೬೭೯ ರಂದು) ನಿಶ್ಚಯಿಸಿದನು. ವೆಂಕಟಾದ್ರಿಯು ಈ ವಿಷಯವನ್ನು ಸವಿಸ್ತಾರವಾಗಿ ಬರೆದು ಮಾಸೂದಖಾನನಿಗೆ ತಿಳಿಸಿದನು.

ಅದನ್ನು ತಿಳಿದ ಮಾಸೂದಖಾನನು ತನ್ನ ಏಕಾಂತದಲ್ಲಿಯ ವ್ಯಕ್ತಿಯೊಂದಿಗೆ ಯುಕ್ತಿ ಮಾಡಿದನು. ಸಿದ್ದಿ ಯಾಕೂತ ಕಾಜೀ ಸಯೀದ, ಸಿದ್ದೋರಾವ ಮತ್ತು ಸಿದ್ದೀಯಾಕುತ ಖೈರತಖಾನಿ ಇವರೆಲ್ಲರೂ ಮಾಸೂದಖಾನನಿಗೆ ಇದೆಲ್ಲ ಮೊಗಲರ ಮೋಸವಾಗಿದೆ. ಆದರಿಂದ ಮೋಸಹೋಗಬಾರದು, ಎಚ್ಚರಿಕೆಯಿಂದ ಇರಬೇಕು. ವಿಜಾಪುರ ಕೋಟೆಯನ್ನು ಕೊಡಬಾರದು, ಒಂದು ವೇಳೆ ನೀನು ವಿಜಾಪುರ ಕೋಟೆಯಿಂದ ಹೊರ ಬಿದ್ದರೆ, ಈ ರಾಜ್ಯವು ಕೆಲವು ದಿನಗಳ ನಂತರ ಮೊಗಲರ ಕೈಗೆ ಹೋಗುವುದು ಇಂದೇ ಅವರ ಕೈಗೆ ಹೋಗಿ ಬಿಡುತ್ತದೆ' ಎಂಬುದಾಗಿ ಹೇಳಿದರು. ಅದಕ್ಕೆ ಮಾಸೂದಖಾನನು ಎಚ್ಚರಗೊಂಡನು. ಮತ್ತು ವೆಂಕಟಾದ್ರಿಯೂ ದಿಲೇರಖಾನ ಮತ್ತು ಹಕೀಮ ಷಮಸುದ್ದೀನರೊಂದಿಗೆ ಕೈಜೋಡಿಸಿ ನಮಗೆ ಮೊಸ ಮಾಡಲು ಪತ್ರ ಬರೆದಿದ್ದಾನೆಂದೂ, ತಿಳಿದನು.

ಇತ್ತ ವೆಂಕಟಾದ್ರಿಯು ದಿಲೇರಖಾನನಿಗೆ ಆಶ್ವಾಸನೆ ಕೊಡುತ್ತ, 'ನಾನು ವಿಜಾಪುರಕ್ಕೆ ಹೋಗಿ ಎರಡು ದಿನಗಳಲ್ಲಿ ಮಸೂದಖಾನನನ್ನು ದಾರಿಗೆ ತರುತ್ತೇನೆ, ಹಕೀಮ ಷಮಸುದ್ದೀನನ್ನು ವಿಜಾಪುರಕ್ಕೆ ಕರೆದುಕೊಂಡು ಹೋಗಿ, ಮಾಸೂದಖಾನನನ್ನು ಕೋಟೆಯಿಂದ ಹೊರ ಹಾಕುತ್ತೇನೆ' ಎಂದು ಹೇಳಿದನು. ಮತ್ತು ವೆಂಕಟಾದ್ರಿಯು ತನ್ನ ಜೊತೆಗೆ ಇದ್ದ ಸೈನ್ಯಕ್ಕೆ ಖರ್ಚಿಗೆ ಬೇಕೆಂದು ದಿಲೇರಖಾನನಿಂದ ಸಾಲದ ರೂಪದಲ್ಲಿ ಪಡೆದು ಮಾಸೂದಖಾನನ ಕಡೆಗೆ ಹೊರಟು ಬಂದನು.

ಮಾಸೂದಖಾನನು ಎರಡು ಮೂರು ದಿನ ಚಿಂತೆಯಲ್ಲಿ ಬಿದ್ದು ಬಹಳ ವಿಚಾರ ಮಾಡಿದನು. ದಿನಾಂಕ ೧೫ ರಜಬ ದಿನದ ರಾತ್ರಿಯ ೯ನೆಯ ಗಂಟೆಗೆ, ಸನ್ ೧೦೯೦ (೧೨, ಅಗಸ್ಟ ೧೬೭೯)ರ ದಿನ ವೆಂಕಟಾದ್ರಿಯನ್ನು ಮತ್ತು ಆತನ ಜೊತೆಗಿದ್ದ ಜಾಖೋಪಂಡಿತ, ಮಲ್ಹಾರಿ, ಬಹಲೋಲಖಾನ ಮತ್ತು ಶ್ರೀನಿವಾಸಾಚಾರ್ಯ ಅಲ್ಲದೆ ಬೇರೆ ಅನೇಕ ಜನರನ್ನು ಬಂಧಿಸಿ ಸೆರೆಮನೆಯಲ್ಲಿಟ್ಟನು. ಸಿದ್ದಿ ಅಬದುಲನನ್ನು ಕಳಿಸಿ ಪ್ರತಿಯೊಬ್ಬರ ಮನೆಗೆ ಹೋಗಿ ಅವರ ಸಾಮಾನುಗಳನ್ನೆಲ್ಲ ಸರಕಾರದ ವಶಕ್ಕೆ ತೆಗೆದುಕೊಂಡು ಖಾಲಸಾ ಮಾಡಿದನು. ತಕ್ಷಣ ಗುಪ್ತಚಾರರನ್ನು ಓಡಿಸಿ ತನ್ನ ಮಗ ಸಿದ್ದಿ ದರವೇಶನನ್ನು ಕರೆಯಿಸಿಕೊಂಡನು. ಅಪ್ಪನ ಸೂಚನೆ ಬಂದ ತಕ್ಷಣ ಸಿದ್ದಿ ದಶವೇಶನು ಅದೇ ದಿನ ಸಾಯಂಕಾಲ ತನ್ನ ಒಟ್ಟು ಸೈನ್ಯಸಮೇತವಾಗಿ ಧೂಳಖೇಡದಿಂದ ಓಡಿ ವಿಜಾಪುರಕ್ಕೆ ಬಂದನು.

### ೭೭. *ವಿಜಾಪುರವನ್ನು ತೆಗೆದುಕೊಳ್ಳಲು ದಿಲೇರಖಾನನ ಖಾಸ ನಿಶ್ಚಯ, ಕೋಟೆಯ ಮೇಲೆ ಹಲ್ಲೆ, ಖಜೀನೇ ಖಾಲಿ, ಕೆಲಸ ಮಂದಗತಿ :*

ಮಾಸೂದಖಾನನು ಸೆರೆಹಿಡಿದ ವಿಷಯ ಕೇಳಿದಾಕ್ಷಣ ಗಾಯಗೊಂಡ ಹಾವಿನಂತೆ ದಿಲೇರಖಾನನು

ಸಂತಪ್ತನಾದನು. ತುಂಬ ಸಿಟ್ಟಿಗೆದ್ದು, ತನ್ನ ಸೈನ್ಯಕ್ಕೆ ಭೀಮಾನದಿಯನ್ನು ದಾಟಲು ಆಜ್ಞೆ ಮಾಡಿದನು. ವಿಜಾಪುರ ಕೋಟೆಯ ಮುಂದೆ ಕುಳಿತು ಹೋಗಿಬರುವ ಮಾರ್ಗವನ್ನು ಬಂದ ಮಾಡಬೇಕು, ಎಂದು ನಿಶ್ಚಯಿಸಿದನು. ಮತ್ತು ನದಿಯನ್ನು ದಾಟಲು ನಾವೆಗಳನ್ನು, ಬುಟ್ಟಿಗಳನ್ನು ಅಮೀರ ಜನರಿಗೆ ಹಂಚಿಕೊಟ್ಟು ತಾನೂ ನದಿಯನ್ನು ದಾಟಲು ಬಂದನು. ದಿನಾಂಕ ೨೧, ರಜಬದಂದು (೧೮ ಅಗಸ್ಟ ೧೬೭೯)ರಂದು ಮಾಸೂದಖಾನನು ಸ್ವತಃ ನದಿಯನ್ನಿಳಿದು, ಧೂಳಖೇಡಕ್ಕೆ ಬಂದು ಉಳಿದ ಸೈನ್ಯ ಬರುವ ಮಾರ್ಗಪ್ರತೀಕ್ಷೆಯಲ್ಲಿದ್ದನು. ಆಗ ಹಕೀಮ ಷಮಸುದ್ದೀನನ ತಮ್ಮ ಮಿರ್ಜಾ ಬಾಕರ ಮತ್ತು ಶೇಖ ಅಯೂಬ ದಿಲೇರಖಾನನ ಕಡೆಗೆ ಬಂದರು. ವೆಂಕಟಾದ್ರಿಯನ್ನು ಬಂಧನದಿಂದ ಬಿಡುಗಡೆ ಮಾಡುವುದಿಲ್ಲ ಎಂಬ ವಿಷಯವನ್ನು ಸವಿಸ್ತಾರವಾಗಿ ದಿಲೇರಖಾನನಿಗೆ ಹೇಳಿದನು. ಹಕೀಮ ಷಮಸುದ್ದೀನನು ಬಂದರೆ, ಆತನಿಗೆ ವಿಜಾಪುರದಲ್ಲಿ ಮುಲಕೀ ಕೆಲಸದಮೇಲೆ ನೇಮಿಸುತ್ತೇನೆ ಎಂದು ಹೇಳಿದ ಮಾಸೂದಖಾನನು ಆತನ ಮಾರ್ಗ ಪ್ರತೀಕ್ಷೆಯನ್ನು ಮಾಡುತ್ತಿದ್ದಾನೆಂದೂ ಹೇಳಿದರು. ಆಗ ದಿಲೇರಖಾನನು ಶೇಖ ಆಯೂಬನ ಮೇಲೆ ಹರಿಹಾಯ್ದನು. ತುಂಬ ಸಿಟ್ಟಿಗೆ ಬಂದು ದೀಕ್ಕಾರ ಹೇಳಿದನು. "ನಿನ್ನನ್ನು ವೆಂಕಟಾದ್ರಿಯ ಜೊತೆಗೆ ಆತನ ಸಂರಕ್ಷಣೆಗಾಗಿ ಕಳಿಸಿದ್ದೆ. ಮಾಸೂದಖಾನನು ವೆಂಕಟಾದ್ರಿಯನ್ನು ಹಿಡಿದಾಗ ಆತನನ್ನು ಉಳಿಸಲು ನೀನು ಪ್ರಾಣವನ್ನು ಕಳೆದುಕೊಂಡಿದ್ದರೆ ಅದು ನಿನಗೆ ಶೋಭಿಸುತ್ತಿತ್ತು. ನೀನು ಬಹಳ ನಪುಂಸಕನಂತೆ, ಕೆಲಸಮಾಡಿರುವಿ. ನನ್ನ ಮುಂದೆ ಬಂದು ಮುಖ ತೋರಿಸಲು ನಿನಗೆ ನಾಚಿಕೆ ಇಲ್ಲದೆ ನಿರ್ಲಜ್ಜತನ ತೋರಿಸಿರುವಿ" ಎಂಬುದಾಗಿ ಹೇಳಿದನು.

ಮಾಸೂದಖಾನನು ಪ್ರಬಲಶತ್ರು ದಿಲೇರಖಾನನ ಭಯದಿಂದ ಚಿಂತೆಯಲ್ಲಿ ಬಿದ್ದನು. ಆತನೊಂದಿಗೆ ಸ್ನೇಹವನ್ನೂ ಇಟ್ಟುಕೊಳ್ಳಬೇಕೆಂದು ಮನದಲ್ಲಿ ತಂದನು. ಆದ್ದರಿಂದ ಖೈರತಖಾನ ಮತ್ತು ಸಯ್ಯದ ಮಹಮ್ಮದ ಬುಖಾರಿ, ಮಿರ್ಜಾ ಬಾಕರ, ಹಕೀಮ ಷಮಸುದ್ದೀನ ಖಾನನ ತಮ್ಮ ಮತ್ತು ಯಾದಗಾರ ಅಲಿ ಅಬುಲ ಹಸನ ಮೌಲಾನಾ ಇವರನ್ನು ಮಾಸುದಖಾನನು ತನ್ನ ಹತ್ತಿರ ಕರೆಯಿಸಿಕೊಂಡು ಅವರಿಗೆ, ಹಕೀಮ ಷಮಸುದ್ದೀನನ್ನು ಒಪ್ಪಿಸಿ. ಆತನಿಗೆ ರಾಜ್ಯದ ಕೆಲಸಗಳನ್ನು ಕೊಟ್ಟು ದಿಲೇರಖಾನನೊಂದಿಗೆ ಸಖ್ಯತೆಯನ್ನಿಟ್ಟುಕೊಳ್ಳುವ ಮಾತನಾಡಬೇಕು ಎಂದು ಹೇಳಿದನು. ಆಗ ಸದರೀ ಜನರು 'ನಿಮ್ಮ ಮಾತಿನಲ್ಲಿ ಏನು ವಿಶ್ವಾಸವಿದೆ? ಒಂದು ಸಲ ಆಸಾರಷರೀಫದಲ್ಲಿ ನೀವು ಶಪಥಮಾಡಿ ಹಕೀಮ ಷಮಸುದ್ದೀನರನ್ನು ಈ ಕೆಲಸಕ್ಕೆ ತಂದಿರಿ. ಮತ್ತು ೭೫ ಸಾವಿರ ಹೊನ್ನು ಕೊಡುವ ಕರಾರನ್ನು ಮಾಡಿ ಅದರಂತೆ ಹೊನ್ನುಗಳನ್ನು ಕೊಡಲು ಅನುಮಾನಿಸಿದಿರಿ. ಕರಾರಿನಂತೆ ನಡೆದುಕೊಳ್ಳಲಿಲ್ಲ. ಹಕೀಮ ಷಮಸುದ್ದೀನರ ಮನಸ್ಸು ಕೆಟ್ಟಿದೆ. ಈಗ ಆತ ನಿಮ್ಮ ಕೆಲಸದಲ್ಲಿ ಬೀಳುವುದಿಲ್ಲ' ಎಂಬುದಾಗಿ ಹೇಳಿದರು. ಅದಕ್ಕೆ ಪ್ರತಿಯಾಗಿ ಮಾಸೂದಖಾನನು "ಅದನ್ನು ನಾನು ಮಾಡಲಿಲ್ಲ. ವೆಂಕಟಾದ್ರಿಯು ಉತ್ತಮ ಮುಸಲ್ಮಾನನ ಮೇಲೆ ಅತ್ಯಾಚಾರ ಮಾಡಿದನು. ಮತ್ತು ಆ ಕರ್ಮದ ಶಿಕ್ಷೆಯನ್ನು ತಕ್ಷಣ ಆತ ಪಡೆದಿದ್ದಾನೆ. ಈಗ ನಾನು ಹಕೀಮ ಷಮಸುದ್ದೀನನಿಗೆ ವಿಜಾಪುರ ರಾಜ್ಯದ ಮುಲಕೀ ಕೆಲಸ ಕಾರಭಾರವನ್ನು ಕೊಡುತ್ತೇನೆ ಮತ್ತು ಅವರು ಹೇಳಿದ ಮಾತನ್ನು ಮೀರಿ ನಡೆಯುವುದಿಲ್ಲ. ಅವರು ಮಾಡಿದ್ದಕ್ಕೆ ನನ್ನ ಒಪ್ಪಿಗೆ ಇದೆ. ಅವರನ್ನು ಬಿಟ್ಟು ನಾನು ಯಾವ ಕಾರಭಾರವನ್ನು ಮಾಡುವುದಿಲ್ಲ. ಈಗ ನೀವು ಹೇಗಾದರೂ ಮಾಡಿ ದಿಲೇರಖಾನನೊಂದಿಗೆ ಸಖ್ಯವಾಗುವಂತೆ ಮಾತನಾಡಿ ಒಪ್ಪಂದ ಮಾಡಿಸಿರಿ" ಎಂದು ಹೇಳಿದನು. ಇಬ್ಬರಿಗೆ ಎರಡು ಶಾಲುಜೋಡಿಗಳನ್ನು, ವಸ್ತ್ರಗಳನ್ನು ಮತ್ತು ಎರಡು ಪಥಕಗಳನ್ನು ಕೊಟ್ಟು. ಇಬ್ಬರನ್ನೂ

ಆಸಾರ ಷರೀಪ ಮಹಲಿಗೆ ಕರೆದುಕೊಂಡು ಬಂದು ಶಪಥ ಮಾಡಿ, ಕುರಾನ ಷರೀಫದ ಗ್ರಂಥವನ್ನು ಅವರ ಕೈಯಲ್ಲಿ ಎತ್ತಿಕೊಟ್ಟು ಅವರನ್ನು ಕಳಿಸಿದನು.

ಅವರು ದಿಲೇರಖಾನನ ಕಡೆಗೆ ಹೋಗಿ ಹಕೀಮರ ವಶೀಲಿಯಿಂದ ಒಪ್ಪಂದ ಮಾಡಿಸುವ ಪ್ರಯತ್ನ ಮಾಡಿದರು. ಮಾಸೂದಖಾನನು ಹೇಳಿದ ನಿರೋಪವನ್ನು ಹೇಳಿದರು. ಅವರಿಗೆ ಕೊಡಬೇಕಾದ ಸಾಲದಲ್ಲಿ ಷರ್ಜಾಖಾನನ ಪ್ರದೇಶಗಳನ್ನು ಕೊಡುತ್ತಾನೆ. ಶಿವಾಜಿಯ ಬಂದೋಬಸ್ತನ್ನು ಉತ್ತಮ ಪ್ರಕಾರವಾಗಿ ಮಾಡುತ್ತಾನೆ, ಹಕೀಮ ಷಮಸುದ್ದೀನನಿಗೆ ಆತನ ವಶದಲ್ಲಿದ್ದ ಜನ ಮತ್ತು ಆಪ್ತ ಮಂಡಳಿ ಸಹಿತವಾಗಿ ವಿಜಾಪುರಕ್ಕೆ ಕಳಿಸಬೇಕು. ಅವರಿಗೆ ಮುಲಕೀ ಕೆಲಸವನ್ನು ಕೊಟ್ಟು ಅವರ ಚಾಕರಿಯಲ್ಲಿ ಇರುತ್ತಾನೆ. ಅವರ ಮಾತನ್ನು ಮೀರುವುದಿಲ್ಲ ಎಂದು ಎಲ್ಲ ಕರಾರುಗಳನ್ನು ಹೇಳಿದರು. ಅದರಲ್ಲಿ ಖೊಟ್ಟೆ ಭಾವನೆ ತುಂಬಿತ್ತು. ನಿಜವಾದ ಸಖ್ಯತೆಯ ಮಿತ್ರತೆ ಇರದೆ ಸುಮ್ಮನೆ ನಾಟಕ ಇತ್ತು. ದಿಲೇರಖಾನನಾದರೋ ವಿಜಾಪುರಕ್ಕೆ ಬರುವ ತರಾತುರಿಯಲ್ಲಿದ್ದನು. ಆದರೆ ಆತನ ಖಜಾನೆ ಖಾಲಿಯಾಗಿತ್ತು. ಶಿಪಾಯಿಗಳಿಗೆ ಖರ್ಚಿಗೆ ಕೊಡಲು ಕೂಡ ಏನೂ ಉಳಿದಿರಲಿಲ್ಲ. ರಾಜಕುಮಾರ ಮುಅಜಮ ಮತ್ತು ದಿಲೇರಖಾನರ ಮಧ್ಯ ಆತನ ಖರ್ಚಿನ ವಿಷಯದಿಂದಾಗಿ ವಿರಸ ಬಂದಿತ್ತು.[1]

ರಾಜಕುಮಾರ ಮುಅಜಮನು ಬೀದರ, ಪರಾಂಡೆ, ಸೊಲ್ಲಾಪುರ ಕೋಟೆಗಳ ಕಿಲ್ಲೇದಾರರಿಗೆ ಮತ್ತು ಸುರತ ಬಂದರು ಹಾಗೂ ಬೇರೆ ಅನೇಕ ಸ್ಥಳಗಳಿಗೆ ತಾಕೀದು ಮಾಡಿ, ದಿಲೇರಖಾನನು ಬಾದಶಹರ ಖಜೀನೆಯನ್ನು ವ್ಯರ್ಥವಾಗಿ ಖರ್ಚು ಮಾಡುತ್ತಿದ್ದಾನೆ ಆದ್ದರಿಂದ ತಮ್ಮ ಆಜ್ಞೆ ಇಲ್ಲದೆ ಹೊಸ ಖಜೀನೆ, ತೋಫಖಾನೆ ಅಥವಾ ಯಾವುದೇ ಪದಾರ್ಥಗಳನ್ನು ಯಾರೂ ಆತನಿಗೆ ಕೊಡಬಾರದೆಂದು ಪತ್ರ ಬರೆದಿದ್ದನು. ಈಗಲಂತೂ ದಿಲೇರಖಾನನು ವಿಜಾಪುರದ ರಾಜ್ಯದ ಕಾರಭಾರವನ್ನು ಹಕೀಮ ಷಮಸುದ್ದೀನನಿಗೆ ಕೊಡಿಸಲು ವೆಂಕಟಾದ್ರಿಯೊಂದಿಗೆ ಸಖ್ಯ ಬೆಳೆಸಿಕೊಂಡಿದ್ದಾನೆ. ರಾಜಕುಮಾರ ಮುಅಜಮನಿಗೆ ಪತ್ರ ಬರೆದು 'ಅಲ್ಲಾನ ಕೃಪೆಯಿಂದ ನಮ್ಮ ಮನೋಗತದಂತೆ ಕೆಲಸ ಆಗುವ ದಾರಿಯಲ್ಲಿದೆ. ಆದ್ದರಿಂದ ಖಜೀನಾ, ದಂಡು ಮತ್ತು ಯುದ್ಧ ಸಾಮಗ್ರಿಗಳನ್ನು ಇಲ್ಲಿಯ ಸಹಾಯಕ್ಕಾಗಿ ಕಳಿಸಬೇಕು. ಇಲ್ಲವಾದರೆ ಕೆಲಸ ಆದದ್ದೂ ಕೆಟ್ಟು ಹೋಗುತ್ತದೆ' ಎಂಬುದಾಗಿ ಬರೆದಿದ್ದನು.

ಪ್ರತಿಯಾಗಿ ರಾಜಕುಮಾರನು ಒಂದು ಸಾವಿರ ವಿಶ್ವಾಸಿಕ ಹತ್ಯಾರಬಂದ ಶಿಪಾಯಿಗಳೊಂದಿಗೆ ಅರವತ್ತು ಸಾವಿರ ಮೊಹರುಗಳನ್ನು ಮತ್ತು ಎರಡುಸಾವಿರ ಬಂದೂಕಧಾರಿಗಳನ್ನು ಕೊಟ್ಟು ಕಳಿಸಿದ್ದನು. ಅವರೆಲ್ಲರಿಗೂ ಆಜ್ಞೆಮಾಡಿ, 'ನಗದೀ ಹಣವನ್ನು ಸೊಲ್ಲಾಪುರದಲ್ಲಿ ಭದ್ರವಾಗಿ ಇಡಬೇಕು' ಎಂದು ಹೇಳಿ ವಿಜಾಪುರ ಕೋಟೆ ಕೈವಶವಾಗುತ್ತದೆ ಎಂದು ಖಾತ್ರಿಯಾದರೆ ಈ ಹಣವನ್ನು ಖರ್ಚು ಮಾಡಲು ದಿಲೇರಖಾನನಿಗೆ ಕೊಡಬೇಕು ಎಂದು ಹೇಳಿ ಕಳಿಸಿದ್ದನು. ಅಲ್ಲದೆ ದಿಲೇರಖಾನನಿಗೆ ತಾಕೀದು ಮಾಡಿ, 'ಇಷ್ಟೇ ಹಣದಲ್ಲಿ ವಿಜಾಪುರವನ್ನು ವಶಪಡಿಸಿಕೊಳ್ಳುವ ಕೆಲಸವನ್ನು ಪೂರ್ತಿಮಾಡಬೇಕು. ಇದಕ್ಕಿಂತ ಅಧಿಕ ಹಣ ಬೇಡಬಾರದು' ಎಂಬುದಾಗಿ ಹೇಳಿದ್ದನು. ಇದೇ ಸಮಯದಲ್ಲಿ ಮಾಸೂದಖಾನನು ವೆಂಕಟಾದ್ರಿಯನ್ನು ಕೈದುಮಾಡಿದ್ದನು. ಮತ್ತು ಸಿದ್ದೀ ದರವೇಶನನ್ನು ಸೈನ್ಯ ಸಹಿತವಾಗಿ ಕರೆಯಿಸಿಕೊಂಡು ದಿಲೇರಖಾನನೊಂದಿಗೆ ಮಾಸೂದಖಾನನು ಸಂಬಂಧ ಕೆಡಸಿಕೊಂಡಿದ್ದನು. ರಾಜುಕುಮಾರನ ಖಾಸಾ

---

1. On Wednesday, the 18th September 1678/11th Saban prince Shah Alam Bahadur, with a vast army, was sent to govern the subhas of the Deccan- MIA P. 104-105

ಜನರಿಗೆ ಈ ಸುದ್ದಿ ತಿಳಿದು ಬಂದ ಮೇಲೆ ಅವರು ದಿಲೇರಖಾನನಿಗೆ ಹಣಕೊಡಲು ಅಡ್ಡಿಮಾಡಿದರು. ಅದರಿಂದ .ದಿಲೇರಖಾನನು ಅತ್ಯಂತ ಸಿಟ್ಟಿಗೆದ್ದನು. ಅನೇಕ ಪ್ರಕಾರದ ನೆಪಗಳನ್ನು ಹೇಳಿ ವಿನಂತಿ ಪತ್ರವನ್ನು ಬರೆದು ರಾಜಕುಮಾರ ಮುಅಜಮನಿಗೆ ತಿಳಿಸಿ ಹಣವನ್ನು ವಶ ಪಡಿಸಿಕೊಂಡನು.

### ೩೮. *ವಿಜಾಪುರ ಕೋಟೆಯ ಯುದ್ಧಕ್ಕಾಗಿ ಮಾಸೂದಖಾನನ ವ್ಯವಸ್ಥೆ ಶಿವಾಜಿ ಕಡೆಯಿಂದ ಸೈನ್ಯ ಸಹಾಯ ಯಾಚನೆ, ಆತನ ಸೈನ್ಯ ಬಂದದ್ದು:*

ದಿಲೇರಖಾನನು ಹತ್ತಿರದ ದುಡ್ಡು ತೀರಿದಾಗ ವಿಜಾಪುರ ಕೋಟೆಯ ಯುದ್ಧಕ್ಕಾಗಿ ಔರಂಗಜೇಬ ಬಾದಶಹನ ಕಡೆಯಿಂದ ಹಣವನ್ನು ತರಿಸಿದನು. ಅದು ಕೈಗೆ ಬರಲು ಬಹಳ ದಿನಗಳು ಹಿಡಿದದ್ದರಿಂದ ಮಾಸೂದಖಾನನಿಗೆ ಪುರಸತ್ತು ಸಿಕ್ಕಿತು. ಆತ ವಿಜಾಪುರ ಕೋಟೆಯ ವ್ಯವಸ್ಥೆಯನ್ನು ಚೆನ್ನಾಗಿ ಮಾಡಿದನು. ಮತ್ತು ಕೋಟೆಯಲ್ಲಿ ಸಾಕಷ್ಟು ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಿದನು. ತೊರಗಲ್ಲ, ಆದೋನಿ, ಕರ್ನೂಲು ಮತ್ತು ಪಾಮನಾಯಕನ ಕಡೆಯಿಂದ ಸೈನ್ಯವನ್ನು, ಸಿಬ್ಬಂದಿಯನ್ನೂ ತರಿಸಿ ಕಿಲ್ಲೆಯಲ್ಲಿ ಹೊಸ ವ್ಯವಸ್ಥೆ ಮಾಡಿದನು. ಸಿದ್ಧೋರಾವನ ಮೂಲಕ ಶಿವಾಜಿಯ ಕಡೆಗೆ ನಿರೋಪ ಕಳಿಸಿದನು. ಅದರಲ್ಲಿ ಬರೆಯುತ್ತ, “ರಾಜ್ಯದ ಪರಿಸ್ಥಿತಿ ನಿಮಗೆ ಗೊತ್ತಿಲ್ಲ ಎಂದೇನೂ ಅಲ್ಲ. ಎಲ್ಲರಿಗೂ ಗೊತ್ತಿದೆ. ದಂಡು, ಖಜೀನೆ, ಪ್ರದೇಶಗಳು, ಕೋಟೆಗಳ ಸಿದ್ಧತೆಗಾಗಿ ಬೇಕಾಗುವ ಸಾಮಾನುಗಳು ಮತ್ತು ಕಿರುಕುಳ ಪದಾರ್ಥಗಳು ಒಂದೂ ಉಳಿದಿಲ್ಲ. ಶತ್ರು ಮಹಾ ಪ್ರಬಲನಾಗಿದ್ದಾನೆ. ಹಗಲು ರಾತ್ರಿ ವಿಜಾಪುರದ ಮೇಲೆ ಕಠಿಣವಾದ ಹಲ್ಲೆಯನ್ನು ಮಾಡುವ ವಿಚಾರದಲ್ಲಿದ್ದಾನೆ. ನೀವು ಇಲ್ಲಿಯ ಕುಟುಂಬದ ಹಳೆಯ ಚಾಕರರು, ಮತ್ತು ಇದೇ ರಾಜ್ಯದಲ್ಲಿ ದೊಡ್ಡವರಾಗಿದ್ದೀರಿ. ಆದ್ದರಿಂದ ಈ ರಾಜ್ಯದ ಚಿಂತೆ ನಿಮಗೂ ಇರಬೇಕು. ಈ ವಿಷಯದಲ್ಲಿ ನಿಮಗೆ ದುಃಖವಾಗುವಷ್ಟು ಬೇರೆ ಯಾರಿಗೂ ಆಗಲಿಕ್ಕಿಲ್ಲ. ಇಂದಿನ ಸಂಕಟದ ಸಮಯದಲ್ಲಿ ಪ್ರಬಲ ಶತ್ರುವಿನ ಕತ್ತಿ ತಲೆಯಮೇಲೆಯೇ ತೂಗುತ್ತಿದೆ. ಅವಕಾಶಕ್ಕಾಗಿ ಕಾಯುತ್ತ ಜಪ್ಪಿಸಿ ಕುಳಿತಿದ್ದಾನೆ. ಈಗ ಕೋಟೆಯ ಮತ್ತು ರಾಜ್ಯದ ಸಂರಕ್ಷಣೆಗೆ ನೀವು ಮನಸ್ಸು ಮಾಡದಹೊರತು ಸಾಧ್ಯವೇ ಇಲ್ಲ. ಧಣಿಯ ಉಪ್ಪನ್ನು ಸ್ಮರಿಸಿ ಇತ್ತ ಹೊರಟು ಬರಬೇಕು ಮತ್ತು ನಿಮಗೆ ಹೇಗೆ ಯೋಗ್ಯ ಕಾಣುತ್ತದೆಯೋ ಹಾಗೆ ಇತ್ತ ಸೂಚನೆ ಮಾಡಬೇಕು. ಅದರಂತೆಯೇ ಮಾಡಲು ಬರುತ್ತದೆ’ ಎಂಬುದಾಗಿ ಪತ್ರ ಬರೆದನು.

ಶಿವಾಜಿಯು ಈ ವಿಚಾರಗಳಿಗೆ ಒಪ್ಪಿ ವಿಜಾಪುರದ ಸಂರಕ್ಷಣೆಗೆ ಪೂರ್ಣ ಆಧಾರ ಕೊಟ್ಟು ಜವಾಬ್ದಾರಿಯನ್ನು ತೆಗೆದುಕೊಂಡನು. ಹತ್ತು ಸಾವಿರ ಸವಾರರನ್ನು ಮಾಸೂದಖಾನನ ಬೆಂಬಲಕ್ಕೆ ನೇಮಿಸಿದನು. ಎಲ್ಲ ಕಡೆಯ ಕೋಟೆಗಳಿಂದ ಭಾರ ಹೊರುವ ಎರಡು ಸಾವಿರ ಎತ್ತುಗಳನ್ನು, ಅವುಗಳ ಮೇಲೆ ಪ್ರತಿಯೊಂದು ಕಿರುಕುಳ ಸಾಮಾನುಗಳನ್ನು ಹೊರಿಸಿ. ವಿಜಾಪುರಕ್ಕೆ ಕಳಿಸಿದನು. ತನ್ನ ರಾಜ್ಯದ ಎಲ್ಲ ಪ್ರಜೆಗಳಿಗೆ ತಾಕೀದು ಮಾಡುತ್ತ ಮಾರಾಟಕ್ಕೆ ಸಾಮಾನುಗಳನ್ನು ವಿಜಾಪುರಕ್ಕೆ ಕೊಂಡೊಯ್ಯುಬೇಕೆಂದೂ, ನಗರದ ಜನರಿಗೆ ಸಿಗುವಂತೆ ಮಾಡಬೇಕೆಂದೂ ತಾಕೀದು ಮಾಡಿದನು. ಮತ್ತು ವಿಸಾಜೀ ನೀಲಕಂಠರಾವನನ್ನು ತನ್ನ ಪರವಾಗಿ ಮಾಸೂದಖಾನನ ಹತ್ತಿರ ಕಳಿಸಿದನು. ಮಾಸೂದಖಾನನಿಗೆ ಪತ್ರವನ್ನು ಬರೆಯುತ್ತ ‘ಈ ಕೆಲಸದ ಜವಾಬ್ದಾರಿ ನನ್ನ ಕಡೆಗಿರಲಿ. ನೀವು ಕೋಟೆಯ ವ್ಯವಸ್ಥೆಯನ್ನು ಮಾಡಿ ಸ್ವಸ್ಥವಾಗಿ ನಿಶ್ಚಿಂತೆಯಿಂದ ಇರಬೇಕು. ನಾನು ಸ್ವತಃ ಬರುತ್ತೇನೆ. ದಿಲೇರಖಾನನ ಸೈನ್ಯವನ್ನು ನಾಶಮಾಡಿ ಆತನ ಯೋಗ್ಯತೆಗಿಂತ ಅಧಿಕವಾದ ಶಿಕ್ಷೆಯನ್ನು ಕೊಡುತ್ತೇನೆ’ ಎಂಬುದಾಗಿ ಉತ್ತರ ಬರೆದು ಕಳಿಸಿದನು. ಅದನ್ನು ನೋಡಿದ ಮಾಸೂದಖಾನನಿಗೆ ಬಹಳ ಧೈರ್ಯ ಬಂದಿತು.

ತುಸು ದಿನಗಳಲ್ಲಿ ಶಿವಾಜಿಯ ಕಡೆಯಿಂದ ಮುಖ್ತ್ಯಾರನಾಗಿ ವಿಸಾಜಿಯೂ ವಿಜಾಪುರಕ್ಕೆ ಬಂದನು. ಆತ ಶಿವಾಜಿಯ ಕಡೆಯಿಂದ ಸಿಕಂದರ ಬಾದಶಹನಿಗೂ, ಮಾಸೂದಖಾನನಿಗೂ ವಸ್ತ್ರಗಳನ್ನು ತಂದಿದ್ದನು. ಅವುಗಳನ್ನು ಮುಟ್ಟಿಸಿ ವಿನಂತಿ ಮಾಡಿಕೊಂಡನು. ಐದುಸಾವಿರ ಸವಾರರು ಐನಾಪುರದಲ್ಲೂ ಐದು ಸಾವಿರ ಭೂಪಾಳಗಡದ ಮೇಲೂ ಬಂದು ಮುಟ್ಟಿದ್ದಾರೆ. ಅವರೆಲ್ಲ ತಾವು ಯಾವ ವೇಳೆಗೆ ಕರೆಯುತ್ತೀರೋ ಆ ಸಮಯಕ್ಕೆ ಬಂದು ಹಾಜರಾಗಬೇಕೆಂದು ತಮ್ಮ ಆಜ್ಞೆಯ ಪ್ರತೀಕ್ಷೆಯಲ್ಲಿದ್ದಾರೆ. ಶಿವಾಜಿಯೂ ಸ್ವತಃ ಹಿಂದಿನಿಂದ ಬರುತ್ತಿದ್ದಾರೆ. ಎಂಬುದಾಗಿ ಹೇಳಿದನು. ಆಗ ಮಾಸೂದಖಾನನೂ ವಿಸಾಜಿ ನೀಲಕಂಠನಿಗೆ ವಸ್ತ್ರಾದಿಗಳನ್ನು ಕೊಟ್ಟು ಆಜ್ಞೆ ಮಾಡಿದನು. ನಿಮ್ಮ ಕಡೆಯ ಸೈನ್ಯ ಬೇಗ ಬರಬೇಕು. ಆ ಸೈನ್ಯದಿಂದ ಕೋಟೆಯ ಸಂರಕ್ಷಣೆಯ ಕೆಲಸವನ್ನು ಎಚ್ಚರಿಕೆಯಿಂದ ಮಾಡಬೇಕು ಎಂದು ಹೇಳಿದನು. ತಾನು ಸ್ವತಃ ಯುದ್ಧ ಸಾಮಗ್ರಿಗಳ ಸಿದ್ಧತೆಗಾಗಿ ಮತ್ತು ಶತ್ರುವನ್ನು ಎದುರಿಸಲು ಸನ್ನದ್ಧರಾಗಿರುವ ವಿಚಾರದಲ್ಲಿ ಬಿದ್ದನು. ಹಸನಖಾನ ರೋಹಿಲಾನು ಅಬ್ದುಲಕರೀಮನ ಚಾಕರನಾಗಿದ್ದನು. ಆತನಿಗೆ ರಾಜ್ಯದಲ್ಲಿ ಬೇರೆಯೇ ನೇಮಣೂಕಿಯನ್ನು ಮಾಡಿ ನಿಶಾನೆಯನ್ನು ಚೌಘಡವನ್ನೂ ಕೊಟ್ಟನು. ಯೂಕೂತಖಾನ ಖೈರತಖಾನನನ್ನು ತನ್ನ ಹತ್ತಿರ ಕರೆತಂದು ಆತನಿಗೆ ಬಹಳ ಭರವಸೆಯನ್ನು ಕೊಟ್ಟು ಚಿತ್ತ ಸಮಾಧಾನವನ್ನು ಮಾಡಿದನು. ಆತನ ಕಡೆಯಿಂದ 'ನನ್ನ ಮನದಲ್ಲಿ ಏನೂ ಮಳ-ಮಳಿ ಇಲ್ಲ. ನನ್ನ ಮನಸ್ಸು ನಿರ್ಮಲವಾಗಿದೆ. ನಾನು ಇನ್ನು ಮೋಸ ಮಾಡಲಾರೆ' ಎಂದ ಶಪಥ ಮಾಡಿಸಿಕೊಂಡನು. ಮತ್ತು ಸಿದ್ದಿ ದರವೇಶನನ್ನು ಪ್ರಮುಖನನ್ನಾಗಿ ಮಾಡಿ, ಸುಭೆಯ ಕಾರಭಾರವನ್ನು ಆತ ಒಳ್ಳೇಯ ರೀತಿಯಿಂದ ಮಾಡುತ್ತ ಹೋಗಬೇಕೆಂದು ಠರಾವಿಸಿದನು. ಯಾಕೂತಖಾನನನ್ನು ಷರ್ಜಾಖಾನನ ಸರಿಸಮನಾಗಿ ತಂದು ಷರ್ಜಾಖಾನನ ಜಹಗೀರನ್ನು ಯಾಕೂತನಿಗೆ ಕೊಟ್ಟು, ಆದೋನಿ ಪ್ರದೇಶಗಳಲ್ಲಿ ಹಾಗೂ ವಿಜಾಪುರ ಪ್ರದೇಶಗಳಲ್ಲಿಯ ಕೆಲವನ್ನು ಜಹಗೀರು ಹಾಕಿಕೊಡಬೇಕು ಮತ್ತು ಬೇಡಿದ ಸಾಮಾನು ಸರಂಜಾಮುಗಳನ್ನು ಕೊಡಬೇಕು ಎಂಬುದು ಮಾಸೂದಖಾನನ ಇರಾದೆಯಾಗಿತ್ತು.

ಅದೇ ದಿನಗಳಲ್ಲಿ ಖೈರತಖಾನ ಮತ್ತು ಮಿಯಾಖಾನರು ದಿಲೇರಖಾನನ ಕಡೆಯಿಂದ ಆಸುಪಾಸಿನ ಪ್ರದೇಶಗಳನ್ನು ಪಡೆಯುವ ಕೆಲಸದ ಮೇಲೆ ನಿಯಮಿಸಲಾಗಿತ್ತು. ಅವರು ಮಂಗಳವೇಢೆಗೆ ಬಂದು ಅಲ್ಲಿಯ ಸೈದಖಾನ ತರೀನನ ಮೇಲೆ ಹಲ್ಲೆ ಮಾಡಿದರು. ಸೈದಖಾನನು ಸಾಕಷ್ಟು ಹೋರಾಡಿದನಾದರೂ ಇಬ್ಬರ ಎದುರು ನಿಲ್ಲಲಾಗದೆ ಓಡಿ ಹೋದನು. ಮಂಗಳ ವೇಢೆಯು ಶಿವಾಜಿಯಿಂದ ಮೊಗಲರ ಕೈಗೆ ಹೋಯಿತು.[೧] ಅದೇ ದಿನಗಳಲ್ಲಿ ಮಾಸೂದಖಾನನು ಮಲ್ಹಾರಿ ಪಂಡಿತ, ಶ್ರೀನಿವಾಸಾಚಾರ್ಯ ಮತ್ತು ವೆಂಕಟಾದ್ರಿಗಳನ್ನು ಪೋಲಾದ ಹಬಶೀಯ ವಶಕ್ಕೆ ಕೊಟ್ಟು, ಅವರಿಂದ ಹಣವನ್ನು ವಸೂಲಿ ಮಾಡಿಕೊಂಡನು. ಮಲ್ಹಾರಿ ಪಂಡಿತನಿಗೆ ನಾಲ್ವತ್ತು ಚಾಬೂಕು ಹೊಡೆತಗಳನ್ನು ಕೊಟ್ಟು ೨೫ ಸಾವಿರ ಹೊನ್ನುಗಳ ಕಾಗದವನ್ನು ಬರೆಯಿಸಿಕೊಂಡನು. ಬಾಬಣರಾಯನು ಮಾಸೂದಖಾನನಿಗೆ ಕೇಳುತ್ತ 'ವಕೀಲ ಅಬ್ದುಲ ಸೈಫನನ್ನು ಕೈದು ಮಾಡಿ ಹಿಂಸೆಯಿಂದ ವಸೂಲು ಮಾಡಿದಿರಿ. ಆತನ ಜೀವ ತೆಗೆದುಕೊಳ್ಳುವುದು ಅತ್ಯಾಚಾರವೆನಿಸುತ್ತದೆ' ಎಂದನು. ಅದಕ್ಕೆ ಮಾಸೂದಖಾನನು ಉತ್ತರ ಕೊಡುತ್ತ "ಅಬ್ದುಲ ಕರೀಮಖಾನನು ಮಾಡಿದ್ದು ಯೋಗ್ಯವೇ'? ದಿಯಾನತರಾಯನು ಬಾದಶಹರ ಚಾಕರನಿದ್ದರೂ ಆತನನ್ನು ಕೊಂದು ಆತನ ಮನೆ

1. On the 14th October 1679/19th Ramzan 1090 A.H. A letter was received from Dilerkhan stating that the fort of Mangalvedha had been wrested from shivaji - MIA p. 112.

ಮಾರು ಲೂಟಿ ಮಾಡಿದ. ಇದು ಕಡಿಮೆ ಅತ್ಯಾಚಾರವೆ? ಅದೂ ಇರಲಿ. ಈ ಅಬ್ದುಲ ಕರೀಮನಲ್ಲಿ ಏನು ಯೋಗ್ಯತೆ ಇದೆ? ಆ ವಕೀಲನು ರಾಜ್ಯದ ಕೆಲಸಗಳಲ್ಲಿ ಮತ್ತು ಬಾದಶಹರ ಯುಕ್ತಿಗಳಲ್ಲಿ ತಲೆ ಹಾಕುವುದು ಮತ್ತು ರಾಜ್ಯದ ನಾಶಕ್ಕೆ ಪ್ರಯತ್ನಮಾಡುವುದು ಇದು ಯೋಗ್ಯ ಕೆಲಸವೆ? ನಾವು ಆತನಿಗೆ ಸಧ್ಯ ಶಿಕ್ಷೆ ಕೊಡುತ್ತಿರುವುದು ಕಡಿಮೆಯೇ ಆಗಿದೆ. ಒಂದು ವೇಳೆ ನಿಮಗೆ ಆತನನ್ನು ಸಂರಕ್ಷಿಸಬೇಕು ಎಂಬುದಾಗಿದ್ದಾರೆ, ಆತನ ಬಿಡುಗಡೆ ಆಗಬೇಕು ಎಂದು ಮನಸ್ಸಿನಲ್ಲಿದ್ದರೆ, ನೀವು ನಿಮ್ಮ ಹತ್ತಿರದ ೨೫ ಸಾವಿರ ಹೊನ್ನುಗಳನ್ನು ಕೊಟ್ಟು ಬಿಡುಗಡೆ ಮಾಡಿಸಿಕೊಳ್ಳಿರಿ' ಎಂಬುದಾಗಿ ಉತ್ತರ ಕೊಟ್ಟನು.

ಇಂಥ ಸಮಯದಲ್ಲಿಯೇ 'ಶತ್ರುಗಳು ಸಾಲೊಟಗಿ ಮತ್ತು ಕಾಸೇಗಾಂವಗಳನ್ನು ಲೂಟಿ ಮಾಡಿ ಅಲ್ಲಿಯ ಜನರನ್ನು ಹೊಡೆದು ಆ ಗ್ರಾಮಗಳನ್ನು ವಶಪಡಿಸಿಕೊಂಡಿದ್ದಾರೆ ಮತ್ತು ಆಸುಪಾಸಿನ ಪ್ರದೇಶಗಳನ್ನು ಲೂಟಿ ಮಾಡುತ್ತ ನಾಶ ಮಾಡುತ್ತಿದ್ದಾರೆ' ಎಂಬ ಸುದ್ದಿ ಬಂದಿತು. ಅದರ ಬೆನ್ನ ಹಿಂದೆಯೇ "ಸಯ್ಯದ ಮಖದೂಮನ ಕಡೆಯ ಜನರು ಆಲಮೇಲಕ್ಕೆ ಬಂದು ಮುಟ್ಟಿದ್ದಾರೆ" ಎಂಬ ಸುದ್ದಿಯೂ ಬಂದಿತು. ಆಗ ಮಾಸೂದಖಾನನು ಖೈರತಖಾನನ್ನು ಏಕಾಂತದಲ್ಲಿ ಕರೆದು, ಸಯ್ಯದ ಷರೀಫ, ಫರೀದಖಾನ ಪಂಜೀ ಮತ್ತು ಮೀರಿಖಾನ ಪಂಜೀ ಮೂವರನ್ನು ಸೈನ್ಯ ಸಹಿತವಾಗಿ ಅತ್ತ ಕಳಿಸಿದನು. ಮತ್ತು ಸಾಬಾಜಿ ಘಾಟಗೆನನ್ನ ಕರೆಯಿಸಿ ಆತನಿಗೆ ಪೂರ್ಣ ಭರವಸೆಯನ್ನು ಕೊಟ್ಟು ತೊರಗಲ್ಲದಲ್ಲಿಯ ಸಿಬ್ಬಂದಿಯನ್ನು ಆತನ ಜೊತೆಗೆ ಕೊಟ್ಟು 'ಉಮದಿ' ಕಡೆಗೆ ಕಳಿಸಿದನು. ಇಷ್ಟರಲ್ಲಿ ಸಂಭಾಜಿಯು ಆಹಾರ ಸಾಮಗ್ರಿಯನ್ನು ತೆಗೆದುಕೊಂಡು ಹೊರಟಿದ್ದನು. ದಾರಿಯಲ್ಲಿ ಇಬ್ಬರೂ ಎದುರಾದರು. ಇಬ್ಬರ ಮಧ್ಯ ದೊಡ್ಡ ಯುದ್ಧವೇ ಆಯಿತು. ಉಭಯ ಪಕ್ಷಗಳಲ್ಲೂ ಹತ್ತು ಹದಿನೈದು ಜನ ಸತ್ತರು. ಸಾಬಾಜಿಗೆ ಬಾಣದ ಗಾಯವಾಯಿತು. ಐವತ್ತು ಕುದುರೆ, ನಾಲ್ಕು ಒಂಟೆಗಳು ಐವತ್ತು ಎತ್ತುಗಳು ಇಷ್ಟು ಲೂಟಿ ಸಾಬಾಜಿಯ ಕೈಗೆ ಹತ್ತಿತು. ಮಾಸೂದಖಾನನು ಒಂದು ಶಾಲು ಜೋಡಿ, ಪೋಷಾಖು ಮತ್ತು ೧೫೦ ಹೊನ್ನುಗಳನ್ನು ಸಾಬಾಜಿಗೆ ಮತ್ತು ಒಂದು ಶಾಲು ಜೋಡಿಯನ್ನು ಆತನ ವಕೀಲನಿಗೆ ಕೊಟ್ಟನು.

ಈ ಘಟನೆಯ ಬೆನ್ನ ಹಿಂದೆಯೇ ಶಿವಾಜಿಯ ಕಡೆಯ ಕೆಲಸಗಾರ ಆನಂದರಾವನು ಎರಡು ಮೂರು ಸಾವಿರ ಸವಾರರೊಂದಿಗೆ ಬಂದನು.[೨] ಆಗ ಮಾಸೂದಖಾನನು ನವರಸಪುರ ನಗರದಲ್ಲಿ ಆತನನ್ನು ಎದುರುಗೊಳ್ಳಲು ಹೋದನು. ಆತನನ್ನು ನವರಸಪುರದಲ್ಲೆ ಇಟ್ಟನು. ಇದೇ ದಿನಗಳಲ್ಲಿ "ಶತ್ರುಗಳ ಕಡೆಯ ಬಜಾಜೀ ಸೇನಾಪತಿಯು ಬಂದು ಅಕಲೂಜದ ಮೇಲೆ ಹಲ್ಲೆ ಮಾಡಿದ್ದಾನೆ. ಎಂದು ಅಕಲೂಜದಿಂದ ಸುದ್ದಿ ಬಂದಿತು. ಸಾಂಗೋಲಾದಲ್ಲಿದ್ದ ಬಹಾದ್ದೂರಖಾನನು ಈ ಸುದ್ದಿಯನ್ನು ಕೇಳಿ ತಕ್ಷಣ ಓಡಿಹೋಗಿ, ಬಜಾಜೀಯೊಂದಿಗೆ ದೊಡ್ಡ ಯುದ್ಧವನ್ನ ಮಾಡಿದನು. ಕೊನೆಗೆ ಈ ಯುದ್ಧದಲ್ಲಿ ಬಜಾಜಿಯ ಮಗನು ಸತ್ತನು ಮತ್ತು ಉಳಿದ ಆತನ ಸೈನ್ಯವು ಅಪಯಶವಾಗಿ ಓಡಿ ಹೋಯಿತು.[೩]

---

೨. ಶಕೆ ೧೬೦೧ ರಾಮನವಮಿಯಂದು (೧೧, ಮಾರ್ಚ್ ೧೬೭೯) ಆನಂದರಾಯನು ಬಾಳಾಪುರವನ್ನು ವಶಪಡಿಸಿಕೊಂಡನು. ಜೇಧೆ ಶಕಾ ಪುಟ ೨೯-೩೦

೩. ಶಕೆ ೧೬೦೧ ಕಾರ್ತೀಕ ಮಾಸದಲ್ಲಿ (ಅಕ್ಟೋಬರ -ನವೆಂಬರ ೧೬೭೯) ಸಿದ್ದೋಜಿ ನಿಂಬಾಳಕರನು ಗುಂಡು ಬಡಿದು ಸತ್ತನು. ಜೇಧೆ ಶಕಾ ಪುಟ -೩೦.

### ೩೯. ಮೊಗಲರ ಸೈನ್ಯ ವಿಜಾಪುರದ ಹತ್ತಿರ ಬಂದು ಮುಟ್ಟಿದ್ದು. ಶಿವಾಜಿಯು ಸೈನ್ಯದೊಂದಿಗೆ ಮೊಗಲರ ಪ್ರದೇಶದಲ್ಲಿ ಬಂದು ಲೂಟಿ ಮಾಡಿದ್ದು :

ದಿನಾಂಕ ೧೭, ಸಾಬಾನ ತಿಂಗಳು ಸೋಮವಾರ ದಿನ (೧೫, ಸಪ್ಟೆಂಬರ ೧೬೭೯)ರಂದು ದಿಲೇರಖಾನನು ಸಯ್ಯದ ಮಖದೂಮ ಷರ್ಜಾಖಾನನ ಡೇರೆಗೆ ಬಂದು, ಚಿತ್ತ ಸಮಾಧಾನವನ್ನು ಮಾಡಿ, ಅತ್ಯಂತ ಸ್ನೇಹವನ್ನು ತೋರಿಸುತ್ತ ಕೆಲಸದ ಬಗ್ಗೆ ವಿಚಾರಿಸಿದನು. ಅದೇ ದಿನ ಸಾಯಂಕಾಲದ ಮುಂದೆ, ಔರಂಗಜೇಬ ಬಾದಶಹನ ಕಡೆಯಿಂದ ರುಸ್ತಮಖಾನೀ ಬಿರುದನ್ನು, ಅಂದರೆ ಪದಾಧಿಕಾರದ ಆಜ್ಞಾಪತ್ರವನ್ನು, ಸನದು ಪೋಷಾಕುಗಳು ಮತ್ತು ಜಡಾವದಾರ ತಲವಾರಗಳನ್ನು ಷರ್ಜಾಖಾನನಿಗೆ ಕೊಡಲು ಬಂದುವು. ಅವೆಲ್ಲ ಸಾಮಾನುಗಳನ್ನು ಸನದನ್ನು ಷರ್ಜಾಖಾನನಿಗೆ ಕೊಡಲು, ದಿಲೇರಖಾನನ ಕಡೆಯಿಂದ ಆಸಕರಖಾನ ಬಕ್ಷೀ ಬುಖಾರಿಯು ಹೋದನು. ಆಗ ಸಯ್ಯದ ಮಖದೂಮನು ಎದುರಿಗೆ ಬಂದು ಬಾದಶಹನ ಆಜ್ಞಾಪತ್ರ ಇತ್ಯಾದಿಗಳನ್ನು ಬಹಳ ಆದರಪೂರ್ವಕವಾಗಿ ತೆಗೆದುಕೊಂಡನು.

ಖಜೀನೆ ಬಂದು ಮುಟ್ಟಿದ ನಂತರ ದಿಲೇರಖಾನನು, ಆಹಾರಸಾಮಗ್ರಿಗಳು ಬರುವ ಮಾರ್ಗವನ್ನು ಮುಕ್ತವಾಗಿಡಲು, ಧೂಳಖೇಡದಲ್ಲಿಯೇ ಪಕ್ಕಾ ವ್ಯವಸ್ಥೆ ಮಾಡಿ ದಿನಾಂಕ ೧೯, ಸಾಬಾನ (೧೭ ಸಪ್ಟಂಬರ ೧೬೭೯)ದಂದು ಅಲ್ಲಿಂದ ಕೂಚ್ ಮಾಡಿ ಹಲಸಂಗಿಯ ಮುಕ್ಕಾಮಿಗೆ ಬಂದನು, ದಿನಾಂಕ ೨೨ರಂದು (೨೦ ಸಪ್ಟಂಬರ ೧೬೭೯) ಅಲ್ಲಿಯೇ ಮುಕ್ಕಾಮು ಮಾಡಿ ಅಲ್ಲಿಯ ಕೋಟೆಯನ್ನು ದುರಸ್ತಿ ಮಾಡಿ, ಆಹಾರ ಸಾಮಗ್ರಿಗಳು ಹೋಗಿ ಬರಲು ಅಲ್ಲೊಂದು ಠಾಣೆಯನ್ನು ಮಾಡಿದನು. ದಿನಾಂಕ ೧೧, ರಮಜಾನ (೭ ಅಕ್ಟೋಬರ ೧೬೭೯) ರಂದು ಬಮ್ಮನಹಳ್ಳಿಗೆ ಬಂದು ಉಳಿದುಕೊಂಡನು. ದಿನಾಂಕ ೧೦ ರಂದು (೬ ಅಕ್ಟೋಬರ ೧೬೭೯) ರಂದು ಎಲ್ಲ ಸೈನ್ಯ ಸಹಿತವಾಗಿ ಕುದುರೆಯ ಮೇಲೆ ಕುಳಿತು 'ಬಾರಾಟಕ್ಕೆ' ವರೆಗೆ ಪರೇಡು ಮಾಡಿದನು. ಆಗ ಮಾಸೂದಖಾನನು ಸಿಹಿತಿಂಡಿಗಳನ್ನು ಹಣ್ಣುಹಂಪಲುಗಳನ್ನು ಇತ್ಯಾದಿಗಳ ತಟ್ಟೆಯನ್ನು ತುಂಬಿ ದಿಲೇರಖಾನನ ಕಡೆಗೆ ಕಳಿಸಿದನು. ದಿಲೇರಖಾನನು ತಿರುಗಿ ಮುಕ್ಕಾಮಿಗೆ ಬಂದನು. ಅಲ್ಲಿ ಠಾಣೆಯನ್ನು ಮಾಡಲು ದೊಡ್ಡ ಕೋಟೆಯೊಂದನ್ನು ಗಟ್ಟಿ ಮುಟ್ಟಾಗಿ ಕಟ್ಟಿದನು. ಕೋಟೆಯ ಕಟ್ಟೋಣವನ್ನು ಮುಗಿಸಲು ತುಂಬ ಪ್ರಯತ್ನ ಮಾಡಿದನು.

ದಿನಾಂಕ ೧೬ರಂದು (೧೨, ಅಕ್ಟೋಬರ ೧೬೭೯) ಸಯ್ಯದ ಆಲಮ ಮತ್ತು ಯಾದಗಾರ ಆಲಿ ಈ ಉಭಯತರು ಎಖಲಾಸಖಾನನ ಮುಖಾಂತರ ವಕೀಲರಾಗಿ ದಿಲೇರಖಾನನ ಕಡೆಗೆ ಬಂದು ಮಾತನಾಡಿ ತಿರುಗಿ ಹೋದರು. ದಿಲೇರಖಾನನೊಂದಿಗೆ ಕರಾರು ಮಾಡಿ. ಮಾಸೂದಖಾನನ ಜೊತೆಗೆ ಒಪ್ಪಂದ ಮಾಡಿಸುತ್ತೇವೆ ಎಂದೂ ಹೇಳಿ ಹೋದರು.

ದಿನಾಂಕ ೫, ಸವಾಲ ತಿಂಗಳು (೨೯ ಅಕ್ಟೋಬರ ೧೬೭೯) ರಂದು ಶಿವಾಜಿಯು ಹತ್ತು ಸಾವಿರ ಸವಾರರೊಂದಿಗೆ ಬಂದು ಪರಸಲಜಿ (ಪಡಸಲಗಿ?)ಯಲ್ಲಿ ಉಳಿದುಕೊಂಡನು. ಶಿವಾಜಿಯ ಸೈನ್ಯವು ವಿಜಾಪುರದಲ್ಲಿತ್ತು. ಅದು ದಿನಾಂಕ ೬ (೩೦ ಅಕ್ಟೋಬರ ೧೬೭೯) ರಂದು ಶಿವಾಜಿಯ ಎದುರುಬಂದಿತು. ಐದುಸಾವಿರ ಸವಾರರೊಂದಿಗೆ ವಿಜಾಪುರಕ್ಕೆ ಬಂದು ಸುಲ್ತಾನ ಸಿಕಂದರ ಬಾದಶಹನನ್ನು ಭೆಟ್ಟಿಯಾಗಬೇಕೆಂದು ಶಿವಾಜಿಯ ಮನದಲ್ಲಿ ಬಂದಿತು. ಅದಕ್ಕಾಗಿ ಮಸೂದಖಾನನಿಂದ ಅನುಮತಿಯನ್ನು ಕೇಳಿದನು. ಅದಕ್ಕೆ

ಮಾಸೂದಖಾನನು ಐದುನೂರು ಜನರೊಂದಿಗೆ ಬಂದು ಭೆಟ್ಟಿಯಾಗಲು ಅನುಮತಿ ನೀಡಿದನು. ಶಿವಾಜಿಯ ಮುಖ್ಯ ಕಾರಭಾರಿಯಾದ ಮೋರೋ ಪಂಡಿತನು ಈ ವಿಷಯದಲ್ಲಿ ಶಿವಾಜಿಗೆ ಬೇಡ ಎಂದನು. 'ನಾವು ಆದಿಲಶಾಹನ ರಾಜ್ಯದ ಪ್ರದೇಶಗಳನ್ನು ಕೈವಶಮಾಡಿಕೊಂಡಿದ್ದೇವೆ. ಒಂದು ವೇಳೆ ತಾವು ಕೋಟೆಯ ಒಳಗೆ ಹೋದರೆ, ಮಾಸೂದಖಾನನು ದಿಲೇರಖಾನನ ಸಖ್ಯದಿಂದ ಮೋಸದಿಂದ ದಗಾ ಕೊಡಬಹುದೆಂದು ಹೇಳಲು ಬರುವುದಿಲ್ಲ. ವಿಜಾಪುರದ ಕೋಟೆಯ ಒಳಗೆ ಹೋಗುವ ವಿಷಯದಲ್ಲಿ ಮತ್ತು ಬಾದಶಹರ ಭೆಟ್ಟಿಯಾಗುವ ವಿಷಯದಲ್ಲಿ ನಮ್ಮ ಸಮ್ಮತಿ ಇಲ್ಲ' ಎಂದು ಹೇಳಿದನು. ಅದನ್ನು ಕೇಳಿ ಶಿವಾಜಿಯು ಕೋಟೆಯ ಒಳಗೆ ಹೋಗುವ ಇರಾದೆಯನ್ನು ಬಿಟ್ಟು ಬಿಟ್ಟನು. ಮಾಸೂದಖಾನನ ಕಡೆಯಿಂದ ಬಂದ ವಕೀಲನಿಗೆ 'ಬಾದಶಹನ ಭೆಟ್ಟಿಯಾಗುವುದು ನನಗೆ ಮನಸಾರೆ ಸಂತೋಷದ ವಿಷಯ, ಆದರೆ ಮೊದಲು ಮೊಗಲರೊಂದಿಗೆ ಯುದ್ಧ ಮಾಡಿ ಮತ್ತು ಕಾಲು ಉದ್ದ ಮಾಡಿಕೊಂಡು ಬಂದ ದಿಲೇರಖಾನನ್ನು ಹಿಡಿದು ಹಾಕಿ ಅವನ ಮರ್ಯಾದೆ ಕಳೆಯುತ್ತೇನೆ. ಮತ್ತು ತನ್ನ ಜೀವದಾಶೆಯಿಂದ ಆತ ಓಡಿ ಹೋಗಬೇಕು, ದಿಲ್ಲಿಯವರೆಗೂ ಆತ ಮಧ್ಯದಲ್ಲಿ ಎಲ್ಲಿಯೂ ನಿಂತಿರಬಾರದು ಹಾಗೆ ಮಾಡಿ ಅನಂತರ ನಾನು ಬಹಳ ಸಂತೋಷದಿಂದ ಬಾದಶಹರ ಸೇವೆಯಲ್ಲಿ ಹಾಜರಾಗಿ ಅವರ ದರ್ಶನವನ್ನು ಪಡೆಯುತ್ತೇನೆ. ಅಲ್ಲಿಯವರೆಗೂ ಮಾಸೂದಸಾನರು, ವಿಜಾಪುರದ ಕೋಟೆಯಲ್ಲಿಯೇ ಇದ್ದು ಬಹಳ ಎಚ್ಚರಿಕೆಯಿಂದ ಕೋಟೆಯ ವ್ಯವಸ್ಥೆಯನ್ನು ಮಾಡುತ್ತಿರಲಿ. ನಾನು ಪ್ರತಿಯೊಂದು ಪ್ರಕಾರದ ಮೊಗಲರ ಸೈನ್ಯವನ್ನು ಹೊರಗೆ ಅಟ್ಟುತ್ತೇನೆ" ಎಂದು ಶಿವಾಜಿಯು ಹೇಳಿದನು.

ದಿನಾಂಕ ೧೦, ಸಾಬಾನ ತಿಂಗಳು, (೬ ನವಂಬರ ೧೬೭೯) ರಂದು ತನ್ನ ಸೈನ್ಯವನ್ನು ಎರಡು ಭಾಗ ಮಾಡಿ, ತಾನು ಎಂಟು-ಒಂಭತ್ತು ಸಾವಿರ ಸವಾರರೊಂದಿಗೆ ಮುಸಲ ಮತ್ತ ಆಲಮೇಲದ ದಾರಿಯಿಂದ, ಆನಂದರಾವನು ಹತ್ತುಸಾವಿರ ಸವಾರರೊಂದಿಗೆ ಮನಿಚಿ ಮತ್ತು ಸಾಂಗೋಲೆಯ ದಾರಿಯಿಂದ ಹೊರಟು ಹೋಗಿ ಮೊಗಲರ ಪ್ರದೇಶಗಳಲ್ಲಿ ದಾಖಲಾದರು.[೧] ಶಿವಾಜಿಯು ಪ್ರತಿವರುಷ ರಾಜ್ಯವನ್ನು ಹಾಳು ಮಾಡಿ ವಸೂಲು ಮಾಡುತ್ತಾನೆ. ಇದರಿಂದ ಏನಾದೀತು? ಒಂದು ವೇಳೆ ನಾವು ವಿಜಾಪುರವನ್ನು ಪಡೆದುಕೊಂಡರೆ ಎಲ್ಲವೂ ಸಫಲವಾಗುತ್ತದೆಂದು ದಿಲೇರಖಾನ ಮನದಲ್ಲಿಯೇ ಯೋಚಿಸಿದನು. ಹಾಗೆ ಮಾಡಿದರೆ ಶಿವಾಜಿಯನ್ನು ರಾಜ್ಯದಿಂದ ಹೊರಗೆ ಹಾಕುವುದು ಸುಲಭವಾಗುತ್ತದೆಂದು ತಿಳಿದು, ಶಿವಾಜಿಯು ತನ್ನ ಪ್ರದೇಶಗಳ ಮೇಲೆ ಏರಿ ಬಂದದ್ದನ್ನು ಗಣನೆಗೆ ತೆಗೆದುಕೊಳ್ಳದೆ, ವಿಜಾಪುರದ ಮುತ್ತಿಗೆಯಿಂದ ಸರಿಯಲೇ ಇಲ್ಲ.

ರಾಜಕುಮಾರ ಮುಅಜಾಮನು, ಔರಂಗಜೇಬ ಬಾದಶಹನ ಕಡೆಗೆ ನಿರಂತರವಾಗಿ ದಿಲೇರಖಾನನ ಬಗ್ಗೆ ಚಾಡಿ ಹೇಳುತ್ತಲೆ ಇದ್ದನು. ಖಾನಜಹಾನ ಬಹಾದ್ದೂರ ಕೋಕಲತಾಷ್ ಮತ್ತು ಬಾದಶಹನ ಹತ್ತಿರ ಇರುತ್ತಿದ್ದ ಕೆಲವು ಕಾರಭಾರಿ ಜನರು ಕೂಡ ದಿಲೇರಖಾನನ ಮೇಲಿನ ಹಗೆತನದಿಂದ ಆತನ ಬಗ್ಗೆ ವಿರಸಬರುವಂಥ ಮಾತುಗಳನ್ನು ಹೇಳುತ್ತಲೇ ಇದ್ದರು.

---

೧. ಶಕೆ ೧೬೦೧ ಕಾರ್ತೀಕ ಮಾಸ (ಅಕ್ಟೋಬರ /ನವಂಬರ ೧೬೭೯) (ಶಿವಾಜಿ) ರಾಜೇ ಹೋಗಿ ಜಾಲನಾ ಪುರವನ್ನು ಲೂಟ ಮಾಡಿದರು. ಅಲ್ಲಿ ರಣಮಸ್ತ ಖಾನನೊಂದಿಗೆ ಯುದ್ಧವಾಯಿತು... ರಾಜೆ ತಿರುಗಿ ಪಟ್ಟೆ-ಮೇಲಿಂದ ರಾಯಗಡಕ್ಕೆ ಬಂದರು - ಜೇಧೆ ಶಕಾ ಪುಟ- ೩೦.

ದಿಲೇರಖಾನನಾದರೋ ಮಾಸೂದಖಾನನ ಹತ್ತಿರ ಏನೊಂದು ಉಳಿದಿಲ್ಲವಾದ್ದರಿಂದ ವಿಜಾಪುರವನ್ನು ತೆಗೆದುಕೊಳ್ಳುವುದು ತುಂಬ ಸುಲಭವೆಂದು ತಿಳಿದುಕೊಂಡಿದ್ದನು. ಮಲಿಕ ಬರಖುರದಾರ ಮತ್ತು ಹಕೀಮ ಷಮಸುದ್ದೀನ ಈ ಉಭಯತರು ಈ ವಿಷಯದಲ್ಲಿ ದಿಲೇರಖಾನನ ಕಿವಿ ಊದಿ ಕಾರಣೀಭೂತರಾಗಿದ್ದರು. ವಿಜಾಪುರವನ್ನು ಕೈವಶ ಮಾಡಿಕೊಳ್ಳುವುದು ತುಂಬ ಸುಲಭ ಎಂದು ಈ ಇಬ್ಬರೂ ಸೂಚಿಸುತ್ತಿದ್ದರು. ರಾಜಕುಮಾರರು ಸುಳ್ಳು ಬರೆಯುತ್ತಿದ್ದಾರೆ, ಕಾರಭಾರಿ ಜನರು ಸುಮ್ಮನೆ ನನ್ನ ಬಗ್ಗೆ ಚಾಡಿ ಹೇಳುತ್ತಿದ್ದಾರೆ. ವಿಜಾಪುರ ತುಂಬ ಹಾಳು ಬಿದ್ದಿದೆ. ಮಾಸೂದಖಾನನು ತುಂಬ ದುಷ್ಟನಿದ್ದಾನೆ, ಎಂಬುದಾಗಿ ಸವಿಸ್ತಾರವಾಗಿ ದಿಲೇರಖಾನನು ವಿನಂತಿ ಪತ್ರಗಳನ್ನು ಬರೆದು ಬಾದಶಹರಿಗೆ ಮೇಲಿಂದಮೇಲೆ ಕಳಿಸುತ್ತಲೇ ಇದ್ದನು. ಉಳಿದಿಬ್ಬರೂ ಕೂಡ ಹಾಗೆಯೇ ಬರೆದು, ಕೆಲವೇ ದಿನಗಳಲ್ಲಿ ವಿಜಾಪುರವನ್ನು ಕೈವಶ ಮಾಡಿಕೊಂಡು ವಿಜಯ ಸಾಧಿಸಲಾಗುತ್ತದೆಂದು ಸೂಚಿಸುತ್ತಿದ್ದರು.

### *೪೦. ಮೊಗಲರು ವಿಜಾಪುರವನ್ನು ತೆಗೆದುಕೊಳ್ಳುವ ವಿಚಾರಗಳೆಲ್ಲ ವ್ಯರ್ಥವಾದದ್ದು, ದಿಲೇರಖಾನನು ಬಾದಶಹನ ಕಣ್ಣಲ್ಲಿ ಇಳಿದದ್ದು :*

ಮಾಸೂದಖಾನನು ವೆಂಕಟಾದ್ರಿಯನ್ನು ಬಂಧಿಸಿದ ನಂತರ ದಿಲೇರಖಾನ ಮತ್ತು ಮಲಿಕ ಬರಖುರದಾರ, ಹಕೀಮ ಷಮಸುದ್ದೀನ ಖಾನರು ಏನೆಲ್ಲ ಯುಕ್ತಿಗಳನ್ನು ಮಾಡಿದ್ದರೋ ಅವುಗಳೆಲ್ಲ ವ್ಯರ್ಥವಾದವು. ಮಾಸೂದಖಾನನು ಶಿವಾಜಿಯೊಂದಿಗೆ ಒಪ್ಪಂದ ಮಾಡಿಕೊಂಡು ಆತನ ಸೈನ್ಯವನ್ನು ತನ್ನ ಬೆಂಬಲ ಹಾಗೂ ಸಹಾಯಕ್ಕೆ ತರಿಸಿದನು. ಕೋಟೆಯನ್ನು ಯುದ್ಧಕ್ಕಾಗಿ ಸಿದ್ಧಗೊಳಿಸಿದನು. ಶಿವಾಜಿಯು ಸ್ವತಃ ಕೂಡ ವಿಜಾಪುರದ ಆಸು-ಪಾಸಿನಲ್ಲಿ ಬಂದು ಮುಟ್ಟಿದನು. ಆಗ ರಾಜಕುಮಾರ ಮುಅಜಮನು ಇದೆಲ್ಲವನ್ನು ನೋಡಿ, ಔರಂಗಜೇಬ ಬಾದಶಹನಿಗೆ ವಿನಂತಿಪತ್ರವನ್ನು ಬರೆದನು. 'ದಿಲೇರಖಾನನು ಖಜೀನೆಯಲ್ಲಿಯ ಬಹಳ ಹಣವನ್ನು ಖರ್ಚು ಮಾಡಿದ್ದಾನೆ. ಆದರೆ ಆತ ಈವರೆವಿಗೂ ಏನೊಂದು ಕೆಲಸವನ್ನು ಮಾಡಿಲ್ಲ. ವಿಜಾಪುರವನ್ನು ಕೈವಶಮಾಡಿಕೊಳ್ಳುವಲ್ಲಿ ಆತ ದುಬಾರಿಯ ಪ್ರಯತ್ನವನ್ನು ಮಾಡಿದ್ದಾನೆ. ಆದರೆ ಅದು ಕೈವಶ ವಾಗುವುದು ಬಹಳ ಕಠಿಣವಾಗಿದೆ. ಮಾಸೂದಖಾನನು, ದಿಲೇರಖಾನನ ದ್ವೇಷದಿಂದ ಬೇಸತ್ತು ವಿಜಾಪುರದ ರಾಜ್ಯವನ್ನು ಶಿವಾಜಿಯ ವಶಕ್ಕೆ ಕೊಟ್ಟಿದ್ದಾನೆಂದು ತಿಳಿದು ಬರುತ್ತದೆ. ಈ ದಿನಗಳಲ್ಲಿ ಮಾಸೂದಖಾನ ಮತ್ತು ಶಿವಾಜಿ ಈ ಉಭಯತರ ಮಧ್ಯ ಅತ್ಯಂತ ನಿಕಟ ಸಖ್ಯವಾಗಿದೆ' ಎಂದಿತ್ಯಾದಿಯಾಗಿ ಸವಿಸ್ತಾರವಾಗಿ ಬರೆದ ಪತ್ರವು ಔರಂಗಜೇಬ ಬಾದಶಹನ ಕೈಗೆ ಹೋಗಿತ್ತು.

ಅದರಿಂದ ದಿಲೇರಖಾನ ಮತ್ತು ಮಲಿಕ ಬರಖುರದಾರ, ಹಕೀಮ ಷಮಸುದ್ದೀನ ಈ ಮೂವರ ಬರವಣಿಗೆಗಳು ಬಾದಶಹನ ಎದುರು ಖೊಟ್ಟಿ ಎಂದು ಸಿದ್ಧವಾಗಿದ್ದುವು. ತುಂಬ ಸಿಟ್ಟಿಗೆದ್ದು ದಿಲೇರಖಾನನಿಗೆ ಬೆದರಿಕೆಯ ಆಜ್ಞಾಪತ್ರವನ್ನು ಕಳಿಸಿದನು. ಮಲಿಕ ಬರಖುರದಾರ ಮತ್ತು ಹಕೀಮ ಷಮಸುದ್ದೀನರನ್ನು ಔರಂಗಜೇಬ ಬಾದಶಹನು ತನ್ನತ್ತ ಕರೆಯಿಸಿಕೊಂಡನು. ಆಗ ದಿಲೇರಖಾನ ಮತ್ತು ಈ ಉಭಯತರ ಮಧ್ಯ ಬಹಳ ವಿರಸ ಉಂಟಾಯಿತು. ಮಲಿಕಬರಖುರದಾರನು ತನ್ನನ್ನು ಮೋಸಗೊಳಿಸಿ, ವಿಜಾಪುರವನ್ನು ತೆಗೆದುಕೊಳ್ಳುವ ಕೆಲಸ ತುಂಬ ಕಠಿಣವಾಗುವಂತೆ ಮಾಡಿ, ನನ್ನನ್ನು ಸಂಕಟದಲ್ಲಿ ಕೆಡವಿದ ಎಂದು ದಿಲೇರಖಾನನು ಹೇಳಿಕೊಳ್ಳಹತ್ತಿದನು. ಪ್ರತಿಯಾಗಿ ನಾನು ಯುಕ್ತಿಮಾಡಿ ಮಾಸೂದಖಾನ ಮತ್ತು ವೆಂಕಟಾದ್ರಿ, ಇಬ್ಬರನ್ನೂ ಮತ್ತು ಇತತರ ಅಧಿಕಾರಿಗಳನ್ನೂ ಒಂದುಗೂಡಿಸಿ ದಿಲೇರಖಾನನ ಹತ್ತಿರ

ಕಳಿಸಿದ್ದೆ. ಮತ್ತು ಆತನಿಗೆ ಸೂಚನೆ ಕೊಟ್ಟು ಇವರನ್ನೆಲ್ಲ ಬಂಧಿಸಿ ಅದೇ ಸಮಯಕ್ಕೆ ವಿಜಾಪುರದ ಮೇಲೆ ದಾಳಿ ಮಾಡಿ ಕೈವಶ ಮಾಡಿಕೋ ಎಂಬುದಾಗಿ ಹೇಳಿದ್ದೆ. ಆದರೆ ದಿಲೇರಖಾನನು ನನ್ನ ಒಂದು ಮಾತನ್ನೂ ಕೇಳಲಿಲ್ಲ. ಔರಂಗಜೇಬ ಬಾದಶಹರ ಕೆಲಸವನ್ನು ಕೆಡಿಸಿದನೆಂದು ಮಲಿಕ ಬರಖುರದಾರನು ಹೇಳಿಕೊಳ್ಳುತ್ತಿದ್ದನು.

ದಿಲೇರಖಾನನು ಬಾದಶಹರ ಆದೇಶದಂತೆ, ಹಕೀಮ ಷಮಸುದ್ದೀನನ್ನು ದಿನಾಂಕ ೧೧, ರಮಜಾನ (೭, ಅಕ್ಟೋಬರ ೧೬೭೯)ದಂದು ದಿಲ್ಲಿಗೆ ಕಳಿಸಿದನು. ದಿನಾಂಕ ೧೦, ಸವಾಲ (೫ ನವಂಬರ ೧೬೭೯) ರಂದು ಮಲಿಕ ಬರಖುರದಾರನನ್ನೂ ಬಹಳ ಕಿತ್ತಾಡಿ ಕೆಲವು ಜನರನ್ನು ಜೊತೆಮಾಡಿ ಬಾದಶಹನ ಹತ್ತಿರ ಕಳಿಸಿದನು. ದಿನಾಂಕ ೧೮, ಸವಾಲ (೧೩, ನವಂಬರ ೧೬೭೯)ರಂದು ಖಾಜಾ ಅಬ್ದುಲ ರಜಾಕ, ಸೈಯದ ಆಲಮ್ ಈ ಉಭಯತರು ಮಾಸೂದಖಾನನ ಕಡೆಯಿಂದ ಗಟ್ಟಿಯಾದ ಒಪ್ಪಂದ ಸೂತ್ರವನ್ನು ತಂದರು. ಆಗ ದಿಲೇರಖಾನನು ಅದಕ್ಕೆ 'ಮಾಸೂದಖಾನನು ತನ್ನ ಮಗನನ್ನು ಇತ್ತ ಕಡೆಯ ದಂಡಿನಲ್ಲಿ ಕಳಿಸಬೇಕು ಮತ್ತು ನಮ್ಮ ಸಾಲವನ್ನು ಮುಟ್ಟಿಸಿ ಶಿವಾಜಿಯ ಸಖ್ಯವನ್ನು ತೊರೆಯಬೇಕು. ಅವನಿಗೆ ಯಾವ ಅಧಿಕಾರವನ್ನು ಕೊಡಬಾರದು' ಇವುಗಳನ್ನು ಒಪ್ಪಿದರೆ ಮಾತ್ರ ನನಗೆ ಔರಂಗಜೇಬ ಬಾದಶಹರೊಂದಿಗೆ ಮಾತನಾಡಲು ಬರುತ್ತದೆ ಎಂದು ಹೇಳಿದನು. ಆಗ ಅಬ್ದುಲ ರಜಾಕನು ಬಹಳ ಚರ್ಚೆ, ಮಧ್ಯಸ್ಥಿಕೆಯಿಂದ ದಿಲೇರಖಾನನ ಮನದಲ್ಲಿದ್ದ ಸಂಶಯವನ್ನು ನಿವಾರಣೆಮಾಡಿ, ಅವನನ್ನು ಒಪ್ಪಿಸಿ, ಸಯ್ಯದ ಆಲಮನನ್ನು ಮಾಸೂದಖಾನನ ಕಡೆಗೆ ಕಳಿಸಿದನು. "ಮಗನನ್ನು ಇಲ್ಲಿಯ ದಂಡಿಗೆ ಕಳಿಸುವ ವಿಷಯದಲ್ಲಿ ಮಾಸೂದಖಾನನನ್ನು ಒಪ್ಪಿಸಿ, ಉಳಿದ ಕರಾರುಗಳನ್ನು ಒಪ್ಪುವಂತೆ ಮಾಡಿ ರಾತೋರಾತ್ರಿಯೇ ತಿರುಗಿ ಬರಬೇಕು" ಎಂದು ಹೇಳಿದನು.

ಸಯ್ಯದ ಆಲಮನು ಹೋಗಿ ಮಾಸೂದಖಾನನ ತಲೆಯಲ್ಲಿ, ಅಬ್ದುಲ ರಜಾಕನು ಈ ಕೆಲಸದಲ್ಲಿ ದಿಲೇರಖಾನನೊಂದಿಗೆ ಕೂಡಿಕೊಂಡಿದ್ದಾನೆ ಮತ್ತು ಅವನಂತೆಯೇ ಆಗಿದ್ದಾನೆ. ದಿಲೇರಖಾನನು ಪರಕೀಯ ಅಪರಿಚಿತ ಮನುಷ್ಯ, ಭರವಸೆಯ ಮನುಷ್ಯನಲ್ಲ. ಯಾವ ವಿಶ್ವಾಸದಿಂದ ಸಿಕಂದರ ದರವೇಶನನ್ನು ಆತನ ಕಡೆಗೆ ಕಳಿಸಬೇಕೆಂದು ಕೇಳುತ್ತ ದಿಲೇರಖಾನನ ಬಗ್ಗೆ ಸಂಶಯಗಳನ್ನೇ ಬಿತ್ತಿದನು. ಅವನ ಮಾತುಗಳನ್ನು ಕೇಳಿದ ಮಾಸೂದಖಾನನು ಒಪ್ಪಂದಕ್ಕೆ ಮುಂದಾಗಲಿಲ್ಲ. ಅದನ್ನು ಹಾಗೆಯೇ ಹಿಂದೆ ಬೀಳಿಸಿದ. ದಿಲೇರಖಾನನ ಪತ್ರಕ್ಕೆ ಉತ್ತರವನ್ನು ಕೂಡ ಬರೆದು ಕಳಿಸಲಿಲ್ಲ.

### *೪೧. ಮಾಸೂದಖಾನನಿಂದ ಉತ್ತರ ಬರದ್ದಕ್ಕೆ ಆದಿಲಶಾಹಿ ಪ್ರದೇಶಗಳ ಸುಲಿಗೆಗೆ ಪ್ರಯಾಣ :*

ದಿಲೇರಖಾನನು ಮಾಸೂದಖಾನನಿಂದ ಉತ್ತರ ಬರಲು ಎರಡು ದಿನ ದಾರಿ ಕಾಯ್ದನು. ವಿಜಾಪುರದಲ್ಲಿಯ ಜನರ ನಡತೆಯನ್ನು ನೋಡಿ ನಿರಾಶನಾಗಿ ಇನ್ನೂ ಲೂಟಿ ಮಾಡುವುದೆಂದು ನಿರ್ಧರಿಸಿ ಯುದ್ಧ ಸಾಮಗ್ರಿಗಳನ್ನು ಸಿದ್ಧಪಡಿಸಿದನು. ಬಹುದೊಡ್ಡ ತೋಪುಗಳನ್ನು ಬಮ್ಮನಹಳ್ಳಿಯಲ್ಲಿ ಇಟ್ಟು ದಿಲೇರಖಾನನ ದಿನಾಂಕ ೨೦, ಸವಾಲ ತಿಂಗಳಂದು (೧೫, ನವಂಬರ ೧೬೭೯) ಕೂಚ ಮಾಡಿ ಮಖಣಾಪುರಕ್ಕೆ ಬಂದನು. ದಿನಾಂಕ ೨೨ರಂದು (೧೭ ನವಂಬರ ೧೬೭೯) ಜಾಲಗಿರಿಗೆ ಬಂದು ಮುಟ್ಟಿದನು. ಶಿವಾಜಿಯ ಭಯದಿಂದಾಗಿ ದಿಲೇರಖಾನನಿಗೆ ಮೈಥಳಿಬಿಟ್ಟು ವಿಜಾಪುರದ ಮೇಲೆ ಹಲ್ಲೆ

ಮಾಡಲು ಸಾಧ್ಯವಾಗುತ್ತಿರಲಿಲ್ಲ. ಸಂಭಾಜಿಯು ಬಹಳಷ್ಟು ಕೋಟೆಗಳನ್ನು ಮತ್ತು ಉಳಿದೆಲ್ಲ ಪ್ರದೇಶಗಳನ್ನು ಕೈವಶಮಾಡಿಕೊಡುವೆನೆಂದು ಈ ಮೊದಲೇ ದೊಡ್ಡ ದೊಡ್ಡ ಮಾತುಗಳನ್ನಾಡಿದ್ದನು. ಆತ ಒಳಗಿಂದೊಳಗೆ ಅಬ್ದುಲ ಫಯಾಜನ ವಶೀಲಿಯಿಂದ ಮುರ್ತಜಾಬಾದ ಅಂದರೆ ಮಿರಜದ ನಾಯಕ ಮತ್ತು ಜನರೊಂದಿಗೆ ಕೂಡಿಕೊಳ್ಳಲು ಪ್ರಯತ್ನಿಸುತ್ತಿದ್ದನು. ಅವರ ಮುಖಾಂತರ ಮಿರಜ ಮತ್ತು ಪನ್ಹಾಳಾದ ಕಡೆಗೆ ಹೋಗಬೇಕೆಂದಿದ್ದನು. ಈ ವಿಷಯ ಶಿವಾಜಿಗೆ ಗೊತ್ತಾಗಿ ಶಿವಾಜಿಯು ಮೊಗಲರ ಪ್ರದೇಶಗಳಿಂದ ಹಿಂತಿರುಗಿ ಬರಬಹುದೆಂದು ತಿಳಿದು ದಿಲೇರಖಾನನು ದಿನಾಂಕ ೨೨ ರಂದು (೧೭, ನವಂಬರ ೧೬೭೯) ಜಾಲಗಿರಿಯಿಂದ ಕೂಚ ಮಾಡಿ ತಿಕೋಟಕ್ಕೆ ಹೋದನು.

ತಿಕೋಟಾ ಗ್ರಾಮವು ಜನ ವಸತಿಯಿಂದ ತುಂಬಿದ ಊರಾಗಿತ್ತು. ಪ್ರಜಾಜನರು, ಅಮಲ್ದಾರರು, ಶ್ರೀಮಂತರು ಅಲ್ಲಿಲ್ಲಿಯ ತರಫಗಳಲ್ಲಿಯ ಹಿಂದು ಮತ್ತು ಮುಸಲ್ಮಾನ ಜನರು ತಿಕೋಟದಲ್ಲಿ ಬಂದು ಇರುತ್ತಿದ್ದರು. ದಿಲೇರಖಾನನು ಬರಬಹುದೆಂದು ಅವರಿಗೆ ಗೊತ್ತಿರಲಿಲ್ಲ. ಇಖಲಾಸಖಾನನು ತಿಕೋಟಿಗೆ ಬಂದು ಮುಟ್ಟಿದನು. ಆತನ ಸೈನ್ಯದಲ್ಲಿಯ ಜನರು ಗ್ರಾಮವನ್ನು ಲೂಟಿ ಮಾಡಲು ಪ್ರಾರಂಭಿಸಿದರು. ಆಗ ಮುಸಲ್ಮಾನ ಮತ್ತು ಹಿಂದುಗಳ ಸ್ತ್ರೀಯರು ತಂತಮ್ಮ ಮಕ್ಕಳನ್ನು, ಮುಂಗಡಿ ಕೂಸಗಳನ್ನು ಸಹಿತ ತೆಗೆದುಕೊಂಡು ಮನೆಯ ಹತ್ತಿರದ ಬಾವಿಗಳಲ್ಲಿ ಜಿಗಿದು ಮುಳುಗಿದರು. ಸುಮಾರು ಮೂರು ಸಾವಿರ ಹಿಂದು-ಮುಸ್ಲೀಮರು ಬಂಧನಕ್ಕೊಳಗಾದರು. ಗ್ರಾಮವನ್ನು ಸಂಪೂರ್ಣವಾಗಿ ಕಸ ಹೊಡೆದು ತೆಗೆದಂತೆ ಲೂಟಿ ಮಾಡಿದಾಗ ಏನೊಂದು ಪದಾರ್ಥಗಳು ಉಳಿದಿರಲಿಲ್ಲ. ಆ ಗ್ರಾಮದ ಮೇಲೆ ದೊಡ್ಡದೊಂದು ಪ್ರಳಯ ಆದಂಥ ಸಮಯ ಪ್ರಾಪ್ತವಾಗಿತ್ತು. ಆಗ ಖಾಜಾ ಅಬ್ದುಲ ರಜಾಕನಿಗೆ ಈ ವಿಷಯ ತಿಳಿಯಿತು. ಹಾನಿಗೊಳಗಾದ ಜನರ ಮೇಲೆ ದಯೆ ಬಂದು ಆತ ಮಾಸೂದಖಾನನ ಕಡೆಯಿಂದ ಮಧ್ಯಸ್ಥಿಕೆಯಿಂದ ಅವರಲ್ಲಿಯ ಐದೂನೂರು ಜನರನ್ನು ಬಂಧನದಿಂದ ಬಿಡುಗಡೆ ಮಾಡಿಸಿಕೊಂಡು ತನ್ನ ಹತ್ತಿರ ಇಟ್ಟುಕೊಂಡನು. ಅವರಿಗೆಲ್ಲ ಅನ್ನ ವಸ್ತ್ರಗಳನ್ನು ಕೊಟ್ಟನು.

ದಿನಾಂಕ ೨೪ ರಂದು (೧೯ ನವಂಬರ ೧೬೭೯) ತಿಕೋಟಾದಿಂದ ಕೂಚ ಮಾಡಿ ಹೊನವಾಡಕ್ಕೆ ಅನಂತರ ತೆಲಂಗ (ತೆಲಸಂಗ) ಮಾರ್ಗವಾಗಿ ದಾರಿಯಲ್ಲಿ ಲೂಟಿ ಮಾಡುತ್ತ ಊರಿನ ಜನರನ್ನು ಬಂಧಿಸುತ್ತ ಅಥಣಿಗೆ ಹೋದನು. ದಿನಾಂಕ ೨೭ರಂದು (೨೨, ನವಂಬರ ೧೬೭೯) ಅಥಣಿಯಿಂದ ಹೊರಟು ಐನಾಪುರಕ್ಕೆ ಹೋಗುತ್ತಿದ್ದನು. ದಾರಿಯಲ್ಲಿ, ಸಂಭಾಜಿಯು ತನ್ನ ಸೈನ್ಯದಿಂದ ಓಡಿ ವಿಜಾಪುರಕ್ಕೆ[೧] ಹೋಗಿದ್ದಾನೆಂದು ಸುದ್ದಿ ತಿಳಿದ ತಕ್ಷಣ ಅಲ್ಲಿಂದಲೇ ದಿಲೇರಖಾನನು ಹಿಂತಿರುಗಿ ವಿಜಾಪುರದ ಕಡೆಗೆ ಹೊರಟನು.

### ೪೨. *ದಿಲೇರಖಾನನ ದಂಡಿನಿಂದ ಸಂಭಾಜಿಯು ಓಡಿ ಹೋದದ್ದು :*

ಕಾರಣಗಳಿದ್ದುವು, ಆ ದಿನಗಳಲ್ಲಿ ಔರಂಗಜೇಬ ಬಾದಶಹನು ದಿಲೇರಖಾನನಿಗೆ ದಿಲ್ಲಿಗೆ ಬರಲು

---

೧. ಶಕೆ ೧೬೦೧ ಮಾರ್ಗಶೀರ್ಷ (ನವಂಬರ ೧೬೭೯) ಸಂಭಾಜಿಯು ಮೊಗಲಾಯಿಯಿಂದ ಓಡಿ ಪನ್ಹಾಳಕ್ಕೆ ಬಂದನು. ಪೌಷ ವದ್ಯ ೭(೧೩ ಜಾನೇವಾರಿ ೧೬೮೦) ಸೋಮವಾರ ಶಿವಾಜಿಗೂ ಆತನಿಗೂ ಬೆಟ್ಟಿಯಾಯಿತು. ಜೇಧೆ ಶಕಾ ಪುಟ -೩೦.

ಹೇಳಿದ್ದನು. ದಿಲೇರಖಾನನು ಅನೇಕ ಅನುಮಾನಗಳ ಕಾರಣಗಳಿಂದಾಗಿ, ಔರಂಗಜೇಬ ಬಾದಶಹರ ಕಡೆಗೆ ಹೋಗಲು ಒಪ್ಪುತ್ತಿರಲಿಲ್ಲ. ಅದೇ ದಿನಗಳಲ್ಲಿ ಶಿವಾಜಿಯು ತನ್ನ ಮಗ ಸಂಭಾಜಿಗೆ ನಾನಾ ಪ್ರಕಾರದ ಭರವಸೆಗಳನ್ನು ಕೊಡುತ್ತ, ತನ್ನ ಕಡೆಗೆ ತರಲು, ಪೂರ್ಣ ವಿಶ್ವಾಸಿಕ ಜನರನ್ನು ಸಂಭಾಜಿಯ ಕಡೆಗೆ ಕಳಿಸಿದ್ದನು. ಅವರು ಅವನನ್ನು ಸಮಾಧಾನಗೊಳಿಸಿ ಕರೆತಂದಿದ್ದರು. ತಂದೆ-ಮಗ ಉಭಯತರ ಮಧ್ಯೆ ಇದ್ದ ವಿರಸದಿಂದಾಗಿ ಅವರಿಬ್ಬರೂ ಒಂದುಗೂಡುತ್ತಲೇ ಇರಲಿಲ್ಲ. ಆ ವಿರಸವು ತಂದೆಯ ಕಳವಳ, ಸಖ್ಯದಿಂದಾಗಿ ದೂರವಾಯಿತು. ಶಿವಾಜಿಯು, ತನ್ನ ಮಗನ ಮನಸ್ಸನ್ನು ತನ್ನತ್ತ ತಿರುಗಿಸಿಕೊಂಡಿದ್ದನು. ಆಗ ಸಂಭಾಜಿಯು ಸಂಧಿಯನ್ನು ಸಾಧಿಸಿ, ತನ್ನ ಸ್ತ್ರೀಗೆ ಪುರುಷ ವೇಷವನ್ನು ತೊಡಿಸಿ, ವೀರ ಯೋಧನಂತೆ ಐವರು ಜನರೊಂದಿಗೆ ದಿಲೇರಖಾನನ ದಂಡಿನಿಂದ ಓಡಿದನು. ದಿನಾಂಕ ೨೮, ಸವಾಲ ತಿಂಗಳು (೨೩, ನವಂಬರ ೧೬೭೯) ರಂದು ವಿಜಾಪುರಕ್ಕೆ ಬಂದು ಮುಟ್ಟಿದನು. ಮಾಸೂದಖಾನನು ಅವಶ್ಯವಿದ್ದ ಸಾಮಾನು ಸರಂಜಾಮುಗಳನ್ನು, ವಸ್ತ್ರಗಳನ್ನು, ಹಾಸಿಗೆಗಳನ್ನು ಇತ್ಯಾದಿ ಸಂಭಾಜಿಗಾಗಿ ಕಳಿಸಿದನು ಮತ್ತು ಆತನ ಚಿತ್ತ ಸಮಾಧಾನಗೊಳಿಸಿದನು. ದಿಲೇರಖಾನನಿಗೆ ಈ ವಿಷಯ ತಿಳಿಯಿತು. ಮಾಸೂದಖಾನನ ಮೇಲೆ ಅತ್ಯಂತ ಸಿಟ್ಟಿಗೆದ್ದನು. ಅಬ್ದುಲ ರಜಾಕನು ಈ ಸಂಧಿಯನ್ನು ಸಾಧಿಸಿ, "ನನ್ನನ್ನು ಕಳಿಸಿರಿ, ನಾನು ಮಾಸೂದಖಾನನ ಕಡೆಗೆ ಹೋಗಿ ಸಂಭಾಜಿಯ ಉಪಚಾರ ಮಾಡಿಸುವೆ" ಎಂದು ದಿಲೇರಖಾನನಿಗೆ ಹೇಳಿ ದಿನಾಂಕ ೫, ಜಿಲಕಾದ ದಂದು (೨೯, ನವಂಬರ ೧೬೭೯) ವಿಜಾಪುರಕ್ಕೆ ಬಂದನು. ಅಬ್ದುಲ ರಜಾಕನ ಈ ಕಾರಣಗಳಿಂದಾಗಿಯೇ ಸಂಭಾಜಿಯು ದಿಲೇರಖಾನನ ಪಾಳೆಯದಿಂದ ಓಡಿ ಮಾಸೂದಖಾನನ ಹತ್ತಿರ ಬಂದಿದ್ದನು. ಅಲ್ಲಿಂದಲೂ ದಿನಾಂಕ ೭ ಜಿಲಕಾದ (೧ ಡಿಶೆಂಬರ ೧೬೭೯) ರಂದು ರಾತ್ರಿ ಕುದುರೆ ಮೇಲೆ ಕುಳಿತು ಸಂಭಾಜಿಯು ಪನ್ಹಾಳಕ್ಕೆ ಹೊರಟು ಹೋದನು.

### ೪೩. *ದಿಲೇರಖಾನನು ವಿಜಾಪುರ ನಗರದ ಹತ್ತಿರವೆ ಬಂದು ಯುದ್ಧ ಮಾಡಿದ್ದು ಮತ್ತು ದಕ್ಷಿಣದ ಜನರು ಅದರ ನಿವಾರಣೆ ಮಾಡಿದ್ದು:*

ಐನಾಪುರದ ದಾರಿಯಿಂದ ದಿಲೇರಖಾನನು ಹಿಂತಿರುಗಿದನು. ಸಾಲೋಟಗಿ, ಕಾಖಂಡಕಿ, ಉಕ್ಕಲಿ ಮತ್ತು ಮಂಗಳೂರುಗಳ ಮಾರ್ಗದಿಂದ ದಾರಿಯಲ್ಲಿ ಹೊಲಗಳನ್ನು, ತೋಟ ಪಟ್ಟಿಗಳನ್ನು, ಪ್ರತಿಯೊಂದು ಊರಲ್ಲೂ ಲೂಟಿ ಮಾಡುತ್ತ ಮಾಡುತ್ತ, ಕೈಗೆ ಸಿಕ್ಕ ಹೆಣ್ಣು-ಗಂಡುಗಳನ್ನು ಬಂಧಿಸುತ್ತ ದಿನಾಂಕ ೧೧, ಜಿಲಕಾದ (೫ ಡಿಶೆಂಬರ ೧೬೭೯) ದಂದು ಇಲಿಯಾಬಾದಕ್ಕೆ ಬಂದು ದಂಡಿನ ಬೀಡು ಬಿಟ್ಟನು. ತಾನು ಸ್ವತಃ ಸೈನ್ಯದೊಂದಿಗೆ ತೋಫುಖಾನೆ ಸಹಿತವಾಗಿ ರಸೂಲಪುರ ಮತ್ತು ಮುರಾರಿಬಾಗದ ಕಡೆಗೆ ಬಂದು ಆ ಬದಿಯಲ್ಲಿ ತೋಪುಗಳನ್ನು ಹಾರಿಸಲು ಮತ್ತು ಯುದ್ಧಮಾಡಲು ಪ್ರಾರಂಭಿಸಿದನು. ಕೋಟೆ ಮೇಲಿನಿಂದಲೂ ತೋಫುಗಳು ಮತ್ತು ಬಂದೂಕಿನ ಗುಂಡುಗಳು ಹಾರಲು ಪ್ರಾರಂಭಿಸಿದುವು. ಹನ್ನೊಂದು ಹನ್ನೆರಡು ಗಂಟೆಗಳ ವರೆಗೆ ಬಿಟ್ಟು ಬಿಡದೆ ಯುದ್ಧ ಹಾಗೂ ತೋಫುಗಳ ಹಾರಿಸುವಿಕೆ ನಡೆದೇ ಇತ್ತು. ಕೋಟೆಯ ಮೇಲಿನ ತೋಫುಗಳ ಗುಂಡುಗಳಿಂದ, ಮೊಗಲರ ಕಡೆಯ ದಂಡಿನಲ್ಲಿಯ ಬಹಳ ಜನರು ಮತ್ತು ಮಾಣಿಕಜಿ ಮಾಂಢರೆಯ ಒಂದು ಆನೆ ಸತ್ತವು. ಎರಡನೆಯ ದಿನವೂ ಅದೇ ರೀತಿಯಲ್ಲಿ ಯುದ್ಧ ನಡೆಯಿತು. ಲತೀಫಶಾಹನ ಬಂಧು ಮತ್ತು ಬಹಳ ಜನರು ಮರಣ ಹೊಂದಿದರು.

ಗಾಯ ಹೊಂದಿದರು. ದಖಣೆ ಜನರು ಬಹಳ ಕಲಿತನದಿಂದ ಹಲ್ಲೆ ಮಾಡುತ್ತಿದ್ದರು. ಅವರ ಕಡೆಗೂ ಬಹಳ ಜನರು ಸತ್ತರು. ನಿತ್ಯ ಇದೇ ರೀತಿಯಾಗಿ ಯುದ್ಧ ನಡೆಯಿತು. ತೋಫಿನ ಗುಂಡುಗಳು ನಗರದಲ್ಲಿ ಬಂದು ಬೀಳುತ್ತಿದ್ದುವು.

ದಿನಾಂಕ ೧೭, ಜಿಲ್ಕಾದ, (೧೧ ಡಿಶೆಂಬರ ೧೬೭೯) ರಂದು ದಿಲೇರಖಾನನು ಬೇಗಂತಾಲಾಬದ ಕಡೆಗೆ ಬಂದು ಡೇರೆ ಹಾಕಿದನು. ಅದೇ ರೀತಿಯ ತೋಫುಗಳ ಹಾರಿಸುವಿಕೆ ಉಭಯ ಬಣಗಳಲ್ಲೂ ನಡೆಯಿತು. ದಿನಾಂಕ ೨೪, ಗುರುವಾರ (೧೮, ಡಿಶೆಂಬರ ೧೬೭೯) ದಂದು ದಿಲೇರಖಾನನು ಅಲ್ಲಿಂದ ಹೊರಟು ಖಣೀಬಾಗಿನಲ್ಲಿ, ಅಫಜಲಖಾನನ ಮಹಾಲಿನ ಹತ್ತಿರ ಡೇರೆ ಹೊಡೆದನು. ಅಫಜಲಪೂರ ಮತ್ತು ಶಾಹಪೂರ ಇತ್ಯಾದಿಗಳಲ್ಲಿಯ ಮನೆಗಳು, ತೋಟಗಳು ಇವುಗಳನ್ನೆಲ್ಲ ಸುಡಲು ದಿಲೇರಖಾನನು ಆಜ್ಞೆಯನ್ನಿತ್ತನು. ದಿನಾಂಕ ೨೯ (೨೩, ಡಿಶಂಬರ ೧೬೭೯) ರಂದು ಅಲ್ಲಾಪುರ ದರವಾಜಾದ ಮುಂದೆ ಮೊಗಲರ ಸೈನ್ಯದಲ್ಲಿಯ ಎಖಲಾಸಖಾನ ಮತ್ತು ಅಬ್ದುಲ ಫಯಾಜ ಹಾಗೂ ವಿಜಾಪುರ ಕಡೆಯ ಮಾಲೋಜಿ ಘೋರಪಡೆ, ಯಾಕೂತಖಾನ ಖೈರತಖಾನಿ ಮತ್ತು ಹಸನಖಾನ ರೋಹಿಲಾರ ಮಧ್ಯ ಘನಘೋರ ಕಾಳಗವಾಯಿತು. ಇಬ್ಬರ ಕಡೆಗಳಲ್ಲೂ ಬಹಳ ಜನರು ಸತ್ತರು ಮತ್ತು ಗಾಯ ಹೊಂದಿದರು. ದಖಣೀ ಜನರ ವಿಜಯವಾಗಿತ್ತು. ದಿನಾಂಕ ೯, ಜಿಲ್ಹೇಜದಂದು (೨, ಜಾನೇವಾರಿ ೧೬೮೦) ದಿಲೇರಖಾನನು ಸದರೀ ತೋಟದಿಂದ ಹೊರಟು ಮತ್ತೆ ಬೇಗಂ ತಾಲಾಬದ ಕಡೆಗೆ ಬಂದು ಅಲ್ಲಿಂದ ನಿತ್ಯ ಯುದ್ಧ ಮಾಡತೊಡಗಿದನು. ಮತ್ತು ಕೋಟೆಯ ಜನರೂ ಅದೇ ಪ್ರಮಾಣದಲ್ಲಿ ಅವನೊಂದಿಗೆ ಯುದ್ಧ ಮಾಡುತ್ತಿದ್ದರು.

### ೪೪. *ದಿಲೇರಖಾನನ ಯುದ್ಧ ಗದ್ದಲ ಸಮಯದಲ್ಲಿ ವಿಜಾಪುರದಲ್ಲಿದ್ದ ಸಣ್ಣ ಗುಂಪಿನ ವಿವರಗಳು :*

ಆ ಸಮಯದಲ್ಲಿ ವಿಜಾಪುರದಲ್ಲಿ ಹಳೆಯ ಸೈನಿಕ ಅಧಿಕಾರಿಗಳಲ್ಲಿ ಮಾಲೋಜಿ ಘೋರಪಡೆ, ಆತನ ಚಿಕ್ಕಮ್ಮನಗಂಡ ಮಾಣಿಕಜಿ ಖರಾಡೇ, ಸಯೀದಖಾನ ತರೀನ ಮತ್ತು ಮಿಯಾಖಾನ ತರೀನರನ್ನು ಬಿಟ್ಟು ಬೇರೆ ಯಾರೂ ಇರಲಿಲ್ಲ. ಮಾಸೂದಖಾನನ ಆಡಳಿತದಲ್ಲಿಯ ಸರದಾರ ಮಂಡಳಿಯಲ್ಲಿ, ಅಮೀರ ಜನರಲ್ಲಿ ದೊಡ್ಡ ದೊಡ್ಡ ಅಧಿಕಾರದಲ್ಲಿ ಇದ್ದರು ಮತ್ತು ಕೆಲಸದ ವ್ಯವಸ್ಥೆ ಈ ಜನರ ಕೈಯಲ್ಲಿತ್ತು. ಅವರೆಂದರೆ, ಯಾಕುತಖಾನ ಖೈರತಖಾನೀ, ಸಿದ್ದೀ ಜೋಹಾರ, ಕಾಜೀ ಸಯೀದ, ಸಿದ್ದೀ ಯಾಕೂತ, ಮಲಿಕಮಖ್ಯಾನ ಮರಮ್ಯಾನ, ಹಸನಖಾನ ರೋಹಿಲಾ, ಅಬ್ದುಲ ಕರೀಮ ದಾವೂದಜೀ, ಸಂಭಾಜೀ ಘಾಟಗೆ, ಸಿದ್ದೀ ಹೈದರ, ಖಾಜಾ ಹೈದರ ಲ್ಯಾರಿ ಅಬ್ದುಲ ರಜಾಕ ಲ್ಯಾರಿ, ಬರೀದಖಾನ ಶಾಪರಗಾವೀ, ಶೇಖ ಅಬ್ದುಲ್ಲಾ ಜುನೇದಿ, ಹೈದರ ಆಕಾ, ಹಾಬೀಶಾಹ, ಗಂಜೂಶಾಹ ಈ ರೀತಿಯಾಗಿ ಇದ್ದರು. ಮಾಸೂದಖಾನನ ಸೈನ್ಯವೂ ಸೇರಿ ಕೇವಲ ಐದಾರುಸಾವಿರಕ್ಕಿಂತ ಅಧಿಕವಾಗಿರಲಿಲ್ಲ. ಈ ಐದಾರು ಸಾವಿರ ಜನರೂ ಉಪವಾಸ-ವನವಾಸಗಳಿಂದ ದಿನಗಳನ್ನು ನೂಕುತ್ತ ಬಹಳ ಸಂಕಟದಲ್ಲಿದ್ದರು. ಮಾಸೂದಖಾನನ, ಸಿದ್ದೀ ಹೈದರ, ಅಬ್ದುಲ ರಜಾಕ, ಬರೀದಖಾನ ಕಾಪರಗಾವೀ ಮತ್ತು ಜಮಾದಾರ ಜನರು ಖಾಸಗೀಯಾಗಿ ಇದ್ದವರು ಎಲ್ಲರೂ ಸೇರಿ ಸಾವಿರಕ್ಕಿಂತ ಕಡಿಮೆ ಇದ್ದರು. ಅವರು ಕೂಡ ಕೋಟೆಯಲ್ಲಿದ್ದು, ಕೋಟೆಯ ಬುರುಜುಗಳನ್ನು ಪ್ರತಿಯೊಬ್ಬರ ವಶಕ್ಕೆ ಕೊಡಲಾಗಿತ್ತು.

ಆದೋನಿ ಕಡೆಯ ಎರಡು ಸಾವಿರ ಸಿಬ್ಬಂದಿ ಜನರನ್ನು ಕೋಟೆಯ ಮೇಲಿನ ವಿವಿಧ ಸ್ಥಳಗಳಲ್ಲಿ ನೇಮಿಸಲಾಗಿತ್ತು. ತೊರಗಲ್ಲದ ಉಳಿದ ಸೈನ್ಯ ಮತ್ತು ಸಿಬ್ಬಂದಿ ಜನರನ್ನು ಮತ್ತು ಪಾಮನಾಯಕನ ಕಡೆಯ ಒಂದು ಸಾವಿರ ಸಿಬ್ಬಂದಿ ಜನರು ಸಹಾಯಕ್ಕಾಗಿ ಬಂದು ಮುಟ್ಟಿದ್ದರು. ಅವರನ್ನು ಕೋಟೆಯ ಹೊರಗೆ ಮಹಾದ್ವಾರದ ಕಡೆಗೂ, ಶಾಹಪುರ ದ್ವಾರದ ಕಡೆಗೆ, ಇಬ್ರಾಹಿಮಪುರ ದ್ವಾರದ ಕಡೆಗೆ ಮತ್ತು ಇಬ್ರಾಹಿಮ ಆದಿಲಶಾಹನ ದ್ವಾರದ ಕಡೆಗೆ, ಅಲ್ಲದೆ ಕೋಟೆ ಕಂದಕಗಳಲ್ಲಿ ಮತ್ತು ಆಯಕಟ್ಟಿನ ಸ್ಥಳಗಳಲ್ಲಿ ಇಡಲಾಗಿತ್ತು. ಯಾವಾಗಲಾದರೂ ಒಮ್ಮೊಮ್ಮೆ ಹೊರಗೆ ಬಂದು ಹೊರಗಿನ ಸೈನ್ಯದ ಸಮಾಚಾರವನ್ನು ತೆಗೆದುಕೊಂಡು ಅವರಿಗೆ ಧೈರ್ಯ ಹೇಳಲಾಗುತ್ತಿತ್ತು. ಶಿವಾನ ಪ್ರದೇಶಗಳಿಂದ ಮತ್ತು ನಾಲ್ಕು ನಿಟ್ಟುಗಳಿಂದಲೂ ಪ್ರತಿನಿತ್ಯ ಆಹಾರ ಸಾಮಗ್ರಿಗಳು ಕಿರುಕುಳ ಸಾಮಾನುಗಳು ಕೋಟೆಯ ಒಳಗಡೆಗೆ ಬಂದು ಮುಟ್ಟುತ್ತಿದ್ದುವು. ಆಹಾರ ಸಾಮಾಗ್ರಿಗಳ ಕೊರತೆ ಇರಲಿಲ್ಲ. ಪ್ರತಿಯೊಂದು ಸಾಮಾನುಗಳೂ ಕಡಿಮೆ ದರದಲ್ಲಿ ದೊರಕುತ್ತಿದ್ದುವು. ಮೊಗಲರ ದಂಡಿನಲ್ಲಿ ಏನೊಂದು ಪದಾರ್ಥಗಳು ಯಾವ ಕಡೆಗಳಿಂದಲೂ ಬರುತ್ತಿರಲಿಲ್ಲ ಮತ್ತು ಆಹಾರ ಸಾಮಗ್ರಿ, ಕಿರುಕುಳ ಸಾಮಾನುಗಳು ಪ್ರತಿಯೊಂದು ಬಹಳ ತುಟ್ಟಿಯಾಗಿದ್ದುವು.

### *೪೫. ದಿಲೇರಖಾನನ ಕೈಯಿಂದ ಏನೊಂದು ಆಗದಿದ್ದುದು, ಆತನ ಮನೋರಥ ಪೂರ್ಣವಾಗದೆ ಚಿಂತಾಗ್ರಸ್ತನಾದದ್ದು. ಮಾಸೂದಖಾನನೊಂದಿಗೆ ಒಪ್ಪಂದಕ್ಕೆ ಪ್ರಯತ್ನ ಆದನ್ನು ಮಾಸೂದಖಾನನು ತಿರಸ್ಕರಿಸಿದ್ದು :*

ಇನ್ನೊಂದು ಯುದ್ಧವಾಗಿದ್ದರೆ ಮೊಗಲರ ಸೈನ್ಯದ ಸರ್ವನಾಶಕ್ಕೆ ಕಾರಣವಾಗುತ್ತಿತ್ತು. ಆದರೆ ಯುದ್ಧವಾಗಲಿಲ್ಲ. ಅದರಿಂದಾಗಿ ಮೊಗಲರಿಗೆ ಬಹಳ ಪುರಸತ್ತು ಸಿಕ್ಕು, ದಿಲೇರಖಾನನು ಏನಾದರೊಂದು ಪರಾಕ್ರಮ ಮಾಡಬೇಕೆಂದು ಬಯಸಿದನು. ಆದರೆ ಸಧ್ಯಕ್ಕೆ ವಿಜಾಪುರವು ಮೊಗಲರ ಕೈಗೆ ಸಿಗಬೇಕೆಂಬುದು ಅಲ್ಲಾನ ಇಚ್ಛೆಯಾಗಿರಲಿಲ್ಲ. ಆದ್ದರಿಂದ ಈ ವಿಷಯ ಸಧ್ಯ ಉಳಿಯಿತು. ರಾಜಕುಮಾರ ಮುಅಜಮ ಮತ್ತು ದಿಲೇರಖಾನನ ಮಧ್ಯ ದಿನದಿಂದ ದಿನಕ್ಕೆ ವಿರಸ ಅಧಿಕವಾಗುತ್ತಲೇ ನಡೆದಿತ್ತು. ರಾಜಕುಮಾರನು ಆತನಿಗೆ ದ್ರವ್ಯ ಸಹಾಯವನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಪ್ರದೇಶಗಳನ್ನೆಲ್ಲ ಸುಲಿಗೆ ಮಾಡಿದರು. ದಂಡು ತುಂಬ ದಣಿದಿತ್ತು. ಅದರಿಂದಾಗಿ ಜಹಗೀರುಗಳ ಕಡೆಗಳಿಂದಲೂ ದಿಲೇರಖಾನನಿಗೆ ಏನೂ ಬಂದು ಮುಟ್ಟುತ್ತಿರಲಿಲ್ಲ. ದಿಲೇರಖಾನನ ಸೈನ್ಯವು ಉಪವಾಸದಿಂದ ಸಾಯುವ ಸ್ಥಿತಿಗೆ ಬಂದಿತು. ಪ್ರದೇಶಗಳೂ ತುಂಬ ಕೆಟ್ಟು ಹೋಗಿದ್ದುವು. ಈ ಕಾರಣಗಳಿಂದಾಗಿ, ರಾಜಕುಮಾರನು ದಿಲೇರಖಾನನಿಗೆ ತಾಕೀದುಗಳ ಮೇಲೆ ತಾಕೀದನ್ನು ಕೊಟ್ಟು ಪತ್ರಗಳನ್ನು ಬರೆದು ಕಳಿಸುತ್ತಿದ್ದನು. ಅದರಲ್ಲಿ ಆತ, 'ನೀವು ವಿಜಾಪುರದಿಂದ ಹೊರಟು ಬಂದು ನಮ್ಮ ಪ್ರದೇಶಗಳ ಸಂರಕ್ಷಣೆಗಾಗಿ ಪ್ರಯತ್ನ ಮಾಡಿರಿ. ಶತ್ರು ಅಂದರೆ, ಶಿವಾ, ನಮ್ಮ ಪ್ರದೇಶಗಳಲ್ಲಿ, ಮೊಗಲಾಯಿ ಸರಹದ್ದಿನಲ್ಲಿ ಬಂದಿದ್ದಾನೆ. ಆತನನ್ನು ಹೊರಗಟ್ಟಬೇಕು' ಎಂಬುದಾಗಿ ಎಚ್ಚರಿಕೆಯ ಪತ್ರಗಳನ್ನು ಬರೆದು ಕಳಿಸುತ್ತಿದ್ದನು. ಅದರಿಂದ ದಿಲೇರಖಾನನು ಸಿಟ್ಟಿಗೆದ್ದು ಸುಳ್ಳು ಹೇಳಿ, ನೆಪಗಳನ್ನೊಡ್ಡಿ ವಿಜಾಪುರದಿಂದ ಸರಿಯಲು ಸಮಯ ನೂಕುತ್ತಿದ್ದನು. ಏನಾದರೂ ಮಾಡಿ ಮಾಸೂದಖಾನನೊಂದಿಗೆ ಒಪ್ಪಂದ ಮಾಡಿಕೊಂಡು ತಿರುಗಿ ಹೋಗಬೇಕೆಂದು ದಿಲೇರಖಾನನು ಪ್ರಯತ್ನಿಸುತ್ತಿದ್ದನು. ಹೀಗೆ ಮನಸ್ಸು ಮಾಡಿ, ಸಯ್ಯದ ಮಖದೂಮ ಷರ್ಜಾಖಾನನ ವಕೀಲಿಯಿಂದ ಒಪ್ಪಂದ ಮಾಡಿಕೊಳ್ಳುವ ಪ್ರಯತ್ನ ನಡೆಸಿದ್ದನು. ಮತ್ತು ಇದಕ್ಕಾಗಿ ಬಹಳೇ ದುಂಬಾಲು ಬಿದ್ದನು.

ಮಾಸೂದಖಾನನಿಗೆ ರಾಜಕುಮಾರ ಮುಆಜಮನ ಮತ್ತು ದಿಲೇರಖಾನರ ಮಧ್ಯದ ವಿರಸದ ಸುದ್ದಿ ತಿಳಿದಿತ್ತು. ಶಿವಾಜಿಯು ಮಾಸೂದಖಾನನಿಗೆ ಬಹಳ ಬಲ ಕೊಟ್ಟು ಬರೆಯುತ್ತಿದ್ದನು. ರಾಜಕುಮಾರನೂ ಒಳಗಿಂದೊಳಗೆ ಮಾಸೂದಖಾನನ ಸಂರಕ್ಷಣೆ ಮತ್ತು ಸಹಾಯ ಮಾಡುತ್ತಿದ್ದನು. ರಹಸ್ಯದಲ್ಲಿ ಯಾರಿಗೂ ಗೊತ್ತಾಗದಂತೆ ಮಾಸೂದಖಾನ ಮತ್ತು ರಾಜಕುಮಾರ ಮುಆಜಮರ ಮಧ್ಯ ಮಾತುಕತೆಗಳೂ ನಿರ್ಧಾರವಾಗಿದ್ದು, ಇಪ್ಪತ್ತೈದು ಸಾವಿರ ಹೊನ್ನುಗಳನ್ನು ಕೊಟ್ಟರೆ, ಒಪ್ಪಂದದ ಹೊರತಾಗಿ ದಿಲೇರಖಾನನನ್ನು ನಿಮ್ಮ ಪ್ರದೇಶಗಳಿಂದ ಹೊರ ಹಾಕುತ್ತೇನೆ. ಎಂಬುದಾಗಿ ಮಾತುಕತೆಗಳು ಠರಾವಿಸಿದ್ದುವು. ಅಂಥ ಸಂದರ್ಭದಲ್ಲಿ, ರಾಜಕುಮಾರನ ಬೆಂಬಲ ಮತ್ತು ಶಿವಾಜಿಯ ಬಲದಿಂದಾಗಿ ಸುಳ್ಳ ನೆಪಗಳನ್ನೊಡ್ಡಿ, ದಿಲೇರಖಾನನೊಂದಿಗೆ ಒಪ್ಪಂದ ಮಾಡಿಕೊಳ್ಳುವ ವಿಷಯದಲ್ಲಿ ಸಡಿಲು ಬಿಟ್ಟು ಅವನ ಮಾತುಗಳಿಗೆ ಕಿವಿಗೊಡಲಿಲ್ಲ. ಒಪ್ಪಂದ ಮಾಡಿಕೊಳ್ಳಲು ಎಳ್ಳಷ್ಟು ಸಿದ್ಧನಾಗಲಿಲ್ಲ.

### ೪೬. *ಶಿವಾಜಿಯು ಭೀಮಾ ನದಿಯಿಂದ ನರ್ಮದಾನದಿಯವರೆಗೆ ಮೊಗಲರ ಪ್ರದೇಶಗಳನ್ನು ಲೂಟಿ ಮಾಡಿ ನಾಶಮಾಡಿದ್ದು ಈ ವಿಷಯ ಔರಂಗಜೇಬ ಬಾದಶಹನ ವರೆಗೂ ಮುಟ್ಟಿದ್ದು :*

ಶಿವಾಜಿಯು ಮೊಗಲರ ಪ್ರದೇಶಗಳಲ್ಲಿ ಬಂದು ದಾಖಲಾದನು. ಅವನ ಜೊತೆಗೆ ಮೂವತ್ತು ಸಾವಿರ ಸವಾರರಿದ್ದರು. ಅವನು ತನ್ನ ಒಟ್ಟು ಸೈನ್ಯವನ್ನು ಒಡೆದು ಬೇರೆ-ಬೇರೆ ಗುಂಪುಗಳನ್ನಾಗಿ ಮಾಡಿ ಅವುಗಳನ್ನು ನಾಲ್ಕು ಕಡೆಗಳಿಗೂ ಬಿಟ್ಟನು. ಬಡಿಯುವುದು-ಹೊಡೆಯುವುದು, ಕೊಲ್ಲುವುದು, ಲೂಟಾಲೂಟಿ ಮಾಡುವುದು, ಮನೆಗಳನ್ನು ಸುಡುವುದು ಮತ್ತು ಎಲ್ಲ ಪ್ರದೇಶಗಳಲ್ಲಿಯ ತೋಟ-ಪಟ್ಟಿಗಳನ್ನು ಹಾಳು ಮಾಡುವುದು ಇವು ಅವನ ಸೈನ್ಯದ ತುಕಡಿಗಳಿಗೆ ಕೊಟ್ಟ ಆಜ್ಞೆಗಳಾಗಿದ್ದುವು. ಭೀಮಾ ನದಿಯ ಸರಹದ್ದಿನಿಂದ ದೌಲತಾಬಾದದ ವರೆಗೆ ಒಟ್ಟಾರೆ ನಗರಗಳನ್ನು, ಕಸಬಾಗಳನ್ನು, ದೊಡ-ದೊಡ್ಡ ಗ್ರಾಮಗಳನ್ನು ಅಲ್ಲದೆ ಸಣ್ಣ-ಸಣ್ಣ ಹಳ್ಳಿಗಳನ್ನು ಲೂಟಿ ಮಾಡಿ ನಾಶ ಮಾಡಿದರು. ಬಹಳ ಸಂಪತ್ತು ಶಿವಾನ ಕೈಗೆ ಹತ್ತಿತು. ನಾಲ್ಕೂ ನಿಟ್ಟಿನ ಪ್ರದೇಶಗಳಿಂದ ಲೂಟಿ ಮಾಡಿ ಮತ್ತು ಪ್ರದೇಶಗಳನ್ನು ನಾಶ ಮಾಡುವ ಕೆಲಸದಿಂದ ಮುಕ್ತರಾದ ಮೇಲೆ, ವರಾಡ, ಖಾನದೇಶ, ಮಾಹೂರ ಬಾಗಲಣ ಇತ್ಯಾದಿಗಳ ಕಡೆಗೆ ಶಿವಾಜಿಯು ಸೈನ್ಯವನ್ನು ತೆಗೆದುಕೊಂಡು ಹೋಗಿ ಅಲ್ಲಿಯ ಪ್ರದೇಶಗಳಲ್ಲಿ ದಂಗೆ ಮಾಡಿ ಆ ಎಲ್ಲ ಪ್ರದೇಶಗಳನ್ನು ಧೂಳಿಪಟ ಮಾಡಿ ನೆಲಸಮ ಮಾಡಿದನು. ಈ ಲೂಟಿಯಲ್ಲಿ ಹನ್ನೆರಡು ಸಾವಿರ ಕುದುರೆಗಳು ಮತ್ತು ಕೋಟ್ಯಾವಧಿ ರೂಪಾಯಿಗಳು ಶಿವಾಜಿಯ ಕೈಗೆ ಸಿಕ್ಕಿತೆಂದೂ ಹೇಳಲಾಗುತ್ತದೆ.

ದೇಶವಂತೂ ತುಂಬ ಕೆಟ್ಟು ನಾಶವಾಯಿತು. ಶಿವಾಜಿಯ ಸೈನ್ಯದ ಗದ್ದಲದ ಉಪದ್ರವದಿಂದ ದಕ್ಷಿಣದ ಸುಬೆಗಳಲ್ಲಿಯ ಪ್ರದೇಶಗಳಲ್ಲಿ ಯಾರ‍್ಯಾರಿಗೆ ಜಹಗೀರುಗಳಿದ್ದವೋ ಆ ಎಲ್ಲ ಜನರೂ ನಾಶವಾದರು. ಶಿವಾನು ಬಹಳ ಗದ್ದಲ ಹಾಕಿ. ಅತ್ಯಾಚಾರ ಮತ್ತು ಅನ್ಯಾಯಗಳನ್ನು ಮಾಡುತ್ತಿದ್ದನೆಂದು ನಾಲ್ಕು ದಿಕ್ಕುಗಳಿಂದಲೂ, ಊರೂರುಗಳಿಂದಲೂ ಔರಂಗಜೇಬ ಬಾದಶಾಹನಿಗೆ ಫಿರ್ಯಾದುಗಳು ಬರತೊಡಗಿದವು. ರಾಜಕುಮಾರ ಮುಆಜಮನ ವಿನಂತಿ ಪತ್ರಗಳಲ್ಲಿ ದಿಲೇರಖಾನನ ಮೂರ್ಖತನದ ವಿವರಗಳು ಮೇಲಿಂದ ಮೇಲೆ ಬರೆದು ಬರುತ್ತಿದ್ದವು. ಖಾನಜಹಾನ ಬಹಾದ್ದೂರ ಮತ್ತು ಬಾದಶಹನ ದರಬಾರದಲ್ಲಿಯ ದೊಡ್ಡ ದೊಡ್ಡ ಕಾರಭಾರಿಗಳು ಈ ಅವಕಾಶವನ್ನು ಉಪಯೋಗಿಸಿಕೊಂಡು ದಿಲೇರಖಾನನ ಬಗ್ಗೆ ನಾನಾ ಪ್ರಕಾರಗಳಿಂದ ಹೇಳಿ, ಆತನ ಅಪರಾಧಗಳ ಬಗ್ಗೆ ಬಾದಶಹನ ಮನದಟ್ಟು

ಮಾಡಿದರು. ಆದರಿಂದ, ಈ ಮೂರ್ಖ ಪಠಾಣನು ಅಂದರೆ ದಿಲೇರಖಾನನು ವಿಜಾಪುರವನ್ನು ಗೆಲ್ಲುತ್ತಾನೆಂಬ ಆಶೆ ಬದಲು ಬಾದಶಹನ ಇಡೀ ಪ್ರದೇಶವೆಲ್ಲ ನಾಶವಾಯಿತು ಸರಕಾರೀ ಭಂಡಾರದಲ್ಲಿ ಹಣವೆಲ್ಲವೂ ವಿನಾಕಾರಣವಾಗಿ ಖರ್ಚಾಯಿತು.

### ೪೭. *ದಿಲೇರಖಾನನು ಬಾದಶಹನ ಅಪ್ರಸನ್ನತೆಗೆ ಪಾತ್ರನಾದದ್ದು :*

ಔರಂಗಜೇಬ ಬಾದಶಹನು ಬಹಳ ಸಿಟ್ಟಿನಿಂದ 'ಈ ವರ್ತನೆಯಿಂದಾಗಿ ನಿನ್ನನ್ನು ಶಿಕ್ಷೆಗೆ ಗುರಿಮಾಡಲಾಗುವುದು' ಎಂದು ಹೇಳಿ ಬೆದರಿಕೆಯ ಆಜ್ಞಾಪತ್ರವನ್ನು ದಿಲೇರಖಾನನಿಗೆ ಬರೆದನು 'ನೀನು ನಮ್ಮ ರಾಜ್ಯದ ಪ್ರದೇಶಗಳ ವ್ಯವಸ್ಥೆಯನ್ನು ಮೊದಲು ಮಾಡಿ ಅನಂತರ ವಿಜಾಪುರವನ್ನು ತೆಗೆದುಕೊಳ್ಳುವ ಕೆಲಸದ ಮೇಲೆ ಹೋಗಿದ್ದರೆ ಅದು ನಿನಗೆ ಯೋಗ್ಯವೆನಿಸುತ್ತಿತ್ತು. ಈಗ ರಾಜ್ಯದ ಪ್ರದೇಶಗಳೂ ಹಾಳಾದುವು, ವಿಜಾಪುರವನ್ನೂ ತೆಗೆದುಕೊಳ್ಳಲಿಲ್ಲ. ಇದೆಂಥ ಮೂರ್ಖತನ ಕೆಲಸ? ಇರಲಿ, ಚಿಂತೆ ಏನಿದೆ? ಅರಬ್ಬೀ ವಾಕ್ಯದ ಅರ್ಥ ಹೇಳುವಂತೆ, "ಹಾನಿಯಾದದ್ದರ ಚಿಂತೆ ಮರಣದ ಚಿಂತೆಗಿಂತಲೂ ಅಧಿಕವಾಗಿರುತ್ತದೆ" ಈ ವಾಕ್ಯವನ್ನು ಮನದಲ್ಲಿ ತಂದು ರಾಜ್ಯದ ಸಂರಕ್ಷಣೆಯ ವಿಷಯದಲ್ಲಿ ವಿಜಾಪುರದ ಯುದ್ಧವನ್ನು ಬಿಟ್ಟು ತಕ್ಷಣ ರಾಜ್ಯದ ಸಂರಕ್ಷಣೆಯ ವ್ಯವಸ್ಥೆಯನ್ನು ಮಾಡು. ಯಾಕೆಂದರೆ ರಾಜ್ಯದ ಪ್ರದೇಶಗಳೆಲ್ಲ ಹಾಳಾಗಿವೆ. ಮತ್ತು ಸರಕಾರದ ಭಂಡಾರದಲ್ಲಿಯ ಹಣವನ್ನೆಲ್ಲ ನೀನು ವಿನಾಕಾರಣ ಖರ್ಚು ಮಾಡಿರುವಿ. ಈಗ ಇದಕ್ಕೆ ನೀನು ಉತ್ತರ ಕೊಡಬೇಕಾಗಿದೆ.

ರಾಜಕುಮಾರ ಮಹಮ್ಮದ ಆಜಮನು ಸುಭೆಗಳಲ್ಲಿಯ ದಿವಾನರಿಗೆ, ಮತ್ತು ಭಾಂಡಾರದ ಕೋಶಾಧಿಕಾರಿಗಳಿಗೆ ಆಜ್ಞೆ ಮಾಡಿ "ದಿಲೇರಖಾನನ ಹೇಳಿಕೆಯ ಮೇಲೆ ನೀವು ವರ್ತಿಸಬಾರದು, ಅವನ ಆಜ್ಞೆಗಳನ್ನು ಪಾಲಿಸಬಾರದು, ಭಾಂಡಾರದಲ್ಲಿಯ ಹಣವನ್ನು ಅವನಿಗೆ ಕೊಡಬಾರದು. ಕೊಟ್ಟರೆ ಅದನ್ನು ಸರಕಾರೀ ಖರ್ಚೆಂದು ಪರಿಗಣಿಸದೆ ನಿಮ್ಮಿಂದ ವಸೂಲು ಮಾಡಿಕೊಳ್ಳಲಾಗುವುದು" ಎಂದು ತಿಳಿಸಿದನು. ಮತ್ತು ಮಹಮ್ಮದ ಮಜೀಫನನ್ನು ಕಳಿಸಿ ದಿಲೇರಖಾನಿಗೆ ಆಜ್ಞೆ ಮಾಡಿ, "ಮಾಸೂದಖಾನನೊಂದಿಗೆ ಒಪ್ಪಂದವನ್ನು ಇತ್ತಕಡೆಯಿಂದಲೇ ಮಾಡಿಕೊಳ್ಳಲಾಗುತ್ತದೆ. ನೀನು ವಿಜಾಪುರದ ಕೆಲಸದಲ್ಲಿ ಭಾಗವಹಿಸುವ ಮತ್ತು ಮಾಸೂದಖಾನನೊಂದಿಗೆ ಒಪ್ಪಂದ ಮಾಡಿಕೊಳ್ಳುವ ಕಾರಣವಿಲ್ಲ", ಎಂಬುದಾಗಿ ಹೇಳಿ ಕಳಿಸಿದರು. ದಿಲೇರಖಾನನ ಒಟ್ಟು ಅಮೀರ ಜನರಿಗೂ ಸಕ್ತ ತಾಕೀದು ಮಾಡಿ, "ದಿಲೇರಖಾನನ ಮಾತು ಕೇಳಿ ನೀವು ವಿಜಾಪುರದ ಮೇಲೆ ದಾಳಿ ಮಾಡಬಾರದು" ಎಂದೂ ಹೇಳಿ ಕಳಿಸಿದನು.

### ೪೮. *ದಿಲೇರಖಾನನು ವಿಜಾಪುರದ ಯುದ್ಧ ಮಾಡಿಯೂ ಯಶಸ್ವಿಯಾಗದೆ, ಹೊರಟು ಹೋದದ್ದು. ಮತ್ತು ತರಫ-ತರಫಗಳಲ್ಲಿಯ ಪ್ರದೇಶಗಳನ್ನು ಹಾಳು ಮಾಡಲು ಪ್ರಯತ್ನ ಮಾಡಿದ್ದು :*

ತನ್ನ ಮೇಲೆ ದೊಡ್ಡ ಸಂಕಟ ಬಂದಿತೆಂದು ದಿಲೇರಖಾನನು ಕಂಡನು. ನಾಲ್ಕು ನಿಟ್ಟಿನಿಂದಲೂ ಸಂಕಟಗಳು ಎದ್ದು ನಿಂತಿವೆ. ಎಲ್ಲರೂ ತನ್ನನ್ನೇ ದೂಷಿಸುತ್ತಿದ್ದಾರೆ. ಮುಖದ ಮೇಲೆ ಉಗುಳುತ್ತಿದ್ದಾರೆ ಎಂಬುದನ್ನು ಗಮನಿಸಿ 'ಏನಾದರೂ ಮಾಡಿ ಮಾಸೂದಖಾನನೊಂದಿಗೆ ಒಪ್ಪಂದದ ಸಖ್ಯತನವನ್ನು ಮಾಡಿಕೊಂಡು ತಿರುಗಿ ಹೋಗಬೇಕು' ಎಂದು ಬಹಳ ಪ್ರಯತ್ನಿಸಿದನು. ಆದರೆ ಮಾಸೂದಖಾನನು

ಈ ಮಾತನ್ನೇ ಒಪ್ಪುತ್ತಿರಲಿಲ್ಲ. ದಿಲೇರಖಾನನ ಸೇವಕತನದಲ್ಲಿ ಬರಲು ಸಿದ್ದನಿರಲಿಲ್ಲ. ಆಗ ಭಯದಿಂದ ದಿಲೇರಖಾನನು ದಿನಾಂಕ ಒಂದು, ಮೊಹರಮ್ ಸನ್ ೧೧೯೧(೨೩ ಜನವರಿ ೧೬೮೦) ರಂದು ಸಯ್ಯದ ಮಖದುಮ ಷರ್ಜಾಖಾನ ಮತ್ತು ಅನಂತರ ಹುಸೇನಖಾನ ಇವರನ್ನು ಉತ್ತರ ಭಾಗದ ಪ್ರದೇಶಗಳನ್ನು ನಾಶಮಾಡಲು ಯುದ್ಧಸಾಮಗ್ರಿಗಳೊಂದಿಗೆ ಕಳಿಸಿದನು. ಮಾಸೂದಖಾನನ ವಕೀಲನೊಂದಿಗೆ ಸ್ನೇಹ ಬೆಳಸಿ. ಮಾಸೂದಖಾನನೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂದು ತನ್ನ ಶಕ್ತಿಮೀರಿ ಪ್ರಯತ್ನಿಸಿದನು. ಆದರೆ ಕೊನೆಯ ವರೆಗೂ ಮಾಸೂದಖಾನನು ಆತನ ಮಾತುಗಳನ್ನು ಗಣನೆಗೇ ತೆಗೆದುಕೊಳ್ಳುತ್ತಿಲ್ಲ ಎಂಬುದನ್ನು ಕಂಡನು. ಇತ್ತ ಔರಂಗಜೇಬ ಬಾದಶಹನ ಜನರು ಬಂದು ಮೇಲಿಂದಮೇಲೆ ಬೆದರಿಕೆ ಹಾಕಹತ್ತಿದರು. ಬಾದಶಹನ ಜನರು ತನ್ನ ಮಾತನ್ನು ಕೇಳುತ್ತಿಲ್ಲ ಎಂಬುದನ್ನು ತಿಳಿದು ನಿರುಪಾಯನಾಗಿ ಬಹಳ ಚರ್ಚೆಮಾಡಿ ಮಹಮ್ಮದ ಮಜೀಫನನ್ನು ಮಾಸೂದಖಾನನ ಹತ್ತಿರ ದಿನಾಂಕ ೬ ಮೊಹರಮ್ಮದಂದು (೨೮ ಜನವರಿ ೧೬೮೦) ವಿಜಾಪುರಕ್ಕೆ ಕಳಿಸಿ, ದಿನಾಂಕ ೭, ಮೊಹರಮ್ ದಂದು (೨೯ ಜನವರಿ ೧೬೮೦) ದಿಲೇರಖಾನನು ಖಿನ್ನತೆಯೊಂದಿಗೆ, ನಿರಾಶೆಯೊಂದಿಗೆ, ಅಪೂರ್ಣ ಮನೋರಥದೊಂದಿಗೆ ಪಶ್ಚಾತ್ತಾಪ ಪಟ್ಟು. ಬೇಗಂ ತಾಲಾಬದಿಂದ ಕಾಖಂಡಕಿಗೆ ಹೊರಟು ಹೋದನು.[೧]

ಐದು ತಿಂಗಳು ಆರು ದಿನ ಕಾಖಂಡಕಿಯಲ್ಲಿ ಬಹಳ ಚಿಂತೆ ಹಾಗೂ ಗಾಬರಿಯಲ್ಲಿದ್ದು, ಜೈನಾಪುರಕ್ಕೆ ಹೊರ್ಗಟು ಹೋದನು. ಆಗ ಜೈನಾಪುರದಲ್ಲಿಯ ದೇಸಾಯಿಯು ತನ್ನ ಜಾಗೆಯ ವ್ಯವಸ್ಥೆಯನ್ನು ಮಾಡಿಕೊಂಡು ಯುದ್ಧಕ್ಕೆ ನಿಂತನು. ಆ ದಿನ ದಿಲೇರಖಾನನ ಆನೆ ಮತ್ತು ೬೦-೭೦ ಜನರು ಗಾಯಗೊಂಡರು. ಅದೇ ದಿನ ಸಾಯಂಕಾಲ ದಿಲೇರಖಾನನು ಬಹಳ ಶಕ್ತಿಯಿಂದ ಹಲ್ಲೆ ಮಾಡಿದನು. ದೇಸಾಯಿ ಮತ್ತು ೪೦-೫೦ ಜನ ಸೈನಿಕರು ಕೊಲೆಯಾದರು. ಜೈನಾಪುರವನ್ನು ಲೂಟಿ ಮಾಡಲಾಯಿತು. ಮರುದಿನ ಮೊಹರಮದ ೧೦ ನೆಯ ದಿನ (೧ ಫೆಬ್ರವರಿ ೧೬೮೦) ದಂದು ಅದೇ ಊರಲ್ಲಿ ಮುಕ್ಕಾಮು ಮಾಡಿದನು. ದಿನಾಂಕ ೧೧ (೨ ಫೆಬ್ರವರಿ ೧೬೮೦) ರಂದು ಕೌಲಾದಿಗೆ (?) ಹೊರಟು ಹೋದನು. ನಸುಕಿನಲ್ಲಿ ಅಲ್ಲಿಂದ ಹೊರಟು ತಾಜಕಿರಿಗೆ (?) ನಡೆದನು. ದಾರಿಯಲ್ಲಿ ಗುಪ್ತಚಾರರು ಬಂದು ಮೌಜೆ ಮಸೂತಿಯಲ್ಲಿ ನಾಲ್ಕೂ ನಿಟ್ಟಿನ ಊರೂರಿನಿಂದ ಜನರು ಬಂದು ಸೇರಿದ್ದಾರೆ ಎಂದು ಸುದ್ದಿ ತಂದರು. ಅದನ್ನು ಕೇಳಿ ದಿಲೇರಖಾನನು ತನ್ನ ದಂಡಿನ ಸಾಮಾನು ಸರಂಜಾಮುಗಳನ್ನೆಲ್ಲ ತಾಜಕಿರಿಗೆ ಕಳಿಸಿದನು. ಮತ್ತು ತಾನು ಸ್ವತಃ ಮೌಜೆ ಮಸೂತಿಗೆ ಬಂದನು.

ಮಸೂತಿಯಲ್ಲಿಯ ಮೊಕಾದಮನು ತಾನು ಉಳಿಯಲು ಎರಡುಸಾವಿರ ಹೊನ್ನುಗಳನ್ನು ಕೊಡುತ್ತೇನೆಂದು, ತನ್ನ ಊರನ್ನು ಲೂಟಿ ಮಾಡಬಾರದೆಂದು ಒಪ್ಪಂದ ಮಾಡಿಕೊಂಡು, ದಿಲೇರಖಾನನಿಗೆ ಕೊಡಹತ್ತಿದನು. ಆದರೆ ದಿಲೇರಖಾನನು ಅದನ್ನು ಕೇಳಲಿಲ್ಲ. ಆ ಊರನ್ನು ಲೂಟಿ ಮಾಡಲಾಯಿತು. ಅಲ್ಲಿಯ ಮೊಕಾದಮನು ಹತ್ತಿಪ್ಪತ್ತು ಪ್ಯಾದೆಗಳೊಂದಿಗೆ ಕೆರೆಯಲ್ಲಿ ಇದ್ದು ಬಂದೂಕುಗಳ ಗುಂಡುಗಳನ್ನು ಹಾರಿಸತೊಡಗಿದನು. ಆಗ ದಂಡಿನವರು ಕೆರೆಗೆ ಓಡಿ ಹೋಗಿ ಮೊಕಾದಮನನ್ನು ಪ್ಯಾದೆಗಳ ಸಹಿತವಾಗಿ ಕೊಲೆ ಮಾಡಿದರು. ಸ್ತ್ರೀ ಪುರುಷರನ್ನೆಲ್ಲ ಸೇರಿ ಸುಮಾರು ಎರಡು ಸಾವಿರದಷ್ಟು ಜನರನ್ನು ಬಂಧಿಸಿ, ಎರಡು ಮೂರು ಸಾವಿರ ಗ್ರಾಮವಾಸಿಗಳನ್ನು ಸುಲಿಗೆ ಮಾಡಿ ತಾಜಕಿರಿಗೆ ಹೊರಟು ಹೋದನು.

---

೧. ಶಕೆ ೧೬೦೧ ಮಾಘಮಾಸ (ಜನವರಿ -ಫೆಬ್ರುವರಿ ೧೬೮೦) ಆದಿಲಶಾಹಿ ಮತ್ತು ಮೊಗಲರ ಒಪ್ಪಂದವಾಯಿತು ವಿಜಾಪುರದ ಮೇಲಿನ ಮುತ್ತಿಗೆ ಎದ್ದಿತು.- ಜೇಧೆ ಶಕಾವಲಿ ಪುಟ -೩೦.

ಎಖಲಾಸಖಾನನು ಸೈನ್ಯದ ವ್ಯವಸ್ಥೆಯ ಮೇಲಿನ ಮುಖ್ಯಸ್ಥನಾಗಿದ್ದನು. ಆತ ಆಹಾರ ಸಾಮಗ್ರಿಗಳನ್ನು ಲೂಟಿ ಮಾಡಿ ತರಲು ಕೃಷ್ಣಾ ನದಿಯ ಭಾಗದ ಊರುಗಳಲ್ಲಿ, ಮುದ್ಗಲದ ಭಾಗದಲ್ಲಿ ಬಂದಿದ್ದರು. ಅಲ್ಲಿಂದ ಎಖಲಾಸಖಾನನು ದಿಲೇರಖಾನನಿಗೆ ಸುದ್ದಿಯನ್ನು ಕಳಿಸಿದನು. "ಇಲ್ಲಿಯ ಆಸುಪಾಸಿನ ಸ್ಥಳಗಳು ಬಹಳ ಸಂಗ್ರಹಗಳನ್ನು ಹೊಂದಿವೆ. ಪ್ರಜೆಗಳು ಇನ್ನಿತರರೂ ಸೇರಿ ಯುದ್ಧಕ್ಕೆ ಸಿದ್ಧರಾಗಿದ್ದಾರೆ" ಎಂಬ ಸುದ್ದಿಯನ್ನು ಕೇಳಿ, ದಿಲೇರಖಾನನು ಎಖಲಾಸಖಾನನಿಗೆ "ಅವರ ಮೇಲೆ ಏರಿ ಹೋಗಿ ಆ ಜನರನ್ನು ನೀನು ಎದುರಿಸುತ್ತಿರುವಂತೆಯೇ ನಾನು ಬಂದು ಮುಟ್ಟುವೆ" ಎಂಬುದಾಗಿ ಹೇಳಿ ಕಳಿಸಿದನು

ನಸುಕಿನಲ್ಲಿಯೇ ತಾಜಕೀರದಿಂದ ಹೊರಟು ರಾಕಸೀ (ರಕ್ಕಸಗಿ?) ಗೆ ಬಂದು ಮುಟ್ಟಿದನು. ತನ್ನ ಸಾಮಾನು-ಸರಂಜಾಮುಗಳನ್ನು ಕಿರುಕುಳ ವಸ್ತುಗಳನ್ನು ರಾಕಸಿಯಲ್ಲೆ ಇಟ್ಟು ದಿಲೇರಖಾನನು ಸ್ವತಃ ಸೈನ್ಯವನ್ನು ತೆಗೆದುಕೊಂಡು ಗಡಿಯನ್ನು ಮುಟ್ಟಿದನು. ಆ ಗಡಿಯಲ್ಲಿಯ ಮೊಕಾದಮ ಮತ್ತು ಒಟ್ಟು ಜನರು ಅವರಿಂದ ವಚನ ತೆಗೆದುಕೊಂಡು ೬೦೦೦ ಹೊನ್ನು ಕೊಡಲು ಒಪ್ಪಿದರು. ಅವುಗಳಲ್ಲಿ ೪೦೦೦ ಹೊನ್ನುಗಳನ್ನು ನಗದಿಯಾಗಿ ಕೊಟ್ಟು ಉಳಿದದ್ದನ್ನು ಕೊಡುವುದಾಗಿ ಸಮಯ ಕೇಳಿದರು. ಆಗ ದಿಲೇರಖಾನನು ಉಳಿದ ಹಣವನ್ನು ವಸೂಲು ಮಾಡಲು ಎಖಲಾಸಖಾನನ್ನು ಅಲ್ಲಿಯೆ ಇಟ್ಟು, ತಾನು ತಿರುಗಿ ರಾಕಸಿಗೆ ಬಂದನು. ಪರಪ್ಪ ದೇಸಾಯಿ ನಾಲತವಾಡಕರನು ಈ ಮೊದಲೆ ಸಯ್ಯದ ಮಖದೂಮನಿಂದ ವಚನ ತೆಗೆದುಕೊಂಡು ಆತನ ಕಡೆಯ ಮನುಷ್ಯನನ್ನು ಊರಿಗೆ ಕರೆಯಿಸಿ ಬಹಳ ಹಣವನ್ನು ಕೊಟ್ಟಿದ್ದನು. ಆ ಪರಪ್ಪ ದೇಸಾಯಿಯು ರಾಕಸಿಗೆ ಬಂದು ದಿಲೇರಖಾನನನ್ನು ಭೆಟ್ಟಿಯಾದನು. ಆಗ ದಿಲೇರಖಾನನು ನಸುಕಿನಲ್ಲಿಯೇ ರಾಕಸಿಯಿಂದ ಎದ್ದು ಕೂಚ್ ಮಾಡಿ ನಾಲತವಾಡಕ್ಕೆ ಬಂದನು. ಅಲ್ಲಿ ಎಖಲಾಸಖಾನನ ಮಾರ್ಗ ಪ್ರತೀಕ್ಷೆಯನ್ನು ಮಾಡುತ್ತ ಒಂದು ದಿನ ಮುಕ್ಕಾಮು ಮಾಡಿದನು. ಎಖಲಾಸಿಖಾನನು ಬಂಗಾರ, ಬೆಳ್ಳಿ ಮತ್ತು ತಾಮ್ರದ ಪಾತ್ರೆಗಳನ್ನು ಕಿರಾಣಿ ಸಾಮಾನುಗಳನ್ನು ಆ ಗಡಿಯಲ್ಲಿಯ ಮೊಕಾದಮನಿಂದ ತೆಗೆದುಕೊಂಡು ಉಳಿದಿದ್ದ ಹಣಕ್ಕೆ ಒಪ್ಪಿಗೆ ಪತ್ರವನ್ನು ಪಡೆದು ನಾಲತವಾಡಕ್ಕೆ ಬಂದು ದಿಲೇರಖಾನನನ್ನು ಕೂಡಿಕೊಂಡನು.

### *೪೯. ದಿಲೇರಖಾನನು ಬೇಡರ ಇಲಾಖೆಯಲ್ಲಿ ಬಂದು ದಾಖಲಾದದ್ದು. ಅಲ್ಲಿ ಲೂಟಿ ಮಾಡುವಾಗ ಬೇಡರ ಸೈನ್ಯವನ್ನು ಎದುರಿಸಿದ್ದು :*

ದಿಲೇರಖಾನನು ನಾಲತವಾಡದಿಂದ ಹೊರಟು ಕೊರೆಂಗಳಗೆ (ಕೊಡೇಕಲ?)ಹೋದನು. ನಾಲತವಾಡದ ದೇಸಾಯಿಗೆ ದಿಲೇರಖಾನನು ನುಸರತಾಬಾದದ ದೇಶಗತಿಯನ್ನು ಮತ್ತು ದೇಶಮುಖಿಯನ್ನು ಕೊಡುವುದಾಗಿ ಕರಾರು ಮಾಡಿದ್ದನು. ಈ ಕಾರಣದಿಂದಾಗಿ ದೇಸಾಯಿಯು ಇನ್ನೂ ದಿಲೇರಖಾನನ ಜೊತೆಗೆಯೇ ಇದ್ದನು. ಆತನ ಹೇಳಿಕೆಯ ಮೇರೆಗೆ ದಂಡಿನಿಂದ ಒಂದು ಕೋಸು ಅಂತರದ ಮೇಲಿದ್ದ 'ವಾಲಾ' ಎಂಬು ಗುಡ್ಡಗಾಡು ಪ್ರದೇಶಕ್ಕೆ ಹೋಗಿ, ಹಲ್ಲೆ ಮಾಡಿ ಅದನ್ನು ತಗೆದುಕೊಂಡನು. ಅಲ್ಲಿಯ ಪೇಠದಲ್ಲಿಯ ೪೦-೫೦ ಪ್ಯಾದೆಗಳನ್ನು ಯುದ್ಧಮಾಡದೆ ಕೊಂದು ಅದನ್ನು ಕೈವಶಮಾಡಿಕೊಂಡು ಅಲ್ಲಿಯ ಸುಮಾರು ಎರಡು ಸಾವಿರ ಜನರನ್ನು ಬಂಧಿಸಿದನು. ಬಹಳ ಸಂಪತ್ತು ಹಾಗೂ ಧಾನ್ಯ-ದವಸಗಳನ್ನು ಲೂಟಿ ಮಾಡಿದರು. ಮರುದಿನ ಅಲ್ಲಿಯೇ ಮುಕ್ಕಾಮು ಮಾಡಿ ಅಲ್ಲಿಯ ಕೋಟೆಯನ್ನು ಕೆಡವಿ ಸುಟ್ಟು ತಾಳಿಕೋಟೆಗೆ ಹೊರಟನು. ಈ ಮೊದಲೇ ನಾಲತವಾಡ ದೇಸಾಯಿಯ ಮುಖಾಂತರ ಅಲ್ಲಿಯ

ಜನರಿಗೆ ಭರವಸೆಯನ್ನು ಕೊಡಲಾಗಿತ್ತು. ಅಬ್ದುಲ ಕರೀಮ ಖಾನ ದಾವೂದಜಿಯ ಮಗ ನಿಜಾಮಖಾನನಾದರೋ ೮೦ ಸಾವಿರ ಸವಾರರೊಂದಿಗೆ ಅಲ್ಲಿಯೇ ಇದ್ದನು. ಆತ ಹತ್ತು ಸವಾರರೊಂದಿಗೆ ಬೇಟೆಗೆಂದು ಹೊರಗೆ ಹೋದನು. ಆಗ ದಿಲೇರಖಾನನು ಅಲ್ಲಿಗೆ ಹೋಗಿ ಮುಟ್ಟಿದಾಗ ಆ ಊರಿನ ಮೊಕಾದಮ ಮಂಡಳಿಯು ದಿಲೇರಖಾನನ ಎದುರಿಗೆ ಹಾಜರಾದರು.

ಪಠಾಣಜನರು ಯುದ್ಧದ ಇರಾದೆಯಿಂದಲೇ ಕೋಟೆಯಲ್ಲಿ ಇದ್ದರು. ದಂಡಿನಿಂದ ಆ ಕೋಟೆಯ ಮೇಲೆ ತೋಫುಗಳ ಹಾರತೊಡಗಿದಾಗ ಆ ಪಠಾಣರಲ್ಲಿಯ ಮೂವರು ಸ್ವಾರರು ಮಾತನಾಡಲು ದಿಲೇರಖಾನನ ಹತ್ತಿರ ಬಂದರು. ಅವರ ಕುದುರೆಗಳನ್ನು ದಿಲೇರಖಾನನು ಕಸಿದುಕೊಂಡು ಅವರನ್ನು ತನ್ನ ಹತ್ತಿರವೆ ಇಟ್ಟುಕೊಂಡನು. ಆನಂತರ ಆಜ್ಞೆ ಮಾಡಿದಾಗ ದಿಲೇರ ಖಾನನ ಸೈನ್ಯವು ನಾಲ್ಕು ಬದಿಗಳಿಂದಲೂ ಕೋಟೆಯ ಮೇಲೆ ಹಲ್ಲೆ ಮಾಡಿದರು. ಅಬ್ದುಲ ಕರೀಮಖಾನ ದಾವೂದಜಿಯ ಮೊಮ್ಮಗನನ್ನು ಕೊಂದು ಎಲ್ಲ ಕುದುರೆಗಳನ್ನು ಕಸಿದುಕೊಂಡು ಊರನ್ನು ಕೊಳ್ಳೆ ಹೊಡೆದು ನಾಶ ಮಾಡಿದರು. ಸುಮಾರು ಒಂದು ಸಾವಿರ ಜನರನ್ನು ಬಂಧಿಸಿದರು. ಅಲ್ಲಿಯ ಮೊಕಾದಮನು ಒಂದೂವರೆ ಸಾವಿರ ಹೊನ್ನುಗಳನ್ನು ಕೊಟ್ಟು ಅವರಲ್ಲಿಯ ಕೆಲವರನ್ನು ಬಿಡಿಸಿಕೊಂಡನು. ಇನ್ನೂ ಬಹಳ ಜನ ಬಂಧನದಲ್ಲೆ ಬಿದ್ದರು.

ದಿಲೇರಖಾನನು ಅಲ್ಲಿ ಒಂದು ದಿನ ಮುಕ್ಕಾಮು ಮಾಡಿ ಮರುದಿನ ಕಿಂಬಾಯಿಗೆ (ಕೆಂಭಾವಿ?) ಹೋದನು. ಆ ಊರಿನ ಜನರು ಪಾಮನಾಯಕನ 'ಪಾಲಾ'ದ ಪರ್ವತದ ಕಡೆಗೆ ಹೊರಟು ಹೋಗಿದ್ದರು. ಅವರಲ್ಲಿಯ ಅನೇಕ ಜನರನ್ನು ದಾರಿಯಲ್ಲೇ ಲೂಟಿ ಮಾಡಿದರು. ದಿಲೇರಖಾನನು ಅಲ್ಲಿಯೇ ಮುಕ್ಕಾಮು ಮಾಡಿ ಒಬ್ಬ ಮನುಷ್ಯನ ಮುಖಾಂತರ ಪಾಮನಾಯಕನ ಕಡೆಗೆ ನಿರೋಪ ಕಳಿಸಿ ನೀನು ಬೇಗ ಇಲ್ಲಿ ಬಂದು ಹಾಜರಾಗಬೇಕು-ಭೆಟ್ಟಿಯಾಗಬೇಕು' ಎಂದು ತಿಳಿಸಿದನು. ಅದನ್ನು ಕೇಳಿದ ಪಾಮನಾಯಕನು ತನ್ನ ವಕೀಲ ಹಾಗೂ ಮಗ ಉಭಯತರನ್ನು ದಿಲೇರಖಾನನ ಕಡೆಗೆ ಉತ್ತರ ಹೇಳಿ ಕಳಿಸಿದನು. 'ಸಧ್ಯ ನನಗೆ ಬರುವುದಾಗುವುದಿಲ್ಲ ವಿಜಾಪುರವನ್ನು ತೆಗೆದುಕೊಂಡನಂತರ ಬಂದು ಹಾಜರಾಗುವೆನು. ಹತ್ತುಸಾವಿರ ಹೊನ್ನುಗಳನ್ನು ನಿಮಗೆ ನಜರ ಕೊಡುವೆ ಅದನ್ನು ತೆಗೆದುಕೊಂಡು ನೀವು ಇಲ್ಲಿಂದ ಬೇಗ ಹೊರಟು ಹೋಗಬೇಕು. ಅಂದರೆ ನನ್ನ ಇಲಾಖೆಯಲ್ಲಿಯ ಪ್ರದೇಶಗಳು ಕೆಡುವುದಿಲ್ಲ' ಎಂಬುದಾಗಿ ಉತ್ತರ ಹೇಳಿ ಕಳಿಸಿದನು. ಆಗ ದಿಲೇರಖಾನನು ಪಾಮನಾಯಕನ ಮಗ ಹಾಗೂ ವಕೀಲನನ್ನು ತನ್ನ ಹತ್ತಿರವೇ ಇಟ್ಟುಕೊಂಡು, ಕಲಬುರ್ಗಿಯ ದಿವಾಣ ಮಹಮ್ಮದ ಆಫಜಲನ ಮುಖಾಂತರ ಪಾಮನಾಯಕನಿಗೆ ಬೆದರಿಕೆಯ ಬಿರುಸಿನ ಪತ್ರ ಬರೆದು ಕಳಿಸಿದನು. "ಜಮೇದಾರ ಜನರ ರೀತಿಯಂತೆ ನೇಗಲು ಮತ್ತು ಕೊಡಲಿಗಳನ್ನು ಕೊರಳಲ್ಲಿ ಹೊತ್ತು ಇತ್ತ ಬಂದು ಚಾಕರಿ ಮಾಡು ಇಲ್ಲವೆ ಮೂರು ಲಕ್ಷ ಹೊನ್ನುಗಳನ್ನು ತಂದು ಹಾಜರು ಮಾಡು. ನಾನು ವಿಜಾಪುರಕ್ಕೆ ಹೋಗುವೆ ಸಾಕಷ್ಟು ಸೈನ್ಯ ಹಾಗು ಸಿಬ್ಬಂದಿಯನ್ನು ಬೇಗ ಕಳಿಸು. ನಾನು ಹೇಳಿದಂತೆ ಮಾಡದಿದ್ದರೆ ಎಚ್ಚರಿಕೆ ನಾನು ಈಗಲೇ ಬಂದು ಮುಟ್ಟುವೆ ಎಂದು ತಿಳಿ' ಎಂಬುದಾಗಿ ಹೇಳಿ ಕಳಿಸಿದನು.

ನಿರೋಪದ ಬೆನ್ನಹಿಂದೆಯೇ ಅದೇ ದಿನ ಕೆಂಭಾವಿಯಿಂದ ಹೊರಟು ದಿಲೇರಖಾನನು 'ಮಡಕಿ'ಗೆ ಹೋದನು. ಅಲ್ಲಿಯ ಎಲ್ಲ ಜನರೂ ಓಡಿ ಹೋಗಿದ್ದರು. ದಿಲೇರಖಾನನು ಊರನ್ನು ಲೂಟಿ ಮಾಡಿ

ಆ ಊರಿನಲ್ಲಿಯ ಎಲ್ಲ ಮನೆಗಳಿಗೂ ಬೆಂಕಿ ಹಚ್ಚಿ. ಆ ಊರನ್ನು ಸ್ವಚ್ಛ ಮಾಡಿದನು. ಆಗ ಪಾಮನಾಯಕನು, ಸೈನ್ಯ, ಸಿಬ್ಬಂದಿ ಹಾಗೂ ೩೦ ಸಾವಿರ ಹೊನ್ನುಗಳನ್ನು ಕೊಡಲು ಒಪ್ಪಿದನು. ದಿಲೇರಖಾನನು ಅಷ್ಟಕ್ಕೂ ಒಪ್ಪಲಿಲ್ಲ. "ಮೂರು ಲಕ್ಷ ಹೊನ್ನುಗಳನ್ನು ಕೊಡು ಇಲ್ಲವೆ ನೇಗಿಲು ಹೊತ್ತು ಇಲ್ಲಿ ಬಂದು ದಾಖಲಾಗು, ಈ ಎರಡರಲ್ಲಿಯ ಒಂದನ್ನು ಮಾಡದ ಹೊರತು ಎಂದಿಗೂ ಬಿಡುಗಡೆ ಇಲ್ಲ" ಎಂದು ಹೇಳಿ, ಮಧ್ಯ ಮುಕ್ಕಾಮು ಮಾಡದೆ ದರಸನಾಪುರಕ್ಕೆ ಹೊರಟನು (ದರ್ಶನಾಪುರ?) ಪಾಮ ನಾಯಕನ ಮಗನು ಇನ್ನೂರು ಮುನ್ನೂರು ಸ್ವಾರರು ಮತ್ತು ಐನೂರು ಸಿಬ್ಬಂದಿಯೊಂದಿಗೆ ಅಲ್ಲಿದ್ದನು. ಅವರೆಲ್ಲ ರಾತ್ರಿ ಹೊತ್ತಿನಲ್ಲಿ ಅಲ್ಲಿಂದ ಓಡಿ ಹೋದರು. ದಿಲೇರಖಾನನು ಅಲ್ಲಿಯೂ ಮಧ್ಯ ಮುಕ್ಕಾಮು ಮಾಡದೆ ಗೋಗಿಗೆ ಹೊರಟು ಹೋದನು. ಅಲ್ಲಿಯ ಎಲ್ಲ ಜನರೂ ಓಡಿ ಹೋದರು. ಗೋಗಿ ನಿರ್ಜನವಾಗಿತ್ತು. ಆದರೆ ಪೀರಜಾದೆ ಅನೇಕ ಜನರೊಂದಿಗೆ ಅಲ್ಲಿಯ ಖಣೆಯಲ್ಲಿ ಮತ್ತು ಕಸಬಾದಲ್ಲಿ ಉಳಿದಿದ್ದನು. ದಿಲೇರಖಾನನು ತನ್ನ ಕಡೆಯ ಜನರನ್ನು ಆ ಪೀರಜಾದೆಯ ಸಂರಕ್ಷಣೆಗಾಗಿ ಇಟ್ಟು ಅಲ್ಲಿ ಡೇರೆ ಹಾಕಿದನು.

ದಿನಾಂಕ ೨೯, ಮೋಹರಮದಂದು (೨೦, ಫೆಬ್ರವರಿ ೧೬೮೦) ದಿಲೇರಖಾನನು ನಗರಕ್ಕೆ ಬಂದನು. ಬಾಂಕುಡ ಚೌಕಿಯ ಕೋಟೆಯ ಮೇಲೆ ದಾಳಿ ಮಾಡುವ ತಯಾರಿಗಾಗಿ ಶಹಪುರಕ್ಕೆ ಬಂದನು. ಮತ್ತು ಕೆಲವು ಸೈನ್ಯವನ್ನು ಅಬ್ದುಲ ಗಫೂರನ ಜೊತೆಗೆ ಸಯ್ಯದ ಮಹಮ್ಮದನ ತೋಟದ ಹತ್ತಿರ ಮತ್ತು ಕೆಲವು ಸೈನ್ಯವನ್ನು ಎಖಲಾಸಖಾನನ ಜೊತೆಗೆ ಮೇಲಗಿರಿಯ ತೋಟದ ಹತ್ತಿರ ನಿಲ್ಲಿಸಿ, ತಾನು ಸ್ವತಃ ಶಾಹಪುರದ ಪಾಠವಣೆಯ ಹತ್ತಿರ ನಿಂತು ಎರಡೂ ಬದಿಗಳಿಂದ ಒಂಟೆಗಳ ಮೇಲಿನಿಂದ ಗರ್ನಾಲುಗಳನ್ನು ಬಂದೂಕಗಳನ್ನು ಎರಡು ಪ್ರಹರಗಳಿಂದ ಸಾಯಂಕಾಲದ ವರೆಗೂ ಹಾರಿಸುತ್ತಿದ್ದನು. ಸಾಯಂಕಾಲ ಕಳೆದ ನಂತರ ಪಾಮನಾಯಕನ ಕಡೆಯಿಂದ ಸಿಪಾಯಿ ಜನರು ಅಬ್ದುಲ ಗಫೂರನ ಮೇಲೆ ಹಲ್ಲೆ ಮಾಡಿದರು. ಆ ಹಲ್ಲೆ ಗದ್ದಲದಲ್ಲಿ ಪೀರಜಾದೆಗಳ ಸಂರಕ್ಷಣೆಗಾಗಿ ಬಾರ್ ಮಾಡಿ ಇಟ್ಟ ಬಂದೂಕುಗಳನ್ನು ತೆಗೆದುಕೊಂಡು ಓಡಿ ಹೋದರು. ಅಬ್ದುಲ ಗಫೂರನು ಅಲ್ಲಿಂದ ಹೊರಟು ಕೆರೆಯ ಹತ್ತಿರ ಬಂದು ಆಶ್ರಯ ಪಡೆದನು. ಆತನ ಅನೇಕ ಜನರು ಪ್ರಾಣಗಳು ಗಾಯಗೊಂಡವು.

ದಿಲೇರಖಾನನು ಸಾಯಂಕಾಲದ ವೇಳೆಗೆ ಅಲ್ಲಿಂದ ಹೊರಟು ತಿರುಗಿ ಗೋಗಿಗೆ ಬಂದನು. ಪಾಮನಾಯಕನ ವಕೀಲನಿಗೆ ಬಹಳ ಬೆದರಿಕೆ ಹಾಕಿ, ಭಯ ಹುಟ್ಟಿಸಿ ತಿರುಗಿ ಹೋಗಲು ನಿರೋಪ ಕೊಟ್ಟನು. ಮತ್ತು ಆ ದಿನ ಮೋಹರಮ್ ತಿಂಗಳ ೩೦ನೆಯ ದಿನವಾಗಿತ್ತು. (೨೧ ಫೆಬ್ರವರಿ ೧೬೮೦) ಅಂದು ಪ್ರಾತಃ ಕಾಲದಲ್ಲಿ ತನ್ನೆಲ್ಲ ಸೈನ್ಯ ಹಾಗೂ ತೋಫಖಾನೆಯೊಂದಿಗೆ ಸಿದ್ಧನಾಗಿ ಶಾಹಪುರಕ್ಕೆ ಬಂದು ಮುಟ್ಟಿದನು. ಶಾಹಪುರ ದರವಾಜಾವನ್ನು ತೋಫಿನಿಂದ ಹಾರಿಸಿ. ಶಾಹಪುರದ ಒಳಗೆ ಬಂದನು. ಆನೆಯ ಮೇಲೆ ಕುಳಿತು ದ್ವಾರದಲ್ಲಿ ನಿಂತನು. ದಿಲೇರಖಾನನ ಕಡೆಯ ಪತ್ರಿಯೊಬ್ಬರೂ ಪ್ರತಿಯೊಂದು ಬದಿಯಿಂದ ಶಾಹಪುರದಲ್ಲಿ ಮತ್ತು ಪೇಟೆಯಲ್ಲಿ ಬಂದು ಲೂಟಿ ಮಾಡ ಹತ್ತಿದರು. ದಿಲೇರಖಾನನ ಮಗ ಫತೇಮಾಮೂರನು ಶಾಹಪುರ ನಗರದ ಹತ್ತಿರ ನಿಂತಿದ್ದನು. ಮತ್ತು ಎಖಲಾಸಖಾನನು ಪೇಟೆಯಲ್ಲಿ ಬಂದು ನಿಂತನು. ಲೂಟಿ ಮಾಡುವ ಜನರ ಗುಂಪು ರೆಪ್ಪೆ ಬಡಿಯುವಷ್ಟರಲ್ಲಿ ನಗರವನ್ನೆಲ್ಲ ಲೂಟಿ ಮಾಡಿ ಸ್ವಚ್ಛ ಮಾಡಿಬಿಟ್ಟಿತು. ಆಗ ಪಾಮನಾಯಕನ ಕಡೆಯ ಸಿಪಾಯಿ ಜನರು ಕೋಟೆಯ ಮೇಲಿನಿಂದ ಮತ್ತು ಗುಡ್ಡದ ದಿನ್ನೆಯ ಮೇಲಿನಿಂದ ತೋಫುಗಳನ್ನು ಬಂದೂಕುಗಳನ್ನು, ಗರ್ನಾಲುಗಳನ್ನು ಅಲ್ಲದೆ ಪಿಸ್ತೂಲುಗಳನ್ನು ಹಾರಿಸ ಹತ್ತಿದರು. ಸೈನ್ಯದಲ್ಲಿಯ ಬಹಳಷ್ಟು ಜನರು ಸತ್ತರು ಮತ್ತು ಗಾಯಗೊಂಡರು.

ಪಾಮನಾಯಕನು ತಾನು ಸ್ವತಃ ನುಸರತಾಬಾದಿನ ಕೋಟೆಯ ಮೇಲಿದ್ದನು. ಆಗ ದಿಲೇರಖಾನನ ಕಡೆಯ ಹನ್ನೊಂದು ಜನ ವಕೀಲರು ಚರ್ಚೆ-ಮಧ್ಯಸ್ಥಿಕೆಗಾಗಿ ಬಂದಿದ್ದರು. ಆ ಹನ್ನೊಂದು ಜನರಲ್ಲಿ ಇಬ್ಬರನ್ನು ಸೆರೆಮನೆಯಲ್ಲಿಟ್ಟು ಉಳಿದ ಒಂಭತ್ತು ಜನರನ್ನು ಶೂಲಕ್ಕೇರಿಸಿ ಪಾಮನಾಯಕನು ನುಸರತಾಬಾದ ಕೋಟೆಯನ್ನು ಕಿಲ್ಲೇದಾರನ ವಶಕ್ಕೆ ಕೊಟ್ಟು ತಾನು ಹೊರಗೆ ಬಂದುಬಿಡಬೇಕೆಂದು ಮನಸ್ಸು ಮಾಡಿದನು. ಆದರೆ ಆತನ ಕಲ್ಯಾಣವನ್ನು ಬಯಸುವ ಜನರಲ್ಲಿಯ ಒಬ್ಬನು ಈ ಕಾರ್ಯವನ್ನು ಒಪ್ಪದೆ, ಕೋಟೆಯ ಹೊರಗೆ ಹೋಗಲು ಪಾಮನಾಯಕನಿಗೆ ಅಡ್ಡಿ ಮಾಡಿದನು. 'ಸಾಯಂಕಾಲದ ವರೆಗೆ ಸಹನ ಮಾಡಿಕೊಂಡು ಜಾಗೆಯಿಂದ, ಅಲುಗಾಡಬೇಡ, ಸಾಯಂಕಾಲವಾದನಂತರ ನಿನ್ನ ಮನ ಬಂದಂತೆ ಮಾಡು' ಎಂದನು.

### ೫೦. *ಬೇಡರಲ್ಲಿಯ ಕಜಾಕ ಜನರಕೈಯಲ್ಲಿ ದಿಲೇರಖಾನನು ಹೊಡೆತ ತಿಂದು ಪಶ್ಚಾತ್ತಾಪಪಟ್ಟು ಗಾಯಗೊಂಡದ್ದು :*

ದಿಲೇರಖಾನನು, ಶಾಹಾಪುರಕ್ಕೆ ಬಂದು ಐದನೆಯ ತಾಸಿನಿಂದ ಏಳನೆಯ ತಾಸಿನವರೆಗೆ, ಯುದ್ಧ ಮಾಡಿ ಶಾಹಪುರದಿಂದ ಹೊರಗೆ ಬಂದನು. ಆತನ ಮಗ ಫತೇಮಾಮೂರನು ತಂದೆಯ ಮುಂದೆಯೇ ಹೊರಟು ಹೋಗಿದ್ದನು. ಆತನಿಗೆ ತನ್ನ ತಂದೆ ದಿಲೇರಖಾನನು ತಿರುಗಿ ಬಂದಿದ್ದಾನೆಂಬ ಸುದ್ದಿ ಕೇಳಿ ಫತೇಮಾಮೂರನೂ ಹಿಂತಿರುಗಿದನು. ಪಾಮನಾಯಕನ ಕಡೆಯ ಸಿಬ್ಬಂದಿ ಜನರು ಗುಡ್ಡದ ಓರೆಯಲ್ಲಿ ಕದ್ದು ಕುಳಿತಿದ್ದರು. ಅವರು ನಾಲ್ಕು ನಿಟ್ಟುಗಳಿಂದಲೂ ಎದ್ದು ಹೊರಗೆ ಬಂದು ಒಮ್ಮೆಲೆ ದಿಲೇರಖಾನನ ಮಗನ ಮೇಲೆ ಏರಿ ಬಂದರು. ಫತೇಮಾಮೂರನ ಮೇಲೆ ದೊಡ್ಡ ಹಲ್ಲೆ ಮಾಡಿ ಅವನನ್ನು ಸಂಕಟದಲ್ಲಿ ಕೆಡವಿದರು. ಆತ ತುಂಬ ಸಂಕಟದಿಂದ ತನ್ನ ಜೀವ ಉಳಿಸಿಕೊಂಡು ಹೊರಬಂದು ತನ್ನ ತಂದೆಯನ್ನು ಕೂಡಿಕೊಂಡನು. ನಾಲ್ಕು ಕಡೆಗಳಲ್ಲೂ ಸಿಪಾಯಿ ಜನರು ಲೂಟಿ ಮಾಡುವಲ್ಲಿ ನಿರತರಾಗಿದ್ದರು. ಅವರಲ್ಲಿ ಸುಮಾರು ಇನ್ನೂರು ಜನ ಪಾಮನಾಯಕನ ಕಡೆಯ ಪ್ಯಾದೆಗಳ ಕೈಯಲ್ಲಿ ಸತ್ತಿದ್ದರು. ಮತ್ತು ಬಹಳಷ್ಟು ಜನರು ಗಾಯಗೊಂಡರು. ದಿಲೇರಖಾನನು ಗೋಗಿ ಮತ್ತು ಸೈಖಾಪುರ (ಸೈದಾಪುರ?)ದ ಮಧ್ಯದ ಮೈದಾನದಲ್ಲಿ ಗಾಯಗೊಂಡ ಸೈನ್ಯದ ಬರುವಿಗಾಗಿ ಮಾರ್ಗಪ್ರತೀಕ್ಷೆಯಲ್ಲಿದ್ದನು. ಆಗ ಬೇಡರ ಹೊಡೆದಾಟದ ಜನರು ಓಡಿ ಹೋಗುತ್ತಿರುವ ದಿಲೇರಖಾನನ ಸೈನ್ಯವನ್ನು ಬೆನ್ನು ಹತ್ತಿ ಅವರ ಪ್ರಾಣಗಳಿಗೆ ಸಂಚಕಾರ ತಂದರು. ಮೊಗಲ ಸೈನ್ಯದಲ್ಲಿಯ ಜನ ಓಡಿರಿ-ಓಡಿರಿ. ಜೀವ ಉಳಿಸಿಕೊಳ್ಳಿ ಎಂಬುದರ ಹೊರತಾಗಿ ಬೇರೇನೂ ಕೂಗುತ್ತಿರಲಿಲ್ಲ. ಆ ಹೊಡೆದಾಟದಲ್ಲಿ ಬದುಕಿ ಉಳಿದ ಜನರು ದಿಲೇರಖಾನನ ಹತ್ತಿರ ಬಂದು ಸೇರಿದರು. ಅನಂತರ ಸತ್ತವರ ಲೆಕ್ಕ ಮಾಡಿದಾಗ ಸುಮಾರು ಒಂದು ಸಾವಿರ ಏಳುನೂರು ಜನ ಸತ್ತಿದ್ದರು. ಕೆಲವರು ಗಾಯಗೊಂಡಿದ್ದರು. ದಿಲೇರಖಾನನು ಅಲ್ಲಿಂದ ಪೂರ್ಣ ಖಿನ್ನನಾಗಿ, ಚಿಂತಾಗ್ರಸ್ತನಾಗಿ ಲಜ್ಜಿತನಾಗಿ ಗೋಗಿಗೆ ಬಂದನು. ಪಶ್ಚಾತ್ತಾಪದಿಂದ ಅಳಹತ್ತಿದನು.

### ೫೧. *ದಿಲೇರಖಾನನು ಮತ್ತೆ ಆಶೆಮಾಡಿ ಬೇಡ ಜನರೊಂದಿಗೆ ಸೇಡು ತೀರಿಸಿಕೊಳ್ಳಲು ತನ್ನ ಸರದಾರರಿಗೆ ಪ್ರಾರ್ಥಿಸಿದ್ದುದು :*

ದಿಲೇರಖಾನನು ತನ್ನ ಕಡೆಯ ಸೈನ್ಯದಲ್ಲಿಯ ಬಕ್ಷಿಯನ್ನು ಕರೆದು "ಒಂದು ವೇಳೆ ನಮ್ಮ ಭಾಂಡಾರದಲ್ಲಿ ಹಣ ಇರದಿದ್ದರೆ, ಸೈನ್ಯದ ಖರ್ಚಿಗಾಗಿ ನಾನು ನನ್ನ ಕಡೆಯ ಸ್ವಂತದ ಮೂವತ್ತು ಸಾವಿರ

ಹೊನ್ನುಗಳನ್ನು ಕೊಡುವೆ. ಮೂರು ದಿನ ಇಲ್ಲಿ ಇರುವೆ ಅಂದರೆ ಬೇಡರ ಜನರನ್ನು ಶಿಕ್ಷಿಸೋಣ. ಅವರ ವರ್ತನೆಯ ಸೇಡು ತೀರಿಸಿಕೊಳ್ಳೋಣ. ಅವರಿಗೆ ದೊರೆಯಬೇಕಾದ ಶಿಕ್ಷೆಯನ್ನು ಕೋಡೋಣ" ಎಂದು ಹೇಳಿದನು. ಔರಂಗಜೇಬ ಬಾದಶಹನ ಕಡೆಯ ಸರದಾರ ಜನರು ಮತ್ತು ರಾಜಕುಮಾರ ಮುಆಜಮನು ಮೇಲಿಂದ ಮೇಲೆ ಜೈನಾಪುರಕ್ಕೆ ಬಂದು ದಿಲೇರಖಾನನಿಗೆ "ಬಾದಶಹನ ಆಜ್ಞೆಯಂತೆ ನಿಮ್ಮ ಸುಭೆಯಲ್ಲಿ ಗದ್ದಲವಾಗಿದೆ. ಅದರಿಂದ ಅಲ್ಲಿಂದ ಬೇಗ ಹೊರಟುಬಂದು ಶತ್ರುಗಳನ್ನು ಎದುರಿಸುವ ವಿಚಾರ ಮಾಡು ಮತ್ತು ರಾಜ್ಯದ ರಕ್ಷಣೆ ಮಾಡು" ಎಂದು ಹೇಳಿದ್ದರು. ಆದರೆ ಬಾದಶಹನ ಆಜ್ಞೆಯಂತೆ ದಿಲೇರಖಾನನು ಮಾಡಲಿಲ್ಲ ಆಗ ಬಾದಶಹನ ಕಡೆಯ ವಕೀಲ ಜನರು ದಿಲೇರಖಾನನ ಮೇಲೆ ಬಹಳ ಸಿಟ್ಟಿಗೆದ್ದು ಬಹಳ ಕೆಟ್ಟ ಮಾತುಗಳನ್ನಾಡಿ ಅವನ ಡೇರೆಯ ಹಗ್ಗಗಳನ್ನು ಕಡಿದು, ಅಡುಗೆಯ ಮನೆಯಲ್ಲಿ ಮತ್ತು ಬೇರೆ ಸ್ಥಳಗಳಲ್ಲಿ ಹೊಕ್ಕು. ಗುಂಡಾಗರ್ದಿಯನ್ನು ಮಾಡುತ್ತಿದ್ದರು. ಪ್ರತಿನಿತ್ಯ ಹೊರಡುವಾಗ ಅವನನ್ನು ಅಪಮಾನಗೊಳಿಸುತ್ತಿದ್ದರು. ಅವನಿಗೆ ಆರಾಮಾಗಿ, ಸ್ವಸ್ಥನಾಗಿ ಉಸಿರಾಡಲು ಕೂಡ ಕೊಡುತ್ತಿರಲಿಲ್ಲ. ದಿಲೇರಖಾನನು ಶಾಹಪುರಕ್ಕೆ ಬಂದಾಗ ಬಾದಶಹನ ಕಡೆಯ ಜನರು ದಿಲೇರಖಾನನ ಮೇಲೆ ಬಹಳ ಬಲಾತ್ಕಾರ ಮಾಡಿ ಅಯೋಗ್ಯತನದಿಂದ ವರ್ತಿಸಿದರು.

*೫೨. ದಿಲೇರಖಾನನ ಸೈನ್ಯದಲ್ಲಿಯ ಬಕ್ಷಿ ಮತ್ತು ಸರದಾರ ಜನರು ದಿಲೇರಖಾನನ ಮಾತುಗಳನ್ನು ಕೇಳದಿದ್ದುದು :*

"ದಿಲೇರಖಾನನು ಬೇಡರ ಜನರ ಸೇಡು ತೀರಿಸಿಕೊಳ್ಳುವುದಕ್ಕಾಗಿ ಮತ್ತು ಅವರನ್ನು ಶಿಕ್ಷಿಸುವುದಕ್ಕಾಗಿ ಇಲ್ಲಿಯೇ ಇರು" ಎಂದು ತನ್ನ ಸೈನ್ಯದಲ್ಲಿಯ ಬಕ್ಷಿಗೆ ಬಹಳ ಆರ್ಜವದಿಂದ ಹೇಳಿದನು. ಆಗ ಬಕ್ಷಿ ಮತ್ತು ಬೇರೆ ಅನೇಕ ಮುತ್ಸದ್ದಿ ಜನರೆಲ್ಲ ಅವನ ಮಾತಿನಂತೆ ನಡೆಯವುದಿಲ್ಲವೆಂದು ಹೇಳಿದರು. ಮತ್ತು ನೀವು ಇಲ್ಲಿಯೇ ನಿಂತರೂ ನಾವು ನಿಮ್ಮ ಜೊತೆಗೆ ಇರುವುದಿಲ್ಲ. ಒಂದು ವೇಳೆ ನೀವು ಸ್ವತಃ ಸೈನ್ಯ ಸಹಿತವಾಗಿ ಇಲ್ಲಿ ಇದ್ದರೆ ನೀವೇ ಮುಖ್ತಾರರಾಗಿದ್ದೀರಿ ಬೇಕಾದ ಹಾಗೆ ಮಾಡಿರಿ' ಎಂಬುದಾಗಿ ಹೇಳಿದರು. ಎಲ್ಲರೂ ತಮ್ಮತಮ್ಮಲ್ಲಿ ನಿರ್ಧರಿಸಿಕೊಂಡು "ಇಲ್ಲಿಂದ ಹೊರಟು ಹೋಗೋಣ" ಎಂದರು. ಸೈನ್ಯದಲ್ಲಿಯ ಎಲ್ಲ ಜನರು "ದಿಲೇರಖಾನನನ್ನು ಕೆಲಸದಿಂದ ತೆಗೆದು ಹಾಕಿದ್ದಾರೆ ಎಂದು ತಿಳಿದು, ಅವನಿಗೆ ದಿಕ್ಕಾರ ಹಾಕಿ, ದುಷ್ಟ ಮಾತುಗಳನ್ನಾಡಿ ಸೈನ್ಯಕ್ಕೆ ಹೀಗೆ ಭೋದನೆ ಮಾಡಿತೊಡಗಿದರು. "ಆದಿಲಶಹನ ರಾಜ್ಯ -ರಾಜಧಾನಿಯನ್ನಂತೂ ಹಾಳು ಮಾಡಿದನು. ಹೊಡಿ-ಬಡಿ ಮಾಡಿದನು. ಮೊಗಲ ಬಾದಶಹರ ಕಡೆಯ ಶಿಪಾಯಿ ಜನರ ಮೇಲೆ, ಶಿಕ್ಷೆನೀಡುವ ಬಕ್ಷಿಗಳ ಮೇಲೆ, ಬೇರೆ ಅನೇಕ ಸರದಾರ ಜನರ ಮೇಲೆ ಮತ್ತು ಕೆಲಸಗಾರರ ಮೇಲೆ ಗದ್ದಲ ಮಾಡುತ್ತಿದ್ದನು. ಬಹಳ ಬಲಾತ್ಕಾರ ಮಾಡುತ್ತಿದ್ದನು. ನೀವು ಈ ದಿಲೇರಖಾನನ ಮಾತುಗಳನ್ನು ಕೇಳಬೇಡಿ. ಅವನೊಂದಿಗೆ ಸ್ನೇಹದಿಂದ ಇರಬೇಡಿರಿ" ಈ ಮಾತುಗಳನ್ನು ಕೇಳಿ ದಿಲೇರಖಾನ ಭಯಭೀತನಾಗಿ ಹುಚ್ಚನಂತಾಗಿ, ಬಹಳ ಗಾಬರಿಯಾಗಿ ಮನದಲ್ಲಿಯೇ ಚಡಪಡಿಸುತ್ತಿದ್ದನು. ಈ ಬಗ್ಗೆ ಏನೊಂದು ಉಪಾಯವನ್ನು ಕಾಣದಂತಾಗಿದ್ದನು.

ಬಾದಶಹನ ಕಡೆಯ ಸಿಪಾಯಿ ಜನಗಳ ಜಗ್ಗಾಟದಿಂದ ಮತ್ತು ಬಲಾತ್ಕಾರ ದಿಂದ ಬೇಸತ್ತು ದಿಲೇರಖಾನನು ನಸುಕಿನಲ್ಲಿ ಗೋಗಿಯಿಂದ ದರ್ಶನಾಪುರಕ್ಕೆ ಹೋದನು. ಅಲ್ಲಿಂದ ಮಡಕಿಗೆ ಹೋದನು. ದಿಲೇರಖಾನನು ದಾರಿಯಲ್ಲಿ ಹೋಗ ಹೋಗುತ್ತ ಎರಡೂ ಬದಿಗಳಲ್ಲಿಯ ಊರು ಕಸಬಾ, ಅವುಗಳನ್ನೆಲ್ಲಾ

ಲೂಟಿ ಮಾಡುತ್ತ, ಬೆಂಕಿ ಹಚ್ಚಿ, ಸುಟ್ಟು ಹಾಕಿ ನಾಶಮಾಡಿ ಹೋಗುತ್ತಿದ್ದನು. ಮಡಕಿಯಿಂದ ಆಲಮೇಲದ ದೇಸಾಯರ ಕೋಟೆಯ ಹತ್ತಿರ ಹೋಗಿ ಮುಟ್ಟಿದನು. ಆಗ ಆ ಕೋಟೆಯ ಮೇಲೆ ಅನೇಕ ತೋಫುಗಳ ಸರಬತ್ತಿಯನ್ನು ಮಾಡಿ ಕೋಟೆಯಲ್ಲಿ ಇರುವ ಜನರ ಕೈಕಾಲುಗಳನ್ನು ಹಾರಿಸಿದನು. ಬಹಳ ಜನರನ್ನು ಕೈದು ಮಾಡಿದನು. ಆಲಮೇಲ ಗ್ರಾಮವು ಷರ್ಜಾಖಾನನ ಜಹಗೀರಾಗಿತ್ತು ಅಲ್ಲಿಯ ದೇಸಾಯಿಯು ಬಂದು ದಿಲೇರಖಾನನನ್ನು ಭೆಟ್ಟಿಯಾಗಿ ಎಂಟು ಸಾವಿರ ಹೊನ್ನುಗಳನ್ನು ಕೊಡಲು ಒಪ್ಪಿದನು. ಆ ಎಂಟು ಸಾವಿರ ಹೊನ್ನುಗಳಲ್ಲಿ ಎರಡು ಸಾವಿರ ಹೊನ್ನುಗಳನ್ನು ರೋಖ ಕೊಟ್ಟು ಬಂಧಿತ ಜನರನ್ನೆಲ್ಲ ಬಿಡಿಸಿಕೊಂಡನು. ದಿಲೇರಖಾನನು ಒಂದು ದಿನ ಅಲ್ಲಿ ಮುಕ್ಕಾಮು ಮಾಡಿ ಸಂದಗಿಗೆ (ಸಿಂದಗಿ) ಬಂದನು. ಮತ್ತು ಆ ಊರನ್ನು ಸುಟ್ಟು ಧೂಳಿ ಮಾಡಿ ಮುಸಳಿ (ಮಸಳಿ) ಗೆ ಬಂದನು. ಒಂದು ದಿನ ಅಲ್ಲಿದ್ದು ಅದನ್ನೂ ಸುಟ್ಟು ನಾಶ ಮಾಡಿದನು. ಈ ಮೊದಲು ದಿಲೇರಖಾನನು ತಾನು ಬರುವಾಗ ಕಟ್ಟಿದ ಕೋಟೆ ಕೊತ್ತಲಗಳನ್ನೆಲ್ಲ ಕೆಡವಿ ನೆಲಸಮಮಾಡಿದನು. ಬಮ್ಮನಹಳ್ಳಿಯಲ್ಲಿದ್ದ ಸಾಮಾನು ಸರಂಜಾಮುಗಳನ್ನು ತರಲು ಹಿಮ್ಮತಖಾನ ಮತ್ತು ಇಖಲಾಸಖಾನರನ್ನು ಕಳಿಸಿದನು.

ಅದೇ ದಿನಗಳಲ್ಲಿ ಬೇಡರ ಜನಾಂಗವು ಮೊಗಲರೊಂದಿಗೆ ಪರಾಕ್ರಮ ನಡೆಸಿತು. ಇದರಿಂದ ಸಿಕಂದರ ಬಾದಶಹನು ಬಹಳ ಸಂತೋಷ ಪಟ್ಟು ಪಾಮನಾಯಕನಿಗೆ, ಹಸಿರುಬಣ್ಣದ ಅಪಥಾಬಗಿರಿ ಮತ್ತು ಹಸಿರು ನಿಶಾನೆ ಮತ್ತು ಮಾಹಿಮರಾತಬ ಬಕ್ಷೀಸನ್ನು ಕೊಟ್ಟನು. ಹಾಗೆಯೇ ಔರಂಗಜೇಬ ಬಾದಶಹನು ಬೇಡರ ಕೈಯಲ್ಲಿ ದಿಲೇರಖಾನನು ಸೋತಿದ್ದಾನೆಂದು ಕೇಳಿದಾಗ ಆತನ ಮುಖದಿಂದ 'ನೂರು ಶಾಭಾಸಕಿಗಳು ಬೇಡರಿಗೆ ಸಾವಿರ ಧಿಕ್ಕಾರ ನಮ್ಮ ಸೈನಿಕರಿಗೆ ಮುಕ್ತಾಫಲಗಳು ಉದುರಿದುವಂತೆ !. ಮತ್ತು ಔರಂಗಜೇಬ ಬಾದಶಹನು ದಿಲೇರಖಾನನ ಮೇಲೆ ಅತ್ಯಂತ ಸಿಟ್ಟಾಗಿ 'ನಿನ್ನನ್ನು ಶಿಕ್ಷಿಸಲಾಗುವುದು' ಎಂದಿತ್ಯಾದಿಯಾಗಿ ಬೆದರಿಕೆಯ ಆಜ್ಞಾಪತ್ರಗಳನ್ನು ಮೇಲಿಂದ ಮೇಲೆ ಕಳಿಸುತ್ತಿದ್ದನು. ಆ ಆಜ್ಞಾಪತ್ರಗಳ ಆಘಾತದಿಂದ ದಿಲೇರಖಾನನ ಆರೋಗ್ಯ ಕೆಟ್ಟಿತು. ಆಜ್ಞಾಪತ್ರಗಳಲ್ಲಿ ಬರೆದಂತೆ ವಿಜಾಪುರದ ಮೇಲೆ ಇಷ್ಟೆಲ್ಲ ಖರ್ಚು ವೆಚ್ಚ ಮಾಡಿದ ಮೇಲೂ ಆತನ ಮನೋರಥ ಈಡೇರಲಿಲ್ಲ. ಪೂರ್ಣವಾಗಲಿಲ್ಲ. ಎರಡನೆಯದಾಗಿ ರಾಜ್ಯ ತುಂಬ ಹಾಳಾಯಿತು. ಸರಕಾರಿ ಭಂಡಾರ ವ್ಯರ್ಥ ಖರ್ಚಾಗಿ ಹೋಯಿತು. ಇದರ ಬಗ್ಗೆ ಪ್ರಶ್ನಿಸಿ ಆತನಿಗೆ ಉತ್ತರ ಹೇಳಲು ಕೇಳುತ್ತಾರೆಂಬ ಭಯ, ಮೂರನೆಯದಾಗಿ ಎಲ್ಲರೂ ಈ ಕೆಲಸಕ್ಕಾಗಿ ಮುಖದ ಮೇಲೆ ಉಗುಳುತ್ತಾರೆ, ವ್ಯಂಗ್ಯ ಮಾತನಾಡತೊಡಗುತ್ತಾರೆ ಎಂಬೆಲ್ಲ ಆಘಾತಗಳಿಂದ ದಿಲೇರಖಾನನ ಆರೋಗ್ಯ ಕೆಟ್ಟಿತು. ಬೇನೆ ಬಿದ್ದನು. ಆಯುಷ್ಯವೂ ತುಂಬಿತ್ತು, ಹೀಗಾಗಿ ದಿಲೇರಖಾನನು ಔರಂಗಾಬಾದಿನಲ್ಲಿ ಸತ್ತನು.[೧]

### ೫೩. ಶಿವಾಜಿಯ ಒಂದಿಷ್ಟು ವಿವರಗಳು :

ಶಾಹಜಿಯ ಮಗ ಶಿವಾಜಿಯು ಆ ಸಮಯದಲ್ಲಿಯ ಬಹು ದೊಡ್ಡ ಕುತಂತ್ರಿ ಮತ್ತು ನಾನಾ ಪ್ರಕಾರದ ಸಂಕಟಗಳನ್ನು ಎಬ್ಬಿಸುವ ಬಹಳ ಚಮತ್ಕಾರಿಕ ಮನುಷ್ಯನಾಗಿದ್ದನು. ಎಲ್ಲ ನಗರಗಳಲ್ಲಿ ಗದ್ದಲ ಮತ್ತ ಉಪದ್ರವ ಕೊಡುವ ಮನುಷ್ಯನಿಗೆ ಶಿವಾಜಿ ಎಂದು ಹೆಸರಿಟ್ಟರೂ ಅದು ಶೋಭಿಸುತ್ತದೆ.

---

೧. ಶಕೆ ೧೬೦೫ ಆಶ್ವೀನ ಮಾಸ......... ಅದೇ ತಿಂಗಳು (ಸಪ್ಟಂಬರ -ಆಕ್ಟೋಬರ ೧೬೮೩) ರಲ್ಲಿ ದಿಲೇರಖಾನನು ವಿಷ ತೆಗೆದುಕೊಂಡು ದೇಹ ಬಿಟ್ಟನು. ಜೇಧೆ ಶಕಾ ಪುಟ ೩೨.

ಶಿವಾಜಿಯ ಉತ್ಪತ್ತಿಯೇ ಅದ್ವಿತೀಯವಾಗಿತ್ತು. ಅಂದರೆ ಅಂಥ ಯಾವ ದುರ್ವರ್ತನೆಯ ಮನುಷ್ಯ ಎಂದೂ ಹುಟ್ಟಲಿಲ್ಲ. ಅಂಥ ಶಿವಾ ಹುಟ್ಟಿ ಬಂದಿದ್ದಾನೆ ಎಂದರೂ ಯೋಗ್ಯವೆನಿಸುತ್ತದೆ. ಶಿವಾಜಿಯಲ್ಲಿ ಚಮತ್ಕಾರಿಕವಾದಂಥ ಬಹಳ ಲಕ್ಷಣಗಳಿದ್ದವು. ಶೂರತ್ವ, ಪರಾಕ್ರಮ, ಮತ್ತು 'ಜಂಗೆ ಗುರ್ಜ' ಯಂಥ ಯುದ್ಧಮಾಡುವ ವಿದ್ಯೆಗಳು ಅದ್ಭುತವಾಗಿದ್ದುವು. ಜೊತೆಗೆ ನಾನಾ ಪ್ರಕಾರದ ಠಕ್ಕ ವಿದ್ಯೆ, ಮತ್ಸರ ಮತ್ತು ನಾಟಕಗಳೂ ಶಿವಾಜಿಯಲ್ಲಿ ತುಂಬಿದ್ದವು. ಹಾದಿಗಳ್ಳತನದಲ್ಲಂತೂ ಅವನ ಸರಿಸಮಾನರಾರೂ ಇರಲಿಲ್ಲ ಅಂಥ ನಿರುಪಮ ವ್ಯಕ್ತಿಯಾಗಿದ್ದನು.

ಖೊಟ್ಟಿತನ ಮತ್ತು ಠಕ್ಕ ವಿದ್ಯೆಯ ಗುಣಗಳಂತೂ ಶಿವಾಜಿಯಲ್ಲಿ ಅತಿ ಶ್ರೇಷ್ಠವಾಗಿದ್ದುವು. ಶಿವಾಜಿಯು ತನ್ನ ತಂದೆ ಶಾಹಜಿಯು ಜೀವಂತವಿರುವಾಗಲೇ ಈ ಠಕ್ಕ ವಿದ್ಯೆಯಲ್ಲಿ ಮತ್ತು ಒಳಸಂಚು ಇತ್ಯಾದಿ ಸಂಕಟಗಳನ್ನು ಎಬ್ಬಿಸುವ ಕೆಲಸದಲ್ಲಿ ವಿಶ್ವದಲ್ಲಿಯ ಒಳಸಂಚುಗಾರರ ಬಹುದೊಡ್ಡ ಸರದಾರನೇ ಆಗಿದ್ದನು. ಶಿವಾಜಿಯ ಕೆಲಸಗಳೆಂದರೆ ದೊಡ್ಡ ದೊಡ್ಡ ರಾಜ್ಯಗಳನ್ನು ಮುಳುಗಿಸುವುದು. ಅವನು ದೊಡ್ಡ ದೊಡ್ಡ ಸ್ಥಳಗಳನ್ನು, ಮನೆಗಳನ್ನು ಸಮೂಲವಾಗಿ ಕೆಡವಿಬಿಡುತ್ತಿದ್ದನು. ದಿಲ್ಲಿಯ ತೈಮೂರ ಬಾದಶಹನ ವಂಶದವರಲ್ಲಿ (ಮೊಗಲರಲ್ಲಿ) ಮತ್ತು ಆದಿಲಶಾಹೀ ರಾಜ್ಯದ ಮಧ್ಯ ದೊಡ್ಡ ವೈರ ಭಾವಕ್ಕೆ ಮತ್ತು ವಿರಸಕ್ಕೆ ಕಾರಣನಾದನು. ಇಷ್ಟೆಲ್ಲ ಆದರೂ ಶಿವಾಜಿ ತುಂಬ ಸುದೈವಿ. ಆತನ ಭಾಗ್ಯ ಚಮತ್ಕಾರಿಕವಾಗಿತ್ತು. ಯಾಕೆಂದರೆ ಶಿವಾಜಿ ತಾನು ಈ ಪ್ರಕಾರದ ಗದ್ದಲಖೋರ ಮತ್ತು ಜಗವನ್ನೇ ಪ್ರಳಯ ಮಾಡುವ ವ್ಯಕ್ತಿಯಾಗಿ ಇಬ್ಬರು ಮಹಾಬಲಶಾಲಿಗಳಾದ ದಿಲ್ಲಿ ಬಾದಶಹ ಮತ್ತು ಆದಿಲಶಾಹಿಗಳ ಮಧ್ಯ ಇದ್ದು, ನಾನು ಪ್ರಕಾರಗಳ ಉಪದ್ರವಗಳನ್ನು ಕೊಡುತ್ತಿದ್ದನು. ಉಭಯ ಬಾದಶಹರೂ ಶಿವಾಜಿಯ ನಿರ್ಮೂಲ ನಾಶ ಮಾಡಲು ಪ್ರಯತ್ನ ಮಾಡುತ್ತಲೇ ಇದ್ದರು. ಆದರೂ ಶಿವಾಜಿ ತನ್ನ ದೈವ ಬಲದಿಂದ ಮತ್ತು ಪ್ರಾರಬ್ಧ ಬಲದಿಂದ ೨೫ ವರುಷ ಪೂರ್ಣ ಮನೋರಥದಿಂದ ದಿನಗಳನ್ನು ಬಾಳಿ ಸನ್ ೧೬೮೦ರಲ್ಲಿ ರಾಹೇರ (ರಾಯಗಡ)ದಲ್ಲಿ ತೀರಿಕೊಂಡನು.[೧] ತನ್ನ ಉಪದ್ರವದ ಪೀಡೆಯಿಂದ ಪೃಥ್ವಿಯನ್ನು ಮುಕ್ತ ಮಾಡಿದನು.

ಅನಂತರ ಶಿವಾಜಿಯ ಮಗ ಸಂಭಾಜಿ ಕೂಡ ತನ್ನ ದುರ್ನಡತೆಯ ತಂದೆಯ ಸ್ಥಳದಲ್ಲಿ ಕಾಯಮ್ ಮುಕ್ಕಾಮು ಮಾಡಿ, ಅವನ ದುರ್ನಡತೆಯ ವಾರಸುದಾರನಾಗಿ ಮತ್ತೆ ಅದಕ್ಕೊಂದು ಹೊಸ ತೇಜ ಕೊಟ್ಟು ಸಂಭಾಳಿಸುತ್ತಿದ್ದನು. ಆತನೂ ತಂದೆಯಂತೆಯೇ ನಡೆದುಕೊಳ್ಳುತ್ತಿದ್ದನು. ಒಮ್ಮೊಮ್ಮೆ ಮಾಸೂದಖಾನನೊಂದಿಗೆ ಒಪ್ಪಂದ ಮಾಡಿಕೊಂಡು ದಿಲ್ಲಿಯವರೊಂದಿಗೆ ತಗಲುತನ ಮಾಡುತ್ತಿದ್ದನು. ಒಮ್ಮೊಮ್ಮೆ ಮೊಗಲರೊಂದಿಗೆ ಒಪ್ಪಂದ ಮಾಡಿಕೊಂಡು ದಖಣೀ ಜನರೊಂದಿಗೆ ವಂಚನೆಮಾಡಿ ಉಪದ್ರವ ಕೊಡುತ್ತಿದ್ದನು. ಸಂಭಾಜಿ ಕೂಡ ದಾರಿಕಳ್ಳತನ ಮತ್ತು ಒಳಸಂಚುಗಳನ್ನು ಮಾಡುವಲ್ಲಿ ತನ್ನ ತಂದೆ

---

೧. ಶಕೆ ೧೬೦೨ ರೌದ್ರ ಸಂವತ್ಸರ ಚೈತ್ರ ಶುದ್ಧ ೧೫ ಪೌರ್ಣಿಮೆ ಶನಿವಾರ ದಿನದ ಎರಡನೆ ಪ್ರಹರದಲ್ಲಿ (೧೩ ರಬೀಲಾವಲ್ ೧೦೯೧ ಹಿಜರಿ ೧೦೯೯ ಫಸಲಿ, ೨೩, ಜುಲುಸ್ ೩ ಎಪ್ರಿಲ ೧೬೮೦) ರಾಯಗಡದಲ್ಲಿ ಶಿವಾಜಿ ರಾಜೆ ದೇಹ ಇಟ್ಟರು. ಸು॥ಸನ್ ಸಮಾನೀನ ಆಲಫ-ಜೇಧೆಶಕಾವಲಿ ಪುಟ ೩೦.

News came from the Deccan that on Friday the 14th May 1680 24th Rabius-sani, Shivaji. after returning from a journey dismounted from his horse, twice vomitted blood in the excess of heat, and sank down into the pit of hell -MiA P. 120.

ಶಿವಾಜಿಗಿಂತ ಕಡಿಮೆ ಇರಲಿಲ್ಲ. ಶಿವಾಜಿಯ ಹಾಗೆಯೇ ಇದ್ದನು. ಸಂಭಾಜಿ ಕೂಡ ತನ್ನ ತಂದೆ, ಅಜ್ಜಂದಿರ ವರ್ತನೆಯಂತೆಯೇ ನಡೆದುಕೊಂಡು ಹತ್ತು ವರುಷ ಗರ್ವಿಷ್ಟನಾಗಿ, ಅಭಿಮಾನದಲ್ಲಿಯೇ ಇದ್ದು, ಔರಂಗಜೇಬ ಬಾದಶಹನ ಮತ್ತು ಆದಿಲಶಾಹಿ ಬಾದಶಹನ ಆಜ್ಞೆಗಳಂತೆ ನಡೆಯದೆ, ಅವರ ಅನುಗ್ರಹದಲ್ಲಿ ಇರದೆ, ಕೃತಘ್ನನಾಗಿ ಸನ್ ೧೧೦೧ರಲ್ಲಿ (ಕ್ರಿ.ಶ ೧೬೮೯) ತನ್ನ ತಂದೆಯ ಮಾರ್ಗದಲ್ಲಿಯೇ ಹೋದನು. ಮರಣ ಹೊಂದಿದನು.[೨]

*೫೪. ಔರಂಗಜೇಬ ಬಾದಶಹ ಮತ್ತು ರಾಜಕುಮಾರ ಉಭಯತರು ಸಿಕಂದರ ಆದಿಲಶಹನ ಸಂರಕ್ಷಣೆ ಮಾಡುವ ನಡತೆಯನ್ನು ಪ್ರಸಿದ್ಧ ಮಾಡಿದ್ದು :*

ದಿನಾಂಕ ೭, ರಬೀಲಾವಲ, ಸನ್ ೧೦೯೧ (೨೮ ಮಾರ್ಚ, ೧೬೮೦)ರಂದು ರಾಜಕುಮಾರ ಅಜಮಶಾಹ ಆಲಮಬಹಾದ್ದೂರ ಅವರ ನಿಶಾನೆಯು ಸಯ್ಯದ ಮಖದೂಮ ಷರ್ಜಾಖಾನನ ವಿಷಯವನ್ನು ನಿರ್ಧರಿಸಲು ಮತ್ತು ಶಿವಾನನ್ನು ಶಿಕ್ಷಿಸುವುದಕ್ಕಾಗಿ ಬಂದು ಮುಟ್ಟಿತು. ಆಗ ಸಿಕಂದರ ಬಾದಶಹ ಮತ್ತು ಮಾಸೂದಖಾನನು ಉಭಯತರು ಶಾಹಪುರಕೆರೆಯವರೆಗೆ ಬಂದು ನಿಶಾನೆಯನ್ನು ಬಹಳ ಆದರದಿಂದ ಬರಮಾಡಿಕೊಂಡನು. ನಾಲ್ಕು ದಿನಗಳ ಅನಂತರ ದಿನಾಂಕ ೧೧ ರಂದು (೧ ಎಪ್ರಿಲ್ ೧೬೮೦) ಮಿರ್ಜಾ ಮಹಮ್ಮದ ಮುನೀಫನು ಪುನಃ ಪೋಷಾಕುಗಳನ್ನು ಮತ್ತು ನಿಶಾನೆಯನ್ನು ರಾಜಕುಮಾರ ಮೌಸುಫನಿಂದ ತಂದನು. ಮತ್ತೆ ಅದೇ ಕೆರೆಯವರೆಗೆ ಹೋಗಿ ಅದನ್ನು ಎದುರುಗೊಂಡರು. ದಿನಾಂಕ ೨೨ರಂದು (೧೨, ಎಪ್ರಿಲ್ ೧೬೮೦) 'ಮೌಲದ ಮುಬಾರಕ'ದ ಕಚೇರಿ (ಪೈಗಂಬರ ಅವರ ಉತ್ಪತ್ತಿಯ ವರ್ಣನೆಯ ಮಾಡುವ ಕವಿಗೋಷ್ಠಿ) ಸಮಾರಂಭಕ್ಕೆ ಮಾಸೂದಖಾನನು ಸಿಕಂದರ ಬಾದಶಹನನ್ನು ಆಮಂತ್ರಿಸಿದನು. ಅದನ್ನು ಸ್ವೀಕರಿಸಿದ ಸಿಕಂದರಬಾದಶಹನು ಮಾಸೂದಖಾನನ ಮನೆಗೆ ಬಂದು ರಾತ್ರಿ ಅಲ್ಲಿಯೇ ಉಳಿದನು. ಮರುದಿನ ಪ್ರಾತಃಕಾಲದಲ್ಲಿ ಸಿಕಂದರ ಬಾದಶಹನಿಗೆ ಎರಡು ಕುದುರೆಗಳು ಮತ್ತು ಪೋಷಾಕು ಅಲ್ಲದೆ ಮಾಸೂದಖಾನನಿಗಾಗಿ ಒಂದು ಕುದುರೆ, ಪೋಷಾಕು ರಾಜಕುಮಾರ ಅಜಮಶಾಹನಿಂದ ಬಂದುವು. ಶಾಹಪುರದ ವರೆಗೆ ಹೋಗಿ ಅವುಗಳನ್ನು ಸ್ವೀಕರಿಸಿ ಬಾದಶಹ ಮತ್ತು ಮಾಸೂದಖಾನರು ವಿಜಾಪುರಕ್ಕೆ ತಿರುಗಿಬಂದರು.

ದಿನಾಂಕ ೨, ರಬೀಲಾವಲ್ (೨೩ ಎಪ್ರಿಲ, ೧೬೮೦) ದಂದು ವೆಂಕಟಾದ್ರಿಯನ್ನು ಬಂಧನದಿಂದ ಬಿಡುಗಡೆ ಮಾಡಿ ಷರ್ಜಾಖಾನನ ಮಾತಿನಂತೆ ಆತನನ್ನು ಮುಖ್ತ್ಯಾರನನ್ನಾಗಿ ಮಾಡಲಾಯಿತು. ವೆಂಕಟಾದ್ರಿಯು ದಿನಾಂಕ ೨, ಜಮಾದಿಲಾವಲ (೨೧ ಮೇ, ೧೬೮೦) ರಂದು ವಿಜಾಪುರದಿಂದ ಹೊರಟು ಖುಸ್ರೋಪುರದಲ್ಲಿ ಬಂದು ಇದ್ದನು. ಅಲ್ಲಿಂದ ಮೂರು ನಾಲ್ಕನೆಯದಿನ ಆದೋನಿಯ ಕಡೆಗೆ ಹೊರಟು ಕಲಕೋಟೆಯ ಮುಕ್ಕಾಮಿನಲ್ಲಿ ಷರ್ಜಾಖಾನನ್ನು ಭೆಟ್ಟಿಯಾದನು. ಷರ್ಜಾಖಾನನೊಂದಿಗೆ ನಾನಾ ಪ್ರಕಾರದ ಮಿತ ಭಾಷಣವನ್ನು ಮಾತನಾಡಿ ಮಾಸೂದಖಾನನ ಬಗ್ಗೆ ಇದ್ದ ವಿರಸವನ್ನು ದೂರ ಮಾಡಿ, ಉಭಯತರ ಮಧ್ಯ ಒಮ್ಮತ ಮೂಡಿಸಿದನು.

---

೨. ಶಕೆ ೧೬೧೦ ಫಾಲ್ಗುಣ ವದ್ಯ ೩೦ (೧೧ ಮಾರ್ಚ ೧೬೮೯) ಔರಂಗಜೇಬನು ತುಲಾಪುರಿಯಲ್ಲಿ ಸಂಭಾಜಿ ರಾಜೇನನ್ನು ಮತ್ತು ಕವಿ ಕಲಶರನ್ನು ಶಿರಚ್ಛೇದನ ಮಾಡಿ ಕೊಂದನು. ಜೇಧೆಶಕಾ ಪು ೩೫.

೫೫. *ದಕ್ಷಿಣದ ರಾಜ್ಯಗಳನ್ನು ಕೈವಶ ಮಾಡಿಕೊಳ್ಳುವುದು ಮೊಗಲರ ಮನದಲ್ಲಿ ಮೊದಲಿನಿಂದಲೇ ಇತ್ತು. ಆದರೆ ಈಗ ಔರಂಗಜೇಬ ಬಾದಶಹನು ಬೇರೆ ಕಾರಣಕ್ಕಾಗಿ ದಕ್ಷಿಣ ದೇಶಕ್ಕೆ ಬಂದದ್ದು ಮತ್ತು ರಾಜಕುಮಾರ ಅಕಬರ ಬಾದಶಹನು ಸಂಭಾಜಿಯೊಂದಿಗೆ ಕೂಡಿಕೊಂಡದ್ದು.*

ದೈವೇಚ್ಛೆಯಂತೆ, ಔರಂಗಜೇಬ ಬಾದಶಹನು ದಕ್ಷಿಣದ ದೇಶದತ್ತ ಬರುವ ಸಂಕಲ್ಪ ಮಾಡಿದ್ದು ರಾಜ್ಯ ವಿಸ್ತಾರಕ್ಕಾಗಿಯೇ ಇದ್ದಿತು. ಯಾಕೆಂದರೆ ಈ ಸಂಕಲ್ಪವು ಮೊದಲಿನ ಬಾದಶಹರ ಮನದಲ್ಲಿಯೂ ಇದ್ದಿತು. ಬಾಬರ ಮತ್ತು ಅಕಬರ ಬಾದಶಹರ ಕಾಲ ಕಿರ್ದಿಯಕ್ಕಿಂತ ಅಧಿಕವಾಗಿ ಔರಂಗಜೇಬ ಬಾದಶಹನ ಕಾಲದಲ್ಲಿ ಇಷ್ಟೊಂದು ವಿಶಾಲವಾದ ರಾಜ್ಯ ಪ್ರಾಪ್ತವಾಗಿತ್ತು. ಹೀಗಿದ್ದರೂ ಆತ ಸಂತೋಷ ಪಡಲಿಲ್ಲ. ಪಾರ್ಸೀ ವಾಕ್ಯದ ಅರ್ಥ ಹೇಳುವಂತೆ "ಇಡೀ ಪೃಥ್ವಿಯೇ ದೊರೆತರೂ ಇನ್ನೊಂದು ಪೃಥ್ವಿಯನ್ನು ಪಡೆಯಬೇಕೆಂಬ ವಿಚಾರದಲ್ಲಿ ಬಾದಶಹನಿರುತ್ತಾನೆ" ಈ ವಾಕ್ಯದಲ್ಲಿಯ ತಾತ್ಪರ್ಯವೆಂದರೆ ಬಾದಶಹರಿಗೆ ಸಮಾಧಾನವೆಂಬುದೇ ಇರುವುದಿಲ್ಲ. ಅದರಂತೆ ದಕ್ಷಿಣದ ದೇಶಗಳನ್ನು ಹಸ್ತಗತ ಮಾಡಿಕೊಳ್ಳುವ ವಿಚಾರದಲ್ಲಿಯೇ ಇದ್ದ ಆಲಮ್‌ಗೀರ ಬಾದಶಹನು ಎಲ್ಲ ಕಾಲದಲ್ಲೂ ವಿಜಾಪುರವನ್ನು ತೆಗೆದುಕೊಳ್ಳುವ ಇಚ್ಛೆಯಲ್ಲೇ ಇರುತ್ತಿದ್ದನು. ಜೊತೆಗೆ ಬೇರೆ ಅನೇಕ ಕಾರಣಗಳೂ ಇದ್ದುವು. ಒಂದು ಕಾರಣವೆಂದರೆ ಹಗಲುರಾತ್ರಿ ಶಿವಾನು ಉಪದ್ರವ ನೀಡುತ್ತಿದ್ದನು. ಶಿವಾನ ಮಗ ಸಂಭಾಜಿಯು ಶಿವಾನ ಮೇಲಿನ ಸಿಟ್ಟಿನಿಂದ ಎಲ್ಲರಿಗೂ ತುಂಬ ಉಪದ್ರವ ಕೊಡುತ್ತಿದ್ದನು. ಅದರಿಂದಾಗಿ ಆಗ್ರಾ ಮತ್ತು ದಿಲ್ಲಿಗಳಲ್ಲಿ ಇರುವವರಿಗೆ ನೀರು ಕುಡಿದರೂ ರುಚಿಸುತ್ತಿರಲಿಲ್ಲ. ಇನ್ನೊಂದು ಕಾರಣವೆಂದರೆ, ಔರಂಗಜೇಬನ ಹಿರಿಯ ಮಗ ರಾಜಕುಮಾರ ಮಹಮ್ಮದ ಅಕಬರನು ನಾನಾ ಪ್ರಕಾರದ ಸಂಕಟಗಳನ್ನು ಎಬ್ಬಿಸಿದ್ದನು. ಅತಿ ಉನ್ಮತ್ತನಂತೆ ಅಪ್ಪನ ವಿರುದ್ಧ ತಿರುಗಿ ಬೀಳುವ ರೀತಿಯಲ್ಲಿ ಹೊರಗಿನ ಜನರನ್ನು ಪೀಡಿಸಿದನು. ಅದಕ್ಕಾಗಿ ಔರಂಗಜೇಬ ಬಾದಶಹನು ಭಯಭೀತನಾದನು. ಇದನ್ನೆಲ್ಲ ಹೇಳುವುದರ ಸಾರಾಂಶ ವೆಂದರೆ, ಆಲಮ್‌ಗೀರ ಬಾದಶಹನು ಗದ್ದುಗೆಯ ಮೇಲೆ ಏರಿದ ವರುಷ (ಕ್ರಿ.ಶ ೧೬೭೮-೭೯) ಜೋಧಪುರ ದಲ್ಲಿಯ ರಾಠೋಡ ಮನೆತನದ ಧಣಿ, ರಾಜಾ ಜಸವಂತನು ರಾಜನಾಗಿದ್ದವನು ಮರಣ ಹೊಂದಿದನು. ಆತನ ಹಿಂದೆ ಸಿಂಹಾಸನವೇರಲು ರಾಜಾ ಜಸವಂತಸಿಂಗನಿಗೆ ಮಗನಿರಲಿಲ್ಲ. ರಾಜ್ಯದ ಸ್ತ್ರೀ-ಪುರುಷ ಮಂಡಳಿಯು ದಿಲ್ಲಿಯ ಔರಂಗಜೇಬನ ಬಾದಶಹನಿಗೆ ಹೀಗೆ ವಿನಂತಿ ಪತ್ರ ಬರೆದರು. "ಕೈಲಾಸವಾಸೀ ರಾಜಾ ಜಸವಂತಸಿಂಗನ ವಿವಾಹಿತ ಸ್ತ್ರೀಯರಲ್ಲಿ ಇಬ್ಬರು ಗರ್ಭಧರಿಸಿದವರಾಗಿದ್ದರು. ಅವರಿಬ್ಬರೂ ಈಗ ಹಡೆದಿದ್ದಾರೆ. ತುಸುವೆ ಅಂತರದಲ್ಲಿ ಇಬ್ಬರಿಗೂ ಎರಡು ಗಂಡು ಮಕ್ಕಳಾಗಿವೆ. ಆದ್ದರಿಂದ ಬಾದಶಹರು ಕೃಪೆಮಾಡಿ ನಮ್ಮೆಲ್ಲರ ಇಚ್ಛೆಯಂತೆ ಇವರಿಬ್ಬರಲ್ಲಿಯ ಒಬ್ಬರನ್ನು ಸಿಂಹಾಸನದಮೇಲೆ ಕುಳ್ಳಿರಿಸಲು ಆಜ್ಞೆ ಮಾಡಬೇಕು" ಎಂದು ಅದರಲ್ಲಿ ವಿನಂತಿಸಿಕೊಂಡಿದ್ದರು. ಅದಕ್ಕೆ ಪ್ರತಿಯಾಗಿ ಔರಂಗಜೇಬ ಬಾದಶಹನು ಆಜ್ಞೆಯನ್ನು ಮಾಡುತ್ತ "ಆ ಮಕ್ಕಳನ್ನು ಉಭಯ ತಾಯಂದಿರ ಸಹಿತವಾಗಿ ಇಲ್ಲಿಗೆ ಕಳಿಸಬೇಕು. ಇಲ್ಲಿಯೇ ರಾಜಪದದ ವಸ್ತ್ರಗಳು ಅವರಿಗೆ ದೊರೆಯುತ್ತವೆ" ಎಂದು ಪತ್ರವನ್ನು ಕಳಿಸಿದನು. ಅದರಂತೆ ಅವರು ದಿಲ್ಲಿಗೆ ಬಂದರು. ಆಗ ಬಾದಶಹನು ಜೋಧಪುರದಂಥ ದೊಡ್ಡ ಸಂಸ್ಥಾನವನ್ನು, ಸಣ್ಣ ವಯದ, ಅಜ್ಞಾನಿ, ಅನನುಭವಿ ಬಾಲಕರ ಕೈಗೆ ಕೊಡಲು ಒಪ್ಪಲಿಲ್ಲ. ತನ್ನ ದಿವಾಣರಿಗೆ ಆಜ್ಞೆ ಮಾಡುತ್ತ 'ಈ ಹುಡುಗರು ಪ್ರೌಢರಾಗುವವರೆಗೆ ಇವರಿಗೆ ಎರಡು ಮಹಾಲುಗಳನ್ನು, ಅವರ ಸಂಬಳಕ್ಕೆಂದು ಕೊಟ್ಟು ಉಳಿದ ರಾಜ್ಯವನ್ನೆಲ್ಲ ಮೊಗಲರಾಜ್ಯಕ್ಕೆ ಸೇರಿಸಿಬಿಡಬೇಕು' ಎಂದು

ಸೂಚಿಸಿದನು. 'ಮತ್ತು ಆ ಎರಡು ಮಹಾಲುಗಳ ವ್ಯವಸ್ಥೆಗಾಗಿಯೂ ಇಲ್ಲಿಯ ಅಮೀರರನ್ನು ನೇಮಿಸಬೇಕು' ಎಂದನು.

ಜೋಧಪುರವು ರಾಠೋಡ ಜನರ ಸಂಸ್ಥಾನವಾಗಿದೆ. ಅದು ಜೋಧಪುರ ರಾಜನ ಮಕ್ಕಳಿಗೆ ಸೇರಬೇಕು. ಅವರ ರಾಜ್ಯ ಅವರಿಗೆ ಸೇರಬೇಕು ಎಂಬುದರ ಹೊರತಾಗಿ ರಜಪೂತ ಜನರಿಗೆ ಬೇರೇನೂ ಬಯಕೆಗಳಿರಲಿಲ್ಲ, ಅದು ಈಡೇರಲಿಲ್ಲವೆಂಬ ವ್ಯಥೆ ಇತ್ತು. ಅವಕಾಶ ಸಾಧಿಸಿ ರಾಜನ ಹೆಂಡಿರು ಮಕ್ಕಳನ್ನು ಶಾಹಜಹಾನಾಬಾದದಿಂದ ಜೋಧಪುರಕ್ಕೆ ಕರೆತಂದರು. ತಮ್ಮ ಮನದಲ್ಲಿದ್ದಂತೆ, ಆ ಇಬ್ಬರು ಗಂಡು ಮಕ್ಕಳಲ್ಲಿಯ ಒಬ್ಬ- ಬಾನೀತಸಿಂಗನನ್ನು ರಜಪೂತ ಮಂಡಳಿಯು ಸಿಂಹಾಸನದ ಮೇಲೆ ಕೂಡಿಸಿಯೇ ಬಿಟ್ಟರು. ಅಂದಿನಿಂದ ಅವರು ಔರಂಗಜೇಬ ಬಾದಶಹನ ಆಜ್ಞೆಗಳನ್ನು ಧಿಕ್ಕರಿಸಹತ್ತಿದರು. ಆದರಿಂದಾಗಿ ಔರಂಗಜೇಬನಿಗೆ ತುಂಬ ಸಿಟ್ಟು ಬಂದಿತು. ತನ್ನ ಸೈನ್ಯದ ಥಾಲನ್ನು ಅಜಮೇರದ ಕಡೆಗೆ ಎತ್ತಿ ಹಿಡಿದನು. ಅಜಮೇರಕ್ಕೆ ಹೋಗಿ ಜಸವಂತಸಿಂಗನ ಮಕ್ಕಳ ಪಾಲನೆ ಮಾಡಬೇಕೆಂದೇ ಮನದಲ್ಲಿ ನಿಶ್ಚಯಿಸಿದನು. ಯಾಕೆಂದರೆ ಈ 'ರಾಠೋಡ ಜನರು ಮೂರ್ಖರಿದ್ದಾರೆ. ಅವರ ಅಪರಾಧಕ್ಕಾಗಿ ಜಸವಂತಸಿಂಗನ ಮಕ್ಕಳನ್ನೇಕೆ ಶಿಕ್ಷಿಸಬೇಕು? ಅವು ತುಂಬ ಚಿಕ್ಕ ಮಕ್ಕಳು ಅವುಗಳಿಂದ ಯಾವ ಅಪರಾಧವೂ ಘಟಿಸಿಲ್ಲ'.

ಅಜಮೇರದಲ್ಲಿ ರಾಣಾನ ಸರಹದ್ದು, ರಾಠೋಡ ಜನರ ಸರಹದ್ದಿನೊಂದಿಗ ಕೂಡಿಕೊಂಡಿದೆ. ಆದ್ದರಿಂದ ಉನತ್ತನಾದ ರಾಣಾನಿಗೆ ಎಚ್ಚರಿಕೆ ಕೊಟ್ಟನು. ರಾಠೋಡ ಜನರ ಅಂತ್ಯ ಸಮಯ ಸನ್ನಿಹಿತವಾಗಿದೆಯಾದರೂ ರಾಣಾ ಮಾತ್ರ ಅವರಿಗೆ ಆಶ್ರಯ ಕೊಡಬಾರದೆಂದು ಆಜ್ಞೆ ಮಾಡಿದನು. ಖಾನಜಹಾನ ಬಹಾದ್ದೂರ ಜಾಫರಸಿಂಗನನ್ನು ರಾಠೋಡ ಜನರ ಪಾರುಪತ್ಯಕ್ಕಾಗಿ ನಿಯಮಿಸಿ ಔರಂಗಜೇಬನು ತಿರುಗಿ ತನ್ನ ರಾಜಧಾನಿ ದಿಲ್ಲಿಗೆ ಬಂದನು.

ಆದರೆ ರಾಣಾನು ರಹಸ್ಯವಾಗಿ ರಾಠೋಡ ಜನರಿಗೆ ಸಹಾಯ ಮಾಡುತ್ತಿದ್ದು, ಅವರಿಗೆ ಆಶ್ರಯ ಕೊಟ್ಟಿದ್ದಾನೆಂದು ಖಾನಜಹಾನನು ತಿಳಿಸಿದಾಗ, ಔರಂಗಜೇಬ ಬಾದಶಹನು ಮತ್ತೆ ಅಜಮೇರದತ್ತ ಯುದ್ಧಕ್ಕಾಗಿ ಬಂದನು. ಈ ಮಧ್ಯ ರಾಜಕುಮಾರ ಮಹಮ್ಮದ ಆಜಮನು ದಕ್ಷಿಣ ದೇಶಗಳಿಂದ ದಿಲ್ಲಿಗೆ ಬರಲು ಉಜ್ಜಯಿನಿವರೆಗೆ ಬಂದು ಮುಟ್ಟಿದ್ದನು.

'ಆತ ರಾಣಾಸಾಗರದ ವರೆಗೆ ಬಂದು ಅಲ್ಲಿ ಮುಕ್ಕಾಮು ಮಾಡಿ, ರಾಣಾನ ರಾಜ್ಯವನ್ನು ಹಾಳು ಮಾಡಬೇಕೆಂದು' ಔರಂಗಜೇಬ ಬಾದಶಹನು ಆಜ್ಞೆ ಮಾಡಿದನು. ಮತ್ತು ರಾಣಾನು ಓಡಿ ಹೋಗದಂತೆ, ಅವನನ್ನು ಬಂಧಿಸಬೇಕು ಇಲ್ಲವೆ ಕೊಲ್ಲಬೇಕು. ಎಂಬುದಾಗಿಯೂ ಆಜ್ಞಾಪತ್ರ ಬಂದಿತು. ರಾಜಕುಮಾರ ಮಹಮ್ಮದ ಅಕಬರನ ಜೊತೆಗೂ ಸೈನ್ಯವನ್ನು ಕೊಟ್ಟು ಅವನಿಗೆ ಪರ್ವತ ಪ್ರದೇಶಗಳಲ್ಲಿಯ ರಾಠೋಡರ ರಾಜ್ಯವನ್ನು ಹಾಳು ಮಾಡಬೇಕೆಂದು ಹೇಳಿ ನೇಮಿಸಿದನು [1] ಅದರಂತೆ ಮತ್ತೆ ಅನೇಕ ಯೋಧರನ್ನು ನೇಮಿಸಿದಾಗ ಅವರೆಲ್ಲ ಬಂದು ಗದ್ದಲ ಹಾಕಿದರು. ಮೀರ ಶಾಹಾಬುದ್ದೀನ ಖಾನ ಮತ್ತನೇಕ ಸೈನ್ಯವೂ ಇದಕ್ಕಾಗಿ ನೇಮಿಸಲ್ಪಟ್ಟಿತು. ಅವರು ಕೂಡ ಬಂದು ಗದ್ದಲ ಹಾಕುವಲ್ಲಿ, ಹಾಳು ಮಾಡುವಲ್ಲಿ, ಲೂಟಿ ಮಾಡುವಲ್ಲಿ ಕಿಂಚಿತ್ತೂ ಆಲಸಿಗಳಾಗಲಿಲ್ಲ.

---

1. On Friday, the 16th January 1680.24th Zilhijja....Akbar was presented with a sarpetch of ruby worth 40,000 rupees. and sent to Udaipur - MiA p 115.

## ೫೬. ಸಾರಾಂಶ :

ರಾಜಕುಮಾರ ಮಹಮ್ಮದ ಅಕಬರನು, ಠಕ್ಕ ರಜಪೂತರ ಮೋಸದ ಬಲೆಗೆ ಬಿದ್ದು, ಬಾಹಶಾಹೀ ಅಮೀರ ಜನರು ಮತ್ತು ಪ್ರಾಮಾಣಿಕ ಚಾಕರ ಜನರು ಸಹಿತವಾಗಿ ರಜಪೂತರೊಂದಿಗೆ ಕೂಡಿಕೊಂಡು ತಂದೆಗೆ ತಿರುಗಿ ಬಿದ್ದನು. ಬಾದಶಹನು ಬಹಳಷ್ಟು ಜನರನ್ನು ಅಲ್ಲಲ್ಲಿ ನೇಮಿಸಿರುವುದರಿಂದ ಸದ್ಯ ಬಾದಶಹನ ಹತ್ತಿರ ಎರಡು ಮೂರು ಸಾವಿರ ಸ್ವಾರರು ಹಾಗೂ ಕೆಲವು ಚಾಕರರು ಮಾತ್ರ ಇರುವೆಂಬುದನ್ನು ರಾಜಕುಮಾರ ಅಕಬರನು ತಿಳಿದುಕೊಂಡನು. ಅಲ್ಲಲ್ಲಿ ನೇಮಿಸಿದ ಜನರನ್ನು ರಾಜಕುಮಾರ ಅಕಬರನು ತನ್ನತ್ತ ಕರೆಯಿಸಿ, ಅವರೊಂದಿಗೆ ರಾಠೋಡರ ಪಿಶಾಚಿಯಂಥ ಸುಮಾರು ಹತ್ತು ಹನ್ನೆರಡು ಸಾವಿರ ಸ್ವಾರರೊಂದಿಗೆ ಕೂಡಿಸಿಕೊಂಡು ಒಟ್ಟು ಹದಿನೆಂಟು -ಇಪ್ಪತ್ತು ಸಾವಿರ ಸೈನ್ಯದೊಂದಿಗೆ ರಾಜಕುಮಾರ ಅಕಬರನು ಅಜಮೀರದತ್ತ ಹೊರಟನು. ಬಾದಶಾಹಿ ತೋಫಖಾನೆಯನ್ನೂ ಮತ್ತು ತನ್ನಲ್ಲಿಯ ತುಸು ತೋಫಖಾನೆಯನ್ನು ಜೊತೆಗೆ ತೆಗೆದುಕೊಂಡನು. ಈ ಸುದ್ದಿ ಕೇಳಿ ಔರಂಗಜೇಬ ಬಾದಶಹನು ಅತ್ಯಂತ ಸಿಟ್ಟಿಗೆದ್ದನು.[1]

ಮಗನ ಹತ್ತಿರ ದೊಡ್ಡ ಸೈನ್ಯವಿದೆ ಎಂಬುದನ್ನು ಲಕ್ಷ್ಯಕ್ಕೆ ತರದೆ, ತನ್ನ ಹತ್ತಿರ ಇದ್ದ ಎರಡು ಮೂರು ಸಾವಿರ ಯೋಧರನ್ನು ಕರೆದುಕೊಂಡು ಹೊರಟು ಬಿಟ್ಟನು. ಅಜಮೀರದಿಂದ ಮೂರು ಕೋಸುಗಳ ಅಂತರದಲ್ಲಿದ್ದ ದೇವರಾಯೀ ಮೌಜೆಯಲ್ಲಿ ಬಂದು ಇಳಿದನು. 'ತಕ್ಷಣ ಬಂದು ಹಾಜರಾಗಬೇಕು' ಎಂದು ರಾಜಕುಮಾರ ಶಾಹಆಲಮನಿಗೆ ಆಜ್ಞೆಮಾಡಿದನು. ಆ ಆಜ್ಞೆಯನ್ನು ಕೇಳಿದ ರಾಜಕುಮಾರ ಶಾಹಆಲಮನು ತಕ್ಷಣ ಹೊರಟು ಸುಮಾರು ಮೂವತ್ತು ಕೋಸಗಳ ಅಂತರವನ್ನು ಒಂದೇ ಮಜಲಿನಲ್ಲಿ ಕ್ರಮಿಸಿ ಬಾದಶಹನಿಂದ ಐದಾರು ಕೋಸಗಳ ಅಂತರದಲ್ಲಿದ್ದ ರಾಜಕುಮಾರ ಮಹಮ್ಮದ ಅಕಬರನ ಸೈನ್ಯದ ಠಾಣೆಗೆ ಬಂದು ಮುಟ್ಟಿದನು. ಮಹಮ್ಮದ ಅಕಬರನ ಸೈನ್ಯದಲ್ಲಿಯ ಸರದಾರನಾದ ಬಾದಶಹಾ ಲಾಲೀಖಾನ ಎಂಬವನು ಅವನ ಸೈನ್ಯದಿಂದ ಸಿಡಿದು ಬಾದಶಹನ ಕಡೆಗೆ ಬಂದು ಸೇರಿಕೊಂಡನು. ರಜಪೂತ ಜನರು ಲಾಲೀಖಾನನ ಮೇಲೆ ವಿಶ್ವಾಸವಿಟ್ಟು ಅವನ ಜೊತೆಗಿದ್ದರು. ಅವರು ಲಾಲೀಖಾನನ ದಗಲಬಾಜಿತನದಿಂದ ಅವನನ್ನು ಮತ್ತು ಮಹಮ್ಮದ ಅಕಬರ ಇಬ್ಬರ ಜೊತೆಯನ್ನೂ ಬಿಟ್ಟರು. ಅಲ್ಲದೆ ಮತ್ತೆ ಬೇರೆ ಅನೇಕ ಜನರು ಕೂಡ ನೆಪಗಳನ್ನೊಡ್ಡಿ ಒಬ್ಬೊಬ್ಬರಾಗಿ ಅಕಬರನ ಸಂಗತಿಯನ್ನು ಬಿಟ್ಟು ಹೊರಟು ಹೋದರು. ಆಗ ರಾಜಕುಮಾರ ಅಕಬರನು ನಿರುಪಾಯನಾಗಿ ಬಾದಶಹನ ಕಡೆಗೆ ಹೋಗದಿದ್ದ ಮಹಮ್ಮದ ಇಬ್ರಾಹಿಮನನ್ನು ಜೊತೆಮಾಡಿಕೊಂಡು, ಹತ್ತಿರ ಉಳಿದಿದ್ದ ನಾಲ್ಕೈದು ಸಾವಿರ ರೂಪಾಯಿಗಳು ಮತ್ತು ಇನ್ನೂರು ಮುನ್ನೂರು ಜನರೊಂದಿಗೆ ನಸುಕಿನಲ್ಲಿ ಇನ್ನೂ ಒಂದು ಗಂಟೆ ರಾತ್ರಿ ಇರುವಾಗ ಓಡಿ ರಾಠೋಡ ಜನರ ರಾಜ್ಯದಲ್ಲಿ ಹೋದನು.[2] ಆತನ ಯುದ್ಧ ಸಾಮಾನುಗಳನ್ನು ಕಿರುಕುಳ ಸಾಮಾನುಗಳನ್ನು ರಜಪೂತರು ಲೂಟಿ ಮಾಡಿದರು.

---

1. On Friday, the 7th January 1681/26 Zilhijja, the Emperor learnt from the letters of spies, approved observers and otehr well informed persons that through the instigation of the Rathods and some ungreatful imperial servants, Prince Mahammd Akbar had rebelled, promoted those of the imperial officers who agreed with him and imprisoned those whom he suspected of being unfriendly - MiA p. 122.
2. Before dawn on Sunday the 16th January 1681/6th Maharrami the Emperor learnt that Muhammad Akbar, who had encamped one and a helf Kos from him (the emperor's tent) had fead away at mid might leaving his family and children behind - MiA p 125.

ಮರುದಿನ ಔರಂಜೇಬ ಬಾದಶಹನು ಶಾಹ ಆಲಮನನ್ನು ಮಹಮ್ಮದ ಅಕಬರನ ಬೆನ್ನು ಹತ್ತಲು ನಿಯಮಿಸಿದನು. ಮಹಮ್ಮದ ಅಕಬರನು ಗುಜರಾಥದ ಅಹಮದಾಬಾದದ ಹತ್ತಿರ ನೀರಿಲ್ಲದ ಸ್ಥಳದಲ್ಲಿ ಹೋಗಿ ಉಳಿದುಕೊಂಡನು. ಮತ್ತೆ ರಾಠೋಡ ಜನರು ಅವನನ್ನು ಸೇರಿಕೊಂಡರು. ರಾಜಾ ಜಸವಂತಸಿಂಗನ ಶ್ರೇಷ್ಠ ಸರದಾರರಾದ ದುರ್ಗಾ ಮತ್ತು ಸೋಮಕ ಎಂಬುವರು ಜೊತೆಗಿದ್ದರೂ ಮಹಮ್ಮದ ಅಕಬರನ ಮುಂದಿನ ಯತ್ನಗಳು ಏನೊಂದೂ ನಡೆಯದಂತಾದುವು. ಒಂದು ಸ್ಥಳದಲ್ಲಿ ಒಂದು ಮುಕ್ಕಾಮು, ಒಂದು ರಾತ್ರಿ ಕೂಡ ಇರಲು ಸಾಧ್ಯವಾಗಲಿಲ್ಲ. ದುರ್ಗಾ ಮತ್ತು ಸೋಮಕ ಉಭಯ ಸರದಾರರೊಂದಿಗೆ ಮತ್ತು ೫೦೦ ರಜಪೂತ ಜನರೊಂದಿಗೆ ಗುಜರಾಥದ ಅರಣ್ಯಗಳ ದಾರಿ ಹಿಡಿದು ದಕ್ಷಿಣ ದೇಶಗಳಿಗೆ ಬಂದನು. ಕೊಂಕಣದ ಪ್ರದೇಶಗಳಲ್ಲಿ ಮಹಮ್ಮದ ಅಕಬರ ಸಂಭಾಜಿಯ ಹತ್ತಿರ ಬಂದು ಇರಹತ್ತಿದನು.[೨] ಆದಿಲಶಾಹಿ ಮತ್ತು ಕುತುಬಶಾಹಿ ಈ ಉಭಯ ಬಾದಶಹರು ತನಗೆ ಸಹಾಯ ಮಾಡಬಹುದು ಎಂಬ ಬಯಕೆಯಿಂದ ಅಕಬರನು ಇತ್ತ ಬಂದನು. ಈ ಮೂವರ ಅಂದರೆ ಆದಿಲಶಾಹಿ, ಕುತುಬಶಾಹಿ ಮತ್ತು ಸಂಭಾಜಿ ಇವರ ಸಹಾಯದಿಂದ ತನ್ನ ಸ್ಥಾನ ಭದ್ರ ಪಡಿಸಿಕೊಂಡು ಪ್ರಬಲನಾಗಿ ತನ್ನ ಮನೋರಥವನ್ನು ಪೂರ್ಣ ಮಾಡಿಕೊಳ್ಳಬೇಕು ಎಂಬುದಾಗಿ ಔರಂಗಜೇಬನ ಮಗ ರಾಜಕುಮಾರ ಮಹಮ್ಮದ ಅಕಬರನು ಯೋಚಿಸಿದ್ದನು.

### ೫೭. ರಾಣಾನ ಪ್ರಸಂಗದಿಂದ ಮುಕ್ತನಾಗಿ ದಕ್ಷಿಣ ದೇಶದ ಇರಾದೆ ಮಾಡಿದ್ದು :

ಔರಂಗಜೇಬ ಬಾದಶಹನ ಸೈನ್ಯವು ನಾಲ್ಕು ನಿಟ್ಟುಗಳಿಂದಲೂ ರಾಣಾನ ರಾಜ್ಯವನ್ನು ಪ್ರವೇಶಿಸಿ ಅವನನ್ನು ಮಧ್ಯದಲ್ಲಿ ಸುತ್ತುವರಿಯಿತು. ರಾಣಾ ಎಚ್ಚರಗೊಂಡನು. ಇನ್ನು ತನ್ನ ಆಟ ನಡೆಯದೆಂದೂ, ಒಂದಿಷ್ಟು ಹೆಚ್ಚು-ಕಡಿಮೆಯಾದರೂ ಘಾತ ತಪ್ಪಿದ್ದಲ್ಲವೆಂದೂ ತಿಳಿದು ರಾಜಕುಮಾರ ಅಜಮನ ಕಡೆಗೆ ಬಂದು ಕ್ಷಮೆ ಬೇಡಿದನು. ಅಲ್ಲದೆ ತನ್ನ ಜಹಗೀರಿನಲ್ಲಿಯ ಕೆಲವು ಪರಗಣೆಗಳನ್ನು ಔರಂಗಜೇಬ ಬಾದಶಹನಿಗೆ ನಜರ ಎಂದು ಕೊಡಲು ಸಿದ್ಧನಾಗಿ ಅವನ ಸೇವೆ ಮಾಡುವುದಾಗಿ ಒಪ್ಪಿಕೊಂಡನು. ಔರಂಗಜೇಬ ಬಾದಶಹನು ರಾಜವಾಡೆ ಜನರ ಯುದ್ಧದಿಂದ ಮುಕ್ತನಾದ ಬಳಿಕ ರಾಜಕುಮಾರ ಮಹಮ್ಮದ ಅಕಬರ ಮತ್ತು ರಾಜಕುಮಾರ ಮುಅಜಮನ ಕಡೆಗೆ ಮನಸ್ಸನ್ನು ತಿರುಗಿಸಿದನು. 'ಈ ರಾಜಕುಮಾರರು ಸಣ್ಣ ವಯಸ್ಸಿನವರಿದ್ದು ಕಡಿಮೆ ಅಧಿಕಾರದಲ್ಲಿದ್ದು ಮೋಸ-ವಂಚನೆಗಳನ್ನು ಮಾಡುತ್ತಿದ್ದಾರೆ. ಇಂಥ ನೀಚ ಮಕ್ಕಳು ಇಬ್ಬರೂ ಒಂದಾದರೆ ಹೇಳಲು ಬರುವುದಿಲ್ಲ. ಆಗ ಪರ್ವತವನ್ನಾದರೂ ಒಡೆದಾರು. ಇಬ್ಬರೂ ಒಂದಾದರೆ ಬಹಳ ಸಂಕಟಗಳನ್ನು ಎದುರಿಸಬೇಕಾದೀತು.

---

೨. ಶಕೆ ೧೬೦೩ ಜ್ಯೇಷ್ಠಮಾಸ (ಮೇ ಜೂನ ೧೬೮೧) ಸುಲ್ತಾನ ಅಕಬರ ಶಾಹಾ ಆದನು. ಔರಂಗಜೇಬನ ಮೇಲೆ ಸಿಟ್ಟಾಗಿ ತ್ರಿಬಂಕಕ್ಕೆ ಬಂದನು. ಆತನಿಗೆ ಸಂಭಾಜಿ ರಾಜೇಯು ಕೊಂಕಣದಲ್ಲಿ ಪಾಲಿಯಲ್ಲಿ ಇರಲು ಕೊಟ್ಟನು ಜೇಧೆ ಪುಟ – ೩೧ – A letter came from Khan Jahan Bahadur stating that Muhammad Akbar had passed by Burhanpur on sunday, the 16th May 1681/7th Jamadilawal and entered the territory of sambha, who had kindly and honourably given him shelter in his dominion MIA p-127 ಶಕೆ ೧೬೦೩ ಕಾರ್ತೀಕ ಶುದ್ಧ ೧೩ ರವಿವಾರ (೧೩ ನವಂಬರ ೧೬೮೧) ಬಾದಶಾಹ ಪುರದಲ್ಲಿ ಸಂಭಾಜಿ ರಾಜೆಯ ಮತ್ತು ಅಕಬರನ ಭೆಟ್ಟಿ ಆಯಿತು ಜೇಧೆ ಪುಟ – ೩೧ On saturday, the 6th August 1681/1st Shaban, a letter was received from Khan Jahan Bahadur to say that Akbar was living in the fort of pali near fort Maspuli 200 cavalry and 800 infantry were with him, and sambha had assigned a pension to them - MIA P. 130.

'ಆಗ ಅದನ್ನು ಎದುರಿಸುವ ಸಾಮರ್ಥ್ಯವೇ ತನ್ನಲ್ಲಿ ಉಳಿಯಲಾರದು' ಎಂದುಕೊಂಡನು. ಆದ್ದರಿಂದ ಕಾರಣಾಂತರಗಳಿಂದ ಮುಂದೆ ಬಿದ್ದ ರಾಜಕುಮಾರ ಮುಆಜಮ ಮತ್ತು ಬಾದಶಾಹಾ ಬೀಬಿಗಳ ಮದುವೆ ಸಮಾರಂಭವನ್ನು ಹಿಜರಿ ಸನ್ ೧೦೯೨ರಲ್ಲಿ ರಜಬ ತಿಂಗಳಲ್ಲಿ (ಜುಲೈ ೧೬೮೧) ಅತಿ ಉತ್ತಮ ರೀತಿಯಲ್ಲಿ ಮಾಡಿ ಆತನನ್ನು ದಕ್ಷಿಣ ದೇಶಗಳ ಯುದ್ಧಗಳ ಕೆಲಸದ ಮೇಲೆ ನೇಮಿಸಿ ಕಳಿಸಿದನು.[೧] ಅನಂತರ ರಮಜಾನ ತಿಂಗಳಲ್ಲಿ (ಸಪ್ಟಂಬರ ೧೬೮೧) ಆಲಮಗೀರ ಬಾದಶಹನು ಸ್ವತಃ ದಕ್ಷಿಣದೇಶದ ರಾಜ್ಯಗಳ ಕಡೆಗೆ ಹೊರಟನು. ಅದೇ ದಿನಗಳಲ್ಲಿ ಸಿಕಂದರ ಬಾದಶಹನು ಮಾಸೂದಖಾನ ಮತ್ತು ಸಯ್ಯದ ಮಖದೂಮ ಮತ್ತನೇಕ ಕಾರಭಾರಿ-ಮಂಡಳಿಗಳಿಗೆ ಆಜ್ಞಾಪತ್ರಗಳನ್ನು ಕಳಿಸಿದನು. ಆ ಆಜ್ಞಾ ಪತ್ರಗಳಲ್ಲಿಯ ಎರಡು ಆಜ್ಞಾಪತ್ರಗಳನ್ನು, ಒಂದು ಆಲಂಗೀರ ಬಾದಶಹನ ಆಜ್ಞಾಪತ್ರ ಮತ್ತು ಇನ್ನೊಂದು ಬಾದಶಾಹಾ ಬೀಬೀಯು ಸಯ್ಯದ ಮಖದೂಮನಿಗೆ ಬರೆದ ಆಜ್ಞಾಪತ್ರ ಹೀಗೆ ಎರಡು ಆಜ್ಞಾಪತ್ರಗಳ ನಕಲುಗಳನ್ನು ಯೋಗ್ಯವೆಂದು ತಿಳಿದು ದೃಷ್ಟಾಂತಕ್ಕಾಗಿ ಇಲ್ಲಿ ಕೊಡಲಾಗುತ್ತಿದೆ.

### *೫೮. ಆಲಮಗೀರ ಬಾದಶಾಹನು ಪರ್ಜಾಖಾನ ಊರ್ಫ ರುಸ್ತುಮಖಾನನಿಗೆ ಕಳಿಸಿದ ಆಜ್ಞಾಪತ್ರದ ನಕಲು:*

ಸೆಯ್ಯದತನ ಮತ್ತು ಶೂರತ್ವಕ್ಕೆ ಆಧಾರವಾಗಿರುವ ಮತ್ತು ಕೃಪಾ ಪಾತ್ರರಾದ ರುಸ್ತುಮಖಾನರು ಬಾದಶಹರ ಕೃಪೆಯಲ್ಲಿ ದೊಡ್ಡತನವನ್ನು ಪಡೆದು ತಿಳಿದುಕೊಳ್ಳುವುದೇನೆಂದರೆ, ಈ ಯಶಸ್ವೀ ಆರಂಭದ ದಿನಗಳಲ್ಲಿ ಎಲ್ಲ ಶಕ್ತಿಯೂ ರಾಣಾನನ್ನು ಶಿಕ್ಷಿಸುವಲ್ಲಿ ಖರ್ಚಾಯಿತು. ನಮ್ಮ ಸೈನ್ಯವು ನಾಲ್ಕು ನಿಟ್ಟುಗಳಿಂದಲೂ ರಾಣಾನ ರಾಜ್ಯವನ್ನು ಹೊಕ್ಕು ಅವನನ್ನು ಮಧ್ಯಭಾಗದಲ್ಲಿ ಸುತ್ತುವರೆದಿತ್ತು. ಅಕಬರನು ಮೂರ್ಖತನದಿಂದ, ರಾಜ್ಯದ ಅಕಲ್ಯಾಣವನ್ನು ಇಚ್ಛಿಸುವ ಮೂರ್ಖ ಮಂಡಳಿಯ ಅಯೋಗ್ಯ ಯುಕ್ತಿಗಳ ಕಲಿಕೆಯಿಂದ ತನ್ನ ದೇಶಕ್ಕೆ ಕೃತಘ್ನನಾಗಿ ತಿರುಗಿ ಬೀಳುವ ನಡತೆಯನ್ನು ಸ್ವೀಕರಿಸಿದ್ದಾನೆ ಮತ್ತು ಅಯೋಗ್ಯ ನಡತೆಯ ಉತ್ಪತ್ತಿಸ್ಥಾನವಾಗಿದ್ದಾನೆ. ಕೊನೆಗೆ ತನ್ನ ದುರ್ನಡತೆಯಲ್ಲೇ ಸಿಕ್ಕುಹಾಕಿಕೊಂಡಿದ್ದಾನೆ. ಯುದ್ಧಕ್ಕೆ ನಿಲ್ಲುವ ಸಾಮರ್ಥ್ಯ ತನ್ನಲ್ಲಿ ಉಳಿದಿಲ್ಲ ಎಂಬುದನ್ನು ತಿಳಿದು ಓಡಿ ಹೋಗಿದ್ದಾನೆ. ದಿವಂಗತ ರಾಜಾ ಜಸವಂತ ಸಿಂಗನ ಖಾಸಾ ಕೆಲವು ಚಾಕರರನ್ನು ಜೊತೆಗೆ ತೆಗೆದುಕೊಂಡು ಅತ್ಯಂತ ಗಾಬರಿಯಿಂದ, ಅಪೂರ್ಣ ಮನೋರಥನಾಗಿ ಅರಣ್ಯದಲ್ಲಿ ನಡೆಯುತ್ತ ರಾಣಾನ ರಾಜ್ಯದಲ್ಲಿ ಹೋಗಿದ್ದಾನೆ. ಇದರಿಂದಾಗಿ ತನ್ನ ಮನೆ ನಾಶವಾಗುವುದೆಂಬ ಭಯದಿಂದ ರಾಣಾನು ಬಾದಶಹನೊಂದಿಗೆ ಅಪ್ರಸನ್ನತೆಯಲ್ಲಿ ಅಕಬರನಿಗೆ ತನ್ನ ಸರಹದ್ದಿನಲ್ಲಿ ಇರಲು ಸ್ಥಳವನ್ನು ಕೊಡಲಿಲ್ಲ. ಅದರಿಂದ ಅಕಬರನು ಅತಿ ಚಿಂತಾಗ್ರಸ್ತನಾಗಿ ಮತ್ತು ಭಯಭೀತನಾಗಿ ದಕ್ಷಿಣ ದೇಶಗಳ ಕಡೆಗೆ ಹೋಗುವ ಇರಾದೆಯನ್ನು ಮಾಡಿ, ಅಯೋಗ್ಯ ವ್ಯಕ್ತಿಗಳೊಂದಿಗೆ (ಶಿವಾಜಿ -ಸಂಭಾಜಿ) ಕೂಡಿಕೊಂಡಿದ್ದಾನೆ. ಯೋಗ್ಯ ಪುತ್ರ, ಕೀರ್ತಿವಂತ, ರಾಜ್ಯದ ನೇತ್ರತೇಜ, ಬಾದಶಾಹೀ ರಾಜ್ಯದ ದೀಪ, ಐಶ್ವರ್ಯದ ಉಚ್ಚಸ್ಥಾನದ ಗ್ರಹ, ಕುಲವಂತ, ಉತ್ತಮ ದೈವವಂತನಾದ

---

೧. ಶಕೆ ೧೬೦೩ ಕಾರ್ತೀಕ ಮಾಸ (ನವಂಬರ ೧೬೮೧) ಆಜಮಶಾಹನು ಔರಂಗಾಬಾದಿಗೆ ಬಂದನು. ಜೇಧೆ ಪು-೩೧.
On sunday the 31st July 1681 / 25th Rajab prince Mahammed Azam got the title of Shah and was appointed to the Deccan expedition MiA p. 130. News came that Muhammad Azam had left -Burhanpur for Aurangabad on the 29th October /26th Sawwal, and reached the latter place on Friday the 11th November 1681/10th Zilqada MIA P. 131.

ಜಗದಲ್ಲಿರುವ ಜನರ ಆಧಾರಸ್ತಂಭನಾದ ಮಹಮ್ಮದ ಆಜಮನು ಮತ್ತೆ ರಾಣಾನ ಮೇಲೆ ಏರಿ ಹೋಗಿದ್ದಾನೆ.[2] ರಾಣಾನು ದೂರದ ವಿಚಾರಮಾಡಿ ನಮ್ರತೆಯ ಮಾರ್ಗವನ್ನು ಸ್ವೀಕರಿಸಿ ಬಾದಶಹರ ಪುತ್ರನ ಚಾಕರಿಗೆ ಹಾಜರಾಗಿದ್ದಾನೆ. ಬಾದಶಹರ ಎಲ್ಲ ಆಜ್ಞೆಗಳನ್ನು ಒಪ್ಪಿಕೊಂಡು 'ದಿವಂಗತ ರಾಜಾ ಜಸವಂತಸಿಂಗನ ಕೃತಘ್ನ ಜನರನ್ನು ನಾನು ನನ್ನ ಇಲಾಖೆಯಲ್ಲಿ ಬರಗೊಡವುದಿಲ್ಲ' ಎಂದು ಒಪ್ಪಿಕೊಂಡಿದ್ದಾನೆ. ಆದ್ದರಿಂದ ಬಾದಶಹರು ಅವನ ಎಲ್ಲ ಅಪರಾಧಗಳನ್ನು ಕ್ಷಮಿಸಿದ್ದಾನೆ.

ಈಗ ನೀವು ಬಹಳ ಸೈನ್ಯವನ್ನು ಮತ್ತು ಭಾರೀ ತೋಫಖಾನೆಯನ್ನು ತೆಗೆದುಕೊಂಡು ಆ ದುಷ್ಟನಾದ ಶಿವಾನ, ನಿರ್ಮೂಲ ನಾಶಮಾಡಲು ಹೊರಡಬೇಕು. ಮತ್ತು ದಿನಾಂಕ ೧ ಸಾಬಾನ (೬;. ಆಗಸ್ಟ ೧೬೮೧) ರಂದು ಇತ್ತ ಕಡೆಯ ಸೈನ್ಯ ಕೂಡ ಅಲ್ಲಿ ಬರಲು ಕೂಚ ಮಾಡುತ್ತದೆ.[3] ಅಲ್ಲದೆ ಇನ್ನಷ್ಟು ಆಜ್ಞೆ ಮಾಡುವುದೆಂದರೆ, ವಿಜಾಪುರ ರಾಜ್ಯದಲ್ಲಿಯ ಕೋಟೆಗಳು ಮತ್ತು ಪ್ರದೇಶಗಳು ಶಿವಾನ ಕೈಗೆ ಹೋದವುಗಳನ್ನು ಬಿಡಿಸಿಕೊಳ್ಳಬೇಕು ಮತ್ತು ಆ ಪ್ರದೇಶಗಳನ್ನು ಕೈವಶಮಾಡಿಕೊಳ್ಳಲು ಇಂಥ ಸುಸಂಧಿ ಮತ್ತೆ ಬರಲಾರದು. ನೀವು ಎಲ್ಲ ಪರಿಯಲ್ಲೂ ಧೈರ್ಯ ಹಾಗೂ ಭರವಸೆಗಳನ್ನಿಟ್ಟುಕೊಂಡು, ಸಯ್ಯದತನಕ್ಕೆ ಆಧಾರ ಮತ್ತು ಶೂರತ್ವಕ್ಕೆ ಧೈರ್ಯತನಕ್ಕೆ ಆಶ್ರಯಭೂತರೂ, ಸರ್ವ ವಿಶ್ವಾಸಿ ಜನರಲ್ಲಿ ಮುಖ್ಯರೂ ರಾಜ್ಯದ ಕಲ್ಯಾಣ ಬಯಸುವವರಲ್ಲಿ ಸಾರಾಂಶರೂ, ಯುದ್ಧದಲ್ಲಿ ಮುಂದೆ ಬೀಳುವವರಲ್ಲಿ ಶ್ರೇಷ್ಠರೂ ಆದಂಥ ಖಾನಜಹಾನ ಬಹಾದ್ದೂರ ನಫರಜಂಗ ಕೋಕಲತಾಶ ಅವರ ಜೊತೆಗಿದ್ದು ಉಭಯತರೂ ಕೂಡಿಕೊಂಡು ಈ ಕೆಲಸವನ್ನು ಪ್ರಾರಂಭಿಸಬೇಕು. ಸೇವೆಮಾಡಲು ಮತ್ತು ಯುದ್ಧ ಮಾಡಲು ಸೊಂಟಕಟ್ಟಿ ಯುದ್ಧಕ್ಕೆ ನಿಲ್ಲಬೇಕು. ಸ್ವಾಮಿಸೇವೆಯ ವಿಷಯದಲ್ಲಿ ಪ್ರಾಣ ಖರ್ಚು ಮಾಡುವುದು ಬಾದಶಹರ ಕೃಪೆಯನ್ನು ವೃದ್ಧಿ ಮಾಡಿಕೊಳ್ಳಲು ಕಾರಣವಾಗಿದೆ. ದಿನಾಂಕ ೭ (ರಜಬ?) ಆಲಮಗೀರಶಕ ೨೪, ಹಿಜರಿ ಸನ್ ೧೦೯೨ (೧೩ ಜುಲೈ ೧೬೮೧) ರಂದು ಈ ಪತ್ರವನ್ನು ಬರೆಯಲಾಗಿದೆ.

### *೫೯. ಶಹರಬಾನೂ ಬೇಗಮ್ ಊರ್ಫ ಬಾದಶಾಹಾ ಬೀಬಿಯು ಸಯ್ಯದ ಮಖದೂಮ ರುಸ್ತುಮಖಾನನಿಗೆ ಬರೆದ ಆಜ್ಞಾಪತ್ರದ ನಕಲು :*

ಸೈಯ್ಯದತನ ಮತ್ತು ಶೌರ್ಯಗಳಿಗೆ ಆಧಾರ ಚಿಂತಕರಾದ ಮತ್ತು ಧೈರ್ಯ, ಪರಾಕ್ರಮಗಳಿಗೆ ಆಶ್ರಯಭೂತರಾದ, ಸರ್ವಶೂರರಲ್ಲಿ ಶ್ರೇಷ್ಠ ರುಸ್ತುಮನಂತಿರುವ ಸೈಯ್ಯದ ಷರ್ಜಾಖಾನರಿಗೆ, ಬಾದಶಹರ ಕೃಪೆಯಲ್ಲಿರುವವರಿಗೆ ತಿಳಿಸುವುದೇನೆಂದರೆ, ಅಲ್ಲಾನ ಸ್ಮರಣೆ ಮಾಡಿ ನಾನು ನಮ್ಮ ಮನೆಯಿಂದ, ನಮ್ಮ ಊರಿನಿಂದ ದೂರ ಬಂದು ಬಿದ್ದಿದ್ದೇನೆ. ನಿರಾಶ್ರಿತರ ಮೇಲೆ ಭಗವಂತನು ಬಹಳಕೃಪೆಮಾಡಿ ಇಟ್ಟಿದ್ದಾನೆ. ಅದನ್ನು ವಿಸ್ತಾರವಾಗಿ ವರ್ಣಿಸಬೇಕೆಂದರೆ ಸಾವಿರಾರು ವರ್ಷಗಳು ಸಾಲದು. ಆದ್ದರಿಂದ ನೀವು ಇತ್ತಕಡೆ ಯಾವ ಚಿಂತೆಯನ್ನೂ ಮಾಡಬಾರದು. ಸ್ವಸ್ಥರಾಗಿರಬೇಕು. ಇತ್ತೀಚಿಗೆ ಇಲ್ಲಿಯ ರಾಣಾನು ಪ್ರಬಲ ಸೈನ್ಯದ ಪರಾಕ್ರಮದಿಂದ ಜೇರಿಗೆ ಬಂದು ರಾಜಕುಮಾರ ಮಹಮ್ಮದ ಆಜಮರ ಚಾಕರಿಯನ್ನು ಒಪ್ಪಿ, ಬಾದಶಹರ ಆಜ್ಞೆಯಂತೆ ತನ್ನ ತಪ್ಪಿನ ಬದಲು ದಂಡಕೊಡಲು ಸಮ್ಮತಿಸಿದ್ದಾನೆ. ಈಗ ಇತ್ತ ಯಾವ ಕೆಲಸಗಳೂ ಉಳಿದಿಲ್ಲ. ಆದ್ದರಿಂದ ಬಾದಶಹರ ಆಜ್ಞೆಯಂತೆ ರಾಜಕುಮಾರ ಆಜಮರು ದಕ್ಷಿಣ ದೇಶದ

---

2. On friday, the 9th September 1681/6th Ramzan Shahazada Muhammad Azam was sent back to Ajmer MiA p. 131

3. On Monday the 5th September 1681/2nd Ramzan the emperor issued orders for his camp to be moved from Ajmer towards Burhanpur - MiA p. 131.

ಕಡೆಗೆ ಬರುತ್ತಿದ್ದಾರೆ. ಸರಕಾರದಲ್ಲಿ ನಿಶ್ಚಯವಾದಂತೆ, ಸೈನ್ಯವು ಸಾಬಾನ ಆವಲೀಸ ತಿಂಗಳಲ್ಲಿ (ಆಗಸ್ಟ್ - ೧೬೮೧) ಅತ್ತ ರವಾನೆಯಾಗುತ್ತದೆ. ಈ ಸೈನ್ಯ ಆ ಕೃತಘ್ನ ಮತ್ತು ಅಮರ್ಯಾದೆಯ ವ್ಯಕ್ತಿ ಶಿವಾನನ್ನು ಶಿಕ್ಷಿಸಿ ತಿರುಗಿ ಬರುತ್ತದೆ. ಆ ಸಮಯದಲ್ಲಿ ಬಾದಶಹರೂ ಸ್ವತಃ ಶಿವಾನನ್ನು ಶಿಕ್ಷಿಸಲು ಬರುವವರಿದ್ದಾರೆ. ಇದೊಂದು ಅಲಭ್ಯ ಲಾಭವೆಂದು ತಿಳಿದು, ಮತ್ತು ಬಾದಶಹರ ಸೇವೆ ದೊರೆಯುವುದೂ ಒಂದು ಅಲಭ್ಯ ಲಾಭವೆಂದು ತಿಳಿದು, ಆದಿಲಶಾಹೀ ಮನೆತನದ ಗೌರವದ ಮೇಲೆ ದೃಷ್ಟಿಯನ್ನಿಟ್ಟು ಸ್ನೇಹದ ನಡತೆಯು ನಿಮ್ಮಿಂದ ಪ್ರಸಿದ್ಧವಾಗಬೇಕೆಂಬುದು ನಮ್ಮ ಇಚ್ಛೆಯಾಗಿದೆ. ಅದರಂತೆ ನೀವು ವರ್ತಿಸಿ ನಿಮ್ಮ ಧಣಿಯ ಕಾರ್ಯದಲ್ಲಿ ಎಷ್ಟು ಸಾಮರ್ಥ್ಯವಿದೆಯೋ ಅದನ್ನೆಲ್ಲ ಉಪಯೋಗಿಸಿ, ಸಿದ್ದೀ ಮಾಸೂದಖಾನನ ಜೊತೆಗೆ ಮತ್ತು ಬೇರೆ ಅನೇಕ ಅಮೀರ ಜನರು ಖಾನಮಂಡಳಿಯೊಂದಿಗೆ ಬಹಳ ವ್ಯವಸ್ಥಿತವಾಗಿ, ಒಂದೇಮನದಿಂದ ಕಾರ್ಯಪೂರೈಸಿ ಸ್ವಾಮಿಸೇವೆಯ ವಿಷಯದಲ್ಲಿ ಅತ್ಯಂತ ಯತ್ನಮಾಡಬೇಕು.

ಕರ್ನಾಟಕ ಮತ್ತು ಬೇರೆ ಅನೇಕ ಸ್ಥಾನಗಳು ಕೈಯಿಂದ ಹೋದವುಗಳನ್ನೆಲ್ಲ ಆದಿಲಶಾಹಿ ರಾಜ್ಯಕ್ಕೆ ತಿರುಗಿ ದೊರಕಿಸಿರಿ. ಯಾಕೆಂದರೆ, ಈ ವಿಷಯ ಎಲ್ಲರಿಗೂ ಒಪ್ಪಿಗೆಯಾಗುವುದಲ್ಲದೆ ಈ ಕೆಲಸವು ಅಲ್ಲಾನಲ್ಲೂ ಉತ್ತಮ ಫಲದಾಯಕವಾಗುತ್ತದೆ. ಬಾದಶಹರು ಸ್ವತಃ ರಾಜ್ಯ ವಿಸ್ತಾರಕ್ಕಾಗಿ ಪ್ರದೇಶಗಳನ್ನು ತೆಗೆದುಕೊಳ್ಳಲು ಉಜ್ಜಯಿನಿಯ ಕಡೆಗೆ ಹೋಗಿದ್ದಾರೆ. ಅವರ ಮನಸ್ಸಿಗೂ ಸಂತೋಷಕ್ಕೆ ಕಾರಣವಾಗುತ್ತದೆ. ನಮ್ಮ ಸ್ನೇಹವೂ ಗಟ್ಟಿಯಾಗಲು ಕಾರಣವಾಗುತ್ತದೆ.

ನೀವು ಸಹಾಯ ಮಾಡಿರಿ ಎಂದು ಬಾದಶಹರಿಗೆ ವಿನಂತಿಮಾಡಿಕೊಳ್ಳಲು ಸ್ಥಳವಾಗುತ್ತದೆ. ಅವರಲ್ಲಿರುವ ಎಲ್ಲ ಸಂಶಯಗಳೂ ದೂರವಾಗುತ್ತವೆ. ಬಾದಶಹರ ಬರುವಿಕೆಯ ಯೋಗದಿಂದ ವಿಜಾಪುರದಲ್ಲಿಯ ಒಳಹೊರಗೆಲ್ಲ ಸಂತೋಷಕ್ಕೂ ವಿಶ್ರಾಂತಿಗೂ ಕಾರಣವಾಗುತ್ತದೆ ಆದಿಲಶಾಹಿ ಧಣಿಯ ರಾಜ್ಯವನ್ನು ಪಾಲನೆ ಮಾಡುವ ಕರ್ತವ್ಯ ಮಾಡಬೇಕು. ಈ ಸಮಯದಲ್ಲಿ ಶತ್ರುವು ಹಾಗೆಯೇ ಕಾಯಮಾಗಿ ಉಳಿದಿದ್ದಾನೆ. ಆದ್ದರಿಂದ ಆತನನ್ನು ಶಿಕ್ಷಿಸುವ ವಿಷಯದಲ್ಲಿ ಅಂತರವನ್ನು ಮಾಡದೆ, ನಮ್ಮ ಮೊದಲಿನ ಸ್ಥಳಗಳನ್ನೆಲ್ಲ ಪಡೆದುಕೊಳ್ಳಬೇಕು. ಇದರಲ್ಲಿ ಸಡಿಲು ಬಿಡಬಾರದು ಆಲಸ್ಯ ಮಾಡಬಾರದು. ಕೃತಘ್ನ ಶತ್ರುವಿನ ಒಳಸಂಚುಗಳಿಗೆ ವಂಚನೆಗಳಿಗೆ ಕಿವಿಗೊಡದೆ ಆತನ ಮೋಸಕ್ಕೆ ಬಲಿಯಾಗಬಾರದು. ಮತ್ತು ಶೌರ್ಯ ಪರಾಕ್ರಮವನ್ನು ತೋರಿಸಬೇಕು. ದಿನಾಂಕ ೧೨ ರಜಬ ತಿಂಗಳು ಅಲಮ್ ಗೀರರು ಸಿಂಹಾಸನ ಏರಿದ ಶಕ ೨೪ (೧೮ ಜುಲೈ ೧೬೮೧).

### *೬೦. ಸಿಕಂದರ ಬಾದಶಹನ ರಾಜ್ಯದ ವ್ಯವಸ್ಥೆ ಹದಗೆಟ್ಟದ್ದು. ಆ ಕಾರಣದಿಂದ ಮಾಸೂದಖಾನನು ನೊಂದು ಆದೋನಿಗೆ ಓಡಿಹೋದದ್ದು :*

ಮಾಸೂದಖಾನನು ವೆಂಕಟಾದ್ರಿಯನ್ನು ಸೈಯದ ಮಖದೂಮನ ಪ್ರಕರಣದ ಕೆಲಸದಲ್ಲಿ ಮುಖ್ತ್ಯಾರನನ್ನಾಗಿ ಮಾಡಿ ಕಳಿಸಿದ್ದನು. ಸಯ್ಯದ ಮಖದೂಮನ ಮನಸ್ಸು ನೊಂದಿತ್ತು. ಆದರಿಂದ ನೊಂದು ತನ್ನ ಅಣ್ಣ ತಮ್ಮಂದಿರ ಮಂಡಳಿಯಿಂದ ಹೊರಬಿದ್ದು ಮೊಗಲರ ಆಶ್ರಯವನ್ನು ಹಿಡಿದು ಇರುತ್ತಿದ್ದನು. ದಿಲೇರಖಾನನ ಆದೇಶದಂತೆ ಆದೋನಿ ತರಫದಲ್ಲಿಯ ಊರುಗಳನ್ನು ಕೊಳ್ಳೆ ಹೊಡೆಯುವ ಕೆಲಸದ ಮೇಲೆ ನೇಮಿತನಾಗಿ ಹೋಗಿದ್ದನು. ಆದರೆ ವೆಂಕಟಾದ್ರಿಯ ಬೋಧೆಗಳಿಂದಾಗಿ ಸ್ನೇಹ ದಿಂದಿರಲು ಮನಸ್ಸಾಗಿ "ದ್ರವ್ಯ ಪ್ರಾಪ್ತಿಗಾಗಿ ತನ್ನ ಧಣಿಯ ಅಂದರೆ ಆದಿಲಶಾಹನ ಹತ್ತಿರ ಬಂದು ಹಾಜರಾದನು. ಮೊಗಲರ ಸಂಗತಿಯನ್ನು ಬಿಟ್ಟು ವಿಜಾಪುರಕ್ಕೆ ಬಂದನು. ಆಗ ಮಾಸೂದಖಾನನು ಜೋಗಿ ಮಠದವರೆಗೆ.

ಆತನ ಎದುರಿಗೆ ಹೋಗಿ ಸಯ್ಯದ ಮಖದೂಮನನ್ನು ನಗರದಲ್ಲಿ ಕರೆತಂದನು. ಸಿಕಂದರ ಬಾದಶಹನು ಜೋಹರಾಪುರದ ಬುರುಜಿನಮೇಲೆ ಕುಳಿತು ಆತನಿಂದ ಮುಜುರೆ ಸ್ವೀಕರಿಸಿದನು. ಆತನನ್ನು ಅತ್ಯಂತ ಆದರದಿಂದ ಸತ್ಕರಿಸಿದನು. ಮತ್ತು ಆತನನ್ನು ಬಾದಾಮಿಯ ಯುದ್ಧಕ್ಕಾಗಿ ನಿಯಮಿಸಿದನು.

*೬೧. ಸಾರಾಂಶ :*

ಸಿದ್ದೀ ಮಾಸೂದಖಾನನು ಸಿಕಂದರ ಆದಿಲಶಾಹ ಬಾದಶಹನ ಕಾಲದಲ್ಲಿ ರಾಜ್ಯದ ವ್ಯವಸ್ಥೆಯನ್ನು ಸರಿಯಾಗಿ ಇಡುವ ವಿಷಯದಲ್ಲಿ ಬಹಳ ಚಿಂತೆಯಲ್ಲಿ ಬಿದ್ದು ತನ್ನ ಬುದ್ಧಿವಂತಿಕೆಯನ್ನು ಉಪಯೋಗಿಸಿ ಎಷ್ಟೆಲ್ಲ ಪ್ರಯತ್ನ ಮಾಡಿದನು. ಆದರೂ ಅಲ್ಲಾನ ಇಚ್ಛೆಯು ಆದಿಲಶಾಹಿ ರಾಜ್ಯದ ವಿಷಯದಲ್ಲಿ ವಿಪರೀತವಾಗಿತ್ತು. ಆದ್ದರಿಂದ ಅವನ ಪ್ರಯತ್ನಗಳೆಲ್ಲ ವ್ಯರ್ಥವಾದವು. ರಾಜ್ಯದ ವ್ಯವಸ್ಥೆಯು ಹುರಿ ಬಿಚ್ಚಿದ ದಾರದ ಹಂಜಿಯಂತಾಗಿತ್ತು. ಅದು ತಿರುಗಿ ವ್ಯವಸ್ಥಿತವಾಗಬಹುದೆಂಬ ಆಶೆಯೂ ಉಳಿದಿರಲಿಲ್ಲ. ಪ್ರಜೆಗಳು, ರೈತರು, ಜನಸಾಮಾನ್ಯರು, ಖಾಸಾ ಜನರು ಕೂಡ ಒಂದು ದಿನ ಕುಳಿತು ಸುಖವಾಗಿ ರುಚಿಯಾಗಿ ಒಂದು ತುತ್ತು ಅನ್ನ ಉಣ್ಣುತ್ತಿರಲಿಲ್ಲ. ಬಾದಶಹನಿಂದ ಸಾಮಾನ್ಯ ಪ್ರಜೆಗಳ ವರೆಗೂ ಒಂದು ರಾತ್ರಿ ಕೂಡ ಸುಖವಾಗಿ ನಿದ್ದೆ ಮಾಡುತ್ತಿರಲಿಲ್ಲ. ಈ ಐದಾರು ವರುಷಗಳ ಹಾಳು ಚಿಂತೆಗಳಿಂದ ಮತ್ತು ವಿನಂತಿ ಪತ್ರಗಳ ಜಗ್ಗಾಟದಿಂದ ಮತ್ತು ಅನೇಕ ಪ್ರಕಾರದ ಸಂಕಟ ತೊಂದರೆಗಳಿಂದ ನೊಂದು ಸಿಕಂದರ ಬಾದಶಹನ ರಾಜ್ಯಧಾನಿಯಲ್ಲಿ ಮುಖ್ಯಕಾರಭಾರಿಗಳು ಕೆಲಸಕ್ಕೆ ಬೇಸತ್ತಿದ್ದರು. ಮತ್ತು ವಿಜಾಪುರದಲ್ಲಿಯ ಮುಲಕೀ ಕೆಲಸಕ್ಕೆ ತೊಂದರೆಯಾಗಿತ್ತು. ಈ ಗದ್ದಲದ ಸಮಯದಲ್ಲಿ ಸುಖದ ಮೂಲೆಯಲ್ಲಿ ತೂರಿಕೊಳ್ಳುವುದು ಮತ್ತು ಈ ಗರ್ದಿಯ ವೇಳೆಯಲ್ಲಿ ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವುದು ಇವುಗಳೇ ಅಲಭ್ಯ ಲಾಭವೆಂದು ತಿಳಿಯಲಾಗಿತ್ತು. ಹೀಗಾಗಿ ವಿಜಾಪುರ ಕೋಟೆಯಲ್ಲಿ ಎಲ್ಲರಿಂದಲೂ ಕೆಟ್ಟಾಗುವುದಕ್ಕಿಂತ ಆದೋನಿಯ ಕೋಟೆಯನ್ನು ರಕ್ಷಣೆ ಮಾಡುತ್ತ ಒಂದೆಡೆ ಕುಳಿತು ಕೊಳ್ಳುವುದು, ಸಿಕಂದರನ ರಾಜ್ಯಕ್ಕಿಂತ, ಏಕೆ ಸುಲೇಮಾನೀ ಮುಲುಕ (ಸ್ವರ್ಗ)ಗಿಂತ ಬಹಳ ಒಳ್ಳೆಯದು ಎಂದು ಮಾಸೂದಖಾನನು ತಿಳಿದನು. ನಿರುಪಾಯನಾಗಿ ವಿಜಾಪುರದಲ್ಲಿಯ ಕಾರಭಾರದ ಮತ್ತು ಒಡೆತನದ ಕೆಲಸಕ್ಕಿಂತ ಹಿಂಬಡತಿಯನ್ನು ಕೇಳಿ, ಸಿಕಂದರ ಬಾದಶಹನ ಮಂತ್ರಿಪದವಿಯನ್ನು ಬಿಟ್ಟು ಆದೋನಿಗೆ ಹೋಗುವುದೆಂದು ಮನದಲ್ಲಿ ನಿಶ್ಚಯಿಸಿದನು. ಕೆಲವು ಕಾರಣಗಳನ್ನು ಮುಂದೆ ಮಾಡಿ, ನನಗೆ ನನ್ನ ಜಹಗೀರಿಗೆ ಹೋಗಲು ನಿರೋಪ ಕೊಡಿರಿ ಎಂದು ಬಾದಶಹನಿಗೆ ಕೇಳಿದನು.

ಸಿಕಂದರ ಬಾದಶಹನು ಇದಕ್ಕೆ ಒಪ್ಪಲಿಲ್ಲ. ಆದರೆ ಮಾಸೂದಖಾನನು ಹೋಗುವ ವಿಷಯದಲ್ಲಿ ಬಹಳ ಆಗ್ರಹಮಾಡಿ ನಾನಾ ಪ್ರಕಾರದ ನಟನೆ ಮಾಡಿ "ಆದೋನಿಗೆ ಹೋಗಿ ತಿರುಗಿ ಬರುವೆ, ಖಚಿತವಾಗಿ ಬರುವೆ" ಎಂದು ಕರಾರು ಮಾಡಿ ಮತ್ತು ಕುರಾನ ಫರೀಷದ ಗ್ರಂಥದ ಶಪಥವನ್ನೂ ಮಾಡಿ ದಿನಾಂಕ ೧೭ ರಮಜಾನ ಹಿಜರಿಸನ್ ೧೧೯೪ (೩೦ ಆಗಸ್ಟ ೧೬೮೩) ರಂದು ಬಾದಶಹನಿಂದ ನಿರೋಪ ಪಡೆದು ತನ್ನ ಮನೆಗೆ ಬಂದನು. ದಿನಾಂಕ ೧೧ ಜಿಲ್ಹೇಜ ತಿಂಗಳಲ್ಲಿ (೨೦ ನವಂಬರ ೧೬೮೩) ವಿಜಾಪುರದಿಂದ ಹೊರಟು ಆದೋನಿಗೆ ನಡೆದನು.

ದಿನಾಂಕ ೧೨ ರಬಿಲಾಖರ ಹಿಜರಿಸನ್ ೧೧೯೫ ರಂದು (೧೯ ಮಾರ್ಚ, ೧೬೮೪) ವಿಜಾಪುರರಾಜ್ಯದ ಮಂತ್ರಿಪದ, ವಸ್ತ್ರ, ಮುಲ್ಕೀ ಕಾರಭಾರೀ ಪದ ನಾಲ್ಕು ಕುದುರೆ, ಒಂದು ಆನೆ ಸಹಿತವಾಗಿ ಬಾದಶಹನು ಆಕಾ ಖುಸ್ರೋನಿಗೆ ಕೊಟ್ಟನು. ಆಕಾ ಖುಸ್ರೋನು, ಹುಕುಮೀ ಕಾರಭಾರ

ಮತ್ತು ಮಂತ್ರಿಪದವಿಗಳನ್ನು ಮನೋಗತದಂತೆ ಪೂರ್ತಿ ಮಾಡಿರಲಿಲ್ಲ ಮತ್ತು ಪೂರ್ತಿ ಸುಖವನ್ನು ಭೋಗಿಸಿರಲಿಲ್ಲ. ಅವನೊಂದಿಗೆ ದೈವ ಬೇಸತ್ತಿರಬೇಕು. ದಿನಾಂಕ ೧೨ ಜಲ್ಕಾದದಂದು (೧೨, ಅಕ್ಟೋಬರ ೧೬೮೪) ರಂದು ಆಕಾ ಖುಸ್ರೋನು ಮರಣ ಹೊಂದಿದನು.

### *೬೨. ಸಿದ್ದೀ ಮಾಸೂದಖಾನನ ಬಗ್ಗೆ ಒಂದಿಷ್ಟು ವಿವರಗಳು :*

ಸಿದ್ದೀ ಮಾಸೂದಖಾನನು ಆದಿಲಶಾಹನ ಕಡೆಯ ಮಲಿಕ ಅಬ್ದುಲ ವಾಹಬ ಬಿನ್ ಮಲಿಕ ರೇಹಾನನ ಸೇವಕ ಮಂಡಳಿಯವನಾಗಿದ್ದನು. ಅಬ್ದುಲ ವಾಹಬನು ಮರಣ ಹೊಂದಿದಾಗ ಅವನ ಮಗ ಮಲಿಕ ರೇಹಾನನನ್ನು ಕೈದು ಮಾಡಿ ಆತನ ಸೇವಕಲ್ಲೊಬ್ಬನಾದ ಸಿದ್ದಿ ಜೋಹಾರನು, ಮಹಮ್ಮದ ನೂರ ಕಂದನೊಲ (ಕರ್ನೂಲು?) ದಲ್ಲಿ ಗದ್ದುಗೆಯನ್ನೇರಿದನು. ಅಮೀರ ಪದವಿಯನ್ನು ಪಡೆದನು. ಸಿದ್ದೀ ಜೋಹಾರನು ತನ್ನ ಮಗಳನ್ನು ಸಿದ್ದೀ ಮಾಸೂದಖಾನನಿಗೆ ಕೊಟ್ಟು ತನ್ನ ಆಳಿಯನನ್ನಾಗಿ ಮಾಡಿಕೊಂಡನು. ಆ ಸಮಯದಲ್ಲಿ ಸಿದ್ದೀ ಜೋಹಾರನು ಸಲಾಬತನಖಾನನೆಂದು ಪದವಿಯನ್ನು ಪಡೆದು ಬಾದಶಹರ ಆದೇಶದಂತೆ ಪನ್ಹಾಳ ಕೋಟೆಯ ಮೇಲೆ ಹಲ್ಲೆ ಮಾಡಿ ಶಿವಾಜಿ ಭೋಸಲೆಯೊಂದಿಗೆ ಯುದ್ಧಮಾಡಿದನು. ಅವನ ಜೊತೆಗೆ ಹೋದ ಸಿದ್ದೀ ಮಾಸೂದಖಾನನು ಆ ಯುದ್ಧದಲ್ಲಿ ಬಹಳ ಪರಾಕ್ರಮವನ್ನು ತೋರಿ ಅಮೀರಿಯ ಹಾಗೂ ಖಾನ ಎಂಬ ಬಿರುದನ್ನು ಗಳಿಸಿದನು. ಸಿದ್ದಿ ಜೋಹಾರ ಸಲಾಬತಖಾನನು ಮರಣ ಹೊಂದಿದಾಗ ಆತನ ಮಗ ಅಬ್ದುಲ ಅಜೀಜನು ಮುಖ್ತಾರನಾದನು. ಮತ್ತು ಆತನು ಮಾಸೂದಖಾನನನ್ನು ಕೈದು ಮಾಡಬೇಕೆಂದು ಇಚ್ಛಿಸಿದ್ದನು. ಈ ಸಂಚು ಅಬ್ದುಲ ವಾಹಬನ ಸ್ತ್ರೀಗೆ ಗೊತ್ತಾಗಿ ಅದನ್ನು ಮಾಸೂದಖಾನನಿಗೆ ಹೇಳಿದಳು. ಆಗ ಮಾಸೂದಖಾನನು ಕೆಲವು ಜನರನ್ನು ಜೊತೆಗೆ ಕರೆದುಕೊಂಡು ಕಂದನೋಲ (ಕರ್ನೂಲ?) ನಿಂದ ಓಡಿ ಹೋಗಿ ಶೇಖ ಇನಾಯತುಲ್ಲಾ ಆದಿಲಾಬಾದಿಯ ಆದೋನಿ ಕೋಟೆಯ ಕಡೆಗೆ ಹೋದನು. ಶೇಖ ಇನಾಯತಲ್ಲಾನು ತನ್ನ ಕೋಟೆಯ ಮೇಲೆ ಇರಲು ಸ್ಥಳಕೊಟ್ಟು ಮಾಸೂದಖಾನನೊಂದಿಗೆ ಸ್ನೇಹ ಬೆಳಿಸಿದನು.

ಅನಂತರ ಕೆಲವೇ ದಿನಗಳಲ್ಲಿ ಮಾಸೂದಖಾನನು ಆದೋನಿಯ ಕೋಟೆಯನ್ನು ಶೇಖ ಇನಾಯತುಲ್ಲಾನಿಂದ ಮೈತ್ರಿಯಿಂದಲೇ ಕೈವಶಮಾಡಿಕೊಂಡು ಆ ಕೋಟೆಯಲ್ಲಿ ಇರಹತ್ತಿದನು. ಸಾವಕಾಶವಾಗಿ ಶ್ರೇಷ್ಠ ಅಮೀರ ಪದವಿ ವಜೀರ ಪದವಿಗಳನ್ನು ಪಡೆದನು. ಬಾಹ್ಯದಲ್ಲಿ ಸ್ನೇಹದಿಂದ, ಸಿಹಿ ಮಾತುಗಳನ್ನಾಡಿ, ಆದರ ತಾರತಮ್ಯವನ್ನು ಇಡುವಲ್ಲಿ ಮತ್ತು ಗೌರವದಿಂದ ನಡೆದುಕೊಳ್ಳುವಲ್ಲಿ ಬಹಳ ಉತ್ತಮ ಲಕ್ಷಣಗಳು ಇವನಲ್ಲಿ ಇದ್ದುವು. ಕೋಟೆಯ ಸಂರಕ್ಷಣ ವಿಷಯದಲ್ಲಿ ಮತ್ತು ಎಚ್ಚರಿಕೆಯಲ್ಲಿ ಮತ್ತು ಕಾರ್ಯಯೋಜನೆಗಳಲ್ಲಿ ಪರಿಣತನಿದ್ದನು. ಆದರೆ ಬಹಳ ಅಪ್ರಾಮಾಣಿಕ ಕೃತಘ್ನ ಮನುಷ್ಯನಾಗಿದ್ದನು. ಮೂರ್ಖರ ಸಂಗತಿ ಇತ್ತು. ಮಿತ್ರಮಂಡಳಿಯಷ್ಟೇ ಅಲ್ಲ ತನ್ನ ಹೆಂಡತಿ ಮತ್ತು ಮಕ್ಕಳಮೇಲೂ ಸಂಶಯ ಪಡುತ್ತಿದ್ದನು. ಅವರ ಮೇಲೆ ವಿಶ್ವಾಸವನ್ನಿಡುತ್ತಿರಲಿಲ್ಲ. ಪ್ರಜೆಗಳನ್ನು ಪಾಲಿಸುವುದಾಗಲಿ ಸೈನಿಕರನ್ನು ಸಂಭಾಳಿಸುವುದಾಗಲೀ ಅವನಲ್ಲಿ ಕಿಂಚಿತ್ತೂ ಲಕ್ಷಣಗಳಿರಲಿಲ್ಲ. ತನ್ನ ಜಾತಿಯ ಸೈನಿಕರನ್ನು ಮಾತ್ರ ಸಂಭಾಳಿಸುತ್ತ, ಪ್ಯಾದೆಗಳ ಮೇಲೆ ಸಿಪಾಯಿಗಿರಿಯ ಭರವಸೆಯನ್ನಿಡುತ್ತಿದ್ದನೇ ಹೊರತು, ಅಷ್ಟು ವಿಶ್ವಾಸವನ್ನು ಶೂರರಮೇಲೆ ಇಡುತ್ತಿರಲಿಲ್ಲ.ಅವನ ಕಾಲದಲ್ಲಿ ಒಬ್ಬನಾದರೂ ಶೂರ, ವಿದ್ವಾಂಸ ಅಥವಾ ಗುಣೀ ಜನರು ಸುಖ ಪಡಲಿಲ್ಲ. ಯಾರ ಮನೋರಥವೂ ಪೂರ್ಣವಾಗಲಿಲ್ಲ. ಯೋಗ್ಯತೆ ಪದವಿಗಳನ್ನು ಪಡೆದವರೆಲ್ಲ ಸಾಮಾನ್ಯ ಜನರಾಗಿದ್ದರು.

ಸಿದ್ದಿ ಅಂಬರ ಎಂಬವನು ಚಾಕರನಾಗಿದ್ದನು. ಆದೋನಿಯ ಕೋಟೆ ಮತ್ತು ಆ ಕೋಟೆಯ ವಶದಲ್ಲಿದ್ದ ಪ್ರದೇಶಗಳನ್ನೆಲ್ಲ ಆತ ನೋಡಿಕೊಳ್ಳುತ್ತಿದ್ದನು. ಎರಡನೆಯವನು ವೆಂಕಟಾದ್ರಿ ಮುರಾರಿ ಎಂಬ ಬ್ರಾಹ್ಮಣ ಕುಲಕರ್ಣಿ ಇದ್ದನು. ಆತ ರಾಯಚೂರು ಮೌಜೆ ಕಾರದೀಯವನು (ಕಾರಟಗಿ? ಅಥವಾ ಕಾರಡಗಿ). ಆತ ಮೊದಮೊದಲು ಗುಮಾಸ್ತನಾಗಿದ್ದವನು, ಸಾವಕಾಶವಾಗಿ ದಿಯಾನತರಾಯನ ಗೆಳೆತನದ ವಶೀಲಿಯಿಂದ ರಾಜ್ಯದ ಕೆಲಸಗಳಲ್ಲಿ ಮತ್ತು ಯೋಜನೆಗಳಲ್ಲಿ ಸೇರಿ. ಮದಾರುಲ್‌ಮಹಾಮ್ ಅಂದರೆ ಮುಖ್ಯ ಕಾರಭಾರಿಯಾಗಿದ್ದನು. ಮಾತುಕತೆ, ನಡತೆಗಳಲ್ಲಿ ಮಾಸೂದಖಾನನೊಂದಿಗೆ ತುಸು ಸಕ್ಕರೆ ಮಾತಿನವನಾಗಿದ್ದರೂ ಮಾಸೂದಖಾನನು ಅವನ ಮೇಲೆ ವಿಶ್ವಾಸವನ್ನಿಡುತ್ತಿರಲಿಲ್ಲ. ಈ ಸಂಶಯ ದಿಂದಲೇ ಅವನ ಮೇಲೆ ವಿಶ್ವಾಸವನ್ನಿಡದೆ, ಅವನಿಗೆ ತೊಂದರೆ ಕೊಟ್ಟರೆ ಕೆಲಸ ಕೆಡಿಸುತ್ತಾನೆ ಎಂದು ಬೇಸತ್ತು, ಅವನೊಂದಿಗೆ ಗೆಳೆತನವನ್ನಿಟ್ಟಿರಲಿಲ್ಲ. ಮೂರನೆಯವನು ಸೈಯದ ಆಕಾ ಎಂಬವನು ಆಶಾಖೋರನೂ, ಅವಕಾಶವನ್ನು ಉಪಯೋಗಿಸುವವನೂ ಆಗಿದ್ದನು. ತನ್ನ ಉಪಯೋಗವನ್ನು ಲಕ್ಷ್ಯದಲ್ಲಿಟ್ಟುಕೊಂಡು, ಸಂಪತ್ತನ್ನು ಸಂಗ್ರಹಿಸುವುದನ್ನು ಮಾತ್ರ ಬಿಟ್ಟು ಬೇರೆ ಯಾವ ಲಕ್ಷಣಗಳೂ ಅವನಲ್ಲಿರಲಿಲ್ಲ. ಆತ ಮಾಸೂದಖಾನನ ಹೆಂಡತಿಯ ತಂಗಿಯ ಗಂಡನಾಗಿದ್ದನು. ಈ ಸಂಬಂಧದಿಂದಾಗಿ ಆತ ಮಾಸೂದಖಾನನ ಷಡ್ಡಕನಾಗಿದ್ದನು. ಹೆಂಡತಿಯ ವಶೀಲಿಯಿಂದ ಶ್ರೇಷ್ಠತ್ವವನ್ನು ಪಡೆದಿದ್ದನು. ನಾಲ್ಕನೆಯವನು ಮಹಮ್ಮದಖಾನ ಭಿಸ್ತಿಯು ಸಣ್ಣವನಾಗಿದ್ದಾಗಿನಿಂದ ಮಹಮ್ಮದಖಾನ ಎಂಬ ಪದವಿಯನ್ನು ಪಡೆದಿದ್ದನು. ಐದನೆಯವನು ಹಿರೋಜಿ ಗಾಡೀವಾನ ಎಂಬವನು ಗಾಡೀವಾನನ ಪದವಿಯಿಂದ ಜಮಾದಾರೀ ಪದವಿಯನ್ನು ಪಡೆದು ಬೇರೆ ಕೆಲಸಗಾರರ ಮೇಲೂ ತುಸು ವಿಶ್ವಾಸವನ್ನು ಇಡುತ್ತಿದ್ದನು. ರಾಜ್ಯದ ಕಾರಭಾರೀ ಮಂಡಳಿಯು ಈ ಜಮಾದಾರನ ವಶೀಲಿಯಿಂದಲೇ ಕೆಲಸ ಮಾಡುತ್ತಿದ್ದರು. ಆರನೆಯವರನು ಸಿವನು ಪಿಂಜಾರಿ ಸರಗೋಪಾ (ಸಿರಗುಪ್ಪಾ?) ಎಂಬವನು ಚಾಡಿಕೋರತನದಿಂದ ಮತ್ತು ಎಲ್ಲ ಜನರನ್ನು ಕೆಡಿಸುವ ನಡತೆಯಿಂದ ತನ್ನ ಧಣಿಗೆ ಬೇಕಾದವನಾಗಿದ್ದನು. ಪ್ರತಿವರುಷ ಬಹುತೇಕರನ್ನು ನಾಶ ಮಾಡಿ, ಬಲಾತ್ಕಾರ ಅತ್ಯಾಚಾರಗಳಿಂದ ಜನರಿಂದ ಹಣವನ್ನು ವಸೂಲಿ ಮಾಡುತ್ತಿದ್ದನು. ಕೆಲವು ಕಳ್ಳರನ್ನೂ ಕೂಡಿಸಿಕೊಂಡು ಕಳ್ಳತನವನ್ನೂ ಮಾಡುತ್ತಿದ್ದನು. ಹೀಗೆ ಈ ಆರು ಜನಮಾತ್ರ ಮಾಸೂದಖಾನನ ದರಬಾರದಲ್ಲಿದ್ದರು. ಇವರ ಹೊರತಾಗಿ ಮಾಸೂದಖಾನನ ಕಾಲದಲ್ಲಿ ಯಾರೂ ಯೋಗತ್ಯೆಯನ್ನಾಗಲೀ ಅಧಿಕಾರವನ್ನಾಗಲೀ ಪಡೆಯಲಿಲ್ಲ.

### ೬೩. ಔರಂಗಜೇಬ ಬಾದಶಹನ ಸ್ವಾರಿ ದಕ್ಷಿಣ ದೇಶದಲ್ಲಿ ಬಂದದ್ದು :

ಇಲ್ಲಿಯವರೆಗೂ ವಿವರಿಸಿದ ವರ್ಣನಾತ್ಮಕವಾದ ಘಟನೆಗಳಿಂದಾಗಿ ಔರಂಗಜೇಬ ಬಾದಶಹನು ದಕ್ಷಿಣ ದೇಶಕ್ಕೆ ಬರಬೇಕೆಂದು ನಿರ್ಧರಿಸುವುದು ಅಗತ್ಯವಾಯಿತು. ಅವನ ಬರುವಿಕೆ ಎಂದರೆ ಆದಿಲಶಾಹೀ ರಾಜ್ಯದ ಸಮಾಪ್ತಿ ಎಂದೇ ಹೇಳಬೇಕಾಗುತ್ತದೆ. ಇದು ಎಲ್ಲರಿಗೂ ಗೊತ್ತಾಗಬೇಕು. ಈ ಮೊದಲೇ ಸೂಚನೆ ಕೊಟ್ಟಂತೆ, ತೈಮೂರ ಬಾದಶಹನ ವಂಶದಲ್ಲಿಯ (ಮೊಗಲರು) ವ್ಯಕ್ತಿಗಳು ದಕ್ಷಿಣದೇಶವನ್ನು ಹಸ್ತಗತ ಮಾಡಿಕೊಳ್ಳಬೇಕೆಂಬ ಆಶೆಯನ್ನು ಮತ್ತು ವಿಜಾಪುರವನ್ನು ಪಡೆಯಬೇಕೆಂಬ ಇಚ್ಛೆಯನ್ನು ಇಟ್ಟುಕೊಂಡೇ, ಈ ವಿಷಯದಲ್ಲಿ ತಮ್ಮೆಲ್ಲ ಆಯುಷ್ಯವನ್ನು ಖರ್ಚು ಮಾಡುತ್ತಿದ್ದರು. ಆದರೂ ಅವರ ಮನೋರಥ ಈಡೇರಿರಲಿಲ್ಲ. ಆದರೆ ಔರಂಗಜೇಬ ಬಾದಶಹನು ಅದ್ವಿತೀಯ ನಾಗಿದ್ದನು. ಆತನ ಹತ್ತಿರ ಸೈನ್ಯವೂ ಬಹಳಷ್ಟಿತ್ತು. ಪೃಥ್ವಿಯಲ್ಲಿಯ ಬಾದಶಹರುಗಳೆಲ್ಲರಿಗಿಂತ ಶ್ರೇಷ್ಠನೂ ಮತ್ತು ಅದ್ವಿತೀಯನೂ

ಆಗಿದ್ದನು. ಸರ್ವಲಕ್ಷಣಪೂರ್ಣನೂ, ಉತ್ತಮ ಸ್ವಭಾವದವನೂ, ಅಲ್ಲಾನಲ್ಲಿ ಭಕ್ತಿಯೂ ಮತ್ತು ಅಲ್ಲಾನ ಜ್ಞಾನವನ್ನು ಉಪದೇಶಿಸುವವರಲ್ಲಿ ಸರ್ವಮಾನ್ಯನೂ ಆಗಿದ್ದನು. ದಕ್ಷಿಣ ದೇಶವನ್ನು ಹಸ್ತಗತ ಮಾಡಿಕೊಳ್ಳುವಲ್ಲಿ ಮತ್ತು ವಿಜಾಪುರವನ್ನು ತೆಗೆದುಕೊಳ್ಳುವ ಇಚ್ಛೆಯಲ್ಲಿ ಎಪ್ಪತ್ತು ವರುಷಗಳನ್ನು ಅಂದರೆ ರಾಜಕುಮಾರನಾಗಿದ್ದಾಗಿನಿಂದಲೂ ಅಂದರೆ ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಪೂರ್ವದಿಂದಲೂ, ಅನಂತರ ಸಿಂಹಾಸನದ ಮೇಲೆ ಕುಳಿತಾಗಿನಿಂದಲೂ ಆತ ಈ ವಿಷಯವಾಗಿ ಪ್ರಯತ್ನ ಮತ್ತು ವಿಚಾರ ಮಾಡುತ್ತಿದ್ದನು. ಮೇಲಿಂದಮೇಲೆ ಹೆಸರಾಂತ ಸರದಾರರ ಜೊತೆಗೆ, ರಾಜಕುಮಾರರ ಜೊತಗೆ ಅಗಣಿತ ಸೈನ್ಯವನ್ನು ಕೊಟ್ಟು ದಕ್ಷಿಣ ದೇಶಗಳ ಮೇಲೆ ಕಳಿಸುತ್ತಿದ್ದನು. ಹಗಲುರಾತ್ರಿ ಇದೇ ಚಿಂತೆಯಲ್ಲಿ, ಮತ್ತು ವಿಚಾರದಲ್ಲಿದ್ದು, ತಾನೇ ಸ್ವತಃ ಹೋಗಬೇಕೆಂಬ ಖಾಸ ಇರಾದೆಯನ್ನೂ ಇಟ್ಟುಕೊಂಡಿದ್ದನು. ಕೊನೆಯಲ್ಲಿ ದೈವೇಚ್ಛೆಯಂತೆ, ಬಹಳ ಚಮತ್ಕಾರಿಕವಾದ ನಿಮಿತ್ಯಗಳು ಬಂದುವು. ಮೊದಲಿನ ಸಂಕಲ್ಪವನ್ನು ಸಿದ್ಧಿಸುವ ಕುರಿತು ಪ್ರಾರಂಭಿಸಿದನು.

ರಾಜಕುಮಾರ ಮಹಮ್ಮದ ಅಕಬರ ಹುಟ್ಟಿನಿಂದಲೂ ಬಂಡುಖೋರನಾಗಿದ್ದನು. ಅಪ್ರಾಮಾಣಿಕತೆ ಮತ್ತು ತಿರುಗಿ ಬೀಳುವ ನಡತೆಯನ್ನು ಬೆಳೆಸಿಕೊಂಡು ತಂದೆಯೊಂದಿಗೆಯೇ ಯುದ್ಧಕ್ಕೆ ನಿಂತನು. ಆದರೆ ಧೈರ್ಯ ಸಾಲದಾಯಿತು. ಆಗ ದಕ್ಷಿಣ ದೇಶಗಳ ಕಡೆಗೆ ಹೋಗಲು ಸಂಕಲ್ಪ ಮಾಡಿ, ಸಂಭಾಜಿಯ ಹತ್ತಿರ ಹೋಗಿ ಅವನೊಂದಿಗೆ ಗೆಳೆತನವನ್ನು ಮಾಡಿದನು. ಸಂಭಾಜಿಯ ಆಶ್ರಯದಲ್ಲಿಯೇ ಇರಹತ್ತಿದನು. ಈ ಸುದ್ದಿಯನ್ನು ಕೇಳುತ್ತಲೇ ಆಲಮಗೀರ ಬಾದಶಹನ ಮನದಲ್ಲಿ ತುಂಬ ಭೀತಿ ಉಂಟಾಯಿತು. ಯಾಕೆಂದರೆ, ಇಬ್ಬರೂ ಬಂಡುಖೋರರು. ಒಬ್ಬನು ಸೃಷ್ಟಿಸಿದ ಸಂಕಟವನ್ನೆ ಎದುರಿಸುವುದು ಕಷ್ಟವಾಗುತ್ತಿತ್ತು ಈಗ ಇಬ್ಬರಾಗಿದ್ದಾರೆ, ಏನಾಗುತ್ತದೋ ಹೇಳಲು ಬಾರದು. ಆದ್ದರಿಂದ ಇದನ್ನು ಬೇಗ ನಿವಾರಿಸಬೇಕು ಎಂದೇ ಬಾದಶಾಹ ಬೀಬಿಯ ಮದುವೆಯನ್ನು ರಾಜಕುಮಾರ ಮಹಮ್ಮದ ಆಜಮನೊಂದಿಗೆ ದಿನಾಂಕ ೧೨ ರಜಬ ತಿಂಗಳು ಸನ್ ೧೦೯೨ರಲ್ಲಿ (೧೮ ಜುಲೈ ೧೬೮೧) ಮಾಡಿ ಮುಕ್ತನಾದನು. ಅನಂತರ ದಿನಾಂಕ ೨೫ರಂದು (೩೧ ಜುಲೈ೧೬೮೧) ರಂದು ರಾಜಕುಮಾರ ಮಹಮ್ಮದ ಆಜಮನು ಸಣ್ಣವನಾಗಿದ್ದರೂ ಆತನಿಗೆ 'ಶಾಹ' ಎಂಬ ಪದವಿಯನ್ನಿತ್ತು ಆತನ ಜೊತೆಗೆ ಭಾರೀ ಸೈನ್ಯವನ್ನು ಕೊಟ್ಟು ದಕ್ಷಿಣ ದೇಶಗಳ ಮೇಲೆ ಕಳಿಸಿದನು. ರಾಜಕುಮಾರ ಮಹಮ್ಮದ ಅಕಬರನ ಸಮೂಲ ನಾಶ ಮಾಡಲು ಆದೇಶನೀಡಿದ್ದನು.

ದಿನಾಂಕ ೫ ರಮಜಾನ ತಿಂಗಳಂದು (೬, ಸಪ್ಟೆಂಬರ ೧೬೮೧) ಔರಂಗಜೇಬ ಬಾದಶಹನು ತಾನೆ ಸ್ವತಃ ಭಾರೀ ಸೈನ್ಯದೊಂದಿಗೆ ಅಜಮೀರದಿಂದ ಹೊರಟು, ದಕ್ಷಿಣದೇಶಗಳತ್ತ ನಡೆದನು. ಆ ಮೊದಲು ಕೆಲವು ದಿನಗಳ ಹಿಂದೆ ಹೀಗೆಯೇ ಸೂಚನೆಯೂ ಹೋಗಿತ್ತು. ಬಾದಶಹನ ಹಾಗೂ ಬಾದಶಾಹಾಬೀಬಿಯ ಆಜ್ಞಾಪತ್ರಗಳು ಈ ವಿಷಯದಲ್ಲಿ ವಿಜಾಪುರದ ಕಾರಭಾರಿ ಮಂಡಳಿಗಳಿಗೆ ಹೋಗಿದ್ದುವು. ಅವುಗಳಲ್ಲಿ ಶಿವಾಜಿ, ಸಂಭಾಜಿಗಳ ವರ್ತನೆ, ಸಿಕಂದರ ಬಾದಶಹನ ರಾಜ್ಯದ ಹಾನಿ ಇವುಗಳೆಲ್ಲ ಔರಂಗಜೇಬ ಬಾದಶಹನ ಕಿವಿಗೆ ಬಿದ್ದಿವೆ ಎಂದೂ, ಅದಕ್ಕಾಗಿಯೇ ಮಹಮ್ಮದ ಆಜಮನನ್ನು ಕಳಿಸಲಾಗಿದೆ, ಇಷ್ಟರಲ್ಲೇ ಬಾದಶಹರೇ ಸ್ವತಃ ಯಶಸ್ವಿ ಸೈನ್ಯದೊಂದಿಗೆ ಹೊರಡಲಿರುವರೆಂದೂ ಆದಿಲಶಹನ ಕಡೆಯ ಪ್ರಾಮಾಣಿಕ ಚಾಕರ ಜನರು ಇದನ್ನು ಅಲಭ್ಯ ಲಾಭವೆಂದು ತಿಳಿದು, ಶಿವಾಜಿ ಸಂಭಾಜಿಗಳನ್ನು ಶಿಕ್ಷಿಸಿ, ಸಿಕಂದರ ಬಾದಶಹನ ಕೈಬಿಟ್ಟ ಪ್ರದೇಶಗಳನ್ನು ಮರಳಿ ಪಡೆದು ಕೊಳ್ಳಬೇಕೆಂದೂ ಸೂಚಿಸಿ ಬರೆದು ಕಳಿಸಲಾಗಿತ್ತು. ಅವುಗಳಲ್ಲಿಯ ಎರಡು ಪತ್ರಗಳ ನಕಲುಗಳನ್ನು ಈ ಮೊದಲೆ ಕೊಡಲಾಗಿದೆ.

ತಾನು ಸ್ವತಃ ದಕ್ಷಿಣ ದೇಶಗಳ ಮೇಲೆ ಸವಾರಿ ಮಾಡದ ಹೊರತು, ಕೇವಲ ಸೈನ್ಯ ಕಳಿಸುವುದರಿಂದ ಯಾವ ಉಪಯೋಗವೂ ಇಲ್ಲ. ನಿಜಾಮಶಾಹಿಯಂತೆ, ಆದಿಲಶಾಹಿ ಕುತುಬಶಾಹಿಗಳನ್ನು ಮುಳುಗಿಸಿ ತಾನೇ ಮಾಲೀಕನಾಗಬೇಕೆಂಬುದು ಮೊದಲಿನಿಂದಲೂ ಔರಂಗಜೇಬ ಬಾದಶಹನ ಮನದಲ್ಲಿ ಇತ್ತು. ಕೊನೆಗೆ ದಿನಾಂಕ ೧೨, ಜಿಲಕಾದ ತಿಂಗಳಂದು (೧೩, ನವಂಬರ ೧೬೮೧) ಆಲಮಗೀರ ಬಾದಶಹನ ಸವಾರಿಯು ಬುರ್ಹಾಣಪುರ ನಗರಕ್ಕೆ ಬಂದು ದಾಖಲಾಯಿತು.[೧] ನಗರದಲ್ಲಿ ನಾಲ್ಕು ತಿಂಗಳು ಇದ್ದನಂತರ ರಬೀಲಾವಲ್ ತಿಂಗಳಲ್ಲಿ ಅಲ್ಲಿಂದ ಹೊರಟು ಖುಜಿಸ್ತೆಬುನಯಾದ, ಅಂದರೆ ಹೈದರಾಬಾದದ ಕಡೆಗೆ (ಔರಂಗಾಬಾದ) ಹೋಗಲು ಕೂಚ ಮಾಡಿದನು.[೨] ಹೈದರಾಬಾದನಲ್ಲಿ (ಔರಂಗಾಬಾದದಲ್ಲಿ) ಏಳೆಂಟು ತಿಂಗಳು ಇದ್ದು ಆನಂತರ ಜಿಲಕಾದ ತಿಂಗಳ ಮೊದಲ ದಿನಾಂಕದಂದು (೨೨ ಅಕ್ಟೋಬರ ೧೬೮೨) ಔರಂಗಜೇಬ ಬಾದಶಹನ ಸವಾರಿಯು ಅಹಮದನಗರಕ್ಕೆ ಬಂದು ದಾಖಲಾಯಿತು.[೩]

ಹಿಜರಿಸನ್ ೧೦೯೪ರ ಅವಧಿಯಲ್ಲಿ ಔರಂಗಜೇಬ ಬಾದಶಹನ ಸೈನ್ಯ ಮತ್ತು ಸಂಭಾಜಿಯ ಸೈನ್ಯದ ಮಧ್ಯ ಆಲಮಾಲದ ಹತ್ತಿರ (ಆಲಮೇಲ) ಯುದ್ಧವಾಯಿತು. ಔರಂಗಜೇಬ ಬಾದಶಹನ ಕಡೆಯ ಹಸನ ಅಲ್ಲೀಖಾನ ಆ ಯುದ್ಧದಲ್ಲಿ ಗಾಯಗೊಂಡನು. ಬಹಳಷ್ಟು ಜನರು ಹತರಾದರು. ಸಂಭಾಜಿಯ ವಿಜಯವಾಯಿತು.[೪] ಅದೇ ವರುಷ ಹುಸೇನಖಾನ ಪಠಾಣ ಸರಹಾಟಿಯು ಕೃಷ್ಣಾನದಿಯ ದಂಡೆಯಲ್ಲಿ ಷರ್ಜಾಖಾನನ ಸೈನ್ಯದಿಂದ ಸಿಡಿದು, ಮೊಗಲರ ಸೈನ್ಯಕ್ಕೆ ಬಂದು ಸೇರಿಕೊಂಡನು. ಅಲ್ಲಿಂದ ಔರಂಗಾಬಾದದ ಕಡೆಗೆ ಹೊರಟು ಔರಂಗಜೇಬ ಬಾದಶಹನ ಸೇವೆಯಲ್ಲಿ ಹೋಗಿ ಹಾಜರಾದನು. 'ಪಾಂಚಹಜಾರಿ' ಪದವಿಯನ್ನು ಮತ್ತು 'ಫತೇಜಂಗಖಾನ' ಎಂಬ ಬಿರುದನ್ನು ಪಡೆದನು.[೫] ಮೀರ ಶಹಾಬುದ್ದೀನಖಾನನಿಗೆ ಗಾಜೀಉದ್ದೀನ ಖಾನ ಎಂಬ ಬಿರುದು ದೊರೆತು ಆತ ಪುಣೆಯ ಕಡೆಗೆ ಹೋಗಲು ನಿರೋಪ ಪಡೆದನು.[೬]

---

೧. ಶಕೆ ೧೬೦೩ ಪುಷ್ಯ ತಿಂಗಳು ಕ್ಷಯ ಸಂವತ್ಸರದಲ್ಲಿ (ನವಂಬರ ೧೬೮೧) ಔರಂಗಜೇಬನು ಬುರ್ಹಾಣಪುರಕ್ಕೆ ಬಂದನು. ಜೇಧೆ ಶಕಾ ಪುಟ-೩೧. On sunday the 13th November 1681/12th Zilquad, the Emperor reached Burhanpur MiA p-132.

2. He (Emperor) started from Burhanpur on the 28th February 1682/1st Rabilawal MiA p. 133. On Wednesday, the 22nd March 1682/23rd Muharram (? should be rabilawal) the Emperor reached the palace of Aurangabad - MiA p 134

3. On Friday the 12th October 1683/1st zilqada, the emperor reached Karnpura..... on Tuesday the 13th November 1683/3rd Zilhijja, the emperor arrived at the earthean fort of Ahmednagar-MiA p. 146.

೪. ಶಕೆ ೧೬೦೩ ಮಾಘಮಾಸದಲ್ಲಿ (ಜನೆವರಿ ೧೬೮೨) ಹಸನ ಅಲೀಖಾನನು ಕಲ್ಯಾಣ ಭಿವಂಡಿಗಳನ್ನು ಸುಟ್ಟು ತಿರುಗಿ ಹೋದನು – ಜೇಧೆ ಶಕಾ ಪು ೩೧.

೫. ಶಕೆ ೧೬೦೪ ಚೈತ್ರ ಮಾಸದಲ್ಲಿ (ಏಪ್ರಿಲ್ ೧೬೮೨) ಶಹಾಬುದ್ದೀನ ಖಾನನು ಬಂದು ರಾಮಸೇಜವನ್ನು ಸುತ್ತುವರಿದನು. ವೈಶಾಖ ಮಾಸದಲ್ಲಿ (ಮೇ ೧೬೮೨) ರೂಪಾಜಿ ಭೋಸಲೆ ಮತ್ತು ಮಾನಾಜಿ ಮೋರೆಗಳು ಹೋಗಿ 'ಗಣೇಶ' ಗ್ರಾಮದ ಹತ್ತಿರ ಶಹಾಬುದ್ದೀನಖಾನನ ಜೊತೆಗೆ ಯುದ್ಧವಾಡಿದರು. ಐನೂರು ಕುದುರೆಗಳನ್ನು ಕೆಡವಿದರು. ಆನಂತರ ಆಶ್ವೀನ ಮಾಸದದಲ್ಲಿ (ಅಕ್ಟೋಬರ ೧೬೮೯) ರಾಮಸೇಜಿ ಮುತ್ತಿಗೆಯನ್ನು ತೆಗೆದರು. ಜೇಧೆ- ಶಕಾ ಪುಟ- ೩೨.

೬. ಶಕೆ ೧೬೦೫ ಕಾರ್ತೀಕ ಮಾಸದಲ್ಲಿ (ಅಕ್ಟೋಬರ / ನವಂಬರ ೧೬೮೩) ಶಾಹಾದೀಖಾನನು ಪುಣೆಯಲ್ಲಿ ಬಂದು ಕುಳಿತನು. ಜೇಧೆ ಶಕಾ ಪು-೩೨ ಪುಷ್ಯ ಪದ್ಯ ೪ (೨೭ ಡಿಸೆಂಬರ ೧೬೮೨) ಶಾಹಾದೀಖಾನನು ದೇವಘಾಟವನ್ನು ಇಳಿದು ನಿಜಾಪುರ (ಕೊಳ್ಳಿ) ಹೊಡೆದನು. ಜೇಧೆ ಶಕಾ ಪುಟ ೩೨-೩೩

ರಮಜಾನ ತಿಂಗಳ ಏಳನೆಯ ದಿನಾಂಕದಂದು (೨೦ ಅಗಸ್ಟ ೧೬೯೩) ರಾಜಕುಮಾರ ಮಹಮ್ಮದ ಆಜಮನು ಮತ್ತೆ ವಿಜಾಪುರದ ವ್ಯವಸ್ಥೆಗೆಂದು ನೇಮಿಸಲ್ಪಟ್ಟನು.[೭] ದಿನಾಂಕ ಮೂರು, ಸವಾಲ ತಿಂಗಳಂದು (೧೫ ಸಪ್ಟೆಂಬರ ೧೬೮೩) ರಾಜಕುಮಾರನಿಗೆ ಬಾದಶಹನು ಸಂಭಾಜಿಯನ್ನು ಶಿಕ್ಷಿಸಲು ಮತ್ತು ಕೊಂಕಣ ಪ್ರದೇಶಗಳನ್ನು ನಾಶ ಮಾಡಲು ನಿರೋಪ ಕೊಟ್ಟನು.[೮] ಆಗ ಶಾಹ ಆಲಮನು ಕರಮಾಳಾ ರಾಜಘಾಟದ ಮಾರ್ಗದಿಂದ ಹೋಗಿ ಕೊಂಕಣದಲ್ಲಿ ದಾಖಲಾದನು. ಆತ ಕೊಂಕಣದ ಪ್ರದೇಶಗಳನ್ನು ಲೂಟಿ ಮಾಡಿ ಅಲ್ಲಿಯ ಜನರನ್ನು ಹಿಡಿದು ಕೈದು ಮಾಡಿ, ದೊಡ್ಡ ದೊಡ್ಡ ವಸೂಲಿ ಪ್ರದೇಶಗಳನ್ನು ನಾಶಮಾಡಿ, ಅಲ್ಲಿಯ ಕೋಟೆಗಳನ್ನು ಕೈವಶ ಪಡಿಸಿಕೊಂಡನು. ಗೋವೆಯ ಬಂದರದ ಎದುರಿನಲ್ಲಿ ಹವೇಲಿ ಇದೆ. ಆ ಹವೇಲಿಯ ಕಡೆಯಿಂದ ಹಲ್ಲೆ ಮಾಡುತ್ತ-ಮಾಡುತ್ತ ಮಕೋವ್ಯಾದ (ಮಾರ್ಗೋವಾ?) ಬಂದರಕ್ಕೆ ಹೋದನು. ಅಲ್ಲಿಂದ ಸಾಷ್ಟಿ ಬಂದರಕ್ಕೆ ಹೋಗಿ ಎಲ್ಲ ಪ್ರದೇಶಗಳನ್ನು ಲೂಟಿ ಮಾಡಿ, ನಾಶಮಾಡಿದನು. ರಾಜಕುಮಾರನ ಸೈನ್ಯದಲ್ಲಿಯ ಆಹಾರ ಸಾಮಗ್ರಿಗಳು ಮುಗಿದಿದ್ದುವು. ಬರುವ ದಾರಿಯೂ ಮುಚ್ಚಿ ಬಿಟ್ಟಿತು. ಸಂಭಾನ ಗದ್ದಲ, ದಾರಿಗಳ್ಳತನ ಆತನ ಕಡೆಯ ಪೆಂಢಾರಿಗಳ ಲೂಟಿಯಿಂದಾಗಿ ವಿಜಾಪುರದಿಂದ ಏನೊಂದು ಸಹಾಯ ಸಿಗದಂತಾಯಿತು. ವಿಜಾಪುರದ ಜನ ಅವನೊಂದಿಗೆ ಕೂಡಿ, ಆತನಿಗೆ ಸಹಾಯ ಮಾಡುತ್ತಿದ್ದರು. ಜನ - ದನಗಳೆಲ್ಲ ಉಪವಾಸದಿಂದ ಸಾಯುವಂತಾಯಿತು. ಆಗ ಆ ಜನರಿಗೆ ತಿರುಗಿ ಬರಲು ಆಜ್ಞೆಯಾಯಿತು.[೯] ಆಗ ರಾಜಕುಮಾರನು ಅಲ್ಲಿಯ ಎಲ್ಲ ಪ್ರದೇಶಗಳನ್ನು ಲೂಟಿ ಮಾಡಿ ಧಾರವಾಡ ಕೋಟೆಯನ್ನು ಗೆದ್ದು ತಿರುಗಿ ಬಂದಿದ್ದನು.

### ೬೪. *ಮಾಸೂದಖಾನನು ಆದೋನಿಗೆ ಹೋದ ಅನಂತರದ ವಿಜಾಪುರದ ಸ್ಥಿತಿಗತಿ :*

ಹಿಜರಿ ಸನ್ ೧೦೯೫ ರ ಮೋಹರಮ ತಿಂಗಳ ಆರನೆಯ ದಿನ (೧೫, ಡಿಶೆಂಬರ ೧೬೮೩) ಆಕಾ ಖುಸ್ರೋನು ಸಿಕಂದರ ಆದಿಲಶಹ ಬಾದಶಹನ ಚಾಕರಿಗೆ ಒಪ್ಪಿಕೊಂಡನು. ದಿನಾಂಕ ೨೯ರಂದು (೭, ಜನವರಿ ೧೬೮೪) ಬಾದಶಹನು ಆಕಾ ಖುಸ್ರೋನ ಅತಿಥ್ಯವನ್ನು ಸ್ವೀಕರಿಸಿಲು ಹೋದನು. ಅಲ್ಲಿಂದ

---

೭. ಶಕೆ ೧೬೦೪ ಮಾಘಮಾಸ (ಜಾನೇವರಿ/ಫೆಬ್ರುವರಿ ೧೬೮೩) ಸುಲ್ತಾನ ಆಜಮಶಾಹಾನು ಬಂದು ಕೊಲ್ಹಾಪುರ ಪಡೆಯಲು ಧಡಪಡಿಸಿದನು. ಆತನನ್ನು ಹಂಬೀರರಾಯನು ತಿರುಗಿಸಿ ಭೀಮೆಯ ಅತ್ತ ಕಡೆ ಹಚ್ಚಿದನು -ಜೇಧೆ ಶಕಾ ಪುಟ ೩೨.

೮. ಶಕೆ ೧೬೦೫ ಪುಷ್ಯ ವದ್ಯ ೫ (೨೮ ಡಿಶಂಬರ ೧೬೮೩) ಶಾಹ ಆಲಮನು ರಾಮಘಾಟವನ್ನು ಇಳಿದು ಕೂಡಾಲ ಮತ್ತು ಬಾಂದೆಗಳನ್ನು ಸುಟ್ಟು ಘಟ್ಟದ ಮೇಲೆ ಫಾಲ್ಗುಣ ಶುದ್ಧ ಪೌರ್ಣಿಮೆಯಂದು (೨೦ ಫೆಬ್ರವರಿ ೧೬೮೪) ಹೋದನು. ಸೈನ್ಯ ತುಂಬ ಸತ್ತಿತು. ಜೇಧೆ ಶಕಾ ಪುಟ ೩೨. ಶಕ ೧೬೦೬ ವೈಶಾಖ ಮಾಸ (ಏಪ್ರಿಲ ೧೬೮೪) ಶಾಹ ಆಲಮನು ವಿಜಾಪುರದ ಹತ್ತಿರ 'ಶೆಕ್ತ' ಎಂಬ ಹಳ್ಳಿಯಲ್ಲಿ ಕುಳಿತನು - ಜೇಧೆ ಶಕಾ ಪುಟ -೩೩. On 15th September 1683/3rd shawwal, as commanded by his Majesty, the advance tents of shah Alam Bahadur came out of Aurangabad, playing sweat music with the object of exterpating the enemy in the direction of Konkan and Ramdarah and other lands of the Marathas - MiA P 145. On Sunday, the 18th May 1684/13th Jam dassani Shah Alam Bahadur (returned) from the Konkan, had audience, and received a robe and jewels worth 3 lakhs and 90,000 rupees, His sons got robes and jewels - MiA P 149.

9. On Monday the 2oth August 1683/7th Ramzan Muhammad Azam shah was sent on the Bijapur expedition - MiA - P.144.

ನವಾಬ ಅಬ್ದುಲ ರೌಫಖಾನ ಮತ್ತು ಜಮಷೀದಖಾನರನ್ನು ಎದುರುಗೊಂಡು, ಅವರಿಂದ ಮುಜುರೆ ಸ್ವೀಕರಿಸಿ, ಅವರಿಗೆ ಮನೆಗೆ ಹೋಗಲು ನಿರೋಪ ಕೊಟ್ಟನು. ದಿನಾಂಕ ೬, ಸಫರ ತಿಂಗಳಂದು (೧೪, ಜನವರಿ ೧೬೮೪) ಸಿದ್ದಿ ಸಾಲಮನಿಗೆ ಸರ-ಸರನೋಬತಿಯ ಪದವಿಯನ್ನು ಕೊಡಲಾಯಿತು. ಅದೇ ದಿನಗಳಲ್ಲಿ ಬಹಾದ್ದೂರಖಾನ ಪಠಾಣನು ಅಕಲೂಜದಿಂದ ಬಂದು ಚಾಕರಿಗೆ ಇದ್ದನು ಮತ್ತು ರಬಿಲಾವಲದ ತಿಂಗಳಲ್ಲಿ (ಫೆಬ್ರವರಿ ೧೬೮೪) ಮೀರಾನ ಅಫಜಲಖಾನ ಮತ್ತು ಸಯ್ಯದ ಆಲಮ ಉಭಯತರು ಆದೋನಿಯಿಂದ ಬಂದು ಚಾಕರಿಗೆ ಹಾಜರಾದನು. ಅದೇ ತಿಂಗಳು ದಿನಾಂಕ ೧೨ರಂದು (೧೮ ಫೆಬ್ರವರಿ ೧೬೮೪) ಯಾಕುತನಿಗೆ ಹವಾಲದಾರಿಯ ಹುದ್ದೆಯನ್ನು ಕೊಡಲಾಯಿತು. ದಿನಾಂಕ ೨೬ರಂದು (೩ ಮಾರ್ಚ ೧೬೮೪) ಸಯ್ಯದ ಮಖದೂಮನು ನಿರೋಪ ಪಡೆದು ರಾಜ್ಯವ್ಯವಸ್ಥೆಗಾಗಿ ಹೋದನು. ದಿನಾಂಕ ೨೭ರಂದು (೪, ಮಾರ್ಚ ೧೬೮೪) ಬಾದಶಹನು ಬುರುಜದ ಮೇಲೆ ಬಂದು ಪಾಮನಾಯಕನ ಕಡೆಯ ಜನರಿಂದ ಮುಜರಾ ಮತ್ತು ಸಲಾಮು ತೆಗೆದುಕೊಂಡನು. ದಿನಾಂಕ ೭ ರಬೀಲಾಖರ ದಂದು (೧೫ ಮಾರ್ಚ ೧೬೮೪) ಸರ್ಫರಾಜಖಾನನನ್ನು ಬಂಧಿಸಲಾಯಿತು. ಆತನ ಮಗ ಬಂದು ಚಾಕರಿಗೆ ಹಾಜರಾದನು. ದಿನಾಂಕ ೯ರಂದು (೧೬, ಮಾರ್ಚ ೧೬೮೪) ಹುಟ್ಟಿದ ಹಬ್ಬವನ್ನು (ಸಿಕಂದರ ಬಾದಶಹನ) ಆಚರಿಸಲಾಯಿತು. ದಿನಾಂಕ ೧೨ ರಂದು (೧೯ ಮಾರ್ಚ ೧೬೮೪) ಆಕಾ ಖುಸ್ರೋನಿಗೆ ಪ್ರಧಾನ ಮಂತ್ರಿ ಪದವಿಯನ್ನು, ಆಜ್ಞೆ ಮಾಡುವ ಅಧಿಕಾರ, ಮಂತ್ರಿಪದವಿ, ವಸ್ತ್ರಗಳು, ಪಾಗೋಟಾ, ಚದ್ದರ ಮತ್ತು ನಾಲ್ಕು ಕುದುರೆ ಒಂದು ಆನೆಯನ್ನು ಕೊಡಲಾಯಿತು.

### *೬೫. ಔರಂಗಜೇಬ ಬಾದಶಹನಿಂದ ಸಿಕಂದರ ಬಾದಶಹನಿಗೆ ಬಂದ ಆಜ್ಞಾಪತ್ರದ ನಕಲು :*

ದಿನಾಂಕ ೨೩ (೩೦ ಮಾರ್ಚ್ ೧೬೮೪) ರಂದು ಔರಂಗಜೇಬ ಬಾದಶಹನಿಂದ ಆಜ್ಞಾಪತ್ರ ಹಾಗೂ ಪೋಷಾಕುಗಳು ಬಂದಿದ್ದವು. ಅವುಗಳನ್ನು ಸ್ವೀಕರಿಸಲು ಸಿಕಂದರ ಬಾದಶಹನು ಆರಖರಿ ವರೆಗೆ (ಅರಕೇರಿ ?) ಹೋಗಿ, ಅವುಗಳನ್ನು ಸ್ವೀಕರಿಸಿದನು. ಆಜ್ಞಾಪತ್ರವನ್ನು ಅನೇಕ ಆದೇಶಗಳನ್ನು ಹೊಂದಿತ್ತು. ಆ ಆದೇಶಗಳು.

೧. ಸ್ವಾರಿ ಖರ್ಚು (ಸೈನ್ಯದ ಖರ್ಚು) ಮತ್ತ ಆಹಾರ ಸಾಮಗ್ರಿಗಳನ್ನು ಯಾವ ನೆಪವನ್ನೊಡ್ಡದೆ ಮುಟ್ಟಿಸಬೇಕು.

೨. ನಿನ್ನ ರಾಜ್ಯದ ಮುಖಾಂತರ ಬರ-ಹೋಗುವ ಸೈನ್ಯ ಹಾಗೂ ಆಹಾರ ಸಾಮಗ್ರಿಗಳ ಮಾರ್ಗವನ್ನು ಮುಕ್ತವಾಗಿಡಬೇಕು.

೩. ಸಂದರ್ಭ ಬಂದಾಗ ದಿಲ್ಲೀಕಡೆಯ ಸೈನ್ಯಕ್ಕೆ ಸಹಾಯ ಮಾಡಬೇಕು.

೪. ರಾಜಕುಮಾರನ ಮತ್ತು ಇತ್ತ ಕಡೆಯ ಹೆಸರಾಂತ ಸರದಾರ ಮಂಡಳಿಯು ಸಹಾಯಕ್ಕೆ ೫ ಸಾವಿರ ಸವಾರರನ್ನು ನಿಯಮಿಸಬೇಕು.

೫. ಸಂಭಾಜಿಯೊಂದಿಗಿನ ಸ್ನೇಹವನ್ನು ಅಂತರಂಗ, ಬಹಿರಂಗ ಎರಡು ಕಡೆಗಳಿಂದಲೂ ಬಿಟ್ಟು ಬಿಡಬೇಕು ಮತ್ತು ಎಲ್ಲರೂ ಒಮ್ಮನದಿಂದ ಸಂಭಾನ ನಾಶಕ್ಕಾಗಿ ವಿಚಾರ ಮಾಡಬೇಕು.

೬. ಷರ್ಜಾಖಾನನಿಗೆ ಸ್ಥಳ ಕೊಡಬಾರದು, ಆತನನ್ನು ಆತನ ಜಹಗೀರಿಗೆ ಅಟ್ಟಿ ಕಳಿಸಬೇಕು.

ಈ ರೀತಿಯಾಗಿ ಔರಂಗಜೇಬ ಬಾದಶಹನ ಆಜ್ಞಾಪತ್ರದಲ್ಲಿಯ ಮಜಕೂರ (ವಿಷಯ) ಸಮಾಪ್ತವಾಯಿತು. ದಿನಾಂಕ ೧೧, ಜಮಾದಿಲಾವಲ (೧೭, ಎಪ್ರಿಲ್ ೧೬೮೪) ದಂದು ಸಿಕಂದರ ಬಾದಶಹನ ಸ್ವಾರಿಯು ಶಹಾಪುರ ಕೆರೆಯವರೆಗೆ ಹೋಗಿ ರಾಜಕುಮಾರ ಶಾಹ ಆಲಮನ ಕಡೆಯಿಂದ ಬಂದ ನಿಶಾನೆಯನ್ನು ತೆಗೆದುಕೊಂಡಿತು. ಶಾಹ ಆಲಮನು ಕಳಿಸಿದ ನಿಶಾನೆಯ ತಾತ್ಪರ್ಯವೆಂದರೆ, ಆದಿಲಶಹನಿಗೆ ಪೂರ್ಣ ಭರವಸೆಯನ್ನು ಕೊಡಲಾಗಿತ್ತು. ಅದರಿಂದಾಗಿ ಆದಿಲಶಹನಿಗೆ ಪೂರ್ತಿಯಾದ ವಿಶ್ವಾಸ ಹಾಗೂ ಅಧಿಕ ಆಸ್ಥೆ ಉಂಟಾಯಿತು. ದಿನಾಂಕ ೨೨ ಜಮಾದಿಲಾಖರ (೨೮, ಮೇ ೧೬೮೪) ರಂದು ನವಾಬ ಮುಜಫರಗಂಜ ಬಹಾದೂರ ಖಾನನ ಕಡೆಯ ಜನರು ಮಂಗಳವೇಢೆ ಮತ್ತು ಸಾಂಗೋಲಾ ಎರಡು ಗ್ರಾಮಗಳ ವಶದಲ್ಲಿದ್ದ ಪ್ರದೇಶಗಳನ್ನು ತೆಗೆದುಕೊಂಡರು.

### ೬೬. *ಸಿಕಂದರ ಬಾದಶಹನಕಡೆಯಿಂದ ಔರಂಗಜೇಬ ಬಾದಶಹನಿಗೆ ಕಳಿಸಿದ ಉತ್ತರದ ನಕಲು :*

ಔರಂಜೇಬ ಬಾದಶಹನು, ಸಿಕಂದರ ಬಾದಶಹನಿಗೆ ಕಳಿಸಿದ ಆಜ್ಞಾಪತ್ರಕ್ಕೆ, ಅಲ್ಲಿಯ ಆದೇಶಗಳಿಗೆ ಉತ್ತರ ಬರೆದು ಒಂದು ವಿನಂತಿ ಪತ್ರವನ್ನು ಕಳಿಸಿದರು. ಅದರ ಸಾರಾಂಶ ಮತ್ತು ಕಲಮುಗಳು ಹೀಗಿವೆ.

೧. ಈ ಮೊದಲೇ ದಿಲೇರಖಾನ ಮುಂತಾದವರ ಕಡೆಯಿಂದ ನಜರಾಣೆಯಾಗಿ ತೆಗೆದುಕೊಂಡಿದ್ದೀರಿ. ಆದ್ದರಿಂದ ತಮ್ಮ ಆಜ್ಞಾಪ್ರಮಾಣದಂತೆ ನಜರಾಣೆ ಕಳಿಸಿಕೊಡುವುದನ್ನು ಮಾಫ ಮಾಡಿ ಅನುಗ್ರಹಿಸಬೇಕು.

೨. ಷರ್ಜಾಖಾನನನ್ನು ತಮ್ಮ ಆದೇಶದಂತೆ ವಿಜಾಪುರದಿಂದ ಹೊರಗೆ ಹಾಕಿದರೆ, ಆತ ನಿರಾಶನಾಗಿ, ಕೃತಘ್ನನ ಮಗ ಕೃತಘ್ನನಾದ ಸಂಭಾಜಿಯ ಕಡೆಗೆ ಹೋಗಿ ಆತನ ಖಾಸಾ ಸ್ನೇಹವನ್ನು ಮಾಡುತ್ತಾನೆ. ಹೀಗೆ ಮಾಡುವುದರಿಂದ ಬಹಳ ಸಂಕಟಗಳು ಎದ್ದು ನಿಲ್ಲುತ್ತವೆ ಎಂದು ಅನಿಸುತ್ತದೆ. ಆದ್ದರಿಂದ ಈ ಸೇವಕನ ವಿನಂತಿ ಏನೆಂದರೆ, ಷರ್ಜಾಖಾನನ ಅಪರಾಧವನ್ನು ಕ್ಷಮಿಸಬೇಕು. ಅವನಿಗೆ ಪೂರ್ತಿ ಭರವಸೆಯನ್ನು ಕೊಟ್ಟು, ಕರಾರು ಮಾಡಿ, ಅವನೊಂದಿಗೆ ಬಹಳ ಸೈನ್ಯವನ್ನು ಕೊಟ್ಟು ಫಿನಾಲ ಹಿಂದುವಾದ ಸಂಭಾಜಿಯನ್ನು ಶಿಕ್ಷಿಸಲು ಕಳಿಸಬೇಕು. ಅಂದರೆ ನಮ್ಮ ಸೇವೆಯಲ್ಲೆ ತತ್ಪರನಾಗಿ ಉಂಡಮನೆಗೆ ಎರಡು ಬಗೆದ ಸಂಭಾಜಿಯನ್ನು ಶಿಕ್ಷಿಸಿ ಆತನ ಕೈಯಿಂದ ನಮ್ಮ ಪ್ರದೇಶಗಳನ್ನೆಲ್ಲ ಬಿಡಿಸಿಕೊಂಡು ಬಂದು ಮುಜುರೆ ಮಾಡುತ್ತಾನೆ. ಆದ್ದರಿಂದ ಆತನ ಹೆಂಡಿರು ಮಕ್ಕಳನ್ನು ಮತ್ತು ಆತನ ಖಾಸಾ ಜನರನ್ನು ನನ್ನ ಕಡೆಗೆ ಕಳಿಸಬೇಕೆಂದು ವಿನಂತಿ. ಅಂದರೆ ಷರ್ಜಾಖಾನನಿಗೆ ಪೂರ್ತಿ ವಿಶ್ವಾಸ ಬರುತ್ತದೆ ಮತ್ತು ಸರಕಾರದ ಚಾಕರಿಯಲ್ಲಿ ಬಹಳ ಸಂತೋಷದಿಂದ ಪ್ರಯತ್ನಮಾಡುತ್ತ ಯುದ್ಧಮಾಡುತ್ತಾನೆ.

೩. ಷರ್ಜಾಖಾನನ ಜಹಗೀರಿಯ ಪ್ರದೇಶಗಳೆಲ್ಲ ತಮ್ಮ ರಾಜ್ಯಕ್ಕೆ ಹೋಗಿವೆ. ಇತ್ತೀಚಿಗೆ ಮಂಗಳವೇಢೆ ಮತ್ತು ಸಾಂಗೋಲೆ ಈ ಎರಡು ದೊಡ್ಡ ಗ್ರಾಮಗಳ ವಶದಲ್ಲಿದ್ದ ಒಟ್ಟು ಪ್ರದೇಶವನ್ನೆಲ್ಲ ಹೊಸದಾಗಿ ನವಾಬ ಬಹಾದೂರಖಾನನು ತೆಗೆದುಕೊಂಡಿದ್ದಾನೆ. ಇವುಗಳನ್ನು ಮತ್ತು ಎಲ್ಲವುಗಳನ್ನು ಮೊದಲಿನಂತೆ ಈ ಸೇವಕನ ಅಂದರೆ ನನ್ನ ವಶದಲ್ಲಿ ಕೊಡಬೇಕು.

೪. ಬಾದಶಾಹೀ ಸೈನ್ಯ, ರಾಜಕುಮಾರನ ಕಡೆಯ ಸೈನ್ಯ, ಅಮೀರರು ಮತ್ತು ವಜೀರ ಜನರ ಕಡೆಯ ಸೈನ್ಯಗಳ ಠಾಣೆಗಳನ್ನು ನನ್ನ ಪ್ರದೇಶಗಳಲ್ಲಿ ಹಾಕಿ ಬಹಳ ಸಂಕಟಗಳನ್ನು ಎಬ್ಬಿಸಿ ನಿಲ್ಲಿಸಿದ್ದಾರೆ. ಆ ಎಲ್ಲ ಠಾಣೆಗಳನ್ನು ಅಲ್ಲಿಂದ ಎತ್ತಬೇಕು. ಅದರಿಂದ ಎಲ್ಲ ನಗರ ಮತ್ತು ಊರೂರುಗಳಲ್ಲಿ ಇರುವ ನಮ್ಮ ಜನರು ಸುಖದಿಂದ ಸಂಸಾರ ಮಾಡುತ್ತಾರೆ.

೫. ನನ್ನ ಪ್ರದೇಶಗಳಲ್ಲಿ ವಸೂಲಿಯಾದ ಹಣ ತಮ್ಮ ರಾಜ್ಯದ ಖರ್ಚಿಗೆ ಆಗಲೇ ಹೋಗಿದೆ. ಆ ಹಣವನ್ನು, ನನ್ನದು ನನಗೆ ಕೊಡಿಸಬೇಕು. ಅದು ಬಂದರೆ ಸಿಪಾಯಿ ವಗೈರೆ ಜನರಿಗೆ ಕೊಟ್ಟು ಛಿನಾಲ ಹಿಂದುವಾದ ಸಂಭಾಜಿಯ ಪಾರುಪತ್ಯವನ್ನು ಮಾಡಿಸುವೆನು.

೬. ಬಾದಶಾಹಿ ಸೈನ್ಯ, ರಾಜಕುಮಾರನ ಕಡೆಯ ಸೈನ್ಯ ಅಮೀರರು ಮತ್ತು ಮಂತ್ರಿಗಳ ಕಡೆಯ ಸೈನ್ಯವು ಪುಣೆ ಮತ್ತು ಚಾಕಣದ ಮಾರ್ಗದಿಂದ ಶತ್ರುವಿನ ಮೇಲೆ ಏರಿ ಹೋಗಬೇಕು. ಅವರನ್ನು ಲೂಟಿ ಮಾಡಬೇಕು. ನನ್ನ ಕಡೆಯ ಸೈನ್ಯವು ಮಿರಜ ಮತ್ತು ಗದಗ, ಲಕ್ಷ್ಮೇಶ್ವರಗಳ ಮಾರ್ಗದಿಂದ ಹೋಗಿ ಶತ್ರುವನ್ನು ನಾಶಪಡಿಸುತ್ತದೆ.

೭. ನನ್ನ ಕಡೆಯಿಂದ ತಮ್ಮ ಸೈನ್ಯಕ್ಕೆ ಯಾವಾಗ ಸಹಾಯ ಸಾಧ್ಯವಾಗುತ್ತದೆಯೋ ಆಗೆಲ್ಲ ನಾನು ತಮ್ಮ ಕೃಪೆಗೆ ಪಾತ್ರನಾಗುವೆನು.

೮. ನನ್ನ ಇಲಾಖೆಯಲ್ಲಿಯ ಪ್ರದೇಶಗಳು ಹಿಂದುಶತ್ರುವಾದ ಸಂಭಾಜಿಯ ಕೈಗೆ ಹೋಗಿವೆ. ಅವುಗಳನ್ನು ತಮ್ಮ ಹಾಗೂ ರಾಜಕುಮಾರನ ಸೈನ್ಯದ ಪರಾಕ್ರಮದಿಂದ ಶತ್ರುವಿನ ಕೈಯಿಂದ ಎಷ್ಟು ಸಾಧ್ಯವೋ ಅಷ್ಟನ್ನು ಬಿಡಿಸಿ. ನನ್ನದನ್ನು ನನ್ನ ಕಡೆಗೆ ಕೊಡಿಸುವ ಕೃಪೆ ಮಾಡಬೇಕು.

೯. ಒಂದು ವೇಳೆ ಬೇಮಾನ್ ಹಿಂದು, ಅಂದರೆ ಸಂಭಾಜಿಯು ತಮಗೆ ಶರಣು ಬಂದರೆ, ಮತ್ತು ತಮ್ಮ ಸೇವಕತನವನ್ನು ಧಾರಣ ಮಾಡಿದರೆ, ಒಪ್ಪಂದ ಮಾಡಿಕೊಳ್ಳುತ್ತೀರಿ. ಆದ್ದರಿಂದ ನನ್ನ ವಿನಂತಿ ಏನೆಂದರೆ, ಮೊದಲು ನನ್ನ ಪ್ರದೇಶಗಳನ್ನು ಆತನ ಕಡೆಯಿಂದ ತೆಗೆದುಕೊಂಡು ನನ್ನ ಕಡೆಗೆ ಕೊಡಿಸಿ ಅನಂತರ ಸಂಭಾಜಿಯೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕು.

೧೦. ಛಿನಾಲ ಹಿಂದುವಾದ, ಸಂಭಾಜಿಯ ಪಾರುಪತ್ಯವನ್ನು ಮಾಡುವ ಕೆಲಸವಾದನಂತರ, ಬಾದಶಾಹಿ ಸೈನ್ಯದಿಂದ, ರಾಜಕುಮಾರನ ಮತ್ತು ಅಮೀರ ಜನರ ಸೈನ್ಯದಂದು ನನ್ನ ಪ್ರದೇಶದಲ್ಲಿ ಯಾವುದೇ ಪ್ರಕಾರದ ಗದ್ದಲ, ಯುದ್ಧವನ್ನು ಮಾಡಬಾರದು.

ಔರಂಗಜೇಬ ಬಾದಶಹನ ಆಜ್ಞಾಪತ್ರಕ್ಕೆ ಉತ್ತರವನ್ನು ಕೊಡುವುದಕ್ಕಾಗಿ ಸಿಕಂದರ ಆದಿಲಶಹ ಬಾದಶಹನು ಹತ್ತು ಕಲಮುಗಳ ವಿನಂತಿ ಪತ್ರವನ್ನು ಬರೆದನು. ಆ ವಿನಂತಿ ಪತ್ರದ ವಿಷಯ ಇಲ್ಲಿಗೆ ಸಮಾಪ್ತವಾಯಿತು.

ದಿನಾಂಕ ೧೬ರಂದು (೨೨ ಮೇ ೧೬೮೪) ಸಯ್ಯದ ಮಖದೂಮ ಮತ್ತು ಪಾಮನಾಯಕ ಇವರುಗಳ ಮಸಲತ್ತಿನ ಕೆಲಸ ಶಾಹ ಇಬ್ರಾಹಿಮನ ವಶವಾಯಿತು. ದಿನಾಂಕ ೨೬ (೧ ಜೂನ್ ೧೬೮೪) ರಂದು ರಾಜಕುಮಾರ ಶಾಹ ಆಲಮ ಬಹಾದ್ದೂರನು ಕೊಂಕಣದಿಂದ ಹೊರಟು, ಬೇದರಿಯಿಂದ ಕೂಚಮಾಡಿ, ತಿಕೋಟಾದ ಮಾರ್ಗದಿಂದ ಹುಜೂರರ ಹತ್ತಿರ ಬರಲು ಆರಂಭಿಸಿತು. ಅಹಮದನಗರದಲ್ಲಿ

ತಂದೆಯವರಾದ ಔರಂಗಜೇಬ ಬಾದಶಹರ ಸೇವೆಯಲ್ಲಿ ಹಾಜರಾಗಿ ಶ್ರೇಷ್ಠತೆಯನ್ನು ಪಡೆದನು. ಅದೇ ದಿನಗಳಲ್ಲಿ ಔರಂಗಜೇಬ ಬಾದಶಹ ಬಾಹ್ಯದಲ್ಲಿ ಸಿಕಂದರ ಬಾದಶಹನೊಂದಿಗೆ ಮಿತ್ರಭಾವವನ್ನು ತೋರಿಸಲು ಕಾರಣಗಳಿದ್ದುವು. ಈ ಕಾರಣಗಳಿಂದಾಗಿ ಆಜ್ಞಾಪತ್ರದಲ್ಲಿ ಬರೆದ ಆದೇಶದ ಕಲಮುಗಳಲ್ಲಿ ಒಂದು ಕಲಮು ಕೂಡ ಆದಿಲಶಹನಿಂದ ಈಡೇರಿಸುವುದಾಗಿರಲಿಲ್ಲ. ಆಹಾರ ಸಾಮಗ್ರಿಗಳೂ ಬಂದು ಮುಟ್ಟಲಿಲ್ಲ. ಸಹಾಯಕ್ಕೆಂದು ಸೈನ್ಯವೂ ಬರಲಿಲ್ಲ. ಆಗ ಇದರಲ್ಲಿ ಏನಾದರೂ ಕುಯುಕ್ತಿ ಇರಬಹುದೆಂದು ತಿಳಿದು ಔರಂಗಜೇಬ ಬಾದಶಹನು ದಿನದಿಂದ ದಿನಕ್ಕೆ ತೊಂದರೆಗೆ ಒಳಗಾಗಿ ಅಧಿಕ ವಿರಸಕ್ಕೆ ಕಾರಣವಾಯಿತು. ಶತ್ರುತ್ವ ಮತ್ತು ಹಗೆತನವು ಅಧಿಕಾಧಿಕ ವೃದ್ಧಿಯಾಯಿತು. ಆದಿಲಶಹನ ಸಖ್ಯ ಸಂಭಾಜಿಯೊಂದಿಗೆ ಮತ್ತು ಆತನ ಪಕ್ಷಪಾತಿಯಾಗಿದ್ದಾನೆ ಎಂಬ ಸಂಶಯ ಔರಂಗಜೇಬ ಬಾದಶಹನಿಗೆ ಖಾತ್ರಿಯಾಯಿತು. ಆಗ ಔರಂಗಜೇಬ ಬಾದಶಹನು ಅತ್ಯಂತ ಸಿಟ್ಟಾಗಿ ಆದಿಲಶಹನ ಪ್ರದೇಶಗಳಲ್ಲಿ ತನ್ನ ಠಾಣೆಗಳನ್ನು ಹೂಡಲೂ ಆಜ್ಞಾಪಿಸಿದನು.[೧] ಅದರಂತೆ ಠಾಣೆಗಳನ್ನು ಸ್ಥಾಪಿಸ ಹತ್ತಿದನು.

ಸಯ್ಯದ ಮಖದೂಮನ ಕಡೆಯ ಜನರಿಗೆ ಗೋವೆಯ ಕೋಟೆಯ ಮೇಲೆ ಜಾಲಿಹಾಳದ ಹತ್ತಿರ ಠಾಣೆಯನ್ನು ಹಾಕಲು ನೇಮಿಸಲಾಯಿತು. ಯುದ್ಧ ಸೈನ್ಯ ಸಹಿತ ದಿಲ್ಲಿಯ ದಂಡಿನ ಜನರೊಂದಿಗೆ ಯುದ್ಧ ಪ್ರಾರಂಭವಾಯಿತು. ಆ ಯುದ್ಧದಲ್ಲಿ ಯುಸುಫಶಾಹನು ಕೊಲೆಯಾದನು. ಬಹಳ ಜನರು ಸತ್ತರಲ್ಲದೆ ಗಾಯಗೊಂಡರು. ಸಯ್ಯದ ಮಖದೂಮನ ಕಡೆಯ ಜನರಿಗೆ ಸೋಲಾಯಿತು.

ದಿನಾಂಕ ೧೫, ರಜಬ ತಿಂಗಳಲ್ಲಿ (೧೯ ಜೂನ ೧೬೮೪) ಬಾದಶಾಹಿ ಮಹಾಲ ಕಡೆಯ ಮತ್ತು ಬಾದಶಾಹಪುರ ಪೇಠ ಮತ್ತು ಜೋರಾಪುರ ದಲ್ಲಿಯ ಸರಹದ್ದಿನ ಮೇಲಿನ ಉಸ್ತುವಾರಿ ಹಾಗೂ ಮುಖ್ತ್ಯಾರಿಯ ಕೆಲಸವು (ಸರಖೇಲಿ) ಚಿಂತೋ ಚಿಮಣಾಜಿಯ ಹತ್ತಿರ ಬಂದಿತು. ದಿನಾಂಕ ೨೬, ಅದೇ ತಿಂಗಳು (೩ ಜುಲೈ ೧೬೮೪) ಆದಿಲಶಾಹಿ ಬಾದಶಹನು ಸ್ವಾರಿಯೊಂದಿಗೆ ಶಾಹಪುರದ ವರೆಗೆ ಹೋಗಿ ರಾಜಕುಮಾರ ಆಜಮನ ಕಡೆಯಿಂದ ಬಂದ ವಸ್ತ್ರಗಳನ್ನು ತೆಗೆದುಕೊಂಡನು. ದಿನಾಂಕ ೨೭, ಸಾಬಾನ ತಿಂಗಳಲ್ಲಿ (೩೧, ಜುಲೈ ೧೬೮೪) ಶಾಹ ಹಜರತನಿಗೆ ಚರ್ಚೆ ಮಾಡಲು ಮತ್ತು ವಿಚಾರಿಸಿಕೊಂಡು ಬರಲು ಹೈದರಾಬಾದ ಕಡೆಗೆ ಕಳಿಸಲಾಯಿತು. ದಿನಾಂಕ ೨ ರಮಜಾನ ದಂದು ( ೪ ಆಗಸ್ಟ ೧೬೮೪) ಶಾಹ ಹಜರತ ಕಾದಿರಿಯನ್ನು ಚರ್ಚೆ ಮಾಡಲು, ಸಲಹೆ ಕೇಳಲು ಮಾಸೂದಖಾನನ ಕಡೆಗೆ ಆದೋನಿಗೆ ಕಳಿಸಲಾಯಿತು.

ದಿನಾಂಕ ೫, ರಮಜಾನ ದಂದು (೭ ಆಗಸ್ಟ್ ೧೬೮೪) ನವಾಬ ಅಬ್ದುಲ್ ರಾವುಫಖಾನನು ರಾಜಕುಮಾರ ಆಜಮಶಾಹನ ಬೆಂಬಲಕ್ಕಾಗಿ ತನ್ನ ಹವೇಲಿಯಿಂದ ಹೊರಟು, ಅಫಜಲಖಾನನ ಕೆರೆಯಮೇಲೆ ಬಂದು ಇಳಿದನು.

ದಿನಾಂಕ ೨೦, ರಮಜಾನದಂದು (೨೨ ಆಗಸ್ಟ್ ೧೬೮೪) ಸಿಕಂದರ ಬಾದಶಹನು ಮಲಿಕ ಗುಲ್‌ಜಾರನ ಮನೆಗೆ ಹೋಗಿ, ಅವನಿಗೆ ಬಹಳ ಭರವಸೆ ಸಮಾಧಾನಗಳನ್ನು ಕೊಟ್ಟು, ಆಸಾರ ಷರೀಫ (ಆಸಾರ ಮಹಲ) ದವರೆಗೆ ಕರೆದುಕೊಂಡು ಬಂದು, ಅವನಿಗೆ ಯಾವಾಗಲೂ ಆಸ್ಥಾನಕ್ಕೆ (ದರಬಾರಿಗೆ) ಬರಲು ಅನುಮತಿಯನ್ನು ನೀಡಿದನು. ಅದೇ ದಿನಗಳಲ್ಲಿ ರಾಜಕುಮಾರ ಮಹಮ್ಮದ ಆಜಮನ ಕಡೆಯಿಂದ

---

೧. ಶಕೆ ೧೬೦೬ ಜೇಷ್ಠಕೃಂತ ಮೊದಲು (ಮೇ ೧೬೮೪) ವಿಜಾಪುರಕರನು ಮೊಗಲರೊಂದಿಗೆ ವಿರಸ ಕಟ್ಟಿಕೊಂಡನು ಜೇಧೆ ಶಕಾ ಪುಟ ೩೩.

ನಿಶಾನೆಯು (ಧ್ವಜ) ಬಂದಿತು. ಅದನ್ನು ಸ್ವೀಕರಿಸಲು ಸಿಕಂದರ ಬಾದಶಹನು ಶಾಹಪೂರದವರೆಗೆ ಹೋಗಿ ತೆಗೆದು ಕೊಂಡನು.

ಆಕಾ ಖುಸ್ರೋನು ವಜೀರಿಯ ಕೆಲಸವನ್ನು ಏಳು ತಿಂಗಳಷ್ಟೆ ಮಾಡಿ, ದಿನಾಂಕ ೧೩, ಜಿಲ್ಕಾದದಂದು (೧೩, ಅಕ್ಟೋಬರ ೧೬೮೪) ಮರಣ ಹೊಂದಿದನು.

ದಿನಾಂಕ ೨೬, ಜಿಲ್ಕಾದದಂದು (೨೬, ಅಕ್ಟೋಬರ ೧೬೮೪) ಸಿಕಂದರ ಬಾದಶಹನಿಗೆ ಕನ್ಯೆ ಹುಟ್ಟಿತು.

ದಿನಾಂಕ ೧, ತಿಂಗಳು ಜಿಲ್ಹೇಜದಂದು (೩೦ ಅಕ್ಟೋಬರ ೧೬೮೪) ಸುಲ್ತಾನ ಮಹಮ್ಮದ ರಾಜುಕಮಾರನು ಹುಟ್ಟಿದನು.

ಅದೇ ದಿನಗಳಲ್ಲಿ ರಾಜ್ಯದ ವ್ಯವಸ್ಥೆ ಪೂರ್ತಿ ಹದಗೆಟ್ಟಿತು. ರಾಜ್ಯದ ಒಟ್ಟಾರೆ ಕೆಲಸಗಳು ಕೆಟ್ಟಿದ್ದರಿಂದ ದರಬಾರದಲ್ಲಿಯ ಕಾರಭಾರಿ ಮಂಡಳಿಗೆ, ಇನ್ನು ಮುಂದೆ ಒಳ್ಳೆಯ ದಿನಗಳು ಬರುವುದಿಲ್ಲವೆಂದು ನಿರಾಶೆಯ ಛಾಯೆ ಕಾಣತೊಡಗಿತು. ಮೊಗಲರು, ಅಂದರೆ ಔರಂಗಜೇಬ ಬಾದಶಹನು ಮೋಸದ ವಂಚನೆಯ ಜಾಲವನ್ನು ಬೀಸಿದನು. ಬಲೆ ಬೀಸಿ ಹಿಡಿಯುವ ಪಕ್ಷಿಗಳಂತೆ ಪ್ರತಿಯೊಬ್ಬರನ್ನು ತನ್ನ ಕಡೆಗೆ ಮಾಡಿಕೊಳ್ಳುವ ವಿಚಾರ ನಡೆಸಿದನು. ಪಾಮನಾಯಕನು ಕೂಡ, ಹಸಿದ ಪಕ್ಷಿ ಕಾಳಿನ ಆಶೆಗೆ ಬಲೆಯಲ್ಲಿ ಬೀಳುವಂತೆ, ಔರಂಗಜೇಬ ಬಾದಶಹನ ಸೇವೆಯಲ್ಲಿ ಇರಲು ಸಿದ್ಧನಾದನು. ಅವನ ಕೃಪೆಗೆ ಪಾತ್ರನಾಗಿ, ಬಹಳ ಸತ್ಕಾರ ಪಡೆದು, 'ಪಾಚಹಜಾರೀ' ಎಂಬ ಪದವಿಯನ್ನು ಪಡೆದುಕೊಂಡನು.

ದಿನಾಂಕ ೧೨, ಮೋಹರಮ್‌ದಂದು ಸನ್ ೧೦೯೬ (೯ ಡಿಶೆಂಬರ ೧೬೮೪) ಶಾಹ ಹಜರತನು ಹೈದರಾಬಾದಿನಿಂದ ತಿರುಗಿ ಬಂದನು.

ದಿನಾಂಕ ೬, ತಿಂಗಳು ಸಫರ (೨ ಜಾನೇವರಿ ೧೬೮೫) ದಂದು ಷರ್ಜಾಖಾನನು ಜಿಲ್ಹೇದಾರಿಯ, ರಾಜ್ಯದ ವ್ಯವಸ್ಥೆಯ ಕೆಲಸದ ಮೇಲೆ ವಿಜಾಪುರಕ್ಕೆ ತಿರುಗಿ ಬಂದನು.

ದಿನಾಂಕ ೧೩, (೯ ಜನವರಿ ೧೬೮೫)ರಂದು ಸಲೀಮಖಾನನು ನೀರೋಪ ಪಡೆದು ತೊರಗಲ್ಲಿಗೆ ಹೋದನು.

ದಿನಾಂಕ ೧೮ (೧೪ ಜನವರಿ ೧೬೮೫) ರಂದು ಶಾಹ ಹಜರತ ಕಾದಿರಿಯು ಆದೋನಿಯಿಂದ ತಿರುಗಿ ಬಂದನು. ಮೊದಲಿನಂತೆ ಕುತುಬಶಾಹನೊಂದಿಗೆ ಸ್ನೇಹವಿಟ್ಟುಕೊಂಡು, ನಡೆಯಬೇಕೆಂದು ಮಾಸೂದಖಾನನಿಂದ ಬಹಳ ಆಸ್ಥಾಪೂರ್ವಕವಾದ ಮತ್ತು ಅತಿ ಉತ್ತಮವಾದ ಸಂದೇಶವನ್ನು ಶಾಹ ಹಜರತನು ತಂದಿದ್ದನು.

ದಿನಾಂಕ ೨೦ ರಂದು (೧೬ ಜನವರಿ ೧೬೮೫) ಮಾಸೂದಖಾನನ ಮಗನು ಕೂಡ ಈ ವಿಷಯದಲ್ಲಿ ನಿರ್ಧಾರ ತೆಗೆದುಕೊಳ್ಳಲು ಆದೋನಿಯಿಂದ ಬಂದನು.

ಅದೇ ದಿನಗಳಲ್ಲಿ ರಾಜಕುಮಾರ ಆಜಮನ ಕಡೆಯಿಂದ ಸೈನ್ಯವು ಆದಿಲಶಹನ ಪ್ರದೇಶದಲ್ಲಿ ಠಾಣೆಯನ್ನು ಹಾಕಲು ಹೊರಟು, ತೊರಗಲ್ಲದ ಹತ್ತಿರ ಬಂದು ಮುಟ್ಟಿತು. ಆಗ ಷರ್ಜಾಖಾನ ಮತ್ತು

ಅಬ್ದುಲ ರಾವುಫಖಾನ ಉಭಯತರು ತೊರಗಲ್ಲಕ್ಕೆ ಸಹಾಯ ನೀಡಲು ಮತ್ತು ಕುಮ್ಮಕ್ಕು ಕೊಡಲು ಹೊರಟು ಆಜಮಶಾಹನ ಕಡೆಯ ಸೈನ್ಯದೊಂದಿಗೆ ಯುದ್ಧಮಾಡಲು ಸಿದ್ಧರಾದರು. ತಮ್ಮ ಸೈನ್ಯದ ಸಾಲುಗಳನ್ನು ಕಟ್ಟಿ ನಿಲ್ಲಿಸಿದನು.[2] ಈ ಕಾರಣದಿಂದ ಔರಂಗಜೇಬ ಬಾದಶಹನು ಅತ್ಯಂತ ಸಿಟ್ಟಿಗೆದ್ದು ಹಲ್ಲೆ ಮಾಡಲು ಮತ್ತು ಮೋರ್ಚಾವನ್ನು ಕಾಯಂ ತರೀಕಾಗಿ ಇಡಲು ನಿರ್ಧರಿಸಿದನು. ತನ್ನ ಸೈನ್ಯವು ಇರಲು, ವಿಜಾಪುರದ ವರೆಗೆ ಗುಹಾಂತರ್ಗತ ದಾರಿಯನ್ನು ಅಗೆಯಲು, ಅದರ ಸಿದ್ಧತೆಯಲ್ಲಿ ಮಗ್ನನಾದನು.

ಅಬ್ದುಲ ಹಸನ ಕುತುಬ ಶಾಹನಿಗೆ ಸಿಕಂದರ ಬಾದಶಹನೊಂದಿಗಿನ ಸಖ್ಯತೆಯನ್ನು ಸಂಪೂರ್ಣ ಬಿಟ್ಟು ಬಿಡಲು ಮತ್ತು ಆತನಿಗೆ ಯಾವ ತರದ ಸಹಾಯ ನೀಡದಿರಲು ಬಹಳ ಬೆದರಿಕೆಯ ಆಜ್ಞಾಪತ್ರವನ್ನು ಕಳಿಸಲಾಯಿತು. ಕುತುಬಾಶಾಹ ಮತ್ತು ಆದಿಲಶಾಹರು ಪರಸ್ಪರರು ಸಹಾಯ ಮಾಡುವ ಪದ್ಧತಿ ಮೊದಲಿನಿಂದಲೂ ಇತ್ತು. ಅದಕ್ಕೆ ಔರಂಗಜೇಬ ಬಾದಶಹನು ಅಡ್ಡಿ ಮಾಡಿದನು. ವಿಜಾಪುರದ ಜನರಿಗೆ ಸಹಾಯವಾಗಲೀ, ಬೆಂಬಲವಾಗಲೀ ಮಾಡುವ ವಿಷಯದಲ್ಲಿ ಬಹಳ ಬೆದರಿಸಿ ತಾಕೀದು ಮಾಡಿದನು. ಆ ತಾರೀಖಿನಿಂದ ಔರಂಗಜೇಬ ಬಾದಶಹನ ಕಡೆಯಿಂದ ಆದಿಲಶಹನಿಗೆ ಹೋಗ-ಬರುವ ಪತ್ರ ವ್ಯವಹಾರ ಆಜ್ಞೆ ಆದೇಶಗಳು, ಸೂಚನೆಗಳು, ಗುಪ್ತಚಾರಣೆ, ನಿರೋಪಗಳು ಕೂಡ ನಿಂತವು.

ಔರಂಗಜೇಬ ಬಾದಶಹ ಮತ್ತು ಆದಿಲಶಹ ಉಭಯತರಲ್ಲಿ ಬಹಳ ವಿರಸ ಮತ್ತು ವೈರತ್ವಗಳು, ಉಂಟಾದುವು. ಇಂದಿನವರೆಗೆ ಮುಖದ ಮೇಲೆಯೇ ಮಲಗಿದ ಮೋಸ, ವಂಚನೆ, ಒಳಸಂಚುಗಳು ಈಗ ಜಾಗ್ರತವಾಗುವ ಪ್ರಾತಃಕಾಲವು ಸನ್ನಿಹಿತವಾಯಿತು. ಯುದ್ಧದ ದಂಗೆಗಳಿಗೆ ಸಂತೆಯ ಸಂದರ್ಭಗಳು ಬಂದುವು.

ದಿನಾಂಕ ೨೭, ರಬೀಲಾವಲದಂದು (೨೨, ಫೆಬ್ರವರಿ ೧೬೮೫) ಸಂಭಾಜಿಯ ದಿವಾಣನಾದ ಮೇಲಗಿರಿ ಪಂಡಿತನು ರಾಹೇರದಿಂದ ಹೊರಟು ಜೋಗಿಮಠದ ಹತ್ತಿರ ಇಳಿದುಕೊಂಡನು. ದಿನಾಂಕ ೧, ರಬಿಲಾಖರ (೨೫, ಫೆಬ್ರವರಿ ೧೬೮೫) ರಂದು ಸಿಕಂದರ ಬಾದಶಹನು ಜೋರಾಪುರದ ಬುರುಜಿನ ಮೇಲೆ ಬಂದು ಕುಳಿತನು. ಸಂಭಾಜಿ ಕಡೆಯ ಸರದಾರ ಜನರು ಬಾದಶಹನಿಗೆ ಮುಜುರೆ ಸಲ್ಲಿಸಲು ಸಿದ್ಧರಾಗಿ ಬಂದರು. ಎಲ್ಲರೂ ಮುಜುರೆ ಮಾಡಿದರು. ಸಂಭಾಜಿಕಡೆಯ ಮೇಲಗಿರಿ ಪಂಡಿತ ದಿವಾಣನಿಗೆ ಬಾದಶಹನು 'ಮೊತೆಮದಾರಮ' ಎಂಬ ಬಿರುದನ್ನು ಕೊಟ್ಟನು.[3]

ದಿನಾಂಕ ೩ ಜಮಾದಿಲಾವಲದಂದು ರವಿವಾರ, ಸನ್ ೧೦೯೬, (೨೯ ಮಾರ್ಚ್ ೧೬೮೫) ಮೊಗಲರ ಕಡೆಯ ವಕೀಲ ಖಾಜಾ ಅಬ್ದುಲ ರಹೀಮನೊಂದಿಗೆ ಯುದ್ಧ ಪ್ರಾರಂಭವಾಯಿತು.[4] ಮತ್ತು ಆತನ ಸಹಾಯಕ್ಕೆ ಸೈನ್ಯ ಬಂದಿತು.

---

2. (April 1685) Sharja Bijapuri boldby advanced towards the army of Muhammad Azam shah on the bank of Tungabhadra river. After a server fight and losing many men fled MiA p -156.

೩. ಶಕೆ ೧೬೦೭ ಆಷಾಡ ಮಾಸದಲ್ಲಿ (ಜೂನ ಜುಲೈ ೧೬೮೫) ಸಂಭಾಜಿ ರಾಜೆಯು ವಿಜಾಪುರದ ಸಹಾಯಕ್ಕೆ ಒಪ್ಪಿಗೆ ಕಳಿಸಿದನು. ಆತ ಹೋಗಿ ಪನ್ಹಾಳಾದಲ್ಲಿದ್ದು ಸೈನ್ಯ ಕಳಿಸಿದನು. ಜೇಧೆ ಪು ೩೩.

೪. ಶಕೆ ೧೬೦೭ (ಚೈತ್ರ?) ಮಾರ್ಚ ೧೬೮೫) ರಹಿಮಖಾನ, ಬಾಬೂಖಾನ, ರಣಮಸ್ತಖಾನ ಬಂದು ವಿಜಾಪುರಕ್ಕೆ ಮುತ್ತಿಗೆ ಹಾಕಿದರು. ಜೇಧೆ ಪು - ೩೩.

ದಿನಾಂಕ ೪ ರಂದು (೩೦ ಮಾರ್ಚ ೧೬೮೫) ನವಾಬ ಬಹಾದ್ದೂರಖಾನನ ಮಗ ವಿಜಾಪುರದ ಮೇಲೆ ಹಲ್ಲೆ ಮಾಡಲು ದೌಲತಪುರದ ಕಡೆಗೆ, ರಾಜಮಹಮ್ಮದನ 'ತಕ್ಕೆ'ಗೆ ಬಂದು ಕೋಟೆಯ ಮೇಲೆ ಹಲ್ಲೆ ಮಾಡಿ ಮತ್ತೆ ತಿರುಗಿ ಹೋದನು.

ದಿನಾಂಕ ೭, (೨ ಎಪ್ರಿಲ ೧೬೮೫) ರಂದು, ರುಹುಲ್ಲಾಖಾನ ಬಕ್ಷಿಯು ಶಾಹಪುರಕ್ಕೆ ಬಂದು ಮುಟ್ಟಿದನು.[೫] ವಿಜಾಪುರದ ಕೋಟೆಯ ಮೇಲೆ ಯುದ್ಧ ಮತ್ತು ಹಲ್ಲೆಮಾಡಿದನು.

ದಿನಾಂಕ ೨೧, ಜಮಾದಿಲಾಖರ ಶುಕ್ರವಾರದಂದು (೧೫ ಮೇ ೧೬೮೫) ಖಾನಜಹಾನ್ ಬಹಾದ್ದೂರನು ರಂಗಾರಿಯ ತಾಲಾಬ ಮೇಲೆ ಬಂದು ಇಳಿದನು.[೬]

ಅದೇ ದಿನಗಳಲ್ಲಿ ಸಿಕಂದರ ಬಾದಶಹನು ತನ್ನ ಕಡೆಯ ವಿಶ್ವಾಸಿಕನೊಬ್ಬನನ್ನು ಆದೋನಿಗೆ ಕಳಿಸಿ ಮಾಸೂದಖಾನನನ್ನು ಅತ್ಯಂತ ಆಸ್ಥೆಯಿಂದ ತನ್ನಡೆಗೆ ಕರೆ ಕಳಿಸಿದನು. 'ಈ ಸಂಕಟದ ಸಮಯದಲ್ಲಿ ಈ ರಾಜ್ಯ ಕೊನೆಯವರೆಗೆ ಉಳಿಯಲು ನೀವು ಸಹಾಯ ಮಾಡಬೇಕು ಬಲಕೊಡಬೇಕು' ಎಂಬುದಾಗಿ ನಿರೋಪ ಹೇಳಿ ಕಳಿಸಿದನು. ಅದರಂತೆ ಈ ಕೆಳಗಿನ ಆಜ್ಞಾಪತ್ರವನ್ನು ಮಾಸೂದಖಾನನಿಗೆ ಕಳಿಸಿದನು.

### ೬೭. *ಸಿಕಂದರ ಬಾದಶಹನು ಸಿದ್ದಿ ಮಾಸೂದಖಾನನಿಗೆ ಬರೆದು ಕಳಿಸಿದ ಆಜ್ಞಾ ಪತ್ರದ ನಕಲು :*

"ನೀವು ಸಂಭಾವಿತರು, ವಿಶ್ವಾಸಿಕರು ಮತ್ತು ಮಿತ್ರ ಸಮುದಾಯದಲ್ಲಿಯ ಮುಖ್ಯರ ಸರದಾರರಾಗಿದ್ದೀರಿ. ಹೈದರಾಬಾದದ ಪ್ರಕರಣದಲ್ಲಿ ನೀವು ಹೇಳಿ ಕಳಿಸಿದ ಸೂಕ್ಷ್ಮ ವಿಷಯಗಳನ್ನೇ ಶಾಹ ಹಜರತ ಕಾದಿರಿ ಅವರು ಹೈದರಾಬಾದಿಗೆ ಹೋಗಿ ಜಾಹೀರುಮಾಡಿ ಬಂದಿದ್ದಾರೆ. ಅದು ಬಹಳ ಒಪ್ಪಿಗೆಯಾಗಿದೆ. ಆದ್ದರಿಂದ ನೀವು ಸತ್ಯವಾಗಿ ತಿಳಿಯಬೇಕು. ಅದು ಏನೆಂದರೆ, ಶಾಹ ಹಜರತ ಅವರು ಹೇಗೆ ಬರೆದು ಕಳಿಸಿದ್ದರೋ ಹಾಗೆಯೇ ಆ ಎಲ್ಲ ವಿಷಯಗಳು ಅವರು ಸಿದ್ಧಿಗೆ ತರಬೇಕಾದರೆ ಆ ಕೆಲಸದ ಎಲ್ಲ ಭರವಸೆಗಳು ಸದಾಕಾಲ ಕಲ್ಯಾಣವನ್ನೇ ಇಚ್ಛಿಸುವ ಮತ್ತು ಪೂರ್ಣ ಸಾಮರ್ಥ್ಯವಾನರಾದ ನಿಮ್ಮನ್ನು ಅವಲಂಬಿಸಿವೆ. ಆದ್ದರಿಂದ ನಿಮ್ಮ ಮೇಲೆ ಭಾರ ಹಾಕಿದೆ. ನೀವು ಅದಕ್ಕಿಂತ ಅಧಿಕವಾಗಿ ಆ ಕೆಲಸಗಳ ಮುಖ್ತಾರಿಯನ್ನು ನಿಮ್ಮ ಕೈಯಲ್ಲಿ ತೆಗೆದುಕೊಂಡು ಅವುಗಳನ್ನು ಕೊನೆಗಾಣಿಸಬೇಕು. ಈ ವಿಷಯವಾಗಿ ಶಾಹ ಹಜರತರು ಏನು ಬರೆಯುತ್ತಾರೋ ಅದೇ ನಮ್ಮ ಆಜ್ಞೆ ಮತ್ತು ಸಹಿ ಎಂದು ತಿಳಿದು ಆ ಕೆಲಸವನ್ನು ಅತಿ ಜರೂರಿ ಎಂದು ಭಾವಿಸಬೇಕು.

ಈ ದಿನಗಳಲ್ಲಿ ಬಹಾದ್ದೂರಖಾನನ ಮಗ ಮತ್ತು ರುಹುಲ್ಲಾಖಾನ ಮುಂತಾದವರು ಖೊಟ್ಟಿ

5. On Monday, the 16th March 1685/20th RAbi, So Ruhullah Khan was sent to punish the enemy near Bijapur MiA p. 155

6. The emperor learnt that on Friday, 27th March 1685/2nd Jamas the siege of Bijapore had begun. Khan Jahan Bahadur Zafar jung had begun to dig entrenchments from the side of Zuhrapur at a distance of half a kos, and Ruhulla Khan and Qasim Khan at a distance of a quarter kos from the fort walls. MiA p.-156.

ಸಂಕಲ್ಪ ಮತ್ತು ಕೆಟ್ಟ ಇರಾದೆಯನ್ನು ಮನದಲ್ಲಿ ತಂದು ವಿಜಾಪುರದ ಹತ್ತಿರವೆ ಬಂದು ಇಳಿದು ಕೋಟೆಯ ಮೇಲೆ ಹಲ್ಲೆ ಮಾಡಿ ಯುದ್ಧಮಾಡುತ್ತಿದ್ದಾರೆ.

ಈ ಸಮಯದಲ್ಲಿ ರಾಜ್ಯದ ಕಲ್ಯಾಣವನ್ನು ಇಚ್ಛಿಸುವ ನೀವು ಆತ್ಮಸಾಕ್ಷಿಯಾಗಿ ಸೇವಕತನವನ್ನು ಜಾಹೀರು ಮಾಡಿ ಹುಟ್ಟಿದ್ದಕ್ಕೆ ಕೀರ್ತಿಯನ್ನು ದೊರಕಿಸಿಕೊಳ್ಳಬೇಕು. ಎಲ್ಲರಿಗೂ ಗೊತ್ತಿರುವ ವಿಷಯವೇನೆಂದರೆ, ಈ ರಾಜ್ಯದ ಸಂರಕ್ಷಣೆ ಮಾಡುವಲ್ಲಿ ನೀವು ಆಧಾರರಾಗಿದ್ದೀರಿ. ಆದ್ದರಿಂದ ಈ ಆಜ್ಞಾಪತ್ರವು ಬಂದು ಮುಟ್ಟುತ್ತಿದ್ದಂತೆ, ನೀವು ಸನ್ನಿಧಿಗೆ ಬರಬೇಕು. ಮತ್ತು ನಿಮಗೆ ಹೇಗೆ ತಿಳಿಯುತ್ತದೆಯೋ ಮತ್ತು ನೀವು ಹೇಗೆ ಮಾಡಲು ಸಾಧ್ಯವಿದೆಯೊ ಹಾಗೆ ಈ ರಾಜ್ಯದ ಸಂರಕ್ಷಣೆಯನ್ನು ಮಾಡಬೇಕು.

ಯಾಕೆಂದರೆ, ಎಲ್ಲ ಕೆಲಸಗಳ ಮುಖ್ತ್ಯಾರಿತನವನ್ನು ನಾವು ನಿಮ್ಮ ಮೇಲೆಯೇ ಹಾಕಿದ್ದೇವೆಂದೂ, ಅದು ಸತ್ಯವೆಂದೂ ತಿಳಿದು ತಕ್ಷಣ ಬಂದು ಮುಟ್ಟಬೇಕು. ಮತ್ತು ರಾಜ್ಯವನ್ನು ಸಂರಕ್ಷಿಸಬೇಕು ಇಲ್ಲವಾದಲ್ಲಿ ನಮ್ಮ ಉತ್ತರದ ವಿಷಯದಲ್ಲಿ ಏನೊಂದೂ ಹೇಳಲಾರೆವು. ಎಲ್ಲ ಸ್ಥಳಗಳ, ಎಲ್ಲ ಮನೆಗಳ ಮತ್ತು ಸಂಪೂರ್ಣ ಸೇವಕ ಜನರ ಸುರಕ್ಷಿತತನವು ಮತ್ತು ಕಲ್ಯಾಣಸಂಬಂಧವು ಈ ರಾಜ್ಯದ ಸುರಕ್ಷಿತತನದ ಕಡೆಗೆಯೇ ಇದೆ. ಅರ್ಥಾತ್ ಈ ರಾಜಧಾನಿಯು ಸುರಕ್ಷಿತವಾಗಿದ್ದರೆ ಅದರಲ್ಲಿ ಎಲ್ಲರ ಕಲ್ಯಾಣವೂ ಇದೆ.ತಿಳಿಯಿರಿ. ದಿನಾಂಕ ೨೪, ಇಪ್ಪತ್ನಾಲ್ಕು ತಿಂಗಳು ಜಮಾದಿಲಾವಲ ಸನ್ ೧೦೯೬ ಹತ್ತುನೂರದಾ ತೊಂಭತ್ತಾರು (೧೬, ಎಪ್ರಿಲ ೧೬೮೫).

## ೬೮. *ವಿಜಾಪುರದ ಮೇಲೆ ಔರಂಗಜೇಬನ ಸವಾರಿ :*

ಔರಂಗಜೇಬ ಬಾದಶಹ ಎಂದರೆ ಆಲಮಗೀರ ಬಾದಶಹನು. ಕಾರಣವೆಂದರೆ, ಆತನ ಜನನ ಹೆಸರು ಔರಂಗಜೇಬ ಎಂಬುದಾಗಿತ್ತು. ಸಿಂಹಾಸನದ ಮೇಲೆ ಕುಳಿತಾಗ ಆಲಮಗೀರ ಬಾದಶಹ ಎಂದು ಹೆಸರಾಯಿತು. ತಾತ್ಪರ್ಯವೆಂದರೆ, ಔರಂಗಜೇಬ ಮತ್ತು ಆಲಮಗೀರ ಈ ಎರಡು ಹೆಸರುಗಳು ಒಬ್ಬನವೇ ಆಗಿವೆ. ಆ ಔರಂಗಜೇಬ ಬಾದಶಹನು ಯಾವಾಗಲೂ ಹಿಂದುಸ್ತಾನದಲ್ಲಿ ಎಂದರೆ ದಿಲ್ಲಿಯಲ್ಲಿ ಇರುತ್ತಿದ್ದನು. ಆದರೆ ವಿಜಾಪುರವನ್ನು ಕೈವಶಮಾಡಿಕೊಳ್ಳುವ ಚಿಂತೆ ಮತ್ತು ವಿಚಾರಗಳಿಂದ ಒಂದು ದಿನ ಕೂಡ ಖಾಲಿ ಇರಲಿಲ್ಲ. ಅಂದರೆ, ಪ್ರತಿ ನಿತ್ಯ ವಿಜಾಪುರವನ್ನು ತೆಗೆದುಕೊಳ್ಳುವ ಮಸಲತ್ತಿನಲ್ಲಿಯೇ ಇರುತ್ತಿದ್ದನು. ರಾಜಕುಮಾರರ ಜೊತೆಗೆ ಸರದಾರರ ಜೊತೆಗೆ ಭಾರೀ ಸೈನ್ಯವನ್ನು ವಿಜಾಪುರದ ಮೇಲೆ ದಾಳಿಮಾಡಲು ನೇಮಿಸುವುದು, ರಾಜ್ಯ ತೆಗೆದುಕೊಳ್ಳುವುದು ಮತ್ತು ಕೋಟೆಯನ್ನು ಕೈವಶ ಮಾಡಿಕೊಳ್ಳುವುದು, ಯುದ್ಧ ಸಾಮಗ್ರಿಗಳನ್ನು ಭಾರೀ ಪ್ರಮಾಣದಲ್ಲಿ ಕಳಿಸುವುದು ನಡದೆ ಇತ್ತು. ವಿಚಾರವಂತರು, ಧೈರ್ಯವಂತರು, ಅದ್ವಿತೀಯ ಮೋಸಗಾರರು ಖೊಟ್ಟಿ ಜನರನ್ನು ನೇಮಿಸುವ ಪ್ರಯತ್ನದಲ್ಲಿ ಕಿಂಚಿತ್ತೂ ಆಲಸ್ಯವನ್ನಾಗಲಿ, ಅಂತರವನ್ನಾಗಲೀ ಮಾಡುತ್ತಿರಲಿಲ್ಲ. ಅಂಥ ಆಲಮಗೀರ ಬಾದಶಹನು ದಕ್ಷಿಣದೇಶಗಳಲ್ಲಿ ತನ್ನ ಚರಣಾರವಿಂದಗಳನ್ನಿಟ್ಟು ಶ್ರೇಷ್ಠತೆಯನ್ನು ಪಡೆದನು. ಅರ್ಥಾತ್ ದಕ್ಷಿಣ ದೇಶಗಳಿಗೆ ಬಂದನು. ಆಗ ಆಲಮಗೀರ ಬಾದಶಹನ ಅನೇಕ ಜನರು ಬುರಾಣಪುರದಲ್ಲಿ, ಮತ್ತನೇಕರು ಹೈದರಾಬಾದಿನಲ್ಲಿ, ಹಲವರು ಔರಂಗಾಬಾದಿನಲ್ಲಿ ಮತ್ತು ಅನೇಕರು ಅಹಮದನಗರದಲ್ಲಿ, ಬಂದು ಇದ್ದು ಹಗಲುರಾತ್ರಿ ಇದೇ ಕೆಲಸದಲ್ಲಿ ಪ್ರಯತ್ನಮಾಡುತ್ತಿದ್ದರು. ಈ ವಿಷಯವಾಗಿಯೇ ವಿಚಾರ

ಮಾಡುತ್ತಿದ್ದರು. ಇಷ್ಟರ ಮಟ್ಟಿನ ಪ್ರಯತ್ನಗಳಿಂದ ಕಾರ್ಯಸಿದ್ಧಿ ಸಾಧ್ಯವಿಲ್ಲವೆಂದು ಆಲಮಗೀರ ಬಾದಶಹನಿಗೆ ತಿಳಿಯುತ್ತಲೇ ತಕ್ಷಣ ಜಮಾದಿಲಾಖರ ತಿಂಗಳಲ್ಲಿ (ಮೇ ೧೬೮೫) ಕೂಚಮಾಡಿ ದಿನಾಂಕ ಒಂದರಂದು ರಜಬ ತಿಂಗಳಲ್ಲಿ (೨೫ ಮೇ, ೧೬೮೫) ಬಾದಶಹನು ಸೋಲಾಪುರದ ತರಫದಲ್ಲಿ ಬಂದು ಇಳಿದನು.[೧]

ಖಾನ ಜಹಾನ ಬಹಾದೂರನು ವಿಜಾಪುರದ ಮೇಲೆ ಹಲ್ಲೆ ಮತ್ತು ಯುದ್ಧವನ್ನು ಮಾಡುತ್ತಲೇ ಇದ್ದನು. ಆಲಮಗೀರ ಬಾದಶಹನ ಸ್ವಾರಿಯು ಸೋಲಾಪುರದ ಹತ್ತಿರ ಬಂದಿದೆ ಎಂಬ ಸುದ್ದಿ ಕೇಳುತ್ತಿದ್ದಂತೆಯೇ ಆತನು ದಿನಾಂಕ ೬, ರಜಬ (೩೦ ಮೇ, ೧೬೮೫) ದಂದು ವಿಜಾಪುರದಿಂದ ಹೊರಟು ಆಲಮಗೀರ ಬಾದಶಹನ ಭೆಟ್ಟಿಗಾಗಿ ಸೋಲಾಪುರಕ್ಕೆ ನಡೆದನು. ದಿನಾಂಕ ೧೮ರಂದು (೧೧ ಜೂನ ೧೬೮೫) ರಂದು ಕಂದನಾಲದಿಂದ (ಕರ್ನೂಲ) ವಿಜಾಪುರದ ಬೆಂಬಲಕ್ಕೆ ಸೈನ್ಯ ಬಂದಿತು. ದಿನಾಂಕ ೨೨ ರಂದು (೧೫ ಜೂನ) ರಾಜಕುಮಾರ ಮಹಮದ ಆಜಮಶಾಹನು ವಿಜಾಪುರದ ಯುದ್ಧದ ಮೇಲೆ ನೇಮಿಸಲ್ಪಟ್ಟು, ಆತನು ಭಾರೀ ಸೈನ್ಯದೊಂದಿಗೆ ಬಂದು ಮುಟ್ಟಿದನು. ಆತನು ಬೇಗಮ ತಾಲಾಬದ ಮೇಲೆ ತನ್ನ ದಂಡಿನ ಡೇರೆಗಳನ್ನು ಹಾಕಿದನು. ದಿನಾಂಕ ೭, ಸಾಬಾನ (೩೦ ಜೂನ ೧೬೮೫) ದಂದು ಕೋಟೆಯನ್ನು ತೆಗೆದುಕೊಳ್ಳುವ ಯುದ್ಧ ಸಾಮಗ್ರಿಗಳೊಂದಿಗೆ ರಾಜಕುಮಾರನು ಮುಂದೆ ನಡೆದು ಬಂದು ಕೋಟೆಯನ್ನು ಸುತ್ತುವರಿದನು. ಕೋಟೆಯ ಮೇಲಿನ ಸೈನ್ಯಾಚರಣೆಯನ್ನು ಮುಂದುವರಿಸಿದನು. ಕಳ್ಳದಾರಿಗಳನ್ನು ಕಟ್ಟುವುದು. ಗುಹೆಗಳನ್ನು ಅಗೆಯುವುದು, ತೋಫುಗಳನ್ನು ಹಾರಿಸುವ ಗುರಿಕಾರರನ್ನು (ಸರಿಯಾಗಿ ಗುರಿ ಇಡುವ) ಬಂದೂಕು ಧಾರಿಗಳನ್ನು ಆಯ್ದು ಯೋಜಿಸುವಲ್ಲಿ ನಿರತನಾದನು.

ದಿನಾಂಕ ೯ (೨ ಜುಲೈ ೧೬೮೫) ರಂದು ಅಬ್ದುಲ ರಾವುಫ ಮತ್ತು ಷರ್ಜಾಖಾನ ಉಭಯತರು ಕೋಟೆಯಿಂದ ಹೊರಬಿದ್ದು ಶತ್ರುಗಳೊಂದಿಗೆ ಯುದ್ಧ ಮಾಡುವಲ್ಲಿ ಕೂದಲೆಳೆಯಷ್ಟು ಕಸರು ಬಿಡಲಿಲ್ಲ.

ದಿನಾಂಕ ೧೦, ಸಾಬಾನ ತಿಂಗಳಂದು (೩ ಜುಲೈ ೧೬೮೫) ಆಹಾರ ಸಾಮಗ್ರಿಗಳು ಬರುತ್ತಿದ್ದುವು. ಆ ಸಾಮಾನುಗಳ ಮೇಲೆ ಉಭಯತರಿಂದ ದೊಡ್ಡ ಯುದ್ಧವೇ ನಡೆಯಿತು. ದಿನಾಂಕ ೪, ತಿಂಗಳು ರಮಜಾನದಂದು (೨೬, ಜುಲೈ ೧೬೮೫) 'ಮಂಗಳೀ' ಹತ್ತಿರ (ಮನಗೂಳಿ?) ಆಹಾರ ಸಾಮಗ್ರಿ ಬರುತ್ತಿತ್ತು. ಆ ಸಾಮಗ್ರಿಗಳ ಮೇಲೆ ಆದಿಲಶಹನ ಕಡೆಯ ಮತ್ತು ಆಲಮಗೀರ ಬಾದಶಹನ ಕಡೆಯ ಸೈನ್ಯಗಳಲ್ಲಿ ಭಾರೀ ಯುದ್ಧ ನಡೆಯಿತು.

ದಿನಾಂಕ ೨೪, ರಮಜಾನ ದಂದು (೧೫ ಅಗಸ್ಟ ೧೬೮೫) ಅಂಬಾಜೀ ಪಂಡಿತ ಹೈದರಾಬಾದಕರನು ಬಂದು ಇಳಿದನು.[೨] ಮರುದಿನ (೧೬ ಆಗಸ್ಟ್ ೧೬೮೫) ಸನ್ನಿಧಿಗೆ ಬಂದು ಅನುಗ್ರಹಿತನಾದನು.

---

೧. ಶಕೆ ೧೬೦೭ ಜೇಷ್ಠಮಾಸ (ಮೇ ಜೂನ್, ೧೬೮೫) ಔರಂಗಜೇಬನು ಅಹಮದನಗರದಿಂದ ಕೂಚ ಮಾಡಿ ಸೋಲಾಪುರಕ್ಕೆ ಬಂದು ವಿಜಾಪುರದ ಮೇಲೆ ಆಕ್ರಮಣ ಮಾಡಿದನು. ಜೇಧೆ ಪು. ೩೩/ On Sunday, the 25th May 1685 1st Rajab the emperor reached Solapur MiA P.-158.

೨. ಶಕೆ ೧೬೦೭ ವೈಶಾಖ ಮಾಸ (ಮೇ ೧೬೮೫) ಭಾಗಾನಗರಕರಿಯು ವಿಜಾಪುರದ ಸಹಾಯಕ್ಕೆ ೩ ಸಾವಿರ ಸವಾರರು ೩ ಲಕ್ಷ ಹೊನ್ನನ್ನು ಖರ್ಚಿಗೆಂದು ಕೊಟ್ಟನು.- ಜೇಧೇ ಶಕಾ ಪುಟ. ೩೩

ದಿನಾಂಕ ೯, ಜಿಲ್ಹೇಜ ದಂದು (೨೮ ಅಕ್ಟೋಬರ ೧೬೮೫) ಅಬ್ದುಲ ಹಸನ ಕುತುಬಶಾಹನು ಮಾದಣ್ಣನೆಂಬವನನ್ನು ಬಂಧಿಸಿದ ಸುದ್ದಿ ಬಂದಿತು.[೩]

ದಿನಾಂಕ ೨೩, ಮೊಹರಮ ತಿಂಗಳು ಸನ್ ೧೦೯೭ (೧೦ ಡಿಶಂಬರ ೧೬೮೫)ರಂದು ಹಂಬೀರರಾವನು ಸಂಭಾಜಿಯ ಸೈನ್ಯದ ಜೊತೆಗ ಬಂದು ಮುಟ್ಟಿದನು. ದಿನಾಂಕ ೩, ಸಫರ ತಿಂಗಳು (೧೯ ಡಿಶಂಬರ ೧೬೮೫) ದಂದು ಸಂಭಾಜಿಯ ಸೈನ್ಯವು ಮೊಗಲರ ಇಲಾಖೆಯಲ್ಲಿಯ ಪ್ರದೇಶಗಳನ್ನು ಲೂಟಿ ಮಾಡಲು ಹೋಯಿತು.

ದಿನಾಂಕ ೧೧, ತಿಂಗಳು ಸಾಬಾನ (೨೩ ಜೂನ, ೧೬೮೬) ದಂದು ಪಾಮನಾಯಕನ 'ಆಲಂಗ' ಅಂದರೆ ಠಾಣೆಯನ್ನು ಎಬ್ಬಿಸಲಾಯಿತು. ಜವಹರ ಶಾಜಿ ಸಯೀದನು ಆ ಯುದ್ಧದಲ್ಲಿ ಮಡಿದನು.

ದಿನಾಂಕ ೨ ತಿಂಗಳು ಜಮಾದಿಲಾವಲದಂದು (೧೭ ಮಾರ್ಚ ೧೬೮೬) ವಿಜಾಪುರದ ಮೇಲೆ ಯುದ್ಧವಾಯಿತು. ಒಂದು ಕಡೆಯಿಂದ ಖಾನಜಹಾನ ಬಹಾದೂರ ಮೊದಲಾದ ಅಮೀರ ಜನರು, ಇನ್ನೊಂದು ಕಡೆಯಿಂದ ರುಹುಲ್ಲಾಖಾನ ಮತ್ತು ಕಾಸಮಖಾನ ಮೊದಲಾದವರು ಯುದ್ಧ ಮಾಡಿದರು. ಅನಂತರ ಅಜಮಶಾಹನು ಪೂರ್ಣ ಯುದ್ಧಕ್ಕಾಗಿ ನೇಮಿಸಲ್ಪಟ್ಟನು. ಆಗ ದೊಡ್ಡ ದಾರುಣ ಯುದ್ಧವಾಯಿತು. ರಾಜಕುಮಾರ ಅಜಮನು ಕೋಟೆಯನ್ನು ಗೆಲ್ಲಲು ಆಕ್ರಮಣವನ್ನು ಮುಂದೆ - ಮುಂದೆ ತಂದನು. ನಕಬ (ತಗ್ಗು ಆಗೆದು ಅದರಲ್ಲಿ ಮದ್ದನ್ನು ತುಂಬಿ ಹಾರಿಸುವುದಕ್ಕೆ ನಕಬ ಎಂದು ಹೆಸರು) ಅಲ್ಲದೆ ತೋಪುಗಳನ್ನೂ, ಬಂದೂಕು ಬಾಣ ಮೊದಲಾದವುಗಳನ್ನು ಒಮ್ಮೆಲೆ ಹಾರಿಸಿ ನಿರಂತರ ಯುದ್ಧದ ಪ್ರಯತ್ನಮಾಡಿದನು. ಬಹಳ ದಿನಗಳ ವರೆಗೆ ಯುದ್ಧ ಮುಂದುವರಿಯಿತು.[೪] ಅದರಿಂದಾಗಿ, ಮಹಮ್ಮದ ಅಜಮಶಾಹನ ಸೈನ್ಯದಲ್ಲಿ ದೊಡ್ಡ ದುಷ್ಕಾಳ ಬಿದ್ದಿತು. ತಿನ್ನುಣ್ಣುವ, ಕುಡಿಯುವ ಪದಾರ್ಥಗಳು ಯಾರಕಡೆಯಿಂದಲೂ ಬಂದು ಮುಟ್ಟುತ್ತಿರಲಿಲ್ಲ. ಒಪ್ಪಂದದ ದಾರಿ ಮುಚ್ಚಿತ್ತು.

ಸಂಭಾಜಿಯ ಸೈನ್ಯವು ಮೊಗಲರ ದಂಡಿಗೆ ಬರುವ ಆಹಾರ ಧಾನ್ಯಗಳ ಮಾರ್ಗವನ್ನು ತಡೆದು ಮೊಗಲರ ಪ್ರದೇಶದಲ್ಲಿ ಲೂಟಿ ಮಾಡಹತ್ತಿದ್ದಿತು. ಅಲ್ಲಲ್ಲಿ ಹರಿಯುವ ನೀರನ್ನೂ ಕೂಡ ಕುಡಿಯದಂತೆ ಕೆಡಿಸಿಬಿಟ್ಟಿದ್ದರು. ನೀರಿನ ಹತ್ತಿರ ಜನರು - ಜಾನುವಾರುಗಳು ಬರುವ ಮಾರ್ಗವನ್ನು ಮುಚ್ಚಿದ್ದರು. ತಿನ್ನುಣ್ಣುವ ಪದಾರ್ಥಗಳು ಬಂದು ಮುಟ್ಟದಿದ್ದುದರಿಂದ ದಂಡಿನಲ್ಲಿಯ ಬಹಳಷ್ಟು ಜನರು, ಕುದುರೆಗಳನ್ನು

---

೩. ಶಕೆ ೧೬೦೭ ... ಶಾಹ ಆಜಮ ಮತ್ತು ಬಹಾದ್ದೂರಖಾನನು ಹೋಗಿ ಭಾಗಾನಗರವನ್ನು ಲೂಟ ಮಾಡಿದರು. ಆದೇ ತಿಂಗಳಲ್ಲಿ ಮಾದಣ್ಣನ ಮೇಲೆ ಹಲ್ಲೆ ಮಾಡಿ ಕೊಂದರು. ಆತನ ಸಹೋದರ ಅಕ್ಕಣ್ಣನನ್ನೂ ಹೊಡೆದರು. ಕೋಟ ರೂಪಾಯಿಗಳನ್ನು ಕೊಟ್ಟು ಮೊಗಲರೊಂದಿಗೆ ಒಪ್ಪಂದ ಮಾಡಿಕೊಂಡರು. ಜೇಧೆ ಶಕಾ ಪುಟ -೩೩ On sunday, the 28th June 1685/6th Shaban, the Prince (Shah Alam) was sent against Haiderabad - MiA p 159. On Sunday 18th October 1685/30th Zilquada, despatches from Shah Alam Bahadur and Khan Jahan Bahadur announcing the capture of the city of Haiderbad, the shutting up of Abdul Hasam in the fort of Golconda. .... were received - MiA p. 164.

4. Amanulla Khan son of Alahwardi Khan and Fath Mannur Khan son of DilerKhan died fighting heroically in the trenches of Bijapur, Kamaluddin Khan, son of Diler Khan and Fath Jung Khan Miana were wounded..... the powder magazine of the army of Muhammad Azam Shah caught fire, nearly 500 bahahas (hill climbing infantry) and musketeers were killed MiA p 161.

ಮೊದಲಾದ ಪ್ರಾಣಿಗಳನ್ನು, ಒಂಟೆಗಳನ್ನು ಕತ್ತರಿಸಿ ಅವುಗಳ ಮಾಂಸವನ್ನು ತಿನ್ನುತ್ತಿದ್ದರು. ಉಪವಾಸದಿಂದ ಅನೇಕ ಜನರು ಸತ್ತರು. ಈ ಪರಿಸ್ಥಿತಿಯ ಸುದ್ದಿಯು ಆಲಮಗೀರ ಬಾದಶಹನ ಕಿವಿಯ ಮೇಲೆ ಬಿದ್ದಿತು. ಆಗ ಬಾದಶಹನು ರಾಜಕುಮಾರ ಆಜಮಶಾಹನನ್ನು ತನ್ನ ಹತ್ತಿರ ಕರೆಯಿಸಿಕೊಂಡನು.

ಖಾನ ಫಿರೋಜ ಜಂಗ ಶಾಹಬುದ್ದೀನಖಾನನನ್ನು ಹೊಸ ಬಲದೊಂದಿಗೆ ಮತ್ತು ಹಣ ಆಹಾರ ಸಾಮಗ್ರಿಗಳನ್ನು, ಮದ್ದುಗುಂಡುಗಳನ್ನು ಮತ್ತು ಕೋಟೆಯನ್ನು ಪಡೆಯುವ ಬೇರೆ ಅನೇಕ ಸಾಮಾನುಗಳನ್ನು ಕೊಟ್ಟು, ಈಗಾಗಲೇ ಯುದ್ಧ ನಿರತರಾದ ಸೈನ್ಯದ ಬೆಂಬಲಕ್ಕೆ ಕಳಿಸಿದನು.[೫] ಶಹಾಬುದ್ದೀನ ಖಾನನು ಬಂದು ಮುಟ್ಟಿದ್ದರಿಂದ ದಂಡಿಗೆ ಹೊಸ ಬಲ ಬಂದಿತು. ಪ್ರತಿಯೊಂದು ಸಾಮಾನು-ಸರಂಜಾಮುಗಳು ದೊರೆತವು. ವಿಜಾಪುರದಲ್ಲಿ ಕೂಡ ಇಷ್ಟೊಂದು ಸಾಮಾನು ಸರಂಜಾಮುಗಳು ಇರಲಿಲ್ಲ. ಹೀಗಿದ್ದರೂ ಮತ್ತು ಪರಸ್ಪರರಲ್ಲಿ ವಿರಸ ವಿದ್ದರೂ ಒಂದಿಷ್ಟು ಗುಂಪು ಅಲ್ಲಿ ಉಳಿದಿತ್ತು. ದಖಣಿ ಜನರು ತಮ್ಮ ಗುಂಪು ಸಣ್ಣದು ಶತ್ರುಗಳ ಗುಂಪು ದೊಡ್ಡದು ಎಂಬುದರ ಮೇಲೆ ಲಕ್ಷ್ಯವಿಡದೆ ಧೈರ್ಯದಿಂದ ಬಹಳ ಪರಾಕ್ರಮ ತೋರಿಸುತ್ತ ಯುದ್ಧಮಾಡುತ್ತಿದ್ದರು. ಶತ್ರುಗಳನ್ನು ಮುಂದೆ ಬರಗೊಡುತ್ತಿರಲಿಲ್ಲ. ಶತ್ರುಗಳ ಕಡೆಯ ಹೊರಗಿನ ಸೈನ್ಯಕ್ಕೆ ಅವರ ಮನಸೋ ಇಚ್ಛೆ ಕೆಲಸ ಮಾಡಗೊಡದೆ ನಿಂತಲ್ಲೇ ನಿಲ್ಲುವಂತೆ ಮಾಡಿ ಅಲ್ಲಿಂದ ಹೊರದಬ್ಬುತ್ತಿದ್ದರು. ತನ್ನ ಇಚ್ಛೆ ಪೂರ್ಣವಾಗದ್ದನ್ನು ಕಂಡು ಆಲಮಗೀರ ಬಾದಶಹನು ಅತ್ಯಂತ ಸಿಟ್ಟಿಗೆದ್ದು ಸೋಲಾಪುರದಲ್ಲಿಯೇ ಕುಳಿತುಕೊಳ್ಳುವುದು ಸರಿಯಲ್ಲವೆಂದು ತಿಳಿದು ಸ್ವತಃ ಸೋಲಾಪುರ ಕೋಟೆಯಿಂದ ದಿನಾಂಕ ೨, ಸಾಬಾನ ತಿಂಗಳಂದು ರಾಜಶಕ ೩೦ (ಆಲಮಗೀರ ಬಾದಶಹನು ಸಿಂಹಾಸನದ ಮೇಲೆ ಕುಳಿತ ವರುಷ) ಹಿಜರಿಸನ್ ೧೦೯೭ (೧೪ ಜೂನ್, ೧೬೮೬) ರಂದು ಹೊರಟು ದಿನಾಂಕ ೨೧ ರಂದು (೩ ಜುಲೈ ೧೬೮೬) ರಂದು ರಸೂಲಪುರದಲ್ಲಿ ದಂಡಿನ ಡೇರೆಯನ್ನು ಹಾಕಿದನು. ಅಲ್ಲಿ ಬಾದಶಹನ ಸ್ವಾರಿಯು ಉಳಿದುಕೊಂಡಿತು.[೬]

ಈ ದಿನಗಳಲ್ಲಿ ಸಿಕಂದರ ಬಾದಶಹನು ತನ್ನ ಖಾಸಾ ವ್ಯಕ್ತಿಯೊಬ್ಬನನ್ನು ಮಾಸೂದಖಾನನ ಕಡೆಗೆ ಓಡಿಸಿದನು. ಮತ್ತು ತಕ್ಷಣ ಬರಲು ತಿಳಿಸಿದನು. ಈ ರಾಜಧಾನಿ ತುಂಬ ಹಾಳಾಗುತ್ತಿದೆಯೆಂದು, ಪ್ರಸಂಗ ಸೂಕ್ಷ್ಮವಿದೆಯೆಂದು ತಿಳಿಸುತ್ತ ಪತ್ರ ಕಳಿಸಿದನು. 'ನೀನು ಹಳೆಯ ಚಾಕರನು, ಇಲ್ಲಿಯ ಉಪ್ಪನ್ನು ತಿಂದು ಬೆಳೆದವನು. ಈ ಕೊನೆಯ ಪ್ರಸಂಗದಲ್ಲಿ, ಯಾಕೆಂದರೆ ಈ ರಾಜ್ಯದ ನೌಕೆಯನ್ನು ಮುಳುಗಿಸಲು ಮನಸ್ಸು ಮಾಡದೆ ಇರುವವರು ಇಲ್ಲಿ ಯಾರೂ ಉಳಿದಿಲ್ಲವಾಗಿ, ನೀನು ಏನಾದರೊಂದು ಮಾರ್ಗ ಹುಡುಕಿ, ಸಂಕಟಗಳ ಸುಳಿಯಲ್ಲಿ ಮುಳುಗಿದ ನೌಕೆಯನ್ನು ಎತ್ತುವಂತೆ ಮಾಡಬೇಕು. ಪ್ರಾಣವನ್ನೇ ತೆಗೆದು ಕೊಳ್ಳುವ ವಿಷಜಂತು ಅಜಗರ ಹಾವು ಮಸ್ತಕದ ಮೇಲೆ ಬಂದು ನಿಂತು ನುಂಗಿ ಬಿಡುವ

5. When the emperor learnt of this (fight to death) determination of the prince of stay, he ordered Firoz Zang Bahadur on Monday, the 4th October 1685/10th Zilqada to set out with a large army and provisions beyond calculation top reinforce and supply the prince's army - MiA p. 162.

೬. ಶಕೆ ೧೬೦೮ ಆಷಾಢ ಮಾಸ (ಜೂನ ಜುಲೈ ೧೬೮೬) ಔರಂಗಜೇಬನು ಸೋಲಾಪುರದಿಂದ ಬಂದು ವಿಜಾಪುರಕ್ಕೆ ಹತ್ತಿಕೊಂಡನು. ಜೇಧೆ ಶಕಾ ಪುಟ- ೩೩. On Monday the 14th June 1686/2nd Shaban, the imperial standards moved. From Sholapur in that (Bijapur) direction. On saturday the 3rd July 1686/ 21st Shaban, when the imperial camp reached Rasulpur..... 3 kos from Bijapur..... MiA p. 169.

ವಿಚಾರದಲ್ಲಿದೆ. ಆ ಹಾವು ತಿರುಗಿ ಹೋಗುವಂತೆ ಮಾಡಬೇಕು' ಎಂದು ಮುಂತಾಗಿ ಪತ್ರ ಬರೆದು ಮಾಸೂದಖಾನನಿಗೆ ಕಳಿಸಿದನು. ಆ ಪತ್ರಗಳಲ್ಲಿಯ ಒಂದು ಪತ್ರದ ನಕಲನ್ನು ಇಲ್ಲಿ ಬರೆಯಲಾಗುತ್ತಿದೆ.

### ೬೯. *ಸಿಕಂದರ ಬಾದಶಹನು, ಮಾಸೂದಖಾನನಿಗೆ ಬರೆದ ಪತ್ರದ ನಕಲು :*

ನೀವು ಸತ್ಯದಿಂದ ಮತ್ತು ವಿಶ್ವಾಸದಿಂದ ಕಳಿಸಿದ ಪತ್ರ ಮುಟ್ಟಿತು. ಅದರಲ್ಲಿ ಮನಸಾರೆ ಬರೆದ ವಿಷಯಗಳು ಬಹಳ ಒಪ್ಪಿಗೆಯಾದುವು. ಈ ಹೊತ್ತಿಗಾಗಲೇ ನೀವು ಇಲ್ಲಿಗೆ ಬಂದು ಮುಟ್ಟುವ ಮಾರ್ಗ ಪ್ರತೀಕ್ಷೆಯಿಂದಲೇ ಬರೆಯುತ್ತಿದ್ದೇನೆ. ಒಂದು ತಿಂಗಳಿಗಿಂತ ಅಧಿಕ ದಿನಗಳಾದುವು. ಅಲಮಗೀರ ಅಂದರೆ ಔರಂಗಜೇಬ ಬಾದಶಹನು ಸೋಲಾಪುರದಲ್ಲಿ ಬಂದು ಇದ್ದು, ನಾನಾ ಪ್ರಕಾರದ ಸಂಕಟಗಳನ್ನು ನಿರ್ಮಿಸಿ ಯುದ್ಧಮಾಡುತ್ತಿದ್ದಾನೆ. ಅದನ್ನೆಲ್ಲ ವಿಸ್ತಾರವಾಗಿ ಬರೆಯಲು ಸಾಧ್ಯವಿಲ್ಲ. ಅಲ್ಲಾನ ಕೃಪೆಯಿಂದ ಇಲ್ಲಿಯವರೆಗೆ ಇಷ್ಟೊಂದು ಅವಕಾಶ ದೊರಕಿದೆ. ನೀವು ಧರ್ಮಾಜಿ ಪಂಡಿತ ಮೊದಲಾದವರ ಮಾರ್ಗಪ್ರತೀಕ್ಷೆಯನ್ನು ಮಾಡುತ್ತ ನಾವು ಸುರಕ್ಷಿತವಾಗಿದ್ದೇವೆ. ಈ ರಾಜ್ಯ ಮುಳುಗಲಿ ಎಂದು ನಿಮ್ಮ ಮನಸ್ಸಿಗೆ ಸರಿ ಎನಿಸುತ್ತಿದ್ದರೆ, ಆಶ್ಚರ್ಯವೆನಿಸುತ್ತದೆ. ಅದು ಸಹಸ್ರಾವಧಿ ಆಶ್ಚರ್ಯವೆನಿಸುತ್ತದೆ. ಒಂದು ವೇಳೆ ನೀವು ಹೊರಟು ಇತ್ತ ಬಂದು ಬಿಟ್ಟರೆ ಬಹಳ ಒಳ್ಳೆಯದು. ಈ ಪ್ರಸಂಗದಲ್ಲಿ ಈ ಅವಸ್ಥೆಯನ್ನು ಕಂಡು ಮತ್ತೆ ರಾಜ್ಯದ ವ್ಯವಸ್ಥೆಯ ಕೆಲಸಗಳನ್ನು ನೋಡಿರಿ. ಇಲ್ಲದಿದ್ದರೆ, ವಿಜಾಪುರವು ಮೊಗಲರ ಅಂದರೆ ಔರಂಗಜೇಬ ಬಾದಶಹನ ಕೈಗೆ ಹೋಯಿತು, ಹೋಯಿತು, ಹೋಯಿತು! ಎಂಬುದು ಸತ್ಯ, ಸತ್ಯ, ಸತ್ಯ ಎಂದು ತಿಳಿಯಿರಿ! ಇಂದು ನಾಲ್ಕನೆಯ ದಿನವಾಗಿದೆ. ಕೋಟೆಯ ಹೊರಗಿನ ಶತ್ರುವು ಪ್ರಬಲನಾಗಿ ತೋಫುಗಳಿಂದ 'ಜ್ಯಾಮಂತ' ಬುರುಜನ್ನು ಬೀಳಿಸಿ ನೆಲಸಮ ಮಾಡಿ ಬಿಟ್ಟದ್ದಾನೆ. ಅದರಿಂದಾಗಿ ಯಾವ ವೇಳೆಗೆ ಏನೆಲ್ಲ ಪ್ರಳಯವಾಗಬಹುದೆಂಬುದು ತಿಳಿಯುತ್ತಿಲ್ಲ. ಆದ್ದರಿಂದ ನೀವು ಬುದ್ಧಿ ಉಪಯೋಗಿಸಿ, ಈ ಸುದ್ದಿ ತಿಳಿಯುತ್ತಲೇ ಇತ್ತ ಹೊರಟು ಬರಬೇಕು. ಮತ್ತು ಜೀವಂತ ಇರುವ ವರೆಗೆ ಕೀರ್ತಿ ದೊರಕಿಸಿಕೊಳ್ಳಬೇಕು. ಇದರ ಮೇಲೆ ನಿಮಗೆ ತಿಳಿದಂತೆ ಹಾಗೆ ಮಾಡಿರಿ. ನೀವು ಹೊರಟು ಬಂದರೆ, ಇತ್ತ ಕಡೆಯ ಎಲ್ಲ ಕಾರಭಾರಿ ಮಂಡಳಿಗಿಂತ ನಿಮ್ಮ ಯೋಗ್ಯತೆ ಬೆಳೆಯುತ್ತದೆ. ಈ ಸತ್ಯವನ್ನು ತಿಳಿಯಬೇಕು. ದಿನಾಂಕ ೨೪ ರಮಜಾನ ಸನ್ ೧೦೯೭ ( ೫ ಆಗಸ್ಟ ೧೬೮೬) ವಿಜಾಪುರವನ್ನು ಶತ್ರುಗಳ ಕೈಗೆ ಕೊಡುವ ವಿಷಯದಲ್ಲಿ ಅಲ್ಲಾನ ಇಚ್ಛೆಯು ಚಂಚಲವಾಗಿತ್ತು. ಆದ್ದರಿಂದ ಮಾಸೂದಖಾನನು ಈ ಮಾತುಗಳಿಗೆ ಕಿವಿಗೊಡಲೇ ಇಲ್ಲ. ವಿಜಾಪುರಕ್ಕೆ ಬರಬೇಕು ಎಂದು ಅವನಿಗೆ ಅನಿಸಲೇ ಇಲ್ಲ.

### ೭೦. *ವಿಜಾಪುರ ಕೈವಶಕ್ಕೆ ಆಲಮಗೀರ ಬಾದಶಹನ ಪೂರ್ಣ ಯತ್ನ :*

ರಸೂಲಪುರ ಗ್ರಾಮವು ಅಲಮಗೀರ ಬಾದಶಹನ ದಂಡಿನ ವಸತಿಯ ಸ್ಥಾನವಾಯಿತು. ಬಾದಶಹನು ಅಲ್ಲಿಂದ ಗಾಜಿಉದ್ದೀನಖಾನ ಮತ್ತು ತೋಫಖಾನೆ ಕಡೆಯ ಮುಖ್ಯಸ್ಥ ಮುಂತಾದ ಅಮೀರ ಜನರಿಗೆ ಆಜ್ಞಾಪತ್ರವನ್ನು ಕಳಿಸಿ, ಅವರಿಗೆ ಪೂರ್ತಿ ಯತ್ನವನ್ನು ಮಾಡಲು ಹೀಗೆ ತಿಳಿಸಲಾಯಿತು. "ಕೋಟೆಯನ್ನು ತೆಗೆದುಕೊಳ್ಳುವ ವಿಷಯದಲ್ಲಿ ರಾಜಕುಮಾರನ ಕಡೆಯ ಜನರಿಗೂ, ಅಮೀರ ಮತ್ತು ಮನಸುಬದಾರರ ಕಡೆಯ ಜನರಿಗೂ ಬಕ್ಷಿಗಳು ಕೆಲಸವನ್ನು ಹಂಚಿಕೊಡುತ್ತಾರೆ, ಅದರಂತೆ ಮಾಡಬೇಕು", ವಿಜಾಪುರದ ಕೋಟೆಯನ್ನು ಕಟ್ಟಿದ ಭೂಮಿಯಲ್ಲಿ ಅರ್ಧ ಗಜ ಅಗೆದರೂ ಸಾಕು ಕರಿಕಲ್ಲು ದೊರೆಯುತ್ತದೆ. ಹೀಗಾಗಿ ಅವಸರದಿಂದ ಕೆಲಸ ಮಾಡುವ ಬೇಲದಾರರು, ಕಲ್ಲುಕುಟಿಗರು ಕೆಲಸಮಾಡಿ ಸೈನ್ಯದ ಆಕ್ರಮಣವನ್ನು

ಕೋಟೆಯ ಬಾಗಿಲದ ಹತ್ತಿರ ತಂದು ಮುಟ್ಟಿಸಿದರು. ದಖಣೀ ಜನರೂ ಪರಾಕ್ರಮಿಗಳಾಗಿದ್ದರು. ಅವರು ಕೂಡ ತೋಫುಗಳನ್ನು ಮತ್ತು ಬಂದೂಕುಗಳನ್ನು-ಹಾರಿಸುವಲ್ಲಿ ತಮ್ಮ ಸಾಮರ್ಥ್ಯವನ್ನು ಮೆರೆದು ಶತ್ರುಗಳನ್ನು ಪರಾಭವಗೊಳಿಸುವ ಯತ್ನವನ್ನು ಮಾಡುತ್ತಿದ್ದರು. ಆದರೆ ದೈವ ಸಂಕಲ್ಪ ಮತ್ತು ಪ್ರಳಯಕಾರಕ ಅಲ್ಲಾ ಆದಿಲಶಾಹಿ ರಾಜ್ಯವನ್ನು ಸಮಾಪ್ತಿಗೊಳಿಸಬೇಕೆಂದೇ ನಿರ್ಧರಿಸಿರುವಾಗ ಎಲ್ಲ ಪ್ರಯತ್ನಗಳ, ಯುಕ್ತಿಗಳ, ಯೋಜನೆಗಳ ಪರಿಣಾಮಗಳನ್ನು, ಕೇಳಿ ಏನು ಪ್ರಯೋಜನ? ಶತ್ರುಗಳನ್ನು ಪರಾಭವಗೊಳಿಸುವ ವಿಚಾರಗಳೂ ಹೇಗೆ ಕೆಲಸಕ್ಕೆ ಬರುತ್ತವೆ? ಅರಬ್ಬೀ ವಾಕ್ಯದಲ್ಲಿ ಹೇಳಿದಂತೆ "ದೈವೇಚ್ಛೆ ಹೇಗಿದೆಯೋ ಅದನ್ನು ಅಲ್ಲಾನು ಮಾಡುತ್ತಿರುತ್ತಾನೆ. ಆತನ ಇಚ್ಛೆಯ ಎದುರಿಗೆ ಯಾರ ವಿಚಾರಗಳೂ ನಡೆಯುವುದಿಲ್ಲ".

### ೭೧. ವಿಜಾಪುರವು ಆಲಮಗೀರ ಬಾದಶಹನ ಕೈ ಸೇರಿದ್ದು :

ವಿಜಾಪುರದ ಕೋಟೆಯನ್ನು ಪಡೆದು ಗೆಲುವು ಸಾಧಿಸಲು ಬಹಳ ದಿನಗಳು ಹಿಡಿದವು. ಅವರು ಬಹಳ ಪ್ರಯತ್ನ ಪಟ್ಟರು. ಹಿಂದುಸ್ತಾನದ ಇಡೀ ರಾಜ್ಯ, ಇಷ್ಟೊಂದು ಸಾಮಾನು ಸರಂಜಾಮುಗಳು ಒಂದು ಯಃಕಶ್ಚಿತ ನಗರಕ್ಕಾಗಿ ಅಂದರೆ, ವಿಜಾಪುರವನ್ನು ತೆಗದುಕೊಳ್ಳಲು ಜೀವದಾರಭ್ಯ ಪ್ರಯತ್ನ ಮಾಡುತ್ತಿದ್ದರು. ತಮ್ಮೆಲ್ಲ ಸಾಮರ್ಥ್ಯವನ್ನು ಉಪಯೋಗಿಸಿಕೊಂಡು ಪ್ರಯತ್ನಿಸಿದ್ದರೂ ಈವರೆಗೆ ಕಾರ್ಯಸಿದ್ಧಿಯಾಗಿರಲಿಲ್ಲ. ಆದ್ದರಿಂದ ಔರಂಗಜೇಬ ಬಾದಶಹನಿಗೆ ಇದು ಸರಿ ಕಾಣಲಿಲ್ಲ. ಅವಸರದಿಂದ ತಾನೇ ಸ್ವತಃ ಈ ಕೆಲಸದಲ್ಲಿ ತತ್ಪರನಾಗಿ, ಗಾಜೀಉದ್ದೀನಖಾನ ಮತ್ತು ತೋಫಖಾನೆಯ ದರೋಗಾಗಳ ಆಕ್ರಮಣದ ಸ್ಥಳದಿಂದ ಒಂದೇ ಒಂದು ಕೋಸಿನ ಅಂತರದಲ್ಲಿ ಡೇರೆ ಹಾಕಿಕೊಂಡಿದ್ದನು.

ಅದು ಕೂಡ ದೂರವಾಯಿತೆಂದು ತಿಳಿದು ತನ್ನ ಡೇರೆಯಿಂದ ಔರಂಗಜೇಬ ಬಾದಶಹನು ಹೊರಬಿದ್ದನು. ಆಕ್ರಮಣ ಸ್ಥಳದ ಹತ್ತಿರವೇ ಡೇರೆಯನ್ನು ಹಾಕಿ, ಅಲ್ಲಿಯೇ ಬಂದು ಇರಹತ್ತಿದನು. ಅಲ್ಲಿಂದಲೇ ತನ್ನ ಆಜ್ಞೆಗಳನ್ನು ಕೊಡಹತ್ತಿದನು. "ಕೋಟೆಯನ್ನು ವಶಪಡಿಸಿಕೊಳ್ಳುವ ವೀರಯೋಧರು ಮತ್ತು ಮಹಾ ಪರಾಕ್ರಮಿಗಳೂ, ರಾಜಕುಮಾರನ ಸೈನ್ಯವೂ ಸೇರಿದಂತೆ ಒಟ್ಟು ಸೈನ್ಯದಲ್ಲಿಯ ಶೂರರೂ ಒಂದೆಡೆ ಸೇರಿ, ನಾಲ್ಕು ನಿಟ್ಟಿನಿಂದಲೂ ಕೋಟೆಯಮೇಲೆ ಹಲ್ಲೆ ಮಾಡಬೇಕು" ಎಂಬುದಾಗಿ ಆಜ್ಞೆ ಮಾಡಿದನು.

ಇಂಥ ಅವಸ್ಥೆಯಲ್ಲಿ ವಿಜಾಪುರದ ಜನರಲ್ಲಿ ನಿರಾಶೆ ಹುಟ್ಟಿ ಎಲ್ಲ ಜನರು ಭಯಭೀತರಾದರು. ಸಿಕಂದರ ಬಾದಶಹ ಮತ್ತು ಆತನ ಎಲ್ಲ ಕಾರಭಾರಿ ಜನರು ನಿರಾಶರಾಗಿ, ಇನ್ನು ಔರಂಗಜೇಬ ಬಾದಶಹನೊಂದಿಗೆ ಒಪ್ಪಂದ ಮಾಡಿಕೊಳ್ಳುವುದರ ಹೊರತು ಬೇರೆ ಯಾವ ಉಪಾಯವೂ ಇಲ್ಲವೆಂದು ತಿಳಿದರು. ಜಲ್ಕಾದ ತಿಂಗಳ ಮೊದಲನೆಯ ದಿನದಂದು, (೧೦ ಸಪ್ಟಂಬರ, ೧೬೮೬) ಅಬ್ದುಲ ರಾವುಫನ ಮುನಶಿಯಾದ ಸಯೀದಖಾನ ಮತ್ತು ಸಯ್ಯದ ಮಖದೂಮ ಷರ್ಜಾಖಾನನ ಮುನಶಿಯಾದ ಶೇಖ ಹುಸೇನ ಉಭಯತರು, ಹಾಫೀಜ ಅಫಜಲನ ಜೊತೆಗೆ ಹೋಗಿ, ಗಾಜೀಉದ್ದೀನಖಾನನೊಂದಿಗೆ ಒಪ್ಪಂದದ ಬಗ್ಗೆ ಚರ್ಚಿಸಿ ಅದೇ ರಾತ್ರಿ ತಿರುಗಿ ಬಂದರು. ಮರುದಿನ (೧೧ ಸಪ್ಟಂಬರ, ೧೬೮೬)ದಂದು, ಅಬ್ದುಲ ರಾವುಫಖಾನನು ಒಬ್ಬನೇ ಸ್ವತಃ ಗಾಜೀಉದ್ದೀನಖಾನನನ್ನು ಭೆಟ್ಟಿಯಾಗಲು ಹೋದನು. ಒಪ್ಪಂದದ ಕರಾರುಗಳನ್ನು ನಿರ್ಧರಿಸಿ ಅಂದೇ ರಾತ್ರಿ ತಿರುಗಿಬಂದನು. ವಿಜಾಪುರದ ಕೋಟೆಯನ್ನು ಮೊಗಲರ ವಶಕ್ಕೆ ಕೊಟ್ಟು ಬಿಡಬೇಕೆಂದು ಸಿಕಂದರ ಬಾದಶಹನೊಂದಿಗೆ ಮಾತನಾಡಿ, ಕರಾರುಗಳನ್ನು ಠರಾವಿಸಿದರು.

ಆದರ ಮರುದಿನ ಅಂದರೆ ಜಿಲ್ಕಾದ ತಿಂಗಳ ಮೂರನೆಯ ದಿನ (೧೨ ಸಪ್ಟಂಬರ, ೧೬೮೬) ಮತ್ತೆ ಗಾಜೀಉದ್ದೀನಖಾನನ ಕಡೆಗೆ ಹೋಗಿ ಆತನನ್ನು ವಿಚಾರಿಸಿ, ಆಲಮಗೀರ ಬಾದಶಹನನ್ನು ಭೆಟ್ಟಿಯಾದನು. ಬಾದಶಹನ ಕೃಪೆಗೆ ಪಾತ್ರನಾದನು. ಅಬ್ದುಲ ರಾವುಫಖಾನನು ಅದೇ ದಿನ ರಾತ್ರಿ ತಿರುಗಿ ಬಂದನು. ಗಾಜೀಉದ್ದೀನನು ಅಲ್ಲಿಯೇ ಉಳಿದನು. ಷರ್ಜಾ ಖಾನನು ಆ ದಿನ ರಾತ್ರಿ ಕೋಟೆಯೊಳಗೆ ಬಂದನು. ದಿನಾಂಕ ೪, ಅಂದರೆ ಅದರ ಮರುದಿನ (೧೩ ಸಪ್ಟಂಬರ ೧೬೮೬) ಹತ್ತನೆಯ ತಾಸಿನಲ್ಲಿ ಸಿಕಂದರ ಬಾದಶಹನು ವಿಜಾಪುರ ಕೋಟೆಯಿಂದ ಔರಂಗಜೇಬ ಬಾದಶಹನ ಭೆಟ್ಟಿಗೆ ಹೋಗಿ, ವಿಜಾಪುರದ ಕೋಟೆಯನ್ನು ಆತನ ವಶಕ್ಕೆ ಒಪ್ಪಿಸಿದನು.[೧]

ಆಲಂಗೀರ ಬಾದಶಹನು ಸಿಕಂದರ ಬಾದಶಹನನ್ನು ಬಹಳ ಆದರ ಸತ್ಕಾರಗಳೊಂದಿಗೆ ಬರಮಾಡಿಕೊಂಡು, ಆತನಿಗೆ ಸಮಾಧಾನ ಮಾಡಿದನು. ತನ್ನ ಖಾಸಾ ಡೇರೆಯ ಹಿಂದೆಯೇ ಸಿಕಂದರ ಬಾದಶಹನ ಡೇರೆಯನ್ನು ಹಾಕಿಸಿದನು. ಸಿಕಂದರ ಬಾದಶಹನ ಹೆಂಡಿರು ಮಕ್ಕಳು ಕೂಡ ಉಳಿದುಕೊಳ್ಳುವ ವ್ಯವಸ್ಥೆ ಮಾಡಿದನು. ಪ್ರತಿವರುಷ ಒಂದು ಲಕ್ಷ ರೂಪಾಯಿಗಳನ್ನು ಆತನ ಖರ್ಚಿಗೆಂದು ಮಂಜೂರು ಮಾಡಿದನು. ಕೆಲವು ದಿನಗಳ ಅನಂತರ ತಾನಾಶಾಹ ಅಬ್ದುಲ ಹುಸೇನ ಕುತುಬಶಾಹನ ಮಗಳನ್ನು ಸಿಕಂದರ ಬಾದಶಹನಿಗೆ ಕೊಟ್ಟು ಪವಿತ್ರ ಕುರಾನ ಷರೀಫ ಪ್ರಮಾಣದಂತೆ ಮದುವೆ ಮಾಡಿಕೊಡಲು ಆಜ್ಞೆ ಮಾಡಿದನು. ಅಬ್ದುಲ ರಾವುಫಖಾನ ಮಿಯಾ ಮತ್ತು ಸಯ್ಯದ ಮಖದೂಮ ಷರ್ಜಾಖಾನ ಈ ಉಭಯತರಿಗೂ 'ಸಾತಹಜಾರಿ' ಪದವಿಯನ್ನು ಕೊಟ್ಟು, ಆರು ಸಾವಿರ ಸವಾರರನ್ನು ಕೊಟ್ಟನು. ಅಬ್ದುಲ ರಾವುಫಖಾನನಿಗೆ 'ದಿಲೇರಖಾನ' ಎಂಬ ಬಿರುದನ್ನು ಮತ್ತು ಸಯ್ಯದ ಮಖದೂಮನಿಗೆ ರುಸ್ತುಮಖಾನ ಎಂಬ ಬಿರುದನ್ನು ಕೊಟ್ಟನು.

ವಿಜಾಪುರಕ್ಕೆ 'ದಾರುಲ್‌ಜಫರ' ಎಂಬ ಹೆಸರನ್ನಿಟ್ಟನು. ದಾರುಲ್‌ಜಫರ ಎಂಬ ಹೆಸರಿನಿಂದಲೇ ವಿಜಾಪುರವನ್ನು ಪ್ರಸಿದ್ಧಿಮಾಡಿದನು. ಮರುದಿನ ದಿನಾಂಕ ೫, ಜಿಲ್ಕಾದ ತಿಂಗಳು (೧೪ ಸಪ್ಟಂಬರ ೧೬೮೬) ಅಂದು ಔರಂಗಜೇಬ ಬಾದಶಹನು ಬಹಳ ವೈಭವದಿಂದ ಕೋಟೆಯೊಳಗೆ ಬಂದು, ಇಡೀ ವಿಜಾಪುರವನ್ನು ನೋಡಿ, ತಿರುಗಿ ದಂಡಿಗೆ ಹೋದನು. ರುಹುಲ್ಲಾಖಾನನಿಗೆ ಪಾಂಚಹಜಾರಿ ಪದವಿ, ಮತ್ತು ನಾಲ್ಕು ಸಾವಿರ ಸವಾರರನ್ನು ಕೊಡಲಾಯಿತು. ಆತ ವಿಜಾಪುರದ ಸುಬೇದಾರೀ ಕೆಲಸದ ಮೇಲೆ ನೇಮಿಸಲ್ಪಟ್ಟನು. ಆ ದಿನದಿಂದ (೧೪ ಸಪ್ಟಂಬರ ೧೬೮೬) ಆದಿಲಶಾಹಿ ರಾಜ್ಯ ಸಮಾಪ್ತವಾಯಿತು. ಆದಿಲಶಾಹನ ಆಳ್ವಿಕೆ ನಿಂತಿತು.

### *೭೨. ಪರಿಸ್ಥಿತಿ ಬಗ್ಗೆ ಸಿಕಂದರ ಬಾದಶಹನ ಪಶ್ಚಾತ್ತಾಪ :*

ಅನಂತರ ಸಿಕಂದರ ಆದಿಲಶಾಹನು ಜೀವಮಾನಪರ್ಯಂತ ಔರಂಗಜೇಬ ಬಾದಶಹನ

---

೧. ಶಕೆ ೧೬೦೮ ಅಶ್ವಿನ ಶುದ್ಧ ೭ ಸೋಮವಾರ (೧೬ ಸಪ್ಟಂಬರ ೧೬೮೬) ಔರಂಗಜೇಬನು ವಿಜಾಪುರವನ್ನು ತೆಗೆದುಕೊಂಡನು. ಸುಲ್ತಾನ ಸಿಕಂದರನನ್ನು ನಜರಬಂದಿನಲ್ಲಿಟ್ಟರು. ಸರಜಾಖಾನ ಮತ್ತು ಬಹಲೋಲಖಾನರಿಗೆ ಪಾಂಚಹಜಾರಿ ಪದವಿಕೊಟ್ಟರು - ಜೇಧೆ ಶಕಾ ಪುಟ ೩೩-೩೪. On Sunday the 12th September 1686/4th Zilqada, the fort (Bijapur)) was captured by Alamgir - MiA p. 171.

ಬಂಧನದಲ್ಲಿಯೇ ಇದ್ದು, ಅಪೂರ್ಣ ಮನೋರಥದಿಂದ ಆಯುಷ್ಯವನ್ನು ಕಳೆದನು. ಹಯಹಾತ, ಹಯಹಾತ, ಹಯಹಾತ! ಅಂದರೆ ಅಯ್ಯೋ, ಅಯ್ಯೋ, ಅಯ್ಯೋ! ಆ ನಿಷ್ಪಾಪ ಜೀವಿ ಮೂಲದಿಂದಲೇ ಬಹಳ ಚಮತ್ಕಾರಿಕ ನಿರ್ದೈವಿ ಮತ್ತು ದುರ್ದೈವಿಯಾಗಿದ್ದನು! ಯಾಕೆಂದರೆ ಸುಲ್ತಾನ ಮಹಮ್ಮದ ಬಾದಶಹನು ಸಿಂಹಾಸನ ಏರಿದಾಗ ಆತ ಬಾದಶಹನೆಂದೇ ನಡೆದುಕೊಂಡನು. (ಆದರೆ) ಸಿಕಂದರ ಬಾದಶಹನು ಸಿಂಹಾಸನದ ಮೇಲೆ ಕುಳಿತಾಗ ಹದಿನಾಲ್ಕು ವರುಷಗಳ ವರೆಗೆ ನೌಕರ ಜನರ ಅಂಕಿತದಲ್ಲೇ ಇದ್ದನು. ಈಗಂತೂ ಮುಖ್ತ್ಯಾರಿ ಎಂಬುದು ಉಳಿದೇ ಇರಲಿಲ್ಲ. ಅನಂತರ ಔರಂಗಜೇಬ ಬಾದಶಹನ ಬಂಧನದಲ್ಲಿಯೇ ಹದಿನಾಲ್ಕು ವರುಷಗಳ ವರೆಗೆ ಬಹಳ ಸಂಕಟದಲ್ಲಿ ದಿನಗಳನ್ನು ಕಳೆದು ತನ್ನ ೩೩ನೆಯ ವಯಸ್ಸಿನಲ್ಲಿ ಸನ್ ೧೧೧೧ರಲ್ಲಿ (ಕ್ರಿ.ಶ.೧೭೦೦-೧) ಅತ್ಯಂತ ನಿರಾಶೆಯಿಂದ ಮರಣ ಹೊಂದಿದನು.

### ೭೩. *ಮುಸಲ್ಮಾನ ಜನರ ನಗರದ ಮೇಲೆ ಹಲ್ಲೆ ಮಾಡಿದ್ದುದರ ಕಾರಣ ಕೇಳಲು ಸಿಕಂದರ ಬಾದಶಹನು, ವಿದ್ವಾಂಸರನ್ನು ಔರಂಗಜೇಬ ಬಾದಶಹನ ಹತ್ತಿರ ಕಳಿಸಿದ್ದು ಆದಕ್ಕೆ ಆತನ ಉತ್ತರ :*

ಔರಂಗಜೇಬ ಬಾದಶಹನು ವಿಜಾಪುರವನ್ನು ಗೆಲ್ಲಲು ಬಹಳ ಪ್ರಯತ್ನಪಟ್ಟು ಭಾರೀ ದೊಡ್ಡ ಹಲ್ಲೆಯನ್ನು ಮಾಡಿ, ಕೋಟೆಯಲ್ಲಿ ವಾಸಿಸುತ್ತಿದ್ದವರ ಮೇಲೆ ದೊಡ್ಡ ಕಠಿಣ ಪ್ರಸಂಗ ತಂದಿದ್ದನು. ಅದು ಎಷ್ಟು ಭಯಾನಕವಾಗಿತ್ತೆಂದರೆ, ಈ ಕೋಟೆಯಲ್ಲಿ ವಾಸಿಸುವವರಿಗೆ ಕಲ್ಯಾಣವಾಗುವ ಮತ್ತು ಸುಖದಿಂದ ಇರುವ ಉಮೇದಿಯೇ ಉಳಿದಿರಲಿಲ್ಲ. ಬಿಡುಗಡೆ ಹೊಂದುವ ಆಶೆಯೇ ಹರಿದುಹೋಗಿತ್ತು. ಕೇವಲ ನಿರಾಶೆ. ನಿರಾಶೆಯೊಂದೇ ಉಳಿದಿತ್ತು. ಆಗ ಸಿಕಂದರ ಬಾದಶಹನು ತನ್ನ ದರಬಾರದಲ್ಲಿಯ ಬುದ್ಧಿವಂತರನ್ನು ಮತ್ತು ನಗರದಲ್ಲಿಯ ದೊಡ್ಡ ದೊಡ್ಡ ಹಿರಿಯರನ್ನು ಸೇರಿಸಿ, ಈ ವಿಷಯದಲ್ಲಿ ಅವರನ್ನು ವಿಚಾರಿಸಿದನು. ಸಲಹೆಯನ್ನು ಕೇಳಿ, ಬಿಡುಗಡೆ ಹೊಂದುವ ಉಪಾಯವನ್ನು ಚರ್ಚಿಸಿದನು. ದರಬಾರದಲ್ಲಿಯ ಕಾರಭಾರಿ ಮಂಡಳಿಯೊಂದಿಗೆ ಬಹಳ ವಿಚಾರಿಸಿದನು. “ದಿಲ್ಲಿಯ ಔರಂಗಜೇಬ ಬಾದಶಹನು ಧರ್ಮದಿಂದ ನಡೆಯುವವನು ಮತ್ತು ಶಾಸ್ತ್ರ ನಿಷ್ಠನು. ಕುರಾನ ಷರೀಫ ಗ್ರಂಥದ ಆಜ್ಞೆಯಂತೆ ಮತ್ತು ಅಲ್ಲಿಯ ಪ್ರಮಾಣದಂತೆ ಶಾಸ್ತ್ರಾರ್ಥವನ್ನು ಕೊಡುವವನು. ಆ ‘ಮುಫ್ತಿ’ ಶಾಸ್ತ್ರಾರ್ಥದ ಆಜ್ಞೆಯನ್ನು ಪಡೆಯದೆ ಒಂದೇ ಒಂದು ಕೆಲಸವನ್ನು ಕೂಡ ಮಾಡಿದವನಲ್ಲ. ಆ ಬಾದಶಹನೊಂದಿಗೆ ಯುದ್ಧ ಮಾಡುವುದು ನಮಗೆ ಯೋಗ್ಯವಲ್ಲ. ಆದರೆ ಔರಂಗಜೇಬ ಬಾದಶಹನೊಂದಿಗೆ ಶಾಸ್ತ್ರಾರ್ಥದ ವಾದಮಾಡುವ ಮಾರ್ಗ ಮುಕ್ತವಾಗಿದೆ. ಅವನೊಂದಿಗೆ ಮಾತನಾಡುವ ಸಾಮರ್ಥ್ಯ ನಮ್ಮಲ್ಲಿ ಇಲ್ಲವಾದರೂ, ಅವನನ್ನು ವಿಚಾರಿಸೋಣ. “ಮುಸಲ್ಮಾನರೊಂದಿಗೆ ಯುದ್ಧ ಮಾಡಬೇಕೆಂದು ಮತ್ತು ಅದು ಯೋಗ್ಯವೆಂದು ಯಾವ ಶಾಸ್ತ್ರದಲ್ಲಿ ಹೇಳಿದೆ? ಮುಸಲ್ಮಾನ ಜನರ ಮನೆಯಲ್ಲಿ ನಮಾಜ ಮತ್ತು ಆಜಾನ ಕೊಡುವುದು ವಗೈರೆ ಎಲ್ಲ ಧರ್ಮಕಾರ್ಯಗಳು ಪರಿಪೂರ್ಣವಾಗಿ ನಡೆಯುತ್ತಿವೆ. ಹೀಗೆ ಇದ್ದರೂ ಮುಸಲ್ಮಾನ ಜನರ ಮನೆಗಳನ್ನು ಲೂಟಿಮಾಡಿ ನಾಶಮಾಡಿರಿ. ಮತ್ತು ಕೆಡವಿ ಬೀಳಿಸಿರಿ ಎಂದು ಆಜ್ಞೆ ಮಾಡುವುದು ಯಾವ ಶಾಸ್ತ್ರದ ಆಧಾರದಿಂದ? ಈ ರೀತಿ ವಿಚಾರಿಸಿದರೆ ಔರಂಗಜೇಬ ಬಾದಶಹನು ಲಜ್ಜಿತನಾಗಿ, ತಾನು ಮಾಡುತ್ತಿರುವ ಈ ಕೆಲಸ ಅಶಾಸ್ತ್ರವೆಂದು ತಿಳಿದು ಇದನ್ನು ನಿಲ್ಲಿಸಬಹುದು” ಎಂದನು. ಸಿಕಂದರ

ಬಾದಶಹನ ಈ ಯುಕ್ತಿಯನ್ನು, ವಿಚಾರವನ್ನು ಎಲ್ಲರೂ ಒಪ್ಪಿದರು. ಆಗ ಸಿಕಂದರ ಬಾದಶಹನು ವಿಜಾಪುರದ ವಿದ್ವಾಂಸರಲ್ಲಿಯ ಕೆಲವರನ್ನು ಔರಂಗಜೇಬ ಬಾದಶಹನೊಂದಿಗೆ ಸಪ್ರಮಾಣ ಶಾಸ್ತ್ರಾರ್ಥದ ವಾದ ಮಾಡಲು ಆತನ ದಂಡಿಗೆ ಕಳಿಸಿದರು.

ಸಿಕಂದರ ಬಾದಶಹನ ಕಡೆಯಿಂದ ವಿದ್ವಾಂಸರು ಶಾಸ್ತ್ರಾರ್ಥದ ವಾದ ಮಾಡಲು ಮತ್ತು ಪ್ರಶ್ನೆ ಕೇಳಲು ಬಂದಿದ್ದಾರೆ ಎಂಬುದನ್ನು ಕೇಳಿದ ಔರಂಗಜೇಬ ಬಾದಶಹನು ತನ್ನ ಕಡೆಯ ವಿದ್ವಾಂಸರಲ್ಲಿ ಕೆಲವರನ್ನು ಕರೆಯಿಸಿದನು. ಆಗ ಅವರು ಬಂದು ಏನು ಪ್ರಶ್ನೆ? ಯಾವ ವಾದ? ಎಂದು ವಿಜಾಪುರದ ವಿದ್ವಾಂಸರನ್ನು ಕೇಳಿದರು. ಆಗ ವಿಜಾಪುರದ ವಿದ್ವಾಂಸರು ಬಹಳ ಎಚ್ಚರಿಕೆಯಿಂದ ಮಾತನಾಡಿದರು.

"ಅಲ್ಲಾನ ಸ್ಮರಣೆ ಮತ್ತು ಆತನ ಉಪಕಾರ ಇರಲಿ, ನಮ್ಮ ಕಾಲಕಿರ್ದಿಯಲ್ಲಿರುವ ಆದಿಲಶಹ ಅರಸು ನ್ಯಾಯನಿಷ್ಟ. ಶೂರ, ಧೈರ್ಯವಂತ, ದಾನಿ, ದಯಾಳು, ಸುಸ್ವಭಾವ ಮತ್ತು ಕೃಪಾವಂತನಿದ್ದಾನೆ. ವಿದ್ವಾಂಸ, ನುಡಿದಂತೆ ನಡೆಯುವವ, ದೇವರ ಸೇವೆಯನ್ನು ಮಾಡುವವ, ವಿರಕ್ತ, ಪವಿತ್ರ, ಸದ್ಗುಣಿ, ಶಾಸ್ತ್ರ ಪ್ರಮಾಣದಿಂದ ನಡೆಯುವವ, ಧರ್ಮನಿಷ್ಠ ಅಂದರೆ ತನ್ನ ಜ್ಞಾತಿ ಧರ್ಮದಂತೆ ನಡೆಯುವವ ಆಗಿದ್ದಾನೆ. ಆತನ ಕಾಲ ಕಿರ್ದಿಯಲ್ಲಿ ಯಾವುದೇ ಅಶಕ್ತ ಪುರುಷನು ಶಕ್ತಿವಂತ ಪುರುಷನಿಂದಾಗಲಿ ಮತ್ತು ಯಾವುದೇ ಇರುವೆಯು ಹಾವಿನಿಂದಾಗಲೀ ಪೀಡೆಯನ್ನು ಅನುಭವಿಸಿಲ್ಲ. ಅರ್ಥಾತ್ ಯಾರು ಯಾರಿಗೂ ಉಪದ್ರವವನ್ನು ಮಾಡಿಲ್ಲ. ಮುಂದೆ ಕೂಡ ಅಂಥ ಬಾದಶಹರು ಆಗುವುದಿಲ್ಲ. ಆದಿಲಶಾಹರ ದರಬಾರಿನಿಂದ ಯಾವುದೇ ಆಜ್ಞೆ ಕಾಯಿದೆಗಳು ಶಾಸ್ತ್ರಾರ್ಥವನ್ನು ಬಿಟ್ಟು, ಕುರಾನ ಷರೀಫದ ಆಜ್ಞೆಯನ್ನು ಮತ್ತು ಜ್ಞಾತಿ ಧರ್ಮವನ್ನು ಬಿಟ್ಟು ಎಂದಿಗೂ ಹೊರಟಿಲ್ಲ. ಯಾಕೆಂದರೆ, ರಾಜ್ಯದ ಧಣಿಯು ಜಾತಿಯಿಂದ ಮುಸಲ್ಮಾನನು, ಜ್ಞಾನಿಯು, ಏಕೇಶ್ವರೀಯನ್ನು ತಿಳಿದವನು, ಅದರಲ್ಲಿ ಪವಿತ್ರ ವಿಶ್ವಾಸ ಇಟ್ಟವನು. ಆತನ ಸರ್ವಮಂಡಳಿಯು, ಆತನೊಬ್ಬ ಯೋಗ್ಯ ಮುಸಲ್ಮಾನನೆಂದು ಸಿಕಂದರ ಬಾದಶಹನನ್ನು ಕರೆಯುತ್ತಾರೆ. ಆತ ಮಸೀದಿಗಳಲ್ಲಿ, ಶಾಲೆಗಳಲ್ಲಿ ನಮಾಜ ಮತ್ತು ಬಾಂಗ ಕೊಡುವ ಕರ್ತವ್ಯವನ್ನು ಚಾಚೂ ತಪ್ಪದೆ ನಡೆಸಿದ್ದಾನೆ. ಎಲ್ಲ ಮುಸಲ್ಮಾನ ಜನರೂ ತಮ್ಮ ಧರ್ಮಸ್ಥಾಪನೆಯ ಕಾರ್ಯದಲ್ಲಿ ಮತ್ತು ಅದನ್ನು ಸಜೀವವಾಗಿ ಇಡುವಲ್ಲಿ, ನಮಾಜ ಓದುವುದರಲ್ಲಿ ಕೂದಲೆಳೆಯಷ್ಟೂ ಅಂತರ ಆಗದಂತೆ ನೋಡಿಕೊಂಡಿದ್ದರೂ ಔರಂಗಜೇಬ ಬಾದಶಹನ ಸೈನ್ಯವು ಅತ್ಯಂತ ಸಿಟ್ಟಿನಿಂದ ಪ್ರಳಯವನ್ನೇ ಮಾಡುತ್ತ ಬಂದು, ನಿರಂತರ ಹಲ್ಲೆ ಮಾಡುತ್ತಲಿದೆ. ಏನೊಂದು ಅಪರಾಧ ಮಾಡಿರದಿದ್ದರೂ ಇಂಥ ನಿರಪರಾಧಿ ಮುಸಲ್ಮಾನ ಜನರಿಗೆ ತಿನ್ನಲು-ಕುಡಿಯಲು ಏನೊಂದು ಸಿಗದಂತೆ ಲೂಟಾಲೂಟಿಮಾಡಿ, ನಾಶಮಾಡಿ ಅವರನ್ನು ನಿರ್ವಂಶ ಮಾಡುವುದರಲ್ಲಿ ನಿರತವಾಗಿದೆ.

ಶಾಸ್ತ್ರಾರ್ಥಗಳ ಮೂಲ ಕಾರಣ ಕರ್ತರಾದ, ಹಜರತಮಹಮ್ಮದ ರಸೂಲಿಲ್ಲಾಹ ಆಲೇಹ ವಸ್ಸಲ್ಲಮರ ಮೇಲೆ ಮತ್ತು ಅವರ ನಂತರದ ಎಲ್ಲ ಪೈಗಂಬರರ ಮೇಲೆ ದೇವರ ಆಶೀರ್ವಾದ ಇರಲಿ. ಯಾಕೆಂದರೆ, ಆ ಹಜರತ ಪೈಗಂಬರರು ಮುಸಲ್ಮಾನರೊಂದಿಗೆ ಯುದ್ಧಮಾಡುವುದು ವರ್ಜ್ಯವೆಂದು ಹೇಳಿ, ಮನಾಯಿ ಮಾಡಿದ್ದಾರೆ. ಇದೇ ಪೈಗಂಬರರು "ಯುದ್ಧಮಾಡಲು ಹೋಗುವಾಗ, 'ಎಚ್ಚರಿಕೆ ಇರಲಿ, ಒಂದು ವೇಳೆ ಹಿಂದೂ ಜನರ ನಗರಗಳಲ್ಲಿ ಆಜಾನ ಅಂದರೆ, ಯಾರಾದರೂ ಬಾಂಗ ಕೊಡುತ್ತಿದ್ದರೆ ಮತ್ತು ಬಾಂಗ ಕೊಡುವ ದನಿ ಕೇಳಿದರೆ, ಅವರನ್ನು ಲೂಟಿ ಮಾಡಬಾರದು, ಅವರಿಗೆ ಪೀಡೆ ಕೊಡಬಾರದು" ಎಂಬುದಾಗಿ ಆಜ್ಞೆ ಮಾಡುತ್ತಿದ್ದರು. ಈ ಎಲ್ಲ ಆಧಾರ ಮತ್ತು ಈ ಸಂವಾದಗಳಿಂದ,

ಮುಸಲ್ಮಾನರ ಸಂಪತ್ತಿಗೆ ಮತ್ತು ಜೀವಕ್ಕೆ ಉಪದ್ರವ ಕೊಡುವುದು ಕೇವಲ ಅಯೋಗ್ಯವೆಂದು ಸಿದ್ಧವಾಗುತ್ತದೆ. ಔರಂಗಜೇಬ ಬಾದಶಹರು ನ್ಯಾಯಕೊಡುವವರೂ ಧರ್ಮಿಷ್ಠರೂ ಆಗಿದ್ದಾರೆ. ಅವರ ಒಂದು ಶ್ವಾಸ ಕೂಡ ಅಲ್ಲಾನ ಕೃಪೆಯ ಸ್ಥಾನವಾಗಿದೆ. ಆದರೆ ಈ ಕೆಲಸ ಔರಂಗಜೇಬ ಬಾದಶಹರ ಶಾಸ್ತ್ರಾರ್ಥದಿಂದ ಬಹಳ ದೂರ, ದೂರ, ದೂರವಾಗಿದೆ, ಅರ್ಥಾತ್ ಹೀಗೆ ಮಾಡುವುದು ತುಂಬ ಅಶಾಸ್ತ್ರವಾಗಿದೆ" ಎಂದರು.

ಈ ಸಂವಾದವನ್ನು ಕೇಳಿದ ಅಲಮಗೀರ ಬಾದಶಹನು ತನ್ನ ಕಡೆಯ ವಿದ್ವಾಂಸರಿಗೆ "ಆದಿಲಶಾಹನ ಕಡೆಯ ವಿದ್ವಾಂಸ ಜನರಿಗೆ ನಮ್ಮ ಉತ್ತರ ಹೀಗಿದೆ ಎಂದು ಹೇಳಿರಿ" ಎಂದನು:

"ನೀವು ಹೇಳಿದ್ದೆಲ್ಲ ಸತ್ಯವಾಗಿದೆ ಮತ್ತು ಸರಿ ಇದೆ. ಇದರಲ್ಲಿ ಯಾವುದೊಂದೂ ಅಮಾನ್ಯ ಮಾಡುವಂಥದಿಲ್ಲ. ನಮಗೆ ನಿಮ್ಮೊಂದಿಗೆ ನಿಮ್ಮ ನಗರದೊಂದಿಗೆ ಮತ್ತು ನಿಮ್ಮ ರಾಜ್ಯದೊಂದಿಗೆ ಯಾವ ತಕರಾರೂ ಇಲ್ಲ ಮತ್ತು ಅದರ ಅವಶ್ಯಕತೆಯೂ ಇಲ್ಲ. ನಿಮ್ಮೊಂದಿಗೆ ನಾವು ಮಾರಾಮಾರಿಯಾಗಲಿ, ಯುದ್ಧವನ್ನಾಗಲೀ ಮಾಡುತ್ತಿಲ್ಲ. ಆದರೆ, ಬೇಮಾನ ಹಿಂದುವಾದ, ನಿರ್ದೈವಿಯ ಮಗ ನಿರ್ದೈವಿ ಎಂಬಂತೆ ಶಿವಾಜಿಯ ಮಗ ಸಂಭಾಜಿಯಲ್ಲಿ ದುರ್ದೈವದ ಎಲ್ಲ ಲಕ್ಷಣಗಳಿವೆ. ಹಿಂದುಸ್ತಾನೀ ಭಾಷೆಯ ಅರ್ಧ ದ್ವಿಪದಿಯು 'ಯಾವುದೇ ಮುಸಲ್ಮಾನ ಅಪರಾಧಿಯಾಗಿದ್ದು, ಭಯದಿಂದಾಗಿ 'ಹರಮ್' ಅಂದರೆ ಮಕ್ಕೆಯ ಕೆಳಗಿನ ಗೋಡೆಯಲ್ಲಿ, ಅಂದರೆ ಆ ಅಲ್ಲಾನ ಸ್ಥಾನದ ಗೋಡೆಯ ಒಳಗೆಹೋಗಿ ಆಶ್ರಯ ಪಡೆದಿದ್ದರೆ, ಅಲ್ಲಿ ಆಶ್ರಯ ಪಡೆಯುತ್ತಿರುವವರೆಗೂ ಆತನನ್ನು ಹೊಡೆಯಬಾರದು' ಎಂದು ಹೇಳುತ್ತಿದೆ. ಆದರೆ ಸಂಭಾಜಿ ಹೀಗಿದ್ದಾನಲ್ಲ, ಆತ ಒಂದು ವೇಳೆ ಆ ಸ್ಥಾನದಲ್ಲಿ ಹೋಗಿ ಆಶ್ರಯ ಪಡೆದರೂ ಆತ ಕೊಲ್ಲಲು ಅರ್ಹನಾಗಿದ್ದಾನೆ. ಆ ಸಂಭಾಜಿಯು ನಿಮ್ಮ ಆಶ್ರಯವನ್ನು ಹಿಡಿದು ಬದುಕಿದ್ದಾನೆ, ಮತ್ತು ನಿಮ್ಮ ಆಧಾರದಿಂದ ಬಹಳ ವಂಚನೆ ಮೋಸಗಳನ್ನು ಮಾಡುತ್ತ ನಾಶಮಾಡುತ್ತಿದ್ದಾನೆ. ಊರೂರುಗಳಲ್ಲಿಯ, ನಗರಗಳಲ್ಲಿಯ ಮುಸಲ್ಮಾನರು ಮತ್ತು ರಾಜ್ಯ-ರಾಜ್ಯಗಳಲ್ಲಿಯ ಗ್ರಾಮ-ಗ್ರಾಮಗಳಲ್ಲಿಯ ಬಡಬಗ್ಗರು ದಿಲ್ಲಿಯ ಬಾಗಿಲವರೆಗೂ ಬಂದು ಸಂಭಾಜಿಯ ಪೀಡೆಯಿಂದ ಅತಿ ತೊಂದರೆಯನ್ನು ಅನುಭವಿಸಿ, ಹಗಲು ರಾತ್ರಿ ಕೂಗುತ್ತಿದ್ದಾರೆ. ಸ್ವಧರ್ಮದ ರಸ್ತೆಯಲ್ಲಿಯ ಕಸಕಡ್ಡಿಗಳನ್ನು ತೆಗೆದುಹಾಕಬೇಕು ಅಂದರೆ ಪೀಡೆ ಕೊಡುವ ಇಂಥ ಜನರು ಮುಸಲ್ಮಾನ ಧರ್ಮದ ಮಧ್ಯ ಇರಬಾರದು ಮತ್ತು ಅವರ ಸಮೂಲ ನಾಶ ಮಾಡುವುದು ಬಾದಶಹನಿಗೆ ಕ್ರಮಪ್ರಾಪ್ತವಾಗಿದೆ. ನಾವು ಕೂಡ ಬಾದಶಹರ ಗುಂಪಿಗೆ ಸೇರಿದವರು. ಆದ್ದರಿಂದ ನಮಗೆ ಹೀಗೆ ಮಾಡುವುದು ಯೋಗ್ಯವಾಗಿದೆ. ನಾವು ನಮ್ಮ ರಾಜ್ಯ (ವತನ) ಬಿಟ್ಟು ಈ ಸರಹದ್ದಿನಲ್ಲಿ ಬಂದಿರುವ ಉದ್ದೇಶ ಇಷ್ಟೇ ಆಗಿದೆ. ಅಂದರೆ, ಸಂಭಾಜಿಯನ್ನು ಹಿಡಿಯುವುದಕ್ಕಾಗಿ ಅಲ್ಲದೆ ಬೇರೆ ಏನೂ ಕಾರಣವಿಲ್ಲ. ಸಂಭಾಜಿಯನ್ನು ಹಿಡಿದು ಕೈಗೆ ತಂದು, ಆತನ ಪೀಡೆಯಿಂದ ಜಗದ ಜನರನ್ನೆಲ್ಲ ಬಿಡಿಸಬೇಕು. ಆ ಸಂಭಾಜಿ ನಿಮ್ಮ ಆಶ್ರಯದಲ್ಲಿದ್ದಾನೆ. ಅವನನ್ನು ನಮ್ಮ ವಶಕ್ಕೆ ಕೊಡಿರಿ. ಇಷ್ಟನ್ನೇ ನಿಮಗೆ ಕೇಳುತ್ತಿದ್ದೇವೆ. ಸಂಭಾಜಿ ನಮ್ಮ ಕೈಗೆ ಸಿಕ್ಕರೆ ಸಾಕು. ಇದೇ ಗಳಿಗೆಗೆ ನಾವು ಹೊರಟು ಹೋಗುತ್ತೇವೆ. ಮತ್ತು ನಮ್ಮ ದಿಲ್ಲಿಯ ಮಾರ್ಗವನ್ನು ಹಿಡಿಯುತ್ತೇವೆ".

ಎಂಬುದಾಗಿ ಔರಂಗಜೇಬ ಬಾದಶಹನು ಹೇಳಿದನು. ಬಾದಶಹನ ಉತ್ತರವನ್ನು ಕೇಳಿದ ವಿಜಾಪುರದ ಜನರು ಸ್ಥಬ್ದರಾದರು. ಅದಕ್ಕೆ ಉತ್ತರ ಕೊಡದೆ ವಿಜಾಪುರಕ್ಕೆ ತಿರುಗಿ ಬಂದರು.

## ೭೪. ಸಿಕಂದರನು ಮರಣ ಹೊಂದಿದ ಕಾರಣ :

ಆಲಮಗೀರ ಬಾದಶಹನು ವಿಜಾಪುರವನ್ನು ತೆಗೆದುಕೊಳ್ಳುವ ವಿಷಯದಲ್ಲಿ ಮತ್ತು ದಕ್ಷಿಣ ದೇಶಗಳನ್ನು ಹಸ್ತಗತ ಮಾಡಿಕೊಳ್ಳುವ ವಿಷಯದಲ್ಲಿ ಪ್ರಯತ್ನ ಮಾಡಿದಷ್ಟು, ಶ್ರಮ-ಶಕ್ತಿ ಬಳಸಿದಷ್ಟು, ತೊಂದರೆ ಅನುಭವಿಸಿದಷ್ಟು ಬೇರೆ ಯಾವ ವಸ್ತುಗಳನ್ನು ಪಡೆಯಲೂ ಅನುಭವಿಸಲಿಲ್ಲ. ಔರಂಗಜೇಬ ಬಾದಶಹನು ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಮೊದಲೇ ಮೇಲಿಂದ ಮೇಲೆ ದಕ್ಷಿಣ ದೇಶಗಳ ಮೇಲೆ ಸೈನ್ಯವನ್ನು ಕಳಿಸಿ ಅದನ್ನು ವಶಪಡಿಸಿಕೊಳ್ಳಲು ಬಹಳ ಪ್ರಯತ್ನ ಪಡುತ್ತಿದ್ದನು. ಸಿಂಹಾಸನದ ಮೇಲೆ ಕುಳಿತು ರಾಜ್ಯ ಸೂತ್ರಗಳನ್ನು ಹಿಡಿದಾಗಲೂ ಇದೇ ವಿಚಾರದಲ್ಲಿ ಇರುತ್ತಿದ್ದನು. ಮತ್ತೆ ಮತ್ತೆ ದಕ್ಷಿಣ ದೇಶಗಳ ಮೇಲೆ ಸೈನ್ಯವನ್ನು ಕಳಿಸುತ್ತಲೇ ಇದ್ದನು. ಎಲ್ಲ ರೀತಿಯ ಠಕ್ಕ ವಿದ್ಯೆ, ಮೋಸ, ವಂಚನೆ, ಸಾಧುಗಿರಿ, ಸಭ್ಯತನ, ಸಿಹಿ ಮಾತು, ವಿನಂತಿ ಮೊದಲಾದ ಬಾಗಿಲುಗಳಿಂದಲೂ ತನ್ನ ಕಾರ್ಯಸಿದ್ಧಿಯಾಗುವಂತೆ ಆಶಿಸುತ್ತಿದ್ದನು. ಆತ ಸಿಂಹಾಸನವನ್ನೇರಿದ ಮೇಲೂ ಇದೇ ರೀತಿ 30 ವರುಷಗಳು ಗತಿಸಿದುವು. ಅವೆಲ್ಲವುಗಳ ಮುಖ್ಯ ಉದ್ದೇಶ ವಿಜಾಪುರವನ್ನು ಪಡೆಯುವುದಾಗಿತ್ತು ಆದರೆ ಸಾಧ್ಯವಾಗುತ್ತಿರಲಿಲ್ಲ. ಕೊನೆಗೆ ನಿರುಪಾಯನಾಗಿ ಬಹು ದಿನಗಳ ಇಚ್ಛೆಯನ್ನು ಪೂರ್ತಿಗೊಳಿಸುವುದಕ್ಕಾಗಿ, ರಾಜಧಾನಿಯಲ್ಲಿದ್ದುಕೊಂಡು ಸುಖೋಪಭೋಗವನ್ನು ಭೋಗಿಸುವುದಕ್ಕಿಂತ ಪ್ರವಾಸದ ಸಂಕಟಗಳು ಉತ್ತಮವೆಂದು ತಿಳಿದು ತಾನೆ ಸ್ವತಃ ದಕ್ಷಿಣ ದೇಶಕ್ಕೆ ಬಂದನು. ಇಲ್ಲಿ ಬಂದನಂತರವೂ ಅನೇಕ ರೀತಿಯ ಠಕ್ಕ ವಿದ್ಯೆಗಳನ್ನು, ನಾನಾ ಪ್ರಕಾರದ ಹುನ್ನಾರಗಳನ್ನು ಮಾಡಿಯೂ ವಿಜಾಪುರವನ್ನು ಗೆಲ್ಲುವುದಾಗಲಿಲ್ಲ. ಬಹಳಷ್ಟು ಸಲ ತೊಂದರೆಗಳನ್ನೇ ಅನುಭವಿಸಿದನು.

ವಿಜಾಪುರ ಕೋಟೆಯನ್ನು ವಶಪಡಿಸಿಕೊಂಡು ವಿಜಯ ಸಾಧಿಸಿದ ನಂತರವೂ ಅದರ ವಶದಲ್ಲಿದ್ದ ಪ್ರದೇಶಗಳೆಲ್ಲ ಒಮ್ಮೆಲೇ ವಶವಾಗಲಿಲ್ಲ. ವಿಜಾಪುರದ ಶತ್ರುಗಳು ವಶವಾಗಿದ್ದರೂ, ಧಣಿಯಾದ ಸಿಕಂದರ ಬಾದಶಹನ ಬಂಧನವಾಗಿದ್ದರೂ ಅವುಗಳ ಮೇಲೆ ಸುಲಭವಾಗಿ ಗೆಲುವು ಸಾಧಿಸುವುದಾಗಲಿಲ್ಲ, ಬಹಳ ತೊಂದರೆಗಳನ್ನು ಪಡಬೇಕಾಯಿತು. ಒಂದು ಹೇಳಿಕೆಯಂತೆ, ಔರಂಗಜೇಬ ಬಾದಶಹನು ವಿಜಾಪುರ ಕೋಟೆಯನ್ನು ಗೆದ್ದ ನಂತರ ಅದರ ವಶದಲ್ಲಿದ್ದ ರಾಜ್ಯದ ಪ್ರದೇಶಗಳನ್ನು ವಶ ಪಡಿಸಿಕೊಳ್ಳಲು ಸುಮಾರು ೨೦ ವರುಷ ಪ್ರಯತ್ನ ಪಟ್ಟನಂತೆ. ಸಾರಾಂಶವೆಂದರೆ, ವಿಜಾಪುರದಂಥ ಒಂದು ಚಿಕ್ಕ ಸ್ಥಳ, ಅದರ ವಶದಲ್ಲಿದ್ದ ಪ್ರದೇಶಗಳು ಅಷ್ಟೊಂದು ಮಜಬೂತಾದದ್ದಲ್ಲ. ಅಲ್ಲಿಗೆ ಬಾದಶಹನ ಸೈನ್ಯವೇ ಬಂತು. ಅಲ್ಲಿಯ ಕಿಲ್ಲೇದಾರರು ಔರಂಗಜೇಬ ಬಾದಶಹನ ಆದೇಶಗಳನ್ನು ಪಾಲಿಸದೆ ದಾಂಡಿಗತನದಿಂದ ವರ್ತಿಸಿ, ಅಮರ್ಯಾದೆಯಿಂದ ನಡೆದುಕೊಳ್ಳುತ್ತ ಬಂದೂಕು- ಬಾಣಗಳ ಸರಮಾಲೆಯನ್ನೇ ಔರಂಗಜೇಬ ಬಾದಶಹನ ಜನರ ಮೇಲೆ ಬಿಡುತ್ತಿದ್ದರು! ಆಗ ಔರಂಗಜೇಬ ಬಾದಶಹನ ಕಡೆಯ ವಕೀಲರು ಬೆದರಿಕೆ ಹಾಕುತ್ತ ಆ ಕಿಲ್ಲೇದಾರರ ಕಡೆಗೆ ಹೋಗಿ - "ಮೂರ್ಖಾ, ನೀನು ಎಂಥ ಮೂರ್ಖತನ ಮಾಡುತ್ತಿದ್ದೀ? ನಿನಗೆ ಇನ್ನೂ ಸುದ್ದಿ ಗೊತ್ತಾಗಿಲ್ಲವೆ? ವಿಜಾಪುರ ವಶದಲ್ಲಿದ್ದ ಎಲ್ಲ ಪ್ರದೇಶಗಳೂ ಔರಂಗಜೇಬ ಬಾದಶಹನ ಕೈಗೆ ಬಂದಿವೆ. ಆದರೆ ನೀನು ಹುಚ್ಚನಾಗಿದ್ದೀ - ಆತನ ಸೈನ್ಯದ ಮೇಲೆ ಬಂದೂಕುಗಳನ್ನು ಹಾರಿಸುತ್ತಿರುವಿ ಆತನ ಆದೇಶಗಳನ್ನು ಪಾಲಿಸದೆ ದಾಂಡಿಗತನದಿಂದ ವರ್ತಿಸುತ್ತಿರುವಿ. ನಿನ್ನ ರಾಜ್ಯದ ಧಣಿ ಸಿಕಂದರ ಬಾದಶಹನನ್ನು ಬಂಧಿಸಲಾಗಿದೆ. ಇಷ್ಟಾಗಿಯೂ ನೀನು ಈ ವಿಷಯಗಳಿಂದ ದೂರನಾಗಿ ಶುದ್ಧಿ ಇಲ್ಲದೆ ಬಿದ್ದಿರುವಿ' ಎಂದು ಹೇಳಿದಾಗ ಆ ಕಿಲ್ಲೇದಾರನು ಅಷ್ಟೇ ದಾಂಡಿಗತನದಿಂದ ಹೀಗೆ ಉತ್ತರ ಕೊಟ್ಟನಂತೆ "ನಾವು ನಮ್ಮ ಧಣಿಯ ಹೊರತಾಗಿ ಬೇರೆ ಯಾರನ್ನು ಗುರುತಿಸುವುದಿಲ್ಲ. ನಮ್ಮ ಬಾದಶಹನು ಜೀವಂತ

ಇರುವವರೆಗೆ ನಾವು ಅವನ ಚಾಕರರಾಗಿದ್ದೇವೆ. ಅವನ ಸೇವೆಯಲ್ಲೆ ನಾವು ನಮ್ಮ ಜೀವ ಬಿಡುತ್ತೇವೆ" ಸುದ್ದಿಗಾರರು ನೀಡಿದ ಈ ಎಲ್ಲ ವಿಷಯವನ್ನು ಕೇಳಿ ಔರಂಗಜೇಬ ಬಾದಶಹನು ಆಶ್ಚರ್ಯ ಪಟ್ಟನಂತೆ. ಸಿಕಂದರ ಬಾದಶಹನು ಬಂಧನದಲ್ಲಿದ್ದರೂ ಆತ ಜೀವಂತವಾಗಿರುವುದರಿಂದ ಒಳಸಂಚು ಇತ್ಯಾದಿ ಪ್ರಕಾರಗಳು ಇನ್ನೂ ಜೀವಂತವಾಗಿವೆ ಎಂದು ತಿಳಿದುಕೊಂಡನಂತೆ.

ಇನ್ನೂ ಒಂದು ಹೇಳಿಕೆಯೂ ಇದೆ. ಗ್ರಂಥವನ್ನು ಬರೆಯುವವನು ಪ್ರತಿಯೊಂದನ್ನೂ ವರ್ಣಿಸಿ ಹೇಳಬೇಕಾದದ್ದು ಆತನ ಕರ್ತವ್ಯವಾಗಿದೆ. ಆದ್ದರಿಂದ ವರ್ಣಿಸುತ್ತಿರುವೆ. ಏನೆಂದರೆ, ವಿಷತುಂಬಿದ ಒಂದು ಖರಬೂಜದ ಹಣ್ಣನ್ನು ಸಿಕಂದರ ಬಾದಶಹನ ಹತ್ತಿರ ಕಳಿಸಿ, "ಅದನ್ನು ಸಿಕಂದರ ಬಾದಶಹನೇ ತಿನ್ನುವಂತೆ ಮಾಡಬೇಕು" ಎಂದು ಖೋಜಾನಿಗೆ ತಾಕೀದು ಮಾಡಿದನು. ಆ ಖೋಜಾನು ಬಾದಶಹನ ಆಜ್ಞೆಯಂತೆಯೇ ವಿಷಯುಕ್ತ ಖರಬೂಜ ಹಣ್ಣನ್ನು ಸಿಕಂದರ ಬಾದಶಹನಿಗೆ ತಿನ್ನಿಸಿ ತಿರುಗಿ ಬಂದನು. ಅದನ್ನು ತಿನ್ನುತ್ತಿದ್ದಂತೆಯೇ ಸಿಕಂದರ ಬಾದಶಹನ ಸುಕುಮಾರ ಶರೀರದಲ್ಲಿ ಆ ವಿಷ ಪ್ರವೇಶಿಸಿ ವ್ಯಾಪ್ತವಾಯಿತು. ಬೆನ್ನಹಿಂದೆಯೇ ಔರಂಗಜೇಬ ಬಾದಶಹನು ಸಿಕಂದರನಲ್ಲಿಗೆ ಮತ್ತೆ ಖೋಜಾನನ್ನು ಕಳಿಸಿ "ನಿನ್ನ ಮನದಲ್ಲಿರುವ ಇಚ್ಛೆಯನ್ನು ಹೇಳಿ ಕಳಿಸಬೇಕು. ಅದರಂತೆ ಮಾಡಲಾಗುವುದು" ಎಂದು ಹೇಳಿ ಕಳಿಸಿದನು. ಅದಕ್ಕೆ ಪ್ರತಿಯಾಗಿ ಸಿಕಂದರ ಬಾದಶಹನು, 'ತಮ್ಮ ಕೃಪೆಯಿಂದ ನನ್ನೆಲ್ಲ ಇಚ್ಛೆಗಳೂ ಪೂರ್ತಿಯಾಗಿವೆ. ಈಗ ನನ್ನ ಮನದಲ್ಲಿ ಯಾವ ಆಶೆಗಳೂ ಉಳಿದಿಲ್ಲ. ಆದರೆ ಒಂದು ಆಶೆ ಮಾತ್ರ ಇದೆ. ಅದು ನನ್ನ ಪ್ರೇತವನ್ನು ನನ್ನ ಗುರುಗಳ ಸಮಾಧಿಯ ಹತ್ತಿರ ಅವರ ಚರಣಾರವಿಂದಗಳ ಭೂಮಿಯಲ್ಲಿ ಹುಗಿಯಬೇಕು' ಎಂದು ಹೇಳಿ ಕಳಿಸಿದ. ಅನಂತರ ಅದೇ ದಿನ ಸಿಕಂದರ ಬಾದಶಹ ಮರಣ ಹೊಂದಿದನು. ಆತನ ಇಚ್ಛೆಯಂತೆ ಔರಂಗಜೇಬ ಬಾದಶಹನು ಅವನ ಹೆಣವನ್ನು ವಿಜಾಪುರಕ್ಕೆ ಕಳಿಸಿದನು. ಹಜರತ ಶಾಹ ನಯೀಮುಲ್ಲಾರ ಸಮಾಧಿಯ ಕೆಳಭಾಗದಲ್ಲಿ ಹುಗಿದರು.

ಈ ಹಜರತ ಶಾಹ ನಯೀಮುಲ್ಲಾರು ಹಜರತ ಶಾಹ ಬುರ್ಹಾನರ ಶಿಷ್ಯಮಂಡಳಿಯ ಸಂಬಂಧಿಕರಾಗಿದ್ದರು. ಮತ್ತು ಹಜರತ ಶಾಹ ಹಾಷಮ ಅಲೀ ಅವರ ಸ್ಥಾನವೊಂದರ ಪದಾಧಿಕಾರಿಗಳೂ ಆಗಿದ್ದರು. ಈಗಲೂ ಕೂಡ ಸಿಕಂದರ ಬಾದಶಹನ ಸಮಾಧಿ ಮಣ್ಣಿನದೇ ಆಗಿದೆ. ಆ ಸಮಾಧಿಯ ಮೇಲೆ ಯಾವ ಕಟ್ಟಡವನ್ನೂ ಕಟ್ಟಿಲ್ಲ.

ಹೀಗೂ ಹೇಳಲಾಗುತ್ತದೆ. ಏನೆಂದರೆ, ಸಿಕಂದರ ಬಾದಶಹನ ಹೆಣವನ್ನು ವಿಜಾಪುರ ನಗರಕ್ಕೆ ತಂದಾಗ ಆ ದಿನ ವಿಜಾಪುರ ನಗರದಲ್ಲೆಲ್ಲ ಗದ್ದಲವೋ ಗದ್ದಲ. ನಗರದ ಸ್ತ್ರೀಪುರುಷರೆಲ್ಲ ಸೇರಿ ಅತ್ಯಂತ ಆಕ್ರೋಶದಿಂದ ಅಳುತ್ತಿದ್ದರಂತೆ. ಆ ದಿನವೆಂದರೆ ಪೃಥ್ವಿ ಪ್ರಳಯ ಶೋಕದಿನವಾಗಿತ್ತಂತೆ. ಸಾವಿರಾರು ಸ್ತ್ರೀಯರು, ತಮ್ಮ ಗಂಡ ಸತ್ತರೆ ಶೋಕದಿಂದ ತಮ್ಮ ಕೈಗಳಲ್ಲಿಯ ಬಳೆಗಳನ್ನೂ ಒಡೆದು ವಿಧವೆಯರಾಗುವಂತೆ, ತಮ್ಮ ಕೈಗಳಲ್ಲಿಯ ಬಳೆಗಳನ್ನು ಬಡಿ-ಬಡಿದು ಒಡೆದರಂತೆ.

### *೭೫. ಆದಿಲಶಾಹಿ ಕಾಲಕರ್ದಿಯ ಕೊನೆಯ ವ್ಯಕ್ತಿ ಸಿಕಂದರ ಬಾದಶಹನು. ಆತನ ಪರಿಣಾಮದ ಒಂದಿಷ್ಟು ವರ್ಣನೆ :*

ಸಿಕಂದರ ಬಾದಶಹನು ರಾಜಧಾನಿ ತೋಟದ ಲಕ್ಷೋಪಲಕ್ಷ ವೃಕ್ಷಗಳಲ್ಲಿ ಒಂದು ವೃಕ್ಷ. ರಾಜ್ಯದ, ವೈಭವದ ಉನ್ನತಿಯ ಒಂದು ನಕ್ಷತ್ರ. ಆದರೆ ಆ ವೃಕ್ಷಕ್ಕೆ ಮನೋರಥ ಪೂರ್ಣದ ಆಹ್ಲಾದವಾಗಲೀ,

ಸುಖದ ಶವಶವಿಯಾಗಲೀ ಇರಲಿಲ್ಲ. ಕಾಲಚಕ್ರದ ಅತಿ ಕಠಿಣ ಗಾಳಿಯಿಂದ ಆ ವೃಕ್ಷ ಒಣಗಿತು ಮತ್ತು ಸುಖದ ಮನೋರಥ ಪೂರ್ಣದ ಉನ್ನತ ಪದವಿ ಮುಟ್ಟದೆ ಬಹು ಬೇಗ ನಾಶವಾಯಿತು. ಸಿಕಂದರ ಬಾದಶಹನು ಸಿಂಹಾಸನದ ಮೇಲೆ ಕುಳಿತುಕೊಳ್ಳುವಷ್ಟು ಸುದೈವಿಯಾಗಿದ್ದನು. ಆದರೆ ಏನು ಉಪಯೋಗ? ಯಾಕೆಂದರೆ ಸಿಕಂದರ ಆದಿಲಶಾಹನ ಎಲ್ಲ ಆಯುಷ್ಯವೂ ರಾಜ್ಯ ಸೂತ್ರಗಳನ್ನು ಹಿಡಿಯದೆಯೇ ಖರ್ಚಾಗಿತ್ತು. ಮೂವತ್ತೆರಡು ವರುಷಗಳಷ್ಟು ಕಾಲ ಆತ ಬದುಕಿದ್ದನು. ಆದರೆ ಅದರ ಫಲ ಏನು? ಅವನ ಆಯುರ್ದಾಯವೆಲ್ಲ ಸಂಕಟದಲ್ಲಿ ಮತ್ತು ಶತ್ರುಗಳ ಮನೋರಥ ಪೂರ್ಣ ಮಾಡುವಲ್ಲಿ ಖರ್ಚಾಯಿತು. ಇಲ್ಲ ಇಲ್ಲ, ಹಾಗೆ ಹೇಳಬಾರದು! ಈ ನಾಶವಂತ ಜಗತ್ತಿನಲ್ಲಿಯ ಸುಖದಿಂದ ವಂಚಿತನಾದ ದುರ್ದೈವಿಯಾದರೂ ಪವಿತ್ರ ಪರಲೋಕದ ವೈಭವವನ್ನು ಕೈವಶಮಾಡಿಕೊಂಡನು. ಈ ಅಶಾಶ್ವತ ರಾಜ್ಯದ ಬದಲು ಪರಲೋಕದಲ್ಲಿಯ ಕಲ್ಯಾಣಪ್ರದ ರಾಜ್ಯವು ದೊರಕಿರಬೇಕು. ಅವನು ಮನೋರಥ ಪೂರ್ಣನಾಗಿಯೇ ಈ ಪೃಥ್ವಿಯಿಂದ ಹೊರಟು ಹೋಗಿರಬೇಕು. ಯಾಕೆಂದರೆ, ಅಲ್ಲಾನ ದೇವಾಲಯದಲ್ಲಿ ಹಾನಿಗೆ ಪ್ರವೇಶವೇ ಇಲ್ಲ. ಅಂದರೆ ಸಾಫೀ-ಸೂಫಿಗಳ ಧರ್ಮ ಮತ್ತು ಈ ಲೋಕದ ಆಚಾರ ವಿಚಾರಗಳು, ಜ್ಞಾನಿ, ವಿರಕ್ತ, ಸಾಧುಗಳ ಧರ್ಮಗಳು ಸಿಕಂದರ ಬಾದಶಹನಲ್ಲಿ ಪೂರ್ಣವಾಗಿದ್ದುವು. ಪೂರ್ಣ ಜ್ಞಾನಿಜನರ ಸಂಗಮಾಡಿ ಜ್ಞಾನಮಾರ್ಗವನ್ನು ಸಾಧಿಸಿದ ಸಿಕಂದರ ಬಾದಶಹನು, ತನ್ನ ಸಾಧನೆಯಿಂದ ಶ್ರೇಷ್ಠ ಶೇಖ ಜನರಲ್ಲಿ ಯೋಗ್ಯತೆಯನ್ನು ಪಡೆದು ಶಾಶ್ವತ ಜ್ಞಾನ ರಾಜ್ಯದ ವ್ಯವಸ್ಥೆಯನ್ನು ಮಾಡಿಕೊಂಡು, ಆ ರಾಜ್ಯದ ಬಾದಶಹನಾಗಿದ್ದನು. ಆ ಕಾಲದ ಜ್ಞಾನಿಗಳಲ್ಲಿ ಶಾಹ ನಯೀಮುಲ್ಲಾರು ಅತಿ ಶ್ರೇಷ್ಠರಾಗಿದ್ದರು. ಸಿಕಂದರ ಬಾದಶಹನು ಅವರಿಗೆ ಶರಣಾಗಿ, ಅವರಿಂದ ಜ್ಞಾನಮಾರ್ಗವನ್ನು ಸಂಪಾದಿಸಿದ್ದನು. ಅಲ್ಲದೆ ಬೇರೆ ಅನೇಕ ವಿದ್ವನ್ಮಾಣಿಗಳ ಸಂಗದಲ್ಲಿದ್ದು ವಿಷಯ ವ್ಯಾಮೋಹದಿಂದ ಮನಸ್ಸನ್ನು ತೆಗೆದು ಹಾಕಿ, ದೈವ ಫಲಪ್ರಾಪ್ತಿಯನ್ನು ಸಾಧಿಸಿಕೊಂಡಿದ್ದನು.

## ೭೬. *ಹೀಗೊಂದು ವಿಷಯ :*

ಜ್ಞಾನಿ ಶೇಖ ಮಹಂಮೂದ ಬಹರೀ, ವಿದ್ವಾಂಸರಲ್ಲಿ ವಿದ್ವಾಂಸನಾಗಿದ್ದನು. ಈತ ಬರೆದಿರುವ 'ಜಫ್ವೇರೂಹ' ಗ್ರಂಥದಲ್ಲಿ ಹೀಗೆ ಬರೆಯುತ್ತಾನೆ. "ವಿಜಾಪುರದ ಯಜಮಾನರಲ್ಲಿಯ ಕೊನೆಯ ವ್ಯಕ್ತಿ ಸಿಕಂದರ ಬಾದಶಹ ಆತನು ಕಾರಣಾಂತರಗಳಿಂದ ಕೆಲವು ದಿನಗಳವರೆಗೆ ನನ್ನ ಸಹವಾಸದಲ್ಲಿದ್ದನು. ನಾನು ಸಿಕಂದರ ಬಾದಶಹನ ಖಾಸಾ ಡೇರೆಯಲ್ಲಿಯೇ ಒಂದೆರಡು ವರುಷ ಇದ್ದೆನು. ಆ ದಿನಗಳಲ್ಲಿ ಒಂದು ದಿನ, ಸಿಕಂದರ ಬಾದಶಹನು ಬಹಳ ಗೌರವದಿಂದ ನನ್ನನ್ನು ವಿಚಾರಿಸಿದನು. 'ಜೀವ ಎಂದರೆ ಯಾವ ಪದಾರ್ಥ? ಮತ್ತು ಜೀವ ಎಂದು ಯಾತಕ್ಕೆ ಅನ್ನುತ್ತಾರೆ? ಈ ಲಕ್ಷಣಗಳನ್ನು ಹೇಳಿರಿ' ಎಂದು ವಿಚಾರಿಸಿದನು. ಆಗ ನಾನು ಹೇಳಿದೆ 'ಜೀವ ಎಂಬ ಒಂದು ಪದಾರ್ಥ ಇಲ್ಲ. ಯಾರಾದರೂ ಜೀವದ ಅತ್ಯಂತ ಸೂಕ್ಷ್ಮ ಲಕ್ಷಣಗಳನ್ನು ಹೇಳುತ್ತ ಪ್ರತ್ಯಕ್ಷ ತೋರಿಸುವ ಎಂಬಂಥ ಪದಾರ್ಥವಲ್ಲ. ಜೀವ ಎಂದರೆ ಅಲ್ಲಾನ ಪ್ರತಿಬಿಂಬ ಅಲ್ಲಾನನ್ನು ಚಿಂತನೆಯಿಂದ ಮತ್ತು ವಿಚಾರಗಳಿಂದ ಸತ್ಯವೆಂದು ಮನ್ನಿಸುವಂತೆ ಜೀವನನ್ನು ಮನ್ನಿಸುವುದು. ಆದರೆ ಅವನನ್ನು ಪ್ರತ್ಯಕ್ಷವಾಗಿ ತಿಳಿದುಕೊಳ್ಳುವ ಗತಿ ಅಲ್ಲಿಯವರೆಗೂ ಮುಟ್ಟುವುದಿಲ್ಲ. ತರ್ಕದ ಕುದುರೆ ಜ್ಞಾನದ ಅರಣ್ಯದಲ್ಲಿ ಓಡಲು ಸಾಧ್ಯವಾಗುವುದಿಲ್ಲ. ಅಂದರೆ, ಜೀವದ ರೂಪ ವರ್ಣನೆ ಮಾಡುವಲ್ಲಿ ತರ್ಕದ ಗತಿಯು ನಡೆಯುವುದಿಲ್ಲ. ಸದ್ಗುರುವು ಕೃಪೆಮಾಡಿ. ಯಾರಿಗೆ ಜೀವದ ಲಕ್ಷಣಗಳ ಉಪದೇಶವನ್ನು ಮಾಡುತ್ತಾನೆಯೋ ಮತ್ತು ಪ್ರತ್ಯಯಕ್ಕೆ ತಂದು ಕೊಡುತ್ತಾನೆಯೋ

ಆತನ ನಾಲಗೆಯನ್ನು ಮೊದಲು ನಿಲ್ಲಿಸುತ್ತಾನೆ. ಅರ್ಥಾತ್ ಯಾರಿಗೆ ಜ್ಞಾನದ ಪ್ರತ್ಯಯವಾಗುತ್ತದೋ ಆತ ಶಬ್ದಪಾಂಡಿತ್ಯವನ್ನು ಮಾಡುವುದಿಲ್ಲ. ಜ್ಞಾನದಲ್ಲಿಯೇ ಮಗ್ನನಾಗಿರುತ್ತಾನೆ. ಫಾರ್ಸಿ ಬೈತದ ಅರ್ಥ "ಜೀವದ ರೂಪವನ್ನು ಪ್ರಕಟಿಸುವ ವರ್ಣನೆಯನ್ನು ನಾನು ಮಾಡಲಾರೆ. ಇಷ್ಟನ್ನು ಮಾತ್ರ ತಿಳಿದಿರುವೆ ಏನೆಂದರೆ ಜೀವ ಎಂಬುದು ನಿರ್ಗುಣ ಸ್ವರೂಪದಲ್ಲಿ ಕೇವಲ ಅಲ್ಲಾನ ರೂಪವಾಗಿದೆ ಮತ್ತು ಸಾಕಾರರೂಪದಲ್ಲಿ ಅಲ್ಲಾನ ಪ್ರತಿಬಿಂಬವಾಗಿದೆ" ಒಂದು ವೇಳೆ ಯಾವನೊಬ್ಬ ಮೂರ್ಖನು ನಾನು ಜೀವವನ್ನು ಪ್ರತ್ಯಕ್ಷವಾಗಿ ನೋಡಿರುವೆ ಮತ್ತು ಇನ್ನೊಬ್ಬರಿಗೂ ನಾನು ಅದನ್ನು ತೋರಿಸಿಕೊಡುವೆ ಎಂಬುದಾಗಿ ಹೇಳಿದರೆ, ಅವನು ಸುಳ್ಳು ಹೇಳುತ್ತಿದ್ದಾನೆ. ಅವನಿಗೆ ಯಾವ ಜ್ಞಾನವೂ ಪ್ರತ್ಯಯವಾಗಿಲ್ಲ ಮತ್ತು ಅಲ್ಲಾನ ಮೇಲೆ ಬಿರುಗಾಳಿಯನ್ನೇ ಎಬ್ಬಿಸುತ್ತಾನೆ. ಆತನ ನಾಲಗೆ ಕಡಿದು ಬೀಳಲಿ ಮತ್ತು ಆ ಅಸತ್ಯ ಮಾತುಗಳನ್ನು ಕೇಳಿ ಕಿವಿಗಳು ಹರಿದುಹೋಗಿ ಕಿವುಡನಾಗಲಿ.

ಇನ್ನೊಂದು ಫಾರ್ಸಿ ಬೈತದ ಅರ್ಥ ಹೀಗಿದೆ : "ಹೇ ಪ್ರಾಣಪ್ರಿಯಾ, ತನ್ನ ಚಿತ್ತವನ್ನು ಸ್ವಾಧೀನ ಪಡಿಸಿಕೊಂಡಿರುವ ವ್ಯಕ್ತಿಯಂತೆ, ಗೌರವದ ನಡತೆಯನ್ನು ಕಲಿಸುವುದರಲ್ಲಿ ಪ್ರಯತ್ನ ಮಾಡು. ಎಚ್ಚರಿಕೆ - ಹೇ ಪ್ರಾಣಪ್ರಿಯಾ, ಅಗೌರವದ ವ್ಯಕ್ತಿಗೆ ಯಾವ ಕಛೇರಿಯಲ್ಲೂ ದಾರಿ ಇಲ್ಲ ॥ ೧ ॥ ಯಾವ ವ್ಯಕ್ತಿಯು ಈ ಜ್ಞಾನಮಾರ್ಗದಲ್ಲಿ ಮುಖ್ಯನಾಗಿರುತ್ತಾನೆಯೋ ಆ ಮರ್ಯಾದಾ ವ್ಯಕ್ತಿಗೆ ಹೂವಿನಂತೆ ಕಂಡರೆ, ಅಮರ್ಯಾದಾ ವ್ಯಕ್ತಿಗೆ ಕೆಸರಿನಂತೆ ಕಾಣುತ್ತದೆ" ॥ ೨ ॥ ಈ ಬೈತಗಳಲ್ಲಿ 'ಗುಲ' ಎಂಬುದಾಗಿ ಪುರುಷನ ಹೆಸರನ್ನೂ ಮತ್ತು 'ಗೀಲ' ಎಂಬುದಾಗಿ ಕೆಸರಿನ ಹೆಸರನ್ನು ಬಳಸಲಾಗಿದೆ. ಇವುಗಳಲ್ಲಿಯ ತಾತ್ಪರ್ಯವೆಂದರೆ. ಗುಲ ಮತ್ತು ಗೀಲ. ಈ ಎರಡೂ ಶಬ್ದಗಳನ್ನು ಶುದ್ಧ ಫಾರ್ಸಿ ಲಿಪಿಯಲ್ಲಿ ಬರೆದರೆ ಒಂದೇ ರೀತಿಯಾಗಿ ಒಂದೇ ರೂಪದಲ್ಲಿ ಕಾಣುತ್ತವೆ. ಅವುಗಳಲ್ಲಿ ಒಂದು ಶಬ್ದಕ್ಕೆ 'ಪೇಷ' ಹಚ್ಚಿದರೆ ಗುಲ ಎಂದಾಗುತ್ತದೆ. ಒಂದು ಶಬ್ದಕ್ಕೆ 'ಜೇರ' ಹಚ್ಚಿದರೆ 'ಗೀಲ' ಎಂದಾಗುತ್ತದೆ. ಹೀಗೆ ಹಚ್ಚದೆ ಬರೆದರೆ ಎರಡೂ ಶಬ್ದಗಳು ಒಂದೇ ರೀತಿಯಾಗಿ ಕಾಣುತ್ತವೆ. ಅರ್ಥವನ್ನು ತಿಳಿದುಕೊಳ್ಳುವವನು ಹಿಂದು ಮುಂದಿನ ಅರ್ಥವನ್ನು ಲಕ್ಷ್ಯದಲ್ಲಿ ತಂದುಕೊಂಡು 'ಗುಲ'ಗೆ ಗುಲ ಎಂದೂ 'ಗೀಲ'ಗೆ ಗೀಲ ಎಂದೂ ಕರೆಯುತ್ತಾನೆ. ಹಾಗೆ ಮರ್ಯಾದಾ ವ್ಯಕ್ತಿ ಮತ್ತು ಅಮರ್ಯಾದಾ ವ್ಯಕ್ತಿ ಈ ಇಬ್ಬರೂ ಒಂದೇ ರೀತಿಯಲ್ಲಿ ಕಾಣಿಸುತ್ತಾರೆ. ಆದರೆ ಜ್ಞಾನಿಯಾದವನು ಆ ಉಭಯತರಲ್ಲಿಯ ಲಕ್ಷಣಗಳಿಂದ ಮರ್ಯಾದಾ ವ್ಯಕ್ತಿಯಾರು, ಅಮರ್ಯಾದ ವ್ಯಕ್ತಿ ಯಾರು ಎಂಬುದನ್ನು ತಿಳಿಯುತ್ತಾನೆ. ಆದ್ದರಿಂದ ಗೌರವದ ನಡತೆಯನ್ನು ಕಲಿಯಲು ಪ್ರಯತ್ನ ಮಾಡು, ಎಂಬುದಾಗಿ ಹೇಳಿದನು.

ಶೇಖ ಮಹಂಮುದ ಬಹರಿಯು ಬರೆದ 'ಜಹ್ವೇರೆ ದುನಿಯಾ' ಗ್ರಂಥದಲ್ಲಿ ಹೀಗೆ ಬರೆದಿದ್ದಾನೆ. "ಸಿಕಂದರಖಾನ ಆದಿಲಶಾಹನು ವಿಜಾಪುರ ರಾಜ್ಯದ ಬಾದಶಹರುಗಳಲ್ಲಿಯ ಕೊನೆಯ ವ್ಯಕ್ತಿಯಾಗಿದ್ದು ಆತನು ಫಕೀರನಿಗೆ ಅಂದರೆ ನನಗೆ '(ದುನಿಯಾ) ಜಗತ್ತು ಎಂಬುದು ಯಾವ ಪದಾರ್ಥವಾಗಿದೆ?' ಎಂದು ಕೇಳಿದನು. ಅದಕ್ಕೆ ನಾನು 'ದೇಹದ ಪರಿತ್ಯಾಗ ಮಾಡಿದ ಮೇಲೆ ಪರಲೋಕದಲ್ಲಿ ಉಪಯೋಗಕ್ಕೆ ಬೀಳದಿರುವ ಪದಾರ್ಥಕ್ಕೆ ಜಗತ್ತು (ದುನಿಯಾ) ಎಂದು ಹೆಸರು", ಎಂದು ಹೇಳಿದಾಗ ಸಿಕಂದರ ಬಾದಶಹನು. 'ಹೀಗೆ ಎಲ್ಲರೂ ಹೇಳುತ್ತಾರೆ, ಇದು ಸತ್ಯ, ಆದರೆ ನನ್ನ ಮನಸ್ಸಿಗೆ ಮುಟ್ಟುವಂತೆ ಏನಾದರೂ ಗುರುತು ಮಾಡಿ ಕೃಪೆಯಿಟ್ಟು ಹೇಳಿರಿ ಮತ್ತು ಅದರಿಂದ ನಾನು ಜ್ಞಾನಿಯಾಗಿ ಈ ವಿಷಯದಲ್ಲಿ ತಲ್ಲೀನನಾದೇನು' ಎಂದನು. ಆಗ ನಾನು ಹೇಳಿದೆ-'ಯಾವ ಪದಾರ್ಥವು ಕೈಯಲ್ಲಿ ಬರುತ್ತದೆಯೋ

ಮತ್ತು ದೃಷ್ಟಿಗೆ ಕಾಣುತ್ತದೆಯೋ, ಚಿತ್ತದಲ್ಲಿ ಮೂಡುತ್ತದೆಯೋ ಮತ್ತು ಯಾವ ಪದಾರ್ಥಕ್ಕೆ ಹೆಸರು ಮತ್ತು ಚಿಹ್ನೆಗಳ ನಿರ್ದೇಶವಿದೆಯೋ ಆಗ ಆ ಪದಾರ್ಥವು 'ಮುಲ್ಕ'ದ ಅವಸ್ಥೆಯಲ್ಲಿರಲಿ, 'ಮಲಕೂ'ದ ದಶೆಯಲ್ಲಿರಲಿ, ಅದಕ್ಕೆ (ದುನಿಯಾ) ಜಗತ್ತು ಎಂದು ಹೇಳಬೇಕು. ಇಲ್ಲಿ 'ಮುಲ್ಕ' ಅಂದರೆ ಸೂರ್ಯಚಂದ್ರರಿಂದ ಭೂಮಿಯವರೆಗೆ ದೃಷ್ಟಿಗೆ ಬೀಳುವ ಪದಾರ್ಥಗಳು. ಮಲಕೂತ ಅಂದರೆ ದೃಷ್ಟಿಗೆ ಕಾಣದಿರುವ ಅಗೋಚರ ಪದಾರ್ಥಗಳು, ಎಷ್ಟೆಲ್ಲ ದೃಷ್ಟಿಗೆ ಕಾಣುತ್ತವೆಯೋ ಅದೆಲ್ಲ 'ದುನಿಯಾ' ಎಂಬ ಪದಾರ್ಥವಾಗಿದೆ. ಅದರ ಹೊರತಾಗಿ ಎಷ್ಟೆಲ್ಲ ಇದೆಯೋ ಅದೆಲ್ಲ 'ದೀನ' ಎಂಬ ಪದಾರ್ಥವಾಗಿದೆ' ಈ ರೀತಿ ದೀನ ಮತ್ತು ದುನಿಯಾಗಳಲ್ಲಿ ಭೇದವಿದೆ ಎಂಬುದಾಗಿ ಹೇಳಿದೆನು. ಈ ಮಾತುಗಳನ್ನು ಕೇಳಿ ಸಿಕಂದರ ಬಾದಶಹನು ಆನಂದಪಟ್ಟನು. ಮತ್ತು ಬಹಳ 'ಶಾಬಾಸಕಿ' ಕೊಟ್ಟನು.

ಫಾರ್ಸೀ ಬೈತದ ಅರ್ಥ ಹೇಳುವಂತೆ - 'ಎಷ್ಟು ಪದಾರ್ಥಗಳು ಈ ಶರೀರದಲ್ಲಿವೆಯೋ ಅವುಗಳೆಲ್ಲ 'ದುನಿಯಾ' ಆಗಿದೆ. ಶರೀರದಲ್ಲಿದ್ದೂ ಕಾಣುವುದಿಲ್ಲವಾಗಿ 'ದುನಿಯಾ' ಆಗಿದೆ. ॥ ೧ ॥ ಎಷ್ಟು ಪದಾರ್ಥಗಳು ಶರೀರದ ಪ್ರತಿಬಂಧದಲ್ಲಿ ಇಲ್ಲವೋ ಅಷ್ಟೆಲ್ಲ ಪದಾರ್ಥಗಳು 'ದೀನ' ಆಗಿವೆ. ಒಂದು ವೇಳೆ ನೀನು ನನ್ನಿಂದ ಕೇಳಿ ತಿಳಿಯ ಬಯಸಿದ್ದರೆ ಇದರ ಗುರುತು ಹೇಳುವೆ ॥ ೨ ॥ ದುನಿಯಾ ಎಂಬ ಪದಾರ್ಥ ಯಾವುದು? ದೀನ ಎಂಬುದಾಗಿ ಯಾವುದನ್ನು ಕರೆಯುತ್ತಾರೆ? ಹೀಗೆಂದು ವಿಚಾರಿಸಿದರೆ, ಶರೀರವೇ ದುನಿಯಾ ಮತ್ತು ಜಿಹ್ವೆ ದೀನ ಆಗಿದೆ. ಮೊದಲಿನದು ಮೂರ್ಖತೆ, ಅನಂತರದ್ದು ಜ್ಞಾನ ಅಂದರೆ ದುನಿಯಾ ಎಂಬುದು ಮೂರ್ಖತೆ, ದೀನ ಎಂಬುದು ಜ್ಞಾನವಾಗಿದೆ ॥ ೩ ॥ ದೀನ ಎಂಬುದು ಉತ್ತಮ ಪದಾರ್ಥವಾಗಿದೆ, ದುನಿಯಾ ಎಂಬುದು ಅಯೋಗ್ಯ ಪದಾರ್ಥವಾಗಿದೆ. ಆತ ಶಿಷ್ಯನಾಗಿದ್ದಾನೆ. ಈತ ಗುರುವಾಗಿದ್ದಾನೆ ॥ ೪ ॥ ಈ ರೀತಿಯಾಗಿ ಮಾತುಕತೆಗಳು ಸಮಾಪ್ತಿ ಆದುವು. ಇವುಗಳೆಲ್ಲದರ ವಿವರಗಳಿಂದ ಗೊತ್ತಾಗುವುದೆಂದರೆ, ಸಿಕಂದರ ಬಾದಶಹನು ಸಾಧು-ಸಂತರ ಸಂಗತಿಯಲ್ಲಿರುತ್ತಿದ್ದನು. ಆ ಸಿಕಂದರನ ಮೇಲೆ ಅಲ್ಲಾನ ಕೃಪೆ ಇರಲಿ ಮತ್ತು ಆತನಿಗೆ ಕಲ್ಯಾಣವಾಗಲಿ.

### ೭೭. *ವಿಜಾಪುರ ಕೋಟೆಯ ವಿಜಯದ ಅನಂತರ ಆಲಮಗೀರ ಬಾದಶಹನು ವಿಜಾಪುರ ವಶದಲ್ಲಿದ್ದ ಪ್ರದೇಶವನ್ನು ಮತ್ತು ನಗರಗಳನ್ನು ಕೈವಶಮಾಡಿಕೊಳ್ಳಲು ಬಹಳ ದಿನ ಖರ್ಚು ಮಾಡಿದ್ದು :*

ಔರಂಗಜೇಬ ಬಾದಶಹನು ವಿಜಾಪುರ ಕೋಟೆಯನ್ನು ಪಡೆದು ವಿಜಯ ಸಾಧಿಸಿದ ಅನಂತರ ಅದರ ವಶದಲ್ಲಿದ್ದ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಲು ಅನೇಕ ದಿನಗಳು ಹಿಡಿದುವು. ಆ ಬಗ್ಗೆ ಒಂದಿಷ್ಟು ವಿಷಯಗಳನ್ನು ಬರೆಯಲಾಗುತ್ತಿದೆ.

ಔರಂಗಜೇಬ ಬಾದಶಹನು ವಿಜಾಪುರದಲ್ಲಿ ಒಂದೂವರೆ ತಿಂಗಳಿದ್ದು ದಿನಾಂಕ ೨, ಜಿಲ್ಹೇಜ ತಿಂಗಳು, (೧೦, ಅಕ್ಟೋಬರ ೧೬೮೬) ಅಂದು ವಿಜಾಪುರದಿಂದ ಕೂಚ್ ಮಾಡಿ ದಿನಾಂಕ ೨೮ರಂದು (೫ ನವಂಬರ ೧೬೮೬) ಸ್ವಾರಿಯು - ಸೋಲಾಪುರಕ್ಕೆ ಬಂದಿತು.[1] ಅಲ್ಲಿ ಒಂದು ತಿಂಗಳು ಇದ್ದು ಮೊಹರಮ್ ತಿಂಗಳ ೨೯ ರಂದು (೬ ಡಿಶೆಂಬರ ೧೬೮೬) ಕಲಬುರ್ಗಿಯ ಕಡೆಗೆ ಹೋಗಲು

1. On saturday, the 30th October 1686/22nd Zihajja the emperor left Bijapur and reached Sholapur on Tuesday, the 2nd November 1686/25th Zilhajja-MIA P. 173.

ಬಾದಶಹನು ಕೂಚ್ ಮಾಡಿದನು.[2] ಅಲ್ಲಿ ಬೀದರನಲ್ಲಿ ಇಳಿದು ಹೈದರಾಬಾದದ ಕಡೆಗೆ ನಡೆದನು. ರಬೀಲಾವಲ ತಿಂಗಳ ೪ ರಂದು (೯ ಜನೇವರಿ, ೧೬೮೭) ಗೋವಳಕುಂಡದಿಂದ ಒಂದು ಕೋಸಿನ ಅಂತರದಲ್ಲಿ ಇಳಿದುಕೊಂಡು ಗೋವಳಕುಂಡದ ಕೋಟೆಯ ಮೇಲೆ ಹಲ್ಲೆ ಮಾಡಿದನು.[3]

ವಿಜಾಪುರದ ಮೇಲೆ ಯುದ್ಧ ನಡೆದಾಗ, ಶಾಹ ಆಲಮ ಬಹಾದ್ದೂರ ಶಾಹನು ಸಿಕಂದರ ಬಾದಶಹನೊಂದಿಗೆ ಗೆಳೆತನ ಮಾಡಿಕೊಂಡು ಯಾರಿಗೂ ತಿಳಿಯದೆ, ಆತನಿಗೆ ಪತ್ರ ಬರೆಯುತ್ತಿದ್ದನು. ಇದೊಂದು ಸಂಶಯವಿತ್ತು, ಈ ಕಾರಣದಿಂದ ಗೋವಳಕುಂಡದ ಮೇಲೆ ಹಲ್ಲೆ ನಡೆದಿತ್ತು. ಆ ಸಮಯದಲ್ಲಿಯೇ ಸದರೀ ರಾಜಕುಮಾರನು ಅಬ್ದುಲ ಹಸನನೊಂದಿಗೂ ಗೆಳೆತನ ಇಟ್ಟಿದ್ದನು. ಅನೇಕ ಜನರು ಆ ರಾಜಕುಮಾರನ ಬಗ್ಗೆ ಫಿತೂರಿಯ ಪತ್ರಗಳನ್ನು ಪದಾರ್ಥಗಳ ಸಹಿತವಾಗಿ ಹಿಡಿದು, ಔರಂಗಜೇಬ ಬಾದಶಹನಿಗೆ ಹಾಜರು ಮಾಡಿದ್ದರು. ಆದ್ದರಿಂದ ಔರಂಗಜೇಬ ಬಾದಶಹನು ರಾಜಕುಮಾರನ ಮೇಲೆ ಅತ್ಯಂತ ಸಿಟ್ಟಿಗೆದ್ದು ಶಾಹ ಆಲಮ ಬಹಾದ್ದೂರ ಶಾಹನನ್ನು ಆತನ ಇಬ್ಬರು ಮಕ್ಕಳು ಸಹಿತವಾಗಿ ರಜಬ ತಿಂಗಳ ೨೬ರಂದು (೨೮ ಮೇ ೧೬೮೭) ನಜರಬಂದಿಯ ಪಹರೆಯಲ್ಲಿಟ್ಟನು.[4] ಮತ್ತು ಅವನ ಎಲ್ಲ ಸಾಮಾನುಗಳನ್ನು ಜಪ್ತ ಮಾಡಿದನು. ಒಂದೇ ಸಣ್ಣ ಡೇರೆಯಲ್ಲಿ ರಾಜಕುಮಾರನನ್ನು ಆತನ ಮಕ್ಕಳೊಂದಿಗೆ ಇಟ್ಟನು.

ಜಿಲ್ಕಾದ ತಿಂಗಳ ೪ರಂದು (೨ ಸೆಪ್ಟಂಬರ ೧೬೮೭) ಔರಂಗಜೇಬ ಬಾದಶಹನು ಸಿಂಹಾಸನದ ಮೇಲೆ ಕುಳಿತ ೩೧ನೆಯ ವರುಷ ೮ ತಿಂಗಳು ಮತ್ತು ಕೆಲವು ದಿನಗಳು ಉರುಳಿದ ಅನಂತರ ಗೋವಳಕುಂಡದ ಕೋಟೆಯನ್ನು ಗೆದ್ದುಕೊಂಡನು.[5] ಆಗ ಕುತುಬುದ್ದೀನ ಮುಲ್ಕ ಅಬುಲ ಹಸನನನ್ನು ನಜರಬಂದಿಯ ಪಹರೆಯಲ್ಲಿ ಕೈದು ಮಾಡಿ, ದೌಲತಾಬಾದಿಗೆ ಕಳಿಸಿಕೊಟ್ಟನು.

ಪಾಮ ನಾಯಕನೆಂಬವನು ೧೨ ಸಾವಿರ ಸ್ವಾರರು ಮತ್ತು ಒಂದು ಲಕ್ಷ ಸಿಬ್ಬಂದಿಯ ಧಣಿ ಇದ್ದನು. ಆತ ಆದಿಲಶಾಹಿಯ ಚಾಕರರಲೊಬ್ಬನಾಗಿದ್ದನು. ಆತನ ಕಡೆಗೆ ಸಕರಗಡದ (ಸಗರಗಡ) ಕೋಟೆ ಇತ್ತು. ಆ ಕೋಟೆಯನ್ನು ಸಫರ ತಿಂಗಳ ೨ರಂದು (೧೬ ನವಂಬರ ೧೬೮೮) ರಾಜಶಕ ೩೨ರಲ್ಲಿ ಆತನ ಕೈಯಿಂದ ಬಿಡಿಸಿಕೊಂಡನು.[6] ಆ ಕೋಟೆಗೆ ನುಸರತ ಗಡ ಎಂದು ಹೆಸರಿಡಲಾಯಿತು.

---

2. On Sunday the 5th December 1686/29th Muharam, the emperor started from Sholapur for Gulbarga - MIA P.177.
3. ಶಕೆ ೧೬೦೮ ಮಾಘ ಮಾಸ (ಜನೆವರಿ ೧೬೮೭) ಕುತುಬಶಾಹನು ಬಸವಾಪಟ್ಟಣ ಮೊದಲಾದವುಗಳ ಸಹಿತ ಭಾಗಾನಗರವನ್ನು ಅವರಂಗಜೇಬನಿಗೆ ಕೊಟ್ಟನು. ಕಾಸಿಮಖಾನನ ವಿದ್ಯಮಾನದಿಂದ ಆದೇ ತಿಂಗಳು ಔರಂಗಜೇಬನು ಭಾಗಾನಗರಕ್ಕೆ ಬಂದು ಮುತ್ತಿಗೆ ಹಾಕಿದನು - ಜೇಧೆ ಶಕಾ ಪು. ೩೪
4. On Saturday, the 28th August 1687/18th Shawwal, Shah Alam's disloyal servants etc. expelled - MIA P. 178 -179.
5. ಶಕೆ ೧೬೦೯ ಭಾದ್ರಪದ ಶುದ್ಧ ೧೨ (೮ ಸಪ್ಟಂಬರ ೧೬೮೭) ಔರಂಗಜೇಬನು ಮೋಸಮಾಡಿ ಭಾಗನಗರವನ್ನು ತೆಗೆದುಕೊಂಡನು – ಜೇಧೆ ಶಕಾ ಪುಟ ೩೪ At midnight, on Wednesday, the 21 September 1687/24th Zilqada, through the treachery on Sarandaz Khan Batri Bijapuri ............ the Fort was captured - MIA P 182-183.
6. On Monday the 28th November 1687/2nd Safar, the fort of Sagar bowed to the Muslim leaders - MIA P.186.

ಆ ಪಾಮನಾಯಕನು ಅಹಮದನಗರದ ಸೇವೆಯಲ್ಲಿದ್ದಾಗ 'ಪಾಂಚಹಜಾರಿ' ಪದವಿಯನ್ನು ಪಡೆದಿದ್ದನು. ಅದಕ್ಕಾಗಿ ರುಹುಲ್ಲಾಖಾನನು ಅವನನ್ನು ನೇಮಿಸಿದ್ದನು. ಆತ ಕೋಟೆಯನ್ನು ವಶಕ್ಕೆ ಕೊಟ್ಟನು. ಆ ಪಾಮನಾಯಕನು ಖಾನ ಮಶಾರ ನಿಲ್ಧೀನ ಜೊತೆಗೆ ಬಂದು ಔರಂಗಜೇಬ ಬಾದಶಹನ ಎದುರಿಗೆ ಹಾಜರಾದನು. ಐದು ದಿನ ನೌಕರಿಯಲ್ಲಿದ್ದು ಮರಣ ಹೊಂದಿದನು.[೭]

ರಬೀಲಾವಲ ಮೊದಲ ದಿನದಂದು (೧೫ ಡಿಶೆಂಬರ ೧೬೮೮) ಹೈದರಬಾದದಿಂದ[೮] ಕೂಚ ಮಾಡಿ ಅದೇ ತಿಂಗಳು ೧೪ರಂದು (೨೮ ಡಿಶಂಬರ ೧೬೮೮) ಬೀದರ ನಗರವನ್ನು ಮುಟ್ಟಿದನು.[೯] ಅಲ್ಲಿಂದ ಕೂಚ್ ಮಾಡಿ ಜಮಾದಿಲಾವಲ ೩ರಂದು (೧೪ ಫೇಬ್ರವರಿ ೧೬೮೯) ಕಲಬುರ್ಗಿಯನ್ನು ಮುಟ್ಟಿ ಅಲ್ಲಿಂದ ಹೊರಟು ಅದೇ ತಿಂಗಳು ೨೨ರಂದು (೫ ಮಾರ್ಚ ೧೬೮೯) ವಿಜಾಪುರ ನಗರವನ್ನು ಮುಟ್ಟಿ ಕೋಟೆಯ ಒಳಗೆ ಖವಾಸಖಾನನ ವಾಡೆಯಲ್ಲಿ ಇಳಿದುಕೊಂಡನು.[೧೦]

ಆ ದಿನಗಳಲ್ಲಿ ಬೆಳಗಾವಿ ಕೋಟೆಯು ರಾಜಕುಮಾರ ಮಹಮ್ಮದ ಆಜಮಶಾಹನ ಪ್ರಯತ್ನದಿಂದ ಕೈವಶವಾಯಿತು. ಆ ಕೋಟೆಗೆ ಆಜಮನಿಗಡ ಎಂದು ಹೆಸರಿಡಲಾಯಿತು.[೧೧]

ಸವ್ವಾಲ ತಿಂಗಳ ೧೮ರಂದು (೫ ಆಗಸ್ಟ ೧೬೮೮) ಗಾಜೀಉದ್ದೀನಖಾನನ ಪ್ರಯತ್ನದಿಂದ ಅದೋನಿಯ ಕೋಟೆಯನ್ನು ಗೆದ್ದರು.[೧೨] ಸಿದ್ದೀ ಮಾಸೂದಖಾನನು ಆದಿಲಶಾಹನ ವತಿಯಿಂದ ಆ ಕೋಟೆಯನ್ನು ಮತ್ತು ಆ ಕೋಟೆಯ ವಶದಲ್ಲಿದ್ದ ಒಟ್ಟು ಪ್ರದೇಶವನ್ನು ವಶಪಡಿಸಿಕೊಂಡಿದ್ದನು. ಅವನು ಮೊದಲು ಮೊಗಲ ಶತ್ರುವನ್ನು ಪರಾಭವಗೊಳಿಸಲು ಸೈನ್ಯದೊಂದಿಗೆ ನಡೆದು ಬಂದನು. ಕೊನೆಗೆ ಮಾಸೂದಖಾನನು ಒಪ್ಪಂದ ಮಾಡಿಕೊಳ್ಳುವ ವಿಚಾರಮಾಡಿ, ಕೋಟೆಯನ್ನು ಮೊಗಲರ ವಶಕ್ಕೆ ಕೊಟ್ಟು ಖಾನ ಎಂಬ ಬಿರುದನ್ನು, 'ಸಾತಹಜಾರಿ' ಎಂಬ ಪದವಿಯನ್ನು ಮತ್ತು ಏಳು ಸಾವಿರ ಸ್ವಾರರನ್ನು ಪಡೆದನು. ವೃದ್ಧಾಪ್ಯದಿಂದಾಗಿ ಮಾಸೂದಖಾನನು ಗೌರವಸಲ್ಲಿಸಲು ಬಾದಶಹರ ಎದುರಿಗೆ ಬರಲಾಗಲಿಲ್ಲ. ಎಷ್ಟೋ ಜನ ಹೀಗೂ ಹೇಳುತ್ತಾರೆ. ಮಾಸೂದಖಾನನ ಮುಖದಮೇಲೆ ಬಿಳುಪುರೋಗವಿದ್ದ ಕಾರಣ ಮುಖ ತೋರಿಸಲು ನಾಚಿ ತನ್ನ ಮಗನನ್ನು ಕಳಿಸಿ, ಆತನಿಂದಲೇ ಸಲಾಮ ಮತ್ತು ಮುಜರಾ ಮಾಡಿಸಿದನಂತೆ. ಆದೋನಿಯ ಕೋಟೆಗೆ ಇಮ್ತಿಯಾಜಗಡ ಎಂಬ ಹೆಸರಿಡಲಾಯಿತು. ಇಷ್ಟೆಲ್ಲ ನಡೆದಾಗ ಅಲಮಗೀರ ಬಾದಶಹನು ವಿಜಾಪುರದಲ್ಲಿಯೇ ಇದ್ದನು.

---

7. On Tuesday, the 27th Decr. 1687/2nd Rabi-A the emperor granted Pam Nayak an interview and honoured him ....... after attending the court for five or six days he suddenly set off to visit hell .........MIA P.186.
8. On wednesday the 25th January 1688/1st Rabi-s the emperor started for Bijapur - MIA P.187.
9. On Tuesday the 7th February 1688/14th Rabi-s, the emperor reached Zafarabad-Bedar - MIA P.187.
10. On Sunday the 25th Feb 1688/3rd Jamad-A the emperor reached the outskirts of Gulbarga. On Thursday the 15 March 1688/22nd Jamada-A the emperor reached Bijapur - MIA P.188.
೧೧. ಶಕ ೧೬೦೭ ಫಾಲ್ಗುಣ ಮಾಸ (ಮಾರ್ಚ ೧೬೮೮) ಆಜಮಶಾಹನು ಬೆಳಗಾವಿಯನ್ನು ತೆಗೆದುಕೊಂಡನು ಮತ್ತು ಅನೇಕ ಕೋಟೆಗಳನ್ನು ಗೆದ್ದನು - ಜೇಧೆ ಶಕಾ ಪುಟ ೩೮
12. On the 6th August 1688/8th Shawwal the fort of Adoni surrendered to Firuz Zung Bahadur - MIA P. 191.

ರಾಜಶಕ ೩೨ರಲ್ಲಿ ಮೊಹರಮ ತಿಂಗಳು (ಅಕ್ಟೋಬರ ೧೬೮೯) ಅರ್ಧ ಉರುಳಿತ್ತು. ಆಗ ವಿಜಾಪುರದಲ್ಲಿ 'ಮಹಾಮಾರಿ'ಯ ದೊಡ್ಡ ಉಪದ್ರವವಾಯಿತು.[೧೩] ಈ ಬೇನೆಯಿಂದ ಒಂದು ಲಕ್ಷ ಜನ, ವ್ಯಾಪಾರಸ್ಥರು, ಸಿಪಾಯಿಗಳು, ಗ್ರಾಮಸ್ಥರು ಅಲ್ಲದೆ ಅನೇಕ ದೊಡ್ಡ ಜನರೂ ಸತ್ತರು. ಈ ಬೇನೆಯಿಂದ ಬಹುತೇಕ ಜನರು ಕಣ್ಣು, ಕಿವಿ ನಾಲಗೆಗಳನ್ನು ಕಳೆದುಕೊಂಡು ಕುರುಡು, ಕಿವುಡು, ಮೂಕರಾದರು. ಅಲಮಗೀರ ಬಾದಶಹನ ಜೊತೆಗೆ ಬಂದ ಅನೇಕ ದೊಡ್ಡ ದೊಡ್ಡ ಜನರು ಮತ್ತು ಬಾದಶಹನ ಸ್ತ್ರೀ, ಔರಂಗಬಾದಿ ಎಂಬವಳು, ಫಾಜಿಲಖಾನ ಅಲ್ಲದೆ ಕಾಜಿ, ಮುಫ್ತಿ, ಖತೀಬ ಮುಂತಾದ ಇಮಾಮಗಿರಿ ಮಾಡುವ ಕಾಮಗಾರರು ಮತ್ತು ರಾಜಾ ಜಸವಂತನ ಮಗ ಮಹಂಮದೀರಾಜ ಮೊದಲಾದವರು ಕೂಡ ಮರಣ ಹೊಂದಿದರು.

ಹೀಗೂ ಹೇಳುತ್ತಾರೆ ಔರಂಗಾಬಾದಿಯ ಶವವನ್ನು ದಫನಮಾಡಲು ನೌಬಾಗದ ಕಡೆಗೆ ಎತ್ತಿ ಒಯ್ಯುವವರಲ್ಲಿ ಖವಾಸಖಾನನ ವಾಡೆಯಿಂದ ಸ್ಮಶಾನ ಸ್ಥಳದವರೆಗೆ ೧೬ ಜನ ಅಲ್ಲಲ್ಲಿಯೇ ಈ ಬೇನೆಯಿಂದ ಸತ್ತರು. ಪ್ರಾರಂಭದಲ್ಲಿ ಈ ಕಾಲರಾ ಬೇನೆ ಹಬ್ಬಿದಾಗ ಸತ್ತ ಜನರಿಗೆ ಕಫನ (ವಸ್ತ್ರ)ಗಳನ್ನು ತೊಡಿಸಲಾಗದೆ ಬತ್ತಲೆಯಾಗಿಯೇ ತೆಗೆದುಕೊಂಡು ಹೋಗಿ ಕಾಡಿನಲ್ಲಿ ಚೆಲ್ಲುತ್ತಿದ್ದರಂತೆ. ಒಂದು ದಿನ ಇಲಹಾಪುರ ದರವಾಜಾದಿಂದ - (ಅಲ್ಲಾಪುರ ಗೇಟ) ತೆಗೆದುಕೊಂಡು ಹೋದ ಬತ್ತಲೆ ಶವಗಳ ಸಂಖ್ಯೆ ಎಣಿಕೆ ಮಾಡಲಾಗಿ ಏಳುನೂರನ್ನು ತಲುಪಿತಂತೆ! ಬಹುತೇಕ ಮನೆಗಳಲ್ಲಿ ರಾತ್ರಿ ಬಾಗಿಲು ಮುಚ್ಚಲು ಬೆಳಿಗ್ಗೆ ತೆರೆಯಲು ಯಾರೂ ಉಳಿಯುತ್ತಿರಲಿಲ್ಲ, ಮನೆಗಳಲ್ಲಿದ್ದ ಎಲ್ಲ ಸಣ್ಣ-ದೊಡ್ಡ ಸ್ತ್ರೀ ಪುರುಷರೆಲ್ಲ, ಒಬ್ಬರೂ ಬಿಡದೆ ಸಾಯುತ್ತಿದ್ದರು. ಸತ್ತವರ ಮನೆಗೆ ಹೋಗಿ ನೋಡಿ ಬರಲು, ಮಾತನಾಡಿಸಿ ಬರಲು, ಕನಿಷ್ಟ ಸುದ್ದಿ ಕೇಳಲು ಕೂಡ ನೆರೆ ಮನೆಯ ಜನರಿಗೆ ಪುರಸತ್ತು ಸಿಗುತ್ತಿರಲಿಲ್ಲ. ಕಾಲರಾ ಬೇನೆಯು ಲೋಕಪ್ರಳಯದ ದಿನವಾಗಿ ಪರಿಣಮಿಸಿತ್ತು. ಎಲ್ಲರ ಮನೆಯ ಪರಿಸ್ಥಿತಿಯೂ ಹಾಗೆಯೇ ಇದ್ದಾಗ ಯಾರುಯಾರನ್ನು ಮಾತನಾಡಿಸಬೇಕು? ಅವರೆಲ್ಲ ತಂತಮ್ಮ ದುಃಖದಲ್ಲಿಯೇ ಮಗ್ನರಾಗಿದ್ದರು. ಅರಬ್ಬೀ ಭಾಷೆಯ ಒಂದು ಬೈತದ ಅರ್ಥ ಹೀಗಿದೆ " ಇಂಥದೊಂದು ದಿನ ಯಾರು ಯಾರ ಪರಿವೆಯನ್ನೂ ಮಾಡುವುದಿಲ್ಲ. ಮರಣದ ದಿನ ಯಾರು ಯಾರ ಭಾರವನ್ನೂ ಹೊರುವುದಿಲ್ಲ". ಈ ಮಾರಿ ಬೇನೆಯ ದಿನಗಳಲ್ಲಿ ಎಲ್ಲರ ಅವಸ್ಥೆ ಹೀಗಾಗಿತ್ತು. ಕೆಲವು ಮನೆಗಳ ಬಾಗಿಲು ಆರಾರು ತಿಂಗಳುಗಳ ವರೆಗೆ ಮುಚ್ಚಿಯೇ ಇರುತ್ತಿದ್ದುವು. ಯಾರ ಯಾರದೋ ಸಂಬಂಧಿಕರು, ಇಲ್ಲವೆ ನೆರೆಹೊರೆಯವರು, ಗೆಳೆಯರು ಯಾರೂ ಉಳಿದಿರಲಿಲ್ಲ. ವ್ಯಕ್ತಿಯೊಬ್ಬ ಸತ್ತ ಸುದ್ದಿಯನ್ನು ಕೇಳಿ, ಆತನ ಮನೆಯ ಬಾಗಿಲನ್ನು ತೆರೆಯಬೇಕೆನ್ನುವವರು ಯಾರೂ ಇರಲಿಲ್ಲ. ಸತ್ತ ಜನರ ಸಂಪತ್ತನ್ನು ಇಚ್ಛಿಸುವವರೂ ಇರಲಿಲ್ಲ. ಶವದ ಸಂಪತ್ತಿನ ಕಡೆಗೆ ಯಾರೂ ನೋಡುತ್ತಿರಲಿಲ್ಲ.

ಹಿಜರಿ ಸನ್ ೧೧೧೦೧ರಲ್ಲಿ (ಕ್ರಿ.ಶ.ಸು. ೧೬೮೯-೯೦) ಈ ಮಹಾಮಾರಿಯ ಉಪದ್ರವವಾಯಿತು. ಉಪದ್ರವದಿಂದ ಬಾದಶಹನ ವಾಡೆಯಲ್ಲಿಯ ಹಲವಾರು ಖಾಸಾ ಸ್ತ್ರೀಯರು, ಅನೇಕ ರಾಜಕುಮಾರರು ಮತ್ತು ಅವರ ಅನೇಕ ಸೇವಕರು ಕೂಡ ಸತ್ತರು. ಬಾದಶಹನಿಗೆ ಒಬ್ಬ ರಾಜಶಾಸ್ತ್ರಿ ಇದ್ದನು. ಅವನು

---

೧೩. ಶಕೆ ೧೬೧೦ ಆಶ್ವೀನ ಮಾಸ (ಸಪ್ಟಂಬರ-ಅಕ್ಟೋಬರ ೧೬೮೮) ವಿಜಾಪುರದಲ್ಲಿ ಮಹಾ ಮಾರಿ ಬಂದಿತು ಜೇಧೆ ಶಕಾ ಪುಟ ೩೪.

ಶಾಸ್ತ್ರದ ಪ್ರಕಾರ ವರ್ಜ್ಯ ಮಾಡುವ ಪದಾರ್ಥಗಳಿಂದ ಹೇಗೆ ದೂರವಾಗಬೇಕೋ ಹಾಗೆ ಮಹಾಮಾರಿಯ ಪೀಡೆಯ ಭಯದಿಂದ ಓಡಿಯೇ ಹೋಗಿ ಬಿಟ್ಟನು. ಔರಂಗಜೇಬ ಬಾದಶಹನು ವಿಜಾಪುರದಲ್ಲಿಯೇ ಇದ್ದನು. ಆಗ ಬಾದಶಾಹೀ ದರಬಾರದಲ್ಲಿಯ ಕಾರಭಾರಿ ಜನರು, ಧರ್ಮಶಾಸ್ತ್ರವನ್ನು ಹೇಳುವವರು, ಶಾಸ್ತ್ರಾರ್ಥದ ಪ್ರಕಾರ ಬಾದಶಹನಿಗೆ "ಈ ಸಮಯದಲ್ಲಿ ಇಲ್ಲಿ ಇರಬೇಡ, ಮಹಾಮಾರಿಯ ಪೀಡೆ ಅಧಿಕವಾಗಿದೆ. ಆದ್ದರಿಂದ ನಗರವನ್ನು ಬಿಟ್ಟು ಹೊರಗೆ ಹೋಗುವುದು ಉತ್ತಮ" ಎಂದು ಹೇಳಿ, ನಗರದಲ್ಲಿರಲು ಬಾದಶಹನಿಗೆ ಅಡ್ಡಿ ಮಾಡಿದರು. ರಬೀಲಾವಲ ತಿಂಗಳ ೩ನೇಯ ದಿನದಂದು (೬ ಡಿಶೆಂಬರ ೧೬೮೯) ಯುದ್ಧಕ್ಕೆ ಹೋಗುವ ಸಿದ್ಧತೆಯೊಂದಿಗೆ ಔರಂಗಜೇಬ ಬಾದಶಹನು ವಿಜಾಪುರದಿಂದ ಅಕಲೂಜದ ಕಡೆಗೆ ನಡೆದನು.[೧೪]

ಎಂಟು ದಿನಗಳ ಅನಂತರ ಮಹಾಮಾರಿಯ (ಕಾಲರಾ) ಗದ್ದಲ ಶಾಂತವಾಯಿತು. ಆದರೂ ಆ ಉಪದ್ರವವು ಮೂರು ವರುಷಗಳ ವರೆಗೆ ನಿರಂತರ ಊರೂರುಗಳಲ್ಲಿ-ಗ್ರಾಮಾಂತರಗಳಲ್ಲಿ ನಡದೇ ಇತ್ತು. ಆ ಮಹಾಮಾರಿಯ ಉಪದ್ರವದಲ್ಲಿ ಸಾವಿರಾರು ಮನೆಗಳು ಮತ್ತು ಮಹಾಲುಗಳು ಬರಿದಾದುವು. ಕೋಟೆಯ ಒಳಬದಿಯಲ್ಲಿ ಕಾಣುವ ಬಹಳಷ್ಟು ಗೋರಿಗಳು ಆ ಮಹಾಮಾರಿಯ ಉಪದ್ರವದಲ್ಲಿಯವೇ ಆಗಿವೆ.

ರಬೀಲಾವಲ ತಿಂಗಳ ೧೬ನೆಯ ದಿನದಂದು (೧೯ ಡಿಶೆಂಬರ ೧೬೮೯)[೧೫] ಔರಂಗಜೇಬ ಬಾದಶಹನು ಮೌಜೆ ಕೋರೆಗಾವ (ತುಳಾಪುರ)ದಿಂದ ಕೂಚ್ ಮಾಡಿ ವಿಜಾಪುರದ ಕಡೆಗೆ ಹೊರಟನು. ಜಮಾದಿಲಾವಲ ೧೦ನೆಯ ದಿನಾಂಕದಂದು (೧೦ ಫೆಬ್ರವರಿ ೧೬೯೦) ಮೌಜೆ ಬಿದರಿ ಗ್ರಾಮದ ಹತ್ತಿರ ಕೃಷ್ಣಾತೀರಕ್ಕೆ ಮುಟ್ಟಿ ಅಲ್ಲಿಯೆ ಎರಡು ತಿಂಗಳು ಇದ್ದನು.[೧೬] ಸಾಬಾನ ತಿಂಗಳ ೧೯ನೆಯ ದಿನಾಂಕದಂದು (೧೯ ಮೇ, ೧೬೯೦) ಬಿದರಿಯಿಂದ ಕೂಚ್ ಮಾಡಿ ಮಂಗಲಿಗೆ (ಗಲಗಲಿ) ಬಂದು ಮುಟ್ಟಿದನು.[೧೭] ಇದೇ ತಿಂಗಳಲ್ಲಿ ಎಲ್ಲರಲ್ಲಿ ಪ್ರಸಿದ್ಧನಾದ ಶೇಖ ನಿಜಾಮ ದಖಣಿಯು ಆದಿಲಶಾಹಿ ರಾಜ್ಯದ ಚಾಕರಿ ಮಂಡಳಿಯಲ್ಲಿದ್ದವನು, ರಾಜ್ಯ ಹಾಳಾದನಂತರ ಕುತಬುಲ್ಮುಲ್ಕ ಅಬುಲ ಹಸನನ ಚಾಕರಿಗೆ ದಾಖಲಾಗಿದ್ದನು. ಅನೇಕ ದಿನಗಳ ನಂತರ ಅಲ್ಲಿಂದ ಹೊರಟು ಔರಂಗಜೇಬ ಬಾದಶಹನ ದರಬಾರದಲ್ಲಿ ಬಂದು, ಆತನ ಚಾಕರ ಮಂಡಳಿಯಲ್ಲಿ ದಾಖಲಾದನು, ಆತ ಮುಕರಬಖಾನ ಎಂಬ ಬಿರುದು ಪಡೆದು ಪನ್ಹಾಳ ಕೋಟೆಯನ್ನು ಕೈವಶಮಾಡಿಕೊಳ್ಳುವ ಕೆಲಸದ ಮೇಲೆ ನಿಯಮಿಸಲ್ಪಟ್ಟನು.

---

೧೪. ಶಕೆ ೧೬೧೦ ಮಾರ್ಗಶೀರ್ಷ ಮಾಸ (ನವಂಬರ-ಡಿಶೆಂಬರ ೧೬೮೮) ಔರಂಗಜೇಬನು ವಿಜಾಪುರದಿಂದ ತುಳಾಪುರದ ಹತ್ತಿರ ಭೀಮಾತೀರಕ್ಕೆ ಬಂದನು - ಜೇಧೆ ಶಕಾ - ಪುಟ ೩೪.
Friday the 14th December 1688/1st Rabi-A was chosen as the day for starting from Bijapur MIA P-192.

15. On wednesday, the 18th December 1689/16th Rabi-A the imperial camp started on the return journey from Koregaon towards Bijapur - MIA P.192

16. On 9th Febraury 1690/10th Jamad-A the camp reached the village of Badri - MIA P.200.

17. On Sunday, the 18th May 1690/19th Shaban the imperiral camp marched from Badri to Galagala MIA P 202.

ಸಂಭಾಜಿಯು ಅದೇ ದಿನಗಳಲ್ಲಿ ರಾಹೇರದಿಂದ ಖೇಳಣ ಕೋಟೆಗೆ ಹೋಗಿ[೧೮] ವ್ಯವಸ್ಥೆ ಮಾಡಿ, ಸಂಗಮನೇರ (ಸಂಗಮೇಶ್ವರ)ದಲ್ಲಿ ಆತನ ದಿವಾನನಾದ ಕಬಕಳಸ (ಕವಿ ಕಲಶ)ನು ಕಟ್ಟಿದ ತೋಟದ ಮನೆಯಲ್ಲಿ ಸಂತೋಷ ಮತ್ತು ಸುಖದಲ್ಲಿ ಮಗ್ನನಾಗಿದ್ದನು. ಅನಂತರ ಖಾನ ಫಿರೋಜಜಂಗನಿಗೆ ಸಂಭಾಜಿಯನ್ನು ನಾಶಮಾಡುವ ಕೆಲಸವನ್ನು ವಹಿಸಲಾಯಿತು. ಆದರೆ ಕಾಲರಾ ಬೇನೆಯಿಂದ ಆತನ ಕಣ್ಣುಗಳು ಹೋಗಿದ್ದುವು. ಆದ್ದರಿಂದ ಮಹಂಮದ ಆಜಮಶಾಹನನ್ನು ಆತನ ಬದಲಿ ನೇಮಿಸಿದನು. ಎಷ್ಟೇ ಶೋಧ ಮಾಡುತ್ತಿದ್ದರೂ ಸಂಭಾಜಿ ಕೈಗೆ ಸಿಕ್ಕಿರಲಿಲ್ಲ. ಅಷ್ಟರಲ್ಲಿ ಒಮ್ಮಿಂದೊಮ್ಮೆಲೇ ಶೇಖ ನಿಜಾಮನಿಗೆ ಸಂಭಾಜಿಯ ಸುದ್ದಿ ತಿಳಿಯಿತು. ಅವನು ನಾಲ್ಕೈದು ಸಾವಿರ ಸ್ವಾರರೊಂದಿಗೆ ಯಾರಿಗೂ ಗೊತ್ತಾಗದಂತೆ ಓಡಿಹೋಗಿ, ಆ ನಿರ್ದೈವಿ ಪುರುಷನಾದ ಸಂಭಾಜಿಯನ್ನು ಮುತ್ತಿದನು. ಸಂಭಾಜಿಯೂ ಯುದ್ಧಕ್ಕೆ ನಿಂತನು. ಆಗ ಸಂಭಾಜಿಯ ದಿವಾನನಾದ ಕಬಕಲಶ (ಕವಿ ಕಲಶ)ನು ಗಾಯಗೊಂಡನು ಮತ್ತು ಸಂಭಾಜಿಯು ಹವೇಲಿಯಲ್ಲಿ ಅಡಗಿ ಕುಳಿತನು. ಅನಂತರ ಸಂಭಾಜಿಯ ಮನೆ ಮಂದಿಯನ್ನೆಲ್ಲ ಹಿಡಿದರು. ಆ ಮಂಡಳಿಯನ್ನು ಜಮಾದಿಲಾವಲ ತಿಂಗಳ ೫ನೆಯ ದಿನಾಂಕದಂದು, (೨೭ಫೇಬ್ರವರಿ ೧೬೮೮) ಬಹಾದ್ದೂರಗಡದ ಕೋಟೆಯಲ್ಲಿ ಸನ್ನಿಧಿಗೆ ತರಲಾಯಿತು. ಅನಂತರ ಸಂಭಾಜಿಯನ್ನು ಕೈದು ಮಾಡಲಾಯಿತು.[೧೯] ಅದೇ ತಿಂಗಳೂ ೨೯ರಂದು (೨೨ ಮಾರ್ಚ ೧೬೮೮) ಸಂಭಾಜಿಯನ್ನು ಕೋರೆಗಾವ ಉರ್ಫ ಫತೇಹಾಬಾದದಲ್ಲಿ ಕೊಂದರು.[೨೦] 'ಕಾಫೆರ ನಹ ನುಮಿರುತ್ಪ' ಎಂದರೆ, ನರಕಕ್ಕೆ ಹೋಗಲು ಯೋಗ್ಯನಾದ ಹಿಂದೂ ಮರಣ ಹೊಂದಿದನು.

ಸಂಭಾಜಿಯನ್ನು ಕೊಂದ ಸೇವೆಗಾಗಿ ಶೇಖ ನಿಜಾಮ ಮಕರಬಖಾನನಿಗೆ ಖಾನಜಮಾನ ಫತೇಜಂಗ ಎಂಬ ಬಿರುದನ್ನು ಮತ್ತು 'ಸಾತಹಜಾರಿ' ಪದವಿಯನ್ನು ಜೊತೆಗೆ ಏಳು ಸಾವಿರ ಸವಾರರನ್ನು ಕೊಡಲಾಯಿತು. ಎಖಲಾಸಖಾನ ಮತ್ತು ಶೇಖ ಮೀರಾನ ಉಭಯತರು ಶೇಖ ನಿಜಾಮಖಾನನ ಮಕ್ಕಳಾಗಿದ್ದರು. ಆ ಉಭಯತರಲ್ಲಿ ಒಬ್ಬನಿಗೆ ಖಾನ ಆಲಮ ಎಂದು, ಇನ್ನೊಬ್ಬನಿಗೆ ಮುನವರಖಾನ ಎಂದು ಬಿರುದು ನೀಡಲಾಯಿತು.

ಸಂಭಾಜಿಯ ಸಹೋದರ ರಾಮಜೀ ಊರ್ಫ ಸಂತಾಜಿಯು ಸಂಭಾಜಿ ಸತ್ತ ನಂತರ ಸರದಾರನೆಂಬ ಹೆಸರಿನಿಂದ ಪ್ರಬಲನಾಗಿದ್ದನು. ಅಂದರೆ "ನಾನೊಬ್ಬ ಸರದಾರ" ಎಂದು ಕರೆದುಕೊಳ್ಳುತ್ತಿದ್ದನು.

---

೧೮. ಶಕೆ ೧೬೧೦ ಕಾರ್ತೀಕ ಮಾಸ (ಅಕ್ಟೋಬರ-ನವಂಬರ ೧೬೮೮) ಸಂಭಾಜಿ ರಾಜೇಯು ರಾಯಗಡದಿಂದ ಕಲಶನ ಸಹಾಯದಿಂದ (ಪನ್ಹಾಳಕ್ಕೆ) ಬಂದನು...... ಶಿರ್ಕೆ (ಗಣೋಜಿ)ಯೊಂದಿಗೆ ಯುದ್ಧ ಮಾಡಿ ಆತನನ್ನು ಓಡಿಸಿ ಖೇಳಣೆಗೆ ಬಂದನು. ಜೇಧೆ ಶಕಾ ಪು. ೩೪.

೧೯. ಶಕೆ ೧೬೧೦ ಮಾಘ ವದ್ಯ ೭ (೧ ಫೆಬ್ರುವರಿ ೧೬೮೯) ಶುಕ್ರವಾರ ಸಂಭಾಜಿ ರಾಜೆ ಮತ್ತು ಕವಿಕಲಶರು ರಾಯಗಡಕ್ಕೆ ಹೋಗಲು ಸಂಗಮೇಶ್ವರಕ್ಕೆ ಬಂದರು. ಆಗ ಸೇಕ ನಿಜಾಮನು ದೌಡಮಾಡಿ ಬಂದು ಉಭಯತರನ್ನು ಜೀವಂತವಾಗಿಯೇ ಹಿಡಿದುಕೊಂಡು ಹೋದನು. ಉಳಿದ ಜನ ರಾಯಗಡಕ್ಕೆ ಬಂದರು - ಜೇಧೆ ಶಕಾ ಪುಟ ೩೪-೩೫

೨೦. ಶಕೆ ೧೬೧೦ ಫಾಲ್ಗುಣ ವದ್ಯ ೩೦ (೧೧ ಮಾರ್ಚ ೧೬೮೯) ಔರಂಗಜೇಬನು ತುಳಾಪುರಿಯಲ್ಲಿ ಸಂಭಾಜಿ ರಾಜೆ ಮತ್ತು ಕವಿಕಲಶರನ್ನು ಕೊಂದು ಶಿರಚ್ಛೇದನ ಮಾಡಿದನು. ಜೇಧೆ ಶಕಾ ಪುಟ. ೩೫.
Sambha was executed with Kavikalas with the sword on Monday the 11th March 1689/ 29th Jamadilawal - MIA P. 196.

ಯ್ಯಾತೇಕಾದಖಾನನನ್ನು ರಾಹೇರಿಯ ಯುದ್ಧದ ಮೇಲೆ ನೇಮಿಸಲಾಗಿತ್ತು. ಆತ ರಾಹೇರಿ ಕೋಟೆಯಲ್ಲಿದ್ದವರ ಮೇಲೆ ದೊಡ್ಡ ಕಠಿಣ ಪ್ರಸಂಗವನ್ನೆ ತಂದಿದ್ದನು.[೨೧] ಆಗ ರಾಮಜಿಯು ಬೈರಾಗಿಯ ವೇಷವನ್ನು ಧರಿಸಿ ತನ್ನೆಲ್ಲ ಮರಾಠಾ ಸರದಾರ ಮಂಡಳಿ ಸಹಿತವಾಗಿ ಓಡಿ ಹೋದನು.[೨೨] ಮಲಬಾರ ಮತ್ತು ಕರ್ನಾಟಕದ ದಾರಿಯನ್ನು ಹಿಡಿದರು.

ಅಬದುಲ್ಲಾ ಖಾನನು ಮೊದಲು ರುಹುಲ್ಲಾಖಾನನ ಕಡೆಯಲ್ಲಿ ಮುಖ್ತ್ಯಾರನಾಗಿದ್ದನು. ಅನಂತರ ಆತನ ಕಡೆಗೆ ವಿಜಾಪುರದ ಸುಬೇದಾರಿಕೆಯ ಕೆಲಸ ಬಂದಿತು. ಆ ಅಬುದುಲ್ಲಾಖಾನನನು, ಓಡಿ ಹೋಗಿದ್ದ ರಾಮಜೀ ಮೊದಲಾದ ಸರದಾರರ ಬೆನ್ನು ಹತ್ತಿ ತುಂಗಭದ್ರೆಯ ದಂಡೆಯ ರಾಣಿಬೆನ್ನೂರಿನ ಜಮಾದಾರನ ಕೋಟೆಯಲ್ಲಿ ಆತನ ಮೇಲೆ ಎರಗಿದನು. ಬಹಿರರಾವ, ಮಾನ್ಯಾ ಘೋರಪಡಾ ಉಭಯತರು ಮತ್ತು ಸುಮಾರು ಒಂದು ನೂರು ದೊಡ್ಡ ದೊಡ್ಡ ಚಾಕರ ಜನರನ್ನು ಕೈದುಮಾಡಿದನು. ರಾಮಾ ಮಾತ್ರ ಕೈಗೆ ಸಿಗದೆ ತಾನೊಬ್ಬನೇ ಹೊರಗೆ ಓಡಿಹೋದನು. ಅಬದುಲ್ಲಾಖಾನನು ಔರಂಗಜೇಬ ಬಾದಶಹನ ಸನ್ನಿಧಿಯಲ್ಲಿ ಈ ದೂರು ತಿಳಿಸಲು ಬಂದನು. ಇದರಿಂದ ಬಾದಶಹನು ತುಂಬ ಸಿಟ್ಟಿಗೆದ್ದು, ಅಸಮಾಧಾನಗೊಂಡನು. ಅನಂತರ ಲಷ್ಕರಖಾನನು ವಿಜಾಪುರದ ಸುಬೇದಾರನಾದನು. ಈ ಸುಬೇದಾರರ ಗದ್ದಲದಲ್ಲಿ ವಿಜಾಪುರದಲ್ಲಿ ಬಂಧನದಲ್ಲಿದ್ದ ಹಿಂದುರಾವ ಮೊದಲಾದವರು ಸೆರೆಮನೆಯಿಂದ ತಪ್ಪಿಸಿಕೊಂಡು ಓಡಿಹೋದರು. ಹೀಗಾಗಿ ಈ ಸುಬೇದಾರನೂ ಬಾದಶಹನ ಕೋಪಕ್ಕೆ ತುತ್ತಾದನು. ಸಂಭಾಜಿಯನ್ನು ಹಿಡಿಯುವ ಮೊದಲು ರಾಹೇರದ ಕೋಟೆಯನ್ನು ವಶಪಡಿಸಿಕೊಳ್ಳುವ ಕೆಲಸದ ಮೇಲೆ ಯ್ಯಾತೇಕಾದಖಾನನನ್ನು ನೇಮಿಸಲಾಗಿದ್ದಿತು. ಆತನ ಪ್ರಯತ್ನದಿಂದ ಮೋಹರಮ್ ತಿಂಗಳ ೫ ದಿನಾಂಕದಂದು (೨೮ ಸಪ್ಟಂಬರ ೧೬೯೦) ರಾಹೇರಕೋಟೆಯನ್ನು ಗೆದ್ದು ವಶಪಡಿಸಿಕೊಂಡನು.

ದಿನಾಂಕ ೭ರಂದು (೩೦ ಸಪ್ಟಂಬರ ೧೬೯೦) ಯ್ಯಾತೇಕಾದಖಾನನು ಔರಂಗಜೇಬ ಬಾದಶಹನ ಸನ್ನಿಧಿಗೆ ಬಂದು ಆತನಿಂದ ಝುಲಫುಕಾರಖಾನನೆಂದು ಬಿರುದು ಪಡೆದನು. ಶಿವಾಜಿಯ ಸ್ತ್ರೀ ಮೊದಲಾದವರು ಮತ್ತು ಸಂಭಾಜಿಯ ಖಾಸ ಜನರು ಬಂಧನದಲ್ಲಿದ್ದರು. ಅವರನನ್ನೆಲ್ಲ ತಂದು ದೊಡ್ಡ ಡೇರೆಯಲ್ಲಿ ಬಂದೋಬಸ್ತಾಗಿ ಇಟ್ಟರು. ಈ ವಿಷಯದ ವ್ಯವಸ್ಥೆಗಾಗಿ ಆಸದಖಾನನನ್ನು ನೇಮಿಸಲಾಗಿತ್ತು.

ಸಂಭಾಜಿಯ ಮಗ ಶಾಹೂರಾಜನು ಒಂಭತ್ತು ವರುಷದವನಿದ್ದನು. ಆತನಿಗೆ 'ಸಾತಹಜಾರಿ'

---

೨೧. ಶಕೆ ೧೬೧೧ ಚೈತ್ರ ಶುದ್ಧ ೧೫ (೨೫ ಮಾರ್ಚ ೧೬೮೯) ಔರಂಗಜೇಬನು ಜುಲಫುಕಾರ ಖಾನನನ್ನು ಕಳಿಸಿ ರಾಯಗಡಕ್ಕೆ ಮುತ್ತಿಗೆ ಹಾಕಿದನು. ಜೇಧೆ ಶಕಾ ಪು-೩೫. Before the capture of Sambha Itiqad Khan had been sent to conquer fort Rairi .....On Saturday the19th Octobe- 1689/15th Muharam, he captured the fort and made the moches, wives, daughters and sons of Sambha - MIA P.199.

೨೨. ಶಕೆ ೧೬೧೧ ಚೈತ್ರ ವದ್ಯ ೧೦ ಶುಕ್ರವಾರ (೫ ಎಪ್ರಿಲ ೧೬೮೯) ರಾಜಾರಾಮನು ಓಡಿ ಪ್ರತಾಪಗಡಕ್ಕೆ ಹೋದನು. ಆಶ್ವಿನ ವದ್ಯ ೮ ಗುರುವಾರ (೨೬ ಸಪ್ಟಂಬರ ೧೬೮೯) ರಾಜಾರಾಮನು ಪನ್ಹಾಳದಿಂದ ಸ್ವಾರನಾಗಿ ಕಾರ್ತಿಕ ವದ್ಯ ೧೧ (೨೮ ಅಕ್ಟೋಬರ ೧೬೮೯) ವೆಲ್ಲೂರಿಗೆ ಬಂದನು. ಅಲ್ಲಿಂದ ಚಂದಿಗೆ ಬಂದನು - ಜೇಧೆ ಶಕಾ ಪು. ೩೫

ಪದವಿಯನ್ನು, ಏಳುಸಾವಿರ ಸವಾರರನ್ನು, ಮತ್ತು 'ರಾಜೆ' ಎಂಬ ಪದವಿಯನ್ನು ಆಲಂಗೀರ ಬಾದಶಹನು ಕೊಟ್ಟನು.[೨೩]

ಸಫರ ತಿಂಗಳ ೬ನೆಯ ತಾರೀಖಿನಂದು (೨೯ ಅಕ್ಟೋಬರ ೧೬೯೦) ರಾಯಚೂರು ಕೋಟೆಯನ್ನು ರುಹುಲ್ಲಾಖಾನನ ಯತ್ನದಿಂದ ಗೆದ್ದರು. ಆ ಕೋಟೆಗೆ ಫೆರೋಜಗಡ ಎಂಬ ಹೆಸರಾಯಿತು.[೨೪] ಜಮಾದಿಲಾಖರ ತಿಂಗಳ ೪ನೆಯ ದಿನಾಂಕದಂದು (೨೩ ಫೆಬ್ರವರಿ ೧೬೯೧) ಆಲಮಗೀರ ಬಾದಶಹನ ಸೈನ್ಯವು ಗಲಗಲಿ ಊರ್ಫ ಕುತುಬಾಬಾದದಿಂದ ಕೂಚ್‌ಮಾಡಿ ವಿಜಾಪುರಕ್ಕೆ ಬಂದು, ಕೋಟೆಯ ಹೊರಗೆ ಡೇರೆಯನ್ನು ಹಾಕಿತು.[೨೫] ಇದು ನಾಲ್ಕನೆಯ ಸಲವಾಗಿದೆ. ಈ ಮೊದಲು ಮೂರು ಸಲ ಬಂದಿತ್ತು. ರಮಜಾನ ತಿಂಗಳ ೯ನೆಯ ದಿನಾಂಕದಂದು (೨೮ಮೇ ೧೬೯೧) ಮಹಮದ ಕಾಮ ಬಕ್ಷಿಗೆ ಚಂದಿಭಾಗದಲ್ಲಿ ನಡೆದ ದಂಗೆಯನ್ನು ನಿಲ್ಲಿಸಿ, ದಂಗೆ ಖೋರರನ್ನು ಹಿಡಿಯಲು ನಿರೋಪ ಕೊಡಲಾಯಿತು.[೨೬] ಮೊಹರಮ ತಿಂಗಳ ೨೧ ರಂದು (೨೩ ಸಪ್ಟಂಬರ ೧೬೯೨) ರಾಜಶಕ ೩೬ ಉಮದತುಲ್ಮುಲ್ಕನನ್ನು ಕರ್ನಾಟಕ ಭಾಗದಲ್ಲಿಯ ಬಂಡುಖೋರರನ್ನು ನಿಯಂತ್ರಿಸಲು ನೇಮಿಸಲಾಯಿತು, ಆ ಉಮದುತುಲ್ಮುಲ್ಕನು ಹೋಗಿ ಕಡಪಾದಲ್ಲಿದ್ದ ಬಾದಶಾಹ ರಾಜಕುಮಾರನನ್ನು ಕೂಡಿಕೊಂಡನು. ರಬಿಲಾಖರ ತಿಂಗಳಿನ ೪ನೆಯ ದಿನಾಂಕದಂದು (೪ ಡಿಶೆಂಬರ ೧೬೯೨) ಚಂದಿಗೆ ಹೋಗಿ ಮುಟ್ಟಿದನು.[೨೭]

---

೨೩. ಶಕೆ ೧೬೧೧ ಕಾರ್ತೀಕ (ಅಕ್ಟೋಬರ ೧೬೮೯) ರಾಯಗಡದಲ್ಲಿ ಒಪ್ಪಿ, ಮಾರ್ಗಶೀರ್ಷ ಶುದ್ಧ ೨ ರವಿವಾರ, (೩ ನವಂಬರ ೧೬೮೯) ರಾಯಗಡನ್ನು ಮೊಗಲರಿಗೆ ಕೊಟ್ಟತು. ಸಂಭಾಜಿ ರಾಜೆಯ ಮಗ ಸಿವಾಜಿ ರಾಜೆನನ್ನು ತುಲಾಪುರದಲ್ಲಿ ಔರಂಗಜೇಬನ ಹತ್ತಿರ ಒಯ್ದರು. ಬಾದಶಹನು ಆವನಿಗೆ 'ಹಪ್ತಹಜಾರಿ' ಮಾಡಿದನು. ಶಾಹುರಾಜೆ ಎಂದು ಹೆಸರಿಟ್ಟನು. ಆದೇ ವರ್ಷ ಕುಲಗಡವನ್ನು ಮೊಗಲರು ತೆಗೆದುಕೊಂಡರು ಜೇಧೆ ಪು. ೩೫.

The emperor graciously ordered that tents fit for holding sambha's mother and other relations of the deceased should be set up in Gulalbar with all respects and privacy. Shahu, the nine year old elder son of Sambha was given the mansab of 7 Hazari (same troups) and title of Raja etc. -MIA p.200.

24. On Friday the 29th November 1689/ 26th Safar Ruhullah Khan captured the fort of Raichur- MIA P.200

೨೫. ಶಕೆ ೧೬೧೨ ಮಾಘ ಮಾಸ (ಜನವರಿ/ಫೆಬ್ರವರಿ ೧೬೯೧) ಆವರಂಗಜೇಬನು ಗಲಗಲಿಗೆ ಬಂದನು – ಜೇಧೆ ಪು ೩೬. On wednesday the 18th December 1689/16th Rabilawwal the imperial camp started from Koregaon (Tulapur) on 9th February 1690/10th Jamadilawal came to Badri. On Sudnay 18th May 1690/19th Shaban marched from Badri tp Galgala; on Monday the 24th Febraury 1691/4th Jamadassani the emperor marched from Galgala and alighted outside the fort of Bijapur - MIA p. 200-204.

೨೬. ಕಾಮಬಕ್ಷ ರಾಜಕುಮಾರನು ಅಸದಖಾನ ಜುಲಪುಕಾರಖಾನನ ಸಹಾಯದಿಂದ ಚಂದಿಗೆ ಬಂದನು. ಶಕೆ ೧೬೧೩ ಪೌಷ ಮಾಸ (ಡಿಸೆಂಬರ ೧೬೯೧) ದಾಖಲಾದನು ಜೇಧೆ ಶಕಾ ಪುಟ ೩೬. On Wednesday the 27th May 1691/9th Ramzan. Muhammad Kam Bakhsh was sent to put down the rebels of the country of Jinji - MIA P. 205.

27. News came that on Sunday, the 4th October 1691/21 Muharam Umadat-ul-Mulk Asad Khan had interviewed Kam Bakhsh Kadapa and that the two had reached Jinji on wednesday, the 16th December 1691/5th Rabiussani - MIA P. 207

ಅದೇ ವರುಷ ದಾರುಲ್ ಖಿಲಾಫತ್‌ದಿಂದ ಶಾಹ ಆಲಮನ ತಾಯಿ ನವಾಬಬಾಯಿ ತೀರಿಕೊಂಡ ಸುದ್ದಿ ಬಂದು ಮುಟ್ಟಿತು. ಆಗ ಸ್ವತಃ ತಾನು ಹಾಗೂ ಜೇಬುನ್ನೀಸಾ ಬೇಗಮ ಸಹಿತವಾಗಿ ಶಾಹ ಆಲಮನ ಡೇರೆಗೆ ಹೋಗಿ, ಆತನಿಗೆ ಸಾಂತ್ವನ ಹೇಳಿದರು. ಜಿಲ್ಕಾದ ತಿಂಗಳು ೪ನೆಯ ದಿನಾಂಕದಂದು (೯ ಜುಲೈ ೧೬೯೨) ಅಲ್ಲಿಯವರೆಗೂ ಶಾಹ ಆಲಮನು ನಜರಬಂದಿಯ ಬಂಧನದಲ್ಲಿದ್ದನು. ಅವನನ್ನು ಬಂಧನದಿಂದ ಬಿಡುಗಡೆ ಮಾಡಿ ಸನ್ನಿಧಿಯಲ್ಲಿ ಬರಲು ಆಜ್ಞೆಯಾಯಿತು. ಮತ್ತು ಎರಡು ಪ್ರಹರದ ನಮಾಜನ್ನು ಹಜರತನ (ಬಾದಶಹನ) ಜೊತೆಗೆ ಮಾಡಬೇಕೆಂದು ನಿರ್ಧರಿಸಿತು.[೨೮] ಮತ್ತು ಆತನ ಇಬ್ಬರು ಮಕ್ಕಳಿಗೆ ಬಿರುದುಗಳನ್ನು ಪದವಿಗಳನ್ನು ನೀಡಿ ಅವರ ಯೋಗ್ಯತೆಯನ್ನು ವೃದ್ಧಿಗೊಳಿಸಲಾಯಿತು. ಅಲ್ಲದೆ ಹೀಗೂ ಕೇಳಿ ಬರುತ್ತದೆ. ಔರಂಗಜೇಬನ ಮಗ ಶಾಹ ಆಲಮ ಬಹದ್ದೂರಶಾಹನಿಗೆ ಇಬ್ಬರು ಮಕ್ಕಳಿದ್ದರು. ಅವರನ್ನು ಒಂದೇ ಡೇರೆಯಲ್ಲಿ ಆರು ವರುಷ ನಜರಬಂದಿಯ ಪಹರೆಯಲ್ಲಿ ಇಡಲಾಗಿತ್ತು. ಒಂದು ದಿನ ಹಾಫೀಜ ಕರೀಖುಷ ಆಲ್ಲಾನು ಔರಂಗಜೇಬ ಬಾದಶಹನ ಸೇವೆಯಲ್ಲಿ ಬಂದು ಹಾಜರಾದನು. ಆತ ಕುರಾನನ್ನು ಎಷ್ಟು ಸುಸ್ವರವಾಗಿ ಓದುತ್ತಿದ್ದನೆಂದರೆ, ಆತನ ಸ್ವರ ಬಹಾದ್ದೂರಶಾಹನ ಸುಸ್ವರದೊಂದಿಗೆ ಕೂಡಿಕೊಳ್ಳುತ್ತಿತ್ತು. ಆ ಹಾಫೀಜನ ಕುರಾನ ಓದುವಿಕೆಯನ್ನು ಕೇಳುತ್ತಿದ್ದಂತೆ ಬಾದಶಹನಿಗೆ ಬಂಧನದಲ್ಲಿರುವ ತನ್ನ ಮಗ ಬಹದ್ದೂರಶಾಹನ ನೆನಪಾಯಿತು. ಬಾದಶಹನು ಮನದಲ್ಲಿಯೇ ತುಂಬ ಕಳವಳಗೊಂಡನು. ಆತನನ್ನು ಬಂಧನದಿಂದ ಬಿಡುಗಡೆ ಮಾಡಲು ಆಜ್ಞೆಮಾಡಿದನು. ಸನ್ನಿಧಿಗೆ ಕರೆಯಿಸಿಕೊಂಡನು.

ಸಾಬಾನ ತಿಂಗಳ ೨೬ನೆಯ ದಿನದಂದು (೪ ಮೇ ೧೬೯೨) ವಿಜಾಪುರದಿಂದ ಕೂಚ್ ಮಾಡಿ ಮತ್ತೆ ಎರಡನೆಯ ಸಲ ಔರಂಗಜೇಬ ಬಾದಶಹನು ಗಲಗಲಿಗೆ ಹೋಗಿ ಇದ್ದನು. ಜಿಲ್ಕಾದ ತಿಂಗಳ ೨೬ರಂದು (೩೧ ಜುಲೈ ೧೬೯೨) ಗಲಗಲಿಯಲ್ಲಿ ರುಹುಲ್ಲಾಖಾನನು ಮರಣ ಹೊಂದಿದನು. ಆಗ ಬಾದಶಹನು ಮಾತನಾಡಿಸಲು ಹೋದನು. ಆತ ಮರಣ ಹೊಂದಿದ ನಂತರ ಬಹರಮಂದಖಾನ ಮೀರನು ಬಕ್ಷಿಯಾದನು.

ಶಾಹ ಆಲಮ ಬಹಾದ್ದೂರಶಾಹನಿಗೆ 'ಚಾಳೀಸ ಹಜಾರಿ' (೪೦ ಸಾವಿರ) ಪದವಿ ಕೊಟ್ಟಿತು ಮತ್ತು ೪೦ ಸಾವಿರ ಸ್ವಾರರನ್ನು ಕೊಟ್ಟಿತು.

ರಾಜಶಕ ೩೭, ಸವಾಲ ತಿಂಗಳ ೨೦ನೆಯ ದಿನ (೧೫ ಜೂನ ೧೬೯೩)ದಂದು ಆಜಮಶಾಹನು 'ನಲಗುದಾ' ಬೇನೆಯಿಂದ ಬಳಲಿದನು. ಮತ್ತು ಸನ್ನಿಧಿಗೆ ಕರೆತರಲಾಯಿತು. ಮತ್ತು ಗುಲಾಲವಾಡೆಯಲ್ಲಿ ಅದಕ್ಕಾಗಿ ಡೇರೆ ಹಾಕಿದರು. ಬಾದಶಹನು ರಾಜಕುಮಾರನ ಬೇನೆಯಿಂದಾಗಿ ಅಲ್ಲಿಯೇ ಇದ್ದನು. ಮತ್ತು ರಾಜಕುಮಾರನು ಗುಣಮುಖನಾದನು. ರಾಜಶಕ ೩೮, ಸಾಬಾನಾ ತಿಂಗಳ ೬ನೆಯ ದಿನದಂದು (೧೨ ಮಾರ್ಚ ೧೬೯೫) ಗಲಗಲಿಯಿಂದ ಕೂಚ್ ಮಾಡಿ ಅಲಮಗೀರ ಬಾದಶಹನು ವಿಜಾಪುರಕ್ಕೆ ಬಂದನು.[೨೯] ಬಾದಶಹನ ಸೈನ್ಯವೂ ವಿಜಾಪುರದ ಭಾಗಕ್ಕೆ ಬಂದು ಇಳಿಯಿತು. ವಿಜಾಪುರಕ್ಕೆ ಅಲಮಗೀರ ಬಾದಶಹನು ಬಂದಿದ್ದು ಇದು ಐದನೆಯ ಸಲವಾಗಿದೆ.

---

28. On Monday, the 20th July 1691/4th Zilqada the prince (Shah Alam) was granted an interview. He was ordered to perform the Zuhar Namaz in company of the father - MIA P.-207.
29. On Monday, the 1st April 1695/26th Shaban, the emperor marched from Qutbabad, and on the 3rd April 1695/28th Shaban arrived at Bijapur for the fifth time - MIA P. 224.

ರಾಜಶಕ ೩೯ ಸವಾಲ ತಿಂಗಳ ೧೩ರಂದು (೨೧ ಮೇ ೧೬೯೫) ಮೌಜೆ ಬಹರಾಮಪುರದಲ್ಲಿ ಭಿವರಾ (ಭೀಮಾ) ನದಿಯ ದಂಡೆಯ ಮೇಲೆ ಸೈನ್ಯದ ಡೇರೆಗಳನ್ನು ಹಾಕಲಾಯಿತು.[೩೦] ಆ ಗ್ರಾಮಕ್ಕೆ ಇಸಲಾಮಪುರ ಎಂದು ಹೆಸರನ್ನಿಡಲಾಯಿತು. ಜಮಾದಿಲಾವರ ತಿಂಗಳಲ್ಲಿ (ಜನವರಿ ೧೬೯೬) ಖಾನಜಾದಖಾನ ಮತ್ತು ಮಹಮ್ಮದ ಮುರಾದಖಾನ ಈ ಉಭಯತರು ಬಾದಶಹರ ಸೈನ್ಯ ಸಹಿತವಾಗಿ ಸಂತಾನ ಅಂದರೆ ರಾಮಜೀಯರನ್ನು ಹಿಡಿದು ಶಿಕ್ಷಿಸುವ ಕೆಲಸದ ಮೇಲೆ ನೇಮಿಸಲಾಗಿತ್ತು. ಅವರು ಆದೋನಿಯ ಹತ್ತಿರ ಹೋಗಿ ಕಾಸಮಖಾನನೊಂದಿಗೆ ಕೂಡಿಕೊಂಡರು. ಯುದ್ಧವನ್ನು ಎದುರಿಸಲು ಎದ್ದು ನಿಂತರು. ಸೋತು 'ದಿದಬ್ರುಕ'ದ ಕೋಟೆಯನ್ನು ಹೊಕ್ಕು ಅಲ್ಲಿ ರಕ್ಷಣೆ ಪಡೆದರು. ಕಾಸಮಖಾನನಿಗೆ ಅಫೂ ತಿನ್ನುವ ಚಟವಿದ್ದಿತು. ಅವನಿಗೆ ಮೂರು ದಿನಗಳ ಕಾಲ ಅಫೂ ಸಿಗಲಿಲ್ಲ. ಆದರಿಂದಾಗಿ ಅವನು ಸತ್ತನು. ಹದಿಮೂರು ದಿನಗಳ ನಂತರ ಖಾನಜಾದಖಾನ ಮೊದಲಾದವರು ಅಭಯ ಕೇಳಿ, ಸನ್ನಿಧಿಗೆ ಹೋದರು.[೩೧]

ಮಹಮ್ಮದ ಆಜಮಶಾಹನು ಬಹಾದ್ದೂರಗಡದಿಂದ ನಿರೋಪ ಪಡೆದನು. ಆತ ರಾಜಶಕ ೩೯ರ ಜಿಲ್ಹೇಜ ತಿಂಗಳ ೧೨ನೆಯ ದಿನಾಂಕದಂದು (೧೪ ಜುಲೈ ೧೬೯೫) ಬಾದಶಹನ ಆಜ್ಞೆಯ ಮೇರೆಗೆ 'ಮನ್ನಾರ'ಕ್ಕೆ ಹೋದನು. ಖಾನಜಾದಖಾನನಿಗೆ ರುಹುಲ್ಲಾಖಾನ ಎಂಬ ಬಿರುದು ದೊರೆಯಿತು. ಅಲಮಗೀರ ಬಾದಶಹನು ಸಿಂಹಾಸನದ ಮೇಲೆ ಕುಳಿತ ೪೦ನೆಯ ವರುಷ ಫತ್ತೇಖಾನ ಬಹಾದ್ದೂರನು ತನ್ನ ತಂದೆ ಖಾನ ಫಿರೋಜಜಂಗನಿಂದ ತೊಂದರೆಗೊಳಗಾಗಿ ಸನ್ನಿಧಿಗೆ ಬಂದು ಸೇರಿದನು. ಒಂದು ತಿಂಗಳಿನ ನಂತರ ಬಾದಶಹನು ಆತನನ್ನು ಭೆಟ್ಟಿಯಾದನು. ಕಾಸಮಖಾನನ ಯುದ್ಧದ ನಂತರ ಸಂತಾಜಿಯು ಲೂಟಿಯಾದ ಸಾಮಾನುಗಳೊಂದಿಗೆ ತಾನು ಇರುವ ಸ್ಥಳಕ್ಕೆ ಹೊರಟುಹೋದನು. ಖಾನಜಹಾನ ಬಹಾದ್ದೂರನ ಮಗ ಹಿಮ್ಮತಖಾನನು ಸಿವಾಪಟ್ಟಣದಲ್ಲಿದ್ದನು. ಆತ ಸಂತಾಜಿಯ ಮೇಲೆ ಯುದ್ಧ ಸಾರಿದನು. ಆ ಯುದ್ಧದಲ್ಲಿ ಹಿಮ್ಮತಖಾನನನು ಸತ್ತನು.[೩೨]

ವಿಜಾಪುರದಲ್ಲಿ ಸುಬೇದಾರಿಯ ಕೆಲಸದ ಮೇಲೆ ಆದಿಲಖಾನನಿದ್ದನು. ಆತ ರಾಜಶಕ ೪೦ರಲ್ಲಿ ಮರಣ ಹೊಂದಿದನು. (೧೬೯೬-೯೭) ಮಹಮ್ಮದ ಕಾರಖಾನ ಎಂಬವನು ವಿಜಾಪುರದಲ್ಲಿ ಅಡಗಿ ಕುಳಿತಿದ್ದನು. ಆತನು ಆದಿಲಖಾನನ ಕೆಲಸದ ಮೇಲೆ ವಿಜಾಪುರದ ಸುಬೇದಾರನಾದನು.

---

30. On Saturday, the 11th May 1695/7th Shawwal, the imperial army moved from Nauraspur and Afzalpur (Bijapur) and reached Brahmapuri on the bank of Bhima on Tuesday 21st May 1695/17th Shawwal - MIA p.226.

31. On Sunday, the 19th January 1696/23rd Jamadassani the two forcas united six Kos from the track of the enemy ............. Qasim Khan died on the 3rd day (21st January 1699) Khanjadkhan begged for safety, and a truce was made on condition that he would surrender to santa the cash, articles etc......... besides 20 lakhs rupees....MIA P-227/230.

ಶಕೆ ೧೬೧೭ ಪೌಷ ಶುದ್ಧ ೧೧ (೫ ಜನವರಿ ೧೬೯೬) ಸಂತಾಜಿ ಘೋರಪಡೆಯು ಖಾನಜಾದೀಖಾನ ಮತ್ತು ಕಾಸಿಮುಖಾನರು ಸಿಟಯಾದ ಹತ್ತಿರ ದೊಡೆರೀ ಎಂಬ ಗ್ರಾಮದಲ್ಲಿ ಬಂಧಿತರಾದರು. ಕಾಸಿಮ ಖಾನನು ಸತ್ತ ಖಾನಜಾದಖಾನನಿಗೆ ಲಕ್ಷ ರೂಪಾಯಿ ಕೊಟ್ಟು ದಾರಿ ತೋರಿಸಿದರು - ಜೇಧೆ ಪು. ೩೮.

೩೨. ಶಕೆ ೧೬೧೨ ಪೌಷ ಮಾಸ (ಜನವರಿ ೧೬೯೭) ಹಿಮ್ಮತ ಬಹಾದ್ದೂರನನ್ನು ಸಂತಾಜಿ ಘೋರಪಡೆಯ ಬಸವಾಪಟದ ಹತ್ತಿರ ಕೊಂದನು -ಜೇಧೆ ಶಕಾ ಪುಟ-೩೮.

ರಾಜ ಶಕ ೪೧ ಮೊಹರಮ ತಿಂಗಳಲ್ಲಿ (ಜುಲೈ ೧೬೯೭) ಭಿವರಾ (ಭೀಮಾ) ನದಿಗೆ ದೂರದಿಂದ ನೀರು ಬಂದು ಮಹಾಪೂರ ಬಂದಿತ್ತು. ಆದರಿಂದ ಬಹಳ ಮನೆಗಳು ಮುಳುಗಿದುವು. ನಾವಿಕರು ನೌಕೆಗಳನ್ನು ಹಾಕಿ ತಮ್ಮ ಜೀವ ಉಳಿಸಿಕೊಂಡು ಹೊರಟು ಬಂದರು. ಫಕೀರ ಜನ ಮೊದಲಾದವರು ಆ ಮಹಾಪೂರದಲ್ಲಿ ಹರಿದು ಹೋದರು. ಮೂರನೆಯ ರಾತ್ರಿ ನೀರು ಇಳಿಯಿತು.[೩೩]

ರಾಜಶಕ ೪೧ ಜಮಾದಿಲಾವರ ತಿಂಗಳ ೧೯ನೆಯ ದಿನ (೨೪ ಡಿಶೆಂಬರ ೧೬೯೭) ಖಾನಜಹಾನ ಬಹಾದ್ದೂರನು ಮರಣ ಹೊಂದಿದನು.[೩೪] ಬಾದಶಹನು ಮಾತನಾಡಿಸಲು ಹೋಗಿದ್ದನು.

ಸಾಬಾನ ತಿಂಗಳ ಆರನೆಯ ದಿನದಂದು (೮ ಫೆಬ್ರವರಿ ೧೬೯೮) ಜುಲಫಿಕಾರಖಾನನ ಯತ್ನದಿಂದ ಚಂದ್ರಿದಿಕೋಟೆಯನ್ನು ಗೆದ್ದರು.[೩೫] ಆದಿಲಶಹನ ಕಡೆಯ ಕರ್ನಾಟಕ ಮೊದಲಾದ ಸಂಪೂರ್ಣ ಪ್ರದೇಶಗಳು ಬಾದಶಹನ ವಶವಾದುವು.

ರಾಜಶಕ ೪೨ ಸವಾಲ ತಿಂಗಳ ೨೭ನೆಯ ದಿನದಂದು ಔರಂಗಜೇಬ ಅಮೀರಖಾನ ನಾಜಮ ಕಾಬೂಲವಾಲಾನು ಮರಣ ಹೊಂದಿದನು. ಕಾಬುಲದ ಸುಬೆಯನ್ನು ರಾಜಕುಮಾರ ಮಹಮ್ಮದ ಆಜಮನ ವಶಕ್ಕೆ ಕೊಟ್ಟನು.

ಮಹಮ್ಮದ ಆಕಬರನ ಮಗನನ್ನು ದುರ್ಗಾದಾಸ ರಾಠೋಡನು ಸನ್ನಿಧಿಗೆ ತಂದನು. ಆತನ ಅಪರಾಧವನ್ನು ಷುಜಾತಖಾನ ನಾಜಮ ಹೈದರಬಾದವಾಲಾನು ಇದೇ ವರುಷ ಕ್ಷಮೆ ಮಾಡಿಸಿದನು.

ಇಸ್ಲಾಮಪುರದಲ್ಲಿ ನಾಲ್ಕು ವರುಷ ಇದ್ದನಂತರ ಅಲ್ಲಿನ ಮಣ್ಣಿನ ಕೋಟೆಯನ್ನು ಹೊಸದಾಗಿ ಕಟ್ಟಿಸಿ ಎಂದು ಆಜ್ಞೆಯಾಯಿತು. ಕಿರುಕುಳ ಸಾಮಾನುಗಳನ್ನು ಅಲ್ಲಿ ಇಟ್ಟು ಅಸದಖಾನನನ್ನು ಅದರ ಸಂರಕ್ಷಣೆಗೆ ನೇಮಿಸಿತು.

ರಾಜಶಕ ೪೩ ಜಮಾದಿಲಾವಲ ೫ನೆಯ ದಿನ (೧೯ ಅಕ್ಟೋಬರ ೧೬೯೯)ದಂದು ಹಿಂದು ಜನರ ಕೋಟೆಯನ್ನು ಕೈವಶಮಾಡಿಕೊಳ್ಳಲು ಮತ್ತು ಯುದ್ಧ ಮಾಡಲು ಔರಂಗಜೇಬ ಬಾದಶಹನು ಹೊರಟನು. ೨೦ನೆಯ ದಿನ ಮಿರಜದ ಭಾಗದಲ್ಲಿ ದಂಡಿನ ಡೇರೆ ಇಳಿಯಿತು.[೩೬] ಅದೇ ವರುಷ ಜಿಲ್ಹೇಜ ತಿಂಗಳ ೨೯ನೆಯ ದಿನ (೧೮ ಜೂನ ೧೬೯೯) ದಂದು ಖಾನ ಫರಾಜಜಂಗನ ಕಡೆಯ ಜನರು ಸಂತಾಜಿಯ ಅಂದರೆ ರಾಮಜೀಯ ತಲೆಯನ್ನು ಕತ್ತರಿಸಿ ಕಳಿಸಿದರು, ಅದು ಅದೇ ದಿನ ಬಂದು ಮುಟ್ಟಿತು.

---

33. It took the form of the outbreak of second Nova's flood on the morning of Monday, the 19th July 1697/10th Muharam in river Bhima-MIA P. 236.

34. On Tuesday, the 23rd November 1697/19th Jamadilawal the Khan died. MiA p. 237.

೩೫. ಶಕೆ ೧೬೧೯ ಮಾರ್ಗಶೀರ್ಷ ಶುದ್ಧ ೫ (೮ ನವಂಬರ ೧೬೯೭) ಮೊಗಲರು ಜಂಜಿಯನ್ನು ಮುತ್ತಿದರು - ಜೇಧೆ ಶಕಾ ಪುಟ ೩೯. On monday the 7th February 1698/16th Shaban, the fortress (Jinji) consisting of 7 forts was forcibly captured and annexed to the empire MIA p. 238.

36. On Thursday the 19th October 1699/5th Jamadilawal, the emperor started at an auspicious month ............ for expedition in person to trample ......... the land and forts of the internal infidels and arrived at Miraj in 20 days - MiA P.-248.

## ೭೮. ಒಂದು ಕಥಾಭಾಗ :

ಶಿವಾಜಿಯ ಮಗ ಸಂಭಾಜಿಯ ದಂಗೆಯು ಶಾಂತವಾದಾಗ, ಔರಂಗಜೇಬ ಬಾದಶಹನ ಮನಸ್ಸು ಸಮಾಧಾನಗೊಂಡಿತು. ಅನೇಕ ಪ್ರಕಾರದ ವಿಚಾರಗಳಿಂದ ಮತ್ತು ಚಿಂತೆಗಳಿಂದ ಮುಕ್ತವಾಯಿತು. ಆಗ ಸಂಭಾಜಿಯ ಸಹೋದರ (ರಾಜಾರಾಮ) ಕಪಟ ಸಂತಾಜಿ (ಸೇನಾಪತಿ) ನಗರದ ಯುದ್ಧದಲ್ಲಿಯ ಮಾನ್ಯವರರು ಮತ್ತು ಸರದಾರ ಜನರೆಲ್ಲ ಸಾಧುಗಳಂತೆ ವೇಷಧರಿಸಿ ಓಡಿಹೋಗಿದ್ದರು.[೧] ಅನಂತರ ವಿಜಾಪುರದ ಅಬದುಲಖಾನನು ಅವರನ್ನು ಬೆನ್ನು ಹತ್ತಿ ರಾಣೆಬೆನ್ನೂರಿನ ಆಸುಪಾಸಿನಲ್ಲಿ ಅವರನ್ನು ಮುಟ್ಟಿ ಸಂತಾಜಿಯ (ರಾಜಾರಾಮನ) ಮಂಡಳಿಯನ್ನು ಹಿಡಿದಿದ್ದರು. ಸಂತಾಜಿಯು (ರಾಜರಾಮ) ಜೀವ ಉಳಿಸಿಕೊಂಡು ಹೊರಗೆ ಓಡಿ ಹೋಗಿ ಹಿಂದುಗಳ ಒಂದು ಕೋಟೆಯಲ್ಲಿ ಆಶ್ರಯ ಪಡೆದು, ಅಲ್ಲಿಯೇ ಬಹುದೊಡ್ಡ ಗುಂಪನ್ನು ಸೇರಿಸಿ, ಸೈನ್ಯ ಕಟ್ಟಹತ್ತಿದನು. ತನ್ನ ತಂದೆ ಮತ್ತು (ಅಣ್ಣ) ಸಂಭಾಜಿಯ ನಡತೆಗಳನ್ನು ಜೀವಂತವಾಗಿಟ್ಟು ಬಂಡುಖೋರತನದಿಂದ ಔರಂಗಜೇಬ ಬಾದಶಹನ ಸರಹದ್ದಿನಲ್ಲಿ ಲೂಟಿ ಮಾಡುವುದು, ಛಾಪಾ ಹಾಕುವುದು ಮಾಡತೊಡಗಿದನು. ಆಗ ಖಾನಜಾದಖಾನ, ಮುರಾದಖಾನ ಮತ್ತು ಕಾಸಮಖಾನ ಇವರನ್ನೆಲ್ಲ (ಸೇನಾಪತಿ) ಸಂತಾಜಿಯನ್ನು ಶಿಕ್ಷಿಸಲು ನೇಮಿಸಲಾಯಿತು. ಆ ಮೂವರು ತಮ್ಮ ಗುಂಪುಗಳೊಂದಿಗೆ ಒಂದು ಸ್ಥಳದಲ್ಲಿ ಸೇರಿ ಸಂತಾಜಿಯ ಮೇಲೆ ದೌಡಮಾಡಿದರು. ಸಂತಾಜಿಯಿಂದ ಆ ಮೂವರು ಹಣ್ಣುಗಾಯಿ-ನೀರುಗಾಯಿ ಆಗಿ ತಮ್ಮ ಜೀವ ಉಳಿಸಿಕೊಳ್ಳಲು ಓಡಿ ಹೋದರು. ತುಸುವೇ ದಿನಗಳಲ್ಲಿ ಸಂತಾಜಿಯ ಗದ್ದಲ ದಂಗೆಗಳು ಸಂಭಾಜಿಯ ಗದ್ದಲಗಳಿಗಿಂತ ಬಹಳೇ ಅಧಿಕವಾದುವು. ಔರಂಗಜೇಬ ಬಾದಶಹನಿಗೆ ಮೊದಲಿನಕ್ಕಿಂತ ಹತ್ತುಪಟ್ಟು ಅಧಿಕ ಚಿಂತೆಯಾಯಿತು. ಸಂತಾಜಿಯನ್ನು ಶಿಕ್ಷಿಸುವ ಅನೇಕ ದಾರಿಗಳನ್ನು ಹುಡುಕತೊಡಗಿದನು. ಜೊತೆಗೆ ಬಾಹ್ಯದಲ್ಲಿ ಅವನೊಂದಿಗೆ ಸಖ್ಯತೆಯ ಭಾವವನ್ನು ತೋರಿಸುತ್ತ, ಒಳಗೊಳಗೆ ಅವನನ್ನು ಶಿಕ್ಷಿಸುವ ಕೊಲ್ಲುವ ಮೋಸದ ಉಪಾಯಗಳನ್ನು ಹುಡುಕಿ ಸೈನ್ಯಕ್ಕೆ ಆದೇಶ ಕೊಡುತ್ತಿದ್ದನು. ಮತ್ತೆ ಬೇರೆ ಯುಕ್ತಿಗಳನ್ನು ಹೇಳಿ. ಇನ್ನೊಂದು ಸೈನ್ಯವನ್ನು ಆತನ ಮೇಲೆ ಕಳಿಸುತ್ತಿದ್ದನು. ಫಕೀರರು ಮತ್ತು ಮಷಾಯಖ ಮೊದಲಾದವರು ಬಹಳಷ್ಟು ಜನರು ಆಮಂತ್ರಿತರಾಗಿ ಈ ವಿಷಯದಲ್ಲಿ ಬಹಳ ಧೈರ್ಯತೋರಿದರು. ಆತಿಥ್ಯದ ನಾಟಕವನ್ನು ಆಡಿ ಘಾತಮಾಡುವ ಯುಕ್ತಿಯನ್ನು ಹೂಡಿದರು. ಆದರೆ ಇವುಗಳ ಫಲ ಬೇಗ ದೊರೆಯಲಿಲ್ಲ. ಸಂತಾಜಿ ಸಿಗಲಿಲ್ಲ. ಅದರಿಂದಾಗಿ ಬಾದಶಹನು ಮನದಲ್ಲಿಯೆ ತುಂಬ ಗಾಬರಿಯಾಗುತ್ತಿದ್ದನು.

ಆ ದಿನಗಳಲ್ಲಿ ವಿಜಾಪುರದ ಕಾರಭಾರಿ ಮಂಡಳಿಯಲ್ಲಿಯ ಸಯ್ಯದ ಹಸನ ಖುದಾನವಾಜ ಕಾಜೀ ಬಹಾದೂರನು ಔರಂಗಜೇಬ ಬಾದಶಹನ ಸೈನ್ಯದಲ್ಲಿದ್ದನು. ಆತ ಕೂಡ ಆಮಂತ್ರಿಸಿ ಮೋಸ ಮಾಡುವವನೇ ಆಗಿದ್ದನು. 'ದಾವತ ಆಸ್ಮಾ' ಎಂಬುದು ಪ್ರಸಿದ್ಧವೇ ಆಗಿದೆ. ಬಾದಶಹನು ಸಯ್ಯದ ಹಸನ ಖುದಾನವಾಜನಿಗೆ ಈ ಕೆಲಸದ ಬಗ್ಗೆ ನಿರೋಪ ಹೇಳಿ ಕಳಿಸಿದನು. ಪ್ರತಿಯಾಗಿ ಆತನು "ಈಗಾಗಲೇ ಬಹಳಷ್ಟು ಜನರು ಈ ಕೆಲಸದಲ್ಲಿ ತೊಡಗಿರುವುದರಿಂದ ನನ್ನ ಅವಶ್ಯಕತೆ ಬೀಳಲಿಕ್ಕಿಲ್ಲ.

---

೧. ಈ ಇತಿಹಾಸಕಾರನ ದೃಷ್ಟಿಯಲ್ಲಿ ಶಿವಾಜಿ ಮಹಾರಾಜರ ಇನ್ನೊಬ್ಬ ಮಗ ರಾಜಾರಾಮ ಮತ್ತು ಸೇನಾಪತಿ ಸಂತಾಜಿ ಇಬ್ಬರೂ ಒಂದೇ ವ್ಯಕ್ತಿಯಾಗಿದ್ದಾರೆ. ಇದು ತಪ್ಪು. ಆದರೂ ಯುದ್ಧ ಪ್ರಸಂಗಗಳ ವರ್ಣನೆಗಳಲ್ಲಿ ಬರುವ ರಾಜಾರಾಮನ ಹೆಸರು ಸೇನಾಪತಿ ಸಂತಾಜಿಯ ಹೆಸರಲ್ಲಿ ಬಂದಿದೆಯೇ ಎಂಬುದನ್ನು ತತ್‌ಸಂಬಂಧದ ವಿಷಯಗಳ ಮೇಲಿನಿಂದ ತಿಳಿದುಕೊಳ್ಳುವುದು ಆವಶ್ಯವಾಗಿದೆ.

ನಾನೇ ಇದನ್ನು ಮಾಡಬೇಕೆಂದು ತಮ್ಮ ಇಚ್ಛೆಯಾಗಿದ್ದರೆ, ಮೊದಲು ಈ ಕೆಲಸಕ್ಕೆ ನಿಯಮಿಸಿದವರಿಗೆಲ್ಲ ತಿರುಗಿ ಕರೆಯಿಸಿರಿ. ಆಗ ನನ್ನ ಸೇವೆ ಏನು? ಎಂಥದೆಂಬುದು ಸನ್ನಿಧಿಗೆ ಗೊತ್ತಾಗುತ್ತದೆ" ಎಂದು ಉತ್ತರ ಹೇಳಿ ಕಳಿಸಿದನು. ಔರಂಗಜೇಬ ಬಾದಶಹನು ಮತ್ತೆ ಹೇಳಿ ಕಳಿಸಿ "ಮೊದಲಿನವರಿಗೆ ಮನಾಯಿ ಮಾಡಿದಲ್ಲಿ ಮತ್ತು ಆ ಗುಂಪನ್ನು ತಿರುಗಿ ಕರೆಯಿಸಿದಲ್ಲಿ ಫಕೀರರ ಮನಸ್ಸನ್ನು ನೋಯಿಸಿದಂತಾಗುತ್ತದೆ. ಆದ್ದರಿಂದ ಈ ವಿಷಯವನ್ನು ತಲೆಯಲ್ಲಿ ಹಾಕಿಕೊಳ್ಳದೆ ನೀವು ಇದರ ಬಗ್ಗೆ ಪ್ರಯತ್ನ ಮಾಡಬೇಕು. ಅಲ್ಲಾನ ದಯದಿಂದ ಇಂದಿನವರೆಗೂ ಕಾರ್ಯಸಿದ್ಧಿಯಾಗಿದೆ. ಆತನ ಸಹಾಯದಿಂದಲೆ ಈ ಕಾರ್ಯಸಿದ್ಧಿಯಾಗುವುದರಿಂದ ಈ ಗುಂಪನ್ನು ನಿಮ್ಮ ಪ್ರಯತ್ನದ ಕಾರ್ಯದಲ್ಲಿ ತೊಡಗಿಸೋಣ" ಎಂದು ಆಜ್ಞೆ ಮಾಡಿದನು. ಆಗ ಆತನು ಒಪ್ಪಿ ಕೆಲಸಕ್ಕೆ ಪ್ರವರ್ತನಾದನು. "ಮತ್ತೆನಾದರೂ ಆಹಾರಸಾಮಗ್ರಿ, ಬೇರೆ ಸಾಮಗ್ರಿಗಳು ಮೇಜವಾನಿಗೆಗೆ ಅವಶ್ಯ ಬೀಳುವುದನ್ನು ತಿಳಿಸಿದರೆ ಸಂಗ್ರಹಿಸಲಾಗುವುದು" ಎಂದು ಬಾದಶಹನು ಹೇಳಿ ಕಳಿಸಿದನು. ಪ್ರತಿಯಾಗಿ ಸಯ್ಯದ ಹಸನನು ಉತ್ತರ ಕಳಿಸುತ್ತ "ಸಂತಾಜಿಯು ಎಲ್ಲರನ್ನು ಪೀಡಿಸಿದ್ದಾನೆ. ಆತನು ಎಲ್ಲರಿಗೆ ದ್ರೋಹ ಬಗೆದಿದ್ದಾನೆ. ಆತನನ್ನು ತಳತಳಗೊಳಿಸುವುದೇ ಅವನಿಗೆ ಕೊಡುವ ಮೇಜವಾನಿಯ ದೊಡ್ಡ ಸಾಹಿತ್ಯವಾಗಿದೆ. ಬೇರೆ ಯಾವುದರ ಅವಶ್ಯಕತೆಯೂ ಇಲ್ಲ" ಎಂದು ಹೇಳಿ ಕಳಿಸಿದನು. ಆತನ ಮಾತುಗಳು ಬಾದಶಹನಿಗೆ ತುಂಬ ಒಪ್ಪಿಗೆಯಾದುವು. ಅನಂತರ ತುಸುವೆ ದಿನಗಳಲ್ಲಿ ಕಾರ್ಯಸಿದ್ಧಿಯೂ ಆಯಿತು. ಆ ದುರ್ದೈವಿ, ಸಂತಾಜಿಯು ಬಂಧಿತನಾದನು. ಆತನ ಕತ್ತರಿಸಿದ ತಲೆಯು ಬಾದಶಹರ ಸನ್ನಿಧಿಗೆ ಬಂದು ಮುಟ್ಟಿತು.[೨] ಆಗ ಬಾದಶಹನಿಗೆ ಅತ್ಯಂತ ಸಂತೋಷವಾಯಿತು. ಬಾದಶಹನು ಸಯ್ಯದ ಹಸನನ ಮೇಲೆ ಅನುಗ್ರಹ ಮಾಡಿ 'ಹಸನ ಖಿದಾನವಾಜ ಸಂತಾಕುಷ' ಎಂಬ ಬಿರುದನ್ನು ಕೊಟ್ಟನು.

ಖಾನ ಫಿರೋಜ ಜಂಗನ ಪರಾಕ್ರಮದಿಂದ ದೇವಗಡ ಊರ್ಫ ಇಸ್ಲಾಮ ಗಡವನ್ನು ಕೈವಶಮಾಡಿಕೊಳ್ಳಲಾಯಿತು. ನಿರ್ದೈವಿ ಸಂತಾಜಿಯು ಆ ಕೋಟೆಯಿಂದ ಓಡಿ ಹೋದನು - ಕೃಷ್ಣಾ ನದಿಯಿಂದ ಒಂದು ಕೋಸು ಅಂತರದಲ್ಲಿ ವಸಂತಗಡ ಎಂಬ ಕೋಟೆ ಪ್ರಸಿದ್ಧವಾಗಿದೆ. ತರಖಿಯತಖಾನನು ಪರಾಕ್ರಮ ಮಾಡಿ ಒಂದು ವಾರದಲ್ಲಿ ಅಂದರೆ ರಾಜಶಕ ೪೩ ಜಮಾದಿಲಾಖರ ತಿಂಗಳ ೧೨ನೆಯ ದಿನದಂದು (೨೫ ನವಂಬರ ೧೬೯೯) ಆ ಕೋಟೆಯನ್ನು ಗೆದ್ದನು. ಆ ಕೋಟೆಗೆ 'ಕಿಲೀದೇಫತಹ' ಎಂಬ ಬಿರುದನ್ನು ಕೊಟ್ಟರು.[೩] ದಿನಾಂಕ ೨೫ ಜಮಾದಿಲಾಖರದಿಂದ (೧೯ ಡಿಶಂಬರ ೧೬೯೮ರಿಂದ) ದಿನಾಂಕ ೧೩, ಜಿಲ್ಕಾದ ತಿಂಗಳು ರಾಜಶಕ ೪೩ ರವರೆಗೆ (೪ಮೇ ೧೬೯೯) ನಾಲ್ಕು ತಿಂಗಳು ೧೮ ದಿನಗಳಲ್ಲಿ

---

2. The stories vary, but he was either siezed by the Mutlab Khan, and sent to hell, or was slain by the same claimout of blood (Mane's brother-in-law); his hand fell into the hands of the soldiers of Firuz Khan and was sent to the emperor - MiA P.-244. ಶಕೆ ೧೬೧೯ ಚೈತ್ರ ಮಾಸ (ಮಾರ್ಚ/ಎಪ್ರಿಲ ೧೬೯೭) ಸಂತಾಜೀ ಘೋರಪಡೆಯು ಸಾತಾರ ಪ್ರಾಂತಕ್ಕೆ ಬಂದನು. ಅವನಿಂದ ಗಾಜದೀಖಾನ (ಗಾಜಿ ಉದ್ದೀನಖಾನನು) ಹೆಸರಿಲ್ಲದವನಾದನು. ಆಷಾಢ ಮಾಸ (ಜೂನ್ ೧೬೯೭)ದಲ್ಲಿ ಸಂತಾಜಿ ಘೋರಪಡೆಯನ್ನು ನಾಗೋಜಿ ಮಾನೆಯು ಮಹಾದೇವ ಹತ್ತಿರ ಮೋಸ ಮಾಡಿ ಕೊಂದನು. ಜೇಧೆ ಶಕಾ ಪುಟ-೩೯.
3. The next morning saturday the 25th November 1699/12th Jamadassani the fort, 'Vasantgad' was conquered - MiA P.-249.

ಮಹಮ್ಮದ್ರ ಆಜಮಶಾಹನ ಮುಖಾಂತರ ಆ ಕೋಟಯನ್ನು ಗೆಲ್ಲಲಾಯಿತು. ಆ ಕೋಟೆಯ (ಸಾತಾರ) ಹೆಸರನ್ನು 'ಆಜಮತಾರಾ' ಎಂದು ಇಡಲಾಯಿತು.[೪]

ಸಾತಾರೆಯ ಕೋಟೆಯ ಮೇಲೆ ಹಲ್ಲೆ ಮಾಡುವ ದಿನಗಳಲ್ಲಿ ದೊಡ್ಡ ಸಂಕಟವೆ ಎದುರಾಯಿತು. ದಿನಾಂಕ ೫ ಜಿಲ್ಕಾದದಲ್ಲಿ (೨೬ ಎಪ್ರಿಲ ೧೬೯೯) ತಗ್ಗು ತೆಗೆದು ಮದ್ದು ತುಂಬಿ ಬೆಂಕಿಯನ್ನು ಇಡಲಾಯಿತು. ಅದು ಸಾತಾರೆಯ ಕೋಟೆಯ ಮೇಲೆ ಬಿದ್ದಿತು. ಆಗ ಕೋಟೆಯ ಮೇಲಿನ ಬಹಳಷ್ಟು ಜನರು ಸುಟ್ಟುಕರಕಾದರು. ಇನ್ನೊಂದಕ್ಕೂ ಬೆಂಕಿ ಇಟ್ಟಾಗ ಕೋಟೆಯ ಒಳಗಿನ ಬಾಗಿಲೂ ಬೀಳಬಹುದೆಂದು ತಿಳಿದಿದ್ದರು. ಆದರೆ ಪ್ರಾರಬ್ಧ ಯೋಗದಿಂದ ಕೋಟೆಯ ಹೊರ ಗೋಡೆಯೇ ತಳದಿಂದ ಕುಸಿಯಿತು. ಸೈನ್ಯದ ಮೈಮೇಲೆ ಬಿದ್ದಿತು. ಆಗ ಸುಮಾರು ಎರಡು ಸಾವಿರ ಶೂರರು ಸತ್ತರು. ಸಾತಾರೆ ಕೋಟೆಯ ಸುಬೇದಾರ 'ಸುಬಾ' ಎಂಬವನು ಔರಂಗಜೇಬ ಬಾದಶಹನ ಭೆಟ್ಟಿಗೆ ಬಂದನು. ಆತನಿಗೆ 'ಪಾಂಚ ಹಜಾರಿ' ಕಿತಾಬನ್ನೂ ವಸ್ತ್ರಗಳನ್ನೂ ಕೊಡಲಾಯಿತು. ದಿನಾಂಕ ೨೨ ಜಿಲ್ಕಾದ ತಿಂಗಳು (೧೩ ಮೇ, ೧೬೯೯)ರಂದು (ಪರಳಿ) ಕೋಟೆಯ ಮೇಲೆ ಹಲ್ಲೆ ಮಾಡಲಾಯಿತು.[೫] ಈ ಹಲ್ಲೆಯ ದಿನಗಳಲ್ಲಿ ತುಂಬ ಮಳೆಯಾಯಿತು. ಅದರಿಂದ ನದಿಗಳಿಗೂ ಹಳ್ಳ ಕೊಳ್ಳ ಒತ್ತುಗಳಿಗೂ ದೊಡ್ಡ ಮಹಾಪೂರವೇ ಬಂದಿತು. ಮಳೆಯ ತೊಂದರೆಯಿಂದಾಗಿ, ಆಹಾರ ಸಾಮಗ್ರಿಗಳು ಬಂದು ಮುಟ್ಟಲಿಲ್ಲ ಬರ ಬಿದ್ದಿತು. ದಿನಾಂಕ ೩ ಮೊಹರಮ ತಿಂಗಳು, ರಾಜಶಕ ೪೪ (೧೦ ಜೂನ ೧೭೦೦) ರಂದು ಮಹಮ್ಮದ್ರ ಆಜಮಶಹನ ಯುಕ್ತಿಯಿಂದ ಗೆಲುವಾಯಿತು.[೬] ಆ ಕೋಟೆಗೆ ಇಬ್ರಾಹಿಮ ಆದಿಲಶಾಹನು 'ನವರಸತಾರಾ' ಎಂದು ಹೆಸರನ್ನಿಟ್ಟಿದ್ದನು.

ದಿನಾಂಕ ೧೯, ಸಫರ ತಿಂಗಳು (೨೫ ಜುಲೈ ೧೭೦೦)ದಂದು ಮಹುಸಾನಗಡದ (ಭೂಷಣಗಡ) ಕೋಟೆಯ ಬಯಲಲ್ಲಿ ದಂಡಿನ ಡೇರೆಯನ್ನು ಹಾಕಲಾಯಿತು. ಆಜಮಶಾಹನಿಗೆ. ಬುರ್ಹಾಣಪುರಕ್ಕೆ ಹೋಗಿ ಇರಲು ನಿರೋಪ ಕೊಟ್ಟು ಕಳಿಹಿಸಿದನು. ಒಟ್ಟು ಸೈನ್ಯವನ್ನು ಮೊದಲಿನಂತೆ ಅಲ್ಲಲ್ಲಿಯ ಪ್ರದೇಶಗಳಿಗೆ ಕಳಿಸಿಕೊಡಲಾಯಿತು. ದಿನಾಂಕ ೧೬, ರಬಿಲಾವಲ ತಿಂಗಳು (೨೧ ಅಗಸ್ಟ ೧೭೦೦) ಮಹುಸಾನಗಡದಿಂದ (ಭೂಷಣಗಡ) ಒಂದು ಕೋಸಿನ ಅಂತರದ ಮೇಲೆ ಖವಾಸಪುರದಲ್ಲಿ ಕೂಚ್ ಮಾಡಲಾಯಿತು.[೭] ಆ ಗ್ರಾಮದಲ್ಲಿ ದಂಡಿಗೆ ವಿಶ್ರಾಂತಿ ಸಿಕ್ಕಿತು. ಸಾಬಾನ ತಿಂಗಳು ನಾಲ್ಕರಂದು (೩ ಜನವರಿ ೧೭೦೧)

4. On Firday, the 8th December 1699/25th Jamadassani, the imperial tent was pitched at the foot of the fort.... On Friday the 15th March 1700/5th Shawal, the Khan ............ carried the treanch under the revani of the fort in one month......On Saturday, the morning of 13th April 1700/5th Zilquada at fort a fuel was fired, the fort wall fall inside and large body of garrison were burnt............ On Sunday, the 21st April 1700/13th Zilquada our bomers mounted the towers and parapits of that (Satara) fort of infidility......... the fort was named Azamtara - MiA p 250-254.
5. On Tuesday the 30th April 1700/22nd Zilqada the emperor encamped on the plain in front of the fortzata - MiA P-256.
6. On Tuesday, the 4th June, 1700/27th Zilhajja an assault was made and on Sunday the 9th June 1700/3rd Muharam, according to the emperor's orders, sent the garrison out of the fort - MiA P-257-258.
7. On Thursday, the 25th July 1700/19th Safar the imperial camp arrived near Bhushangarh. On Friday the 30th August 1700/26th Rabilawall the army started for Khawaspur - MiA P.-258-259.

ಮುಖಲಿಸಖಾನ ಬಕ್ಷಿಯು ಮರಣ ಹೊಂದಿದನು. ಆತನ ಕೆಲಸದ ಮೇಲೆ ರುಹುಲ್ಲಾಖಾನನು ಕಾಯಮ್ ಆದನು. ದಿನಾಂಕ ೨ ರಜಬ ತಿಂಗಳು (೨ ಡಿಶಂಬರ ೧೭೦೦) ರಂದು ಕೂಚ್ ಮಾಡಲಾಯಿತು. ಮುರ್ತಜಾಬಾದ ಊರ್ಫ ಮಿರಜದ ಕಡೆಗೆ ಇಳಿದರು.[8] ಸಾಬಾನ ತಿಂಗಳಲ್ಲಿ (ಜನವರಿ ೧೭೦೧) ಜಾನ್ ಸೀಪಾರಖಾನ ಆಜಮ ಹೈದರಾಬಾದಕರನು ಮರಣ ಹೊಂದಿದನು. ಮಹಮದ ಕಾಮಬಕ್ಷನು ಅಲ್ಲಿಯ ಸುಬೇದಾರಿಕೆಯ ಕೆಲಸದ ಮೇಲೆ ಕಾಯಂ ಆದನು. ಆತನ ಕೈಕೆಳಗೆ ಮುಖ್ತ್ಯಾರನಾಗಿ ಜ್ಯಾನ್ ಸೀಪಾರಖಾನನ ಮಗ ರುಸ್ತುಮಖಾನನು ಕಾಯಂ ಆದನು. ದಿನಾಂಕ ೨ ಮೊಹರಮ, ರಾಜಶಕ ೪೫ (೨೯ ಮೇ ೧೭೦೧)ರಂದು ಪನ್ಹಾಳದ ಕಡೆಗೆ ದಂಡನ್ನು ಇಳಿಸಬೇಕೆಂಬ ಇರಾದೆಯಿಂದ ಅತ್ತ ಕೂಚ್ ಮಾಡಲಾಯಿತು. ದಿನಾಂಕ ೨೭ ಮೊಹರಮ (೨೩ ಜೂನ ೧೭೦೧) ರಂದು ಖಟಾವದಿಂದ ಎರಡು ಕೋಸು ದೂರವಿರುವ ವರ್ಧನಗಡ ಕೋಟೆಗೆ ಮುತ್ತಿಗೆ ಬಿತ್ತು. ಫತೆಉಲ್ಲಾಖಾನ ಬಹಾದೂರನನ್ನು ವರ್ಧನಗಡದ ಕೋಟೆಯನ್ನು ಕೈವಶ ಮಾಡಿಕೊಳ್ಳುವ ಕೆಲಸದ ಮೇಲೆ ನೇಮಿಸಲಾಯಿತು. ದಿನಾಂಕ ೧೦, ಮೊಹರಮ ತಿಂಗಳು (೬ ಜೂನ ೧೭೦೧) ದಂದು ಖಾನ ಮಶಾರನಿಲ್ಹೇನು ವರ್ಧನಗಡದ ಕೋಟೆಯನ್ನು ಗೆದ್ದನು.[9] ಖಾನ ಮಶಾರನಿಲ್ಹೇನ ಹೆಸರು ಮಹಮದ ಸಾದಿಕ ಎಂಬುದಾಗಿತ್ತು. ಅದೇ ಹೆಸರನ್ನು ಆ ಕೋಟೆಗೆ 'ಸಾದಿಕಗಡ' ಎಂಬುದಾಗಿ ಇಟ್ಟರು. ಅಸದಖಾನ ಮತ್ತು ಫೆರೋಜಜಂಗರು ದಂಡಿನ ಸಾಮಾನುಗಳನ್ನು ಸಂರಕ್ಷಿಸಲು ವರ್ಹಾಡದಿಂದ ಬಂದರು. ದಿನಾಂಕ ೨೮, ರಬೀಲಾಖರ (೨೧ ಸಪ್ಪಂಬರ ೧೭೦೧) ದಂದು ಬಿದ್ದ ಅತಿವೃಷ್ಟಿಯಿಂದ ಬಹಳಷ್ಟು ಹಳ್ಳಿಗಳು ಮಹಾಪೂರದ ನೀರಿನಲ್ಲಿ ಹರಿದು ಹೋದುವು.

ದಿನಾಂಕ ೧೦, ಸವಾಲ ತಿಂಗಳು (೨೭ ಫೆಬ್ರವರಿ ೧೭೦೨) ಪಾವನಗಡದ ಹೆಬ್ಬಾಗಿಲಿನ ಮುಂದೆ ಬಯಲಿನಲ್ಲಿ ಸೈನ್ಯ ಇಳಿಯಿತು. ತರಬಿಯಾತಖಾನ ಮತ್ತು ಫತಹುಲ್ಲಾಖಾನ ಮತ್ತು ಮಹಮ್ಮದ ಮುರಾದಖಾನ ಪ್ರತಿಯೊಬ್ಬರೂ ಎಲ್ಲ ಬದಿಗಳಿಂದ ಆಕ್ರಮಣ ಮಾಡಿದರು. ದಿನಾಂಕ ೧ ಮೋಹರಮ ತಿಂಗಳು ರಾಜಶಕ ೪೬ (೧೬ ಮೇ, ೧೭೦೨) ತರಬಿಯತಖಾನನ ಪರಾಕ್ರಮದಿಂದ ಪನ್ಹಾಳ ಕೋಟೆಯನ್ನು ಗೆದ್ದರು.[10] ಆ ಕೋಟೆಯ ಹೆಸರನ್ನು ಶಾಹದುರ್ಗ ಎಂದು ಇಡಲಾಯಿತು. ಅಸದಖಾನ ದಿವಾನನು ಸತ್ತನಂತರ ಆ ದಿವಾನಗಿರಿಯು ಇನಾಯತುಲ್ಲಾಖಾಸನ ಕಡೆಗೆ ಬಂದಿತು. ಬಹರಾಮಂದಖಾನನನ್ನು ಮಾಂಡವಗಡದ ಕೋಟೆಯನ್ನು ಕೈವಶಮಾಡಿಕೊಳ್ಳುವ ಮತ್ತು ಕಂದಕ ತೋಡುವ ಕೆಲಸದ ಮೇಲೆ ನಿಯಮಿಸಲಾಯಿತು. ಕೆಲವು ದಿನಗಳ ಅನಂತರ ಆ ಕೋಟೆಯು ಕೈವಶವಾಯಿತು. ಇದಕ್ಕಾಗಿ ಅಮೀರುಲ್ ಉಮರಾವ ಬಹರಾಮಂದಖಾನನಿಗೆ ತುಂಬ ಶ್ರಮವಾಯಿತು. ಆ ಶ್ರಮದಿಂದ ದಣಿದನು. ಅದಕ್ಕಾಗಿ

---

8. On Monday the 16th December 1700/16th Rajab. His majesty marched towards Murtazabad Miraj, arriving thereon Wednesday, the 1st January 1701/2nd Shaban - MiA P-261.
9. The imperial army, for the recovery of the forts-Vardhanagadh Nanegirgad, Chandan and Wandan, started on Thursday the 29th May 1701/2nd Muharram-MiA P-266. The garrison of Wardhangad saved their lives by flight leaving the fort empty on the 6th June 1701/10th Muharram. In ten or twelve days the kiledar of Nangir........... surrendered the fort. On Monday, the 6th October 1701 they evacuated the forts of Chandan and Wandan - MiA P-266-267.
10. On Saturday the 9th March 1701/10th Shawal, the imperial camp was pitched in the environs of the fort. (Panhala) and on the 28th May 1701/1st Muharram the conquest was accomplished MiA P.-262-264.

ಅವನಿಗೆ ಅನತಿದೂರದಲ್ಲಿದ್ದ ಖೇಡ ಗ್ರಾಮದಲ್ಲಿ ವಿಶ್ರಾಂತಿಪಡೆಯಲು ಆಜ್ಞೆಯಾಯಿತು. ಅಲ್ಲಿ ಎರಡು-ಮೂರು ದಿನ ವಿಶ್ರಾಂತಿ ಪಡೆದನು. ಮತ್ತೆ ಮೊದಲಿನಂತೆ ಯುದ್ಧಕ್ಕೆ ನಿಂತನು. ದಿನಾಂಕ ೧೬ ಜಮಾದಿಲಾಖರ (೨೯ ಆಗಸ್ಟ ೧೭೦೨) ರಂದು ಸಾದಿಕಗಡ ಊರ್ಫ ವರ್ಧನ ಗಡದಿಂದ ಕೂಚ್ ಮಾಡಿದರು. ದಿನಾಂಕ ೧೬ ರಜಬ ತಿಂಗಳಲ್ಲಿ (೨೫ ನವಂಬರ ೧೭೦೨) ಖೇಳಣೆಯ ಕೋಟೆಯಿಂದ ಮೂರುವರೆ ಕೋಸುಗಳ ಅಂತರದ ಮೇಲೆ ದಂಡಿನ ಡೇರೆಗಳನ್ನು ಹಾಕಲಾಯಿತು. ರಾಜಕುಮಾರ ಬೇದರಬಖ್ತನು ಬಾದಶಹನ ಭೆಟ್ಟಿಗೆ ಬಂದನು. ಆತನೇ ಇಮ್ಮಡಿ ಅಸದಖಾನ ಅಮೀರುಲ್ ಉಮರಾವ ಆದನು. ಅಲಮಗೀರ ಬಾದಶಹನು, ಗೆಲುವಿನ ನಂತರ ಬಹಾದ್ದೂರಖಾನನನ್ನು ಭೆಟ್ಟಿಯಾದನು. ಹಮೀನುದ್ದೀನಖಾನ ಬಹಾದ್ದೂರ ಮತ್ತು ರಾಜಾ ಜಯಸಿಂಗ (ಸವಾಯಿ ಜಯಸಿಂಗ) ಮತ್ತು ಮುನಾಮಖಾನ ಇವರನ್ನು ಕೋಟೆಯ ಹಲ್ಲೆಯ ಮೇಲೆ ನಿಯಮಿಸಲಾಗಿತ್ತು. ದಿನಾಂಕ ೨೭, ಸಾಬಾನ ತಿಂಗಳು (೫ ಜನೆವರಿ ೧೭೦೩) ಬಾದಶಹನು ಸ್ವತಃ ಒಂದು ಕೋಸಿನ ಅಂತರದಲ್ಲಿ ಮುತ್ತಿಗೆ ಹಾಕಿದನು. ರಾಜಕುಮಾರ, ರಾಜ ಜಯಸಿಂಗ, ಫತೇಉಲ್ಲಾಖಾನ, ಮಹಮ್ಮದ ಅಮೀನಖಾನ, ಹಮೀನುದ್ದೀನಖಾನ, ಸರಮಸ್ತಖಾನರು ಬಹಳ ಶ್ರಮ ಪಟ್ಟ ಅನಂತರ ದಿನಾಂಕ ೨೨ ಜಿಲ್ಹೇಜ ತಿಂಗಳು ರಾಜ ಶಕ ೪೬ (೯ ಮೇ ೧೭೦೨) ವಿಜಯ ಸಾಧಿಸಿದರು.[೧೧] ಖೇಳಣೆ ಕೋಟೆ ವಶವಾಯಿತು. ಬಾದಶಹನು ಕುರಾನ ಷರೀಫದ ಪುಸ್ತಕದಲ್ಲಿ ಶಕುನವನ್ನು ನೋಡುತ್ತಿದ್ದನು. ಆಗ 'ಅಲ್ಹಮದುಲಿಲ್ಲಾಹ ಸಖಿರಲಿನಾ' ಎಂಬುದಾಗಿ 'ಆಯತ' ಹೊರಟಿತು. ಅದೇ ಆಯತ ಶಕುನವೆಂದು ತಿಳಿದು ಖೇಳಣೆಯ ಕೋಟೆಯ ಹೆಸರನ್ನು 'ಸಖಿರಲಿನಾ' ಎಂಬುದಾಗಿ ಇಟ್ಟನು. ಆ ಕೋಟೆಯು ಅಂಬಾಘಾಟ ಮತ್ತು ಪಾಯನ ಘಾಟ, ತಳಕೊಂಕಣಗಳ ಸರಹದ್ದಿನಲ್ಲಿದೆ. ಆ ಕೋಟೆಯನ್ನು ಕೈವಶಮಾಡಿಕೊಂಡದ್ದರಿಂದ ಬಹಳ ಪ್ರದೇಶಗಳು ಸೇರಿದುವು. ಬೇದರಬಖ್ತನಿಗೆ, ಖುಜಸ್ತೆಬುನಯಾದ ಹೈದರಾಬಾದದ ಬಂದೋಬಸ್ತಿನ ಮೇಲೆ ನೇಮಿಸಲಾಯಿತು. ಬರಹಾಮಂದಖಾನ ಬಕ್ಷೀ ಮರಣ ಹೊಂದಿದನು. ಆತ ಸತ್ತನಂತರ ಜುಲಫುಕಾರಖಾನನು ಮೀರಬಕ್ಷೀ ಆದನು. ಅದೇ ದಿನಗಳಲ್ಲಿ ಲುತ್ಫುಲ್ಲಾಹಖಾನ ಮರಣ ಹೊಂದಿದನು. ಜೇಬುನ್ನೀಸಾ ಬೇಗಮಳು ದಾರುಲ ಖಿಲಾಫತದಲ್ಲಿ ಮರಣ ಹೊಂದಿದಳು. ರಾಜಶಕ ೪೭, ಮೋಹರಮ ತಿಂಗಳ ೭ರಂದು (೧೩ಮೇ ೧೭೦೩) ಖೇಳಣೆಯ ಕೋಟೆಯಿಂದ ಕೂಚ ಮಾಡಿದನು. ಮತ್ತೆ ಅತಿವೃಷ್ಟಿಯಾಯಿತು. ಅದರಿಂದ ನದಿ-ನಾಲೆಗಳಿಗೆ ಮಹಾಪೂರ ಬಂದಿತು. ಭಾರ ಹೊರಲು ಯಾರೂ ಸಿಗಲಿಲ್ಲ. ಕಾಳು-ಕಡಿ ಆಹಾರ ಸಾಮಗ್ರಿಗಳೊಂದೂ ಸಿಗದಂತಾಗಿ ಬರ ಬಿದ್ದಿತು. ಹುಲ್ಲು-ಕಟ್ಟಿಗೆ ಕೂಡ ಸಿಗದಂತಾಯಿತು. ಎಲ್ಲ ರೀತಿಯ ಸಂಕಟಗಳು ಉದ್ಭವವಾದವು. ಬಹಳಷ್ಟು ಜನ-ದನಗಳು ಸತ್ತವು. ಆಗ ದಿನಾಂಕ ರಬೀಬಾವಲ ತಿಂಗಳ ೧೨ರಂದು (೨೬ಜುಲೈ ೧೭೦೩) ಒಂದು ತಿಂಗಳು ೧೭ ದಿನಗಳಲ್ಲಿ ಹದಿನಾಲ್ಕು ಕೋಸುಗಳನ್ನು ದಾಟಿ ಪನ್ಹಾಳ ಕೋಟೆಯ ತಳಕ್ಕೆ ಬಂದು ಮುಟ್ಟಿದರು.[೧೨] ಅಲ್ಲಿ ಇನ್ನಷ್ಟು

11. The Emperor's army left Vardhangarh on 7th November, 1701/16th Jamadassani for Khelna. On Saturday, the 6th December 1701 arrived near the skirt of the wall. On Sunday the 11th January 1702/22nd Shaban, emperor ordered the trenches to pushed on. On Friday, the 6th January 1702/27th Shaban, the camp moved on. The fort was captured on 27th April 1702/10th Zilhijja. On Wednesday, the 10th June 1702/25 Muharram, the emperor visited the fort - MIA P.267-273.

12. On Thursday, the 3rd December 1702/24 Rajab the army set out for the conquest of Kondhana and on Sunday, the 27th December 1702/18th Shaban, arrived at the foot of the fort. MIA - P.278.

ಸಂಕಟಗಳು ಎದುರಾದುವು. ಜಮಾದಿಲಾವಲ ೧೦ರಂದು (೧೧ ಸಪ್ಟಂಬರ ೧೭೦೩) ಕೃಷ್ಣಾನದಿಗೆ ದೊಡ್ಡ ಮಹಾಪೂರ ಬಂದಿತ್ತು. ಅಲ್ಲಿಯೇ ನದಿಯ ದಂಡೆಯಲ್ಲಿ ಹೋಗಿ ೨೦ ದಿನ ಇತ್ತ, ೨೦ ದಿನ ಅತ್ತ ದಂಡು ಇಳಿಯಲು ವ್ಯವಸ್ಥೆ ಮಾಡಿ ಆಸದನಗರ (ವಡಗಾವ) ಕ್ಕೆ ಹೋಗಿ ಇದ್ದರು. ಅಲ್ಲಿಂದ ಬಹಾದ್ದೂರ ಗಡಕ್ಕೆ ಬಂದರು. ಅದೇ ದಾರಿಯಲ್ಲಿ ಫಿರೋಜಜಂಗನ ಸೈನ್ಯವನ್ನು ಇಸ್ಲಾಮಪುರದಲ್ಲಿ ಇಡಲಾಗಿತ್ತು. ಇಬ್ಬದಿಗಳಲ್ಲೂ ನಾಲ್ಕು ಕೋಸುಗಳ ವರೆಗೆ ಆತನ ಸೈನ್ಯ ಬೀಡುಬಿಟ್ಟಿದ್ದು, ಬಾದಶಹನ ಕಣ್ಣಿಗೆ ಬಿದ್ದಿತು. ತೋಫಖಾನೆ ಸಹಿತ ಸಾಕಷ್ಟು ಸಂಗ್ರಹ ಇದ್ದುದನ್ನು ಕಂಡನು. ಆಗ ಆಜ್ಞೆ ಮಾಡಿ, ಅಮೀರ ಜನರು ಬಹಳ ತೋಫಖಾನೆಗಳನ್ನು ಇಟ್ಟುಕೊಳ್ಳಬಾರದೆಂದು ಹೇಳಿದನು. ದಿನಾಂಕ ೨೪, ರಜಬ ತಿಂಗಳು (೨೩ ನವಂಬರ ೧೭೦೩) ಬಹಾದ್ದೂರ ಗಡದಿಂದ ಖಂಡಾಳೆಯ (ಕೊಂಡಾಣಾ) ಕೋಟೆಯನ್ನು ಗೆಲ್ಲಲು ಕೂಚ್ ಮಾಡಿ ದಿನಾಂಕ ೧೮ ಸಾಬಾನ ತಿಂಗಳು (೧೯ ಡಿಶಂಬರ ೧೭೦೩) ಆ ಕೋಟೆಯನ್ನು ಮುಟ್ಟಿದರು.[೧೩] ರಾಜಕುಮಾರ ಮುಇನುದ್ದೀನನು ಎದುರಿಗೆ ಬಂದನು. ಅದಕ್ಕಾಗಿ ಅವನಿಗೆ ಸುಭೆ ಮುಲಮಾನ ಮತ್ತು ಸುಭೆ ಧಾಟದ ಸುಬೇದಾರಿಕೆಯನ್ನು ಮತ್ತು ಅಧಿಕ ಪದಾಧಿಕಾರವನ್ನು ಕೊಟ್ಟು ಆತನ ಯೋಗ್ಯತೆಯನ್ನು ಅಧಿಕಗೊಳಿಸಲಾಯಿತು. ನಕಲಿಜಖಾನನಿಗೆ ವಿಜಾಪುರದಲ್ಲಿ ಸುಬೇದಾರಿಕೆಯನ್ನು ಕೊಟ್ಟನು. ತಳಕೊಂಕಣದ ಸುಬೇದಾರಿ, ಆಜಮಗಡ ಬೆಳಗಾವಿ ಇತ್ಯಾದಿಗಳು, ಖುಜಸ್ತೆ ಬುನಯಾದ ಹೈದರಬಾದದಲ್ಲಿಯ ಎಲ್ಲ ವ್ಯವಸ್ಥೆ ಮತ್ತು ಖಾನದೇಶದ ಸುಬಾ-ಈ ಎಲ್ಲವುಗಳನ್ನು, ಬೇದರಬಖ್ತನ ಕಡೆಗೆ ಕೊಡಲಾಯಿತು. ಇಸಲಾಮಪುರದಲ್ಲಿದ್ದ ಕಿರುಕುಳ ಸಾಮಾನುಗಳನ್ನು ಬಹಾದ್ದೂರಗಡಕ್ಕೆ ತರಲಾಯಿತು. ಫತರುಲ್ಲಾಖಾನನು ಬಹಳ ಪರಾಕ್ರಮದಿಂದ ಯುದ್ಧ ಮಾಡಿದ್ದನು. ಆದ್ದರಿಂದ ಆತನ ವಿನಂತಿಯನ್ನು ಮನ್ನಿಸಿ ಆತನಿಗೆ ಕಾಬುಲದ ಕಡೆಗೆ ಹೋಗಲು ನಿರೋಪ ಕೊಡಲಾಯಿತು. ಅಹಮದಬಾದದಲ್ಲಿಯ ಸುಬೇದಾರಿ ಮತ್ತು ಅಜಮೇರದಲ್ಲಿಯ ಸುಬೇದಾರಿ, ಮಹಮದ ಆಜಮನಿಗೆ ಕೊಡಲಾಯಿತು.

'ಚಾಳೀಸ ಹಜಾರಿ' ಕಿತಾಬನ್ನು ಮತ್ತು ೨೦ ಸಾವಿರ ಸವಾರರನ್ನು ಆತನಿಗೆ ಕೊಟ್ಟರು. ರಾಜಶಕ ೪೭ ಜಿಲ್ಹೇಜ ತಿಂಗಳು ೧೭ರಂದು (೨೪ ಎಪ್ರಿಲ ೧೭೦೩) ಖಂಡಾಳೆದಿಂದ (ಕೊಂಡಾಣಾ) ತಿರುಗಿದರು. ದಿನಾಂಕ ೨೫ರಂದು (೧ ಮೇ ೧೭೦೩) ಮುಹಿಯಾಬಾದ ಪುಣೆದಲ್ಲಿ ದಂಡಿನ ಬೀಡುಬಿಟ್ಟಿತು.[೧೪] ಖೇಳಣೆಯ ಕಾರಣದಿಂದಾಗಿ ಪುಣೆಯಲ್ಲಿಯ ಇನಾಯತುಲ್ಲಾಹಖಾನನ ಡೇರೆಗಳನ್ನು ಕಿತ್ತಿ ಹಾಕಲಾಯಿತು. ಆ ಸ್ಥಳದಲ್ಲಿ, ಅಸದಖಾನನ ಡೇರೆಯನ್ನು ಹಾಕಿದರು. ಇದು ಗೊತ್ತಾದಾಗ ಆತನಿಗೂ ಅಲ್ಲಿಂದ ಡೇರೆಯನ್ನು ಕಿತ್ತಲು ಆಜ್ಞೆಯಾಯಿತು. ಮತ್ತು ಇನಾಯತುಲ್ಲಾನ ಡೇರೆಯಲ್ಲಿ ಇರಲು ಆದೇಶಿಸಿದನು. ಅದರಲ್ಲಿಯ ಸೂಕ್ಷ್ಮತೆಯನ್ನು ಅರಿತ ಅಸದಖಾನನು ಆದೇಶದಂತೆ ನಡೆದುಕೊಂಡನು. ಮಹಮ್ಮದ ಅಕಬರನು ಇರಾನದ ಸರಹದ್ದಿನಲ್ಲಿ ಮರಣ ಹೊಂದಿದನು.[೧೫] ರಾಜಶಕ ೪೮ ಸವಾಲ ತಿಂಗಳ ೨೧ರಂದು (೧೯ ಫೆಬ್ರವರಿ

13. On Thursday, the 8th April 1703/2nd Zilhijja Kondhana captured - MiA P. -282.
14. On Saturday the 24th April 1703/18th Zilhijja the imperial camp started for Puna and reached Poona on saturday. The 1st May 1703/25th Zilhijja - MIA p 282.
15. Shahjada Akbar's death took place in Iran in the 48th year of Alamgir's reign i.e. 28th December 1703/to 16th Decr. 1704. The news of his death was however reached the emperor on 21.11.1704 - MIA P 320-21 and 288.

೧೭೦೪) ರುಹುಲ್ಲಾಖಾನನ ಸಹಾಯದಿಂದ ರಾಜಗಡ ಕೋಟೆಯ ವಿಜಯವಾಯಿತು.[16] ಆ ಕೋಟೆಗೆ ನಬೀಶಾಹಗಡ ಎಂದು ಹೆಸರನ್ನಿಟ್ಟರು. ದಿನಾಂಕ ೧೫ ಮೊಹರಮ ತಿಂಗಳಂದು (೧ ಮೇ ೧೭೦೪) ರುಹುಲ್ಲಾಖಾನನು ಮರಣ ಹೊಂದಿದನು.[17] ಆತ ಸತ್ತನಂತರ ಮಿರಜಾ ಸದರುದ್ದೀನನು ಮೀರ ಬಕ್ಷಿಯಾದನು. ದಿನಾಂಕ ೨೩ ಜಿಲ್ಕಾದದಂದು (೧೯ ಮಾರ್ಚ ೧೭೦೪) ಮೌಜೆ ಖೇಡ ಮಸಾಲುದಾಬಾದ ಎಂಬ ಗ್ರಾಮಕ್ಕೆ ಮುಟ್ಟಿ ಅಲ್ಲಿ ಎಂಟು ತಿಂಗಳು ಹನ್ನೊಂದು ದಿನ ಇದ್ದರು. ಖಂಡಾಳೆಯ (ಕೊಂಡಾಣಾ) ಕೋಟೆಯನ್ನು ದಿನಾಂಕ ೨ ಜಿಲ್ಹೇಜ ತಿಂಗಳದಂದು (೨೭ ಮಾರ್ಚ ೧೭೦೪) ತರಬಿಯತಖಾನನ ಯತ್ನದಿಂದ ಗೆಲ್ಲಲಾಯಿತು. ಆ ಕೋಟೆಯ ಹೆಸರನ್ನು 'ವಖಶಿಂದ ಬಕ್ಷ' ಎಂದು ಇಡಲಾಯಿತು. ರಾಜಶಕ ೪೮ರಲ್ಲಿ ರಾಜಗಡದ ಕೋಟೆಯಿಂದ ೪ ಕೋಸ ಅಂತರದಲ್ಲಿರುವ ತೋರಣದ ಕಿಲ್ಲೆಯ ಕಡೆಗೆ ದಿನಾಂಕ ೨೮ ಸವಾಲ ತಿಂಗಳಂದು (೧೨ ಫೆಬ್ರವರಿ ೧೭೦೫) ದಂಡನ್ನು ತೆಗೆದುಕೊಂಡು ಹೋದರು. ದಿನಾಂಕ ೧೫ ಜಿಲ್ಕಾದ ತಿಂಗಳಂದು (೨೮ ಫೆಬ್ರವರಿ ೧೭೦೫) ತೋರಣದ ಕೋಟೆಯನ್ನು ಅಮಾನುಲ್ಲಾಖಾನನ ಯತ್ನದಿಂದ ಪರಾಕ್ರಮ ಮಾಡಿ ಗೆದ್ದರು.[18] ಆ ಕೋಟೆಯ ಹೆಸರನ್ನು ಫತ್ತೆಉಲ್ಲೇಬೇಗ ಎಂದು ಇಟ್ಟರು. ದಿನಾಂಕ ೧೪ ರಜಬ (೨೨ ಅಕ್ಟೋಬರ ೧೭೦೫) ರಂದು ಖೇಡದಿಂದ ಈ ಕೋಟೆಯ ಗೆಲುವಾದ ನಂತರ ಜುನ್ನರದ ಕಡೆಗೆ ಟಂಕಗಡ (ಟಂಕಸಾಲೆ)ವನ್ನು ಕೈವಶ ಮಾಡಿಕೊಳ್ಳಲು ಹೊರಟರು. ಪಾಮನಾಯಕನ ಮೊಮ್ಮಗ ಭರ(ಮ) ನಾಯಕನ ಕಡೆಗೆ ಆ ಕೋಟೆಯಿತ್ತು. ಸಕರ(ಸಗರ) ಗಡ ಕೋಟೆ ಹೋದನಂತರ ಆ ಕೋಟೆಯ ಮೇಲೆ ಆತ ಇರುತ್ತಿದ್ದನು. ಈ ದಿನಗಳಲ್ಲಿ ಆ ಕೋಟೆಯನ್ನು ಕೈವಶ ಮಾಡಿಕೊಳ್ಳಲು ಮೇಲಿಂದ ಮೇಲೆ ಸೈನ್ಯವನ್ನು ಕಳಿಸುತ್ತಿದ್ದರೂ ಭರನಾಯಕನ ದಾಂಡಿಗತನದಿಂದ ಮತ್ತು ನಜರನ್ನು ಕಳಿಸುತ್ತಿರುವ ವಶೀಲಯಿಂದ ಕೋಟೆಯು ಇಂದಿನವರೆಗೂ ಭರ ನಾಯಕನ ಕೈಯಲ್ಲಿಯೇ ಉಳಿದಿತ್ತು. ಈ ದಿನಗಳಲ್ಲಿ ಮೊದಲು ಕಿಲೀಜಖಾನ ಮತ್ತು ಮಹಮದಖಾನರನ್ನು ಆ ಕೋಟೆಯ ಮೇಲೆ ನೇಮಿಸಲಾಗಿತ್ತು. ಕೆಲವು ದಿನಗಳ ನಂತರ ನುಸರತಜಂಗನು ಹೋಗಿ ಆ ಕೋಟೆಯ ಬಗ್ಗೆ ಬಹಳ ಪ್ರಯತ್ನಮಾಡಿದನು. ದಿನಾಂಕ ೧೪ ಮೊಹರಮ ತಿಂಗಳು, ರಾಜಶಕ ೪೯ರಲ್ಲಿ (೨೭ ಏಪ್ರಿಲ ೧೭೦೫) ಆ ಕೋಟೆಯನ್ನು ಗೆದ್ದರು.[19] ಆ ಕೋಟೆಗೆ 'ರಹಿಮಾನಬಕ್ಷ' ಎಂಬುದಾಗಿ ಹೆಸರನ್ನಿಟ್ಟರು. ಬಹುತೇಕ ದೊಡ್ಡ ದೊಡ್ಡ ಜನರು ಈ ಸಮಯದಲ್ಲಿ ಉಂಬಳಿಗಳನ್ನು ಪಡೆದರು. ಕಿಲಿಜಖಾನನಿಗೆ 'ಪಾಚಹಜಾರಿ' ಬಿರುದು ಮತ್ತು ಐದು ಸಾವಿರ ಸ್ವಾರರು ದೊರೆತವು. ಕಿಲಿಜಖಾನನು ದೇವಾಪುರದ ಟಂಕಸಾಲೆಯಿಂದ ಮೂರು ಕೋಸುಗಳಲ್ಲಿ ಕೃಷ್ಣಾನದಿಯ ದಂಡೆಯಲ್ಲಿ ಛಾವಣಿ ಹಾಕಿದನು. ಅದೇ ವರುಷ ದೇವಾಪುರದಲ್ಲಿ ಆಲಮಗೀರ ಬಾದಶಹನ ಆರೋಗ್ಯ ಕೆಟ್ಟಿತು. ಅದರಿಂದ ಬಾದಶಹ ಬಹಳ ಗಾಬರಿಯಾದನು. ಆದರೆ ಔಷಧೋಪಾಯಗಳಿಂದ ಬೇಗ ಗುಣಮುಖನಾದನು. ದಿನಾಂಕ ೧೭ ರಜಬ

16. On Wednesday the 10th Novr. 1703/12th Rajab, the army marched out for the conquest of Rajgarh and arrived at the foot of the fort on Sunday the 28th Novr 1703/30th Rajab. On wednesday the 16th Feb 1704/21st Shawal the imperial banner was planted on the top of the fort. - MIA P 283-84, 289

17. MIA P.-290.

18. On Wednesday, the 23rd February 1704/28th Shawwal, imperial tent was pitched in the neighbourhood of Torna. In the night of Friday the 10th March 1704/15th Zilqada the enemy became helpless and begged quarters- MIA P 289-90

19. MIA P 291.

ತಿಂಗಳಲ್ಲಿ (೨೪ ಅಕ್ಟೋಬರ ೧೭೦೫) ಬಹಾದ್ದೂರಗಡದ ಕಡೆಗೆ ಕೂಚ್ ಮಾಡಿದರು.[20] ದಿನಾಂಕ ೧, ಸಾಬಾನ ತಿಂಗಳು (೮ ನವಂಬರ ೧೭೦೫) ಬಹಾದ್ದೂರ ಗಡಕ್ಕೆ ಬಂದರು. ಸಂಭಾಜಿಯ ಮಗ ಶಾಹೂನನ್ನು ನಸರತಜಂಗನೊಡನೆ ಪ್ರದೇಶಗಳನ್ನು ಗೆಲ್ಲಲು ನೇಮಿಸಿದರು. ದಿನಾಂಕ ೧೬ ಸವಾಲ ತಿಂಗಳು ರಾಜಶಕ ೫೦ (೨೧ ಜನವರಿ ೧೭೦೬) ಅಲಮಗೀರ ಬಾದಶಹನ ಸೈನ್ಯವು ಅಹಮದನಗರಕ್ಕೆ ಬಂದು ಮುಟ್ಟಿತು.[21] ೨೨ ವರುಷಗಳ ನಂತರ ಸವಾಲ ತಿಂಗಳ ಕೊನೆಯಲ್ಲಿ ರಾಜಶಕ ೫೧ನೆಯ ವರುಷದಲ್ಲಿ (ಫೆಬ್ರವರಿ ೧೭೦೭) ಬಾದಶಹನ ಆರೋಗ್ಯ ಕೆಟ್ಟಿತು. ಕೆಲವು ದಿನಗಳ ನಂತರ ಆತನ ಪ್ರಕೃತಿ ಒಂದಿಷ್ಟು ಗುಣಮುಖವಾಯಿತು. ಮತ್ತೆ ಜಿಲ್ಕಾದ ತಿಂಗಳ ಕೊನೆಯಲ್ಲಿ (ಫೆಬ್ರವರಿ ೧೭೦೭ರ ಪ್ರಾರಂಭದಲ್ಲಿ) ಬಾದಶಹನ ಬೇನೆ ಮತ್ತೆ ತಿರುಗಿತು. ಈ ಬೇನೆಯಲ್ಲಿಯೇ ಆ ದಿನ ಬಾದಶಹನ ಮುಖದಿಂದ ಈ ಮಾತುಗಳು ಹೊರಟುವು. 'ಅಹಮದನಗರವೆ (ನನ್ನ) ಕೊನೆಯ ಯಾತ್ರೆ' ; ಅಷ್ಟೊಂದು ಬೇನೆ ಉಲ್ಬಣಿಸಿತು. ದಿನಾಂಕ ೨೮ ಜಿಲ್ಕಾದ ತಿಂಗಳು ರಾಜಶಕ ೫೧-ಹಿಜರಿಸನ್ ೧೧೧೮ರಲ್ಲಿ ಪ್ರಾತಃಕಾಲ ಶುಕ್ರವಾರ ಮೊದಲನೆಯ ಪ್ರಹರದನಂತರ (೨೧ ಫೆಬ್ರವರಿ ೧೭೦೭) ಔರಂಗಜೇಬ ಬಾದಶಹನ ಅಂದರೆ ಅಲಮಗೀರ ಬಾದಶಹನ ಜೀವ ಪಕ್ಷಿ ನಾಲ್ಕು ತತ್ವಗಳ ಶರೀರದಿಂದ ಹಾರಿತು,[22] ಆತ ಸಾಯುವಾಗ 'ನನ್ನ ಶವವನ್ನು ಹಜರತ ಶಾಹ ಜೇನುಲಹಕ ವದೀನ, ಕುದಸಲ್ಲಾಹಸಿರಹೂ ಅವರ ಸಮಾಧಿಯ ಹತ್ತಿರ ಹುಗಿಯಿರಿ' ಎಂದು ಹೇಳಿದ್ದನು. ಆದರಂತೆ, ಅವರ ಸಮಾಧಿಯ ಹತ್ತಿರ ದಫನಮಾಡಲಾಯಿತು. ಅಲಮಗೀರ ಬಾದಶಹನು ರಾಜ್ಯಗಳನ್ನು ಗೆಲ್ಲುವಲ್ಲಿ ಮತ್ತು ಜಗತ್ ಸಂರಕ್ಷಣೆ ಮಾಡುವ ವಿಚಾರದ ಜಗ್ಗಾಟಗಳಿಂದ ವಿಶ್ರಾಂತಿ ಪಡೆದನು. ಅವನು ಅಂತ್ಯ ಕಾಲದಲ್ಲಿ ತನ್ನ ಕಾಲ ಕಿರ್ದಿಯ ಕೆಲವು ವಿಷಯಗಳನ್ನು ಬರೆದಿಟ್ಟಿದ್ದಾನೆ. ಅದು ಹೀಗಿದೆ :

### ೭೯. ಆಲಮಗೀರ ಬಾದಶಹನು ತನ್ನ ಅಂತ್ಯಕಾಲದ್ಲಲಿ ಬರೆದಿಟ್ಟದ್ದು :

ನಾನು ಹುಟ್ಟಿದಾಗ ಜೊತೆಗೆ ಏನನ್ನೂ ತಂದಿರಲಿಲ್ಲ. ಒಬ್ಬನೇ ಹುಟ್ಟಿ ಬಂದಿದ್ದೆ. ಅದರಂತೆ ಈಗಲೂ ಕೂಡ ಯಾರನ್ನೂ ಜೊತೆಗೆ ಕರೆದುಕೊಳ್ಳದೆ ಹೊರಟು ಹೋಗುವೆ. ಜನ್ಮಕ್ಕೆ ಬಂದಾಗ ತಲೆಯ ಮೇಲೆ ಏನೂ ಇರದೆ, ಬೋಳಾಗಿಯೇ ಬಂದಿರುವೆ ಹಾಗೆಯೇ ಈಗಲೂ ಬೋಳಾಗಿ ಹೋಗುವೆ. ಆದ್ದರಿಂದ ನನ್ನ ತಾಬೂತದೊಂದಿಗೆ (ಶವಯಾತ್ರೆ) ನಿಶಾನೆ ಮತ್ತಿತರ ಬಾದಶಾಹೀ ಚಿಹ್ನೆಗಳ ಸರಂಜಾಮ ಯಾವುದನ್ನೂ ನಡೆಸಬೇಡಿರಿ. ಹಮೀದುದ್ದೀನ ಖಾನನು ನನ್ನ ಪೂರ್ಣ ವಿಶ್ವಾಸಿಕ ಮನುಷ್ಯನಾಗಿದ್ದಾನೆ. ಆತ ಒಬ್ಬನೇ ನನ್ನ ಶವವನ್ನು ಹಜರತಶಾಹ ಬುರ್ಹಾನುದ್ದೀನರ ದರ್ಗಾದಲ್ಲಿ ಮುಟ್ಟಿಸಬೇಕು. ಪ್ರೇತವನ್ನು ಹುಗಿಯುವ ಸ್ಥಳದಲ್ಲಿ ಫಕೀರ ಜನರ ಹೆಣವನ್ನು ಹುಗಿಯುವ ಹಾಗೆ ಯಾವ ಸಮಾರಂಭಗಳೂ ಇರದೆ ಹುಗಿಯಿರಿ. ನನ್ನ ದೈವವಾನ ಪುತ್ರನಿದ್ದಾನೆ. ಅವನನ್ನು ಸೈನ್ಯದಮೇಲೆ ಕಾಯಂ ಆಗಿ ಇಡಿರಿ. ನನ್ನ ಸುದೈವಿ

20. MIA P. 303-304.
21. On the 23rd January 1706/19th Shawwal, imperial (26th March 1705/19th Saban should be) began its march for Ahmednagar. The imperial camp returned to Ahmednagar after the lapse of 22 years on Sunday the 20th January 1706/16th Shawwal - MIA P.304.
22. On the morning of Friday, the 20th February 1707/28th Zilhijja 1118 A.H. Aurangzeb died - MIA P.309.

ಪುತ್ರರಲ್ಲಿ ರಾಜಪದವು ಯಾರ ದೈವದಲ್ಲಿದೆಯೋ ಆತನೇ ರಾಜ್ಯವಾಳುತ್ತಾನೆ. ಒಂದು ವೇಳೆ ಹೊಸದಾಗಿ ಸಂಪಾದನೆ ಮಾಡಿದ ಎರಡು ಸುಭೆಗಳ ಮೇಲೆಯೇ ಅಲ್ಪ ತೃಪ್ತನಾದರೂ ಏನೆಂದೂ ಅಡ್ಡಿಯನ್ನು ಮಾಡಬೇಡಿರಿ. ವಜೀರ ಅಮೀರುಲ್ ಉಮರಾವಕ್ಕಾಗಿಯೇ ವಜೀರನಾಗುವುದಿಲ್ಲ. ಯಾರ ದೈವದಲ್ಲಿ ರಾಜ್ಯವನ್ನು ಆಳುವುದಿದೆಯೋ ಖಾನಾಜಾದನು ಆತನಿಗೆ ಅಡ್ಡಿಪಡಿಸಬಾರದು. ಉಪದ್ರವ ಕೊಡಬಾರದು. ಬಾದಶಾಹೀ ಚಾಕರ ಜನರು ಮಹಮ್ಮದ ಆಜಮನೊಂದಿಗೆ ಪೂರ್ಣ ವಿಶ್ವಾಸದಿಂದ ನಡೆಯುತ್ತ ಆತನ ಸೇವೆಯನ್ನು ಮಾಡುತ್ತ ಹೋಗಬೇಕು. ಎರಡು ಸುಭೆಗಳ ಸಿಂಹಾಸನದ ಮೇಲೆ ಕುಳಿತುಕೊಳ್ಳುವವನು ಖಿಲಾಫತದ ಸುಭೆಗಳಿಗೆ ಒಪ್ಪಿಗೆಯಾದರೆ ನಾಲ್ಕು ಸುಭೆಗಳನ್ನು ಮಾಡಲಿ. ದಕ್ಷಿಣದ ಕದೀಮ ಪ್ರದೇಶ, ಮಾಳವಾ, ಖಾನದೇಶ, ವರ್‍ಹಾಡ, ಗುಜರಾಥ ದಾರುಲ್‌ಖೇರೆ ಅಜಮೀರ, ಚಕಲಾತ ಮತ್ತು ಅದರ ವಶದಲ್ಲಿದ್ದ ಪ್ರದೇಶಗಳನ್ನು ತೆಗೆದುಕೊಳ್ಳಬೇಕು. ದಾರುಲ್‌ಖಿಲಾಫತದ ಸುಭೆಗೆ ಒಪ್ಪಿಗೆಯಾದ ರಾಜಕುಮಾರನು ಕಾಬುಲ ಮತ್ತು ಬೇರೆ ಅನೇಕ ಸುಭೆಗಳನ್ನು ತನ್ನ ಖಾಸಗೀ ಖರ್ಚಿಗಾಗಿ ತೆಗೆದುಕೊಂಡು, ಶಿಲ್ಕಿನಲ್ಲಿ ಉಳಿದಿದ್ದ ಐವತ್ತೇಳು ಸಾವಿರ ಮೂರು ನೂರದ ಎಂಭತ್ತೆರಡು ರೂಪಾಯಿಗಳನ್ನು ತೆಗೆದುಕೊಳ್ಳಬೇಕು. ಅವುಗಳಲ್ಲಿ ಐದು ಸಾವಿರ ರೂಪಾಯಿಗಳನ್ನು ನನ್ನ ಪ್ರೇತಯಾತ್ರೆಗೆ ಖರ್ಚು ಮಾಡಬೇಕು. ಉಳಿದ ರೂಪಾಯಿಗಳನ್ನು ಫಕೀರ-ಫುಕಾರರಿಗೆ ಖೈರಾತ ಮಾಡಬೇಕು. ವಜೀರನು ಆ ರಾಜಕುಮಾರನಿಗೆ, "ಬಾದಶಹರು ಜೀವಂತ ಇದ್ದಾಗ ಹೇಳಿದ ಹಾಗೆ ನಿನಗೆ ಒಪ್ಪಿಗೆಯಾದರೆ ಖರ್ಚು ಮಾಡು" ಎಂದು ಹೇಳಬೇಕು. ಮತ್ತು ಸದರೀ ಬರೆದಂತೆ ಸುಭೆಗಳನ್ನು ಹಂಚಿಕೊಂಡು ರಾಜ್ಯ ಮಾಡಿದರೆ. ಒಬ್ಬರೊಬ್ಬರಲ್ಲಿ ಯುದ್ಧವಾಗುವುದಿಲ್ಲ. ಆಲಮಗೀರ ಬಾದಶಹನು ಅಂತ್ಯಕಾಲದಲ್ಲಿ ಬೋಧ ಮಾಡಿದ್ದು ಇಲ್ಲಿಗೆ ಸಮಾಪ್ತವಾಯಿತು.

### *೮೦. ಬೋಧ ವರ್ಣನೆ :*

ಅರಬ್ಬೀ ವಾಕ್ಯದ ಅರ್ಥ 'ಬುದ್ಧಿವಂತನಾಗು, ನೀವು ಈರ್ಷೆಯನ್ನು ಹಿಡಿಯಿರಿ, ನಮಗೆ ಮತ್ತು ನಿಮಗೆ ಅಲ್ಲಾನು ಮಾರ್ಗವನ್ನು ತೋರಿಸಲಿ, ಆಜ್ಞೆ ಮಾಡಲಿ. ಅಲ್ಲಾನು ಹೀಗಿದ್ದಾನಲ್ಲ, ಎಲ್ಲರಿಗಿಂತ ಸಮರ್ಥನಿದ್ದಾನೆ. ಘಟಿಸುವ ಕರ್ಮದ ಪರಿಣಾಮವನ್ನು ಕ್ಷಮಿಸುವವನೂ ಇದ್ದಾನೆ. ಪೈಗಂಬರರು ಅನ್ಯಾಯವನ್ನು ಕ್ಷಮಿಸುವವರಾಗಿದ್ದಾರೆ. ಸ್ವತಃ ಅಧಿಕಾರಿಯಾಗಿದ್ದಾರೆ. ಈ ನಶ್ವರ ಪೃಥ್ವಿಯು ಮೋಸದ್ದಾಗಿದ್ದು ಏನೆಲ್ಲ ಚಮತ್ಕಾರಿಕ ಸಂಕಟದ ಪಾಶದಿಂದ ಬುದ್ಧಿಯನ್ನು ಸುಡುತ್ತದೆ. ಸಮಾಧಾನತೆಯನ್ನು ಲೂಟಿ ಮಾಡಿ ಒಯ್ಯುತ್ತದೆ. ಈ ಪಾಶದಿಂದ ಯಾರೂ ಬಿಡುಗಡೆ ಆಗಲಾರದು. ಬುದ್ಧಿವಂತನು ದೂರದರ್ಶಿತ್ವದ ವಿಚಾರಮಾಡಿ ಪರಿಣಾಮದ ಮೇಲೆ ದೃಷ್ಟಿಯನ್ನಿಡುತ್ತಾನೆ, ಈ ರೀತಿ ವಿದ್ವಾಂಸ, ಶಾಸ್ತ್ರಜ್ಞ, ಆಚಾರಶೀಲ, ನಿರುಪಮನಾಗಿ ಆಲಮಗೀರ ಬಾದಶಹನಿದ್ದನು. ಪ್ರತ್ಯಕ್ಷವಾಗಿ ಹಿಂದುಸ್ಥಾನವು ಎಲ್ಲ ಪ್ರದೇಶಗಳಲ್ಲಿ ಅತಿ ಶ್ರೇಷ್ಠವಾದದ್ದು. ಮತ್ತು ಆ ಹಿಂದುಸ್ಥಾನ ಪ್ರದೇಶವು ಆಲಮಗೀರ ಬಾದಶಹನ ಕೈಯಲ್ಲಿ ಇದ್ದರೂ, ಅಷ್ಟಕ್ಕೆ ತೃಪ್ತಿಯಾಗದೆ, ಅಧಿಕ ರಾಜ್ಯಗಳನ್ನು ದೊರಕಿಸಿಕೊಳ್ಳಬೇಕೆಂದು ದಕ್ಷಿಣ ದೇಶವನ್ನು ಕೈವಶಮಾಡಿಕೊಳ್ಳಬೇಕೆಂಬ ಆಶೆಯನ್ನು ಹಿಡಿದನು. ಹಗಲುರಾತ್ರಿ ಆಕ್ರಮಣ, ಹಲ್ಲೆಗಳನ್ನು ಮಾಡುತ್ತ ತುಸುವೇ ದಿನಗಳಲ್ಲಿ ಯುಕ್ತಿಯಿಂದ ಖಾನದೇಶ, ವರ್‍ಹಾಡ ಮತ್ತು ಅಹಮದನಗರಗಳನ್ನು ಕೈವಶ ಮಾಡಿಕೊಂಡನು. ಆಶ್ಚರ್ಯವೆಂದರೆ, ಇಷ್ಟೆಲ್ಲವನ್ನೂ ಪಡೆದು ತೃಪ್ತಿಯಾಗದೆ, ಎರಡು ವಿಚಾರಗಳಲ್ಲಿ,

ಪಾಪ! ಗರೀಬನಾದ ಒಬ್ಬ ಸಿಕಂದರ ಮತ್ತು ಇನ್ನೊಬ್ಬ ಅಬುಲ ಹಸನ ಕುತುಬ ಬಾದಶಹರಿಬ್ಬರನ್ನು ಕರುಣೆಯಿಂದ ಜೀವಂತ ಬಿಟ್ಟಿದ್ದರೆ, ಅಥವಾ ತನ್ನ ಅಧೀನದ ಬಾದಶಹರನ್ನಾಗಿ ಮಾಡಿದ್ದರೆ ಅಲಮಗೀರ ಬಾದಶಹನ ದೊಡ್ಡ ತನಕ್ಕೆ ಕುಂದು ಬರುತ್ತಿತ್ತೆ? ಶಾಹೂನನ್ನು ಪ್ರತಿಪಾಲನೆ ಮಾಡಿದನು. ಮತ್ತು ಆತನ ವಂಶವನ್ನು ಕಾಯಂ ಆಗಿ ಇಟ್ಟನು. ಅಲ್ಲದೆ ಆತನ ಪಿತ್ರಾರ್ಜಿತ ರಾಜ್ಯದ ಸಿಂಹಾಸನವನ್ನು ಆತನಿಗೆ ಕಾಣಿಕೆಯಾಗಿ ಕೊಟ್ಟನು. ಪ್ರತ್ಯಕ್ಷವಾಗಿ ಆತನ ತಂದೆ ಸಂಭಾಜಿ ಮತ್ತು ಅಜ್ಜ ಶಿವಾಜಿ ಈ ಉಭಯತರು ಅಲಮಗೀರ ಬಾದಶಹನಿಗೆ ಅತ್ಯಂತ ತೊಂದರೆ ಕೊಟ್ಟಿದ್ದರು. ಹೀಗಿದ್ದರೂ, ಅವರಿಗೆ ರಾಜ ಪದವಿಯನ್ನು ಕೊಟ್ಟನು. ಮತ್ತು ಈ ಇಬ್ಬರು ಮುಸಲ್ಮಾನರಿಗೆ ಅಂದರೆ ಸಿಕಂದರ ಬಾದಶಹ ಮತ್ತು ಅಬುಲ ಹಸನ ಬಾದಶಹ (ಕುತುಬಶಾಹಿ) ಈ ಉಭಯತರ ಸಂರಕ್ಷಣೆಯನ್ನು ಮಾಡಲಿಲ್ಲ. ಈ ಉಭಯತರ ವಿಷಯದಲ್ಲಿ ಆತನ ಅಂತಃಕರಣದಲ್ಲಿ ಕಿಂಚಿತ್ತೂ ದಯೆ ಬರಲಿಲ್ಲ. ಉಭಯತರ ವಂಶವನ್ನು ನಿರ್ವಂಶ ಮಾಡಿದನು. ಎಷ್ಟರ ಮಟ್ಟಿಗೆ ಎಂದರೆ, ಅವರ ಹೆಸರು ಅಥವ ಗುರುತು ಕೂಡ ಸಿಗದಂತೆ ಮಾಡಿದನು. ಹೀಗಿದ್ದಾಗ್ಯೂ ಇನ್ನಷ್ಟು ಮತ್ತಷ್ಟು ಅಧಿಕ ರಾಜ್ಯವನ್ನು ದೊರಕಿಸಿಕೊಳ್ಳಬೇಕೆಂಬ ಆಶೆಯನ್ನು ಹಿಡಿದನು. ಮತ್ತು ಆಶೆಯ ವರ್ತುಲವನ್ನು ಬಹಳ ವಿಸ್ತರಿಸಿದನು. ವಿಜಾಪುರ ಮತ್ತು ಗೋವಳ ಕುಂಡಗಳನ್ನು ಕೈವಶಮಾಡಿಕೊಂಡನು. ಈ ವಿಷಯದಲ್ಲಿ ಬಹಳ ವರುಷಗಳಿಂದ ಆಶೆ ಮಾಡುತ್ತಿದ್ದನು. ಅದು ಬಹಳ ವರುಷಗಳಾದ ಮೇಲೆ ಪೂರ್ಣಗೊಂಡಿತು. ಅತ್ಯಂತ ಸಂತೋಷಪಟ್ಟನು. ಇಷ್ಟೆಲ್ಲ ಆದ ಮೇಲೆ ಅಲಮಗೀರ ಬಾದಶಹನು ತನ್ನ ರಾಜಧಾನಿ ದಿಲ್ಲಿಗೆ ತಿರುಗಿ ಹೋಗಿ, ತನ್ನ ಆಪ್ತರಲ್ಲಿ, ಹತ್ತಿರದ ಸಂಬಂಧಿಕರಲ್ಲಿ ಅವರನ್ನು ಭೆಟ್ಟಿಯಾಗುವುದೇ ಅಲಭ್ಯಲಾಭವೆಂದು ತಿಳಿದು, ತನ್ನ ಅಪ್ಪ, ಅಜ್ಜ ಮುತ್ತಾತರು ಸತ್ತ ಸ್ಥಳದಲ್ಲಿ ತಾನೂ ಸತ್ತು ತನ್ನ ಶರೀರ ಅಲ್ಲಿಯೇ ಹೋಗಬೇಕು ಎಂದಿದ್ದರೆ ಎಷ್ಟೋ ಯೋಗ್ಯವೆನಿಸುತ್ತಿತ್ತು. ಆದರೆ ಅದನ್ನೂ ಮಾಡಲಿಲ್ಲ. ವಿಜಾಪುರದ ವಶದಲ್ಲಿದ್ದ ಪ್ರದೇಶಗಳನ್ನು, ಕೋಟೆಗಳನ್ನು, ಮಹಾಲುಗಳನ್ನು ತೆಗೆದುಕೊಳ್ಳುವ ಚಿಂತೆಯಲ್ಲಿ ಬಿದ್ದನು. ಆ ವಿಷಯದಲ್ಲಿ ಬಹಳ ಪ್ರಯತ್ನಮಾಡಿದನು. ಅಲಮಗೀರ ಬಾದಶಹನ ಆಯುಷ್ಯದಲ್ಲಿಯ ಇಪ್ಪತ್ತು ವರುಷಗಳು ಬಾಕಿ ಉಳಿದಿದ್ದವು. ಆ ಇಪ್ಪತ್ತು ವರುಷಗಳನ್ನು ಇದೇ ಚಿಂತೆಯಲ್ಲಿ ಕಳೆದನು. ಹಿಂದುಸ್ಥಾನದಂಥ ರಾಜ್ಯ, ಅದರ ವಿಸ್ತೀರ್ಣವೆಂದರೆ ಅರ್ಧ ವಿಶ್ವವೇ ಎನ್ನಬೇಕು. ಅಂಥ ಹಿಂದುಸ್ಥಾನದ ಆಶೆಯನ್ನು ಬಿಟ್ಟು ಈ ಆಕ್ರಮಣಗಳಲ್ಲಿ, ಓಡಾಟಗಳಲ್ಲಿ ಕಳೆದು ಮರಣಹೊಂದಿದನು. ಅಯ್ಯೋ ಆತ ನನ್ನ ಖಾಸಾ ಸಹೋದರನಿರಬಹುದು, ಸ್ನೇಹಿತ ನಿರಬಹುದು. ಆದರೆ ಇದು ಸತ್ಯ. ನಾನು ಮಾತನಾಡಿದ ಈ ಮಾತುಗಳ ಮೇಲೆ ಎಂದಿಗೂ ದೋಷ ಹೊರಿಸಿ ನನ್ನ ದುರ್ಗುಣವನ್ನು ಬಯಲಿಗೆಳೆಯ ಬೇಡಿರಿ. ಉಭಯ ಬಾದಶಹರ ಶ್ರೇಷ್ಠತ್ವದ ಮೇಲೆ ನನಗೆ ಆಶೆ ಇತ್ತೆಂದು ಮತ್ತು ಅವರ ಕಲ್ಯಾಣವನ್ನು ಇಚ್ಛಿಸುವೆನಾದ್ದರಿಂದ ದೇವರಾಣೆ ಮಾಡಿ ಈ ಸತ್ಯವನ್ನು ಹೇಳಿದೆ ಎಂಥ ಆಶ್ಚರ್ಯಕರ ವ್ಯಕ್ತಿಯಾಗಿದ್ದ ಅಲಮಗೀರ ಬಾದಶಹ? ಜಗತ್ತಿನಲ್ಲಿಯೇ, ಎಲ್ಲ ಬಾದಶಹರುಗಳಿಗಿಂತ ಶ್ರೇಷ್ಠನಾಗಿದ್ದ. ಸರ್ವ ವಿದ್ಯೆಗಳಲ್ಲೂ ನಿಪುಣ ಮತ್ತು ಸರ್ವ ಗುಣಗಳಲ್ಲೂ ಗುಣಜ್ಞ, ಶೇಖ ಮತ್ತು ಎಲ್ಲ ಫಕೀರ ಜನರಲ್ಲೂ ಶ್ರೇಷ್ಠನಾಗಿದ್ದನು. ಪೂರ್ಣಜ್ಞಾನಿಯಾಗಿದ್ದನು. ನಾನು ಈ ಎಲ್ಲ ಚಾಡಿತನದ ಮಾತುಗಳನ್ನಾಡಿದೆ. ಮತ್ತು ನನ್ನ ಕೆಟ್ಟತನ ತೋರಿಸಿದೆ. ಇದು ಈ ಜಗದಲ್ಲಿಯ ವಿಷಮತೆಯನ್ನು ಎಲ್ಲ ಬಂಧುವರ್ಗದವರಿಗೆ ತಿಳಿಯಲಿ ಮತ್ತು ಸರ್ವ ಭ್ರಾಂತ ಜನರಿಗೆ ತಿಳಿದು ಎಲ್ಲರಿಗೂ ಬೋಧೆಯಾಗಲಿ ಎಂದು ಹೇಳಿದೆ. ಈ ಭೋಧವನ್ನು ತಿಳಿದವರು ಖುಷಿ ಜನರಲ್ಲಿ ಮಾತ್ರ ಆಯ್ದ ಕೆಲವರಿದ್ದಾರೆ. ಈ ಬೋಧ ಎಲ್ಲಿರುವುದೋ ಅದರ ಗುರುತು

ಹೀಗಿದೆ! ಅರಬ್ಬೀ ವಾಕ್ಯದ ಅರ್ಥ 'ಶ್ರೇಷ್ಠನಾದ ಅಲ್ಲಾನು ನಮಗೆ ಆಶ್ರಯ ನೀಡಲಿ. ಪೃಥ್ವಿಯಲ್ಲಿಯ ಅಯೋಗ್ಯ ಪದಾರ್ಥಗಳನ್ನು ಅಂದರೆ ಅಪರಾಧಗಳನ್ನು ತನ್ನ ಕೃಪೆಯಿಂದ ಮತ್ತು ದಯೆಯಿಂದ ಕ್ಷಮೆ ಮಾಡುವಂಥ ದೇವರಿದ್ದಾನೆ ಅಲ್ಪ ಸಂತೋಷವಿರಬೇಕು. ಅದರಲ್ಲಿಯ ಸುಖ ಸಂತೋಷಗಳೇ. ಶ್ರೇಷ್ಠ ಲಕ್ಷಣಗಳು. ಅಲ್ಪ ಸಂತೋಷವನ್ನು ಮನ್ನಿಸಿ ತುಸುದರಲ್ಲಿ ಸುಖ ಭೋಗಿಸಿ. ಇಲ್ಲಿಯ ಪದಾರ್ಥಗಳ ಆಶೆಯನ್ನು ಬಿಟ್ಟು ಪರಲೋಕದ ಸುಖ ಪ್ರಾಪ್ತಿಗಾಗಿ ಹೋದ ಬಾದಶಹರು ಧನ್ಯರು'. ಅರಬ್ಬೀ ವಾಕ್ಯದ ಅರ್ಥ ಹೇಳುವಂತೆ, "ಹೇ ಅಲ್ಲಾ, ನಮ್ಮನ್ನು ಆ ಬಾದಶಹರ ಮಂದಿರದಲ್ಲಿ ನಾಯಿಗಳನ್ನಾಗಿ ಮಾಡು ಮತ್ತು ಅದನ್ನೇ ಮಾಡು".

### *೮೧. ಒಂದು ಕಥಾಭಾಗದ ವರ್ಣನೆ :*

ಈ ಎರಡೂ ರಾಜ್ಯಗಳು ಅಂದರೆ, ಆದಿಲಶಾಹಿ ಮತ್ತು ಕುತುಬಶಾಹಿ ರಾಜ್ಯಗಳು ಆಲಮಗೀರ ಬಾದಶಹನ ಕೈಗೆ ಬಂದಾಗ ಆತನಿಗೆ ತುಂಬ ಆನಂದವಾಯಿತು. ಯಾಕೆಂದರೆ ಆಲಮಗೀರ ಬಾದಶಹನ ಮನೆತನದಲ್ಲಿ ನಾಲ್ಕು ತಲೆಮಾರುಗಳಿಂದ ಹಿಂದಿನ ಬಾದಶಹರು ಬಯಸಿದ್ದು, ಇಂದು ಕೈಗೂಡಿತ್ತು, ಈ ಎಲ್ಲ ಕಾರಣಗಳಿಂದ ಆತನಿಗೆ ತುಂಬ ಆನಂದವಾಗಿತ್ತು ಮತ್ತು ಒಂದು ದೊಡ್ಡ ಸಂತೋಷಕೂಟವನ್ನು ಏರ್ಪಡಿಸಿದ್ದನು. ಅಲ್ಲಾನನ್ನು ಬಲ್ಲ ಸಾಧು ಸಂತರಿಗೆ ಬಹಳ ದಾನ ಧರ್ಮ ಮಾಡಿದನು. ದರಬಾರದಲ್ಲಿಯ ಕಾರಭಾರಿ ಮಂಡಳಿಗೆ ಮತ್ತು ಯುದ್ಧ ವೀರರಿಗೆ ಉಚಿತ ಸನ್ಮಾನದೊಂದಿಗೆ ಪದಾಧಿಕಾರಗಳನ್ನೂ ಕೊಟ್ಟನು. ಕಾರಭಾರಿ ಮಂಡಳಿ, ಖಾಸಗೀ ಜನರು, ಮತ್ತು ನಿರಂತರ ಸನ್ನಿಧಿಯಲ್ಲಿ ಇರುವ ಜನರು ಮೊದಲಾದವರು ಆಲಮಗೀರ ಬಾದಶಹನಿಗೆ ಶುಭಾಶಯಗಳನ್ನು ಹೇಳಿ, ನಜರು ಸಲ್ಲಿಸಿದರು. ಆದರೆ ಜೇಬುನ್ನಿಸಾ ಬೇಗಮಳು ಎಲ್ಲರಂತೆ ಬಾದಶಹನಿಗೆ ಶುಭಾಶಯಗಳ ನಜರನ್ನು ಸಲ್ಲಿಸಲಿಲ್ಲ. ಬಾದಶಹನು ಕಾರಣವೇನೆಂದು ಅವಳನ್ನು ಕೇಳಿದನು. ಆಗ ಬೇಗಮಳು ಧೀರಪುರುಷನಂತೆ ಉತ್ತರ ಕೊಟ್ಟಳು. ಇದು ಶುಭಾಶಯ ಸಲ್ಲಿಸುವ ಸಮಯವಲ್ಲ ಅಂಥ ಯಾವ ಕಾರ್ಯಗಳು ತಮ್ಮ ಸೇವಕರಿಂದ ಆಗಿವೆಯೆಂದು ಶುಭಾಶಯಗಳನ್ನು ಸಲ್ಲಿಸಬೇಕು? ಅರ್ಥಾತ್ ತಾವು ಯಾವ ಪರಾಕ್ರಮ ಮಾಡಿದಿರೆಂದು ನಾನು ನಿಮಗೆ ಶುಭಾಶಯ ಸಲ್ಲಿಸಿ ನಜರು ಕೊಡಬೇಕು? ಈ ಮೊದಲು ನೀವು ಬಾದಶಹರ ಬಾದಶಹರಾಗಿದ್ದಿರಿ, ಯಾಕೆಂದರೆ ಅನೇಕ ಬಾದಶಹರು, ರಾಜ್ಯ ರಾಜ್ಯಗಳ ರಾಜರು ಅಲ್ಲದೆ ಅಬ್ದುಲ ಹಸನ ಬಾದಶಾಹ ಮತ್ತು ಸಿಕಂದರ ಆದಿಲಶಾಹ ಬಾದಶಹರು ತಮ್ಮ ಆಜ್ಞೆಯಲ್ಲಿ ಸೇವೆ ಮಾಡುತ್ತ, ನಜರನ್ನೂ ಖಂಡಣೆಯನ್ನೂ ಕೊಡುತ್ತಿದ್ದರು. ಆದ್ದರಿಂದ ತಮಗೆ ಶಾಹನಶಾಹ, ರಾಜಾಧಿರಾಜ ಎಂಬ ಹೆಸರುಗಳು ಶೋಭಿಸುತ್ತಿದ್ದುವು. ಇಂದು ಎಲ್ಲ ಬಾದಶಹರನ್ನು ಕತ್ತರಿಸಿ ಎಲ್ಲ ರಾಜ್ಯಗಳನ್ನೆಲ್ಲ ಮುಳುಗಿಸಿ ತಾವು ಒಬ್ಬರೇ ಉಳಿದಿರಿ. ಮತ್ತು ಎಲ್ಲ ರಾಜಧಾನಿಗಳನ್ನು ಮುರಿದು ಒಂದೇ ರಾಜಧಾನಿಯಾಯಿತು. ಈಗ ತಮ್ಮ ಶಾಹನಶಾಹತನ ಅಥವ ರಾಜಾಧಿರಾಜತನದ ದರ್ಜೆಯು ಇಳಿದು ಶಾಹಕ್ಕಷ್ಟೇ ಸೀಮಿತವಾದಿರಿ. ಇದರಲ್ಲಿಯ ತಾತ್ಪರ್ಯವೆಂದರೆ, ಇಂದಿನವರೆಗೂ ಅನೇಕ ರಾಜರಿದ್ದರು. ಎಂದೇ ತಮಗೆ ರಾಜಾಧಿರಾಜ ಎನ್ನುತ್ತಿದ್ದರು. ಈಗ ಎಲ್ಲ ರಾಜರೂ ಉಚ್ಛೇದಿತರಾದಮೇಲೆ ರಾಜನೊಬ್ಬನೇ ಉಳಿದನು. ಆದ್ದರಿಂದ ಈ ವೇಳೆಯಲ್ಲಿ ತಮಗೆ ನಜರ ಕೊಡಬೇಕು ಎಂಬಷ್ಟು ತಮ್ಮ ಯೋಗ್ಯತೆ ಕಾಣುವುದಿಲ್ಲ, ಎಂದು ಜೇಬುನ್ನಿಸಾ ಬೇಗಮಳು ಹೇಳಿದಾಗ ಬಾದಶಹನಿಗೆ ಬಹಳ ವಿಸ್ಮಯವಾಯಿತು. ಮತ್ತೆ ಅವಳ ಬುದ್ಧಿಮತ್ತೆಗೆ ತಲೆದೂಗಿ ಅವಳ

ಮಾತುಗಳನ್ನು ಒಪ್ಪಿಕೊಂಡನು. ಫಾರಸೀ ಬೈತದ ಅರ್ಥ : 'ಒಂದು ವೇಳೆ ಸ್ತ್ರೀಯ ಬುದ್ಧಿಯು ಪುರುಷನಿಗಿಂತ ಅಧಿಕವಾಗಿದ್ದರೆ ಆ ಸ್ತ್ರೀಗೆ ಬುದ್ಧಿವಂತಳು' ಎನ್ನಬೇಕು.

*೮೨. ವಿಜಾಪುರದ ದುಸ್ಥಿತಿ :*

ಈ ಮೊದಲಿನ ವಿಜಾಪುರದ ಪ್ರಸಿದ್ಧಿ ಜಗತ್ತಿಗೆ ಗೊತ್ತಿದೆ. ಇಲ್ಲಿಯ ಉತ್ತಮತನ, ಜನಬಾಹುಳ್ಯ ಜನರ ಸುಖ, ಸಂತೋಷ, ಬಾದಶಾಹ ಮಂಡಳಿ ಮತ್ತು ಅಮೀರ ಜನರ ಉದಾರತನ, ವಿದ್ವಾಂಸರ ಜಮಾವಣೆ, ವಿರಕ್ತರಾದ ಫಕೀರ ಜನ ಕುರಾನ ಷರೀಫದಲ್ಲಿ ಹೇಳಿದ ನಡತೆ ಸೈನಿಕರ ಪರಾಕ್ರಮ, ನೀರಿನ ರುಚಿ, ಆರೋಗ್ಯಪೂರ್ಣ ಹವಾಮಾನ ಇತ್ಯಾದಿಗಳಿಂದಾಗಿ ಜನ ನಿರಂತರ ಆನಂದದಲ್ಲಿ ಇದ್ದರು. 'ಫಸದ' ಅಂದರೆ ಶರೀರದಲ್ಲಿ ಸೂಜಿ ಚುಚ್ಚಿ ರಕ್ತ ತೆಗೆಯುತ್ತಾರೆ. ಅಂಥ ಫಸದ ಮತ್ತು ಭೇದಿಯ ಔಷಧಗಳನ್ನಾಗಲೀ ತೆಗೆದುಕೊಳ್ಳುತ್ತಿರಲಿಲ್ಲ. ಇಲ್ಲಿಯ ಪ್ರಾಕೃತಿಕ ಗುಣ ಮತ್ತು ಹವಾಮಾನವನ್ನು ಕಂಡ ವೈದ್ಯ ಜನರು, ಇಲ್ಲಿಯ ಹವೆಯು ವಿಲಾಯತಿಗೆ ಸರಿಸಮನಾದುದೆಂದು ಹೇಳುತ್ತಿದ್ದರು. ಬೇರೆ ಅನೇಕ ಉತ್ತಮ ಲಕ್ಷಣಗಳು ಈ ವಿಜಾಪುರಕ್ಕಿದ್ದುವು. ಇಲ್ಲಿಯ ಜನರ ಬಗ್ಗೆ ವರ್ಣನೆ ಮಾಡಿದ್ದು, ಕೇಳಿದ್ದು ಇವುಗಳೆಲ್ಲ ಗ್ರಂಥಗಳಲ್ಲೂ ಬರೆಯಲಾಗಿದೆ. ಅದು ಸತ್ಯವೂ ಆಗಿದೆ. ಆ ಸಮಯದಲ್ಲಿ ವಿಜಾಪುರವು ಹಾಗೆಯೇ ಇತ್ತು. ಆದರೆ ಇಂದು ಈ ಎಲ್ಲ ವರ್ಣನೆಗಳು ಅಪಹಾಸ್ಯಕ್ಕೆ ಈಡಾಗಿ ವ್ಯರ್ಥಬಡ ಬಡಿಕೆಯೆನಿಸುತ್ತವೆ. ವಿಜಾಪುರದ ಮತ್ತು ವಿಜಾಪುರದಲ್ಲಿ ಇರುವವರ ಕುರಿತಾದ ಹೊಗಳಿಕೆ ಇತಿಹಾಸ ಗ್ರಂಥಗಳಲ್ಲಿ ಮತ್ತು ಮುಲ್ಲಾ ಜಹೂರಿ ಇತ್ಯಾದಿ ಜನರು ರಚಿಸಿದ ಗ್ರಂಥಗಳಲ್ಲಿ ಕೂಡ ಕಂಡು ಬರುತ್ತದೆ. ಅದೆಲ್ಲ ಈಗ ಅಸತ್ಯವೆಂದೂ ಮತ್ತು ವ್ಯರ್ಥ ಪ್ರಶಂಸೆಯೆಂದೂ ದೃಷ್ಟಿಗೋಚರವಾಗುತ್ತದೆ. ಯಾಕೆಂದರೆ ಇಂದಿನ ದಿನಗಳಲ್ಲಿ ವಿಜಾಪುರದಲ್ಲಿಯ ಹಾಳು ಬಿದ್ದ ಮನೆಗಳನ್ನು ಮತ್ತು ಇಲ್ಲಿ ಇರುವ ಜನರ ಅಸಭ್ಯತನವನ್ನು ವಿಸ್ತಾರವಾಗಿ ಬರೆಯಲೂ ಸಾಧ್ಯವಿಲ್ಲ. ಅಷ್ಟೊಂದು ಅಸಭ್ಯವಾಗಿದೆ. ಅಂತೆಯೇ ಮೊದಲಿನ ಉತ್ತಮಿಕೆಯನ್ನು ವರ್ಣಿಸಲೂ ಇಂದು ನಾಚಿಕೆಯಾಗುತ್ತದೆ ಮತ್ತು ನಾಚಿಕೆಯಿಂದ ನಾಲಿಗೆಯೂ ವರ್ಣಿಸದಂತೆ ತಡೆಹಿಡಿಯುತ್ತಿದೆ. ಇಂದಿನ ವಿಜಾಪುರದ ನಾಶವನ್ನು ಪೃಥ್ವಿಯ ಒಟ್ಟಂದದ ನಾಶದೊಂದಿಗೆ ತಕ್ಕಡಿಯಲ್ಲಿಟ್ಟು ತೂಗಿದರೆ ವಿಜಾಪುರ ನಾಶದ ಪರಡಿ ಭಾರೀ ಭಾರದಿಂದ ಕೆಳಗೆ ಇಳಿಯುತ್ತದೆ. ಹೇ ಅಲ್ಲಾ, ಇಂದಿನ ವಿಜಾಪುರವನ್ನು ಇಷ್ಟಕ್ಕಾದರೂ ಅಷ್ಟೆಯೇ ಇಡು. ವಿಜಾಪುರದ ಪ್ರಾರಬ್ಧ ಯೋಗದಿಂದ ಅದು ನಾನಾರೀತಿಯ ಸಂಕಟಗಳನ್ನು ಎದುರಿಸಿದೆ.

*೮೩. ವಿಜಾಪುರ ದುಸ್ಥಿತಿಯ ಕಾರಣಗಳು :*

ವಿಜಾಪುರದ ನಾಶಕ್ಕೆ ಮತ್ತು ಹಾಳು ಬೀಳುವುದಕ್ಕೆ ಯಾವ ಯಾವ ಕಾರಣಗಳು, ಎಂದು ಕೇಳಿದರೆ ನಾನು ಹೇಳುವುದಿಷ್ಟು ೧೫೦ ವರುಷಗಳಿಂದ ಅಥವಾ ಅದಕ್ಕೂ ಅಧಿಕ ವರುಷಗಳಿಂದ ಅದು ನಾಶವಾಗಲು ಕಾರಣಗಳ ಸರಮಾಲೆಯೇ ಇದೆ. ಅದನ್ನು ಬರೆಯಲಿಕ್ಕೂ ಸಾಧ್ಯವಿಲ್ಲ. ಮೊದಲು ಸಿಕಂದರ ಬಾದಶಹನ ಕಾಲಕಿರ್ದಿಯಲ್ಲಿ ೧೪ ವರುಷಗಳ ವರೆಗೆ ನಿರಂತರ ಗದ್ದಲ-ಯುದ್ಧಗಳೇ ನಡೆದವು. ಅದನ್ನು ಈ ಮೊದಲೆ ವರ್ಣಿಸಿಯಾಗಿದೆ. ಇನ್ನೊಂದು ಸಲ ಹಿಜರಿಸನ್ ೧೧೦೧ (ಕ್ರಿ.ಶ. ೧೬೮೯-೯೦)ರಲ್ಲಿ ಮಹಾಮಾರಿಯ ಉಪದ್ರವವಾದಾಗ ಅದೊಂದು ಮಹಾಪ್ರಳಯದಂತೆಯೇ ಆಯಿತು. ಮೂರನೆಯ ಸಲ ಹಿಜರಿ ಸನ್ ೧೧೦೩ರಲ್ಲಿ (ಕ್ರಿ.ಶ ೧೬೯೧-೯೨) ಪ್ರಳಯಕಾರಕ ದೊಡ್ಡ ಬರ ಬಿದ್ದಿತು. ಆ ಬರದ

ವರ್ಣನೆ ಮುಂದಿನ ೬೦-೭೦ ವರುಷಗಳ ವರೆಗೆ ಜನರ ಬಾಯಿಯಿಂದ ಹೋಗಲಿಲ್ಲ. ನಾಲ್ಕನೆಯ ಸಲ ಸನ್ ೧೧೧೩ರ (ಕ್ರಿ.ಶ. ೧೭೦೧-೦೨) ಪ್ರಾರಂಭದಿಂದ ಇಂದಿನವರೆಗೂ ವಿಜಾಪುರ ನಾಶವಾಗುತ್ತಲೇ ನಡೆದಿದೆ. ಅದು ಇಂದಿಗೂ ಮುಗಿದಿಲ್ಲ. ಮುಂದೆ ಕೂಡ ವಿಜಾಪುರದ ನಾಶವಾಗುವ ಕಾರಣಗಳು ನಿಲ್ಲುತ್ತವೆ ಎಂಬ ಆಶೆಯೂ ಕಾಣುತ್ತಿಲ್ಲ. ಆದರೆ ಒಂದು ವೇಳೆ ದೇವರು ಕೃಪೆಮಾಡಿದರೆ ಮಾತ್ರ ತುಸು ಕಲ್ಯಾಣವಾದೀತು.

## ೮೪. ಹಿಜರಿಸನ್ ೧೧೧೩ರ (ಕ್ರಿ.ಶ ೧೭೦೧-೨) ನಾಶ :

ಆಲಮಗೀರ ಬಾದಶಹನ ರಾಜಶಕ ನಾಲ್ವತ್ತನೆಯ ವರುಷ ಘಟಿಸಿದ ನಾಶಕಾರಕ ಈ ಘಟನೆಗಳ ವರ್ಣನೆ ಇಂತಿದೆ. ವರುಷದ ಪ್ರಾರಂಭದಿಂದ ಮುಂದಿನ ಭವಿಷ್ಯವನ್ನು ತಿಳಿಯುವ ಜನರು ಸನ್ ೧೨೦೪ರಲ್ಲಿ (ಕ್ರಿ.ಶ. ೧೭೮೯-೯೦) ಬಹುದೊಡ್ಡ ಬರ ಮೂರು ವರುಷಗಳ ವರೆಗೆ ಬೀಳುತ್ತದೆಂದು ಮತ್ತು ಆದರಲ್ಲಿ ಬಹಳಷ್ಟು ಜನರು ಸಾಯುತ್ತರೆಂದೂ ಭವಿಷ್ಯ ನುಡಿದಿದ್ದಾರೆ. ಇಂದು ಅಂಥ ಬರಬಿದ್ದಿದ್ದು ಜನ ಮರಣ ಹೊಂದುತ್ತಿದ್ದಾರೆ. ಅದರಿಂದ ಭವಿಷ್ಯದಲ್ಲಿ ಬೀಳುವ ಬರದ ಸ್ಮರಣೆ ಎಲ್ಲರ ಮನದಿಂದ ನಿಶ್ಶೇಶವಾಗಿ ಹೊರಟು ಹೋಗಿದೆ. ಯಾಕೆಂದರೆ ಇದಕ್ಕಿಂತ ಭೀಕರ ಬರಗಾಲ ಇನ್ನೊಂದು ಇರಲಿಕ್ಕಿಲ್ಲ. ಒಂದು ಅಗುಳು ಅನ್ನ ದೊರೆಯುತ್ತಿಲ್ಲ. ಅದರಿಂದ ಅನೇಕ ಜನರು ಗವತಿಯ ಬೀಜಗಳನ್ನು ಮತ್ತು ಪ್ರತಿಯೊಂದು ಮರಗಳ ಬೀಜಗಳನ್ನು ತಿಂದು ರಸ್ತೆಯಲ್ಲಿ ಸಾಯುತ್ತ ಬಿದ್ದುದನ್ನು, ಬಿದ್ದ ಪ್ರೇತಗಳನ್ನು, ಕಾಣುತ್ತಿದ್ದರು. ಇನ್ನು ಕೆಲವರು ನಾಯಿ-ಬೆಕ್ಕುಗಳನ್ನು ಕತ್ತರಿಸಿ ತಿಂದು ಪ್ರಾಣ ಉಳಿಸಿಕೊಂಡವರೂ ಇದ್ದರು. ಕೊನೆಗೆ ಅವರೂ ಸತ್ತರು. ಇನ್ನು ಕೆಲವರು ಈ ಬರದಲ್ಲಿ ಪ್ರಾಣ ಉಳಿಸಿಕೊಂಡು ಬದುಕಿದವರು ಮುಂದಿನ ಸುಕಾಲದಲ್ಲಿ ಹತ್ತಿದ ಬೇನೆಗಳಿಂದ ಸತ್ತರು. ಹೀಗೆ ಲಕ್ಷಾವಧಿ ಜನರು ಈ ಬರದಲ್ಲಿ ಸತ್ತರು. ಕೆಲ ಜನರು ಕಫನ-ದಫನಗಳಿಲ್ಲದೆ ಹಾಗೆಯೇ ಸತ್ತು ಭೂಮಿಯ ಮೇಲೆ ಬಿದ್ದರು. ಆ ಪ್ರೇತಗಳನ್ನು ಕಾಗೆ-ಹದ್ದುಗಳು ಹರಿದು ತಿಂದವು. ಬಹಳ ದಿನಗಳ ವರೆಗೆ ಅರಣ್ಯದಲ್ಲಿ ಜನರ ಎಲುಬಗಳ ಹಾಸಿಗೆ ಹಾಸಿದಂತಿತ್ತು. ಎಲ್ಲೆಲ್ಲಿ ಹಳ್ಳಿ-ಪಳ್ಳಿಗಳಲ್ಲಿ, ಗ್ರಾಮ-ಗ್ರಾಮಗಳಲ್ಲಿ ಹೋದರೂ ಒಂದು ಬಾಣದ ತುದಿಯಷ್ಟು ಸ್ಥಳ ಕೂಡ ನೋಡಲು ಸಿಗುತ್ತಿರಲಿಲ್ಲ. ಮನುಷ್ಯರ ತಲೆಗಳು, ಸೊಂಟಗಳು, ಕೈಗಳು, ಕಾಲುಗಳ ಎಲುಬಿನ ಹೊರತು ಖಾಲಿ ಸ್ಥಳ ಕಾಣುತ್ತಿರಲಿಲ್ಲ. ಭೂಮಿಯ ಮೇಲೆ ಬಿಳಿಯ ಹಾಸಿಗೆ ಹಾಸಿದಂತೆ ಕಾಣುತ್ತಿತ್ತು. ಹತ್ತಿರ ಹೋಗಿ ನೋಡಿದಾಗ ಮನುಷ್ಯರ ಎಲುಬುಗಳೆಂದು ಕಾಣುತ್ತಿದ್ದುವು. ಒಂದು ಎತ್ತಿನ ಚೀಲದ ತುಂಬ ಕಾಳುಗಳು ಎರಡು-ಮೂರು ರೂಪಾಯಿಗಳಲ್ಲಿ ಸಿಗುತ್ತಿದ್ದವುಗಳು, ಬಹಳ ಪ್ರಯಾಸದಿಂದ ಒಂದು ರೂಪಾಯಿಗೆ ನಾಲ್ಕು ಶೇರು, ಮೂರು ಶೇರು ಕಾಳುಗಳು ದೊರೆಯುತ್ತಿದ್ದುವು. ಅಂಥ ಬರ ಬಿದ್ದಿತು. ಅಂಥ ದುರ್ಧರ ಪ್ರಸಂಗ ಸುಮಾರು ಏಳೆಂಟು ವರುಷಗಳ ವರೆಗೆ ಇತ್ತು. ಅನಂತರ ಬೆನ್ನಹಿಂದೆಯೇ ಮತ್ತೊಂದು ಬರ ಬಿದ್ದಿತು. ಅದು ತನ್ನ ಹಿಂದಿನ ಬರದ ಜೊತೆಗೆ ಸಾಮ್ಯತೆಯನ್ನು ಕಾಯ್ದುಕೊಂಡಿತ್ತು, ಕಿಂಚಿತ್ ಅಧಿಕ ಪ್ರಮಾಣದಲ್ಲಿ ಬರವಾಗಿತ್ತು. ಯಾಕೆಂದರೆ ಮೊದಲಿನ ಬರದಲ್ಲಿ ಜನರ ಹತ್ತಿರ ಕಿಂಚಿತ್ ಧನ ಸಂಗ್ರಹವಾದರೂ ಇತ್ತು. ಈಗ ಇನ್ನೊಂದು ಬರ ಬಿದ್ದಾಗ ಜನರ ಹತ್ತಿರ ತಮ್ಮ ಜೀವಗಳ ಹೊರತು ಇನ್ನೇನೂ ಉಳಿದಿರಲಿಲ್ಲ. ದೇವರು ಮಾತ್ರ ತನ್ನ ಮನಕ್ಕೆ ಬಂದುದನ್ನು ಮಾಡುತ್ತಿದ್ದುದು ಮಾತ್ರ ಸತ್ಯವಾಗಿತ್ತು. ಹೀಗಾಗಿ ಮೊದಲಿನ ಬರದಲ್ಲಿ ಅರ್ಧ ಸತ್ತ ಜನರು ಈಗ ಪೂರ್ತಿ ಸತ್ತು ಮೊದಲಿನವರ ದಾರಿ ಹಿಡಿದರು.

## ೮೫. ವಿವಿಧ ಭಾಗಗಳಲ್ಲಿಯ ಜನರಿಗೆ ತಿನ್ನುಣ್ಣಲು ಸಿಗದೆ, ಎಲ್ಲರ ಮೇಲೂ ಬಹುದೊಡ್ಡ ಕಠಿಣ ಪ್ರಸಂಗ ಬಂದುದರ ವಿವರಗಳು :

ಜನರೆಲ್ಲ ದರಿದ್ರರಾದರು. ಉಣ್ಣಲು-ಕುಡಿಯಲು ಸಿಗದಂತಾಯಿತು. ಬಾಜಾರುಗಳಲ್ಲಿ ವ್ಯಾಪಾರ ಕಡಿಮೆಯಾಯಿತು. ಜಗದಲ್ಲಿಯ ವ್ಯಾಪಾರೀ ಜನರಿಗೆ ವ್ಯಾಪಾರದ ಹೊರತು ಬೇರೆ ಉಪಾಯವೇ ಇರಲಿಲ್ಲ. ಅವರ ವ್ಯಾಪಾರವು ಬಹು ಜನರ-ಸೈನಿಕರ ಸುಖದ ಮೇಲೆ ಅವಲಂಬಿಸಿದೆ. ಎಲ್ಲ ಜನರು ಸುಖದಿಂದ ಇದ್ದರೆ, ವಹಿವಾಟು ನಡೆಯುತ್ತದೆ. ಈ ಸಮಯದಲ್ಲಿ ಸಿಪಾಯಿ ಜನಗಳಿಗೆ ಯಾವ ಯೋಗ್ಯತೆಯೂ ಇರಲಿಲ್ಲ. ಇನ್ನುಳಿದ ವಿದ್ವಾಂಸರನ್ನು ಹಿರಿಯರನ್ನು ಗುರುತಿಸುವವರೂ ಉಳಿದಿರಲಿಲ್ಲ. ಹೀಗೆ ಎಲ್ಲೆಡೆಯ ಜನರೆಲ್ಲರೂ ದರಿದ್ರರಾಗಿದ್ದರು. ಇದೆಲ್ಲ ವಿಜಾಪುರದ ದುರ್ದೈವದಿಂದಲೇ ಆದುದು.

ಅಲಮಗೀರ ಬಾದಶಹನು ವಿಜಾಪುರವನ್ನು ಕೈವಶಮಾಡಿಕೊಂಡಾಗ, ಆತ ಮತ್ತೆ ಮೊದಲಿನಂತೆ ನಗರವನ್ನು ಸುಶೋಭಿತ ಹಾಗೂ ಭರ್ತಿ ಜನವಸತಿಯೊಂದಿಗೆ ಇರುವಂತೆ ಬಹಳ ಪ್ರಯತ್ನಿಸಿದನು. ಆತ ಗೆದ್ದ ನಂತರ ಇಲ್ಲಿಯ ಯಾರನ್ನೂ ಕೆಲಸದಿಂದ ತೆಗೆದು ಹಾಕಲಿಲ್ಲ. ಯಾರಿಗೂ ಉಪದ್ರವ ಕೊಡಲಿಲ್ಲ. ಪೀಡೆಯನ್ನು ಕೊಡಲಿಲ್ಲ. ಎಲ್ಲರನ್ನೂ ಬಾದಶಾಹೀ ನಡತೆಯಂತೆ ಸಂರಕ್ಷಣೆಮಾಡುತ್ತ, ಅವರವರ ಯೋಗ್ಯತೆಯನ್ನು ಗುರುತಿಸಿ. ಪದೋನ್ನತಿಗಳನ್ನು ಕೊಟ್ಟು ಸಂತೋಷ ಪಡಿಸಿದನು. ಇಲ್ಲಿಯ ಸೈನಿಕರನ್ನು, ದಖಣಿಗಳನ್ನು ಕೂಡ ನೌಕರಿಯ ಮೇಲೆ ತೆಗೆದುಕೊಂಡು ಎಲ್ಲ ಸಾಮಾನು ಸರಂಜಾಮುಗಳ ವ್ಯವಸ್ಥೆಯನ್ನು ಮಾಡಿದ್ದನು. ಮತ್ತು ನಿರಂತರ ಅವರ ಮನಸ್ಸನ್ನು ಸಮಾಧಾನ ಗೊಳಿಸುವಲ್ಲಿ ಯತ್ನಿಸುತ್ತಿದ್ದನು. ಮಷಾಯಖ ಅಂದರೆ ಧರ್ಮಶಾಸ್ತ್ರಿಗಳು, ಫಕೀರರು, ವಿದ್ವಾಂಸರು, ಸಾಧುಗಳು ವಿಜಾಪುರದಲ್ಲಿದ್ದವರಿಗೆಲ್ಲ 'ವಜೀಫೆ' ಎಂದರೆ ಮಾಸಿಕ ವೇತನವನ್ನು ನಿರ್ಧರಿಸಿ, ಅವರಿಗೆ ನಿರಂತರ ದೊರೆವಂತೆ ವ್ಯವಸ್ಥೆ ಮಾಡಿದ್ದನು. ಎಲ್ಲಿಯ ವರೆಗೆಂದರೆ, ತಂದೆ-ತಾಯಿಗಳಿಲ್ಲದ ಅನಾಥರಿಗೆ, ಆಧಾರವಿಲ್ಲದವರಿಗೆ, ವಿಧವಾ ಸ್ತ್ರೀಯರಿಗೆ ಹೊಟ್ಟೆಗೆ ಏನೂ ಇಲ್ಲ ಎಂದು ತಿಳಿದಾಗ ಅವರವರ ಯೋಗ್ಯತಾನುಸಾರ, ಯಾರಿಗೋ ಒಂದು ಊರು, ಇನ್ನಾರಿಗೋ ಒಂದು ಹಳ್ಳಿ, ಇಲ್ಲವೆ ದಿನಭತ್ಯೆ, ಮಾಸಿಕ ವೇತನ, ಇನ್ನಾರಿಗೋ ಭೂಮಿಗಳನ್ನು ಮಂಜೂರು ಮಾಡಿದ್ದನು. ಹೀಗೆ ಅಲಂಗೀರ ಬಾದಶಹನು ವಿಜಾಪುರದಲ್ಲಿ ಇರುತ್ತಿದ್ದ ಜನರ ಸಂರಕ್ಷಣೆಯನ್ನು ಮಾಡಿದನು. ಮತ್ತು ಅವರಿಗೆ ಇನಾಮು, ಸಂಬಳಗಳನ್ನು ಮಂಜೂರು ಮಾಡಿದ್ದನು. ವಿಜಾಪುರದಲ್ಲಿ ಮಾಡಿದಂತೆ ಆತ ಬೇರೆಲ್ಲೂ ಮಾಡಿರಲಿಲ್ಲ. ಇಂದು ಕೂಡ ಅಲಮಗೀರ ಬಾದಶಹನ ಇನಾಮಪತ್ರಗಳು. ವಿಜಾಪುರದಲ್ಲಿಯ ಮುಸಲ್ಮಾನರ ಹತ್ತಿರ ಪ್ರತ್ಯಕ್ಷ ನೋಡಲು ಸಿಗುತ್ತವೆ. ಹಾಗೆ ಹೈದರಾಬಾದಿನಲ್ಲಿ ಸಿಗುವುದಿಲ್ಲ. ಅಹಮದ ನಗರದಲ್ಲೂ ಇಲ್ಲ ಮತ್ತು ಬೇರೆಲ್ಲೂ ಕಾಣ ಸಿಗುವುದಿಲ್ಲ. ಅಲಮಗೀರ ಬಾದಶಹನ ಉದಾರತನ, ಧೈರ್ಯ, ಮತ್ತು ಯೋಗ್ಯತೆಗಳನ್ನು ಅರಿಯಬೇಕೆಂದರೆ ದಖಣಿ ಬಾದಶಹರ ಬಗ್ಗೆ ಕಿಂಚಿತ್ ಹತ್ತರಲ್ಲಿ ಒಂದು ಪಾಲು ಕೂಡ ಇರಲಿಲ್ಲ. ಅರ್ಥಾತ್ ಅಲಮಗೀರ ಬಾದಶಹನಿಗೆ ದಖಣಿ ಬಾದಶಹರ ಮೇಲೆ ಕಿಂಚಿತ್ತೂ ದಯವಿರಲಿಲ್ಲ. ಆದರೆ ವಿಜಾಪುರದಲ್ಲಿ ಇರುವವರ ಮೇಲೆ ಆತ ತುಂಬ ಕೃಪೆಮಾಡಿದ ಮತ್ತು ಅತ್ಯಂತ ಅನುಗ್ರಹಮಾಡಿ ಅವರನ್ನು ಸಂಭಾಳಿಸಿದನು. ಇದೆಲ್ಲ ಆದರೂ ವಿಜಾಪುರ ನಗರದ ದೈವ ಕೆಟ್ಟದ್ದಾಗಿತ್ತು. ಹೀಗಾಗಿ ಜನ ವಸತಿ ಬೆಳೆಯಲಿಲ್ಲ. ಯಾರಿಗೂ ಸುಖ ದೊರೆಯಲಿಲ್ಲ. ದಿನದಿಂದ ದಿನಕ್ಕೆ ವಿಜಾಪುರವು ನಾಶವಾಗುವುದರಲ್ಲಿ ಕಡಿಮೆ ಏನೂ ಆಗಲಿಲ್ಲ. ಅದರಂತೆ ಅಸಫಜಾಹನೂ ತನ್ನ ಜೀವಮಾನ ಪರ್ಯಂತ ವಿಜಾಪುರದ ಮತ್ತು ವಿಜಾಪುರದಲ್ಲಿ ಇರುವವರ

ಸಂರಕ್ಷಣೆಯ ವಿಷಯದಲ್ಲಿ, ಬಹಳ ಪ್ರಯತ್ನ ಮಾಡುತ್ತಿದ್ದನು. ಮತ್ತು ವಿಜಾಪುರದಲ್ಲಿಯ ಇಮಾರತಿಗಳನ್ನು ಸುರಕ್ಷಿತವಾಗಿ ಇಡುವಲ್ಲಿ ಯತ್ನಿಸುತ್ತಿದ್ದನು. ಜನರನ್ನೂ ಸಮಾಧಾನಗೊಳಿಸುತ್ತಿದ್ದನು. ವಿಜಾಪುರ ಸುಭೆಗೆ ಕಳಿಸಿದ ಸುಭೇದಾರನಿಗೆ, ಇಲ್ಲಿಯ ಕಟ್ಟಡಗಳನ್ನು ದುರಸ್ತಿಮಾಡುವ ವಿಷಯದಲ್ಲಿ, ಮತ್ತು ಇಲ್ಲಿರುವ ಜನರಿಗೆ ಆಧಾರಕೊಟ್ಟು ಸಂರಕ್ಷಣೆ ಮಾಡುವ ವಿಷಯದಲ್ಲಿ ತಾಕೀದು ಕೊಡುತ್ತಿದ್ದನು.

ವಿಜಾಪುರದಲ್ಲಿಯ ಮುಸಲ್ಮಾನ ಜನರ ದಿನಭತ್ಯೆ ಮತ್ತು ಇನಾಮ ನೇಮಣೂಕಿ ಏನೆಲ್ಲ ನಡೆದು ಬಂದವುಗಳನ್ನು ಹಾಗೆಯೇ ಮುಂದುವರಿಸಿದನು. ಪ್ರತಿವರುಷ ವಿಜಾಪುರದಿಂದ ಮಷಾಯಖ ಜನರು, ಫಕೀರ ಮಂಡಳಿ, ಹಕ್ಕುದಾರ ಮುಸಲ್ಮಾನ ಜನ ಸಮುದಾಯ ಎಲ್ಲರೂ ಅಸಫಜಾಹನ ಸನ್ನಿಧಿಗೆ ಹೋಗುತ್ತಿದ್ದರು. ಆಗ ಅಸಫಜಾಹನು ಪ್ರತಿಯೊಬ್ಬರನ್ನು ಬಹಳ ಆದರದಿಂದ ಬರಮಾಡಿಕೊಂಡು ಅತ್ಯಂತ ಪ್ರೀತಿಯಿಂದ ಸತ್ಕರಿಸಿ ಭೆಟ್ಟಿಯಾಗುತ್ತಿದ್ದನು. ಅವರವರ ಯೋಗ್ಯತಾನುಸಾರ ಇನಾಮುಗಳನ್ನು ಬಕ್ಷೀಸುಗಳನ್ನು ಕೊಟ್ಟು ಸಂತೋಷಪಡಿಸಿ, ತಿರುಗಿ ಹೋಗಲು ನಿರೋಪ ಕೊಡುತ್ತಿದ್ದನು. ಹೀಗೆ ಅಲಮಗೀರ ಬಾದಶಹನಂಥ ದಯಾಳು, ಅಸಫಜಾಹನಂಥ ಕೃಪಾಳುಗಳಿದ್ದಾಗ್ಯೂ ವಿಜಾಪುರದ ಉತ್ಕರ್ಷವಾಗಲಿಲ್ಲ. ಇನ್ನು ದಯೆ-ಕೃಪೆಗಳಿಲ್ಲದ ನಿರ್ದಯೀ ವ್ಯಕ್ತಿಗಳ ಕೈಗೆ ವಿಜಾಪುರ ಹೋದಾಗ ಅದರ ಅವಸ್ಥೆಯು ಇನ್ನೆಂಥ ದಶೆಗೆ ಹೋಗಿರಬಹುದೆಂಬುದನ್ನೂ ನೋಡಿರಿ. ಸನ್ ೧೧೭೩ (ಕ್ರಿ.ಶ. ೧೭೫೯-೬೦) ರಲ್ಲಿ ನವಾಬ ಅಲೀ ನಿಜಾಮಖಾನ ಮತ್ತು ಮರಾಠಾ ಜನರ ಮಧ್ಯ ಜಗಳ ಬಂದು, ಅರವತ್ತು ಲಕ್ಷದ ಪ್ರದೇಶಗಳು ಕಡಿಮೆಯಾದುವು. ಅನಂತರ ವಿಜಾಪುರವು ಬ್ರಾಹ್ಮಣ ಮರಾಠಾ ಜನರ ಕೈಗೆ ಬಂದಿತು. ಆಗ, ಬ್ರಾಹ್ಮಣ ಜನರು ವಿಜಾಪುರ ನಗರದ ವ್ಯವಸ್ಥೆಯನ್ನು ಚೆನ್ನಾಗಿ ಇಡಲಿಲ್ಲ. ವಿಜಾಪುರದ ಉತ್ಕರ್ಷಕ್ಕಾಗಿ ಮತ್ತು ಇಲ್ಲಿಯ ಕಟ್ಟಡಗಳ ದುರಸ್ತಿಗಾಗಿ ಚಿಂತೆಯನ್ನೇ ಮಾಡಲಿಲ್ಲ. ಇಲ್ಲಿಗೆ ಬಂದ ಅಮಲದಾರನು ಕಂದಾಯ ವಸೂಲಿ ಮಾಡುವುದರಲ್ಲಿಯೇ ನಿರತನಾಗಿರುತ್ತಿದ್ದನು. ಪ್ರತಿದಿನ ವಸೂಲಿಯ ವಿಷಯದಲ್ಲಿಯೇ ಇರುತ್ತಿದ್ದನು. ಆತ ಎಂದೂ ಪ್ರಜೆಗಳ, ಬಡಬಗ್ಗರ ಅವಸ್ಥೆಯ ಮೇಲೆ ಕಣ್ಣು ಹಾಯಿಸಲಿಲ್ಲ. ಇದರಿಂದಾಗಿ ವಿಜಾಪುರದ ಸ್ಥಿತಿಯು ದಿನದಿಂದ ದಿನಕ್ಕೆ ಇನ್ನಷ್ಟು ಹಾಳು ಬೀಳುತ್ತ ನಡೆಯಿತು. ಎಷ್ಟೋ ಮನೆತನಗಳು, ಅಂಗಡಿ ಮುಂಗಟ್ಟುಗಳು ನಿರ್ಮೂಲವಾದವು. ಅಲಮಗೀರ ಬಾದಶಹನು ವಿಜಾಪುರದ ಕೋಟೆಯನ್ನು ಗೆದ್ದ ನಂತರ ಆತನು ಇಲ್ಲಿಯ (ಖಾನೆ ಸುಮಾರಿ) ಜನಗಣತಿಯನ್ನು ಮನೆಗಳ ಗಣತಿಯನ್ನು ಮಾಡಿದ್ದನು. ಆಗ ೯,೮೪,೦೦೦ ಒಂಭತ್ತುಲಕ್ಷ ಎಂಭತ್ತಾಲ್ಕು ಸಾವಿರ ಮನೆಗಳು (ಜನರು?) ಲೆಕ್ಕಕ್ಕೆ ಬಂದಿದ್ದುವು. ಆದರೂ ಈ ಮೊದಲು ಸುಲ್ತಾನ ಮಹಮ್ಮದ ಆದಿಲಶಹನ ಕಾಲದಲ್ಲಿ ಶಾಹಪುರದಲ್ಲೊಂದೇ ೯,೦೦,೦೦೦. ಒಂಭತ್ತು ಲಕ್ಷ ಮನೆಗಳನ್ನು ಗಣತಿ ಮಾಡಲಾಗಿತ್ತು. ಅದಲ್ಲದೆ ನಗರದ ಮತ್ತು ಇತರ ಉಪನಗರಗಳ ಮನೆಗಳೂ ಇದ್ದುವು. ಇಂದು ನೋಡಿದರೆ, ವಿಜಾಪುರನಗರ ಮತ್ತು ಉಪನಗರ, ಕೋಟೆಯ ಒಳಹೊರಗೆಲ್ಲ ಸೇರಿ ೯೦೦, ಒಂಭತ್ತುನೂರುಗಳಿಗಿಂತ ಅಧಿಕ ಮನೆಗಳಿಲ್ಲ! ಲೆಕ್ಕಕ್ಕೆ ೯೦೦ ಮನೆಗಳಿವೆ.

ಆಶ್ಚರ್ಯವೆಂದರೆ, ಪ್ರತಿವರುಷ ವಿಜಾಪುರವು ನಾಶವಾಗುತ್ತಲೇ ನಡೆದಿದೆ. ಇಂದಿನ ದಿನಗಳಲ್ಲಂತೂ ಈ ನಗರವು 'ದಾರುಲ ಅಮಾರತ' ಮತ್ತು 'ದಾರುಲ ಖಿಲಾಫತ' ಅಂದರೆ ರಾಜಧಾನಿ ಪಟ್ಟಣ, ಅಮೀರ ಜನರ ಸ್ಥಳ ಎಂದು ಹೇಳುತ್ತಿದ್ದರು ಎಂಬುದನ್ನೂ ನಂಬುವಂತಿಲ್ಲ. ಯಾಕೆಂದರೆ ಇಂದು ಈ ನಗರವನ್ನು ಒಂದು ಸಣ್ಣ ಕಸಬೆಗೆ, ಅಥವಾ ಒಂದು ಹಳ್ಳಿಗೆ ಹೋಲಿಸುವಂತಿದೆ. ಆದರೂ ಸಣ್ಣ ಕಸಬೆ ಅಥವಾ ಹಳ್ಳಿಗಳಲ್ಲಿ ದೊರೆವ ಜರೂರೀ ಪದಾರ್ಥಗಳು ಇಲ್ಲಿ ದೊರೆಯುತ್ತವೆಯೆಂದೂ ಹೇಳಲು

ಬರುವುದಿಲ್ಲ. ಹಕೀಮ ಅಂದರೆ, ವೈದ್ಯ, ಕಾಜಿ, ಮುಫ್ತಿ ಮೊದಲಾದವರು ಮುಸಲ್ಮಾನರ ಜನರ ವಸತಿಗಳಲ್ಲಿ ಇರಲೇಬೇಕಾದವರೂ ಇಲ್ಲಿ ಉಳಿದಿಲ್ಲ. ಆಗ ಬುದ್ಧಿವಂತರು ಹೇಳುವಂತೆ, ಈ ನಗರದಲ್ಲಿ ಜಾಣ ಜನರೂ ಇರಬಾರದು ಎಂದೇ ಸಿದ್ಧವಾಗುತ್ತದೆ. ಆದರೆ ಏನು ಮಾಡಲಿ? ದೊಡ್ಡ ದೊಡ್ಡವರ ದರ್ಗಾಗಳು ಮತ್ತು ಅಷ್ಟೇ ದೊಡ್ಡವರಾದ ವಲಿಗಳು ಸಾಧುಸಂತರ ಸಮಾಧಿಗಳು ಮತ್ತು ಅವರ ಹಿರಿಯರು ಬಾಳಿಬದುಕಿದ ಸ್ಥಳಗಳಿವೆ. ಆದ್ದರಿಂದ ಈ ಸ್ಥಳದಿಂದ ಕದಲಲಾರದೆ ಉಳಿದಿರುವೆ ಇಲ್ಲಿಯೇ ಇರುವುದು ಪ್ರಾಪ್ತವಾಗಿದೆ.

### ೮೬. *ಒಂದು ಕಥಾಭಾಗದ ವರ್ಣನೆ :*

ವಿಜಾಪುರದ ವಿದ್ವಾಂಸರಲ್ಲಿ 'ಮಾಹಬಿಲ್ಲಾಹ' ಎಂಬವನೊಬ್ಬನಿದ್ದನು. ಆತ ಅಸಫಜಾಹನ ಭೆಟ್ಟಿಗೆ ಹೋಗಿದ್ದನು. ನವಾಬ ಅಸಫಜಾಹನಿಗೆ ಒಂದು ಚಟವಿತ್ತು. ವಿಜಾಪುರದಿಂದ ಯಾರೇ ಬಂದಿರಲಿ. ಅವರಿಗೆ ವಿಜಾಪುರದ ಸುದ್ದಿಯನ್ನೂ ಕೇಳುತ್ತಿದ್ದನು. ಅದರಂತೆ ಮಾಹಬಿಲ್ಲಾಹನಿಗೂ ಕೇಳಿದನು. ಅದಕ್ಕೆ ಪ್ರತಿಯಾಗಿ ಆ ವಿದ್ವಾಂಸನು ವಿಷಯವನ್ನು ಒಂದು ಪರ್ಶಿಯನ್ ಬೈತದಲ್ಲಿ ಹೇಳಿದನಂತೆ. ಅದರ ಅರ್ಥ ಹೀಗಿದೆ. 'ಬಾದಶಹರ ಅರಮನೆಯಲ್ಲಿ ಎಲ್ಲಿ ನೋಡಿದಲ್ಲಿ ಜೇಡಹುಳಗಳು ಜೇಡಬಲೆಯನ್ನು ಹೆಣೆದಿವೆ. ಅಫರಸಿಯಾಬನಂಥ ಬಾದಶಹರ ಹವೇಲಿಗಳ ಮೇಲೆ ಹದ್ದು-ಗೂಬೆಗಳು ಕೂಡುತ್ತಿವೆ" ಇದರಲ್ಲಿಯ ತಾತ್ಪರ್ಯ ವೆಂದರೆ, ಯಾರ ಮನೆಯಲ್ಲಿ ಜನರಿಲ್ಲವೋ, ಕಸಗುಡಿಸುವವರಿಲ್ಲವೊ ಅಲ್ಲಿ ಜೇಡಬಲೆಗಳಿರುತ್ತವೆ ಮತ್ತು ಬರಿದಾದ ಮನೆಗಳ ಮೇಲೆ ಹದ್ದುಗಳು ಕುಳಿತುಕೊಳ್ಳುತ್ತವೆ. ಇಂಥ ದೆಶೆ ವಿಜಾಪುರದ್ದಾಗಿದೆ. ದೂರದೃಷ್ಟಿಯಿಂದ ನೋಡಿದರೆ, ಈ ಮೊದಲು ಅಸಫಜಾಹನ ಕಾಲಕಿರ್ದಿಯು ೮೦ ವರುಷಗಳದ್ದಾಗಿತ್ತು. ಆ ಕಾಲದಲ್ಲಿಯ ಸುಖಪ್ರಾಪ್ತಿಯು ದಕ್ಷಿಣ ದೇಶಗಳಲ್ಲೆಲ್ಲ ಎಲ್ಲೆಡೆ ಪ್ರಸಿದ್ಧವಾಗಿದೆ. ವಿಜಾಪುರ ಮತ್ತು ವಿಜಾಪುರದಲ್ಲಿ ಇರುವವರೆಲ್ಲ ಆ ಸಮಯದಲ್ಲಿ ಬಹಳ ಸಂತೋಷದಲ್ಲಿ ಮತ್ತು ದ್ರವ್ಯವನ್ನು ಸಂಗ್ರಹಿಸಿ ಇರುತ್ತಿದ್ದರು. ಈ ರೀತಿಯಾಗಿ ಆ ವಿದ್ವಾಂಸನು ವಿಜಾಪುರದ ವರ್ತಮಾನವನ್ನು ಹೇಳಿದನು. ಅದರಲ್ಲಿ ಮೊದಲಿನ ಕಾಲಕಿರ್ದಿಯ ಮತ್ತು ಇಂದಿನ ಪರಿಸ್ಥಿತಿಯನ್ನು ಬಹಳ ಸ್ಪಷ್ಟವಾಗಿ ಹೇಳಿದ್ದಾನೆ ಇಂದಂತೂ ಅನೇಕ ಪ್ರಕಾರಗಳ ಸಂಕಟಗಳ ಪ್ರಳಯವೇ ಇದೆ. ಅಂದಿಗೂ-ಇಂದಿಗೂ ಸಾವಿರ ಪಟ್ಟು ಅಂತರವಿದೆ. ಬಹಳಷ್ಟು ಕಡಿಮೆತನ ಮತ್ತು ನಾಶವಾದದ್ದನ್ನು ಹೇಗೆ ಹೇಳಲಿ? ಮತ್ತು ಅದಕ್ಕಾಗಿ ಅಳಬೇಕೆ? ಅರಬ್ಬೀ ವಾಕ್ಯದ ಅರ್ಥ: ಅಲ್ಲಾನು ಬಯಸಿದ್ದನ್ನು ಮಾಡುತ್ತಾನೆ ಆತ ತನ್ನ ಮನಸ್ಸಿಗೆ ಬಂದಂತೆ ಆಜ್ಞೆ ಮಾಡುತ್ತಾನೆ" ಫಾರಸೀ ಬೈತದ ಅರ್ಥ: ಉಚ್ಚಿಷ್ಟವಿದೆ ಇಲ್ಲವೆ ಚೆನ್ನಾಗಿದೆ ಎಂಬುದನ್ನು ವಿಚಾರಿಸಲು ನಿನಗೆ ಅಧಿಕಾರ ಇಲ್ಲ. ಸುಮ್ಮನೆ ಕುಳಿತುಕೊಳ್ಳು ಯಾಕೆಂದರೆ ನಮ್ಮ 'ಸಾಕಿ'ಯು ಅಂದರೆ ಮದ್ಯವನ್ನು ಕೊಡುವವನು ಯಾವ ಮದ್ಯವನ್ನು ಸುರುವಿದ್ದಾನೋ ಅದನ್ನು ಏನೊಂದನ್ನು ವಿಚಾರಿಸದೆ ಕುಡಿಯಬೇಕು. ಅದುವೇ ಉತ್ತಮವಾದ ವಿಚಾರವಾಗಿದೆ" ಇದರರ್ಥ, ದೈವೇಚ್ಛೆಯಂತೆ ಅನುಭೋಗಿಸಬೇಕು. ಅದನ್ನು ಏನು? ಮತ್ತು ಯಾಕೆ? ಮಾಡುತ್ತಿದ್ದಾನೆಂದು ಅಲ್ಲಾನನ್ನು ಕೇಳುವ ಅಧಿಕಾರವಿಲ್ಲ. ಅಲ್ಲಾನೇ ಸತ್ತಾಧಾರಿಯಾಗಿದ್ದಾನೆ.

### ೮೭. *ಪುಣೆಯ ಸರದಾರನ ವರ್ಣನೆ :*

ಪುಣೆಯ ಸರದಾರರು ಬ್ರಾಹ್ಮಣ ಜನರಾಗಿದ್ದು, ಅವರು ವಿಜಾಪುರದ ಸಮಾಚಾರವನ್ನು ತೆಗೆದುಕೊಳ್ಳಲಿಲ್ಲ. ಇದು ಬಾದಶಹರ ಸಿಂಹಾಸನದ ರಾಜಧಾನಿಯಾಗಿದ್ದರೂ ಇಲ್ಲಿಯ ಕಟ್ಟಡಗಳ ಬಗ್ಗೆ

ವ್ಯವಸ್ಥೆಯನ್ನು ಮಾಡಲಿದೆ. ಪುಣೆ ಮತ್ತು ಸಾತಾರಾ ಈ ಎರಡೇ ಊರುಗಳನ್ನು ರಾಜಧಾನಿಯನ್ನಾಗಿ ಮಾಡಿದರು. ಆದರೆ ಆ ಬ್ರಾಹ್ಮಣ ಸರದಾರರು ನ್ಯಾಯದಿಂದ ರಾಜ್ಯವನ್ನಾಳಿದರು. ಹಿಂದುಸ್ಥಾನ ಮತ್ತು ದಕ್ಷಿಣಗಳ ಸರಬರಾಜನ್ನು ಬಹಳ ಬುದ್ಧಿವಂತಿಕೆಯಿಂದ ಅತ್ಯಂತ ಶೋಭೆಯಿಂದ ಕಾರಭಾರ ಮಾಡಿದರು. ಈ ಬ್ರಾಹ್ಮಣರ ಕಾಲಕಿರ್ದಿಯಲ್ಲಿ ಎಲ್ಲಿಯವರೆಗೆ ಬಡಜನತೆಯ ಮತ್ತು ಪ್ರಜಾಜನತೆಯ ಪ್ರತಿಪಾಲನೆ ಮಾಡಿ, ನ್ಯಾಯ ನೀಡುತ್ತಿದ್ದರೋ ಅಲ್ಲಿಯವರೆಗೂ ರಾಜ್ಯದ ಕಾರಭಾರವು ಅತಿ ಉತ್ತಮವಾಗಿ ಮತ್ತು ಶೋಭೆಯಿಂದ ನಡೆದಿತ್ತು. ಅವರ ರಾಜ್ಯವನ್ನು ಕೈವಶ ಮಾಡಿಕೊಳ್ಳುವ ವಿಷಯದಲ್ಲಿ ಶತ್ರುಗಳ ಆಟ ನಡೆಯುತ್ತಿರಲಿಲ್ಲ. ಆಗ ಮನೆಯಲ್ಲಿಯೇ ಮನೆಮಂದಿಗಳಲ್ಲಿಯೇ ವಿರಸಹುಟ್ಟಿತು. ತಂತಮ್ಮಲ್ಲಿಯೇ ದ್ವೇಷ ಉತ್ಪನ್ನವಾಯಿತು. ಆಗ ಮಿತ್ರತ್ವ ಮತ್ತು ಸಖ್ಯತ್ವ ಒಬ್ಬರೊಬ್ಬರಲ್ಲಿ ಇಲ್ಲದಂತಾಯಿತು. ನಾನಾ ಫಡಣೀಸ ಎಂಬವನು ಬಹಳ ಬುದ್ಧಿವಂತ ಮತ್ತು ವಿಚಾರವಂತನೂ ಆಗಿದ್ದು ಆತ ಕಾರುಭಾರ ಮಾಡುತ್ತಿದ್ದನು. ಆತ ಬಹಳದಿನಗಳವರೆಗೆ, ಬಹಳ ಬುದ್ಧಿವಂತಿಕೆಯಿಂದ ಮತ್ತು ಉತ್ತಮ ವಿಚಾರಗಳಿಂದ ರಾಜ್ಯ ವ್ಯವಸ್ಥೆಯನ್ನು ಚೆನ್ನಾಗಿಟ್ಟು ರಾಜಕಾರಭಾರವನ್ನು ಮಾಡಿದನು.

ಆ ನಾನಾ ಫಡಣೀಸನ ಯುಕ್ತಿಗಳನ್ನು ಮತ್ತು ಸಲಹೆಗಳನ್ನು ಕೇಳದೆ, ಹದ್ದಿನ ಕಾಲಿನ ಮತ್ತು ಕೆಟ್ಟ ಸ್ವಭಾವದ ಬಾಜೀರಾವ ರಾಘೋಬಾನನ್ನು ಗಾದಿಯ ಮೇಲೆ ಕುಳ್ಳಿರಿಸಿದರು. ಬಾಜೀರಾವನಿಗೆ ಕಾರ್ಯಭಾರದ ಅನುಭವವೇ ಇರಲಿಲ್ಲ. ಆ ಮೂರ್ಖನು, ಬುದ್ಧಿವಂತರ ವಿಚಾರಗಳನ್ನು ಬಿಟ್ಟು ತನ್ನ ಮನಸ್ಸಿಗೆ ಬಂದಂತೆ ನಡೆದುಕೊಂಡನು. ಹಳೆಯ ಶ್ರೇಷ್ಠ ಸರದಾರರನ್ನೆಲ್ಲ ಕೆಲಸದಿಂದ ತೆಗೆದು ಹಾಕಿ, ನೀಚ ಜನರನ್ನು ಆ ದೊಡ್ಡ ದೊಡ್ಡ ಸರದಾರರ ಸ್ಥಳಗಳಲ್ಲಿ ನೇಮಿಸಿದನು. ಆ ಚಿಲ್ಲರೆ ಯೋಗ್ಯತೆಯ ಚಾಕರರ ಅಯೋಗ್ಯ ಯುಕ್ತಿಗಳಿಂದ ಬುದ್ಧಿಯಿಲ್ಲದೆ ಕಾರೋಬಾರ-ಮಾಡಿದನು. ರಾಜ್ಯ ಮುಳುಗಲು ಕಾರಣವಾಗುವಂಥ ನಡತೆಯಿಂದ ರಾಜ್ಯವನ್ನು ನಡೆಸಿದನು. ಚಿಲ್ಲರೆ ಯೋಗ್ಯತೆಯ ಚಾಕರ ಜನರು ಆತನ ರಾಜ್ಯ ಕಾಲದಲ್ಲಿ ಉನ್ನತ ಪದವಿಗೆ ಏರಿದರು. ಅತ್ಯಾಚಾರ-ಬಲಾತ್ಕಾರಗಳು ಆರಂಭವಾದವು. ರಾಜ್ಯದ ಒಟ್ಟು ವ್ಯವಸ್ಥೆಯೇ ಕೆಟ್ಟಿತು. ಪ್ರಜೆಗಳನ್ನು ಕೇಳುವವರೇ ಇಲ್ಲವಾದರು. ಅದರಿಂದಾಗಿ ಎಲ್ಲ ಬಡಜನರಿಗೆ ಉಪದ್ರವವಾಗ ಹತ್ತಿತು. ದರೋಡೆ ಕಳ್ಳತನಗಳು ಎಲ್ಲೆಡೆ ನಡೆಯಿತು. ಸಾಹುಕಾರರ ಮನೆಗಳನ್ನು ಲೂಟಿ ಮಾಡುವುದು, ಅವರನ್ನು ಕೊಲ್ಲುವುದು ನಿತ್ಯರೂಢಿಯಾಯಿತು. ಫೆಂಢಾರಿ ಜನರು ಇಡೀ ರಾಜ್ಯದಲ್ಲಿ ದಂಗೆ ಮತ್ತು ಗದ್ದಲಗಳನ್ನು ನಡೆಸಿದರು. ಭರವಸ್ತಿಯ ಕಸಬಾಗಳನ್ನು ಗ್ರಾಮಗಳನ್ನು ಪೂರ್ತಿಯಾಗಿ ಲೂಟಿ ಮಾಡಿ ಸ್ವಚ್ಛ ಮಾಡುತ್ತಿದ್ದರು. ಈ ಸಂಕಟ ಮತ್ತು ಭಯಗಳಿಂದ ಎಲ್ಲೆಡೆ ಜನರು ರಾತ್ರಿ ಮಲಗದಂತಾದರು. ಯಾತ್ರೆ-ಪ್ರವಾಸಗಳು ನಿಂತುವು. ಜನರ ಬರಹೋಗುವುದು ನಿಂತಿತು. ಕೊನೆಗೆ ಅರಬ್ಬೀ ವಾಕ್ಯದ ಅರ್ಥ ಹೇಳುವಂತೆ, "ರಾಜ್ಯವು ಕುಫ್ರನ ಯೋಗದಿಂದ ಸ್ಥಿರವಾಗಿ ನಡೆಯುತ್ತದೆ. ಬಲಾತ್ಕಾರದಿಂದ ನಡೆವುದಿಲ್ಲ. ಕುಫ್ರ ಎಂದರೆ ದೇವರ ಪೂಜೆ ಮಾಡುವವನು ಎಂದು ಅರ್ಥ. ಹಿಂದುವೇ ರಾಜ್ಯವನ್ನಾಳುತ್ತಿದ್ದರೂ ಆತ ನ್ಯಾಯದಿಂದ ಆಳಿದರೆ ರಾಜ್ಯ ಉಳಿಯುತ್ತದೆ. ಮತ್ತು ಮುಸಲ್ಮಾನ ಧಣಿಯೇ ಆಗಿದ್ದು ಆತ ಅನ್ಯಾಯದಿಂದ ರಾಜ್ಯವಾಳಿದರೆ ಬಲಾತ್ಕಾರ ಮಾಡಿದರೆ ರಾಜ್ಯ ಉಳಿಯುವುದಿಲ್ಲ". ಈ ವಾಕ್ಯದಂತೆ, ಕೊನೆಗೆ ದೇವರು ದಯಪಾಲಿಸಿದ ರಾಜ್ಯವು ಬಾಜೀರಾಯನಿಂದ ಹೊರಟು ಹೋಯಿತು. ಆತನ ಶತ್ರುಗಳ ಮನೋರಥವು ಪೂರ್ಣವಾಗಿ, ಬಾಜೀರಾಯನು ಶತ್ರುಗಳ ಕೈಯಲ್ಲಿ ಬಂಧಿತನಾದನು. ಎಲ್ಲ ಕಡೆಯಿಂದಲೂ ಬಾಜೀರಾಯನು ಛೀ; ಥೂ; ಗಳನ್ನು ಸ್ವೀಕರಿಸಬೇಕಾಯಿತು.

*೮೮. ಇಂಗ್ಲೀಷ್ ಜನರ ಒಡೆತನ, ವರ್ತನೆ :*

ಇಂದಿಗೆ ಎಂಟು ವರುಷಗಳಾದುವು (ಕ್ರಿ.ಶ ೧೮೧೭ -೧೮) ಸನ್ ೧೨೩೩ ರಿಂದ , ಬುದ್ಧಿವಂತರು, ತಿಳುವಳಿಕೆ ಉಳ್ಳವರು ಮತ್ತು ನ್ಯಾಯದಿಂದ ನಡೆಯುವವರೂ ಆದ ಇಂಗ್ರಜಿ ಸರಕಾರದ ಕೈಗೆ ವಿಜಾಪುರ ಬಂದಿದೆ. ಅವರು ಬಂದದ್ದರಿಂದ ನ್ಯಾಯ, ಶಿಕ್ಷೆಗಳಲ್ಲಿ ಹಿಂದುಸ್ಥಾನ ಮತ್ತು ದಕ್ಷಿಣದ ಎಲ್ಲ ರಾಜ್ಯಗಳಲ್ಲೂ ಸುಖ ಶಾಂತಿಗಳು ಲಭಿಸಿವೆ. ಎಲ್ಲ ಪ್ರಜಾಜನರು ಸುಖದಿಂದ ಸಂಸಾರ ಮಾಡುತ್ತಿದ್ದಾರೆ. ಯಾಕೆಂದರೆ, ಬಾಜೀರಾವನ ಆಡಳಿತದಿಂದ ಕರಗಳನ್ನು ಕೊಟ್ಟು ಮತ್ತು ಆತನ ಬಲಾತ್ಕಾರ ಹಾಗೂ ಪೀಡೆಗಳಿಂದ ಜನ ಬೇಸತ್ತಿದ್ದರು. ಅವನ ಅಧಿಕಾರಿಗಳೆಲ್ಲ ಬಲಾತ್ಕಾರ ಹಾಗೂ ಅತ್ಯಾಚಾರಗಳಲ್ಲಿಯೇ ತೊಡಗಿ ಜನರನ್ನು ಹಿಂಸಿಸುತ್ತಿದ್ದರು. ಕಾನೂನಿನ ಪ್ರಕಾರ ಅಥವಾ ಒಪ್ಪಂದದ ಪ್ರಕಾರ ತೆಗೆದುಕೊಳ್ಳದೇ ಅದರ ಹತ್ತುಪಟ್ಟು ವಸೂಲು ಮಾಡುತ್ತಿದ್ದರು. ಇಂದಿನ ಇಂಗ್ರೇಜ ಸರಕಾರದ ಆಡಳಿತದಲ್ಲಿ ಒಂದು ಉಪದ್ರವವಾಗಲೀ ಪೀಡೆಯಾಗಲಿ ಇಲ್ಲ. ಅದರಿಂದಾಗಿ ಕೇಳದೆ, ತಕರಾರಿಲ್ಲದೆ ಪ್ರಜೆಗಳು ಸ್ವತಃ ಬಂದು ತಂತಮ್ಮ ಭಾಗದ ವಸೂಲಿಗಳನ್ನು ತಂದು ಮುಟ್ಟಿಸುತ್ತಿದ್ದರು. ಕರಾರಿನ ಹೊರತಾಗಿ ಒಂದು ಕಾಳನ್ನು ಅಧಿಕವಾಗಿ ಕೊಡುವುದಿಲ್ಲ. ಅತ್ಯಂತ ಸಂತೋಷದಿಂದ, ಸುಖದಿಂದ ಇರುತ್ತಾರೆ. ಈ ಮೊದಲಿನ ಬಾಜೀರಾಯನ ಆಡಳಿತದಲ್ಲಿ ಮುತ್ತಿಗೆ ಹಾಕುವುದು, ದರೋಡೆ ಮಾಡುವುದು ನಿರಂತರವಾಗಿ ನಡೆದಿತ್ತಲ್ಲದೆ. ಅವರಿಂದ ವಸೂಲಿ ಮಾಡಿ ಅವರನ್ನು ಜೀವಸಹಿತವಾಗಿ ಕೂಡ ಬಿಡುತ್ತಿರಲ್ಲ. ಇಂದಿನ ಇಂಗ್ರೇಜಿ ಸರಕಾರದಲ್ಲಿ ಒಂದು ವೇಳೆ ಕಳ್ಳರು ಯಾರನ್ನಾದರೂ ಕೊಂದರೆ, ಇಲ್ಲವೆ ಯಾರ ಸಂಪತ್ತನ್ನಾದರೂ ತುಸುವೆ ಆದರೂ ಕಳ್ಳತನ ಮಾಡಿದರೆ ಅಮಲದಾರರು ಮತ್ತು ಮಾಮಲೇದಾರರು ತುಂಬ ಎಚ್ಚರಿಕೆ ವಹಿಸಿ ತಕ್ಷಣ ಅದನ್ನು ಪತ್ತೆ ಹಚ್ಚಿ ಚೋರರರನ್ನು ಹಿಡಿದು ಅವರಿಗೆ ಶಿಕ್ಷೆ ಕೊಟ್ಟು ಮಣ್ಣು ಹೊರಲು ಹಚ್ಚುತ್ತಿದ್ದರು. ಹೀಗೆ ಸಾವಿರಾರು ಕಳ್ಳರನ್ನು, ಅವರು ಹಿಡಿದು ಬಂಧಿಸಿದರು. ದೂರದ ಹಾಗೂ ಸಮೀಪದ ರಾಜ್ಯಗಳಲ್ಲಿಯ ದರೋಡೆಖೋರರನ್ನು ಹಿಡಿದು ಬಂಧಿಸಿದರು. ಈಗ ಅವರು ಕಲ್ಲು ಒಡೆಯುವುದು ಹಾಗೂ ಮಣ್ಣು ಹೊರುವ ಕೆಲಸಗಳಲ್ಲಿದ್ದು ತಮ್ಮ ಕೆಟ್ಟ ನಡತೆಗಾಗಿ ಶಿಕ್ಷೆಯನ್ನು ಅನುಭವಿಸುತ್ತಿದ್ದಾರೆ. ಅದರಂತೆ, ಮೊದಲಿನ ಆಡಳಿತದಲ್ಲಿ ಪೆಂಢಾರಿಗಳು ನಗರ ಪ್ರದೇಶಗಳಲ್ಲಿ, ಗ್ರಾಮಾಂತರಗಳಲ್ಲಿ ದಂಗೆ ಮಾಡಿ ಸಂಕಟದ ಅಗ್ನಿಯನ್ನು ಪ್ರದೀಪ್ತಮಾಡಿ ಅನೇಕ ಜನವಸತಿಯ ಊರುಗಳನ್ನು ಲೂಟಿ ಮಾಡಿ ಎಲ್ಲೆಡೆ ಭಯ ಹುಟ್ಟಿಸಿದ್ದರು. ಹಗಲು ರಾತ್ರಿ ಅವರ ಭಯದಿಂದಲೇ ಜೀವಿಸುವಂತಾಗಿದ್ದರು. ದಾರಿಗಳೆಲ್ಲ ಮುಚ್ಚಿದ್ದುವು. ದಂಗೆಯನ್ನು ಮುಟ್ಟು ಹಾಕುವುದು ಯಾರಿಂದಲೂ ಸಾಧ್ಯವಾಗಿರಲಿಲ್ಲ. ಇಂದು ಇಂಗ್ರೇಜಿ ಸರಕಾರದ ಬಹಾದ್ದೂರತನದಿಂದ ಎಲ್ಲವೂ ಸುರಳಿತ ನಡೆದು ಪೆಂಢಾರಿ ಜನರ ಗುರುತು ಕೂಡ ಎಲ್ಲೂ ಉಳಿದಿಲ್ಲ. ಇಂಗ್ರೇಜಿ ಸರಕಾರದ ಆಡಳಿತದಲ್ಲಿ ಅವರ ವ್ಯವಸ್ಥೆಯಿಂದಾಗಿ ಮೊದಲಿನ ಆಡಳಿತಲ್ಲಿ ಬಿದ್ದ ಮನೆಗಳು, ಬಹುತೇಕ ಕಟ್ಟಡಗಳು ದುರಸ್ತಿಯಾದುವು. ಬಿದ್ದ ಊರುಗಳು ಎದ್ದುವು. ತಿರುಗಿ ಜನವಸತಿ ತುಂಬಹತ್ತಿದೆ. ಮೊದಲಿನ ಬಾದಶಹರಂತೆ ಇಂದಿನ ಸರಕಾರದವರು ನ್ಯಾಯದಯೆಗಳಿಂದ ಅವರ ಸರಿಸಮನಾಗಿ ನಡೆದುಕೊಳ್ಳುತ್ತಿದ್ದಾರೆ. ವಿಜಾಪುರವು ದಕ್ಷಿಣದ ರಾಜಧಾನಿಯಾಗಿದೆ ಮತ್ತು ಅದರ ಕೀರ್ತಿ ಇರಾನ, ದುರಾನ, ರೂಮ ಸಯಾಮಗಳವರೆಗೆ ಪ್ರಸಿದ್ಧವಾಗಿದೆ. ಈ ಇಂಗ್ರೇಜಿ ಸರಕಾರದ ಕಾಲಕಿರ್ದಿಯಲ್ಲಿ ಕೂಡ ವಿಜಾಪುರವು ಮೊದಲಿನಂತೆಯೇ ಹಾಳು ಬಿದ್ದ ಊರಾಗಿದೆ. ಬಿದ್ದವುಗಳು ಹಾಗೆಯೇ ಉಳಿದಿವೆ. ಬ್ರಾಹ್ಮಣರಾದ ಪೇಶ್ವೆಗಳಂತೆ. ಅವರ ಆಡಳಿತದಲ್ಲಿ

ಯಾರೂ ವಿಜಾಪುರದ ಕಟ್ಟಡಗಳ ವ್ಯವಸ್ಥೆಯನ್ನು ಮಾಡಲಿಲ್ಲ. ಆ ಬಗ್ಗೆ ಚಿಂತೆಯನ್ನೂ ಮಾಡಿಲ್ಲ ಅದರಂತೆ ಈ ಇಂಗ್ರೇಜೀ ಸರಕಾರವೂ ತನ್ನ ಆಡಳಿತದಲ್ಲಿ ಯಾರೂ ವಿಜಾಪುರದ ಚಿಂತೆಯನ್ನು ಮಾಡುತ್ತಿಲ್ಲ. ಮತ್ತು ಯಾರೂ ವಿಜಾಪುರದ ಉತ್ಕರ್ಷ ಆಗಲಿ ಎಂಬ ವಿಷಯದಲ್ಲಿ ವಿಚಾರಿಸುತ್ತಿಲ್ಲ. ಪೂರ್ತಿ ಕಣ್ಣು ಮುಚ್ಚಿದ್ದಾರೆ. ಹಳೆಯ ಜನರಿಗೆ ಒಂದು ಆಶೆ ಇತ್ತು. ಒಂದುವೇಳೆ ವಿಜಾಪುರವು ಇಂಗ್ರೇಜ ಜನರ ಕೈಗೆ ಬಂದರೆ, ಅದು ಮತ್ತೆ ತನ್ನ ಮೊದಲಿನ ವೈಭವವನ್ನು ಮರಳಿ ಪಡೆಯುತ್ತದೆಂದು ತಿಳಿದಿದ್ದರು. ಆದರೆ ಅವರು ಬಂದಮೇಲೂ ಇಲ್ಲಿಯ ಪರಿಸ್ಥಿತಿ ಸುಧಾರಿಸದಿದ್ದುದಕ್ಕೆ ಎಲ್ಲರೂ ಆಶ್ಚರ್ಯ ಪಡುತ್ತಿದ್ದಾರೆ. ವಿಜಾಪುರದ ದುರ್ದೈವದ ಗುಣ ಮತ್ತು ಅದರ ದೈವವೇ ಖೊಟ್ಟಿಯಾಗಿದ್ದರೆ. ಯಾರು ಏನು ಹೇಳಿ ಪ್ರಯೋಜನ? ಮೊದಲಿನ ಕಾಲದಲ್ಲಿ ಒಂದು ಕಾನೂನಿತ್ತು. ಯಾರಾದರೂ ಸರದಾರರು ಇಲ್ಲವೆ ಸೈನ್ಯದವರು ಎಲ್ಲಾದರೂ ಬೇಟೆಗೆ ಇಲ್ಲವೆ ಯಾವುದೋ ಕೆಲಸಕ್ಕಾಗಿ ಹೋದಾಗ, ಆತ ಮುಕ್ಕಾಮು ಮಾಡಿದ ಸ್ಥಳದಲ್ಲಿ ಅಲ್ಲಿಯ ಜನರಿಂದ ಆತಿಥ್ಯ ಪಡೆಯುತ್ತಿದ್ದನು. ಒಂದು ಕುರಿಯನ್ನು ಮತ್ತು ಒಂದು ಕೊಡ ತುಪ್ಪವನ್ನು ಅಷ್ಟನ್ನಾದರೂ ಪಡೆಯುತ್ತಿದ್ದನು. ಮತ್ತು ಬೇರೆ ಏನು ಸಿಗದಿದ್ದರೂ ಹುಲ್ಲನ್ನೋ ಇಲ್ಲವೆ ದನಗಳಿಗೆ ಹಾಕುವ ಮೇವನ್ನಾದರೂ ಪುಕ್ಕಟೆ ತೆಗೆದುಕೊಳ್ಳುತ್ತಿದ್ದನು. ಅದರಿಂದಾಗಿ ಸಾವಿರಾರು ಬಡಬಗ್ಗರು ತೊಂದರೆಗೊಳಗಾಗಿದ್ದರು. ಮತ್ತು ಹಾನಿಯಾಗುತ್ತಿತ್ತು. ಈಗಲೂ ಆಗುತ್ತಿದೆ. ಇಂದು ಇಂಗ್ರೇಜ ಸರಕಾರದ ಆಡಳಿತದಲ್ಲಿ ತೊಂದರೆ ಮತ್ತು ಉಪದ್ರವ ಕೊಡುವುದು ನಿಂತಿದೆ. ದಂಡಿನಲ್ಲಿಯ ಒಬ್ಬನಿಗೂ ಪ್ರಜೆಗಳಿಂದ ಒಂದು ಕಾಳನ್ನು ಪಡೆಯುವ ಸಾಮರ್ಥ್ಯವಿಲ್ಲ. ಆದರೆ ಬೇಕಿದ್ದ ಪದಾರ್ಥಗಳನ್ನು ಬೆಲೆಯನ್ನು ಕೊಟ್ಟು ಪಡೆಯುತ್ತಾರೆ. ದುಡ್ಡು ಕೊಡದ ಹೊರತು ಒಂದು ಕೋಳಿಯ ಮೊಟ್ಟೆ ಕೂಡ ತೆಗೆದುಕೊಳ್ಳುವುದಿಲ್ಲ. ಮೊದಲಿನ ದಿನಗಳಲ್ಲಿ ಪ್ರಜೆಗಳ ಭೂಮಿಯಲ್ಲಿ ತೋಟದಲ್ಲಿ ಏನಾದರೂ ಉತ್ತಮ ಫಲಗಳು ಹಣ್ಣುಗಳು ಬೆಳೆದಿದ್ದರೆ, ಸರದಾರರು ಮತ್ತು ಗ್ರಾಮದ ಹಕೀಮರು ಅದನ್ನು ಕೊಡಲು ಹೇಳುತ್ತಿದ್ದರು. ಪಾಪ! ಬಡವ ಭಯಭೀತನಾಗಿ ಗಾಬರಿಯಿಂದ ನಡುಗುತ್ತ ಅವರು ಕೇಳಿದ್ದನ್ನೆಲ್ಲ ತಂದು ಕೊಡುತ್ತಿದ್ದನು. ಇದರಿಂದಾಗಿ ಎಲ್ಲರಿಗೂ ಉಪದ್ರವವಾಗಿತ್ತು. ಚಿಂತೆಯೂ ಆಗಿತ್ತು. ಇದು ಇಂಗ್ರೇಜಿ ಸರಕಾರದ ಆಡಳಿತದಲ್ಲಿ ನಿಂತಿತು. ಸರದಾರನಿಗೆ ಬೇಕಿದ್ದರೆ ಆ ಪದಾರ್ಥಗಳನ್ನು ಬೆಲೆಕೊಟ್ಟು ತರಬೇಕು. ಇದರಂತೆ ಇಂಗ್ರಜೀ ಸರಕಾರದ ಆಡಳಿತದಲ್ಲಿ ಇನ್ನು ಕೆಲವು ಉತ್ತಮ ಲಕ್ಷಣಗಳು ಇವೆ. ಮತ್ತು ಆ ಲಕ್ಷಣಗಳು ಸ್ತುತಿ ಮಾಡಲು ಯೋಗ್ಯವಾಗಿವೆ.

ಇಲ್ಲಿಯವರೆಗೂ ಸರಕಾರದ ಉತ್ತಮ ಗುಣಗಳ ವರ್ಣನೆಯಾಯಿತು. ಇಲ್ಲಿಂದ ಮುಂದೆ ಇಂಗ್ರೇಜೀ ಸರಕಾರದ ದುರ್ಗುಣಗಳ ವರ್ಣನೆ ಗ್ರಂಥ ಸಮಾಪ್ತಿಯವರೆಗೂ ಇದೆ. ಅದನ್ನು ಬರೆದರೆ ನೀವು ಇಂಗ್ರಜೀ ಸರಕಾರದ ನೌಕರನಾಗಿದ್ದು ಸರಕಾರದ ನಿಂದೆಯ ವರ್ಣನೆಯ ಅನುವಾದವನ್ನು ಹೇಗೆ ಮಾಡಿದಿ? ಈ ಬಗ್ಗೆ ಏನು ಮಾಡಬೇಕು ಎಂಬುದನ್ನು ಸರಕಾರಕ್ಕೆ ಕೇಳಿಯೇ ಅನಂತರ ಆದೇಶವಾದಂತೆ ಬರೆಯಬಹುದಲ್ಲ ಎಂದು ಯಾರಾದರೂ ಹೇಳಿಯಾರು. ಇದನ್ನು ತಿಳಿದೇ ಮೆಹರಬಾನ ಬಾರ್ಟಲ್ ಫ್ರಿಯರ್ ಸಾಹೇಬ ಇಸ್ಕಾಯರ್, ಕಮೀಶನರ ಬಹಾದ್ದೂರ ಇಲಾಖಾ ಸಾತಾರಾ ಅವರ ಸ್ವಾರಿಯು ನೆಹರಗೆ ಹೋಗಿತ್ತು. ಅವರಿಗೆ ಈ ವಿಷಯದಲ್ಲಿ ಅರ್ಜಿಯನ್ನು ಬರೆಯಲಾಯಿತು. ಅವರ ಉತ್ತರವೂ ಬಂದಿತು. ಆ ಎರಡು ಪತ್ರಗಳ ನಕಲುಗಳನ್ನು ಇಲ್ಲಿ ಬರೆಯುವುದು ಸೂಕ್ತವೆಂದು ತಿಳಿದು ಬರೆಯಲಾಗುತ್ತಿದೆ.

## ವಿನಂತಿ ಪತ್ರದ ನಕಲು

ಹು ||

ಮೆಹರಬಾನ ಕದರದಾನ ಆಲೀಶಾನ ರಫೀಆಮಕಾನ
ಹಜರತ ಬಾರಟಲ್ ಫ್ರಿಯರ ಸಾಹೇಬ ಇಸ್ಕಾಯರ, ಕಮೀಶನರ
ಬಹಾದ್ದೂರ, ಇಲಾಖಾ ಸಾತಾರಾ, ಮದಜಲಹೂ.

ಅರ್ಜದಾರನಾದ ನರಸಿಂಗರಾವ ವಿಠಲರಾವ ಪಾರಸನೀಸ ನಿ || ಸರಕಾರ ಕುಂಪಣಿ ಇಂಗ್ರಜ ಬಹಾದೂರ, ಬಾದಜ, ಆದಾಯೆ ತಸಲಿಮಾತ ಮಜಾರೂನ ರಾಯ ಮೆಹರ ಇಂಜಲಾಯ ಆಂಕೇತಾಬ ತಾರೀಖ ೨ ತಿಂಗಳು ಮೊಹರಮ (೭ ನವಂಬರ ೧೮೫೦) ಮುಕ್ಕಾಮ ಸಾತಾರಾ ಇಲ್ಲಿ ಸಾಹೇಬ ಬಹಾದ್ದೂರರ ಸಮಕ್ಷಮಕ್ಕೆ, ದಿಗರ ಇಂಕೆ ಸಾಹೇಬ ಬಹಾದ್ದೂರರು. ವಿಜಾಪುರದಲ್ಲಿಯ ಬಾದಶಾಹೀ ಕಾಲಕಿರ್ದಿಯ ವರ್ಣನೆಯ ಫಾರಸೀ ಪುಸ್ತಕ 'ತಾರೀಖೆ ವಿಜಾಪುರೀ' ಇದನ್ನು ಮರಾಠಿಯಲ್ಲಿ ಅನುವಾದಿಸಲು ನನ್ನ ಕಡೆಗೆ ಕೊಟ್ಟಿದ್ದರು. ಆ ಪುಸ್ತಕದ ಅನುವಾದವು ಕೊನೆಯ ಹಂತಕ್ಕೆ ಬಂದಿದೆ. ಆದರೆ ಸದರೀ ಪುಸ್ತಕದ ಕೊನೆಯಲ್ಲಿ ಇಂಗ್ರೇಜಿ ಸರಕಾರದ ಬಹಳ ದುರ್ಗುಣಗಳನ್ನು ವರ್ಣಿಸಲಾಗಿದೆ. ಆದ್ದರಿಂದ ಈ ವಿಷಯದಲ್ಲಿ ಅನುವಾದ ಮಾಡುವುದು ಸರಿ ಎಂದು ಕಾಣುವುದಿಲ್ಲ. ಈ ವರ್ಣನೆಗಳನ್ನು ಹಾಗೆಯೇ ಇಟ್ಟು ಪುಸ್ತಕದ ಅನುವಾದವನ್ನು ಇಲ್ಲಿಗೆಯೇ ಸಮಾಪ್ತ ಗೊಳಿಸಬೇಕೇ ಅಥವಾ ಈ ವಿಷಯದಲ್ಲಿ ಏನು ಮಾಡಬೇಕೆಂಬುದರ ಬಗ್ಗೆ ಬೇಗ ಆದೇಶವನ್ನು ಕಳಿಸಬೇಕು. ಯಾಕೆಂದರೆ ನನಗೆ ಪಂಢರಪುರದ ವಾರಿಗೆ (ಯಾತ್ರೆಗೆ) ಹೋಗುವುದು ತೀರ ಹತ್ತಿರ ಬಂದಿದೆ. ಅದು ಜರೂರಿಯಾಗಿದೆ. ಮತ್ತು ವಾರಿಗೆ ಹೋಗುವ ವಿಷಯದಲ್ಲಿ ಕೂಡ ರಜೆಯ ಆದೇಶವೂ ಬರೆದು ಬರಬೇಕಾಗಿದೆ.

*ಜಿಯಾದಾಚೆ ಅರ್ಜ ಜುಮಾಯದೆ ದಸ್ತೂರ ಖುದ್*

### ಅರ್ಜಿಗೆ ಬಂದ ಉತ್ತರದ ಆಜ್ಞಾಪತ್ರದ ನಕಲು :

ಸನ್ ೧೮೫೦

ಕೀ. ಜಾ. ನಂ. ೨೦

ಸಾತಾರಾ ಕಮೀಶನರ ಸಾಹೇಬರಿಂದ,

*ಮೆಹರಬಾನ ಬಾಬಾ ಪಾರಸನೀಸರಿಗೆ, ವೀಸರಿಗೆ, ನೀವು ಛ ೨ ಮೊಹರಮದ (೭ ನವಂಬರ ೧೮೫೦) ಪತ್ರ ಕಳಿಸಿದ್ದು ಅದು ಮುಟ್ಟಿದೆ. ಅದರಲ್ಲಿ ವಿಜಾಪುರದಲ್ಲಿಯ ಬಾದಶಾಹೀ ಕಾಲಕಿರ್ದಿಯ ಫಾರಸೀ ಪುಸ್ತಕದ ಕೊನೆಯಲ್ಲಿ ಇಂಗ್ರೇಜೀ ಸರಕಾರದ ಬಹಳ ದುರ್ಗುಣ ಮತ್ತು ನಿಂದೆ ಮಾಡಲಾಗಿದೆ, ಅದರ ಅನುವಾದವನ್ನು ಮಾಡಬೇಕೋ ಹೇಗೆ ಮತ್ತು ಪಂಢರಪುರದ ವಾರಿಗೆ ಹೋಗಬೇಕಾಗಿದೆ ಆದ್ದರಿಂದ ತಕ್ಷಣ ಉತ್ತರ ಬರಲಿ ಎಂದು ಬರೆದಿದ್ದೀರಿ. ಅದರ ಮೇಲಿಂದ ತಿಳಿಸುವುದೇನೆಂದರೆ, ನಿಂದೆಯ ಅನುವಾದವನ್ನು ನೀವು ನಿಶ್ಚಿಂತೆಯಿಂದ ಮಾಡಿ ಕೆಲಸ ಮುಗಿಸಿ, ಪಂಢರಪುರಕ್ಕೆ ಹೋಗಿ ಬಂದನಂತರ ಅನುವಾದವನ್ನು ಸನ್ನಿಧಿಯಲ್ಲಿ ಸಲ್ಲಿಸಬೇಕು ತಾರೀಖು ೯ ನವಂಬರ ಸನ್ ೧೮೫೦ ಇಸ್ವಿ*

ಬಾರ್ಟಲ್ ಫ್ರೀಯರ್
*(ಇಂಗ್ರೇಜಿ ಲಿಪಿಯ ಸಹಿ)*

## ೪೯. ಈ ರೀತಿ ಆದೇಶ ಬಂದನಂತರ ಇಂಗ್ರೇಜಿ ಸರಕಾರದ ದುರ್ಗುಣಗಳನ್ನು ಮತ್ತು ನಿಂದೆಯ ವರ್ಣನೆಯ ಅನುವಾದ ಮಾಡಿದ್ದು :

ಇಲ್ಲಿಯವರೆಗೂ ಇಂಗ್ರೇಜೀ ಸರಕಾರದ ಉತ್ತಮ ಗುಣಗಳನ್ನು ಮತ್ತು ಹೊಗಳಿಕೆಗಳನ್ನು ವರ್ಣನೆ ಮಾಡಿದ್ದಾಯಿತು. ಈಗ ಅವರ ದುರ್ಗುಣಗಳನ್ನೂ ವರ್ಣಿಸುವೆ. ಯಾಕೆಂದರೆ, ಇಲ್ಲಿಯವರೆಗೂ ಮತಲಬಿಯಿಂದ ಹೊಗಳಿದ್ದೇನೆ ಎಂಬ ದೋಷ ನನ್ನ ಮೇಲೆ ಉಳಿಯಬಾರದು. ಈ ವಿಷಯದಲ್ಲಿ ವಾಕ್ಯವಿದೆ "ಏನನ್ನು ಹೇಳಲಾಗಿದೆಯೋ ಅದೆಲ್ಲ ಸರಿ ಇದೆ". ಫಾರ್ಸೀ ಬೈತದ ಅರ್ಥ. "ಬುದ್ಧಿವಂತ ಪುರುಷನು ಎರಡು ವಸ್ತುಗಳಿಂದ ಶೋಭಿಸುತ್ತಾನೆ. ಹೊಗಳಿಕೆಯ ಸ್ಥಳದಲ್ಲಿ ಹೊಗಳಬೇಕು. ನಿಂದಿಸುವ ಸ್ಥಳದಲ್ಲಿ ನಿಂದಿಸಬೇಕು" ಆದ್ದರಿಂದ ಇಂಗ್ರಜೀಗಳ ದುರ್ಗುಣಗಳನ್ನೂ ವರ್ಣಿಸಲೇಬೇಕು. ಈ ನಿರ್ದೈವೀ ಜಾತಿಯು ಈ ಪ್ರದೇಶದಲ್ಲಿ ಬಂದಾಗ ಅವರ ಕಾಲಗುಣದಿಂದ ಆ ಮೊದಲಿನ ವರ್ಷದಲ್ಲಿಯೇ ಅವರು ದೊಡ್ಡ ಪ್ರಾಣಘಾತಕು ವಿಘ್ನಗಳನ್ನು ತಮ್ಮ ಜೊತೆಗೇ ತಂದರು. ಅದು ಒಂದು ದೊಡ್ಡ ಬರ, ಇನ್ನೊಂದು ಮಹಾಮಾರಿಯ ಉಪದ್ರವ. ಈ ಎರಡು ವಿಘ್ನಗಳು ಈ ಪ್ರದೇಶದಲ್ಲಿ ಬಂದುವು. ಕೆಲವು ದಿನ ಪೀಡೆಯನ್ನು ಕೊಟ್ಟು ಬರವು ನಿವಾರಣೆಯಾಯಿತು. ಆದರೆ ಕಾಲರಾ ಬೇನೆ ಮಾತ್ರ ಬಹಳ ಪ್ರಳಯಕಾರಕವಾಗಿತ್ತು. ಅದನ್ನು ಹೇಳಲು, ವಿಸ್ತರಿಸಲು ಸಾಧ್ಯವಿಲ್ಲ. ವರ್ಣಿಸಲು ನಾಲಿಗೆಗೆ ಸಾಮರ್ಥ್ಯವಿಲ್ಲ. ಚಿತ್ತದಲ್ಲೂ ಬಲವಿಲ್ಲ. ಹಳೆಯದನ್ನು ನೆನಪಿಸಿಕೊಂಡರೆ ಅಲಮಗೀರ ಬಾದಶಹನ ಕಾಲಕಿರ್ದಿಯಲ್ಲಿ ಸನ್ ೧೧೦೧ (ಕ್ರಿ.ಶ ೧೬೮೯-೯೦)ರಲ್ಲಿ ಮಹಾಮಾರಿ ಉಪದ್ರವವಾಯಿತು. ಮತ್ತು ಆ ಕಾಲರಾಬೇನೆಗೆ ಮಹಾಪ್ರಳಯದ ಉಪಮೆಯನ್ನು ಕೊಡಲಾಗಿತ್ತು. ಇಂದಿನ ಈ ಕಾಲರಾಬೇನೆಯ ಉಪದ್ರವವು ಮೊದಲಿನ ಸಾವಿರಪಟ್ಟು ಅಧಿಕವಾಗಿದ್ದಾಗ ಇದಕ್ಕೆ ಯಾವ ಉಪಮೆ ಕೊಡಬೇಕು? ಅದು ಕೇವಲ ಮೂರು ವರುಷವಿದ್ದು ಅನಂತರ ಶಾಂತವಾಗಿತ್ತು ಆದರೆ ಇಂದಿನದು ಕಳೆದ ಎಂಟುವರುಷಗಳಿಂದ ಇಂಗ್ರಜಿಗಳು ಬಂದಾಗಿನಿಂದ ಬಿಟ್ಟು ಬಿಡದೆ ನಡೆದಿದೆ. ಸಂಸ್ಕೃತದಲ್ಲಿಯ ಆರು ಋತುಗಳು ಮತ್ತು ಮುಸಲ್ಮಾನ ಶಾಸ್ತ್ರದಲ್ಲಿಯೂ ನಾಲ್ಕು ಋತುಗಳನ್ನು ವರ್ಣನೆ ಮಾಡಿದಂತೆ, ಆ ಋತುಗಳು ತಂತಮ್ಮ ತಿಂಗಳುಗಳಲ್ಲಿ ಬರಲಾರದೇ ಇರಲಾರವು. ಹಾಗೆಯೇ ಸನ್‌ಸಮಾನ ಸಿತ್ತೈನ (೧೮೧೮-೧೬)ರಿಂದ ಕಾಲರಾಬೇನೆಯ ಉಪದ್ರವವು ಪ್ರತಿವರುಷವೂ ಬರುತ್ತಿದೆ. ಇದೂ ಒಂದು ಋತುವೇ ಆಗಿ ಪರಿಣಮಿಸಿದೆ. ಅದು ಯಾವ ತಿಂಗಳಲ್ಲಿ ಬರುತ್ತದೆಯೋ ಆ ಋತುವು ಪೃಥ್ವಿಯ ನಾಲ್ಕು ಕಡೆಗಳಲ್ಲೂ ಅದೇ ತಿಂಗಳಲ್ಲಿ ಇರುತ್ತದೆ. ಎಲ್ಲಿಯೋ ಇರುತ್ತದೆ ಮತ್ತೆಲ್ಲಿಯೋ ಇರುವುದಿಲ್ಲ ಎಂಬುದಾಗಿ ಇಲ್ಲ. ಆದ್ದರಿಂದ ಬಹಳ ಜನರ ಪ್ರಾಣಹಾನಿಯಾಯಿತು. ಅದರಲ್ಲೂ ಈ ಎಂಟನೆಯ ವರುಷ ಮೊದಲಿನಕ್ಕಿಂತ ಅಧಿಕವಾಗಿದೆ. ಅನೇಕ ಮನೆತನಗಳೇ ಮುಳುಗಿ ಹೋದುವು. ಅವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿ ಅದೆಲ್ಲ ಇಂಗ್ರಜ ಸರಕಾರದ ವಶವಾಯಿತು. ಅನೇಕ ಹಳ್ಳಿ-ಪಳ್ಳಿಗಳು ಕೂಡ ಜನವಸತಿಯಿಲ್ಲದೆ ಹಾಳಾದುವು. ಆ ಗ್ರಾಮಗಳ ವಸೂಲಿ ಕೂಡ ನಿಂತಿತು. ಕಾಲರಾ ಬೇನೆಯ ಉಪದ್ರವದಿಂದ ಭಯಭೀತರಾದ ಸರದಾರರು-ಸಿಪಾಯಿಗಳು ತಂತಮ್ಮ ಮನೆಮಾರುಗಳನ್ನು ಬಿಟ್ಟು ಗಾಬರಿಯಿಂದ ತಮ್ಮ ಜೀವ ಉಳಿಸಿಕೊಳ್ಳಲು ಇತ್ತಿಂದ ಅತ್ತ, ಅತ್ತಿಂದ ಇತ್ತ ಅಲೆದಾಡಹತ್ತಿದರು. ಬಡಬಗ್ಗರ, ಸಾಮರ್ಥ್ಯ ಹೀನರ ಮತ್ತು ದರಿದ್ರ ಜನರ ಬಗ್ಗೆ ಲೆಕ್ಕವೇ ಇಲ್ಲ. ಸ್ವತಃ ದೊಡ್ಡ-ದೊಡ್ಡ ಜನರ ಮತ್ತು ಶ್ರೀಮಂತರ ಅವಸ್ಥೆಯೇ ಹೀಗಿರುವಾಗ, ಅವರೆ ತಮ್ಮ ಸಂಸಾರಗಳ ಆಶೆಯನ್ನು ಬಿಟ್ಟು ಬೆಳ್ಳಿ-ಬಂಗಾರ ಮನೆಮಾರುಗಳ ಪರಿವೆ ಇಲ್ಲದೆ ಹಗಲುರಾತ್ರಿ ಮರಣದ

ಚಿಂತೆಯಲ್ಲಿದ್ದು ಆಹಾರ ನಿದ್ರೆಗಳನ್ನು ಬಿಟ್ಟಿದ್ದಾರೆ. ಈ ಎಂಟು ವರುಷಗಳ ಅವಧಿಯಲ್ಲಿ ಕಾಲರಾಬೇನೆಯಿಂದ ಸತ್ತ ಜನರ ಲೆಕ್ಕ ಸಾವಿರ, ಲಕ್ಷಗಳನ್ನು ದಾಟಿ ಅಬ್ಜ-ಖರ್ವಗಳ ಲೆಕ್ಕಕ್ಕೆ ಸೇರಿದೆ. ಈ ವಿಷಯದಲ್ಲಿ ಲೆಕ್ಕ ಬಲ್ಲವನು ಒಬ್ಬ ಅಲ್ಲಾನು ಮಾತ್ರ. ಯಮದೂತರ ಸೈನ್ಯದಲ್ಲೂ ಲೆಕ್ಕವನ್ನು ಅಲ್ಲಾನೊಬ್ಬನೇ ಬಲ್ಲವನಾಗಿದ್ದಾನೆ. ಬೇರೆ ಯಾರಿಗೂ ಗೊತ್ತಿಲ್ಲ. ಆದ್ದರಿಂದ ಈ ಎಂಟನೆಯ ವರುಷಕ್ಕೆಯೇ ಈ ವಿಘ್ನದಿಂದ ಪಾರು ಮಾಡು ಎಂದು ಅಲ್ಲಾನನ್ನು ಪ್ರಾರ್ಥಿಸೋಣ. ಈ ಮೊದಲು ಸಿಕಂದರ ಬಾದಶಹನು ಮರಣ ಹೊಂದಿದಂದಿನಿಂದ ಜನರಿಗೆ ತಮ್ಮ ಸಂಸಾರದಲ್ಲಿ ಬಹಳ ಅಡಚಣೆಯಾಗಿದೆ. ಶೌರ್‍ಯದ ಶ್ರೇಷ್ಠತೆಯ, ಕುಲೀನತೆಯ ಕದರನ್ನು ಮಾಡುವವರೇ ಇಲ್ಲವಾಯಿತು. ಆದ್ದರಿಂದ ಎಲ್ಲ ಜನರೂ ಈ ರಾಜಧಾನಿಗೆ ಹೆಸರನ್ನು ಇಡುವವರೇ ಆಗಿದ್ದರು. ಈ ದಕ್ಷಿಣ ದೇಶದಲ್ಲಿ ಸಾವಿರಾರು-ಲಕ್ಷಾವಧಿ ಜನರು ಕುಲೀನರೂ ಶ್ರೇಷ್ಠರೂ ಆಗಿದ್ದರು. ಅಲ್ಲದೆ ದಕ್ಷಿಣದ ಸಾವಿರಾರು ಜನರು ಹಿಂದುಸ್ಥಾನದಲ್ಲೂ ವಿಲಾಯತಿಯಲ್ಲೂ, ಅರಬಸ್ಥಾನ ಮುಂತಾದ ಸ್ಥಳಗಳಲ್ಲೂ ನೌಕರಿಯ ಮೇಲೆ ಇದ್ದು, ಹೊಟ್ಟೆಗೆ ಅನ್ನವನ್ನು ದೊರಕಿಸಿಕೊಳ್ಳುತ್ತಿದ್ದರು. ಮತ್ತು ಜೀವ ಉಳಿಸಿಕೊಂಡು ದಿನಗಳನ್ನು ಕಳೆಯುತ್ತಿದ್ದರು. ಪೂರ್ಣ ಸುಖ ಸಂತೋಷಗಳಿರದಿದ್ದರೂ ಈ ಇಂಗ್ರಜಿಗಳ ಆಡಳಿತದಲ್ಲಿ ಶ್ರೇಷ್ಠ ಶಿಪಾಯಿ ಜನರಿಗೆ, ಕುಲೀನರು, ಶೇಖರು, ಸಯ್ಯದರು, ಮೊಗಲರು ಪಠಾಣರು ಮತ್ತು ಅರಬ್ಬರು ಇವರೆಲ್ಲ ಒಮ್ಮಿಂದೊಮ್ಮಲೇ ತಮ್ಮ ಹೆಸರುಗಳನ್ನು ಕಳೆದುಕೊಂಡು ಗುರುತಿರದ ಗಲ್ಲಿಯಲ್ಲಿ ಹೊಕ್ಕರು. ಈ ಜನರೆಲ್ಲ ಖಿನ್ನರಾಗಿ, ತಮ್ಮ ಉಮೇದನ್ನು ಕಳೆದುಕೊಂಡು ಒಂದು ಸಲ ರಾತ್ರಿಯ ಊಟ ಸಿಕ್ಕರೂ ಸಾಕು, ರೊಟ್ಟಿಯಾದರೂ ಸಿಗಲಿ ಎಂಬ ಇಚ್ಛೆಯನ್ನು ಹೊಂದಿದವರಾದರು. ಇವರಲ್ಲಿ, ಕೆಲವರು. ಮಾತ್ರ ಇಂಗ್ರಜಿ ಸರಕಾರದ ಚಾಕರಿಯಲ್ಲಿ ಇದ್ದಾರೆ. ಆ ಜನರ ಯೋಗ್ಯತೆಯೂ ಮಹಾರರ ಮತ್ತು ಚಮ್ಮಾರರ ಯೋಗ್ಯತೆಗೆ ಸರಿಸಮನಾಗಿದೆ. ಇದರರ್ಥ ಇಂಗ್ರಜರ ಆಡಳಿತದಲ್ಲಿ ಸದರೀ ಜಾತಿಯ ಜನರು ಮತ್ತು ಮಹಾರ ಚಮ್ಮಾರರು ಒಂದೇ ಆಗಿದ್ದಾರೆ. ಈ ಇಂಗ್ಲೀಷ್ ಜನರು ಸಯ್ಯದರನ್ನು ಶೇಖರನ್ನು ಮತ್ತು ಚಮ್ಮಾರ, ಕಟುಗರನ್ನೂ ಒಂದೇ ತಕ್ಕಡಿಯಲ್ಲಿಟ್ಟು ತೂಗುತ್ತಾರೆ. ಅವರನ್ನೆಲ್ಲ ಒಂದೇ ರೀತಿಯಾಗಿ ಕಾಣುತ್ತಾರೆ. ಬಹಳಷ್ಟು ಇಂಗ್ಲೀಷ್ ಜನರಿಗೆ ಮಹಾರರ ಬಗ್ಗೆ ಎಷ್ಟು ಯೋಗ್ಯತೆಯಿದೆಯೋ ಅಷ್ಟು ಗೌರವ ಮರ್ಯಾದೆಗಳು ಶೇಖ ಮತ್ತು ಸಯ್ಯದರಿಗಿಲ್ಲ. ಅಹೋ ಅಲ್ಲಾ, ಇದೆಂಥ ಚಮತ್ಕಾರಿಕ ಯೋಗ್ಯತೆಯನ್ನು ಗುರುತಿಸಲಾಗದ ಗುಣವನ್ನು ಇಂಗ್ಲೀಷ್ ಜನರಿಗೆ ಕೊಟ್ಟಿರುವಿ? ಈ ಇಂಗ್ಲೀಷ್ ಜನರ ಕೈಯಿಂದ ಅಲ್ಲಾನೇ ಉಳಿಸಬೇಕು. ಆದಿಮ ಪೈಗಂಬರರ ಸಮಯದಿಂದ ಇಂದಿನ ವರೆಗೂ ಪ್ರತಿಯೊಬ್ಬ ಹಿಂದು ಮತ್ತು ಮುಸಲ್ಮಾನ ಜಾತಿಗಳಲ್ಲಿ ಕಲ್ಲಿಗೂ ರತ್ನಕ್ಕೂ ಅಂತರವಿತ್ತು. ಮತ್ತು ಮುತ್ತಿಗೂ, ಕಾಜಿನ ಮಣಿಗೂ ಅಂತರವಿತ್ತು. ಅರ್ಥಾತ್ ಹಿಂದುಗಳು, ಮುಸಲ್ಮಾನರು ಕಲ್ಲು, ರತ್ನ, ಕರಿಮಣಿ ಮತ್ತು ಮುತ್ತುಗಳಲ್ಲಿಯ ಭಿನ್ನತೆಯನ್ನು ಗುರುತಿಸುತ್ತಿದ್ದರು. ಅವುಗಳೆಲ್ಲವನ್ನೂ ಒಂದೇ ಎಂದು ಗಣಿಸುತ್ತಿರಲಿಲ್ಲ. ಇಂಗ್ಲೀಷರು ಸ್ವತಃಕ್ಕೆ ತಾವು ಬಹಳ ಬುದ್ಧಿವಂತರು, ತುಂಬ ತಿಳುವಳಿಕೆ ಉಳ್ಳವರು ಮತ್ತು ದೊಡ್ಡ ವಿದ್ವಾಂಸರು ಎಂದು ತಮ್ಮಷ್ಟಕ್ಕೆ ತಾವೇ ತಿಳಿದುಕೊಂಡಿದ್ದಾರೆ. ಮತ್ತು ಈ ವಿಷಯದಲ್ಲಿ ಬಹಳ ಹೆಮ್ಮೆಪಡುತ್ತಾರೆ. ಆದರೆ ಅವರು ಮೇಲೆ ಬರೆದ ಪದಾರ್ಥಗಳಲ್ಲಿಯ ಅಂತರವನ್ನು ತಿಳಿಯುತ್ತಿಲ್ಲ. ಮತ್ತು ಗುರುತಿಸುತ್ತಿಲ್ಲ ಬುದ್ಧಿವಂತರೆನಿಸಿಕೊಂಡು ಕಲ್ಲು, ರತ್ನ, ಕರಿಮಣಿ ಮತ್ತು ಮುತ್ತುಗಳನ್ನು ಒಂದೇ ಎಂದು ಮನ್ನಿಸುತ್ತಾರೆ. ಅದರರ್ಥ ಎಲ್ಲ ಜಾತಿಗಳೂ, ಮಹಾರ ಚಮ್ಮಾರ ಎಲ್ಲವೂಗಳೂ ಒಂದೇ ಎಂದು ತಿಳಿಯುತ್ತಾರೆ. ಅದರಿಂದಾಗಿ ಎಲ್ಲ ಜನರಲ್ಲಿ ಬಹಳ ದಾರಿದ್ರ್ಯ ಹಾಗೂ ತಿನ್ನುಣ್ಣಲು ಅನ್ನ ಕೂಡ

ಸಿಗದಂತಾಗಿದೆ. ಅನ್ನದಾತನಾದ ಅಲ್ಲಾನು ಈಗ ಈ ಮಂಡಳಿಗೆ ಅನ್ನವನ್ನು ಕೊಡಲಿ. ಮುಸಲ್ಮಾನರ ಶಾಸ್ತ್ರದಂತೆ ಮುಸಲ್ಮಾನ ಜ್ಞಾತಿಗಳಲ್ಲಿ ಎಪ್ಪತ್ತೆರಡು ಭೇದಗಳಿವೆ. ಅಧರ್ಮಿ ಹಿಂದು ಜನರ ಜ್ಞಾತಿಗಳಲ್ಲಿ ಏಳುನೂರು ಭೇದಗಳಿವೆ. ಈ ಎರಡೂ ಜಾತಿಗಳ ಭೇದಗಳಲ್ಲಿಯ ಜ್ಞಾತಿಗಳಲ್ಲಿ ದಯೆ, ದಾನ, ಧರ್ಮಗಳು ರೂಢಿಯಲ್ಲಿವೆ. ಆದರೆ ಈ ಇಂಗ್ಲೀಷ್ ಜನರಲ್ಲಿ ಧರ್ಮವೆಂದರೆ ಯಾವ ಪದಾರ್ಥವೆಂಬುದನ್ನು ಅವರು ತಿಳಿದಿಲ್ಲ. ದಾನ ಮಾಡುವುದೆಂದರೇನು? ಎಂಬುದನ್ನು ಗುರುತಿಸುವುದಿಲ್ಲ. ದಯಾ-ಮಾಯೆಗಳನ್ನಂತೂ ಇಂಗ್ಲೀಷ್ ಜನರು ಎಂದಿಗೂ ತಮ್ಮ ಹತ್ತಿರ ಪ್ರವೇಶ ಮಾಡಗೊಡುವುದಿಲ್ಲ. ಈ ಇಂಗ್ಲೀಷ್ ಜನರಲ್ಲಿಯ ಬುದ್ಧಿ ಕೇವಲ ಪ್ರಪಂಚಕ್ಕಾಗಿ ಸೀಮಿತವಾಗಿದೆ. ಪಾರಮಾರ್ಥ ವಿಷಯದಲ್ಲಿ ಬುದ್ಧಿಯೇ ಇಲ್ಲ. ಅವರ ಬುದ್ಧಿಗೆ ಪ್ರತಿಯೊಂದು ಪದಾರ್ಥವನ್ನು ಅಪಹರಣ ಮಾಡುವುದು ಉತ್ತಮ ಎನಿಸಿದೆ. ತಮ್ಮ ಕೈಯಿಂದ ಯಾರಿಗಾದರೂ ಏನನ್ನಾದರೂ ಕೊಡುವುದೆಂದರೆ, ಬಹಳ ಕೆಟ್ಟ ಕೆಲಸವೆನಿಸುತ್ತದೆ. ಇನ್ನೊಬ್ಬರದನ್ನು ಅಪಹರಣ ಮಾಡುವುದೊಂದೇ ಅವರಿಗೆ ಗೊತ್ತು. ಯಾರಿಗಾದರೂ ಕೊಡುವುದನ್ನು ಅವರು ಒಪ್ಪುವುದಿಲ್ಲ. ಇದು ಅವರ ಸಂಪ್ರದಾಯ. ಈ ಇಂಗ್ಲೀಷ ಜನರ ಈಶ್ವರೀ ಮಾರ್ಗದಲ್ಲಿ(ಆಧ್ಯಾತ್ಮ) ದ್ರವ್ಯವನ್ನು ಖರ್ಚು ಮಾಡುವುದು, ಬಡಬಗ್ಗರ ಬಗ್ಗೆ ಧರ್ಮ ಮಾಡುವುದು ಮತ್ತು ದಾನ ನೀಡುವುದು ಮೂರ್ಖ ಕರ್ಮವಾಗಿದೆ ಎಂದು ತಿಳಿಯುತ್ತಾರೆ. ಈ ಕರ್ಮವು ಭ್ರಾಂತಿ ಪರುಷನ ಭ್ರಾಂತಿಯಂತಿದೆ. ಮತ್ತು ಹುಚ್ಚರ ಹಾಗೆ ತಿಳಿಯುತ್ತಾರೆ. ಧರ್ಮ ಮಾಡುತ್ತೇನೆ, ದಾನ ನೀಡುತ್ತೇನೆ ಎಂದರೆ ಆತ ಹುಚ್ಚ-ಆತನಿಗೆ ಹುಚ್ಚು ಹಿಡಿದಿದೆ ಎನ್ನುತ್ತಾರೆ. ಹೇ ಅಲ್ಲಾ, ಇದೆಂಥ ಆಶ್ಚರ್ಯ? ಇಂಗ್ಲೀಷ್ ಜನರಿಗೆ ಸದ್ಗುಣಗಳು ದುರ್ಗುಣಗಳಂತಾಗಿವೆ. ಬಹುಶಃ ಈ ಇಂಗ್ಲೀಷ್ ಜನರಿಗೆ ವೇಖಸ್, ಹಷರ್ ಮತ್ತು ನಷರಗಳ ಸುದ್ದಿಯೇ ಗೊತ್ತಿಲ್ಲವೆಂದು ಕಾಣುತ್ತದೆ. (ವೇಖಸ್-ಪುನರ್ಜನ್ಮದಲ್ಲಿ ನಂಬಿಕೆ, ಹಷರ್-ಪಾಪ ಪುಣ್ಯಗಳ ಲೆಕ್ಕ, ನಷರ-ಪಾಪಪುಣ್ಯಗಳ ಲೆಕ್ಕದಂತೆ ಬೇರೆ-ಬೇರೆ ಜನ್ಮ). ಈ ವಿಷಯದಲ್ಲಿ ಈ ಇಂಗ್ಲೀಷ್ ಜನರು ವಿಚಾರಿಸಲೂ ಯೋಗ್ಯರಲ್ಲ, ಪರಲೋಕದಲ್ಲಿ ಪಾಪಪುಣ್ಯಗಳ ಲೆಕ್ಕವನ್ನು ಕೊಡಬೇಕಾಗುತ್ತದೆ ಎಂಬುದನ್ನೇ ಇಂಗ್ಲೀಷ್ ಜನರು ಸತ್ಯವೆಂದು ತಿಳಿಯುವುದಿಲ್ಲ. ಪ್ರತ್ಯಕ್ಷವಾಗಿ ಇಂಗ್ಲೀಷ್ ಜನರು ತಮ್ಮನ್ನು 'ಆಹಾಲೆ ಕಿತಾಬ' ಎಂದುಕೊಳ್ಳುತ್ತಾರೆ. ಆಹಾಲೆ ಕಿತಾಬ ಎಂದರೆ ನಾಲ್ಕು ಕುರಾನಗಳನ್ನು ಇಳಿಸಿದ್ದಾರೆ. ಅವರಲ್ಲಿ ಇಂಜಿಲ್ ಎಂಬ ಕುರಾನ ಇದೆ. ಈತನೇ ಆ ಗ್ರಂಥದ ಅಧಿಕಾರಿ ಎನ್ನುತ್ತಾರೆ. ಹೀಗಿದ್ದರೂ ಗೊತ್ತಾಗದ ವಿಷಯವೆಂದರೆ, ದಾನ-ಧರ್ಮಗಳ ಪ್ರಸ್ತಾಪವಿಲ್ಲದ ಯಾವ ಧರ್ಮ ಗ್ರಂಥವು ಈ ಇಂಗ್ಲೀಷರ ಕೈಗೆ ಸಿಕ್ಕಿದೆ ಎಂಬುದು. ಪುಣ್ಯ, ಕರ್ಮ, ದಯೆ, ಧರ್ಮದ ಮಾರ್ಗಗಳನ್ನು ಬರೆಯದೇ ಇದ್ದ ಯಾವ ಗ್ರಂಥವಿದೆ? ಇಂಗ್ಲೀಷ್ ಜನರು ಆ ಗ್ರಂಥದ ಅಧಿಕಾರಿಗಳು ಎನ್ನುತ್ತಾರೆ. ಇದೊಂದೂ ಗೊತ್ತಾಗುತ್ತಿಲ್ಲ. ಧರ್ಮ ಮಾಡುವ ಲಕ್ಷಣಗಳಿಲ್ಲದ ಪೈಗಂಬರರು ಯಾರಾದರೂ ಆಗಿ ಹೋಗಿದ್ದಾರೆಯೇ? ಸತ್ಯವಾಗಿ ನೋಡಿದರೆ, ಧರ್ಮ ಮತ್ತು ದಾನಗಳು ಇವು ಅಲ್ಲಾನ ಖಾಸಾ ಲಕ್ಷಣಗಳಲ್ಲಿಯ ಲಕ್ಷಣಗಳಾಗಿವೆ. ಯಾಕೆಂದರೆ ಈ ಲಕ್ಷಣಗಳಿಂದಲೇ ಅಲ್ಲಾನು ತನ್ನನ್ನು ದಾತಾ ಮತ್ತು ದಯಾಳು ಎಂದು ಕರೆಯಿಸಿಕೊಳ್ಳುತ್ತಾನೆ. ಅಲ್ಲಾನು ಪೈಗಂಬರರಿಗೆ ಇವೇ ಲಕ್ಷಣಗಳನ್ನು ಉಪದೇಶಮಾಡಿದ್ದಾನೆ. ಪ್ರತಿಯೊಬ್ಬ ಮನುಷ್ಯನು ಬುದ್ಧ್ಯಾಪೂರ್ವಕವಾಗಿ ಕೃಪಣತೆಯ ಕರ್ಮಮಾಡಿದರೆ. ಅದು ಬಹಳ ಕೆಟ್ಟದ್ದಾಗಿದೆ. ದಾನ-ಧರ್ಮಗಳು ಬಹಳ ಉತ್ತಮ ಕರ್ಮಗಳಾಗಿವೆ ಎಂದು ಎಲ್ಲರಿಗೂ ತಿಳಿದಿದೆ. ಪ್ರತ್ಯಕ್ಷಕ್ಕೆ ಪ್ರಮಾಣಗಳನ್ನು ಕೊಡುವ ಕಾರಣವಿಲ್ಲ. 'ಮಂತಿಕ'ದ ವಿದ್ಯೆಯಲ್ಲಿ ಅನೇಕ ಪ್ರಕಾರದ 'ತಸಲುರ'ಗಳನ್ನು ಬರೆಯಲಾಗಿದೆ. ಅವುಗಳಲ್ಲಿ

ಪ್ರಧಾನ ತಸಉರದ ಎರಡು ಲಕ್ಷಣಗಳನ್ನು ಬರೆಯಲಾಗಿದೆ. ಒಂದು ತಸಉರೆ, ಅಗ್ನಿಯಿಂದ ಶರೀರ ಸುಡುತ್ತದೆ ಎಂದು ಹೇಳಿದರೆ, ಅಗ್ನಿಯಿಂದ ಶರೀರ ಸುಡುತ್ತದೆಯೋ ಇಲ್ಲವೋ ಎಂಬುದನ್ನು ಯಾವ ಶಾಸ್ತ್ರಗ್ರಂಥಗಳಲ್ಲೂ ನೋಡುವ ಕಾರಣವಿಲ್ಲ. ಪ್ರತ್ಯಕ್ಷವಾಗಿ ಕಾಣುತ್ತದೆ. ಅಗ್ನಿಯಿಂದ ಶರೀರ ಸುಡುತ್ತದೆ ಎಂಬುದರಲ್ಲಿ ಸಂಶಯವೇ ಇಲ್ಲ. ಈ ತಸಉರಕ್ಕೆ 'ಬದಿಹೀ' ಎನ್ನುತ್ತಾರೆ. ಇನ್ನೊಂದು, 'ತಸಉರೆ ಜಷರಿಯಾ' ಎಂದರೆ, 'ಸ್ವರ್ಗದಲ್ಲಿ ಒಂದು ಸುಂದರ ತೋಟವಿದೆ' ಎಂದು ಯಾರಾದರೂ ಹೇಳುತ್ತಾರೆ. ಅದು ನಮ್ಮ ಕಣ್ಣಿಗೆ ಕಾಣುವುದಿಲ್ಲ. ಶಾಸ್ತ್ರಗಳಿಂದಲೇ ಈ ಸತ್ಯವನ್ನು ಮನಗಾಣಬೇಕಾಗುತ್ತದೆ. ಈ ಚಿಂತನೆಗೆ ತಸಉರೆ ಜಷರಿಯಾ ಎನ್ನುತ್ತಾರೆ. ತಸಉರ ಎಂದರೆ ಚಿಂತನ. ಆಗ ಪ್ರತ್ಯಕ್ಷದ ವಿಚಾರಗಳಿಗೆ ಅನುಮಾನದ ವಿಚಾರ ಹೇಗೆ ಬರುತ್ತದೆ? ಇದರ ಮೇಲಿಂದ ಧರ್ಮ ಮಾಡುವುದು ಉತ್ತಮ ಲಕ್ಷಣ, ಯಾರಿಗೂ ಏನನ್ನೂ ಕೊಡದೇ ಇರುವುದು ಅಯೋಗ್ಯ ಲಕ್ಷಣ. ಇದೆಲ್ಲ ಹಿರಿಕಿರಿಯರೆಲ್ಲರಿಗೂ ತಿಳಿಯುತ್ತದೆ. ಇದರಲ್ಲಿ ಯಾವ ಪ್ರಮಾಣವನ್ನು ನೋಡುವ ಅವಶ್ಯಕತೆಯೂ ಇಲ್ಲ. ಇರಲಿ ಈ ಇಂಗ್ರಜೀ ಜನರು ಯಾರಿಗೂ ಏನನ್ನೂ ಕೊಡುವುದಿಲ್ಲ. ಎಲ್ಲರ ಹರಣವನ್ನು ಮಾತ್ರ ಮಾಡುತ್ತಾರೆ. ಅದರಿಂದಾಗಿಯೇ ಜನತೆಯಲ್ಲಿ ದಾರಿದ್ರ್ಯ ಮತ್ತು ಅನ್ನ ನೀರುಗಳ ಕೊರತೆ ಉಂಟಾಗಿದೆ. ಯಾಕೆಂದರೆ ಇದೆಲ್ಲರಿಗೂ ಗೊತ್ತು. ಸರದಾರ ಜನರು ಅಮೀರ ಜನರು ಉದಾರತನವನ್ನು ಧಾರಣ ಮಾಡಿ ದಾನ-ಧರ್ಮಗಳನ್ನು ಮಾಡುತ್ತಾರೆ. ಆಗ ಎಲ್ಲರಿಗೂ ಸುಖ ಸಂತೋಷಗಳು ಲಭಿಸುತ್ತವೆ. ಸಾರಾಂಶವೆಂದರೆ ಈ ಅಕಲ್ಯಾಣಕಾರಕ ಕಾಲಕಿರ್ದಿಯಲ್ಲಿ ಅಂದರೆ ಇಂಗ್ಲೀಷರ ಕಾಲದಲ್ಲಿ ಸಾವಿರಾರು ಲಕ್ಷಾವಧಿ ದೊಡ್ಡ ದೊಡ್ಡ ಜನರು ಕೆಲಸವಿಲ್ಲದೆ ಅನ್ನ ವಸ್ತ್ರಗಳಿಗೆ ಪರದಾಡುತ್ತಿದ್ದಾರೆ. ಅವರನ್ನು ವಿಚಾರಿಸುವವರು ಯಾರೂ ಇಲ್ಲ. ಹೇ ಅಲ್ಲಾ, ಹೇ ದೇವಾಧಿದೇವಾ ಈಗ ಈ ಬಡಬಗ್ಗರನ್ನೂ ಉಳಿಸುವುದು ಹೇಗೆ? ಇವರೆಲ್ಲ ಹೇಗೆ ಬದುಕುತ್ತಾರೆ? ಇವುಗಳ ಚಿಂತೆ ನಿನಗಿದೆ. ಯಾಕೆಂದರೆ, ಎಲ್ಲ ದಯವಂತರಮೇಲೆ ದಯೆ ತೋರಿಸುವವನು, ಧರ್ಮವಂತರಿಗೆ ಕೃಪೆ ಮಾಡುವವನು ನೀನೇ ಆಗಿದ್ದೀಯಾ. ಹೇ ಅಲ್ಲಾ, ಕೃಪೆ ಮಾಡು. ಮತ್ತು ಈ ದೀನ ಅನಾಥ ಜನರ ಅವಸ್ಥೆಯ ಮೇಲೆ ನಿನ್ನ ಕೃಪಾದೃಷ್ಟಿ ಬೀಳಲಿ. ಈ ಕಲ್ಲು ಹೃದಯದ ಜನರ ಗುಂಪಿಗೆ ಅಂದರೆ ಈ ನಿರ್ದಯ ಕಠಿಣ ಮನದ ಇಂಗ್ರಜೀ ಜನರನ್ನು, ಈ ಬಡಬಗ್ಗರ ಬಗ್ಗೆ ಮೇಣದಂತೆ ಮೃದುವಾಗುವಂತೆ ಮಾಡು. ಇಲ್ಲವೆ ಈ ಇಂಗ್ರಜೀ ಜನರ ಉಚ್ಚಾಟನೆ ಮಾಡಿ ಇವರ ಸ್ಥಳದಲ್ಲಿ ಯಾರಾದರೂ ದಯಾವಂತ ಪುರುಷನನ್ನು ತಂದು ಸ್ಥಾಪನ ಮಾಡು. ಹೇ ಅಲ್ಲಾ, ಹೇ ಅಲ್ಲಾ, ಹೇ ಅಲ್ಲಾ, ಮೂರು ಸಲ 'ಹೇ ಅಲ್ಲಾ' ಎಂದು ಹೇಳುವುದರ ತಾತ್ಪರ್ಯವೆಂದರೆ, ಯಾವುದೇ ಶಬ್ದವನ್ನು ಮೂರುಸಲ ಉಚ್ಚಾರ ಮಾಡಿದರೆ ಅದು ನಿಶ್ಚಯವಾಗಿಯೂ ಆಗುತ್ತದೆ ಎಂದು ಅರ್ಥ. ಅಲ್ಲಾನಲ್ಲಿ ಕರುಣೆಯನ್ನು ಪ್ರಾರ್ಥಿಸುವುದರಲ್ಲಿಯೇ ಕಲ್ಯಾಣವಿದೆ.

*ಇಲ್ಲಿಗೆ ಈ ಗ್ರಂಥ ಸಮಾಪ್ತವಾಯಿತು.*



